# ಭಗವದ್ಗೀತಾ

## ಯಥಾರೂಪ




ಶ್ರೀ ಶ್ರೀಮದ್ ಎ. ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದ

ಸಂಸ್ಥಾಪಕಾಚಾರ್ಯ: ಅಂತಾರಾಷ್ಟ್ರೀಯ ಕೃಷ್ಣ ಪ್ರಜ್ಞಾ ಸಂಘ

॥ ಶ್ರೀ ಶ್ರೀ ಗುರುಗೌರಾಂಗ ಜಯತಃ ॥

# ಭಗವದ್ಗೀತಾ ಯಥಾರೂಪ

**ಸಂಪೂರ್ಣ ಆವೃತ್ತಿ**

ಕನ್ನಡದಲ್ಲಿ ಮೂಲ ಸಂಸ್ಕೃತ ಶ್ಲೋಕಗಳು,
ಸಮಾನಾರ್ಥಕಗಳು,

ಭಾಷಾಂತರ ಮತ್ತು ವಿಸ್ತೃತ ಭಾವಾರ್ಥಗಳೊಂದಿಗೆ

**ೀ ಶ್ರೀಮದ್ ಎ. ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದ**
ಅಂತಾರಾಷ್ಟ್ರೀಯ ಕೃಷ್ಣಪ್ರಜ್ಞಾ ಸಂಘದ ಸ್ಥಾಪನಾಚಾರ್ಯರು
ಅವರಿಂದ

ಕನ್ನಡ ಅನುವಾದ
**ಕಂಠೀರಾವ್**
ನಿವೃತ್ತ ಭಾಷಾಂತರ ನಿರ್ದೇಶಕರು
ಕರ್ನಾಟಕ ಸಾಹಿತ್ಯ ಅಕಾದಮಿ ಮತ್ತು ರಾಜ್ಯ ಪ್ರಶಸ್ತಿ ವಿಜೇತರು



ಭಕ್ತಿವೇದಾಂತ ಬುಕ್ ಟ್ರಸ್ಟ್ (ಬಿ. ಬಿ. ಟಿ.)
ನ್ಯೂಯಾರ್ಕ್–ಲಾಸ್ ಏಂಜಲೀಸ್–ಲಂಡನ್–ಬೊಂಬಾಯಿ–ಬೆಂಗಳೂರು

ಈ ಪುಸ್ತಕದ ವಿಷಯದಲ್ಲಿ ಆಸಕ್ತರಾದವರು ಅಂತಾರಾಷ್ಟ್ರೀಯ ಕೃಷ್ಣಪ್ರಜ್ಞಾ ಸಂಘದ ಬೆಂಗಳೂರು ಶಾಖೆಯ ಅಧ್ಯಕ್ಷರೊಂದಿಗೆ ಪತ್ರವ್ಯವಹಾರ ಮಾಡಬಹುದು.

ವಿಳಾಸ :

ಇಸ್ಕಾನ್ (ISKCON)
ಹರೇಕೃಷ್ಣ ಹಿಲ್
ಕಾರ್ಡ್ ರೋಡ್, "I" R ಬ್ಲಾಕ್
ರಾಜಾಜಿನಗರ, ಬೆಂಗಳೂರು-560 010
ದೂರವಾಣಿ-32 19 56



ಮೊದಲನೆಯ ಮುದ್ರಣ : 1989 5000 ಪ್ರತಿಗಳು
ಎರಡನೆಯ ಮುದ್ರಣ : 1990 8000 ಪ್ರತಿಗಳು

ಭಗವದ್ಗೀತಾ ಯಥಾರೂಪವು, ಅರೇಬಿಕ್, ಬಂಗಾಲಿ, ಚೀನಿ, ಡಚ್, ಫ್ರೆಂಚ್, ಜರ್ಮನ್, ಗುಜರಾತಿ, ಹಿಂದಿ, ಇಟಾಲಿಯನ್, ಜಾಪನೀಸ್, ಪೋರ್ಚುಗೀಸ್, ಸ್ಪಾನಿಷ್, ಸ್ವೀಡಿಷ್, ರಷ್ಯನ್ ಮತ್ತು ಇತರ 29 ಭಾಷೆಗಳಲ್ಲಿಯೂ ಕೂಡ ಮುದ್ರಿತವಾಗಿದೆ.

ಮುದ್ರಕರು :

MYTEC PROCESS PVT. LTD.
204, 4th Cross, Lalbagh Road
Bangalore-560 027

ವೇದಾಂತ ದರ್ಶನ ಕುರಿತು ಸೊಗಸಾದ
**"ಗೋವಿಂದ ಭಾಷ್ಯ" ವ್ಯಾಖ್ಯಾನವನ್ನು ನೀಡಿದ**
**ಶ್ರೀಲ ಬಲದೇವ ವಿದ್ಯಾಭೂಷಣರಿಗೆ**
**ಅರ್ಪಿತ**

# ವಿಷಯ ಸೂಚಿಕೆ

# ದೃಶ್ಯ ಸಜ್ಜಿಕೆ

ಭಗವದ್ಗೀತೆಯು ತುಂಬ ಪ್ರಚಾರ ಹೊಂದಿ ವ್ಯಾಪಕವಾಗಿ ಓದಲ್ಪಡುವ ಮೂಲ ಗ್ರಂಥವಾಗಿದೆ. ಆದರೂ ಅದು ಸಂಸ್ಕೃತ ಭಾಷೆಯ ಪ್ರಾಚೀನ ಜಗತ್ತಿನ ಮಹಾ ಇತಿಹಾಸ ವಾದ ಮಹಾಭಾರತದಲ್ಲಿಯ ಒಂದು ಪ್ರಸಂಗವಾಗಿ ತೋರುತ್ತದೆ. ಮಹಾಭಾರತವು ಇಂದಿನ ಕಲಿಯುಗದವರೆಗೆ ಸಾಗಿ ಬಂದ ಘಟನೆಗಳನ್ನು ನಿರೂಪಿಸುತ್ತದೆ. ಸುಮಾರು ಐವತ್ತು ಶತಮಾನಗಳ ಹಿಂದೆ, ಈ ಯುಗವು ಆರಂಭವಾಗುವಾಗ ಶ್ರೀಕೃಷ್ಣನು ತನ್ನ ಮಿತ್ರನೂ ಭಕ್ತನೂ ಆದ ಅರ್ಜುನನಿಗೆ ಭಗವದ್ಗೀತೆಯನ್ನು ಉಪದೇಶಿಸಿದನು.

ಮಾನವ ಕುಲಕ್ಕೆ ಪರಿಚಿತವಾದ ಮಹಾ ದಾರ್ಶನಿಕ ಮತ್ತು ಧಾರ್ಮಿಕ ಸಂವಾದದ ಮಹೋನ್ನತ ಸಂವಾದವೆನಿಸಿದ ಈ ಸಂವಾದವು, ಧೃತರಾಷ್ಟ್ರನ ನೂರು ಪುತ್ರರ ಮತ್ತು ಅವರ ದಾಯಾದಿಗಳಾದ ಪಾಂಡು ಪುತ್ರರ ನಡುವೆ ದಾಯಾದಿ ಯುದ್ಧಕ್ಕಿಂತ ಕೇವಲ ಮುಂಚೆ ಕೃಷ್ಣಾರ್ಜುನರಲ್ಲಿ ನಡೆದ ಸಂವಾದವಾಗಿದೆ.

ಧೃತರಾಷ್ಟ್ರ ಮತ್ತು ಪಾಂಡು ಕುರುವಂಶದಲ್ಲಿ ಜನಿಸಿದ ಸೋದರರಾಗಿದ್ದರು. ಇವರು ಮಹಾಭಾರತ ಎಂಬ ಹೆಸರು ಬರಲು ಕಾರಣನಾದ ಪ್ರಾಚೀನ ಭೂ ಮಂಡಲ ಚಕ್ರವರ್ತಿ ಯಾದ ಭರತ ವಂಶಜರು. ಹಿರಿಯಣ್ಣನಾದ ಧೃತರಾಷ್ಟ್ರನು ಹುಟ್ಟು ಕುರುಡನಾದ್ದರಿಂದ ಮಾಮೂಲಾಗಿ ಅವನಿಗೆ ದೊರೆಯಬೇಕಾಗಿದ್ದ ರಾಜ್ಯಾಧಿಪತ್ಯವು ಅವನ ಕಿರಿಯ ಸೋದರ ನಾದ ಪಾಂಡುರಾಜನಿಗೆ ದೊರೆಯಿತು.

ಪಾಂಡುರಾಜನು ಅಕಾಲ ಮರಣ ಹೊಂದಿದ್ದರಿಂದ ಅವನ ಐದು ಜನ ಮಕ್ಕಳು— ಯುಧಿಷ್ಠಿರ, ಭೀಮ, ಅರ್ಜುನ, ನಕುಲ ಮತ್ತು ಸಹದೇವ ಇವರು ಧೃತರಾಷ್ಟ್ರನ ಪೋಷ ಣೆಗೆ ಒಳಪಟ್ಟರು. ಹೀಗೆ ಆ ಕಾಲದಲ್ಲಿ ಧೃತರಾಷ್ಟ್ರನೇ ರಾಜ್ಯಾಧಿಪತಿಯಾಗಿದ್ದನು. ಹೀಗೆಯೇ ಧೃತರಾಷ್ಟ್ರನ ಮಕ್ಕಳು ಮತ್ತು ಪಾಂಡು ಪುತ್ರರು ಒಟ್ಟೊಟ್ಟಾಗಿ ಒಂದೇ ರಾಜ ಕುಟುಂಬದಲ್ಲಿ ಬೆಳೆದರು. ಉಭಯರೂ ಮಹಾಯುದ್ಧ ಪ್ರವೀಣರೆನಿಸಿದ ದ್ರೋಣಾ ಚಾರ್ಯರಿಂದ ಸೇನಾ ವಿದ್ಯೆಗಳನ್ನು ಕಲಿತು ಕೊಂಡರು ಮತ್ತು ಕುರುಕುಲ ಪಿತಾಮಹರೆನಿ ಸಿದ ಭೀಷ್ಮರಿಂದ ದಿವ್ಯ ಮಾರ್ಗದರ್ಶನ ಪಡೆದರು.

ಹೀಗಿದ್ದರೂ ಕೂಡ ಧೃತರಾಷ್ಟ್ರ ಪುತ್ರರಲ್ಲಿ ಹಿರಿಯನಾದ ದುರ್ಯೋಧನನು ಪಾಂಡ ವರ ಬಗ್ಗೆ ಸದಾ ಅಸೂಯಾಪರನಾಗಿದ್ದನು. ಹುಟ್ಟು ಕುರುಡನಾದ ಮತ್ತು ದುಷ್ಟಮತಿ ಯವನಾದ ಧೃತರಾಷ್ಟ್ರನು ರಾಜ್ಯವು ತನ್ನ ಮಕ್ಕಳಿಗೆ ಸೇರಬೇಕು, ಪಾಂಡು ಪುತ್ರರಿಗೆ ಸೇರ ಕೂಡದು ಎಂದು ಬಯಸಿದನು.

ಧೃತರಾಷ್ಟ್ರನ ಸಮ್ಮತಿಯಿಂದ ದುರ್ಯೋಧನನು ಯುವ ಪಾಂಡು ಪುತ್ರರನ್ನು ಕೊಲ್ಲಲು ಯೋಚಿಸಿದನು. ಆದರೆ, ಅವರ ಚಿಕ್ಕಪ್ಪನಾದ ವಿದುರನ ಮತ್ತು ತಾಯಿಯ ಬಂಧುವಾದ ಶ್ರೀಕೃಷ್ಣನ ರಕ್ಷಣೆಯಿಂದಲೇ ಪಾಂಡವರು ತಮ್ಮನ್ನು ನಾಶ ಮಾಡುವ ಅನೇಕ ಪ್ರಯತ್ನಗಳಿಂದ ಪಾರಾದರು.

ಶ್ರೀಕೃಷ್ಣನು ಕೇವಲ ಒಬ್ಬ ಸಾಮಾನ್ಯ ಮನುಷ್ಯನಾಗಿರಲಿಲ್ಲ. ಪರಮ ದೇವೋತ್ತಮ ಪುರುಷನೇ ಆಗಿದ್ದನು. ಅವನು ಭೂಮಿಯಲ್ಲಿ ಅವತರಿಸಿ ಆ ಕಾಲದ ಒಂದು ರಾಜ ಕುಟುಂಬದಲ್ಲಿ ರಾಜಕುಮಾರನಾಗಿದ್ದನು. ಅವನು ಪಾಂಡವರ ತಾಯಿಯಾದ ಕುಂತಿಯ ಅಥವಾ ಪೃಥಾದೇವಿಯ ಸೋದರ ಪುತ್ರನೂ ಆಗಿದ್ದನು. ಹೀಗೆ ಬಂಧುವೂ ಶಾಶ್ವತ ಧರ್ಮೋದ್ಧಾರಕನೂ ಆಗಿರುವ ಶ್ರೀಕೃಷ್ಣನು ಪಾಂಡವರನ್ನು ರಕ್ಷಿಸಿದನು.

ಕೊನೆಗೆ ಬಹು ಚಾಣಾಕ್ಷನಾದ ದುರ್ಯೋಧನನು ಪಾಂಡವರನ್ನು ದ್ಯೂತಕ್ಕೆ ಆಹ್ವಾನಿಸಿದನು. ಆ ನಿರ್ಣಾಯಕ ದ್ಯೂತದಲ್ಲಿ ದುರ್ಯೋಧನ ಮತ್ತು ಅವನ ಸೋದರರು ಪಾಂಡವರ ಪರಮ ದೈವ ಭಕ್ತಳೂ ಪತಿಪಾರಾಯಣೆಯೂ ಆದ ದ್ರೌಪದಿಯನ್ನು ಗೆದ್ದರು. ಮತ್ತು ರಾಜ ಸಭೆಯಲ್ಲಿ ಅವಳ ವಸ್ತ್ರಾಪಹರಣ ಮಾಡಿ ಮಾನಭಂಗ ಮಾಡಲು ಯತ್ನಿಸಿದರು. ಕೃಷ್ಣನ ದಿವ್ಯ ಕೃಪೆಯಿಂದ ಅವಳ ಮಾನ ರಕ್ಷಣೆಯಾಯಿತು. ಆದರೆ ಪಾಂಡವರಿಗೆ ಮೋಸ ಮಾಡಿದ ಆ ದ್ಯೂತದ ಫಲವಾಗಿ ಪಾಂಡವರು ಹದಿಮೂರು ವರ್ಷಗಳ ಕಾಲ ರಾಜ್ಯವನ್ನು ತೊರೆಯಬೇಕಾಯಿತು.

ವನವಾಸದಿಂದ ಹಿಂದಿರುಗಿದ ಬಳಿಕ ಪಾಂಡವರು ನ್ಯಾಯಮಾರ್ಗದಿಂದ ತಮ್ಮ ರಾಜ್ಯವನ್ನು ಮರಳಿಸುವಂತೆ ದುರ್ಯೋಧನನನ್ನು ಕೇಳಿ ಕೊಂಡರು. ದುರ್ಯೋಧನನು ಅವರ ಕೋರಿಕೆಯನ್ನು ತಿರಸ್ಕರಿಸಿದನು. ರಾಜ್ಯಾಡಳಿತದ ಮೂಲಕ ಜನತೆಗೆ ಸೇವೆ ಸಲ್ಲಿಸಲು ಕರ್ತವ್ಯ ಬದ್ಧರಾದ ಪಂಚ ಪಾಂಡವರು ತಮಗೆ ಕೇವಲ ಐದು ಗ್ರಾಮಗಳನ್ನು ನೀಡಿದರೆ ಸಾಕು ಎಂದೂ ಕೇಳಿಕೊಂಡರು. ಆದರೆ ದುರ್ಯೋಧನನು ಒಂದು ಸೂಜಿ ಮೊನೆಯಷ್ಟು ಭೂಮಿಯನ್ನೂ ಕೊಡುವುದಿಲ್ಲವೆಂದು ಮದಾಂಧನಾಗಿ ಉತ್ತರಿಸಿದನು.

ಇಷ್ಟೆಲ್ಲಾ ನಡೆದರೂ ಪಾಂಡವರು ಮಾತ್ರ ಶಾಂತಚಿತ್ತರಾಗಿದ್ದು ತಮ್ಮ ತಾಳ್ಮೆಯನ್ನು ಕಾಯ್ದುಕೊಂಡು ಬಂದರು. ಆದರೆ ಯುದ್ಧ ಅನಿವಾರ್ಯವೆಂದೆನಿಸಿತು.

ಹೀಗೆ ಜಗತ್ತಿನ ರಾಜಕುಮಾರರಲ್ಲಿ ಒಡಕು ಉಂಟಾಗಿ ಕೆಲವರು ದುರ್ಯೋಧನನ ಪಕ್ಷವನ್ನೂ ಮತ್ತೆ ಕೆಲವರು ಪಾಂಡವರ ಪಕ್ಷವನ್ನು ಸೇರಿದರು. ಸ್ವಯಂ ಶ್ರೀಕೃಷ್ಣನು ಪಾಂಡವರ ಪರವಾಗಿ ಸಂಧಾನಕ್ಕೆ ಮುಂದಾದನು ಮತ್ತು ಶಾಂತಿಗಾಗಿ ಸಂಧಾನ ಮಾಡಲು ಧೃತರಾಷ್ಟ್ರನ ದರ್ಬಾರಿಗೆ ತೆರಳಿದನು. ಕೃಷ್ಣನ ಮಾತನ್ನು ಲಾಲಿಸದೆ ಹೋದಾಗ ಯುದ್ಧ ಮಾಡಲೇಬೇಕಾಗಿ ಬಂತು.

ಮಹಾನೀತಿವಂತರಾದ ಪಾಂಡವರು ಕೃಷ್ಣನು ಪರಮ ದೇವೋತ್ತಮ ಪುರುಷನೆಂಬುದನ್ನು ಅರಿತು ಕೊಂಡಿದ್ದರು. ಪಾಪಾತ್ಮರಾದ ಧೃತರಾಷ್ಟ್ರನ ಪುತ್ರರಿಗೆ ಅದು ಹೊಳೆಯಲಿಲ್ಲ. ಆದಾಗ್ಯೂ ವಿರೋಧಿಗಳ ಇಚ್ಛೆಯಂತೆ ಶ್ರೀಕೃಷ್ಣನು ಯುದ್ಧದಲ್ಲಿ ಭಾಗವಹಿಸಲು ಒಪ್ಪಿದನು. ಸಾಕ್ಷಾತ್ ಭಗವಂತನೇ ಆದ ಶ್ರೀಕೃಷ್ಣನು ಸ್ವಯಂ ಯುದ್ಧ ಮಾಡುವುದಿಲ್ಲ. ಆದರೆ ಇಚ್ಛೆ ಪಟ್ಟವರು ಅವನ ಸೇನೆಯ ನೆರವು ಪಡೆಯಬಹುದು, ಕೃಷ್ಣನು ಮಾತ್ರ ಕೇವಲ ಸಲಹೆಗಾರನೂ ಸಹಾಯಕನೂ ಆಗಿ ಪ್ರತಿಪಕ್ಷದ ಕಡೆಗೆ ಇರುವುದಾಗಿ ತಿಳಿಸಿದನು. ರಾಜಕಾರಣಿಯಾದ ದುರ್ಯೋಧನನು ಕೃಷ್ಣನ ಸೇನಾ ಬಲವನ್ನು ಆಯ್ದು ಕೊಂಡನು.

ಆದರೆ, ಪಾಂಡವರು ಮಾತ್ರ ಕೃಷ್ಣನನ್ನು ತಮ್ಮ **ಪಕ್ಷದಲ್ಲಿ** ಉಳಿಸಿಕೊಳ್ಳಲು ಕಾತುರರಾಗಿದ್ದರು.

ಹೀಗೆ ಶ್ರೀ ಕೃಷ್ಣನು ಸಾರಥ್ಯ ವಹಿಸಿ.ಕಥಾ ನಾಯಕನಾದ ಅರ್ಜುನನ ರಥದ ಸಾರಥಿಯಾದನು. ಈ ಘಟ್ಟದಲ್ಲಿ ಉಭಯ ಪಕ್ಷಗಳಲ್ಲಿ ಸೇನೆಗಳು ಸನ್ನದ್ಧವಾಗಿ ನಿಂತಿರುವ ಈ ಸನ್ನಿವೇಶದಲ್ಲಿ "ಯುದ್ಧಭೂಮಿಯಲ್ಲಿ ಅವರೇನು ಮಾಡುತ್ತಿದ್ದಾರೆ ?" ಎಂದು ಧೃತರಾಷ್ಟ್ರನು ತನ್ನ ಕಾರ್ಯದರ್ಶಿಯಾದ ಸಂಜಯನನ್ನು ಕುತೂಹಲದಿಂದ ಕೇಳುತ್ತಿದ್ದಾನೆ. ಇಲ್ಲಿ ಭಗವದ್ಗೀತೆ ಪ್ರಾರಂಭವಾಗುತ್ತದೆ.

ದೃಶ್ಯ ಸಜ್ಜಿಕೆಯೇನೋ ಆಯಿತು. ಈಗ ಕೇವಲ ಈ ಭಾಷಾಂತರ ಮತ್ತು ವ್ಯಾಖ್ಯಾನವನ್ನು ಕುರಿತು ಒಂದು ಸಂಕ್ಷಿಪ್ತ ಟಿಪ್ಪಣಿ ಮಾತ್ರ ಅಗತ್ಯ.

ಸಾಮಾನ್ಯವಾಗಿ ಭಗವದ್ಗೀತೆಯನ್ನು ಇಂಗ್ಲೀಷಿಗೆ ಅನುವಾದಿಸುವವರು ಕೇವಲ ತಮ್ಮ ಕಲ್ಪನಾ ವಿಲಾಸಕ್ಕೆ ಅಥವಾ ತಮ್ಮದೇ ಆದ ದಾರ್ಶನಿಕ ದೃಷ್ಟಿಗೆ ಅವಕಾಶ ಮಾಡಿಕೊಳ್ಳುವ ಉದ್ದೇಶದಿಂದ ಪರಮ ಪುರುಷ ಶ್ರೀಕೃಷ್ಣನನ್ನೇ ಉಪೇಕ್ಷಿಸುತ್ತಾರೆ. ಮಹಾಭಾರತದ ಇತಿಹಾಸವನ್ನು ಒಂದು ಸಾಮಾನ್ಯ ಕಟ್ಟು ಕಥೆಯಂತೆ ಪರಿಗಣಿಸುತ್ತಾರೆ ಮತ್ತು ಯಾವುದೋ ಒಬ್ಬ ಅನಾಮಿಕ ಮೇಧಾವಿಯ ವಿಚಾರಾಭಿವ್ಯಕ್ತಿಗೆ ಶ್ರೀಕೃಷ್ಣನು ಒಂದು ಕಾವ್ಯ ಸಾಧನ ಮಾತ್ರ ಆಗುತ್ತಾನೆ. ಹೆಚ್ಚು ಹೆಚ್ಚೆಂದರೆ ಕೃಷ್ಣನು ಒಬ್ಬ ಗೌಣ ಐತಿಹಾಸಿಕ ವ್ಯಕ್ತಿಯಾಗುತ್ತಾನೆ.

ಆದರೆ ಭಗವದ್ಗೀತೆಯೇ ತಿಳಿಸುವಂತೆ ಪರಮ ಪುರುಷ ಶ್ರೀಕೃಷ್ಣನೇ ಗೀತೆಯ ಗುರಿ ಮತ್ತು ಸಾರವಸ್ತುವಾಗಿದ್ದಾನೆ.

ಆದ್ದರಿಂದ ಈ ಅನುವಾದವು ಮತ್ತು ಅದರ ಜೊತೆಗಿರುವ ವ್ಯಾಖ್ಯಾನವು ಕೃಷ್ಣನಿಂದ ದೂರ ಸರಿಯುವ ಬದಲು ಓದುಗನನ್ನು ನೇರವಾಗಿ ಕೃಷ್ಣನಲ್ಲಿಗೆ ಕೊಂಡೊಯ್ಯಲು ಉದ್ದೇಶಿಸಿದೆ. ಈ ವಿಷಯದಲ್ಲಿ ಈ **ಭಗವದ್ಗೀತಾ ಯಥಾ ರೂಪ** ಅಸದೃಶವಾಗಿದೆ. ಆದ್ದರಿಂದಲೇ ಈ ಭಗವದ್ಗೀತೆಯು ಪರಮ ಸಂಗತವೂ ಜ್ಞೇಯವೂ ಆಗಿದೆ ಎಂಬುದು ಮತ್ತೊಂದು ವಿಶೇಷ ಲಕ್ಷಣವಾಗಿದೆ. ಶ್ರೀಕೃಷ್ಣನೇ ಸ್ವತಃ ಗೀತೋಪದೇಶಕನೂ ಮತ್ತು ಗೀತೆಯ ಪರಮ ಗುರಿಯೂ ಆಗಿರುವುದರಿಂದ ಈ ಮಹಾ ಶಾಸ್ತ್ರವನ್ನು ನಿಜವಾದ ರೀತಿಯಲ್ಲಿ ನಿರೂಪಣೆ ಮಾಡುವ ಭಾಷಾಂತರವೆಂದರೆ ಇದೊಂದೇ.

**—ಪ್ರಕಾಶಕರು**

# ಮುನ್ನುಡಿ

ಮೂಲತಃ ನಾನು **ಭಗವದ್ಗೀತಾ ಯಥಾ ರೂಪ** ಎಂಬುದನ್ನು ಈ ರೂಪ ದಲ್ಲಿಯೇ ಬರೆದೆ. ಇದನ್ನು ಮೊದಲು ಪ್ರಕಟಿಸಿದಾಗ, ಮೂಲ ಹಸ್ತಪ್ರತಿಯನ್ನೂ, ಅದ ರಲ್ಲಿಯ ಚಿತ್ರಗಳನ್ನೂ ಮತ್ತು ಶ್ರೀಮದ್ಭಗವದ್ಗೀತೆಯ ಮೂಲ ಶ್ಲೋಕಗಳ ಅನೇಕ ವಿವರಣೆಗಳನ್ನೂ ತೆಗೆದು ಹಾಕಿ ಅದರ ಗಾತ್ರವನ್ನು 400 ಪುಟಗಳಿಗಿಂತ ಕಡಿಮೆ ಮಾಡ ಲಾಗಿತ್ತು. ನನ್ನ ಇತರ ಕೃತಿಗಳಾದ-ಶ್ರೀಮದ್ಭಾಗವತ, ಶ್ರೀ ಈಶೋಪನಿಷದ್, ಮೊದ ಲಾದ ಗ್ರಂಥಗಳಲ್ಲಿ-ನಾನು ಮೊದಲು ಮೂಲ ಶ್ಲೋಕಗಗಳನ್ನು ಕೊಡುತ್ತೇನೆ. ಆಮೇಲೆ ಅದರ ಇಂಗ್ಲೀಷ್ ಲಿಪ್ಯಂತರವನ್ನು ಕೊಡುತ್ತೇನೆ. ಆಮೇಲೆ ಸಂಸ್ಕೃತ ಪದಕ್ಕೆ ಇಂಗ್ಲೀಷ್ ಅರ್ಥಗಳು, ಭಾಷಾಂತರ ಮತ್ತು ತಾತ್ಪರ್ಯ ಕೊಡುತ್ತೇನೆ. ಇದರಿಂದ ಗ್ರಂಥವು ಬಹು ಪ್ರಮಾಣ ಬದ್ಧವೂ, ವಿದ್ವತ್ ಪೂರ್ಣವೂ, ಆಗುವದಲ್ಲದೆ ಅರ್ಥವೂ ಕೂಡ ಸ್ವಯಂ ವೇದ್ಯವಾಗುವುದು. ಆದ್ದರಿಂದ ನನ್ನ ಮೂಲ ಹಸ್ತಪ್ರತಿಯು ಗಾತ್ರದಲ್ಲಿ ಕುಗ್ಗಿದಾಗ ನನಗೆ ಬಹಳ ಅಸಮಾಧಾನವಾಯಿತು. ಆದರೆ, **ಭಗವದ್ಗೀತಾ ಯಥಾ ರೂಪ** ಇದಕ್ಕೆ ಬೇಡಿಕೆ ಬಹಳ ಹೆಚ್ಚಿದಾಗ ಈ ಗ್ರಂಥವನ್ನು ಮೂಲದಲ್ಲಿ ಇದ್ದಂತೆಯೇ ಹೊರತರಲು ಅನೇಕ ಜನ ವಿದ್ವಾಂಸರೂ ಮತ್ತು ಭಕ್ತರೂ ನನ್ನನ್ನು ಕೇಳಿದರು. ಹೀಗೆ ಕೃಷ್ಣಪ್ರಜ್ಞಾ ಆಂದೋಲನ ವನ್ನು ಭದ್ರ ತಳಹದಿಯ ಮೇಲೆ ಸ್ಥಾಪಿಸಿ ಮುನ್ನಡೆಸಿಕೊಂಡು ಹೋಗಲು ಜ್ಞಾನ ಭಂಡಾರ ವಾದ ಈ ಮಹಾ ಕೃತಿಯನ್ನು ಪೂರ್ಣ ಪರಂಪರೆಯ ವ್ಯಾಖ್ಯಾನಸಹಿತ ಮೂಲ ಹಸ್ತ ಪ್ರತಿಯ ರೂಪದಲ್ಲಿಯೇ ಹೊರತರಲು ಯತ್ನಿಸಲಾಯಿತು.

ನಮ್ಮ ಕೃಷ್ಣಪ್ರಜ್ಞಾ ಆಂದೋಲನವು **ಭಗವದ್ಗೀತಾ ಯಥಾ ರೂಪವನ್ನು** ಆಧರಿಸಿರುವುದರಿಂದ ನಿಜ ಸ್ವರೂಪದ್ದಾಗಿರುವುದಲ್ಲದೆ ಇದಕ್ಕೆ ಐತಿಹಾಸಿಕ ಪ್ರಮಾಣವಿದ್ದು ಸಹಜವೂ ದಿವ್ಯವಾದುದೂ ಆಗಿದೆ. ಈ ಆಂದೋಲನವು ಬರಬರುತ್ತಾ ವಿಶ್ವವ್ಯಾಪಿಯಾಗಿ, ಅದರಲ್ಲೂ ವಿಶೇಷವಾಗಿ ಯುವಪೀಳಿಗೆಯಲ್ಲಿ ಅತ್ಯಂತ ಜನಪ್ರಿಯವಾಗುತ್ತಿದೆ. ಇದು ಹಳೇ ಪೀಳಿಗೆಯವರಿಗೂ ಕೂಡ ಹೆಚ್ಚು ಹೆಚ್ಚು ಕುತೂಹಲಕಾರಿ ಎನಿಸುತ್ತಿದೆ. ಇದು ಹಳಬರಲ್ಲಿ ಎಷ್ಟು ಕುತೂಹಲವನ್ನು ಕೆರಳಿಸುತ್ತಿದೆ ಎಂದರೆ, ನನ್ನ ಶಿಷ್ಯರ ತಂದೆ ತಾತಂದಿರು ಅಂತಾರಾಷ್ಟ್ರೀಯ ಕೃಷ್ಣಪ್ರಜ್ಞಾ ಸಂಘವೆಂಬ ನಮ್ಮ ಈ ಮಹಾಸಂಘದ ಸದಸ್ಯರಾಗಿ ನಮಗೆ ಉತ್ತೇಜನ ನೀಡುತ್ತಿದ್ದಾರೆ. ನಾನು ವಿಶ್ವಾದ್ಯಂತ ಕೃಷ್ಣಪ್ರಜ್ಞಾ ಆಂದೋಲನವನ್ನು ನಡೆಸುತ್ತಿರವ ಬಗ್ಗೆ ತಮ್ಮ ಒಳ್ಳೆಯ ಕೃತಜ್ಞತಾ ಭಾವನೆಯನ್ನು ವ್ಯಕ್ತಪಡಿಸಲು ಲಾಸ್ ಏಂಜಲಿಸ್‌ನಲ್ಲಿ ಅನೇಕ-ಜನ ತಂದೆ ತಾಯಿಯರು ನನ್ನನ್ನು ಬಂದು ಕಾಣುತ್ತಿದ್ದರು. ನಾನು ಅಮೇರಿಕಾದಲ್ಲಿ ಕೃಷ್ಣಪ್ರಜ್ಞಾ ಆಂದೋಲನವನ್ನು ಪ್ರಾರಂಭಿಸಿದುದು ಅಮೇರಿಕಾದ ಜನತೆಯ ಸೌಭಾಗ್ಯ ಎಂದು ಅವರಲ್ಲಿ ಕೆಲವರು ಹೇಳಿದರು. ಈ ಆಂದೋಲನವು ಬಹು ಕಾಲದ ಹಿಂದೆ ಶ್ರೀ ಕೃಷ್ಣನೇ ಪ್ರಾರಂಭಿಸಿದ್ದು, ಈಗ ಅದು ಪರಂಪರಾ ಮೂಲಕ ಮಾನವ

ಸಮಾಜಕ್ಕೆ ಇಳಿದು ಬರುತ್ತಿದೆ, ಆದ್ದರಿಂದ ಶ್ರೀಕೃಷ್ಣನೇ ಇದರ ವಾಸ್ತವಿಕ ಮೂಲ ಪಿತೃ ಎಂದು ಹೇಳಬಹುದು. ಈ ವಿಷಯದಲ್ಲಿ ನಾನೇನಾದರೂ ಸ್ವಲ್ಪ ಕೀರ್ತಿಕರ ಕೆಲಸ ಮಾಡಿದ್ದರೆ, ಅದು ವೈಯಕ್ತಿಕವಾಗಿ ನನಗೆ ಸೇರಿದ್ದಲ್ಲ. ಅದು ನನ್ನ ಶಾಶ್ವತ ಗುರುಗಳಾದ ಶ್ರೀ ಶ್ರೀಮದ್ ಓಂ ವಿಷ್ಣುಪಾದ ಪರಮಹಂಸ ಪರಿವ್ರಾಜಕಾಚಾರ್ಯ 108 ಶ್ರೀ ಶ್ರೀಮದ್ ಭಕ್ತಿ ಸಿದ್ಧಾಂತ ಸರಸ್ವತೀ ಗೋಸ್ವಾಮಿ ಮಹಾರಾಜ ಪ್ರಭುಪಾದರಿಗೆ ಸೇರಿದ್ದು.

ನಾನೇನಾದರೂ ಸ್ವಲ್ಪ ಕೆಲಸ ಮಾಡಿದ್ದರೆ, ಕಲಬೆರಕೆ ಮಾಡದೆ ನಾನು ಭಗವದ್ಗೀತೆಯನ್ನು ಯಥಾರೂಪವಾಗಿ ಮುಂದಿಡಲು ಯತ್ನಿಸಿದ್ದೇನೆ. ನಾನು ಭಗವದ್ಗೀತಾ ಯಥಾರೂಪವನ್ನು ಪ್ರಕಟಿಸುವ ಮುಂಚೆ ಭಗವದ್ಗೀತೆಯ ಇಂಗ್ಲೀಷ್ ಆವೃತ್ತಿಗಳು ಅವರವರ ವೈಯಕ್ತಿಕ ಧೋರಣೆಗಳನ್ನು ಪೂರೈಸಿಕೊಳ್ಳಲು ಪ್ರಕಟಗೊಂಡ ಕೃತಿಗಳಾಗಿದ್ದವು, ನಾವು ಮಾತ್ರ ಪರಮ ದೇವೋತ್ತಮ ಪುರುಷನಾದ ಕೃಷ್ಣನ ಸಂದೇಶವನ್ನು **ಭಗವದ್ಗೀತಾ ಯಥಾರೂಪ**ದಲ್ಲಿ ನಿರೂಪಿಸಲು ಯತ್ನಿಸಿದ್ದೇವೆ. ಕೃಷ್ಣನ ಇಚ್ಛೆಯನ್ನು ಮುಂದಿಡುವುದೇ ನಮ್ಮ ಕೆಲಸವಾಗಿದೆ. ಲೌಕಿಕ ರಾಜಕಾರಣಿಗಳ, ತಾರ್ಕಿಕರ, ದಾರ್ಶನಿಕರ, ಅಥವಾ ವಿಜ್ಞಾನಿಗಳ ದೃಷ್ಟಿಯನ್ನು ನಾವು ಮುಂದಿಡುವುದಿಲ್ಲ. ಅವರು ಇತರ ವಿಷಯಗಳಲ್ಲಿ ಎಷ್ಟೇ ಜ್ಞಾನ ಹೊಂದಿದ್ದರೂ ಕೃಷ್ಣನ ಬಗ್ಗೆ ಅವರಿಗೆ ಏನೂ ಜ್ಞಾನವಿಲ್ಲ. ಕೃಷ್ಣನು, **ಮನ್‌ಮನಾಭವ ಮದ್ಭಕ್ತೋ ಮದ್‌ಯಾಜೀ ಮಾಂ ನಮಸ್ಕುರು** ಇತ್ಯಾದಿಯಾಗಿ ಕೃಷ್ಣನು ಹೇಳುವಾಗ ಇತರ ಪಂಡಿತರ ಹಾಗೆ, ಕೃಷ್ಣನೂ ಅವನ ಅಂತರಾತ್ಮವೂ ಭಿನ್ನವೆಂದು ನಾವು ಹೇಳುವುದಿಲ್ಲ. ಕೃಷ್ಣನು ಪರತತ್ವ ಸ್ವರೂಪನು. ಕೃಷ್ಣನನಾಮ, ರೂಪ, ಗುಣ ಮತ್ತು ಲೀಲೆಗಳಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಪರಂಪರಾ ಪದ್ಧತಿಯಲ್ಲಿ ಕೃಷ್ಣಭಕ್ತನಾದವನಿಗೆ ಕೃಷ್ಣನ ಪರಮ ಸ್ವರೂಪವನ್ನು ಅರಿತುಕೊಳ್ಳುವುದು ಕಷ್ಟಸಾಧ್ಯವಾಗುವುದು. ಸಾಮಾನ್ಯವಾಗಿ ಕೃಷ್ಣನ ಪರಿಪೂರ್ಣ ಜ್ಞಾನವಿಲ್ಲದ ಪಂಡಿತರು, ರಾಜಕಾರಣಿಗಳು, ದಾರ್ಶನಿಕರು ಮತ್ತು ಸ್ವಾಮಿಗಳು ಭಗವದ್ಗೀತೆಗೆ ಭಾಷ್ಯ ಬರೆಯುವಾಗ ಕೃಷ್ಣನನ್ನು ಹೊಡೆದಟ್ಟಲು ಅಥವಾ ಕೊಂದು ಹಾಕಲು ಯತ್ನಿಸುತ್ತಾರೆ. ಭಗವದ್ಗೀತೆಯನ್ನು ಕುರಿತ ಇಂಥ ಅಪ್ರಮಾಣವಾದ ಭಾಷ್ಯಗಳನ್ನು ಮಾಯವಾದ ಭಾಷ್ಯ ಎಂದು ಹೇಳುತ್ತಾರೆ. ಇಂಥ ಅಪ್ರಮಾಣ ಭಾಷ್ಯಗಳನ್ನು ಓದದಂತೆ ಶ್ರೀ ಚೈತನ್ಯರು ನಮ್ಮನ್ನು ಎಚ್ಚರಿಸಿದ್ದಾರೆ. ಮಾಯಾವಾದ ದೃಷ್ಟಿಕೋನದಿಂದ ಭಗವದ್ಗೀತೆಯನ್ನು ಅರಿತುಕೊಳ್ಳಲು ಯತ್ನಿಸುವವರು ಮಹಾಪರಾಧ ಮಾಡುತ್ತಾರೆಂದು ಶ್ರೀ ಚೈತನ್ಯರು ಸ್ಪಷ್ಟವಾಗಿ ಹೇಳುತ್ತಾರೆ. ಇಂಥ ಅಪರಾಧದ ಪರಿಣಾಮವೆಂದರೆ, ಹೀಗೆ ತಪ್ಪುರೀತಿಯಲ್ಲಿ ಭಗವದ್ಗೀತೆಯನ್ನು ಅಧ್ಯಯನ ಮಾಡುವವನು ಖಂಡಿತವಾಗಿ ಆಧ್ಯಾತ್ಮ ಮಾರ್ಗ ಭ್ರಷ್ಟನಾಗುತ್ತಾನೆ ಮತ್ತು ಅವನು ಎಂದೂ ಮರಳಿ ತನ್ನ ನಿಜಧಾಮಕ್ಕೆ ಎಂದರೆ ಭಗವದ್ಧಾಮಕ್ಕೆ ಹೋಗಲಾರನು,

ಕೃಷ್ಣನು ಬ್ರಹ್ಮನ ಪ್ರತಿದಿವದಲ್ಲಿ ಒಂದು ಸಲ, ಅಥವಾ 8,600,000,000ವರ್ಷಗಳಲ್ಲಿ ಒಂದು ಸಲ ಈ ಲೋಕಕ್ಕೆ ಇಳಿದು ಬರುವ ಉದ್ದೇಶವು ಬದ್ಧನಾದ ಜೀವಿಗೆ ಮಾರ್ಗದರ್ಶನ ನೀಡಲೆಂದೇ ಯಥಾರೂಪ ಭಗವದ್ಗೀತೆಯಲ್ಲಿಯೇ ಹೇಳಲಾಗಿದೆ. ಅದನ್ನು ನಾವು ಹಾಗೆಯೇ ಒಪ್ಪಿಕೊಳ್ಳಬೇಕು. ಇಲ್ಲದಿದ್ದರೆ ಭಗವದ್ಗೀತೆಯನ್ನು

ಮತ್ತು ಅದರ ಬೋಧಕನಾದ ಶ್ರೀಕೃಷ್ಣನನ್ನು ಅರಿತುಕೊಳ್ಳಲು ಯತ್ನಿಸುವುದರಲ್ಲಿ ಅರ್ಥವೇ ಇಲ್ಲ. ಲಕ್ಷೋಪಲಕ್ಷ ವರ್ಷಗಳ ಮುಂಚೆ ಶ್ರೀಕೃಷ್ಣನು ಭಗವದ್ಗೀತೆಯನ್ನು ಸೂರ್ಯದೇವನಿಗೆ ಉಪದೇಶಿಸಿದನು. ನಾವು ಈ ಸಂಗತಿಯನ್ನು ಒಪ್ಪಿಕೊಳ್ಳಬೇಕು. ಮತ್ತು ತಪ್ಪುತಪ್ಪಾಗಿ ಅರ್ಥಮಾಡದೆ ಕೃಷ್ಣನ ಪರಮಾಧಿಕಾರವನ್ನು ಆಧರಿಸಿ ಭಗವದ್ಗೀತೆಯ ಐತಿಹಾಸಿಕ ಮಹತ್ವವನ್ನು ಅರಿತುಕೊಳ್ಳಬೇಕು. ಕೃಷ್ಣನ ಇಚ್ಛೆಯನ್ನು ಅರಿಯದೆ ಭಗವದ್ಗೀತೆಗೆ ಅರ್ಥಮಾಡುವುದು ಮಹಾಪರಾಧ. ಮನುಷ್ಯನು ಈ ಅಪರಾಧ ಮಾಡದ ಹಾಗೆ ತನ್ನನ್ನು ರಕ್ಷಿಸಿಕೊಳ್ಳಬೇಕಾದರೆ, ಅವನು ಕೃಷ್ಣನ ಪ್ರಥಮ ಶಿಷ್ಯನಾದ ಅರ್ಜುನನು ನೇರವಾಗಿ ಕೃಷ್ಣನನ್ನು ಅರಿತಂತೆ, ಕೃಷ್ಣನು ಪರಮ ದೇವೋತ್ತಮ ಪುರುಷನೆಂಬುದನ್ನು ಅರಿತುಕೊಳ್ಳಬೇಕು. ಭಗವದ್ಗೀತೆಯ ಇಂಥ ಅರಿವು ನಿಜವಾಗಿಯೂ ಪ್ರಯೋಜನಕಾರಿಯಾಗಿದೆ ಮತ್ತು ಜೀವನ ಧ್ಯೇಯ ಸಾಧನೆಯಲ್ಲಿ ಮಾನವ ಕುಲಕ್ಕೆ ಕಲ್ಯಾಣಕಾರಿಯಾಗಿದೆ. ಕೃಷ್ಣಪ್ರಜ್ಞಾ ಆಂದೋಲನವು ಜೀವನದ ಪರಮ ಸಿದ್ಧಿಯನ್ನು ನೀಡುವುದರಿಂದ ಇದು ಮಾನವ ಸಮಾಜಕ್ಕೆ ಅತ್ಯಾವಶ್ಯಕವಾಗಿದೆ. ಇದು ಹೇಗೆ ಎಂಬುದನ್ನು ಭಗವದ್ಗೀತೆಯಲ್ಲಿ ಪೂರ್ಣವಾಗಿ ವಿವರಿಸಲಾಗಿದೆ. ದುರ್ದೈವದಿಂದ ಲೌಕಿಕ ವಾದಗ್ರಸ್ಥರು ತಮ್ಮ ತಮ್ಮ ಆಸುರೀ ಮನೋಭಾವವನ್ನು ಮುಂದೊಡ್ಡಲು ಮತ್ತು ಜನರನ್ನು ಜೀವನದ ಸರಳ ತತ್ವಗಳ ಸರಿಯಾದ ಅರಿವಿನ ಮಾರ್ಗದಿಂದದಾರಿ ತಪ್ಪಿಸಲು ಭಗವದ್ಗೀತೆಯನ್ನು ದುರುಪಯೋಗ ಮಾಡಿಕೊಳ್ಳುತ್ತಿದ್ದಾರೆ. ಭಗವಾನ್ ಕೃಷ್ಣನು ಎಷ್ಟು ದೊಡ್ಡವನು ಎಂಬುದನ್ನು ಪ್ರತಿಯೊಬ್ಬನೂ ಅರಿತುಕೊಳ್ಳಬೇಕು ಮತ್ತು ಜೀವಾತ್ಮನ ನಿಜರೂಪವನ್ನು ಪ್ರತಿಯೊಬ್ಬನೂ ಅರಿತುಕೊಳ್ಳಬೇಕು. ಜೀವಾತ್ಮನು ಶಾಶ್ವತ ದಾಸ. ಅವನು ಕೃಷ್ಣನ ಸೇವೆ ಮಾಡದಿದ್ದರೆ ಅವನು ಭೌತಿಕ ಪ್ರಕೃತಿಯ ಗುಣತ್ರಯಗಳ ರೂಪದಲ್ಲಿ ಮಾಯೆಯ ಸೇವೆ ಮಾಡಬೇಕಾಗುವುದು ಮತ್ತು ನಿರಂತರ ಜನನ ಮರಣಗಳ ಚಕ್ರದಲ್ಲಿ ಸಿಲುಕಿಕೊಳ್ಳಬೇಕಾಗುವುದು; ಮುಕ್ತನೆಂದು ಹೇಳಿಕೊಳ್ಳುವ ಮಾಯಾವಾದಿ ತಾರ್ಕಿಕನೂ ಕೂಡ ಈ ಕ್ರಮವನ್ನೇ ಅನುಸರಿಸಬೇಕಾಗುವುದು. ಈ ಜ್ಞಾನವು ಒಂದು ಮಹಾ ವಿಜ್ಞಾನವಾಗಿದೆ. ಪ್ರತಿಯೊಬ್ಬ ಜೀವಾತ್ಮನೂ ಕೂಡ ತನ್ನ ಹಿತಕ್ಕಾಗಿಯೇ ಇದನ್ನು ಕುರಿತು ಶ್ರವಣ ಮಾಡಬೇಕು.

ವಿಶೇಷವಾಗಿ ಈ ಕಲಿಯುಗದಲ್ಲಿ ಜನಸಾಮಾನ್ಯರು ಕೃಷ್ಣನ ಬಹಿರಂಗ ಶಕ್ತಿಯಿಂದ ಮೋಹಿತರಾಗುತ್ತಾರೆ ಮತ್ತು ಕೇವಲ ಭೌತಿಕ ಸುಖಸಾಮಗ್ರಿಗಳ ಅಭಿವೃದ್ಧಿಯಿಂದ ಮನುಷ್ಯನು ಸುಖಿಯಾಗುತ್ತಾನೆಂದು ಜನ ತಪ್ಪು ತಿಳಿದುಕೊಂಡಿದ್ದಾರೆ. ಪ್ರತಿಯೊಬ್ಬನೂ ಭೌತಿಕ ಪ್ರಕೃತಿಯ ನಿಯಮಗಳಿಂದ್ಸ ಬಲವಾಗಿ ಬದ್ಧನಾಗಿದ್ದಾನೆ, ಆದ್ದರಿಂದ ಪ್ರಕೃತಿ ನಿಯಮಗಳು ಬಹಳ ಕಠೋರವಾಗಿವೆ ಎಂಬುದು ಜನರಿಗೆ ತಿಳಿಯುವುದೇ ಇಲ್ಲ. ಜೀವಾತ್ಮನು ಭಗವಂತನ ಆನಂದಭರಿತ ವಿಭಿನ್ನಾಂಶನಾಗಿರುವನು. ಆದ್ದರಿಂದ ಅವನು ಭಗವಂತನ ಪ್ರತ್ಯಕ್ಷ ಸೇವೆ ಸಲ್ಲಿಸುವುದೇ ಅವನ ಸ್ವಾಭಾವಿಕ ಕರ್ಮವಾಗಿದೆ. ಆದರೆ, ಮಾಯೆಯ ಪ್ರಭಾವದಿಂದ ಅವನು ಎಂದೂ ಸುಖ ನೀಡದ ತನ್ನ ವೈಯಕ್ತಿಕ ನಾನಾ ಬಗೆಯ ಇಂದ್ರಿಯ ತೋಷಣೆಯಲ್ಲಿಯೇ ತೊಡಗಿ ಸುಖಿಸಲು ಯತ್ನಿಸುತ್ತಾನೆ. ಮನುಷ್ಯನು ತನ್ನ ಭೌತಿಕ ಇಂದ್ರಿಯ ತೋಷಣೆ ಮಾಡುವುದು ಬಿಟ್ಟು ಭಗವಂತನ ಇಂದ್ರಿಯಗಳನ್ನು ತೋಷಿಸಲು

ಯತ್ನಿಸಬೇಕು. ಇದೇ ಜೀವನದ ಪರಮ ಸಿದ್ಧಿ. ಇದೇ ಭಗವಂತನ ಇಚ್ಛೆ. ಅವನು ಜೀವರಿಂದ ಇದನ್ನೇ ಬಯಸುತ್ತಾನೆ. ಭಗವದ್ಗೀತೆಯ ಈ ಮುಖ್ಯಾಂಶವನ್ನು ಅರಿತುಕೊಳ್ಳಬೇಕು. ಈ ಮುಖ್ಯಾಂಶವನ್ನು ಅರಿತುಕೊಳ್ಳುವಂತೆ ನಮ್ಮ ಕೃಷ್ಣಪ್ರಜ್ಞಾ ಆಂದೋಲನವು ಇಡೀ ಮಾನವ ಕುಲಕ್ಕೆ ಹೇಳಿಕೊಡುತ್ತಿದೆ. ನಾವು ಭಗವದ್ಗೀತೆಯ ಯಥಾರೂಪವನ್ನು ದೂಷಿತಗೊಳಿಸುವುದಿಲ್ಲ ಕಾರಣ ಭಗವದ್ಗೀತೆಯ ಅಧ್ಯಯನದಿಂದ ಪ್ರಯೋಜನಪಡೆಯಲು ನಿಜವಾಗಿಯೂ ಆಸಕ್ತನಾದವನು ಭಗವಂತನ ನೇರ ಮಾರ್ಗದರ್ಶನದಲ್ಲಿ ಭಗವದ್ಗೀತೆಯ ನಿಜಾರ್ಥವನ್ನು ಹೊಂದಲು ಕೃಷ್ಣಪ್ರಜ್ಞಾ ಆಂದೋಲನದ ಸಹಾಯ ಪಡೆದುಕೊಳ್ಳಬೇಕು. ಆದ್ದರಿಂದ ನಾವು ಇಲ್ಲಿ ನಿರೂಪಿಸುವಂತೆ **ಭಗವದ್ಗೀತಾ ಯಥಾರೂಪ**ದ ಅಧ್ಯಯನದಿಂದ ಜನ ಪ್ರಯೋಜನ ಪಡೆಯುವರೆಂದು ಆಶಿಸುತ್ತೇವೆ. ಇದರಿಂದ ಒಬ್ಬನಾದರೂ ಭಗವಂತನ ಶುದ್ಧ ಭಕ್ತನಾದರೆ, ನಮ್ಮ ಪ್ರಯತ್ನ ಸಫಲ ಎಂದು ಭಾವಿಸುತ್ತೇವೆ.

12 ಮೇ 1971

ಸಿಡ್ನಿ, ಆಸ್ಟ್ರೇಲಿಯಾ

—ಎ. ಸಿ. ಭಕ್ತಿವೇದಾಂತ ಸ್ವಾಮಿ

# ಪ್ರಸ್ತಾವನೆ

**ಓಂ ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನ ಶಲಾಕಯಾ ।**
**ಚಕ್ಷುರ್ ಉನ್ಮೀಲಿತಂ ಏನ ತಸ್ಮೈ ಶ್ರೀ ಗುರವೇ ನಮಃ ॥**
**ಶ್ರೀ ಚೈತನ್ಯ ಮನೋಽಭೀಷ್ಟಂ ಸ್ಥಾಪಿತಂ ಏನ ಭೂತಲೇ ।**
**ಸ್ವಯಂ ರೂಪಃ ಕದಾ ಮಹ್ಯಂ ದದಾತಿ ಸ್ವ ಪದಾಂತಿಕವ್ ॥**

ನಾನು ಅಜ್ಞಾನಾಂಧಕಾರದಲ್ಲಿ ಜನಿಸಿದೆ. ನನ್ನ ಗುರುಗಳು ಜ್ಞಾನಜ್ಯೋತಿಯಿಂದ ನನ್ನ ಕಣ್ಣು ತೆರೆಯಿಸಿದರು. ಅವರಿಗೆ ನನ್ನ ಗೌರವಪೂರ್ವಕ ನಮಸ್ಕಾರಗಳು.

ಈ ಭೌತಿಕ ಜಗತ್ತಿನಲ್ಲಿ ಶ್ರೀ ಚೈತನ್ಯರ ಇಚ್ಛೆಯನ್ನು ಪೂರೈಸುವ ಸಂದೇಶವನ್ನು ಸ್ಥಾಪಿಸಿದ ಶ್ರೀಲ ರೂಪ ಗೋಸ್ವಾಮಿ ಪ್ರಭುಪಾದರು ತಮ್ಮ ಪಾದಾರವಿಂದಗಳಲ್ಲಿ ನನಗೆ ಆಶ್ರಯ ಎಂದು ನೀಡುವರೋ ?

**ವನ್ದೇಽಹಂ ಶ್ರೀಗುರೋಃ ಶ್ರೀಯುತಪದಕಮಲಂ ಶ್ರೀಗುರೂನ್**
**ವೈಷ್ಣವಾಂಶ್ಚ**
**ಶ್ರೀರೂಪಂ ಸಾಗ್ರಜಾತಂ ಸಹಗಣರಘುನಾಥಾನ್ವಿತಂ ತಂ ಸಜೀವಮ್**
**ಸಾದ್ವೈತಂ ಸಾವಧೂತಂ ಪರಿಜನಸಹಿತಂ ಕೃಷ್ಣಚೈತನ್ಯದೇವಮ್**
**ಶ್ರೀರಾಧಾಕೃಷ್ಣಪಾದಾನ್ ಸಹಗಣಲಲಿತಾಶ್ರೀವಿಶಾಖಾನ್ವಿತಾಂಶ್ಚ**

ನನ್ನ ಗುರುಗಳ ಮತ್ತು ಎಲ್ಲ ವೈಷ್ಣವರ ಪಾದಾರವಿಂದಗಳಿಗೆ ನಮಸ್ಕರಿಸುತ್ತೇನೆ. ಶ್ರೀಲ ರೂಪ ಗೋಸ್ವಾಮಿ ಮತ್ತು ಅವರ ಹಿರಿಯ ಸೋದರರಾದ ಸನಾತನ ಗೋಸ್ವಾಮಿ, ಹಾಗೂ ರಘುನಾಥ ದಾಸ, ರಘುನಾಥ ಭಟ್ಟ, ಗೋಪಾಲ ಭಟ್ಟ, ಮತ್ತು ಶ್ರೀಲ ಜೀವ ಗೋಸ್ವಾಮಿ ಇವರ ಪಾದಾರವಿಂದಗಳಿಗೆ ನಮಸ್ಕರಿಸುತ್ತೇನೆ. ಶ್ರೀಕೃಷ್ಣ ಚೈತನ್ಯ ಮತ್ತು ಶ್ರೀ ನಿತ್ಯಾನಂದ, ಅದ್ವೈತ ಆಚಾರ್ಯ, ಗದಾಧರ, ಶ್ರೀವಾಸ ಮತ್ತು ಇತರ ಸಂಗಡಿಗರಿಗೆಲ್ಲಾ ಗೌರವಪೂರ್ವಕ ನಮಸ್ಕರಿಸುತ್ತೇನೆ. ಶ್ರೀಮತಿ ರಾಧಾರಾಣಿಗೂ ಮತ್ತು ಶ್ರೀಕೃಷ್ಣನಿಗೂ ಮತ್ತು ಅವರ ಸಂಗಡಿಗರಾದ ಶ್ರೀ ಲಲಿತಾ ಮತ್ತು ವಿಶಾಖರಿಗೂ ಭಕ್ತಿಪೂರ್ವಕ ನಮಸ್ಕರಿಸುತ್ತೇನೆ.

**ಹೇ ಕೃಷ್ಣ ಕರುಣಾಸಿಂಧೋ ದೀನಬಂಧೋ ಜಗತ್ಪತೇ ।**
**ಗೋಪೇಶ ಗೋಪಿಕಾಕಾಂತ ರಾಧಾಕಾಂತ ನಮೋಽಸ್ತು ತೇ ॥**

ಹೇ ಪ್ರಿಯ ಕೃಷ್ಣ, ನೀನು ದೀನಬಂಧು ಮತ್ತು ಸೃಷ್ಟಿಯ ಆದಿಮೂಲನು, ನೀನು ಗೋಪಿಕಾಂತನು ಮತ್ತು ರಾಧಾಕೃಷ್ಣನು, ನಿನಗೆ ನನ್ನ ಭಕ್ತಿಪೂರ್ವಕ ನಮಸ್ಕಾರಗಳು.

**ತಪ್ತಕಾಂಚನ ಗೌರಾಂಗೀ ರಾಧೇ ವೃಂದಾವನೇಶ್ವರೀ ।**
**ವೃಷಭಾನುಸುತೇ ದೇವಿ ಪ್ರಣಮಾಮಿ ಹರಿಪ್ರಿಯೇ ॥**

ವೃಂದಾವನದ ರಾಣಿಯೂ ತಪ್ತಕಾಂಚನ ದೇಹಕಾಂತಿಯುಳ್ಳವಳೂ ಆಗಿರುವ ರಾಧಾರಾಣಿಗೆ ನನ್ನ ನಮಸ್ಕಾರಗಳು. ನೀನು ವೃಷಭಾನು ರಾಜನ ಪುತ್ರಿಯಾಗಿರುವೆ. ನೀನು ಶ್ರೀಕೃಷ್ಣನ ಪರಮಪ್ರಿಯೆ.

**ವಾಂಛಾಕಲ್ಪತರುಭ್ಯಶ್ಚ ಕೃಪಾಸಿನ್ಧುಭ್ಯ ಏವ ಚ ।**
**ಪತಿತಾನಾಂ ಪಾವನೇಭ್ಯೋ ವೈಷ್ಣವೇಭ್ಯೋ ನಮೋ ನಮಃ ॥**

ಕೃಷ್ಣನ ಎಲ್ಲ ಭಕ್ತ ವೃಂದಕ್ಕೆ ನಾನು ಭಕ್ತಿಪೂರ್ವಕವಾಗಿ ನಮಸ್ಕರಿಸುತ್ತೇನೆ. ಕಲ್ಪವೃಕ್ಷದ ಹಾಗೆ ಅವರು ಎಲ್ಲರ ಇಚ್ಛೆಗಳನ್ನು ಪೂರೈಸಬಲ್ಲರು. ಅವರು ಪತಿತರನ್ನು ಕುರಿತು ತುಂಬಾ ಸಹಾನುಭೂತಿಪರರಾಗಿದ್ದಾರೆ.

**ಶ್ರೀಕೃಷ್ಣಚೈತನ್ಯ ಪ್ರಭುನಿತ್ಯಾನಂದ ।**
**ಶ್ರೀಅದ್ವೈತ ಗದಾಧರ ಶ್ರೀವಾಸಾದಿಗೌರಭಕ್ತವೃಂದ ॥**

ಶ್ರೀ ಕೃಷ್ಣ ಚೈತನ್ಯರಿಗೆ, ಪ್ರಭು ನಿತ್ಯಾನಂದರಿಗೆ, ಶ್ರೀ ಅದ್ವೈತ, ಗದಾಧರ, ಶ್ರೀವಾಸ ಇವರಿಗೆ ಮತ್ತು ಭಕ್ತರಶ್ರೇಣಿಯಲ್ಲಿರುವ ಇತರ ಎಲ್ಲರಿಗೂ ನಮಸ್ಕರಿಸುತ್ತೇನೆ.

**ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ ।**
**ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ॥**

ಭಗವದ್ಗೀತೆಯು ಗೀತೋಪನಿಷತ್ತು ಎಂದೂ ಪ್ರಸಿದ್ಧವಾಗಿದೆ. ಇದು ವೇದ ಜ್ಞಾನದ ಸಾರಭೂತವಾಗಿದ್ದು ವೇದ ಸಾಹಿತ್ಯದಲ್ಲಿ ಅತ್ಯಂತ ಮಹತ್ವದ ಉಪನಿಷತ್ತಾಗಿದೆ. ಇಂಗ್ಲೀಷಿನಲ್ಲಿ ಭಗವದ್ಗೀತೆಗೆ ಅನೇಕ ವ್ಯಾಖ್ಯಾನಗಳಿವೆ. ಹಾಗಿರುವಾಗ ಮತ್ತೊಂದು ವ್ಯಾಖ್ಯಾನದ ಅವಶ್ಯಕತೆ ಏನು ಎಂದು ಕೇಳಬಹುದು, ನಿಜ. ಈ ವ್ಯಾಖ್ಯಾನವನ್ನು ಕುರಿತು ಹೀಗೆ ವಿವರಿಸಬಹುದು. ಇತ್ತೀಚೆಗೆ ಒಬ್ಬ ಅಮೇರಿಕದ ಮಹಿಳೆಯು ಭಗವದ್ ಗೀತೆಯ ಒಂದು ಇಂಗ್ಲೀಷ್ ಭಾಷಾಂತರವನ್ನು ಸೂಚಿಸುವಂತೆ ನನ್ನನ್ನು ಕೇಳಿದಳು. ಅಮೇರಿಕದಲ್ಲಿ ಇಂಗ್ಲೀಷ್ ಭಾಷೆಯಲ್ಲಿ ಭಗವದ್ಗೀತೆಯ ಅನೇಕ ಆವೃತ್ತಿಗಳಿವೆ. ನನ್ನ ದೃಷ್ಟಿಯಲ್ಲಿ, ಅಮೇರಿಕದಲ್ಲಿ ಅಷ್ಟೇ ಅಲ್ಲ ಭಾರತದಲ್ಲಿಯೂ ಕೂಡ ಈ ಭಾಷಾಂತರಗಳು ಪ್ರಮಾಣಭೂತಗಳಾದವು ಎಂದು ಕಟ್ಟುನಿಟ್ಟಾಗಿ ಹೇಳಲು ಬರುವಂತಿಲ್ಲ. ಕಾರಣ ಇಷ್ಟೆ. ಅಂಥ ಪ್ರತಿಯೊಂದು ಭಾಷಾಂತರದಲ್ಲಿ ಯಥಾರೂಪ ಭಗವದ್ಗೀತೆಯ ನಿಜಭಾವ ವನ್ನು ಸೂಚಿಸದೆ, ಕೇವಲ ತಮ್ಮ ತಮ್ಮ ಅಭಿಪ್ರಾಯಗಳನ್ನು ವ್ಯಾಖ್ಯಾನಕಾರರು ವ್ಯಕ್ತ ಪಡಿಸಿದ್ದಾರೆ.

ಭಗವದ್ಗೀತೆಯ ಭಾವವು ಭಗವದ್ಗೀತೆಯಲ್ಲಿಯೇ ಹೇಳಲ್ಪಟ್ಟಿದೆ. ಅದು ಹೀಗಿದೆ: ನಾವು ಒಂದು ವಿಶಿಷ್ಟ ಬಗೆಯ ಮದ್ದು ತೆಗೆದುಕೊಳ್ಳಬಯಸಿದರೆ, ಅದರ ಮುಖಪಟ್ಟಿ

ಯಲ್ಲಿ ಕೊಟ್ಟಿರುವ ಆದೇಶಗಳನ್ನು ಪಾಲಿಸಬೇಕಾಗುವುದು, ಮದ್ದನ್ನು ನಾವು ನಮ್ಮ ಇಷ್ಟ ಬಂದ ಹಾಗೆ ಅಥವಾ ಯಾರೋ ಮಿತ್ರನ ಹೇಳಿಕೆಯಂತೆ ತೆಗೆದುಕೊಳ್ಳುವಹಾಗಿಲ್ಲ. ಮುಖ ಪಟ್ಟಿಯಲ್ಲಿರುವ ಆದೇಶಗಳಿಗನುಗುಣವಾಗಿ ಅಥವಾ ವೈದ್ಯರ ಸಲಹೆಯ ಮೇರೆಗೆ ಮದ್ದು ತೆಗೆದುಕೊಳ್ಳಬೇಕು. ಅದೇರೀತಿಯಲ್ಲಿ, ಭಗವದ್ಗೀತೆಯನ್ನು ಅದರ ಉಪದೇಶಕನ ಆಜ್ಞಾನುಸಾರ ಸ್ವೀಕರಿಸಬೇಕು. ಶ್ರೀಕೃಷ್ಣನೇ ಭಗವದ್ಗೀತೋಪದೇಶಕನಾಗಿದ್ದಾನೆ. ಗೀತೆಯ ಪ್ರತಿಯೊಂದು ಪುಟದಲ್ಲಿಯೂ ಶ್ರೀಕೃಷ್ಣನೇ ಪರಮ ದೇವೋತ್ತಮ ಪುರುಷನು ಮತ್ತು ಸಾಕ್ಷಾತ್ ಭಗವಂತನು ಎಂದು ಹೇಳಲಾಗಿದೆ. ಕೆಲವು ಸಲ 'ಭಗವಾನ್' ಎಂಬುದು ಬಲಿಷ್ಠ ವ್ಯಕ್ತಿಯನ್ನೋ, ಬಲಿಷ್ಠ ದೇವತೆಯನ್ನೋ ಸೂಚಿಸಬಹುದು. ಆದರೆ ಇಲ್ಲಿ ಮಾತ್ರ ಭಗವಾನ್ ಎಂಬುದು ಮಹಾ ಪುರುಷನಾದ ಭಗವಾನ್ ಶ್ರೀಕೃಷ್ಣನನ್ನೇ ಸೂಚಿಸುವುದು. ಜೊತೆಗೆ, ಶಂಕರಾಚಾರ್ಯ, ರಾಮಾನುಜಾಚಾರ್ಯ, ಮಧ್ವಾಚಾರ್ಯ, ನಿಂಬಾರ್ಕ ಸ್ವಾಮಿ ಶ್ರೀ ಚೈತನ್ಯ ಮಹಾಪ್ರಭು ಮತ್ತು ಭಾರತದ ವೇದಜ್ಞಾನದ ಇತರೆ ಪ್ರಮಾಣಾಚಾರ್ಯರು ದೃಢಪಡಿಸಿರುವಂತೆ ಶ್ರೀಕೃಷ್ಣನು ಪರಮ ದೇವೋತ್ತಮ ಪುರುಷನಾಗಿದ್ದಾನೆ ಎಂಬುದನ್ನು ನಾವು ತಿಳಿದುಕೊಳ್ಳಬೇಕು. ಸ್ವಯಂ ಶ್ರೀಕೃಷ್ಣನೇ ತಾನು ಪರಮ ದೇವೋತ್ತಮ ಪುರುಷನೆಂಬುದನ್ನು ಭಗವದ್ಗೀತೆಯಲ್ಲಿ ಪ್ರತಿಷ್ಠಾಪಿಸಿದ್ದಾನೆ. ಹಾಗೆಂದು ಬ್ರಹ್ಮಸಂಹಿತೆಯೂ ಎಲ್ಲ ಪುರಾಣಗಳೂ, ವಿಶೇಷವಾಗಿ ಶ್ರೀಮದ್ಭಾಗವತವೂ ಅಂಗೀಕರಿಸಿವೆ, **ಕೃಷ್ಣಸ್ತು ಭಗವಾನ್ ಸ್ವಯಂ** ಆದ್ದರಿಂದ ಭಗವದ್ಗೀತೆಯನ್ನು ಸ್ವಯಂ ಪರಮ ದೇವೋತ್ತಮ ಪುರುಷನು ಹೇಳಿರುವಂತೆಯೇ ನಾವು ಅಂಗೀಕರಿಸಬೇಕು.

ಗೀತೆಯ ನಾಲ್ಕನೆಯ ಅಧ್ಯಾಯದಲ್ಲಿ (4-1-3) ಶ್ರೀಕೃಷ್ಣನು ಹೀಗೆ ಹೇಳಿದ್ದಾನೆಃ

**ಶ್ರೀ ಭಗವಾನುವಾಚ**

**ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್ ।**
**ವಿವಸ್ವಾನ್ ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥**
**ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ ।**
**ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ ॥**
**ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ ।**
**ಭಕ್ತೋಽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಮ್ ॥**

ಭಗವದ್ಗೀತೆಯೆಂಬ ಈ ಯೋಗಪದ್ಧತಿಯನ್ನು ಮೊದಲು ಸೂರ್ಯದೇವನಿಗೆ ಉಪದೇಶಿಸಲಾಯಿತು. ಆಮೇಲೆ ಸೂರ್ಯದೇವನು ಅದನ್ನು ಮನುವಿಗೆ ವಿವರಿಸಿದನು.ಮತ್ತೆ ಮನು ಅದನ್ನು ಇಕ್ಷ್ವಾಕುವಿಗೆ ವಿವರಿಸಿದನು. ಹೀಗೆ ಪರಂಪರೆಯಲ್ಲಿ ಒಬ್ಬರಿಂದೊಬ್ಬರಿಗೆ ಉಪದಿಷ್ಟವಾಗುತ್ತ ಈ ಯೋಗಪದ್ಧತಿಯು ಇಲ್ಲಿಯವರೆಗೆ ಸಾಗಿ ಬಂದಿದೆ. ಆದರೆ, ಕಾಲ ಕ್ರಮದಲ್ಲಿ ಅದು ನಷ್ಟವಾಗಿದೆ. ಆದ್ದರಿಂದ ಮತ್ತೆ ಈಗ ಶ್ರೀಕೃಷ್ಣನು ಕುರುಕ್ಷೇತ್ರ ಯುದ್ಧ ಭೂಮಿಯಲ್ಲಿ ಅರ್ಜುನನಿಗೆ ಉಪದೇಶಿಸಬೇಕಾಗಿ ಬಂತು ಎಂದು ಇಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಹೇಳುತ್ತಿದ್ದಾನೆ.

ಅರ್ಜುನನು ತನ್ನ ಭಕ್ತನೂ ಸಖನೂ ಆಗಿರುವುದರಿಂದ ತಾನು ಈ ಪರಮ, ಗುಹ್ಯವನ್ನು ಅರ್ಜುನನಿಗೆ ಹೇಳುತ್ತಿರುವುದಾಗಿ ಕೃಷ್ಣನು ತಿಳಿಸುತ್ತಿದ್ದಾನೆ. ಭಗವದ್ಗೀತೆಯು ವಿಶೇಷವಾಗಿ ಭಗವದ್ಭಕ್ತರಿಗಾಗಿಯೇ ಇರುವ ಶಾಸ್ತ್ರ ಎಂಬುದೇ ಇದರ ತಾತ್ಪರ್ಯ ದಿವ್ಯವಾದಿಗಳಲ್ಲಿ ಜ್ಞಾನಿ. ಯೋಗಿ ಮತ್ತು ಭಕ್ತ. ಅಥವಾ ನಿರಾಕಾರವಾದಿ; ಧ್ಯಾನಾಸಕ್ತ ಮತ್ತು ಭಕ್ತ ಎಂದು ಮೂರು ವರ್ಗಗಳಿವೆ. ಹಳೆಯ ಪರಂಪರೆಯು ನಷ್ಟವಾಗಿರುವುದರಿಂದ ಅರ್ಜುನನನ್ನು ಹೊಸ ಪರಂಪರೆಯ ಮೊದಲನೆಯ ಶಿಷ್ಯನನ್ನಾಗಿ ಸ್ವೀಕರಿಸಿದ್ದೇವೆ ಎಂದು ಶ್ರೀಕೃಷ್ಣನು ಸ್ಪಷ್ಟವಾಗಿ ಅರ್ಜುನನಿಗೆ ಹೇಳುತ್ತಿದ್ದಾನೆ. ಸೂರ್ಯದೇವನಿಂದ ಇತರರಿಗೆ ಬಂದ ರೀತಿಯಲ್ಲಿಯೇ ಮತ್ತೊಂದು ಪರಂಪರೆಯನ್ನು ಸ್ಥಾಪಿಸುವುದು ಭಗವಂತನ ಇಚ್ಛೆಯಾಗಿತ್ತು. ಮತ್ತು ಮತ್ತೆ ಅರ್ಜುನನು ಭಗವದ್ಗೀತೆಯ ಅರಿವಿನಲ್ಲಿ ಪರಮಾಧಿಕಾರಿಯಾಗಬೇಕೆಂದು ಕೃಷ್ಣನು ಇಚ್ಛಿಸಿದನು. ವಿಶೇಷವಾಗಿ ಅರ್ಜುನನು ಶ್ರೀಕೃಷ್ಣನ ಭಕ್ತನು. ಕೃಷ್ಣನ ನೇರ ಶಿಷ್ಯನು ಮತ್ತು ಕೃಷ್ಣನ ಆಪ್ತ ಸಖನೂ ಆಗಿರುವುದರಿಂದ ಅರ್ಜುನನಿಗೆ ಗೀತೋಪದೇಶ ಮಾಡಲಾಗಿದೆ ಎಂಬುದನ್ನು ನಾವು ಕಾಣುತ್ತೇವೆ. ಆದ್ದರಿಂದ, ಅರ್ಜುನನಂತೆಯೇ ಗುಣವುಳ್ಳವರು ಭಗವದ್ಗೀತೆಯನ್ನು ಅತ್ಯುತ್ತಮ ರೀತಿಯಲ್ಲಿ ತಿಳಿದುಕೊಳ್ಳಬಲ್ಲರು. ಅರ್ಥಾತ್, ಅವರು ಭಕ್ತರಾಗಿ ಭಗವಂತನೊಂದಿಗೆ ನೇರಸಂಪರ್ಕ ಹೊಂದಿರಬೇಕು. ಒಬ್ಬನು ಭಗವದ್ಭಕ್ತನಾದೊಡನೆಯೇ, ಅವನೂ ಭಗವಂತನೊಂದಿಗೆ ನೇರ ಸಂಪರ್ಕ ಹೊಂದುತ್ತಾನೆ. ಇದು ಬಹು ವಿಸ್ತಾರವಾದ ವಿಷಯವಾಗಿದೆ. ಆದರೆ ಭಕ್ತನಾದವನು ಐದು ಬೇರೆ ಬೇರೆ ರೀತಿಯಲ್ಲಿ ಕೆಳಕಂಡಂತೆ ಪರಮ ದೇವೋತ್ತಮ ಪುರುಷನೊಂದಿಗೆ ಸಂಬಂಧ ಹೊಂದಬಹುದು ಎಂದು ಸಂಕ್ಷೇಪವಾಗಿ ಹೇಳಬಹುದು.

(1) ಒಬ್ಬನು ಭಗವಂತನ ಶಾಂತ ಭಕ್ತನಾಗಿರಬಹುದು
(2) ಒಬ್ಬನು ಭಗವಂತನ ದಾಸ್ಯ ಭಕ್ತನಾಗಿರಬಹುದು
(3) ಒಬ್ಬನು ಸಖನಾಗಿ ಭಕ್ತನಾಗಿರಬಹುದು
(4) ಒಬ್ಬನು ವಾತ್ಸಲ್ಯ ಭಕ್ತನಾಗಿರಬಹುದು.
(5) ಒಬ್ಬನು ಮಾಧುರ್ಯಪ್ರೇಮೀ ಭಕ್ತನಾಗಿರಬಹುದು.

ಅರ್ಜುನನು, ಕೃಷ್ಣನೊಂದಿಗೆ ಸಖ್ಯ ಸಂಬಂಧ ಹೊಂದಿದ್ದನು ಆದರೆ ಕೃಷ್ಣಾರ್ಜುನರ ಈ ಸಖ್ಯ ಸಂಬಂಧಕ್ಕೂ ನಾವು ಈ ಭೌತಿಕ ಲೋಕದಲ್ಲಿ ಕಾಣುವ ಸಖ್ಯ ಸಂಬಂಧಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ಇದು ದಿವ್ಯ ಸಖ್ಯ ಸಂಬಂಧ. ಇದು ಎಲ್ಲರಿಗೂ ಲಭ್ಯವಾಗುವುದಿಲ್ಲ. ಪ್ರತಿಯೊಬ್ಬರೂ ಭಗವಂತನೊಂದಿಗೆ ಒಂದಿಲ್ಲೊಂದು ಬಗೆಯ ಸಂಬಂಧ ಹೊಂದಿದ್ದಾರೆ. ಅಂತಹ ಸಂಬಂಧವು ಭಕ್ತಿಯುತ ಸೇವೆಯಿಂದ ಸಿದ್ಧಿಸುತ್ತದೆ ಆದರೆ, ಜೀವನದ ನಮ್ಮ ಇಂದಿನ ಸ್ಥಿತಿಯಲ್ಲಿ ನಾವು ಭಗವಂತನನ್ನು ಮರೆತಿದ್ದೇವೆ. ಕೋಟ್ಯಾನುಕೋಟಿ ಜೀವಾತ್ಮರಲ್ಲಿ ಪ್ರತಿಯೊಬ್ಬನೂ ಭಗವಂತನೊಂದಿಗೆ ಒಂದಿಲ್ಲೊಂದು ಬಗೆಯ ಸನಾತನ ಸಂಬಂಧವನ್ನು ಹೊಂದಿದ್ದಾನೆ. ಇದನ್ನು ಸ್ವರೂಪ ಎಂದು ಹೇಳುತ್ತಾರೆ. ಭಕ್ತಿಯುತ ಸೇವೆಯ ಮೂಲಕ ಈ ಸ್ವರೂಪವನ್ನು ಪಡೆದುಕೊಳ್ಳಬಹುದು. ಇದನ್ನು ಸ್ವರೂಪಸಿದ್ಧಿಯೆಂದೂ ಹೇಳುತ್ತಾರೆ. ಹೀಗೆ ಅರ್ಜುನನು ಭಗವದ್ಭಕ್ತನಾಗಿ, ಭಗವಂತನೊಂದಿಗೆ ಸಖ್ಯ ಸಂಬಂಧ ಹೊಂದಿದ್ದನು.

ಅರ್ಜುನನು ಭಗವದ್ಗೀತೆಯನ್ನು ಹೇಗೆ ಸ್ವೀಕರಿಸಿದನು ಎಂಬುದನ್ನು ಗಮನಿಸಬೇಕು. ಅವನು ಸ್ವೀಕರಿಸಿದ ಬಗೆಯನ್ನು ಗೀತೆಯ ಹತ್ತನೆಯ ಅಧ್ಯಾಯದಲ್ಲಿ ಕೊಡಲಾಗಿದೆ (10-12-14)

**ಅರ್ಜುನ ಉವಾಚ**

**ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್ ।**
**ಪುರುಷಂ ಶಾಶ್ವತಂ ದಿವ್ಯಮ್ ಆದಿದೇವಮ್ ಅಜಮ್ ವಿಭುಮ್ ॥**
**ಆಹುಸ್ತ್ವಾಮೃಷಯಃ ಸರ್ವೇ ದೇವರ್ಷಿರ್ನಾರದಸ್ತಥಾ ।**
**ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ ॥**
**ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ ।**
**ನ ಹಿ ತೇ ಭಗವನ್ವ್ಯಕ್ತಿಂ ವಿದುರ್ದೇವಾ ನ ದಾನವಾಃ ॥**

ಅರ್ಜುನನು ನುಡಿದನು; "ನೀನು ಪರಮ ದೇವೋತ್ತಮ ಪುರುಷನಾಗಿರುವಿ, ಪರಂಧಾಮನಾಗಿರುವಿ. ಪರಮ ಪವಿತ್ರನಾಗಿರುವಿ, ನೀನು ಪರತತ್ತ್ವ ಸ್ವರೂಪನು, ನೀನು ಸನಾತನು, ದಿವ್ಯನು, ಆದಿ ಪುರುಷನು, ಜನ್ಮರಹಿತನು, ಸರ್ವೋತ್ತಮನಾಗಿರುವಿ. ನಾರದ ಅಸಿತ, ದೇವಲ, ಮತ್ತು ವ್ಯಾಸರಂಥ ಮಹಾಋಷಿಗಳು ನಿನ್ನ ಬಗ್ಗೆ ಈ ಸತ್ಯವನ್ನು ದೃಢಪಡಿಸಿದ್ದಾರೆ. ಈಗ ಸ್ವಯಂ ನೀನೇ ಅದನ್ನು ಹೇಳುತ್ತಿರುವಿ. ಹೇ ಕೃಷ್ಣ, ನೀನು ನನಗೆ ಹೇಳಿದ್ದೆಲ್ಲವನ್ನೂ ಸತ್ಯವೆಂದು ನಾನು ಅಂಗೀಕರಿಸುತ್ತೇನೆ. ಹೇ ಭಗವಾನ್, ನಿನ್ನ ವ್ಯಕ್ತಿತ್ವವನ್ನು ದೇವ ದಾನವರಲ್ಲಿ ಯಾರೂ ಅರಿತುಕೊಳ್ಳಲಾರರು.

ಪರಮ ದೇವೋತ್ತಮ ಪುರುಷನಿಂದ ಭಗವದ್ಗೀತೆಯನ್ನು ಕೇಳಿದ ತರುವಾಯ ಅರ್ಜುನನು ಕೃಷ್ಣನನ್ನು **ಪರಂ ಬ್ರಹ್ಮ** ಎಂದು ಅಂಗೀಕರಿಸಿದನು. ಪ್ರತಿಯೊಬ್ಬ ಜೀವಾತ್ಮನೂ ಬ್ರಹ್ಮನು. ಆದರೆ ಪರಬ್ರಹ್ಮನು ಅಥವಾ ಪರಮದೇವೋತ್ತಮ ಪುರುಷನು, ಪರಬ್ರಹ್ಮನಾಗಿರುತ್ತಾನೆ. **ಪರಮಧಾಮ** ಎಂದರೆ ಕೃಷ್ಣನೇ ಪರಮಧಾಮನು ಎಂದರೆ ಸರ್ವವಸ್ತುಗಳಿಗೆ ಮೂಲ ನಿಲಯನು, **ಪವಿತ್ರಂ** ಎಂದರೆ ಕೃಷ್ಣನು ಪರಮ ಶುದ್ಧನು, ಯಾವ ಭೌತಿಕ ಕಲ್ಮಷವೂ ಅವನನ್ನು ಸೋಂಕಲಾರದು; **ಪುರುಷಂ** ಎಂದರೆ ಕೃಷ್ಣನೇ ಪರಮ ಭೋಕ್ತಾರನು. **ಶಾಶ್ವತಂ** ಎಂದರೆ ಮೂಲನು; **ದಿವ್ಯಂ** ಎಂದರೆ ದಿವ್ಯ ಸ್ವರೂಪನು; **ಆದಿದೇವಂ** ಎಂಧರೆ ಪರಮದೇವೋತ್ತಮ ಪುರುಷನು; **ಅಜಂ** ಎಂದರೆ ಜನ್ಮರಹಿತನು; ಮತ್ತು **ವಿಭುಂ** ಎಂದರೆ ಸರ್ವೋತ್ತಮನು.

ಕೃಷ್ಣನು ಅರ್ಜುನನ ಸಖನಾಗಿರುವುದರಿಂದ, ಕೇವಲ ಕೃಷ್ಣನನ್ನು ಸ್ತುತಿಸಿ ಸಂತೋಷಪಡಿಸುವುದಕ್ಕಾಗಿ ಅರ್ಜುನನು ಹೀಗೆ ಹೇಳುತ್ತಿರಬಹುದು ಎಂದು ಯಾರಾದರೂ ಯೋಚಿಸಬಹುದಾಗಿದೆ. ಆದ್ದರಿಂದ ಭಗವದ್ಗೀತೆಯನ್ನು ಓದುವವರ ಮನಸ್ಸಿನಿಂದ ಈ ಸಂದೇಹವನ್ನು ಹೊಡೆದೋಡಿಸಲು ಅರ್ಜುನನು ಕೃಷ್ಣನನ್ನು ಪರಮದೇವೋತ್ತಮಪುರುಷನೆಂದು ಕೇವಲ ತಾನೊಬ್ಬನೇ ಅಂಗೀಕರಿಸಿಲ್ಲ. ನಾರಧ, ಅಸಿತ, ದೇವಲ ಮತ್ತು ವೇದವ್ಯಾಸ

ರಂಥ ಮಹಾ ಆಚಾರ್ಯರೂ ಕೂಡ ಇದನ್ನು ಅಂಗೀಕರಿಸಿದ್ದಾರೆ ಎಂದು ತನ್ನ ಮಾತುಗಳನ್ನು ಮುಂದಿನ ಶ್ಲೋಕದಲ್ಲಿ ಅರ್ಜುನನು ಸಮರ್ಥಿಸಿಕೊಳ್ಳುತ್ತಾನೆ. ಎಲ್ಲಾ ಆಚಾರ್ಯರೂ ಅಂಗೀಕರಿಸಿರುವಂತೆ ವೇದಜ್ಞಾನವನ್ನು ಪ್ರಚಾರಪಡಿಸುವ ಮಹಾಪುರುಷರು ಇವರು. ಆದ್ದರಿಂದ ಕೃಷ್ಣನು ಹೇಳುವುದನ್ನೆಲ್ಲ ಪರಿಪೂರ್ಣವೆಂದು ಅಂಗೀಕರಿಸುತ್ತಿರುವುದಾಗಿ ಅರ್ಜುನನು ಕೃಷ್ಣನಿಗೆ ತಿಳಿಸಿದನು. **ಸರ್ವಂ ಏತದ್ ಋತಂ ಮನ್ಯೇ** "ನೀನು ಹೇಳುವುದನ್ನೆಲ್ಲ ನಾನು ಸತ್ಯವೆಂದು ಒಪ್ಪಿಕೊಳ್ಳುತ್ತೇನೆ. ಭಗವಂತನ ವ್ಯಕ್ತಿತ್ವವನ್ನು ಅರಿತುಕೊಳ್ಳುವುದು ಬಹಳ ಕಷ್ಟಸಾಧ್ಯವಾಗಿದೆ, ದೇವಾದಿದೇವತೆಗಳೂ ಕೂಡ ಅವನನ್ನು ಅರಿತುಕೊಳ್ಳಲಾರರು ಎಂದು ಅರ್ಜುನನು ಹೇಳುತ್ತಾನೆ. ಎಂದರೆ ಮಾನವನಿಗಿಂತ ಹೆಚ್ಚಿನ ಅಧಿಕಾರಿಗಳೂ ಕೂಡ ಭಗವಂತನನ್ನು ಅರಿತುಕೊಳ್ಳುವುದು ಕಷ್ಟ. ಹೀಗಿರುವಾಗ ಕೃಷ್ಣಭಕ್ತನಲ್ಲದ ಒಬ್ಬ ಸಾಮಾನ್ಯ ಮಾನವನು ಭಗವಾನ್ ಶ್ರೀಕೃಷ್ಣನನ್ನು ಅರಿತುಕೊಳ್ಳುವುದು ಹೇಗೆ ಸಾಧ್ಯ ?

ಆದ್ದರಿಂದ, ಭಗವದ್ಗೀತೆಯನ್ನು ಭಕ್ತಿ ಭಾವದಿಂದ ಅಂಗೀಕರಿಸಬೇಕು. ತಾನು ಕೃಷ್ಣನಿಗೆ ಸಮನೆಂದು ತಿಳಿಯಬಾರದು ಅಥವಾ ಕೃಷ್ಣನು ಒಬ್ಬ ಸಾಮಾನ್ಯ ಮನುಷ್ಯ ಅಥವಾ ಒಬ್ಬ ಮಹಾ ವ್ಯಕ್ತಿ ಎಂದು ಕೂಡ ತಿಳಿಯಬಾರದು. ಭಗವಾನ್ ಶ್ರೀಕೃಷ್ಣನು ಪರಮ ದೇವೋತ್ತಮ ಪುರುಷನಾಗಿದ್ದಾನೆ. ಆದ್ದರಿಂದ, ಭಗವದ್ಗೀತೆಯ ಅಥವಾ ಅರ್ಜುನನ ನಿರೂಪಣೆಯ ಪ್ರಕಾರ ಭಗವದ್ಗೀತೆಯನ್ನು ಅರಿತುಕೊಳ್ಳ ಬಯಸುವವನು ಶ್ರೀಕೃಷ್ಣನನ್ನು ತಾತ್ವಿಕವಾಗಿಯಾದರೂ, ಪರಮ ದೇವೋತ್ತಮ ಪುರುಷನೆಂದು ಅಂಗೀಕರಿಸಲೇಬೇಕು ಈ ವಿನಯ ಭಾವದಿಂದಲೇ ಭಗವದ್ಗೀತೆಯನ್ನು ನಾವು ಅರಿತುಕೊಳ್ಳಲು ಸಾಧ್ಯ, ಭಗವದ್ಗೀತೆಯನ್ನು ವಿನೀತಭಾವದಿಂದ ಅಧ್ಯಯನ ಮಾಡದ ಹೊರತು. ಅದು ಮಹಾ ರಹಸ್ಯಮಯವಾದ ಶಾಸ್ತ್ರವಾಗಿರುವುದರಿಂದ ಅದನ್ನು ಅರಿತುಕೊಳ್ಳುವುದು ಬಹಳ ಕಷ್ಟ.

ಭಗವದ್ಗೀತೆ ಎಂದರೇನು ? ಮಾನವ ಕುಲವನ್ನು ಭೌತಿಕ ಅಸ್ತಿತ್ವದ ಅವಿದ್ಯಾದೆಸೆಯಿಂದ ಪಾರುಮಾಡುವುದೇ ಭಗವದ್ಗೀತೆಯ ಉದ್ದೇಶವಾಗಿದೆ. ಪ್ರತಿಯೊಬ್ಬ ಮನುಷ್ಯನೂ, ಅರ್ಜುನನು ಕುರುಕ್ಷೇತ್ರದಲ್ಲಿ ಯುದ್ಧ ಮಾಡುವ. ಕಷ್ಟಕ್ಕೆ ಸಿಲುಕಿಕೊಂಡಂತೆ. ನಾನಾ ರೀತಿಯಲ್ಲಿ ಕಷ್ಟಕ್ಕೆ ಸಿಲುಕಿದ್ದಾನೆ. ಅರ್ಜುನನು ಶ್ರೀಕೃಷ್ಣನಿಗೆ ಶರಣಾಗತನಾದನು. ತತ್ಫಲವಾಗಿ ಅವನಿಗೆ ಗೀತೋಪದೇಶ ದೊರೆಯಿತು. ಕೇವಲ ಅರ್ಜುನನಷ್ಟೆ ಅಲ್ಲ, ನಮ್ಮಲ್ಲಿ ಪ್ರತಿಯೊಬ್ಬರೂ ಈ ಲೌಕಿಕ ಅಸ್ತಿತ್ವದ ಅನೇಕ ದುಃಖಗಳಿಂದ ತುಂಬಿದ್ದೇವೆ. ನಮ್ಮ ಅಸ್ತಿತ್ವವೇ ಅಸ್ತಿತ್ವರಹಿತ ವಾತಾವರಣದಲ್ಲಿದೆ. ಅಸ್ತಿತ್ವನಾಶದ ಭಯ ಸಹಜವಾಗಿ ನಮಗೆ ಉಂಟಾಗಬಾರದು. ನಮ್ಮ ಅಸ್ತಿತ್ವವು ಸನಾತನ, ಆದರೆ ಅದುಹೇಗೋ ಏನೋ ನಾವು **ಅಸತ್** ನಲ್ಲಿ ಸಿಲುಕಿಕೊಂಡಿದ್ದೇವೆ. **ಅಸತ್** ಎಂದರೆ ಇಲ್ಲದಿರುವುದು,

ದುಃಖಿಗಳಾದ ಅನೇಕ ಮಾನವರಲ್ಲಿ ತಮ್ಮ ವಸ್ತುಸ್ಥಿತಿ ಏನು ಎಂದು ಕೆಲವರು ಮಾತ್ರ ವಿಚಾರ ಮಾಡುತ್ತಿದ್ದಾರೆ. ತಮಗೇಕೆ ಇಂಥ ವಿಚಿತ್ರ ಪರಿಸ್ಥಿತಿ ಒದಗಿದೆ ಇತ್ಯಾದಿಯಾಗಿ ಕೇಳುತ್ತಾರೆ. ಹೀಗೆ ತನ್ನ ದುಃಖಕ್ಕೆ ಕಾರಣವಾದ ಸ್ಥಿತಿಯನ್ನು ಅರಿತುಕೊಳ್ಳಲು ಮನುಷ್ಯನು ಜಾಗ್ರತನಾಗದ ಹೊರತು ಮತ್ತು ತಾನು ದುಃಖಪಡುವ ಬದಲು ಎಲ್ಲ ದುಃಖಗಳಿಗೆ ನಿವಾರಣೆಯನ್ನು ಕಂಡುಕೊಳ್ಳಲು ಪ್ರಯತ್ನಿಸಬೇಕೆಂಬುದನ್ನು ಅರಿತುಕೊಳ್ಳದ ಹೊರತು,

ಅವನು ಪರಿಪೂರ್ಣವ್ಯಕ್ತಿಯಾಗಲಾರನು, ಮನುಷ್ಯನ ಮನಸ್ಸಿನಲ್ಲಿ ಈ ಬಗೆಯ ಜಿಜ್ಞಾಸೆ ಜಾಗೃತಿ ಉಂಟಾದಾಗ ಮಾನವತ್ವ ಪ್ರಾರಂಭವಾಗುತ್ತದೆ. ಬ್ರಹ್ಮಸೂತ್ರದಲ್ಲಿ ಈ ಬಗೆಯ ಜಿಜ್ಞಾಸೆಯನ್ನು ಬ್ರಹ್ಮಜಿಜ್ಞಾಸಾ ಎಂದು ಹೇಳುತ್ತಾರೆ. **ಅಥಾತೋ ಬ್ರಹ್ಮ ಜಿಜ್ಞಾಸಾ** ಮಾನವನ ಪ್ರತಿಯೊಂದು ಕ್ರಿಯೆಯು ಪರತತ್ವ ಸ್ವರೂಪವನ್ನು ವಿಚಾರಿಸದಿದ್ದರೆ ನಿಷ್ಫಲವೆಂದೇ ಹೇಳಬೇಕು ಆದ್ದರಿಂದ ತಾವೇಕೆ ಈ ದುಃಖಕ್ಕೆ ಈಡಾಗಿದ್ದೇವೆ, ತಾವು ಎಲ್ಲಿಂದ ಬಂದಿದ್ದೇವೆ ಮರಣಾನಂತರ ಎಲ್ಲಿಗೆ ಹೋಗುತ್ತೇವೆ ಎಂದು ಕೇಳಲಾರಂಭಿಸುವವರು ಭಗವದ್ಗೀತೆಯನ್ನು ಅರಿತುಕೊಳ್ಳಲು ಯೋಗ್ಯರಾಗಿರುತ್ತಾರೆ. ನಿಜವಾದ ಅಧ್ಯಯನಾಕಾಂಕ್ಷಿಯು ಪರಮದೇವೋತ್ತಮ ಪುರುಷನ ಬಗ್ಗೆ ದೃಢ ಗೌರವ ಹೊಂದಿರಬೇಕು ಅರ್ಜುನನು ಇಂಥಾ ಶಿಷ್ಯನಾಗಿದ್ದನು.

ಮನುಷ್ಯನು ನಿಜ ಉದ್ದೇಶವನ್ನು ಮರೆತಾಗ ಜೀವನದ ನಿಜ ಉದ್ದೇಶವನ್ನು ಪ್ರತಿಷ್ಠಾಪಿಸಲು ಶ್ರೀಕೃಷ್ಣನು ವಿಶೇಷವಾಗಿ ಭೂಮಿಗೆ ಇಳಿದು ಬರುತ್ತಾನೆ. ಹಾಗೆ ಜಾಗ್ರತರಾದ ಅನೇಕಾನೇಕ ಮಾನವರಲ್ಲಿ ಕ್ವಚಿತ್ತಾಗಿ ಒಬ್ಬನು ತನ್ನ ಸ್ವರೂಪವನ್ನು ತಿಳಿದುಕೊಳ್ಳಲು ಇಚ್ಛೆ ಹೊಂದುತ್ತಾನೆ. ಈ ಭಗವದ್ಗೀತೆ ಅಂಥವನಿಗಾಗಿ ಇದೆ. ವಾಸ್ತವಿಕವಾಗಿ ನಮ್ಮನ್ನೆಲ್ಲ ಅವಿದ್ಯಾ ಹುಲಿಯು ನುಂಗಿ ಹಾಕುತ್ತಿದೆ. ಆದರೆ, ಭಗವಂತನು ಜೀವಾತ್ಮರ ಮೇಲೆ ಪರಮಕರುಣಾಪೂರ್ಣನಾಗಿದ್ದಾನೆ. ಈ ಉದ್ದೇಶಕ್ಕಾಗಿಯೇ ಶ್ರೀಕೃಷ್ಣನು ಅರ್ಜುನನಿಗೆ ಭಗವದ್ಗೀತೆಯನ್ನು ಉಪದೇಶಿಸಿ ತನ್ನ ಸಖನಾದ ಅವನನ್ನು ಶಿಷ್ಯನನ್ನಾಗಿ ಮಾಡಿಕೊಂಡನು.

ಅರ್ಜುನನು ಕೃಷ್ಣಸಖನಾಗಿ ಎಲ್ಲ ಬಗೆಯ ಅಜ್ಞಾನದಿಂದ ಅತೀತನಾಗಿದ್ದನು. ಆದರೆ ಕುರುಕ್ಷೇತ್ರ ಯುದ್ಧ ಭೂಮಿಯಲ್ಲಿ ಜೀವನದ ಸಮಸ್ಯೆಗಳನ್ನು ಕುರಿತು ಪ್ರಶ್ನೆ ಮಾಡುವ ಮಟ್ಟಿಗೆ ಅರ್ಜುನನಿಗೆ ಮೋಹ ಉಂಟಾಯಿತು. ಆಗ ಭಗವಂತನು ಭಾವೀ ಮಾನವ ಕುಲದ ಹಿತಕ್ಕಾಗಿ ಆ ಪ್ರಶ್ನೆಗಳನ್ನೆಲ್ಲಾ ಉತ್ತರಿಸಿ, ವಿವರಿಸಿ ಜೀವನಕ್ಕೆ ಒಂದು ಯೋಜನೆಯನ್ನು ರೂಪಿಸಿ ಕೊಟ್ಟನು. ಆ ಪ್ರಕಾರ ಮನುಷ್ಯನು ನಡೆದು ಜೀವನದ ಪರಮ ಗುರಿಯನ್ನು ಸಾಧಿಸಿಕೊಳ್ಳಬಹುದಾಗಿದೆ.

ಭಗವದ್ಗೀತೆಯ ವಿಷಯವು ಐದು ಮೂಲತತ್ವಗಳ ಅರಿವನ್ನು ಅವಲಂಬಿಸಿದೆ. ಮೊಟ್ಟ ಮೊದಲು ಭಗವದ್ವಿಜ್ಞಾನವನ್ನು ವಿವರಿಸಿ. ಆ ಮೇಲೆ ಜೀವಾತ್ಮರ ಸ್ವರೂಪ ಸ್ಥಿತಿಯನ್ನು ಕುರಿತು ವಿವರಿಸಲಾಗಿದೆ. ಒಬ್ಬ **ಈಶ್ವರ**ನಿದ್ದಾನೆ, ಅವನು ನಿಯಾಮಕನು. **ಜೀವ**ರಿದ್ದಾರೆ, ಅವರು ನಿಯಮ್ಯರು, ಜೀವಾತ್ಮನು ತಾನು ನಿಯಮ್ಯನಲ್ಲ, ಸ್ವತಂತ್ರನು ಎಂದು ಭಾವಿಸಿದರೆ, ಅವನು ಹುಚ್ಚನೇ ಸರಿ. ಜೀವಾತ್ಮನು ಎಲ್ಲ ವಿಷಯಗಳಲ್ಲಿ, ಕನಿಷ್ಠ ಬದ್ಧ ಜೀವನದಲ್ಲಂತೂ, ನಿಯಮ್ಯನಾಗಿದ್ದಾನೆ. ಆದ್ದರಿಂದ ಭಗವದ್ಗೀತೆಯು, ಪರಮ ನಿಯಾಮಕನಾದ ಈಶ್ವರನನ್ನು ಮತ್ತು ನಿಯಮ್ಯರಾದ ಜೀವರನ್ನು ಕುರಿತು ವಿವೇಚಿಸುತ್ತಿದೆ. ಜೊತೆ ಜೊತೆಗೆ ಪ್ರಕೃತಿ (ಭೌತಿಕ ನಿಸರ್ಗ) ಮತ್ತು ಕಾಲ (ಇಡೀ ವಿಶ್ವದ ಅಥವಾ ಭೌತ ಪ್ರಕೃತಿಯ ಅಸ್ತಿತ್ವದ ಕಾಲಾವಧಿ) ಮತ್ತು ಕರ್ಮ (ಕ್ರಿಯೆ) ಇವೂ ಕೂಡ ಚರ್ಚಿಸಲ್ಪಟ್ಟಿವೆ. ವಿಶ್ವಸೃಷ್ಟಿಯು ನಾನಾ ಬಗೆಯ ಕ್ರಿಯೆಗಳಿಂದ ತುಂಬಿದೆ. ಜೀವಾತ್ಮರೂ

ಕೂಡ ನಾನಾ ಬಗೆಯ ಕ್ರಿಯೆಗಳಲ್ಲಿ ತೊಡಗಿದ್ದಾರೆ. ದೇವರು ಎಂದರೇನು, ಜೀವಾತ್ಮರು ಯಾರು, ಪ್ರಕೃತಿಯೆಂದರೇನು, ಭೌತಿಕ ಸೃಷ್ಟಿ ಯಾವುದು, ಅದು ಕಾಲದಿಂದ ಹೇಗೆ ನಿಯಂತ್ರಿತವಾಗಿದೆ, ಜೀವಾತ್ಮರ ಕರ್ಮ ಪ್ರಕ್ರಿಯೆ ಏನು—ಇವೆಲ್ಲವುಗಳನ್ನು ನಾವು ಭಗವದ್ಗೀತೆಯಿಂದ ಅರಿತುಕೊಳ್ಳಬಹುದಾಗಿದೆ.

ಭಗವದ್ಗೀತೆಯಲ್ಲಿ ಹೇಳಿದ ಈ ಐದು ಮೂಲಭೂತ ವಿಷಯಗಳಲ್ಲಿ ಪರಮದೇವರೋತ್ತಮ ಪುರುಷನು ಅಥವಾ ಕೃಷ್ಣನು ಅಥವಾ ಬ್ರಹ್ಮನ್ ಅಥವಾ ಪರಮ ನಿಯಾಮಕನು ಅಥವಾ ಪರಮಾತ್ಮ—ನೀವು ಯಾವುದೇ ಹೆಸರಿನಿಂದ ಕರೆಯಿರಿ—ಸರ್ವೋತ್ತಮನಾಗಿದ್ದಾನೆ ಎಂಬುದು ಸಿದ್ಧವಾಗಿದೆ. ಜೀವಾತ್ಮರು ಗುಣದಲ್ಲಿ ಮಾತ್ರ ಪರಮ ನಿಯಾಮಕನ ಹೋಲಿಕೆ ಹೊಂದಿದ್ದಾರೆ. ಉದಾಹರಣೆಗೆ ಭಗವದ್ಗೀತೆಯ ಮುಂದಿನ ಅಧ್ಯಾಯಗಳಲ್ಲಿ ವಿವರಿಸಿದಂತೆ ಭಗವಂತನು ಈ ಭೌತಿಕ ಜಗತ್ತಿನ ಸಕಲ ಕ್ರಿಯೆಗಳ ಮೇಲೆ ನಿಯಂತ್ರಣ ಹೊಂದಿದ್ದಾನೆ. ಭೌತಿಕ ಪ್ರಕೃತಿಯು ಸ್ವತಂತ್ರವಲ್ಲ. ಪ್ರಕೃತಿ ದೇವಿಯು ಭಗವದಧೀನವಾಗಿ ವರ್ತಿಸುತ್ತಾಳೆ. **ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ :** "ಈ ಭೌತಿಕ ಪ್ರಕೃತಿಯು ನನ್ನ ಆದೇಶಾನುಸಾರ ವರ್ತಿಸುತ್ತದೆ" ಎಂದು ಶ್ರೀಕೃಷ್ಣನು ಹೇಳುತ್ತಾನೆ. ಈ ವಿಶ್ವದಲ್ಲಿ ಅನೇಕ ಅದ್ಭುತಗಳು ನಡೆಯುವುದನ್ನು ನೋಡಿದಾಗ ಇವುಗಳ ಹಿಂದೆ ಒಬ್ಬ ನಿಯಾಮಕನು ಇರಲೇಬೇಕು ಎಂದು ನಾವು ಅರಿತುಕೊಳ್ಳಬೇಕು. ನಿಯಮನವಿಲ್ಲದೆ ಯಾವುದೂ ಪ್ರಕಟವಾಗುವುದಿಲ್ಲ. ನಿಯಾಮಕನ ಕಲ್ಪನೆಯಿಲ್ಲದಿರುವುದು ಹುಡುಗು ಬುದ್ಧಿಯೆನಿಸುತ್ತದೆ. ಒಂದು ಸ್ವಯಂ ಚಾಲಿತ ವಾಹನವು ಕುದುರೆ ಅಥವಾ ಬೇರೆ ಪ್ರಾಣಿಯು ಎಳೆಯದೇ ತಾನಾಗಿಯೇ ಓಡುತ್ತಿರುವುದು ಮಗುವಿಗೆ ಒಂದು ಅದ್ಭುತವಾಗಿ ತೋರಬಹುದು. ಆದರೆ ಬುದ್ಧಿವಂತನಿಗೆ ಅದರ ಯಾಂತ್ರಿಕ ವ್ಯವಸ್ಥೆಯ ಸ್ವರೂಪ ತಿಳಿದಿರುತ್ತದೆ, ಆ ಯಂತ್ರದ ಹಿಂದೆ ಚಾಲಕನಾಗಿ ಒಬ್ಬ ಮನುಷ್ಯನಿದ್ದಾನೆ ಎಂಬುದು ಅವನಿಗೆ ಗೊತ್ತು. ಅದೇ ಪ್ರಕಾರ ಭಗವಂತನೇ ಚಾಲಕನು. ಅವನ ಆದೇಶಾನುಸಾರ ಎಲ್ಲವೂ ಕೆಲಸ ಮಾಡುತ್ತವೆ. ಈಗ ಭಗವಂತನು, ಮುಂದಿನ ಅಧ್ಯಾಯಗಳಲ್ಲಿ ಕಾಣುವಂತೆ ಜೀವಾತ್ಮರನ್ನು ತನ್ನ ವಿಭಿನ್ನಾಂಶರೆಂದು ಅಂಗೀಕರಿಸಿದ್ದಾನೆ, ಚಿನ್ನದ ಒಂದು ಕಣವೂ ಚಿನ್ನವೇ, ಸಮುದ್ರದ ಒಂದು ಹನಿ ನೀರೂ ಉಪ್ಪೇ. ಅದೇ ಪ್ರಕಾರ ಜೀವಾತ್ಮರಾದ ನಾವು ಪರಮ ನಿಯಾಮಕನಾದ ಈಶ್ವರನ ಅಥವಾ ಭಗವಂತನ ಎಂದರೆ ಶ್ರೀಕೃಷ್ಣನ ವಿಭಿನ್ನಾಂಶರಾಗಿದ್ದು ನಾವು ಅಲ್ಪ ಈಶ್ವರರಾಗಿ ಎಂದರೆ ಪರಾಧೀನ ಈಶ್ವರರಾಗಿ, ಭಗವತ್ ಸದೃಶ ಗುಣಗಳನ್ನು ಬಹಳ ಅಲ್ಪ ಪ್ರಮಾಣದಲ್ಲಿ ಹೊಂದಿದ್ದೇವೆ. ನಾವೀಗ ಬಾಹ್ಯಾಕಾಶದ ಮೇಲೆ ಅಥವಾ ಇತರ ಗ್ರಹಗಳ ಮೇಲೆ ನಿಯಂತ್ರಣ ಹೊಂದಲು ಯತ್ನಿಸುತ್ತಿರುವಂತೆ ಪ್ರಕೃತಿ ನಿಯಂತ್ರಣಕ್ಕೆ ಸದಾ ಯತ್ನಿಸುತ್ತಿದ್ದೇವೆ. ಹೀಗೆ ನಿಯಂತ್ರಿಸುವ ಪ್ರವೃತ್ತಿಯು ನಮ್ಮಲ್ಲಿರುವುದೆಂದರೆ ಕೃಷ್ಣನಲ್ಲಿ ಅದು ಮೂಲವಾಗಿದೆ. ನಾವು ಪ್ರಕೃತಿಯ ಮೇಲೆ ಒಡೆತನ ನಡೆಸ ಬಯಸಿದರೂ ನಾವು ಪರಮ ನಿಯಾಮಕರಲ್ಲ ಎಂಬುದನ್ನು ಅರಿತುಕೊಳ್ಳಬೇಕು. ಇದನ್ನು ಭಗವದ್ಗೀತೆಯಲ್ಲಿ ವಿವರಿಸಲಾಗಿದೆ.

ಭೌತಿಕ ಪ್ರಕೃತಿ ಎಂದರೇನು ? ಇದನ್ನು ಗೀತೆಯಲ್ಲಿ ಅಪರಾ ಪ್ರಕೃತಿ ಎಂದು ವಿವರಿಸಲಾಗಿದೆ. ಜೀವಾತ್ಮನು ಪರಾ ಪ್ರಕೃತಿಯಾಗಿದ್ದಾನೆ. ಪ್ರಕೃತಿಯು ಪರವಾಗಿರಲಿ, ಅಪರವಾಗಿರಲಿ ಅದು ಸದಾ ನಿಯಂತ್ರಣಕ್ಕೆ ಒಳಪಟ್ಟಿರುತ್ತದೆ. ಪ್ರಕೃತಿ ಎಂಬುದು ಸ್ತ್ರೀ ರೂಪ ಆದ್ದರಿಂದ ಪತಿಯ ಅಧೀನಳಾದ ಪತ್ನಿಯಂತೆ ಪ್ರಕೃತಿಯು ಭಗವಂತನ ನಿಯಂತ್ರಣಕ್ಕೆ ಒಳಪಟ್ಟಿರುತ್ತಾಳೆ. ಪ್ರಕೃತಿಯು ಸದಾ ಅಧೀನಳು. ಭಗವಂತನ ಆಧಿಪತ್ಯಕ್ಕೆ ಒಳಪಟ್ಟಿರುತ್ತಾಳೆ. ಜೀವಾತ್ಮರು ಮತ್ತು ಪ್ರಕೃತಿ ಇಬ್ಬರು ಭಗವಂತನ ಆಧಿಪತ್ಯ ನಿಯಂತ್ರಣಕ್ಕೆ ಒಳಪಟ್ಟವರೇ. ಜೀವಾತ್ಮರು ಭಗವಂತನ ವಿಭಿನ್ನ ಅಂಶರಾಗಿದ್ದರೂ ಕೂಡ ಗೀತೆಯ ಪ್ರಕಾರ ಅವರನ್ನು ಪ್ರಕೃತಿಯೆಂದೇ ಪರಿಗಣಿಸಬೇಕು. ಇದನ್ನು ಭಗವದ್ಗೀತೆಯ ಏಳನೇ ಅಧ್ಯಾಯದಲ್ಲಿ ಸ್ಪಷ್ಟವಾಗಿ ನಿರೂಪಿಸಲಾಗಿದೆ. **"ಅಪರೇಯಂ ಇತಸ್ತ್ವ ಅನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಂ ಜೀವಭೂತಾಂ"** "ಈ ಭೌತಿಕ ಪ್ರಕೃತಿಯು ನನ್ನ ಅಪರ ಪ್ರಕೃತಿಯಾಗಿದೆ. ಆದರೆ ಇದರಾಚೆಗೆ ಜೀವಭೂತಾಂ ಜೀವಾತ್ಮರು ಎಂಬ ಮತ್ತೊಂದು ಪ್ರಕೃತಿ ಇದೆ." ಭೌತಿಕ ಪ್ರಕೃತಿಯು ಸ್ವಯಂ ಮೂರು ಗುಣಗಳಿಂದ ನಿರ್ಮಿತವಾದುದು. ಸಾತ್ವಿಕ, ರಾಜಸ ಮತ್ತು ತಾಮಸ ಗುಣಗಳು, ಈ ಗುಣಗಳ ಮೇಲೆ ಸನಾತನ ಕಾಲವಿದೆ ಮತ್ತು ಸನಾತನ ಕಾಲದ ನಿಯಂತ್ರಣ ಮತ್ತು ನೇತೃತ್ವದಲ್ಲಿ ಈ ಮೂರು ಗುಣಗಳ ಸಂಯೋಜನೆಯಿಂದ ಕ್ರಿಯೆಗಳು ನಡೆಯುತ್ತವೆ. ಅದನ್ನೇ **ಕರ್ಮ** ಎಂದು ಹೇಳುತ್ತಾರೆ. ಈ ಕರ್ಮಗಳು ಅನಾದಿ ಕಾಲದಿಂದ ನಡೆಯುತ್ತಾ ಬಂದಿವೆ ಮತ್ತು ನಾವು ಈ ಕರ್ಮಗಳ ಫಲವಾಗಿ ಸುಖವನ್ನೋ ದುಃಖವನ್ನೋ ಅನುಭವಿಸುತ್ತಿದ್ದೇವೆ. ಉದಾಹರಣೆಗೆ ನಾನೊಬ್ಬ ವ್ಯಾಪಾರಿ ಎಂದು ಭಾವಿಸೋಣ. ನಾನು ಬಹಳ ಕಷ್ಟಪಟ್ಟು ಬುದ್ಧಿ ಉಪಯೋಗಿಸಿ ಬಹಳಷ್ಟು ಹಣ ಸಂಗ್ರಹ ಮಾಡಿ ಬ್ಯಾಂಕಿನಲ್ಲಿ ಕೂಡಿಡುತ್ತೇನೆ. ಆಗ ನಾನು ಸುಖಿಯಾಗುತ್ತೇನೆ. ಆದರೆ, ವ್ಯಾಪಾರದಲ್ಲಿ ನಾನು ಎಲ್ಲಾ ಕಳೆದು ಕೊಳ್ಳುತ್ತೇನೆ ಎಂದು ಭಾವಿಸೋಣ ಆಗ ನಾನು ದುಃಖಿ. ಇದೇ ಪ್ರಕಾರ ನಾವು ಜೀವನದ ಪ್ರತಿಯೊಂದು ಕ್ಷೇತ್ರದಲ್ಲಿ ನಮ್ಮ ಕರ್ಮಫಲರೂಪವಾದ ಸುಖವನ್ನೋ ದುಃಖವನ್ನೋ ಅನುಭವಿಸುತ್ತೇವೆ. ಇದು **ಕರ್ಮ** ಎನಿಸಿಕೊಳ್ಳುತ್ತದೆ.

ಈಶ್ವರ (ಭಗವಂತ), ಜೀವ (ಜೀವಾತ್ಮ), ಪ್ರಕೃತಿ (ನಿಸರ್ಗ), ಕಾಲ (ಸನಾತನ ಕಾಲ) ಮತ್ತು ಕರ್ಮ (ಕ್ರಿಯೆ) ಇವೆಲ್ಲವೂ ಭಗವದ್ಗೀತೆಯಲ್ಲಿ ವಿವರಿಸಲ್ಪಟ್ಟಿವೆ—ಈ ಐದರಲ್ಲಿ ಭಗವಂತನು, ಜೀವಾತ್ಮರು, ಭೌತ ಪ್ರಕೃತಿ ಮತ್ತು ಕಾಲ—ಇವು ಸನಾತನವಾದವುಗಳು. ಪ್ರಕೃತಿಯ ಅಭಿವ್ಯಕ್ತತೆಯು ಅಶಾಶ್ವತವಾಗಿರಬಹುದು. ಆದರೆ ಮಿಥ್ಯೆಯಲ್ಲ. ಭೌತಿಕ ಪ್ರಕೃತಿಯ ಅಭಿವ್ಯಕ್ತತೆಯು ಮಿಥ್ಯೆ ಎಂದು ಕೆಲವು ದಾರ್ಶನಿಕರು ಹೇಳುತ್ತಾರೆ. ಆದರೆ ಭಗವದ್ ಗೀತೆಯ ತತ್ವ ಪ್ರಕಾರ ಅಥವಾ ವೈಷ್ಣವ ದರ್ಶನದ ಪ್ರಕಾರ ಅದು ಹಾಗಿಲ್ಲ. ಜಗತ್ತಿನ ಉದ್ಭೂತಿಯು ಮಿಥ್ಯೆಯೆಂದು ಅಂಗೀಕರಿಸಿಲ್ಲ. ಅದು ಸತ್ಯವಾದುದು ಆದರೆ ಅನಿತ್ಯವಾದುದು ಎಂದು ಅಂಗೀಕರಿಸಲಾಗಿದೆ. ಅದು ಆಕಾಶದಲ್ಲಿ ಸಂಚರಿಸುವ ಮೋಡದಂತೆ ಅಥವಾ ಧಾನ್ಯಗಳಿಗೆ ಪೋಷಣೆ ನೀಡುವ ಮತ್ತು ಆಗಾಗ ಬಂದು ಹೋಗುವ

ಮಳೆಗಾಲಕ್ಕೆ ಹೋಲಿಸಲಾಗಿದೆ. ಮಳೆಗಾಲವು ಕಳೆದೊಡನೆ ಮತ್ತು ಮೋಡಗಳು ಮಾಯವಾದೊಡನೆ ಮಳೆಯಿಂದ ಬೆಳವಣಿಗೆ ಹೊಂದಿದ ಬೆಳೆಗಳೆಲ್ಲ ಒಣಗಲಾರಂಭಿಸುತ್ತವೆ. ಅದೇ ಪ್ರಕಾರ ಭೌತಿಕ ಸೃಷ್ಟಿಯು ವಿಶಿಷ್ಟ ಕಾಲದಲ್ಲಿ ಪ್ರಕಟವಾಗುತ್ತದೆ. ಕೆಲ ಕಾಲ ಇದ್ದು ಮತ್ತೆ ಮಾಯವಾಗುತ್ತದೆ.ಇದು ಪ್ರಕೃತಿಯ ಕ್ರಿಯಾರೀತಿ. ಆದರೆ ಈ ಚಕ್ರ ಸನಾತನವಾಗಿ ನಡದೇ ಇರುತ್ತದೆ. ಆದ್ದರಿಂದ ಪ್ರಕೃತಿ ಶಾಶ್ವತವಾದುದು ಮಿಥ್ಯೆಯಲ್ಲ. ಭಗವಂತನು ಇದನ್ನು "ನನ್ನ ಪ್ರಕೃತಿ" ಎಂದು ಹೇಳುತ್ತಾನೆ. ಈ ಭೌತಿಕ ಪ್ರಕೃತಿಯು ಭಗವಂತನ ಭಿನ್ನ ಶಕ್ತಿಯಾಗಿದೆ. ಅದೇ ಪ್ರಕಾರ, ಜೀವಾತ್ಮರು ಭಗವಂತನ ಶಕ್ತಿಯೇ, ಆದರೆ ಭಿನ್ನ ಶಕ್ತಿಯಲ್ಲ, ಸನಾತನ ಸಂಬಂಧವುಳ್ಳವರು. ಹೀಗೆ ಭಗವಂತನು, ಜೀವಾತ್ಮನು, ಭೌತಿಕ ಪ್ರಕೃತಿ ಮತ್ತು ಕಾಲ ಇವು ಎಲ್ಲ ಪರಸ್ಪರ ಸಂಬಂಧಿತ ಮತ್ತು ಸನಾತನ ವಸ್ತುಗಳು. ಆದರೆ ಕರ್ಮವೆಂಬ ವಸ್ತು ಸನಾತನವಾದುದಲ್ಲ. ಕರ್ಮದ ಪರಿಣಾಮಗಳು ಪ್ರಾಚೀನವಾಗಿರಬಹುದು. ನಾವು ಅನಾದಿ ಕಾಲದಿಂದ ಸುಖ ದುಃಖ ರೂಪವಾದ ನಮ್ಮ ಕರ್ಮ ಫಲಗಳನ್ನು ಅನುಭವಿಸುತ್ತಿದ್ದೇವೆ. ಆದರೆ ನಾವು ನಮ್ಮ ಕರ್ಮಫಲಗಳನ್ನು ಬದಲಾಯಿಸಿಕೊಳ್ಳಬಹುದಾಗಿದೆ. ಈ ಬದಲಾವಣೆಯು ನಮ್ಮ ಜ್ಞಾನ ಸಿದ್ಧಿಯನ್ನು ಅವಲಂಬಿಸಿದೆ. ನಾವು ಅನೇಕ ಕರ್ಮಗಳಲ್ಲಿ ತೊಡಗಿದ್ದೇವೆ. ನಾವು ಯಾವ ಕರ್ಮಗಳನ್ನು ಮಾಡಿದರೆ ಕರ್ಮಫಲಗಳಿಂದ ಮುಕ್ತರಾಗುತ್ತೇವೆ ಎಂದು ಖಂಡಿತವಾಗಿ ನಮಗೆ ಗೊತ್ತಿಲ್ಲ. ಆದರೆ ಇದೆಲ್ಲವನ್ನು ಕೂಡ ಭಗವದ್ಗೀತೆಯಲ್ಲಿ ವಿವರಿಸಲಾಗಿದೆ.

ಭಗವಂತನ ಅಂದರೆ ಈಶ್ವರನ ಸ್ವರೂಪವು ಪರಮ ಪ್ರಜ್ಞಾರೂಪವಾದುದು. ಭಗವಂತನ ವಿಭಿನ್ನಾಂಶರಾದ ಜೀವಾತ್ಮರು ಕೂಡ ಪ್ರಜ್ಞಾಸ್ವರೂಪರೇ.ಜೀವಾತ್ಮರು ಮತ್ತು ಭೌತಿಕ ಪ್ರಕೃತಿ ಎರಡೂ ಭಗವಂತನ ಶಕ್ತಿಯಾದ ಪ್ರಕೃತಿ ಎಂದು ವಿವರಿಸಲಾಗಿದೆ. ಆದರೆ ಈ ಎರಡರಲ್ಲಿ ಜೀವಾತ್ಮರು ಪ್ರಜ್ಞಾವಂತರು, ಪ್ರಕೃತಿಯು ಜಡ, ಇದೇ ವ್ಯತ್ಯಾಸ. ಆದ್ದರಿಂದಲೇ, ಜೀವಾತ್ಮರು ಭಗವಂತನಂತೆ ಪ್ರಜ್ಞೆಯನ್ನು ಹೊಂದಿರುವುದರಿಂದ ಜೀವ ಪ್ರಕೃತಿಯನ್ನು ಪರಾಪ್ರಕೃತಿ ಎಂದು ಕರೆಯಲಾಗುತ್ತದೆ. ಆದರೆ ಭಗವಂತನು ಪರಮ ಪ್ರಜ್ಞೆಯುಳ್ಳವನಾಗಿದ್ದಾನೆ. ಜೀವಾತ್ಮನು ಕೂಡ ಪರಮ ಪ್ರಜ್ಞಾವಂತನೆಂದು ಹೇಳ ಕೂಡದು. ಜೀವಾತ್ಮನು ಸಿದ್ಧಿಯ ಯಾವ ಹಂತದಲ್ಲೂ ಪರಮ ಪ್ರಜ್ಞಾವಂತನಾಗುವುದಿಲ್ಲ. ಹಾಗೆ ಆಗಬಹುದು ಎಂಬ ತತ್ವ ತಪ್ಪುತತ್ವವಾಗಿದೆ. ಜೀವನು ಪ್ರಜ್ಞಾವಂತನಾಗಿರ ಬಹುದು; ಆದರೆ ಅವನು ಪರಿಪೂರ್ಣ ಅಥವಾ ಪರಮ ಪ್ರಜ್ಞಾವಂತನಲ್ಲ.

ಜೀವ-ಈಶ್ವರರ ವ್ಯತ್ಯಾಸವನ್ನು ಭಗವದ್ಗೀತೆಯ ಹದಿಮೂರನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ. ಭಗವಂತನು, ಜೀವಾತ್ಮನಂತೆ ಕ್ಷೇತ್ರಜ್ಞ, ಪ್ರಜ್ಞಾವಂತನಾಗಿದ್ದಾನೆ. ಆದರೆ ಜೀವಾತ್ಮನು ತನ್ನ ದೇಹದ ಮಟ್ಟಿಗೆ ಪ್ರಜ್ಞೆ ಹೊಂದಿರುತ್ತಾನೆ. ಆದರೆ ಭಗವಂತನು ಸರ್ವ ದೇಹಗಳ ಪ್ರಜ್ಞೆ ಹೊಂದಿರುತ್ತಾನೆ. ಅವನು ಜೀವಾತ್ಮರ ಹೃದಯಸ್ಥಿತನಾಗಿರುವುದರಿಂದ ಅವನು ಪ್ರತಿಯೊಬ್ಬ ಜೀವರ ಮಾನಸಿಕ ವ್ಯಾಪಾರಗಳನ್ನು ನೋಡಬಲ್ಲನು. ನಾವು ಇದನ್ನು ಮರೆಯಕೂಡದು. ಅಲ್ಲದೇ, ಪರಮಾತ್ಮನು ಎಂದರೆ ಪರಮ ದೇವೋತ್ತಮ ಪುರುಷನು ಈಶ್ವರನಾಗಿ, ನಿಯಾಮಕನಾಗಿ ಪ್ರತಿಯೊಬ್ಬ ಜೀವಾತ್ಮರ ಹೃದಯದಲ್ಲಿ ಸ್ಥಿತನಾಗಿದ್ದಾನೆ.

ಮತ್ತು ಜೀವಾತ್ಮನು ತನ್ನ ಇಚ್ಛಾನುಸಾರ ಕರ್ಮ ಮಾಡುವಂತೆ ನಿರ್ದೇಶನ ಮಾಡುತ್ತಾನೆ. ತಾನು ಏನು ಮಾಡಬೇಕು ಎಂಬುದನ್ನು ಜೀವಾತ್ಮನು ಮರೆಯುತ್ತಾನೆ. ಮೊದಲು ಏನೋ ರೀತಿಯಲ್ಲಿ ವರ್ತಿಸಲು ನಿರ್ಧರಿಸುತ್ತಾನೆ. ಆಮೇಲೆ ಅವನು ತನ್ನ ಸ್ವಕರ್ಮದ ಕ್ರಿಯೆ ಮತ್ತು ಪ್ರತಿಕ್ರಿಯೆಗಳಲ್ಲಿ ಸಿಲುಕಿಕೊಳ್ಳುತ್ತಾನೆ. ಒಂದು ದೇಹವನ್ನು ಬಿಟ್ಟ ಬಳಿಕ, ನಾವು ಬಟ್ಟೆಗಳನ್ನು ಬದಲಾಯಿಸಿಕೊಳ್ಳುವಂತೆ ಜೀವನು ಮತ್ತೊಂದು ಬಗೆಯ ದೇಹವನ್ನು ಪ್ರವೇಶಿಸುತ್ತಾನೆ. ಜೀವನು ಹೀಗೆ ದೇಹಾಂತರ ಹೊಂದುತ್ತ ನಡೆದಂತೆ, ಅವನು ಪೂರ್ವ ಕರ್ಮಗಳ ಫಲಾಫಲಗಳನ್ನು ಅನುಭವಿಸಬೇಕಾಗುತ್ತದೆ. ಜೀವಾತ್ಮನು ಸತ್ವಭಾವದಲ್ಲಿದ್ದಾಗ, ಸರಿಯಾದ ಬುದ್ಧಿ ಹೊಂದಿರುವಾಗ ಮತ್ತು ನಾನು ಯಾವ ಕರ್ಮಗಳನ್ನು ಮಾಡಬೇಕು ಎಂಬುದನ್ನು ಅರಿತುಕೊಂಡಾಗ, ಕರ್ಮಗಳನ್ನು ಬದಲಾಯಿಸಿಕೊಳ್ಳಬಹುದಾಗಿದೆ. ಅವನು ಹಾಗೆ ಮಾಡಿದರೆ ಅವನ ಪೂರ್ವ ಕರ್ಮಗಳ ಎಲ್ಲಾ ಫಲಗಳು ಬದಲಾವಣೆ ಆಗುತ್ತವೆ. ಆದ್ದರಿಂದಲೇ ಕರ್ಮ ಸನಾತನವಲ್ಲ. ಅಂತೆಯೇ ಈಶ್ವರ, ಜೀವ, ಪ್ರಕೃತಿ, ಕಾಲ ಮತ್ತು ಕರ್ಮ ಈ ಐದರಲ್ಲಿ ನಾಲ್ಕು ಸನಾತನ, ಕರ್ಮ ಮಾತ್ರ ಸನಾತನವಲ್ಲ ಎಂದು ನಾವು ಹೇಳಿದೆವು.

ಈ ರೀತಿಯಲ್ಲಿ ಪರಮ ಪ್ರಜ್ಞಾವಂತನಾದ ಈಶ್ವರನು ಜೀವಾತ್ಮನೊಂದಿಗೆ ಸಾದೃಶ್ಯವನ್ನು ಹೊಂದಿರುತ್ತಾನೆ : ಭಗವಂತನ ಮತ್ತು ಜೀವಾತ್ಮನ ಪ್ರಜ್ಞೆಯು ದಿವ್ಯವಾದುದು. ಪ್ರಜ್ಞೆ ಭೌತಿಕ ವಸ್ತುಗಳ ಸಂಭವದಿಂದ ಹುಟ್ಟುವುದಿಲ್ಲ. ಅದು ತಪ್ಪು ಕಲ್ಪನೆ. ಕೆಲವೊಂದು ಭೌತಿಕ ಸನ್ನಿವೇಶದ ಸಂಯೋಜನೆಯಿಂದ ಪ್ರಜ್ಞೆ ಆಗುತ್ತದೆ ಎಂಬ ತತ್ವವು ಭಗವದ್‌ಗೀತೆಗೆ ಸ್ವೀಕಾರಾರ್ಹವಲ್ಲ. ಒಂದು ಬಣ್ಣದ ಗಾಜಿನ ಮೂಲಕ ಬರುವ ಪ್ರಕಾಶವು ವಿಶಿಷ್ಟ ಬಣ್ಣವನ್ನು ಹೊಂದಿದೆ ಎಂದು ತೋರುವಂತೆ ಕೆಲವೊಂದು ಭೌತಿಕ ಸನ್ನಿವೇಶಗಳ ಪ್ರಭಾವದಿಂದ ಪ್ರಜ್ಞೆ ತಿರೋಹಿತವಾಗಿರಬಹುದು. ಆದರೆ ಭಗವತ್ ಪ್ರಜ್ಞೆಯು ಭೌತಿಕ ಪ್ರಭಾವಕ್ಕೆ ಒಳಪಡುವುದಿಲ್ಲ. **ಮಯಾಧ್ಯಕ್ಷೇಣ ಪ್ರಕೃತಿಃ** ಎಂದು ಕೃಷ್ಣನು ಹೇಳುತ್ತಾನೆ. ಅವನು ಬ್ರಹ್ಮಾಂಡದಲ್ಲಿ ಅವತರಿಸಿದಾಗ ಅವನ ಪ್ರಜ್ಞೆಯು ಭೌತಿಕ ಪರಿಣಾಮಕ್ಕೆ ಒಳಪಡುವುದಿಲ್ಲ. ಶ್ರೀ ಕೃಷ್ಣನು ಭೌತಿಕ ಪರಿಣಾಮಕ್ಕೆ ಒಳಪಡುವವನಾಗಿದ್ದರೆ, ಭಗವದ್‌ಗೀತೆಯಲ್ಲಿ ಅವನು ಚರ್ಚಿಸುವಂತೆ ದಿವ್ಯ ವಿಷಯಗಳನ್ನು ಕುರಿತು ಮಾತನಾಡಲು ಅವನು ಯೋಗ್ಯನಾಗುತ್ತಿರಲಿಲ್ಲ. ಭೌತಿಕ ಕಲ್ಮಷ ಸಂಪರ್ಕದ ಪ್ರಜ್ಞೆಯಿಂದ ಮುಕ್ತನಾಗದವನು ದಿವ್ಯ ಲೋಕದ ವಿಷಯದ ಬಗ್ಗೆ ಏನೂ ಹೇಳಲು ಸಾಧ್ಯವಿಲ್ಲ, ಆದ್ದರಿಂದ ಭಗವಂತನು ಭೌತಿಕ ಕಲ್ಮಷ ಹೊಂದಿಲ್ಲ. ಸದ್ಯ ನಮ್ಮ ಪ್ರಜ್ಞೆಯು ಮಾತ್ರ ಭೌತಿಕ ಕಲ್ಮಷ ಹೊಂದಿದೆ. ಈ ನಮ್ಮ ಪ್ರಕೃತಿ ಕಲ್ಮಷಿತ ಪ್ರಜ್ಞೆಯನ್ನು ಶುದ್ಧಗೊಳಿಸಬೇಕು ಎಂದು ಭಗವದ್ಗೀತೆಯು ಉಪದೇಶಿಸುತ್ತದೆ. ಶುದ್ಧ ಪ್ರಜ್ಞೆಯಲ್ಲಿ ನಮ್ಮ ಕರ್ಮವು ಈಶ್ವರ ಇಚ್ಛಾನುವರ್ತಿಯಾಗುತ್ತದೆ. ಅದರಿಂದ ಆನಂದ ಹೊಂದುತ್ತೇವೆ. ಹಾಗೆಂದರೆ ನಾವು ಎಲ್ಲಾ ಕರ್ಮಗಳನ್ನು ತ್ಯಜಿಸಬೇಕು ಎಂದು ಅರ್ಥವಲ್ಲ. ಬದಲಾಗಿ ನಮ್ಮ ಕರ್ಮಗಳು ಶುದ್ಧವಾಗಬೇಕು. ಶುದ್ಧ ಕರ್ಮಗಳನ್ನೇ ಭಕ್ತಿ ಎಂದು ಕರೆಯುತ್ತಾರೆ. ಭಕ್ತಿಯಿಂದ ಮಾಡಿದ ಕರ್ಮಗಳು ಸಾಮಾನ್ಯ ಕರ್ಮಗಳೆಂದು ತೋರಬಹುದು, ಆದರೆ ಅವು ಕಲುಷಿತ ಕರ್ಮಗಳಾಗಿರುವುದಿಲ್ಲ. ಭಕ್ತನು ಒಬ್ಬ ಸಾಮಾನ್ಯ ಮನುಷ್ಯನಂತೆ ಕರ್ಮ ಮಾಡುತ್ತಿದ್ದಾನೆ.ಎಂದು ಅಜ್ಞಾನಿಗೆ ತೋರಬಹುದು. ಭಕ್ತನ ಅಥವಾ ಭಗವಂತನ ಕ್ರಿಯೆಗಳು ಅಶುದ್ಧ ಪ್ರಜ್ಞೆಯಿಂದ ಅಥವಾ ಪ್ರಕೃತಿ ಸಂಬಂಧದಿಂದ ಕಲುಷಿತ

ವಾಗುವುದಿಲ್ಲ ಎಂಬುದನ್ನು ಬಡಪಾಯಿ ಅಜ್ಞಾನಿಯು ಅರಿತುಕೊಳ್ಳಲಾರನು. ಭಕ್ತರ ಮತ್ತು ಭಗವಂತನ ಕ್ರಿಯೆಗಳು ಪ್ರಕೃತಿ ಗುಣಾತೀತವಾಗಿರುತ್ತವೆ. ಆದರೆ ಈಗ ಮಾತ್ರ ನಮ್ಮ ಪ್ರಜ್ಞೆಯು ಕಲುಷಿತಗೊಂಡಿದೆ.

ನಾವು ಭೌತಿಕ ಕಲ್ಮಷ ಹೊಂದಿರುವಾಗ ಬದ್ಧ ಜೀವರು ಎನಿಸಿಕೊಳ್ಳುತ್ತೇವೆ. ನಾನು ಭೌತಿಕ ಪ್ರಕೃತಿಯ ವಸ್ತು ಎಂಬ ಭಾವದಲ್ಲಿ ಮಿಥ್ಯಾ ಪ್ರಜ್ಞೆಯು ತೋರಿಬರುತ್ತದೆ. ಇದನ್ನೇ ಮಿಥ್ಯಾಹಂಕಾರ ಎನ್ನುತ್ತಾರೆ. ದೈಹಿಕ ಕಲ್ಪನೆಯಲ್ಲಿ ಮಗ್ನನಾಗುವನು ತನ್ನ ಸ್ಥಿತಿಯನ್ನು ಅರಿತುಕೊಳ್ಳಲಾರನು. ದೇಹಾತ್ಮಭಾವದಿಂದ ಜೀವನನ್ನು ಮುಕ್ತಗೊಳಿಸಲು ಭಗವದ್ಗೀತೆಯನ್ನು ಉಪದೇಶಿಸಲಾಗಿದೆ. ಭಗವಂತನಿಂದ ಜ್ಞಾನೋಪದೇಶವನ್ನು ಪಡೆಯಲು ಅರ್ಜುನನು ತನ್ನನ್ನು ಅಂಥ ಸ್ಥಿತಿಯಲ್ಲಿ ಇರಿಸಿಕೊಂಡನು. ಆದ್ದರಿಂದ ಮಾನವನು ಜೀವನದ ದೈಹಿಕ ಕಲ್ಪನೆಗಳಿಂದ ಮುಕ್ತನಾಗಬೇಕು, ದಿವ್ಯವಾದಿಗೆ ಇದೇ ಪ್ರಾಥಮಿಕ ಕ್ರಿಯೆಗಳಾಗಿವೆ. ಮುಕ್ತನಾಗ ಬಯಸುವವನು, ಸ್ವತಂತ್ರನಾಗಬಯಸುವನು, ತಾನು ಭೌತಿಕ ದೇಹವಲ್ಲ ಎಂಬುದನ್ನು ಮೊದಲು ಅರಿತುಕೊಳ್ಳಬೇಕು. ಮುಕ್ತಿ ಎಂದರೆ ಭೌತಿಕ ಪ್ರಜ್ಞೆಯಿಂದ ವಿಮೋಚನೆ, ಶ್ರೀಮದ್ಭಾಗವತದಲ್ಲಿ ಕೂಡ ಮೋಕ್ಷದ ಕಲ್ಪನೆಯನ್ನು ನೀಡಲಾಗಿದೆ. **ಮುಕ್ತಿರ್ ಹಿತ್ವಾನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿಃ.** ಮುಕ್ತಿ ಎಂದರೆ ಈ ಭೌತಿಕ ಜಗತ್ತಿನ ಕಲುಷಿತ ಪ್ರಜ್ಞೆಯಿಂದ ಬಿಡುಗಡೆ ಮತ್ತು ಶುದ್ಧ ಪ್ರಜ್ಞೆಯ ಪ್ರಾಪ್ತಿಯಾಗಿದೆ. ಭಗವದ್ಗೀತೆಯ ಎಲ್ಲಾ ಉಪದೇಶವು ಇಂಥ ಶುದ್ಧ ಪ್ರಜ್ಞೆಯ ಜಾಗೃತಿಯನ್ನೇ ಉದ್ದೇಶಿಸಿದೆ, ಆದುದರಿಂದ ಗೀತೋಪದೇಶದ ಕೊನೆಯಲ್ಲಿ ಅರ್ಜುನನು ಆಗ ಶುದ್ಧ ಪ್ರಜ್ಞೆಯಲ್ಲಿ ಇರುವನೇ ಎಂದು ಕೃಷ್ಣನು ಅರ್ಜುನನ್ನು ಕೇಳುತ್ತಾನೆ, ಪರಿಶುದ್ಧ ಪ್ರಜ್ಞೆ ಎಂದರೆ ಭಗವಂತನ ಆಜ್ಞಾನುಸಾರ ವರ್ತಿಸುವುದು. ಇದೇ ಪರಿಶುದ್ಧ ಪ್ರಜ್ಞೆಯ ಸಾರ ಸರ್ವಸ್ವ. ನಾವು ಭಗವಂತನ ವಿಭಿನ್ನಾಂಶರಾಗಿರುವುದರಿಂದ ಪ್ರಜ್ಞೆ ಎಂಬುದು ಮುಂಚಿನಿಂದ ಇದ್ದೇ ಇದೆ. ಆದರೆ ನಾವು ಗುಣಗಳಿಂದ ಪ್ರಭಾವಿತರಾಗುವ ಸಂಭವವಿದೆ. ಆದರೆ ಭಗವಂತನು ಪರಮಪುರುಷನಾಗಿರುವುದರಿಂದ, ಇಂಥ ಪ್ರಭಾವಕ್ಕೆ ಒಳಗಾಗುವುದಿಲ್ಲ, ಅಲ್ಪ ಜೀವರಿಗೂ ಪುರುಷೋತ್ತಮನಿಗೂ ಇದೇ ವ್ಯತ್ಯಾಸ.

ಈ ಪ್ರಜ್ಞೆಯೆಂದರೇನು ? "ನಾನು" ಎಂಬುದೇ ಈ ಪ್ರಜ್ಞೆ. ಹಾಗಾದರೆ, ನಾನು ಯಾರು ?

ಕಲುಷಿತ ಪ್ರಜ್ಞೆಯಲ್ಲಿ 'ನಾನು' ಎಂದರೆ "ನಾನು ನೋಡುವುದೆಲ್ಲಾ ನನ್ನ ಒಡೆತನಕ್ಕೆ ಸೇರಿದ್ದು. ನಾನೇ ಇವುಗಳ ಭೋಕ್ತಾರನು" ಎಂದು ಅರ್ಥ. ಪ್ರತಿಯೊಬ್ಬ ಜೀವಾತ್ಮನು ತಾನೇ ಈ ಭೌತಿಕ ಪ್ರಪಂಚದ ಸ್ವಾಮಿ ಮತ್ತು ಸೃಷ್ಟಿಕರ್ತನಾಗಿರುವನೆಂದು ತಿಳಿದಿರುವುದರಿಂದಲೇ ಈ ಭೂಮಿಯು ಸಾಗುತ್ತಲಿದೆ. ಭೌತಿಕ ಪ್ರಜ್ಞೆಯು ಎರಡು ವಿಧ. ಒಂದು ನಾನೇ ಸೃಷ್ಟಿಕರ್ತ ಎಂಬುದು, ಮತ್ತೊಂದು ನಾನೇ ಅದರ ಭೋಕ್ತಾರ ಎಂಬುದು. ಆದರೆ ವಾಸ್ತವಿಕವಾಗಿ ಭಗವಂತನೇ ಈ ಸಕಲ ವಿಶ್ವದ ಸೃಷ್ಟಿಕರ್ತನೂ, ಭೋಕ್ತಾರನೂ ಆಗಿದ್ದಾನೆ ಮತ್ತು ಜೀವಾತ್ಮನು ಭಗವಂತನ ವಿಭಿನ್ನಾಂಶನಾಗಿದ್ದು, ಸೃಷ್ಟಿಕರ್ತನೂ ಅಲ್ಲ.

ಭೋಕ್ತಾರನೂ ಅಲ್ಲ. ಆದರೆ ಸಹಚರನು ಆಗಿದ್ದಾನೆ. ಅವನು ಸೃಷ್ಟನು ಮತ್ತು ಭೋಗ್ಯನು. ಉದಾಹರಣೆಗೆ ಒಂದು ಯಂತ್ರದ ಭಾಗವು ಇಡೀ ಯಂತ್ರದೊಡನೆ ಸಹಕರಿಸುತ್ತದೆ. ದೇಹದ ಒಂದು ಅಂಗವು ಇಡೀ ದೇಹದೊಡನೆ ಸಹಕರಿಸುತ್ತದೆ. ಕೈ, ಕಾಲು, ಕಣ್ಣು ಹೀಗೆ ಎಲ್ಲ ಅವಯವಗಳು ದೇಹದ ಭಾಗವಾಗಿವೆ. ಆದರೆ ಅವು ನಿಜವಾಗಿ ಭೋಕ್ತಾರರಲ್ಲ. ಆದರೆ ಹೊಟ್ಟೆ ಭೋಕ್ತಾರವಾಗಿದೆ. ಕಾಲುಗಳು ನಡೆಯುತ್ತವೆ, ಕೈಗಳು ಆಹಾರ ತಂದು ಕೊಡುತ್ತವೆ, ಹಲ್ಲುಗಳು ಅಗಿಯುತ್ತವೆ, ಹೀಗೆ ದೇಹದ ಎಲ್ಲ ಭಾಗಗಳೂ ಹೊಟ್ಟೆಯನ್ನು ಸಂತುಷ್ಟಗೊಳಿಸಲು ದುಡಿಯುತ್ತವೆ, ಕಾರಣವೆಂದರೆ ಹೊಟ್ಟೆಯೇ ದೇಹದ ಮುಖ್ಯ ಭಾಗ. ಅದು ಇಡೀ ದೇಹದ ವ್ಯವಸ್ಥೆಯನ್ನು ಪೋಷಿಸಿಕೊಂಡು ಬರುತ್ತದೆ. ಆದ್ದರಿಂದ ಎಲ್ಲವನ್ನೂ ಹೊಟ್ಟೆಗೆ ಹಾಕಲಾಗುತ್ತದೆ. ಒಬ್ಬನು ಮರವನ್ನು ಬೆಳೆಸಲು ಅದರ ಬೇರಿಗೆ ನೀರೆರೆಯುತ್ತಾನೆ. ಹಾಗೆಯೇ ಹೊಟ್ಟೆಗೆ ಆಹಾರ ಹಾಕಿ ದೇಹವನ್ನು ಪೋಷಿಸುತ್ತಾನೆ. ದೇಹವು ಆರೋಗ್ಯ ಸ್ಥಿತಿಯಲ್ಲಿರಬೇಕಾದರೆ ದೇಹದ ಅಂಗಾಂಗಗಳು ಹೊಟ್ಟೆಗೆ ಆಹಾರ ಒದಗಿಸುವಲ್ಲಿ ಸಹಕರಿಸಬೇಕು. ಅದೇ ಪ್ರಕಾರ ಭಗವಂತನೇ ಭೋಕ್ತಾರನೂ, ಸೃಷ್ಟಿಕರ್ತನೂ ಆಗಿದ್ದಾನೆ ಮತ್ತು ನಾವು ಅವನ ಅಧೀನ ಜೀವರಾಗಿ ಅವನನ್ನು ತೃಪ್ತಿಪಡಿಸಲು ಸಹಕರಿಸಬೇಕಾಗಿದೆ. ಹೊಟ್ಟೆಗೆ ಹೋದ ಆಹಾರದಿಂದ ದೇಹದ ಎಲ್ಲ ಭಾಗಗಳಿಗೆ ಸಹಾಯವಾಗುವಂತೆ ನಮ್ಮ ಸಹಕಾರದಿಂದ ನಿಜವಾಗಿ ನಮಗೇ ಸಹಾಯ ದೊರೆಯುತ್ತದೆ. ಕೈ ಬೆರಳುಗಳು ಹೊಟ್ಟೆಗೆ ಆಹಾರ ಒದಗಿಸುವ ಬದಲು ತಾವೇ ಅದನ್ನು ಸ್ವೀಕರಿಸಬೇಕೆಂದು ಯೋಚಿಸಿದರೆ ಅವು ಭಗ್ನವಾಗಿ ಹೋಗುತ್ತವೆ. ಇಡೀ ಸೃಷ್ಟಿಯ ಮತ್ತು ಭೋಗದ ಕೇಂದ್ರ ವ್ಯಕ್ತಿ ಭಗವಂತನೇ ಆಗಿದ್ದಾನೆ. ಜೀವಾತ್ಮರು ಅವನ ಸಹಚರಿಗಳು ಮಾತ್ರ. ಇಂಥ ಸಹಕಾರದಲ್ಲಿಯೇ ಜೀವರಿಗೆ ಆನಂದವಿದೆ. ಉಭಯರ ಸಂಬಂಧವೂ ಕೂಡ ಸ್ವಾಮಿ ಭೃತ್ಯ ಸಂಬಂಧದಂತಿದೆ, ಸ್ವಾಮಿಯು ಪೂರ್ಣ ತೃಪ್ತನಾದರೆ ಭೃತ್ಯನೂ ತೃಪ್ತನಾಗುತ್ತಾನೆ. ಅದೇ ಪ್ರಕಾರ ಭಗವಂತನನ್ನು ತೃಪ್ತಿಗೊಳಿಸಬೇಕು. ಜೀವಾತ್ಮರಲ್ಲಿ ತಾನೇ ಸೃಷ್ಟಿಕರ್ತನಾಗಬೇಕು ತಾನೇ ಈ ಐಹಿಕ ಸುಖವನ್ನು ಭೋಗಿಸಬೇಕು ಎಂಬ ಪ್ರವೃತ್ತಿಗಳು ಜೀವಾತ್ಮನಲ್ಲಿರುವುದೇಕೆಂದರೆ ಈ ಪ್ರಕಟ ವಿಶ್ವದ ಸೃಷ್ಟಿಕರ್ತನಾದ ಭಗವಂತನೇ ಈ ಪ್ರವೃತ್ತಿಗಳ ಮೂಲನು.

ಆದ್ದರಿಂದ ಪೂರ್ಣತ್ವ ಎಂಬುದು ಪರಮ ನಿಯಾಮಕನಾದ ಭಗವಂತನು, ನಿಯಮ್ಯರಾದ ಜೀವಾತ್ಮರು, ಭೌತಿಕ ವಿಶ್ವ, ಅನಾದಿ ನಿತ್ಯವಾದ ಕಾಲ ಮತ್ತು ಕರ್ಮ ಇವೆಲ್ಲವುಗಳನ್ನು ಗೀತೆಯಲ್ಲಿ ವಿವರಿಸಲಾಗಿದೆ. ಇವು ಎಲ್ಲವೂ ಸೇರಿ ಪೂರ್ಣವೆನಿಸುತ್ತದೆ. ಆ ಪೂರ್ಣನನ್ನು ಪರಮ ಸತ್ಯ ಸ್ವರೂಪವೆಂದು ಹೇಳಲಾಗುತ್ತದೆ. ಪೂರ್ಣತ್ವವೂ ಮತ್ತು ಪೂರ್ಣ ಪರಮ ಸತ್ಯವೂ ಪರಮ ದೇವೋತ್ತಮ ಪುರುಷನಾದ ಶ್ರೀಕೃಷ್ಣನೇ ಆಗಿದ್ದಾನೆ. ಎಲ್ಲ ಪ್ರಕಟ ಜಗತ್ತು ಅವನ ಬೇರೆ ಬೇರೆ ಶಕ್ತಿಗಳ ಪರಿಣಾಮಗಳು. ಅವನೇ ಪೂರ್ಣನು,

ನಿರಾಕಾರ ಬ್ರಹ್ಮನೂ ಬ್ರಹ್ಮಣೋ ಹಿ ಪ್ರತಿಷ್ಠಾಹಂ ಪೂರ್ಣ ಪರಮ ಪುರುಷನಿಗೆ ಅಧೀನವೆಂದು ಗೀತೆಯಲ್ಲಿ ವಿವರಿಸಲಾಗಿದೆ, ಬ್ರಹ್ಮ ಎಂಬುದನ್ನು ಸೂರ್ಯ ಪ್ರಕಾಶದ ಕಿರಣಗಳಂತೆ ಎಂದು ಬ್ರಹ್ಮಸೂತ್ರದಲ್ಲಿ ಹೆಚ್ಚು ಸ್ಪಷ್ಟವಾಗಿ ವಿವರಿಸಲಾಗಿದೆ. ನಿರಾಕಾರ

ಬ್ರಹ್ಮನು ಪರಮ ದೇವೋತ್ತಮ ಪುರುಷನ ಜ್ವಾಜಲ್ಯಮಾನವಾದ ಕಿರಣಗಳು. ನಿರಾಕಾರ ಬ್ರಹ್ಮನು ಪರಮ ಪೂರ್ಣನ ಅಪರಿಪೂರ್ಣ ಸಾಕ್ಷಾತ್ಕಾರ. ಪರಮಾತ್ಮನ ಕಲ್ಪನೆಯೂ ಹಾಗೆಯೇ. ಪರಮ ದೇವೋತ್ತಮ ಪುರುಷನಾದ ಪುರುಷೋತ್ತಮನು ನಿರಾಕಾರ ಬ್ರಹ್ಮ ಮತ್ತು ಪರಮಾತ್ಮನ ಭಾಗಶಃ ಸಾಕ್ಷಾತ್ಕಾರ ಇವುಗಳಿಗಿಂತ ಮೇಲಿದ್ದಾನೆ ಎಂಬುದು ಹದಿನೈದನೆಯ ಅಧ್ಯಾಯದಿಂದ ಕಂಡುಬರುತ್ತದೆ. ಪರಮ ದೇವೋತ್ತಮ ಪುರುಷನನ್ನು ಸಚ್ಚಿದಾನಂದ ವಿಗ್ರಹ ಎಂದು ಹೇಳಲಾಗುತ್ತದೆ. **ಈಶ್ವರಃ ಪರಮಃ ಕೃಷ್ಣಃ ಸಚ್ಚಿದಾನಂದ ವಿಗ್ರಹಃ ಅನಾದಿರ್ ಆದಿರ್ ಗೋವಿಂದಃ ಸರ್ವಕಾರಣ ಕಾರಣಮ್** "ಗೋವಿಂದ ಎಂದರೆ ಕೃಷ್ಣನು ಸರ್ವ ಕಾರಣಗಳ ಕಾರಣನು. ಅವನೇ ಮೂಲ ಕಾರಣನು. ಅವನೇ ಸಚ್ಚಿದಾನಂಧ ಸ್ವರೂಪಿಯು" ಎಂಬುದರಿಂದ ಬ್ರಹ್ಮ ಸಂಹಿತೆಯು ಪ್ರಾರಂಭವಾಗುತ್ತದೆ. ನಿರಾಕಾರ ಬ್ರಹ್ಮ ಸಾಕ್ಷಾತ್ಕಾರವು ಭಗವಂತನ ಸತ್ (ಸನಾತನ) ಲಕ್ಷಣದ ಸಾಕ್ಷಾತ್ಕಾರವಾಗಿದೆ. ಪರಮಾತ್ಮ ಸಾಕ್ಷಾತ್ಕಾರವು ಭಗವಂತನ ಸತ್–ಚಿತ್ (ಸನಾತನ ಜ್ಞಾನದ) ಸಾಕ್ಷಾತ್ಕಾರವಾಗಿದೆ. ಆದರೆ, ಪರಮ ದೇವೋತ್ತಮ ಪುರುಷನಾದ ಕೃಷ್ಣನ ಸಾಕ್ಷಾತ್ಕಾರವು ಪೂರ್ಣ ವಿಗ್ರಹದಲ್ಲಿ (ರೂಪದಲ್ಲಿ) ಸತ್–ಚಿತ್- ಆನಂದ (ಸನಾತನ ಜ್ಞಾನಾನಂದಗಳ) ಎಂದರೆ ಸರ್ವ ದಿವ್ಯ ಲಕ್ಷಣಗಳ ಸಾಕ್ಷಾತ್ಕಾರವಾಗಿದೆ.

ಪರಮ ಸತ್ಯ ಸ್ವರೂಪವನ್ನು ಮಂದಮತಿಗಳು ನಿರಾಕಾರ ಎಂದು ಹೇಳುತ್ತಾರೆ, ಆದರೆ ಅವನು ದಿವ್ಯ ಪುರುಷನಾಗಿದ್ದಾನೆ, ಮತ್ತು ಈ ಅಂಶವು ಎಲ್ಲ ವೇದ ಸಾಹಿತ್ಯದಲ್ಲಿ ದೃಢಪಟ್ಟಿದೆ. **ನಿತ್ಯೋನಿತ್ಯಾನಾಮ್ ಚೇತನಶ್ಚೇತನಾನಾಮ್** (ಕಠ ಉಪನಿಷತ್ ೨-೨-೧೩). ನಾವೆಲ್ಲ ವೈಯಕ್ತಿಕ ಜೀವಾತ್ಮರಾಗಿದ್ದು ನಮ್ಮ ನಮ್ಮ ವ್ಯಕ್ತಿತ್ವವನ್ನು ಹೊಂದಿರುವಂತೆ, ಪರಮ ಸತ್ಯರೂಪನೂ ಕೂಡ ಅಂತಿಮವಾಗಿ ವ್ಯಕ್ತಿ ಸ್ವರೂಪನೇ ಆಗಿದ್ದಾನೆ. ಪರಮ ದೇವೋತ್ತಮ ಪುರುಷನ ಸಾಕ್ಷಾತ್ಕಾರವು ಅವನ ಪೂರ್ಣ ಸ್ವರೂಪದ ಎಲ್ಲ ದಿವ್ಯ ಲಕ್ಷಣಗಳ ಸಾಕ್ಷಾತ್ಕಾರವಾಗಿದೆ. ಪೂರ್ಣತ್ವವು ನಿರಾಕಾರವಲ್ಲ. ಅವನು ನಿರಾಕಾರನಾಗಿದ್ದರೆ ಅಥವಾ ಬೇರಾವುದೇ ವಸ್ತುವಿಗಿಂತ ಕಡಿಮೆಯಾಗಿದ್ದರೆ ಅವನು ಪೂರ್ಣನಾಗಿರುವುದೇ ಸಾಧ್ಯವಿಲ್ಲ. ಪೂರ್ಣತ್ವವೆಂಬುದು ನಮ್ಮ ಅನುಭವಕ್ಕೆ ನಿಲುಕುವ ಮತ್ತು ಅತೀತವಾದ ಎಲ್ಲವನ್ನೂ ಒಳಗೊಂಡಿರಬೇಕು. ಇಲ್ಲದಿದ್ದರೆ ಅದು ಪೂರ್ಣವೆನಿಸಲಾರದು.

ಪೂರ್ಣನೆನಿಸುವ ದೇವೋತ್ತಮ ಪುರುಷನು ಅಪಾರ ಶಕ್ತಿಗಳನ್ನು ಹೊಂದಿದ್ದಾನೆ. **ಪರಾಸ್ಯ ಶಕ್ತಿರ್ ವಿವಿಧೈವ ಶ್ರೂಯತೇ.** ಕೃಷ್ಣನು ವಿವಿಧ ಶಕ್ತಿಗಳಲ್ಲಿ ಹೇಗೆ ಕಾರ್ಯ ಮಾಡುತ್ತಾನೆ ಎಂಬುದನ್ನು ಕೂಡ ಭಗವದ್ಗೀತೆಯಲ್ಲಿ ವಿವರಿಸಲಾಗಿದೆ. ನಾವಿರುವ ಈ ಅದ್ಭುತ ಭೌತಿಕ ವಿಶ್ವವೂ ಸ್ವಯಂ ಪೂರ್ಣವಾಗಿದೆ. ಸಾಂಖ್ಯದರ್ಶನದ ಪ್ರಕಾರ ಈ ಭೌತಿಕ ವಿಶ್ವವು ಇಪ್ಪತ್ತುನಾಲ್ಕು ಅಂಶಗಳಿಂದ ಕೂಡಿರುವ ಒಂದು ತಾತ್ಕಾಲಿಕ ಅಭಿವ್ಯಕ್ತಿತ್ವ. ವಿಶ್ವದ ನಿರ್ವಹಣೆ ಮತ್ತು ಉಪಜೀವನಕ್ಕೆ ಬೇಕಾಗುವ ಪೂರ್ಣ ಸಂಪನ್ಮೂಲಗಳನ್ನು ಉತ್ಪತ್ತಿ ಮಾಡಲು ಈ ಇಪ್ಪತ್ತು ನಾಲ್ಕು ಅಂಶಗಳನ್ನು ಪೂರ್ಣವಾಗಿ ಹೊಂದಾಣಿಸಲಾಗಿದೆ. ಯಾವುದೂ ಹೊರಗಿನಿಂದ ಬರುವುದಿಲ್ಲ. ಹೊರಗಿನದು ಯಾವುದೂ ಬೇಕಾಗಿಲ್ಲ. ಈ ಪ್ರಕಟ ವಿಶ್ವವು ಪೂರ್ಣ ತತ್ವದ ಶಕ್ತಿಯಿಂದ ನಿಶ್ಚಿತವಾದ ತನ್ನದೇ ಕಾಲ ಪ್ರಮಾಣವನ್ನು

ಹೊಂದಿದೆ ಮತ್ತು ಅದರ ಕಾಲವು ಮುಗಿದಾಗ, ಈ ಎಲ್ಲ ಅನಿತ್ಯ ಪ್ರಕಟ ವಸ್ತುಗಳು ಪೂರ್ಣ ತತ್ವದ ಪೂರ್ಣ ವ್ಯವಸ್ಥೆಯ ಮೂಲಕ ಲಯ ಹೊಂದುತ್ತವೆ. ಜೀವಾತ್ಮರೆಂಬ ಪೂರ್ಣ ಅಲ್ಪಾಂಶರಿಗೆ ಪೂರ್ಣತ್ವದ ಸಾಕ್ಷಾತ್ಕಾರಕ್ಕೆ ಪೂರ್ಣ ಅನುಕೂಲವೂ ಲಭ್ಯವಾಗಿದೆ. ಪೂರ್ಣದ ಅಪೂರ್ಣ ಜ್ಞಾನ ನಿಮಿತ್ತವಾಗಿ ಅಪೂರ್ಣತೆಯ ನಾನಾ ಬಗೆಯ ಅನುಭವಗಳು ಉಂಟಾಗುತ್ತವೆ. ಹೀಗೆ ಭಗವದ್ಗೀತೆಯು ಪೂರ್ಣ ವೇದ ಜ್ಞಾನವನ್ನು ಒಳಗೊಂಡಿದೆ.

ಎಲ್ಲ ವೇದ ಜ್ಞಾನವು ಚ್ಯುತಿರಹಿತವಾಗಿದೆ. ಹಿಂದುಗಳು ವೇದ ಜ್ಞಾನವನ್ನು ಪೂರ್ಣವೆಂದೂ, ಚ್ಯುತಿರಹಿತವೆಂದೂ ಅಂಗೀಕರಿಸುತ್ತಾರೆ. ಉದಾಹರಣೆಗೆ, ಹಸುವಿನ ಸಗಣಿಯು ಒಂದು ಪಶುವಿನ ಮಲವಾಗಿದೆ. ಸ್ಮೃತಿಗಳ ಅಥವಾ ವೈದಿಕ ವಿಧಿಗಳ ಪ್ರಕಾರ ಒಬ್ಬನು ಪಶುವಿನ ಮಲಸ್ಪರ್ಶ ಮಾಡಿದರೆ ಶುದ್ಧವಾಗಲು ಸ್ನಾನ ಮಾಡಬೇಕೆಂದು ಹೇಳಿದೆ. ಆದರೆ ವೇದ ಶಾಸ್ತ್ರಗಳಲ್ಲಿ ಗೋಮಯವನ್ನು ಶುದ್ಧೀಕರಣ ಸಾಧನವೆಂದು ಗ್ರಹಿಸಲಾಗಿದೆ. ಇದು ಪರಸ್ಪರ ವಿರೋಧ ಎಂದು ಕಂಡು ಬರಬಹುದು. ಇದು ವೇದ ವಿಧಿಯಾದ್ದರಿಂದ ಸರ್ವರಿಂದ ಮನ್ನಿಸಲ್ಪಟ್ಟಿದೆ. ಹೀಗೆ ಒಪ್ಪುವುದರಿಂದ ಯಾರೂ ಅಪರಾಧ ಮಾಡಿದಂತಾಗು ವುದಿಲ್ಲ. ಗೋಮಯವು ಎಲ್ಲ ಕ್ರಿಮಿನಾಶಕ ಗುಣಗಳನ್ನು ಹೊಂದಿದೆ ಎಂದು ಆಧುನಿಕ ವಿಜ್ಞಾನದಿಂದ ಇತ್ತೀಚೆಗೆ ಸಿದ್ಧವಾಗಿದೆ. ಹೀಗೆ ವೇದ ಜ್ಞಾನವು ಪೂರ್ಣವಾಗಿದೆ, ಏಕೆಂದರೆ ಅದು ಎಲ್ಲ ಸಂದೇಹಗಳಿಗೆ ಮತ್ತು ತಪ್ಪುಗಳಿಗೆ ಅತೀತವಾಗಿದೆ ಮತ್ತು ಭಗವದ್ಗೀತೆಯು ಸಕಲ ವೇದ ವಿಜ್ಞಾನದ ಸಾರಸಂಗ್ರಹವಾಗಿದೆ.

ವೇದ ಜ್ಞಾನವು ಒಂದು ಸಂಶೋಧನೆಯ ವಿಷಯವಲ್ಲ. ನಮ್ಮ ಸಂಶೋಧನೆಯು ಅಪರಿಪೂರ್ಣ, ಕಾರಣವೆಂದರೆ ನಾವು ಅಪರಿಪೂರ್ಣ ಇಂದ್ರಿಯಗಳಿಂದ ಸಂಶೋಧನೆ ಮಾಡುತ್ತಿದ್ದೇವೆ. ನಾವು,ಭಗವದ್ಗೀತೆಯಲ್ಲಿ ಹೇಳಿದಂತೆ ಪರಂಪರಾ ಪ್ರಾಪ್ತವಾದ ಪೂರ್ಣ ಜ್ಞಾನವನ್ನು ಒಪ್ಪಿಕೊಳ್ಳಬೇಕು. ನಾವು ಯೋಗ್ಯ ಮೂಲದಿಂದ ಪರಂಪರೆಯಲ್ಲಿ ಜ್ಞಾನ ವನ್ನು ಪಡೆಯಬೇಕು. ಈ ಪರಂಪರೆಯ ಪರಮ ಗುರುವಾದ ಭಗವಂತನಿಂದಲೇ ಪ್ರಾರಂಭ ವಾಗಿರಬೇಕು ಮತ್ತು ಜ್ಞಾನವು ಗುರು ಪರಂಪರೆಯು ಮೂಲಕ ಸಾಗಿ ಬಂದಿರಬೇಕು. ಶ್ರೀಕೃಷ್ಣನಿಂದ ಶಿಷ್ಯತ್ವೇನ ಉಪದೇಶ ಹೊಂದಿದ ಅರ್ಜುನನು ಕೃಷ್ಣನು ಹೇಳಿದ ಪ್ರತಿ ಯೊಂದನ್ನು ವಿರೋಧವಿಲ್ಲದೆ ಒಪ್ಪಿಕೊಂಡನು. ಒಬ್ಬನು ಭಗವದ್ಗೀತೆಯ ಒಂದು ಭಾಗ ವನ್ನು ಒಪ್ಪಿಕೊಳ್ಳಲು ಮತ್ತೊಂದನ್ನು ನಿರಾಕರಿಸಲು ಅವಕಾಶವಿಲ್ಲ. ನಾವು ಭಗವದ್ಗೀತೆ ಯನ್ನು ಯಾವುದೇ ಸ್ವಕಲ್ಪಿತ ಅರ್ಥ ವಿವರಣೆಯಿಲ್ಲದೆ ಅದರಲ್ಲಿ ಯಾವುದನ್ನೂ ಬಿಡದೆ ಮತ್ತು ನಮ್ಮ ಇಷ್ಟ ಬಂದ ಹಾಗೆ ವಿಷಯಾರ್ಥ ಮಾಡದೆ ಒಪ್ಪಿಕೊಳ್ಳಬೇಕು. ಭಗವ ದ್ಗೀತೆಯನ್ನು ವೇದ ಜ್ಞಾನದ ಪರಿಪೂರ್ಣ ಸ್ವರೂಪವೆಂದು ಗ್ರಹಿಸಬೇಕು. ವೇದಜ್ಞಾನ ವನ್ನು ದಿವ್ಯ ಮೂಲಗಳಿಂದ ಪಡೆದುಕೊಳ್ಳಲಾಗಿದೆ ಮತ್ತು ಪ್ರಾರಂಭ ವಾಕ್ಯಗಳು ಸಾಕ್ಷಾತ್ ಭಗವಂತನ ವಾಣಿಯಿಂದಲೇ ಹೊರ ಬಂದಿವೆ. ಈ ಭಗವದ್ವಾಣಿಯನ್ನು ಅಪೌರುಷೇಯ ಎಂದು ಕರೆಯಲಾಗುತ್ತದೆ. ಎಂದರೆ ಅವು ಈ ಭೌತಿಕ ಪ್ರಪಂಚದ ಚತುರ್ವಿಧ ದೋಷ ಗಳಿಂದ ಕೂಡಿರುವ ಐಹಿಕ ವ್ಯಕ್ತಿಯ ಮಾತುಗಳಿಂದ ಸಂಪೂರ್ಣ ಭಿನ್ನವಾದವುಗಳೆಂದು

ಅರ್ಥ. ಒಬ್ಬ ಐಹಿಕ ವ್ಯಕ್ತಿಯು 1) ತಪ್ಪು ಮಾಡುತ್ತಾನೆ, 2) ಮೋಹ ಗ್ರಸ್ತನಾಗುತ್ತಾನೆ, 3) ವಂಚನೆ ಮಾಡುತ್ತಾನೆ ಮತ್ತು 4) ಅಪೂರ್ಣೇಂದ್ರಿಯಗಳಿಂದ ಪರಿಮಿತನಾಗಿರುತ್ತಾನೆ. ಈ ನಾಲ್ಕು ದೋಷಗಳಿಂದ ಕೂಡಿದವನು ಸರ್ವ ವ್ಯಾಪ್ತವಾದ ಜ್ಞಾನವನ್ನು ಕುರಿತು ಪೂರ್ಣ ತಿಳುವಳಿಕೆಯನ್ನು ನೀಡಲಾರನು.

ಇಂಥ ದೋಷಯುಕ್ತ ಜನರಿಂದ ವೇದ ಜ್ಞಾನವು ಉಪದಿಷ್ಟವಾಗುವುದಿಲ್ಲ. ಅದನ್ನು ಸೃಷ್ಟ ಜೀವರಲ್ಲಿ ಮೊದಲಿಗನಾದ ಬ್ರಹ್ಮನ ಹೃದಯಕ್ಕೆ ತಲುಪಿಸಲಾಯಿತು. ಆ ಮೇಲೆ ಅದನ್ನು ಬ್ರಹ್ಮನು ತಾನು ಭಗವಂತನಿಂದ ಪಡೆದ ಮೂಲ ರೂಪದಲ್ಲಿಯೇ ತನ್ನ ಪುತ್ರರಿಗೂ ಶಿಷ್ಯರಿಗೂ ಅರುಹಿದನು. ಭಗವಂತನು **ಪೂರ್ಣಂ** ಎಂದರೆ ಪರಿಪೂರ್ಣನು. ಅವನು ಪ್ರಕೃತಿ ನಿಯಮಗಳಿಗೆ ಒಳಪಡುವುದು ಅಸಂಭವನೀಯ. ಆದ್ದರಿಂದ ಅವನೇ ವಿಶ್ವದ ಸಕಲ ವಸ್ತುಗಳ ಸ್ವಾಮಿ ಮತ್ತು ಮೂಲ ಸೃಷ್ಟಿಕರ್ತನು ಮತ್ತು ಬ್ರಹ್ಮನ ಸೃಷ್ಟಿಕರ್ತನೂ ಹೌದು ಎಂದು ತಿಳಿಯುವಷ್ಟು ಬುದ್ಧಿವಂತನಾಗಿರಬೇಕು. ಪಿತಾಮಹನಾದ ಬ್ರಹ್ಮನಿಗೆ ಭಗವಂತನು ಸೃಷ್ಟಿಕರ್ತನಾಗಿರುವುದರಿಂದ ಭಗವಂತನನ್ನು **ಪ್ರಪಿತಾಮಹಾ**ನೆಂದು ಹನ್ನೊಂದನೆಯ ಅಧ್ಯಾಯದಲ್ಲಿ ಹೇಳಲಾಗಿದೆ. ಆದ್ದರಿಂದ ಯಾರೂ ಯಾವುದರ ಸ್ವಾಮಿಯೆಂದು ಹೇಳಲಾಗುವುದಿಲ್ಲ. ಆದ್ದರಿಂದ ಪ್ರತಿಯೊಬ್ಬನು ತನಗೆ ಭಗವಂತನಿಂದ ಕೊಡಲ್ಪಟ್ಟಿದ್ದನ್ನು ಮಾತ್ರ ಸ್ವೀಕರಿಸಬೇಕು.

ನಮಗೆ ಭಗವಂತನಿಂದ ಕೊಡಲ್ಪಟ್ಟ ವಸ್ತುಗಳನ್ನು ಹೇಗೆ ವಿನಿಯೋಗಿಸಬೇಕೆಂಬ ಬಗ್ಗೆ ಅನೇಕ ಉದಾಹರಣೆಗಳಿವೆ. ಇದನ್ನೂ ಭಗವದ್ಗೀತೆಯಲ್ಲಿ ವಿವರಿಸಲಾಗಿದೆ. ಪ್ರಾರಂಭದಲ್ಲಿ ಅರ್ಜುನನು ಕುರುಕ್ಷೇತ್ರ ಯುದ್ಧದಲ್ಲಿ ತಾನು ಯುದ್ಧ ಮಾಡಕೂಡದೆಂದು ನಿಶ್ಚಯಿಸಿದ್ದನು. ಇದು ಅವನ ಸ್ವಂತ ನಿರ್ಣಯವಾಗಿತ್ತು. ತನ್ನ ಬಂಧುಗಳನ್ನೆಲ್ಲ ಕೊಂದು ರಾಜ್ಯಾಧಿಪತ್ಯ ಮಾಡುವುದು ತನಗೆ ಸಾಧ್ಯವಾಗುವುದಿಲ್ಲವೆಂದು ಅರ್ಜುನನು ಕೃಷ್ಣನಿಗೆ ಹೇಳಿದನು. ಅವನ ಈ ನಿರ್ಣಯವು ದೈಹಿಕ ಕಲ್ಪನೆಯ ಆಧಾರವನ್ನು ಹೊಂದಿತ್ತು. ಅವನು ತಾನೇ ದೇಹವೆಂದು ಮತ್ತು ತನ್ನ ದೈಹಿಕ ಸಂಬಂಧಿಗಳು ತನ್ನ ಸೋದರರು, ಸೋದರ ಪುತ್ರರು ಶಾಲಕರು ತಾತಂದಿರು ಇತ್ಯಾದಿಯಾಗಿ ಭಾವಿಸಿದ್ದನು. ಹೀಗೆ ಅವನು ತನ್ನ ದೇಹದ ಅವಶ್ಯಕತೆಗಳನ್ನು ತೃಪ್ತಿಗೊಳಿಸಬಯಸಿದನು. ಈ ದೃಷ್ಟಿಯನ್ನು ಬದಲಿಸ ಲೆಂದೇ ಭಗವಂತನು ಗೀತೋಪದೇಶ ಮಾಡಿದನು. ಕೊನೆಗೆ ಅರ್ಜುನನು, **"ಕರಿಷ್ಯೇ ವಚನಂ ತವ"** "ನಾನು ನಿನ್ನ ಮಾತನ್ನು ಪಾಲಿಸುತ್ತೇನೆ" ಎಂದು ಭಗವಂತನ ಆದೇಶಾನು ಸಾರ ಯುದ್ಧ ಮಾಡಲು ಕೃತನಿಶ್ಚಯನಾದನು.

ಈ ಜಗತ್ತಿನಲ್ಲಿ ಮಾನವರು ಬೆಕ್ಕು, ನಾಯಿಗಳಂತೆ ಕಾದಾಡಲು ಹುಟ್ಟಿದವರಲ್ಲ. ಮನುಷ್ಯರು ಮಾನವ ಜೀವನದ ಮಹತ್ವವನ್ನು ಅರಿತುಕೊಳ್ಳುವಷ್ಟು ಬುದ್ಧಿವಂತರಾಗಿರ ಬೇಕು ಮತ್ತು ಸಾಮಾನ್ಯ ಪಶುಗಳಂತೆ ವರ್ತಿಸಲು ನಿರಾಕರಿಸಬೇಕು. ಮನುಷ್ಯನು ತನ್ನ ಜೀವನದ ಧ್ಯೇಯವನ್ನು ಅರಿತುಕೊಳ್ಳಬೇಕು. ಈ ಬಗ್ಗೆ ವೇದ ಸಾಹಿತ್ಯದಲ್ಲಿ ಉಪದೇಶ ಗಳನ್ನು ನೀಡಲಾಗಿದೆ. ಅವೆಲ್ಲವುಗಳ ಸಾರವೇ ಭಗವದ್ಗೀತೆಯಲ್ಲಿದೆ. ವೇದ ಶಾಸ್ತ್ರಗಳು ಮಾನವನಿಗಾಗಿ ಇವೆಯೇ ಹೊರತು ಪಶು ಪ್ರಾಣಿಗಳಿಗಲ್ಲ. ಪ್ರಾಣಿಗಳು ಇತರ ಪ್ರಾಣಿ

ಗಳನ್ನು ಕೊಲ್ಲಬಹುದು ಮತ್ತು ಈ ವಿಷಯದಲ್ಲಿ ಪಾಪದ ಪ್ರಶ್ನೆಯೇ ಇಲ್ಲ. ಆದರೆ, ಮನುಷ್ಯನು ತನ್ನ ಅನಿರ್ಬಂಧ ನಾಲಿಗೆ ರುಚಿಯನ್ನು ತೀರಿಸಿಕೊಳ್ಳಲು ಪ್ರಾಣಿವಧೆ ಮಾಡಿದರೆ, ಪ್ರಕೃತಿ ನಿಯಮದ ಉಲ್ಲಂಘನೆಗೆ ಹೊಣೆಗಾರನಾಗುವನು. ಪ್ರಕೃತಿ ಗುಣಾನುಸಾರ ಮಾನವ ಕ್ರಿಯೆಗಳು ಸಾತ್ವಿಕ, ರಾಜಸ ಮತ್ತು ತಾಮಸ ಕ್ರಿಯೆಗಳೆಂದು ಮೂರು ಬಗೆಯಾಗಿದೆಯೆಂದು ಸ್ಪಷ್ಟವಾಗಿ ಭಗವದ್ಗೀತೆಯಲ್ಲಿ ವಿವರಿಸಲಾಗಿದೆ. ಅದೇ ರೀತಿಯಲ್ಲಿ ಆಹಾರವು ಕೂಡ ಸಾತ್ವಿಕ ರಾಜಸ ಮತ್ತು ತಾಮಸ ಎಂದು ಮೂರು ಬಗೆಯಾಗಿದೆ. ಇದೆಲ್ಲವೂ ಸ್ಪಷ್ಟವಾಗಿ ವರ್ಣಿಸಲಾಗಿದೆ. ನಾವು ಭಗವದ್ಗೀತೆಯ ಉಪದೇಶವನ್ನು ಯುಕ್ತವಾಗಿ ಅನುಸರಿಸಿದರೆ ನಮ್ಮ ಇಡೀ ಜೀವನವು ಪರಿಶುದ್ಧವಾಗುವುದು. ಕೊನೆಯಲ್ಲಿ ನಾವು **"ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ",** ಈ ಭೌತಿಕ ಆಕಾಶದ ಆಚೆಗೆ ನಮ್ಮ ಗುರಿಯನ್ನು ತಲುಪಲು ಶಕ್ತರಾಗುವೆವು.

ಆ ಗುರಿಯೇ ಸನಾತನ ಆಕಾಶ, ಎಂದರೆ ಪರವ್ಯೋಮ ಎನಿಸಿದೆ. ಈ ಭೌತಿಕ ಜಗತ್ತಿನಲ್ಲಿ ಎಲ್ಲವೂ ಅನಿತ್ಯ ಎಂದು ನಮಗೆ ತಿಳಿದಿದೆ. ಇದು ಸೃಷ್ಟಿಗೆ ಬರುತ್ತದೆ, ಕೆಲಕಾಲ ಇರುತ್ತದೆ ಮತ್ತೆ ಉತ್ಪತ್ತಿ ಮಾಡುತ್ತದೆ. ಆಮೇಲೆ ಜರ್ಝರಿತವಾಗಿ ನಶಿಸಿ ಹೋಗುತ್ತದೆ. ನಮ್ಮ ದೇಹವೇ ಆಗಲಿ. ಒಂದು ಹಣ್ಣಿನ ಚೂರನ್ನೇ ಆಗಲಿ ಅಥವಾ ಯಾವುದೇ ವಸ್ತುವನ್ನು ತೆಗೆದು ಕೊಂಡರೂ ಅವು ಈ ಪ್ರಕೃತಿಯ ನಿಯಮಕ್ಕೆ ಒಳಪಟ್ಟಿವೆ. ಈ ಅನಿತ್ಯ ಲೋಕಕ್ಕೆ ಅತೀತವಾದ ಮತ್ತೊಂದು ಲೋಕವಿದೆ, ಅದನ್ನು ಕುರಿತ ಸಮಾಚಾರವೂ ನಮಗೆ ಲಭ್ಯವಾಗಿದೆ. ಅದು ಮತ್ತೊಂದು ಬಗೆಯ ಪ್ರಕೃತಿಯನ್ನು ಅಂದರೆ **ಸನಾತನ** ಪ್ರಕೃತಿಯನ್ನು ಹೊಂದಿದೆ. ಜೀವನು ಸನಾತನ, ಮತ್ತು ಹನ್ನೊಂದನೆಯ ಅಧ್ಯಾಯದಲ್ಲಿ ಭಗವಂತನನ್ನೂ ಸನಾತನ ಎಂದು ವರ್ಣಿಸಲಾಗಿದೆ. ನಾವು ಭಗವಂತನೊಂದಿಗೆ ನಿಕಟ ಸಂಬಂಧ ಹೊಂದಿದ್ದೇವೆ. ಸನಾತನ **ಜೀವಾತ್ಮರೂ**, ಸನಾತನ ಧಾಮವು ಮತ್ತು ಸನಾತನನಾದ ಭಗವಂತನು ಗುಣಾತ್ಮಕವಾಗಿ ಏಕ ರೂಪದ್ದಾಗಿದೆ. ಭಗವದ್ಗೀತೆಯ ಉದ್ದೇಶವೆಂದರೆ, ಜೀವಾತ್ಮರ ಸನಾತನ ವೃತ್ತಿಯನ್ನು, ಎಂದರೆ ಸನಾತನ ಧರ್ಮವನ್ನು ಪುನರುಜ್ಜೀವಿಸಿಕೊಳ್ಳುವುದು. ನಾವು ತಾತ್ಕಾಲಿಕವಾಗಿ ಬೇರೆ ಬೇರೆ ಕ್ರಿಯೆಗಳಲ್ಲಿ ತೊಡಗಿದ್ದೇವೆ. ನಾವು ಈ ಅನಿತ್ಯ ಕರ್ಮಗಳನ್ನು ಬಿಟ್ಟು, ಭಗವಂತನಿಂದ ವಿಧಿಸಲ್ಪಟ್ಟ ಕರ್ಮಗಳನ್ನು ಮಾಡತೊಡಗಿದರೆ ನಮ್ಮ ಕರ್ಮಗಳೆಲ್ಲ ಪರಿಶುದ್ಧವಾಗುತ್ತವೆ. ಇದೇ ಪರಿಶುದ್ಧ ಜೀವನವೆನಿಸಿಕೊಂಡಿದೆ.

ಭಗವಂತನೂ, ಅವನ ದಿವ್ಯ ಧಾಮವೂ, ಜೀವಾತ್ಮರಂತೆ ಸನಾತನವಾಗಿವೆ. ಆ ಸನಾತನ ಧಾಮದಲ್ಲಿ ಭಗವಂತನೂ ಜೀವಾತ್ಮರೂ ಸಂಯುಕ್ತ ಸಾಹಚರ್ಯ ಹೊಂದುವುದೇ ಮಾನವ ಜೀವನದ ಪರಿಪೂರ್ಣತೆ. ಜೀವಾತ್ಮರೆಲ್ಲ, ತನ್ನ ಮಕ್ಕಳಾದುದರಿಂದ, ಭಗವಂತನು ಬಹಳ ಕರುಣಾಮಯನಾಗಿದ್ದಾನೆ. ಭಗವದ್ಗೀತೆಯಲ್ಲಿ ಶ್ರೀಕೃಷ್ಣನು **(ಸರ್ವ ಯೋನಿಷು ..........ಅಹಂ ಬೀಜಪ್ರದಃ ಪಿತಾ)**, "ನಾನೇ ಎಲ್ಲರ ತಂದೆ", ಎಂದು ಸಾರಿದ್ದಾನೆ. ಅವರವರ ಕರ್ಮಾನುಸಾರ ಜೀವರು ಅನೇಕ ಬಗೆಯಾಗಿದ್ದಾರೆ. ಆದರೂ, ಭಗವಂತನು ತಾನು ಅವರೆಲ್ಲರ ತಂದೆಯೆಂದು ಹೇಳಿದ್ದಾನೆ. ಈ ಸನಾತನ ಜೀವಾತ್ಮರು ಭಗವಂತನೊಡನೆ

ಸನಾತನ ಸಂಘದಲ್ಲಿ ಮತ್ತೆ ತಮ್ಮ ಸನಾತನ ಸ್ಥಾನ ಪಡೆದುಕೊಳ್ಳಲು ಸನಾತನ ಧಾಮಕ್ಕೆ ಬರುವಂತೆ ಕರೆಯಲೋಸುಗವೇ ಮತ್ತು ಬದ್ಧ ಜೀವರ ಉದ್ಧಾರಕ್ಕಾಗಿ ಅವನು ಭೂಮಿಗೆ ಇಳಿದು ಬರುತ್ತಾನೆ. ಭಗವಂತನು ನಾನಾ ಅವತಾರಗಳನ್ನು ಧರಿಸಿ ಬರುತ್ತಾನೆ. ಅಥವಾ ತನ್ನ ವಿಶ್ವಾಸಪಾತ್ರರಾದ ಸೇವಕರನ್ನು ತನ್ನ ಮಕ್ಕಳನ್ನಾಗಿ, ತನ್ನ ಸಹಚರರನ್ನಾಗಿ ಅಥವಾ ಆಚಾರ್ಯರನ್ನಾಗಿ ಬದ್ಧ ಜೀವರನ್ನುದ್ಧರಿಸಲು ಕಳಿಸಿ ಕೊಡುತ್ತಾನೆ.

ಆದ್ದರಿಂದ, ಸನಾತನ ಧರ್ಮವೆಂಬುದು ಯಾವುದೇ ಒಂದು ಮತೀಯ ಧರ್ಮವನ್ನು ಸೂಚಿಸುವುದಿಲ್ಲ. ಇದು, ಭಗವಂತನೊಂದಿಗೆ ಹೊಂದಿರುವ ಸಂಬಂಧದಲ್ಲಿ ಸನಾತನ ಜೀವಾತ್ಮರ ಸನಾತನ ವೃತ್ತಿ. ಈ ಹಿಂದೆ ಹೇಳಿರುವಂತೆ, ಸನಾತನ ಧರ್ಮ ಎಂಬುದು ಶಾಶ್ವತ ವೃತ್ತಿಯನ್ನು ಸೂಚಿಸುತ್ತದೆ. ಶ್ರೀಪಾದ ರಾಮಾನುಜಾಚಾರ್ಯರು ಸನಾತನ ಎಂಬ ಪದವನ್ನು "ಆದಿ ಅಂತ್ಯವಿಲ್ಲದ್ದು", ಎಂದು ವಿವರಿಸಿದ್ದಾರೆ. ಆದ್ದರಿಂದ ನಾವು ಸನಾತನ ಧರ್ಮ ಎಂದಾಗ, ರಾಮಾನುಜಾಚಾರ್ಯರ ಉಕ್ತಿಯಂತೆ ಅದು ಆದಿ-ಅಂತ್ಯ ರಹಿತವಾದುದು ಎಂದು ಗ್ರಹಿಸಬೇಕು.

**ರಿಲಿಜನ್** ಎಂಬ ಆಂಗ್ಲ ಪದವು ಸನಾತನ ಧರ್ಮ ಎಂಬ ಪದಕ್ಕಿಂತ ಸ್ವಲ್ಪ ಭಿನ್ನವಾಗಿದೆ. ರಿಲಿಜನ್ ಎಂಬುದು ಶ್ರದ್ಧೆಯನ್ನು ಸೂಚಿಸಬಹುದು ಮತ್ತು ಈ ಶ್ರದ್ಧೆ ಬದಲಾಗಬಹುದು. ಒಬ್ಬನು ಒಂದು ವಿಶಿಷ್ಟ ಪ್ರಕ್ರಿಯೆಯಲ್ಲಿ ಶ್ರದ್ಧೆ ಹೊಂದಿರಬಹುದು. ಆದರೆ ಸನಾತನ ಧರ್ಮ ಎಂಬುದು ಎಂದೂ ಬದಲಾವಣೆ ಹೊಂದದ ವೃತ್ತಿಯನ್ನು ಸೂಚಿಸುವುದು. ಉದಾಹರಣೆಗೆ ನೀರಿನಿಂದ ದ್ರವತ್ವವನ್ನೂ, ಅಗ್ನಿಯಿಂದ ಶಾಖವನ್ನೂ ಬೇರ್ಪಡಿಸುವುದು ಸಾಧ್ಯವಿಲ್ಲ. ಅದೇ ಪ್ರಕಾರ ಜೀವಾತ್ಮರಿಂದ ಸನಾತನ ಜೀವಾತ್ಮರ ಸನಾತನ ಕ್ರಿಯೆಯನ್ನು ಬೇರ್ಪಡಿಸುವುದು ಸಾಧ್ಯವಿಲ್ಲ. ಸನಾತನ ಧರ್ಮ ಎಂಬುದು ಜೀವಾತ್ಮರ ಶಾಶ್ವತ ಅವಿಭಾಜ್ಯ ಅಂಗವೇ ಆಗಿದೆ. ಆದ್ದರಿಂದ ನಾವು ಸನಾತನ ಧರ್ಮ ಎಂದಾಗಲೆಲ್ಲ ಶ್ರೀಪಾದ ಶ್ರೀ ರಾಮಾನುಜಾಚಾರ್ಯರ ಹೇಳಿಕೆಯ ಪ್ರಮಾಣಾನುಸಾರವಾಗಿ, ಆದಿ-ಅಂತ್ಯ ರಹಿತವಾದುದೆಂದೇ ಗ್ರಹಿಸಬೇಕು. ಅದು ಆದಿ-ಅಂತ್ಯ ರಹಿತವಾದುದರಿಂದ ಅದು ಯಾವುದೇ ವಿಶಿಷ್ಟ ಪರಿಮಿತಿಗಳಿಗೊಳಪಟ್ಟ ಮತೀಯದ್ದಾಗಿರಲಾರದು. ಕೆಲವು ಮತೀಯ ಶ್ರದ್ಧೆಗಳಿಗೆ ಸೇರಿದವರು ಸನಾತನ ಧರ್ಮವೆಂಬುದನ್ನು ಒಂದು ಮತೀಯ ಪ್ರಕ್ರಿಯೆ ಎಂದು ತಪ್ಪಾಗಿ ಭಾವಿಸುತ್ತಾರೆ. ಆದರೆ ನಾವು ಈ ವಿಷಯವನ್ನು ಆಳವಾಗಿ ಅಧ್ಯಯನ ಮಾಡಿ ಆಧುನಿಕ ವಿಜ್ಞಾನದ ಬೆಳಕಿನಲ್ಲಿ ಪರಿಶೀಲಿಸಿದರೆ ಸನಾತನ ಧರ್ಮ ಎಂಬುದು ಇಡೀ ಜಗತ್ತಿನ ಜನಸ್ತೋಮದ, ಅಷ್ಟೇ ಅಲ್ಲ ವಿಶ್ವದ ಸಕಲ ಜೀವಾತ್ಮರಿಗೆ ಕಾರ್ಯ ಎಂದು ಕಂಡು ಕಂಡುಕೊಳ್ಳಬಹುದಾಗಿದೆ.

ಸನಾತನೇತರ ಧರ್ಮ ಶ್ರದ್ಧೆಗಳು, ಮಾನವ ಇತಿಹಾಸದಲ್ಲಿ ಎಲ್ಲಿಯೋ ಪ್ರಾರಂಭವಾದುದು ಕಂಡಬರಬಹುದು. ಆದರೆ ಸನಾತನ ಧರ್ಮವು ಜೀವಾತ್ಮರೊಂದಿಗೇ ಸನಾತನವಾಗಿ ಇರುವುದರಿಂದ, ಅದರ ಇತಿಹಾಸ ಇಂಥಲ್ಲಿಂದ ಪ್ರಾರಂಭವಾಯಿತೆಂದು ಹೇಳಲು ಬರುವುದಿಲ್ಲ. ಜೀವಾತ್ಮರ ಮಟ್ಟಿಗೆ ಹೇಳುವುದಾದರೆ ಜೀವಾತ್ಮರಿಗೆ ಜನನ ಮರಣ

ವೆಂಬುದಿಲ್ಲ ಎಂದು ಪರಮ ಪ್ರಮಾಣದ ಶಾಸ್ತ್ರಗಳು ಹೇಳುತ್ತಿವೆ. ಜೀವಾತ್ಮನು ಹುಟ್ಟು ವುದೂ ಇಲ್ಲ, ಸಾಯುವುದೂ ಇಲ್ಲವೆಂದು ಗೀತೆಯಲ್ಲಿ ನಿರೂಪಿತವಾಗಿದೆ. ಜೀವಾತ್ಮನು ಸನಾತನ ಅವಿನಾಶಿಯೂ ಆಗಿದ್ದಾನೆ. ಅವನ ಅನಿತ್ಯ ದೇಹ ನಾಶವಾದ ಬಳಿಕವೂ ಅವನು ಮುಂದುವರಿಯುತ್ತಾನೆ. ಆದ್ದರಿಂದ **ಸನಾತನ ಧರ್ಮ** ಎಂಬ ಕಲ್ಪನೆಯ ವಿಷಯದಲ್ಲಿ ಈ ಸಂಸ್ಕೃತ ಪದದ ಮೂಲವನ್ನು ಗಮನಿಸಿ ನಾವು ಧರ್ಮ ಕಲ್ಪನೆಯನ್ನು ಅರಿತುಕೊಳ್ಳ ಬೇಕು. ಧರ್ಮ ಎಂಬುದು ಒಂದು ವಸ್ತುವಿನೊಡನೆ ಇರುವ ಸತ್ಯ ಗುಣವನ್ನು ಸೂಚಿಸಿದೆ. ಅಗ್ನಿಯಲ್ಲಿ ಶಾಖವೂ ಪ್ರಕಾಶವೂ ಇದೆ ಎಂದು ನಾವು ನಿರ್ಣಯಕ್ಕೆ ಬರುತ್ತೇವೆ. ಪ್ರಕಾಶವೂ ಶಾಖವೂ ಇಲ್ಲದೆ ಅಗ್ನಿಯೆಂಬ ಪದಕ್ಕೆ ಅರ್ಥವೇ ಇಲ್ಲ. ಅದೇ ಪ್ರಕಾರ ಜೀವಾತ್ಮನ ಅವಶ್ಯ ಭಾಗವಾವುದು ಎಂಬುದನ್ನು ನಾವು ಕಂಡುಕೊಳ್ಳಬೇಕು. ಆ ಭಾಗವು ಅವನ ನಿತ್ಯ ಸಂಗಾತಿ ಯಾಗಿರಬೇಕು. ಆ ಸನಾತನ ಭಾಗವೇ ಅವನ ಸನಾತನ ಗುಣ, ಮತ್ತು ಆ ಸನಾತನ ಗುಣವೇ ಅವನ ಸನಾತನ ಧರ್ಮವಾಗಿರುತ್ತದೆ.

ಪ್ರತಿಯೊಬ್ಬ ಜೀವಾತ್ಮನ ಸ್ವರೂಪವನ್ನು ಕುರಿತು ಸನಾತನ ಗೋಸ್ವಾಮಿಯವರು ಚೈತನ್ಯ ಮಹಾಪ್ರಭುಗಳನ್ನು ಕೇಳಿದಾಗ, ಪರಮ ದೇವೋತ್ತಮ ಪುರುಷನಿಗೆ ಸೇವೆ ಸಲ್ಲಿಸುವುದೇ ಜೀವಾತ್ಮನ ಸ್ವರೂಪವಾಗಿದೆ ಎಂದು ಉತ್ತರಿಸಿದರು. ನಾವು ಶ್ರೀ ಚೈತನ್ಯರ ಈ ನಿರೂಪಣೆಯನ್ನು ವಿಶ್ಲೇಷಿಸಿದರೆ, ಪ್ರತಿಯೊಬ್ಬ ಜೀವಾತ್ಮನು ಮತ್ತೊಬ್ಬ ಜೀವಾತ್ಮನ ಸೇವೆಯಲ್ಲಿ ಸದಾ ನಿರತನಾಗಿದ್ದಾನೆ ಎಂಬುದು ಸುಲಭವಾಗಿ ಕಾಣಬಹುದು. ಒಬ್ಬ ಜೀವಾತ್ಮನು ನಾನಾ ರೀತಿಯಲ್ಲಿ ಇತರ ಜೀವಾತ್ಮರ ಸೇವೆ ಸಲ್ಲಿಸುತ್ತಾನೆ. ಹಾಗೆ ಮಾಡುವ ಮೂಲಕ ಆ ಜೀವಾತ್ಮನು ಜೀವನ ಸುಖವನ್ನು ಅನುಭವಿಸುತ್ತಾನೆ. ಕೆಳವರ್ಗದ ಪ್ರಾಣಿ ಗಳು ಸೇವಕನು ತನ್ನ ಒಡೆಯನಿಗೆ ಸೇವೆ ಸಲ್ಲಿಸುವಂತೆ ಮಾನವರಿಗೆ ಸೇವೆ ಮಾಡುತ್ತವೆ. ಎ, ಬಿ ಎಂಬ ಒಡೆಯನ ಸೇವೆ ಮಾಡುತ್ತಾನೆ, ಬಿ, ಸಿ ಎಂಬ ಒಡೆಯನಿಗೆ ಸೇವೆ ಸಲ್ಲಿಸು ತ್ತಾನೆ. ಸಿ, ಡಿ ಎಂಬ ಒಡೆಯನ ಸೇವೆ ಮಾಡುತ್ತಾನೆ. ಹೀಗೆ ಇದು ನಡೆಯುತ್ತದೆ. ಇದರಿಂದ ಒಬ್ಬ ಮಿತ್ರನು ಮತ್ತೊಬ್ಬ ಮಿತ್ರನ ಸೇವೆ ಮಾಡುವುದು ನಮಗೆ ಕಾಣಬರು ವುದು. ತಾಯಿ ಮಗನ ಉಪಚಾರ ಮಾಡುತ್ತಾಳೆ, ಹೆಂಡತಿ ಗಂಡನ ಸೇವೆ ಮಾಡುತ್ತಾಳೆ, ಗಂಡ ಹೆಂಡತಿಗೆ ಸೇವೆ ಮಾಡುತ್ತಾನೆ. ನಾವು ಈ ದೃಷ್ಟಿಯಿಂದ ನೋಡುತ್ತ ಹೋದರೆ ಸಮಾಜದಲ್ಲಿ ಸೇವಾಕ್ರಿಯೆ ತಪ್ಪದೆ ನಡೆಯುತ್ತದೆ. ರಾಜಕಾರಣಿಯು ತನ್ನ ಸೇವಾ ಸಾಮರ್ಥ್ಯವನ್ನು ಕುರಿತು ಜನತೆಯಲ್ಲಿ ವಿಶ್ವಾಸ ಮೂಡಿಸಲು ಚುನಾವಣಾ ಪ್ರಣಾಳಿಕೆಯನ್ನು ಹೊರಡಿಸುತ್ತಾನೆ. ಅವನು ಸಮಾಜಕ್ಕೆ ಬೆಲೆಯುಳ್ಳ ಅಮೂಲ್ಯ ಸೇವೆ ಸಲ್ಲಿಸುತ್ತಾನೆ ಎಂದು ಭಾವಿಸಿ ಅವರು ಆ ರಾಜಕಾರಣಿಗೆ ತಮ್ಮ ಬೆಲೆಯುಳ್ಳ ಮತವನ್ನು ನೀಡುತ್ತಾರೆ. ಅಂಗಡಿಕಾರನು ಗ್ರಾಹಕನಿಗೆ ಸೇವೆ ಸಲ್ಲಿಸುತ್ತಾನೆ. ಸಿರಿವಂತನು ಕುಟುಂಬಕ್ಕೆ ಸೇವೆ ಸಲ್ಲಿಸು ತ್ತಾನೆ. ಕುಟುಂಬವು ಸನಾತನ ಜೀವಾತ್ಮರ ಸನಾತನ ಸ್ಥಾನದಲ್ಲಿ ರಾಜ್ಯಕ್ಕೆ ಸೇವೆ ಸಲ್ಲಿಸುತ್ತದೆ. ಹೀಗೆ ಒಬ್ಬ ಜೀವಾತ್ಮನು ಇತರರಿಗೆ ಸೇವೆ ಸಲ್ಲಿಸುವ ವಿಷಯದಲ್ಲಿ ಭಂಗ ಬಾರದಿರುವದನ್ನು ನಾವು ಕಾಣುತ್ತೇವೆ. ಆದ್ದರಿಂದ ಸೇವೆ ಎಂಬುದು ಜೀವಾತ್ಮರ ನಿತ್ಯ ಸಂಗಾತಿಯಾಗಿದೆ.

ಎಂದು ಧಾರಾಳವಾಗಿ ಹೇಳಬಹುದು. ಹೀಗೆ ಸೇವೆ ಸಲ್ಲಿಸುವುದೇ ಜೀವಾತ್ಮನ ಸನಾತನ ಧರ್ಮವಾಗಿದೆ.

ಹೀಗಿದ್ದೂ, ಒಂದು ವಿಶಿಷ್ಟ ಕಾಲ ಮತ್ತು ಸನ್ನಿವೇಶದಲ್ಲಿ ಒಬ್ಬ ಮನುಷ್ಯನು ವಿಶಿಷ್ಟ ಧರ್ಮದಲ್ಲಿ ಶ್ರದ್ಧೆ ಹೊಂದಿರುವುದಾಗಿ ಹೇಳುತ್ತಾನೆ ಮತ್ತು ತಾನು ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್, ಬೌದ್ಧ, ಅಥವಾ ಇನ್ಯಾವುದೋ ಮತದವನೆಂದು ಹೇಳುತ್ತಾನೆ. ಇಂಥ ಮತೀಯ ಉಪಾಧಿಗಳು ಸನಾತನ ಧರ್ಮವೆನಿಸುವುದಿಲ್ಲ. ಒಬ್ಬ ಹಿಂದು ತನ್ನ ಶ್ರದ್ಧೆಯನ್ನು ಬದಲಾಯಿಸಿಕೊಂಡು ಮುಸಲ್ಮಾನನಾಗಬಹುದು. ಒಬ್ಬ ಮುಸಲ್ಮಾನನು ಹಿಂದೂವಾಗಬಹುದು. ಹಾಗೆಯೇ ಒಬ್ಬ ಕ್ರೈಸ್ತನು ತನ್ನ ಮತವನ್ನು ಬದಲಾಯಿಸಿಕೊಳ್ಳಬಹುದು. ಆದರೆ ಯಾವ ಸಂದರ್ಭದಲ್ಲಿಯೂ ಮತೀಯ ಶ್ರದ್ಧೆಯ ಬದಲಾವಣೆಯಿಂದಾಗಿ ಮನುಷ್ಯನು ಪರರಿಗೆ ಸೇವೆ ಸಲ್ಲಿಸುವ ಸನಾತನ ವೃತ್ತಿ ಮಾತ್ರ ಬದಲಾವಣೆ ಹೊಂದುವುದಿಲ್ಲ. ಹಿಂದೂವೇ ಆಗಲಿ ಮುಸ್ಲಿಮನೇ ಆಗಲಿ ಅಥವಾ ಕ್ರಿಸ್ತನೇ ಆಗಲಿ ಅವನು ಎಲ್ಲ ಸನ್ನಿವೇಶಗಳಲ್ಲಿ ಮತ್ತೊಬ್ಬನ ಸೇವಕನೇ ಆಗಿರುತ್ತಾನೆ. ಆದ್ದರಿಂದ ಕೇವಲ ಒಂದು ಶ್ರದ್ಧೆಯನ್ನು ಹೊಂದಿದ ಮಾತ್ರದಿಂದ ಸನಾತನ ಧರ್ಮವನ್ನು ಅನುಸರಿಸಿದಂತಾಗುವುದಿಲ್ಲ. ಸೇವೆ ಸಲ್ಲಿಸುವುದೇ ಸನಾತನ ಧರ್ಮ.

ನಿಜವಾಗಿ ನಾವು ಭಗವಂತನೊಂದಿಗೆ ಸೇವಾ ಸಂಬಂಧವನ್ನು ಹೊಂದಿದ್ದೇವೆ. ಭಗವಂತನು ಪರಮ ಭೋಕ್ತಾರನು ಜೀವಾತ್ಮರಾದ ನಾವು ಅವನ ದಾಸರು. ನಮ್ಮನ್ನು ಸೃಷ್ಟಿಸಿರುವುದು ಅವನ ಭೋಗಕ್ಕಾಗಿಯೇ. ನಾವು ಆ ಪರಮ ದೇವೋತ್ತಮ ಪುರುಷನ ಸನಾತನ ಭೋಗದಲ್ಲಿ ಸಹಕರಿಸಿದರೆ ನಾವು ಸಂತುಷ್ಟರಾಗುತ್ತೇವೆ. ಅನ್ಯಥಾ ನಮಗೆ ಸುಖವೆಂಬುದು ಇಲ್ಲ. ದೇಹದ ಒಂದು ಅಂಗವು ಹೊಟ್ಟೆಯೊಡನೆ ಸಹಕರಿಸದೆ ಹೇಗೆ ಸುಖಪಡುವುದು ಸಾಧ್ಯವಿಲ್ಲವೋ ಹಾಗೆಯೇ ಸ್ವತಂತ್ರವಾಗಿ ನಾವು ಸುಖಿಗಳಾಗುವುದು ಸಾಧ್ಯವಿಲ್ಲ. ಜೀವಾತ್ಮನು ಭಗವಂತನಿಗೆ ದಿವ್ಯ ಪ್ರೀತಿಪೂರ್ವಕ ಸೇವೆ ಸಲ್ಲಿಸದೇ ಸುಖಿಯಾಗುವುದು ಸಾಧ್ಯವೇ ಇಲ್ಲ.

ಭಗವದ್ಗೀತೆಯಲ್ಲಿ ಉಪದೇವತೆಗಳ ಆರಾಧನೆಯನ್ನು ಅಥವಾ ಅವರ ಕೈಂಕರ್ಯವನ್ನು ಅನುಮೋದಿಸಿಲ್ಲ. ಹದಿನೇಳನೆಯ ಅಧ್ಯಾಯದ ಇಪ್ಪತ್ತನೇ ಶ್ಲೋಕದಲ್ಲಿ :

**ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯಂತೇಽನ್ಯದೇವತಾಃ ।**
**ತಂ ತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ ॥**

"ಭೌತಿಕ ಕಾಮಾದಿಗಳಿಂದ ಯಾರ ಜ್ಞಾನವು ಅಪಹೃತವಾಗಿದೆಯೋ ಅವರು ಇತರ ದೇವತೆಗಳಿಗೆ ಶರಣಾಗತರಾಗುತ್ತಾರೆ ಮತ್ತು ತಮ್ಮ ಗುಣಸ್ವಭಾವಾನುಸಾರ ವಿಶಿಷ್ಟ ಅರ್ಚನಾ ವಿಧಿ ನಿಯಮಗಳನ್ನು ಪಾಲಿಸುತ್ತಾರೆ." ಹೀಗೆ ಕಾಮನೆಗಳಿಂದ ಪ್ರಭಾವಿತರಾಗಿ ಜನ ನಾನಾ ದೇವತೆಗಳನ್ನು ಆರಾಧಿಸುತ್ತಾರೆ. ಆದರೆ ಶ್ರೀಕೃಷ್ಣನನ್ನು ಆರಾಧಿಸುವುದಿಲ್ಲ ಎಂದು ಇಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ನಾವು ಕೃಷ್ಣ ಎಂದಾಗ ಯಾವುದೇ ಮತೀಯ ಹೆಸರನ್ನು ಹೇಳುತ್ತಿಲ್ಲ. ಕೃಷ್ಣ ಎಂದರೆ ಸರ್ವೋತ್ಕೃಷ್ಟವಾದ ಆನಂದ. ಕೃಷ್ಣನು ಸಕಲ ಆನಂದದ

ಮೂಲನಿಧಿ ಎಂಬುದು ದೃಷ್ಟಪಟ್ಟಿದೆ. ನಾವೆಲ್ಲರೂ ಸುಖವನ್ನೇ ಬೆನ್ನುಹತ್ತಿದ್ದೇವೆ. ವೇದಾಂತ ಸೂತ್ರವು (1-1-12) **ಆನಂದಮಯೋಽಭ್ಯಾಸಾತ್** ಎಂದು ಹೇಳುತ್ತದೆ. ಭಗವಂತನಂತೆ ಜೀವಾತ್ಮರೂ ಕೂಡ ಪ್ರಜ್ಞಾಭರಿತರಾಗಿದ್ದಾರೆ ಮತ್ತು ಅವರು ಸುಖವನ್ನು ಅರಸುತ್ತಾರೆ. ಭಗವಂತನು ನಿತ್ಯ ಸುಖಿಯು, ಜೀವಾತ್ಮರು ಭಗವಂತನೊಂದಿಗೆ ಸೇರಿ ಸಹಕರಿಸಿದರೆ ಮತ್ತು ಅವನ ಸಂಪರ್ಕದಲ್ಲಿ ಭಾಗಿಗಳಾಗಿದ್ದರೆ ಅವರೂ ಕೂಡ ನಿತ್ಯಸುಖಿಗಳಾಗುತ್ತಾರೆ.

ಭಗವಂತನು ವೃಂದಾವನದಲ್ಲಿ ತನ್ನ ಲೀಲೆಗಳನ್ನು ತೋರಲು ಈ ಪ್ರಾಕೃತಿಕ ಜಗತ್ತಿಗೆ ಇಳಿದು ಬರುತ್ತಾನೆ. ಅವನ ಲೀಲೆಗಳೆಲ್ಲ ಆನಂದಪೂರ್ಣವಾಗಿವೆ. ಶ್ರೀಕೃಷ್ಣನು ವೃಂದಾವನದಲ್ಲಿದ್ದಾಗ ಅವನು ಗೋಪಬಾಲರೊಂದಿಗೆ ಆಡುತ್ತಿದ್ದ ಕ್ರೀಡೆಗಳು, ಗೋಪ ಕನ್ನಿಕೆಯರೊಂದಿಗೆ ವೃಂದಾವನ ಇತರ ನಿವಾಸಿಗಳೊಂದಿಗೆ ಹಾಗೂ ಗೋವುಗಳೊಂದಿಗೆ ಮಾಡುತ್ತಿದ್ದ ಕ್ರೀಡೆಗಳು ಎಲ್ಲವೂ ಪರಮಾನಂದ ಭರಿತವಾಗಿವೆ. ವೃಂದಾವನದ ಜನತೆಯು ಕೃಷ್ಣನನ್ನು ಬಿಟ್ಟು ಏನನ್ನೂ ಅರಿತಿರಲಿಲ್ಲ. ಉಪದೇವತಾ ಆರಾಧನೆ ಮಾಡಕೂಡದೆಂದು ಹೇಳುವುದೇ ಕೃಷ್ಣನ ಇಚ್ಛೆ. ಆದ್ದರಿಂದ ಕೃಷ್ಣನು ತನ್ನ ತಂದೆ ನಂದ ಮಹಾರಾಜನು ಇಂದ್ರನನ್ನೂ ಅರ್ಚಿಸಕೂಡದೆಂದು ಹೇಳಿದನು. ಜೀವಾತ್ಮರು ಕೊನೆಗೆ ಭಗವದ್ಧಾಮಕ್ಕೇ ಮರಳ ಬೇಕಾಗಿರುವುದರಿಂದ ಅವರು ಭಗವಂತನನ್ನು ಮಾತ್ರ ಆರಾಧಿಸಬೇಕಾಗಿದೆ..

ಭಗವದ್ಗೀತೆಯ ಹದಿನೈದನೆಯ ಅಧ್ಯಾಯದ ಆರನೆಯ ಶ್ಲೋಕದಲ್ಲಿ ಕೃಷ್ಣ ಧಾಮವನ್ನು ಕುರಿತು ವರ್ಣನೆ ಇದೆ.

**ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।**
**ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ ॥**

"ಆ ನನ್ನ ಪರಮ ಧಾಮವು ಸೂರ್ಯ ಚಂದ್ರರಿಂದಾಗಲೀ, ಅಗ್ನಿ ಅಥವಾ ವಿದ್ಯುತ್ತಿನಿಂದಾಗಲೀ ಪ್ರಕಾಶಿತವಾದುದಲ್ಲ. ಅಲ್ಲಿಗೆ ಬಂದವರು ಮತ್ತೆ ಈ ಭೌತಿಕ ಲೋಕಕ್ಕೆ ಮರಳುವುದಿಲ್ಲ".

ಈ ಶ್ಲೋಕವು ಆ ಸನಾತನ ಪರವ್ಯೋಮದ ವರ್ಣನೆಯನ್ನು ನೀಡುತ್ತದೆ. ನಾವು ಆಕಾಶದ ಕೇವಲ ಭೌತಿಕ ಕಲ್ಪನೆ ಹೊಂದಿರುವುದು ನಿಜ. ನಾವು ಸೂರ್ಯ ಚಂದ್ರ ನಕ್ಷತ್ರ ಇತ್ಯಾದಿಗಳ ಸಂಬಂಧದಿಂದ ಆಕಾಶವನ್ನು ಗುರುತಿಸುತ್ತೇವೆ. ಆದರೆ, ಆ ಸನಾತನ ಪರವ್ಯೋಮದಲ್ಲಿ ಚಂದ್ರ ಸೂರ್ಯರ ಅಥವಾ ವಿದ್ಯುತ್‌ಶಕ್ತಿ ಅಥವಾ ಅಗ್ನಿಯ ಅವಶ್ಯಕತೆಯೇ ಇಲ್ಲ. ಆ ಪರವ್ಯೋಮವು ಭಗವಂತನಿಂದಲೇ ಹೊರಡುವ ಬ್ರಹ್ಮಜ್ಯೋತಿಯ ಕಿರಣಗಳಿಂದ ಸದಾ ದೀಪ್ತಿಮಂತವಾಗಿರುತ್ತವೆ. ನಾವು ಎಷ್ಟೋ ಕಷ್ಟಪಟ್ಟು ಇತರ ಗ್ರಹಗಳಿಗೆ ಹೋಗಲು ಯತ್ನಿಸುತ್ತಿದ್ದೇವೆ. ಆದರೆ ಭಗವದ್ಧಾಮವನ್ನು ತಿಳಿದುಕೊಳ್ಳಲು ಕಷ್ಟವೇನಿಲ್ಲ. ಈ ಧಾಮವನ್ನು ಗೋಲೋಕ ಎಂದು ಕರೆಯುತ್ತಾರೆ. ಬ್ರಹ್ಮಸಂಹಿತೆಯಲ್ಲಿ (5.37) ಅದನ್ನು **ಗೋಲೋಕ ಏವ ನಿವಸತ್ಯಖಿಲಾತ್ಮ-ಭೂತಃ** ಎಂದು ಸುಂದರವಾಗಿ ವರ್ಣಿಸಲಾಗಿದೆ. ಭಗವಂತನು ತನ್ನ ಗೋಲೋಕಧಾಮದಲ್ಲಿ ಸನಾತನವಾಗಿ ವಾಸಮಾಡುತ್ತಾನೆ.



ಶ್ರೀ ಶ್ರೀಮದ್
ಎ.ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದ
ಸ್ಥಾಪನಾಚಾರ್ಯ, ಅಂತಾರಾಷ್ಟ್ರೀಯ ಕೃಷ್ಣ ಪ್ರಜ್ಞಾ ಸಂಘ




ಶ್ರೀ ಕೃಷ್ಣಚೈತನ್ಯ : ಶ್ರೀಮದ್ಭಗವದ್ಗೀತೆಯ ಆದರ್ಶ ಉಪದೇಶಕರು.



ಧೃತರಾಷ್ಟ್ರನು ಸಂಜಯನಿಂದ ಯುದ್ಧ ವಾರ್ತೆಯನ್ನು ಕುರಿತು ಕೇಳಿದನು. (ಭ.ಗೀ. 1.1)



ಕೃಷ್ಣಾರ್ಜುನರು ತಮ್ಮ ತಮ್ಮ ದಿವ್ಯ ಶಂಖ ಧ್ವನಿ ಗೈದರು. (ಭ.ಗೀ. 1.14)



“ಪಂಡಿತರಾದವರು ಇದ್ದವರಿಗಾಗಲಿ ಸತ್ತವರಿಗಾಗಲಿ ಎಂದೂ ಶೋಕಿಸುವುದಿಲ್ಲ.” ಎಂದು ಪರಮ ದೇವೋತ್ತಮ ಪುರುಷನು ನುಡಿದನು. (ಭ.ಗೀ. 2.11)



ದೇಹ ಬದಲಾಗುತ್ತದೆ. ಆದರೆ ಆತ್ಮವು ಮಾತ್ರ ಯಥಾ ಸ್ಥಿತಿಯಲ್ಲಿಯೇ ಇರುತ್ತದೆ. ಅನೇಕ ಚಿತ್ರಗಳು ಸದಾ ಚಲಿಸುತ್ತಿದ್ದರೂ, ನೆಟ್ಟ ದೃಷ್ಟಿಯಿಂದ ಸಂತತ ನೋಡುತ್ತಿದ್ದಾಗ ಎಲ್ಲವೂ ಒಂದೇ ಆಗಿ ತೋರುತ್ತವೆ. ಅದೇ ಪ್ರಕಾರ, ಮನುಷ್ಯನ ದೇಹವು ಪ್ರತಿ ಕ್ಷಣವೂ ಬದಲಾಗುತ್ತಿದ್ದರೂ, ಅದು ಒಂದೇ ಆಗಿರುವಂತೆ ತೋರುತ್ತದೆ. (ಭ.ಗೀ. 2.13)



ಎರಡು ಸಖೀ ಪಕ್ಷಿಗಳು ಒಂದೇ ಮರದಲ್ಲಿ ಕುಳಿತಿರುವಂತೆ ಶ್ರೀ ಕೃಷ್ಣನು ಮತ್ತು ಜೀವಾತ್ಮನು ಒಂದೇ ದೇಹದಲ್ಲಿ ಸ್ಥಿತರಾಗಿರುತ್ತಾರೆ. (ಕಠೋಪನಿಷದ್ 1.2.20)



ವಿನೀತನಾದ ಮುನಿಯು ತನ್ನ ನಿಜ ಜ್ಞಾನಬಲದಿಂದ ವಿದ್ವಾಂಸನನ್ನು, ಸಭ್ಯ ಬ್ರಾಹ್ಮಣನನ್ನು, ಹಸುವನ್ನು, ಹಸ್ತಿಯನ್ನು, ಶ್ವಾನವನ್ನು ಮತ್ತು ಶ್ವಪಚನನ್ನು ಸಮಾನವಾಗಿ ಕಾಣುತ್ತಾನೆ. (ಭ.ಗೀ. 5.18)



ಅಲ್ಪ ಬುದ್ಧಿಯುಳ್ಳವರು ಉಪದೇವತೆಗಳ ಅನುಗ್ರಹ ಸಂಪಾದಿಸಿ ತಮ್ಮ ಇಷ್ಟಾರ್ಥಗಳನ್ನು ಪಡೆಯುತ್ತಾರೆ, ಅಂಥ ಫಲಗಳು ಕೇವಲ ಅನಿತ್ಯವಾಗಿದ್ದು ಮರಣದೊಂದಿಗೆ ಕೊನೆಗೊಳ್ಳುತ್ತವೆ. ನಿಜವಾಗಿ, ಈ ಎಲ್ಲ ಫಲಗಳೂ ಕೂಡ ಭಗವಂತನಿಂದಲೇ ಪ್ರದತ್ತವಾಗಿರುತ್ತವೆ. (ಭ.ಗೀ. 7.23)



ಶ್ರೀ ಕೃಷ್ಣ ಭಕ್ತನಲ್ಲದ ಯೋಗಿಯು ತನ್ನ ದೇಹ ತ್ಯಾಗ ಮಾಡಲು ಯೋಗ್ಯ ಕಾಲವನ್ನು ಆಯ್ಕೆ ಮಾಡಿಕೊಳ್ಳಲು ಕಠೋರ ವ್ರತ-ತಪಸ್ಸನ್ನು ಆಚರಿಸಬೇಕಾಗುವುದು. (ಭ.ಗೀ. 8.24)



ಭಗವಂತನ ವಿರಾಟ್ ರೂಪವನ್ನು ನೋಡಿ ಕೈ ಜೋಡಿಸಿ ಪ್ರಾರ್ಥಿಸತೊಡಗಿದನು. (ಭ.ಗೀ. 11.13, 14)



ಪರಮದೇವೋತ್ತಮ ಪುರುಷನಾದ ಶ್ರೀ ಕೃಷ್ಣನು ಅರ್ಜುನನಿಗೆ ತನ್ನ ಚತುರ್ಭುಜ ನಿಜರೂಪವನ್ನು ತೋರಿದನು ಮತ್ತು ಕೊನೆಯಲ್ಲಿ ತನ್ನ ದ್ವಿಭುಜ ರೂಪವನ್ನು ತೋರಿದನು. (ಭ.ಗೀ. 11.50)





ಜೀವಾತ್ಮನು ತನ್ನ ಪ್ರಜ್ಞೆಯನ್ನು ಪಶುಪ್ರಜ್ಞೆಯಾಗಿ ಮಾಡಿಕೊಂಡರೆ, ಅವನು ಖಂಡಿತ ಮುಂದೆ ಪಶುದೇಹವನ್ನೇ ಹೊಂದುತ್ತಾನೆ. (ಭ.ಗೀ. 15.8)



ಆತ್ಮನು ಭೌತಿಕ ದೇಹದಲ್ಲಿ ಒಬ್ಬ ಪ್ರವಾಸಿ. ಬುದ್ಧಿ ಅದರ ಚಾಲಕ, ಮನಸ್ಸು ಚಾಲನ ಸಾಧನ ಮತ್ತು ಇಂದ್ರಿಯಗಳು ಅಶ್ವಗಳು. ಹೀಗೆ ಆತ್ಮನು ಮನಸ್ಸು ಮತ್ತು ಇಂದ್ರಿಯಗಳ ಸಂಪರ್ಕದಿಂದ ಸುಖಿಯೋ, ದುಃಖಿಯೋ ಆಗುತ್ತಾನೆ. (ಕಠೋಪನಿಷತ್ತು 1-3 3-4)



ಶ್ರೀ ಕೃಷ್ಣ ಸರ್ವ ಕಾರಣಗಳ ಕಾರಣನಾದ್ದರಿಂದ, ಬುದ್ಧಿವಂತರು ಅವನ ಚರಣ ಕಮಲ ಗಳಿಗೆ ಶರಣಾಗಬೇಕು.



ಯೋಗೇಶ್ವರನಾದ ಕೃಷ್ಣನಿರುವಲ್ಲಿ ಮತ್ತು ಧನುರ್ಧಾರಿಯಾದ ಅರ್ಜುನನಿರುವಲ್ಲಿ, ಐಶ್ವರ್ಯ, ವಿಜಯ, ಅಸಾಧಾರಣ ಬಲ ಮತ್ತು ನೀತಿಮತಿ ಖಂಡಿತ ಇದ್ದೇ ಇರುತ್ತವೆ.

(ಭ. ಗೀ. 18-78)

ಆದರೂ ನಾವು ಈ ಲೋಕದಿಂದ ಅವನೆಡೆಗೆ ಹೋಗಬಹುದು, **ಮತ್ತು** ಇದನ್ನು ತಿಳಿಸಲೋಸುಗವೇ ಭಗವಂತನು ತನ್ನ **ಸಚ್ಚಿದಾನಂದ ವಿಗ್ರಹ ಮೂಲ** ರೂಪವನ್ನು ತೋರಲು ಈ ಲೋಕಕ್ಕೆ ಇಳಿದುಬರುತ್ತಾನೆ. **ಅವನ** ಸ್ವಯಂ ರೂಪವನ್ನು ಪ್ರಕಟಿಸಿದಾಗ ಅವನು ಹೇಗಿರಬಹುದೆಂದು ನಾವು ಊಹಿಸ ಬೇಕಾದ ಅಗತ್ಯವೇ ಇಲ್ಲ. ಅವನ ರೂಪವನ್ನು ಕುರಿತು ನಾವು ಮನಬಂದಂತೆ ಊಹಾ ಪೋಹ ಮಾಡಕೂಡದೆಂದೇ ಅವನು ತಾನಿರುವಂತೆ ಭೂಮಿಗಿಳಿದು ಬಂದು ತನ್ನ **ಶ್ಯಾಮ** ಸುಂದರ ರೂಪವನ್ನು ಪ್ರಕಟಿಸುತ್ತಾನೆ. ಅವನು ನಮ್ಮಂತೆಯೆ ಮಾನವರೂಪಿಯಾಗಿ ಬಂದು ನಮ್ಮೊಡನೆ ಕ್ರೀಡೆ ಮಾಡುವುದರಿಂದ, ಅರಿಯದೇ ಮಂದ ಮತಿಗಳು ಅವನನ್ನು ನಿಂದಿ ಸುತ್ತಾರೆ. ಹೀಗೆಂದ ಮಾತ್ರದಿಂದ ಭಗವಂತನು ನಮ್ಮ ಹಾಗೆ ಎಂದು ನಾವು ಸರ್ವಥಾ ಭಾವಿಸಕೂಡದು. ಅವನು ಸರ್ವಶಕ್ತನಾಗಿರುವುದರಿಂದಲೇ ನಮ್ಮ ಮುಂದೆ ತನ್ನ ನಿಜರೂಪ ವನ್ನು ಪ್ರಕಟಿಸುತ್ತಾನೆ. ಲೀಲೆಗಳನ್ನು ತೋರುತ್ತಾನೆ. ಅವನ ಈ ಲೀಲೆಗಳು ಅವನ ನಿಜಧಾಮದಲ್ಲಿ ನಡೆಯುವ ಅವನ ಲೀಲೆಗಳ ಪಡಿನೆಳಲೇ ಆಗಿವೆ.

ಪರವ್ಯೋಮದ ಜ್ಯೋತಿರ್ವಲಯದಲ್ಲಿ ಅಸಂಖ್ಯ ಗ್ರಹಗಳು ತೇಲುತ್ತಿವೆ. ಬ್ರಹ್ಮ ಜ್ಯೋತಿಯು ಪರಂಧಾಮವೆನಿಸಿದ ಕೃಷ್ಣಲೋಕದಿಂದ ಹುಟ್ಟಿ ಬರುತ್ತದೆ. ಆನಂದಮಯ ಚಿನ್ಮಯ ಗ್ರಹಗಳನೇಕ ಈ ಕಿರಣಗಳಲ್ಲಿ ತೇಲುತ್ತಿವೆ. ಇವು ಪ್ರಾಕೃತಿಕ ಗ್ರಹ ಗಳಲ್ಲ. **ನತದ್ಭಾಸಯತೇ ಸೂರ್ಯೋ ನ ಶಂಶಾಕೋ ನ ಪಾವಕಃ ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ** ಎಂದು ಭಗವಂತನು ಹೇಳಿದ್ದಾನೆ. ಈ ಪರವ್ಯೋಮವನ್ನು ತಲುಪಿದವನು ಮತ್ತೆ ಭೌತಿಕ ಲೋಕಕ್ಕೆ ಮರಳುವ ಅಗತ್ಯವಿಲ್ಲ.ಪ್ರಾಕೃತಿಕ ವ್ಯೋಮದಲ್ಲಿ ನಾವು ಚಂದ್ರಲೋಕದ ಮಾತಂತೂ ಇರಲಿ, ಅತ್ಯಂತ ಉನ್ನತ ಲೋಕವೆನಿಸಿದ ಬ್ರಹ್ಮಲೋಕಕ್ಕೆ ಹೋದರು ಕೂಡ, ಅಲ್ಲಿಯೂ ಜನ್ಮ, ಮೃತ್ಯು, ಜರಾ, ವ್ಯಾಧಿ, ಜೀವನದ ಇದೇ ಸ್ಥಿತಿಗಳನ್ನು ಕಾಣುತ್ತೇವೆ. ಭೌತಿಕ ವಿಶ್ವಕ್ಕೆ ಸೇರಿದ ಯಾವ ಗ್ರಹವೂ ಭೌತಿಕ ಅಸ್ತಿತ್ವದ ಈ ನಾಲ್ಕು ನಿಯಮಗಳಿಂದ ಮುಕ್ತವಾಗಿಲ್ಲ.

ಜೀವಾತ್ಮರು ಒಂದು ಗ್ರಹದಿಂದ ಮತ್ತೊಂದು ಗ್ರಹಕ್ಕೆ ಪ್ರಯಾಣ ಮಾಡುತ್ತಲೇ ಇರುತ್ತಾರೆ. ಆದರೆ ಕೇವಲ ಯಾಂತ್ರಿಕ ವ್ಯವಸ್ಥೆಯ ಮೂಲಕ ನಾವು ಒಂದು ಗ್ರಹದಿಂದ ನಮ್ಮ ಇಷ್ಟಬಂದ ಮತ್ತೊಂದು ಗ್ರಹಕ್ಕೆ ಹೋಗಲಾರವು. ನಾವು ಇತರ ಗ್ರಹಗಳಿಗೆ ಹೋಗ ಬಯಸಿದರೆ ಅದಕ್ಕೆ ಒಂದು ವಿಧಾನವಿದೆ. ಅದನ್ನೂ ವರ್ಣಿಸಲಾಗಿದೆ: **ಯಾಂತಿದೇವ ವ್ರತಾದೇವಾನ್ ಪಿತೃನ್ ಯಾಂತಿ ಪಿತೃ–ವ್ರತಾಃ** ನಾವು ಗ್ರಹ ದಿಂದ ಗ್ರಹಕ್ಕೆಹೋಗಲು ಯಾವ ಯಾಂತ್ರಿಕ ವ್ಯವಸ್ಥೆಯು ಅಗತ್ಯವಾಗಿಲ್ಲ. **ಯಾಂತಿ ದೇವಾನ್ ವ್ರತಾ ದೇವಾಸ್** ಎಂದು ಗೀತೆಯು ನಿರೂಪಿ ಸುತ್ತದೆ. ಸೂರ್ಯ, ಚಂದ್ರರು ಇತರ ಊರ್ಧ್ವ ಲೋಕಗಳು ಸ್ವರ್ಗಲೋಕಗಳೆಂದು ಕರೆಯಲ್ಪಡುತ್ತವೆ. ಗ್ರಹಗಳು ಮೂರು ಬಗೆಯಾಗಿವೆ ಊರ್ಧ್ವ, ಮಧ್ಯ ಮತ್ತು ಅಧೋಲೋಕಗಳೆಂದು ಹೇಳುತ್ತಾರೆ. ಭೂಮಿಯ ಮಧ್ಯ ಲೋಕವರ್ಗಕ್ಕೆ ಸೇರಿದೆ. **ಯಾಂತಿದೇವವ್ರತಾದೇವಾನ್** ಎಂಬ ಬಹು ಸುಲಭೋಪಾಯದ ಮೂಲಕ

ಊರ್ಧ್ವ ಲೋಕಗಳಿಗೆ ಹೇಗೆ ಹೋಗಬಹುದು ಎಂಬುದನ್ನು ನಮಗೆ ಭಗವದ್ಗೀತೆಯು ತಿಳಿಸಿಕೊಡುತ್ತದೆ. ಒಬ್ಬನು ಅದಕ್ಕಾಗಿ ಆ ವಿಶಿಷ್ಟಗ್ರಹದ ಅಭಿಮಾನಿ ದೇವತೆಯನ್ನು ಆರಾಧಿಸಬೇಕಾಗಿದೆ. ಹಾಗೆ ಮಾಡಿ, ನಾವು ಚಂದ್ರ, ಸೂರ್ಯ ಅಥವಾ ಇತರ ಯಾವುದೇ ಊರ್ಧ್ವಲೋಕದ ಗ್ರಹಗಳಿಗೆ ಹೋಗಬಹುದು.

ಆದರೆ, ನಾವು ಈ ಭೌತಿಕ ಪ್ರಕೃತಿಯ ಯಾವುದೇ ಗ್ರಹಕ್ಕೆ ಹೋಗುವಂತೆ ಭಗವದ್ಗೀತೆಯು ನಮಗೆ ಆದೇಶಿಸುವುದಿಲ್ಲ. ನಾವು ಯಾವುದೇ ಯಾಂತ್ರಿಕ ಏರ್ಪಾಡಿನ ಮೂಲಕ ಪ್ರಾಯಃ 40,000 ವರ್ಷ ಪ್ರಯಾಣ ಮಾಡಿ ಅತ್ಯಂತ ಊರ್ಧ್ವಲೋಕ ವೆನಿಸಿದ ಬ್ರಹ್ಮಲೋಕವನ್ನು ತಲುಪಿದಾಗಲೂ ಕೂಡ (ಅಷ್ಟು ದೀರ್ಘಕಾಲ ಬದುಕಿರುವವರು ಯಾರು ?), ಅಲ್ಲಿಯೂ ನಮಗೆ ಜನ್ಮ, ಮೃತ್ಯು, ಜರಾ, ವ್ಯಾಧಿಗಳ ಪ್ರಾಪಂಚಿಕ ಅನಾನುಕೂಲಗಳೇ ಕಣ್ಣಿಗೆ ಬೀಳುತ್ತವೆ. ಆದರೆ ಪರಂಧಾಮವೆನಿಸಿದ ಲೋಕಕ್ಕೆ ಅಥವಾ ಪರವ್ಯೋಮದ ಇತರ ಯಾವುದೇ ಲೋಕಕ್ಕೆ ಹೋಗಬಯಸುವವನಿಗೆ, ಅಲ್ಲಿ ಈ ಭೌತಿಕ ತಾಪತ್ರಯಗಳು ಅವನ ಕಣ್ಣಿಗೆ ಬೀಳುವುದಿಲ್ಲ. ಪರವ್ಯೋಮದಲ್ಲಿ ಗೋಲೋಕ ವೃಂದಾವನ ಎಂಬ ಪರಮೋತ್ಕೃಷ್ಟವಾದ ಲೋಕವೊಂದಿದೆ. ಅದು ಪರಮದೇವೋತ್ತಮ ಪುರುಷನಾದ ಶ್ರೀ ಕೃಷ್ಣನ ಮೂಲಲೋಕವಾಗಿದೆ. ಈ ಎಲ್ಲ ವಿಷಯವೂ ನಮಗೆ ಭಗವದ್ಗೀತೆಯಿಂದ ತಿಳಿದು ಬರುತ್ತದೆ. ಭಗವದ್ಗೀತೆಯ ಉಪದೇಶದ ಮೂಲಕ ಈ ಭೌತಿಕ ಜಗತ್ತನ್ನು ತೊರೆದು ಪರವ್ಯೋಮದಲ್ಲಿ ನಿಜವಾಗಿಯೂ ಆನಂದಮಯವಾದ ಜೀವನವನ್ನು ಹೇಗೆ ಹೊಂದಬೇಕು ಎಂಬುದು ನಮಗೆ ತಿಳಿದುಬರುತ್ತದೆ.

ಭಗವದ್ಗೀತೆಯ ಹದಿನೈದನೆಯ ಅಧ್ಯಾಯದಲ್ಲಿ ಈ ಭೌತಿಕ ಜಗತ್ತಿನ ಒಂದು ನಿಜ ಚಿತ್ರ ನಮಗೆ ದೊರೆಯುತ್ತದೆ. ಅದು ಹೀಗಿದೆ.

**ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಮ್ ।**
**ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದಸ ವೇದವಿತ್ ॥**

ಇಲ್ಲಿ ಭೌತಿಕ ಜಗತ್ತನ್ನು ಒಂದು ಮರವೆಂದು ವರ್ಣಿಸಲಾಗಿದೆ. ಅದರ ಬೇರುಗಳು ಮೇಲಿವೆ. ರೆಂಬೆಗಳು ಕೆಳಗಿವೆ. ಮರದ ಬೇರುಗಳು ಮೇಲೆ ಕಾಣುವ ಒಂದು ಅನುಭವ ನಮಗಿದೆ : ನಾವು ಒಂದು ನದಿಯ ದಂಡೆಯಲ್ಲಿ ಅಥವಾ ಯಾವುದೇ ಜಲಾಶಯದ ದಂಡೆಯಲ್ಲಿ ನಿಂತುಕೊಂಡರೆ, ನೀರಿನಲ್ಲಿ ಪ್ರತಿಬಿಂಬಿತವಾದ ಮರಗಳು ತಲೆಕೆಳಕಾಗಿರುವಂತೆ ಕಾಣುತ್ತವೆ.ಅಲ್ಲಿ ಶಾಖೆಗಳು ಕೆಳಮುಖವಾಗಿ ಬೇರುಗಳು ಮೇಲ್ಮುಖವಾಗಿದ್ದಂತೆ ಕಾಣುತ್ತವೆ. ಅದೇ ಪ್ರಕಾರ ಭೌತಿಕ ಜಗತ್ತು ಪರಲೋಕದ ಪ್ರತಿಬಿಂಬವಾಗಿದೆ. ಈ ಭೌತಿಕ ಜಗತ್ತು ನಿಜಲೋ ಕದ ಛಾಯೆಯಾಗಿದೆ. ಛಾಯೆಯು ನಿಜವಾದುದಲ್ಲ. ಅಥವಾ ಸತ್ಯಭೂತವಾದುದಲ್ಲ, ಆದರೆ ಈ ಛಾಯೆಯಿಂದ ಸತ್ಯಭೂತವಾದ ನಿಜವೊಂದಿದೆ ಎಂಬುದು ನಮಗೆ ತಿಳಿದು ಬರುತ್ತದೆ. ಮರುಭೂಮಿಯಲ್ಲಿ ನೀರು ಇರುವುದಿಲ್ಲ. ಆದರೆ ಮೃಗಜಲದಿಂದ ನೀರು

ಎಂಬುದೊಂದಿದೆ ಎಂಬ ಕಲ್ಪನೆ ಮಾಡುತ್ತದೆ. ಹಾಗೆಯೇ ಈ ಭೌತಿಕ ಜಗತ್ತಿನಲ್ಲಿ ನೀರೆಂಬುದಿಲ್ಲ, ಸುಖವೆಂಬುದಿಲ್ಲ, ಜಲರೂಪದ ವಾಸ್ತವಿಕ ಸುಖವು ಕೇವಲ ಪರಲೋಕದಲ್ಲಿ ಮಾತ್ರ ಲಭ್ಯವಾಗಿದೆ.

ನಾವು ಈ ಕೆಳಗಿನ ರೀತಿಯಲ್ಲಿ (ಭಗವದ್ಗೀತಾ 15–5) ಪರಲೋಕವನ್ನು ಹೊಂದ ಬಹುದೆಂದು ಕೃಷ್ಣನು ಸೂಚಿಸಿದ್ದಾನೆ.

**ನಿರ್ಮಾನಮೋಹಾ ಜಿತಸಂಗದೋಷಾ**
**ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ।**
**ದ್ವಂದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈ**
**ರ್ಗಚ್ಛಂತ್ಯಮೂಢಾಃ ಪದಮವ್ಯಯಂ ತತ್ ॥**

**ಆ ಪದಂಮವ್ಯಯಂ** ಎಂಬ ಸನಾತನ ರಾಜ್ಯವನ್ನು **ನಿರ್ಮಾನ ಮೋಹ** ವಾಗಿರುವ ವನು ತಲುಪಬಹುದು. ಹಾಗೆಂದರೇನು ? ನಾವೀಗ ಉಪಾಧಿಗಳ ಬೆನ್ನು ಹತ್ತಿದ್ದೇವೆ. ಒಬ್ಬನು "ಸರ್" ಎನಿಸಿಕೊಳ್ಳ ಬಯಸುತ್ತಾನೆ. ಮತ್ತೊಬ್ಬನು "ಸ್ವಾಮಿ" ಎನಿಸಿಕೊಳ್ಳ ಬಯಸುತ್ತಾನೆ, ಮತ್ತೊಬ್ಬನು ರಾಷ್ಟ್ರಪತಿಯೋ, ರಾಜನೋ ಅಥವಾ ಧನಾಢ್ಯನೋ ಎನಿಸಿ ಕೊಳ್ಳಬಯಸುತ್ತಾನೆ. ನಾವು ಈ ಉಪಾಧಿಗಳಿಗೆ ವ್ಯಾಮೋಹ ಹೊಂದಿರುವವರೆಗೂ, ಉಪಾಧಿಗಳು ದೇಹಕ್ಕೆ ಸೇರಿದ್ದರಿಂದ ನಾವು ದೇಹವ್ಯಾಮೋಹವನ್ನು ಹೊಂದಿರುತ್ತೇವೆ. ಆದರೆ ನಾವು ಈ ದೇಹಗಳಲ್ಲ. ಇದೇ ಆತ್ಮ ಸಾಕ್ಷಾತ್ಕಾರದ ದಾರಿಯಲ್ಲಿ ಮೊದಲನೆಯ ಅರಿವು. ನಾವು ತ್ರಿವಿಧ ಪ್ರಕೃತಿಗುಣಗಳ ಸಂಪರ್ಕದಲ್ಲಿದ್ದೇವೆ. ಆದರೆ ಭಕ್ತಿಯುತ ಭಗವತ್ಸೇವೆಯ ಮೂಲಕ ನಾವು ಇವುಗಳಿಂದ ಅಸಂಗರಾಗಬೇಕು. ನಾವು ಭಗವಂತನ ಭಕ್ತಿಯುತ ಸೇವೆಯಲ್ಲಿ ಆಸಕ್ತರಾಗದಿದ್ದರೆ ಪ್ರಕೃತಿಗುಣ ಸಂಗ ವರ್ಜಿತರಾಗಲು ಸಾಧ್ಯವಿಲ್ಲ. ಕಾಮಾದಿಗಳ ನಿಮಿತ್ತ ಎಂದರೆ, ಭೌತಿಕ ಜಗತ್ತಿನ ಮೇಲೆ ಒಡೆತನ ಹೊಂದುವ ನಮ್ಮ ಇಚ್ಛೆ ಯಿಂದಾಗಿ ನಮಗೆ ಉಪಾಧಿಗಳು ಮತ್ತು ವ್ಯಾಮೋಹ ಉಂಟಾಗುತ್ತವೆ. ಭೌತಿಕ ಪ್ರಕೃತಿಯ ಮೇಲೆ ಒಡೆತನ ಹೊಂದುವ ನಮ್ಮ ಮನೋವೃತ್ತಿಯನ್ನು ನಾವು ಬಿಟ್ಟು ಕೊಡುವ ವರೆಗೆ ಸನಾತನ ಧಾಮವೆನಿಸಿದ ಪರಂಧಾಮಕ್ಕೆ ನಾವು ಮರಳುವುದು ಸಾಧ್ಯವಾಗುವುದಿಲ್ಲ. ಮಿಥ್ಯಾಭೋಗಗಳಿಂದ ಆಕರ್ಷಿತನಾಗಿ ವಿಮೂಢನಾಗದವನು, ಮತ್ತು ಭಗವತ್ಸೇವಾ ನಿರತ ನಾದವನು ಈ ಅವಿನಾಶಿಯಾದ ಸನಾತನರಾಜ್ಯವನ್ನು ಹೋಗಿ ಸೇರಬಹುದಾಗಿದೆ. ಹೀಗೆ ನಿರತನಾದವನು ಪರಂಧಾಮವನ್ನು ಸುಲಭವಾಗಿ ತಲುಪಬಹುದು.

ಗೀತೆಯಲ್ಲಿ ಬೇರೆಡೆಗೆ (8.21) ಹೀಗಿದೆ.

**ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಮ್ ।**
**ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ॥**

**ಅವ್ಯಕ್ತ** ಎಂದರೆ ವ್ಯಕ್ತವಾಗದಿರುವುದು. ಇಡೀ ಭೌತಿಕ ಜಗತ್ತು ಕೂಡ ನಮ್ಮ ಮುಂದೆ ವ್ಯಕ್ತವಾಗಿಲ್ಲ. ನಮ್ಮ ಇಂದ್ರಿಯಗಳು ಅವೆಷ್ಟು ಅಪರಿಪೂರ್ಣವೆಂದರೆ,

ನಾವು ಈ ಭೌತಿಕ ವಿಶ್ವದ ಎಲ್ಲ ನಕ್ಷತ್ರಗಳನ್ನು ಕೂಡ ಕಾಣಲಾರೆವು. ಎಲ್ಲ ಗ್ರಹಗಳನ್ನು ಕುರಿತು ವೈದಿಕ ಸಾಹಿತ್ಯದಲ್ಲಿ ನಮಗೆ ಬೇಕಾದಷ್ಟು ಮಾಹತಿ ದೊರೆಯುತ್ತದೆ. ನಾವು ಅದನ್ನು ನಂಬಬಹುದು ಅಥವಾ ಬಿಡಬಹುದು. ಈ ಎಲ್ಲ ಮಹತ್ವದ ಲೋಕಗಳನ್ನು ಕುರಿತು ವೇದಸಾಹಿತ್ಯದಲ್ಲಿ,ಅದರಲ್ಲಿಯೂ ವಿಶೇಷವಾಗಿ ಶ್ರೀಮದ್ಭಾಗವತದಲ್ಲಿ ವರ್ಣನೆಯಿದೆ ಮತ್ತು ಈ ಭೌತಿಕ ಆಕಾಶದಾಚೆಗಿರುವ ಆಧ್ಯಾತ್ಮ ಲೋಕವು ಅವ್ಯಕ್ತ ಎಂದು ವರ್ಣಿಸ್ಪಟ್ಟಿದೆ. ಆದ್ದರಿಂದ ಮಾನವನು ಅಂಥ ಪರಮರಾಜ್ಯವನ್ನು ಸೇರಲು ಇಚ್ಚಿಸಬೇಕು ಮತ್ತು ತವಕ ಪಡಬೇಕು. ಅಂಥ ಲೋಕವನ್ನು ಹೊಂದಿದ ಮೇಲೆ ಮತ್ತೆ ಈ ಭೌತಿಕ ಲೋಕಕ್ಕೆ ಮರಳುವ ಪ್ರಶ್ನೆಯೇ ಇಲ್ಲ.

ಆಮೇಲೆ, ಆ ಭಗವದ್ಧಾಮವನ್ನು ತಲುಪುವ ಬಗೆ ಹೇಗೆ ಎಂಬ ಪ್ರಶ್ನೆ ಎತ್ತಬಹುದು. ಈ ಬಗ್ಗೆ ಎಂಟನೆಯ ಅಧ್ಯಾಯದಲ್ಲಿ ನಿರೂಪಣೆಯಿದೆ, ಅದು ಹೀಗಿದೆ.

**ಅಂತಕಾಲೇ ಚ ಮಾಮೇವ ಸ್ಮರನ್ ಮುಕ್ತ್ವಾ ಕಲೇವರಂ ।**
**ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥**

"ಜೀವನಾಂತ್ಯದಲ್ಲಿ ನನ್ನನ್ನು ಸ್ಮರಿಸುತ್ತಾ ದೇಹ ಬಿಡುವವನು ನನ್ನ ಭಾವವನ್ನು ಕೂಡಲೇ ಹೊಂದುತ್ತಾನೆ ; ಈ ಬಗ್ಗ ಸಂಶಯವೇ ಇಲ್ಲ" ( ಭ. ಗೀ. 8. 5). ಮರಣ ಕಾಲದಲ್ಲಿ ಕೃಷ್ಣನನ್ನು ಕುರಿತು ಚಿಂತನೆ ಮಾಡುವವನು ಕೃಷ್ಣನಲ್ಲಿಗೆ ಹೋಗುತ್ತಾನೆ. ಕೃಷ್ಣನ ರೂಪವನ್ನು ಸ್ಮರಿಸಬೇಕು ; ಈ ರೂಪವನ್ನೇ ಧ್ಯಾನಿಸುತ್ತಾ ದೇಹಬಿಟ್ಟರೆ, ಅಂಥವನು ಖಂಡಿತವಾಗಿ ಆಧ್ಯಾತ್ಮರಾಜ್ಯವನ್ನು ಸೇರುತ್ತಾನೆ. ಮದ್ಭಾವಂ ಎಂಬುದು ಭಗವಂತನ ಪರಮ ಸ್ವರೂಪವನ್ನೂ ಸೂಚಿಸುತ್ತದೆ. ಭಗವಂತನು ಸಚ್ಚಿದಾನಂದ ವಿಗ್ರಹ ನಾಗಿದ್ದಾನೆ ಎಂದರೆ, ಅವನ ರೂಪವು ನಿತ್ಯ ಜ್ಞಾನಾನಂದ ಪೂರ್ಣವಾಗಿದೆ. ನಮ್ಮ ಈಗಿನ ದೇಹವು ಸಚ್ಚಿದಾನಂದವಲ್ಲ. ಅದು ಸತ್ ಅಲ್ಲ ಅಸತ್ ಸ್ವರೂಪದ್ದು. ಅದು ಸನಾತನ ವಲ್ಲ, ಎಂದರೆ ನಾಶಶೀಲವಾದುದು. ಅದು ಚಿತ್ ಅಲ್ಲ ಎಂದರೆ ಜ್ಞಾನಪೂರ್ಣವಲ್ಲ, ಅಜ್ಞಾನದಿಂದ ತುಂಬಿದೆ. ನಮಗೆ ಅಧ್ಯಾತ್ಮ ರಾಜ್ಯದ ಜ್ಞಾನವೇ ಇಲ್ಲ, ಅಷ್ಟೇಕೆ ನಮಗೆ ಈ ಭೌತಿಕ ಲೋಕದ ಜ್ಞಾನವೂ ಪೂರ್ಣವಾಗಿಲ್ಲ. ನಮಗೆ ತಿಳಿಯದ ಅನೇಕ ವಸ್ತುಗಳು ಈ ಲೋಕದಲ್ಲಿವೆ. ನಮ್ಮ ಈ ದೇಹವೂ ಕೂಡ ನಿರಾನಂದವಾಗಿದೆ ; ಇದು ಆನಂದಮಯ ವಾಗಿರುವ ಬದಲು ದುಃಖಮಯವಾಗಿದೆ. ನಾವು ಈ ಭೌತಿಕ ಜಗತ್ತಿನಲ್ಲಿ ಅನುಭವಿಸುವ ಎಲ್ಲ ದುಃಖಗಳೂ ದೇಹ ನಿಮಿತ್ತವಾಗಿ ಉಂಟಾಗುತ್ತವೆ. ಪರಮ ದೇವೋತ್ತಮ ಪುರುಷ ನಾದ ಶ್ರೀಕೃಷ್ಣನನ್ನು ಧ್ಯಾನಿಸುತ್ತಾ ಈ ದೇಹವನ್ನು ಬಿಡುವವನು, ಕೂಡಲೇ ಸಚ್ಚಿದಾನಂದ ದೇಹವನ್ನು ಹೊಂದುತ್ತಾನೆ.

ಈ ದೇಹವನ್ನು ಬಿಡುವ ಮತ್ತು ಈ ಭೌತಿಕ ಜಗತ್ತಿನಲ್ಲಿ ಮತ್ತೆ ಇನ್ನೊಂದು ದೇಹ ವನ್ನು ಪಡೆಯುವ ಪ್ರಕ್ರಿಯೆಯು ಕೂಡ ವ್ಯವಸ್ಥಿತವಾಗಿದೆ. ಮುಂದಿನ ಜನ್ಮದಲ್ಲಿ ಎಂಥಹ ದೇಹ ದೊರೆಯಬೇಕು ಎಂಬುದು ನಿಶ್ಚಿತವಾದ ಮೇಲೆಯೇ ಮನುಷ್ಯನು ಮರಣ ಹೊಂದು ತ್ತಾನೆ. ಆದರೆ ಈ ನಿರ್ಣಯವನ್ನು ಮೇಲಧಿಕಾರಿಗಳು ಕೈಗೊಳ್ಳುವರೇ ಹೊರತು ಜೀವಾ

ತ್ಯನಲ್ಲ. ನಮ್ಮ ಈ ಜೀವನದ ಕರ್ಮಗಳಿಗನುಸಾರವಾಗಿ ನಾವು ಮೇಲೆ ಹೋಗುತ್ತೇವೆ, ಅಥವಾ ಕೆಳಗೆ ಇಳಿಯುತ್ತೇವೆ. ನಮ್ಮ ಇಂದಿನ ಜನ್ಮ ಮುಂದಿನ ಜನ್ಮದ ಸಿದ್ಧತೆಯೇ ಆಗಿರುತ್ತದೆ. ನಾವು ಈ ಜನ್ಮದಲ್ಲಿ ಆಧ್ಯಾತ್ಮ ಲೋಕವನ್ನು ಹೊಂದುವ ಸಿದ್ಧತೆಯನ್ನು ಮಾಡಿದರೆ ಖಂಡಿತವಾಗಿ ನಾವು ಈ ದೇಹವನ್ನು ಬಿಟ್ಟ ತರುವಾಯ, ನಾವು ಭಗವತ್ ಸದೃಶವಾದ ಆಧ್ಯಾತ್ಮಿಕ ದೇಹವನ್ನೇ ಹೊಂದುತ್ತೇವೆ.

ಈ ಮೊದಲೇ ಹೇಳಿದಂತೆ, ಬಹ್ಮವಾದಿ, ಪರಮಾತ್ಮವಾದಿ ಮತ್ತು ಭಕ್ತ—ಹೀಗೆ ವಿವಿಧ ಪ್ರಕಾರದ ದಿವ್ಯ ವಾದಿಗಳು ಇದ್ದಾರೆ ಮತ್ತು ಮೇಲೆ ಹೇಳಿದಂತೆ, ಬ್ರಹ್ಮ ಜ್ಯೋತಿಯಲ್ಲಿ (ಪರವ್ಯೋಮದಲ್ಲಿ) ಅಸಂಖ್ಯ ಅಪ್ರಾಕೃತ ಲೋಕಗಳಿವೆ. ಈ ಲೋಕಗಳ ಸಂಖ್ಯೆ ಈ ಭೌತಿಕ ಎಲ್ಲಾ ಲೋಕಗಳಿಗಿಂತ ಅಪಾರವಾದದ್ದಾಗಿದೆ. ಈ ಭೌತಿಕ ವಿಶ್ವವನ್ನು ಸೃಷ್ಟಿಯ ಕೇವಲ ಕಾಲು ಭಾಗ ಎಂದು ಹೇಳಲಾಗಿದೆ (**ಏಕಾಂಶೇನ ಸ್ಥಿತೋ ಜಗತ್**). ಈ ಭೌತಿಕ ಸೃಷ್ಟಿಯಲ್ಲಿ ಕೋಟ್ಯಾನುಕೋಟಿ ವಿಶ್ವಗಳು, ಲಕ್ಷೋಪಲಕ್ಷ ಗ್ರಹಗಳು, ಸೂರ್ಯಗ್ರಹಗಳು ನಕ್ಷತ್ರಗಳು, ಚಂದ್ರಗ್ರಹಗಳು ಇವೆ. ಆದರೆ ಈ ಇಡೀ ಭೌತಿಕ ಸೃಷ್ಟಿಯು ಒಟ್ಟು ಸೃಷ್ಟಿಯ ಒಂದು ತುಣುಕು ಮಾತ್ರ ಆಗಿದೆ. ಸೃಷ್ಟಿಯ ಬಹು ಭಾಗವು ಪರವ್ಯೋಮದಲ್ಲಿಯೇ ಇದೆ. ಭಗವಂತನಲ್ಲಿ ಲೀನನಾಗ ಬಯಸುವವನು ಭಗವಂತನ ಬ್ರಹ್ಮಜ್ಯೋತಿಗೆ ಕೂಡಲೇ ಸ್ಥಾನಾಂತರ ಹೊಂದುತ್ತಾನೆ. ಮತ್ತು ಹೀಗೆ ಪರವ್ಯೋಮವನ್ನು ಹೊಂದುತ್ತಾನೆ. ಭಕ್ತನು, ಭಗವಂತನ ಸಾಮೀಪ್ಯ ಸುಖವನ್ನು ಹೊಂದ ಬಯಸಿದರೆ ವೈಕುಂಠಾದಿ ಲೋಕಗಳನ್ನು ಸೇರುತ್ತಾನೆ. ಅವು ಅಸಂಖ್ಯವಾಗಿವೆ ಮತ್ತು ಭಗವಂತನು ತನ್ನ ಪೂರ್ಣ ವಿಸ್ತರಣೆಯಾದ ಚತುರ್ಭುಜ ನಾರಾಯಣ, ಪ್ರದ್ಯುಮ್ನ, ಅನಿರುದ್ಧ ಮತ್ತು ಗೋವಿಂದನೆಂಬ ವಿವಿಧ ನಾಮಗಳನ್ನು ಹೊಂದಿ ಅಲ್ಲಿ ಜೀವಾತ್ಮನಿಗೆ ಸಂಘವನ್ನು ನೀಡುತ್ತಾನೆ. ಹೀಗೆ ಜೀವನದ ಕೊನೆಯಲ್ಲಿ ದಿವ್ಯವಾದಿಗಳು ಬ್ರಹ್ಮಜ್ಯೋತಿಯನ್ನಾಗಲಿ, ಪರಮಾತ್ಮನನ್ನಾಗಲಿ, ಪರಮ ದೇವೋತ್ತಮ ಪುರುಷನಾದ ಶ್ರೀಕೃಷ್ಣನನ್ನಾಗಲೀ ಕುರಿತು ಧ್ಯಾನ ಮಾಡುತ್ತಾರೆ. ಈ ಎಲ್ಲಾ ಸಂದರ್ಭದಲ್ಲಿ ಅವರು ಪರವ್ಯೋಮವನ್ನು ಸೇರುತ್ತಾರೆ. ಆದರೆ ಭಕ್ತನಾದವನು ಅಥವಾ ಭಗವಂತನ ಸ್ವಯಂ ಸಂಪರ್ಕ ಹೊಂದಿರುವವನು ವೈಕುಂಠ ಲೋಕಗಳನ್ನು ಅಥವಾ ಗೋಲೋಕ ವೃಂದಾವನವನ್ನು ಹೋಗಿ ಸೇರುತ್ತಾನೆ. ಈ ಬಗ್ಗೆ ಸಂಶಯವೇ ಇಲ್ಲ ಎಂದು ಭಗವಂತನು ಒತ್ತಿ ಹೇಳುತ್ತಾನೆ. ಇದನ್ನು ದೃಢವಾಗಿ ನಂಬಬೇಕು. ನಮ್ಮ ಯೋಚನೆಗೆ ತಾಳೆಯಾಗಲಿಲ್ಲವೆಂದು ನಾವು ಯಾವುದನ್ನೂ ನಿರಾಕರಿಸಕೂಡದು. "ನೀನು ಹೇಳಿದ್ದನ್ನೆಲ್ಲ ನಾನು ನಂಬುತ್ತೇನೆ" ಎಂಬ ಅರ್ಜುನನ ಭಾವವನ್ನೇ ನಾವೂ ಅಂಗೀಕರಿಸಬೇಕು. ಆದ್ದರಿಂದ ಮರಣ ಕಾಲದಲ್ಲಿ ಬ್ರಹ್ಮನಾಗಿ ಅಥವಾ ಪರಮಾತ್ಮನಾಗಿ ಅಥವಾ ಪರಮ ದೇವೋತ್ತಮ ಪುರುಷನಾಗಿ ಯಾರು ಅವನನ್ನು ಕುರಿತು ಚಿಂತನೆಯನ್ನು ಮಾಡುತ್ತಾರೆ, ಅವರು ಪರವ್ಯೋಮವನ್ನು ಖಂಡಿತ ಸೇರುತ್ತಾರೆ. ಈ ವಿಷಯದಲ್ಲಿ ಸಂದೇಹವೇ ಇಲ್ಲ ಎಂದು ಭಗವಂತನು ಹೇಳುತ್ತಾನೆ. ಇದನ್ನು ನಂಬದಿರುವ ಪ್ರಶ್ನೆಯೇ ಇಲ್ಲ.

ಮರಣ ಕಾಲದಲ್ಲಿ ಭಗವಂತನನ್ನು ಕುರಿತು ಕೇವಲ ಧ್ಯಾನ ಮಾಡಿದರೆ, ಆಧ್ಯಾತ್ಮ ರಾಜ್ಯವನ್ನು ಪ್ರವೇಶಿಸಲು ಸಾಧ್ಯವಾಗುವುದು ಎಂಬ ಸಾಮಾನ್ಯ ನಿಯಮವನ್ನು ಭಗವದ್ಗೀತೆಯು (8.6) ವಿವರಿಸಿದೆ.

**ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇವರಮ್ ।**
**ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ॥**

“ಒಬ್ಬನು ಈ ದೇಹವನ್ನು ಬಿಡುವಾಗ ಏನನ್ನು ಕುರಿತು ಚಿಂತಿಸುತ್ತಾನೆಯೋ, ಮುಂದಿನ ಜನ್ಮದಲ್ಲಿ ತಪ್ಪದೆ ಅದನ್ನೇ ಹೊಂದುತ್ತಾನೆ”. ಈಗ ಈ ಭೌತಿಕ ಪ್ರಕೃತಿಯು ಭಗವಂತನ ಅನೇಕ ಶಕ್ತಿಗಳಲ್ಲಿ ಒಂದು ಶಕ್ತಿಯ ಪ್ರಕಟಣೆ ಮಾತ್ರ ಆಗಿದೆಯೆಂದು ಮೊದಲು ಅರಿತುಕೊಳ್ಳಬೇಕು. ವಿಷ್ಣು ಪುರಾಣದಲ್ಲಿ (6. 7. 61) ಭಗವಂತನ ಒಟ್ಟು ಶಕ್ತಿಗಳನ್ನು ಹೀಗೆ ವಿವರಿಸಲಾಗಿದೆ:

**ವಿಷ್ಣುಶಕ್ತಿಃ ಪರಾಪ್ರೋಕ್ತಾ ಕ್ಷೇತ್ರಜ್ಞಾಖ್ಯಾ ತಥಾ ಪರಾ।**
**ಅವಿದ್ಯಾಕರ್ಮ ಸಂಜ್ಞಾನ್ಯಾ ತೃತೀಯಾ ಶಕ್ತಿರಿಷ್ಯತೇ ॥**

ಭಗವಂತನು ಅಸಂಖ್ಯವಾದ ವೈವಿಧ್ಯಮಯ ಶಕ್ತಿಗಳನ್ನು ಹೊಂದಿದ್ದಾನೆ. ಅವು ನಮ್ಮ ಕಲ್ಪನೆಗೆ ನಿಲುಕುವಂತಿಲ್ಲ; ಆದರೆ ಮಹಾಜ್ಞಾನಿಗಳು ಅಥವಾ ಮುಕ್ತ ಜೀವರು ಈ ಶಕ್ತಿಗಳನ್ನು ಕುರಿತು ಅಧ್ಯಯನ ಮಾಡಿದ್ದಾರೆ ಮತ್ತು ಅವುಗಳನ್ನು ಮೂರು ವಿಧವಾಗಿ ವಿಶ್ಲೇಷಿಸಿದ್ದಾರೆ. ಈ ಎಲ್ಲ ಶಕ್ತಿಗಳು ವಿಷ್ಣು ಶಕ್ತಿಗಳೇ ಆಗಿವೆ. ಮೊದಲನೆಯ ಶಕ್ತಿ ಪರಾ, ಎಂದರೆ ದಿವ್ಯ ಎನಿಸಿಕೊಂಡಿದೆ. ಈ ಮುಂಚೆಯೇ ವಿವರಿಸಿದಂತೆ, ಜೀವಿಗಳು ಕೂಡ ಈ ಪರಾ ಶಕ್ತಿಗೆ ಸೇರಿದ್ದಾರೆ. ಇತರ ಶಕ್ತಿಗಳು ಎಂದರೆ ಭೌತಿಕ ಶಕ್ತಿಗಳು ತಮೋ ಭಾವಕ್ಕೆ ಸೇರಿವೆ. ಮರಣಕಾಲದಲ್ಲಿ ನಾವು ಭೌತಿಕ ಜಗತ್ತಿನ ಅಪರಾಶಕ್ತಿಯಲ್ಲಿ ಇರಬಹುದಾಗಿದೆ ಅಥವಾ ಆಧ್ಯಾತ್ಮಿಕ ಜಗತ್ತಿನ ಪರಾಪ್ರಕೃತಿಗೆ ಸೇರಬಹುದಾಗಿದೆ. ಭಗವದ್ಗೀತೆಯು (8. 6) ಹೀಗೆ ಹೇಳುತ್ತದೆ.

**ಯಂಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇವರಮ್ ।**
**ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ**

“ಒಬ್ಬನು ಈ ದೇಹ ಬಿಡುವಾಗ ಏನನ್ನು ಕುರಿತು ಚಿಂತಿಸುತ್ತಾನೆಯೋ ಮುಂದಿನ ಜನ್ಮದಲ್ಲಿ ತಪ್ಪದೇ ಅದನ್ನೇ ಹೊಂದುತ್ತಾನೆ”.

ನಮ್ಮ ಜೀವನದಲ್ಲಿ ನಾವು ಭೌತಿಕ ಅಥವಾ ಆಧ್ಯಾತ್ಮಿಕ ಶಕ್ತಿಯನ್ನು ಕುರಿತು ಚಿಂತನೆ ಮಾಡುವುದೇ ನಮಗೆ ಗೊತ್ತಿದೆ ಅಷ್ಟೇ. ಆದರೆ ನಾವು ನಮ್ಮ ವಿಚಾರವನ್ನು ಅಪರಾ ಶಕ್ತಿಯಿಂದ ಪರಾಶಕ್ತಿಗೆ ವರ್ಗಾಯಿಸಿಕೊಳ್ಳುವುದು ಹೇಗೆ ಸಾಧ್ಯ ? ನಮ್ಮ ವಿಚಾರಗಳನ್ನು ಅಪರಾಶಕ್ತಿಯಿಂದ ತುಂಬುವ ಅನೇಕ ಬಗೆಯ ಸಾಹಿತ್ಯಗಳು ಎಂದರೆ, ವೃತ್ತಪತ್ರಿಕೆಗಳು, ಕಾದಂಬರಿ ಇತ್ಯಾದಿಗಳು ಬಹಳಷ್ಟು ಇವೆ. ಈಗ ಇಂಥ ಸಾಹಿತ್ಯದಲ್ಲಿ ತಲ್ಲೀನವಾದ ನಮ್ಮ ವಿಚಾರವನ್ನು ನಾವೀಗ ವೈದಿಕ ಸಾಹಿತ್ಯದಲ್ಲಿ ತಿರುಗಿಸಬೇಕಾಗಿದೆ. ಮಹಾಮಹಾ ಋಷಿಗಳು ಪುರಾಣಗಳಂಥ ಅನೇಕ ವೈದಿಕ ಸಾಹಿತ್ಯಗಳನ್ನು ರಚಿಸಿದ್ದಾರೆ. ಪುರಾಣಗಳು ಕಾಲ್ಪನಿಕವಾದು

ವಲ್ಲ, ಅವು ಐತಿಹಾಸಿಕ ದಾಖಲೆಗಳಾಗಿವೆ. ಚೈತನ್ಯ ಚರಿತಾಮೃತದಲ್ಲಿ (ಮಧ್ಯ 20. 122) ಈ ಕೆಳಗಿನ ಶ್ಲೋಕವಿದೆ :

**ಮಾಯಾ- ಮುಗ್ಧ ಜೀವೇರ ನಾಹಿ ಸ್ವತಃ ಕೃಷ್ಣ- ಜ್ಞಾನ**
**ಜೀವೇರೇ ಕೃಪಾಯ ಕೈಲಾ ಕೃಷ್ಣ ವೇದ- ಪುರಾಣ**

ವಿಸ್ಮೃತಿ ಹೊಂದಿದ ಅಥವಾ ಬದ್ಧರಾದ ಜೀವರು ಭಗವಂತನೊಂದಿಗೆ ತಮ್ಮ ಸಂಬಂಧವನ್ನು ಮರೆತು ಬಿಟ್ಟಿದ್ದಾರೆ ಮತ್ತು ಅವರು ಕೇವಲ ಭೌತಿಕ ಕ್ರಿಯೆಗಳಲ್ಲಿಯೇ ಸದಾ ವಿಚಾರಮಗ್ನರಾಗಿರುತ್ತಾರೆ. ಈ ವಿಚಾರಶಕ್ತಿಯನ್ನು ಪರವ್ಯೋಮದಲ್ಲಿ ಬದಲಾಯಿಸಿ ಕೊಳ್ಳಲು, ಕೃಷ್ಣದ್ವೈಪಾಯನ ವೇದವ್ಯಾಸರು ಬೇಕಾದಷ್ಟು ವೈದಿಕ ಸಾಹಿತ್ಯವನ್ನು ನಿರ್ಮಿಸಿಕೊಟ್ಟಿದ್ದಾರೆ.ಅವರು ಮೊದಲಿಗೆ ವೇದಗಳನ್ನು ನಾಲ್ಕು ಭಾಗವಾಗಿ ವಿಂಗಡಿಸಿದರು, ಆಮೇಲೆ ಅವುಗಳನ್ನೇ ಪುರಾಣಗಳಲ್ಲಿ ವಿವರಿಸಿದರು. ಆಮೇಲೆ ಮಂದಮತಿಗಳಿಗೋಸ್ಕರ ಅವರು ಮಹಾಭಾರತವನ್ನು ಬರೆದರು. ಮಹಾಭಾರತದಲ್ಲಿ ಭಗವದ್ಗೀತೆ ನಿರೂಪಿತವಾಗಿದೆ. ಆಮೇಲೆ ಆ ಎಲ್ಲ ವೈದಿಕ ಸಾಹಿತ್ಯವನ್ನು ಅವರು ವೇದಾಂತ ಸೂತ್ರಗಳಲ್ಲಿ ಸಂಗ್ರಹವಾಗಿ ನಿರೂಪಿಸಿದರು ಮತ್ತು ಮುಂದಿನ ಜನರ ಮಾರ್ಗದರ್ಶನಕ್ಕಾಗಿ ಈ ವೇದಾಂತ ಸೂತ್ರಗಳಿಗೆ ನಿಜಭಾಷ್ಯರೂಪವಾಗಿ ವೇದವ್ಯಾಸರು ಶ್ರೀಮದ್ಭಾಗವತವನ್ನು ರಚಿಸಿದರು. ನಾವು ಈ ವೈದಿಕ ಸಾಹಿತ್ಯವನ್ನು ಓದುವುದರಲ್ಲಿ ನಮ್ಮ ಮನಸ್ಸನ್ನು ಸದಾ ತೊಡಗಿಸಬೇಕು. ಪ್ರಾಪಂಚಿಕರು ವೃತ್ತಪತ್ರಿಕೆಗಳನ್ನೂ ಅನೇಕ ಮಾಸಿಕ ಪತ್ರಿಕೆಗಳನ್ನೂ ಅಥವಾ ಇತರ ಪ್ರಾಪಂಚಿಕ ಸಾಹಿತ್ಯವನ್ನು ಓದುವುದರಲ್ಲಿ ಮನಸ್ಸನ್ನು ತೊಡಗಿಸುವಂತೆ ನಾವು ನಮಗೆ ವೇದವ್ಯಾಸರಿಂದ ದೊರೆತ ಈ ಸಾಹಿತ್ಯವನ್ನು ಓದುವಲ್ಲಿ ನಮ್ಮ ಲಕ್ಷ್ಯವನ್ನು ವರ್ಗಾಯಿಸಿಕೊಳ್ಳಬೇಕು; ಈ ರೀತಿಯಾಗಿ ಮರಣಸನ್ನಿಹಿತವಾದಾಗ ಭಗವಂತನನ್ನು ಕುರಿತು ಧ್ಯಾನಮಾಡಲು ಸಾಧ್ಯವಾಗುವುದು. ಈ ಮಾರ್ಗವನ್ನೇ ಭಗವಂತನು ಸೂಚಿಸಿದ್ದಾನೆ. "ಈ ಬಗ್ಗೆ ಸಂದೇಹವೇ ಬೇಡ" ಎಂದು ಅವನು ಭರವಸೆಯನ್ನೂ ನೀಡಿದ್ದಾನೆ.

**ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ ।**
**ಮಯ್ಯರ್ಪಿತಮನೋಬುದ್ಧಿರ್ಮಾಮೇವೈಷ್ಯಸ್ಯಸಂಶಯಃ ॥**

"ಆದ್ದರಿಂದ ಹೇ ಅರ್ಜುನ, ನೀನು ಕೃಷ್ಣನ ರೂಪದಲ್ಲಿ ಸದಾ ನನ್ನನ್ನು ಕುರಿತು ಚಿಂತನ ಮಾಡಬೇಕು ಮತ್ತು ನಿನ್ನ ನಿಯತಕರ್ತವ್ಯವಾದ ಯುದ್ಧವನ್ನೂ ಮುಂದುವರಿಸಬೇಕು. ನನಗೆ ಅರ್ಪಿತವಾದ ನಿನ್ನ ಕರ್ಮಗಳಿಂದ ಮತ್ತು ನಿನ್ನ ಮನೋಬುದ್ಧಿಗಳು ನನ್ನಲ್ಲಿ ನಿಶ್ಚಿತವಾಗಿ ನೆಲೆಗೊಂಡಾಗ ನೀನು ತಪ್ಪದೇ ನನ್ನನ್ನು ಹೊಂದುವಿ" (ಭ. ಗೀ, 8. 7)

ಕೃಷ್ಣನು ಕೇವಲ ತನ್ನನ್ನು ಸ್ಮರಿಸುತ್ತಾ ಅರ್ಜುನನು ತನ್ನ ವೃತ್ತಿಧರ್ಮವನ್ನು ಬಿಟ್ಟುಬಿಡುವಂತೆ ಕೃಷ್ಣನು ಸಲಹೆ ಮಾಡಲಿಲ್ಲ. ಭಗವಂತನು ಈ ಪ್ರಪಂಚದಲ್ಲಿ ಕಾರ್ಯಸಾಧ್ಯವಲ್ಲದ ಯಾವುದನ್ನೂ ಮಾಡಲು ಹೇಳುವುದಿಲ್ಲ. ಈ ಜಗತ್ತಿನಲ್ಲಿ ದೇಹವನ್ನು ಪೋಷಿಸಲು ಮನುಷ್ಯನು ಕರ್ಮ ಮಾಡಲೇ ಬೇಕು. ಮಾನವ ಸಮಾಜವನ್ನು ಅವರವರ

ವೃತ್ತಿ ಕರ್ಮಗಳಿಗನುಸಾರವಾಗಿ – ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂದು ನಾಲ್ಕು ವರ್ಣವಾಗಿ ವಿಂಗಡಿಸಲಾಗಿದೆ. ಬ್ರಾಹ್ಮಣರು ಎಂದರೆ ಬುದ್ಧಿ ವರ್ಗವು ಒಂದು ರೀತಿಯಲ್ಲಿ ಕೆಲಸಮಾಡುತ್ತದೆ, ಕ್ಷತ್ರಿಯ ಅಥವಾ ಆಡಳಿತ ವರ್ಗವು ಮತ್ತೊಂದು ರೀತಿಯಲ್ಲಿ ಕೆಲಸ ಮಾಡುತ್ತದೆ. ಮತ್ತು ವೈಶ್ಯರು ಮತ್ತು ಶೂದ್ರರೂ ಕೂಡ ತಮ್ಮ ತಮ್ಮ ನಿಯತ ಕರ್ಮಗಳಲ್ಲಿ ತೊಡಗಿದ್ದಾರೆ. ಹೀಗೆ ಮಾನವ ಸಮಾಜದಲ್ಲಿ, ಒಬ್ಬನು ಕಾರ್ಮಿಕನಾಗಿರಲಿ, ವರ್ತಕನಾಗಿರಲಿ, ಆಡಳಿತಗಾರನಾಗಿರಲಿ, ಅಥವಾ ಕೃಷಿಕನಾಗಿರಲಿ ಅಥವಾ ಅವನು ಅತ್ಯುನ್ನತ ವರ್ಗಕ್ಕೆ ಸೇರಿದ ಸಾಹಿತಿ, ವಿಜ್ಞಾನಿ ಅಥವಾ ದೇವತಾ ಶಾಸ್ತ್ರಜ್ಞನಾಗಿರಲಿ ಅವನು ತನ್ನ ದೇಹ ಪೋಷಣೆಗಾಗಿ ಕರ್ಮ ಮಾಡಲೇ ಬೇಕು. ಆದ್ದರಿಂದ ಅರ್ಜುನನು ತನ್ನ ವೃತ್ತಿಕರ್ಮವನ್ನು ಬಿಡುವ ಅಗತ್ಯವಿಲ್ಲ ಎಂದು ಕೃಷ್ಣನು ಹೇಳುತ್ತಾನೆ. ಆದರೆ ಅರ್ಜುನನು ಹಾಗೆ ಕರ್ಮನಿರತನಾಗಿರುವಾಗ ಕೃಷ್ಣನನ್ನು ಸ್ಮರಿಸುತ್ತಿರಬೇಕು, ಮಾಂ ಅನುಸ್ಮರ ಎಂದು ಹೇಳಿದ್ದಾನೆ. ಮನುಷ್ಯನು ತನ್ನ ಜೀವನದ ಹೋರಾಟದಲ್ಲಿ ಕೃಷ್ಣ ಸ್ಮರಣೆಯನ್ನು ರೂಢಿಸಿಕೊಳ್ಳದಿದ್ದರೆ ಅಂತ್ಯಕಾಲದಲ್ಲಿ ಕೃಷ್ಣ ಸ್ಮರಣೆ ಬರುವುದು ಅಸಾಧ್ಯ. ಭಗವಾನ್ ಚೈತನ್ಯರೂ ಕೂಡ ಇದನ್ನೇ ಸೂಚಿಸಿದ್ದಾರೆ. ಕೀರ್ತನೀಯಃ ಸದಾ ಹರಿಃ ಎಂದು ಹೇಳಿದ್ದಾರೆ. ಮನುಷ್ಯನು ಸದಾ ಕೃಷ್ಣನ ನಾಮ ಜಪ ಮಾಡುವ ಪದ್ಧತಿಯನ್ನೂ ಬೆಳಸಿಕೊಳ್ಳಬೇಕು. ಭಗವಂತನೂ, ಭಗವನ್ನಾಮಗಳೂ ಅಭಿನ್ನ. ಆದ್ದರಿಂದ "ನನ್ನ ಸ್ಮರಣೆ ಮಾಡು" ಎಂಬ ಅರ್ಜುನನಿಗೆ ಕೃಷ್ಣನು ನೀಡಿದ ಉಪದೇಶವು ಮತ್ತು "ಸದಾ ಶ್ರೀಕೃಷ್ಣ ನಾಮಜಪ ಮಾಡು" ಎಂಬ ಚೈತನ್ಯರ ಉಪದೇಶಗಳು ಒಂದೇ ಆಗಿವೆ. ಕೃಷ್ಣನೂ, ಕೃಷ್ಣನ ನಾಮಗಳೂ ಪರಸ್ಪರ ಅಭಿನ್ನವಾಗಿರುವುದರಿಂದ ಈ ವಿಷಯದಲ್ಲಿ ವ್ಯತ್ಯಾಸವೇ ಇಲ್ಲ. ಪರಮ ದೆಶೆಯಲ್ಲಿ ಉಲ್ಲೇಖ ಮತ್ತು ಉಲ್ಲೇಖಿತದಲ್ಲಿ ಭೇದವಿಲ್ಲ. ಭಗವನ್ನಾಮ ಜಪಮಾಡುತ್ತ ಮತ್ತು ನಮ್ಮ ಜೀವನ ಕರ್ಮಗಳನ್ನು ಭಗವದ್ ಚಿಂತನೆಗೆ ಅನುಕೂಲವಾಗುವಂತೆ ಬದಲಾಯಿಸಿಕೊಂಡು ನಾವು ಸದಾ, ಎಂದರೆ ದಿನದ ಇಪ್ಪತ್ತುನಾಲ್ಕು ಗಂಟೆಗಳೂ ಭಗವದ್ ಸ್ಮರಣೆ ಮಾಡುವ ರೂಢಿಯನ್ನು ಬೆಳಸಿಕೊಳ್ಳಬೇಕು.

ಇದು ಹೇಗೆ ಸಾಧ್ಯ ? ಆಚಾರ್ಯರು ಈ ಮುಂದಿನ ಉದಾಹರಣೆ ಕೊಡುತ್ತಾರೆ. ಒಬ್ಬ ವಿವಾಹಿತ ಮಹಿಳೆಯು ಮತ್ತೊಬ್ಬನಲ್ಲಿ ಅನುರಕ್ತಳಾದರೆ ಅಥವಾ ಒಬ್ಬ ಪುರುಷನು ತನ್ನ ಹೆಂಡತಿಯನ್ನು ಬಿಟ್ಟು ಬೇರೊಬ್ಬಳಲ್ಲಿ ಆಸಕ್ತನಾದರೆ ಆ ಅನುರಾಗ ಬಂಧ ಬಹಳ ಬಲವಾದುದು ಎಂದು ತಿಳಿಯಬೇಕು. ಇಂಥ ಅನುರಾಗ ಬಂಧನವಿರುವವರು ಸದಾ ತಮ್ಮ ಪ್ರಿಯರನ್ನೇ ಕುರಿತು ಚಿಂತಿಸುತ್ತಾರೆ. ಹಾಗೇ ಪರವ್ಯಕ್ತಿಯಲ್ಲಿ ಅನುರಕ್ತಳಾದವಳು ತನ್ನ ಮನೆಗೆಲಸದಲ್ಲಿ ತೊಡಗಿದಾಗಲೂ ಕೂಡ ಸದಾ ತನ್ನ ಪ್ರಿಯತಮನನ್ನು ಸೇರುವದನ್ನು ಕುರಿತು ಯೋಚಿಸುತ್ತಿರುತ್ತಾಳೆ. ಅಷ್ಟೆ ಅಲ್ಲ, ಗಂಡನಿಗೆ ಸಂಶಯ ಬಾರದಂತೆ ಅವಳು ತನ್ನ ಮನೆಗೆಲಸಗಳನ್ನು ಮತ್ತಷ್ಟು ಎಚ್ಚರಿಕೆಯಿಂದ ನಿರ್ವಹಿಸುತ್ತಾಳೆ. ಇದೇ ರೀತಿಯಾಗಿ, ನಾವು ಸದಾ ನಮ್ಮ ಪರಮಪ್ರಿಯನಾದ ಶ್ರೀಕೃಷ್ಣನನ್ನು ಕುರಿತು ಧ್ಯಾನ ಮಾಡಬೇಕು ಮತ್ತು ಜೊತೆಜೊತೆಗೆ ನಮ್ಮ ಪ್ರಾಪಂಚಿಕ ಕರ್ತವ್ಯಗಳನ್ನು ಕೂಡ ಚೊಕ್ಕಟವಾಗಿ ನಿರ್ವಹಿಸಬೇಕು.

ಇಲ್ಲಿಯೂ ಕೂಡ ಅದೇ ಬಗೆಯ ಬಲವಾದ ಸ್ನಿಗ್ಧ ಪ್ರೇಮ ಬೇಕು. ನಮ್ಮಲ್ಲಿ ದೇವರ ಬಗ್ಗೆ ಅಂಥ ಪ್ರಬಲ ಪ್ರೇಮವಿದ್ದರೆ ನಾವು ನಮ್ಮ ಸಾಮಾನ್ಯ ಕರ್ತವ್ಯಗಳನ್ನು ಮಾಡುತ್ತಲೇ ಭಗವಂತನನ್ನು ಕುರಿತು ಧ್ಯಾನಮಗ್ನರಾಗಬಹುದಾಗಿದೆ. ಆದರೆ ನಾವು ಭಗವಂತನಲ್ಲಿ ಅಂಥ ಗಾಢ ಪ್ರೀತಿಯನ್ನು ಬೆಳೆಸಿಕೊಳ್ಳಬೇಕು. ಅರ್ಜುನನು ಸದಾ ಕೃಷ್ಣನನ್ನು ಕುರಿತು ಚಿಂತನೆ ಮಾಡುತ್ತಿದ್ದನು. ಅವನು ಸದಾ ಕೃಷ್ಣಸಖನಾಗಿದ್ದನು ಮತ್ತು ಕ್ಷತ್ರಿಯನೂ ಆಗಿದ್ದನು. ಅಂತೆಯೇ ಶ್ರೀಕೃಷ್ಣನು ಅರ್ಜುನನಿಗೆ ಯುದ್ಧವನ್ನು ಬಿಟ್ಟು ಕಾಡಿಗೆ ಹೋಗಿ ತಪಸ್ಸು ಮಾಡಲು ಸೂಚಿಸಲಿಲ್ಲ. ಶ್ರೀಕೃಷ್ಣನು ಅರ್ಜುನನಿಗೆ ಯೋಗ ವಿಧಾನವನ್ನು ಕುರಿತು ವಿವರಿಸಿದಾಗ, ಅರ್ಜುನನು ಅದನ್ನು ಆಚರಿಸುವುದು ಅಸಾಧ್ಯ ಎಂದು ಹೇಳಿದನು.

**ಅರ್ಜುನ ಉವಾಚ**

**ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ ।**
**ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ ಸ್ಥಿತಿಂ ಸ್ಥಿರಾಮ್ ॥**

"ಅರ್ಜುನನು ನುಡಿದನು: ಹೇ ಮಧುಸೂದನ, ನೀನು ಹೇಳಿದ ಯೋಗ ಪದ್ಧತಿಯು ಕಾರ್ಯಸಾಧ್ಯವಲ್ಲ ಮತ್ತು ನನಗೆ ಅದು ಅಸಾಧ್ಯ ಎಂದು ತೋರುತ್ತದೆ" (ಭ.ಗೀ. 6.33). ಆದರೆ ಭಗವಂತನು ಹೀಗೆ ಹೇಳುತ್ತಾನೆ.

**ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ ।**
**ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ॥**

"ಎಲ್ಲ ಯೋಗಿಗಳಲ್ಲಿ ಮಹಾಶ್ರದ್ಧೆಯನ್ನು ಹೊಂದಿ ಸದಾ ನನ್ನಲ್ಲಿಯೇ ಸ್ಥಿರನಾಗಿರುವವನು, ಅಂತರಂಗದಲ್ಲಿಯೇ ನನ್ನನ್ನು ಧ್ಯಾನಿಸುತ್ತಾ ನನಗೆ ದಿವ್ಯ ಪ್ರೇಮಪೂರ್ವಕ ಸೇವೆ ಸಲ್ಲಿಸುವವನು, ನನ್ನೊಂದಿಗೆ ಅತ್ಯಂತ ನಿಕಟ ಯೋಗ ಸಂಪರ್ಕವನ್ನು ಹೊಂದಿದವನಾಗಿರುತ್ತಾನೆ. ಅವನೇ ಪರಮ ಯೋಗಿಯಾಗಿರುತ್ತಾನೆ. ಇದೇ ನನ್ನ ಅಭಿಪ್ರಾಯ" (ಭ. ಗೀ. 6. 47). ಆದ್ದರಿಂದ ಸದಾ ಭಗವಂತನನ್ನು ಕುರಿತು ಚಿಂತನೆ ಮಾಡುವವನೇ ಮಹಾಯೋಗಿಯೂ, ಶ್ರೇಷ್ಠ ಜ್ಞಾನಿಯೂ, ಮತ್ತು ಪರಮ ಭಗವದ್ಭಕ್ತನೂ ಆಗಿರುತ್ತಾನೆ. ಕ್ಷತ್ರಿಯನಾಗಿ ಅರ್ಜುನನು ತನ್ನ ಕರ್ತವ್ಯ ಕರ್ಮವನ್ನೂ ಬಿಡುವಂತಿಲ್ಲ, ಆದರೆ ಅರ್ಜುನನು ಯುದ್ಧ ಮಾಡುತ್ತಾ ಕೃಷ್ಣ ಧ್ಯಾನ ಮಾಡುತ್ತಿದ್ದರೆ ಅರ್ಜುನನಿಗೆ ಮರಣ ಕಾಲದಲ್ಲಿ ಕೃಷ್ಣ ಸ್ಮರಣೆ ಒದಗಬಹುದು ಎಂದೂ ಕೃಷ್ಣನು ಅರ್ಜುನನಿಗೆ ಹೇಳುತ್ತಾನೆ. ಆದರೆ ಒಬ್ಬನು ದಿವ್ಯ ಪ್ರೇಮಯುತ ಸೇವೆಯ ಮೂಲಕ ಭಗವಂತನಿಗೆ ಸಂಪೂರ್ಣ ಶರಣಾಗತನಾಗಿರಬೇಕು.

ನಾವು ನಿಜವಾಗಿ ನಮ್ಮ ದೇಹದಿಂದ ಕೆಲಸ ಮಾಡುವುದಿಲ್ಲ. ನಮ್ಮ ಮನೋಬುದ್ಧಿಗಳಿಂದ ಕೆಲಸ ಮಾಡುತ್ತೇವೆ. ಹೀಗೆ ನಮ್ಮ ಮನೋಬುದ್ಧಿಗಳು ಸದಾ ಭಗವಧ್ಯಾನದಲ್ಲಿ ನಿರತವಾಗಿದ್ದರೆ ನಮ್ಮ ಇಂದ್ರಿಯಗಳೂ ಕೂಡ ಸಹಜವಾಗಿಯೇ ಭಗವತ್ಸೇವಾ ನಿರತವಾಗುತ್ತವೆ. ಮೇಲ್ನೋಟಕ್ಕೆ ಮಾತ್ರ ನಮ್ಮ ಇಂದ್ರಿಯ ಕರ್ಮಗಳು ಮುಂಚಿ

ನಂತೆಯೇ ಇರುವಂತೆ ಕಾಣಬಹುದು. ಆದರೆ ಪ್ರಜ್ಞೆಯು ಮಾತ್ರ ಪರಿವರ್ತನವಾಗಿರುತ್ತದೆ. ಒಬ್ಬನು ತನ್ನ ಮನೋಬುದ್ಧಿಗಳನ್ನು ಹೇಗೆ ಭಗವದ್ವಿಚಾರದಲ್ಲಿ ತೊಡಗಿಸಬೇಕೆಂಬುದನ್ನು ಭಗವದ್ಗೀತೆಯು ನಮಗೆ ಬೋಧಿಸುತ್ತದೆ. ಇಂಥ ತತ್ಪರತೆಯು ಒಬ್ಬನಿಗೆ ಭಗವದ್ಧಾಮಕ್ಕೆ ಹೋಗಲು ಅನುಕೂಲ ಒದಗಿಸುತ್ತದೆ. ಮನಸ್ಸು ಕೃಷ್ಣ ಸೇವಾ ನಿರತವಾದರೆ ಇಂದ್ರಿಯಗಳು ಕೂಡ ಸ್ವಾಭಾವಿಕವಾಗಿಯೇ ಅವನ ಸೇವೆಯಲ್ಲಿಯೇ ನಿರತವಾಗುತ್ತವೆ. ಶ್ರೀಕೃಷ್ಣನನ್ನು ಕುರಿತು ಸದಾ ಪೂರ್ಣ ಚಿಂತನಪರವಾಗುವುದೇ ಒಂದು ಕಲೆ ಮತ್ತು ಗೀತಾ ರಹಸ್ಯ.

ನಮ್ಮ ಇಂದಿನ ಮಾನವನು ಚಂದ್ರಲೋಕವನ್ನು ತಲುಪಲು ಬಹಳ ಕಷ್ಟಪಟ್ಟಿದ್ದಾನೆ. ಆದರೆ ಅವನು ತನ್ನ ಆತ್ಮೋನ್ನತಿಯನ್ನು ಸಾಧಿಸಲು ಎಷ್ಟೂ ಪ್ರಯತ್ನಿಸಿಲ್ಲ. ಒಬ್ಬನಿಗೆ ಇನ್ನೂ ಐವತ್ತು ವರ್ಷಗಳಷ್ಟು ಆಯುಷ್ಯ ಇರುವುದಾದರೆ ಅವನು ಈ ಅಲ್ಪ ಕಾಲದಲ್ಲಿ ಪರಮ ದೇವೋತ್ತಮ ಪುರುಷನ ಚಿಂತನೆಯಲ್ಲಿಯೇ ನಿರತನಾಗಿರಲು ಅಭ್ಯಾಸ ಮಾಡಬೇಕು. ಈ ಅಭ್ಯಾಸವೇ ಭಕ್ತಿ ಮಾರ್ಗವಾಗಿದೆ.

**ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಮ್ ।**
**ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮ ನಿವೇದನಮ್ ॥**

(ಶ್ರೀಮದ್ಭಾಗವತ 7-5-23)

ನವ ವಿಧ ಭಕ್ತಿ ವಿಧಾನಗಳಲ್ಲಿ ಶ್ರವಣವೇ ಅತ್ಯಂತ ಸುಲಭ ವಿಧಾನವಾಗಿರುವುದು. ಸಾಕ್ಷಾತ್ಕಾರ ಹೊಂದಿದವರಿಂದ ಭಗವದ್ಗೀತಾ ಶ್ರವಣ ಮಾಡುವುದು ಒಬ್ಬನ ಮನಸ್ಸನ್ನು ಭಗವಂತನೆಡೆಗೆ ತಿರುಗಿಸುತ್ತದೆ. ಇದು ಭಗವಧ್ಯಾನಕ್ಕೆ ಮನಸ್ಸನ್ನು ಕೊಂಡೊಯ್ಯುವುದಲ್ಲದೆ ದೇಹವನ್ನು ಬಿಡುವಾಗ ಭಗವತ್ ಸಾಮೀಪ್ಯಕ್ಕೆ ಯೋಗ್ಯವಾದ ಆಧ್ಯಾತ್ಮಿಕ ದೇಹವು ದೊರೆಯಲು ಕೂಡ ಸಹಾಯಕವಾಗುವುದು.

ಭಗವಂತನು ಮುಂದುವರಿದು ಹೀಗೆ ಹೇಳುತ್ತಾನೆ ;

**ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ ।**
**ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್ ॥**

"ಮಾರ್ಗ ವಿಚಲಿತನಾಗದೆ ಸದಾ ಮನಸ್ಸನ್ನು ನನ್ನ ಚಿಂತನೆಯಲ್ಲಿ ತೊಡಗಿಸಿ ನನ್ನನ್ನು ಪರಮ ದೇವೋತ್ತಮ ಪುರುಷನೆಂದು ತಿಳಿದು ಧ್ಯಾನಿಸುವವನು, ಹೇ ಅರ್ಜುನ, ಅವನು ಖಂಡಿತವಾಗಿ ನನ್ನನ್ನು ಬಂದು ಸೇರುತ್ತಾನೆ." (ಭ. ಗೀ. 8.8)

ಇದು ಬಹಳ ಕಷ್ಟದಾಯಕವಾದ ಮಾರ್ಗವೇನಲ್ಲ. ಆದರೆ ಒಬ್ಬನು ಇದನ್ನು ಅನುಭವಿಯಿಂದ ಕಲಿತುಕೊಳ್ಳಬೇಕು. **ತದ್ ವಿಜ್ಞಾನಾರ್ಥಂ ಸ ಗುರುಮ್ ಏವಾಭಿಗಚ್ಛೇತ್** ಎಂದರೆ ಈಗಾಗಲೇ ಈ ಸಾಧನೆಯಲ್ಲಿರುವ ವ್ಯಕ್ತಿಯನ್ನು ಸಂಪರ್ಕಿಸಿ ಇದನ್ನು

ಅರಿತು ಕೊಳ್ಳಬೇಕು. ಮನಸ್ಸು ಸದಾ ಅತ್ತ ಇತ್ತ ಹಾರಾಡುತ್ತದೆ. ಆದರೆ ಒಬ್ಬನು ಮನಸ್ಸನ್ನು ಸದಾ ಶ್ರೀಕೃಷ್ಣನ ರೂಪ ಚಿಂತನೆಯಲ್ಲಿ ಅಥವಾ ಅವನ ನಾಮೋಚ್ಚಾರದಲ್ಲಿ ಕೇಂದ್ರೀಕರಿಸಬೇಕು. ಮನಸ್ಸು ಸಹಜವಾಗಿಯೇ ಅತ್ತ ಇತ್ತ ಹೊಯ್ದಾಡುತ್ತ ವಿಚಲಿತವಾಗಿರುತ್ತದೆ. ಆದರೆ ಅದು ಭಗವಂತನ ನಾಮೋಚ್ಚಾರಣೆಯಲ್ಲಿ ಶಾಂತಿಯನ್ನು ಪಡೆಯುತ್ತದೆ. ಹೀಗೆ ಒಬ್ಬನು ಭಗವದ್ಧಾಮದಲ್ಲಿ ಎಂದರೆ ಪರವ್ಯೋಮದಲ್ಲಿರುವ ಪರಮ ದೇವೋತ್ತಮ ಪುರುಷನ ಧ್ಯಾನದಲ್ಲಿ ಮಗ್ನನಾಗಿರಬೇಕು ಮತ್ತು ಭಗವತ್ಪ್ರಾಪ್ತಿಯನ್ನು ಹೊಂದಬೇಕು. ಇಂಥ ಪರಮ ಸಿದ್ಧಿಯನ್ನು, ಪರಮ ಸಾಕ್ಷಾತ್ಕಾರವನ್ನು ಹೊಂದುವ ಮಾರ್ಗವನ್ನು ಕುರಿತು ಭಗವದ್ಗೀತೆಯಲ್ಲಿ ನಿರೂಪಣೆಯಿದೆ ಮತ್ತು ಈ ಜ್ಞಾನದ ದ್ವಾರವು ಸರ್ವರಿಗಾಗಿ ತೆರೆದಿದೆ. ಯಾರಿಗೂ ಇಲ್ಲಿ ಪ್ರತಿಬಂಧಕವಿಲ್ಲ. ಅವನ ನಾಮಶ್ರವಣ ಮತ್ತು ಚಿಂತನವು ಪ್ರತಿಯೊಬ್ಬನಿಗೂ ಸಾಧ್ಯವಾಗಿರುವುದರಿಂದ ಎಲ್ಲ ಜನರೂ ಶ್ರೀಕೃಷ್ಣನನ್ನು ಕುರಿತು ಚಿಂತನೆ ಮಾಡಿ ಅವನನ್ನು ಹೊಂದಬಹುದಾಗಿದೆ.

ಭಗವಂತನು ಮತ್ತೆ ಹೀಗೆ ಹೇಳುತ್ತಾನೆ (ಭ. ಗೀ. 9.32-33)

**ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।**
**ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಮ್ ॥**
**ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ।**
**ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಮ್ ॥**

ಒಬ್ಬ ವೈಶ್ಯನು, ಪತಿತ ಸ್ತ್ರೀ ಅಥವಾ ಶೂದ್ರನು ಅಥವಾ ಅತ್ಯಂತ ಕೆಳ ವರ್ಗದ ಮಾನವನೂ ಕೂಡ ಭಗವಂತನನ್ನು ಹೊಂದಬಹುದಾಗಿದೆ ಎಂದು ಕೃಷ್ಣನು ಹೇಳುತ್ತಾನೆ. ಇದಕ್ಕೆ ಮಹಾ ಬುದ್ಧಿಯ ಅಗತ್ಯವೇನೂ ಇಲ್ಲ. ಒಟ್ಟಿನಲ್ಲಿ ಭಕ್ತಿಯೋಗದ ತತ್ತ್ವವನ್ನು ಒಪ್ಪಿ ಕೊಳ್ಳುವವನು ಮತ್ತು ಭಗವಂತನನ್ನು ಜೀವನದ ಪರಮ ಸರ್ವಸ್ವವೆಂದೂ, ಪರಮ ಗುರಿಯೆಂದೂ ಒಪ್ಪಿಕೊಳ್ಳುವವನು ಪರವ್ಯೋಮದಲ್ಲಿ ಭಗವಂತನನ್ನು ಹೊಂದಬಹುದಾಗಿದೆ. ಮನುಷ್ಯನು ಭಗವದ್ಗೀತೆಯಲ್ಲಿ ಹೇಳಿದ ತತ್ತ್ವಗಳನ್ನು ಅನುಸರಿಸಿದರೆ ಅವನು ತನ್ನ ಜೀವನವನ್ನು ಪೂರ್ಣಗೊಳಿಸಿಕೊಳ್ಳಬಹುದು ಮತ್ತು ಜೀವನದ ಸಕಲ ಸಮಸ್ಯೆಗಳಿಗೆ ಶಾಶ್ವತ ಪರಿಹಾರವನ್ನು ಕಂಡುಕೊಳ್ಳಬಹುದು. ಇದೇ ಭಗವದ್ಗೀತೆಯ ಸಾರ ಸರ್ವಸ್ವ.

ಮಥಿತಾರ್ಥವೆಂದರೆ ಭಗವದ್ಗೀತೆಯು ದಿವ್ಯ ಶಾಸ್ತ್ರವಾಗಿದೆ. ಅದನ್ನು ಬಹುಜಾಗರೂಕತೆಯಿಂದ ಓದಬೇಕು. **ಗೀತಾ ಶಾಸ್ತ್ರಂ ಇದಂ ಪುಣ್ಯಂ ಯಃ ಪಠೇತ್ ಪ್ರಯತಃ ಪುಮಾನ್.** ಒಬ್ಬನು ಸರಿಯಾದ ರೀತಿಯಲ್ಲಿ ಭಗವದ್ಗೀತೋಪದೇಶವನ್ನು ಅನುಸರಿಸಿದರೆ, ಅವನು ಸಕಲ ದುಃಖಾಕುಲಗಳಿಂದ ಮುಕ್ತನಾಗುತ್ತಾನೆ. **ಭಯಶೋಕಾದಿ ವರ್ಜಿತಃ** ಎಂದರೆ ಮನುಷ್ಯನು ಜೀವನದ ಸಕಲ ಭಯಗಳಿಂದ ಮುಕ್ತನಾಗುತ್ತಾನೆ ಮತ್ತು ಅವನ ಮುಂದಿನ ಜೀವನ ದಿವ್ಯ ಜೀವನವಾಗಿರುತ್ತದೆ (**ಗೀತಾ ಮಾಹಾತ್ಮ್ಯ**).

**ಇದಲ್ಲದೆ ಇನ್ನೂ ಪ್ರಯೋಜನವಿದೆ:**

**ಗೀತಾಧ್ಯಯನಶೀಲಸ್ಯ ಪ್ರಾಣಾಯಾಮ ಪರಸ್ಯ ಚ |**
**ನೈವ ಸಂತಿ ಹಿ ಪಾಪಾನಿ ಪೂರ್ವಜನ್ಮಕೃತಾನಿ ಚ ||**

"ಒಬ್ಬನು ಪೂರ್ಣಗಮನ ಹರಿಸಿ ಬಹಳ ಪ್ರಾಮಾಣಿಕವಾಗಿ ಗೀತಾ ಪಠನ ಮಾಡಿದರೆ ಭಗವಂತನ ಕೃಪೆಯಿಂದ ಅವನಿಗೆ ಪೂರ್ವ ಜನ್ಮದ ಪಾಪಲೇಪವು ಒದಗುವುದಿಲ್ಲ (ಗೀತಾ ಮಾಹಾತ್ಮ್ಯ 2). ಭಗವಂತನು ಭಗವದ್ಗೀತೆಯ ಕೊನೆಯಲ್ಲಿ ಬಹಳ ಉಚ್ಚ ಸ್ವರದಲ್ಲಿ ಹೀಗೆ ಹೇಳುತ್ತಾನೆ (18-66) :

**ಸರ್ವಧರ್ಮಾನ್ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ |**
**ಅಹಂ ತ್ವಾಂ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ||**

"ಎಲ್ಲ ಬಗೆಯ ಧರ್ಮಗಳನ್ನು ಪರಿತ್ಯಜಿಸಿ ಕೇವಲ ನನಗೆ ಶರಣಾಗತನಾಗು. ನಾನು ನಿನ್ನನ್ನು ಸಕಲ ಪಾಪಗಳಿಂದ ಮುಕ್ತಗೊಳಿಸುತ್ತೇನೆ. ಚಿಂತಿಸಬೇಡ." ಹೀಗೆ ಭಗವಂತನು ತನಗೆ ಶರಣಾಗತನಾದವನ ಎಲ್ಲ ಹೊಣೆಯನ್ನು ಹೊತ್ತುಕೊಳ್ಳುತ್ತಾನೆ ಮತ್ತು ಅವನನ್ನು ಸಕಲ ಪಾಪ ಕರ್ಮಗಳ ಫಲಗಳಿಂದ ರಕ್ಷಿಸುತ್ತಾನೆ.

**ಮಲಿನೇ ಮೋಚನಂ ಪುಂಸಾಂ ಜಲಸ್ನಾನಂ ದಿನೇ ದಿನೇ |**
**ಸಕೃದ್ಗೀತಾಮೃತಸ್ನಾನಂ ಸಂಸಾರ ಮಲ ನಾಶನಮ್ ||**

"ಒಬ್ಬನು ದಿನವೂ ನೀರಿನಿಂದ ಸ್ನಾನ ಮಾಡಿ ತನ್ನ ಕೊಳೆಯನ್ನು ತೊಳೆದುಕೊಳ್ಳಬಹುದು. ಆದರೆ ಮನುಷ್ಯನು ಭಗವದ್ಗೀತೆಯೆಂಬ ಪವಿತ್ರ ಗಂಗಾಜಲದಲ್ಲಿ ಒಂದು ಸಲ ಸ್ನಾನ ಮಾಡಿದರೂ ಸಾಕು, ಅವನ ಸಕಲ ಪ್ರಾಪಂಚಿಕ ಮಾಲಿನ್ಯವು ತೊಳೆದು ಹೋಗುತ್ತದೆ" (ಗೀತಾ ಮಹಾತ್ಮ್ಯ 3).

**ಗೀತಾಸುಗೀತಾಕರ್ತವ್ಯಾ ಕಿಮನ್ಯೈಃ ಶಾಸ್ತ್ರವಿಸ್ತರೈಃ |**
**ಯಾ ಸ್ವಯಂ ಪದ್ಮನಾಭಸ್ಯ ಮುಖಪದ್ಮಾದ್ವಿನಿಸ್ಸೃತಾ ||**

ಪರಮದೇವೋತ್ತಮ ಪುರುಷನಾದ ಶ್ರೀಕೃಷ್ಣನೇ ಭಗವದ್ಗೀತೆಯನ್ನು ಉಪದೇಶಿಸಿರುವುದರಿಂದ ಮನುಷ್ಯನು ಇತರ ಯಾವ ವೈದಿಕ ಸಾಹಿತ್ಯವನ್ನೂ ಓದಬೇಕಾಗಿಲ್ಲ. ಮನುಷ್ಯನು ಕೇವಲ ತದೇಕಚಿತ್ತದಿಂದ ಮತ್ತು ಬಿಡದೆ ಭಗವದ್ಗೀತಾ ಶ್ರವಣ ಮಾಡಬೇಕು ಮತ್ತು ಪಠಿಸಬೇಕು. ಇಂದಿನ ಯುಗದಲ್ಲಿ ಜನರು ಎಷ್ಟೊಂದು ಪ್ರಾಪಂಚಿಕ ಕೆಲಸಗಳಲ್ಲಿ ತೊಡಗಿರುವರೆಂದರೆ ಅವರಿಗೆ ಎಲ್ಲ ವೇದ ಶಾಸ್ತ್ರಗಳನ್ನು ಓದುವುದು ಸಾಧ್ಯವಿಲ್ಲ, ಆದರೆ ಇದು ಅವಶ್ಯವೂ ಇಲ್ಲ. ಈ ಒಂದು ಭಗವದ್ಗೀತೆಯೇ ಸಾಕು, ಇದು ಸಕಲ ವೇದಗ್ರಂಥಗಳ ಸಾರವಾಗಿದೆ. ಆದರಲ್ಲಿಯೂ ವಿಶೇಷವಾಗಿ ಇದನ್ನು ಸಾಕ್ಷಾತ್ ಪರಮದೇವೋತ್ತಮ ಪುರುಷನೇ ಬೋಧಿಸಿದ್ದಾನೆ (ಗೀತಾ ಮಹಾತ್ಮ್ಯ 4) ಮತ್ತು ಹೀಗೆ ಹೇಳಿದೆ :

**ಭಾರತಾಮೃತಸರ್ವಸ್ವಂ ವಿಷ್ಣುವಕ್ತ್ರಾದ್ವಿನಿಸ್ಸೃತಮ್ ।**
**ಗೀತಾಗಂಗೋದಕಂ ಪೀತ್ವಾ ಪುನರ್ಜನ್ಮ ನ ವಿದ್ಯತೇ ॥**

"ಗಂಗಾಜಲಪಾನ ಮಾಡಿದವನೇ ಮೋಕ್ಷವನ್ನು ಹೊಂದುವನೆಂದ ಮೇಲೆ ಭಗವದ್ಗೀತಾ ಮೃತ ಪಾನಮಾಡಿದವನ ವಿಷಯ ಬೇರೆ ಹೇಳಬೇಕೆ ? ಭಗವದ್ಗೀತೆ ಎಂಬುದು ಮಹಾ ಭಾರತದ ಅಮೃತಸಾರವೇ ಆಗಿದೆ ಮತ್ತು ಅದನ್ನು ಮೂಲ ವಿಷ್ಣು ಸ್ವರೂಪಿಯಾದ ಶ್ರೀಕೃಷ್ಣನೇ ನುಡಿದಿದ್ದಾನೆ" (ಗೀತಾ ಮಹಾತ್ಮ್ಯ 5). ಭಗವದ್ಗೀತೆಯು ಪರಮ ದೇವೋತ್ತಮ ಪುರುಷನ ಮುಖದಿಂದಲೇ ಇಳಿದು ಬಂದಿದೆ. ಗಂಗೆಯು ಭಗವಂತನ ಚರಣಗಳಿಂದ ಉದ್ಭವಿಸಿದ್ದಾಳೆ ಎಂದು ಹೇಳುತ್ತಾರೆ. ಭಗವಂತನ ಮುಖಕ್ಕೂ ಚರಣ ಗಳಿಗೂ ಯಾವ ಭೇಧವೂ ಇಲ್ಲ ಎಂಬುದು ನಿಜ, ಆದರೆ ಒಂದು ನಿಷ್ಪಕ್ಷಪಾತ ದೃಷ್ಟಿಯಿಂದ ನೋಡಿದಾಗ ಭಗವದ್ಗೀತೆಯು ಗಂಗಾಜಲಕ್ಕಿಂತ ಮಹತ್ವದಲ್ಲಿ ಒಂದು ತೂಕ ಹೆಚ್ಚಾಗಿದೆ ಯೆಂದು ಹೇಳಬಹುದು.

**ಸರ್ವೋಪನಿಷದೋಗಾವೋ ದೋಗ್ಧಾ ಗೋಪಾಲನಂದನಃ ।**
**ಪಾರ್ಥೋವತ್ಸಸ್ಸುಧೀಭೋಕ್ತಾ ದುಗ್ಧಂ ಗೀತಾಮೃತಂ ಮಹತ್ ॥**

"ಗೀತೋಪನಿಷತ್ತು ಎಂದು ಕರೆಯಲ್ಪಡುವ ಈ ಭಗವದ್ಗೀತೆಯು ಸಕಲ ಉಪ ನಿಷತ್ತುಗಳ ಸಾರವಾಗಿದೆ. ಇದು ಒಂದು ಗೋವಿನಂತಿದೆ. ಗೋಪಾಲಕನೆಂದು ಪ್ರಸಿದ್ಧ ನಾದ ಶ್ರೀಕೃಷ್ಣನು ಈ ಗೋವಿನ ಹಾಲು ಕರೆಯುತ್ತಿದ್ದಾನೆ. ಅರ್ಜುನನೇ ಗೋವತ್ಸ (ಹಸುವಿನ ಕರು) ಮತ್ತು ಶಾಸ್ತ್ರಪಾರಂಗತರು ಮತ್ತು ಶುದ್ಧ ಭಕ್ತರು ಭಗವದ್ಗೀತಾಮೃತ ವೆಂಬ ಕ್ಷೀರಪಾನ ಮಾಡಬೇಕು" (ಗೀತಾಮಹಾತ್ಮ್ಯ 6).

**ಏಕಂ ಶಾಸ್ತ್ರಂ ದೇವಕೀಪುತ್ರಗೀತಮ್**
**ಏಕೋ ದೇವೋ ದೇವಕೀಪುತ್ರ ಏವ ।**
**ಏಕೋ ಮಂತ್ರಸ್ತಸನಾಮಾನಿ ಯಾನಿ**
**ಕರ್ಮಾಪ್ಯೇಕಂ ತಸ್ಯ ದೇವಸ್ಯ ಸೇವಾ ॥**

(ಗೀತಾಮಹಾತ್ಮ್ಯ 7)

ಇಂದಿನ ಈ ಕಾಲದಲ್ಲಿ, ಜನರು ಒಂದೇ ಶಾಸ್ತ್ರ, ಒಬ್ಬನೇ ದೇವರು, ಒಂದು ಧರ್ಮ, ಒಂದೇ ವೃತ್ತಿ ಇರಬೇಕೆಂದು ಕಾತುರರಾಗಿ ಬಯಸುತ್ತಿದ್ದಾರೆ. ಆದ್ದರಿಂದ **ಏಕಂ ಶಾಸ್ತ್ರಂ ದೇವಕೀ ಪುತ್ರ ಗೀತಮ್** ಎಂದೇ ಹೇಳಲಾಗಿದೆ. ಇಡೀ ವಿಶ್ವಕ್ಕೆ ಕೇವಲ ಒಂದೇ ಸಾಮಾನ್ಯ ಶಾಸ್ತ್ರವಿರಲಿ, ಅದೇ ಭಗವದ್ಗೀತೆ. **ಏಕೋದೇವೋ ದೇವಕೀ ಪುತ್ರ ಏವ,** ಇಡೀ ವಿಶ್ವಕ್ಕೆ ಒಬ್ಬನೇ ದೇವನಿರಲಿ–ಅವನೇ ಶ್ರೀಕೃಷ್ಣ. **ಏಕೋ ಮಂತ್ರಸ್ತ ಸ್ಯ ನಾಮಾನಿ** — ಮತ್ತು ಒಂದೇ ಮಂತ್ರ, ಒಂದೇ ಪ್ರಾರ್ಥನೆ ಇರಲಿ — ಅದೇ ಅವನ ನಾಮ ಜಪ: ಹರೇ ಕೃಷ್ಣ,

ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ । ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ. **ಕರ್ಮಾಣ್ಯೇಕಂ ತಸ್ಯ ದೇವಸ್ಯ ಸೇವಾ,** ಒಂದೇ ಬಗೆಯ ಕರ್ಮವಿರಲಿ — ಅದೇ ಪರಮದೇವೋತ್ತಮ ಪುರುಷನಾದ ಕೃಷ್ಣಸೇವೆಯಾಗಿರಲಿ.

## ಗುರು ಪರಂಪರೆ

**ಏವಂ ಪರಂಪರಾ ಪ್ರಾಪ್ತಮ್ ಇಮಂ ರಾಜರ್ಷಯೋವಿದುಃ** (ಭ.ಗೀ. 4. 2) **ಈ ಭಗವದ್ಗೀತಾ ಯಥಾರೂಪವು** ಕೆಳಗೆ ಕೊಟ್ಟಿರುವ ಗುರು ಪರಂಪರೆಯ ಮೂಲಕ ಪ್ರಾಪ್ತವಾಗಿದೆ.

1. ಕೃಷ್ಣ
2. ಬ್ರಹ್ಮ
3. ನಾರದ
4. ವ್ಯಾಸ
5. ಮಧ್ವ
6. ಪದ್ಮನಾಭ
7. ನೃಹರಿ
8. ಮಾಧವ
9. ಅಕ್ಷೋಭ್ಯ
10. ಜಯ ತೀರ್ಥ
11. ಜ್ಞಾನಸಿಂಧು
12. ದಯಾನಿಧಿ
13. ವಿದ್ಯಾನಿಧಿ
14. ರಾಜೇಂದ್ರ
15. ಜಯಧರ್ಮ
16. ಪುರುಷೋತ್ತಮ
17. ಬ್ರಹ್ಮಣ್ಯ ತೀರ್ಥ
18. ವ್ಯಾಸ ತೀರ್ಥ
19. ಲಕ್ಷ್ಮೀಪತಿ
20. ಮಾಧವೇಂದ್ರ ಪುರೀ
21. ಈಶ್ವರ ಪುರೀ (ನಿತ್ಯಾನಂದ, ಅದ್ವೈತ)
22. ಭಗವಾನ್ ಚೈತನ್ಯ
23. ರೂಪ, (ಸ್ವರೂಪ, ಸನಾತನ)
24. ರಘುನಾಥ, ಜೀವ
25. ಕೃಷ್ಣದಾಸ
26. ನರೋತ್ತಮ
27. ವಿಶ್ವನಾಥ
28. (ಬಲದೇವ), ಜಗನ್ನಾಥ
29. ಭಕ್ತಿವಿನೋದ
30. ಗೌರಕಿಶೋರ
31. ಭಕ್ತಿಸಿದ್ಧಾಂತ ಸರಸ್ವತೀ
32. ಎ. ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದ

# ಅಧ್ಯಾಯ ಒಂದು



# ಕುರುಕ್ಷೇತ್ರ ರಣಾಂಗಣದಲ್ಲಿ ಸೇನಾವೀಕ್ಷಣೆ

**ಧೃತರಾಷ್ಟ್ರ ಉವಾಚ**

**ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾಯುಯುತ್ಸವಃ ।**
**ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ ॥೧॥**

ಧೃತರಾಷ್ಟ್ರಃ ಉವಾಚ – ಧೃತರಾಷ್ಟ್ರ ರಾಜನು ನುಡಿದನು, ಧರ್ಮಕ್ಷೇತ್ರೇ–ಯಾತ್ರಾ ಸ್ಥಳದಲ್ಲಿ, ಕುರುಕ್ಷೇತ್ರೇ – ಕುರುಕ್ಷೇತ್ರವೆಂಬ ಸ್ಥಳದಲ್ಲಿ, ಸಮವೇತಾಃ – ಸೇರಿದ, ಯಯುತ್ಸವಃ – ಯುದ್ಧಾಪೇಕ್ಷೆಯಿಂದ, ಮಾಮಕಾಃ – ನನ್ನ ಪಕ್ಷದವರು (ಪುತ್ರರು), ಪಾಂಡವಾಃ – ಪಾಂಡುಪುತ್ರರು, ಚ - ಮತ್ತು, ಏವ – ಖಂಡಿತವಾಗಿ, ಕಿಂ – ಏನು, ಅಕುರ್ವತ - ಅವರು ಮಾಡಿದರು, ಸಂಜಯ - ಹೇ ಸಂಜಯನೇ.

**ಧೃತರಾಷ್ಟ್ರನು ನುಡಿದನು: ಹೇ ಸಂಜಯನೇ, ನನ್ನ ಪುತ್ರರೂ ಮತ್ತು ಪಾಂಡು ಪುತ್ರರೂ, ಯುದ್ಧಾಪೇಕ್ಷೆಯಿಂದ ಯಾತ್ರಾಸ್ಥಳವಾದ ಕುರುಕ್ಷೇತ್ರದಲ್ಲಿ ಸೇರಿ ಏನು ಮಾಡಿದರು?**

**ಭಾವಾರ್ಥ:** ಭಗವದ್ಗೀತೆಯು ಬಹುಶ್ರುತ ದೈವೀವಿಜ್ಞಾನದ ಗ್ರಂಥವಾಗಿದ್ದು, ಅದನ್ನು ಗೀತಾಮಹಾತ್ಮ್ಯದಲ್ಲಿ ಸಾರರೂಪವಾಗಿ ವರ್ಣಿಸಲಾಗಿದೆ. ಮನುಷ್ಯನು ಕೃಷ್ಣ-ಭಕ್ತನ ಸಹಾಯದಿಂದ ಈ ಗ್ರಂಥವನ್ನು ಬಹು ವಿಚಾರಪೂರ್ಣವಾಗಿ ಪಠನ ಮಾಡಬೇಕು ಮತ್ತು ವೈಯಕ್ತಿಕ ಪ್ರೇರಿತ ಅರ್ಥಗಳನ್ನು ಮಾಡದೆ ಅದನ್ನು ತಿಳಿದುಕೊಳ್ಳಲು ಪ್ರಯತ್ನಿಸಬೇಕು ಎಂದು ಅಲ್ಲಿ ಹೇಳಲಾಗಿದೆ. ಅರ್ಜುನನು ಭಗವದ್ಗೀತೆಯನ್ನು ನೇರವಾಗಿ ಭಗವಂತನಿಂದಲೇ ಶ್ರವಣ ಮಾಡಿದನು. ಅರ್ಜುನನು ಶ್ರವಣಮಾಡಿ ಅದನ್ನು ಸ್ಪಷ್ಟವಾಗಿ ಅರಿತುಕೊಂಡ ಉದಾಹರಣೆ ಸ್ವತಃ ಭಗವದ್ಗೀತೆಯಲ್ಲಿಯೇ ಸಿಕ್ಕುತ್ತದೆ. ಒಬ್ಬನು ವೈಯಕ್ತಿಕ ಪ್ರೇರಿತ ಅರ್ಥಗಳಿಗೆ ಕೈ ಹಾಕದೆ ಗುರುಪರಂಪರೆಯಲ್ಲಿ ಸಾಗಿ ಬಂದಿರುವಂತೆ ಭಗವದ್ಗೀತೆಯನ್ನು ಅರ್ಥ ಮಾಡಿಕೊಳ್ಳುವಷ್ಟು ಭಾಗ್ಯವಂತನಾಗಿದ್ದರೆ, ಅವನು ಸಕಲ ವೇದ ಜ್ಞಾನ ಮತ್ತು ವಿಶ್ವದ ಸಕಲ ಶಾಸ್ತ್ರಗಳ ಅಧ್ಯಯನವನ್ನು ಉತ್ಕ್ರಮಿಸಿದವನಾಗಿರುತ್ತಾನೆ. ಇತರ ಎಲ್ಲ ಶಾಸ್ತ್ರಗಳಲ್ಲಿರುವ ವಿಷಯಗಳು ಭಗವದ್ಗೀತೆಯಲ್ಲಿ ಉಕ್ತವಾಗಿವೆ. ಅಲ್ಲದೆ ಬೇರೆಡೆ ಸಿಕ್ಕದ ವಿಷಯಗಳೂ ಕೂಡಾ ಅಲ್ಲಿ ಸಿಕ್ಕುತ್ತವೆ. ಇದೇ ಗೀತೆಯ ವಿಶೇಷ ಮಹತ್ವ. ಗೀತೆಯನ್ನು

ಪರಮ ದೇವೋತ್ತಮ ಪುರುಷನಾದ ಶ್ರೀ ಕೃಷ್ಣನೇ ಬೋಧಿಸಿರುವುದರಿಂದ, ಅದು ಪರಿಪೂರ್ಣವಾದ ಭಗವದ್ ವಿಜ್ಞಾನವಾಗಿದೆ.

ಮಹಾಭಾರತದಲ್ಲಿ ಧೃತರಾಷ್ಟ್ರ ಮತ್ತು ಸಂಜಯರು ಚರ್ಚಿಸಿದ ವಿಷಯಗಳು, ಈ ಮಹಾ ವೇದಾಂತದ ಮೂಲ ತತ್ವಗಳಾಗಿವೆ. ವೇದ ಕಾಲದಿಂದ ಧರ್ಮಕ್ಷೇತ್ರವೆನಿಸಿದ ಪವಿತ್ರವಾದ ಕುರುಕ್ಷೇತ್ರ ಯುದ್ಧಭೂಮಿಯಲ್ಲಿ ಈ ವೇದಾಂತವು ಮೂಡಿ ಬಂತೆಂದು ಹೇಳಲಾಗಿದೆ. ಭಗವಂತನು ಮಾನವ ಕುಲದ ಮಾರ್ಗ ದರ್ಶನಕ್ಕಾಗಿ ಸ್ವಯಂ ಈ ಭೂಲೋಕಕ್ಕೆ ಬಂದಾಗ ಸಾಕ್ಷಾತ್ತಾಗಿ ಗೀತೆಯನ್ನು ಬೋಧಿಸಿದ್ದಾನೆ.

ಧರ್ಮಕ್ಷೇತ್ರ ಎಂಬ ಪದವು, ಕುರುಕ್ಷೇತ್ರ ಯುದ್ಧ ಭೂಮಿಯಲ್ಲಿ ಅರ್ಜುನ ಪಕ್ಷ ವಹಿಸಿ ಸಾಕ್ಷಾತ್ ಭಗವಂತನೇ ಬಂದದ್ದರಿಂದ, ಬಹಳ ಮಹತ್ವದ್ದಾಗಿದೆ (ಧರ್ಮಕ್ಷೇತ್ರ ಎಂದರೆ ಧರ್ಮ ಕಾರ್ಯಗಳು ನಡೆಯುವ ಸ್ಥಳ). ಕೌರವರ ತಂದೆಯಾದ ಧೃತರಾಷ್ಟ್ರನು ತನ್ನ ಪುತ್ರರ ಅಂತಿಮ ವಿಜಯದ ಬಗ್ಗೆ ಬಹಳ ಸಂದೇಹಕ್ಕೆ ಒಳಗಾಗಿದ್ದನು. ಹೀಗೆ ಸಂದೇಹಕ್ಕೆ ಒಳಗಾಗಿ, "ಅವರು ಏನು ಮಾಡಿದರು" ಎಂದು ತನ್ನ ಸಚಿವನಾದ ಸಂಜಯನನ್ನು ಕೇಳಿದನು. ತನ್ನ ಪುತ್ರರೂ ಮತ್ತು ತನ್ನ ಕಿರಿಯ ಸೋದರನಾದ ಪಾಂಡುವಿನ ಪುತ್ರರೂ ಯುದ್ಧ ಕೃತನಿಶ್ಚಯರಾಗಿ ಕುರುಕ್ಷೇತ್ರ ರಣಾಂಗಣದಲ್ಲಿ ಸೇರಿದ್ದಾರೆ ಎಂಬುದು ಅವನಿಗೆ ಗೊತ್ತಿತ್ತು. ಆದರೂ, ಅವನು ಕೇಳಿದ ಪ್ರಶ್ನೆ ಮಹತ್ವದ್ದಾಗಿತ್ತು. ಭ್ರಾತೃ ವರ್ಗದವರಲ್ಲಿ ಸಂಧಾನವಾಗುವುದು ಅವನಿಗೆ ಬೇಕಿರಲಿಲ್ಲ ಮತ್ತು ಯುದ್ಧ ಭೂಮಿಯಲ್ಲಿ ತನ್ನ ಮಕ್ಕಳ ಗತಿ ಏನಾಗುವುದು ಎಂಬುದನ್ನು ಅವನು ಖಚಿತವಾಗಿ ತಿಳಿಯ ಬಯಸಿದ್ದನು. ಯುದ್ಧವು ಕುರುಕ್ಷೇತ್ರದಲ್ಲಿ ನಡೆಯಬೇಕೆಂದು ಏರ್ಪಾಡಾಗಿದ್ದಿತು. ಕುರುಕ್ಷೇತ್ರವು ಸ್ವರ್ಗಾಧಿಪತಿಗಳಿಗೂ ಪೂಜಾರ್ಹವಾಗಿತ್ತು ಎಂದು ವೇದಗಳಲ್ಲಿ ಬೇರೆಡೆಗೆ ಹೇಳಲಾಗಿದೆ. ಪವಿತ್ರ ಸ್ಥಳದ ಪ್ರಭಾವವು ಯುದ್ಧದ ಪರಿಣಾಮದ ಮೇಲೆ ಆಗಬಹುದೆಂದು ಧೃತರಾಷ್ಟ್ರನು ಬಹಳ ಭಯಗೊಂಡಿದ್ದನು. ಆ ಸ್ಥಳವು ಅರ್ಜುನ ಮತ್ತು ಪಾಂಡುಪುತ್ರರಿಗೆ ಅನುಕೂಲಕರವಾದ ಪರಿಣಾಮವನ್ನು ಬೀರುವುದೆಂಬುದು ಅವನಿಗೆ ಚೆನ್ನಾಗಿ ಗೊತ್ತಿತ್ತು, ಏಕೆಂದರೆ ಪಾಂಡವರೆಲ್ಲರೂ ಧರ್ಮಪರಾಯಣರಾಗಿದ್ದರು. ಸಂಜಯನು ವ್ಯಾಸರ ಶಿಷ್ಯನಾಗಿದ್ದನು. ಅಂತೆಯೇ ಅವನು ಧೃತರಾಷ್ಟ್ರನ ಕೋಣೆಯಲ್ಲಿ ಕುಳಿತರೂ ವ್ಯಾಸರ ಅನುಗ್ರಹದಿಂದ ಯುದ್ಧಭೂಮಿಯಲ್ಲಿ ನಡೆಯುತ್ತಿರುವುದನ್ನೆಲ್ಲಾ ಕಾಣಲು ಸಮರ್ಥನಾಗಿದ್ದನು. ಧೃತರಾಷ್ಟ್ರನು ಯುದ್ಧ ಭೂಮಿಯಲ್ಲಿಯ ಪರಿಸ್ಥಿತಿ ಹೇಗಿದೆ ಎಂದು ಸಂಜಯನನ್ನು ಕೇಳಿದನು.

ಪಾಂಡವರು ಮತ್ತು ಧೃತರಾಷ್ಟ್ರನ ಪುತ್ರರು ಒಂದೇ ಕುಟುಂಬಕ್ಕೆ ಸೇರಿದವರಾಗಿದ್ದರು. ಆದರೆ, ಇಲ್ಲಿ ಧೃತರಾಷ್ಟ್ರನ ಮನಸ್ಸು ವ್ಯಕ್ತವಾಗಿದೆ. ಅವನು ಕೇವಲ ತನ್ನ ಪುತ್ರರನ್ನು ಮಾತ್ರ ಕುರುಗಳೆಂದು ಕರೆದನು. ಪಾಂಡು ಪುತ್ರರನ್ನು ತನ್ನ ಕುಟುಂಬದ ವಂಶ ಶಾಖೆಯಿಂದ ಪ್ರತ್ಯೇಕ ಮಾಡಿದ್ದನು. ಇದರಿಂದ ಧೃತರಾಷ್ಟ್ರನು ತನ್ನ ಭ್ರಾತೃ ಪುತ್ರರೊಂದಿಗೆ ಎಂದರೆ ಪಾಂಡವರೊಂದಿಗೆ ಹೊಂದಿದ್ದ ಸಂಬಂಧವನ್ನು ಅರಿತುಕೊಳ್ಳಬಹುದು. ಭತ್ತದ ಗದ್ದೆಯಿಂದ ಅನವಶ್ಯಕವಾದ ಕಳೆಯನ್ನು ಕಿತ್ತು ಎಸೆಯುವಂತೆ, ಕುರುಕ್ಷೇತ್ರ ಧರ್ಮ ಯುದ್ಧಭೂಮಿಯಿಂದ, ಧರ್ಮದ ತಂದೆಯಾದ ಶ್ರೀ ಕೃಷ್ಣನು ಅಲ್ಲಿ ಇದ್ದು, ಅಲ್ಲಿಂದ ಅನ

**ಪೋಷಿತರಾದ** ಧೃತರಾಷ್ಟ್ರನ ಮಗ ದುರ್ಯೋಧನ ಮತ್ತು ಇತರರನ್ನು ಕಿತ್ತೆಸೆದು ಯುಧಿಷ್ಠಿರನ **ನಾಯಕತ್ವ**ದಲ್ಲಿ, ಸಂಪೂರ್ಣ ಧರ್ಮ ಸ್ವಭಾವದವರನ್ನು ಸ್ಥಾಪಿಸುವನೆಂಬುದೇ ಮುಂಚಿನಿಂದಲೂ ಏರೀಕ್ಷಿಸಿದ ವಿಷಯವಾಗಿದೆ. ಇದು ಐತಿಹಾಸಿಕ ಮತ್ತು ವೈದಿಕ ಮಹತ್ವವಲ್ಲದೆ **ಧರ್ಮಕ್ಷೇತ್ರೇ** ಮತ್ತು **ಕುರುಕ್ಷೇತ್ರೇ** ಎಂಬ ಪದಗಳ ಪ್ರಯೋಗದ ಮಹತ್ವವೂ ಆಗಿದೆ.

**ಸಂಜಯ ಉವಾಚ**

> **ದೃಷ್ಟ್ವಾ ತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ ।**
> **ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ ॥೨॥**

ಸಂಜಯ ಉವಾಚ - ಸಂಜಯನು ಹೇಳಿದನು, ದೃಷ್ಟ್ವಾ - ನೋಡಿದ ಬಳಿಕ, ತು - ಆದರೆ, ಪಾಂಡವ ಅನೀಕಂ - ಪಾಂಡವರ ಸೈನಿಕರನ್ನು, ವ್ಯೂಢಂ - ಸೇನಾ ವ್ಯೂಹದಲ್ಲಿ ನಿಂತಿದ್ದ, ದುರ್ಯೋಧನಃ - ದುರ್ಯೋಧನ ಮಹಾರಾಜನು, ತದಾ - ಆ ಸಮಯದಲ್ಲಿ, ಆಚಾರ್ಯಂ - ಆಚಾರ್ಯರನ್ನು (ಗುರುಗಳನ್ನು), ಉಪ ಸಂಗಮ್ಯ - ಸಮೀಪಿಸಿ, ರಾಜಾ- ರಾಜನು, ವಚನಂ - ವಚನಗಳನ್ನು, ಅಬ್ರವೀತ್ - ನುಡಿದನು.

**ಸಂಜಯನು ಹೇಳಿದನು:**

**ಹೇ ರಾಜನ್, ಪಾಂಡು ಪುತ್ರರು ಸೇನಾ ವ್ಯೂಹದಲ್ಲಿ ನಿಲ್ಲಿಸಿದ್ದ ಸೈನಿಕರನ್ನು ಕಂಡು ದುರ್ಯೋಧನ ಮಹಾರಾಜನು ಆಚಾರ್ಯರ ಬಳಿಗೆ ಹೋಗಿ ಕೆಳಕಂಡಂತೆ ನುಡಿದನು.**

**ಭಾವಾರ್ಥ :** ಧೃತರಾಷ್ಟ್ರನು ಹುಟ್ಟು ಕುರುಡನು, ದುರ್ದೈವದಿಂದ ಅವನಿಗೆ ಜ್ಞಾನ ದೃಷ್ಟಿಯೂ ಇರಲಿಲ್ಲ. ಅವನ ಪುತ್ರರೂ ಕೂಡ ಧರ್ಮದ ವಿಷಯದಲ್ಲಿ ಅಷ್ಟೇ ಕುರುಡರಾಗಿದ್ದರೆಂಬುದು ಅವನಿಗೆ ತಿಳಿದಿತ್ತು, ಮತ್ತು ಹುಟ್ಟಿದಾಗಿನಿಂದಲೇ ಅತ್ಯಂತ ಧರ್ಮಿಷ್ಠರಾದ ಪಾಂಡವರೊಂದಿಗೆ ಅವರು ಎಂದೂ ಸಹಮತಕ್ಕೆ ಬರುವುದಿಲ್ಲ ಎಂಬುದು ಕೂಡ ಅವನಿಗೆ ಖಚಿತವಾಗಿತ್ತು. ಆದರೂ ಧರ್ಮ ಕ್ಷೇತ್ರದ ಪ್ರಭಾವದ ಬಗ್ಗೆ ಅವನಿಗೆ ಇನ್ನೂ ಸಂದೇಹ ಉಳಿದಿತ್ತು ಮತ್ತು ಧೃತರಾಷ್ಟ್ರನು ಯುದ್ಧ ಭೂಮಿಯ ಆಗಿನ ಪರಿಸ್ಥಿತಿಯನ್ನು ಕುರಿತು ವಿಚಾರ ಮಾಡಿದ್ದರಿಂದಲೇ ಸಂಜಯನು ಅವನ ಮನೋಗತವನ್ನು ಅರಿತುಕೊಂಡನು. ಆದ್ದರಿಂದ, ಸಂಜಯನು ಆ ಹತಾಶನಾದ ಧೃತರಾಷ್ಟ್ರನಿಗೆ ಧೈರ್ಯ ತಂದುಕೊಟ್ಟು ಅವನ ಪುತ್ರರು ಆ ಪವಿತ್ರ ಸ್ಥಳದ ಪ್ರಭಾವಕ್ಕೊಳಗಾಗಿ ಪಾಂಡರೊಂದಿಗೆ ಯಾವುದೇ ಬಗೆಯ ರಾಜಿಯನ್ನು ಮಾಡಿಕೊಳ್ಳುವುದಿಲ್ಲವೆಂದು ಭರವಸೆ ನೀಡಿದನು. ಅಂತೆಯೇ ಸಂಜಯನು ಧೃತರಾಷ್ಟ್ರ ಪುತ್ರ ದುರ್ಯೋಧನನು ಪಾಂಡವರ ಸೇನಾಬಲವನ್ನು ಕಂಡೊಡನೆಯೇ ನಿಜ ಸ್ಥಿತಿಯನ್ನು ಅರುಹಲು ಸೇನಾಪತಿಗಳಾದ ದ್ರೋಣಾಚಾರ್ಯರ ಬಳಿಗೆ ಹೋದನೆಂದು ಧೃತರಾಷ್ಟ್ರನಿಗೆ ತಿಳಿಸಿದನು. ದುರ್ಯೋಧನನನ್ನು ಮಹಾರಾಜನೆಂದು ಹೇಳಲಾಗಿದ್ದರೂ,

ಗಂಭೀರ ಪರಿಸ್ಥಿತಿಯ ಕಾರಣದಿಂದಾಗಿ ಅವನು ಸೇನಾಪತಿಯ ಬಳಿಗೆ ಹೋಗಲೇಬೇಕಾಯಿತು. ಅಂತೂ ಅವನು ರಾಜಕಾರಣಿಯಾಗಲು ಯೋಗ್ಯನಾಗಿದ್ದನು. ಆದರೆ ಪಾಂಡವರ ಸೇನಾಬಲದ ವ್ಯೂಹವನ್ನು ನೋಡಿದ ಬಳಿಕ ದುರ್ಯೋಧನನ ರಾಜಕೀಯ ಚತುರತೆಗೂ ಕೂಡ ಅವನ ಭಯವನ್ನು ಮರೆಮಾಚಲು ಸಾಧ್ಯವಾಗಲಿಲ್ಲ.

**ಪಶ್ಯೈತಾಂ ಪಾಂಡುಪುತ್ರಾಣಾಮಾಚಾರ್ಯ ಮಹತೀಂ ಚಮೂಮ್ ।**
**ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ ॥ ೩ ॥**

ಪಶ್ಯ—ನೋಡಿ, ಏತಾಂ—ಈ, ಪಾಂಡುಪುತ್ರಾಣಾಂ—ಪಾಂಡುಪುತ್ರರ, ಆಚಾರ್ಯ—ಹೇ ಆಚಾರ್ಯರೇ, ಮಹತೀಂ—ಮಹಾ, ಚಮೂಮ್—ಸೇನಾಬಲವನ್ನು, ವ್ಯೂಢಾಂ—ವ್ಯೂಹಗೊಂಡಿರುವ, ದ್ರುಪದ ಪುತ್ರೇಣ—ದ್ರುಪದ ಪುತ್ರನಿಂದ, ತವ—ನಿಮ್ಮ, ಶಿಷ್ಯೇಣ—ಶಿಷ್ಯನಿಂದ, ಧೀಮತಾ—ಬಹಳ ಬುದ್ಧಿವಂತನಾದ.

**ಹೇ ಆಚಾರ್ಯರೇ, ನಿಮ್ಮ ಬುದ್ಧಿವಂತ ಶಿಷ್ಯನಾದ, ದ್ರುಪದಪುತ್ರನು ಸುಸಜ್ಜಿತಗೊಳಿಸಿರುವ ಪಾಂಡು ಪುತ್ರರ ಮಹಾ ಸೈನ್ಯವನ್ನು ನೋಡಿ.**

**ಭಾವಾರ್ಥ :** ರಾಜಕಾರಣಿಯಾದ ದುರ್ಯೋಧನನು ಸೇನಾಪತಿಯಾದ ಮಹಾ ಬ್ರಾಹ್ಮಣ ದ್ರೋಣಾಚಾರ್ಯರ ದೋಷಗಳನ್ನು ಎತ್ತಿ ತೋರಿಸಬಯಸಿದನು. ದ್ರೋಣಾಚಾರ್ಯರು ಅರ್ಜುನನ ಹೆಂಡತಿ ದ್ರೌಪದಿಯ ತಂದೆಯಾದ ದ್ರುಪದರಾಜನೊಂದಿಗೆ ಕೆಲವು ರಾಜಕೀಯ ಕದನದಲ್ಲಿ ತಿಕ್ಕಾಟವಾಡಿದ್ದರು. ಈ ಕದನದಿಂದಾಗಿ ದ್ರುಪದ ರಾಜನು ಒಂದು ಮಹಾ ಯಜ್ಞವನ್ನು ಆಚರಿಸಿದನು. ತತ್ಫಲವಾಗಿ ದ್ರೋಣಾಚಾರ್ಯರನ್ನು ಕೊಲ್ಲಬಲ್ಲ ಮಗನು ಅವನಿಗೆ ಹುಟ್ಟುವನೆಂದು ವರ ದೊರಕಿತ್ತು. ಇದು ದ್ರೋಣಾಚಾರ್ಯರಿಗೆ ಸಂಪೂರ್ಣವಾಗಿ ಗೊತ್ತಿತ್ತು. ಆದರೂ ತಮ್ಮ ಬಳಿಗೆ ಸೈನ್ಯ ಶಿಕ್ಷಣಕ್ಕಾಗಿ ಬಂದ ದ್ರುಪದನ ಮಗನಾದ ಧೃಷ್ಟದ್ಯುಮ್ನನಿಗೆ ಒಬ್ಬ ಉದಾರ ಬ್ರಾಹ್ಮಣರಾಗಿ ಅವರು ತಮ್ಮ ಎಲ್ಲ ಸೇನಾ ವಿದ್ಯೆಯ ರಹಸ್ಯಗಳನ್ನು ತಿಳಿಸಲು ಹಿಂದೆ ಮುಂದೆ ನೋಡಲಿಲ್ಲ. ಕುರುಕ್ಷೇತ್ರ ಯುದ್ಧಭೂಮಿಯಲ್ಲಿ ಧೃಷ್ಟದ್ಯುಮ್ನನು ಪಾಂಡವರ ಪಕ್ಷ ವಹಿಸಿದನು. ಅವನು ದ್ರೋಣಾಚಾರ್ಯರಿಂದ ಕಲಿತ ಯುದ್ಧ ಕಲೆಯ ಆಧಾರದಿಂದಲೇ ಸೇನಾ ವ್ಯೂಹವನ್ನು ರಚಿಸಿದ್ದನು. ದ್ರೋಣಾಚಾರ್ಯರು ಯುದ್ಧದಲ್ಲಿ ಯಾವುದೇ ಬಗೆಯ ದಾಕ್ಷಿಣ್ಯಕ್ಕೊಳಗಾಗದಂತೆ ಎಚ್ಚರಿಸಲು ದುರ್ಯೋಧನನು ದ್ರೋಣಾಚಾರ್ಯರಿಗೆ ಅವರ ತಪ್ಪನ್ನು ಎತ್ತಿ ತೋರಿದನು. ಈ ಮಾತಿನಿಂದ ಅವನು ದ್ರೋಣಾಚಾರ್ಯರಿಗೆ ಅಷ್ಟೇ ಪ್ರೀತಿ ಪಾತ್ರರಾದ ಪಾಂಡವರ ಬಗ್ಗೆಯೂ, ಯುದ್ಧದಲ್ಲಿ ಅದೇ ಬಗೆಯ ಅನುಕಂಪ ತೋರದಂತೆ ಎಚ್ಚರಿಸ ಬಯಸಿದನು. ಅದರಲ್ಲಿಯೂ ಅರ್ಜುನನು ಅವರಿಗೆ ಅತ್ಯಂತ ಪ್ರೀತಿಪಾತ್ರನೂ, ಬುದ್ಧಿವಂತನೂ ಆದ ಶಿಷ್ಯನಾಗಿದ್ದನು. ಅಂಥಹ ಅನುಕಂಪವು ಸೋಲಿಗೆ ಕಾರಣವಾಗುವುದೆಂದೂ ದುರ್ಯೋಧನನು ಅವರನ್ನು ಎಚ್ಚರಿಸ ಬಯಸಿದನು.

**ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನಸಮಾ ಯುಧಿ ।**
**ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ ॥ ೪ ॥**

ಅತ್ರ—ಇಲ್ಲಿ, ಶೂರಾಃ—ವೀರರು, ಮಹಾಇಷುಆಸಾಃ—ಮಹಾ ಬಿಲ್ಲೋಜರು, ಭೀಮ ಅರ್ಜುನ—ಭೀಮ ಮತ್ತು ಅರ್ಜುನರಿಗೆ, ಸಮಾಃ—ಸಮಾನರು, ಯುಧಿ—ಯುದ್ಧದಲ್ಲಿ, ಯುಯುಧಾನಃ—ಯುಯುಧಾನ, ವಿರಾಟಃ—ವಿರಾಟನು, ಚ—ಕೂಡ, ದ್ರುಪದ—ದ್ರುಪದನು, ಚ—ಕೂಡ, ಮಹಾರಥಃ—ಮಹಾಯೋಧನು.

**ಈ ಮಹಾ ಸೇನೆಯಲ್ಲಿ ಯುದ್ಧದಲ್ಲಿ ಭೀಮಾರ್ಜುನರಿಗೆ ಸಮಾನರಾದ, ಯುಯುಧಾನ, ವಿರಾಟ ಮತ್ತು ದ್ರುಪದರಂಥ ಅನೇಕ ಮಹಾ ಬಿಲ್ಲೋಜರಿದ್ದಾರೆ.**

**ಭಾವಾರ್ಥ :** ದ್ರೋಣಾಚಾರ್ಯರ ಸೇನಾ ಕಲೆಯ ಮಹಾ ಸಾಮರ್ಥ್ಯದ ಮುಂದೆ ಧೃಷ್ಟದ್ಯುಮ್ನನು ಅಷ್ಟೊಂದು ಅಡ್ಡಿಯಾಗಲು ಸಮರ್ಥನಾಗಿರಲಿಲ್ಲವಾದರೂ ಭಯಹುಟ್ಟಿಸುವಂಥ ಇತರ ಅನೇಕರೂ ಅಲ್ಲಿದ್ದರು. ಅವರು ವಿಜಯದ ಮಾರ್ಗದಲ್ಲಿ ಬಹು ದೊಡ್ಡ ಆತಂಕವನ್ನುಂಟುಮಾಡಬಹುದೆಂದು ದುರ್ಯೋಧನನು ಪ್ರಸ್ತಾಪಿಸಿದನು. ಏಕೆಂದರೆ, ಅವರಲ್ಲಿ ಪ್ರತಿಯೊಬ್ಬರೂ ಭೀಮಾರ್ಜುನರಂತೆ ಅರಿಭಯಂಕರರಾಗಿದ್ದರು. ಭೀಮಾರ್ಜುನರ ಬಲವು ದುರ್ಯೋಧನನಿಗೆ ತಿಳಿದಿತ್ತು. ಅಂತೆಯೇ ಅವನು ಇತರರು ಅವರಿಗೆ ಸಮ ಬಲರೆಂದು ಹೋಲಿಕೆ ನೀಡಿದನು,

**ಧೃಷ್ಟಕೇತುಶ್ಚೇಕಿತಾನಃ ಕಾಶಿರಾಜಶ್ಚ ವೀರ್ಯವಾನ್ ।**
**ಪುರುಜಿತ್ಕುಂತಿಭೋಜಶ್ಚ ಶೈಬ್ಯಶ್ಚ ನರಪುಂಗವಃ ॥ ೫ ॥**

ಧೃಷ್ಟಕೇತುಃ—ಧೃಷ್ಟಕೇತು, ಚೇಕಿತಾನಃ—ಚೇಕಿತಾನ, ಕಾಶಿರಾಜಃ—ಕಾಶಿರಾಜ, ಚ—ಕೂಡ, ವೀರ್ಯವಾನ್—ಮಹಾ ಬಲಶಾಲಿಗಳು, ಪುರುಜಿತ್—ಪುರುಜಿತನು, ಕುಂತಿಭೋಜಃ—ಕುಂತಿಭೋಜನು, ಚ—ಮತ್ತು, ಶೈಬ್ಯಃ—ಶೈಬ್ಯನು, ಚ—ಮತ್ತು, ನರಪುಂಗವಃ—ಮಾನವರಲ್ಲಿ ಶ್ರೇಷ್ಠನು.

**ಧೃಷ್ಟಕೇತು, ಚೇಕಿತಾನ, ಕಾಶಿರಾಜ, ಪುರುಜಿತ್, ಕುಂತಿಭೋಜ ಮತ್ತು ಶೈಬ್ಯರಂಥ ಮಹಾ ಬಲಶಾಲಿಗಳಾದ ಯೋಧರೂ ಇದ್ದಾರೆ.**

**ಯುಧಾಮನ್ಯುಶ್ಚ ವಿಕ್ರಾಂತ ಉತ್ತಮೌಜಾಶ್ಚ ವೀರ್ಯವಾನ್ ।**
**ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ ॥ ೬ ॥**

ಯುಧಾಮನ್ಯುಃ—ಯುಧಾಮನ್ಯು, ಚ—ಮತ್ತು, ವಿಕ್ರಾಂತ—ಮಹಾ ಬಲಶಾಲಿ, ಉತ್ತಮೌಜಾಃ—ಉತ್ತಮೌಜನು, ಚ—ಮತ್ತು, ವೀರ್ಯವಾನ್—ಮಹಾ ಬಲಶಾಲಿ, ಸೌಭದ್ರಃ—ಸುಭದ್ರಾ ಪುತ್ರನು, ದ್ರೌಪದೇಯಾಃ—ದ್ರೌಪದೀ ಪುತ್ರರು, ಚ—ಮತ್ತು, ಸರ್ವೇ—ಎಲ್ಲರೂ, ಏವ—ಖಂಡಿತವಾಗಿ ಮಹಾರಥಾಃ—ಮಹಾರಥಿಕರು,

**ಮಹಾ ಬಲಶಾಲಿಗಳಾದ ಯುಧಾಮನ್ಯು, ಉತ್ತಮೌಜ ಸುಭದ್ರಾ ಪುತ್ರ ಮತ್ತು ದ್ರೌಪದೀ ಪುತ್ರರು ಇದ್ದಾರೆ. ಈ ಯೋಧರೆಲ್ಲರೂ ಮಹಾರಥಿಕರು.**

**ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ನಿಬೋಧ ದ್ವಿಜೋತ್ತಮ ।**
**ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ಬ್ರವೀಮಿ ತೇ ॥ ೭ ॥**

ಅಸ್ಮಾಕಮ್—ನಮ್ಮ, ತು—ಆದರೆ, ವಿಶಿಷ್ಟಾಃ—ವಿಶೇಷವಾಗಿ ಬಲಶಾಲಿಗಳು, ಏ— ಯಾರೋ, ತಾನ್—ಅವರು, ನಿಬೋಧ—ಗಮನಿಸಿ, ದ್ವಿಜ ಉತ್ತಮ—ಹೇ ಬ್ರಾಹ್ಮಣ ಶ್ರೇಷ್ಠರೇ, ನಾಯಕಾಃ—ಸೇನಾಪತಿಗಳು, ಮಮ—ನನ್ನ, ಸೈನ್ಯಸ್ಯ—ಸೈನಿಕರ, ಸಂಜ್ಞಾರ್ಥಮ್—ತಿಳುವಳಿಕೆಗಾಗಿ, ತಾನ್—ಅವರನ್ನು, ಬ್ರವೀಮಿ—ನಾನು ಹೇಳುತ್ತೇನೆ, ತೇ—ನಿಮಗೆ.

**ಹೇ ಬ್ರಾಹ್ಮಣ ಶ್ರೇಷ್ಠರೇ, ನಿಮ್ಮ ತಿಳುವಳಿಕೆಗಾಗಿ ನನ್ನ ಸೈನ್ಯದ ನಾಯಕತ್ವ ವಹಿಸಿ ಮುನ್ನಡೆಸಲು ವಿಶೇಷವಾಗಿ ಅರ್ಹರಾಗಿರುವ ಸೇನಾಪತಿಗಳನ್ನು ಕುರಿತು ಹೇಳುತ್ತೇನೆ.**

**ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ ।**
**ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿಸ್ತಥೈವ ಚ ॥ ೮ ॥**

ಭವಾನ್—ತಾವು, ಭೀಷ್ಮಃ—ಭೀಷ್ಮ ಪಿತಾಮಹರು, ಚ—ಕೂಡ, ಕರ್ಣಃ—ಕರ್ಣ, ಚ—ಮತ್ತು, ಕೃಪಃ—ಕೃಪರು, ಚ—ಮತ್ತು, ಸಮಿತಿಂಜಯಃ—ಸದಾ ಯುದ್ಧದಲ್ಲಿ ವಿಜಯಿಗಳು, ಅಶ್ವತ್ಥಾಮಾ—ಅಶ್ವತ್ಥಾಮರು, ವಿಕರ್ಣಃ—ವಿಕರ್ಣ, ಚ—ಹಾಗೂ, ಸೌಮದತ್ತಿಃ—ಸೋಮದತ್ತ ಪುತ್ರನು, ತಥಾ—ಹಾಗೂ, ಏವ—ಖಂಡಿತವಾಗಿ, ಚ—ಕೂಡ.

**ಯುದ್ಧದಲ್ಲಿ ಸದಾ ವಿಜಯಿಗಳಾದ ತಾವು ಮತ್ತು ಭೀಷ್ಮ, ಕರ್ಣ, ಕೃಪ, ಅಶ್ವತ್ಥಾಮ, ವಿಕರ್ಣ ಮತ್ತು ಭೂರಿಶ್ರವ ಎಂದು ಕರೆಯಲ್ಪಡುವ ಸೋಮದತ್ತ ಪುತ್ರನು ಇದ್ದಾರೆ.**

**ಭಾವಾರ್ಥ:** ದುರ್ಯೋಧನನು ಸದಾ ವಿಜಯಶಾಲಿಗಳಾದ ಅಸಾಧಾರಣ ಯೋಧರನ್ನು ಕುರಿತು ಪ್ರಸ್ತಾಪಿಸುತ್ತಾನೆ. ವಿಕರ್ಣನು ದುರ್ಯೋಧನನ ಸೋದರನು, ಅಶ್ವತ್ಥಾಮನು ದ್ರೋಣಾಚಾರ್ಯ ಪುತ್ರ, ಮತ್ತು ಸೌಮದತ್ತಿ ಅಥವಾ ಭೂರಿಶ್ರವನು ಬಾಹ್ಲೀಕ ರಾಜನ ಪುತ್ರನು, ಕರ್ಣನು ಪಾಂಡುವಿಗೆ ಮದುವೆಗಿಂತ ಮುಂಚೆ ಕುಂತಿಯಲ್ಲಿ ಹುಟ್ಟಿದವನಾದುದರಿಂದ ಅರ್ಜುನನ ಮಲ ಸೋದರ. ಕೃಪಾಚಾರ್ಯರ ಅವಳಿ ಸೋದರಿಯು ದ್ರೋಣಾಚಾರ್ಯರನ್ನು ಮದುವೆಯಾಗಿದ್ದಳು.

**ಅನ್ಯೇ ಚ ಬಹವಃ ಶೂರಾ ಮದರ್ಥೇ ತ್ಯಕ್ತಜೀವಿತಾಃ ।**
**ನಾನಾಶಸ್ತ್ರಪ್ರಹರಣಾಃ ಸರ್ವೇ ಯುದ್ಧವಿಶಾರದಾಃ ॥ ೯ ॥**

ಅನ್ಯೇ—ಇತರರು, ಚ—ಕೂಡ, ಬಹವಃ—ಬಹು ಸಂಖ್ಯೆಯಲ್ಲಿ, ಶೂರಾಃ—ಶೂರರು, ಮತ್‌ಅರ್ಥೇ—ನನ್ನ ಸಲುವಾಗಿ, ತ್ಯಕ್ತಜೀವಿತಾಃ—ತಮ್ಮ ಪ್ರಾಣಾರ್ಪಣೆ ಮಾಡಲು ಸಿದ್ಧರಾದವರು, ನಾನಾ—ಅನೇಕ, ಶಸ್ತ್ರ—ಶಸ್ತ್ರಗಳಿಂದ, ಪ್ರಹರಣಾಃ—ಸಜ್ಜಿತರಾಗಿದ್ದಾರೆ, ಸರ್ವೇ—ಅವರೆಲ್ಲರು, ಯುದ್ಧ ವಿಶಾರದಾಃ—ಯುದ್ಧ ವಿಶಾರದರು.

**ನನಗಾಗಿ ಪ್ರಾಣಾರ್ಪಣೆ ಮಾಡಲು ಸಿದ್ಧರಿರುವ ಇನ್ನೂ ಅನೇಕ ಇತರ ಶೂರರಿದ್ದಾರೆ. ಅವರೆಲ್ಲರೂ ನಾನಾ ಬಗೆಯ ಶಸ್ತ್ರ ಸನ್ನದ್ಧರಾಗಿದ್ದಾರೆ ಮತ್ತು ಅವರೆಲ್ಲರೂ ಯುದ್ಧ ವಿಶಾರದರು.**

**ಭಾವಾರ್ಥ :** ಇತರರ ಮಟ್ಟಿಗೆ ಹೇಳುವುದಾದರೆ, ಜಯದ್ರಥ, ಕೃತವರ್ಮ ಮತ್ತು ಶಲ್ಯ, ಇವರೆಲ್ಲರೂ ದುರ್ಯೋಧನನಿಗಾಗಿ ಪ್ರಾಣಾರ್ಪಣೆ ಮಾಡಲು ಸಿದ್ಧರಾಗಿದ್ದಾರೆ. ಅರ್ಥಾತ್, ಇವರೆಲ್ಲರೂ ಪಾಪಿಷ್ಠನಾದ ದುರ್ಯೋಧನನ ಪಕ್ಷವಹಿಸಿದ್ದರಿಂದ, ಅವರು ಯುದ್ಧಭೂಮಿಯಲ್ಲಿ ಮಡಿಯುತ್ತಾರೆ ಎಂಬುದು ಮೊದಲೇ ನಿರ್ಣೀತವಾದ ವಿಷಯ. ಆದರೆ, ಮೇಲೆ ಹೇಳಿದ ಎಲ್ಲ ಮಿತ್ರರ ಸಂಯೋಜಿತ ಸಾಮರ್ಥ್ಯವನ್ನು ಕಂಡು, ದುರ್ಯೋಧನನು ಮಾತ್ರ ತಾನು ವಿಜಯಿಯಾಗುತ್ತೇನೆಂದು ನಂಬಿದ್ದನು.

**ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್ ।**
**ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್ ॥೧೦॥**

ಅಪರ್ಯಾಪ್ತಂ—ಅಳೆಯಲಾಗದ, ತದ್—ಅದು, ಅಸ್ಮಾಕಮ್—ನಮ್ಮ, ಬಲಮ್—ಬಲವು, ಭೀಷ್ಮಃ—ಪಿತಾಮಹ ಭೀಷ್ಮರಿಂದ, ಅಭಿರಕ್ಷಿತಮ್—ಸಂಪೂರ್ಣವಾಗಿ ರಕ್ಷಿತವಾಗಿದೆ, ಪರ್ಯಾಪ್ತಮ್—ಪರಿಮಿತವಾದ, ತು—ಆದರೆ, ಇದಮ್—ಈ ಎಲ್ಲವೂ, ಏತೇಷಾಮ್—ಪಾಂಡವರ, ಬಲಮ್—ಬಲವು, ಭೀಮ—ಭೀಮನಿಂದ, ಅಭಿರಕ್ಷಿತಮ್—ಬಹು ಎಚ್ಚರಿಕೆಯಿಂದ ರಕ್ಷಿತವಾಗಿದೆ.

**ನಮ್ಮ ಬಲವು ಅಪಾರವಾಗಿದೆ ಮತ್ತು ನಾವು ಭೀಷ್ಮ ಪಿತಾಮಹರಿಂದ ಸುರಕ್ಷಿತರಾಗಿದ್ದೇವೆ. ಪಾಂಡವರ ಬಲವಾದರೋ ಭೀಮನಿಂದ ಬಹುಜಾಗರೂಕತೆಯಿಂದ ರಕ್ಷಿತವಾಗಿದ್ದರೂ, ಅದು ಪರಿಮಿತವಾದುದಾಗಿದೆ.**

**ಭಾವಾರ್ಥ:** ಇಲ್ಲಿ ದುರ್ಯೋಧನನು ಪರಸ್ಪರ ಬಲಾಬಲವನ್ನು ತುಲನೆ ಮಾಡಿ ನೋಡುತ್ತಿದ್ದಾನೆ. ತನ್ನ ಸೈನ್ಯ ಬಲವಾದರೋ ಮಹಾ ಸೇನಾನಿಯಾದ ಭೀಷ್ಮ ಪಿತಾಮಹರಿಂದ ವಿಶೇಷವಾಗಿ ರಕ್ಷಿತವಾಗಿರುವುದರಿಂದ, ಅಪಾರವಾಗಿದೆಯೆಂದು ಭಾವಿಸುತ್ತಾನೆ. ಪ್ರತಿ ಪಕ್ಷದಲ್ಲಿ ಪಾಂಡವರ ಸೇನೆಯು ಅನನುಭವೀ ಸೇನಾನಿಯಾದ ಮತ್ತು ಭೀಷ್ಮರ ಮುಂದೆ ಕೇವಲ ಒಂದು ತೃಣ

**ಮಾತ್ರ**ನಾದ ಭೀಮನಿಂದ ರಕ್ಷಿತವಾಗಿದ್ದರಿಂದ, ಪರಿಮಿತವಾದುದಾಗಿದೆ. ತಾನು ಸಾಯುವು **ದಾದರೆ** ತನಗೆ ಭೀಮನಿಂದಲೇ ಮರಣ ಉಂಟು ಎಂಬುದು ದುರ್ಯೋಧನನಿಗೆ ಚೆನ್ನಾಗಿ **ತಿಳಿ**ದಿತ್ತು. ಅಂತೆಯೇ ಅವನು ಭೀಮನ ಬಗ್ಗೆ ಸದಾ ಅಸೂಯಾಪರನಾಗಿದ್ದನು. ಆದರೂ **ಬಹು** ಶ್ರೇಷ್ಠ ಸೇನಾಧಿಪತಿಗಳಾದ ಭೀಷ್ಮರು ತನ್ನ ಕಡೆಗೆ ಇರುವುದರಿಂದ, ತನಗೆ ಜಯ **ಖಂ**ಡಿತ ಎಂದು ಅವನು ನಂಬಿದ್ದನು. ತನಗೆ ಯುದ್ಧದಲ್ಲಿ ಜಯ ಖಚಿತ ಎಂಬ ಅವನ ನಿರ್ಣಯವು ಸುನಿಶ್ಚಿತವಾಗಿತ್ತು.

**ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ ।**
**ಭೀಷ್ಮಮೇವಾಭಿರಕ್ಷನ್ತು ಭವನ್ತಃ ಸರ್ವ ಏವ ಹಿ ॥೧೧॥**

ಅಯನೇಷು—ಮಹತ್ವದ ಸ್ಥಳಗಳಲ್ಲಿ, ಚ—ಕೂಡ, ಸರ್ವೇಷು—ಎಲ್ಲ ಕಡೆಯ ಲ್ಲಿಯೂ,ಯಥಾ ಭಾಗಮ್—ಬೇರೆ ಬೇರೆಯಾಗಿ ವ್ಯವಸ್ಥಿತವಾಗಿದ್ದ, ಅವಸ್ಥಿತಾಃ—ಇರುವ ಭೀಷ್ಮಮ್—ಭೀಷ್ಮ ಪಿತಾಮಹರಿಗೆ, ಏವ—ಖಂಡಿತವಾಗಿ, ಅಭಿರಕ್ಷನ್ತು—ಸಹಾಯ ನೀಡ ಬೇಕು, ಭವನ್ತಃ—ನೀವು, ಸರ್ವೇ—ಸರ್ವರೂ ಕ್ರಮ ಕ್ರಮವಾಗಿ, ಏವ ಹಿ—ನಿಶ್ಚಿತ ವಾಗಿ.

**ಅನುಕ್ರಮವಾಗಿ ಸೈನ್ಯ ವ್ಯೂಹದ ಮುಖ್ಯ ಮುಖ್ಯ ಸ್ಥಳಗಳಲ್ಲಿ ನಿಂತಿರುವ ನೀವೆಲ್ಲರೂ ಈಗ ಭೀಷ್ಮ ಪಿತಾಮಹರಿಗೆ ಪೂರ್ಣ ಸಹಾಯ ನೀಡಲೇಬೇಕು.**

**ಭಾವಾರ್ಥ :** ದುರ್ಯೋಧನನು ಭೀಷ್ಮರ ಸಾಮರ್ಥ್ಯವನ್ನು ಕುರಿತು ಪ್ರಶಂಸಿಸಿದ ಬಳಿಕ, ಇತರರು ತಮಗೆ ತಕ್ಕ ಮಹತ್ವ ನೀಡಲಿಲ್ಲವೆಂದು ಭಾವಿಸಿಯಾರು ಎಂದು ತಿಳಿದು, ತನ್ನ ಎಂದಿನ ರಾಜತಾಂತ್ರಿಕ ರೀತಿಯಲ್ಲಿ, ಅವನು ಮೇಲೆ ಹೇಳಿದಂತೆ ಸ್ಥಿತಿಯನ್ನು ಹೊಂದಾಣಿಕೆ ಮಾಡಲು ಯತ್ನಿಸಿದನು. ಭೀಷ್ಮಾಚಾರ್ಯರು ನಿಸ್ಸಂದೇಹವಾಗಿ ಮಹಾ ನಾಯಕರಾಗಿದ್ದರೆಂದು ಅವನು ಪ್ರಶಂಸಿಸಿದನು. ಆದರೆ ಅವರು ತುಂಬಾ ವಯೋವೃದ್ಧ ರಾಗಿದ್ದರು. ಆದ್ದರಿಂದ, ಎಲ್ಲ ಕಡೆಯಿಂದಲೂ ಪ್ರತಿಯೊಬ್ಬರೂ ಅವರ ರಕ್ಷಣೆಯನ್ನು ಕುರಿತು ವಿಶೇಷವಾಗಿ ಯೋಚಿಸಬೇಕು. ಅವರು ಯುದ್ಧ ನಿರತರಾಗಬಹುದು ಮತ್ತು ಇವರ ಒಂದು ಕಡೆಯ ನಿರತತೆಯ ಪ್ರಯೋಜನವನ್ನು ವೈರಿಗಳು ಪಡೆದುಕೊಳ್ಳಬಹುದು. ಆದ್ದರಿಂದ ಇತರ ನಾಯಕರು ತಮ್ಮ ಮುಖ್ಯ ಮುಖ್ಯ ಸ್ಥಳಗಳನ್ನು ಬಿಟ್ಟು, ವೈರಿ ಬಲವು ತಮ್ಮ ವ್ಯೂಹ ಭಂಗ ಮಾಡದಂತೆ ನೋಡಿಕೊಳ್ಳುವುದು ಮಹತ್ವದ್ದಾಗಿತ್ತು. ಕೌರವರ ವಿಜಯವು ಭೀಷ್ಮಾಚಾರ್ಯರ ಇರುವಿಕೆಯನ್ನೇ ಅವಲಂಬಿಸಿತ್ತೆಂದು ದುರ್ಯೋ ಧನನು ಸ್ಪಷ್ಟವಾಗಿ ತಿಳಿದುಕೊಂಡಿದ್ದನು. ಅರ್ಜುನನ ಹೆಂಡತಿ ದ್ರೌಪದಿಯು, ಅಸಹಾಯಕ ಪರಿಸ್ಥಿತಿಯಲ್ಲಿ, ತನ್ನನ್ನು ಮಹಾಸೇನಾನಿಗಳು ತುಂಬಿದ ಸಭೆಯಲ್ಲಿ ಬೆತ್ತಲೆಯಾಗಿ ಕಾಣಲೆಂದು ಬಲಾತ್ಕರಿಸಿದಾಗ, ಅವಳು ತನಗೆ ನ್ಯಾಯನೀಡುವಂತೆ ಭೀಷ್ಮದ್ರೋಣಾದಿ ಗಳಿಗೆ ಮೊರೆಯಿಟ್ಟರೂ ಕೂಡ ಅವರು ಚಕಾರವೆತ್ತಲಿಲ್ಲ, ಆದ್ದರಿಂದ ಭೀಷ್ಮದ್ರೋಣರು ತನಗೆ ಪೂರ್ಣ ಬೆಂಬಲವಾಗಿದ್ದಾರೆ ಎಂದು ಅವನು ವಿಶ್ವಾಸ ಹೊಂದಿದ್ದನು. ಈ ಇಬ್ಬರು

**ಸೇನಾಪತಿಗಳು** ಪಾಂಡವರ ಬಗ್ಗೆ ಕೆಲಮಟ್ಟಿಗೆ ವಾತ್ಸಲ್ಯ ಹೊಂದಿದವರಾಗಿದ್ದರೂ, ಇವರು ದ್ಯೂತ ಸಮಯದಲ್ಲಿ ಮಾಡಿದಂತೆ, ಪಾಂಡವರ ಪಕ್ಷವನ್ನು ಪೂರ್ಣವಾಗಿ ಬಿಟ್ಟು ಕೊಡುವರೆಂದು ದುರ್ಯೋಧನನು ನಿರೀಕ್ಷಿಸಿದ್ದನು.

**ತಸ್ಯ ಸಂಜನಯನ್ ಹರ್ಷಂ ಕುರುವೃದ್ಧಃ ಪಿತಾಮಹಃ ।**
**ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್ ॥೧೨॥**

ತಸ್ಯ—ಅವನ, ಸಂಜನಯನ್—ವೃದ್ಧಿಯಾಗುವ, ಹರ್ಷಮ್—ಸಂತೋಷ, ಕುರು ವೃದ್ಧ—ಕುರುಕುಲದ ಪಿತಾಮಹ(ಭೀಷ್ಮ), ಪಿತಾಮಹಃ—ಅಜ್ಜ, ಸಿಂಹನಾದಮ್—ಸಿಂಹದಂತೆ ಘರ್ಜನೆ, ವಿನದ್ಯ—ಸ್ಫುರಣ, ಉಚ್ಚೈಃ—ಬಹಳ ಜೋರಾಗಿ, ಶಂಖಮ್—ಶಂಖವನ್ನು, ದಧ್ಮೌ—ಊದಿದರು, ಪ್ರತಾಪವಾನ್—ವೀರರು.

**ಆಮೇಲೆ, ಕುರುಕುಲ ಪಿತಾಮಹರೂ, ವೀರಾಧಿವೀರರೂ ಮತ್ತು ಯೋಧರ ಪಿತಾಮಹರಾದ ಭೀಷ್ಮಾಚಾರ್ಯರು, ದುರ್ಯೋಧನನನ್ನು ಸಂತೋಷಗೊಳಿಸಲು ಸಿಂಹಘರ್ಜನೆಯಂತೆ ಶಂಖಧ್ವನಿಗೈದರು.**

**ಭಾವಾರ್ಥ :** ಕುರುಕುಲ ಪಿತಾಮಹರಾದ ಭೀಷ್ಮಾಚಾರ್ಯರು ತಮ್ಮ ಮೊಮ್ಮಗನಾದ ದುರ್ಯೋಧನನ ಮನಸ್ಸನ್ನು ಬಲ್ಲವರಾಗಿದ್ದರು. ಅವನ ಮೇಲಿನ ತಮ್ಮ ಸಹಾನುಭೂತಿ ಯಿಂದಾಗಿ, ಸಿಂಹದಂತಿರುವ ತಾವು, ತಮ್ಮ ಮಹಾ ಶಂಖಧ್ವನಿಗೈದು ಅವನನ್ನು ಸಂತೋಷ ಪಡಿಸಲು ಯತ್ನಿಸಿದರು. ಭಗವಾನ್ ಶ್ರೀಕೃಷ್ಣನೇ ಪ್ರತಿಪಕ್ಷದಲ್ಲಿ ಇರುವುದರಿಂದ, ದುರ್ಯೋಧನನಿಗೆ ಯುದ್ಧದಲ್ಲಿ ಜಯ ಸಿಕ್ಕುವುದು ಅಸಂಭವವೆಂಬುದನ್ನು ಖಿನ್ನಮನಸ್ಕನಾದ ಮೊಮ್ಮಗ ದುರ್ಯೋಧನನಿಗೆ ಪರೋಕ್ಷವಾಗಿ ಸೂಚಿಸಲೋ ಎಂಬಂತೆ ತಮ್ಮ ಶಂಖವನ್ನು ಊದಿದರು. ಆದರೂ, ಯುದ್ಧ ಮಾಡುವುದು ತಮ್ಮ ಕರ್ತವ್ಯವಾದ್ದರಿಂದ, ಆ ವಿಷಯದಲ್ಲಿ ಅವರು ಎಳ್ಳಷ್ಟೂ ಹಿಂಜರಿಯದೆ ಯುದ್ಧ ಸನ್ನದ್ಧರಾದರು.

**ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ**
**ಸಹಸೈವಾಭ್ಯಹನ್ಯನ್ತ ಸ ಶಬ್ದಸ್ತುಮುಲೋಽಭವತ್ ॥೧೩॥**

ತತಃ—ಅನಂತರ, ಶಂಖಾಃ—ಶಂಖಗಳು, ಚ—ಕೂಡ, ಭೇರ್ಯಃ—ಭೇರಿಗಳು, ಚ—ಮತ್ತು, ಪಣವಾನಕ—ಕೊಂಬುಗಳು, ಗೋಮುಖಾಃ—ಕಹಳೆಗಳು, ಸಹಸಾ—ಇದ್ದ ಕಿದ್ದಹಾಗೆ, ಏವ—ನಿಶ್ಚಿತವಾಗಿ, ಅಭ್ಯಹನ್ಯನ್ತ—ಒಟ್ಟಿಗೆ ಧ್ವನಿಗೈದವು, ಸಃ—ಆ, ಶಬ್ದಃ—ಒಟ್ಟು ಧ್ವನಿಯಿಂದ, ತುಮುಲಃ—ಶಬ್ದಗೊಂದಲ, ಅಭವತ್—ಉಂಟಾಯಿತು.

**ಆಮೇಲೆ, ಶಂಖಗಳು, ಭೇರಿಗಳು, ಕಹಳೆಗಳು, ಕೊಂಬುಗಳು ಮತ್ತು ತಮಟೆ ಗಳು ಇದ್ದಕ್ಕಿದ್ದ ಹಾಗೆ ಧ್ವನಿಗೈದವು ಮತ್ತು ಇದೆಲ್ಲ ಸೇರಿ ಉಂಟಾದ ಮಹಾ ಧ್ವನಿಯ ದೊಡ್ಡ ಗೊಂದಲವೇ ಉಂಟಾಯಿತು.**

**ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ ।**
**ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ॥೧೪॥**

ತತಃ—ಆಮೇಲೆ, ಶ್ವೇತೈಃ—ಬಿಳಿಬಣ್ಣದ, ಹಯೈಃ—ಕುದುರೆಗಳನ್ನು, ಯುಕ್ತೇ—ಹೂಡಿದ, ಮಹತಿ—ದೊಡ್ಡದಾದ, ಸ್ಯಂದನೇ—ರಥದಲ್ಲಿ, ಸ್ಥಿತೌ—ಕುಳಿತಿದ್ದ, ಮಾಧವಃ—ಕೃಷ್ಣನು (ಲಕ್ಷ್ಮೀಪತಿ), ಪಾಂಡವಃ—ಅರ್ಜುನನು (ಪಾಂಡುಪುತ್ರ), ಚ—ಮತ್ತು, ಏವ—ಖಂಡಿತವಾಗಿ, ದಿವ್ಯೌ—ದಿವ್ಯವಾದ, ಶಂಖೌ—ಶಂಖಗಳನ್ನು, ಪ್ರದಧ್ಮತುಃ—ಊದಿದರು.

**ಪ್ರತಿ ಪಕ್ಷದಲ್ಲಿ, ಬಿಳಿಕುದುರೆಗಳನ್ನು ಹೂಡಿದ ಮಹಾ ರಥದಲ್ಲಿ ಕುಳಿತಿದ್ದ, ಶ್ರೀಕೃಷ್ಣ ಮತ್ತು ಅರ್ಜುನರು, ತಮ್ಮ ದಿವ್ಯ ಶಂಖಗಳನ್ನು ಊದಿದರು.**

**ಭಾವಾರ್ಥ :** ಭೀಷ್ಮಾಚಾರ್ಯರು ಧ್ವನಿಮಾಡಿದ ಶಂಖಕ್ಕೆ ಪ್ರತಿಯಾಗಿ, ಕೃಷ್ಣಾರ್ಜುನರ ಕೈಯಲ್ಲಿದ್ದ ಶಂಖಗಳನ್ನು ದಿವ್ಯ ಶಂಖಗಳೆಂದು ವರ್ಣಿಸಲಾಗಿದೆ. ಕೃಷ್ಣನು ಪಾಂಡವರ ಪಕ್ಷದಲ್ಲಿ ಇದ್ದುದರಿಂದ, ದುರ್ಯೋಧನನ ಪಕ್ಷಕ್ಕೆ ಜಯ ಅಸಂಭವ ಎಂಬುದನ್ನು ಆ ದಿವ್ಯ ಶಂಖ ಧ್ವನಿಗಳು ಸೂಚಿಸುವಂತಿದ್ದವು. **ಜಯಸ್ತು ಪಾಂಡು ಪುತ್ರಾಣಾಮ್ ಏಷಾಂ ಪಕ್ಷೇ ಜನಾರ್ದನಃ.** ಕೃಷ್ಣನು ಸದಾ ಪಾಂಡುಪುತ್ರರೊಂದಿಗೆ ಇರುವುದರಿಂದ,ಅಂಥಹವರಿಗೇ ಜಯಲಭ್ಯವಾಗುವುದು. ಕೃಷ್ಣನು ಯಾವಾಗ ಮತ್ತು ಎಲ್ಲೆಲ್ಲಿ ಇರುವನೋ, ಲಕ್ಷ್ಮೀಯೂ ಕೂಡ ಸದಾ ಅಲ್ಲಿಯೆ ಇರುತ್ತಾಳೆ. ಲಕ್ಷ್ಮೀಯು ತನ್ನ ಗಂಡನನ್ನು ಬಿಟ್ಟು ಎಂದೂ ಇರುವುದಿಲ್ಲ. ಆದ್ದರಿಂದ ವಿಷ್ಣು, ಎಂದರೆ ಶ್ರೀಕೃಷ್ಣನ ದಿವ್ಯ ಶಂಖ ಧ್ವನಿಯು, ಅರ್ಜುನನಿಗೆ ಜಯವೂ ಸಂಪತ್ತೂ ಕಾದಿದೆ ಎಂಬುದನ್ನು ಸೂಚಿಸಿತು. ಅಲ್ಲದೆ, ಕೃಷ್ಣಾರ್ಜುನರು ಕುಳಿತಿದ್ದ ರಥವು ಅಗ್ನಿದೇವನಿಂದ ಅರ್ಜುನನಿಗೆ ಕೊಡಲ್ಪಟ್ಟಿದ್ದಾಗಿತ್ತು. ಇದು ಸೂಚಿಸುವುದೇನೆಂದರೆ ಆ ರಥವು ಮೂರುಲೋಕಗಳಲ್ಲಿ ಎಲ್ಲಿಯೇ ಹೋಗಲಿ ಅದು ಸರ್ವಪಕ್ಷಗಳನ್ನು ಗೆಲ್ಲುತ್ತದೆ.

**ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ ।**
**ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ ॥೧೫॥**

ಪಾಂಚಜನ್ಯಮ್—ಪಾಂಚಜನ್ಯ ಎಂಬ ಶಂಖವನ್ನು, ಹೃಷೀಕ-ಈಶಃ—ಹೃಷೀಕೇಶ, (ಭಕ್ತರ ಇಂದ್ರಿಯ ನಿಯಾಮಕನಾದ ಕೃಷ್ಣನು), ದೇವದತ್ತಮ್—ದೇವದತ್ತ ಎಂಬ ಶಂಖವನ್ನು, ಧನಂ-ಜಯಃ—ಧನಂಜಯ (ಸಂಪತ್ತನ್ನು ಜಯಿಸುವ ಅರ್ಜುನ), ಪೌಂಡ್ರಂ—ಪೌಂಡ್ರ ಎಂಬ ಶಂಖವನ್ನು, ದಧ್ಮೌ—ಊದಿದರು, ಮಹಾ ಶಂಖಮ್—ಭಯಂಕರವಾದ ಶಂಖವನ್ನು, ಭೀಮ ಕರ್ಮಾ—ಮಹಾ ಕಾರ್ಯ ಮಾಡುವವನು, ವೃಕೋದರಃ—ಭಾರಿ ಊಟ ಮಾಡುವವನು, ಹೊಟ್ಟೆಬಾಕನು (ಭೀಮನು).

**ಕೃಷ್ಣನು ಪಾಂಚಜನ್ಯವೆಂಬ ತನ್ನ ಶಂಖವನ್ನು ಊದಿದನು; ಅರ್ಜುನನು ದೇವದತ್ತ ಎಂಬ ತನ್ನ ಶಂಖವನ್ನು ಊದಿದನು;ವೃಕೋದರನೂ ಮಹಾಕಾರ್ಯ**

**ಸಾಧಕನೂ ಆದ ಭೀಮನು, ಭಯಾನಕವಾದ ತನ್ನ ಪೌಂಡ್ರ ಎಂಬ ಶಂಖವನ್ನು ಊದಿದನು.**

**ಭಾವಾರ್ಥ :** ಕೃಷ್ಣನು ಸಕಲೇಂದ್ರಿಯಗಳ ಪ್ರೇರಕನೂ ಸ್ವಾಮಿಯೂ ಆಗಿರುವುದರಿಂದ, ಈ ಶ್ಲೋಕದಲ್ಲಿ ಅವನನ್ನು ಹೃಷೀಕೇಶ ಎಂದು ಉಲ್ಲೇಖಿಸಲಾಗಿದೆ. ಜೀವಿಗಳು ಅವನ ವಿಭಿನ್ನಾಂಶರಾಗಿದ್ದಾರೆ. ಆದ್ದರಿಂದ, ಜೀವಿಗಳ ಇಂದ್ರಿಯಗಳೂ ಕೂಡ ಕೃಷ್ಣನ ಇಂದ್ರಿಯಗಳ ವಿಭಿನ್ನಾಂಶಗಳೇ ಆಗಿವೆ. ವ್ಯಕ್ತಿ ಶೂನ್ಯವಾದಿಗಳು ಜೀವಿಗಳ ಇಂದ್ರಿಯಗಳನ್ನು ಗಣನೆಗೆ ತೆಗೆದುಕೊಳ್ಳುವುದೇ ಇಲ್ಲ, ಆದ್ದರಿಂದ ಅವರು ಎಲ್ಲಾ ಜೀವಿಗಳನ್ನು ಇಂದ್ರಿಯ ರಹಿತ ಅಥವಾ ವ್ಯಕ್ತಿ ಶೂನ್ಯ ಎಂದು ಹೇಳುತ್ತಾರೆ. ಎಲ್ಲರ ಹೃದಯಗಳಲ್ಲಿ ಸ್ಥಿತನಾದ ಪರಮಾತ್ಮನು ಅನವರತ ಇಂದ್ರಿಯಗಳ ನಿಯಾಮಕನಾಗಿರುತ್ತಾನೆ. ಜೀವಿಗಳ ಶರಣಾಗತಿಯ ಪ್ರಮಾಣಕ್ಕೆ ಅನುಸಾರವಾಗಿ, ಅವನು ನಿಯಮನ ಮಾಡುತ್ತಾನೆ. ಶುದ್ಧ ಭಕ್ತನ ಸಂದರ್ಭದಲ್ಲಿ ಅವನು ನೇರವಾಗಿ ಭಕ್ತನ ಇಂದ್ರಿಯಗಳನ್ನು ನಿಯಮನ ಮಾಡುತ್ತಾನೆ. ಇಲ್ಲಿ ಕುರುಕ್ಷೇತ್ರ ಯುದ್ಧ ಭೂಮಿಯಲ್ಲಿ, ಕೃಷ್ಣನು ಅರ್ಜುನನ ದಿವ್ಯ ಇಂದ್ರಿಯಗಳನ್ನು ಸ್ವಯಂ ತಾನೇ ನಿಯಮನ ಮಾಡುತ್ತಾನೆ. ಆದ್ದರಿಂದ ಕೃಷ್ಣನಿಗೆ ಹೃಷೀಕೇಶ ಎಂಬ ವಿಶೇಷ ಹೆಸರು ಬಂದಿದೆ. ಭಗವಂತನಿಗೆ ಅವನ ಬೇರೆ ಬೇರೆ ಕಾರ್ಯಗಳ ನಿಮಿತ್ತ ಬೇರೆ ಬೇರೆ ಹೆಸರುಗಳುಂಟು. ಉದಾಹರಣೆಗೆ, ಕೃಷ್ಣನು ಮಧು ಎಂಬ ದೈತ್ಯನನ್ನು ಸಂಹಾರ ಮಾಡಿದ್ದರಿಂದ, ಅವನಿಗೆ ಮಧುಸೂದನ ಎಂದು ಹೆಸರು ಬಂದಿದೆ; ಕೃಷ್ಣನು ಗೋವುಗಳಿಗೂ ಇಂದ್ರಿಯಗಳಿಗೂ ಆನಂದವನ್ನು ನೀಡುತ್ತಾನೆ. ಆದ್ದರಿಂದ ಅವನನ್ನು ಗೋವಿಂದ ಎಂದು ಕರೆಯುತ್ತಾರೆ; ಅವನು ವಸುದೇವ ಪುತ್ರನಾದುದರಿಂದ ಅವನನ್ನು ವಾಸುದೇವನೆಂದು ಕರೆಯುತ್ತಾರೆ; ಕೃಷ್ಣನು ದೇವಕಿಯನ್ನು ತನ್ನ ತಾಯಿ ಎಂದು ಸ್ವೀಕರಿಸಿದ್ದರಿಂದ ಅವನನ್ನು ದೇವಕೀನಂದನ ಎಂದು ಹೇಳುತ್ತಾರೆ; ಅವನು ವೃಂದಾವನದಲ್ಲಿ ಯಶೋದೆಗೆ ತನ್ನ ಬಾಲ ಲೀಲೆಗಳನ್ನು ತೋರಿದ್ದರಿಂದ ಅವನನ್ನು ಯಶೋದಾನಂದನ ಎನ್ನುತ್ತಾರೆ, ಕೃಷ್ಣನು ತನ್ನ ಸಖನಾದ ಅರ್ಜುನನ ರಥವನ್ನು ನಡೆಸಿದ್ದರಿಂದ, ಅವನನ್ನು ಪಾರ್ಥಸಾರಥಿ ಎಂದು ಕರೆಯುತ್ತಾರೆ. ಇದೇ ರೀತಿಯಾಗಿ, ಅವನು ಕುರುಕ್ಷೇತ್ರ ರಣಾಂಗಣದಲ್ಲಿ ಅರ್ಜುನನಿಗೆ ಮಾರ್ಗ ದರ್ಶನ ಮಾಡಿದ್ದರಿಂದ ಅವನನ್ನು ಹೃಷೀಕೇಶ ಎಂದು ಕರೆಯಲಾಗಿದೆ.

ನಾನಾ ಬಗೆಯ ಯಜ್ಞಗಳಿಗೆ ಬೇಕಾದ ಸಂಪತ್ತನ್ನು ಸಂಗ್ರಹಿಸಲು ತನ್ನ ಅಣ್ಣನಿಗೆ ಸಹಾಯ ಮಾಡಿದ್ದರಿಂದ, ಅರ್ಜುನನನ್ನು ಈ ಶ್ಲೋಕದಲ್ಲಿ, ಧನಂಜಯ ಎಂದು ಕರೆಯಲಾಗಿದೆ. ಅದೇ ಪ್ರಕಾರ, ಭೀಮನು ಎಷ್ಟು ಅದ್ಭುತವಾಗಿ ಊಟ ಮಾಡುತ್ತಿದ್ದನೋ, ಅಷ್ಟೇ ಅದ್ಭುತವಾಗಿ ಅವನು ಹಿಡಿಂಬ ಮೊದಲಾದ ದೈತ್ಯರನ್ನು ಕೊಲ್ಲುವಂಥ ಕಾರ್ಯಗಳನ್ನೂ ಮಾಡಿದ್ದರಿಂದ ಅವನನ್ನು ವೃಕೋದರ ಎಂದು ಹೇಳುತ್ತಾರೆ. ಹೀಗೆ ಶ್ರೀಕೃಷ್ಣನ ಶಂಖದಿಂದ ಆರಂಭ ಮಾಡಿ ಪಾಂಡವ ಪಕ್ಷದವರು ಊದಿದ ವಿಶಿಷ್ಟ ಪ್ರಕಾರದ ಶಂಖ ಧ್ವನಿಗಳು ಯೋಧರಿಗೆ ಉತ್ಸಾಹದಾಯಕವಾಗಿದ್ದುವು. ಪ್ರತಿ ಪಕ್ಷದಲ್ಲಿ ಇಂಥ ಹಿರಿಮೆ ಯಾವುದೂ ಇರಲಿಲ್ಲ. ಮಹಾ ಮಾರ್ಗದರ್ಶಕನಾದ ಶ್ರೀ ಕೃಷ್ಣನೂ ಅಲ್ಲಿ ಇರಲಿಲ್ಲ, ಲಕ್ಷ್ಮಿಯೂ ಅ

ಕಡೆಯಲ್ಲಿ ಇರಲಿಲ್ಲ. ಹೀಗಾಗಿ ಕೌರವ ಪಕ್ಷದವರು ಸೋಲುವುದು ಖಂಡಿತವಾಗಿತ್ತು. ಶಂಖ ಧ್ವನಿಗಳು ಇದನ್ನೇ ಸೂಚಿಸಿದವು.

**ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ ।**
**ನಕುಲಃ ಸಹದೇವಶ್ಚ ಸುಘೋಷಮಣಿಪುಷ್ಪಕೌ ॥೧೬॥**
**ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ ।**
**ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ॥೧೭॥**
**ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ ।**
**ಸೌಭದ್ರಶ್ಚ ಮಹಾಬಾಹುಃ ಶಂಖಾನ್ ದಧ್ಮುಃ ಪೃಥಕ್ ಪೃಥಕ್ ॥೧೮॥**

ಅನಂತವಿಜಯಮ್—ಅನಂತವಿಜಯ ಎಂಬ ಶಂಖ, ರಾಜಾ—ರಾಜನು, ಕುಂತೀ ಪುತ್ರಃ—ಕುಂತೀ ಪುತ್ರನು, ಯುಧಿಷ್ಠಿರಃ—ಯುಧಿಷ್ಠಿರನು, ನಕುಲಃ—ನಕುಲನು, ಸಹ ದೇವಃ—ಸಹದೇವನು ಚ—ಮತ್ತು. ಸುಘೋಷ ಮಣಿಪುಷ್ಪಕೌ—ಸುಘೋಷ ಮತ್ತು ಮಣಿಪುಷ್ಪಕ ಎಂಬ ಶಂಖಗಳು. ಕಾಶ್ಯಃ—ಕಾಶೀ (ವಾರಣಾಸಿ) ರಾಜನು, ಚ—ಮತ್ತು, ಪರಮ ಇಷು ಆಸಃ—ಮಹಾ ಬಿಲ್ಲೋಜನು, ಶಿಖಂಡೀ—ಶಿಖಂಡಿಯು, ಚ—ಕೂಡ, ಮಹಾರಥಃ—ಸಹಸ್ರಾರು ಯೋಧರ ವಿರುದ್ಧ ಏಕಾಂಗಿಯಾಗಿ ಹೋರಾಡುವವನು, ಧೃಷ್ಟದ್ಯುಮ್ನಃ—ಧೃಷ್ಟದ್ಯುಮ್ನನು, (ದ್ರುಪದ ರಾಜನ ಮಗನು), ವಿರಾಟಃ—ವಿರಾಟನು (ಅಜ್ಞಾತ ವಾಸದಲ್ಲಿ ಪಾಂಡವರಿಗೆ ಆಶ್ರಯವನ್ನು ನೀಡಿದ ರಾಜನು), ಚ—ಕೂಡ, ಸಾತ್ಯಕಿಃ—ಸಾತ್ಯಕಿಯು (ಕೃಷ್ಣ ರಥದ ಸಾರಥಿಯಾದ ಯುಯುಧಾನ), ಚ—ಮತ್ತು, ಅಪರಾಜಿತಃ—ಯಾರಿಂದಲೂ ಪರಾಜಿತನಾಗದವನು, ದ್ರುಪದಃ—ದ್ರುಪದ ರಾಜನು, ಪಾಂಚಾಲ ರಾಜನು, ದ್ರೌಪದೇಯಾಃ—ದ್ರೌಪದಿಯ ಮಕ್ಕಳು, ಚ—ಕೂಡ, ಸರ್ವಶಃ—ಎಲ್ಲರು, ಪೃಥ್ವೀಪತೇ—ಹೇ ರಾಜನೇ, ಸೌಭದ್ರಃ—ಸುಭದ್ರಾ ಪುತ್ರನಾದ ಅಭಿಮನ್ಯು, ಚ—ಕೂಡ, ಮಹಾಬಾಹುಃ—ಮಹಾಬಾಹು, ಶಂಖಾನ್—ಶಂಖಗಳನ್ನು, ದಧ್ಮುಃ—ಊದಿದರು, ಪೃಥಕ್ ಪೃಥಕ್—ಬೇರೆ ಬೇರೆಯಾಗಿ.

**ಕುಂತೀ ಪುತ್ರನಾದ ಯುಧಿಷ್ಠಿರ ರಾಜನು, ಅನಂತವಿಜಯ ಎಂಬ ತನ್ನ ಶಂಖವನ್ನು ಊದಿದನು. ನಕುಲ ಸಹದೇವರು ಸುಘೋಷ ಮತ್ತು ಮಣಿಪುಷ್ಪಕ ಎಂಬ ಶಂಖಗಳನ್ನು ಊದಿದರು. ಮಹಾ ಬಿಲ್ಲೋಜನಾದ ಕಾಶೀರಾಜನು, ಮಹಾ ಯೋಧನಾದ ಶಿಖಂಡಿಯು, ಧೃಷ್ಟದ್ಯುಮ್ನನು, ವಿರಾಟನು, ಅಜೇಯನಾದ ಸಾತ್ಯಕಿಯು, ದ್ರುಪದನು, ದ್ರೌಪದಿಯ ಪುತ್ರರು, ಹೇ ರಾಜನ್, ಮಹಾ ಬಾಹುವಾದ ಸುಭದ್ರಾ ಪುತ್ರನೂ ಮತ್ತು ಇತರರು, ಎಲ್ಲರೂ ತಮ್ಮ ತಮ್ಮ ಶಂಖಗಳನ್ನು ಊದಿದರು.**

**ಭಾವಾರ್ಥ :** ಧೃತರಾಷ್ಟ್ರನು ಕುಟಿಲ ನೀತಿಯಿಂದ, ಪಾಂಡು ಪುತ್ರರಿಗೆ ಮೋಸ ಮಾಡಿ ತನ್ನ ಪುತ್ರರನ್ನು ಸಿಂಹಾಸನದಲ್ಲಿ ಕುಳ್ಳಿರಿಸುವ ಪ್ರಯತ್ನವು ಅಷ್ಟೊಂದು ಯೋಗ್ಯವಾಗಿರ

ಲಿಲ್ಲ ಎಂದು ಉಪಾಯವಾಗಿ ಸಂಜಯನು ಧೃತರಾಷ್ಟ್ರನಿಗೆ ತಿಳಿಸಿದನು. ಇಡೀ ಕುರು ಕುಲವು ಆ ಯುದ್ಧದಲ್ಲಿ ನಾಶವಾಗುವುದು ಎಂಬ ಸಂಕೇತಗಳು ಆಗಲೇ ಸ್ಪಷ್ಟವಾಗಿ ವ್ಯಕ್ತ ವಾಗಿದ್ದುವು. ಭೀಷ್ಮ ಪಿತಾಮಹರಿಂದ ಆರಂಭ ಮಾಡಿ ಅಭಿಮನ್ಯುವಿನಂತಹ ಮೊಮ್ಮಕ್ಕಳೂ, ಮತ್ತು ಜಗತ್ತಿನ ಅನೇಕ ರಾಜ್ಯಗಳ ರಾಜರುಗಳು ಅಲ್ಲಿ ಸೇರಿದ್ದರು, ಮತ್ತು ಅವರೆಲ್ಲರಿಗೂ ವಿನಾಶ ಕಾದಿತ್ತು. ಧೃತರಾಷ್ಟ್ರನು, ತನ್ನ ಮಕ್ಕಳು ಅನುಸರಿಸಿದ ನೀತಿಯನ್ನು ಪ್ರೋತ್ಸಾಹಿಸಿ ಈ ಮಹಾ ವಿನಾಶಕ್ಕೆ ಕಾರಣನಾಗಿದ್ದನು.

**ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ ।**
**ನಭಶ್ಚ ಪೃಥಿವೀಂ ಚೈವ ತುಮುಲೋ ಭ್ಯನುನಾದಯನ್ ॥೧೯॥**

ಸಃ—ಆ, ಘೋಷಃ—ಧ್ವನಿಸ್ಪಂದವು, ಧಾರ್ತರಾಷ್ಟ್ರಾಣಾಮ್—ಧೃತರಾಷ್ಟ್ರ ಪುತ್ರರ, ಹೃದಯಾನಿ—ಹೃದಯಗಳನ್ನು, ವ್ಯದಾರಯತ್—ಭೇದಿಸಿತು, ನಭಃ—ಆಕಾಶವು, ಚ—ಕೂಡ, ಪೃಥಿವೀಮ್—ಭೂಮಿಯು, ಚ—ಕೂಡ, ಏವ—ಖಂಡಿತವಾಗಿ, ತುಮುಲಃ—ಅಲ್ಲೋಲ ಕಲ್ಲೋಲವಾದವು, ಅಭ್ಯನುನಾದಯನ್—ಪ್ರತಿಧ್ವನಿಸಿದವು.

**ಈ ನಾನಾ ಬಗೆಯ ಶಂಖನಾದಗಳು ಅಲ್ಲೋಲಕಲ್ಲೋಲವನ್ನುಂಟುಮಾಡಿದವು. ಭೂಮಿ ಆಕಾಶಗಳಲ್ಲಿ ಈ ಧ್ವನಿ ಪ್ರತಿಧ್ವನಿಗಳಿಂದ ಧೃತರಾಷ್ಟ್ರ ಪುತ್ರರ ಎದೆ ಒಡೆದು ಹೋಯಿತು.**

**ಭಾವಾರ್ಥ :** ದುರ್ಯೋಧನ ಪಕ್ಷದವರಾದ ಭೀಷ್ಮಾದಿಗಳು ತಮ್ಮ ತಮ್ಮ ಶಂಖಗಳನ್ನು ಧ್ವನಿ ಮಾಡಿದಾಗ ಪಾಂಡವರ ಪಕ್ಷದಲ್ಲಿ ಯಾರಿಗೂ ಗಾಬರಿಯಾಗಲಿಲ್ಲ. ಇಂಥ ಪ್ರಸಂಗಗಳನ್ನು ಇಲ್ಲಿ ಹೇಳಿಲ್ಲ. ಆದರೆ ಈ ಶ್ಲೋಕದಲ್ಲಿ ಪಾಂಡವರ ಪಕ್ಷದವರ ಶಂಖ ಧ್ವನಿಗಳಿಂದ ಧೃತರಾಷ್ಟ್ರ ಪುತ್ರರ ಹೃದಯಗಳು ಭೇದಿಸಿದವು ಎಂದು ವಿಶೇಷವಾಗಿ ಹೇಳಲಾಗಿದೆ. ಇದಕ್ಕೆ ಪಾಂಡವರು ಮತ್ತು ಸ್ವಾಮಿಯಾದ ಶ್ರೀಕೃಷ್ಣನ ಮೇಲೆ ಅವರ ವಿಶ್ವಾಸವೇ ಕಾರಣ. ಶ್ರೀಕೃಷ್ಣನನ್ನು ಆಶ್ರಯಿಸಿದವನು, ಮಹಾವಿಪತ್ತಿನಲ್ಲಿಯೂ ಕೂಡ ಭಯಹೊಂದುವುದಿಲ್ಲ.

**ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ ।**
**ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ ।**
**ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ ॥೨೦॥**

ಅಥ—ಆಮೇಲೆ, ವ್ಯವಸ್ಥಿತಾನ್—ಇರುವ, ದೃಷ್ಟ್ವಾ—ನೋಡಿ, ಧಾರ್ತರಾಷ್ಟ್ರಾನ್—ಧೃತರಾಷ್ಟ್ರ ಪುತ್ರರನ್ನು, ಕಪಿಧ್ವಜಃ—ಹನುಮಂತನ ಗುರುತು ಇರುವ ಧ್ವಜವನ್ನು, ಪ್ರವೃತ್ತೇ—ನಿರತರಾಗಲು ಉದ್ಯುಕ್ತರಾದ, ಶಸ್ತ್ರ ಸಂಪಾತೇ—ಬಾಣಗಳನ್ನು ಬಿಡಲು, ಧನುಃ—ಬಿಲ್ಲು, ಉದ್ಯಮ್ಯ—ತೆಗೆದುಕೊಂಡು, ಪಾಂಡವಃ—ಪಾಂಡುಪುತ್ರನು (ಅರ್ಜುನನು), ಹೃಷೀಕೇಶಮ್—ಹೃಷೀಕೇಶನಾದ ಶ್ರೀಕೃಷ್ಣನಿಗೆ, ತದಾ—ಆ ಕಾಲದಲ್ಲಿ, ವಾಕ್ಯಮ್—ಶಬ್ದಗಳನ್ನು, ಇದಮ್—ಈ, ಆಹ—ಹೇಳಿದನು, ಮಹೀಪತೇ—ಹೇರಾಜನ್.

**ಆಗ ಹನುಮಂತನ ಚಿಹ್ನೆ ಇರುವ ಧ್ವಜವಿದ್ದ ರಥದಲ್ಲಿ ಕುಳಿತಿದ್ದ ಪಾಂಡು ಪುತ್ರನಾದ ಅರ್ಜುನನು ಧನುಸ್ಸನ್ನು ಕೈಗೆತ್ತಿಕೊಂಡು, ಬಾಣಗಳನ್ನು ಬಿಡಲು ಉದ್ಯುಕ್ತನಾದನು. ಹೇ ರಾಜನ್, ಧೃತರಾಷ್ಟ್ರಪುತ್ರರು ಸೇನಾ ಸಜ್ಜಿಕೆಯಲ್ಲಿ ನಿಂತಿರುವುದನ್ನು ಕಂಡು ಅರ್ಜುನನು ಶ್ರೀಕೃಷ್ಣನಿಗೆ ಹೀಗೆ ನುಡಿದನು.**

**ಭಾವಾರ್ಥ :** 'ಯುದ್ಧವು ಇನ್ನೇನು ಆರಂಭವಾಗುವುದರಲ್ಲಿತ್ತು. ಮೇಲಿನ ಮಾತುಗಳಿಂದ ಪಾಂಡವರು ಕುರುಕ್ಷೇತ್ರ ಯುದ್ಧ ಭೂಮಿಯಲ್ಲಿ, ಕೃಷ್ಣನ ಪ್ರತ್ಯಕ್ಷ ಮಾರ್ಗದರ್ಶನದಲ್ಲಿ ಸೇನಾಬಲವನ್ನು ಅನಿರೀಕ್ಷಿತವಾಗಿ ರಚಿಸಿಕೊಂಡಿದ್ದನ್ನು ಕಂಡು ಧೃತರಾಷ್ಟ್ರಪುತ್ರರು ಬಹಳ ಹತಾಶರಾಗಿದ್ದರೆಂದು ಕಂಡುಬರುತ್ತದೆ.ಹನುಮಂತನು ರಾಮ–ರಾವಣರ ಯುದ್ಧದಲ್ಲಿ ಸಹಾಯಕನಾದಾಗ ಶ್ರೀರಾಮನಿಗೆ ಜಯವಾಯಿತು. ಆದ್ದರಿಂದ ಅರ್ಜುನನ ರಥದ ಧ್ವಜದ ಮೇಲೆ ಹನುಮಂತನ ಚಿಹ್ನೆಯಿದ್ದದ್ದು ವಿಜಯಕ್ಕೆ ಮತ್ತೊಂದು ಸೂಚನೆಯಾಗಿದ್ದಿತು. ಈಗ ಅರ್ಜುನನಿಗೆ ಸಹಾಯ ಮಾಡಲು ರಾಮ ಮತ್ತು ಹನುಮಂತ, ಇಬ್ಬರೂ ಅವನ ರಥದಲ್ಲಿ ಇದ್ದರು. ಶ್ರೀಕೃಷ್ಣನು ಸ್ವಯಂರಾಮನೇ, ಮತ್ತು ರಾಮನು ಇರುವಲ್ಲೆಲ್ಲ ರಾಮನ ನಿತ್ಯ ದಾಸನಾದ ಹನುಮಂತನು ಮತ್ತು ರಾಮನ ನಿತ್ಯಾನಪಾಯಿನಿಯಾದ ಸೀತೆಯು (ಲಕ್ಷ್ಮಿಯು) ಸದಾ ಇದ್ದೇ ಇರುತ್ತಾರೆ. ಆದ್ದರಿಂದ ಅರ್ಜುನನಿಗೆ ಯಾವ ಶತ್ರು ಭಯಕ್ಕೂ ಕಾರಣವಿರಲಿಲ್ಲ. ಇದೆಲ್ಲಕ್ಕಿಂತ ಹೆಚ್ಚಾಗಿ, ಇಂದ್ರಿಯನಿಯಾಮಕನಾದ ಶ್ರೀಕೃಷ್ಣನೇ ಅರ್ಜುನನಿಗೆ ನಿರ್ದೇಶನ ನೀಡಲು ಅಲ್ಲಿ ಸ್ವಯಂ ಸ್ಥಿತನಾಗಿದ್ದನು. ಹೀಗೆ ಯುದ್ಧಮಾಡಲು ಅರ್ಜುನನಿಗೆ ಸಕಲ ಶುಭಾನುಕೂಲವೂ ಲಭ್ಯವಾಗಿತ್ತು. ಶ್ರೀಕೃಷ್ಣನು ತನ್ನ ನಿತ್ಯ ಭಕ್ತನಿಗಾಗಿ ಏರ್ಪಡಿಸಿದ್ದ ಇಂಥ ಮಂಗಳ ಸನ್ನಿವೇಶಗಳು ನಿಶ್ಚಿತ ವಿಜಯ ಸೂಚಕ ವಾಗಿದ್ದವು.

**ಅರ್ಜುನ ಉವಾಚ**

**ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ ।**
**ಯಾವದೇತಾನ್ನಿರೀಕ್ಷೇಽಹಂ ಯೋದ್ಧುಕಾಮಾನವಸ್ಥಿತಾನ್ ॥21॥**
**ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ ರಣಸಮುದ್ಯಮೇ ॥22॥**

ಅರ್ಜುನಃ ಉವಾಚ—ಅರ್ಜುನನು ಹೇಳಿದನು, **ಸೇನಯೋಃ**—ಸೈನ್ಯಗಳು, **ಉಭಯೋಃ**—ಎರಡರ, ಮಧ್ಯೇ—ನಡುವೆ, ರಥಮ್—ರಥವನ್ನು, ಸ್ಥಾಪಯ—ದಯ ವಿಟ್ಟು ನಿಲ್ಲಿಸು, ಮೇ—ನನ್ನ, ಅಚ್ಯುತ—ಹೇ ಚ್ಯುತಿರಹಿತನೇ, ಯಾವತ್—ಎಲ್ಲಿಯ ವರೆಗೆ, ಏತಾನ್—ಈ ಎಲ್ಲ, ನಿರೀಕ್ಷೇ—ನೋಡಬಯಸುತ್ತೇನೆ, ಅಹಮ್—ನಾನು, ಯೋದ್ಧು ಕಾಮಾನ್—ಯುದ್ಧಮಾಡುವವರನ್ನು, ಅವಸ್ಥಿತಾನ್—ಯುದ್ಧ ಭೂಮಿಯಲ್ಲಿ ಇದ್ದರಾಗಿರುವುದನ್ನು, ಕೈಃ—ಯಾರ ಜೊತೆಗೆ, ಮಯಾ—ನನ್ನಿಂದ, ಸಹ—ಒಟ್ಟಾಗಿ, ಯೋದ್ಧವ್ಯಮ್—ಯುದ್ಧಮಾಡಬೇಕಾಗಿದೆಯೋ, ಅಸ್ಮಿನ್—ಈ, ರಣ—ಕದನದ, ಸಮುದ್ಯಮೇ—ಪ್ರಯತ್ನದಲ್ಲಿ.

**ಅರ್ಜುನನು ನುಡಿದನು : ಹೇ ಅಚ್ಯುತ, ದಯವಿಟ್ಟು ನನ್ನ ರಥವನ್ನು ಎರಡೂ ಸೇನೆಗಳ ನಡುವೆ ನಿಲ್ಲಿಸು. ಯುದ್ಧ ಮಾಡುವ ಇಚ್ಛೆಯಿಂದ ಇಲ್ಲಿ ನೆರೆದಿರುವವರನ್ನು ಮತ್ತು ಈ ಮಹಾ ಶಸ್ತ್ರ ಸಂಘರ್ಷಣೆಯಲ್ಲಿ ನಾನು ಯಾರೊಂದಿಗೆ ಕಾದ ಬೇಕಾಗಿದೆಯೋ ಅವರನ್ನು ನೋಡಬಯಸುತ್ತೇನೆ.**

**ಭಾವಾರ್ಥ :** ಶ್ರೀಕೃಷ್ಣನು ಪರಮ ದೇವೋತ್ತಮ ಪುರುಷನಾಗಿದ್ದರೂ, ಕಾರಣ ತನ್ನ ಅನಿಮಿತ್ತ ಅನುಗ್ರಹದಿಂದಾಗಿ ತನ್ನ ಮಿತ್ರನ ಸೇವೆಯಲ್ಲಿ ತೊಡಗಿದ್ದನು. ಅವನು ತನ್ನ ಭಕ್ತರಿಗೆ ಎಂದೂ ವಾತ್ಸಲ್ಯತೋರದೆ ಇರುವುದಿಲ್ಲ, ಆದ್ದರಿಂದ ಇಲ್ಲಿ ಅವನನ್ನು ಅಚ್ಯುತ ಎಂದು ಸಂಬೋಧಿಸಲಾಗಿದೆ. ಸಾರಥಿಯಾಗಿ ಕೃಷ್ಣನು, ಅರ್ಜುನನ ಮಾತುಗಳನ್ನು ಪಾಲಿಸ ಬೇಕಾಗಿದೆ. ಅವನು ಅರ್ಜುನನ ಆದೇಶಗಳನ್ನು ಪಾಲಿಸಲು ಹಿಂದೆಮುಂದೆ ನೋಡುತ್ತಿಲ್ಲ. ಅಂತೆಯೇ ಅವನನ್ನು ಅಚ್ಯುತ ಎಂದು ಸಂಬೋಧಿಸಲಾಗಿದೆ. ಕೃಷ್ಣನು ತನ್ನ ಭಕ್ತನಿಗಾಗಿ ಸಾರಥಿಯ ಸ್ಥಾನವನ್ನು ಸ್ವೀಕರಿಸಿದ್ದರೂ, ಅವನ ಪರಮ ಸ್ಥಾನವು ಪ್ರಶ್ನಿತ ವಾಗಲಿಲ್ಲ. ಎಲ್ಲ ಸಂದರ್ಭಗಳಲ್ಲಿಯೂ ಅವನೇ ಪರಮ ದೇವೋತ್ತಮ ಪುರುಷನೂ ಸಕಲೇಂದ್ರಿಯ ನಿಯಾಮಕನೂ ಆದ ಹೃಷೀಕೇಶನು. ಶ್ರೀಕೃಷ್ಣ ಮತ್ತು ಅವನ ಸೇವಕನ ನಡುವಿನ ಬಾಂಧವ್ಯವು ಬಹು ಮಧುರ ಮತ್ತು ದಿವ್ಯ. ಭಕ್ತನಾದವನು ಭಗವಂತನಿಗೆ ಸೇವೆ ಸಲ್ಲಿಸಲು ಸದಾ ಸಿದ್ಧನಾಗಿರುತ್ತಾನೆ ಮತ್ತು ಅದೇ ರೀತಿಯಲ್ಲಿ ಭಗವಂತನೂ ಕೂಡ ತನ್ನ ಭಕ್ತನಿಗೆ ಸಹಾಯ ಮಾಡಲು ಅವಕಾಶಕ್ಕಾಗಿ ಸದಾ ಕಾಯುತ್ತಿರುತ್ತಾನೆ. ಭಕ್ತನಿಗೆ ತಾನು ಆಜ್ಞೆ ನೀಡುವ ಬದಲು, ಆ ಭಕ್ತನೇ ತನಗೆ ಆಜ್ಞೆ ನೀಡುವ ಉನ್ನತ ಸ್ಥಾನ ದಲ್ಲಿರುವುದು ಶ್ರೀಕೃಷ್ಣನಿಗೆ ಮಹಾಸಂದಕರ. ಭಗವಂತನೇ ಸ್ವಾಮಿಯಾಗಿರುವುದರಿಂದ, ಎಲ್ಲರೂ ಅವನ ಆಜ್ಞೆಯ ಪ್ರಕಾರ ನಡೆಯಬೇಕು. ಅವನಿಗೆ ಆಜ್ಞೆ ನೀಡುವಂಥ ಉತ್ತಮ ಸ್ಥಿತಿಯಲ್ಲಿ ಯಾರೂ ಇಲ್ಲ. ಆದರೆ ತನ್ನ ಶುದ್ಧ ಭಕ್ತನು ತನಗೆ ಆಜ್ಞೆ ಮಾಡುತ್ತಿರುವುದನ್ನು ಕಂಡಾಗ, ತಾನು ಸಕಲಾವಸ್ಥೆಗಳ ಅಚ್ಯುತ ಸ್ವಾಮಿಯಾಗಿದ್ದರೂ ಅವನಿಗೆ ದಿವ್ಯಾನಂದವಾಗುತ್ತದೆ.

ಭಗವಂತನ ಶುದ್ಧಭಕ್ತನಾದ ಅರ್ಜುನನಿಗೆ ತನ್ನ ಭ್ರಾತೃೀಯರೊಂದಿಗೆ ಮತ್ತು ಸೋದರರೊಂದಿಗೆ ಯುದ್ಧಮಾಡುವ ಇಚ್ಛೆ ಇರಲಿಲ್ಲ. ಆದರೆ ಯಾವ ಶಾಂತಿಯುತ ಸಂಧಾನಕ್ಕೂ ಸಿದ್ಧನಿರದ ದುರ್ಯೋಧನನ ಹಟಮಾರಿತನದಿಂದಾಗಿ, ಅರ್ಜುನನು ರಣ ರಂಗಕ್ಕೆ ಬರಲೇಬೇಕಾಯಿತು. ಆದ್ದರಿಂದ ಯುದ್ಧ ಭೂಮಿಯಲ್ಲಿ ಯಾವಯಾವ ಮಹಾ ನಾಯಕರು ಸೇರಿದ್ದಾರೆ ಎಂಬುದನ್ನು ನೋಡಲು ಅವನು ಬಹಳ ಕುತೂಹಲಿಯಾಗಿದ್ದನು. ಯುದ್ಧಭೂಮಿಯಲ್ಲಿ ಶಾಂತಿ ಪ್ರಯತ್ನದ ಪ್ರಶ್ನೆಯೇ ಇರಲಿಲ್ಲವಾದರೂ, ಅವನು ಮತ್ತೊಮ್ಮೆ ಅವರೆಲ್ಲರನ್ನು ನೋಡಬಯಸಿದನು, ಮತ್ತು ಅನಪೇಕ್ಷಿತವಾದ ಯುದ್ಧಕ್ಕೆ ಅವರು ಎಷ್ಟು ಕಟಿಬದ್ಧರಾಗಿದ್ದಾರೆ ಎಂಬುದನ್ನೂ ಕೂಡ ಅವನು ನೋಡಬಯಸಿದನು.

**ಯೋತ್ಸ್ಯಮಾನಾನವೇಕ್ಷೇಽಹಂ ಯ ಏತೇಽತ್ರ ಸಮಾಗತಾಃ ।**
**ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ ॥೨೩॥**

ಯೋತ್ಸ್ಯಮಾನಾನ್—ಯುದ್ಧ ಮಾಡುವವರನ್ನು, ಅವೇಕ್ಷೇ—ನೋಡುತ್ತೇನೆ, ಅಹಮ್—ನಾನು, ಯೇ—ಯಾರು, ಏತೇ—ಅವರು, ಅತ್ರ—ಇಲ್ಲಿ, ಸಮಾಗತಾಃ—ಸೇರಿದ್ದಾರೆ,ಧಾರ್ತರಾಷ್ಟ್ರಸ್ಯ—ಧೃತರಾಷ್ಟ್ರ ಪುತ್ರನಿಗಾಗಿ, ದುರ್ಬುದ್ಧೇಃ—ದುರ್ಬುದ್ಧಿಯುವನಾದ, ಯುದ್ಧೇ—ಯುದ್ಧದಲ್ಲಿ, ಪ್ರಿಯ—ಹಿತವನ್ನು, ಚಿಕೀರ್ಷವಃ—ಬಯಸುತ್ತಾ.

**ದುರ್ಬುದ್ಧಿಯುವನಾದ ಧೃತರಾಷ್ಟ್ರ ಪುತ್ರನಿಗೆ ಹಿತಬಯಸುವವರಾಗಿ, ಇಲ್ಲಿ ಯುದ್ಧಕ್ಕಾಗಿ ಯಾರ್ಯಾರು ಬಂದಿದ್ದಾರೋ ಅವರನ್ನು ನೋಡ ಬಯಸುತ್ತೇನೆ.**

**ಭಾವಾರ್ಥ :** ತನ್ನ ತಂದೆ ಧೃತರಾಷ್ಟ್ರನ ಕುಯುಕ್ತಿಗಳಿಂದ ಪ್ರೇರಿತನಾಗಿ ದುರ್ಯೋಧನನು ಪಾಂಡವರ ರಾಜ್ಯವನ್ನೇ ಕಸಿದುಕೊಳ್ಳ ಬಯಸಿದ್ದನು ಎಂಬುದು ಎಲ್ಲರಿಗೂ ತಿಳಿದ ರಹಸ್ಯ. ಆದ್ದರಿಂದ ದುರ್ಯೋಧನನ ಪಕ್ಷ ವಹಿಸಿದ್ದವರೆಲ್ಲರೂ ಒಂದೇ ಶಾಖೆಯ ಪಕ್ಷಿಗಳಾಗಿದ್ದರು. ಅವರು ಯಾರು ಎಂಬುದನ್ನು ಯುದ್ಧಾರಂಭಕ್ಕಿಂತ ಮುಂಚೆ ಅರ್ಜುನನು ನೋಡ ಬಯಸಿದನು. ಆದರೆ ಅವರೊಂದಿಗೆ ಶಾಂತಿ ಸಂಧಾನ ಬಯಸುವ ಇಚ್ಛೆ ಅವನಿಗಿರಲಿಲ್ಲ. ಅಲ್ಲದೆ ಕೃಷ್ಣನು ತನ್ನ ಪಕ್ಕದಲ್ಲಿರುವುದರಿಂದ ತನಗೆ ವಿಜಯ ಖಂಡಿತವಾಗಿದ್ದರೂ, ಅವನು ತಾನು ಇದಿರಿಸಬೇಕಾದ ಸೇನಾ ಬಲವನ್ನು ಅರಿತುಕೊಳ್ಳ ಬಯಸಿದನು.

**ಸಂಜಯ ಉವಾಚ**

**ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ ।**
**ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಮ್ ॥೨೪॥**

ಸಂಜಯಃ ಉವಾಚ—ಸಂಜಯನು ಹೇಳಿದನು,ಏವಮ್—ಹೀಗೆ,ಉಕ್ತಃ—**ಸಂಬೋ**ಧಿಸಿದನು, ಹೃಷೀಕೇಶಃ—ಶ್ರೀಕೃಷ್ಣನು, ಗುಡಾಕೇಶೇನ—ಅರ್ಜುನನಿಂದ, ಭಾರತ—ಓ ಭರತ ವಂಶಜನೇ, ಸೇನಯೋಃ—ಸೇನೆಗಳ ಉಭಯೋಃ—ಎರಡರ, ಮಧ್ಯೇ—ನಡು**ವೆ**, ಸ್ಥಾಪಯಿತ್ವಾ—ನಿಲ್ಲಿಸಿ, ರಥ ಉತ್ತಮಮ್—ಉತ್ತಮವಾದ ರಥವನ್ನು.

**ಸಂಜಯನು ನುಡಿದನು: ಹೇ ಭರತ ವಂಶಜನೇ, ಅರ್ಜುನನಿಂದ ಹೀಗೆ ಸಂಬೋಧಿಸಲ್ಪಟ್ಟು, ಶ್ರೀಕೃಷ್ಣನು ಉಭಯ ಪಕ್ಷಗಳ ಸೇನೆಗಳ ನಡುವೆ ಉತ್ತಮವಾದ ರಥವನ್ನು ನಿಲ್ಲಿಸಿದನು.**

**ಭಾವಾರ್ಥ :** ಈ ಶ್ಲೋಕದಲ್ಲಿ ಅರ್ಜುನನನ್ನು ಗುಡಾಕೇಶ ಎಂದು ಕರೆಯಲಾಗಿದೆ. **ಗುಡಾಕಾ** ಎಂದರೆ ನಿದ್ರೆ.ಯಾರು ನಿದ್ರೆಯನ್ನು ಗೆಲ್ಲುತ್ತಾರೋ ಅವರು **ಗುಡಾಕೇಶ** ಎಂದು ಕರೆಯಲ್ಪಡುತ್ತಾರೆ. ನಿದ್ರೆ ಎಂದರೆ ಅವಿದ್ಯೆ ಎಂದೂ ಅರ್ಥ. ಆದ್ದರಿಂದ ಕೃಷ್ಣ ಸಖ್ಯದಿಂದಾಗಿ ಅರ್ಜುನನು ನಿದ್ರೆಯನ್ನೂ ಅವಿದ್ಯೆಯನ್ನೂ ಗೆದ್ದವನಾಗಿದ್ದನು. ಕೃಷ್ಣನ ಮಹಾ ಭಕ್ತನಾಗಿ ಅರ್ಜುನನು ಕೃಷ್ಣನನ್ನು ಒಂದು ಕ್ಷಣ ಮಾತ್ರವೂ ಮರೆಯುವಂತಿರಲಿಲ್ಲ. ಕಾರಣವೆಂದರೆ, ಅದು ಭಕ್ತನ ಸ್ವಭಾವ. ಭಗವದ್ಭಕ್ತನು ನಿದ್ರಿಸುತ್ತಿರಲಿ ಅಥವಾ ಜಾಗ್ರತನಾಗಿರಲಿ, ಕೃಷ್ಣನ ನಾಮ, ರೂಪ, ಗುಣ, ಕ್ರಿಯಾದಿಗಳನ್ನು ಸದಾ ಚಿಂತನೆ ಮಾಡದೆ ಇರುವುದು ಸಾಧ್ಯವೇ ಇಲ್ಲ. ಹೀಗೆ ಕೃಷ್ಣ ಭಕ್ತನಾದವನು. ಸದಾ ಕೃಷ್ಣ ಚಿಂತನ ಮಾಡುವ

ಮೂಲಕ ನಿದ್ರೆಯನ್ನೂ ಅವಿದ್ಯೆಯನ್ನೂ ಗೆಲ್ಲುತ್ತಾನೆ. ಇದೇ ಕೃಷ್ಣ ಪ್ರಜ್ಞೆ ಅಥವಾ ಸಮಾಧಿ. ಹೃಷೀಕೇಶನಾಗಿ, ಎಂದರೆ ಸಕಲ ಜೀವಾತ್ಮರ ಇಂದ್ರಿಯ ಮತ್ತು ಮನೋ ನಿಯಾಮಕನಾಗಿ, ರಥವನ್ನು ಉಭಯ ಸೇನೆಗಳ ಮಧ್ಯದಲ್ಲಿ ನಿಲ್ಲಿಸಬೇಕೆಂಬ ಅರ್ಜುನನ ಉದ್ದೇಶವನ್ನು ಕೃಷ್ಣನು ಅರಿತುಕೊಂಡಿದ್ದನು. ಅಂತೆಯೇ ಅವನು ಹಾಗೆ ನಿಲ್ಲಿಸಿ ಈ ರೀತಿಯಾಗಿ ನುಡಿದನು.

**ಭೀಷ್ಮದ್ರೋಣಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಮ್ ।**
**ಉವಾಚ ಪಾರ್ಥ ಪಶ್ಯೈತಾನ್ ಸಮವೇತಾನ್ ಕುರೂನಿತಿ ॥೨೫॥**

ಭೀಷ್ಮ—ಭೀಷ್ಮ ಪಿತಾಮಹ, ದ್ರೋಣ—ದ್ರೋಣಾಚಾರ್ಯ, ಪ್ರಮುಖತಃ—ಮುಂದೆ, ಸರ್ವೇಷಾಂ—ಎಲ್ಲರ, ಚ—ಕೂಡ, ಮಹೀಕ್ಷಿತಾಮ್—ಜಗತ್ಪತಿಗಳು, ಉವಾಚ— ನುಡಿದನು, ಪಾರ್ಥ—ಹೇ ಪೃಥಾ ಪುತ್ರನೇ, ಪಶ್ಯ—ನೋಡು, ಏತಾನ್—ಅವರೆಲ್ಲರನ್ನು, ಸಮವೇತಾನ್—ಸೇರಿದವರೆಲ್ಲರನ್ನು, ಕುರೂನ್—ಕೌರವ ಕುಲದವರೆಲ್ಲ ರನ್ನು, ಇತಿ—ಹೀಗೆ.

**ಭೀಷ್ಮ, ದ್ರೋಣ ಮತ್ತು ಇತರ ಎಲ್ಲ ಚಮೂಪತಿಗಳ ಸಮ್ಮುಖದಲ್ಲಿ ಹೇ, ಪಾರ್ಥನೇ, ಇಲ್ಲಿ ಸೇರಿದ ಎಲ್ಲ ಕೌರವರನ್ನು ನೋಡು ಎಂದು ಕೃಷ್ಣನು ನುಡಿದನು.**

**ಭಾವಾರ್ಥ :** ಸರ್ವ ಜೀವಿಗಳ ಪರಮಾತ್ಮನಾಗಿ, ಶ್ರೀಕೃಷ್ಣನು ಅರ್ಜುನನ ಮನೋಗತವನ್ನು ಅರಿತುಕೊಳ್ಳಬಲ್ಲವನಾಗಿದ್ದನು. ಈ ಸಂದರ್ಭದಲ್ಲಿ ಹೃಷೀಕೇಶ ಎಂಬ ಪದದ ಬಳಕೆಯು, ಕೃಷ್ಣನು ಎಲ್ಲ ಬಲ್ಲವನಾಗಿದ್ದನು ಎಂಬುದನ್ನು ಸೂಚಿಸುತ್ತದೆ. ಪಾರ್ಥ, ಎಂದರೆ ಕುಂತೀ ಅಥವಾ ಪೃಥಾ ಪುತ್ರ ಎಂಬ ಪದವು, ಅರ್ಜುನನ ವಿಷಯದಲ್ಲಿ ಅಷ್ಟೇ ಮಹತ್ವದ್ದಾಗಿದೆ. ಶ್ರೀಕೃಷ್ಣನ ತಂದೆಯಾದ ವಸುದೇವನ ಸೋದರಿಯೇ ಪೃಥಾದೇವಿ. ಅರ್ಜುನನು ಇವಳ ಮಗನಾಗಿದ್ದರಿಂದ, ಕೃಷ್ಣನು ಅರ್ಜುನನ ಸಾರಥಿಯಾಗಲು ಒಪ್ಪಿದೆನೆಂದು, ಸಖನಾಗಿ, ಅರ್ಜುನನಿಗೆ ಕೃಷ್ಣನು ತಿಳಿಸ ಬಯಸಿದನು. "ಕೌರವರನ್ನು ನೋಡು", ಎಂದು ಅರ್ಜುನನಿಗೆ ಕೃಷ್ಣನು ಈಗ ಹೇಳಿದ್ದರ ಅರ್ಥವೇನು ? ಅರ್ಜುನನು ಅಷ್ಟಕ್ಕೆ ನಿಂತು ಯುದ್ಧ ಮಾಡದಿರುವನೇ ? ತನ್ನ ಅತ್ತೆ ಪೃಥಾದೇವಿಯ ಮಗನಾದ ಅರ್ಜುನನಿಂದ ಕೃಷ್ಣನು ಇದನ್ನು ಎಂದೂ ನಿರೀಕ್ಷಿಸಿರಲಿಲ್ಲ. ಅಂತೆಯೇ ಭಗವಂತನು ಸಖ್ಯ ಭಾವದ ಹಾಸ್ಯದಲ್ಲಿ ಅರ್ಜುನನ ಮನಸ್ಸನ್ನು ಸೂಚಿಸಿದನು.

**ತತ್ರಾಪಶ್ಯತ್ ಸ್ಥಿತಾನ್ ಪಾರ್ಥಃ ಪಿತೃನಥ ಪಿತಾಮಹಾನ್ ।**
**ಆಚಾರ್ಯಾನ್ಮಾತುಲಾನ್ ಭ್ರಾತೃನ್ ಪುತ್ರಾನ್ ಪೌತ್ರಾನ್ ಸಖೀಂಸ್ತಥಾ ।**
**ಶ್ವಶುರಾನ್ ಸುಹೃದಶ್ಚೈವ ಸೇನಯೋರುಭಯೋರಪಿ ॥೨೬॥**

ತತ್ರ—ಅಲ್ಲಿ, ಅಪಶ್ಯತ್—ಅವನು ನೋಡಬಲ್ಲವನಾದನು, ಸ್ಥಿತಾನ್—ನಿಂತಿರುವವರನ್ನು, ಪಾರ್ಥಃ —ಅರ್ಜುನನು, ಪಿತೃನ್—ಪಿತೃಗಳನ್ನು, ಅಥ—ಕೂಡ, ಪಿತಾಮಹಾನ್—

ಪಿತಾಮಹರನ್ನು, ಆಚಾರ್ಯಾನ್—ಆಚಾರ್ಯರನ್ನು, ಮಾತುಲಾನ್—ಸೋದರ ಮಾವಂದಿರನ್ನು, ಭ್ರಾತೄನ್—ಸೋದರರನ್ನು, ಪುತ್ರಾನ್—ಪುತ್ರರನ್ನು, ಪೌತ್ರಾನ್—ಪೌತ್ರರನ್ನು, ಸಖೀನ್—ಮಿತ್ರರನ್ನು, ತಥಾ—ಸಹ, ಶ್ವಶುರಾನ್—ಮಾವಂದಿರನ್ನು, ಸುಹೃದಃ—ಹಿತೈಷಿಗಳನ್ನು, ಚ—ಕೂಡ, ಏವ—ಖಂಡಿತವಾಗಿ, ಸೇನಯೋಃ—ಸೇನೆಗಳ, ಉಭಯೋಃ—ಉಭಯ ಪಕ್ಷಗಳ, ಅಪಿ—ಸೇರಿದಂತೆ.

**ಉಭಯ ಪಕ್ಷಗಳ ಸೇನಾ ಮಧ್ಯದಲ್ಲಿ ಅರ್ಜುನನು ತನ್ನ ಪಿತೃಗಳನ್ನು, ಪಿತಾಮಹರನ್ನು, ಆಚಾರ್ಯರನ್ನು, ಸೋದರ ಮಾವಂದಿರನ್ನು, ಸೋದರರನ್ನು, ಪುತ್ರರನ್ನು, ಪೌತ್ರರನ್ನು, ಮಿತ್ರರನ್ನು, ಮಾವಂದಿರನ್ನು ಮತ್ತು ಹಿತೈಷಿಗಳನ್ನು ನೋಡಿದನು.**

**ಭಾವಾರ್ಥ :** ಯುದ್ಧ ಭೂಮಿಯಲ್ಲಿ ಅರ್ಜುನನು ತನ್ನ ಎಲ್ಲ ಪ್ರಕಾರದ ಬಂಧುಗಳನ್ನು ಕಂಡನು. ತನ್ನ ಪಿತೃಗಳ ಸಮಕಾಲೀನರಾದ ಭೂರಿಶ್ರವರಂಥ ವ್ಯಕ್ತಿಗಳನ್ನು, ಭೀಷ್ಮ ಮತ್ತು ಸೋಮದತ್ತರಂಥ ಪಿತಾಮಹರನ್ನು, ದ್ರೋಣ ಮತ್ತು ಕೃಪರಂಥ ಆಚಾರ್ಯರನ್ನು, ಶಲ್ಯ ಮತ್ತು ಶಕುನಿಯಂಥ ಸೋದರಮಾವಂದಿರನ್ನು, ದುರ್ಯೋಧನನಂಥ ಸೋದರರನ್ನು, ಲಕ್ಷ್ಮಣನಂಥ ಪುತ್ರರನ್ನು, ಅಶ್ವತ್ಥಾಮನಂಥ ಮಿತ್ರರನ್ನು, ಕೃತವರ್ಮನಂಥ ಹಿತೈಷಿ ಮೊದಲಾದವರನ್ನು ಕಂಡನು. ತನ್ನ ಅನೇಕ ಮಿತ್ರರನ್ನೊಳಗೊಂಡ ಸೇನೆಗಳನ್ನೂ ಅವನು ಕಂಡನು.

**ತಾನ್ ಸಮೀಕ್ಷ್ಯ ಸ ಕೌಂತೇಯಃ ಸರ್ವಾನ್ ಬಂಧೂನವಸ್ಥಿತಾನ್ ।**
**ಕೃಪಯಾ ಪರಯಾವಿಷ್ಟೋ ವಿಷೀದನ್ನಿದಮಬ್ರವೀತ್ ॥೨೭॥**

ತಾನ್—ಅವರೆಲ್ಲರನ್ನು, ಸಮೀಕ್ಷ್ಯ—ನೋಡಿದಮೇಲೆ, ಸಃ—ಅವನು, ಕೌಂತೇಯಃ—ಕುಂತೀ ಪುತ್ರನು, ಸರ್ವಾನ್—ಎಲ್ಲ ಬಗೆಯ, ಬಂಧೂನ್—ಬಂಧುಗಳನ್ನು, ಅವಸ್ಥಿತಾನ್—ಇರುವ, ಕೃಪಯಾ—ಕೃಪೆಯಿಂದ, ಪರಯಾ—ಉತ್ತಮ ಶ್ರೇಣಿಯ, ಆವಿಷ್ಟಃ—ಪ್ರಭಾವಿತನಾಗಿ, ವಿಷೀದನ್—ವಿಷಾದಿಸುತ್ತ, ಇದಮ್—ಹೀಗೆ, ಅಬ್ರವೀತ್—ನುಡಿದನು.

**ಕುಂತೀ ಪುತ್ರನಾದ ಅರ್ಜುನನು, ವಿವಿಧ ಶ್ರೇಣಿಯ ಮಿತ್ರರು ಮತ್ತು ಬಂಧುಗಳನ್ನು ಕಂಡಾಗ, ಅವನು ಅತ್ಯಂತ ಸಹಾನುಭೂತಿಪರನಾಗಿ ಹೀಗೆ ನುಡಿದನು.**

**ಅರ್ಜುನ ಉವಾಚ**

**ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಮ್ ।**
**ಸೀದಂತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ ॥೨೮॥**

ಅರ್ಜುನಃ ಉವಾಚ—ಅರ್ಜುನನು ನುಡಿದನು, ದೃಷ್ಟ್ವಾ—ನೋಡಿದ ಬಳಿಕ, ಇಮಮ್—ಈ ಎಲ್ಲ, ಸ್ವಜನಮ್—ಬಂಧುಗಳನ್ನು, ಕೃಷ್ಣ—ಹೇ ಕೃಷ್ಣ, ಯುಯುತ್ಸುಮ್—ಎಲ್ಲರೂ ಯುದ್ಧ ಸಿದ್ಧತೆಯಲ್ಲಿ, ಸಮುಪಸ್ಥಿತಮ್—ಇರುವುದು, ಸೀದಂತಿ—ನಡುಗುತ್ತಿರುವುವು,

ಮಮ—ನನ್ನ, ಗಾತ್ರಾಣಿ—ದೇಹದ ಅಂಗಗಳು, ಮುಖಂ—ಬಾಯಿ, ಚ—ಕೂಡ, ಪರಿಶುಷ್ಯತಿ—ಒಣಗುತ್ತಿದೆ.

**ಅರ್ಜುನನು ನುಡಿದನು : ನನ್ನ ಪ್ರಿಯ ಕೃಷ್ಣನೇ, ನನ್ನ ಮಿತ್ರರು ಮತ್ತು ಬಂಧುಗಳು ಕಾದಾಡುವ ಮನಸ್ಸಿನಿಂದ ಇದಿರಿಗೆ ನಿಂತಿರುವುದನ್ನು ನೋಡಿ, ನನ್ನ ದೇಹದ ಅಂಗಗಳು ನಡುಗುತ್ತಿರುವಂತೆ ಮತ್ತು ನನ್ನ ಬಾಯಿ ಒಣಗುತ್ತಿರುವಂತೆ ಅನಿಸುತ್ತಿದೆ.**

**ಭಾವಾರ್ಥ :** ಭಗವಂತನ ನಿಜ ಭಕ್ತನಾದವನಲ್ಲಿ, ದೇವತೆಗಳಲ್ಲಿ ಅಥವಾ ದೈವೀಕ ವ್ಯಕ್ತಿಗಳಲ್ಲಿ ಇರುವ ಎಲ್ಲ ಸದ್ಗುಣಗಳು ಇರುತ್ತವೆ; ಆದರೆ, ಅಭಕ್ತನು ಭೌತಿಕವಾಗಿ ಎಷ್ಟೇ ಪ್ರಗತಿ ಹೊಂದಿದವನಾಗಿದ್ದರೂ, ಎಷ್ಟೇ ಶಿಕ್ಷಣ ಮತ್ತು ಸಂಸ್ಕೃತಿಯನ್ನು ಹೊಂದಿದವನಾಗಿದ್ದರೂ, ಅವನಲ್ಲಿ ದೈವೀಗುಣಗಳು ಇರುವುದಿಲ್ಲ. ಹೀಗಾಗಿ, ಅರ್ಜುನನು ಯುದ್ಧ ಭೂಮಿಯಲ್ಲಿ ತನ್ನ ಬಂಧು ಮಿತ್ರ ಸಂಬಂಧಿಗಳನ್ನು ನೋಡಿದೊಡನೆಯೇ, ಯುದ್ಧ ಸನ್ನದ್ಧರಾಗಿ ಬಂದ ಅವರೆಲ್ಲರ ಬಗ್ಗೆ ಕೂಡಲೇ ಸಹಾನುಭೂತಿ ಪರವಶನಾದನು. ತನ್ನ ಸೈನಿಕರ ಮಟ್ಟಿಗಂತೂ, ಅವನು ಮುಂಚಿನಿಂದಲೇ ದಯಾಪರನಾಗಿದ್ದನು, ಆದರೆ ಅವನ ಇದಿರು ಪಕ್ಷದ ಸೈನಿಕರೆಲ್ಲರೂ ಮರಣ ಮುಖಕ್ಕೆ ಧಾವಿಸುತ್ತಿರುವರೆಂಬುದನ್ನು ಅರಿತ ಅರ್ಜುನನಿಗೆ ಅವರ ಬಗ್ಗೆಯೂ ಕೂಡ ಕೃಪೆಯುಂಟಾಯಿತು. ಅವನು ಹಾಗೆ ಚಿಂತಿಸುತ್ತಿರುವಾಗ, ಅವನ ದೇಹದ ಅಂಗಾಂಗಗಳು ಕಂಪಿಸಲಾರಂಭಿಸಿದುವು, ಮತ್ತು ಅವನ ಬಾಯಿ ಒಣಗತೊಡಗಿತು. ಅವರ ಯುದ್ಧ ಸಿದ್ಧತೆಯನ್ನು ಕಂಡು ಅವನಿಗೆ ಬಹಳ ವಿಸ್ಮಯವಾಯಿತು. ವಾಸ್ತವಿಕವಾಗಿ ಇಡೀ ಸಮುದಾಯವು ಮತ್ತು ಅರ್ಜುನನ ಎಲ್ಲ ರಕ್ತ ಸಂಬಂಧಿಗಳು ಅವನೊಡನೆ ಯುದ್ಧ ಮಾಡಲು ಬಂದಿದ್ದರು. ಇದರಿಂದ ಅರ್ಜುನನಂಥ ದಯಾಪರನಾದ ಭಕ್ತನಿಗೆ ಮನಸ್ಸು ವಿಹ್ವಲವಾಯಿತು. ಅಷ್ಟು ವಿವರವಾಗಿ ಇಲ್ಲಿ ಹೇಳಿರದಿದ್ದರೂ, ಅರ್ಜುನನ ಅಂಗಾಗಗಳು ಕಂಪಿಸತೊಡಗಿ, ಅವನ ಬಾಯಿ ಒಣಗತೊಡಗಿತಷ್ಟೇ ಅಲ್ಲದೆ, ಅವನು ಆರ್ದ್ರಹೃದಯನಾಗಿ ರೋದಿಸತೊಡಗಿದನು. ಅರ್ಜುನನಲ್ಲಿ ಈ ಲಕ್ಷಣಗಳು ಕಂಡು ಬಂದದ್ದು ಅವನ ದುರ್ಬಲತೆಯಿಂದ ಅಲ್ಲ, ಅವನ ಮೃದು ಹೃದಯದಿಂದ. ಇದು ಭಗವಂತನ ಶುದ್ಧ ಭಕ್ತನ ಲಕ್ಷಣ. ಅಂತೆಯೇ ಹೀಗೆ ಹೇಳಲಾಗಿದೆ :

ಯಸ್ಯಾಸ್ತಿ ಭಕ್ತಿರ್ ಭಗವತ್ಯಕಿಂಚನಾ।
ಸರ್ವೈರ್ ಗುಣೈಸ್ತತ್ರ ಸಮಾಸತೇ ಸುರಾಃ।
ಹರಾವ ಅಭಕ್ತಸ್ಯ ಕುತೋ ಮಹದ್ಗುಣಾ।
ಮನೋರಥೇನಾಸತಿ ಧಾವತೋ ಬಹಿಃ॥

"ಭಗವಂತನಲ್ಲಿ ಖಿಷ್ಕಲ ಭಕ್ತಿಯುಳ್ಳವನು ದೇವತೆಗಳ ಸಕಲ ಸದ್ಗುಣಗಳನ್ನು ಹೊಂದಿರುತ್ತಾನೆ. ಭಗವಂತನ ಭಕ್ತನಲ್ಲದವನು ಕೇವಲ ಕಿಂಚಿತ್ ಪ್ರಯೋಜಕವಾದ ಭೌತಿಕ ಗುಣಗಳನ್ನು ಮಾತ್ರ ಹೊಂದಿರುತ್ತಾನೆ. ಏಕೆಂದರೆ, ಅವನು ತನ್ನ ಮನೋಮಟ್ಟದಲ್ಲಿ ಸಂಚರಿಸುತ್ತಿರುವನು ಮತ್ತು ಅವನು ಭೌತಿಕ ಶಕ್ತಿಯ ಝಗ ಝಗಿಸುವ ಹೊಳಪಿನಿಂದ ಆಕರ್ಷಿತನಾಗುವುದು ಖಂಡಿತ" (ಭಾಗವತ 5.18. 12).

**ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ ।**
**ಗಾಂಡೀವಂ ಸ್ರಂಸತೇ ಹಸ್ತಾತ್ ತ್ವಕ್ಚೈವ ಪರಿದಹ್ಯತೇ ॥೨೯॥**

ವೇಪಥುಃ—ದೇಹವು ಕಂಪಿಸುತ್ತಿದೆ, ಚ—ಕೂಡ, ಶರೀರೇ—ದೇಹದ ಮೇಲೆ, ಮೇ—ನನ್ನ, ರೋಮಹರ್ಷಃ—ರೋಮಾಂಚನ, ಚ—ಕೂಡ, ಜಾಯತೇ—ಆಗುತ್ತಿದೆ, ಗಾಂಡೀವಮ್—ಅರ್ಜುನನ ಧನುಸ್ಸು, ಸ್ರಂಸತೇ—ಜಾರುತ್ತಿದೆ, ಹಸ್ತಾತ್—ಕೈಯಿಂದ, ತ್ವಕ್—ಚರ್ಮವು, ಚ—ಕೂಡ, ಏವ—ಖಂಡಿತವಾಗಿ, ಪರಿದಹ್ಯತೇ—ಉರಿಯುತ್ತಿದೆ.

**ನನ್ನ ಇಡೀ ದೇಹವು ಕಂಪಿಸುತ್ತಿದೆ, ರೋಮಾಂಚನವಾಗುತ್ತಿದೆ, ನನ್ನ ಗಾಂಡೀವ ಧನುಸ್ಸು ಕೈಯಿಂದ ಜಾರುತ್ತಿದೆ, ನನ್ನ ಮೈ ಉರಿಯುತ್ತಿದೆ.**

**ಭಾವಾರ್ಥ :** ಮೈ ನಡುಕವು ಎರಡು ಪ್ರಕಾರದ್ದು, ಹಾಗೆಯೇ ರೋಮಾಂಚನವೂ ಕೂಡ ಎರಡು ಪ್ರಕಾರದ್ದು. ಆಧ್ಯಾತ್ಮಿಕ ಅತ್ಯಾನಂದವಾದಾಗ ಅಥವಾ ಭೌತಿಕ ಸ್ಥಿತಿಯ ಮಹಾಭಯ ಉಂಟಾದಾಗ ಇಂಥ ಅನುಭವ ಆಗುವುದುಂಟು. ದಿವ್ಯ ಸಾಕ್ಷಾತ್ಕಾರದಲ್ಲಿ ಭಯವೇ ಇಲ್ಲ. ಈ ಪ್ರಸಂಗದಲ್ಲಿ ಅರ್ಜುನನ ಲಕ್ಷಣಗಳು ಭೌತಿಕ ಭಯದಿಂದ—ಎಂದರೆ ಪ್ರಾಣ ನಾಶ ಭಯದಿಂದ ಉಂಟಾಗಿದ್ದವು. ಇತರ ಲಕ್ಷಣಗಳಿಂದಲೂ ಇದು ವೇದ್ಯವು. ಅವನು ಎಷ್ಟು ತಾಳ್ಮೆ ಕಳೆದುಕೊಂಡನೆಂದರೆ, ಅವನ ಕೈಯಿಂದ ಪ್ರಸಿದ್ಧ ಗಾಂಡೀವ ಧನುಸ್ಸು ಜಾರತೊಡಗಿತು ಮತ್ತು ಅವನ ಹೃದಯವು ತಲ್ಲಣಿಸತೊಡಗಿದ್ದರಿಂದ ಅವನಿಗೆ ತನ್ನ ಮೈ ಚರ್ಮವು ಉರಿದಂತೆ ಭಾಸವಾಗ ತೊಡಗಿತು. ಭೌತಿಕ ಜೀವನದ ಕಲ್ಪನೆಯು ಇವುಗಳೆಲ್ಲಕ್ಕೂ ಕಾರಣ.

**ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ ।**
**ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ ॥೩೦॥**

ನ—ಇಲ್ಲವು, ಚ—ಕೂಡ, ಶಕ್ನೋಮಿ—ಶಕ್ತನಾಗಿಲ್ಲ, ಅವಸ್ಥಾತುಂ—ನಿಲ್ಲಲು, ಭ್ರಮತಿ—ವಿಸ್ಮೃತಿಯಾಗುತ್ತಿದೆ, ಇವ—ಹಾಗೆ, ಚ—ಮತ್ತು, ಮೇ—ನನ್ನ, ಮನಃ—ಮನಸ್ಸು, ನಿಮಿತ್ತಾನಿ—ಕಾರಣಗಳನ್ನು, ಚ—ಕೂಡ, ಪಶ್ಯಾಮಿ—ನೋಡುತ್ತೇನೆ, ವಿಪರೀತಾನಿ—ವಿರುದ್ಧ, ಕೇಶವ—ಹೇ ಕೇಶೀ ದೈತ್ಯ ಸಂಹಾರಕನೇ (ಕೃಷ್ಣನೇ).

**ನನಗೆ ಇನ್ನು ಮುಂದೆ ಇಲ್ಲಿ ನಿಲ್ಲಲು ಸಾಧ್ಯವಿಲ್ಲ. ನನಗೆ ಆತ್ಮ ವಿಸ್ಮೃತಿಯಾಗುತ್ತಿದೆ. ನನ್ನ ಮನಸ್ಸು ಭ್ರಮಿಸುತ್ತಿದೆ. ಕೇಶೀ ದೈತ್ಯಸಂಹಾರಕನಾದ ಹೇ ಕೃಷ್ಣನೇ, ದುರ್ದೈವದ ಕಾರಣಗಳೇ ಕಾಣುತ್ತಿವೆ.**

**ಭಾವಾರ್ಥ:** ತಾಳ್ಮೆ ಕಳೆದುಕೊಂಡಿದ್ದರಿಂದ, ಅರ್ಜುನನಿಗೆ ಯುದ್ಧ ಭೂಮಿಯಲ್ಲಿ ನಿಲ್ಲಲು ಸಾಧ್ಯವಾಗದಾಯಿತು, ಮತ್ತು ಅವನ ಮನೋದುರ್ಬಲತೆಯಿಂದಾಗಿ ಅವನಿಗೆ ಆತ್ಮವಿಸ್ಮೃತಿ ಉಂಟಾಯಿತು. ಭೌತಿಕ ವಸ್ತುಗಳ ಅತಿವ್ಯಾಮೋಹವು ಮನುಷ್ಯನಿಗೆ ಇಂಥ ದಿಗ್ಭ್ರಮೆಯ ಸ್ಥಿತಿಯನ್ನುಂಟುಮಾಡುತ್ತದೆ. **ಭಯಂ ದ್ವಿತೀಯಾಭಿನಿವೇಶತಃ ಸ್ಯಾತ್** (ಭಾಗವತ

11-2-37): ಭೌತಿಕ ಸನ್ನಿವೇಶಗಳಿಂದ ಅತಿಪ್ರಭಾವಿತರಾದ ವ್ಯಕ್ತಿಗಳಲ್ಲಿ ಇಂಥ ಭಯ ಉಂಟಾಗಿ, ಮಾನಸಿಕ ಸ್ತಿಮಿತವು ನಷ್ಟವಾಗುತ್ತದೆ. ಅರ್ಜುನನಿಗೆ ಯುದ್ಧ ಭೂಮಿಯಲ್ಲಿ ಕೇವಲ ದುಃಖಮಯ ದೃಶ್ಯಗಳೇ ಕಾಣತೊಡಗಿದವು—ಅವನಿಗೆ ವೈರಿಗಳ ಮೇಲೆ ವಿಜಯ ದೊರೆತರೂ ಆದರಿಂದ ಅವನಿಗೆ ಸಂತೋಷವಾಗುತ್ತಿರಲಿಲ್ಲ. **ನಿಮಿತ್ತಾನಿ ವಿಪರೀತಾನಿ** ಎಂಬ ಶಬ್ದಗಳು ಮಹತ್ವಪೂರ್ಣವಾಗಿವೆ. ಮನುಷ್ಯನ ನಿರೀಕ್ಷಣೆಗಳೆಲ್ಲ ಹತಾಶವಾದಾಗ, ಅವನು "ನಾನೇಕೆ ಇಲ್ಲಿದ್ದೇನೆ?" ಎಂದು ಚಿಂತಿಸುತ್ತಾನೆ. ಪ್ರತಿಯೊಬ್ಬನೂ ಕೂಡ ತನ್ನಲ್ಲಿ ಮತ್ತು ತನ್ನ ಸ್ವಯಂ ಕಲ್ಯಾಣದಲ್ಲಿ ಆಸಕ್ತನಾಗಿರುತ್ತಾನೆ. ಪರಮಾತ್ಮನಲ್ಲಿ ಯಾರಿಗೂ ಆಸಕ್ತಿ ಇಲ್ಲ. ಅರ್ಜುನನು ತನ್ನ ಸ್ವಹಿತದ ಬಗ್ಗೆ ಅಜ್ಞಾನ ತೋರುತ್ತಿರುವುದು ಕೃಷ್ಣನ ಇಚ್ಛೆಯಿಂದ. ಜೀವಾತ್ಮನ ನಿಜವಾದ ಹಿತವು ವಿಷ್ಣು ಅಥವಾ ಕೃಷ್ಣನನ್ನೇ ಕೂಡಿದೆ. ಬದ್ಧ ಜೀವನು ಇದನ್ನು ಮರೆಯುತ್ತಾನೆ, ಅಂತೆಯೇ ಅವನು ಭೌತಿಕ ನೋವುಗಳನ್ನು ಅನುಭವಿಸುತ್ತಾನೆ. ಯುದ್ಧದಲ್ಲಿ ದೊರೆಯುವ ಜಯವು ತನಗೆ ದುಃಖಕ್ಕೆ ಮಾತ್ರ ಕಾರಣವಾಗುವುದೆಂದು ಅರ್ಜುನನು ಭಾವಿಸಿದನು.

**ನ ಚ ಶ್ರೇಯೋ ನುಪಶ್ಯಾಮಿ ಹತ್ವಾ ಸ್ವಜನಮಾಹವೇ ।**
**ನ ಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ ॥೩೧॥**

ನ—ಇಲ್ಲವು, ಚ—ಕೂಡ, ಶ್ರೇಯಃ—ಶ್ರೇಯಸ್ಸು, ಅನುಪಶ್ಯಾಮಿ—ಉಂಟಾಗುವುದನ್ನು ನೋಡುತ್ತಿದ್ದೇನೆ, ಹತ್ವಾ—ಕೊಲ್ಲುವುದರಿಂದ. ಸ್ವಜನಮ್—ಸ್ವಂತ ಬಂಧುಗಳನ್ನು, ಆಹವೇ—ಯುದ್ಧದಲ್ಲಿ, ನ—ಅಥವಾ, ಕಾಙ್ಕ್ಷೇ—ನನಗೆ ಇಚ್ಛೆ ಇಲ್ಲ, ವಿಜಯಮ್—ವಿಜಯದ, ಕೃಷ್ಣ—ಹೇ ಕೃಷ್ಣನೇ, ನ—ಅಥವಾ, ಚ—ಕೂಡ, ರಾಜ್ಯಮ್—ರಾಜ್ಯದ, ಸುಖಾನಿ—ಅದರ ಸುಖಗಳ, ಚ—ಕೂಡ.

**ಯುದ್ಧದಲ್ಲಿ ನನ್ನ ಸ್ವಬಂಧುಗಳನ್ನು ಕೊಲ್ಲುವುದರಿಂದ ಉಂಟಾಗುವ ಹಿತವಾದರೂ ಏನು ಎಂಬುದು ನನಗೆ ಕಾಣುತ್ತಿಲ್ಲ. ಪ್ರಿಯ ಕೃಷ್ಣನೇ, ಯುದ್ಧ ವಿಜಯವನ್ನಾಗಲಿ ರಾಜ್ಯವನ್ನಾಗಲಿ ಅಥವಾ ಸುಖವನ್ನಾಗಲಿ ನಾನು ಇಚ್ಛಿಸಲಾರೆನು.**

**ಭಾವಾರ್ಥ :** ವಿಷ್ಣುವಿನಲ್ಲಿ (ಅಥವಾ ಕೃಷ್ಣನಲ್ಲಿ) ತಮ್ಮ ಹಿತ ಅಡಗಿದೆ ಎಂಬುದನ್ನು ಅರಿಯದ ಬದ್ಧ ಜೀವಾತ್ಮರು, ದೈಹಿಕ ಸಂಬಂಧಗಳಿಂದ ತಮಗೆ ಸುಖ ದೊರೆಯುವುದೆಂದು ನಿರೀಕ್ಷಿಸಿ,ಇಂಥ ಸಂಬಂಧಗಳಿಗೆ ಆಕರ್ಷಿತರಾಗುತ್ತಾರೆ. ಜೀವನದ ಇಂಥ ಕುರುಡು ದೆಸೆಯಿಂದ ಅವರು ಭೌತಿಕ ಸುಖದ ಕಾರಣಗಳನ್ನೂ ಮರೆಯುತ್ತಾರೆ.ಅರ್ಜುನನು ಕ್ಷತ್ರಿಯ ಸಹಜವಾದ ನೀತಿ ಸೂತ್ರಗಳನ್ನು ಕೂಡ ಮರೆತಂತೆ ತೋರುತ್ತಿದೆ. ಕೃಷ್ಣನ ಸ್ವಯಂ ಆದೇಶಗಳ ಮೇರೆಗೆ ಯುದ್ಧ ಭೂಮಿಯಲ್ಲಿಯೇ ಮರಣ ಹೊಂದುವ ಕ್ಷತ್ರಿಯನು ಮತ್ತು ಸಂಪೂರ್ಣವಾಗಿ ಅಧ್ಯಾತ್ಮನಿಷ್ಠನಾದ ಸನ್ಯಾಸಿಯು—ಈ ಎರಡೂ ವರ್ಗದವರು—ಅತ್ಯಂತ ಕಣ್ಣು ಕುಕ್ಕಿಸುವ ಪ್ರಭಾವೀ ಸೂರ್ಯಲೋಕವನ್ನು ಪ್ರವೇಶಿಸಲು ಅರ್ಹರಾಗುತ್ತಾರೆ ಎಂದು ಹೇಳಲಾಗಿದೆ. ಅರ್ಜುನನು ಬಂಧುಗಳನ್ನಂತೂ ಇರಲಿ, ವೈರಿಗಳನ್ನು ಕೂಡ ಕೊಲ್ಲಲು

ಹಿಂಜರಿದನು. ತನ್ನ ಬಂಧುಗಳನ್ನು ಕೊಲ್ಲುವುದರಿಂದ ತನಗೆ ಜೀವನದಲ್ಲಿ ಸುಖ ದೊರೆಯುವುದಿಲ್ಲ ಎಂಬುದು ಅವನ ಭಾವನೆ. ಅಂತೆಯೇ ಅವನು ಯುದ್ಧಕ್ಕೆ ಸಿದ್ಧನಿರಲಿಲ್ಲ. ಹಸಿವೆಯಾಗದವನು ಅಡಿಗೆ ಮಾಡಲು ಇಚ್ಛೆ ಹೊಂದಿರದಂತೆ ಅವನ ಸ್ಥಿತಿ ಇತ್ತು. ಈಗ ಅವನು ಹತಾಶನಾಗಿ ಅಡವಿಗೆ ಹೋಗಿ, ಏಕಾಂಗೀ ಜೀವನ ನಡೆಸಲು ನಿರ್ಧರಿಸಿದನು. ಕ್ಷತ್ರಿಯರು ಇತರ ಯಾವ ವೃತ್ತಿಯಲ್ಲಿ ತೊಡಗುವಂತಿಲ್ಲವಾದ ಕಾರಣ, ಕ್ಷತ್ರಿಯನಾಗಿ ಉಳಿ ಜೀವಿಸಲು ಅವನಿಗೆ ರಾಜ್ಯವು ಅಗತ್ಯ. ಆದರೆ ಅವನಿಗೆ ರಾಜ್ಯವಿಲ್ಲ. ಅರ್ಜುನನ ರಾಜ್ಯ ಸಂಪಾದನೆಯ ಏಕೈಕ ಅವಕಾಶವು, ತಂದೆಯಿಂದ ಬಂದ ರಾಜ್ಯವನ್ನು ಪುನಃ ಸಂಪಾದಿಸಲು ತನ್ನ ಭ್ರಾತೃೀಯರೊಂದಿಗೆ ಮತ್ತು ಸೋದರರೊಂದಿಗೆ ಯುದ್ಧ ಮಾಡುವುದರಲ್ಲಿತ್ತು. ಆದರೆ ಅವನಿಗೆ ಅದನ್ನು ಮಾಡುವ ಇಚ್ಛೆ ಇರಲಿಲ್ಲ. ಆದ್ದರಿಂದ ಹತಾಶನಾಗಿ ಏಕಾಂಗಿಯಾಗಿ ಅಡವಿಗೆ ಹೋಗಿ ಜೀವಿಸಲು ತಾನು ಯೋಗ್ಯನೆಂದು ಅವನು ಭಾವಿಸಿದನು.

**ಕಿಂ ನೋ ರಾಜ್ಯೇನ ಗೋವಿನ್ದ ಕಿಂ ಭೋಗೈರ್ಜೀವಿತೇನ ವಾ ।**
**ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ ॥೩೨॥**
**ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ।**
**ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ ॥೩೩॥**
**ಮಾತುಲಾಃ ಶ್ವಶುರಾಃ ಪೌತ್ರಾಃ ಶ್ಯಾಲಾಃ ಸಂಬಂಧಿನಸ್ತಥಾ ।**
**ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ ॥೩೪॥**
**ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ ।**
**ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ ॥೩೫॥**

ಕಿಮ್—ಏನು ಪ್ರಯೋಜನ, ನಃ—ನಮಗೆ, ರಾಜ್ಯೇನ—ರಾಜ್ಯದಿಂದ, ಗೋವಿಂದ—ಹೇ ಕೃಷ್ಣನೇ, ಕಿಮ್—ಏನು, ಭೋಗೈಃ—ಭೋಗದಿಂದ, ಜೀವಿತೇನ—ಜೀವನದಿಂದ, ವಾ—ಅಥವಾ, ಯೇಷಾಮ್—ಅವುಗಳ, ಅರ್ಥೇ—ಸಲುವಾಗಿ, ಕಾಂಕ್ಷಿತಮ್—ಬಯಸುವುದು, ನಃ—ನಮ್ಮಿಂದ, ರಾಜ್ಯಮ್—ರಾಜ್ಯವನ್ನು, ಭೋಗಾಃ—ಸಾಂಸಾರಿಕ ಸುಖವನ್ನು, ಸುಖಾನಿ—ಎಲ್ಲ ಸುಖಗಳನ್ನು, ಚ—ಕೂಡ, ತೇ—ಅವು ಎಲ್ಲವು, ಇಮೇ—ಇವು, ಅವಸ್ಥಿತಾಃ—ಇವೆ, ಯುದ್ಧೇ—ಯುದ್ಧ ಭೂಮಿಯಲ್ಲಿ, ಪ್ರಾಣಾನ್—ಪ್ರಾಣಗಳನ್ನು, ತ್ಯಕ್ತ್ವಾ—ಬಿಟ್ಟು, ಧನಾನಿ—ಸಂಪತ್ತನ್ನು, ಚ—ಕೂಡ, ಆಚಾರ್ಯಾಃ—ಆಚಾರ್ಯರು, ಪಿತರಃ—ಪಿತೃಗಳು, ಪುತ್ರಾಃ—ಪುತ್ರರು, ತಥಾ—ಹಾಗೂ, ಏವ—ಖಂಡಿತವಾಗಿ, ಚ—ಕೂಡ, ಪಿತಾಮಹಾಃ—ಪಿತಾಮಹರು, ಮಾತುಲಾಃ—ಸೋದರ ಮಾವಂದಿರು, ಶ್ವಶುರಾಃ—ಮಾವಂದಿರು, ಪೌತ್ರಾಃ—ಪೌತ್ರರು, ಶ್ಯಾಲಾಃ—ಭಾವಂದಿರು, ಸಂಬಂಧಿನಃ—ಸಂಬಂಧಿಗಳು, ತಥಾ—ಹಾಗೂ, ಏತಾನ್—ಇವರೆಲ್ಲರನ್ನು, ನ—ಎಂದೂ, ಹಂತುಮ್—ಕೊಲ್ಲಲು, ಇಚ್ಛಾಮಿ—ಇಚ್ಛಿಸುವುದಿಲ್ಲ, ಘ್ನತಃ—ಸತ್ತರೂ, ಅಪಿ—ಕೂಡ, ಮಧುಸೂದನ—ಹೇ ಮಧು ದೈತ್ಯ ಸಂಹಾರಕನೇ (ಕೃಷ್ಣನೇ), ಅಪಿ—ಕೂಡ, ತ್ರೈಲೋಕ್ಯ—ಮೂರು ಲೋಕಗಳು, ರಾಜ್ಯಸ್ಯ—ರಾಜ್ಯಕ್ಕಾಗಿ, ಹೇತೋಃ—ಬದಲಾಗಿ,

ಕಿಂನು—ಇನ್ನುಳಿದ ಮಾತೇನು; ಮಹೀಕೃತೇ—ಭೂಮಿಗಾಗಿ, ನಿಹತ್ಯ—ಕೊಲ್ಲುವುದರಿಂದ, ಧಾರ್ತರಾಷ್ಟ್ರಾನ್—ಧೃತರಾಷ್ಟ್ರಪುತ್ರರನ್ನು, ನಃ—ನಮಗೆ, ಕಾ—ಏನು, ಪ್ರೀತಿಃ—ಸುಖ; ಸ್ಯಾತ್—ದೊರೆಯುವುದು; ಜನಾರ್ದನ—ಹೇ ಸಕಲ ಜೀವರ ಪಾಲಕನೇ.

**ಹೇ ಗೋವಿಂದ, ಯಾರಿಗಾಗಿ ನಾವು ಎಲ್ಲವನ್ನು ಬಯಸುವೆವೋ ಅವರೆಲ್ಲರೂ ಈಗ ರಣಾಂಗಣದಲ್ಲಿ ಬಂದು ನಿಂತಿರುವಾಗ ಈ ರಾಜ್ಯವನ್ನು, ಸುಖವನ್ನು ಅಥವಾ ಈ ಜೀವನವನ್ನೇ ಕಟ್ಟಿಕೊಂಡು ನಮಗೆ ಏನು ಪ್ರಯೋಜನ? ಹೇ ಮಧುಸೂದನ, ಆಚಾರ್ಯರು, ಪಿತೃಗಳು, ಪುತ್ರರು, ಪಿತಾಮಹರು, ಸೋದರ ಮಾವಂದಿರು, ಮಾವಂದಿರು, ಪೌತ್ರರು, ಶಾಲಕರು ಮತ್ತು ಇತರ ಸಂಬಂಧಿಗಳೆಲ್ಲ ಇಲ್ಲಿ ತಮ್ಮ ಆಸ್ತಿಪಾಸ್ತಿಗಳನ್ನು ತ್ಯಾಗಮಾಡಲು ಸಿದ್ಧರಿರುವಾಗ, ಅವರೇ ನನ್ನನ್ನು ಕೊಂದರೂ ಕೂಡ, ನಾನೇಕೆ ಅವರನ್ನು ಕೊಲ್ಲಲಿಚ್ಛಿಸಬೇಕು ? ಹೇ ಸರ್ವಜೀವ ಪಾಲಕನೇ, ಈ ಭೂಮಿಯಷ್ಟೇ ಅಲ್ಲ ಮೂರು ಲೋಕಗಳು ನನಗೆ ದೊರೆತರೂ ನಾನು ಯುದ್ಧ ಮಾಡಬಯಸುವುದಿಲ್ಲ. ಧೃತರಾಷ್ಟ್ರನ ಮಕ್ಕಳನ್ನು ಕೊಲ್ಲುವುದರಿಂದ ನಮಗೆ ದೊರೆಯುವ ಸುಖವಾದರೂ ಏನು ?**

**ಭಾವಾರ್ಥ :** ಕೃಷ್ಣನು ಗೋವುಗಳಿಗೂ ಇಂದ್ರಿಯಗಳಿಗೂ ಸಕಲಾನಂದ ವಿಷಯ ನಾಗಿರುವುದರಿಂದ, ಅರ್ಜುನನು ಕೃಷ್ಣನನ್ನು ಗೋವಿಂದನೆಂದು ಸಂಬೋಧಿಸಿದನು. ಈ ಮಹತ್ವದ ಶಬ್ದ ಪ್ರಯೋಗದಿಂದ, ಅರ್ಜುನನ ಇಂದ್ರಿಯಗಳಿಗೆ ಯಾವುದರಿಂದ ತೃಪ್ತಿಯೆಂಬುದನ್ನು ಕೃಷ್ಣನು ಅರಿತುಕೊಳ್ಳಬೇಕೆಂಬುದು ಅರ್ಜುನನ ಇಂಗಿತ. ಆದರೆ ಗೋವಿಂದನು ನಮ್ಮ ಇಂದ್ರಿಯ ತೋಷಣೆಗಾಗಿ ಇಲ್ಲ. ನಾವು ಗೋವಿಂದನ ಇಂದ್ರಿಯಗಳನ್ನು ತೋಷಿಸಲು ಪ್ರಯತ್ನಿಸಿದರೆ, ನಮ್ಮ ಇಂದ್ರಿಯಗಳು ತಾವಾಗಿಯೇ ತೃಪ್ತಿ ಹೊಂದುತ್ತವೆ. ಭೌತಿಕವಾಗಿ ಪ್ರತಿಯೊಬ್ಬನು ತನ್ನ ಇಂದ್ರಿಯ ತೃಪ್ತಿಯನ್ನೇ ಬಯಸುತ್ತಾನೆ ಮತ್ತು ದೇವರು ತನಗೆ ಕೇಳಿದ ತೃಪ್ತಿಯನ್ನು ಒದಗಿಸಬೇಕೆಂದು ಇಚ್ಛಿಸುತ್ತಾನೆ. ಭಗವಂತನು ಜೀವಾತ್ಮರ ಯೋಗ್ಯತಾನುಸಾರ ಇಂದ್ರಿಯ ತೃಪ್ತಿಯನ್ನು ನೀಡುತ್ತಾನೆ, ಆದರೆ ಅವರು ಬಯಸಿದ್ದನ್ನೆಲ್ಲ ನೀಡುವುದಿಲ್ಲ. ಇದಕ್ಕೆ ಪ್ರತಿಯಾಗಿ ಎಂದರೆ, ಮನುಷ್ಯನು ತನ್ನ ಇಂದ್ರಿಯ ತೃಪ್ತಿಯ ಬದಲಾಗಿ ಗೋವಿಂದನ ಇಂದ್ರಿಯಗಳನ್ನು ತೃಪ್ತಿಪಡಿಸಲು ಯತ್ನಿಸಿದರೆ—ಗೋವಿಂದನ ದಯದಿಂದ • ಜೀವಿಗಳ ಎಲ್ಲ ಇಚ್ಛೆಗಳೂ ಪೂರ್ಣಗೊಳ್ಳುತ್ತವೆ. ಕೆಲಮಟ್ಟಿಗೆ, ಅರ್ಜುನನು ತನ್ನ ಬಂಧುಬಾಂಧವರ ಬಗ್ಗೆ ಸಹಜ ಸಹಾನುಭೂತಿ ಹೊಂದಿದ್ದರಿಂದ, ಇಲ್ಲಿ ಅವರ ಬಗ್ಗೆ ಅವನ ಆಳವಾದ ಪ್ರೀತಿಯು ವ್ಯಕ್ತವಾಗಿದೆ. ಅಂತೆಯೇ ಅವನು ಯದ್ಧಕ್ಕೆ ಸಿದ್ಧನಿಲ್ಲ. ಪ್ರತಿಯೊಬ್ಬನು ತನ್ನ ಸಂಪತ್ತನ್ನು ತನ್ನ ಬಂಧುಮಿತ್ರರಿಗೆ ತೋರಬಯಸುತ್ತಾನೆ. ಆದರೆ ಯುದ್ಧದಲ್ಲಿ ತನ್ನ ಎಲ್ಲ ಬಂಧುಮಿತ್ರರ ಮರಣವಾಗುವುದರಿಂದ, ತಾನು ಗಳಿಸುವ ವಿಜಯಸಂಪತ್ತನ್ನು ಅವರಿಗೆ ಹಂಚುವುದು ಸಾಧ್ಯವಾಗುವುದಿಲ್ಲ ಎಂಬುದೇ ಅರ್ಜುನನ ಭಯ. ಇದೇ ಭೌತಿಕ ಜೀವನದ ಮಾಮೂಲು ಲೆಕ್ಕಾಚಾರ. ಆದರೆ, ದಿವ್ಯ ಜೀವನವು ಭಿನ್ನವಾದುದು. ಭಕ್ತನಾದವನು ಭಗವಂತನ

ಇಚ್ಛೆಯನ್ನು ತೃಪ್ತಿಪಡಿಸಬಯಸುವುದರಿಂದ, ಭಗವಂತನು ಇಚ್ಛಿಸಿದರೆ, ಅವನು ಎಲ್ಲ ಬಗೆಯ ಐಶ್ವರ್ಯವನ್ನು ಭಗವಂತನ ಸೇವೆಗಾಗಿ ಸ್ವೀಕರಿಸಬಹುದು. ಭಗವಂತನು ಇಚ್ಛಿಸ ದಿದ್ದರೆ, ಅವನು ಒಂದು ಬಿಡಿಕಾಸನ್ನು ಮುಟ್ಟಕೂಡದು. ಅರ್ಜುನನು ತನ್ನ ಬಂಧು ಗಳನ್ನು ಕೊಲ್ಲ ಬಯಸುವುದಿಲ್ಲ. ಅವರನ್ನು ಕೊಲ್ಲುವುದೇ ಆದರೆ, ಸ್ವಯಂ ಕೃಷ್ಣನೇ ಅವರನ್ನುಸಂಹರಿಸಲಿ ಎಂದು ಅರ್ಜುನನು ಬಯಸಿದನು. ಈ ಘಟ್ಟದಲ್ಲಿ ಅವರೆಲ್ಲ ಯುದ್ಧಭೂಮಿಗೆ ಬರುವ ಮೊದಲೇ ಕೃಷ್ಣನು ಅವರೆಲ್ಲರನ್ನೂ ಕೊಂದಿದ್ದನು ಎಂಬುದನ್ನು ಅವನು ಅರಿಯಲಿಲ್ಲ. ಅರ್ಜುನನು ಕೇವಲ ನಿಮಿತ್ತ ವಾಗಬೇಕಿತ್ತಷ್ಟೆ. ಈ ಸಂಗತಿ ಮುಂದಿನ ಅಧ್ಯಾಯಗಳಲ್ಲಿ ಪ್ರಕಟವಾಗಿದೆ. ಭಗವಂತನ ಸಹಜ ಭಕ್ತನಾದ ಅರ್ಜುನನು ದುಷ್ಟರಾದ ತನ್ನ ಭ್ರಾತೃೀಯರ ಮತ್ತು ಸೋದರರ ಮೇಲೆ ಸೇಡು ತೀರಿಸಿಕೊಳ್ಳಬಯಸಲಿಲ್ಲ. ಆದರೆ ಅವರೆಲ್ಲರೂ ಸಂಹಾರವಾಗಬೇಕೆಂಬುದು ಭಗವಂತನ ಸಂಕಲ್ಪ. ಭಗವದ್ಭಕ್ತನು ತಪ್ಪಿತಸ್ಥನ ಮೇಲೆ ಎಂದೂ ಸೇಡು ತೀರಿಸಿಕೊಳ್ಳುವುದಿಲ್ಲ. ಆದರೆ ದುಷ್ಟರು ತನ್ನ ಭಕ್ತರಿಗೆ ತೊಂದರೆ ಕೊಡುವುದನ್ನು ಭಗವಂತನು ಸಹಿಸುವುದಿಲ್ಲ. ಭಗವಂತನು ತನ್ನಮಟ್ಟಿಗೆ ಯಾರನ್ನಾದರೂ ಕ್ಷಮಿಸಬಹುಧು, ಆದರೆ ತನ್ನ ಭಕ್ತರಿಗೆ ಅಪಚಾರ ಮಾಡಿದವರನ್ನು ಎಂದೂ ಕ್ಷಮಿಸುವುದಿಲ್ಲ. ಅಂತೆಯೇ, ಅರ್ಜುನನು ಅವರನ್ನು ಕ್ಷಮಿಸ ಬಯಸಿದರೂ ಕೃಷ್ಣನು ದುಷ್ಟಸಂಹಾರವನ್ನು ನಿರ್ಧರಿಸಿದನು.

**ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ।**
**ತಸ್ಮಾನ್ನಾರ್ಹಾ ವಯಂ ಹನ್ತುಂ ಧಾರ್ತರಾಷ್ಟ್ರಾನ್ ಸಬಾಂಧವಾನ್ ।**
**ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ॥ ೩೬ ॥**

ಪಾಪಮ್—ಪಾಪಗಳನ್ನು, ಏವ—ನಿಶ್ಚಯವಾಗಿ, ಆಶ್ರಯೇತ್—ಅಶ್ರಯಿಸ ಬೇಕು, ಅಸ್ಮಾನ್—ನಾವು, ಹತ್ವಾ—ಕೊಲ್ಲುವುದರಿಂದ, ಏತಾನ್—ಈ ಎಲ್ಲ, ಆತ ತಾಯಿನಃ—ಆಕ್ರಮಣಕಾರರನ್ನು, ತಸ್ಮಾತ್—ಆದ್ದರಿಂದ, ನ—ಎಂದಿಗೂ, ಅರ್ಹಾಃ— ಅರ್ಹರಲ್ಲ, ವಯಮ್—ನಾವು, ಹನ್ತುಮ್—ಕೊಲ್ಲಲು, ಧಾರ್ತರಾಷ್ಟ್ರಾನ್—ಧೃತರಾಷ್ಟ್ರ ಪುತ್ರರನ್ನು, ಸಬಾಂಧವಾನ್—ಮಿತ್ರರೊಂದಿಗೆ, ಸ್ವಜನಮ್—ಸ್ವಜನರನ್ನು, ಹಿ— ನಿಶ್ಚಯವಾಗಿ, ಕಥಮ್—ಹೇಗೆ, ಹತ್ವಾ—ಕೊಲ್ಲುವುದರಿಂದ, ಸುಖಿನಃ—ಸುಖಿಗಳು, ಸ್ಯಾಮ—ಆಗುತ್ತೇವೆ, ಮಾಧವ—ಲಕ್ಷ್ಮೀಪತಿಯಾದ ಕೃಷ್ಣನೇ

**ಇಂಥ ಆಕ್ರಮಣಕಾರರನ್ನು ಕೊಂದರೆ ಪಾಪವು ನಮ್ಮನ್ನು ಆವರಿಸುತ್ತದೆ. ಆದ್ದರಿಂದ, ಧೃತರಾಷ್ಟ್ರ ಪುತ್ರರನ್ನೂ ನಮ್ಮ ಮಿತ್ರರನ್ನೂ ನಾವು ಕೊಲ್ಲುವುದು ಸರಿಯಲ್ಲ. ಹೇ ಲಕ್ಷ್ಮೀಪತಿಯಾದ ಕೃಷ್ಣನೇ, ನಾವು ನಮ್ಮ ಬಂಧುಗಳನ್ನು ಕೊಂದು ನಮಗೇನು ಲಾಭ ಮತ್ತು ನಾವು ಸುಖಿಗಳಾಗುವುದು ಹೇಗೆ ಸಾಧ್ಯ?**

**ಭಾವಾರ್ಥ :** ವೇದಗಳ ಪ್ರಕಾರ, ಆರು ಬಗೆಯ ಆಕ್ರಮಿಗಳಿದ್ದಾರೆ, 1) ವಿಷಪ್ರಯೋಗ ಮಾಡುವವನು, 2) ಮನೆಗೆ ಬೆಂಕಿಯಿಡುವವನು, 3) ಮಾರಕಾಸ್ತ್ರಗಳಿಂದ ಧಾಳಿ

ಮಾಡುವವನು, 4) ಧನಾಪಹಾರ ಮಾಡುವವನು, 5) ಮತ್ತೊಬ್ಬರ ಭೂಮಿಯನ್ನು ಆಕ್ರಮಿಸುವವನು, ಮತ್ತು 6) ಮತ್ತೊಬ್ಬರ ಹೆಂಡತಿಯನ್ನು ಅಪಹರಿಸುವವನು. ಇಂಥ ಆಕ್ರಮಿಗಳನ್ನು ಕೂಡಲೇ ಸಂಹರಿಸಬೇಕು, ಅವರನ್ನು ಕೊಂದರೆ ಯಾವ ಪಾಪವೂ ಬರುವುದಿಲ್ಲ. ಇಂಥ ಆಕ್ರಮಿಗಳ ಸಂಹಾರವು ಸಾಮಾನ್ಯ ಮನುಷ್ಯರಿಗೆ ಯೋಗ್ಯ. ಆದರೆ ಅರ್ಜುನನು ಸಾಮಾನ್ಯ ವ್ಯಕ್ತಿಯಾಗಿರಲಿಲ್ಲ. ಅರ್ಜುನನು ಸಾಧು ಸ್ವಭಾವದವನಾಗಿದ್ದರಿಂದ, ಅವನು ಅವರೊಂದಿಗೆ ಸಾಧುವಾಗಿಯೇ ವರ್ತಿಸ ಬಯಸಿದನು. ಆದರೆ ಕ್ಷತ್ರಿಯನಿಗೆ ಈ ಬಗೆಯ ಸಾಧು ಸ್ವಭಾವವು ಸರಿಯಲ್ಲ. ರಾಜ್ಯಭಾರದಲ್ಲಿ ಹೊಣೆಗಾರನಾದ ವ್ಯಕ್ತಿಗೆ ಸಾಧು ಸ್ವಭಾವವು ಅಗತ್ಯವಾಗಿದ್ದರೂ ಅವನು ಹೇಡಿಯಾಗಿರಕೂಡದು. ಉದಾಹರಣೆಗೆ ಶ್ರೀರಾಮನು ಎಷ್ಟು ಸಾಧು ಸ್ವಭಾವದವನಾಗಿದ್ದನೆಂದರೆ ಈಗಲೂ ಜನರು ರಾಮ ರಾಜ್ಯದಲ್ಲಿರಲು ಹಾತೊರೆಯುತ್ತಾರೆ. ಆದರೆ ಶ್ರೀರಾಮನು ಎಂದೂ ಹೇಡಿತನವನ್ನು ತೋರಲಿಲ್ಲ. ರಾವಣನು ರಾಮನ ಹೆಂಡತಿಯಾದ ಸೀತೆಯನ್ನು ಕದ್ದೊಯ್ದುದರಿಂದ ಅವನು ರಾಮನ ವಿರುದ್ಧ ಆಕ್ರಮಿಯಾಗಿದ್ದನು. ಆದರೆ ಶ್ರೀರಾಮನು ವಿಶ್ವದ ಇತಿಹಾಸದಲ್ಲಿಯೇ ಕಾಣದಂಥ ಸಾಕಷ್ಟು ಪಾಠಗಳನ್ನು ರಾವಣನಿಗೆ ಕಲಿಸಿದನು. ಆದರೆ ಅರ್ಜುನನ ವಿಷಯದಲ್ಲಿ ಮಾತ್ರ ಆಕ್ರಮಿಗಳು ವಿಶೇಷ ಬಗೆಯವರು, ಎಂದರೆ, ಅವನ ಸ್ವಂತ ಪಿತಾಮಹ, ಸ್ವಂತ ಆಚಾರ್ಯರು, ಮಿತ್ರರು, ಮಕ್ಕಳು, ಮೊಮ್ಮಕ್ಕಳು ಮೊದಲಾದವರೇ ಆಕ್ರಮಿಗಳಾಗಿದ್ದರು. ಆದ್ದರಿಂದಲೇ ಸಾಮಾನ್ಯ ಆಕ್ರಮಿಗಳ ವಿರುದ್ಧ ಅವಶ್ಯವಾಗಬಹುದಾದ ಕಠೋರ ಕ್ರಮಗಳನ್ನು ಅವರ ಬಗ್ಗೆ ಕೈಕೊಳ್ಳುವುದು ಸರಿಯಲ್ಲ ಎಂಬುದು ಅರ್ಜುನನ ಭಾವನೆಯಾಗಿತ್ತು. ಇದೂ ಅಲ್ಲದೆ, ಸಾಧು ಸ್ವಭಾವದರು ಸದಾ ಕ್ಷಮಾಶೀಲರಾಗಿರಬೇಕೆಂಬುದು ಒಂದು ನಿಯಮ. ಸಾಧುಗಳು ಇಂಥ ನಿಯಮಗಳನ್ನು ಪಾಲಿಸುವುದು, ರಾಜಕೀಯ ಅವಶ್ಯಕತೆಗಿಂತ ಹೆಚ್ಚು ಮಹತ್ವದ್ದಾಗಿದೆ. ರಾಜ್ಯಕ್ಕಾಗಿ ತನ್ನ ಬಂಧುಗಳನ್ನೇ ಕೊಲ್ಲುವುದಕ್ಕಿಂತ ಧರ್ಮ ದೃಷ್ಟಿಯಿಂದ ಮತ್ತು ಸದ್ವರ್ತನೆಯ ದೃಷ್ಟಿಯಿಂದ ಅವರನ್ನು ಕ್ಷಮಿಸುವುದೇ ಲೇಸು ಎಂದು ಅರ್ಜುನನು ಭಾವಿಸಿದ್ದನು. ಆದ್ದರಿಂದ, ತಾತ್ಕಾಲಿಕವಾದ ದೈಹಿಕ ಸುಖಕ್ಕಾಗಿ ಅವರನ್ನು ಕೊಲ್ಲುವುದು ಪ್ರಯೋಜನಕಾರಿಯಲ್ಲ ಎಂದು ಅವನು ಭಾವಿಸಿದನು. ರಾಜ್ಯಗಳು ಮತ್ತು ಅವುಗಳಿಂದ ದೊರೆಯುವ ಸುಖವಾದರೋ ಶಾಶ್ವತವಲ್ಲ. ಹೀಗಿರುವಾಗ, ಅವನು ತನ್ನ ಬಂಧುಗಳನ್ನು ಕೊಂದು ತನ್ನ ಜೀವನವನ್ನು ಮತ್ತು ಶಾಶ್ವತವಾದ ಮೋಕ್ಷವನ್ನು ಏಕೆ ಅಪಾಯಕ್ಕೀಡುಮಾಡಬೇಕು ? ಅರ್ಜುನನು ಇಲ್ಲಿ ಕೃಷ್ಣನನ್ನು "ಮಾಧವ", ಎಂದರೆ ಲಕ್ಷ್ಮೀಪತಿ ಎಂದು ಸಂಬೋಧಿಸಿರುವುದು ಕೂಡ ಬಹಳ ಅರ್ಥಪೂರ್ಣವಾಗಿದೆ. ಲಕ್ಷ್ಮೀಪತಿಯಾದ ಕೃಷ್ಣನು ಕೊನೆಗೆ ತನಗೆ ದೌರ್ಭಾಗ್ಯವನ್ನು ತರುವಂಥ ಪ್ರೇರಣೆ ಮಾಡಕೂಡದೆಂಬುದೇ ಅರ್ಜುನನ ಸೂಚನೆಯಾಗಿತ್ತು. ಕೃಷ್ಣನು ಯಾರಿಗೂ ದುರ್ಗತಿ ತರುವವನಲ್ಲ. ಹೀಗಿರುವಾಗ ತನ್ನ ಭಕ್ತರ ವಿಷಯದಲ್ಲಂತೂ ಅವನು ಹಾಗೆಂದೂ ಮಾಡುವವನಲ್ಲ.

**ಯದ್ಯಪ್ಯೇತೇನ ನ ಪಶ್ಯನ್ತಿ ಲೋಭೋಪಹತಚೇತಸಃ ।**
**ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಮ್ ॥ ೩೭ ॥**

**ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಮ್ ।**
**ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ ॥ ೩೯ ॥**

ಯದಿ—ಆದರೆ, ಅಪಿ—ಆಗಿದ್ದರೂ, ಏತೇ—ಅವರು, ನ—ಇಲ್ಲ, ಪಶ್ಯನ್ತಿ—ನೋಡುವುದು, ಲೋಭ—ದುರಾಶೆಯಿಂದ, ಉಪಹತ—ಪ್ರಭಾವಿತರಾಗಿ, ಚೇತಸಃ—ಅವರ ಹೃದಯಗಳು, ಕುಲಕ್ಷಯ—ಕುಲನಾಶ, ಕೃತಮ್—ಮಾಡುವುದರಿಂದ, ದೋಷಮ್—ದೋಷವನ್ನು, ಮಿತ್ರದ್ರೋಹೇ—ಮಿತ್ರರೊಂದಿಗೆ ಕಾದಾಡುವುದರಿಂದ, ಚ—ಕೂಡ, ಪಾತಕಮ್—ಪಾಪಕರ್ಮಗಳು, ಕಥಮ್—ಏಕೆ, ನ—ಕೂಡದು, ಜ್ಞೇಯಮ್—ತಿಳಿಯಲ್ಪಡಬೇಕು, ಅಸ್ಮಾಭಿಃ—ನಮ್ಮಿಂದ, ಪಾಪಾತ್—ಪಾಪಗಳಿಂದ, ಅಸ್ಮಾತ್—ಇವು, ನಿವರ್ತಿತುಮ್—ನಿಲ್ಲಲು, ಕುಲಕ್ಷಯ—ಕುಲನಾಶದಲ್ಲಿ, ಕೃತಮ್—ಆಗುತ್ತದೆ, ದೋಷಮ್—ಅಪರಾಧ, ಪ್ರಪಶ್ಯದ್ಭಿಃ—ನೋಡಬಲ್ಲವರಿಂದ, ಜನಾರ್ದನ—ಹೇ ಕೃಷ್ಣ

**ಹೇ ಜನಾರ್ದನ, ಈ ಜನರ ಹೃದಯಗಳು ದುರಾಶೆಯಿಂದ ತುಂಬಿಹೋಗಿ, ಅವರು ಕುಲಬಾಂಧವರನ್ನು ಕೊಲ್ಲುವುದು ಅಥವಾ ಮಿತ್ರರೊಂದಿಗೆ ಕದನ ಮಾಡು ವುದು ದೋಷವೆಂದು ಭಾವಿಸುವುದಿಲ್ಲ. ಆದರೆ, ಕುಲನಾಶ ಮಾಡುವುದು ಪಾಪ ವೆಂದು ತಿಳಿದ ನಾವು ಏಕೆ ಇಂಥ ಪಾಪಕಾರ್ಯಗಳಲ್ಲಿ ತೊಡಗಬೇಕು?**

**ಭಾವಾರ್ಥ :** ವಿರುದ್ಧ ಪಕ್ಷದವರು ಕರೆಕೊಟ್ಟಾಗ ಯುದ್ಧಮಾಡಲು ಅಥವಾ ಜೂಜಾಡಲು ಕ್ಷತ್ರಿಯನು ನಿರಾಕರಿಸುವುದು ಉಚಿತವಲ್ಲ. ಇಂಥ ಆಭಾರದಿಂದಾಗಿ, ಅರ್ಜುನನಿಗೆ ದುರ್ಯೋಧನ ಪಕ್ಷದವರು ಪಂಥಾಹ್ವಾನ ನೀಡಿದಾಗ ಅವನು ಯುದ್ಧ ಮಾಡಲು ನಿರಾಕರಿಸಲಾಗಲಿಲ್ಲ. ಈ ಸಂದರ್ಭದಲ್ಲಿ, ಪ್ರತಿಪಕ್ಷದವರು ಆಂಥ ಪಂಥಾಹ್ವಾನದ ಪರಿಣಾಮಗಳ ಬಗ್ಗೆ ಕುರುಡರೆಂದು ಅರ್ಜುನನು ಭಾವಿಸಿದನು. ಅರ್ಜುನನಿಗಾದರೋ ದುಷ್ಟ ಪರಿಣಾಮಗಳ ಅರಿವು ಇತ್ತು. ಆದ್ದರಿಂದ ಆಹ್ವಾನವನ್ನು ಸ್ವೀಕರಿಸಲಾಗಲಿಲ್ಲ. ಸತ್ಪರಿಣಾಮವಿರುವಾಗ, ಆಭಾರವು ವಾಸ್ತವಿಕವಾಗಿ ಬಂಧಕ. ಆದರೆ ಪರಿಣಾಮವು ಪ್ರತಿಕೂಲವಾಗಿರುವಾಗ ಯಾರನ್ನೂ ಒತ್ತಾಯಿಸುವಂತಿಲ್ಲ. ಈ ಎಲ್ಲ ಸಾಧಕಬಾಧಕಗಳನ್ನು ವಿಚಾರ ಮಾಡಿಯೇ ಅರ್ಜುನನು ಯುದ್ಧಮಾಡದಿರಲು ನಿಶ್ಚಯಿಸಿದನು.

**ಕುಲಕ್ಷಯೇ ಪ್ರಣಶ್ಯನ್ತಿ ಕುಲಧರ್ಮಾಃ ಸನಾತನಾಃ ।**
**ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ ॥ ೪೦ ॥**

ಕುಲಕ್ಷಯೇ—ಕುಲನಾಶದಲ್ಲಿ, ಪ್ರಣಶ್ಯನ್ತಿ—ಪರಾಭವ ಹೊಂದುತ್ತವೆ, ಕುಲಧರ್ಮಾಃ—ಕುಲಧರ್ಮಗಳು, ಸನಾತನಾಃ—ಸನಾತನವಾದವುಗಳು, ಧರ್ಮೇ—ಧರ್ಮವು, ನಷ್ಟೇ ನಷ್ಟವಾಗುತ್ತದೆ, ಕುಲಮ್—ಕುಲವು, ಕೃತ್ಸ್ನಮ್—ಸಂಪೂರ್ಣವಾಗಿ, ಅಧರ್ಮಃ—ಅಧರ್ಮವು, ಅಭಿಭವತಿ—ಸಂಭವಿಸುತ್ತದೆ, ಉತ—ಎಂದು ಹೇಳಲಾಗಿದೆ.

**ಕುಲನಾಶದಿಂದ ಸನಾತನ ಕುಲಧರ್ಮವು ನಾಶಹೊಂದುತ್ತದೆ, ಮತ್ತು ಇದರಿಂದ ಉಳಿದ ಕುಟುಂಬಗಳು ಅಧರ್ಮ ಪ್ರವೃತ್ತವಾಗುತ್ತವೆ.**

**ಭಾವಾರ್ಥ :** ವರ್ಣಾಶ್ರಮಧರ್ಮ ಪದ್ಧತಿಯಲ್ಲಿ, ಕುಟುಂಬದವರು ಸರಿಯಾದ ರೀತಿಯಲ್ಲಿ ಬೆಳೆದು, ಆಧ್ಯಾತ್ಮಿಕ ಮೌಲ್ಯಗಳನ್ನು ಪಡೆಯಲು ಸಾಧ್ಯವಾಗುವಂತೆ ಅನೇಕ ಧರ್ಮ ಸಂಪ್ರದಾಯಗಳು ಮೂಡಿಬಂದಿವೆ. ಹುಟ್ಟಿನಿಂದ ಮರಣಪರ್ಯಂತ, ಕುಟುಂಬದಲ್ಲಿ ಇಂಥ ಶುದ್ಧಿಕ್ರಮಗಳು ಬೆಳದು ಬರುವಂತೆ ನೋಡಿಕೊಳ್ಳುವುದು, ಕುಟುಂಬದ ಹಿರಿಯರ ಕರ್ತವ್ಯ. ಕುಟುಂಬದ ಹಿರಿಯರು ತೀರಿಕೊಂಡರೆ, ಅಂಥ ಶುದ್ಧ ಸಂಪ್ರದಾಯಗಳು ನಿಂತು ಹೋಗಬಹುದು. ಕುಟುಂಬದ ಉಳಿದ ಕಿರಿಯರು ಅಧಾರ್ಮಿಕ ಪ್ರವೃತ್ತಿಗಳನ್ನು ಬೆಳೆಸಿಕೊಂಡು, ಅವರಿಗೆ ಮುಕ್ತಿ ಹೊಂದುವ ಅವಕಾಶ ತಪ್ಪಿಹೋಗಬಹುದು. ಆದ್ದರಿಂದ, ಯಾವ ಉದ್ದೇಶಕ್ಕೇ ಆಗಲಿ, ಕುಟುಂಬದ ಹಿರಿಯರನ್ನು ನಾಶಮಾಡಕೂಡದು.

**ಅಧರ್ಮಾಭಿಭವಾತ್ ಕೃಷ್ಣ ಪ್ರದುಷ್ಯನ್ತಿ ಕುಲಸ್ತ್ರಿಯಃ।**
**ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ ॥ ೪೦ ॥**

ಅಧರ್ಮಾ—ಅಧರ್ಮ, ಅಭಿಭವಾತ್—ಪ್ರಭಾವ ಹೆಚ್ಚಾಗಿ, ಕೃಷ್ಣ—ಹೇ ಕೃಷ್ಣ, ಪ್ರದುಷ್ಯನ್ತಿ—ದೂಷಿತರಾಗುತ್ತಾರೆ, ಕುಲಸ್ತ್ರಿಯಃ—ಕುಲಸ್ತ್ರೀಯರು,ಸ್ತ್ರೀಷು—ಸ್ತ್ರೀಯರು ದುಷ್ಟಾಸು—ಹೀಗೆ ದೂಷಿತರಾಗಿ, ವಾರ್ಷ್ಣೇಯ—ವೃಷ್ಣಿವಂಶಜನೇ, ಜಾಯತೇ—ಉಂಟಾಗುತ್ತದೆ, ವರ್ಣಸಂಕರಃ—ಅನಪೇಕ್ಷಿತ ಸಂತಾನವು.

**ಕುಟುಂಬದಲ್ಲಿ ಅಧರ್ಮ ಹೆಚ್ಚಾದಾಗ, ಹೇ ಕೃಷ್ಣ- ಕುಲಸ್ತ್ರೀಯರು ಕೆಟ್ಟು ಹೋಗುತ್ತಾರೆ, ಮತ್ತು ಸ್ತ್ರೀಯರು ಕೆಟ್ಟು ಹೋಗುವುದರಿಂದ, ಹೇ ವೃಷ್ಣಿವಂಶಜನೇ ಅನಪೇಕ್ಷಿತ ಸಂತಾನವು ಉಂಟಾಗುತ್ತದೆ.**

**ಭಾವಾರ್ಥ :** ಮಾನವ ಸಮಾಜದಲ್ಲಿ ಶಾಂತಿ ಸಮೃದ್ಧಿಗಳು ಮತ್ತು ಜೀವನದ ಆಧಾತ್ಮಿಕ ಪ್ರಗತಿಗೆ ಸತ್ಸಂತಾನವು ಮೂಲಾಧಾರ. ರಾಜ್ಯದ ಮತ್ತು ಜನಸಮುದಾಯದ ಸಾಮಾನ್ಯ ಆಧ್ಯಾತ್ಮಿಕ ಪ್ರಗತಿಗಾಗಿ ಸಮಾಜದಲ್ಲಿ ಸತ್ಸಂತಾನವು ಬೆಳೆಯುವಂತೆ ವರ್ಣಾಶ್ರಮಧರ್ಮ ನಿಯಮಗಳನ್ನು ರೂಪಿಸಲಾಗಿದೆ. ಅಂಥ ಸಂತಾನವು ಸ್ತ್ರೀಯರ ಪ್ರಾಮಾಣಿಕತೆ ಮತ್ತು ಪರಿಶುದ್ಧತೆಯನ್ನು ಅವಲಂಬಿಸಿದೆ. ಮಕ್ಕಳು ಸಾಮಾನ್ಯವಾಗಿ ತಪ್ಪು ದಾರಿ ಹಿಡಿಯುವ ಪ್ರಸಂಗವಿರುವಂತೆ, ಸ್ತ್ರೀಯರು ಕೂಡ ಅದೇ ರೀತಿಯಲ್ಲಿ ಪತಿತರಾಗುವ ಸಂಭವ ಹೆಚ್ಚು. ಆದ್ದರಿಂದ, ಸ್ತ್ರೀಯರಿಗೆ ಮತ್ತು ಮಕ್ಕಳಿಗೆ ಕುಟುಂಬದ ಹಿರಿಯರ ರಕ್ಷಣೆ ಅಗತ್ಯ. ಸ್ತ್ರೀಯರು ಅನೇಕ ಧಾರ್ಮಿಕ ಕಾರ್ಯಗಳಲ್ಲಿ ತೊಡಗುವುದರಿಂದ ವ್ಯಭಿಚಾರದ ದಾರಿಗೆ ಹೋಗುವುದಿಲ್ಲ. ಚಾಣಕ್ಯ ಪಂಡಿತನ ಪ್ರಕಾರ, ಸ್ತ್ರೀಯರು ಸಾಮಾನ್ಯವಾಗಿ ಹೆಚ್ಚು ಬುದ್ಧಿವಂತರಲ್ಲ, ಆದ್ದರಿಂದ ಅವರು ವಿಶ್ವಾಸಪಾತ್ರರಲ್ಲ. ಅವರು ಕುಟುಂಬ ಸಂಪ್ರದಾಯದ

ವಿವಿಧ ಧಾರ್ಮಿಕ ಕಾರ್ಯಗಳಲ್ಲಿ ಸದಾ ನಿರತರಾಗಿರಬೇಕು ಮತ್ತು ಅವರ ಪರಿಶುದ್ಧತೆ ಹಾಗೂ ಭಕ್ತಿಯಿಂದ ಸತ್ಸಂತಾನವು ಉತ್ಪತ್ತಿಯಾಗಿ ವರ್ಣಾಶ್ರಮ ಧರ್ಮಪಾಲನೆಗೆ ಅರ್ಹವಾಗುತ್ತದೆ. ವರ್ಣಾಶ್ರಮ ಧರ್ಮವು ವಿಫಲವಾದಲ್ಲಿ, ಸ್ವಾಭಾವಿಕವಾಗಿಯೇ ಸ್ತ್ರೀಯರು ಸ್ವೈರಾಚಾರಿಗಳಾಗಿ ಪುರುಷರೊಂದಿಗೆ ಬೆರೆಯುತ್ತಾರೆ. ಇದರಿಂದ ವ್ಯಭಿಚಾರದಲ್ಲಿ ತೊಡಗಿ ಅನಪೇಕ್ಷಿತ ಸಂತಾನವು ಬೆಳೆಯುವ ಅಪಾಯವಿರುತ್ತದೆ. ಹೊಣೆಯರಿಯದ ಗಂಡಸರೂ ಕೂಡ ಸಮಾಜದಲ್ಲಿ ವ್ಯಭಿಚಾರವು ಬೆಳೆಯುವಂತೆ ಮಾಡುತ್ತಾರೆ. ಹೀಗಾಗಿ ಅನಪೇಕ್ಷಿತ ಮಕ್ಕಳು ಮಾನವ ಜನಾಂಗದಲ್ಲಿ ಹೆಚ್ಚಿ, ಯುದ್ಧ ಮತ್ತು ರೋಗರುಜಿನಗಳ ಅಪಾಯ ತಲೆದೋರುತ್ತದೆ.

**ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।**
**ಪತನ್ತಿ ಪಿತರೋ ಹ್ಯೇಷಾಂ ಲುಪ್ತಪಿಣ್ಡೋದಕಕ್ರಿಯಾಃ ॥ ೪೧ ॥**

ಸಂಕರಃ—ಅಂಥ ಅನಪೇಕ್ಷಿತ ಮಕ್ಕಳು, ನರಕಾಯ—ನರಕ ಜೀವನವನ್ನು ಉಂಟು ಮಾಡುತ್ತಾರೆ. ಏವ—ಖಂಡಿತವಾಗಿ, ಕುಲಘ್ನಾನಾಂ—ಕುಲ ನಾಶಕರಿಗೆ, ಕುಲಸ್ಯ—ಕುಲವು ಚ—ಕೂಡ, ಪತನ್ತಿ—ಪತನ ಹೊಂದುವರು, ಪಿತರಃ—ಪಿತೃಗಳು, ಹಿ—ಖಂಡಿತವಾಗಿ, ಏಷಾಮ್—ಅವರಿಗೆ, ಲುಪ್ತ—ನಿಂತು ಹೋಗುತ್ತವೆ, ಪಿಂಡ—ಪಿಂಡಪ್ರದಾನ, ಉದಕ—ಮತ್ತು ಉದಕ, ಕ್ರಿಯಾಃ—ಕ್ರಿಯೆಗಳು.

**ಅನಪೇಕ್ಷಿತ ಸಂತಾನದ ಬೆಳವಣಿಗೆಯು ಕುಲಕ್ಕೂ, ಕುಲ ಸಂಪ್ರದಾಯಗಳನ್ನು ನಾಶಮಾಡುವವರಿಗೂ ಖಂಡಿತವಾಗಿ ನರಕ ಜೀವನವನ್ನು ಉಂಟು ಮಾಡುತ್ತದೆ. ಅಂಥ ಭ್ರಷ್ಟ ಕುಲದ ಪೂರ್ವಜರಿಗೆ ಪಿಂಡೋದಕ ಕ್ರಿಯೆಗಳು ಪೂರ್ಣವಾಗಿ ನಿಂತು ಹೋಗಿ, ಅವರು ಪತನ ಹೊಂದುತ್ತಾರೆ.**

**ಭಾವಾರ್ಥ :** ಕಾಮ್ಯ ಕರ್ಮಾಚರಣೆಗಳ ಅನುಷ್ಠಾನ ನಿಯಮಗಳ ಪ್ರಕಾರ, ಕುಲದ ಪಿತೃಗಳಿಗೆ ಆಗಾಗ ಪಿಂಡೋದಕಗಳನ್ನು ನೀಡುವುದು ಅವಶ್ಯ. ಹೀಗೆ ಪಿಂಡಪ್ರದಾನವನ್ನು ವಿಷ್ಣು ಆರಾಧನೆಯ ಮೂಲಕ ಮಾಡಲಾಗುತ್ತದೆ. ಕಾರಣವೆಂದರೆ, ವಿಷ್ಣು ನೈವೇದ್ಯ ಶೇಷ ಭೋಜನವು ಎಲ್ಲ ಬಗೆಯ ಪಾಪ ಕರ್ಮಗಳಿಂದ ವಿಮೋಚಿಸುತ್ತದೆ. ಕೆಲವು ಸಲ ಪಿತೃಗಳು ನಾನಾ ಬಗೆಯ ಪಾಪಕರ್ಮಗಳ ಫಲವಾಗಿ ದುಃಖಪಡುವ ಸಂಭವ ಉಂಟು. ಮತ್ತೆ ಕೆಲವರು ಸ್ಥೂಲ ಭೌತಿಕ ಶರೀರವನ್ನೂ ಹೊಂದದೆ ಸೂಕ್ಷ್ಮಪ್ರೇತಗಳಾಗಿ ತೊಳಲಬೇಕಾಗುತ್ತದೆ. ಆದ್ದರಿಂದ, ವಂಶಜರು ತಮ್ಮ ಪಿತೃಗಳಿಗೆ ದೇವರ ಪ್ರಸಾದ ಶೇಷವನ್ನು ಅರ್ಪಿಸುವುದರಿಂದ, ಪಿತೃಗಳು ಪಿಶಾಚಶರೀರಗಳಿಂದ ಅಥವಾ ಇತರ ದುಃಖ ಜೀವನಗಳಿಂದ ಪಾರಾಗುತ್ತಾರೆ. ಹೀಗೆ ಪಿತೃಗಳಿಗೆ ಸದ್ಗತಿಯಾಗುವಂತೆ ಸೇವೆ ಮಾಡುವುದು ಕುಟುಂಬ ಸಂಪ್ರದಾಯ ಮತ್ತು ಭಕ್ತಿ ಮಾರ್ಗದಲ್ಲಿ ಇಲ್ಲದಿರುವವರು ಇಂಥ ಕರ್ಮಾಚರಣೆಗಳನ್ನು ಅಗತ್ಯವಾಗಿ ಮಾಡಲೇಬೇಕು. ಭಕ್ತಿ ಮಾರ್ಗಾವಲಂಬಿಯಾದವನು ಇವುಗಳನ್ನು ಆಚರಿಸಬೇಕಾಗಿಲ್ಲ. ಕೇವಲ ಭಗವಂತನ ಭಕ್ತಿಯುತ ಸೇವೆಯಿಂದ ಮನುಷ್ಯನು ತನ್ನ ಸಹಸ್ರಾರು ಪಿತೃಗಳನ್ನು ಎಲ್ಲ ದುಃಖಗಳಿಂದ ಪಾರು ಮಾಡಬಹುದು. ಭಾಗವತದಲ್ಲಿ ಹೀಗೆ ಹೇಳಿದೆ (11–5–41);

ದೇವರ್ಷಿ—ಭೂತಾಪ್ತ—ನೃಣಾಂ ಪಿತೃಣಾಮ್
ನ ಕಿಂಕರೋ ನಾಯಂ ಋಣೀ ಚ ರಾಜನ್।
ಸರ್ವಾತ್ಮನಾ ಯಃ ಶರಣಂ ಶರಣ್ಯಂ
ಗತೋ ಮುಕುನ್ದಂ ಪರಿಹೃತ್ಯ ಕರ್ತಮ್ ॥

"ಎಲ್ಲ ಕರ್ಮಗಳನ್ನು ಪರಿತ್ಯಜಿಸಿ. ಮೋಕ್ಷದಾಯಕನಾದ ಮುಕುಂದನ ಚರಣಾರವಿಂದಗಳನ್ನು ಆಶ್ರಯಿಸಿದವನು ಮತ್ತು ಪೂರ್ಣಾಸಕ್ತಿಯಿಂದ ಈ ಮಾರ್ಗವನ್ನು ಅನುಸರಿಸುತ್ತಿರುವವನು, ದೇವತೆಗಳಿಗೆ, ಋಷಿಗಳಿಗೆ, ಜೀವರಿಗೆ, ಕುಟುಂಬ, ಮಾನವಕುಲಕ್ಕೆ ಅಥವಾ ಪಿತೃಗಳಿಗೆ ಉದ್ದಿಶ್ಯವಾಗಿ ಯಾವುದೇ ಕರ್ತವ್ಯಗಳನ್ನಾಗಲಿ ಅಥವಾ ಕರ್ಮಗಳನ್ನಾಗಲಿ ಮಾಡಲು ಬದ್ಧನಲ್ಲ." ಪರಮ ದೇವೋತ್ತಮ ಪುರುಷನ ಭಕ್ತಿಯುತ ಸೇವೆ ಮಾಡಿದಾಗ, ಎಲ್ಲ ಕರ್ತವ್ಯ ಕರ್ಮಗಳು ತಾವಾಗಿಯೇ ಪೂರೈಸುತ್ತವೆ.

**ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ ।**
**ಉತ್ಸಾದ್ಯನ್ತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ॥ ೪೨ ॥**

ದೋಷೈಃ—ಅಂಥ ದೋಷಗಳಿಂದ, ಏತೈಃ—ಈ ಎಲ್ಲ, ಕುಲಘ್ನಾನಾಮ್—ಕುಲ ನಾಶಕರಿಂದ, ವರ್ಣಸಂಕರ—ಅನಪೇಕ್ಷಿತ ಮಕ್ಕಳು, ಕಾರಕೈಃ—ಉಂಟಾಗುತ್ತಾರೆ, ಉತ್ಸಾದ್ಯನ್ತೇ—ನಾಶವಾಗುತ್ತವೆ, ಜಾತಿಧರ್ಮಾಃ—ಜಾತಿಧರ್ಮಗಳು (ಸಮುದಾಯ ಯೋಜನೆಗಳು), ಕುಲಧರ್ಮಾಃ—ಕುಲ ಸಂಪ್ರದಾಯಗಳು, ಚ—ಕೂಡ, ಶಾಶ್ವತಾಃ—ಶಾಶ್ವತವಾಗಿ,

**ಕುಲ ಸಂಪ್ರದಾಯಗಳನ್ನು ನಾಶಮಾಡಿ, ಅನಪೇಕ್ಷಿತ ಮಕ್ಕಳನ್ನು ಬೆಳೆಸುವುದರ ದುಷ್ಕಾರ್ಯದಿಂದ, ಎಲ್ಲ ಬಗೆಯ ಜನಹಿತ ಯೋಜನೆಗಳು ಮತ್ತು ಕುಲ ಕಲ್ಯಾಣ ಕಾರ್ಯಗಳು ನಾಶವಾಗುತ್ತವೆ.**

**ಭಾವಾರ್ಥ :** ಸನಾತನ ಧರ್ಮ ಅಥವಾ ವರ್ಣಾಶ್ರಮಧರ್ಮ—ಪದ್ಧತಿಯು ನಿರೂಪಿಸಿರುವ ಕುಟುಂಬ ಕಲ್ಯಾಣ ಕಾರ್ಯಗಳು ಕೂಡಿರುವ, ನಾಲ್ಕು ವರ್ಗಗಳ ಸಮುದಾಯ ಯೋಜನೆಗಳು, ಮಾನವನನ್ನು ಆತ್ಯಂತಿಕ ಮೋಕ್ಷ ಪಡೆಯಲು ಅನುಕೂಲವಾಗುವಂತೆ ರೂಪಿಸಲಾಗಿವೆ. ಆದ್ದರಿಂದ ಸಮಾಜದ ಹೊಣೆಯರಿಯದ ನಾಯಕರಿಂದ ಈ ಸನಾತನ ಧರ್ಮ ಸಂಪ್ರದಾಯಗಳು ಉಲ್ಲಂಘಿಸಲ್ಪಟ್ಟಾಗ, ಸಮಾಜದಲ್ಲಿ ಗೊಂದಲ ಉಂಟಾಗುತ್ತದೆ. ಮತ್ತು ಜನರು ಜೀವನದ ಪರಮ ಧ್ಯೇಯನಾದ ವಿಷ್ಣುವನ್ನು ಮರೆಯುತ್ತಾರೆ. ಇಂಥ ಜನನಾಯಕರನ್ನು ಕುರುಡರೆಂದು ಕರೆದಿದೆ ಮತ್ತು ಅಂಥವರನ್ನು ಅನುಸರಿಸುವವರು ಗೊಂದಲಕ್ಕೆ ಈಡಾಗುವುದು ಖಂಡಿತ.

**ಉತ್ಸನ್ನಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ ।**
**ನರಕೇ ನಿಯತಂ ವಾಸೋ ಭವತೀತ್ಯನುಶುಶ್ರುಮ ॥ ೪೩ ॥**

ಉತ್ಸನ್ನ—ಕೆಟ್ಟು ಹೋಗುತ್ತವೆ, ಕುಲಧರ್ಮಾಣಾಮ್—ಕುಲಧರ್ಮಗಳನ್ನು ಹೊಂದಿದವರ, ಮನುಷ್ಯಾಣಾಮ್—ಅಂಥಹವರ, ಜನಾರ್ದನ—ಹೇ ಕೃಷ್ಣ, ನರಕೇ—ನರಕದಲ್ಲಿ, ನಿಯತಂ—ಯಾವಾಗಲೂ, ವಾಸಃ—ವಾಸ, ಭವತಿ—ಆಗುತ್ತದೆ, ಇತಿ—ಹೀಗೆ, ಅನುಶುಶ್ರುಮ—ಗುರುಪರಂಪರೆಯಿಂದ ಕೇಳಿದ್ದೇನೆ.

**ಹೇ ವಿಶ್ವಪಾಲಕ ಕೃಷ್ಣನೇ, ಕುಲಧರ್ಮಗಳನ್ನು ನಾಶಮಾಡುವವರು ಸದಾ ನರಕವಾಸ ಮಾಡಬೇಕಾಗುತ್ತದೆ ಎಂಬುದನ್ನು ನಾನು ಗುರು ಪರಂಪರೆಯಿಂದ ಕೇಳಿದ್ದೇನೆ.**

**ಭಾವಾರ್ಥ :** ಅರ್ಜುನನು ತನ್ನ ವಾದವನ್ನು ಸ್ವಾನುಭವದಿಂದ ಹೇಳದೆ, ಅಧಿಕಾರಿಗಳಿಂದ ಕೇಳಿದ್ದನ್ನು ಆಧರಿಸುತ್ತಾನೆ. ಇದೇ ನೈಜ ಜ್ಞಾನವನ್ನು ಪಡೆಯುವ ಮಾರ್ಗ. ನಿಜಜ್ಞಾನಸ್ಥಿತನಾಗಿರುವವನ ಸಹಾಯವಿಲ್ಲದೆ ನಿಜ ಜ್ಞಾನ ಪ್ರಾಪ್ತಿ ಸಾಧ್ಯವಿಲ್ಲ. ಮರಣ ಪೂರ್ವದಲ್ಲಿ ತನ್ನ ಪಾಪ ಕಾರ್ಯಗಳಿಗಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳುವ ವಿಧಾನವು ವರ್ಣಾಶ್ರಮ ಪದ್ಧತಿಯಲ್ಲಿ ಇದೆ. ಸದಾ ಪಾಪಕರ್ಮನಿರತನು ಪ್ರಾಯಶ್ಚಿತ್ತ ವಿಧಾನದ ಪ್ರಯೋಜನ ಪಡೆಯಬೇಕು. ಹಾಗೆ ಮಾಡದಿದ್ದರೆ, ಅಂಥ ಪಾಪಕರ್ಮಗಳ ಫಲವಾಗಿ ಮನುಷ್ಯನು ದುಃಖ ಜೀವನ ಅನುಭವಿಸಲು ಖಂಡಿತವಾಗಿ ನರಕ ಲೋಕಗಳಿಗೆ ತಳ್ಳಲ್ಪಡುತ್ತಾನೆ.

**ಅಹೋ ಬತ ಮಹತ್ ಪಾಪಂ ಕರ್ತುಂ ವ್ಯವಸಿತಾ ವಯಮ್ ।**
**ಯದ್ ರಾಜ್ಯಸುಖಲೋಭೇನ ಹನ್ತುಂ ಸ್ವಜನಮುದ್ಯತಾಃ ॥ ೪೪ ॥**

ಅಹೋ—ಅಯ್ಯೋ, ಬತ—ಎಷ್ಟು ವಿಚಿತ್ರ, ಮಹತ್—ಮಹಾ, ಪಾಪಮ್—ಪಾಪಗಳನ್ನು, ಕರ್ತುಮ್—ಮಾಡಲು, ವ್ಯವಸಿತಾಃ—ನಿಶ್ಚಯಿಸಿದ್ದೇವೆ, ವಯಮ್—ನಾವು, ಯದ್—ಕಾರಣವೆಂದರೆ, ರಾಜ್ಯಸುಖಲೋಭೇನ—ರಾಜ್ಯದ ಸುಖದಾಶೆಯಿಂದ, ಹನ್ತುಮ್—ಕೊಲ್ಲಲು, ಉದ್ಯತಾಃ—ಯತ್ನಿಸುತ್ತಿದ್ದೇವೆ.

**ಅಯ್ಯೋ, ನಾವು ಎಂಥ ಮಹಾ ಪಾಪಕಾರ್ಯಗಳನ್ನು ಮಾಡಲು ಸಿದ್ಧರಾಗುತ್ತಿದ್ದೇವೆ. ಇದು ಎಷ್ಟು ವಿಚಿತ್ರ! ರಾಜ್ಯಸುಖಾಪೇಕ್ಷೆಯಿಂದ, ನಾವು ನಮ್ಮ ಬಾಂಧವರನ್ನು ಕೊಲ್ಲಲು ಉದ್ಯುಕ್ತರಾಗಿದ್ದೇವೆ.**

**ಭಾವಾರ್ಥ :** ಸ್ವಾರ್ಥಿಯಾಗಿ ಮನುಷ್ಯನು ತನ್ನ ಅಣ್ಣ, ತಮ್ಮ, ತಂದೆ-ತಾಯಿ ಮೊದಲಾದವರನ್ನು ಕೊಲ್ಲುವ ಪಾಪ ಕಾರ್ಯಗಳಿಗೆ ತೊಡಗಬಹುದು. ಜಗತ್ತಿನ ಇತಿಹಾಸದಲ್ಲಿ ಇಂಥ ಅನೇಕ ದೃಷ್ಟಾಂತಗಳು ಉಂಟು. ಆದರೆ ಅರ್ಜುನನು ಸಾತ್ವಿಕ ಭಗವದ್ಭಕ್ತನಾದುದರಿಂದ ಸದಾ ನೀತಿ ನಿಯಮ ಪ್ರಜ್ಞೆ ಹೊಂದಿದವನಾಗಿ ತಾನು ಇಂಥ ಕಾರ್ಯಗಳನ್ನು ಮಾಡದಂತೆ ಎಚ್ಚರ ವಹಿಸಿದನು.

**ಯದಿ ಮಾಮಪ್ರತೀಕಾರಮಶಸ್ತ್ರಂ ಶಸ್ತ್ರಪಾಣಯಃ ।**
**ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್ ॥೪೬॥**

ಯದಿ—ಆದರೂ, ಮಾಂ—ನನಗೆ, ಅಪ್ರತೀಕಾರಂ—ಪ್ರತೀಕಾರ ಮಾಡದ, ಅಶಸ್ತ್ರಂ—ಸಂಪೂರ್ಣ ಶಸ್ತ್ರಸಜ್ಜಿತರಲ್ಲದವರನ್ನು, ಶಸ್ತ್ರ ಪಾಣಯಃ—ಶಸ್ತ್ರ ಹಿಡಿದವರು, ಧಾರ್ತರಾಷ್ಟ್ರಾಃ—ಧೃತರಾಷ್ಟ್ರ ಪುತ್ರರು. ರಣೇ—ಯುದ್ಧದಲ್ಲಿ, ಹನ್ಯುಃ—ಕೊಲ್ಲಬಹುದು. ತತ್—ಅದು, ಮೇ—ನನಗೆ, ಕ್ಷೇಮತರಮ್—ಒಳ್ಳೆಯದೇ, ಭವತ್—ಆಗುವುದು.

**ಧೃತರಾಷ್ಟ್ರನ ಮಕ್ಕಳು ಕೈಯಲ್ಲಿ ಶಸ್ತ್ರ ಹಿಡಿಯದ ಮತ್ತು ರಣದಲ್ಲಿ ಪ್ರತೀಕಾರ ಮಾಡದ ನನ್ನನ್ನು ಕೊಲ್ಲುವುದೇ ಲೇಸು.**

**ಭಾವಾರ್ಥ :** ಶಸ್ತ್ರ ಹಿಡಿಯದವನನ್ನು, ಯುದ್ಧಕ್ಕೆ ಇಚ್ಛೆಪಡದವನನ್ನು ಕೊಲ್ಲಲು ಯತ್ನಿಸ ಕೂಡದೆಂಬುದು ಕ್ಷತ್ರಿಯರ ಯುದ್ಧನೀತಿ. ಆದರೆ, ಅಂಥ ಅಸಹಾಯಕ ಸನ್ನಿವೇಶ ದಲ್ಲಿ ವೈರಿಯು ತನ್ನ ಮೇಲೆ ಶಸ್ತ್ರಘಾತ ಮಾಡಿದರೂ ಕೂಡ ತಾನು ಕಾದುವುದಿಲ್ಲವೆಂದು, ಅರ್ಜುನನು ನಿರ್ಧರಿಸಿದನು. ಪ್ರತಿಪಕ್ಷದವರು ಯುದ್ಧಕ್ಕೆ ಎಷ್ಟು ಕಾತುರರಾಗಿದ್ದರೆಂಬು ದನ್ನು ಅವನು ಗಮನಿಸಲಿಲ್ಲ. ಅವನು ಮಹಾಭಗವದ್ಭಕ್ತನಾಗಿದ್ದರಿಂದ, ಅವನ ಹೃದಯವು ಬಹಳ ಮೃದುವಾಗಿತ್ತು. ಆದ್ದರಿಂದ ಅವನಲ್ಲಿ ಈ ಎಲ್ಲ ಲಕ್ಷಣಗಳು ಕಂಡು ಬಂದವು.

**ಸಂಜಯ ಉವಾಚ**

**ಏವಮುಕ್ತ್ವಾರ್ಜುನಃ ಸಂಖ್ಯೇ ರಥೋಪಸ್ಥ ಉಪಾವಿಶತ್ ।**
**ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ ॥೪೭॥**

ಸಂಜಯಃ ಉವಾಚ—ಸಂಜಯನು ನುಡಿದನು, ಏವಮ್—ಹೀಗೆ, ಉಕ್ತ್ವಾ—ಹೇಳಿ, ಅರ್ಜುನಃ—ಅರ್ಜುನನು, ಸಂಖ್ಯೇ—ರಣಭೂಮಿಯಲ್ಲಿ, ರಥ—ರಥದ, ಉಪಸ್ಥೇ—ಆಸನದಲ್ಲಿ, ಉಪಾವಿಶತ್—ಮತ್ತೆ ಕುಳಿತುಕೊಂಡನು, ವಿಸೃಜ್ಯ—ಪಕ್ಕಕ್ಕೆ ಇಟ್ಟು, ಸಶರಮ್—ಬಾಣಗಳೊಡನೆ, ಚಾಪಮ್—ಬಿಲ್ಲನ್ನು, ಶೋಕ—ಶೋಕದಿಂದ, ಸಂವಿಗ್ನ—ವಿಪರೀತ ಸಂಕಟಪಟ್ಟು, ಮಾನಸಃ—ಮನಸ್ಸಿನಲ್ಲಿ.

**ಸಂಜಯನು ನುಡಿದನು: ರಣಾಂಗಣದಲ್ಲಿ ಅರ್ಜುನನು ಹೀಗೆ ನುಡಿದು, ತನ್ನ ಬಿಲ್ಲು ಬಾಣಗಳನ್ನು ಬದಿಗಿಟ್ಟು, ಮನಸ್ಸು ದುಃಖತಪ್ತವಾಗಿ ರಥದಲ್ಲಿ ಕುಳಿತುಬಿಟ್ಟನು.**

**ಭಾವಾರ್ಥ :** ವೈರಿ ಪರಿಸ್ಥಿತಿಯನ್ನು ಕಾಣಲು, ಅರ್ಜುನನು ರಥದಲ್ಲಿ ಎದ್ದು ನಿಂತನು. ಆದರೆ ಅವನು ಅತಿ ದುಃಖತಪ್ತನಾಗಿದ್ದರಿಂದ, ತನ್ನ ಎಲ್ಲ ಬಿಲ್ಲು ಬಾಣಗಳನ್ನು ಬದಿಗಿರಿಸಿ ಮತ್ತೆ ಕುಳಿತು ಬಿಟ್ಟನು. ಇಂಥ ಮೃದು ಸ್ವಭಾವದ ಭಗವತ್ಸೇವಾನಿರತನು ಆತ ಜ್ಞಾನೋಪದೇಶಕ್ಕೆ ಅರ್ಹನು.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯಲ್ಲಿನ ಕುರುಕ್ಷೇತ್ರ ರಣಾಂಗಣದಲ್ಲಿ ಸೇನಾವೀಕ್ಷಣೆ ಎಂಬ ಮೊದಲನೆಯ ಅಧ್ಯಾಯದ ಭಕ್ತಿವೇದಾಂತ ತಾತ್ಪರ್ಯವು ಮುಗಿಯಿತು.**

## ಅಧ್ಯಾಯ ಎರಡು



# ಗೀತಾಸಾರ ಸಂಗ್ರಹ

**ಸಂಜಯ ಉವಾಚ—**

**ತಂ ತಥಾ ಕೃಪಯಾವಿಷ್ಟಮಶ್ರುಪೂರ್ಣಾಕುಲೇಕ್ಷಣಮ್ ।**
**ವಿಷೀದನ್ತಮಿದಂ ವಾಕ್ಯಮುವಾಚ ಮಧುಸೂದನಃ ॥೧॥**

ಸಂಜಯ ಉವಾಚ—ಸಂಜಯನು ನುಡಿದನು, ತಮ್—ಅರ್ಜುನನಿಗೆ, ತಥಾ—ಹೀಗೆ, ಕೃಪಯಾ—ಕೃಪೆಯಿಂದ, ಆವಿಷ್ಟಮ್—ಅತಿ ತಪ್ತನಾಗಿರುವ, ಅಶ್ರುಪೂರ್ಣ ಆಕುಲ—ಕಣ್ಣೀರು ತುಂಬಿದ, ಈಕ್ಷಣಮ್—ಕಣ್ಣುಗಳು, ವಿಷೀದಂತಅಮ್—ವಿಷಾದಿಸುತ್ತಿದ್ದ, ಇದಮ್—ಈ, ವಾಕ್ಯಮ್—ವಾಕ್ಯಗಳನ್ನು, ಉವಾಚ—ನುಡಿದನು, ಮಧುಸೂದನ—ಮಧುಸೂದನನು.

**ಸಂಜಯನು ನುಡಿದನು: ಅರ್ಜುನನು ಸಹಾನುಭೂತಿಪರನಾಗಿ, ಖಿನ್ನಮನಸ್ಕನಾಗಿ ಇರುವುದನ್ನು ಮತ್ತು ಅವನ ಕಣ್ಣುಗಳಲ್ಲಿ ನೀರು ತುಂಬಿರುವುದನ್ನು ಕಂಡ ಮಧುಸೂದನನಾದ ಶ್ರೀ ಕೃಷ್ಣನು, ಈ ಕೆಳಗಿನಂತೆ ನುಡಿದನು.**

**ಭಾವಾರ್ಥ :** ಭೌತಿಕ ಸಹಾನುಭೂತಿ, ದುಃಖ ಮತ್ತು ಕಣ್ಣೀರು ಇವು ಎಲ್ಲವೂ ಆತ್ಮದ ಬಗ್ಗೆ ಅಜ್ಞಾನವನ್ನು ಸೂಚಿಸುವ ಲಕ್ಷಣಗಳು. ನಿತ್ಯ ಆತ್ಮದ ಬಗ್ಗೆ ಅನುಕಂಪ ಹೊಂದುವುದು ಆತ್ಮಸಾಕ್ಷಾತ್ಕಾರ. ಈ ಶ್ಲೋಕದಲ್ಲಿ "ಮಧುಸೂದನ" ಎಂಬ ಪದವು ಮಹತ್ವಪೂರ್ಣ. ಶ್ರೀಕೃಷ್ಣನು ಮಧುದೈತ್ಯನನ್ನು ಕೊಂದನು. ಈಗ, ಅರ್ಜುನನ ಕರ್ತವ್ಯಪಾಲನೆಯಲ್ಲಿ ಅವನನ್ನು ಮುಸುಕಿಕೊಂಡಿದ್ದ ತಪ್ಪು ತಿಳುವಳಿಕೆಯ ದೈತ್ಯನನ್ನು ಕೃಷ್ಣನು ಕೊಲ್ಲಬೇಕೆಂದು ಅರ್ಜುನನು ಬಯಸಿದನು. ಅನುಕಂಪವನ್ನು ಎಲ್ಲಿ ತೋರಬೇಕೆಂಬುದು ಯಾರೂ ತಿಳಿದಿಲ್ಲ. ಮುಳುಗುತ್ತಿರುವ ಮನುಷ್ಯನ ಉಡುಪಿನ ಬಗ್ಗೆ ಅನುಕಂಪ ತೋರುವುದು ಅರ್ಥಹೀನ. ಅಜ್ಞಾನ ಸಮುದ್ರದಲ್ಲಿ ಮುಳುಗಿರುವವನ ಹೊರಗಿನ ಉಡುಪನ್ನು—ಅವನ ಸ್ಥೂಲಭೌತಿಕ

ದೇಹವನ್ನು—ಉಳಿಸಿದ ಮಾತ್ರದಿಂದ ಅವನನ್ನು ರಕ್ಷಿಸಲಾಗದು. ಇದನ್ನು ತಿಳಿಯದೆ, ಹೊರಗಿನ ಉಡುಪನ್ನು ಕಂಡು ದುಃಖಿಸುವವನು ಶೂದ್ರನು ಅಥವಾ ಅನವಶ್ಯಕ ದುಃಖಿ, ಅರ್ಜುನನು ಕ್ಷತ್ರಿಯನು ಮತ್ತು ಅವನ ಈ ನಡತೆ ನಿರೀಕ್ಷಿತವಲ್ಲ. ಆದರೆ ಕೃಷ್ಣನು ಅಜ್ಞಾನಿಯ ದುಃಖವನ್ನು ನಿವಾರಿಸಬಲ್ಲವನು. ಈ ಉದ್ದೇಶದಿಂದಲೇ ಅವನು ಭಗವದ್ಗೀತೋಪದೇಶ ಮಾಡಿದನು. ಈ ಅಧ್ಯಾಯವು ಪರಮ ಅಧಿಕಾರಿಯಾದ ಶ್ರೀಕೃಷ್ಣನೇ ವಿವರಿಸಿರುವಂತೆ, ಭೌತಿಕ ದೇಹದ ಮತ್ತು ಆತ್ಮದ ವಿಶ್ಲೇಷಣಾತ್ಮಕ ಅಧ್ಯಯನದ ಮೂಲಕ ನಮಗೆ ಆತ್ಮ ಸಾಕ್ಷಾತ್ಕಾರವನ್ನು ಬೋಧಿಸುತ್ತದೆ. ಮನುಷ್ಯನು ಕಾಮ್ಯಕರ್ಮ ಫಲಗಳ ಆಸಕ್ತಿ ತೊರೆದು ಕರ್ಮಮಾಡಿದಾಗ, ಮತ್ತು ಆತ್ಮನಿಷ್ಠನಾದಾಗ ಇಂಥ ಸಾಕ್ಷಾತ್ಕಾರವು ಸಾಧ್ಯ.

**ಶ್ರೀಭಗವಾನುವಾಚ—**

**ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್ ।**
**ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ॥ ೨ ॥**

ಶ್ರೀ ಭಗವಾನ್ ಉವಾಚ—ಪರಮ ದೇವೋತ್ತಮ ಪುರುಷ ಶ್ರೀಕೃಷ್ಣನು ನುಡಿದನು, ಕುತಃ—ಎಲ್ಲಿಂದ, ತ್ವಾ—ನಿನಗೆ, ಕಶ್ಮಲಮ್—ಕಶ್ಮಲವು. ಇದಮ್—ಈ ವಿಷಾದವು, ವಿಷಮೇ—ಈ ಕಷ್ಟಕಾಲದಲ್ಲಿ, ಸಮುಪಸ್ಥಿತಮ್—ಬಂದಿತು, ಅನಾರ್ಯ—ಜೀವನದ ಮೌಲ್ಯವನ್ನು ತಿಳಿಯದ ವ್ಯಕ್ತಿಗಳು, ಜುಷ್ಟಮ್—ಆಚರಿಸುವ, ಅಸ್ವರ್ಗ್ಯಮ್—ಸ್ವರ್ಗಾದಿ ಊರ್ಧ್ವ ಲೋಕಗಳಿಗೆ ಕೊಂಡೊಯ್ಯದ, ಅಕೀರ್ತಿ—ಅಪಕೀರ್ತಿಗೆ, ಕರಮ್—ಕಾರಣ ವಾಗುವ, ಅರ್ಜುನ—ಹೇ ಅರ್ಜುನ.

**ಪರಮ ದೇವೋತ್ತಮ ಪುರುಷ ಶ್ರೀಕೃಷ್ಣನು ನುಡಿದನು : ಹೇ ಪ್ರಿಯ ಅರ್ಜುನ, ನಿನಗೆ ಈ ಕಶ್ಮಲವು ಹೇಗೆ ಒದಗಿ ಬಂತು ? ಜೀವನದ ಮೌಲ್ಯವನ್ನು ಬಲ್ಲವನಿಗೆ ಇವೆಲ್ಲ ತಕ್ಕದಲ್ಲ. ಇವು ಊರ್ಧ್ವ ಲೋಕಗಳಿಗೆ ಕೊಂಡೊಯ್ಯದೆ, ಅಪಕೀರ್ತಿಗೆ ಮಾತ್ರ ಕಾರಣವಾಗುತ್ತವೆ.**

**ಭಾವಾರ್ಥ:** ಕೃಷ್ಣ ಮತ್ತು ಪರಮ ದೇವೋತ್ತಮ ಪುರುಷ ಎಂದರೆ ಒಂದೇ. ಆದ್ದರಿಂದ ಇಡೀ ಗೀತೆಯಲ್ಲಿ ಶ್ರೀಕೃಷ್ಣನನ್ನು ಭಗವಾನ್ ಎಂದು ಹೇಳಿದೆ. ಪರಮ ಸತ್ಯ ಸ್ವರೂಪದ ಅಂತಿಮವೇ ಭಗವಾನ್. ಪರಮ ಸತ್ಯವನ್ನು ಮೂರು ಅವಸ್ಥೆಗಳಲ್ಲಿ, ಎಂದರೆ, **ಬ್ರಹ್ಮನ್** ಅಥವಾ ವ್ಯಕ್ತಿ ಶೂನ್ಯ ಸರ್ವವ್ಯಾಪಿ ಚೈತನ್ಯ, **ಪರಮಾತ್ಮ** ಅಥವಾ ಸರ್ವ ಜೀವಾತ್ಮರ ಹೃದಯ ಸ್ಥಿತ ಭಗವಂತನ ಸ್ಥಳೀಯ ರೂಪ, ಮತ್ತು **ಭಗವಾನ್** ಅಥವಾ ಪರಮ ದೇವೋತ್ತಮ ಪುರುಷ ಶ್ರೀಕೃಷ್ಣ—ಈ ಮೂರು ರೂಪಗಳಲ್ಲಿ ಸಾಕ್ಷಾತ್ಕರಿಸಿಕೊಳ್ಳಬಹುದು. ಶ್ರೀಮದ್ಭಾಗವತದಲ್ಲಿ (1-2-11) ಪರಮ ಸತ್ಯ ಸ್ವರೂಪದ ಕಲ್ಪನೆಯನ್ನು ಹೀಗೆ ವಿವರಿಸಿದೆ :

ವದನ್ತಿ ತತ್ ತತ್ತ್ವವಿದಸ್ತತ್ತ್ವಂ ಯಜ್ ಜ್ಞಾನಂ ಅದ್ವಯಮ್ವ್।
ಬ್ರಹ್ಮೇತಿ ಪರಮಾತ್ಮೇತಿ ಭಗವಾನ್ ಇತಿ ಶಬ್ದ್ಯತೇ॥

"ಪರಮ ಸತ್ಯವನ್ನು ಅರಿತವನು, ಅರಿಯುವಿಕೆಯ ಮೂರು ಅವಸ್ಥೆಗಳಲ್ಲಿ ಪರಮ ಸತ್ಯದ ಸಾಕ್ಷಾತ್ಕಾರ ಹೊಂದಿರುತ್ತಾನೆ. ಈ ಮೂರು ಅವಸ್ಥೆಗಳೂ ಒಂದೇ. ಪರಮ ಸತ್ಯದ ಈ ಅವಸ್ಥೆಗಳನ್ನು ಬ್ರಹ್ಮನ್, ಪರಮಾತ್ಮ ಮತ್ತು ಭಗವಾನ್ ಎಂದು ಹೇಳಲಾಗಿದೆ."

ಪ್ರಕಾಶ, ಮೇಲ್ಮೈ ಮತ್ತು ಸೂರ್ಯಗ್ರಹ, ಈ ಮೂರು ವಿವಿಧಾಂಶಗಳನ್ನು ಸೂರ್ಯನು ಹೊಂದಿರುವಂತೆ, ಮೇಲ್ಕಂಡ ಅಂಶತ್ರಯಗಳನ್ನು ಸೂರ್ಯನ ಉದಾಹರಣೆಯಿಂದ ವಿವರಿಸಬಹುದು. ಸೂರ್ಯ ಪ್ರಕಾಶವನ್ನು ಮಾತ್ರ ಅಧ್ಯಯನ ಮಾಡುವವನು ಪ್ರಾರಂಭಿಕ ವಿದ್ಯಾರ್ಥಿ. ಸೂರ್ಯನ ಮೇಲ್ಮೈಯನ್ನು ಅರಿತುಕೊಳ್ಳುವವನು ಮತ್ತಷ್ಟು ಮುಂದೆ ಹೋದವನು. ಸೂರ್ಯಗ್ರಹವನ್ನು ಪ್ರವೇಶಿಸಬಲ್ಲವನು ಸರ್ವಶ್ರೇಷ್ಠನು. ಸೂರ್ಯ ಪ್ರಕಾಶವನ್ನು ಎಂದರೆ, ಆ ಪ್ರಕಾಶದ ವಿಶ್ವವ್ಯಾಪಕತೆಯನ್ನು ಮತ್ತು ಕಣ್ಣು ಕೋರೈಸುವ ಪ್ರಭೆಯನ್ನು ಮಾತ್ರ ಅರಿತುಕೊಳ್ಳುವಲ್ಲಿಯೇ ತೃಪ್ತನಾಗುವ ಸಾಮಾನ್ಯ ವಿದ್ಯಾರ್ಥಿಯನ್ನು, ಪರಮ ಸತ್ಯದ ಬ್ರಹ್ಮನ್ ಅಂಶವನ್ನು ಮಾತ್ರ ಸಾಕ್ಷಾತ್ಕರಿಸಿಕೊಳ್ಳಬಲ್ಲವರಿಗೆ ಹೋಲಿಸಬಹುದು. ಇನ್ನೂ ಮುಂದೆ ಹೋದವನು, ಸೂರ್ಯನ ಮೇಲ್ಮೈಯನ್ನು ಅರಿತುಕೊಳ್ಳಬಹುದು. ಇದನ್ನು ಪರಮ ಸತ್ಯದ ಪರಮಾತ್ಮ ಅಂಶದ ಜ್ಞಾನಕ್ಕೆ ಹೋಲಿಸಬಹುದು. ಸೂರ್ಯಗ್ರಹ ಕೇಂದ್ರವನ್ನು ಪ್ರವೇಶಿಸುವವನನ್ನು, ಪರಮ ಸತ್ಯದ ವ್ಯಕ್ತಿ ಲಕ್ಷಣ ಸಾಕ್ಷಾತ್ಕಾರ ಹೊಂದುವವನಿಗೆ ಹೋಲಿಸಬಹುದು. ಆದ್ದರಿಂದ, ಪರಮ ಸತ್ಯದ ಅಧ್ಯಯನದಲ್ಲಿ ತೊಡಗಿರುವವರೆಲ್ಲರೂ ಒಂದೇ ವಿಷಯದಲ್ಲಿ ಪ್ರಸಕ್ತರಾಗಿದ್ದರೂ, ಭಕ್ತರು, ಎಂದರೆ ಪರಮ ಸತ್ಯದ ಭಗವಾನ್ ಲಕ್ಷಣಗಳನ್ನು ಸಾಕ್ಷಾತ್ಕಾರಗೊಳಿಸಿ ಕೊಂಡಿರುವವರು, ದಿವ್ಯವಾದಿಗಳಲ್ಲಿ ಅತ್ಯುನ್ನತರು. ಸೂರ್ಯ ಪ್ರಕಾಶವನ್ನು, ಸೂರ್ಯನ ಮೇಲ್ಮೈಯನ್ನು ಮತ್ತು ಸೂರ್ಯ ಗ್ರಹದ ಒಳಗಿನ ಪ್ರಕ್ರಿಯೆಗಳನ್ನು ಪರಸ್ಪರ ಪ್ರತ್ಯೇಕಿಸಲು ಆಗುವುದಿಲ್ಲವಾದರೂ ಈ ಮೂರು ವಿವಿಧ ಅವಸ್ಥೆಗಳನ್ನು ಜಿಜ್ಞಾಸೆ ಮಾಡುವವರು ಒಂದೇ ಶ್ರೇಣಿಗೆ ಸೇರಿದವರಲ್ಲ.

**ಭಗವಾನ್** ಎಂಬ ಸಂಸ್ಕೃತ ಪದವನ್ನು ವೇದವ್ಯಾಸರ ತಂದೆಯಾದ, ಮಹಾಧಿಕಾರಿಗಳಾದ ಪರಾಶರ ಮುನಿಗಳು ವಿವರಿಸಿದ್ದಾರೆ. ಸಕಲೈಶ್ವರ್ಯವನ್ನು, ಸಕಲ ಬಲವನ್ನು, ಸಕಲ ಯಶವನ್ನು. ಸಕಲ ಸೌಂದರ್ಯವನ್ನು, ಸಕಲ ಜ್ಞಾನವನ್ನು ಮತ್ತು ಸಕಲ ವೈರಾಗ್ಯವನ್ನು ಹೊಂದಿರುವ ಪರಮ ದೇವೋತ್ತಮ ಪುರುಷನೇ ಭಗವಾನ್ ಬಹಳ ಐಶ್ವರ್ಯ, ಶಕ್ತಿ, ಸೌಂದರ್ಯ, ಕೀರ್ತಿ, ಜ್ಞಾನ ಮತ್ತು ವೈರಾಗ್ಯವನ್ನು ಹೊಂದಿರುವ ಅನೇಕ ವ್ಯಕ್ತಿಗಳಿದ್ದಾರೆ. ಆದರೆ, ಸಕಲ ಸಂಪತ್ತು, ಸಕಲ ಬಲ, ಇತ್ಯಾದಿಗಳನ್ನು ಪರಿಪೂರ್ಣವಾಗಿ ಹೊಂದಿದ್ದೇವೆಂದು ಹೇಳಬಲ್ಲವರು ಯಾರೂ ಇಲ್ಲ. ಕೃಷ್ಣನು ಪರಮ ದೇವೋತ್ತಮ ಪುರುಷನಾಗಿರುವುದರಿಂದ, ಅವನು ಮಾತ್ರ ಹಾಗೆ ಹೇಳಬಲ್ಲನು. ಬ್ರಹ್ಮನೂ ಸೇರಿ ಯಾವ ಜೀವಾತ್ಮನೂ ಮತ್ತು ಶಿವ ಅಥವಾ ನಾರಾಯಣನೂ ಶ್ರೀಕೃಷ್ಣ

ನಷ್ಟು ಪೂರ್ಣ ವಿಭೂತಿಯನ್ನು ಹೊಂದಲಾರರು. ಆದ್ದರಿಂದ, ಕೃಷ್ಣನೇ ಪರಮ ದೇವೋತ್ತಮ ಪುರುಷನೆಂದು ಸ್ವಯಂ ಬ್ರಹ್ಮನೇ **ಬ್ರಹ್ಮಸಂಹಿತೆ**ಯಲ್ಲಿ ನಿರ್ಣಯಿಸಿದ್ದಾನೆ. ಕೃಷ್ಣನಿಗೆ ಸಮಾನರು ಅಥವಾ ಅಧಿಕರು ಯಾರೂ ಇಲ್ಲ. ಅವನೇ ಆದಿ ಪುರುಷನು, ಅಥವಾ ಭಗವಂತನು, ಗೋವಿಂದನು, ಮತ್ತು ಅವನೇ ಸಕಲ ಕಾರಣಗಳ ಕಾರಣನು.

ಈಶ್ವರಃ ಪರಮಃ ಕೃಷ್ಣಃ ಸಚ್ಚಿದಾನಂದ ವಿಗ್ರಹಃ।
ಅನಾದಿರ್ ಆದಿರ್ ಗೋವಿಂದಃ ಸರ್ವ ಕಾರಣ ಕಾರಣಮ್॥

"ಭಗವಂತನ ಗುಣಗಳನ್ನು ಹೊಂದಿರುವ ಅನೇಕ ವ್ಯಕ್ತಿಗಳಿದ್ದಾರೆ, ಆದರೆ ಶ್ರೀಕೃಷ್ಣನು ಶ್ರೇಷ್ಠನಾಗಿರುವುದರಿಂದ,ಅವನನ್ನು ಮೀರಿಸುವವರು ಬೇರೊಬ್ಬರಿಲ್ಲ. ಅವನು ಪರಮ ಪುರುಷ ಮತ್ತು ಅವನದು ಸಚ್ಚಿದಾನಂದ ದೇಹ. ಆವನೇ ಆದಿ ಪುರುಷನಾದ ಗೋವಿಂದನು ಮತ್ತು ಸರ್ವ ಕಾರಣಗಳಿಗೆ ಕಾರಣನು." (ಬ್ರಹ್ಮ ಸಂಹಿತೆ 5.1)

ಭಾಗವತದಲ್ಲಿಯೂ ಕೂಡ ಪರಮ ದೇವೋತ್ತಮ ಪುರುಷನ ಅನೇಕ ಅವತಾರಗಳ ಪಟ್ಟಿಯಿದೆ, ಆದರೆ, ಕೃಷ್ಣನೇ ಮೂಲ ಸರ್ವೋತ್ತಮ ಪುರುಷನೆಂದು ಮತ್ತು ಅವನಿಂದಲೇ ಅನೇಕಾನೇಕ ಅವತಾರಗಳೂ ವಿಸ್ತರಿಸುತ್ತಿವೆ ಎಂದೂ ವಿವರಿಸಿದೆ.

ಏತೇ ಚಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಮ್।
ಇಂದ್ರಾರಿವ್ಯಾಕುಲಂ ಲೋಕಂ ಮೃಡಯನ್ತಿ ಯುಗೇ ಯುಗೇ॥

"ಇಲ್ಲಿ ಪ್ರಸ್ತಾಪಿತವಾದ ದೇವೋತ್ತಮನ ಎಲ್ಲ ಅವತಾರಗಳು ಪರಮ ಪುರುಷನ ತದೇಕಾಂಶ ವಿಸ್ತರಣೆಗಳು ಅಥವಾ ತದೇಕಾಂತ ಆಂಶಿಕ ವಿಸ್ತರಣೆಗಳು. ಆದರೆ ಕೃಷ್ಣನೇ ಸ್ವಯಂ ಪರಮ ದೇವೋತ್ತಮ ಪುರುಷನು." (ಭಾಗವತ 1.3.28)

ಆದ್ದರಿಂದ ಕೃಷ್ಣನೇ ಮೂಲ ಪರಮ ದೇವೋತ್ತಮ ಪುರುಷನೂ, ಪರಮ ಸತ್ಯನೂ ಮತ್ತು ಪರಮಾತ್ಮ ಹಾಗೂ ನಿರಾಕಾರ ಬ್ರಹ್ಮನ್‌ರಿಗೆ ಮೂಲನು.

ಈ ಪರಮ ದೇವೋತ್ತಮ ಪುರುಷನ ಸನ್ನಿಧಿಯಲ್ಲಿ ಅರ್ಜುನನು ಬಂಧು ಬಾಂಧವರಿಗಾಗಿ ವಿಷಾದಪಡುವುದು ಖಂಡಿತವಾಗಿಯೂ ಉಚಿತವಾದುದಲ್ಲ, ಆದ್ದರಿಂದ ಕೃಷ್ಣನು **ಕುತಃ** "ಎಲ್ಲಿಂದ" ಎಂಬ ಪದದಿಂದ ಆಶ್ಚರ್ಯ ವ್ಯಕ್ತಪಡಿಸಿದನು. ಆರ್ಯರೆಂದು ಕರೆಯಲ್ಪಡುವ ಸುಸಂಸ್ಕೃತ ವ್ಯಕ್ತಿಗಳಲ್ಲಿ ಇಂಥ ಕಶ್ಮಲಗಳು ಎಂದೂ ನಿರೀಕ್ಷಿತವಲ್ಲ. ಜೀವನದ ಮೌಲ್ಯವನ್ನು ಅರಿತ ಮತ್ತು ಆತ್ಮ ಸಾಕ್ಷಾತ್ಕಾರ ಆಧಾರ ಹೊಂದಿದ ನಾಗರಿಕತೆಯುಳ್ಳ ವ್ಯಕ್ತಿಗಳಿಗೆ **ಆರ್ಯ** ಎಂಬ ಪದ ಅನ್ವಯಿಸುತ್ತದೆ. ಜೀವನದ ಕೇವಲ ಭೌತಿಕ ಕಲ್ಪನೆ ಹೊಂದಿರುವ ವ್ಯಕ್ತಿಗಳು, ಪರಮ ಸತ್ಯ ಸ್ವರೂಪನಾದ ವಿಷ್ಣು ಅಥವಾ ಭಗವಂತನ ಸಾಕ್ಷಾತ್ಕಾರವೇ ಜೀವನದ ಪರಮ ಗುರಿ ಎಂಬುದನ್ನು ತಿಳಿದಿರುವುದಿಲ್ಲ. ಮತ್ತು ಅವರು ಭೌತಿಕ ಜಗತ್ತಿನ ಬಾಹ್ಯ ಲಕ್ಷಣಗಳಿಂದ ಮೋಹಿತರಾಗಿರುವುದರಿಂದ ಅವರಿಗೆ ಮೋಕ್ಷವೆಂದರೆ ಏನು ಎಂಬುದು ಗೊತ್ತಿಲ್ಲ. ಭೌತಿಕ ಬಂಧ ನಿವೃತ್ತಿ ರೂಪದ ಮೋಕ್ಷ ಜ್ಞಾನ ಇಲ್ಲದವರನ್ನು ಅನಾರ್ಯರೆಂದು ಕರೆಯುತ್ತಾರೆ. ಅರ್ಜುನನು

ಕ್ಷತ್ರಿಯನಾಗಿದ್ದರೂ, ಯುದ್ಧ ಮಾಡಲು ಹಿಂಜರಿದಿದೆ ತನ್ನ ಕರ್ತವ್ಯ ಕರ್ಮಗಳಿಂದ ವಿಮುಖ ನಾಗುತ್ತಿದ್ದನು. ಇಂಥ ಹೇಡಿ ಕೆಲಸವು ಅನಾರ್ಯರಿಗೆ ಮಾತ್ರ [redacted] ಹೇಳಿದೆ. ಇಂಥ ಕರ್ತವ್ಯ ಚ್ಯುತಿಯಿಂದ ಅಧ್ಯಾತ್ಮ ಜೀವನ ಪ್ರಗತಿಗೆ ಸಹಾಯವಾಗುವುದಿಲ್ಲ. ಅಷ್ಟೇ ಅಲ್ಲ, ಜಗತ್ತಿನಲ್ಲಿ ಕೀರ್ತಿ ಗಳಿಸಲೂ ಕೂಡ ಇದು ಅವಕಾಶ ನೀಡುವುದಿಲ್ಲ. ಆದ್ದರಿಂದ ಅರ್ಜುನನ ಈ ಬಗೆಯ ಅನುಕಂಪ ದೃಷ್ಟಿಯನ್ನು ಕೃಷ್ಣನು ಒಪ್ಪಲಿಲ್ಲ.

**ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ ।**
**ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರನ್ತಪ ॥೩॥**

ಕ್ಲೈಬ್ಯಮ್—ಷಡಂತ್ವ, ಮಾಸ್ಮ—ಬೇಡ,ಗಮಃ—ಹೊಂದುವುದು, ಪಾರ್ಥ—ಹೇ ಪೃಥಾ ಪುತ್ರನೇ, ನ—ಎಂದಿಗೂ, ಏತತ್—ಈ, ತ್ವಯಿ—ನಿನಗೆ, ಉಪಪದ್ಯತೇ—ತಕ್ಕದ್ದಲ್ಲ, ಕ್ಷುದ್ರಂ—ಅಲ್ಪವು, ಹೃದಯ—ಹೃದಯದ, ದೌರ್ಬಲ್ಯಮ್—ದುರ್ಬಲತೆಯನ್ನು; ತ್ಯಕ್ತ್ವಾ—ಬಿಟ್ಟು. ಉತ್ತಿಷ್ಠ—ಮೇಲೇಳು, ಪರನ್ತಪ—ಹೇ ಶತ್ರುಗಳ ಶಿಕ್ಷಕನೇ.

**ಹೇ ಪೃಥಾ ಪುತ್ರನೇ, ಇಂಥ ಷಂಡತ್ವಕ್ಕೆ ಒಳಗಾಗಬೇಡ. ಇದು ನಿನಗೆ ಉಚಿತವಲ್ಲ. ಇಂಥ ಕ್ಷುದ್ರ ಹೃದಯ ದೌರ್ಬಲ್ಯವನ್ನು ಪರಿತ್ಯಜಿಸಿ ಮೇಲೇಳು, ಹೇ ಶತ್ರುಗಳನ್ನು ಶಿಕ್ಷಿಸುವವನೇ.**

**ಭಾವಾರ್ಥ:** ಅರ್ಜುನನು ಕೃಷ್ಣನ ತಂದೆ ವಸುದೇವನ ಸೋದರಿಯ ಪುತ್ರನಾದ್ದರಿಂದ, ಅವನನ್ನು ಪೃಥಾ ಪುತ್ರ ಎಂದು ಸಂಬೋಧಿಸಿದೆ. ಹೀಗೆ ಅರ್ಜುನನು ಕೃಷ್ಣನಿಗೆ ರಕ್ತ ಸಂಬಂಧ ಹೊಂದಿದ್ದನು. ಕ್ಷತ್ರಿಯ ಕುಮಾರನು ಯುದ್ಧಕ್ಕೆ ಹಿಂಜರಿದರೆ, ಅವನು ಹೆಸರಿಗೆ ಮಾತ್ರ ಕ್ಷತ್ರಿಯನು, ಮತ್ತು ಬ್ರಾಹ್ಮಣ ಪುತ್ರನು ಅಪವಿತ್ರ ಕೆಲಸಗಳನ್ನು ಮಾಡಿದರೆ, ಅವನು ಹೆಸರಿಗೆ ಮಾತ್ರ ಬ್ರಾಹ್ಮಣನು. ಅಂಥ ಕ್ಷತ್ರಿಯನೂ ಬ್ರಾಹ್ಮಣನೂ ತಮ್ಮ ತಂದೆ ತಾಯಿಗಳಿಗೆ ಯೋಗ್ಯ ಮಕ್ಕಳಲ್ಲ. ಆದ್ದರಿಂದ ಅರ್ಜುನನು ಅಯೋಗ್ಯ ಕ್ಷತ್ರಿಯ ಪುತ್ರನಾಗುವುದನ್ನು ಕೃಷ್ಣನು ಬಯಸಲಿಲ್ಲ. ಅರ್ಜುನನು ಕೃಷ್ಣನ ಬಹು ನಿಕಟ ಮಿತ್ರನಾಗಿದ್ದನು, ಮತ್ತು ಕೃಷ್ಣನು ರಥದಲ್ಲಿದ್ದು ಅರ್ಜುನನಿಗೆ ನೇರ ಮಾರ್ಗದರ್ಶನ ನೀಡುತ್ತಿದ್ದನು. ಇಷ್ಟೆಲ್ಲ ಅನುಕೂಲವಿದ್ದರೂ, ಅರ್ಜುನನು ಯುದ್ಧವನ್ನು ತ್ಯಜಿಸಿದರೆ, ಅವನು ಅಪಕೀರ್ತಿಕರ ಕಾರ್ಯ ಮಾಡಿದಂತಾಗುವುದು. ಆದ್ದರಿಂದ ಅರ್ಜುನನ ವ್ಯಕ್ತಿತ್ವಕ್ಕೆ ಅಂಥಹ ವರ್ತನೆಯು ಉಚಿತವಲ್ಲ ಎಂದು ಕೃಷ್ಣನು ಹೇಳಿದನು. ಅರ್ಜುನನು ಅತ್ಯಂತ ಪೂಜಾರ್ಹರಾದ ಭೀಷ್ಮಾದಿ ಬಂಧುಗಳ ಬಗ್ಗೆ ಔದಾರ್ಯದಿಂದ ಯುದ್ಧ ಮಾಡುವುದಿಲ್ಲ, ಎಂದು ಹೇಳಬಹುದಾಗಿದ್ದರೂ, ಅಂಥ ಔದಾರ್ಯವು ಕೇವಲ ಹೃದಯ ದೌರ್ಬಲ್ಯ ಎಂದು ಕೃಷ್ಣನು ಭಾವಿಸಿದನು. ಇಂಥ ಮಿಥ್ಯ ಔದಾರ್ಯವನ್ನು ಯಾವ ಅಧಿಕಾರಿಗಳೂ ಒಪ್ಪಿಲ್ಲ. ಆದ್ದರಿಂದ, ಅರ್ಜುನನಂಥ ವ್ಯಕ್ತಿಗಳು, ಶ್ರೀಕೃಷ್ಣನ ನೇರ ಮಾರ್ಗದರ್ಶನದಲ್ಲಿ, ಇಂಥ ಔದಾರ್ಯವನ್ನು ಅಥವಾ ತೋರಿಕೆಯ ಅಹಿಂಸೆಯನ್ನು ಪರಿತ್ಯಜಿಸಬೇಕು.

**ಅರ್ಜುನ ಉವಾಚ—**

**ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ ।**
**ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ ॥ ೪ ॥**

ಅರ್ಜುನ ಉವಾಚ—ಅರ್ಜುನನು ನುಡಿದನು, ಕಥಂ—ಹೇಗೆ, ಭೀಷ್ಮಂ—ಭೀಷ್ಮರನ್ನು, ಅಹಂ—ನಾನು, ಸಂಖ್ಯೇ—ಯುದ್ಧದಲ್ಲಿ, ದ್ರೋಣಂ—ದ್ರೋಣರನ್ನು, ಚ—ಕೂಡ; ಮಧುಸೂದನ—ಹೇ ಮಧುಸೂದನನೇ, ಇಷುಭಿಃ—ಬಾಣಗಳಿಂದ, ಪ್ರತಿಯೋತ್ಸ್ಯಾಮಿ—ಪ್ರತಿಯಾಗಿ ಹೊಡೆಯಲಿ, ಪೂಜಾಅರ್ಹೌ—ಪೂಜಾರ್ಹರಾದ; ಅರಿಸೂದನ—ಹೇ ಶತ್ರುಸಂಹಾರಕನೇ,

**ಅರ್ಜುನನು ನುಡಿದನು : ಹೇ ಶತ್ರುಸಂಹಾರಕನೇ, ಹೇ ಮಧುಸೂದನನೇ, ನನ್ನಿಂದ ಪೂಜಾರ್ಹರಾದಂಥ ಭೀಷ್ಮದ್ರೋಣಾದಿಗಳ ಮೇಲೆ ಯುದ್ಧದಲ್ಲಿ- ನಾನು ಅದೆಂತು ಪ್ರತಿಯಾಗಿ ಬಾಣ ಪ್ರಯೋಗ ಮಾಡಲಿ?**

**ಭಾವಾರ್ಥ :** ಅತ್ಯಂತ ಗೌರವಾನ್ವಿತ ಪಿತಾಮಹ ಭೀಷ್ಮರು ಮತ್ತು ಗುರು ದ್ರೋಣಾಚಾರ್ಯರು ಸದಾ ಪೂಜಾರ್ಹರು. ಅವರು ಧಾಳಿ ಮಾಡಿದರೂ ಅವರ ಮೇಲೆ ಪ್ರತಿ ಧಾಳಿ ಮಾಡಕೂಡದು. ಉತ್ತಮರೊಡನೆ ವಾಗ್ಯುದ್ಧ ಮಾಡುವುದು ಕೂಡ ಸಾಮಾನ್ಯವಾಗಿ ಸೌಜನ್ಯ ಲಕ್ಷಣವಲ್ಲ. ಅವರು ಕೆಲವು ಸಲ ವರ್ತನೆಯಲ್ಲಿ ಕಠೋರರಾಗಿದ್ದರೂ ಕೂಡ ಅವರ ಬಗ್ಗೆ ಕಠೋರವಾಗಿ ವರ್ತಿಸಕೂಡದು. ಹೀಗಿರುವಾಗ, ಅರ್ಜುನನು ಅವರ ಮೇಲೆ ಪ್ರತಿ ಧಾಳಿ ಮಾಡುವುದು ಹೇಗೆ ಸಾಧ್ಯ? ಕೃಷ್ಣನು ಎಂದಾದರೂ ತನ್ನ ಸ್ವಂತ ಪಿತಾಮಹ ಉಗ್ರಸೇನನ ಮೇಲೆ ಅಥವಾ ತನ್ನ ಗುರು ಸಾಂದೀಪನಿ ಮುನಿಗಳ ಮೇಲೆ ಧಾಳಿ ಮಾಡುವನೇ ? ಅರ್ಜುನನು ಇಂಥ ಕೆಲವು ವಾದಗಳನ್ನು ಕೃಷ್ಣನ ಮುಂದಿಟ್ಟನು,

**ಗುರೂನಹತ್ವಾ ಹಿ ಮಹಾನುಭಾವಾನ್**
**ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ ।**
**ಹತ್ವಾರ್ಥಕಾಮಾಂಸ್ತು ಗುರೂನಿಹೈವ**
**ಭುಂಜೀಯ ಭೋಗಾನ್ ರುಧಿರಪ್ರದಿಗ್ಧಾನ್ ॥ ೫ ॥**

ಗುರೂನ್—ಹಿರಿಯರನ್ನು, ಅಹತ್ವಾ—ಕೊಲ್ಲದೇ, ಹಿ—ಖಂಡಿತವಾಗಿ, ಮಹಾನುಭಾವಾನ್—ಮಹಾತ್ಮರನ್ನು, ಶ್ರೇಯಃ—ಒಳ್ಳೆಯದು, ಭೋಕ್ತುಂ—ಜೀವಿತವನ್ನು ಆನಂದಿಸಲು; ಭೈಕ್ಷ್ಯಂ—ಭಿಕ್ಷೆ ಬೇಡುವುದರಿಂದ; ಅಪಿ—ಕೂಡ; ಇಹ—ಈ ಜೀವನದಲ್ಲಿ; ಲೋಕೇ—ಈ ಜಗತ್ತಿನಲ್ಲಿ, ಹತ್ವಾ—ಕೊಂದು, ಅರ್ಥ—ಪ್ರಯೋಜನ, ಕಾಮಾನ್—ಆಶಿಸಿ, ತು—ಆದರೆ, ಗುರೂನ್—ಹಿರಿಯರನ್ನು, ಇಹ—ಈ ಜಗತ್ತಿನಲ್ಲಿ, ಏವ—ಖಂಡಿತವಾಗಿ, ಭುಂಜೀಯ—ಭೋಗಿಸಬೇಕಾಗುತ್ತದೆ, ಭೋಗಾನ್—ಭೋಗ್ಯ ವಸ್ತುಗಳನ್ನು, ರುಧಿರ—ರಕ್ತ, ಪ್ರದಿಗ್ಧಾನ್—ಸಿಕ್ತವಾದ.

**ಮಹಾತ್ಮರಾದ ನನ್ನ ಗುರುಗಳನ್ನು ಕೊಂದು ಬದುಕುವುದಕ್ಕಿಂತ, ಈ ಜಗತ್ತಿನಲ್ಲಿ ಭಿಕ್ಷೆ ಬೇಡಿ ಬದುಕುವುದು ಲೇಸು. ಪ್ರಾಪಂಚಿಕ ಲಾಭವನ್ನು ಬಯಸಿದರೂ ಅವರು ಉತ್ತಮರು. ಅಂಥವರನ್ನು ಕೊಂದರೆ, ನಾವು ಭೋಗಿಸುವುದೆಲ್ಲ ರಕ್ತಸಿಕ್ತವಾಗುತ್ತದೆ.**

**ಭಾವಾರ್ಥ :** ಶಾಸ್ತ್ರ ಸಂಹಿತಾ ಪ್ರಕಾರ, ಹೀನ ಕಾರ್ಯದಲ್ಲಿ ತೊಡಗಿದ ಮತ್ತು ವಿಹಿತಾವಿಹಿತ ವಿವೇಚನೆ ಕಳೆದುಕೊಂಡವನು, ಗುರುವಾಗಿದ್ದರೂ ಕೂಡ ತ್ಯಾಜ್ಯನು. ಕೇವಲ ದ್ರವ್ಯಕ್ಕಾಗಿ ಅವರು ಹಾಗೆ ಪಕ್ಷವನ್ನು ವಹಿಸಬಾರದಾಗಿತ್ತಾದರೂ, ಭೀಷ್ಮ ದ್ರೋಣರು ದುರ್ಯೋಧನನ ಪಕ್ಷ ವಹಿಸಬೇಕಾಯಿತು. ಹೀಗಿರುವಾಗ, ಅವರು ತಮ್ಮ ಗುರುತ್ವದ ಗೌರವವನ್ನು ಕಳೆದುಕೊಂಡಿದ್ದರು. ಆದರೆ ಆಗಲೂ ಕೂಡ, ಅವರು ತನಗೆ ಉತ್ತಮರೇ ಸರಿ, ಆದ್ದರಿಂದ ಅಂಥವರನ್ನು ಕೊಂದು, ಭೌತಿಕ ಪ್ರಯೋಜನ ಪಡೆಯುವುದು ರಕ್ತಸಿಕ್ತ ಕೀಳು ವಸ್ತು ಭೋಗದಂತೆ, ಎಂಬುದು ಅರ್ಜುನನ ಭಾವನೆ.

**ನಚೈತದ್ ವಿದ್ಮಃ ಕತರನ್ನೋ ಗರೀಯೋ**
**ಯದ್ ವಾ ಜಯೇಮ ಯದಿ ವಾ ನೋ ಜಯೇಯುಃ ।**
**ಯಾನೇವ ಹತ್ವಾ ನ ಜಿಜೀವಿಷಾಮಸ್**
**ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ ॥೬॥**

ನ—ಅಥವಾ, ಚ—ಕೂಡ, ಏತತ್—ಇದು, ವಿದ್ಮಃ—ನಮಗೆ ತಿಳಿದಿದೆಯೇ, ಕತರತ್—ಯಾವುದು, ನಃ—ನಮಗೆ, ಗರೀಯಃ—ಹಿತವಾದುದು, ಯತ್‌ವಾ—ಸಾಧ್ಯವೋ ಜಯೇಮ—ನಾವು ಗೆಲ್ಲುವುದು, ಯದಿ—ಒಂದು ವೇಳೆ, ವಾ—ಅಥವಾ, ನಃ—ನಮ್ಮನ್ನು, ಜಯೇಯುಃ—ಅವರು ಗೆಲ್ಲುವುದು, ಯಾನ್—ಅವರನ್ನು, ಏವ—ಖಂಡಿತವಾಗಿ, ಹತ್ವಾ—ಕೊಂದು, ನ—ಎಂದೂ, ಜಿಜೀವಿಷಾಮಃ—ನಾವು ಬದುಕಲು ಬಯಸುವುದಿಲ್ಲ, ತೇ—ಅವರೆಲ್ಲರೂ, ಅವಸ್ಥಿತಾಃ—ಸನ್ನಿವೇಶಿತರಾಗಿದ್ದಾರೆ, ಪ್ರಮುಖೇ—ಎದುರಿನಲ್ಲಿ, ಧಾರ್ತಾರಾಷ್ಟ್ರಾಃ—ಧೃತರಾಷ್ಟ್ರನ ಪುತ್ರರು.

**ನಾವು ಅವರನ್ನು ಗೆಲ್ಲುವುದು ಅಥವಾ ಅವರು ನಮ್ಮನ್ನು ಗೆಲ್ಲುವುದು–ಇದರಲ್ಲಿ ಯಾವುದು ವಿಹಿತ ಎಂಬುದು ಕೂಡ ನಮಗೆ ಗೊತ್ತಿಲ್ಲ. ಧೃತರಾಷ್ಟ್ರಪುತ್ರರನ್ನು ಕೊಂದು ನಾವು ಜೀವಿಸಲು ಲಕ್ಷಿಸಬಾರದು. ಆದರೂ ಅವರೀಗ ರಣಾಂಗಣದಲ್ಲಿ ನಮ್ಮ ಎದುರು ನಿಂತಿದ್ದಾರೆ.**

**ಭಾವಾರ್ಥ :** ಯುದ್ಧ ಮಾಡುವುದು ಕ್ಷತ್ರಿಯರ ಕರ್ತವ್ಯವಾಗಿದ್ದರೂ, ಅನವಶ್ಯಕ ಹಿಂಸಾಪಾಯಕ್ಕೆ ಎಡೆಕೊಟ್ಟು ಯುದ್ಧ ಮಾಡಬೇಕೇ ಅಥವಾ ಯುದ್ಧ ಮಾಡದೇ ಭಿಕ್ಷೆ ಬೇಡಿ ಜೀವಿಸಬೇಕೇ, ಎಂಬುದು ಅರ್ಜುನನಿಗೆ ತೋಚದಾಯಿತು. ಅವನು ವೈರಿಗಳನ್ನು ಜೈಸದಿದ್ದರೆ, ಭಿಕ್ಷೆ ಬೇಡುವುದೊಂದೇ ಅವನಿಗೆ ಉಳಿದ ಜೀವನೋಪಾಯ. ಉಭಯ ಪಕ್ಷಗಳಲ್ಲಿ ಯಾರಾದರೂ ಗೆಲ್ಲಬಹುದಾಗಿದ್ದರಿಂದ, ವಿಜಯವು ನಿಶ್ಚಿತವಲ್ಲ. ಅವರಿಗೆ ವಿಜಯ ದೊರೆಯಲಿದ್ದರೂ ಮತ್ತು ಅವರ ಕಾರಣ ಸಮರ್ಥನೀಯವಾಗಿದ್ದರೂ, ಯುದ್ಧದಲ್ಲಿ ಧೃತರಾಷ್ಟ್ರನ ಪುತ್ರರೆಲ್ಲ ಮಡಿದರೆ, ಆಗಲೂ ಅವರಿಲ್ಲದೆ ಬದುಕುವುದು ಬಹಳ ಕಷ್ಟಕರ. ಇಂಥ ಪರಿಸ್ಥಿತಿಗಳಲ್ಲಿ ತಮಗೆ ಅದು ಮತ್ತೊಂದು ರೀತಿಯ ಸೋಲು ಆಗುವುದು. ಅರ್ಜುನನ ಈ ಎಲ್ಲ ಪರಾಮರ್ಶೆಗಳನ್ನು ನೋಡಿದರೆ, ಅವನು ಮಹಾ ಭಕ್ತನಷ್ಟೇ ಅಲ್ಲದೆ, ಅತ್ಯಂತ ಅರಿವುಳ್ಳವನಾಗಿದ್ದನು, ಮತ್ತು ತನ್ನ ಮನಸ್ಸು ಮತ್ತು ಇಂದ್ರಿಯಗಳ ಮೇಲೆ

**ಪೂರ್ಣ** ಹತೋಟಿ ಹೊಂದಿದ್ದನೆಂಬುದು ಖಚಿತವಾಗಿ ಸಾಧಿತವಾಗುತ್ತದೆ. ಅವನು ರಾಜ **ಕುಟುಂ**ಬದಲ್ಲಿ ಹುಟ್ಟಿದ್ದರೂ, ತಾನು ಭಿಕ್ಷೆ ಬೇಡಿ ಬದುಕಲು ಬಯಸುವುದು, ಅರ್ಜುನನ **ವೈ**ರಾಗ್ಯದ ಮತ್ತೊಂದು ಸಂಕೇತ. ಈ ಎಲ್ಲ ಗುಣಗಳು ಮತ್ತು ಅವನ ಗುರು, ಶ್ರೀಕೃಷ್ಣನ ಉಪದೇಶಗಳಲ್ಲಿ ಇಟ್ಟಿರುವ ಶ್ರದ್ಧೆ— ಇವು ಅವನು ನಿಜವಾಗಿಯೂ ಧರ್ಮಿಷ್ಠನೆಂಬುದನ್ನು ಸೂಚಿಸುವುದು. ಅರ್ಜುನನು ಮೋಕ್ಷಕ್ಕೆ ಅತ್ಯಂತ ಅರ್ಹನು ಎಂಬುದು ನಿರ್ಣೀತ, ಇಂದ್ರಿಯ ನಿಗ್ರಹವಿದ್ದ ಹೊರತು, ಜ್ಞಾನದ ಮಟ್ಟಕ್ಕೇರುವ ಸಂಭವವೇ ಇಲ್ಲ, ಮತ್ತು ಜ್ಞಾನ ಭಕ್ತಿಗಳಿಲ್ಲದೆ ಮೋಕ್ಷಕ್ಕೆ ಅವಕಾಶವು ಇಲ್ಲ. ಅರ್ಜುನನು ತನ್ನ ಭೌತಿಕ ಸಂಬಂಧಗಳಲ್ಲಿ **ಹೊಂ**ದಿದ್ದ ಅಪಾರ ಗುಣಗಳಿಗಿಂತ ಮೇಲಾಗಿ, ಅವನು ಮೇಲೆ ಹೇಳಿದವುಗಳಲ್ಲಿ ಸದ್ಗುಣೋಪೇತನಾಗಿದ್ದನು.

**ಕಾರ್ಪಣ್ಯದೋಷಪಹತಸ್ವಭಾವಃ**
**ಪೃಚ್ಛಾಮಿ ತ್ವಾಂ ಧರ್ಮಸಮ್ಮೂಢಚೇತಾಃ ।**
**ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ**
**ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್ ॥ ೭ ॥**

ಕಾರ್ಪಣ್ಯ—ಕೃಪಣತೆಯ, ದೋಷ—ದೋಷದಿಂದ, ಉಪಹತ—ಬಾಧಿತನಾಗಿ, ಸ್ವಭಾವ—ಸ್ವಭಾವಗಳು, ಪೃಚ್ಛಾಮಿ—ನಾನು ಕೇಳುತ್ತಿದ್ದೇನೆ, ತ್ವಾಮ್—ನಿನ್ನನ್ನು, ಧರ್ಮ—ಧರ್ಮವು, ಸಮ್ಮೂಢ—ದಿಗ್ಭ್ರಮೆಯಿಂದ, ಚೇತಾಃ—ಹೃದಯದಲ್ಲಿ, ಯತ್—ಯಾವುದು, ಶ್ರೇಯಃ—ಸರ್ವ ಶ್ರೇಯಸ್ಕರವು, ಸ್ಯಾತ್—ಆಗಬಹುದು ನಿಶ್ಚಿತಂ—ನಿಶ್ಚಿತವಾಗಿ, ಬ್ರೂಹಿ—ಹೇಳು, ತತ್—ಅದನ್ನು, ಮೇ—ನನಗೆ, ಶಿಷ್ಯಃ—ಶಿಷ್ಯನು, ತೇ—ನಿನ್ನ, ಅಹಂ—ನಾನು ಆಗಿರುವೆನು, ಶಾಧಿ—ಬೋಧಿಸು, ಮಾಮ್—ನನಗೆ, ತ್ವಾಮ್—ನಿನಗೆ, ಪ್ರಪನ್ನಮ್—ಶರಣಾಗತನಾದ.

**ಕೃಪಣತೆಯ ದೋಷದಿಂದ ಎಲ್ಲ ಪ್ರಶಾಂತತೆಯನ್ನು ಕಳೆದುಕೊಂಡು ಈಗ ನನ್ನ ಕರ್ತವ್ಯದ ಬಗ್ಗೆ ದಿಕ್ಕು ತೋಚದೆ ಇದ್ದೇನೆ. ಈ ಸನ್ನಿವೇಶದಲ್ಲಿ ನನಗೆ ಯಾವುದು ಅತ್ಯಂತ ಹಿತ ಎಂಬುದನ್ನು ನಿಶ್ಚಿತವಾಗಿ ಹೇಳಬೇಕೆಂದು ನಿನ್ನನ್ನು ಕೇಳಿಕೊಳ್ಳುತ್ತಿದ್ದೇನೆ. ನಾನೀಗ ನಿನ್ನ ಶಿಷ್ಯ ಮತ್ತು ನಿನಗೆ ಶರಣಾಗತಾತ್ಮನು. ದಯವಿಟ್ಟು ನನಗೆ ಬೋಧಿಸು.**

**ಭಾವಾರ್ಥ :** ಭೌತಿಕ ಕಾರ್ಯಗಳ ಎಲ್ಲ ವಿಧಾನಗಳು ಪ್ರಕೃತಿ ಸ್ವಭಾವಾನುಸಾರ, ಪ್ರತಿಯೊಬ್ಬನಿಗೆ ಗೊಂದಲಕ್ಕೆ ಮೂಲ. ಪ್ರತಿ ಹೆಜ್ಜೆಯಲ್ಲಿಯೂ ಗೊಂದಲ ಇರುವುದರಿಂದ, ಜೀವನದ ಉದ್ದೇಶ ಸಾಧನೆಗಾಗಿ, ಯೋಗ್ಯ ಮಾರ್ಗದರ್ಶನ ನೀಡುವ ನಿಜಗುರುಗಳ ಬಳಿಗೆ ಹೋಗುವುದು ಅಗತ್ಯವಾಗುತ್ತದೆ. ನಮ್ಮ ಇಚ್ಛೆ ಇಲ್ಲದೆಯೇ ಉಂಟಾಗುವ ಜೀವನದ ಗೊಂದಲಗಳಿಂದ ಮುಕ್ತರಾಗಲು ನಾವು ಒಬ್ಬ ನಿಜಗುರುವನ್ನು ಹೋಗಿ ಸೇರಬೇಕು ಎಂದು ಎಲ್ಲ ವೇದ ಸಾಹಿತ್ಯಗಳು ಹೇಳಿವೆ. ಇವು ಯಾರೂ ಕಿಡಿಯಿಡದೆ ಉರಿದೇಳುವ ಕಾಡುಗಿಚ್ಚಿನಂತಿವೆ. ಅದೇ ರೀತಿಯಾಗಿ ಜಗತ್ತಿನ ಇಂದಿನ **ಸ್ಥಿತಿಯಲ್ಲಿಯೂ ಕೂಡ, ನಾವು**

ಬಯಸದೆಯೇ ಜೀವನದ ಗೊಂದಲಗಳು ಇದ್ದಕ್ಕಿದ್ದಹಾಗೆ ತಲೆದೋರುತ್ತವೆ. ಅಗ್ನಿ ಅನಾಹುತವನ್ನು ಯಾರೂ ಬಯಸುವುದಿಲ್ಲ. ಆದರೂ ಅದು ಹೊತ್ತಿಕೊಂಡು ಉರಿದೇಳುತ್ತದೆ, ಅದರಿಂದ ನಮಗೆ ಏನೂ ತೋಚದಾಗುತ್ತದೆ. ಆದ್ದರಿಂದ, ಜೀವನದ ಗೊಂದಲಗಳನ್ನು ನಿವಾರಿಸಿಕೊಳ್ಳಲು ಮತ್ತು ಪರಿಹಾರ ವಿದ್ಯೆಯನ್ನು ಅರಿತುಕೊಳ್ಳಲು ಪರಂಪರಾನುಗತ ಒಬ್ಬ ಗುರುಗಳನ್ನು ಆಶ್ರಯಿಸಬೇಕೆಂಬುದು ವೇದಗಳ ಉಪದೇಶ. ನಿಜ ಗುರುಗಳನ್ನು ಹೊಂದಿದವನು ಎಲ್ಲ ತಿಳಿದುಕೊಳ್ಳಬೇಕೆಂಬುದು ನಿರೀಕ್ಷೆ. ಆದ್ದರಿಂದ, ಭೌತಿಕ ಗೊಂದಲಗಳಲ್ಲಿ ಇರದೆ ನಿಜಗುರುಗಳನ್ನು ಆಶ್ರಯಿಸಬೇಕು. ಇದೇ ಈ ಶ್ಲೋಕದ ತಾತ್ಪರ್ಯ.

ಭೌತಿಕ ಗೊಂದಲಗಳಲ್ಲಿರುವವನು ಯಾರು ? ಜೀವನದ ಸಮಸ್ಯೆಗಳನ್ನು ಯಾರು ಅರಿತುಕೊಳ್ಳುವುದಿಲ್ಲವೋ ಅವನು. ಬೃಹದಾರಣ್ಯಕ ಉಪನಿಷತ್ತಿನಲ್ಲಿ (3. 8. 10) ಗೊಂದಲಕ್ಕೆ ಈಡಾದ ಮನುಷ್ಯನನ್ನು ಹೀಗೆ ವರ್ಣಿಸಿದೆ: **ಯೋವಾ ಏತದ್ ಅಕ್ಷರಂ ಗಾರ್ಗಿ ಅವಿದಿತ್ವಾಸ್ಮಾಲ್ಲೋಕಾತ್ ಪ್ರೈತಿ ಸ ಕೃಪಣಃ.** "ಯಾವ ಮನುಷ್ಯನು ಮಾನವನಾಗಿ ಜೀವನದ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವುದಿಲ್ಲವೋ ಮತ್ತು ಆತ್ಮ ಸಾಕ್ಷಾತ್ಕಾರ ವಿಜ್ಞಾನವನ್ನು ಅರಿತುಕೊಳ್ಳದೆ ಬೆಕ್ಕುನಾಯಿಗಳ ಹಾಗೆ ಈ ಲೋಕವನ್ನು ತ್ಯಜಿಸುವನೋ ಅವನೇ ಕೃಪಣನು". ಜೀವಾತ್ಮನಿಗೆ ಈ ಮಾನವ ಜನ್ಮವು ಅತ್ಯಂತ ಬೆಲೆಯುಳ್ಳದ್ದು, ಆದ್ದರಿಂದ ಆವನು ಜೀವನದ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಈ ಜನ್ಮವನ್ನು ಉಪಯೋಗಿಸಿಕೊಳ್ಳಬಹುದು. ಈ ಅವಕಾಶವನ್ನು ಉಪಯೋಗಿಸಿಕೊಳ್ಳದವನು ಕೃಪಣನು. ಜೀವನದ ಎಲ್ಲ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಈ ದೇಹವನ್ನು ಉಪಯೋಗಿಸಿಕೊಳ್ಳುವಷ್ಟು ಬುದ್ಧಿಯುಳ್ಳವನು ಬ್ರಾಹ್ಮಣನು, **ಯಾ ಏತದ್ ಅಕ್ಷರಂ ಗಾರ್ಗಿ ವಿದಿತ್ವಾಸ್ಮಾಲ್ಲೋಕಾತ್ ಪ್ರೈತಿ ಸ ಬ್ರಾಹ್ಮಣಃ.**

ಕೃಪಣರಾದವರು ಭೌತಿಕ ಜೀವನದ ಕಲ್ಪನೆಯಲ್ಲಿ ತಮ್ಮ ಕುಟುಂಬ, ಸಮಾಜ, ದೇಶ ಇತ್ಯಾದಿಗಳ ಬಗ್ಗೆ ಅತಿವ್ಯಾಮೋಹದಿಂದ ತಮ್ಮ ಕಾಲವನ್ನು ಹಾಳುಮಾಡಿಕೊಳ್ಳುತ್ತಾರೆ. ಈ "ಚರ್ಮರೋಗದ" ಆಧಾರದಿಂದ ಹೆಚ್ಚಾಗಿ ಒಬ್ಬನು ಕುಟುಂಬ ಜೀವನ ಎಂದರೆ ಹೆಂಡತಿ, ಮಕ್ಕಳು ಮತ್ತು ಕುಟುಂಬದ ಇತರರ ಬಗ್ಗೆ ವ್ಯಾಮೋಹವುಳ್ಳವನು. ಕೃಪಣನು ತನ್ನ ಕುಟುಂಬದವರನ್ನು ಮರಣದಿಂದ ರಕ್ಷಿಸಲು ಶಕ್ತನೆಂದು ತಿಳಿಯುತ್ತಾನೆ. ಅಥವಾ ತನ್ನ ಕುಟುಂಬ ಅಥವಾ ಸಮಾಜವು ತನ್ನನ್ನು ಸಾವಿನಿಂದ ರಕ್ಷಿಸುತ್ತದೆ ಎಂದು ತಿಳಿಯುತ್ತಾನೆ. ಈ ಬಗೆಯ ಕುಟುಂಬ ವ್ಯಾಮೋಹವನ್ನು ಕೆಳವರ್ಗದ ಪ್ರಾಣಿಗಳಲ್ಲಿಯೂ ಕಾಣಬಹುದು, ಅವು ಕೂಡ ತಮ್ಮ ಮಕ್ಕಳು ಮರಿಗಳನ್ನು ರಕ್ಷಿಸುತ್ತವೆ. ಅರ್ಜುನನು ಬುದ್ಧಿವಂತನಾಗಿ, ಕುಟುಂಬ ವರ್ಗದವರ ಬಗ್ಗೆ ವ್ಯಾಮೋಹ ಮತ್ತು ಅವರನ್ನು ಮರಣದಿಂದ ರಕ್ಷಿಸಬೇಕು ಎಂಬ ಇಚ್ಛೆಯು—ತನ್ನ ವಿಚಾರ ಗೊಂದಲಕ್ಕೆ ಕಾರಣ ಎಂಬುದನ್ನು ಅರಿತುಕೊಂಡಿದ್ದನು. ಯುದ್ಧ ಮಾಡುವ ಕರ್ತವ್ಯವು ಅವನನ್ನು ನಿರೀಕ್ಷಿಸುತ್ತಿದೆ ಎಂಬುದನ್ನು ತಿಳಿದಿದ್ದರೂ ಕೂಡ, ಅವನು, ತನ್ನ ಕೃಪಣತೆಯ ದೌರ್ಬಲ್ಯದಿಂದ ಕರ್ತವ್ಯಗಳನ್ನು ನಿರ್ವಹಿಸಲು ಆಗಲಿಲ್ಲ. ಆದ್ದರಿಂದ ನಿಶ್ಚಿತ ಪರಿಹಾರ ಸೂಚಿಸುವಂತೆ

ಪರಮ ಗುರುವಾದ ಭಗವಾನ್ ಕೃಷ್ಣನನ್ನು ಕೇಳುತ್ತಾನೆ. ತಾನು ತನ್ನನ್ನು ಕೃಷ್ಣನ ಶಿಷ್ಯನೆಂದು ಅರ್ಪಣೆ ಮಾಡುತ್ತಾನೆ. ಅವನು ಸಖ್ಯಭಾವದ ಮಾತುಗಳನ್ನು ನಿಲ್ಲಿಸ ಬಯಸುತ್ತಾನೆ. ಗುರು ಶಿಷ್ಯರ ನಡುವಿನ ಮಾತುಗಳು ಗಂಭೀರ, ಮತ್ತು ಈಗ ಅರ್ಜುನನು ಅಂಗೀಕೃತ ಮಹಾಗುರುವಿನ ಮುಂದೆ ಬಹು ಗಂಭೀರವಾಗಿ ಮಾತನಾಡಬಯಸುವನು. ಆದುದರಿಂದ ಕೃಷ್ಣನು ಭಗವದ್ಗೀತಾ ವಿಜ್ಞಾನದ ಮೂಲಗುರು. ಮತ್ತು ಅರ್ಜುನನು ಗೀತೆಯನ್ನು ಅರಿತುಕೊಳ್ಳುವ ಪ್ರಥಮ ಶಿಷ್ಯನು. ಅರ್ಜುನನು ಭಗವದ್ಗೀತೆಯನ್ನು ಯಾವ ರೀತಿಯಲ್ಲಿ ತಿಳಿದುಕೊಂಡನೆಂಬುದು ಗೀತೆಯಲ್ಲಿಯೇ ವ್ಯಕ್ತವಾಗಿದೆ. ಹೀಗಿದ್ದೂ, ಮೂಢ ಲೌಕಿಕ ವಿದ್ವಾಂಸರು ವ್ಯಕ್ತಿಯಂತೆ ಕೃಷ್ಣನಿಗಲ್ಲದೆ, "ಕೃಷ್ಣನ ಒಳಗೆ ಅಜವಾಗಿರುವುದಕ್ಕೆ" ಶರಣಾಗಬೇಕೆಂದು ವಿವರಿಸುತ್ತಾರೆ. ಕೃಷ್ಣನ ಒಳಹೊರಕ್ಕೆ ಭೇದವಿಲ್ಲ, ಮತ್ತು ಈ ಅರಿವು ಇಲ್ಲದವನು ಭಗವದ್ಗೀತೆಯನ್ನು ಅರಿಯಲೆತ್ನಿಸುವ ಮಹಾಮೂಢನೇ ಸರಿ.

**ನ ಹಿ ಪ್ರಪಶ್ಯಾಮಿ ಮಮಾಪನುದ್ಯಾದ್**
**ಯಚ್ಛೋಕಮುಚ್ಛೋಷಣಮಿಂದ್ರಿಯಾಣಾಮ್ ।**
**ಅವಾಪ್ಯ ಭೂಮಾವಸಪತ್ನಮೃದ್ಧಂ**
**ರಾಜ್ಯಂ ಸುರಾಣಾಮಪಿ ಚಾಧಿಪತ್ಯಮ್ ॥ ೮ ॥**

ನ—ಇಲ್ಲ, ಹಿ—ಖಂಡಿತವಾಗಿ, ಪ್ರಪಶ್ಯಾಮಿ—ನಾನು ನೋಡುವುದು, ಮಮ—ನನ್ನ, ಅಪನುದ್ಯಾದ್—ಹೊಡೆದೋಡಿಸಬಹುದು, ಯತ್—ಯಾವುದೋ ಅದು, ಶೋಕಮ್—ಶೋಕವನ್ನು, ಉಚ್ಛೋಷಣಮ್—ಒಣಗುತ್ತಿರುವುದನ್ನು, ಇಂದ್ರಿಯಾಣಾಮ್—ಇಂದ್ರಿಯಗಳ, ಅವಾಪ್ಯ—ಹೊಂದುವುದು, ಭೂಮೌ—ಭೂಮಿಯ ಮೇಲೆ, ಅಸಪತ್ನಮ್—ನಿರ್ವೈರಿ, ಋದ್ಧಮ್—ಸಮೃದ್ಧ, ರಾಜ್ಯಮ್—ರಾಜ್ಯವನ್ನು, ಸುರಾಣಾಮ್—ದೇವತೆಗಳ, ಅಪಿ—ಕೂಡ, ಚ—ಹಾಗೂ, ಆಧಿಪತ್ಯಮ್—ಆಧಿಪತ್ಯವನ್ನು.

**ನನ್ನ ಇಂದ್ರಿಯಗಳನ್ನು ಒಣಗಿಸುತ್ತಿರುವ ಈ ಶೋಕವನ್ನು ಹೊಡೆದೋಡಿಸುವ ಮಾರ್ಗ ನನಗೆ ಕಾಣುತ್ತಿಲ್ಲ. ನಾನು ಸಮೃದ್ಧವಾದ ಈಡಿಲ್ಲದ ರಾಜ್ಯವನ್ನು, ಸ್ವರ್ಗದಲ್ಲಿ ದೇವತೆಗಳು ಹೊಂದಿರುವ ಶ್ರೇಷ್ಠಾಧಿಕಾರದೊಡನೆ ಗೆದ್ದರೂ, ಈ ಶೋಕವನ್ನು ದೂರಮಾಡಲು ನನಗೆ ಸಾಧ್ಯವಾಗುವುದಿಲ್ಲ.**

**ಭಾವಾರ್ಥ :** ಅರ್ಜುನನು ಧರ್ಮ ಮತ್ತು ನೀತಿ ಸಂಹಿತೆಗಳ ಅನೇಕ ತತ್ವಗಳ ಜ್ಞಾನವನ್ನು ಆಧರಿಸಿ ನಾನಾ ವಾದಗಳನ್ನು ಮುಂದೆ ಒಡ್ಡುತ್ತಿದ್ದರೂ, ಅವನು ಗುರುವಾದ ಶ್ರೀಕೃಷ್ಣನ ಸಹಾಯವಿಲ್ಲದೆ ತನ್ನ ನಿಜ ಸಮಸ್ಯೆಯನ್ನು ಪರಿಹರಿಸಿಕೊಳ್ಳಲು ಸಾಧ್ಯವಾಗಲಿಲ್ಲ ಎಂದು ತೋರುತ್ತದೆ. ಅವನ ಇಡೀ ಅಸ್ತಿತ್ವವನ್ನೇ ಒಣಗಿಸುತ್ತಿದ್ದ ಸಮಸ್ಯೆಗಳನ್ನು ನಿವಾರಿಸಿಕೊಳ್ಳುವಲ್ಲಿ ತನಗಿದ್ದ ಜ್ಞಾನವೆಂಬುದು ನಿರುಪಯುಕ್ತವೆಂದು ಅರ್ಜುನನು ಅರಿತುಕೊಂಡಿದ್ದನು; ಮತ್ತು ಕೃಷ್ಣನಂಥ ಗುರುವಿನ ಸಹಾಯವಿಲ್ಲದೆ ತನ್ನ ವಿಚಾರಗೊಂದಲ ಗಳನ್ನು ಪರಿಪರಿಸಿಕೊಳ್ಳುವುದು ಅವನಿಗೆ ಸಾಧ್ಯವಿರಲಿಲ್ಲ. ವಿಶ್ವವಿದ್ಯಾಲಯದ ಜ್ಞಾನ, ವಿದ್ವತ್ತು, ಉನ್ನತ ಸ್ಥಾನ, ಇತ್ಯಾದಿಗಳು ಜೀವನದ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವಲ್ಲಿ

ಅಪ್ರಯೋಜಕ. ಕೃಷ್ಣನಂಥ ಗುರುವು ಸಹಾಯ ಮಾಡಬಹುದು. ಆದುದರಿಂದ, ನೂರಕ್ಕೆ ನೂರರಷ್ಟು ಕೃಷ್ಣಪ್ರಾಜ್ಞಿಯಾದ ಗುರುವೇ ನಿಜವಾದ ಗುರು, ಜೀವನದ ಸಮಸ್ಯೆಗಳನ್ನು ಪರಿಹರಿಸಲು ಅವನು ಶಕ್ತನು ಎಂಬುದು ನಿರ್ಣಯ. ಅವನ ಸಾಮಾಜಿಕ ಸ್ಥಾನಮಾನ ಏನೇ ಆಗಿದ್ದರೂ, ಕೃಷ್ಣಪ್ರಜ್ಞಾವಿಜ್ಞಾನ ಪಾರಂಗತನು ನಿಜಗುರು ಎಂದು ಶ್ರೀಚೈತನ್ಯ ಮಹಾಪ್ರಭುಗಳು ಹೇಳಿದ್ದಾರೆ.

ಕಿಬಾ ವಿಪ್ರ ಕಿಬಾ ನ್ಯಾಸೀ. ಶೂದ್ರ ಕೇನೆ ನಯ
ಯೇಯಿ ಕೃಷ್ಣ ತತ್ತ್ವ ವೇತ್ತಾ. ಸೇಯಿ 'ಗುರು' ಹಯ

"ಒಬ್ಬನು ವಿಪ್ರನು (ವೇದಬೋಧೆಯಲ್ಲಿ ಪರಿಣತನು), ಅಥವಾ ಕೆಳವರ್ಗದ ಕುಟುಂಬದಲ್ಲಿ ಜನಿಸಿದವನು, ಅಥವಾ ಸನ್ಯಾಸಿ ಆಗಿರಲಿ, ಅವನು ಕೃಷ್ಣವಿಜ್ಞಾನದಲ್ಲಿ ಪಾರಂಗತನಾಗಿದ್ದರೆ, ಅವನು ಪರಿಪೂರ್ಣ ಮತ್ತು ನಿಜವಾದ ಗುರು" (ಚೈತನ್ಯ ಚರಿತಾಮೃತ, ಮಧ್ಯ, 8. 128). ಹೀಗೆ ಕೃಷ್ಣ ವಿಜ್ಞಾನದಲ್ಲಿ ಪಾರಂಗತನಾಗದೆ ಯಾರೂ ನಿಜಗುರುವಲ್ಲ. ವೇದಗಳಲ್ಲಿ ಹೀಗೆ ಹೇಳಿದೆ:

ಷಟ್ಕರ್ಮ ನಿಪುಣೋ ವಿಪ್ರೋ ಮಂತ್ರ ತಂತ್ರ ವಿಶಾರದಃ।
ಅವೈಷ್ಣವೋ ಗುರುರ್ ನ ಸ್ಯಾದ್ ವೈಷ್ಣವಃ ಶ್ವಪಚೋ ಗುರುಃ॥

"ವೇದಜ್ಞಾನದ ಸಕಲ ವಿಷಯಗಳಲ್ಲಿ ಒಬ್ಬನು ನಿಪುಣನಾದ ವಿದ್ವದ್ಬ್ರಾಹ್ಮಣನಾಗಿದ್ದರೂ, ಅವನು ವೈಷ್ಣವ ಅಥವಾ ಕೃಷ್ಣಪ್ರಜ್ಞಾ ವಿಜ್ಞಾನದಲ್ಲಿ ನಿಪುಣನಲ್ಲದಿದ್ದರೆ ಗುರುವಾಗಲು ಅನರ್ಹನು. ಆದರೆ ಕೆಳಜಾತಿಯಲ್ಲಿ ಹುಟ್ಟಿದ ವ್ಯಕ್ತಿಯು, ವೈಷ್ಣವ ಅಥವಾ ಕೃಷ್ಣಪ್ರಾಜ್ಞಿಯಾಗಿದ್ದರೆ, ಗುರುವಾಗಬಹುದು" (ಪದ್ಮ ಪುರಾಣ).

ಭೌತಿಕ ಅಸ್ತಿತ್ವದ ಜನನ, ವೃದ್ಧಾಪ್ಯ, ರೋಗ ಮತ್ತು ಮರಣ—ಸಮಸ್ಯೆಗಳನ್ನು ಕೇವಲ ದ್ರವ್ಯ ಸಂಚಯನ ಅಥವಾ ಆರ್ಥಿಕ ಅಭಿವೃದ್ಧಿಯಿಂದ ಇದಿರಿಸುವುದು ಸಾಧ್ಯವಿಲ್ಲ. ಜಗತ್ತಿನ ನಾನಾ ಭಾಗಗಳಲ್ಲಿ ಜೀವನದ ಸಕಲ ಸೌಲಭ್ಯಗಳು, ಅಪಾರ ಸಂಪತ್ತು ಮತ್ತು ಆರ್ಥಿಕ ಅಭಿವೃದ್ಧಿಯಿಂದ ತುಂಬಿದ ಅನೇಕ ದೇಶಗಳಿವೆ. ಆದರೂ ಭೌತಿಕ ಅಸ್ತಿತ್ವದ ಸಮಸ್ಯೆಗಳು ಇನ್ನೂ ಇದ್ದೇ ಇವೆ. ಅಲ್ಲಿಯ ಜನರು ನಾನಾ ರೀತಿಯಲ್ಲಿ ಶಾಂತಿಯನ್ನು ಅರಸುತ್ತಿದ್ದಾರೆ.ಆದರೆ ಅವರು ಕೃಷ್ಣನನ್ನು ಅಥವಾ ಕೃಷ್ಣ ವಿಜ್ಞಾನವಾಗಿರುವ ಭಗವದ್ಗೀತೆ ಮತ್ತು ಶ್ರೀಮದ್ಭಾಗವತವನ್ನು ಕೃಷ್ಣನ ನಿಜ ಪ್ರತಿನಿಧಿಯ ಮೂಲಕ, ಎಂದರೆ ಕೃಷ್ಣಪ್ರಾಜ್ಞಿಯಾಗಿರುವವನ ಮೂಲಕ ತಿಳಿದುಕೊಂಡರೆ, ಅವರು ನಿಜ ಸುಖವನ್ನು ಪಡೆಯಬಹುದು.

ಆರ್ಥಿಕ ಅಭಿವೃದ್ಧಿಯಾಗಲಿ, ಭೌತಿಕ ಸೌಕರ್ಯಗಳಾಗಲಿ, ಕುಟುಂಬ, ಸಮಾಜ, ರಾಷ್ಟ್ರ ಅಥವಾ ಅಂತಾರಾಷ್ಟ್ರೀಯ ಉನ್ಮತ್ತತೆಯ ದುಃಖಗಳನ್ನು ಹೊಡೆದೋಡಿಸುವಂತಾದರೆ, ಶತ್ರುರಹಿತವಾದ ಭೂಮಿಯ ಮೇಲಿನ ರಾಜ್ಯ ಅಥವಾ ಸ್ವರ್ಗಲೋಕದ ದೇವತೆಗಳ ಪರಮಾಧಿಕಾರವಾಗಲಿ ತನ್ನ ದುಃಖಗಳನ್ನು ಹೊಡೆದೋಡಿಸಲಾರವು, ಎಂದು ಅರ್ಜುನನು ಹೇಳುತ್ತಿರಲಿಲ್ಲ. ಆದುದರಿಂದ ಅವನು ಕೃಷ್ಣಪ್ರಜ್ಞೆಗೆ ಶರಣುಹೋದನು. ಇದೇ

ಶಾಂತಿ-ಸಮಾಧಾನಕ್ಕೆ ಸರಿಯಾದ ಮಾರ್ಗ. ಆರ್ಥಿಕ ಅಭಿವೃದ್ಧಿಯನ್ನು ಅಥವಾ ಜಗತ್ತಿನ ಆಧಿಪತ್ಯವನ್ನು ಭೌತಿಕ ಪ್ರಕೃತಿಯ ಭಾರೀ ವಿಪತ್ತುಗಳು ಯಾವ ಕ್ಷಣದಲ್ಲಿಯಾದರೂ ನಾಶಗೊಳಿಸಬಹುದು. ಈಗ ಜನ ಚಂದ್ರ ಲೋಕವನ್ನು ಹೊಂದಲು ಯತ್ನಿಸುತ್ತಿರುವಂತೆ, ಊರ್ಧ್ವಲೋಕದ ಸ್ಥಾನಗಳಿಗೆ ಏರುವುದನ್ನು ಕೂಡ ಒಂದೇ ಹೊಡೆತದಿಂದ ನಾಶಗೊಳಿಸ ಬಹುದು. ಭಗವದ್ಗೀತೆಯು ಇದನ್ನು ದೃಢಪಡಿಸುತ್ತದೆ: **ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ** "ಪುಣ್ಯಕರ್ಮಫಲಗಳು ತೀರಿದೊಡನೆಯೇ ಒಬ್ಬನು ಸುಖದ ಶಿಖರದಿಂದ ಮತ್ತೆ ಜೀವನದ ಅತ್ಯಂತ ಕೆಳಸ್ಥಾನಕ್ಕೆ ಪತನ ಹೊಂದುತ್ತಾನೆ." ಜಗತ್ತಿನ ಅನೇಕ ರಾಜ ಕಾರಣಿಗಳು ಹೀಗೆಯೇ ಪತನವಾಗಿದ್ದಾರೆ. ಇಂಥ ಪತನಗಳು ದುಃಖಕ್ಕೆ ಮತ್ತಷ್ಟು ಕಾರಣ.

ಆದ್ದರಿಂದ, ನಾವು ದುಃಖರಹಿತವಾದ ಸುಖವನ್ನು ಬಯಸುವುದಾದರೆ, ಅರ್ಜುನನು ಮಾಡಿದ ಹಾಗೆ, ನಾವು ಕೂಡ ಕೃಷ್ಣನ ಆಶ್ರಯವನ್ನು ತೆಗೆದುಕೊಳ್ಳಬೇಕು. ಆದ್ದರಿಂದ ಕೃಷ್ಣನು ನಿಶ್ಚಿತವಾಗಿ ತನ್ನ ಸಮಸ್ಯೆಯನ್ನು ನಿವಾರಿಸಬೇಕೆಂದು ಅರ್ಜುನನು ಕೇಳಿದನು. ಇದೇ ಕೃಷ್ಣಪ್ರಜ್ಞಾ ಮಾರ್ಗ.

**ಸಂಜಯ ಉವಾಚ**

**ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರನ್ತಪಃ ।**
**ನ ಯೋತ್ಸ್ಯ ಇತಿ ಗೋವಿನ್ದಮುಕ್ತ್ವಾ ತೂಷ್ಣೀಂ ಬಭೂವ ಹ ॥ ೯ ॥**

ಸಂಜಯ ಉವಾಚ—ಸಂಜಯನು ನುಡಿದನು, ಏವಮ್—ಹೀಗೆ, ಉಕ್ತ್ವಾ—ನುಡಿಯುತ್ತ, ಹೃಷೀಕೇಶಮ್—ಇಂದ್ರಿಯಗಳ ಒಡೆಯನಾದ ಕೃಷ್ಣನಿಗೆ, ಗುಡಾಕೇಶಃ—ಅಜ್ಞಾನ ನಿಗ್ರಹ ಸಮರ್ಥ ಅರ್ಜುನನು, ಪರನ್ತಪಃ—ಶತ್ರು ಶಿಕ್ಷಕನು, ನ ಯೋತ್ಸ್ಯೇ—ನಾನು ಯುದ್ಧ ಮಾಡುವುದಿಲ್ಲ, ಇತಿ—ಹೀಗೆ, ಗೋವಿನ್ದಮ್—ಇಂದ್ರಿಯಗಳಿಗೆ ಸುಖ ಕೊಡುವ ಕೃಷ್ಣನಿಗೆ, ಉಕ್ತ್ವಾ—ಹೇಳುತ್ತ, ತೂಷ್ಣೀಂ—ಮೌನ, ಬಭೂವ—ಆದನು, ಹ—ಖಂಡಿತವಾಗಿ.

**ಸಂಜಯನು ನುಡಿದನು : ಶತ್ರುಸೂದನನಾದ ಅರ್ಜುನನು ಹೀಗೆ ಹೇಳಿ, "ಗೋವಿಂದ, ನಾನು ಯುದ್ಧ ಮಾಡುವುದಿಲ್ಲ," ಎಂದು ಕೃಷ್ಣನಿಗೆ ಹೇಳಿ ಸುಮ್ಮನಾದನು.**

**ಭಾವಾರ್ಥ :** ಅರ್ಜುನನು ಯುದ್ಧ ಮಾಡುವುದಿಲ್ಲವೆಂದು ಮತ್ತು ಅದಕ್ಕೆ ಬದಲು ಭಿಕ್ಷಾಟನೆಯ ವೃತ್ತಿಗಾಗಿ ರಣಭೂಮಿಯನ್ನು ತ್ಯಜಿಸುವನು ಎಂಬುದನ್ನು ಕೇಳಿದ ಧೃತರಾಷ್ಟ್ರನು ಬಹಳ ಸಂತೋಷಪಟ್ಟಿರಬೇಕು. ಆದರೆ, ಅರ್ಜುನನು ತನ್ನ ವೈರಿಗಳನ್ನೆಲ್ಲಾ ಸಂಹರಿಸಲು ಸಮರ್ಥನು(**ಪರನ್ತಪಃ**) ಎಂದು ಹೇಳಿ ಸಂಜಯನು ಮತ್ತೆ ಅವನನ್ನು ನಿರಾಸೆಗೊಳಿಸಿದನು. ಅರ್ಜುನನು ಕೌಟುಂಬಿಕ ವ್ಯಾಮೋಹ ನಿಮಿತ್ತವಾದ ಮಿಥ್ಯಾ ದುಃಖದಿಂದ ಆಗ ಅತಿ ಪ್ರಭಾವಿತನಾಗಿದ್ದರೂ, ಅವನು ಶಿಷ್ಯನಾಗಿ ಪರಮ ಗುರು ಕೃಷ್ಣನಿಗೆ ಶರಣಾಗತನಾದನು. ಅವನು ಕುಟುಂಬ ವ್ಯಾಮೋಹದ ಮಿಥ್ಯಾ ದುಃಖದಿಂದ ಬೇಗನೆ ಮುಕ್ತನಾಗಿ, ಆತ್ಮಸಾಕ್ಷಾತ್ಕಾರದ ಪೂರ್ಣಜ್ಞಾನ,ಅಥವಾ ಕೃಷ್ಣಪ್ರಜ್ಞೆಯಿಂದ ಅರಿವುಳ್ಳವನಾಗಿ,ಖಂಡಿತ ಯುದ್ಧ

ಮಾಡುತ್ತಾನೆ ಎಂಬುದನ್ನು ಇದು ಸೂಚಿಸುತ್ತಿತ್ತು. ಹೀಗೆ ಧೃತರಾಷ್ಟ್ರನ ಸಂತೋಷ ಭಂಗವಾಗಬಹುದು. ಏಕೆಂದರೆ ಅರ್ಜುನನು ಕೃಷ್ಣನಿಂದ ಅರಿವುಳ್ಳವನಾಗಬಹುದು ಮತ್ತು ಕೊನೆಯವರೆಗೂ ಯುದ್ಧ ಮಾಡಬಹುದು.

**ತಮುವಾಚ ಹೃಷಿಕೇಶಃ ಪ್ರಹಸನ್ನಿವ ಭಾರತ ।**
**ಸೇನಯೋರುಭಯೋರ್ಮಧ್ಯೇ ವಿಷೀದನ್ತಮಿದಂ ವಚಃ ॥ ೧೦ ॥**

ತಮ್—ಅವನಿಗೆ, ಉವಾಚ—ನುಡಿದನು, ಹೃಷೀಕೇಶಃ—ಇಂದ್ರಿಯಗಳ ಒಡೆಯನಾದ ಕೃಷ್ಣನು, ಪ್ರಹಸನ್—ನಗುತ್ತಾ, ಇವ—ಹಾಗೆ, ಭಾರತ—ಭರತ ವಂಶಜನಾದ ಹೇ ಧೃತರಾಷ್ಟ್ರನೇ, ಸೇನಯೋಃ—ಸೇನೆಗಳ, ಉಭಯೋಃ—ಎರಡೂ ಪಕ್ಷಗಳ, ಮಧ್ಯೇ—ನಡುವೆ, ವಿಷೀದನ್ತಮ್—ವಿಷಾದಿಸುತ್ತಿರುವವನಿಗೆ, ಇದಮ್—ಈ ಕೆಳಗಿನ, ವಚಃ—ಈ ಮಾತುಗಳನ್ನು.

**ಹೇ ಭರತ ವಂಶಜನೇ, ಆಗ ಕೃಷ್ಣನು, ಉಭಯ ಸೇನೆಗಳ ಮಧ್ಯೆ, ನಗುತ್ತ, ದುಃಖತಪ್ತನಾದ ಅರ್ಜುನನನ್ನು ಕುರಿತು ಕೆಳಕಂಡಂತೆ ನುಡಿದನು.**

**ಭಾವಾರ್ಥ :** ಆಪ್ತ ಸ್ನೇಹಿತರಾದ ಹೃಷೀಕೇಶ ಮತ್ತು ಗುಡಾಕೇಶರ ನಡುವೆ ಮಾತು ನಡೆದಿತ್ತು. ಸಖರಾಗಿ ಇಬ್ಬರೂ ಒಂದೇ ಮಟ್ಟದಲ್ಲಿ ಇದ್ದರು. ಆದರೆ ಅವರಲ್ಲಿ ಒಬ್ಬನು ಸ್ವಇಚ್ಛೆಯಿಂದ ಮತ್ತೊಬ್ಬನ ಶಿಷ್ಯನಾದನು. ಒಬ್ಬ ಸಖನು ಶಿಷ್ಯನಾಗಬಯಸಿದ್ದಕ್ಕೆ ಕೃಷ್ಣನು ನಗುತ್ತಿದ್ದನು. ಅವನು ಎಲ್ಲರಿಗೂ ಒಡೆಯನಾಗಿ, ಸ್ವಾಮಿಯಾಗಿ ಸದಾ ಉತ್ತಮ ಸ್ಥಾನದಲ್ಲಿ ಇದ್ದಾನೆ. ಆದರೂ ಭಗವಂತನು ಭಕ್ತನು ಬಯಸುವಂತೆ ಅವನ ಮಿತ್ರ, ಪುತ್ರ ಅಥವಾ ಪ್ರಿಯನ ಪಾತ್ರ ವಹಿಸಲು ಒಪ್ಪಿಕೊಳ್ಳುತ್ತಾನೆ. ತನ್ನನ್ನು ಗುರುವೆಂದು ಸ್ವೀಕರಿಸಿದೊಡನೆಯೇ ಅವನು ಕೂಡಲೇ ಆ ಪಾತ್ರವನ್ನು ವಹಿಸಿಕೊಂಡನು ಮತ್ತು ಅದಕ್ಕೆ ಅಗತ್ಯ ಗಾಂಭೀರ್ಯದಿಂದ ಗುರುವಿನಂತೆ ಶಿಷ್ಯನೊಡನೆ ಮಾತನಾಡಿದನು. ಗುರು ಶಿಷ್ಯರ ನಡುವಿನ ಮಾತುಗಳು ಎಲ್ಲರಿಗೂ ಪ್ರಯೋಜನವಾಗುವಂತೆ, ಉಭಯ ಸೇನೆಗಳ ಇರುವಿಕೆಯಲ್ಲಿ ಬಹಿರಂಗವಾಗಿ ನಡೆಯಿತೆಂದು ತೋರುತ್ತದೆ. ಆದ್ದರಿಂದ, ಭಗವದ್ಗೀತಾ ಸಂಭಾಷಣೆಗಳು ವಿಶಿಷ್ಟ ವ್ಯಕ್ತಿ, ಸಮಾಜ ಅಥವಾ ಸಮುದಾಯಕ್ಕಾಗಿ ಅಲ್ಲ, ಆದರೆ ಅವು ಎಲ್ಲರಿಗಾಗಿ, ಮತ್ತು ಶತ್ರುಗಳು ಅಥವಾ ಮಿತ್ರರು ಅದನ್ನು ಶ್ರವಣ ಮಾಡಲು ಸಮಾನಾಧಿಕಾರಿಗಳು.

**ಶ್ರೀಭಗವಾನುವಾಚ**

**ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।**
**ಗತಾಸೂನಗತಾಸೂಂಶ್ಚ ನಾನುಶೋಚನ್ತಿ ಪಂಡಿತಾಃ ॥ ೧೧ ॥**

ಶ್ರೀಭಗವಾನುವಾಚ—ಪರಮ ದೇವೋತ್ತಮ ಪುರುಷನು ನುಡಿದನು, ಅಶೋಚ್ಯಾನ್—ವಿಷಾದ ಯೋಗ್ಯವಲ್ಲದ, ಅನ್ವಶೋಚಃ—ವಿಷಾದಿಸುತ್ತಿರುವಿ, ತ್ವಂ—ನೀನು, ಪ್ರಜ್ಞಾವಾದಾನ್—ಬುದ್ಧಿವಂತ ಮಾತುಗಳನ್ನು, ಚ—ಕೂಡ, ಭಾಷಸೇ—ಆಡುತ್ತಿರುವಿ,

ಗತಾ—ಗತಿಸಿದ, ಅಸೂನ್—ಜೀವಗಳಿಗಾಗಿ, ಅಗತಾ—ಗತಿಸಿರದ, ಅಸೂನ್—ಜೀವಗಳಿಗಾಗಿ, ಚ—ಕೂಡ, ನ—ಎಂದೂ, ಅನುಶೋಚನ್ತಿ—ವಿಷಾದಿಸುವುದಿಲ್ಲ. ಪಂಡಿತಾಃ—ಪಂಡಿತರು.

**ಪರಮ ದೇವೋತ್ತಮ ಪುರುಷನು ನುಡಿದನು: ತಿಳಿದವನಂತೆ ಮಾತುಗಳನ್ನಾಡುತ್ತ, ವಿಷಾದಯೋಗ್ಯವಲ್ಲದ ಬಗ್ಗೆ ನೀನು ದುಃಖಿಸುತ್ತಿರುವಿ. ಬುದ್ಧಿವಂತರು ಬದುಕಿದವರಿಗಾಗಿ ಅಥವಾ ಗತಿಸಿದವರಿಗಾಗಿ ದುಃಖಿಸುವುದಿಲ್ಲ.**

**ಭಾವಾರ್ಥ :** ಭಗವಂತನು ಕೂಡಲೇ ಗುರುವಿನ ಸ್ಥಾನವನ್ನು ವಹಿಸಿದನು ಮತ್ತು ಪರೋಕ್ಷವಾಗಿ ಅರ್ಜುನನನ್ನು ಮೂಢನೆಂದು ಕರೆದು ಶಿಷ್ಯನನ್ನು ದಂಡಿಸಿದನು. "ನೀನು ಪಂಡಿತನ ಹಾಗೆ ಮಾತನಾಡುತ್ತಿರುವಿ. ಪಂಡಿತನು—ದೇಹ ಮತ್ತು ಆತ್ಮ ಏನೆಂಬುದನ್ನು ತಿಳಿದವನು—ದೇಹದ ಸಜೀವ ಅಥವ ನಿರ್ಜೀವದ ಯಾವುದೇ ಸ್ಥಿತಿಗಾಗಿ ದುಃಖಿಸುವುದಿಲ್ಲ ಎಂಬುದನ್ನು ನೀನು ತಿಳಿದಿಲ್ಲ" ಎಂದು ಭಗವಂತನು ನುಡಿದನು. ಮುಂದಿನ ಅಧ್ಯಾಯಗಳಲ್ಲಿ ವಿವರಿಸಿರುವಂತೆ, ಜ್ಞಾನ ಎಂದರೆ ಜಡ ಮತ್ತು ಚೇತನ, ಹಾಗೂ ಈ ಎರಡರ ನಿಯಾಮಕನನ್ನು ಅರಿತುಕೊಳ್ಳುವುದು ಎಂಬುದು ಸ್ಪಷ್ಟವಾಗುವುದು. ರಾಜಕೀಯ ಅಥವಾ ಸಮಾಜವಾದಕ್ಕಿಂತ ಧಾರ್ಮಿಕ ನೀತಿ ನಿಯಮಗಳಿಗೆ ಹೆಚ್ಚು ಮಹತ್ವ ನೀಡಬೇಕು ಎಂದು ಅರ್ಜುನನು ವಾದಿಸಿದನು. ಆದರೆ ಜಡ, ಆತ್ಮ ಮತ್ತು ಭಗವಂತನ ಜ್ಞಾನವು ಧಾರ್ಮಿಕ ನೀತಿ ನಿಯಮಗಳಿಗಿಂತ ಹೆಚ್ಚು ಮಹತ್ವದ್ದು ಎಂಬುದನ್ನು ಅವನು ತಿಳಿದಿರಲಿಲ್ಲ. ಮತ್ತು ಈ ಜ್ಞಾನಾಭಾವವಿರುವ ಅವನು ತಾನು ದೊಡ್ಡ ಪಂಡಿತನೆಂದು ತೋರಿಸಿಕೊಳ್ಳಬಾರದಾಗಿತ್ತು. ಅವನು ದೊಡ್ಡ ಪಂಡಿತನಾಗಿರಲಿಲ್ಲವಾದ್ದರಿಂದ, ತತ್ಪರಿಣಾಮವಾಗಿ ವಿಷಾದಯೋಗ್ಯವಲ್ಲದ್ದಕ್ಕಾಗಿ ಅವನು ವಿಷಾದಿಸುತ್ತಿದ್ದನು. ದೇಹವು ಹುಟ್ಟಿದೆ ಮತ್ತು ಇಂದಿಲ್ಲ ನಾಳೆ ನಾಶವಾಗುವುದು ಖಂಡಿತ; ಆದ್ದರಿಂದ ದೇಹವು ಆತ್ಮದಷ್ಟು ಮಹತ್ವದ್ದಲ್ಲ. ಇದನ್ನು ಅರಿತವನೇ ವಾಸ್ತವಿಕವಾಗಿ ಪಂಡಿತ. ಅಂಥವನಿಗೆ ಭೌತಿಕ ದೇಹದ ಯಾವ ಸ್ಥಿತಿಯನ್ನು ಕುರಿತೂ ದುಃಖಿಸಬೇಕಾದ ಕಾರಣವಿಲ್ಲ.

**ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ ।**
**ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಮ್ ॥ ೧೨ ॥**

ನ— ಎಂದೂ, ತು—ಆದರೆ, ಏವ—ಖಂಡಿತವಾಗಿ, ಅಹಮ್—ನಾನು, ಜಾತು—ಯಾವಕಾಲದಲ್ಲಿಯೂ, ನ—ಇಲ್ಲ, ಆಸಮ್—ಅಸ್ತಿತ್ವದಲ್ಲಿ, ನ—ಇಲ್ಲ, ತ್ವಮ್—ನೀನು, ನ—ಇಲ್ಲ, ಇಮೇ—ಈ ಎಲ್ಲ, ಜನ - ಅಧಿಪಾಃ—ರಾಜರು, ನ—ಎಂದೂ, ಚ—ಕೂಡ, ಏವ—ಖಂಡಿತವಾಗಿ, ನ—ಇಲ್ಲ, ಭವಿಷ್ಯಾಮಃ—ಅಸ್ತಿತ್ವದಲ್ಲಿರುವುದು, ಸರ್ವೇ ವಯಮ್—ನಾವೆಲ್ಲರು, ಅತಃಪರಮ್—ಇನ್ನು ಮುಂದೆ.

**ನಾನು ಅಥವಾ ನೀನು ಅಥವಾ ಈ ಎಲ್ಲ ರಾಜರು ಇಲ್ಲದಿದ್ದ ಕಾಲವೇ ಇಲ್ಲ; ಅಥವಾ ಮುಂದೆ ನಮ್ಮಲ್ಲಿ ಯಾರೂ ಇರದೇ ಇರುವುದಿಲ್ಲ.**

**ಭಾವಾರ್ಥ :** ಅಸಂಖ್ಯ ಜೀವಾತ್ಮರ ವಿವಿಧ ಸನ್ನಿವೇಶಗಳು, ಅವರ ವೈಯಕ್ತಿಕ ಕರ್ಮ ಮತ್ತು ಕರ್ಮಫಲಾನುಸಾರವಾಗಿ ಅವರನ್ನು ಪರಮ ದೇವೋತ್ತಮ ಪುರುಷನು ಪೋಷಿಸುವನೆಂದು ವೇದಗಳಲ್ಲಿ, ಕಠೋಪನಿಷತ್ತಿನಲ್ಲಿ ಮತ್ತು ಶ್ವೇತಾಶ್ವತರ ಉಪನಿಷತ್ತಿನಲ್ಲಿ ಹೇಳಿದೆ. ಪರಮ ದೇವೋತ್ತಮ ಪುರುಷನೂ ಕೂಡ ಪೂರ್ಣಾಂಶಗಳಿಂದ ಪ್ರತಿಯೊಬ್ಬ ಜೀವಾತ್ಮನ ಹೃದಯದಲ್ಲಿ ಪ್ರಾಜ್ಞನಾಗಿರುತ್ತಾನೆ. ಒಳಗೂ ಹೊರಗೂ ಅದೇ ಪರಮ ಪ್ರಭುವನ್ನು ನೋಡಬಲ್ಲ ಸತ್ಪುರುಷರು ಮಾತ್ರ ನಿಜವಾಗಿ ಪೂರ್ಣ ಮತ್ತು ನಿತ್ಯಶಾಂತಿಯನ್ನು ಪಡೆಯಬಹುದು.

ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮ್
ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್।
ತಮ್ ಆತ್ಮಸ್ಥಂ ಯೇಽನುಪಶ್ಯಂತಿ ಧೀರ
ಸ್ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಮ್॥

(ಕಠ ಉಪನಿಷತ್ 2-2-13)

ನಿಜವಾಗಿ ಅತ್ಯಲ್ಪ ಜ್ಞಾನ ಹೊಂದಿರುವ, ಆದರೆ ತಾವೇ ಬಹು ತಿಳಿದವರೆಂದು ತೋರಿಸಿಕೊಳ್ಳುವವರಿಗೆಲ್ಲ ಜಗತ್ತಿನಲ್ಲಿ, ಅರ್ಜುನನಿಗೆ ನೀಡಿದ ವೇದದ ಸತ್ಯವನ್ನೇ ನೀಡಲಾಗಿದೆ. ಸ್ವಯಂ ತಾನು, ಅರ್ಜುನ ಮತ್ತು ರಣರಂಗದಲ್ಲಿ ಸೇರಿದ್ದ ಎಲ್ಲ ರಾಜರು ನಿತ್ಯ ಚೇತನರು ಮತ್ತು ಭಗವಂತನು, ಜೀವರ ಬದ್ಧ ಮತ್ತು ಮುಕ್ತ ಸ್ಥಿತಿಗಳಲ್ಲಿ ನಿತ್ಯಪಾಲಕ ಎಂದು ಭಗವಂತನು ಸ್ಪಷ್ಟವಾಗಿ ಹೇಳುತ್ತಾನೆ. ಪರಮ ದೇವೋತ್ತಮ ಪುರುಷನು ಪರಮ ವ್ಯಕ್ತಿಗತ ಪುರುಷನು, ಮತ್ತು ಭಗವಂತನ ನಿತ್ಯ ಸಂಗಾತಿಯಾದ ಅರ್ಜುನನು, ಮತ್ತು ಅಲ್ಲಿ ನೆರೆದಿದ್ದ ಸಕಲ ರಾಜರು ಶಾಶ್ವತವಾಗಿ ವ್ಯಕ್ತಿಗಳು. ಅವರು ವ್ಯಕ್ತಿಗಳಾಗಿ ಹಿಂದೆ ಇರಲಿಲ್ಲ ಮತ್ತು ಅವರು ಶಾಶ್ವತ ವ್ಯಕ್ತಿಗಳಾಗಿ ಇರುವದಿಲ್ಲ ಎಂಬುದಿಲ್ಲ. ಅವರ ವ್ಯಕ್ತಿತ್ವ ಹಿಂದೆಯೂ ಇತ್ತು ಮತ್ತುಅವರ ವ್ಯಕ್ತಿತ್ವವು ಭವಿಷ್ಯದಲ್ಲಿಯೂ ನಿರಂತರವಾಗಿ ಮುಂದುವರಿಯುತ್ತಧೆ. ಆದುದರಿಂದ, ಯಾರಿಗಾಗಿಯೂ ದುಃಖಪಡಲು ಕಾರಣವಿಲ್ಲ.

ಮಾಯಾವರಣದಿಂದ ಪ್ರತ್ಯೇಕಿಸಲ್ಪಟ್ಟ ಜೀವವು, ಮೋಕ್ಷಾನಂತರ ವ್ಯಕ್ತಿಶೂನ್ಯ ಬ್ರಹ್ಮನಲ್ಲಿ ಐಕ್ಯಹೊಂದುತ್ತದೆ, ಮತ್ತು ವ್ಯಕ್ತಿಗತ ಅಸ್ತಿತ್ವವನ್ನು ಕಳೆದುಕೊಳ್ಳುತ್ತದೆ ಎಂಬ ಮಾಯಾವಾದಿ ತತ್ವವು, ಪರಮಾಧಿಕಾರಿಯಾದ ಶ್ರೀಕೃಷ್ಣನಿಂದ ಇಲ್ಲಿ ಸಮರ್ಥಿತವಾಗಿಲ್ಲ. ನಾವು ಬದ್ಧರಾಗಿರುವಾಗ ಮಾತ್ರ ವ್ಯಕ್ತಿತ್ವವನ್ನು ಭಾವಿಸುತ್ತೇವೆ ಎಂಬ ತತ್ವವೂ ಇಲ್ಲಿ ಸಮರ್ಥಿತವಲ್ಲ. ಭವಿಷ್ಯದಲ್ಲಿಯೂ ಕೂಡ ಭಗವಂತನ ಮತ್ತು ಇತರರ ವ್ಯಕ್ತಿತ್ವವು, ಉಪನಿಷತ್ತಿನಲ್ಲಿ ದೃಢಪಡಿಸಿರುವಂತೆ, ಶಾಶ್ವತವಾಗಿ ಮುಂದುವರೆಯುತ್ತದೆ ಎಂದು ಕೃಷ್ಣನು ಇಲ್ಲಿ ಸ್ಪಷ್ಟವಾಗಿ ಹೇಳುತ್ತಾನೆ. ಕೃಷ್ಣನು ಮಾಯೆಗೆ ಒಳಪಟ್ಟವನಲ್ಲವಾದ್ದರಿಂದ, ಅವನ ಈ ಮಾತು ಪ್ರಮಾಣವಾಗಿದೆ. ವ್ಯಕ್ತಿತ್ವವು ಒಂದು ನಿಜಸಂಗತಿ ಆಗಿರದಿದ್ದರೆ, ಕೃಷ್ಣನು ಭವಿಷ್ಯದ ವಿಷಯದಲ್ಲಿ ಕೂಡ ಅದನ್ನು ಕುರಿತು, ಇಷ್ಟೊಂದು ಒತ್ತಿಹೇಳುತ್ತಿರಲಿಲ್ಲ. ಕೃಷ್ಣನು ಹೇಳುತ್ತಿರುವ ವ್ಯಕ್ತಿತ್ವವು ಆಧ್ಯಾತ್ಮಿಕವಾದುದಲ್ಲ; ಭೌತಿಕವಾದುದು, ಎಂದು

ಮಾಯಾವಾದಿಗಳು ವಾದಿಸಬಹುದು. ವ್ಯಕ್ತಿತ್ವವು ಭೌತಿಕವೆಂಬ ವಾದವನ್ನು ಒಪ್ಪಿ ಕೊಂಡರೂ, ಕೃಷ್ಣನ ವ್ಯಕ್ತಿತ್ವದ ವ್ಯತ್ಯಾಸ ತಿಳಿಯುವುದು ಹೇಗೆ? ಕೃಷ್ಣನು ತನ್ನ ವ್ಯಕ್ತಿತ್ವ ವನ್ನು ಹಿಂದೆಯೂ ಮತ್ತು ಭವಿಷ್ಯದಲ್ಲಿಯೂ ದೃಢೀಕರಿಸಿದ್ದಾನೆ. ಅವನು ತನ್ನ ವ್ಯಕ್ತಿತ್ವ ವನ್ನು ಅನೇಕ ರೀತಿಯಲ್ಲಿ ದೃಢಪಡಿಸಿದ್ದಾನೆ, ಮತ್ತು ವ್ಯಕ್ತಿಶೂನ್ಯ ಬ್ರಹ್ಮನ್ ಅವನಿಗೆ ಅಧೀನ ಎಂದೂ ಘೋಷಿಸಲಾಗಿದೆ. ಕೃಷ್ಣನು ತನ್ನ ಆಧ್ಯಾತ್ಮಿಕ ವ್ಯಕ್ತಿತ್ವವನ್ನು ನಿರಂತರ ಉಳಿಸಿಕೊಂಡೇ ಬಂದಿದ್ದಾನೆ. ಅವನು ವ್ಯಕ್ತಿಗತ ಪ್ರಜ್ಞೆಯ ಒಬ್ಬ ಸಾಮಾನ್ಯ ಬದ್ಧ ಜೀವಿಯೆಂದು ಅಂಗೀಕರಿಸಿದರೆ, ಆಗ ಅವನ ಭಗವದ್ಗೀತೆಗೆ ಶಾಸ್ತ್ರ ಪ್ರಾಮಾಣ್ಯದ ಮೂಲ್ಯ ವಿಲ್ಲ. ಸಾಮಾನ್ಯ ಮಾನವನು, ಮನುಷ್ಯ ದೌರ್ಬಲ್ಯದ ನಾಲ್ಕು ಬಗೆಯ ದೋಷಗಳಿಂದ ತುಂಬಿದವನಾಗಿ, ಶ್ರವಣಾರ್ಹವಾದ ಅಂಥ ಉಪದೇಶ ಮಾಡಲಾರನು. ಗೀತೆಯು ಇಂಥ ಸಾಹಿತ್ಯಕ್ಕಿಂತ ಮೇಲಿದೆ. ಯಾವ ಲೌಕಿಕ ಗ್ರಂಥವೂ ಅದರೊಡನೆ ಹೋಲಿಕೆಗೆ ನಿಲ್ಲದು. ಕೃಷ್ಣನನ್ನು ಸಾಮಾನ್ಯ ಮನುಷ್ಯನೆಂದು ಗ್ರಹಿಸಿದರೆ, ಗೀತೆಯು ಎಲ್ಲ ಮಹತ್ವವನ್ನು ಕಳೆದುಕೊಳ್ಳುತ್ತದೆ. ಈ ಶ್ಲೋಕದಲ್ಲಿ ಪ್ರಸ್ತಾಪಿತವಾದ ಬಹುವಚನವು, ಕೇವಲ ಸಾಂಪ್ರ ದಾಯಿಕವಾದುದು ಮತ್ತು ಅದು ದೇಹವನ್ನೇ ಸೂಚಿಸುತ್ತದೆ ಎಂದು ಮಾಯಾವಾದಿಯು ತರ್ಕಿಸುತ್ತಾನೆ. ಆದರೆ, ಈ ಶ್ಲೋಕದ ಹಿಂದಿನ ಶ್ಲೋಕದಲ್ಲಿ ಇಂಥ ದೈಹಿಕ ಕಲ್ಪನೆಯನ್ನು ಆಗಲೇ ಖಂಡಿಸಲಾಗಿದೆ. ಜೀವಾತ್ಮರ ದೈಹಿಕ ಕಲ್ಪನೆಯನ್ನು ಖಂಡಿಸಿದ ಮೇಲೆ, ಮತ್ತೆ ದೇಹದ ಬಗ್ಗೆ ಕೃಷ್ಣನು ಸಾಂಪ್ರದಾಯಿಕ ಪ್ರಸ್ತಾವ ನೀಡುವುದಾದರೂ ಹೇಗೆ ಸಾಧ್ಯ? ಆದ್ದರಿಂದ ಆಧ್ಯಾತ್ಮಿಕ ಆಧಾರದ ಮೇಲೆ ವ್ಯಕ್ತಿತ್ವವು ಉಳಿದಿದೆ. ಹೀಗೆಂದು ಮಹಾಚಾರ್ಯ ರಾದ ಶ್ರೀರಾಮಾನುಜರು ಮತ್ತು ಅಂಥ ಇತರರು ಇದನ್ನು ದೃಢಪಡಿಸಿದ್ದಾರೆ. ಆಧ್ಯಾತ್ಮಿಕ ವ್ಯಕ್ತಿತ್ವವನ್ನು ಭಗವದ್ಭಕ್ತರು ಮಾತ್ರ ಅರಿತುಕೊಳ್ಳುತ್ತಾರೆ ಎಂದು ಗೀತೆಯಲ್ಲಿ ಅನೇಕ ಕಡೆಗಳಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಪರಮ ದೇವೋತ್ತಮ ಪುರುಷನಾಗಿ ಕೃಷ್ಣನ ಬಗ್ಗೆ ಅಸೂಯೆಪಡುವವರಿಗೆ ಮಹಾ ಸಾಹಿತ್ಯಕ್ಕೆ ನಿಜಪ್ರವೇಶವಿಲ್ಲ. ಇಂಥ ಅಭಕ್ತರ ಗೀತೋಪದೇಶ ಹೊಂದುವಿಕೆಯು, ಜೇನುನೊಣಗಳು ಜೇನಿನ ಸೀಸೆಯನ್ನು ನೆಕ್ಕಿ ದಂತೆ. ಸೀಸೆಯನ್ನು ತೆರೆಯದ ಹೊರತು, ಒಬ್ಬನು ಜೇನಿನ ರುಚಿ ನೋಡುವುದು ಸಾಧ್ಯ ವಿಲ್ಲ. ಅದೇ ಪ್ರಕಾರ, ಗೀತೆಯ ನಾಲ್ಕನೆಯ ಅಧ್ಯಾಯದಲ್ಲಿ ಹೇಳಿದಂತೆ, ಭಗವದ್ಗೀತೆಯ ರಹಸ್ಯವನ್ನು ಭಕ್ತರು ಮಾತ್ರ ಅರಿತುಕೊಳ್ಳಬಹುದು. ಬೇರೆ ಯಾರೂ ಸವಿಯಲು ಸಾಧ್ಯ ವಿಲ್ಲ. ಅಥವಾ ಭಗವಂತನ ಅಸ್ತಿತ್ವವನ್ನೇ ಕುರಿತು ಅಸೂಯೆಪಡುವವರು ಗೀತೆಯನ್ನು ಸ್ಪರ್ಶಿಸಲಾಗದು. ಆದ್ದರಿಂದ, ಗೀತೆಗೆ ಮಾಯಾವಾದಿಗಳು ನೀಡುವ ವ್ಯಾಖ್ಯಾನವು,ಪೂರ್ಣ ಸತ್ಯದ ಅತ್ಯಂತ ಆಭಾಸ ನಿರೂಪಣೆ. ನಾವು ಮಾಯಾವಾದಿಗಳು ಮಾಡಿದ ವ್ಯಾಖ್ಯಾನ ಗಳನ್ನು ಓದುವುದನ್ನು ಶ್ರೀಚೈತನ್ಯ ಮಹಾಪ್ರಭುಗಳು ನಿಷೇಧಿಸಿದ್ದಾರೆ. ಮತ್ತು ಮಾಯಾ ವಾದಿ ತತ್ವಗಳನ್ನು ಅರಿತುಕೊಳ್ಳಲು ಹೋಗುವವರು, ಭಗವದ್ಗೀತೆಯ ನಿಜರಹಸ್ಯವನ್ನು ಅರಿತುಕೊಳ್ಳುವ ಸರ್ವ ಶಕ್ತಿಯನ್ನು ಕಳೆದುಕೊಳ್ಳುತ್ತಾರೆ ಎಂದೂ ಎಚ್ಚರಿಸಿದ್ದಾರೆ. ವ್ಯಕ್ತಿತ್ವವು ಪ್ರತ್ಯಕ್ಷ ಬ್ರಹ್ಮಾಂಡವನ್ನು ನಿರ್ದೇಶಿಸುವುದಾಗಿದ್ದರೆ, ಭಗವಂತನ ಉಪದೇಶ ಬೇಕಾಗಿಲ್ಲ. ಜೀವನ ಮತ್ತು ಭಗವಂತನ ಬಹುಸಂಖ್ಯಾತ್ವವು ನಿತ್ಯ ಸತ್ಯ, ಮತ್ತು ಮೇಲೆ ಹೇಳಿದಂತೆ ವೇದಗಳು ಇದನ್ನು ದೃಢಪಡಿಸಿವೆ.

**ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ ।**
**ತಥಾ ದೇಹಾನ್ತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥ ೧೩ ॥**

ದೇಹಿನಃ—ದೇಹಧಾರಿಗಳ, ಅಸ್ಮಿನ್—ಇಲ್ಲಿ, ಯಥಾ—ಹೇಗೆ, ದೇಹೇ—ದೇಹದಲ್ಲಿ, ಕೌಮಾರಮ್—ಕೌಮಾರ್ಯ, ಯೌವನಮ್—ಯೌವನವನ್ನು, ಜರಾ—ಮುಪ್ಪನ್ನು, ತಥಾ—ಅದೇ ಪ್ರಕಾರ, ದೇಹಾನ್ತರ—ದೇಹಾಂತರವನ್ನು, ಪ್ರಾಪ್ತಿಃ—ಹೊಂದುವುದು, ಧೀರಃ—ಧೀರನು, ತತ್ರ—ಆಗ, ನ—ಎಂದೂ, ಮುಹ್ಯತಿ—ದಿಗ್ಭ್ರಮೆಗೊಳ್ಳುವುದಿಲ್ಲ,

**ದೇಹಿಯು, ಈ ದೇಹದಲ್ಲಿ ಬಾಲ್ಯ, ಯೌವನದಿಂದ ಮುಪ್ಪಿನವರೆಗೆ ಹೇಗೆ ಸತತ ಅವಸ್ಥಾಂತರ ಹೊಂದುತ್ತಾನೋ, ಹಾಗೆಯೇ ಜೀವನೂ ಮರಣಾನಂತರ ಮತ್ತೊಂದು ದೇಹಕ್ಕೆ ಸಾಗುತ್ತಾನೆ. ಧೀರನು ಇಂಥ ಬದಲಾವಣೆಯಿಂದ ದಿಗ್ಭ್ರಮೆಗೊಳ್ಳುವುದಿಲ್ಲ.**

**ಭಾವಾರ್ಥ :** ಪ್ರತಿಯೊಬ್ಬ ಜೀವಿಯು ಪ್ರತ್ಯೇಕ ಆತ್ಮನಾಗಿರುವುದರಿಂದ ಪ್ರತಿಯೊಬ್ಬನು ಕೆಲವುಕಾಲ ಶಿಶುವಾಗಿ, ಕೆಲವು ಕಾಲ ಯುವಕನಾಗಿ, ಮತ್ತೆ ಕೆಲವು ಕಾಲ ವೃದ್ಧನಾಗಿ ತೋರುತ್ತ, ಪ್ರತಿಕ್ಷಣವೂ,ದೇಹ ಬದಲಾಯಿಸುತ್ತಾನೆ. ಹೀಗಿದ್ದರೂ ಅದೇ ಜೀವಾತ್ಮನು ಅಲ್ಲಿರುತ್ತಾನೆ ಮತ್ತು ಯಾವ ಬದಲಾವಣೆಯನ್ನೂ ಹೊಂದುವುದಿಲ್ಲ. ಈ ವ್ಯಕ್ತಿಗತ ಜೀವಾತ್ಮನು ಕೊನೆಗೆ ಮರಣ ಒದಗಿದಾಗ ದೇಹ ಬದಲಾಯಿಸುತ್ತಾನೆ ಮತ್ತು ಮತ್ತೊಂದು ದೇಹಕ್ಕೆ ಸಾಗುತ್ತಾನೆ; ಮತ್ತು ಮುಂದಿನ ಜನ್ಮದಲ್ಲಿ ಮತ್ತೊಂದು ದೇಹವು—ಭೌತಿಕ ಅಥವಾ ಆಧ್ಯಾತ್ಮಿಕ—ಖಂಡಿತವಾಗಿ ಬರುವುದರಿಂದ ಭೀಷ್ಮರ ಅಥವಾ ದ್ರೋಣರ ವಿಷಯದಲ್ಲಿ ಅವರ ಬಗ್ಗೆ ಅಷ್ಟೊಂದು ಆಸಕ್ತಿ ಹೊಂದಿದ್ದ ಅರ್ಜುನನು, ಅವರ ಮರಣ ನಿಮಿತ್ತವಾಗಿ ವಿಷಾದಿಸಬೇಕಾದ ಕಾರಣವಿರಲಿಲ್ಲ. ಪ್ರತಿಯಾಗಿ ಅವರು ಹಳೆಯ ದೇಹಗಳ ಬದಲು ಹೊಸ ದೇಹಗಳನ್ನು ಪಡೆದು ಮತ್ತೆ ನವಚೇತನವನ್ನು ಪಡೆಯುವುದನ್ನು ಕಂಡು ಅವನು ಸಂತೋಷಿಸಬೇಕು. ಜೀವನದ ಕರ್ಮಾನುಸಾರ ದೇಹದ ಬದಲಾವಣೆಗಳು ನಾನಾ ಬಗೆಯ ಸುಖಕ್ಕೋ ದುಃಖಕ್ಕೋ ಕಾರಣವಾಗುತ್ತವೆ. ಭೀಷ್ಮದ್ರೋಣರು ಸಾತ್ವಿಕ ಜೀವರಾಗಿದ್ದರಿಂದ, ಮುಂದಿನ ಜನ್ಮದಲ್ಲಿ ಆಧ್ಯಾತ್ಮಿಕ ದೇಹಗಳನ್ನು ಹೊಂದುವುದು, ಅಥವಾ ಕನಿಷ್ಠ ಸ್ವರ್ಗಾದಿಗಳಲ್ಲಿ ಉತ್ತಮ ಭೌತಿಕ ಸುಖ ಪಡುವಂಥ ಅಸ್ತಿತ್ವವನ್ನಾದರೂ ಹೊಂದುವುದು ನಿಶ್ಚಿತ, ಆದುದರಿಂದ ಉಭಯ ಪ್ರಸಂಗದಲ್ಲಿ ವಿಷಾದಕ್ಕೆ ಕಾರಣವಿಲ್ಲ.

ಜೀವಾತ್ಮನ, ಪರಮಾತ್ಮನ ಮತ್ತು ಭೌತಿಕ ಮತ್ತು ಆಧ್ಯಾತ್ಮಿಕ ಪ್ರಕೃತಿಯ ಪೂರ್ಣ ಸ್ವರೂಪಜ್ಞಾನವುಳ್ಳವನು ಧೀರ ಎಂದರೆ ಪರಮ ವಿಚಾರಶೀಲನು. ಅಂಥವನು ದೇಹಾಂತರಗಳಿಂದ ಎಂದೂ ಭ್ರಮೆಗೊಳ್ಳುವುದಿಲ್ಲ.

ಆತ್ಮನನ್ನು ಭಿನ್ನಾಂಶಗಳಾಗಿ ಮಾಡಲಾಗದು ಎಂಬ ಆಧಾರದ ಮೇಲೆ ಆತ್ಮೈಕ್ಯತ್ವದ ಮಾಯಾವಾದೀ ತತ್ವವನ್ನು ಸ್ವೀಕರಿಸಲಾಗದು. ಹೀಗೆ ವಿವಿಧ ವ್ಯಕ್ತಿಗತ ಜೀವಿಗಳಾಗಿ ತುಂಡರಿಸುವುದು ಪರಮನನ್ನು ಛೇದ್ಯ ಅಥವ ಪರಿವರ್ತನೀಯನನ್ನಾಗಿ ಮಾಡುತ್ತದೆ. ಇದು ಅವನು ಅಪರಿವರ್ತನೀಯ ಎಂಬ ತತ್ವಕ್ಕೆ ವಿರುದ್ಧವಾಗುತ್ತದೆ. ಗೀತೆಯಲ್ಲಿ ದೃಢಪಡಿಸಿರುವ

ಹಾಗೆ, ಭಗವಂತನ ಭಿನ್ನಾಂಶಗಳು ಸನಾತನವಾದವುಗಳಾಗಿದ್ದು, ಕ್ಷರ (ಎಂದರೆ, ಅಪ್ರ ಭೌತಿಕ ಪ್ರಕೃತಿಗೆ ಬರುವ ಸಾಧ್ಯತೆಯಿದೆ) ಎಂದು ಕರೆಯಲ್ಪಡುತ್ತವೆ. ಈ ಭಿನ್ನಾಂಶಗಳು ಹೀಗೆ ನಿತ್ಯವಾದವುಗಳು ಮತ್ತು ಮೋಕ್ಷಾನಂತರ ಕೂಡ ವ್ಯಕ್ತಿಗತ ಜೀವಾತ್ಮನು ಭಿನ್ನಾಂಶ ವಾಗಿಯೇ ಉಳಿಯುತ್ತಾನೆ. ಆದರೆ ಮುಕ್ತನಾದೊಡನೆ ಅವನು ದೇವೋತ್ತಮ ಪುರುಷನೊಂದಿಗೆ ನಿತ್ಯಜ್ಞಾನಾನಂದ ಜೀವನವನ್ನು ಹೊಂದುತ್ತಾನೆ. ಪ್ರತಿಬಿಂಬವಾದವನ್ನು ಪರಮಾತ್ಮನಿಗೆ ಅನ್ವಯಿಸಬಹುದು, ಅವನು ಪ್ರತಿಯೊಬ್ಬ ಆತ್ಮನ ಹೃದಯದಲ್ಲಿ ಇರುವುದರಿಂದ ಪರಮಾತ್ಮನೆನಿಸಿಕೊಳ್ಳುತ್ತಾನೆ. ಅವನು ವ್ಯಕ್ತಿಗತ ಜೀವಾತ್ಮನಿಂದ ಭಿನ್ನನು. ಆಕಾಶವು ನೀರಿನಲ್ಲಿ ಪ್ರತಿಬಿಂಬಿತವಾದಾಗ, ಸೂರ್ಯ, ಚಂದ್ರ ಮತ್ತು ನಕ್ಷತ್ರಗಳು ಪ್ರತಿ ಬಿಂಬಿತವಾಗುತ್ತವೆ. ನಕ್ಷತ್ರಗಳನ್ನು ಜೀವನಿಗೆ ಮತ್ತು ಸೂರ್ಯ ಅಥವಾ ಚಂದ್ರನನ್ನು ಪುರುಷೋತ್ತಮನಿಗೆ ಹೋಲಿಸಬಹುದು. ಅರ್ಜುನನು ವ್ಯಕ್ತಿಗತ ಚೇತನಾತ್ಮನ ಪ್ರತಿನಿಧಿ, ಮತ್ತು ಪರಮಾತ್ಮನು ಪರಮ ದೇವೋತ್ತಮ ಪುರುಷನಾದ ಶ್ರೀಕೃಷ್ಣನು. ನಾಲ್ಕನೆಯ ಅಧ್ಯಾಯದ ಪ್ರಾರಂಭದಲ್ಲಿ ತೋರುವಂತೆ, ಅವರೀರ್ವರು ಒಂದೇ ಮಟ್ಟದಲ್ಲಿಲ್ಲ. ಅರ್ಜುನನು ಕೃಷ್ಣನ ಮಟ್ಟದಲ್ಲಿ ಇರುವುದಾದರೆ, ಕೃಷ್ಣನು ಅರ್ಜುನನಿಗಿಂತ ಶ್ರೇಷ್ಠನಲ್ಲವಾದರೆ, ಆಗ ಅವರೀರ್ವರ ಗುರುಶಿಷ್ಯ ಸಂಬಂಧವು ಅರ್ಥಹೀನವಾಗುತ್ತದೆ. ಅವರಿಬ್ಬರೂ ಮಾಯಾ ಶಕ್ತಿಯಿಂದ ಭ್ರಮಿತರಾದರೆ, ಒಬ್ಬರು ಗುರು ಮತ್ತೊಬ್ಬರು ಶಿಷ್ಯರು ಆಗುವ ಅಗತ್ಯವೇ ಇಲ್ಲ. ಅಂಥ ಉಪದೇಶವೂ ಅಪ್ರಯೋಜಕವಾದುದು, ಯಾಕೆಂದರೆ ಮಾಯೆಯ ಹಿಡಿತದಲ್ಲಿ ಯಾರೂ ಉಪದೇಶಾಧಿಕಾರಿಯಾಗಲಾರರು. ಶ್ರೀಕೃಷ್ಣನು ಪರಮ ಪ್ರಭು ಎಂದು ಅಂಗೀಕೃತ. ಅವನ ಸ್ಥಾನವು ಭ್ರಮೆಯಿಂದ ವಿಸ್ಮೃತಿ ಹೊಂದಿದ ಆತ್ಮನಾದ ಅರ್ಜುನನಿಗಿಂತ ಶ್ರೇಷ್ಠ.

**ಮಾತ್ರಾಸ್ಪರ್ಶಾಸ್ತು ಕೌನ್ತೇಯ ಶೀತೋಷ್ಣ ಸುಖದುಃಖದಾಃ ।**
**ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ ॥ ೧೪ ॥**

ಮಾತ್ರಾಸ್ಪರ್ಶಾಃ—ಇಂದ್ರಿಯ ಅನುಭವ, ತು—ಮಾತ್ರ, ಕೌನ್ತೇಯ—ಹೇ ಕುಂತೀ ಪುತ್ರನೇ, ಶೀತ—ಚಳಿಗಾಲ, ಉಷ್ಣ—ಬೇಸಗೆ, ಸುಖ—ಸುಖ, ದುಃಖ—ಮತ್ತು ನೋವು, ದಾಃ—ಕೊಡುವುದಾಗಿ, ಆಗಮ—ಕಾಣುತ್ತವೆ, ಅಪಾಯಿನಃ—ಮರೆಯಾಗು ತ್ತವೆ, ಅನಿತ್ಯಾಃ—ಶಾಶ್ವತವಾದವಲ್ಲವುಗಳು, ತಾನ್—ಅವುಗಳನ್ನೆಲ್ಲ, ತಿತಿಕ್ಷಸ್ವ—ತಾಳಿ ಕೊಳ್ಳಲು ಪ್ರಯತ್ನಿಸು, ಭಾರತ—ಹೇ ಭರತ ವಂಶಜನೇ.

**ಹೇ ಕುಂತೀಪುತ್ರನೇ, ಸುಖದುಃಖಗಳ ಅಶಾಶ್ವತ ಕಾಣಿಸುಕೊಳ್ಳುವಿಕೆ, ಕಾಲ ಕ್ರಮದಲ್ಲಿ ಅವುಗಳ ಮರೆಯಾಗುವಿಕೆ, ಚಳಿ ಬೇಸಿಗೆ ಕಾಲಗಳ ಬರುಹೋಗುವಿಕೆ ಯಂತೆ. ಹೇ ಭರತ ವಂಶಜನೇ, ಅವು ಇಂದ್ರಿಯ ಅನುಭವದಿಂದ ಉಂಟಾಗುತ್ತವೆ. ಮತ್ತು ಕ್ಷೋಭೆಗೊಳ್ಳದೆ ಅವುಗಳನ್ನು ಸಹಿಸಿಕೊಳ್ಳಲು ಕಲಿಯಬೇಕು.**

**ಭಾವಾರ್ಥ :** ಒಬ್ಬನು ತನಗೆ ತಕ್ಕ ಕರ್ತವ್ಯಗಳನ್ನು ನಿರ್ವಹಿಸುವಾಗ ಸುಖ ದುಃಖಗಳ ಅಶಾಶ್ವತ ಬಂದು ಹೋಗುವಿಕೆಯನ್ನು ಸಹಿಸಲು ಕಲಿಯಬೇಕು. ವೈದಿಕ ವಿಧಿಗನುಸಾರ

ಒಬ್ಬನು ಮಾಘ ಮಾಸದಲ್ಲಿಯೂ ಕೂಡ (ಜನವರಿ–ಫೆಬ್ರವರಿ) ಮುಂಜಾವಿನಲ್ಲಿ ಸ್ನಾನ ಮಾಡಬೇಕು. ಅದು ಬಹಳ ಶೀತಕಾಲ, ಆದರೂ ಧರ್ಮ ನಿಯಮಗಳನ್ನು ಅನುಸರಿಸುವವನು ಸ್ನಾನ ಮಾಡಲು ಹಿಂಜರಿಯುವುದಿಲ್ಲ. ಅದೇ ಪ್ರಕಾರ, ಅತ್ಯಂತ ಬೇಸಿಗೆಯ ಕಾಲವಾದ ಮೇ ಮತ್ತು ಜೂನ್ ತಿಂಗಳುಗಳಲ್ಲಿ ಹೆಂಗಸರು ಅಡಿಗೆ ಮನೆಯಲ್ಲಿ ಅಡಿಗೆ ಮಾಡಲು ಬೇಸರಪಟ್ಟುಕೊಳ್ಳುವುದಿಲ್ಲ. ಋತುಮಾನಗಳ ಅನನುಕೂಲಗಳಿದ್ದರೂ ಒಬ್ಬನು ತನ್ನ ಕರ್ತವ್ಯವನ್ನು ಮಾಡಲೇಬೇಕು, ಅದೇ ರೀತಿಯಾಗಿ ಯುದ್ಧ ಮಾಡುವುದು ಕ್ಷತ್ರಿಯನ ಧರ್ಮನಿಯಮ. ಒಬ್ಬನು ಮಿತ್ರನೊಂದಿಗೆ ಅಥವಾ ಬಾಂಧವನೊಂದಿಗೆ ಯುದ್ಧ ಮಾಡಬೇಕಾಗಿ ಬರಬಹುದಾದರೂ ಅವನು ತನ್ನ ನಿಯತ ಕರ್ತವ್ಯದಿಂದ ಚ್ಯುತನಾಗಬಾರದು. ಒಬ್ಬನು ಜ್ಞಾನ ವೇದಿಕೆಗೆ ಏರಲು ಧರ್ಮ ತತ್ವಗಳ ನೀತಿ ನಿಯಮಗಳನ್ನು ಅನುಸರಿಸಬೇಕು, ಏಕೆಂದರೆ ಜ್ಞಾನ ಮತ್ತು ಭಕ್ತಿಯ ಮೂಲಕ ಮಾತ್ರ ಒಬ್ಬನು ಮಾಯೆಯ ಹಿಡಿತ ಮುಕ್ತನಾಗಬಹುದು.

ಅರ್ಜುನನನ್ನು ಸಂಬೋಧಿಸಿರುವ ಎರಡು ವಿವಿಧ ಹೆಸರುಗಳು ಕೂಡ ಮಹತ್ವದ್ದಾಗಿವೆ. ಅರ್ಜುನನನ್ನು ಕೌಂತೇಯ ಎಂದಿರುವುದು ಅವನ ತಾಯಿಯ ಕಡೆಯ ಮಹತ್ವಾದ ರಕ್ತ ಸಂಬಂಧಗಳನ್ನು ಸೂಚಿಸುತ್ತದೆ; ಮತ್ತು ಭಾರತ ಎಂದಿರುವುದು ತಂದೆಯ ಕಡೆಯ ಮಹಾತ್ಮ್ಯವನ್ನು ಸೂಚಿಸುತ್ತದೆ. ಉಭಯ ಕಡೆಯಿಂದಲೂ ಅವನಿಗೆ ಮಹಾ ವಂಶ ಪರಂಪರೆ ಇದೆಯೆಂದು ತಿಳಿಯಲ್ಪಡುತ್ತಾನೆ. ಮಾತಾಪಿತೃ ಆರ್ಜಿತ ಬಾಧ್ಯತೆಯು ತಕ್ಕ ಕರ್ತವ್ಯಗಳ ಪಾಲನೆಯ ಹೊಣೆ ಹೊರಿಸುತ್ತದೆ. ಆದ್ದರಿಂದ ಅವನು ಯುದ್ಧವನ್ನು ದಿಂದ ಮಾಡದಿರಲಾಗದು.

**ಯಂ ಹಿ ನ ವ್ಯಥಯನ್ತ್ಯೇತೇ ಪುರುಷಂ ಪುರುಷರ್ಷಭ ।**
**ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥ ೧೫ ॥**

ಯಂ—ಯಾರಿಗಾಗಿ, ಹಿ—ಖಂಡಿತವಾಗಿ, ನ—ಎಂದೂ, ವ್ಯಥಯನ್ತಿ—ವ್ಯಥಿಸುವುದಿಲ್ಲ, ಏತೇ—ಈ ಎಲ್ಲ, ಪುರುಷಂ—ಪುರುಷನಿಗೆ, ಪುರುಷ ಋಷಭ—ಮಾನವ ಶ್ರೇಷ್ಠನೇ, ಸಮ—ಅಚಲನಾಗಿ, ದುಃಖ—ದುಃಖದಲ್ಲಿ, ಸುಖಂ—ಸುಖದಲ್ಲಿ, ಧೀರಂ—ಸಹಿಷ್ಣು, ಸಃ—ಅವನು, ಅಮೃತತ್ವಾಯ—ಮೋಕ್ಷಕ್ಕೆ, ಕಲ್ಪತೇ—ಅರ್ಹನೆಂದು ತಿಳಿಯಲ್ಪಡುತ್ತಾನೆ.

**ಹೇ ಮಾನವ ಶ್ರೇಷ್ಠನೇ (ಅರ್ಜುನನೇ), ಸುಖದುಃಖಗಳಿಂದ ಕ್ಷೋಭೆಗೊಳ್ಳದವನು ಮತ್ತು ಎರಡರಲ್ಲಿಯೂ ಧೀರನು ಖಂಡಿತ ಮೋಕ್ಷಕ್ಕೆ ಅರ್ಹನು.**

**ಭಾವಾರ್ಥ :** ಆಧ್ಯಾತ್ಮಿಕ ಅನುಭವದ ಉತ್ಕೃಷ್ಟ ಹಂತಕ್ಕಾಗಿ ತನ್ನ ನಿರ್ಧಾರದಲ್ಲಿ ಧೀರನಾದವನು ಮತ್ತು ಸುಖ ದುಃಖಗಳ ಆಘಾತಗಳನ್ನು ಅಷ್ಟೇ ತಾಳ್ಮೆಯಿಂದ ಸಹಿಸಿಕೊಳ್ಳುವವನು ಖಂಡಿತ ಮೋಕ್ಷಾರ್ಹನು. ವರ್ಣಾಶ್ರಮ ಪದ್ಧತಿಯಲ್ಲಿ ನಾಲ್ಕನೆಯ ಆಶ್ರಮವು ಎಂದರೆ ಸನ್ಯಾಸವು ಬಹಳ ಕಠಿಣ ಸನ್ನಿವೇಶ. ಆದರೆ ತನ್ನ ಜೀವನವನ್ನು ಪೂರ್ಣಗೊಳಿಸಿಕೊಳ್ಳುವ ತೀವ್ರಾಸಕ್ತನು ಎಲ್ಲ ಕಷ್ಟ ಬಂದರೂ ಖಂಡಿತ ಸನ್ಯಾಸ ಜೀವನ ಕ್ರಮವನ್ನು ಅನುಸರಿಸುತ್ತಾನೆ. ಸಾಮಾನ್ಯವಾಗಿ ತೊಂದರೆಗಳು, ಕುಟುಂಬ ಸಂಬಂಧಗಳನ್ನು ಬಿಡಬೇಕಾಗುವುದ

ರಿಂದ, ಹೆಂಡತಿ–ಮಕ್ಕಳ ಸಂಬಂಧವನ್ನು ಕಡಿದುಕೊಳ್ಳಬೇಕಾಗುವುದರಿಂದ ಉಂಟಾಗುತ್ತವೆ. ಆದರೆ ಯಾರೊಬ್ಬನು, ಅಂಥ ಕಷ್ಟಗಳನ್ನು ಸಹಿಸಿಕೊಳ್ಳಲು ಶಕ್ತನಾದರೆ, ಅವನ ಆಧ್ಯಾತ್ಮಿಕ ಸಾಕ್ಷಾತ್ಕಾರದ ಮಾರ್ಗವು ಖಂಡಿತ ಪೂರ್ಣ. ಅದೇ ಪ್ರಕಾರ, ಅರ್ಜುನನು ಕ್ಷತ್ರಿಯನಾಗಿ ಕರ್ತವ್ಯ ಪಾಲನೆಯಲ್ಲಿ ತನ್ನ ಕುಟುಂಬದವರೊಂದಿಗೆ ಅಥವಾ ಅಷ್ಟೇ ಪ್ರೀತಿಪಾತ್ರರಾದವರೊಂದಿಗೆ ಯುದ್ಧ ಮಾಡುವುದು ಕಷ್ಟದಾಯಕವಾದರೂ ತಾಳಿಕೊಳ್ಳಬೇಕೆಂದು ಬೋಧಿಸಲ್ಪಟ್ಟನು. ಭಗವಾನ್ ಚೈತನ್ಯರು ತಮ್ಮ ಇಪ್ಪತ್ನಾಲ್ಕನೆಯ ವಯಸ್ಸಿನಲ್ಲಿ ಸನ್ಯಾಸವನ್ನು ಸ್ವೀಕರಿಸಿದರು, ಮತ್ತು ಅವರ ಅವಲಂಬಿಗಳಾದ ಪ್ರಾಯದ ಹೆಂಡತಿ ಮತ್ತು ವೃದ್ಧ ತಾಯಿಯನ್ನು ನೋಡಿಕೊಳ್ಳಲು ಬೇರೆ ಯಾರೂ ಇರಲಿಲ್ಲ. ಆದರೂ ಒಂದು ಮಹೋನ್ನತ ಉದ್ದೇಶಕ್ಕಾಗಿ ಅವರು ಸನ್ಯಾಸವನ್ನು ಸ್ವೀಕರಿಸಿದರು ಮತ್ತು ತಮ್ಮ ಉದಾತ್ತ ಕರ್ತವ್ಯಗಳ ನಿರ್ವಹಣೆಯಲ್ಲಿ ಧೀರರಾಗಿದ್ದರು. ಸಾಂಸಾರಿಕ ಬಂಧನದಿಂದ ವಿಮೋಚನೆಯನ್ನು ಸಾಧಿಸಲು ಇದುವೇ ಮಾರ್ಗ.

**ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।**
**ಉಭಯೋರಪಿ ದೃಷ್ಟೋಽನ್ತಸ್ತ್ವನಯೋಸ್ತತ್ತ್ವದರ್ಶಿಭಿಃ ॥ ೧೬ ॥**

ನ—ಎಂದೂ ಇಲ್ಲ, ಅಸತಃ—ಅಸತ್ತಿನ, ವಿದ್ಯತೆ—ಇದ್ದೇ ಇದೆ, ಭಾವಃ—ಸಂಸ್ಥಿತಿಯು, ನ—ಎಂದೂ, ಅಭಾವಃ—ಬದಲಾಗುವ ಗುಣವು, ವಿದ್ಯತೇ—ಇದ್ದೇ ಇದೆ, ಸತಃ—ನಿತ್ಯವಾದುದರ, ಉಭಯೋಃ—ಎರಡರ, ಅಪಿ—ಸ್ಪಷ್ಟವಾಗಿ, ದೃಷ್ಟಃ—ಕಾಣಲ್ಪಟ್ಟಿದೆ, ಅಂತಃ—ನಿರ್ಣಯವು, ತು—ನಿಜವಾಗಿ, ಅನಯೋಃ—ಅವುಗಳ, ತತ್ವ—ಸತ್ಯ. ದರ್ಶಿಭಿಃ—ದರ್ಶಿಗಳಿಂದ.

**ಅನಸ್ತಿತ್ವವಾದುದರ(ಭೌತಿಕದೇಹ)ಸಂಸ್ಥಿತಿಯು ಇಲ್ಲ, ಮತ್ತು ನಿತ್ಯವಾದುದರ (ಆತ್ಮಕ್ಕೆ) ಬದಲಾವಣೆ ಇಲ್ಲ ಎಂದು ತತ್ವದರ್ಶಿಗಳಾದವರು ನಿರ್ಣಯಿಸಿದ್ದಾರೆ. ಇವೆರಡರ ಸ್ವಭಾವವನ್ನು ಪರಿಶೀಲಿಸಿ ಅವರು ಇದನ್ನು ನಿರ್ಣಯಿಸಿದ್ದಾರೆ.**

**ಭಾವಾರ್ಥ :** ಬದಲಾಗುವ ದೇಹಕ್ಕೆ ಸಂಸ್ಥಿತಿಯು ಇಲ್ಲ. ದೇಹವು ವಿವಿಧ ಕೋಶಗಳ ಕ್ರಿಯೆ ಪ್ರತಿಕ್ರಿಯೆಗಳಿಂದ ಪ್ರತಿಕ್ಷಣವೂ ಬದಲಾಗುತ್ತಿವೆ ಎಂಬುದನ್ನು ಆಧುನಿಕ ವೈದ್ಯ ವಿಜ್ಞಾನವು ಒಪ್ಪಿಕೊಂಡಿದೆ. ಆದ್ದರಿಂದ, ದೇಹದಲ್ಲಿ ಬೆಳವಣಿಗೆಯೂ ಮುಪ್ಪೂ ಉಂಟಾಗುತ್ತಿವೆ. ಆದರೆ ದೇಹ ಮನಸ್ಸುಗಳಲ್ಲಿ ಎಲ್ಲ ಬದಲಾವಣೆಗಳಾದರೂ, ಆತ್ಮವು ಮಾತ್ರ ಶಾಶ್ವತವಾಗಿ, ಹಾಗೆಯೇ ಉಳಿದಿರುತ್ತದೆ. ಇದೇ ಜಡ ಮತ್ತು ಚೇತನದ ನಡುವಿನ ವ್ಯತ್ಯಾಸ. ಸ್ವಭಾವಿಕವಾಗಿ ದೇಹವು ಸದಾ ಬದಲಾಗುತ್ತದೆ ಮತ್ತು ಆತ್ಮವು ಶಾಶ್ವತ. ಈ ನಿರ್ಣಯವು ವ್ಯಕ್ತಿಶೂನ್ಯ ಮತ್ತು ವ್ಯಕ್ತಿವಾದಿಗಳಾದ ಎಲ್ಲ ವರ್ಗದ ತತ್ವದರ್ಶಿಗಳಿಂದ ಸ್ಥಾಪಿತವಾಗಿದೆ. ವಿಷ್ಣು ಮತ್ತು ಅವನ ಧಾಮಗಳು ಎಲ್ಲವೂ ಸ್ವಪ್ರಕಾಶಿತ ದಿವ್ಯ ಅಸ್ತಿತವನ್ನು ಹೊಂದಿವೆ (**ಜ್ಯೋತೀಂಷಿ ವಿಷ್ಣುರ್ ಭುವನಾನಿ ವಿಷ್ಣುಃ**) ಎಂದು ವಿಷ್ಣು ಪುರಾಣದಲ್ಲಿ (2.12.38) ಹೇಳಿದೆ. ಅಸ್ತಿತ್ವ ಮತ್ತು ಅನಸ್ತಿತ್ವ ಎಂಬ ಶಬ್ದಗಳು ಕೇವಲ ಆತ್ಮ ಮತ್ತು ಜಡಗಳನ್ನು ಉಲ್ಲೇಖಿಸುತ್ತವೆ. ಇದು ಎಲ್ಲ ತತ್ವದರ್ಶಿಗಳ ಅಭಿಪ್ರಾಯ.

ಅವಿದ್ಯಾ ಪ್ರಭಾವದಿಂದ ದಿಗ್ಭ್ರಮೆಗೊಂಡ ಜೀವರಿಗೆ ಇದು ಭಗವಂತನ ಉಪದೇಶಾರಂಭ. ಈ ಅವಿದ್ಯಾ ನಿವಾರಣೆಯು, ಪೂಜನೀಯ ಮತ್ತು ಪೂಜಕನ ನಡುವಿನ ನಿತ್ಯ ಸಂಬಂಧದ ಪುನಃಸ್ಥಾಪನೆ ಮತ್ತು ಪರಿಣಾಮವಾಗಿ, ವಿಭಿನ್ನಾಂಶ ಜೀವರ ಮತ್ತು ಪರಮ ದೇವೋತ್ತಮ ಪುರುಷನ ನಡುವಿನ ಭೇದ ಜ್ಞಾನದ ಅರಿವನ್ನು ಒಳಗೊಳ್ಳುತ್ತದೆ. ಒಬ್ಬನು ಚೆನ್ನಾಗಿ ಸ್ವಾಧ್ಯಾಯದ ಮೂಲಕ ಭಗವಂತನ ಸ್ವಭಾವವನ್ನು, ತನ್ನ ಮತ್ತು ಭಗವಂತನ ನಡುವಿನ ವ್ಯತ್ಯಾಸವನ್ನು ಭಾಗ ಮತ್ತು ಪೂರ್ಣದ ನಡುವಿನ ಸಂಬಂಧವನ್ನು ಅರಿತುಕೊಂಡಂತೆ, ಅರಿತುಕೊಳ್ಳಬಹುದು. ವೇದಾಂತ ಸೂತ್ರಗಳಲ್ಲಿ ಮತ್ತು ಶ್ರೀಮದ್ಭಾಗವತದಲ್ಲಿ ಭಗವಂತನನ್ನು ಸಕಲ ಉದ್ಭೂತಿಗಳ ಮೂಲನೆಂದು ಅಂಗೀಕರಿಸಿದೆ. ಇಂಥ ಉದ್ಭೂತಿಗಳು ಪರ ಮತ್ತು ಅಪರ ಸ್ವಾಭಾವಿಕ ಕ್ರಮಾನುಗತಗಳಿಂದ ಅನುಭವಿಸಲ್ಪಡುತ್ತವೆ. ಏಳನೆಯ ಅಧ್ಯಾಯದಲ್ಲಿ ತಿಳಿಸುವಂತೆ, ಜೀವರು ಪರಾಪ್ರಕೃತಿಗೆ ಸೇರಿದವರು. ಶಕ್ತಿ ಮತ್ತು ಶಕ್ತಿಮಾನ್‌ರಲ್ಲಿ ವ್ಯತ್ಯಾಸ ಇಲ್ಲದಿದ್ದರೂ, ಶಕ್ತಿಮಾನ್ ಪರಮ ಎಂದು ಅಂಗೀಕೃತ ಮತ್ತು ಶಕ್ತಿ ಅಥವಾ ಪ್ರಕೃತಿ ಅಧೀನ ಎಂದೂ ಅಂಗೀಕೃತ. ಆದ್ದರಿಂದ ಸ್ವಾಮಿ ಭೃತ್ಯರ ವಿಷಯದಲ್ಲಿದ್ದಂತೆ ಅಥವಾ ಗುರುಶಿಷ್ಯರಲ್ಲಿದ್ದಂತೆ, ಜೀವರು ಸದಾ ಪುರುಷೋತ್ತಮನಿಗೆ ಅಧೀನರು. ಇಂಥ ಸ್ಪಷ್ಟಜ್ಞಾನವನ್ನು ಅರಿತುಕೊಳ್ಳುವುದು ಅವಿದ್ಯಾ ಪ್ರಭಾವದಲ್ಲಿ ಅಸಂಭವ, ಮತ್ತು ಇಂಥ ಅವಿದ್ಯೆಯನ್ನು ಹೊಡೆದೋಡಿಸಲು, ಸಕಲ ಜೀವರಿಗೆ, ಎಲ್ಲಕಾಲಕ್ಕೂ ಜ್ಞಾನೋದಯವಾಗಲು ಭಗವಂತನು ಭಗವದ್ಗೀತೆಯನ್ನು ಬೋಧಿಸಿದ್ದಾನೆ.

**ಅವಿನಾಶೀ ತು ತದ್ ವಿದ್ಧಿ ಯೇನ ಸರ್ವಮಿದಂ ತತಮ್ ।**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ ಕರ್ತುಮರ್ಹತಿ ॥ ೧೭ ॥**

ಅವಿನಾಶಿ—ನಾಶವಾಗದ, ತು—ಆದರೆ, ತತ್—ಅದನ್ನು, ವಿದ್ಧಿ—ತಿಳಿದುಕೋ, ಯೇನ—ಯಾರಿಂದ, ಸರ್ವಮ್—ದೇಹದ ಎಲ್ಲವನ್ನು, ಇದಮ್—ಇದು, ತತಮ್—ವ್ಯಾಪಿಸಿದೆ, ವಿನಾಶಮ್—ವಿನಾಶವನ್ನು, ಅವ್ಯಯಸ್ಯ—ಅವಿನಾಶಿಯಾದ, ಅಸ್ಯ—ಅದರ, ನಕಶ್ಚಿತ್—ಯಾರೂ, ಕರ್ತುಮ್—ಮಾಡಲು, ಅರ್ಹತಿ—ಶಕ್ತರಲ್ಲ.

**ಇಡೀ ದೇಹವನ್ನು ವ್ಯಾಪಿಸಿಕೊಂಡಿರುವುದು ಅವಿನಾಶಿ ಎಂದು ತಿಳಿದುಕೋ. ಅವಿನಾಶಿಯಾದ ಆತ್ಮನನ್ನು ನಾಶಮಾಡಲು ಯಾರೂ ಶಕ್ತರಲ್ಲ.**

**ಭಾವಾರ್ಥ :** ಇಡೀ ದೇಹವನ್ನು ವ್ಯಾಪಿಸಿಕೊಂಡಿರುವ ಆತ್ಮನ ನಿಜ ಸ್ವಭಾವವನ್ನು ಈ ಶ್ಲೋಕವು ಇನ್ನೂ ಸ್ಪಷ್ಟವಾಗಿ ವಿವರಿಸಿದೆ. ಇಡೀ ದೇಹದಲ್ಲಿ ವ್ಯಾಪಿಸಿರುವುದು ಯಾವುದು ಎಂಬುದನ್ನು ಯಾರಾದರೂ ತಿಳಿದುಕೊಳ್ಳಬಹುದು. ಅದು ಪ್ರಜ್ಞೆ. ದೇಹದ ಯಾವುದೇ ಭಾಗದ ಅಥವಾ ಇಡೀ ದೇಹದ ನೋವು-ನಲಿವುಗಳನ್ನು ಪ್ರತಿಯೊಬ್ಬನೂ ಬಲ್ಲನು. ಈ ಪ್ರಜ್ಞಾಪ್ರಸರಣವು ಒಬ್ಬನ ಸ್ವಂತ ದೇಹದಲ್ಲಿ ಸೀಮಿತ. ಒಂದು ದೇಹಕ್ಕೆ ಆಗುವ ನೋವು ನಲಿವುಗಳ ಅರಿವು ಮತ್ತೊಂದಕ್ಕೆ ತಿಳಿಯುವುದಿಲ್ಲ. ಆದ್ದರಿಂದ ಪ್ರತಿಯೊಂದು ದೇಹವು ವ್ಯಕ್ತಿಗತ ಆತ್ಮನನ್ನು ಒಳಗೊಂಡಿದೆ ಮತ್ತು ಆತ್ಮನ ಇರುವಿಕೆಯ ಲಕ್ಷಣವು ವ್ಯಕ್ತಿಗತ ಪ್ರಜ್ಞೆಯಿಂದ ತಿಳಿಯುತ್ತದೆ. ಈ ಆತ್ಮನು ಗಾತ್ರದಲ್ಲಿ, ಕೂದಲಿನ ಮೇಲ್ ತುದಿಯ

ಭಾಗದ ಹತ್ತುಸಾವಿರದಲ್ಲಿ ಒಂದನೆಯ ಅಂಶದಷ್ಟು ಎಂದು ವರ್ಣಿಸಲ್ಪಟ್ಟಿದೆ, ಶ್ವೇತಾಶ್ವತರ ಉಪನಿಷತ್ತು (5-9) ಇದನ್ನು ದೃಢಪಡಿಸಿದೆ:

ಬಾಲಾಗ್ರ ಶತಭಾಗಸ್ಯ ಶತಧಾ ಕಲ್ಪಿತಸ್ಯ ಚ।
ಭಾಗೋ ಜೀವಃ ಸ ವಿಜ್ಞೇಯಃ ಸ ಚಾನಂತ್ಯಾಯ ಕಲ್ಪತೇ॥

"ಕೂದಲಿನ ಮೇಲ್ ತುದಿಯನ್ನು ಒಂದು ನೂರು ಭಾಗಗಳಾಗಿ ವಿಂಗಡಿಸಿ, ಮತ್ತೆ ಆ ಒಂದೊಂದು ಭಾಗಗಳನ್ನು ನೂರು ಭಾಗಗಳಾಗಿ ವಿಂಗಡಿಸಿದಾಗ, ಅಂಥ ಪ್ರತಿಯೊಂದು ಭಾಗವು ಆತ್ಮನ ಗಾತ್ರದ ಅಳತೆ." ಇದೇ ಪ್ರಕಾರ ಮತ್ತೆ ಹೇಳಲ್ಪಟ್ಟಿದೆ.

ಕೇಶಾಗ್ರ ಶತಭಾಗಸ್ಯ ಶತಾಂಶಃ ಸಾದೃಶಾತ್ಮಕಃ।
ಜೀವಃ ಸೂಕ್ಷ್ಮಸ್ವರೂಪೋಽಯಮ್ ಸಂಖ್ಯಾತೀತೋ ಹಿ ಚಿತ್ ಕಣಃ॥

"ಆಧ್ಯಾತ್ಮಿಕ ಅಣುಗಳ ಕಣಗಳು ಅಸಂಖ್ಯವಾಗಿವೆ. ಅವು ಕೂದಲಿನ ಮೇಲ್ ತುದಿಯ ಹತ್ತುಸಾವಿರ ಭಾಗಗಳಲ್ಲಿ ಒಂದು ಭಾಗದಷ್ಟು ಎಂದು ಅಳೆಯಲ್ಪಟ್ಟಿವೆ."

ಆದ್ದರಿಂದ, ವ್ಯಕ್ತಿಗತ ಚೇತನಾತ್ಮಕ ಕಣವು, ಭೌತಿಕ ಅಣುಗಳಿಗಿಂತ ಚಿಕ್ಕದಾದ ಅಧ್ಯಾತ್ಮ ಅಣುವಾಗಿದೆ, ಮತ್ತು ಇಂಥ ಅಣುಗಳು ಅಸಂಖ್ಯ. ಈ ಚಿಕ್ಕ ಅಧ್ಯಾತ್ಮ ಕಿಡಿಯು ಭೌತಿಕ ದೇಹದ ಮೂಲ ತತ್ವವಾಗಿದೆ. ಒಂದು ಔಷಧದ ಕ್ರಿಯಾಶೀಲತ್ವ ಪ್ರಭಾವವು ಇಡೀ ದೇಹವನ್ನು ವ್ಯಾಪಿಸುವಂತೆ, ಈ ಅಧ್ಯಾತ್ಮ ಕಿಡಿಯ ಪ್ರಭಾವವು ಇಡೀ ದೇಹವನ್ನು ವ್ಯಾಪಿಸಿಕೊಂಡಿದೆ. ಈ ಚೇತನಾತ್ಮಕ ಪ್ರವಹನವು ಪ್ರಜ್ಞೆಯಾಗಿ ಇಡೀ ದೇಹದಲ್ಲಿ ಅನುಭವವಾಗುತ್ತದೆ ಮತ್ತು ಅದೇ ಆತ್ಮನ ಇರುವಿಕೆಗೆ ರುಜು ವಾತು. ಪ್ರಜ್ಞೆಯಿಲ್ಲದ ಭೌತಿಕ ದೇಹವು ಮೃತದೇಹವೆಂಬುದನ್ನು ಒಬ್ಬ ಸಾಮಾನ್ಯ ಮನುಷ್ಯನೂ ತಿಳಿಯಬಹುದು, ಮತ್ತು ಇಂಥ ಪ್ರಜ್ಞೆಯನ್ನು ಭೌತಿಕವಾದ ಯಾವ ಕಾರ್ಯಭಾರದಿಂದಲೂ ದೇಹದಲ್ಲಿ ಉಜ್ಜೀವಿಸಿಕೊಳ್ಳುವುದು ಸಾಧ್ಯವಿಲ್ಲ. ಆದ್ದರಿಂದ ಪ್ರಜ್ಞೆಯು ಯಾವುದೇ ಪ್ರಮಾಣದ ಭೌತಿಕ ಸಂಯೋಜನೆಯ ನಿಮಿತ್ತವಲ್ಲ, ಆದರೆ ಚೇತನಾತ್ಮನಿಂದ ಉಂಟಾಗಿರುವುದು. ಮುಂಡೂಕ ಉಪನಿಷತ್ತಿನಲ್ಲಿ (3.1.9) ಅಣು ರೂಪಿ ಚೇತನಾತ್ಮನ ಗಾತ್ರವನ್ನು ಮತ್ತಷ್ಟು ವಿವರಿಸಲಾಗಿದೆ:

ಏಷೋಽಣುರ್ ಆತ್ಮಾ ಚೇತಸಾ ವೇದಿತವ್ಯೋ
ಯಸ್ಮಿನ್ ಪ್ರಾಣಃ ಪಂಚಧಾ ಸಂವಿವೇಶ।
ಪ್ರಾಣೈಶ್ಚಿತ್ತಂ ಸರ್ವಮ್ ಓತಂ ಪ್ರಜಾನಾಮ್
ಯಸ್ಮಿನ್ ವಿಶುದ್ಧೇ ವಿಭವತಿ ಏಷ ಆತ್ಮಾ॥

"ಆತ್ಮನು ಗಾತ್ರದಲ್ಲಿ ಅಣುರೂಪಿ, ಮತ್ತು ಅದನ್ನು ದೋಷರಹಿತ ಬುದ್ಧಿಯಿಂದ ವೇದ್ಯಮಾಡಿಕೊಳ್ಳಬಹುದು. ಈ ಅಣುರೂಪಿ ಆತ್ಮನು ಐದು ಬಗೆಯ ವಾಯುಗಳಲ್ಲಿ (ಪ್ರಾಣ, ಅಪಾನ, ವ್ಯಾನ, ಸಮಾನ ಮತ್ತು ಉದಾನ) ತೇಲುತ್ತಾ ಹೃದಯದಲ್ಲಿ ಸ್ಥಿರ ವಾಗಿದ್ದಾನೆ, ಮತ್ತು ಆತ್ಮನು ದೇಹಧಾರಿ ಜೀವಿಗಳ ಇಡೀ ದೇಹದಲ್ಲಿ ತನ್ನ ಪ್ರಭಾವವನ್ನು ಹರಡುತ್ತಾನೆ. ಆತ್ಮನು ಐದು ಪ್ರಕಾರದ ಭೌತಿಕವಾಯುಗಳ ಕಲುಷತೆಯಿಂದ ಪರಿಶುದ್ಧ ನಾದಾಗ, ಅವನ ಅಧ್ಯಾತ್ಮ ಪ್ರಭಾವವು ಪ್ರಕಟವಾಗುತ್ತದೆ."

ಹಠಯೋಗ ಪದ್ಧತಿಯು, ಶುದ್ಧ ಆತ್ಮನನ್ನು ಸುತ್ತುವರಿದಿರುವ ಐದು ಬಗೆಯ ವಾಯುಗಳನ್ನು, ಕುಳಿತುಕೊಳ್ಳುವ ವಿವಿಧ ಭಂಗಿಗಳ ಮೂಲಕ ನಿಯಂತ್ರಿಸಲು ಉದ್ದಿಷ್ಟವಾಗಿದೆಯೇ ಹೊರತು ಯಾವುದೇ ಭೌತಿಕ ಪ್ರಯೋಜನಕ್ಕಾಗಿ ಅಲ್ಲ. ಭೌತಿಕ ವಾತಾವರಣದ ಬಂಧನದಿಂದ ಸೂಕ್ಷ್ಮ ಜೀವದ ವಿಮೋಚನೆಗಾಗಿಯೇ ಇದರ ಉದ್ದೇಶ.

ಹೀಗೆ ಅಣುರೂಪಿ ಆತ್ಮನ ಸ್ವರೂಪವು ಎಲ್ಲ ವೇದ ಸಾಹಿತ್ಯಗಳಲ್ಲಿ ಅಂಗೀಕೃತ, ಮತ್ತು ಇದು ನಿಜವಾಗಿ ಸಾಮಾನ್ಯ ಮತಿವಂತನ ಕಾರ್ಯತಃ ಅನುಭವವೂ ಆಗುವುದು. ಮತಿಹೀನನಾದ ಮನುಷ್ಯನು ಮಾತ್ರ ಈ ಅಣುರೂಪಿ ಆತ್ಮನನ್ನು ಸರ್ವವ್ಯಾಪ್ತ **ವಿಷ್ಣುತತ್ವ** ಎಂದು ತಿಳಿಯಬಹುದು.

ಅಣುರೂಪಿ ಆತ್ಮನ ಪ್ರಭಾವವು ಒಂದು ವಿಶಿಷ್ಟ ದೇಹವನ್ನೆಲ್ಲ ವ್ಯಾಪಿಸಬಹುದು. ಮುಂಡಕ ಉಪನಿಷತ್ತಿನ ಪ್ರಕಾರ, ಈ ಅಣುರೂಪಿ ಆತ್ಮನು ಪ್ರತಿಯೊಂದು ಜೀವಾತ್ಮನ ಹೃದಯಸ್ಥಿತನು. ಮತ್ತು ಅಣುರೂಪಿ ಆತ್ಮನ ಅಳತೆಯು ಭೌತಿಕ ವಿಜ್ಞಾನಿಗಳ ಪರಿಜ್ಞಾನ ಶಕ್ತಿಗೆ ಅತೀತವಾಗಿರುವುದರಿಂದ, ಅವರಲ್ಲಿ ಕೆಲವರು ಮೂಢತನದಿಂದ ಆತ್ಮನೇ ಇಲ್ಲ ಎಂದು ಒತ್ತಿಹೇಳುತ್ತಾರೆ. ವ್ಯಕ್ತಿಗತ ಅಣುರೂಪಿ ಆತ್ಮನು ಪರಮಾತ್ಮನೊಂದಿಗೆ ನಿಶ್ಚಯವಾಗಿಯೂ ಹೃದಯದಲ್ಲಿ ಇರುವನು, ಮತ್ತು ಹೀಗೆ ದೇಹದ ಈ ಭಾಗದಿಂದ ದೇಹದ ಚಲನವಲನದ ಎಲ್ಲ ಶಕ್ತಿಗಳು ಉದ್ಭೂತವಾಗುತ್ತವೆ. ಶ್ವಾಸಕೋಶಗಳಿಂದ ಆಮ್ಲಜನಕವನ್ನು ಸಾಗಿಸುವ ರಕ್ತಕಣಗಳು ಈ ಆತ್ಮನಿಂದ ಶಕ್ತಿ ಸಂಚಯನ ಮಾಡುತ್ತವೆ. ಆತ್ಮನ ಈ ಸ್ಥಾನದಿಂದ ಹೊರಟುಹೋದಾಗ ರಕ್ತಜನಕ ಕ್ರಿಯೆಯ ಒಂದುಗೂಡುವಿಕೆಯು ನಿಂತುಹೋಗುತ್ತದೆ. ವೈದ್ಯ ವಿಜ್ಞಾನವು ಕೆಂಪು ರಕ್ತಕಣಗಳ ಮಹತ್ವವನ್ನು ಒಪ್ಪಿದೆ. ಆದರೆ ಆತ್ಮನು ಶಕ್ತಿಯ ಮೂಲ ಎಂಬುದನ್ನು ಅದು ಖಚಿತಪಡಿಸಿಕೊಳ್ಳಲಾಗದು. ದೇಹದ ಎಲ್ಲ ಶಕ್ತಿಗಳಿಗೆ ಹೃದಯವು ಪೀಠ ಎಂಬುದನ್ನು ವೈದ್ಯ ವಿಜ್ಞಾನವು ಒಪ್ಪುತ್ತದೆ.

ಸಮಗ್ರ ಚೇತನದ ಅಣು ಲವಗಳನ್ನು ಸೂರ್ಯಪ್ರಕಾಶದ ಕಣಗಳಿಗೆ ಹೋಲಿಸಿದ್ದೆ. ಬಿಸಿಲಿನಲ್ಲಿ ಅಸಂಖ್ಯ ವಿಕಿರಣ ಕಣಗಳಿವೆ. ಅದೇ ಪ್ರಕಾರ ಪುರುಷೋತ್ತಮನ ಅಂಶಗಳು **ಪ್ರಭಾ** ಅಥವಾ ಪರಾಶಕ್ತಿ ಎಂದು ಕರೆಯಲ್ಪಡುವ ಪುರುಷೋತ್ತಮನ ರಶ್ಮಿಗಳ ಅಣು ಕಿಡಿಗಳು. ಆದ್ದರಿಂದ ಒಬ್ಬನು ವೇದಜ್ಞಾನವನ್ನಾಗಲಿ ಅಥವಾ ಆಧುನಿಕ **ವಿಜ್ಞಾನ**ವನ್ನಾಗಲಿ ಅನುಸರಿಸಿದರೂ ದೇಹದಲ್ಲಿ ಚೇತನಾತ್ಮನ ಅಸ್ತಿತ್ವವನ್ನು ನಿರಾಕರಿಸಲಾಗದು, ಮತ್ತು ಆತ್ಮ ವಿಜ್ಞಾನವನ್ನು ಸ್ವಯಂ ದೇವೋತ್ತಮಪುರುಷನೇ ಭಗವದ್ಗೀತೆಯಲ್ಲಿ ಸ್ಪಷ್ಟವಾಗಿ ವರ್ಣಿಸಿದ್ದಾನೆ.

**ಅನ್ತವನ್ತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ।**
**ಅನಾಶಿನೋಽಪ್ರಮೇಯಸ್ಯ ತಸ್ಮಾದ್ ಯುಧ್ಯಸ್ವ ಭಾರತ ॥೧೮॥**

ಅನ್ತವನ್ತಃ—ನಾಶವಾಗುವ, ಇಮೇ—ಈ ಎಲ್ಲ, ದೇಹಾಃ—ಭೌತಿಕ ದೇಹಗಳು, ನಿತ್ಯಸ್ಯ—ಅಸ್ತಿತ್ವದಲ್ಲಿ ನಿತ್ಯ, ಉಕ್ತಾಃ—ಹೇಳಲ್ಪಟ್ಟಿವೆ, ಶರೀರಿಣಃ—ದೇಹಧಾರಿ ಆತ್ಮನ,

ಅನಾಶಿನಃ—ಎಂದೂ ನಾಶವಾಗದವು, ಅಪ್ರಮೇಯಸ್ಯ—ಅಳಿಯಲಾಗದವು, ತಸ್ಮಾತ್—ಆದ್ದರಿಂದ, ಯುಧ್ಯಸ್ವ—ಯುದ್ಧಮಾಡು, ಭಾರತ—ಹೇ ಭರತವಂಶಜನೇ.

**ಅವಿನಾಶಿ ಮತ್ತು ಅಳತೆಗೆ ನಿಲುಕದ ನಿತ್ಯನಾದ ಆತ್ಮನ ಭೌತಿಕ ದೇಹವು ಕೊನೆಗೊಳ್ಳುವುದು ಖಂಡಿತ; ಆದ್ದರಿಂದ ಹೇ ಭರತ ವಂಶಜನೇ, ಯುದ್ಧಮಾಡು.**

**ಭಾವಾರ್ಥ :** ಭೌತಿಕ ದೇಹವು ಸ್ವಭಾವತಃ ನಾಶವಾಗುವಂತಹುದು. ಅದು ಕೂಡಲೇ ಅಥವಾ ನೂರು ವರ್ಷಗಳ ತರುವಾಯ ನಾಶವಾಗಬಹುದು. ಅದು ಕಾಲದ ಪ್ರಶ್ನೆ ಮಾತ್ರ. ಅದನ್ನು ಅನಿಶ್ಚಿತ ಕಾಲದ ವರೆಗೆ ಹಾಗೆಯೇ ಉಳಿಸಿಕೊಳ್ಳುವ ಸಂಭವವಿಲ್ಲ. ಆದರೆ ಚೇತನಾತ್ಮನು ವೈರಿಯ ಕಣ್ಣಿಗೂ ಕಾಣದಷ್ಟು ಅತಿಸೂಕ್ಷ್ಮನು. ಕೊಲ್ಲಲ್ಪಡುವನೆಂದು ಹೇಳುವ ಪ್ರಶ್ನೆಯೇ ಇಲ್ಲ. ಹಿಂದಿನ ಶ್ಲೋಕದಲ್ಲಿ ಹೇಳಿದಂತೆ, ಆತ್ಮನು ಎಷ್ಟು ಸೂಕ್ಷ್ಮವೆಂದರೆ, ಅದರ ವಿಸ್ತಾರವನ್ನು ಹೇಗೆ ಅಳಿಯಬೇಕು ಎಂಬುದನ್ನು ಯಾರೂ ತಿಳಿಯುವಂತಿಲ್ಲ. ಎರಡೂ ದೃಷ್ಟಿಯಿಂದ ವಿಷಾದಕ್ಕೆ ಕಾರಣವಿಲ್ಲ: ಜೀವನನ್ನು ಯಥಾಸ್ಥಿತಿಯಲ್ಲಿ ಕೊಲ್ಲಲಾಗದು, ಅಥವಾ ಭೌತಿಕ ದೇಹವನ್ನು ಬಹುಕಾಲದವರೆಗೆ ಅಥವಾ ಶಾಶ್ವತವಾಗಿ ರಕ್ಷಿಸುವುದೂ ಸಾಧ್ಯವಿಲ್ಲ. ಸಮಗ್ರ ಚೇತನದ ಅತಿಸೂಕ್ಷ್ಮ ಕಣವು ತನ್ನ ಕರ್ಮಾನುಸಾರ ಭೌತಿಕ ದೇಹವನ್ನು ಪಡೆಯುತ್ತದೆ. ಆದ್ದರಿಂದ ಧರ್ಮತತ್ವಾನುಷ್ಠಾನವನ್ನು ಉಪಯೋಗಿಸಿಕೊಳ್ಳಬೇಕು. ವೇದಾಂತ ಸೂತ್ರಗಳಲ್ಲಿ ಆತ್ಮನನ್ನು ಬೆಳಕು ಎಂದು ಹೇಳಿದೆ. ಏಕೆಂದರೆ ಅವನು ಪರಮೋತ್ಕೃಷ್ಟ ಬೆಳಕಿನ ವಿಭಿನ್ನಾಂಶನು. ಸೂರ್ಯಪ್ರಕಾಶವು ಇಡೀ ಬ್ರಹ್ಮಾಂಡವನ್ನು ಪೋಷಿಸುವಂತೆ, ಆತ್ಮನ ಬೆಳಕು ಕೂಡ ಈ ಭೌತಿಕ ದೇಹವನ್ನು ಪೋಷಿಸುತ್ತದೆ. ಚೇತನಾತ್ಮನು ಈ ಭೌತಿಕ ದೇಹದಿಂದ ಹೊರಬಂದೊಡನೆಯೇ, ದೇಹವು ಕೊಳೆಯಲಾರಂಭಿಸುತ್ತದೆ. ಆದ್ದರಿಂದ ಚೇತನಾತ್ಮನೇ ಈ ದೇಹದ ಪೋಷಕನು. ದೇಹವು ತನ್ನಷ್ಟಕ್ಕೆ ಅಮುಖ್ಯ. ಭೌತಿಕ ಮತ್ತು ದೈಹಿಕ ವಿಚಾರಗಳಿಗಾಗಿ ಧರ್ಮದ ಹೇತುವನ್ನು ಪರಿತ್ಯಜಿಸದೆ, ಯುದ್ಧಮಾಡುವಂತೆ ಅರ್ಜುನನಿಗೆ ಬೋಧನೆ ಮಾಡಲಾಯಿತು.

**ಯ ಏನಂ ವೇತ್ತಿ ಹನ್ತಾರಂ ಯಶ್ಚೈನಂ ಮನ್ಯತೇ ಹತಮ್ ।**
**ಉಭೌ ತೌ ನ ವಿಜಾನೀತೋ ನಾಯಂ ಹನ್ತಿ ನ ಹನ್ಯತೇ ॥೧೯॥**

ಯಃ—ಯಾರಾದರೊಬ್ಬನು, ಏನಮ್—ಇದನ್ನು, ವೇತ್ತಿ—ತಿಳಿಯುತ್ತಾನೋ, ಹನ್ತಾರಮ್—ಕೊಲ್ಲುವವನು, ಯಃ—ಯಾರಾದರೊಬ್ಬನು, ಚ—ಕೂಡ, ಏನಮ್—ಇದನ್ನು, ಮನ್ಯತೇ—ತಿಳಿಯುತ್ತಾನೋ, ಹತಮ್—ಕೊಲ್ಲಲ್ಪಡುವುದೆಂದು, ಉಭೌ—ಉಭಯರು, ತೌ—ಅವರು, ನ—ಎಂದೂ, ವಿಜಾನೀತಃ—ಜ್ಞಾನದಲ್ಲಿರುವವರು, ನ—ಎಂದೂ, ಅಯಮ್—ಇದನ್ನು, ಹನ್ತಿ—ಕೊಲ್ಲುವುದಿಲ್ಲ, ನ—ಇಲ್ಲವೆ, ಹನ್ಯತೇ—ಕೊಲ್ಲಲ್ಪಡುವುದು.

**ಆತ್ಮನು ಕೊಲ್ಲುವುದೂ ಇಲ್ಲ ಕೊಲ್ಲಲ್ಪಡುವುದೂ ಇಲ್ಲವಾದ್ದರಿಂದ, ಆತ್ಮನು ಕೊಲ್ಲುವವನು ಅಥವಾ ಕೊಲ್ಲಲ್ಪಡುವವನು ಎಂದು ತಿಳಿಯುವವನು ಜ್ಞಾನದಲ್ಲಿಲ್ಲ**

**ಭಾವಾರ್ಥ :** ದೇಹಧಾರಿ ಜೀವನು ಮಾರಕಾಸ್ತ್ರದಿಂದ ಘಾತಿಸಲ್ಪಟ್ಟಾಗ, ದೇಹದ ಒಳಗಿರುವ ಜೀವನು ಕೊಲ್ಲಲ್ಪಟ್ಟಿಲ್ಲವೆಂದು ತಿಳಿಯಬೇಕು. ಚೇತನಾತ್ಮನು ಎಷ್ಟು ಸೂಕ್ಷ್ಮನೆಂದರೆ ಅವನನ್ನು ಯಾವ ಭೌತಿಕ ಶಸ್ತ್ರಗಳಿಂದಲೂ ಕೊಲ್ಲುವುದು ಸಾಧ್ಯವಿಲ್ಲ. ಮುಂದಿನ ಶ್ಲೋಕಗಳಿಂದ ಇದು ಸ್ಪಷ್ಟವಾಗುವುದು. ಅಲ್ಲದೆ ಜೀವನ ಆಧ್ಯಾತ್ಮಿಕ ಸ್ವರೂಪದಿಂದಾಗಿ ಜೀವಿಯು ಕೊಲ್ಲಲ್ಪಡುವುದೂ ಇಲ್ಲ. ಕೊಲ್ಲಲ್ಪಟ್ಟಿರುವುದು ಅಥವಾ ಕೊಲ್ಲಲ್ಪಡುವುದು ದೇಹ ಮಾತ್ರ. ಹಾಗಿದ್ದರೂ, ದೇಹವನ್ನು ಕೊಲ್ಲುವುದನ್ನು ಇದು ಪ್ರೋತ್ಸಾಹಿಸುವುದಿಲ್ಲ. ವೇದಾಜ್ಞೆಯು, **ಮಾ ಹಿಂಸ್ಯಾತ್ ಸರ್ವಾ ಭೂತಾನಿ,** "ಎಂದೂ ಯಾರಿಗೂ ಹಿಂಸೆ ಮಾಡಬೇಡ" ಎಂದಿದೆ. ಅಥವಾ ಆತ್ಮನು ಕೊಲ್ಲಲ್ಪಡುವುದಿಲ್ಲ ಎಂಬ ಅರಿವು ಪ್ರಾಣಿವಧೆಯನ್ನು ಪ್ರೋತ್ಸಾಹಿಸುವುದಿಲ್ಲ. ಅಧಿಕಾರವಿಲ್ಲದೆ ಯಾರೊಬ್ಬರ ದೇಹವನ್ನು ಕೊಲ್ಲುವುದು ಅತ್ಯಂತ ಹೇಯಕರ, ಮತ್ತು ರಾಜ್ಯ ಶಾಸನದ ಮೂಲಕ ಮತ್ತು ಭಗವಂತನ ನಿಯಮಾನುಸಾರ ದಂಡನಾರ್ಹ. ಅರ್ಜುನನಾದರೋ ಧರ್ಮತತ್ವಗಳ ಸಲುವಾಗಿ ಸಂಹಾರದಲ್ಲಿ ತೊಡಗಿರುವನೇ ಹೊರತು. ಮನಬಂದಂತೆ ಮಾಡುತ್ತಿಲ್ಲ.

**ನ ಜಾಯತೇ ಮ್ರಿಯತೇ ವಾ ಕದಾಚಿನ್**
**ನಾಯಂ ಭೂತ್ವಾ ಭವಿತಾ ವಾ ನ ಭೂಯಃ।**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ**
**ನ ಹನ್ಯತೇ ಹನ್ಯಮಾನೇ ಶರೀರೇ ॥೨೦॥**

ನ—ಎಂದೂ, ಜಾಯತೇ—ಹುಟ್ಟುವುದು, ಮ್ರಿಯತೇ—ಸಾಯುವುದು, ವಾ—ಅಥವಾ, ಕದಾಚಿತ್—ಯಾವ ಕಾಲದಲ್ಲಿಯೂ (ಭೂತ, ವರ್ತಮಾನ ಅಥವಾ ಭವಿಷ್ಯ), ನ—ಎಂದೂ, ಅಯಮ್—ಇದು, ಭೂತ್ವಾ—ಅಸ್ತಿತ್ವಕ್ಕೆ ಬಂದು, ಭವಿತಾ—ಅಸ್ತಿತ್ವಕ್ಕೆ ಬರುವುದು, ವಾ—ಅಥವಾ, ನ—ಇಲ್ಲ, ಭೂಯಃ—ಅಥವಾ ಮತ್ತೆ ಬರುವುದು, ಅಜಃ—ಜನನರಹಿತ, ನಿತ್ಯಃ—ನಿತ್ಯ, ಶಾಶ್ವತಃ—ಶಾಶ್ವತ, ಅಯಮ್—ಇದು, ಪುರಾಣಃ—ಅತ್ಯಂತ ಪುರಾತನ, ನ—ಎಂದೂ ಇಲ್ಲ, ಹನ್ಯತೇ—ಕೊಲ್ಲಲ್ಪಡುವುದು, ಹನ್ಯಮಾನೇ—ಕೊಲ್ಲಲ್ಪಡುತ್ತಿರುವ, ಶರೀರೇ—ಶರೀರದಲ್ಲಿ.

**ಜನನ ಅಥವಾ ಮರಣ ಆತ್ಮಕ್ಕೆ ಯಾವ ಕಾಲದಲ್ಲಿಯೂ ಇಲ್ಲ. ಅವನು ಅಸ್ತಿತ್ವಕ್ಕೆ ಬಂದಿಲ್ಲ, ಬಂದಿರುವುದೂ ಇಲ್ಲ, ಮತ್ತು ಮುಂದೆ ಬರುವುದೂ ಇಲ್ಲ. ಅವನು ಜನನರಹಿತ, ನಿತ್ಯ, ಸದಾಸ್ಥಿತ ಮತ್ತು ಅನಾದಿ. ದೇಹವು ಕೊಲ್ಲಲ್ಪಟ್ಟಾಗ ಅವನು ಕೊಲ್ಲಲ್ಪಡುವುದಿಲ್ಲ.**

**ಭಾವಾರ್ಥ :** ಪರಮ ಚೇತನದ ಚಿಕ್ಕ ಅಣುರೂಪಿ ಕಣವು ಪರಮನೊಂದಿಗೆ ಗುಣಾತ್ಮಕವಾಗಿ ಏಕವಾಗಿದೆ. ಅವನು ದೇಹದಂತೆ ಬದಲಾವಣೆಗಳನ್ನು ಹೊಂದುವುದಿಲ್ಲ. ಕೆಲವು ಸಲ ಆತ್ಮನನ್ನು ಏಕಪ್ರಕಾಶನು ಅಥವಾ **ಕೂಟಸ್ಥ** ಎಂದು ಕರೆಯುತ್ತಾರೆ. ದೇಹವು ಆರು ಬಗೆಯ ಅವಸ್ಥಾಂತರಗಳಿಗೆ ಒಳಪಡುತ್ತದೆ. ಅದು ತಾಯಿಯ ದೇಹದ ಗರ್ಭದಿಂದ

ಜನ್ಮ ಪಡೆಯುತ್ತದೆ, ಕೆಲ ಕಾಲ ಇರುತ್ತದೆ, ಬೆಳೆಯುತ್ತದೆ, ಕೆಲವು ಪರಿಣಾಮಗಳನು ಉತ್ಪತ್ತಿ ಮಾಡುತ್ತದೆ, ಕ್ರಮೇಣ ಕ್ಷೀಣಿಸುತ್ತದೆ ಮತ್ತು ಕೊನೆಗೆ ಮರವಿನಲ್ಲಿ ಅಳಿಸಿ ಹೋಗುತ್ತದೆ. ಆತ್ಮನಾದರೋ ಅಂಥ ಬದಲಾವಣೆಗಳನ್ನು ಹೊಂದುವುದಿಲ್ಲ. ಆತ್ಮನು ಜನಿಸುವುದಿಲ್ಲ. ಆದರೆ, ಅವನು ಭೌತಿಕ ದೇಹಧಾರಣ ಮಾಡುವುದರಿಂದ, ದೇಹವು ಜನಿಸುವುದು. ಆತ್ಮನು ಅಲ್ಲಿ ಜನಿಸುವುದಿಲ್ಲ ಮತ್ತು ಆತ್ಮನು ಸಾಯುವುದಿಲ್ಲ, ಯಾವುದಕ್ಕೆ ಜನನವಿದೆಯೋ ಅದಕ್ಕೆ ಮರಣವೂ ಉಂಟು. ಆತ್ಮನಿಗೆ ಜನನವಿಲ್ಲದ್ದರಿಂದ, ಅವನಿಗೆ ಹಿಂದು, ಇಂದು ಅಥವಾ ಮುಂದು ಎಂಬುದಿಲ್ಲ. ಅವನು ನಿತ್ಯ, ಶಾಶ್ವತ ಮತ್ತು ಅನಾದಿ ಎಂದರೆ ಇತಿಹಾಸದಲ್ಲಿ ಅವನು ಅಸ್ತಿತ್ವಕ್ಕೆ ಬಂದುದರ ಕುರುಹಿಲ್ಲ. ದೇಹಭಾವದಲ್ಲಿ ನಾವು ಆತ್ಮನ ಜನನ ಮೊದಲಾದುವುಗಳ ಇತಿಹಾಸವನ್ನು ಹುಡುಕುತ್ತೇವೆ. ದೇಹವು ಹಳೆಯದಾಗುವಂತೆ ಆತ್ಮನು ಎಂದೂ ಹಳೆಯದಾಗುವುದಿಲ್ಲ ಆದ್ದರಿಂದ ಮುದುಕನೆಂಬುವನು, ತಾನು ಬಾಲ್ಯ ಅಥವಾ ಯೌವನದಲ್ಲಿ ಹೊಂದಿದ್ದ ಚೈತನ್ಯವನ್ನೇ ಹೊಂದಿರುವಂತೆ ಭಾವಿಸುತ್ತಾನೆ. ದೇಹ ಬದಲಾವಣೆಗಳು ಆತ್ಮನನ್ನು ಬಾಧಿಸುವುದಿಲ್ಲ. ಆತ್ಮನು ಒಂದು ಮರದ ಅಥವಾ ಯಾವುದೇ ಭೌತಿಕ ವಸ್ತುವಿನ ಹಾಗೆ ಕ್ಷಯಿಸುವುದಿಲ್ಲ. ಆತ್ಮಕ್ಕೆ ಉಪೋತ್ಪತ್ತಿಯೂ ಇಲ್ಲ. ದೇಹದ ಉಪೋತ್ಪತ್ತಿಗಳು ಎಂದರೆ ಮಕ್ಕಳು ಕೂಡ ಪ್ರತ್ಯೇಕ ವ್ಯಕ್ತಿಗತ ಆತ್ಮರು; ಮತ್ತು ದೇಹ ನಿಮಿತ್ತ ಅವರು ವಿಶಿಷ್ಟ ವ್ಯಕ್ತಿಯ ಮಕ್ಕಳಾಗಿ ತೋರುತ್ತಾರೆ. ಆತ್ಮದ ಇರುವಿಕೆಯಿಂದ ದೇಹವು ಬೆಳೆಯುತ್ತದೆ. ಆದರೆ ಆತ್ಮಕ್ಕೆ ಶಾಖೆಯೂ ಇಲ್ಲ ಅಥವಾ ಬದಲಾವಣೆಯೂ ಇಲ್ಲ. ಆದ್ದರಿಂದ ಆತ್ಮನು ದೈಹಿಕ ಆರು ಬಗೆಯ ಬದಲಾವಣೆಗಳಿಂದ ಮುಕ್ತವಾಗಿರುವನು.

ಕಠೋಪನಿಷತ್ತಿನಲ್ಲಿ (1. 2. 18) ಇದೇ ಬಗೆಯ ಮತ್ತೊಂದು ಶ್ಲೋಕವನ್ನು ಕಾಣುತ್ತೇವೆ. ಅದು ಹೀಗಿದೆ:

ನ ಜಾಯತೇ ಮ್ರಿಯತೇ ವಾ ವಿಪಶ್ಚಿನ್
ನಾಯಂ ಕುತಶ್ಚಿನ್ ನ ಬಭೂವ ಕಶ್ಚಿತ್।
ಅಜೋ ನಿತ್ಯಃ ಶಾಶ್ವತೋऽಯಂ ಪುರಾಣೋ
ನ ಹನ್ಯತೇ ಹನ್ಯಮಾನೇ ಶರೀರೇ॥

ಈ ಶ್ಲೋಕದ ಅರ್ಥವೂ ತಾತ್ಪರ್ಯವೂ ಭಗವದ್ಗೀತೆಯಲ್ಲಿ ಇದ್ದಂತೆ ಇದೆ. ಆದರೆ, ಇಲ್ಲಿ ಈ ಶ್ಲೋಕದಲ್ಲಿ **ವಿಪಶ್ಚಿತ್** ಎಂಬ ಒಂದು ವಿಶೇಷ ಪದವಿದೆ. ಇದರ ಅರ್ಥ ವಿದ್ವಾಂಸ ಅಥವಾ ಜ್ಞಾನವಂತ ಎಂದು.

ಆತ್ಮನು ಜ್ಞಾನಪೂರ್ಣನು ಅಥವಾ ಸದಾ ಪ್ರಜ್ಞಾಪೂರ್ಣನು. ಆದ್ದರಿಂದ, ಪ್ರಜ್ಞೆ ಆತ್ಮನ ಸಂಕೇತ. ಹೃದಯದಲ್ಲಿ—ಅವನಿರುವ ಸ್ಥಳ—ಆತ್ಮನಿರುವುದನ್ನು ಒಬ್ಬನು ಕಾಣದೇ ಹೋದರೂ, ಪ್ರಜ್ಞೆಯ ಇರುವಿಕೆಯಿಂದ ಆತ್ಮನ ಇರುವಿಕೆಯನ್ನು ಅರಿತುಕೊಳ್ಳಬಹುದು. ಕೆಲವು ಸಲ ಮೋಡಗಳ ಕಾರಣದಿಂದ ಅಥವಾ ಬೇರೆ ಯಾವುದೋ ಕಾರಣದಿಂದ ನಮಗೆ ಆಕಾಶದಲ್ಲಿ ಸೂರ್ಯನನ್ನು ಕಾಣಲಾಗದು, ಆದರೆ ಸೂರ್ಯಪ್ರಕಾಶವು ಯಾವಾಗಲೂ ಇದ್ದೇ ಇರುತ್ತದೆ. ಆದ್ದರಿಂದ ಅದು ಹಗಲು ಕಾಲ ಎಂಬುದು ನಮಗೆ ಖಾತ್ರಿಯಾಗುತ್ತದೆ.

ಬೆಳಗಿನ ಜಾವದಲ್ಲಿ ಆಕಾಶದಲ್ಲಿ ಸ್ವಲ್ಪ ಬೆಳಕು ಕಂಡೊಡನೆಯೇ ಸೂರ್ಯನು ಆಕಾಶದಲ್ಲಿದ್ದಾನೆ ಎಂದು ನಾವು ತಿಳಿಯಬಹುದು. ಅದೇ ಪ್ರಕಾರ—ಮನುಷ್ಯನಾಗಲಿ ಪ್ರಾಣಿಯಾಗಲಿ—ಅವರ ಎಲ್ಲ ದೇಹಗಳಲ್ಲಿ ಪ್ರಜ್ಞೆ ಇರುವುದರಿಂದ, ನಾವು ಆತ್ಮನ ಇರುವಿಕೆಯನ್ನು ಅರಿಯಬಹುದು. ಆತ್ಮನ ಪ್ರಜ್ಞೆಯು ಪರಮನ ಪ್ರಜ್ಞೆಯಿಂದ ಭಿನ್ನವಾದುದು, ಏಕೆಂದರೆ, ಪರಮ ಪ್ರಜ್ಞೆಯು ಭೂತ, ವರ್ತಮಾನ ಮತ್ತು ಭವಿಷ್ಯತ್ತಿನ ಪೂರ್ಣಜ್ಞಾನ. ವ್ಯಕ್ತಿಗತ ಆತ್ಮನ ಪ್ರಜ್ಞೆಯು ವಿಸ್ಮರಣೆಗೆ ಒಳಗಾಗುವ ಸಂಭವ ಉಂಟು. ಅವನು ತನ್ನ ನಿಜ ಸ್ವರೂಪವನ್ನು ಮರೆತಾಗ, ಕೃಷ್ಣನ ಉತ್ಕೃಷ್ಟ ಉಪದೇಶಗಳಿಂದ ವಿದ್ಯೆ ಮತ್ತು ಜ್ಞಾನೋದಯವನ್ನು ಪಡೆಯುತ್ತಾನೆ. ಆದರೆ ಕೃಷ್ಣನು ವಿಸ್ಮರಣೆಗೆ ಒಳಗಾಗುವ ಆತ್ಮನಂತಲ್ಲ. ಹಾಗಿದ್ದಲ್ಲಿ, ಕೃಷ್ಣನ ಭಗವದ್ಗೀತೋಪದೇಶವು ನಿರರ್ಥಕ.

ಆತ್ಮಗಳಲ್ಲಿ ಎರಡುವಿಧ—ಒಂದು ಅತಿ ಸೂಕ್ಷ್ಮ ಆತ್ಮಲವ (**ಅಣು ಆತ್ಮ**) ಮತ್ತೊಂದು ಪರಮಾತ್ಮ (**ವಿಭು ಆತ್ಮ**). ಇದು ಕೂಡ ಕಠ ಉಪನಿಷತ್ತಿನಲ್ಲಿ (1.2.20) ದೃಢಪಟ್ಟಿದೆ:

ಅಣೋರ್ ಅಣೀಯಾನ್ ಮಹತೋ ಮಹೀಯಾನ್
ಆತ್ಮಾಸ್ಯ ಜಂತೋರ್ ನಿಹಿತೋ ಗುಹಾಯಾಮ್।
ತಮ್ ಅಕ್ರತುಃ ಪಶ್ಯತಿ ವೀತ ಶೋಕೋ
ಧಾತುಃ ಪ್ರಸಾದಾನ್ ಮಹಿಮಾನಮ್ ಆತ್ಮನಃ॥

"ಪರಮಾತ್ಮನು ಮತ್ತು ಅಣುರೂಪಿ ಆತ್ಮನು (ಜೀವಾತ್ಮ) ದೇಹವೆಂಬ ಅದೇ ಮರದ ಮೇಲಿನ, ಜೀವಿಯ ಹೃದಯದಲ್ಲಿ ಇದ್ದಾರೆ. ಎಲ್ಲ ಭೌತಿಕ ಇಚ್ಛೆಗಳಿಂದ ಮತ್ತು ವಿಷಾದಗಳಿಂದಲೂ ಮುಕ್ತನಾದವನೇ ಭಗವಂತನ ದಯೆಯಿಂದ ಆತ್ಮನ ಮಹಿಮೆಗಳನ್ನು ಅರಿತುಕೊಳ್ಳಬಲ್ಲನು." ಈ ಮುಂದಿನ ಅಧ್ಯಾಯಗಳಲ್ಲಿ ಹೇಳಿರುವಂತೆ, ಕೃಷ್ಣನು ಪರಮಾತ್ಮನ ಮೂಲ ಸ್ರೋತನು, ಮತ್ತು ಅರ್ಜುನನು ಅಣುರೂಪಿ ಆತ್ಮನು. ತನ್ನ ನಿಜ ಸ್ವರೂಪವನ್ನು ಮರೆತ ಕಾರಣ ಕೃಷ್ಣನಿಂದ ಅಥವಾ ಅವನ ಪ್ರಾಮಾಣಿಕ ಪ್ರತಿನಿಧಿಯಿಂದ (ಗುರು), ಅರ್ಜುನನ ಜ್ಞಾನೋದಯವಾಗಬೇಕಾಗಿರುತ್ತದೆ.

**ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಮ್ ।**
**ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹನ್ತಿ ಕಮ್ ॥ ೨೧ ॥**

ವೇದ—ತಿಳಿಯುತ್ತಾನೆ, ಅವಿನಾಶಿನಮ್—ನಾಶವಿಲ್ಲದ್ದು, ನಿತ್ಯಮ್—ಸದಾ ಅಸ್ತಿತ್ವದಲ್ಲಿರುವುದು, ಯಃ—ಯಾರೊಬ್ಬನು, ಏನಮ್—ಈ(ಆತ್ಮನು), ಅಜಮ್—ಜನ್ಮ ರಹಿತನು, ಅವ್ಯಯಮ್—ವಿಕಾರರಹಿತನು, ಕಥಮ್—ಹೇಗೆ, ಸಃ—ಅವನು, ಪುರುಷಃ—ಪುರುಷ, ಪಾರ್ಥ—ಹೇ ಪಾರ್ಥ (ಅರ್ಜುನ), ಕಮ್—ಯಾರನ್ನು, ಘಾತಯತಿ—ಘಾತಿಸುತ್ತಾನೆ, ಹನ್ತಿ—ಕೊಲ್ಲುತ್ತಾನೆ, ಕಮ್—ಯಾರನ್ನು.

**ಹೇ ಪಾರ್ಥನೇ, ಆತ್ಮನು ಅವಿನಾಶಿ, ನಿತ್ಯ, ಜನ್ಮರಹಿತನು ಮತ್ತು ವಿಕಾರ ರಹಿತನೆಂದು ತಿಳಿದಿರುವವನು, ಯಾರನ್ನಾದರೂ ಕೊಲ್ಲುವುದು ಹೇಗೆ ಅಥವಾ ಯಾರಿಂದಲಾದರೂ ಕೊಲ್ಲಿಸುವುದು ಹೇಗೆ?**

**ಭಾವಾರ್ಥ :** ಪ್ರತಿಯೊಂದಕ್ಕೂ ತಕ್ಕ ಪ್ರಯೋಜನ ಇದ್ದೇ ಇದೆ, ಮತ್ತು ಪೂರ್ಣ ಜ್ಞಾನಸ್ಥಿತನು ಯಾವುದನ್ನು ಸರಿಯಾಗಿ ಎಲ್ಲಿ ಮತ್ತು ಹೇಗೆ ಉಪಯೋಗಿಸಬೇಕು ಎಂಬುದನ್ನು ತಿಳಿದಿರುತ್ತಾನೆ. ಅದರಂತೆಯೇ, ಹಿಂಸೆಯೂ ಕೂಡ ತನ್ನದೇ ಆದ ಪ್ರಯೋಜನ ಹೊಂದಿದೆ, ಮತ್ತು ಹಿಂಸೆಯನ್ನು ಹೇಗೆ ಉಪಯೋಗಿಸಬೇಕು ಎಂಬುದು ಜ್ಞಾನಿಗೆ ಸೇರಿದ್ದಾಗಿದೆ. ಕೊಲೆ ಮಾಡಿದ ಪಾತಕಿಗೆ ನ್ಯಾಯಾಧೀಶನು ಮರಣದಂಡನೆ ವಿಧಿಸುತ್ತಾನಾದರೂ ಶಾಂತಿಪಾಲಕ ನ್ಯಾಯಾಧೀಶನನ್ನು ದೂಷಿಸಲಾಗದು. ಏಕೆಂದರೆ ನ್ಯಾಯ ಸಂಹಿತಾನುಸಾರ, ಅವನು ಅಂಥ ಕೊಲೆಪಾತಕಿಯನ್ನು ಹಿಂಸಿಸುವಂತೆ ಆದೇಶ ನೀಡುತ್ತಾನೆ. ಕೊಲೆ ಮಾಡಿದವನಿಗೆ ಮರಣದಂಡನೆ ವಿಧಿಸಬೇಕು, ಅದರಿಂದ ಅವನು ಮಾಡಿದ ಮಹಾಪಾಪಕ್ಕಾಗಿ ಮುಂದಿನ ಜನ್ಮದಲ್ಲಿ ಅವನು ನರಳಬೇಕಾಗುವುದಿಲ್ಲ ಎಂಬುದು ಮಾನವ ಕುಲದ ನ್ಯಾಯಗ್ರಂಥವಾದ ಮನುಸಂಹಿತೆಯಲ್ಲಿ ಸಮರ್ಥಿತವಾಗಿದೆ. ಆದ್ದರಿಂದ ರಾಜನು ಕೊಲೆಪಾತಕಿಗೆ ಗಲ್ಲು ಶಿಕ್ಷೆ ನೀಡುವುದು ನಿಜವಾಗಿ ಪ್ರಯೋಜನಕರ. ಅದೇ ರೀತಿಯಲ್ಲಿ, ಕೃಷ್ಣನು ಯುದ್ಧಮಾಡುವಂತೆ ಆದೇಶಿಸಿದಾಗ, ಆ ಹಿಂಸೆಯು ಪರಮ ನ್ಯಾಯಕ್ಕಾಗಿಯೇ ಎಂದು ನಿರ್ಣಯಿಸಬೇಕು, ಮತ್ತು ಕೃಷ್ಣನ ಸಲುವಾಗಿ ಯುದ್ಧಮಾಡುವ ಕೃತಿಯಿಂದ, ಅಂತಹ ಹಿಂಸೆಯು ಹಿಂಸೆಯೇ ಅಲ್ಲವೆಂದು ಅರ್ಜುನನು ಚೆನ್ನಾಗಿ ತಿಳಿದು ಅವನು ಕೃಷ್ಣನ ಆದೇಶಗಳನ್ನು ಪಾಲಿಸಬೇಕು. ಏಕೆಂದರೆ, ಏನೇ ಆದರೂ ಮಾನವನನ್ನು ಅಥವಾ ಆತ್ಮನನ್ನು ಕೊಲ್ಲಲಾಗುವುದಿಲ್ಲ; ಆದ್ದರಿಂದ ನ್ಯಾಯ ವಿಧಿಸಲು, ಹಿಂಸೆಯು ಅನುಮತಿಸಲ್ಪಡುತ್ತದೆ. ಶಸ್ತ್ರಚಿಕಿತ್ಸೆಯು ರೋಗಿಯನ್ನು ಕೊಲ್ಲುವುದಕ್ಕಾಗಿ ಅಲ್ಲ, ಬದಲಿಗೆ ಅವನನ್ನು ಗುಣಪಡಿಸಲು. ಆದ್ದರಿಂದ, ಕೃಷ್ಣನ ಆದೇಶಾನುಸಾರ ಅರ್ಜುನನು ಪೂರ್ಣ ಜ್ಞಾನದಿಂದ ಯುದ್ಧ ಮಾಡುವ ಕಾರಣ, ಅಲ್ಲಿ ಪಾಪದ ಪ್ರತಿಕ್ರಿಯೆಯ ಸಾಧ್ಯತೆಯು ಇರುವುದಿಲ್ಲ.

**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ**
**ನವಾನಿ ಗೃಹ್ಣಾತಿ ನರೋಽಪರಾಣಿ ।**
**ತಥಾ ಶರೀರಾಣಿ ವಿಹಾಯ ಜೀರ್ಣಾನ್ಯ-**
**ನ್ಯಾನಿ ಸಂಯಾತಿ ನವಾನಿ ದೇಹೀ ॥ ೨೨ ॥**

ವಾಸಾಂಸಿ—ವಸ್ತ್ರಗಳನ್ನು, ಜೀರ್ಣಾನಿ—ಹಳೆಯ ಮತ್ತು ಜೀರ್ಣವಾದ, ಯಥಾ—ಹೇಗೆ, ವಿಹಾಯ—ಬಿಟ್ಟು, ನವಾನಿ—ಹೊಸವಸ್ತ್ರಗಳನ್ನು, ಗೃಹ್ಣಾತಿ—ಸ್ವೀಕರಿಸುತ್ತಾನೋ, ನರಃ—ಮನುಷ್ಯನು, ಅಪರಾಣಿ—ಬೇರೆಯವುಗಳನ್ನು, ತಥಾ—ಅದೇ ರೀತಿಯಲ್ಲಿ, ಶರೀರಾಣಿ—ಶರೀರಗಳನ್ನು, ವಿಹಾಯ—ಬಿಟ್ಟು, ಜೀರ್ಣಾನಿ—ಹಳೆಯ

ಮತ್ತು ನಿರುಪಯುಕ್ತವಾದವು, ಅನ್ಯಾನಿ—ಬೇರೆ, ಸಂಯಾತಿ—ಖಂಡಿತ ಸ್ವೀಕರಿಸುತ್ತಾನೆ, ನವಾನಿ—ಹೊಸ ವಸ್ತ್ರಗಳನ್ನು, ದೇಹೀ—ದೇಹಗತನು.

**ಒಬ್ಬ ವ್ಯಕ್ತಿಯು ಹಳೆಯ ವಸ್ತ್ರಗಳನ್ನು ವಿಸರ್ಜಿಸಿ ಹೊಸ ವಸ್ತ್ರಗಳನ್ನು ಧರಿಸುವಂತೆ, ಅದೇ ಪ್ರಕಾರ, ಆತ್ಮನು ಕೂಡಾ ಹಳೆಯ ಮತ್ತು ನಿರುಪಯುಕ್ತ ದೇಹಗಳನ್ನು ಬಿಟ್ಟು ಹೊಸ ಭೌತಿಕ ದೇಹಗಳನ್ನು ಸ್ವೀಕರಿಸುತ್ತಾನೆ.**

**ಭಾವಾರ್ಥ :** ವ್ಯಕ್ತಿಗತ ಅಣುರೂಪಿ ಆತ್ಮನ ದೇಹ ಬದಲಾವಣೆಯು ಒಪ್ಪಿಕೊಂಡಿರುವ ಸಂಗತಿ. ಆತ್ಮನ ಅಸ್ತಿತ್ವದಲ್ಲಿ ನಂಬಿಕೆ ಇಲ್ಲದ ಆಧುನಿಕ ವಿಜ್ಞಾನಿಗಳು, ಹೃದಯದಿಂದ ಶಕ್ತಿ ಮೂಲವನ್ನು ವಿವರಿಸಲಾಗದಿದ್ದರೂ ಕೂಡ, ದೇಹವು ಶೈಶವದಿಂದ ಬಾಲ್ಯ ಮತ್ತು ಬಾಲ್ಯದಿಂದ ಯೌವನ ಮತ್ತೆ ಯೌವನದಿಂದ ವೃದ್ಧಾಪ್ಯಕ್ಕೆ ನಿರಂತರವಾಗಿ ಬದಲಾಗುತ್ತಿರುವುದನ್ನು ಒಪ್ಪಿಕೊಳ್ಳಲೇಬೇಕು. ವೃದ್ಧಾಪ್ಯದಿಂದ ಮತ್ತೊಂದು ದೇಹಕ್ಕೆ ಬದಲಾವಣೆಯು ವರ್ಗಾಂತರವಾಗುತ್ತದೆ. ಈ ವಿಷಯವನ್ನು ಹಿಂದಿನ ಶ್ಲೋಕದಲ್ಲಿ ವಿವರಿಸಿದೆ (2. 13).

ಮತ್ತೊಂದು ದೇಹಕ್ಕೆ ಅಣುರೂಪಿ ವ್ಯಕ್ತಿಗತ ಆತ್ಮನ ವರ್ಗಾಂತರವು ಪರಮಾತ್ಮನ ಅನುಗ್ರಹದಿಂದ ಸಾಧ್ಯವಾಗುತ್ತದೆ. ಒಬ್ಬ ಮಿತ್ರನು ತನ್ನ ಮಿತ್ರನ ಇಚ್ಛೆಗಳನ್ನು ಪೂರೈಸುವಂತೆ, ಪರಮಾತ್ಮನು ಅಣುರೂಪಿ ಆತ್ಮನ ಇಚ್ಛೆಗಳನ್ನು ಪೂರೈಸುತ್ತಾನೆ. ಮುಂಡಕ ಮತ್ತು ಶ್ವೇತಾಶ್ವತರ ಉಪನಿಷತ್ತಿನಂತೆ ವೇದಗಳು, ಆತ್ಮ ಮತ್ತು ಪರಮಾತ್ಮರನ್ನು ಒಂದೇ ವೃಕ್ಷದ ಮೇಲೆ ಕುಳಿತಿರುವ ಎರಡು ಮಿತ್ರ ಪಕ್ಷಿಗಳಿಗೆ ಹೋಲಿಸಿವೆ. ಅವುಗಳಲ್ಲಿ ಒಂದು ಪಕ್ಷಿಯು (ವ್ಯಕ್ತಿಗತ ಅಣುರೂಪಿ ಆತ್ಮವು) ಆ ವೃಕ್ಷದ ಹಣ್ಣನ್ನು ತಿನ್ನುತ್ತಿದೆ. ಮತ್ತು ಇನ್ನೊಂದು ಪಕ್ಷಿಯು (ಕೃಷ್ಣನು) ಸುಮ್ಮನೆ ತನ್ನ ಆ ಮಿತ್ರನನ್ನು ನೋಡುತ್ತಿದೆ. ಈ ಎರಡು ಪಕ್ಷಿಗಳು—ಗುಣಾತ್ಮಕವಾಗಿ ಸಮಾನವಾಗಿದ್ದರೂ—ಒಂದು ಆ ಸಾಂಸಾರಿಕ ವೃಕ್ಷದ ಹಣ್ಣುಗಳಿಂದ ಆಕರ್ಷಿತವಾಗಿದೆ, ಮತ್ತೊಂದು ಕೇವಲ ತನ್ನ ಮಿತ್ರನ ಚಟುವಟಿಕೆಗಳನ್ನು ಉಪದೃಷ್ಟಿಸುತ್ತಿದೆ. ಕೃಷ್ಣನು ಆ ಉಪದೃಷ್ಟಿಸುವ ಪಕ್ಷಿ, ಅರ್ಜುನನು ತಿನ್ನುವ ಪಕ್ಷಿ. ಅವರು ಇಬ್ಬರೂ ಸಖರೇ ಆಗಿದ್ದರೂ, ಒಬ್ಬನು ಸ್ವಾಮಿ ಮತ್ತೊಬ್ಬನು ದಾಸ. ಪರಮಾಣು ರೂಪಿ ಆತ್ಮನಿಂದ ಈ ಸಂಬಂಧವನ್ನು ಮರೆಯುವುದೇ ಒಂದು ವೃಕ್ಷದಿಂದ ಮತ್ತೊಂದು ವೃಕ್ಷಕ್ಕೆ ಅಥವಾ ಒಂದು ದೇಹದಿಂದ ಮತ್ತೊಂದು ದೇಹಕ್ಕೆ ಬದಲಾವಣೆಗೆ ಕಾರಣ. ಜೀವ ಆತ್ಮನು ಸಾಂಸಾರಿಕ ದೇಹದ ವೃಕ್ಷದಲ್ಲಿ ಬಹಳ ಹೋರಾಡುತ್ತಿದ್ದಾನೆ. ಆದರೆ, ಆ ಮತ್ತೊಂದು ಪಕ್ಷಿಯನ್ನು ತನ್ನ ಪರಮ ಆಧ್ಯಾತ್ಮಿಕ ಗುರು ಎಂದು ಒಪ್ಪಿಕೊಂಡ ಕೂಡಲೇ—ಅರ್ಜುನನು ಉಪದೇಶಕ್ಕಾಗಿ ಸ್ವಇಚ್ಛೆಯಿಂದ ಕೃಷ್ಣನಿಗೆ ಶರಣಾಗತನಾದಂತೆ—ಅಧೀನ ಪಕ್ಷಿಯು ಕೂಡಲೇ ಸಕಲ ವಿಷಾದಗಳಿಂದ ಮುಕ್ತವಾಗುತ್ತದೆ. ಮುಂಡಕ ಉಪನಿಷತ್ತು (3.1.2) ಮತ್ತು ಶ್ವೇತಾಶ್ವತರ ಉಪನಿಷತ್ತು (4.7) ಇದನ್ನು ದೃಢಪಡಿಸಿವೆ :

ಸಮಾನೇ ವೃಕ್ಷೇ ಪುರುಷೋ ನಿಮಗ್ನೋ
ಽನೀಶಯಾ ಶೋಚತಿ ಮುಹ್ಯಮಾನಃ
ಜುಷ್ಟಂ ಯದಾ ಪಶ್ಯತ್ಯನ್ಯಂ ಈಶಮ್
ಅಸ್ಯ ಮಹಿಮಾನಂ ಇತಿ ವೀತಶೋಕಃ॥

"ಎರಡು ಪಕ್ಷಿಗಳು ಅದೇ ಮರದಲ್ಲಿದ್ದರೂ, ತಿನ್ನುವ ಪಕ್ಷಿಯು ಮರದ ಹಣ್ಣುಗಳ ಉಪಭೋಗಿಯಾಗಿ ಕಾತುರ ಮತ್ತು ನಿರುತ್ಸಾಹದೊಡನೆ ಪೂರ್ಣ ನಿಮಗ್ನವಾಗಿದೆ. ಹೇಗಾದರೂ ಸರಿ, ಅದು ತನ್ನ ಸ್ನೇಹಿತನಾದ ಭಗವಂತನ ಕಡೆಗೆ ಮುಖ ತಿರುಗಿಸಿದರೆ ಮತ್ತು **ಅವನ** ಮಹಿಮೆಗಳನ್ನು ತಿಳಿದರೆ, ಆ ದುಃಖಪಡುತ್ತಿರುವ ಪಕ್ಷಿಯು, ಕೂಡಲೇ ಸಕಲ ಕಾತುರತೆಗಳಿಂದ ಮುಕ್ತವಾಗುತ್ತದೆ." ಅರ್ಜುನನು ಈಗ ತನ್ನ ನಿತ್ಯಮಿತ್ರನಾದ ಕೃಷ್ಣನ ಕಡೆಗೆ ತನ್ನ ಮುಖ ತಿರುಗಿಸಿದ್ದಾನೆ ಮತ್ತು ಅವನಿಂದ ಭಗವದ್ಗೀತೆಯನ್ನು ಅರಿಯುತ್ತಿದ್ದಾನೆ. ಹೀಗೆ ಕೃಷ್ಣನಿಂದ ಶ್ರವಣಮಾಡಿ, ಅವನು ಭಗವಂತನ ಮಹಾ ಮಹಿಮೆಗಳನ್ನು ಅರಿತು ವಿಷಾದ ಮುಕ್ತನಾಗಬಹುದು.

ಅರ್ಜುನನು ತನ್ನ ವೃದ್ಧ ಪಿತಾಮಹನ ಮತ್ತು ಗುರುವಿನ ದೇಹ ಬದಲಾವಣೆಗಾಗಿ ವಿಷಾದಿಸದಿರಲು ಭಗವಂತನಿಂದ ಬೋಧಿಸಲ್ಪಟ್ಟಿದ್ದಾನೆ. ಧರ್ಮಯುದ್ಧದಲ್ಲಿ ಅವರ ದೇಹಗಳನ್ನು ಕೊಲ್ಲಲು, ಪ್ರಾಯಃ ಅರ್ಜುನನು ಸಂತೋಷಪಡಬೇಕು. ಅದರಿಂದ ಅವರೆಲ್ಲರೂ ತಮ್ಮ ವಿವಿಧ ದೈಹಿಕ ಕರ್ಮಫಲಗಳಿಂದ ಶುದ್ಧರಾಗುತ್ತಾರೆ. ಯಜ್ಞವೇದಿಕೆಯಲ್ಲಿ ಅಥವಾ ಯೋಗ್ಯವಾದ ಯುದ್ಧಭೂಮಿಯಲ್ಲಿ ತನ್ನ ಪ್ರಾಣತ್ಯಾಗ ಮಾಡುವವನು, ಕೂಡಲೇ ದೈಹಿಕ ಪ್ರತಿಕ್ರಿಯೆಗಳಿಂದ ಶುದ್ಧನಾಗಿ, ಜೀವನದ ಉತ್ತಮ ಸ್ಥಾನಕ್ಕೆ ಉನ್ನತಿ ಹೊಂದುತ್ತಾನೆ. ಆದ್ದರಿಂದ ಅರ್ಜುನನ ವಿಷಾದಕ್ಕೆ ಕಾರಣವಿರಲಿಲ್ಲ.

**ನೈನಂ ಛಿನ್ದನ್ತಿ ಶಸ್ತ್ರಾಣಿ ನೈನಂ ದಹತಿ ಪಾವಕಃ।**
**ನ ಚೈನಂ ಕ್ಲೇದಯನ್ತ್ಯಾಪೋ ನ ಶೋಷಯತಿ ಮಾರುತಃ ॥ ೨೩ ॥**

ನ—ಎಂದೂ, ಏನಮ್—ಈ ಆತ್ಮನನ್ನು, ಛಿನ್ದನ್ತಿ—ತುಂಡುಗಳಾಗಿ ಮಾಡಲು ಸಾಧ್ಯವಿಲ್ಲ, ಶಸ್ತ್ರಾಣಿ—ಶಸ್ತ್ರಗಳು, ನ—ಎಂದೂ, ಏನಮ್—ಈ ಆತ್ಮನನ್ನು, ದಹತಿ—ಸುಡುವುದು, ಪಾವಕಃ—ಅಗ್ನಿ, ನ—ಎಂದೂ, ಚ—ಕೂಡ, ಏನಮ್—ಈ ಆತ್ಮನನ್ನು, ಕ್ಲೇದಯನ್ತಿ—ತೋಯಿಸುವುದು, ಅಪಃ—ನೀರು, ನ—ಎಂದೂ, ಶೋಷಯತಿ—ಒಣಗಿಸುವುದು, ಮಾರುತಃ—ಗಾಳಿಯು.

**ಆತ್ಮನನ್ನು ಯಾವುದೇ ಶಸ್ತ್ರದಿಂದ ತುಂಡರಿಸುವುದು ಎಂದೂ ಸಾಧ್ಯವಿಲ್ಲ. ಅಥವಾ ಅಗ್ನಿಯಿಂದ ಸುಡುವುದು ಸಾಧ್ಯವಿಲ್ಲ, ಅಥವಾ ನೀರಿನಿಂದ ನೆನೆಯುವುದಿಲ್ಲ ಅಥವಾ ಗಾಳಿಯಿಂದ ಒಣಗುವುದಿಲ್ಲ.**

**ಭಾವಾರ್ಥ :** ಖಡ್ಗಗಳು, ಜ್ವಾಲಾಯುಧಗಳು. ವಾರುಣಾಸ್ತ್ರಗಳು, ವಾಯವ್ಯಾಸ್ತ್ರಗಳು, ಇತ್ಯಾದಿ—ಎಲ್ಲ ಬಗೆಯ ಶಸ್ತ್ರಗಳು ಚೇತನಾತ್ಮನನ್ನು ಕೊಲ್ಲಲು ಅಸಮರ್ಥವಾಗಿವೆ. ಆಧುನಿಕ ಜ್ವಾಲಾಯುಧಗಳ ಜೊತೆಗೆ ಭೂ, ಜಲ, ವಾಯು, ಆಕಾಶಾದಿ ಅನೇಕ ಬಗೆಯ ಶಸ್ತ್ರಗಳು ಇದ್ದುವೆಂದು ತೋರುತ್ತದೆ. ಆಧುನಿಕ ಯುಗದ ಪರಮಾಣು ಅಸ್ತ್ರಗಳು ಕೂಡ ಜ್ವಾಲಾಯುಧಗಳೆಂದು ವರ್ಣಿತವಾಗಿವೆ. ಆದರೆ, ಹಿಂದಿನ ಕಾಲದಲ್ಲಿ ನಾನಾ ಬಗೆಯ **ಭೌತಿಕ ಅಂಶಗಳಿಂದ ತಯಾರಾದ ಅಸ್ತ್ರಗಳಿದ್ದವು. ಆಗ್ನೇಯಾಸ್ತ್ರಗಳಿಗೆ ಪ್ರತಿಯಾಗಿ**

ವಾರುಣಾಸ್ತ್ರಗಳನ್ನು ಪ್ರಯೋಗಿಸಲಾಗುತ್ತಿತ್ತು. ಈಗ ಇವು ಆಧುನಿಕ ವಿಜ್ಞಾನಕ್ಕೆ ಪರಿಚಿತವಿಲ್ಲ. ಆಧುನಿಕ ವಿಜ್ಞಾನಿಗಳಿಗೆ ವಾಯವ್ಯಾಸ್ತ್ರಗಳ ಜ್ಞಾನವೂ ಇಲ್ಲ. ಏನೇ ಇರಲಿ, ಆತ್ಮನನ್ನು ತುಂಡು ಮಾಡುವುದು ಸಾಧ್ಯವಿಲ್ಲ, ಅಥವಾ ಎಷ್ಟೇ ವೈಜ್ಞಾನಿಕವಾದ ಉಪಾಯ ಗಳಿದ್ದರೂ ಅವುಗಳಿಂದ ಆತ್ಮನು ನಾಶ ಹೊಂದಲಾರನು.

ಅವಿದ್ಯಾ ಮಾತ್ರದಿಂದ ವ್ಯಕ್ತಿಗತ ಆತ್ಮನು ಹೇಗೆ ಅಸ್ತಿತ್ವಕ್ಕೆ ಬಂದನು ಮತ್ತು ಅನಂತರದಲ್ಲಿ ಹೇಗೆ ಮಾಯಾಶಕ್ತಿಯಿಂದ ಆವೃತನಾದನು ಎಂಬುದನ್ನು ಮಾಯಾವಾದಿಯು ವಿವರಿಸಲಾರನು. ಅಥವಾ, ಈ ವ್ಯಕ್ತಿಗತ ಆತ್ಮನನ್ನು ಮೂಲ ಪರಮ ಆತ್ಮನಿಂದ ಕತ್ತರಿಸುವುದು ಎಂದಿಗೂ ಸಾಧ್ಯವಿಲ್ಲ. ಬದಲಿಗೆ ವ್ಯಕ್ತಿಗತ ಆತ್ಮಗಳು ಪರಮಾತ್ಮನ ಸನಾತನ ಪ್ರತ್ಯೇಕಿತ ಭಾಗಗಳಾಗಿವೆ. ಅಗ್ನಿಯ ಕಿಡಿಗಳು ಗುಣಾತ್ಮಕವಾಗಿ ಅಗ್ನಿಯೊಂದಿಗೆ ಒಂದೇ ಆಗಿದ್ದರೂ, ಅಗ್ನಿಯಿಂದ ಬೇರ್ಪಟ್ಟೊಡನೆಯೇ ನಂದಿಹೋಗುವ ಪ್ರಣತತೆ ಇರುವಂತೆ, ಆತ್ಮಗಳು ಸನಾತನವಾಗಿ ಅಣುರೂಪಿ ವ್ಯಕ್ತಿಗತವಾಗಿರುವುದರಿಂದ ಮಾಯಾಶಕ್ತಿಯ ಆವರಣಕ್ಕೆ ಒಳಗಾಗುವ ಸಂಭವವಿದೆ, ಮತ್ತು ಅವು ಪರಮ ಪ್ರಭುವಿನ ಸಂಗದಿಂದ ಪ್ರತ್ಯೇಕ ವಾಗುತ್ತವೆ. ಜೀವಿಗಳು ಪರಮೋನ್ನತನ ಪ್ರತ್ಯೇಕಿತ ವಿಭಿನ್ನಾಂಶಗಳೆಂದು ವರಾಹ ಪುರಾಣ ದಲ್ಲಿ ವರ್ಣಿಸಲಾಗಿದೆ. ಭಗವದ್ಗೀತಾ ಪ್ರಕಾರವೂ ಅವು ಸನಾತನವಾಗಿ ಹಾಗೆಯೇ. ಹೀಗೆ ಮಾಯೆಯಿಂದ ವಿಮೋಚಿತನಾದಮೇಲೆಯೂ ಜೀವಿಯು, ಅರ್ಜುನನಿಗೆ ಭಗವಂತನ ಉಪದೇಶಗಳಿಂದ ಕಂಡುಬರುವಂತೆ, ಪ್ರತ್ಯೇಕ ವ್ಯಕ್ತಿಯಾಗಿ ಉಳಿಯುತ್ತಾನೆ. ಅರ್ಜುನನು ಕೃಷ್ಣನಿಂದ ಪಡೆದ ಜ್ಞಾನದಿಂದ ಮುಕ್ತನಾದನೇ ವಿನಾ ಅವನೆಂದೂ ಕೃಷ್ಣನೊಡನೆ ಒಂದಾಗಲಿಲ್ಲ.

**ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ ।**
**ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ॥ ೨೪ ॥**

ಅಚ್ಛೇದ್ಯಃ—ಒಡೆಯಲಾರದ್ದು, ಅಯಮ್—ಈ ಆತ್ಮನು, ಅದಾಹ್ಯಃ—ಸುಡಲಾಗದ್ದು, ಅಯಮ್—ಈ ಆತ್ಮನು, ಅಕ್ಲೇದ್ಯಃ—ಕರಗಿಸಲಾಗದ್ದು, ಅಶೋಷ್ಯಃ—ಒಣಗಿಸಲಾಗದ್ದು, ಏವ—ಖಂಡಿತವಾಗಿ, ಚ—ಮತ್ತು, ನಿತ್ಯಃ—ನಿತ್ಯವಾದುದು, ಸರ್ವಗತಃ—ಎಲ್ಲ ಕಡೆ ವ್ಯಾಪಿಸಿರುವುದು, ಸ್ಥಾಣುಃ—ಬದಲಾವಣೆ ಇಲ್ಲದ್ದು, ಅಚಲಃ—ಅಚಲವಾದದ್ದು ಅಯಮ್—ಈ ಆತ್ಮನು, ಸನಾತನಃ—ಸನಾತನವಾಗಿ ಅದುವೇ.

**ವ್ಯಕ್ತಿಗತ ಆತ್ಮನು ಅಚ್ಛೇದ್ಯ, ಕರಗಿಸಲಾಗದ್ದು ಮತ್ತು ದಹಿಸಲಾಗದ್ದು ಅಥವಾ ಒಣಗಿಸಲಾಗದ್ದು. ಅವನು ನಿತ್ಯನು, ಎಲ್ಲಕಡೆಯೂ ಇರುವನು, ಬದಲಾವಣೆ ಇಲ್ಲದವನು, ಅಚಲನು ಮತ್ತು ಸನಾತನವಾಗಿ ಅದುವೇ.**

**ಭಾವಾರ್ಥ :** ಅಣುರೂಪಿ ಆತ್ಮನ ಈ ಎಲ್ಲ ಗುಣಗಳು ವ್ಯಕ್ತಿಗತ ಆತ್ಮನು ಪೂರ್ಣ ಆತ್ಮನ ಸನಾತನ ಅಣುಲವ ಎಂಬುದನ್ನು ಖಚಿತವಾಗಿ ಸಿದ್ಧಮಾಡುತ್ತವೆ ಮತ್ತು ಆವನು ಬದಲಾವಣೆಯಿಲ್ಲದೆ, ಸನಾತನ ಅಣುವಾಗಿ ಹಾಗೆಯೇ ಉಳಿದಿರುತ್ತಾನೆ. ಅದ್ವೈತ ವಾದ

ವನ್ನು ಈ ಸಂದರ್ಭಕ್ಕೆ ಅನ್ವಯಿಸುವುದೂ ಬಹಳ ಕಷ್ಟಕರ, ಏಕೆಂದರೆ, ವ್ಯಕ್ತಿಗತ ಆತ್ಮನು ಏಕರೂಪಾತ್ಮಕವಾಗಿ ಒಂದೇ ಆಗುವುದೆಂದು ಎಂದೂ ನಿರಪೇಕ್ಷಿತವಿಲ್ಲ. ಭೌತಿಕ ಕಲ್ಮಷ ದಿಂದ ಮುಕ್ತವಾದ ಮೇಲೆ ಅಣುರೂಪಿ ಆತ್ಮನು ಪರಮ ದೇವೋತ್ತಮ ಪುರುಷನ ಪ್ರಕಾಶ ಮಯ ಕಿರಣಗಳಲ್ಲಿ ಒಂದು ಆಧ್ಯಾತ್ಮಿಕ ಕಿಡಿಯಾಗಿ ಉಳಿಯಬಯಸಬಹುದು, ಆದರೆ ಬುದ್ಧಿ ವಂತರಾದ ಆತ್ಮರು ದೇವೋತ್ತಮ ಪುರುಷನೊಂದಿಗೆ ಸಂಗ ಹೊಂದಲು ಆಧ್ಯಾತ್ಮಿಕ ಲೋಕಗಳನ್ನು ಪ್ರವೇಶಿಸುತ್ತಾರೆ.

**ಸರ್ವಗತ** (ಸರ್ವವ್ಯಾಪಿ) ಎಂಬ ಪದವು ಬಹಳ ಮಹತ್ವದ್ದು. ಏಕೆಂದರೆ, ಜೀವಿ ಗಳು ಭಗವಂತನ ಸೃಷ್ಟಿಯಲ್ಲೆಲ್ಲ ಇದ್ದಾರೆ ಎಂಬುದರಲ್ಲಿ ಸಂದೇಹವಿಲ್ಲ. ಅವರು ಭೂಮಿ, ನೀರು, ವಾಯು ಮತ್ತು ಭೂಮಿಯೊಳಗೆ ಮತ್ತು ಅಗ್ನಿಯೊಳಗೂ ಇದ್ದಾರೆ. ಆತ್ಮರು ಅಗ್ನಿಯಲ್ಲಿ ನಿರ್ವೀರ್ಯರಾಗುತ್ತಾರೆ ಎಂಬುದು ಅಗ್ರಾಹ್ಯ. ಏಕೆಂದರೆ, ಆತ್ಮನು ಬೆಂಕಿ ಯಿಂದ ಸುಡಲ್ಪಡುವುದಿಲ್ಲ ಎಂದು ಸ್ಪಷ್ಟವಾಗಿ ಇಲ್ಲಿ ಹೇಳಿದೆ. ಆದ್ದರಿಂದ ಸೂಕ್ತವಾದ ದೇಹ ಗಳನ್ನು ಹೊಂದಿ, ಜೀವಿಗಳು ಸೂರ್ಯಲೋಕದಲ್ಲಿಯೂ ಇದ್ದಾರೆಂಬ ಬಗ್ಗೆ ಸಂದೇಹವಿಲ್ಲ. ಸೂರ್ಯಲೋಕದಲ್ಲಿ ಜೀವರಿಲ್ಲವೆಂದರೆ **ಸರ್ವಗತ** —ಎಲ್ಲ ಕಡೆ ಇರುವುದು— ಎಂಬುದು ಅರ್ಥಹೀನ.

**ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ ।**
**ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ ॥ ೨೫ ॥**

ಅವ್ಯಕ್ತಃ—ಅಗೋಚರ, ಅಯಮ್—ಈ ಆತ್ಮನು, ಅಚಿಂತ್ಯಃ—ಅಚಿಂತ್ಯ, ಅಯಮ್—ಈ ಆತ್ಮನು, ಅವಿಕಾರ್ಯಃ—ಬದಲಾಯಿಸಲ್ಪಡನು, ಅಯಮ್—ಈ ಆತ್ಮನು, ಉಚ್ಯತೇ—ಹೇಳಲ್ಪಡುತ್ತದೆ, ತಸ್ಮಾತ್—ಆದ್ದರಿಂದ, ಏವಮ್—ಹೀಗೆ, ವಿದಿತ್ವಾ—ಸರಿಯಾಗಿ ತಿಳಿದುಕೊಂಡು, ಏನಮ್—ಈ ಆತ್ಮನನ್ನು, ನ—ಇಲ್ಲ, ಅನುಶೋ ಚಿತುಮ್—ಶೋಕಿಸುವುದು, ಅರ್ಹಸಿ—ನೀನು ಅರ್ಹನು.

**ಆತ್ಮನು ಅಗೋಚರನು, ಅಚಿಂತ್ಯನು ಮತ್ತು ಬದಲಾಯಿಸಲ್ಪಡನು ಎಂದು ತಿಳಿದೂ ನೀನು ದೇಹಕ್ಕಾಗಿ ಶೋಕಿಸಕೂಡದು.**

**ಭಾವಾರ್ಥ :** ಈ ಹಿಂದೆ ವರ್ಣಿಸಿರುವಂತೆ, ಆತ್ಮನ ಗಾತ್ರವು ನಮ್ಮ ಭೌತಿಕ ಗಣನೆಗೆ ಎಷ್ಟು ಸೂಕ್ಷ್ಮವೆಂದರೆ, ಅವನು ಶಕ್ತಿಶಾಲಿ ಸೂಕ್ಷ್ಮದರ್ಶಕ ಯಂತ್ರದ ಮೂಲಕ ಕೂಡ ಕಾಣುವುದು ಸಾಧ್ಯವಿಲ್ಲ; ಆದ್ದರಿಂದ ಅವನು ಅಗೋಚರನು. ಆತ್ಮನ ಅಸ್ತಿತ್ವದ ಮಟ್ಟಿಗೆ, ಶ್ರುತಿ ಅಥವಾ ವೇದಜ್ಞಾನದ ಹೊರತಾಗಿ ಪ್ರಯೋಗಾತ್ಮಕವಾಗಿ ಆತ್ಮನ ಅಸ್ತಿತ್ವವನ್ನು ಯಾರೂ ಸಿದ್ಧಮಾಡಿ ತೋರಿಸಲಾರರು. ಜೀವಾತ್ಮನು ಇದ್ದಾನೆ ಎಂಬುದು ಗ್ರಹಣ ಶಕ್ತಿಯ ಸಂಗತಿಯಾಗಿದ್ದರೂ, ಅವನ ಅಸ್ತಿತ್ವವನ್ನು ತಿಳಿಯಲು ನಮಗೆ ಬೇರೆ ಆಧಾರವೇ ಇಲ್ಲದ್ದರಿಂದ, ನಾವು ಈ ಸತ್ಯವನ್ನು ಒಪ್ಪಿಕೊಳ್ಳಲೇಬೇಕು. ಕೇವಲ ಶ್ರೇಷ್ಠ ಪ್ರಮಾಣಗಳ ಆಧಾರದ ಮೇಲೆ ನಾವು ಅನೇಕ ಸಂಗತಿಗಳನ್ನು ಒಪ್ಪಿಕೊಳ್ಳಬೇಕಾಗುವುದು. ತನ್ನ ತಾಯಿಯ

ಪ್ರಮಾಣದ ಮೇಲೆ ಆಧರಿತವಾದ ತನ್ನ ತಂದೆಯ ಅಸ್ತಿತ್ವವನ್ನು ಯಾರೂ ನಿರಾಕರಿಸಲಾಗದು. ತಾಯಿಯ ಪ್ರಮಾಣವನ್ನು ಬಿಟ್ಟರೆ ತಂದೆಯ ವ್ಯಕ್ತಿತ್ವವನ್ನು ಗುರುತಿಸಲು ಬೇರೆ ಆಧಾರವೇ ಇಲ್ಲ. ಅದೇ ರೀತಿಯಾಗಿ, ವೇದಾಧ್ಯಯನವನ್ನುಳಿದು ಆತ್ಮನನ್ನು ತಿಳಿದುಕೊಳ್ಳಲು ಬೇರೆ ಆಧಾರವೇ ಇಲ್ಲ. ಅರ್ಥಾತ್ ಆತ್ಮನು ಮಾನವನ ಪ್ರಾಯೋಗಿಕ ಜ್ಞಾನಕ್ಕೆ ಅಚಿಂತ್ಯವಾಗಿರುವನು. ಆತ್ಮನು ಪ್ರಜ್ಞೆ ಮತ್ತು ಪ್ರಾಜ್ಞ—ಇದೂ ಕೂಡ ವೇದಗಳ ನಿರೂಪಣೆ ಮತ್ತು ನಾವದನ್ನು ಒಪ್ಪಲೇಬೇಕು. ದೇಹದಲ್ಲಿದ್ದಂತೆ ಆತ್ಮನಲ್ಲಿ ಬದಲಾವಣೆಗಳಿಲ್ಲ. ಆತ್ಮನು ಸನಾತನವಾಗಿ ಬದಲಾವಣೆರಹಿತನಾದ್ದರಿಂದ, ಅನಂತ ಪರಮ ಆತ್ಮನಿಗೆ ಹೋಲಿಸಲಾಗಿ, ಅಣುವಾಗಿ ಉಳಿದ್ದಾನೆ. ಪರಮಾತ್ಮನು ಅನಂತನು, ಆತ್ಮನು ಸೂಕ್ಷ್ಮಾತಿಸೂಕ್ಷ್ಮನು, ಆದ್ದರಿಂದ ಸೂಕ್ಷ್ಮಾತಿಸೂಕ್ಷ್ಮವಾದ ಆತ್ಮನು ಬದಲಾವಣೆ ಇಲ್ಲದವನಾಗಿರುವುದರಿಂದ, ಅನಂತನಾದ ಆತ್ಮನಿಗೆ ಅಥವಾ ಪರಮ ದೇವೋತ್ತಮ ಪುರುಷನಿಗೆ ಎಂದಿಗೂ ಸಮಾನನಾಗಲಾರನು. ಆತ್ಮನ ಕಲ್ಪನೆಯ ಅವಿಕಾರತ್ವವನ್ನು ದೃಢಪಡಿಸಲು, ವೇದಗಳಲ್ಲಿ ನಾನಾ ರೀತಿಯಲ್ಲಿ ಮತ್ತೆ ಮತ್ತೆ ಈ ಕಲ್ಪನೆಯು ಹೇಳಲ್ಪಟ್ಟಿದೆ. ವಿಷಯವನ್ನು ತಪ್ಪಿಲ್ಲದೆ ಮತ್ತು ನಿರ್ದುಷ್ಟವಾಗಿ ತಿಳಿದುಕೊಳ್ಳಲು ಪುನರುಕ್ತಿಯು ಆವಶ್ಯಕ.

**ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಮ್ ।**
**ತಥಾಪಿ ತ್ವಂ ಮಹಾಬಾಹೋ ನೈನಂ ಶೋಚಿತುಮರ್ಹಸಿ ॥ ೨೬ ॥**

ಅಥ—ಹಾಗಾದರೆ, ಚ—ಕೂಡ, ಏನಮ್—ಈ ಆತ್ಮನು, ನಿತ್ಯಜಾತಮ್—ಸದಾ ಹುಟ್ಟಿರುವವನು, ನಿತ್ಯಮ್—ಎಂದೆಂದಿಗೂ, ವಾ—ಅಥವಾ, ಮನ್ಯಸೇ—ನೀನು ಹಾಗೆ, ತಿಳಿದುಕೊ, ಮೃತಮ್—ಮೃತನೆಂದು, ತಥಾಪಿ—ಆದರೂ, ತ್ವಮ್—ನೀನು, ಮಹಾಬಾಹೋ—ಹೇ ಮಹಾಬಾಹುವೇ, ನ—ಎಂದೂ, ಏನಮ್—ಆತ್ಮನ ಬಗ್ಗೆ, ಶೋಚಿತುಮ್—ಶೋಕಿಸುವುದು, ಅರ್ಹಸಿ—ಯೋಗ್ಯವು.

**ಆದರೆ ಆತ್ಮನು (ಅಥವಾ ಜೀವಿತದ ಲಕ್ಷಣಗಳು) ಸದಾ ಹುಟ್ಟುವನು ಮತ್ತು ಎಂದೆಂದಿಗೂ ಸಾಯುವನು ಎಂದು ನೀನು ಭಾವಿಸಿದರೂ ಕೂಡ, ಹೇ ಮಹಾಬಾಹುವೇ, ನೀನು ಶೋಕಿಸಲು ಕಾರಣವಿಲ್ಲ.**

**ಭಾವಾರ್ಥ :** ಬೌದ್ಧರಂತೆ, ದೇಹಾತೀತವಾಗಿ ಆತ್ಮನ ಪ್ರತ್ಯೇಕ ಅಸ್ತಿತ್ವವನ್ನು ನಂಬದ ತಾತ್ವಿಕರ ವರ್ಗವೊಂದು ಯಾವಾಗಲೂ ಇದ್ದೇ ಇದೆ. ಶ್ರೀಕೃಷ್ಣನು ಭಗವದ್ಗೀತೆಯನ್ನು ಬೋಧಿಸಿದಾಗ, ಇಂಥ ತಾತ್ವಿಕರು ಇದ್ದರೆಂದು ಕಂಡುಬರುವುದು, ಮತ್ತು ಅವರು ಲೋಕಾಯತಿಕರು ಮತ್ತು ವೈಭಾಷಿಕರು ಎಂದು ಕರೆಯಲ್ಪಡುತ್ತಿದ್ದರು. ಜೀವಿತದ ಲಕ್ಷಣಗಳು ಭೌತಿಕ ಸಂಯೋಜನೆಯ ಒಂದು ಪಕ್ವ ಸ್ಥಿತಿಯಲ್ಲಿ ಉಂಟಾಗುತ್ತವೆ ಎಂದು ಅಂತಹ ತಾತ್ವಿಕರು ಹೇಳುತ್ತಾರೆ. ಆಧುನಿಕ ಭೌತಿಕ ವಿಜ್ಞಾನಿಗಳು ಮತ್ತು ಸಾಂಸಾರಿಕ ತಾತ್ವಿಕರು ಕೂಡ ಹೀಗೆಯೇ ಭಾವಿಸುತ್ತಾರೆ. ಅವರ ಪ್ರಕಾರ, ದೇಹವು ಭೌತಿಕ ಅಂಶಗಳ ಒಂದು ಸಂಯೋಜನೆ. ಒಂದು ನಿಶ್ಚಿತ ಘಟ್ಟದಲ್ಲಿ ಭೌತಿಕ ಮತ್ತು ರಾಸಾಯನಿಕ ಅಂಶಗಳು ಪರಸ್ಪರ ಕಲೆಯುವಿಕೆಯಿಂದ ಜೀವಿತದ ಲಕ್ಷಣಗಳು ವರ್ಧಿಸುತ್ತವೆ. ಮಾನವ ವರ್ಣನಶಾಸ್ತ್ರವು

ಕೂಡಾ ಈ ತತ್ತ್ವವನ್ನೇ ಆಧರಿಸಿದೆ. ಈಗ ಅಮೇರಿಕಾದಲ್ಲಿ ಬಹಳ ಪ್ರಿಯವಾಗುತ್ತಿರುವ, ಅನೇಕ ಮಿಥ್ಯಾ ಧರ್ಮಗಳೂ ಕೂಡ ಈ ತತ್ತ್ವವನ್ನು ಮತ್ತು ಬೌದ್ಧ ಪಂಥೀಯರ ಭಕ್ತಿ ರಹಿತ ನಾಸ್ತಿತ್ವವಾದವನ್ನು ಆಶ್ರಯಿಸುತ್ತಿವೆ.

ವೈಭಾಷಿಕ ತತ್ತ್ವದ ಪ್ರಕಾರ ಅರ್ಜುನನು ಆತ್ಮನ ಅಸ್ತಿತ್ವದಲ್ಲಿ ನಂಬಿಕೆ ಹೊಂದಿಲ್ಲ ದಿದ್ದರೂ ಕೂಡ, ಆಗಲೂ ವಿಷಾದಕ್ಕೆ ಕಾರಣವಿರಲಿಲ್ಲ. ಕೆಲವೊಂದು ನಿರ್ದಿಷ್ಟ ಪ್ರಮಾಣದ ರಾಸಾಯನಿಕ ವಸ್ತುಗಳ ನಷ್ಟಕ್ಕಾಗಿ ಯಾರೂ ಶೋಕಿಸುವುದಿಲ್ಲ, ಮತ್ತು ತನ್ನ ವಿಧಿತ ಕರ್ತವ್ಯಾಚರಣೆಯನ್ನು ನಿಲ್ಲಿಸುವುದಿಲ್ಲ. ಬದಲಾಗಿ, ಈಗಿನ ವಿಜ್ಞಾನ ಮತ್ತು ವೈಜ್ಞಾನಿಕ ಯುದ್ಧದಲ್ಲಿ, ವೈರಿಯ ಮೇಲೆ ವಿಜಯ ಸಾಧಿಸಲು ಅನೇಕಾನೇಕ ಟನ್ನುಗಳಷ್ಟು ರಾಸಾಯನಿಕ ವಸ್ತುಗಳನ್ನು ಹಾಳುಮಾಡಲಾಗುತ್ತಿದೆ. ವೈಭಾಷಿಕರ ತತ್ತ್ವದ ಪ್ರಕಾರ, ಆತ್ಮನು ದೇಹಕ್ಷಯದೊಂದಿಗೆ ಮಾಯವಾಗುತ್ತಾನೆ. ಆದ್ದರಿಂದ ಯಾವ ಸಂದರ್ಭದಲ್ಲಿಯೇ ಆಗಲಿ, ಅರ್ಜುನನು ಅಣುರೂಪಿ ಆತ್ಮನು ಇದ್ದಾನೆಂಬ ವೈದಿಕ ನಿರ್ಣಯವನ್ನು ಒಪ್ಪಿರಲಿ ಅಥವಾ ಅವನು ಆತ್ಮನ ಅಸ್ತಿತ್ವವನ್ನು ನಂಬದಿರಲಿ, ಅವನು ವಿಷಾದಪಡಲು ಯಾವ ಕಾರಣವೂ ಇಲ್ಲ. ಈ ವಾದದ ಪ್ರಕಾರ, ಪ್ರತಿಕ್ಷಣವೂ ಜಡದಿಂದ ಎಷ್ಟೋ ಜೀವಿಗಳು ಹುಟ್ಟುತ್ತಿರುವುದರಿಂದ, ಇಂಥ ಪ್ರಸಂಗಗಳಿಗಾಗಿ ದುಃಖಿಸಬೇಕಾಗಿಲ್ಲ. ಆತ್ಮನಿಗೆ ಪುನರ್ಜನ್ಮ ಇಲ್ಲದಿದ್ದಲ್ಲಿ, ಅರ್ಜುನನು ತನ್ನ ಪಿತಾಮಹನನ್ನೂ, ಗುರುವನ್ನೂ, ಕೊಲ್ಲುವುದರ ಪಾಪ ಫಲಗಳಿಂದ ಬಾಧಿತನಾಗುವ ಭಯಕ್ಕೂ ಕಾರಣವಿರಲಿಲ್ಲ. ಆದರೂ, ಶ್ರೀಕೃಷ್ಣನು ಅರ್ಜುನನನ್ನು ವ್ಯಂಗ್ಯವಾಗಿ **ಮಹಾಬಾಹು** ಎಂದು ಸಂಬೋಧಿಸಿದನು. ಏಕೆಂದರೆ, ಹೇಗೂ ಅರ್ಜುನನು ವೈದಿಕ ಜ್ಞಾನಕ್ಕೆ ದೂರವಾಗುವ ವೈಭಾಷಿಕ ಸಿದ್ಧಾಂತವನ್ನು ಒಪ್ಪಿರಲಿಲ್ಲ. ಕ್ಷತ್ರಿಯನಾಗಿ ಅರ್ಜುನನು ವೈದಿಕ ಸಂಸ್ಕೃತಿಗೆ ಸೇರಿದ್ದನು, ಮತ್ತು ಅವನು ಅದರ ತತ್ತ್ವಗಳನ್ನು ಅನುಸರಿಸುವುದು ಅವನಿಗೆ ಯೋಗ್ಯವಾಗಿತ್ತು.

**ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।**
**ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥ ೨೭ ॥**

ಜಾತಸ್ಯ—ಹುಟ್ಟಿದವನು, ಹಿ—ಖಂಡಿತವಾಗಿ, ಧ್ರುವಃ—ಸತ್ಯ ಸಂಗತಿ, ಮೃತ್ಯುಃ—ಮರಣವು, ಧ್ರುವಮ್—ಇದೂ ಸತ್ಯ, ಜನ್ಮ—ಜನನವು, ಮೃತಸ್ಯ—ಮರಣಿಸಿದವನ, ಚ—ಕೂಡ, ತಸ್ಮಾತ್—ಆದ್ದರಿಂದ, ಅಪರಿಹಾರ್ಯೇ—ಯಾವುದನ್ನು ತಪ್ಪಿಸಲು ಸಾಧ್ಯವಿಲ್ಲವೋ, ಅರ್ಥೇ—ವಿಷಯದಲ್ಲಿ, ನ—ಅಲ್ಲ, ತ್ವಮ್—ನೀನು, ಶೋಚಿತುಮ್—ಶೋಕಿಸಲು, ಅರ್ಹಸಿ—ಯೋಗ್ಯವು.

**ಹುಟ್ಟಿದವನು ಸಾಯುವುದು ಖಂಡಿತ, ಮತ್ತು ಮರಣಿಸಿದ ನಂತರ ಮತ್ತೆ ಹುಟ್ಟುವುದು ಖಂಡಿತ. ಆದ್ದರಿಂದ ನಿನ್ನ ಕರ್ತವ್ಯಗಳ ಅನಿವಾರ್ಯ ನಿರ್ವಹಣೆಯಲ್ಲಿ, ನೀನು ಶೋಕಿಸಕೂಡದು.**

**ಭಾವಾರ್ಥ :** ಒಬ್ಬನು ತನ್ನ ಕರ್ಮಾನುಸಾರ ಜನ್ಮ ಪಡೆಯಲೇಬೇಕು. ಮತ್ತು ಅವಧಿಯೊಂದರ ಕಾರ್ಯಕಲಾಪಗಳು ಮುಗಿದೊಡನೆಯೇ ಒಬ್ಬನು ಮುಂದಿನ ಜನ್ಮವೆತ್ತಲು

ಸಾಯಲೇಬೇಕು. ಹೀಗೆ ಒಬ್ಬನು ಜನನ–ಮರಣದ ಚಕ್ರದಲ್ಲಿ ವಿಮೋಚನೆಯಿಲ್ಲದೆ ಸುತ್ತುತ್ತಿರುತ್ತಾನೆ. ಆದರೆ, ಈ ಜನನ–ಮರಣ ಚಕ್ರವು, ಅನವಶ್ಯಕ ಕೊಲೆ, ವಧೆ ಮತ್ತು ಯುದ್ಧಗಳನ್ನು ಸಮರ್ಥಿಸುವುದಿಲ್ಲ. ಆದರೂ ಸಮಾಜದಲ್ಲಿ ಶಾಂತಿ ಸುವ್ಯವಸ್ಥೆಯನ್ನು ಕಾಪಾಡಲು ಹಿಂಸೆ ಮತ್ತು ಯುದ್ಧ ಅನಿವಾರ್ಯ.

ಕುರುಕ್ಷೇತ್ರ ಯುದ್ಧವು ಭಗವಂತನ ಇಚ್ಛೆಯಾಗಿದ್ದು, ಅದು ಅನಿವಾರ್ಯ ಪ್ರಸಂಗ ಮತ್ತು ಒಂದು ಧರ್ಮನಿಮಿತ್ತಕ್ಕಾಗಿ ಯುದ್ಧ ಮಾಡುವುದು ಕ್ಷತ್ರಿಯನ ಕರ್ತವ್ಯ. ಅವನು ತನ್ನ ಉಚಿತ ಕರ್ತವ್ಯವನ್ನು ನಿರ್ವಹಿಸುತ್ತಿರುವುದರಿಂದ, ತನ್ನ ಬಾಂಧವರ ಮರಣಕ್ಕಾಗಿ ಏಕೆ ವಿಷಾದಿಸಬೇಕು ಅಥವಾ ಭಯಪಡಬೇಕು ? ನ್ಯಾಯವನ್ನು ಉಲ್ಲಂಘಿಸಿ, ಅದರಿಂದ ಪಾಪಕರ್ಮಗಳ ಫಲಗಳಿಗೆ ಅವನು ಗುರಿಯಾಗಬೇಕಾಗಿರಲಿಲ್ಲ. ಪಾಪಕರ್ಮ ಫಲಗಳೇ ಅವನ ಭೀತಿಗೆ ಕಾರಣ. ತನ್ನ ಉಚಿತ ಕರ್ತವ್ಯ ನಿರ್ವಹಣೆಯನ್ನು ತಪ್ಪಿಸಿಕೊಂಡು, ತನ್ನ ಬಾಂಧವರ ಮರಣವನ್ನು ತಡೆಯುವುದು ಸಾಧ್ಯವಾಗುತ್ತಿರಲಿಲ್ಲ ಮತ್ತು ಕಾರ್ಯಾಚರಣೆಯ ತಪ್ಪು ಹಾದಿಯನ್ನು ಆಯ್ಕೆ ಮಾಡಿದ್ದರಿಂದ ಅವನು ಅವಮಾನಿತನಾಗುತ್ತಿದ್ದನು.

**ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ ।**
**ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ ॥ ೨೮ ॥**

ಅವ್ಯಕ್ತ-ಆದೀನಿ—ಪ್ರಾರಂಭದಲ್ಲಿ ಅವ್ಯಕ್ತವಾಗಿರುವ, ಭೂತಾನಿ—ಸೃಷ್ಟಿಯಾದುದೆಲ್ಲವುಗಳೂ, ವ್ಯಕ್ತ—ವ್ಯಕ್ತವಾಗಿ, ಮಧ್ಯಾನಿ—ಮಧ್ಯದಲ್ಲಿ, ಭಾರತ—ಹೇ ಭರತಕುಲ ಪ್ರಸೂತನೇ, ಅವ್ಯಕ್ತ—ಅಸ್ಪಷ್ಟವಾದ, ನಿಧನಾನಿ—ನಾಶಹೊಂದಿದಾಗ, ಏವ—ಇದೆಲ್ಲ ಹೀಗೆಯೇ, ತತ್ರ—ಆದ್ದರಿಂದ, ಕಾ—ಏನು, ಪರಿದೇವನಾ—ಶೋಕ.

**ಎಲ್ಲ ಸೃಷ್ಟ ಜೀವಿಗಳೂ ಆದಿಯಲ್ಲಿ ಅವ್ಯಕ್ತರು, ಮಧ್ಯ ಸ್ಥಿತಿಯಲ್ಲಿ ವ್ಯಕ್ತರು, ಮತ್ತು ನಾಶಹೊಂದಿದಾಗ ಮತ್ತೆ ಅವ್ಯಕ್ತರು. ಹಾಗಿರಲು, ವಿಷಾದಕ್ಕೆ ಆವಶ್ಯಕತೆಯಾದರೂ ಏನು?**

**ಭಾವಾರ್ಥ :** ಆತ್ಮನ ಅಸ್ತಿತ್ವದಲ್ಲಿ ನಂಬಿಕೆ ಇರುವ ಮತ್ತು ಆತ್ಮನ ಅಸ್ತಿತ್ವದಲ್ಲಿ ನಂಬಿಕೆ ಇಲ್ಲದ ಈ ಎರಡೂ ವರ್ಗದ ತತ್ವಜ್ಞಾನಿಗಳಿದ್ದಾರೆ ಎಂದು ಒಪ್ಪಿಕೊಂಡರೂ, ಉಭಯ ಪ್ರಸಂಗಗಳಲ್ಲಿಯೂ ವಿಷಾದಕ್ಕೆ ಕಾರಣವಿಲ್ಲ. ಆತ್ಮನ ಅಸ್ತಿತ್ವದಲ್ಲಿ ನಂಬಿಕೆ ಇಲ್ಲದವರನ್ನು ವೈದಿಕರು ನಾಸ್ತಿಕರೆಂದು ಕರೆಯುತ್ತಾರೆ. ಕೇವಲ ವಾದಕ್ಕಾಗಿ ನಾವು ಈ ನಾಸ್ತಿಕವಾದವನ್ನು ಒಪ್ಪಿಕೊಂಡರೂ, ಆಗಲೂ ವಿಷಾದಕ್ಕೆ ಕಾರಣವಿಲ್ಲ. ಆತ್ಮನ ಪ್ರತ್ಯೇಕ ಅಸ್ತಿತ್ವವಲ್ಲದೆ, ಭೌತಿಕ ಮೂಲ ಅಂಶಗಳು ಸೃಷ್ಟಿಗೆ ಪೂರ್ವದಲ್ಲಿ ಅವ್ಯಕ್ತವಾಗಿರುತ್ತವೆ. ಆಕಾಶದಿಂದ ವಾಯುವು ಹುಟ್ಟುವಂತೆ, ವಾಯುವಿನಿಂದ ಅಗ್ನಿಯು ಹುಟ್ಟುವಂತೆ, ಅಗ್ನಿಯಿಂದ ನೀರು ಹುಟ್ಟುವಂತೆ, ಮತ್ತು ನೀರಿನಿಂದ ಭೂಮಿಯು ವ್ಯಕ್ತವಾಗುವಂತೆ ಈ ಸೂಕ್ಷ್ಮ ಅವ್ಯಕ್ತ ಸ್ಥಿತಿಯಿಂದ ವ್ಯಕ್ತತೆಯು ಬರುತ್ತದೆ. ಭೂಮಿಯಿಂದ ನಾನಾ ಬಗೆಯ ವ್ಯಕ್ತತೆಗಳು ಉಂಟಾಗುತ್ತವೆ. ಭೂಮಿಯಿಂದ ವ್ಯಕ್ತವಾದ ಒಂದು ದೊಡ್ಡ ಗಗನಚುಂಬೀ ಕಟ್ಟಡವನ್ನೇ ಒಂದು ಉದಾಹರಣೆಯಾಗಿ ತೆಗೆದುಕೊಳ್ಳಿ. ಅದನ್ನು ಒಡೆದುಹಾಕಿದಾಗ, ಆ ವ್ಯಕ್ತ

ಕಟ್ಟಡವು ಮತ್ತೆ ಅವ್ಯಕ್ತವಾಗಿ, ಕೊನೆಗೆ ಅಣುರೂಪದಲ್ಲಿ ಉಳಿದುಕೊಳ್ಳುತ್ತದೆ. ಶಕ್ತಿ ನಿತ್ಯತೆಯ ನಿಯಮವು ಉಳಿಯುತ್ತದೆ, ಆದರೆ ಕಾಲಕ್ರಮದಲ್ಲಿ ವಸ್ತುಗಳು ವ್ಯಕ್ತವಾಗುತ್ತವೆ ಮತ್ತು ಅವ್ಯಕ್ತವಾಗುತ್ತವೆ—ಇದೇ ವ್ಯತ್ಯಾಸ. ಹೀಗಿರುವಾಗ ವ್ಯಕ್ತಸ್ಥಿತಿಯಲ್ಲಿ, ಅಥವಾ ಅವ್ಯಕ್ತ ಸ್ಥಿತಿಯಲ್ಲಿ ವಿಷಾದಕ್ಕೆ ಕಾರಣವೇನಿದೆ ? ಅಂತೂ ಅವ್ಯಕ್ತ ಸ್ಥಿತಿಯಲ್ಲಿ ಕೂಡ ವಸ್ತುಗಳು ನಾಶ ಆಗುವುದಿಲ್ಲ. ಪ್ರಾರಂಭದಲ್ಲಿ ಮತ್ತು ಕೊನೆಯಲ್ಲಿ ಎಲ್ಲ ಮೂಲ ಅಂಶಗಳು ಅವ್ಯಕ್ತವಾಗಿಯೇ ಇರುತ್ತವೆ. ಮಧ್ಯದಲ್ಲಿ ಮಾತ್ರ ವ್ಯಕ್ತವಾಗುತ್ತವೆ, ಮತ್ತು ಇದು ಯಾವ ನಿಜವಾದ ಭೌತಿಕ ವ್ಯತ್ಯಾಸ ಮಾಡುವುದಿಲ್ಲ.

ಭಗವದ್ಗೀತೆಯಲ್ಲಿ ಹೇಳಿದಂತೆ, ಈ ಭೌತಿಕ ದೇಹಗಳು ಕಾಲಕ್ರಮದಲ್ಲಿ ನಾಶವಾಗುವಂಥವು, (**ಅನ್ತವನ್ತ ಇಮೇ ದೇಹಾಃ**) ಆದರೆ ಆತ್ಮನು ಮಾತ್ರ ನಿತ್ಯ, (**ನಿತ್ಯಸ್ಯೋಕ್ತಾಃ ಶರೀರಿಣಃ**) ಎಂಬ ವೈದಿಕ ಸಿದ್ಧಾಂತವನ್ನು ನಾವು ಒಪ್ಪಿಕೊಂಡರೆ ಆಗ ದೇಹವು ಒಂದು ಉಡುಪು ಇದ್ದಂತೆ ಎಂಬುವುದನ್ನು ಸದಾ ಗಮನದಲ್ಲಿಡಬೇಕು. ಆದ್ದರಿಂದ ಬದಲಾವಣೆಗೆ ಹೊಂದುವ ಉಡುಪಿಗಾಗಿ ಏಕೆ ವಿಷಾದಿಸಬೇಕು? ಸನಾತನ ಆತ್ಮನಿಗೆ ಸಬಂಧಿಸಿದಂತೆ ಭೌತಿಕ ದೇಹವು ನಿಜವಾದ ಅಸ್ತಿತ್ವವನ್ನು ಹೊಂದಿರುವುದಿಲ್ಲ. ಅದೊಂದು ಬಗೆಯ ಕನಸಿನಂತೆ. ಕನಸಿನಲ್ಲಿ ನಾವು ಆಕಾಶದಲ್ಲಿ ಹಾರಾಡಿದಂತೆ ಅಥವಾ ರಾಜನಂತೆ ರಥದಲ್ಲಿ ಕುಳಿತಂತೆ ಭಾವಿಸಬಹುದು, ಆದರೆ ನಾವು ನಿದ್ದೆಯಿಂದ ಎಚ್ಚೆತ್ತ ಬಳಿಕ, ಆಕಾಶದಲ್ಲಿಯೂ ಇಲ್ಲ ಅಥವಾ ರಥದಲ್ಲಿ ಕುಳಿತೂ ಇಲ್ಲ ಎಂಬುದನ್ನು ಕಾಣಬಹುದು. ಭೌತಿಕ ದೇಹ ಇಲ್ಲದಿರುವಿಕೆಯ ಆಧಾರದ ಮೇಲೆ ಆತ್ಮ ಸಾಕ್ಷಾತ್ಕಾರವನ್ನು ವೈದಿಕ ಜ್ಞಾನವು ಪುರಸ್ಕರಿಸುತ್ತದೆ. ಆದ್ದರಿಂದ ಒಬ್ಬನು ಆತ್ಮನ ಅಸ್ತಿತ್ವದಲ್ಲಿ ನಂಬಿಕೆ ಹೊಂದಿರಲಿ ಅಥವಾ ಹೊಂದದೇ ಇರಲಿ, ಉಭಯ ಸಂದರ್ಭಗಳಲ್ಲಿಯೂ ದೇಹನಾಶಕ್ಕಾಗಿ ವಿಷಾದಕ್ಕೆ ಕಾರಣವಿಲ್ಲ,

**ಆಶ್ಚರ್ಯವತ್ ಪಶ್ಯತಿ ಕಶ್ಚಿದೇನಮ್**
**ಆಶ್ಚರ್ಯವದ್ ವದತಿ ತಥೈವ ಚಾನ್ಯಃ।**
**ಆಶ್ಚರ್ಯವಚ್ಚೈನಮನ್ಯಃ ಶೃಣೋತಿ**
**ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್** ॥ ೨೯ ॥

ಆಶ್ಚರ್ಯವತ್—ಆಶ್ಚರ್ಯಕರವೆಂಬಂತೆ, ಪಶ್ಯತಿ—ನೋಡುತ್ತಾನೆ, ಕಶ್ಚಿತ್—ಯಾರಾದರೊಬ್ಬನು, ಏನಮ್—ಈ ಆತ್ಮನನ್ನು, ಆಶ್ಚರ್ಯವತ್—ಆಶ್ಚರ್ಯಕರವೆಂಬಂತೆ, ವದತಿ—ಹೇಳುತ್ತಾನೆ, ತಥಾ—ಹೀಗೆ, ಏವ—ಖಂಡಿತವಾಗಿ, ಚ—ಕೂಡ, ಅನ್ಯಃ—ಮತ್ತೊಬ್ಬನು, ಆಶ್ಚರ್ಯವತ್—ಅದೇ ಪ್ರಕಾರ ಆಶ್ಚರ್ಯಕರವೆಂಬಂತೆ, ಚ—ಕೂಡ, ಏನಮ್—ಈ ಆತ್ಮನನ್ನು, ಅನ್ಯಃ—ಮತ್ತೊಬ್ಬನು, ಶೃಣೋತಿ—ಕೇಳುತ್ತಾನೆ. ಶ್ರುತ್ವಾ—ಕೇಳಿ, ಅಪಿ—ಕೂಡ, ಏನಮ್—ಈ ಆತ್ಮನನ್ನು, ವೇದ—ತಿಳಿಯುವುದು, ನ—ಎಂದೂ ಇಲ್ಲ, ಚ—ಮತ್ತು, ಏವ—ಖಂಡಿತವಾಗಿ, ಕಶ್ಚಿತ್—ಯಾರೊಬ್ಬನು,

**ಕೆಲವರು ಆತ್ಮನನ್ನು ಆಶ್ಚರ್ಯಕರವೆಂಬಂತೆ ನೋಡುತ್ತಾರೆ ಕೆಲವರು ಆಶ್ಚರ್ಯಕರವೆಂಬಂತೆ ವರ್ಣಿಸುತ್ತಾರೆ, ಕೆಲವರು ಆಶ್ಚರ್ಯಕರವೆಂಬಂತೆ ಕೇಳುತ್ತಾರೆ, ಮತ್ತೆ ಕೆಲವರು ಅವನ ಬಗ್ಗೆ ಕೇಳಿದ ಬಳಿಕವೂ ಅವನನ್ನು ಅರಿಯಲಾಗುವುದಿಲ್ಲ.**

**ಭಾವಾರ್ಥ :** ಗೀತೋಪನಿಷತ್ತು ಬಹುಮಟ್ಟಿಗೆ ಉಪನಿಷತ್ತುಗಳ ತತ್ವಗಳನ್ನು ಆಧರಿಸಿರುವುದರಿಂದ, ಕಠೋಪನಿಷತ್ತಿನಲ್ಲಿ ಕೂಡ ಈ ಶ್ಲೋಕವನ್ನು ಕಾಣುವುದು ಆಶ್ಚರ್ಯವೇನಲ್ಲ (1.2.7)

ಶ್ರವಣಯಾಪಿ ಬಹುಭಿರ್ ಯೋ ನ ಲಭ್ಯಃ
ಶೃಣ್ವನ್ತೋಽಪಿ ಬಹವೋ ಯಂ ನ ವಿದ್ಯುಃ।
ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾ
ಆಶ್ಚರ್ಯೋಽಸ್ಯ ಜ್ಞಾತಾ ಕುಶಲಾನುಶಿಷ್ಟಃ॥

ಅಣುರೂಪಿ ಆತ್ಮನು ಒಂದು ದೊಡ್ಡ ಪ್ರಾಣಿಯ ದೇಹದಲ್ಲಿ, ದೊಡ್ಡ ಆಲದ ಮರದ ದೇಹದಲ್ಲಿ ಮತ್ತು ಕೇವಲ ಒಂದು ಅಂಗುಲದಷ್ಟು ಸ್ಥಳವನ್ನು ಆಕ್ರಮಿಸಿರುವ ಲಕ್ಷೋಪಲಕ್ಷ ಕಣ್ಣಿಗೆ ಕಾಣದಷ್ಟು ಸೂಕ್ಷ್ಮವಾದ ಕ್ರಿಮಿಗಳಲ್ಲಿಯೂ ಕೂಡ ಇರುವನು ಎಂಬುದು ನಿಜವಾಗಿಯೂ ಬಹಳ ಆಶ್ಚರ್ಯಕರ ಸಂಗತಿ. ಅಲ್ಪಜ್ಞಾನಿಗಳು ಮತ್ತು ತಪೋನಿಷ್ಠರಲ್ಲದವರು, ಬ್ರಹ್ಮಾಂಡದ ಪ್ರಥಮ ಜೀವನಾದ ಬ್ರಹ್ಮನಿಗೆ ಜ್ಞಾನೋಪದೇಶ ಮಾಡಿದ ಜ್ಞಾನದ ಪರಮಾಧಿಕಾರಿಯೇ ವಿವರಿಸಿದರೂ, ವ್ಯಕ್ತಿಗತ ಅಣುರೂಪಿ ಚೇತನ ಕಿಡಿಯ ಅದ್ಭುತಗಳನ್ನು ಅರಿತುಕೊಳ್ಳಲಾರರು. ವಸ್ತುಗಳ ಸ್ಥೂಲ ಭೌತಿಕ ಕಲ್ಪನೆಯಿಂದಾಗಿ, ಈ ಯುಗದಲ್ಲಿ ಬಹುಜನರು, ಇಷ್ಟೊಂದು ಸಣ್ಣ ಕಣವು ಇಷ್ಟು ಮಹತ್ತಾಗಿಯೂ, ಇಷ್ಟು ಅಲ್ಪವಾಗಿಯೂ ಆಗುವುದು ಹೇಗೆ ಸಾಧ್ಯ ಎಂಬುದನ್ನು ಊಹಿಸಲಾರರು. ಆದ್ದರಿಂದ ಆತ್ಮನು ರಚನೆ ಅಥವಾ ವರ್ಣನೆಯಿಂದ ಅದ್ಭುತವೆಂಬುದಾಗಿ, ಮನುಷ್ಯರು ಕಾಣುತ್ತಾರೆ, ಭೌತಿಕ ಶಕ್ತಿಯಿಂದ ಮೋಹಿತರಾಗಿ, ಇಂದ್ರಿಯ ತೃಪ್ತಿಯ ವಿಷಯಗಳಲ್ಲಿ ತಲ್ಲೀನರಾದ ಜನರಿಗೆ ಸ್ವವಿಚಾರವಿಲ್ಲದೆ ಜನರ ಎಲ್ಲ ಕಾರ್ಯಕಲಾಪಗಳ ಬದುಕಿನ ಹೋರಾಟದಲ್ಲಿ ಅಂತಿಮವಾಗಿ ವಿಫಲವಾಗುತ್ತವೆ ಎಂಬುದು ಸತ್ಯ ಸಂಗತಿಯಾಗಿದ್ದರೂ, ಸ್ವವಿಚಾರದ ಪ್ರಶ್ನೆಯನ್ನು ಅರಿತುಕೊಳ್ಳಲು ಇರುವ ಸಮಯ ಅತ್ಯಲ್ಪ. ಪ್ರಾಯಃ ಆತ್ಮನನ್ನು ಗಮನಿಸಿ, ಭೌತಿಕ ಕ್ಲೇಶಗಳಿಗೆ ಪರಿಹಾರ ಕಂಡುಕೊಳ್ಳುವ ವಿಚಾರವೇ ಇದ್ದಂತಿಲ್ಲ.

ಆತ್ಮನ ಬಗ್ಗೆ ಶ್ರವಣ ಮಾಡುವ ಒಲವಿದ್ದವರು ಸತ್ಸಂಗದಲ್ಲಿ ಉಪನ್ಯಾಸಗಳನ್ನು ಕೇಳಲು ಹೋಗಬಹುದು. ಆದರೆ ಕೆಲವು ಸಲ ಅಜ್ಞಾನದಿಂದ ಪರಮಾತ್ಮನೂ ಅಣುರೂಪಿ ಆತ್ಮನೂ ಒಂದೇ, ಪ್ರಮಾಣದಲ್ಲಿ ವ್ಯತ್ಯಾಸವಿಲ್ಲ ಎಂದು ಅಂಗೀಕರಿಸುವ ತಪ್ಪು ದಾರಿಗೆ ಎಳೆಯಲ್ಪಡುತ್ತಾರೆ. ಪರಮಾತ್ಮನ ಮತ್ತು ಅಣುರೂಪಿ ಆತ್ಮನ ಸ್ಥಾನಮಾನಗಳು ಮತ್ತು ಅವರವರ ಕಾರ್ಯಗಳೂ ಮತ್ತು ಸಂಬಂಧಗಳೂ ಮತ್ತು ಇತರ ಎಲ್ಲ ಮುಖ್ಯಾಮುಖ್ಯ ವಿವರಗಳನ್ನು ಪೂರ್ಣವಾಗಿ ತಿಳಿದುಕೊಂಡಿರುವ ಮನುಷ್ಯನನ್ನು ಕಾಣುವದು ಬಹಳ ದುರ್ಲಭ. ಆತ್ಮನ ಜ್ಞಾನದಿಂದ ವಾಸ್ತವಿಕವಾಗಿ ಪೂರ್ಣಪ್ರಯೋಜನವನ್ನು ಪಡೆದ ಮತ್ತು ಆತ್ಮನ ಸ್ಥಾನವನ್ನು ವಿವಿಧ ದೃಷ್ಟಿಕೋನಗಳಲ್ಲಿ ವರ್ಣಿಸಬಲ್ಲ ಮನುಷ್ಯನನ್ನು ಕಾಣುವುದು ಇನ್ನೂ ದುರ್ಲಭ. ಆದರೆ ಹೇಗೋ ಒಬ್ಬನು ಆತ್ಮನ ವಿಷಯವನ್ನು ಅರಿತುಕೊಂಡರೆ, ಅವನ ಜೀವನವು ಯಶಸ್ವಿಯಾಗುತ್ತದೆ.

ಇತರ ವಾದಗಳಿಂದ ದಾರಿತಪ್ಪದೆ, ಪರಮಾಧಿಕಾರಿಯಾದ ಶ್ರೀಕೃಷ್ಣನಿಂದ ಉಕ್ತವಾದ ಭಗವದ್ಗೀತೆಯ ನಿರೂಪಣೆಗಳನ್ನು ಅಂಗೀಕರಿಸುವುದು ಆತ್ಮನ ವಿಷಯವನ್ನು ಅರಿತುಕೊಳ್ಳುವ ಅತ್ಯಂತ ಸುಲಭ ಮಾರ್ಗ. ಆದರೆ, ಒಬ್ಬನು ಕೃಷ್ಣನನ್ನು ಪರಮ ದೇವೋತ್ತಮ ಪುರುಷನೆಂದು ಒಪ್ಪಿಕೊಳ್ಳುವ ಮುಂಚೆ, ಈ ಜನ್ಮದಲ್ಲಿ ಅಥವಾ ಹಿಂದಿನವುಗಳಲ್ಲಿ ಅಪಾರ ತಪಸ್ಸು ಮತ್ತು ಯಜ್ಞ ಮಾಡಿರುವುದು ಅಗತ್ಯವಾಗಿದೆ. ಆದರೆ, ಕೃಷ್ಣನನ್ನು ತನ್ನ ಶುದ್ಧ ಭಕ್ತನ ನಿರ್ಹೇತುಕ ಅನುಗ್ರಹದಿಂದ ಅರಿಯಬಹುದೇ ವಿನಾ ಬೇರೆ ದಾರಿಯೇ ಇಲ್ಲ.

**ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ ।**
**ತಸ್ಮಾತ್ ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥ ೩೦ ॥**

ದೇಹೀ—ಭೌತಿಕ ದೇಹದ ಒಡೆಯನು, ನಿತ್ಯಮ್—ಎಂದೆಂದಿಗೂ, ಅವಧ್ಯಃ—ಕೊಲ್ಲಲ್ಪಡನು, ಅಯಮ್—ಈ ಆತ್ಮನು, ದೇಹೇ—ದೇಹದಲ್ಲಿ, ಸರ್ವಸ್ಯ—ಪ್ರತಿಯೊಬ್ಬರ, ಭಾರತ—ಹೇ ಭರತ ವಂಶಜನೇ, ತಸ್ಮಾತ್—ಆದ್ದರಿಂದ, ಸರ್ವಾಣಿ—ಎಲ್ಲ, ಭೂತಾನಿ—ಜೀವರುಗಳು (ಹುಟ್ಟಿದ), ನ—ಎಂದೂ, ತ್ವಮ್—ನೀನು, ಶೋಚಿತುಮ್—ಶೋಕಿಸಲು, ಅರ್ಹಸಿ—ಯೋಗ್ಯವು.

**ಹೇ ಭರತ ವಂಶಜನೇ, ದೇಹದಲ್ಲಿ ವಾಸಿಸುತ್ತಿರುವವನು ಎಂದೂ ಕೊಲ್ಲಲ್ಪಡಲಾರನು. ಆದ್ದರಿಂದ ನೀನು ಯಾವ ಜೀವಿಯ ಸಲುವಾಗಿಯೂ ವಿಷಾದಿಸಬೇಕಾಗಿಲ್ಲ.**

**ಭಾವಾರ್ಥ :** ಭಗವಂತನು ನಿರ್ವಿಕಾರನಾದ ಜೀವಾತ್ಮನ ಬಗ್ಗೆ ಉಪದೇಶಗಳನ್ನು ಈಗ ಸಮಾಪನಗೊಳಿಸುತ್ತಾನೆ. ಅಮರನಾದ ಈ ಆತ್ಮನನ್ನು ನಾನಾ ಬಗೆಯಾಗಿ ವರ್ಣಿಸುವಾಗ, ಶ್ರೀಕೃಷ್ಣನು, ಆತ್ಮನು ಅಮರನೆಂದೂ ದೇಹವು ಅನಿತ್ಯವೆಂದೂ ಸಿದ್ಧಪಡಿಸುತ್ತಾನೆ. ಆದರಿಂದ ಕ್ಷತ್ರಿಯನಾದ ಅರ್ಜುನನು, ತನ್ನ ಪಿತಾಮಹ ಭೀಷ್ಮ ಮತ್ತು ಗುರುದ್ರೋಣರು ಯುದ್ಧದಲ್ಲಿ ಮಡಿಯುವರೆಂಬ ಭೀತಿಯಿಂದ ತನ್ನ ಕರ್ತವ್ಯವನ್ನು ಪರಿತ್ಯಜಿಸಬಾರದು. ಶ್ರೀಕೃಷ್ಣನ ಪ್ರಾಮಾಣ್ಯದ ಮೇಲೆ ಭೌತಿಕ ದೇಹದಿಂದ ಭಿನ್ನನಾದ ಆತ್ಮನಿರುವನು ಎಂಬುದನ್ನು ಒಬ್ಬನು ನಂಬಬೇಕೇ ವಿನಾ ಆತ್ಮನೆಂಬ ವಸ್ತುವೊಂದಿಲ್ಲ ಅಥವಾ ರಾಸಾಯನಿಕ ವಸ್ತುಗಳ ಪರಸ್ಪರ ವರ್ತಿಸುವಿಕೆಯಿಂದ ಭೌತಿಕಪಕ್ವತೆಯು ನಿಶ್ಚಿತ ಹಂತದಲ್ಲಿ ಸಜೀವತೆಯ ಲಕ್ಷಣಗಳು ವರ್ಧಿಸುತ್ತವೆ ಎಂಬುದನ್ನಲ್ಲ. ಆತ್ಮನು ಅಮರನಾದರೂ, ಹಿಂಸೆಯನ್ನು ಪ್ರೋತ್ಸಾಹಿಸಿಲ್ಲ, ಆದರೆ ಯುದ್ಧ ಕಾಲದಲ್ಲಿ ಅದರ ವಾಸ್ತವಿಕ ಆವಶ್ಯಕತೆ ಇರುವಾಗ, ಅದನ್ನು ಅಡ್ಡಿಪಡಿಸಿಲ್ಲ. ಅಗತ್ಯತೆಯು ಭಗವದಾಜ್ಞೆಯ ಮೇರೆಗೆ ಸಮರ್ಥನೀಯವಾಗಿರಬೇಕೇ ಹೊರತು, ಮನಬಂದಂತಲ್ಲ.

**ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಮ್ಪಿತುಮರ್ಹಸಿ ।**
**ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ ॥**

ಸ್ವಧರ್ಮಮ್—ಸ್ವಧರ್ಮ ತತ್ತ್ವಗಳನ್ನು, ಅಪಿ—ಕೂಡ, ಚ—ನಿಜವಾಗಿ, ಅವೇಕ್ಷ್ಯ—ಗಮನಿಸಿ, ನ—ಇಲ್ಲ, ವಿಕಮ್ಪಿತುಮ್—ಹಿಂಜರಿಯುವುದು, ಅರ್ಹಸಿ—ನೀನು ಅರ್ಹ, ಧರ್ಮ್ಯಾತ್—ಧರ್ಮತತ್ತ್ವಗಳಿಗಾಗಿ, ಹಿ—ನಿಜವಾಗಿ, ಯುದ್ಧಾತ್—ಯುದ್ಧಕ್ಕಿಂತ, ಶ್ರೇಯಃ—ಉತ್ತಮವಾದ ಕೆಲಸವು, ಅನ್ಯತ್—ಬೇರೆ ಯಾವುದು, ಕ್ಷತ್ರಿಯಸ್ಯ—ಕ್ಷತ್ರಿಯನ, ನ—ಇಲ್ಲ, ವಿದ್ಯತೇ—ಇರುವುದು.

**ಕ್ಷತ್ರಿಯನಾಗಿ ನಿನ್ನ ವಿಶಿಷ್ಟ ಕರ್ತವ್ಯವನ್ನು ಗಮನಿಸಿದಲ್ಲಿ, ಧರ್ಮಯುದ್ಧ ಮಾಡುವುದಕ್ಕಿಂತ ಮೇಲಾದ ಕೆಲಸವು ನಿನಗಿಲ್ಲ ಎಂಬುದನ್ನು ತಿಳಿದುಕೋ. ಆದ್ದರಿಂದ ನೀನು ಹಿಂಜರಿಯಬೇಕಾಗಿಲ್ಲ.**

**ಭಾವಾರ್ಥ:** ಸಮಾಜವ್ಯವಸ್ಥೆಗಳ ನಾಲ್ಕು ವರ್ಣಗಳಲ್ಲಿ, ಒಳ್ಳೆಯ ಆಡಳಿತ ನೀಡಲು ಎರಡನೆಯ ವರ್ಣವು ಕ್ಷತ್ರಿಯ ಎನಿಸಿಕೊಂಡಿದೆ. **ಕ್ಷತ್** ಎಂದರೆ ಹಾನಿ. ಹಾನಿಯಿಂದ ರಕ್ಷಿಸು ವವನು ಕ್ಷತ್ರಿಯನು (**ತ್ರಾಯತೇ**—ರಕ್ಷಣೆ ನೀಡುವುದು). ಕ್ಷತ್ರಿಯನಿಗೆ ಕೊಲ್ಲುವುದಕ್ಕಾಗಿ ಅರಣ್ಯಗಳಲ್ಲಿ ತರಬೇತಿ ಕೊಡಲಾಗುತ್ತದೆ. ಕ್ಷತ್ರಿಯನು ಕಾಡಿನೊಳಗೆ ಹೋಗಿ ಹುಲಿಯೊಡನೆ ಮುಖಾಮುಖಿ ಸಡ್ಡು ಹೊಡೆದು, ಹುಲಿಯೊಡನೆ ತನ್ನ ಕತ್ತಿಯಿಂದ ಹೋರಾಡುತ್ತಿದ್ದನು. ಹುಲಿಯು ಕೊಲ್ಲಲ್ಪಟ್ಟಾಗ, ಅದಕ್ಕೆ ರಾಜಯೋಗ್ಯವಾದ ಅಂತ್ಯಸಂಸ್ಕಾರ ನೀಡಲಾಗುತ್ತಿತ್ತು. ಈ ಪದ್ಧತಿಯು ಇಂದಿಗೂ ಜಯಪುರ ಸಂಸ್ಥಾನದ ಕ್ಷತ್ರಿಯ ರಾಜರುಗಳಿಂದ ಅನುಸರಿಸ ಲ್ಪಡುತ್ತಿದೆ. ಕೆಲವು ಸಮಯಗಳಲ್ಲಿ ಧಾರ್ಮಿಕವಾದ ಹಿಂಸೆಯು ಅಗತ್ಯವಾದ ಅಂಶವಾಗುವು ದರಿಂದ, ಸಡ್ಡು ಹೊಡೆಯಲು ಮತ್ತು ಕೊಲ್ಲಲು ಕ್ಷತ್ರಿಯರಿಗೆ ವಿಶೇಷವಾಗಿ ತರಬೇತಿ ನೀಡ ಲಾಗುತ್ತದೆ. ಆದ್ದರಿಂದ ಕ್ಷತ್ರಿಯರು ನೇರವಾಗಿ ಸನ್ಯಾಸಾಶ್ರಮವನ್ನು ಅಥವಾ ವೈರಾಗ್ಯ ವನ್ನು ಸ್ವೀಕರಿಸಲು ಉದ್ದೇಶಿತವಾಗಿಲ್ಲ. ರಾಜಕೀಯದಲ್ಲಿ ಅಹಿಂಸೆಯು ಕೇವಲ ಒಂದು ರಾಜತಾಂತ್ರಿಕತೆಯಾಗಬಹುದೇ ವಿನಾ ಅದು ಎಂದಿಗೂ ಒಂದು ತತ್ತ್ವವಾಗುವುದಿಲ್ಲ. ಧರ್ಮ ಶಾಸ್ತ್ರಗಳಲ್ಲಿ ಹೀಗೆ ಹೇಳಿದೆ:

ಆಹವೇಷು ಮಿಥೋಽನ್ಯೋಽನ್ಯಂ ಜಿಘಾಂಸನ್ತೋ ಮಹೀಕ್ಷಿತಃ।
ಯುದ್ಧಮಾನಾಃ ಪರಂ ಶಕ್ತ್ಯಾ ಸ್ವರ್ಗಂ ಯಾನ್ತಿ ಅಪರಾಙ್ಮುಖಾಃ॥
ಯಜ್ಞೇಷು ಪಶವೋ ಬ್ರಹ್ಮನ್ ಹನ್ಯನ್ತೇ ಸತತಂ ದ್ವಿಜೈಃ।
ಸಂಸ್ಕೃತಾಃ ಕಿಲ ಮನ್ತ್ರೈಶ್ಚ ತೇಽಪಿ ಸ್ವರ್ಗಮ್ ಅವಾಪ್ನುವನ್॥

"ಹೋಮಾಗ್ನಿಯಲ್ಲಿ ಪಶುಬಲಿ ನೀಡಿ ಬ್ರಾಹ್ಮಣರು ಸ್ವರ್ಗಕ್ಕೆ ಹೋಗುವಂತೆ, ರಾಜ ಅಥವಾ ಕ್ಷತ್ರಿಯನು ತನ್ನ ಬಗ್ಗೆ ಅಸೂಯಾಪರನಾದ ಇನ್ನೊಬ್ಬ ರಾಜನೊಡನೆ ರಣರಂಗದಲ್ಲಿ ಯುದ್ಧ ಮಾಡುವಾಗ ಮಡಿದನಂತರ ಸ್ವರ್ಗಾದಿಲೋಕಗಳಿಗೆ ಅರ್ಹನು." ಆದ್ದರಿಂದ ಧರ್ಮ ತತ್ತ್ವಗಳ ಸಲುವಾಗಿ ರಣರಂಗದಲ್ಲಿ ಕೊಲ್ಲುವುದು ಅಥವಾ ಯಜ್ಞಾಗ್ನಿಯಲ್ಲಿ ಪಶುಗಳನ್ನು ಕೊಲ್ಲುವುದು ಸರ್ವಥಾ ಹಿಂಸಾಕೃತ್ಯಗಳೆಂದು ಪರಿಗಣಿಸಲ್ಪಟ್ಟಿಲ್ಲ, ಏಕೆಂದರೆ ಈ ಧರ್ಮ ತತ್ತ್ವಗಳಿಂದ ಪ್ರತಿಯೊಬ್ಬನೂ ಪ್ರಯೋಜನ ಪಡೆಯುತ್ತಾನೆ. ಯಜ್ಞದಲ್ಲಿ ಬಲಿಗೊಟ್ಟ ಪ್ರಾಣಿಯು ಉತ್ತರೋತ್ತರ ಉತ್ಕ್ರಾಂತಿ ವಿಧಾನದಲ್ಲಿ ಸಾಗದೆ, ಕೂಡಲೇ ಮಾನವಜನ್ಮ

ವನ್ನು ಪಡೆಯುತ್ತದೆ, ಮತ್ತು ಯಜ್ಞದಲ್ಲಿ ಬಲಿಕೊಡುವ ಬ್ರಾಹ್ಮಣರು ಸ್ವರ್ಗಾದಿಲೋಕಗಳನ್ನು ಸೇರುವಂತೆ, ರಣರಂಗದಲ್ಲಿ ಮಡಿದ ಕ್ಷತ್ರಿಯರು ಕೂಡ ಸ್ವರ್ಗಾದಿಲೋಕಗಳನ್ನು ಪಡೆಯುತ್ತಾರೆ.

ಸ್ವಧರ್ಮಗಳು, ಎಂದರೆ ವಿಶಿಷ್ಟ ಕರ್ತವ್ಯಗಳು, ಎರಡು ವಿಧವಾಗಿವೆ. ಮುಕ್ತನಾಗದಿರುವವರೆಗೆ ಒಬ್ಬನು ಮೋಕ್ಷಪ್ರಾಪ್ತಿಗಾಗಿ ತನ್ನ ನಿರ್ದಿಷ್ಟ ದೇಹದ ಕರ್ತವ್ಯಗಳನ್ನು ಧರ್ಮತತ್ವಗಳಿಗನುಸಾರವಾಗಿ ಆಚರಿಸಲೇಬೇಕು. ಮೋಕ್ಷಾನಂತರ, ಒಬ್ಬನ ಸ್ವಧರ್ಮವು—ವಿಶಿಷ್ಟ ಕರ್ತವ್ಯವು—ಆಧ್ಯಾತ್ಮಿಕವಾಗುತ್ತದೆ ಮತ್ತು ಭೌತಿಕ, ದೈಹಿಕ ಕಲ್ಪನೆಯಲ್ಲಿರುವುದಿಲ್ಲ. ಜೀವನದ ದೈಹಿಕ ಕಲ್ಪನೆಯಲ್ಲಿ ಬ್ರಾಹ್ಮಣರಿಗೆ ಮತ್ತು ಕ್ಷತ್ರಿಯರಿಗೆ ವಿಶಿಷ್ಟ ಕರ್ತವ್ಯಗಳಿರುತ್ತವೆ ಮತ್ತು ಅಂಥ ಕರ್ತವ್ಯಗಳು ಅನಿವಾರ್ಯವಾಗಿವೆ. ಸ್ವಧರ್ಮವು ಭಗವತ್ಪ್ರಣೀತ ಮತ್ತು ಇದು ನಾಲ್ಕನೆಯ ಅಧ್ಯಾಯದಲ್ಲಿ ಸ್ಪಷ್ಟಗೊಳಿಸಲ್ಪಡುತ್ತದೆ. ದೈಹಿಕ ಮಟ್ಟದಲ್ಲಿ ಸ್ವಧರ್ಮವು ವರ್ಣಾಶ್ರಮ ಧರ್ಮ ಎನಿಸಿಕೊಂಡಿದೆ. ಇದು ಮಾನವನ ಆಧ್ಯಾತ್ಮಿಕ ಜ್ಞಾನಕ್ಕೆ ಸೋಪಾನವು. ಮಾನವ ನಾಗರೀಕತೆಯು ವರ್ಣಾಶ್ರಮ ಧರ್ಮದ ಹಂತದಿಂದ ಅಥವಾ ಲಭ್ಯವಾದ ದೇಹದ ವಿಶಿಷ್ಟ ಪ್ರಾಕೃತ ಗುಣಗಳಿಂದ ಸೀಮಿತವಾದ ವಿಶಿಷ್ಟ ಕರ್ತವ್ಯಗಳೊಂದಿಗೆ ಪ್ರಾರಂಭವಾಗುತ್ತದೆ. ಉತ್ತಮ ಅಧಿಕಾರಿಗಳ ಆಜ್ಞೆಗಳ ಅನುಸಾರ ಯಾವುದೇ ಕ್ರಿಯಾಕ್ಷೇತ್ರದಲ್ಲಿ ತನ್ನ ವಿಶಿಷ್ಟ ಕರ್ತವ್ಯಗಳನ್ನು ನಿರ್ವಹಿಸುವುದು ಒಬ್ಬನನ್ನು ಜೀವನದ ಉತ್ತಮ ಸ್ಥಾನಕ್ಕೆ ಏರಿಸಲು ಸಹಾಯಕವಾಗುತ್ತದೆ.

**ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಮ್ ।**
**ಸುಖಿನಃ ಕ್ಷತ್ರಿಯಾಃ ಪಾರ್ಥ ಲಭನ್ತೇ ಯುದ್ಧಮೀದೃಶಮ್ ॥ ೩೨ ॥**

ಯದೃಚ್ಛಯಾ—ತಾನಾಗಿಯೇ, ಚ—ಮತ್ತು, ಉಪಪನ್ನಮ್—ಆಗಮಿಸಿದ, ಸ್ವರ್ಗ—ಸ್ವರ್ಗಲೋಕಗಳ, ದ್ವಾರಮ್—ಬಾಗಿಲು, ಅಪಾವೃತಮ್—ವಿಶಾಲವಾಗಿ ತೆರೆದ, ಸುಖಿನಃ—ಬಹಳ ಸುಖಿಗಳು, ಕ್ಷತ್ರಿಯಾಃ—ರಾಜ ವರ್ಗದವರು, ಪಾರ್ಥ—ಹೇ ಪೃಥಾ ಪುತ್ರನೇ, ಲಭನ್ತೇ—ಸಾಧಿಸುವರು, ಯುದ್ಧಮ್—ಯುದ್ಧವನ್ನು, ಈದೃಶಮ್—ಇಂಥ.

**ಹೇ ಪಾರ್ಥ, ತಮಗಾಗಿ ಸ್ವರ್ಗದ ಬಾಗಿಲುಗಳನ್ನು ತೆರೆಯುವ ಇಂತಹ ಅಪ್ರಾರ್ಥಿತ ಯುದ್ಧಾವಕಾಶಗಳು ಬರುವ ಕ್ಷತ್ರಿಯರೇ ಸುಖಿಗಳು.**

**ಭಾವಾರ್ಥ :** "ಈ ಯುದ್ಧದಲ್ಲಿ ನಾನು ಒಳ್ಳೆಯದು ಏನನ್ನೂ ಕಾಣೆನು. ಅದು ನರಕದಲ್ಲಿ ನಿರಂತರವಾಸಕ್ಕೆ ಕಾರಣವಾಗುತ್ತದೆ," ಎಂದು ನುಡಿದ ಅರ್ಜುನನ ವರ್ತನೆಯನ್ನು ವಿಶ್ವದ ಪರಮ ಗುರುವಾಗಿ, ಶ್ರೀಕೃಷ್ಣನು ತೆಗಳುತ್ತಾನೆ. ಅರ್ಜುನನಿಂದ ಅಂಥ ಹೇಳಿಕೆಗಳಿಗೆ ಅಜ್ಞಾನವು ಮಾತ್ರವೇ ಕಾರಣ. ತನ್ನ ವಿಶಿಷ್ಟ ಕರ್ತವ್ಯದ ನಿರ್ವಹಣೆಯಲ್ಲಿ ಅಹಿಂಸಕನಾಗ ಬಯಸಿದ್ದನು. ಕ್ಷತ್ರಿಯನು ಯುದ್ಧಭೂಮಿಯಲ್ಲಿ ನಿಂತು ಅಹಿಂಸಕನಾಗುವುದು ಮೂರ್ಖರ ವಾದ. ವೇದವ್ಯಾಸರ ತಂದೆಯಾದ ಮಹರ್ಷಿ ಪರಾಶರರ ಧಾರ್ಮಿಕ ನಿಯಮಾವಳಿ ಅಥವಾ ಪರಾಶರ ಸ್ಮೃತಿಯಲ್ಲಿ ಹೀಗೆ ಹೇಳಿದೆ:

ಕ್ಷತ್ರಿಯೋಹಿ ಪ್ರಜಾ ರಕ್ಷನ್ ಶಸ್ತ್ರಪಾಣಿಃ ಪ್ರದಣ್ಡಯನ್।
ನಿರ್ಜಿತ್ಯ ಪರ ಸೈನ್ಯಾದಿ ಕ್ಷಿತಿಂ ಧರ್ಮೇಣ ಪಾರಯೇತ್॥

"ಕ್ಷತ್ರಿಯನ ಕರ್ತವ್ಯವು ಪ್ರಜೆಗಳನ್ನು ಎಲ್ಲ ತೊಂದರೆಗಳಿಂದಲೂ ರಕ್ಷಿಸುವುದಾಗಿರುತ್ತದೆ. ಮತ್ತು ಆ ಕಾರಣದಿಂದ ಉಚಿತ ಸಂದರ್ಭಗಳಲ್ಲಿ ನ್ಯಾಯ ಮತ್ತು ಸುವ್ಯವಸ್ಥೆಗಾಗಿ ಆವನು ಹಿಂಸೆಯನ್ನು ಪ್ರಯೋಗಿಸಬೇಕಾಗುತ್ತದೆ. ಆದ್ದರಿಂದ ಅವನು ವೈರಿ ರಾಜರ ಸೈನಿಕರನ್ನು ಆಕ್ರಮಣ ಮಾಡಬೇಕಾಗುತ್ತದೆ, ಮತ್ತು ಹೀಗೆ ಧರ್ಮ ತತ್ವಗಳೊಡನೆ ಜಗತ್ತಿನ ರಾಜ್ಯಭಾರ ಮಾಡಬೇಕಾಗುತ್ತದೆ."

ಈ ಎಲ್ಲ ಅಂಶಗಳನ್ನು ಗಮನಿಸಲಾಗಿ, ಅರ್ಜುನನು ಯುದ್ಧದಿಂದ ವಿಮುಖನಾಗುವುದಕ್ಕೆ ಕಾರಣವೇ ಇರಲಿಲ್ಲ. ತನ್ನ ವೈರಿಗಳನ್ನು ಗೆದ್ದರೆ, ಅವನು ರಾಜ್ಯವನ್ನು ಭೋಗಿಸುತ್ತಾನೆ; ಯುದ್ಧದಲ್ಲಿ ಮಡಿದರೆ, ಅವನಿಗಾಗಿ ವಿಶಾಲವಾಗಿ ತೆರೆಯಲ್ಪಟ್ಟಿರುವ ಸ್ವರ್ಗಲೋಕಗಳಿಗೆ ಏರಿಸಲ್ಪಡುತ್ತಾನೆ. ಉಭಯ ಸಂದರ್ಭದಲ್ಲಿಯೂ ಯುದ್ಧವು ಅವನ ಹಿತಕ್ಕಾಗಿಯೇ ಇರುವುದು.

**ಅಥ ಚೇತ್ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ ।**
**ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ ॥ ೩೩ ॥**

ಅಥ—ಆದ್ದರಿಂದ, ಚೇತ್—ಒಂದು ವೇಳೆ, ತ್ವಮ್—ನೀನು, ಇಮಮ್—ಈ, ಧರ್ಮ್ಯಮ್—ಧಾರ್ಮಿಕ ಕರ್ತವ್ಯವಾಗಿ, ಸಂಗ್ರಾಮಮ್—ಯುದ್ಧವನ್ನು, ನ—ಇಲ್ಲ, ಕರಿಷ್ಯಸಿ—ಮಾಡುವುದು, ತತಃ—ಆಗ, ಸ್ವಧರ್ಮಮ್—ನಿನ್ನ ಧಾರ್ಮಿಕ ಕರ್ತವ್ಯವನ್ನು, ಕೀರ್ತಿಮ್—ಕೀರ್ತಿಯನ್ನು, ಚ—ಕೂಡ, ಹಿತ್ವಾ—ಕಳೆದುಕೊಂಡು, ಪಾಪಮ್—ಪಾಪವನ್ನು, ಅವಾಪ್ಸ್ಯಸಿ—ಗಳಿಸುವೆ.

**ನಿನ್ನ ಧಾರ್ಮಿಕ ಕರ್ತವ್ಯವಾದ ಯುದ್ಧವನ್ನು ಮಾಡದಿದ್ದಲ್ಲಿ, ನಿನ್ನ ಕರ್ತವ್ಯಗಳ ಉಪೇಕ್ಷೆಗಾಗಿ ನೀನು ಖಂಡಿತ ಪಾಪಗಳಿಗೆ ಗುರಿಯಾಗುವೆ ಮತ್ತು ಹೀಗೆ ಯೋಧನೆಂಬ ನಿನ್ನ ಕೀರ್ತಿಯನ್ನು ಕಳೆದುಕೊಳ್ಳುವೆ.**

**ಭಾವಾರ್ಥ :** ಅರ್ಜುನನು ಪ್ರಸಿದ್ಧ ಯೋಧನಾಗಿದ್ದನು. ಅವನು, ಶಿವನೂ ಸೇರಿದಂತೆ ಅನೇಕ ಮಹಾದೇವತೆಗಳೊಂದಿಗೆ ಯುದ್ಧಮಾಡಿ ಕೀರ್ತಿಯನ್ನು ಸಾಧಿಸಿದ್ದನು. ಅರ್ಜುನನು ಬೇಡನ ವೇಷದಲ್ಲಿನ ಶಿವನೊಡನೆ ಯುದ್ಧಮಾಡಿ ಪರಾಜಯಗಳಿಸಿದ ಬಳಿಕ ಅರ್ಜುನನು ಶಿವನನ್ನು ಸಂಪ್ರೀತನನ್ನಾಗಿಸಿ ಪಾಶುಪತಾಸ್ತ್ರವನ್ನು ಬಹುಮಾನವಾಗಿ ಪಡೆದುಕೊಂಡನು. ಅವನು ಮಹಾಯೋಧನೆಂಬುದು ಎಲ್ಲರಿಗೂ ತಿಳಿದಿತ್ತು. ದ್ರೋಣಾಚಾರ್ಯರೂ ಕೂಡ ಅವನಿಗೆ ವರಗಳನ್ನು ನೀಡಿದರು ಮತ್ತು ಅವನಿಗೆ ತನ್ನ ಗುರುವನ್ನೂ ಕೊಲ್ಲಬಲ್ಲ ವಿಶೇಷ ಅಸ್ತ್ರವನ್ನು ನೀಡಿದ್ದರು. ಹೀಗೆ ತನ್ನ ಸ್ವೀಕೃತ ತಂದೆ ಸ್ವರ್ಗಾಧಿಪ ಇಂದ್ರನಿಂದಲೂ ಸೇರಿದಂತೆ ಅನೇಕ ಮಹಾಧಿಕಾರಿಗಳು ನೀಡಿದ, ಸೈನ್ಯಕ್ಕೆ ಸಂಬಂಧಿಸಿದ ಆನೇಕ ಪ್ರಶಸ್ತಿಗಳನ್ನು ಪಡೆದವನಾಗಿದ್ದನು. ಕ್ಷತ್ರಿಯನಾಗಿ ಅವನು ಯುದ್ಧವನ್ನು ತ್ಯಜಿಸಿದಲ್ಲಿ ತನ್ನ ವಿಶಿಷ್ಟ ಕರ್ತವ್ಯವನ್ನು ನಿರ್ಲಕ್ಷಿಸುವುದಲ್ಲದೆ, ಅವನು ತನ್ನ ಎಲ್ಲ ಕೀರ್ತಿ ಮತ್ತು ಒಳ್ಳೆಯ ಹೆಸರನ್ನೂ ಕಳೆದುಕೊಳ್ಳುವನು ಮತ್ತು ಹೀಗೆ ನರಕಕ್ಕೆ ತನ್ನ ರಾಜಮಾರ್ಗವನ್ನು ಸಿದ್ಧಮಾಡಿ

ಕೊಳ್ಳುತ್ತಿದ್ದನು. ಅರ್ಥಾತ್ ಯುದ್ಧ ಮಾಡದಿರುವುದರಿಂದ ಅವನು ನರಕಕ್ಕೆ ಹೋಗುತ್ತಿದ್ದನೇ ಹೊರತು, ಯುದ್ಧ ಮಾಡುವುದರಿಂದ ಅಲ್ಲ.

**ಅಕೀರ್ತಿಂಚಾಪಿ ಭೂತಾನಿ ಕಥಯಿಷ್ಯನ್ತಿ ತೇಽವ್ಯಯಾಮ್ ।**
**ಸಮ್ಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ ॥ ೩೪ ॥**

ಅಕೀರ್ತಿಮ್—ಅಪಕೀರ್ತಿಯು, ಚ—ಕೂಡ, ಅಪಿ—ಅದಕ್ಕೂ ಮಿಗಿಲಾಗಿ, ಭೂತಾನಿ—ಎಲ್ಲ ಜನರು, ಕಥಯಿಷ್ಯನ್ತಿ—ಮಾತನಾಡಿಕೊಳ್ಳುತ್ತಾರೆ, ತೇ—ನಿನ್ನ ಬಗ್ಗೆ, ಅವ್ಯಯಾಮ್—ಎಂದೆಂದಿಗೂ, ಸಮ್ಭಾವಿತಸ್ಯ—ಗೌರವಾನ್ವಿತ ವ್ಯಕ್ತಿಗೆ, ಚ—ಕೂಡ, ಅಕೀರ್ತಿಃ—ಅಪಕೀರ್ತಿಯು, ಮರಣಾತ್—ಮರಣಕ್ಕಿಂತ, ಅತಿರಿಚ್ಯತೇ—ಹೆಚ್ಚಿನದಾಗುತ್ತದೆ.

**ಜನರು ಸದಾ ನಿನ್ನ ಅಪಕೀರ್ತಿಯನ್ನು ಕುರಿತು ಮಾತನಾಡುತ್ತಾರೆ, ಮತ್ತು ಗೌರವಾನ್ವಿತ ವ್ಯಕ್ತಿಗೆ ಅಪಮಾನವು ಮರಣಕ್ಕಿಂತಲೂ ಹೆಚ್ಚು.**

**ಭಾವಾರ್ಥ :** ಅರ್ಜುನನಿಗೆ ಭಗವಾನ್ ಕೃಷ್ಣನು ಮಿತ್ರನೂ ಮತ್ತು ತತ್ವದರ್ಶಿಯೂ ಆಗಿ, ಅರ್ಜುನನು ಯುದ್ಧ ನಿರಾಕರಣೆ ಮಾಡಿದ ಬಗ್ಗೆ ತನ್ನ ಅಂತಿಮ ನಿರ್ಣಯವನ್ನು ಈಗ ನೀಡುತ್ತಾನೆ. ಭಗವಂತನು ಹೇಳಿದನು—"ಹೇ ಅರ್ಜುನ, ಯುದ್ಧ ಪ್ರಾರಂಭವಾಗುವ ಮೊದಲೇ ನೀನು ರಣರಂಗವನ್ನು ತ್ಯಜಿಸಿದರೆ, ಜನರು ನಿನ್ನನ್ನು ಹೇಡಿ ಎಂದು ಕರೆಯುತ್ತಾರೆ. ಜನರು ನಿನ್ನನ್ನು ನಿಂದಿಸಿದರೂ ಚಿಂತೆಯಿಲ್ಲ, ರಣಭೂಮಿಯನ್ನು ಬಿಟ್ಟೋಡಿ ನಿನ್ನ ಜೀವ ಉಳಿಸಿಕೊಳ್ಳುವೆ ಎಂದರೆ, ಆಗ ನೀನು ಯುದ್ಧದಲ್ಲಿ ಸಾಯುವುದೇ ಮೇಲು ಎಂಬುದು ನನ್ನ ಸಲಹೆ. ನಿನ್ನಂಥ ಗೌರವಾನ್ವಿತ ವ್ಯಕ್ತಿಗೆ ಅಪಕೀರ್ತಿಯು ಮರಣಕ್ಕಿಂತಲೂ ಕೀಳು. ಆದ್ದರಿಂದ, ನೀನು ನಿನ್ನ ಜೀವಕ್ಕಾಗಿ ಓಡಿಹೋಗಕೂಡದು; ಯುದ್ಧದಲ್ಲಿ ಮಡಿಯುವುದೇ ಮೇಲು. ಅದು, ನನ್ನ ಮಿತ್ರತ್ವವನ್ನು ದುರುಪಯೋಗಪಡಿಸಿಕೊಂಡ ಅಪಕೀರ್ತಿಯಿಂದಲೂ ಮತ್ತು ಸಮಾಜದಲ್ಲಿ ನಿನ್ನ ಪ್ರತಿಷ್ಠೆಯನ್ನು ಕಳೆದುಕೊಳ್ಳುವುದರಿಂದಲೂ ಕಾಪಾಡುತ್ತದೆ."

ಹೀಗೆ ಅರ್ಜುನನು ಯುದ್ಧದಲ್ಲಿ ಮಡಿಯಬೇಕು, ರಣಾಂಗಣವನ್ನು ಬಿಟ್ಟು ಓಡಕೂಡದು ಎಂಬುದು ಶ್ರೀಕೃಷ್ಣನ ಅಂತಿಮ ನಿರ್ಣಯ.

**ಭಯಾದ್ ರಣಾದುಪರತಂ ಮಂಸ್ಯನ್ತೇ ತ್ವಾಂ ಮಹಾರಥಾಃ ।**
**ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಮ್ ॥ ೩೫ ॥**

ಭಯಾತ್—ಭಯದಿಂದ, ರಣಾತ್—ಯುದ್ಧ ಭೂಮಿಯಿಂದ, ಉಪರತಮ್—ತೆರವು ಮಾಡುವುದು, ಮಂಸ್ಯನ್ತೇ—ಎಂದು ಅವರು ಭಾವಿಸುತ್ತಾರೆ, ತ್ವಾಮ್—ನೀನು, ಮಹಾರಥಾಃ—ಮಹಾರಥರು, ಏಷಾಮ್—ಯಾರಿಗಾಗಿ, ಚ—ಕೂಡ, ತ್ವಾಮ್—ನೀನು, ಬಹುಮತಃ—ಮಹಾ ಮಾನ್ಯತೆಯಲ್ಲಿ, ಭೂತ್ವಾ—ಆಗಿದ್ದು, ಯಾಸ್ಯಸಿ—ನೀನು ಹೋಗುವೆ, ಲಾಘವಮ್—ಮಾನ್ಯತೆಯಲ್ಲಿ ಕಡಿಮೆಯನ್ನು.

**ನಿನ್ನ ಹೆಸರು ಮತ್ತು ಕೀರ್ತಿಯನ್ನು ಬಹುವಾಗಿ ಮಾನ್ಯಮಾಡಿರುವ ಮಹಾ ರಥಿಕರು ನೀನು ಭಯದಿಂದ ಮಾತ್ರವೇ ರಣರಂಗವನ್ನು ತ್ಯಜಿಸಿರುವೆ ಎಂದು ಭಾವಿಸುತ್ತಾರೆ, ಮತ್ತು ಅವರು ನಿನ್ನನ್ನು ಅಲ್ಪವಾಗಿ ಪರಿಗಣಿಸುತ್ತಾರೆ.**

**ಭಾವಾರ್ಥ :** "ನಿನ್ನ ಸೋದರರ ಮತ್ತು ಪಿತಾಮಹರ ಬಗ್ಗೆ ಕನಿಕರದಿಂದ ಯುದ್ಧ ಭೂಮಿಯನ್ನು ತ್ಯಜಿಸಿರುವೆ ಎಂದು ಮಹಾಸೇನಾನಿಗಳಾದ ದುರ್ಯೋಧನ, ಕರ್ಣ ಮತ್ತು ಸಮಕಾಲೀನರಾದ ಇತರರು ಭಾವಿಸುವರೆಂದು ನೀನು ತಿಳಿಯಬೇಡ. ನಿನ್ನ ಪ್ರಾಣ ಭಯ ದಿಂದ ನೀನು ತ್ಯಜಿಸಿರುವೆ ಎಂದು ಅವರು ಭಾವಿಸುತ್ತಾರೆ. ಮತ್ತು ಹೀಗೆ ನಿನ್ನ ವ್ಯಕ್ತಿತ್ವದ ಬಗ್ಗೆ ಅವರ ಉನ್ನತ ಮಾನ್ಯತೆಯು ನರಕ ಪಾಲಾಗುತ್ತದೆ,"ಎಂದು ಶ್ರೀಕೃಷ್ಣನು ಅರ್ಜುನನಿಗೆ ತನ್ನ ನಿರ್ಣಯ ತಿಳಿಸುವುದನ್ನು ಮುಂದುವರಿಸಿದನು.

**ಅವಾಚ್ಯವಾದಾಂಶ್ಚ ಬಹೂನ್ ವದಿಷ್ಯನ್ತಿ ತವಾಹಿತಾಃ ।**
**ನಿನ್ದನ್ತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಮ್ ॥ ೩೬ ॥**

ಅವಾಚ್ಯ—ಕ್ರೂರ, ವಾದಾನ್—ಕೃತ್ರಿಮ ರಚಿತ ಶಬ್ದಗಳನ್ನು, ಚ—ಕೂಡ, ಬಹೂನ್—ಅನೇಕ, ವದಿಷ್ಯನ್ತಿ—ಹೇಳುವರು, ತವ—ನಿನ್ನ, ಅಹಿತಾಃ—ಶತ್ರುಗಳು, ನಿನ್ದನ್ತಃ—ಹಳಿಯುತ್ತಿರುವಾಗ, ತವ—ನಿನ್ನ, ಸಾಮರ್ಥ್ಯಮ್—ಸಾಮರ್ಥ್ಯವನ್ನು, ತತಃ—ಅದಕ್ಕಿಂತ, ದುಃಖತರಂ—ಹೆಚ್ಚಾದ ನೋವು, ನು—ಅಲ್ಲದೆ, ಕಿಮ್—ಇನ್ನೇನಿದೆ.

**ನಿನ್ನ ವೈರಿಗಳು ನಾನಾ ರೀತಿಯ ಕ್ರೂರವಾದ ಮಾತುಗಳಿಂದ ನಿನ್ನನ್ನು ವರ್ಣಿಸುತ್ತಾರೆ ಮತ್ತು ನಿನ್ನ ಸಾಮರ್ಥ್ಯವನ್ನು ತುಚ್ಛೀಕರಿಸುತ್ತಾರೆ. ನಿನಗೆ ಇದಕ್ಕಿಂತ ಹೆಚ್ಚು ದುಃಖಕರವಾದುದು ಬೇರೇನಿದೆ?**

**ಭಾವಾರ್ಥ :** ಪ್ರಾರಂಭದಲ್ಲಿ ಅರ್ಜುನನ ಬೇಡವಾದ ಅನುಕಂಪದ ಮಾತುಗಳಿಂದ ಕೃಷ್ಣನಿಗೆ ಆಶ್ಚರ್ಯವಾಯಿತು ಮತ್ತು ಅವನ ಅನುಕಂಪವು ಅನಾರ್ಯರಿಗೆ ತಕ್ಕದ್ದು ಎಂದು ಶ್ರೀಕೃಷ್ಣನು ವರ್ಣಿಸಿದನು. ಈಗ ಅನೇಕ ಮಾತುಗಳಿಂದ, ಅರ್ಜುನನ ಅನುಕಂಪದ ವಿರುದ್ಧವಾಗಿ ತನ್ನ ನಿರೂಪಣೆಗಳನ್ನು ಶ್ರೀಕೃಷ್ಣನು ಸಾಧಿಸಿರುವನು.

**ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಮ್ ।**
**ತಸ್ಮಾದುತ್ತಿಷ್ಠ ಕೌನ್ತೇಯ ಯುದ್ಧಾಯ ಕೃತನಿಶ್ಚಯಃ ॥ ೩೭ ॥**

ಹತಃ—ಕೊಲ್ಲಲ್ಪಟ್ಟು, ವಾ—ಅಥವಾ, ಪ್ರಾಪ್ಸ್ಯಸಿ—ನೀನು ಹೊಂದುವೆ, ಸ್ವರ್ಗಮ್—ಸ್ವರ್ಗ ಲೋಕವನ್ನು, ಜಿತ್ವಾ—ಗೆಲ್ಲುವುದರಿಂದ, ವಾ—ಅಥವಾ, ಭೋಕ್ಷ್ಯಸೇ—ನೀನು ಅನುಭವಿಸುವೆ, ಮಹೀಮ್—ಪ್ರಪಂಚವನ್ನು, ತಸ್ಮಾತ್—ಆದ್ದರಿಂದ, ಉತ್ತಿಷ್ಠ—ಎದ್ದೇಳು, ಕೌನ್ತೇಯ—ಹೇ ಕುಂತೀ ಪುತ್ರನೇ, ಯುದ್ಧಾಯ—ಯುದ್ಧ ಮಾಡಲು, ಕೃತ—ಗೊತ್ತು ಮಾಡಿದ, ನಿಶ್ಚಯಃ—ನಿಶ್ಚಯದಲ್ಲಿ.

**ಹೇ ಕುಂತೀ ಪುತ್ರನೇ, ನೀನು ರಣರಂಗದಲ್ಲಿ ಕೊಲ್ಲಲ್ಪಡುವೆ ಮತ್ತು ಸ್ವರ್ಗ ಲೋಕಗಳನ್ನು ಹೊಂದುವೆ, ಅಥವಾ ನೀನು ಗೆಲ್ಲುವೆ ಮತ್ತು ಭೂಲೋಕದ ರಾಜ್ಯ ಭಾರ ಮಾಡುವೆ. ಆದ್ದರಿಂದ, ದೃಢಮನಸ್ಕನಾಗಿ ಏಳು ಮತ್ತು ಯುದ್ಧ ಮಾಡು.**

**ಭಾವಾರ್ಥ :** ಅರ್ಜುನನ ಪಕ್ಷಕ್ಕೆ ಜಯದ ನಿಶ್ಚಯವಿಲ್ಲದಿದ್ದರೂ, ಅವನು ಯುದ್ಧ ಮಾಡಲೇಬೇಕಾಗಿತ್ತು. ಏಕೆಂದರೆ ಅವನು ಅಲ್ಲಿ ಕೊಲ್ಲಲ್ಪಟ್ಟರೂ ಅವನು ಸ್ವರ್ಗೀಯ ಲೋಕಗಳಿಗೆ ಏರಿಸಲ್ಪಡುತ್ತಿದ್ದನು.

**ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ ।**
**ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥ ೩೮ ॥**

ಸುಖ—ಸುಖ, ದುಃಖೇ—ಮತ್ತು ದುಃಖ, ಸಮೇ—ಸಮಚಿತ್ತದಲ್ಲಿ, ಕೃತ್ವಾ—ಹಾಗೆ ಮಾಡಿಕೊಂಡು, ಲಾಭ-ಅಲಾಭೌ—ಲಾಭ ಮತ್ತು ನಷ್ಟವನ್ನು, ಜಯ-ಅಜಯೌ—ಗೆಲುವು ಮತ್ತು ಸೋಲು, ತತಃ—ಅನಂತರ, ಯುದ್ಧಾಯ—ಯುದ್ಧ ನಿಮಿತ್ತ, ಯುಜ್ಯಸ್ವ—ಯುದ್ಧ ನಿರತನಾಗು, ನ—ಎಂದೂ ಇಲ್ಲ, ಏವಮ್—ಈ ರೀತಿಯಲ್ಲಿ, ಪಾಪಮ್—ಪಾಪದ ಪ್ರತಿಕ್ರಿಯೆಯನ್ನು, ಅವಾಪ್ಸ್ಯಸಿ—ನೀನು ಹೊಂದುವೆ.

**ಸುಖ ಅಥವಾ ದುಃಖ, ಲಾಭ ಅಥವಾ ನಷ್ಟ, ಗೆಲುವು ಅಥವಾ ಸೋಲು—ಯಾವುದನ್ನೂ ಲೆಕ್ಕಿಸದೆ ಯುದ್ಧ ನಿಮಿತ್ತ ನೀನು ಯುದ್ಧ ಮಾಡು. ಹಾಗೆ ಮಾಡುವುದರಿಂದ ನೀನು ಎಂದಿಗೂ ಪಾಪಕ್ಕೆ ಗುರಿಯಾಗುವುದಿಲ್ಲ.**

**ಭಾವಾರ್ಥ :** ತಾನು ಯುದ್ಧವನ್ನು ಆಶಿಸುವ ಕಾರಣ, ಯುದ್ಧ ನಿಮಿತ್ತ ಅರ್ಜುನನು ಯುದ್ಧವನ್ನು ಮಾಡಲೇಬೇಕೆಂದು ಶ್ರೀಕೃಷ್ಣನು ಈಗ ನೇರವಾಗಿ ಹೇಳುತ್ತಾನೆ. ಕೃಷ್ಣಪ್ರಜ್ಞಾ ಕಾರ್ಯ ಕಲಾಪಗಳಲ್ಲಿ ಸುಖ ಅಥವಾ ದುಃಖ, ಲಾಭ ಅಥವಾ ನಷ್ಟ, ಗೆಲುವು ಅಥವಾ ಸೋಲಿನ ವಿಚಾರವೇ ಇಲ್ಲ. ಪ್ರತಿಯೊಂದೂ ಶ್ರೀಕೃಷ್ಣನಿಗಾಗಿ ಮಾಡಬೇಕೆಂಬುದು ದಿವ್ಯ ಪ್ರಜ್ಞೆ. ಹಾಗಿರಲು ಸಾಂಸಾರಿಕ ಕಾರ್ಯ ಕಲಾಪಗಳಿಗೆ ಪ್ರತಿಕ್ರಿಯೆ ಇರುವುದಿಲ್ಲ. ಆದರೆ ತನ್ನ ಇಂದ್ರಿಯ ತೋಷಣೆಗಾಗಿ ಸಾತ್ವಿಕ ಅಥವಾ ರಾಜಸ ಭಾವದಲ್ಲಿ ವರ್ತಿಸುವವನು, ಒಳ್ಳೆಯ ಅಥವಾ ಕೆಟ್ಟ ಪ್ರತಿಕ್ರಿಯೆಗೆ ಗುರಿಯಾಗುತ್ತಾನೆ. ಆದರೆ ಕೃಷ್ಣಪ್ರಜ್ಞೆಯ ಕಾರ್ಯ ಕಲಾಪಗಳಲ್ಲಿ ಸಂಪೂರ್ಣವಾಗಿ ಶರಣಾಗತನಾದವನು, ಸಾಮಾನ್ಯ ರೀತಿಯಲ್ಲಿ ಕಾರ್ಯ ಮಾಡಿದಾಗ ಆಗುವಂತೆ, ಯಾರಿಗೂ ಆಭಾರಿಯಲ್ಲ ಅಥವಾ ಋಣಿಯಲ್ಲ. ಭಾಗವತದಲ್ಲಿ ಹೀಗೆ ಹೇಳಿದೆ :

ದೇವರ್ಷಿಭೂತಾಪ್ತನೃಣಾಂ ಪಿತೃಣಾಂ
ನ ಕಿಂಕರೋ ನಾಯಮೃಣೀ ಚ ರಾಜನ್।
ಸರ್ವಾತ್ಮನಾ ಯಃ ಶರಣಂ ಶರಣ್ಯಂ
ಗತೋ ಮುಕುಂದಂ ಪರಿಹೃತ್ಯಕರ್ತವ್ಯ್॥

"ಎಲ್ಲ ಇತರ ಕರ್ತವ್ಯಗಳನ್ನು ತ್ಯಜಿಸಿ ಶ್ರೀಕೃಷ್ಣನಿಗೆ, ಮುಕುಂದನಿಗೆ ಯಾರು ಸಂಪೂರ್ಣ ಶರಣಾಗತನಾಗುತ್ತಾನೋ ಅವನು ಯಾರಿಗೂ—ದೇವತೆಗಳು, ಋಷಿಗಳು, ಜನಸಾಮಾನ್ಯರು, ಬಂಧುಗಳು, ಮಾನವ ಕುಲ ಅಥವಾ ಪಿತೃಗಳಿಗೆ ಋಣಿಯಲ್ಲ ಅಥವಾ ಆಭಾರಿಯಲ್ಲ" (ಭಾಗವತ 11.5.41). ಈ ಶ್ಲೋಕದಲ್ಲಿ ಕೃಷ್ಣನು ಅರ್ಜುನನಿಗೆ ಪರೋಕ್ಷವಾಗಿ ಈ

ಸೂಚನೆಯನ್ನೇ ಕೊಡುತ್ತಿದ್ದಾನೆ, ಮತ್ತು ಈ ವಿಷಯವನ್ನು ಮುಂದಿನ ಶ್ಲೋಕಗಳಲ್ಲಿ ಸ್ಪಷ್ಟವಾಗಿ ವಿವರಿಸಲಾಗುವುದು.

**ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು ।**
**ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬನ್ಧಂ ಪ್ರಹಾಸ್ಯಸಿ ॥ ೩೯ ॥**

ಏಷಾ—ಈ ಎಲ್ಲವನ್ನು, ತೇ—ನಿನಗೆ, ಅಭಿಹಿತಾ—ವರ್ಣಿಸಲಾಗಿದೆ, ಸಾಂಖ್ಯೇ—ವಿಶ್ಲೇಷಣಾತ್ಮಕ ಅಧ್ಯಯನದಿಂದ, ಬುದ್ಧಿಃ—ಬುದ್ಧಿ, ಯೋಗೇ—ಫಲಪ್ರದ ಫಲಿತಾಂಶವಿಲ್ಲದ ಕರ್ಮದಲ್ಲಿ, ತು—ಆದರೆ, ಇಮಾಮ್—ಇದನ್ನು, ಶೃಣು—ಕೇಳು, ಬುದ್ಧ್ಯಾ—ಬುದ್ಧಿವಂತಿಕೆಯಿಂದ, ಯುಕ್ತಃ—ಒಡಗೂಡಿಸಿ, ಯಯಾ—ಯಾವುದರಿಂದ, ಪಾರ್ಥ—ಹೇ ಪೃಥಾಪುತ್ರನೇ, ಕರ್ಮಬನ್ಧಮ್—ಪ್ರತಿಕ್ರಿಯೆಯ ಬಂಧದಿಂದ, ಪ್ರಹಾಸ್ಯಸಿ—ನೀನು ಮುಕ್ತನಾಗುವೆ.

**ಈವರೆಗೆ ವಿಶ್ಲೇಷಣಾತ್ಮಕ ಅಧ್ಯಯನದ ಮೂಲಕ ಈ ಜ್ಞಾನವನ್ನು ನಾನು ನಿನಗೆ ವರ್ಣಿಸಿದ್ದೇನೆ. ಈಗ ಅದನ್ನು ನಿಷ್ಕಾಮಕರ್ಮ ಮಾಡುವ ರೂಪದಲ್ಲಿ ವಿವರಿಸುತ್ತೇನೆ, ಕೇಳು. ಹೇ ಪೃಥಾಪುತ್ರನೆ, ಅಂಥ ಜ್ಞಾನದಲ್ಲಿ ಕಾರ್ಯಮಾಡಿದಾಗ ನೀನು ಕರ್ಮ ಬಂಧಗಳಿಂದ ವಿಮೋಚಿಸಿಕೊಳ್ಳಬಹುದು.**

**ಭಾವಾರ್ಥ :** ನಿರುಕ್ತಿ ಅಥವಾ ವೈದಿಕ ನಿಘಂಟಿನ ಪ್ರಕಾರ, 'ಸಂಖ್ಯಾ' ಎಂದರೆ ವಿಷಯಗಳನ್ನು ವಿವರವಾಗಿ ವರ್ಣಿಸುವುದು ಎಂದು ಅರ್ಥ ಮತ್ತು 'ಸಾಂಖ್ಯ'ವು ಆತ್ಮನ ನಿಜ ಸ್ವರೂಪವನ್ನು ವರ್ಣಿಸುವ ತತ್ವಶಾಸ್ತ್ರವನ್ನು ಸೂಚಿಸುತ್ತದೆ. ಯೋಗವು ಇಂದ್ರಿಯಗಳ ನಿಯಂತ್ರಣವನ್ನು ಒಳಗೊಂಡಿದೆ. ಯುದ್ಧ ಮಾಡಕೂಡದೆಂಬ ಅರ್ಜುನನ ಪ್ರಸ್ತಾವವು ಇಂದ್ರಿಯ ತೋಷಣೆಯನ್ನು ಆಧರಿಸಿತ್ತು. ತನ್ನ ಮುಖ್ಯ ಕರ್ತವ್ಯವನ್ನು ಮರೆತು, ಅವನು ಯುದ್ಧ ನಿಲ್ಲಿಸಬಯಸಿದ್ದನು. ಏಕೆಂದರೆ ಧೃತರಾಷ್ಟ್ರ ಪುತ್ರರಾದ ತನ್ನ ಸೋದರರನ್ನು ಮತ್ತು ದಾಯಾದಿಗಳನ್ನು ಗೆದ್ದ ಬಳಿಕ ರಾಜ್ಯವನ್ನು ಅನುಭವಿಸುವುದಕ್ಕಿಂತಲೂ ಬಂಧು ಬಾಂಧವರನ್ನು ಕೊಲ್ಲದೇ ತಾನು ಹೆಚ್ಚು ಸುಖವಾಗಿರಬಹುದೆಂದು ಅರ್ಜುನನು ಭಾವಿಸಿದ್ದನು. ಈ ಎರಡೂ ರೀತಿಗಳಿಗೂ ಮೂಲತತ್ವವು ಇಂದ್ರಿಯ ತೋಷಣೆಯೇ ಆಗಿತ್ತು. ವಿವೇಕ ಮತ್ತು ಕರ್ತವ್ಯವನ್ನು ತ್ಯಾಗ ಮಾಡಿಯೂ, ಅವರನ್ನು ಗೆಲ್ಲುವುದರಿಂದ ಲಭಿಸುವ ಸುಖವು ಮತ್ತು ರಕ್ತಸಂಬಂಧಿಗಳು ಜೀವಂತವಾಗಿರುವುದನ್ನು ನೋಡಿ ಲಭಿಸುವ ಸುಖವು–ಎರಡೂ ವ್ಯಕ್ತಿಗತ ಇಂದ್ರಿಯ ತೋಷಣೆಯ ತತ್ವವನ್ನು ಆಧರಿಸಿವೆ. ಆದ್ದರಿಂದ ಅರ್ಜುನನು ತನ್ನ ಪಿತಾಮಹನ ದೇಹವನ್ನು ಕೊಲ್ಲುವುದರಿಂದ ನಿಜ ಆತ್ಮನನ್ನು ಕೊಲ್ಲುತ್ತಿಲ್ಲವೆಂಬುದನ್ನು ಅರ್ಜುನನಿಗೆ ಕೃಷ್ಣನು ವಿವರಿಸಬಯಸಿದನು. ಭಗವಂತನೂ ಸೇರಿದಂತೆ ಎಲ್ಲ ಪ್ರತ್ಯೇಕ ವ್ಯಕ್ತಿಗಳು ಸನಾತನವಾಗಿ ಪ್ರತ್ಯೇಕರೇ; ಅವರೆಲ್ಲ ಹಿಂದೆಯೂ ಪ್ರತ್ಯೇಕರಾಗಿದ್ದರು, ವರ್ತಮಾನದಲ್ಲಿ ಪ್ರತ್ಯೇಕರಾಗಿದ್ದಾರೆ ಮತ್ತು ಭವಿಷ್ಯದಲ್ಲಿಯೂ ಪ್ರತ್ಯೇಕರಾಗಿಯೇ ಇರುತ್ತಾರೆ ಎಂಬುದನ್ನು ಕೃಷ್ಣನು ವಿವರಿಸಿದನು. ಏಕೆಂದರೆ ನಾವೆಲ್ಲರೂ ಸನಾತನವಾಗಿ ಪ್ರತ್ಯೇಕರಾದ ಆತ್ಮರಾಗಿದ್ದೇವೆ. ನಾವು ನಮ್ಮ ದೈಹಿಕ ಪೋಷಾಕನ್ನು ವಿವಿಧ ರೀತಿಗಳಲ್ಲಿ ಬದಲಾ

ಯಿಸುತ್ತೇವೆ. ಆದರೆ ವಾಸ್ತವಿಕವಾಗಿ ಭೌತಿಕ ಪೋಷಾಕಿನ ಬಂಧದಿಂದ ಮುಕ್ತರಾದ ನಂತರವೂ ನಮ್ಮ ಪ್ರತ್ಯೇಕತೆಯನ್ನು ಉಳಿಸಿ ಕೊಂಡಿರುತ್ತೇವೆ. ಆತ್ಮ ಮತ್ತು ದೇಹದ ವಿಶ್ಲೇಷಣಾತ್ಮಕ ಅಧ್ಯಯನವು ಬಹು ಸ್ಪಷ್ಟವಾಗಿ ಶ್ರೀಕೃಷ್ಣನಿಂದ ವಿವರಿಸಲ್ಪಟ್ಟಿದೆ. ವಿವಿಧ ದೃಷ್ಟಿ ಕೋನಗಳಿಂದ ವಿವರಿಸಲ್ಪಟ್ಟ ಆತ್ಮ ಮತ್ತು ದೇಹದ ಈ ವರ್ಣನಾತ್ಮಕ ಜ್ಞಾನವು ನಿರುಕ್ತಿ ಶಬ್ದ ಕೋಶದ ಅರ್ಥದಲ್ಲಿ, ಇಲ್ಲಿ 'ಸಾಂಖ್ಯ' ಎಂದು ವರ್ಣಿಸಲ್ಪಟ್ಟಿದೆ. ಈ ಸಾಂಖ್ಯಕ್ಕೂ ನಾಸ್ತಿಕ ಕಪಿಲನ ಸಾಂಖ್ಯಕ್ಕೂ ಯಾವ ಸಂಬಂಧವೂ ಇಲ್ಲ. ವಂಚಕ ಕಪಿಲನ ಸಾಂಖ್ಯಕ್ಕಿಂತ ಬಹು ಪೂರ್ವದಲ್ಲಿಯೇ ಶ್ರೀಕೃಷ್ಣನ ಅವತಾರವಾದ ನಿಜ ಭಗವಾನ್ ಕಪಿಲನಿಂದ ಶ್ರೀಮದ್ ಭಾಗವತದಲ್ಲಿ ಸಾಂಖ್ಯ ತತ್ತ್ವವು ತನ್ನ ತಾಯಿಯಾದ ದೇವಹೂತಿಗೆ ವಿಶದವಾಗಿ ವಿವರಿಸಲ್ಪಟ್ಟಿತು. **ಪುರುಷ** ಅಥವಾ ಪರಮ ಪ್ರಭು, ಕ್ರಿಯಾಶೀಲನು ಮತ್ತು **ಪ್ರಕೃತಿ**ಯ ಕಡೆಗೆ ದೃಷ್ಟಿ ಬೀರಿ ಸೃಷ್ಟಿ ಮಾಡುತ್ತಾನೆ ಎಂಬುದು ಅವನಿಂದ ಸ್ಪಷ್ಟವಾಗಿ ವಿವರಿಸಲ್ಪಟ್ಟಿದೆ. ಇದನ್ನು ವೇದಗಳಲ್ಲಿ ಮತ್ತು ಗೀತೆಯಲ್ಲಿ ಒಪ್ಪಿಕೊಂಡಿದೆ. ವೇದಗಳಲ್ಲಿರುವ ವರ್ಣನೆಯು, ಭಗವಂತನು **ಪ್ರಕೃತಿ**ಯ ಕಡೆಗೆ ದೃಷ್ಟಿ ಬೀರಿದನು ಮತ್ತು **ಪ್ರಕೃತಿಯ** ಗರ್ಭದಲ್ಲಿ ವ್ಯಕ್ತಿಗತ ಅಣುರೂಪಿ ಆತ್ಮರನ್ನು ತುಂಬಿದನು ಎಂಬುದನ್ನು ಸೂಚಿಸುವುದು. ಈ ವ್ಯಕ್ತಿಗಳೆಲ್ಲರೂ ಇಂದ್ರಿಯ ತೋಷಣೆಗಾಗಿ ಈ ಭೌತಿಕ ಜಗತ್ತಿನಲ್ಲಿ ಕಾರ್ಯ ಮಾಡುತ್ತಿದ್ದಾರೆ ಮತ್ತು ಭೌತಿಕ ಶಕ್ತಿಯ ಪ್ರಭಾವದಲ್ಲಿ ಅವರೆಲ್ಲರೂ, ತಾವು ಭೋಗಿಗಳು ಎಂದು ಭಾವಿಸಿದ್ದಾರೆ. ಈ ಮನೋಭಾವನೆಯು, ಜೀವಿಯು ಭಗವಂತನೊಂದಿಗೆ ಒಂದಾಗಬಯಸುವ ಮೋಕ್ಷ ಸ್ಥಿತಿಯ ಕೊನೆಯ ಹಂತದವರೆಗೂ ಸಾಗಿದೆ. ಇದೇ ಮಾಯೆಯ ಕೊನೆಯ ಬಲೆ, ಅಥವಾ ಇಂದ್ರಿಯ ತೋಷಣದ ಭ್ರಮೆ, ಮತ್ತು ಅಂಥ ಇಂದ್ರಿಯತೋಷಣ ಕರ್ಮಗಳ ಅನೇಕ ಜನ್ಮಗಳನ್ನು ಕಳೆದ ತರುವಾಯವೇ ಮಹಾ ಆತ್ಮನೊಬ್ಬನು ಶ್ರೀ ಕೃಷ್ಣನಿಗೆ, ವಾಸುದೇವನಿಗೆ ಶರಣಾಗತನಾಗುತ್ತಾನೆ. ಆ ಮೂಲಕ ಆತ್ಯಂತಿಕ ಸತ್ಯಶೋಧನೆಯನ್ನು ಪೂರೈಸಿಕೊಳ್ಳುತ್ತಾನೆ.

ಅರ್ಜುನನು ಶ್ರೀಕೃಷ್ಣನಿಗೆ ಶರಣಾಗತನಾಗಿ, ಅವನನ್ನು ತನ್ನ ಗುರುವೆಂದು ಆಗಲೇ ಒಪ್ಪಿಕೊಂಡಿದ್ದಾನೆ. **ಶಿಷ್ಯಸ್ತೇಽಹಂ ಶಾಧಿಮಾಂ ತ್ವಾಂ ಪ್ರಪನ್ನಮ್.** ಪರಿಣಾಮವಾಗಿ, ಕೃಷ್ಣನು ಈಗ ಅವನಿಗೆ **ಬುದ್ಧಿಯೋಗ** ಅಥವಾ **ಕರ್ಮಯೋಗ**ದ ಕಾರ್ಯವಿಧಾನವನ್ನು ಅಥವಾ ಭಗವಂತನ ಇಂದ್ರಿಯ ತೋಷಣಕ್ಕಾಗಿ ಮಾತ್ರ ಭಕ್ತಿಯುತ ಸೇವಾ ಸಾಧನೆಯನ್ನು ಕುರಿತು ಹೇಳುತ್ತಾನೆ. ಈ ಬುದ್ಧಿಯೋಗವು ಪ್ರತಿಯೊಬ್ಬರ ಹೃದಯದಲ್ಲಿ ಸ್ಥಿತನಾಗಿರುವ ಪರಮಾತ್ಮನೊಂದಿಗೆ ನೇರ ಸಂಯೋಗ ಎಂದು ಹತ್ತನೆಯ ಅಧ್ಯಾಯದ ಹತ್ತನೆಯ ಶ್ಲೋಕದಲ್ಲಿ ಸ್ಪಷ್ಟವಾಗಿ ವಿವರಿಸಲಾಗಿದೆ. ಆದರೆ ಭಕ್ತಿಯುತ ಸೇವೆ ಇಲ್ಲದೆ ಇಂಥ ಸಂಯೋಗ ಉಂಟಾಗುವುದಿಲ್ಲ. ಆದ್ದರಿಂದ ಭಗವಂತನಿಗೆ ಭಕ್ತಿಯುತ ಅಥವಾ ದಿವ್ಯ ಪ್ರೇಮಯುತ ಸೇವೆಯಲ್ಲಿ ಸನ್ನಿವೇಶಿತನಾಗಿರುವವನು ಅಥವಾ ಕೃಷ್ಣಪ್ರಜ್ಞೆಯಲ್ಲಿ ಸ್ಥಿತನಾಗಿರುವವನು ಭಗವಂತನ ವಿಶೇಷ ಅನುಗ್ರಹದಿಂದ ಈ ಬುದ್ಧಿ ಯೋಗದ ಮಟ್ಟವನ್ನು ಹೊಂದುತ್ತಾನೆ. ದಿವ್ಯ ಪ್ರೀತಿಯಿಂದ ಸದಾ ಭಕ್ತಿಯುತ ಸೇವೆಯಲ್ಲಿ ತೊಡಗಿದವರಿಗೆ ಮಾತ್ರ ಪ್ರೇಮ ಭಕ್ತಿಯ ಶುದ್ಧ ಜ್ಞಾನವನ್ನು ತಾನು ನೀಡುವುದಾಗಿ ಭಗವಂತನು

ಹೇಳುತ್ತಾನೆ. ಈ ರೀತಿಯಲ್ಲಿ ಭಕ್ತನು ಸುಲಭವಾಗಿ ಭಗವಂತನನ್ನು ಅವನ ಸದಾನಂದ ಪೂರ್ಣವಾದ ಧಾಮದಲ್ಲಿ ತಲುಪಬಹುದು.

ಹೀಗೆ ಈ ಶ್ಲೋಕದಲ್ಲಿ ಹೇಳಿರುವ **ಬುದ್ಧಿಯೋಗವು** ಭಗವಂತನ ಭಕ್ತಿಯುತ ಸೇವೆಯಾಗಿದೆ ಮತ್ತು ಇಲ್ಲಿ ಹೇಳಿರುವ ಸಾಂಖ್ಯ ಪದವು ವಂಚಕ ಕಪಿಲನು ನಿರೂಪಿಸಿದ ನಾಸ್ತಿಕ **ಸಾಂಖ್ಯ ಯೋಗಕ್ಕೆ** ಯಾವ ರೀತಿಯಲ್ಲೂ ಸಂಬಂಧಿಸಿಲ್ಲ. ಆದ್ದರಿಂದ ಇಲ್ಲಿ ಹೇಳಿರುವ **ಸಾಂಖ್ಯಯೋಗವು** ನಾಸ್ತಿಕ **ಸಾಂಖ್ಯಯೋಗ**ದೊಂದಿಗೆ ಯಾವುದೇ ಸಂಬಂಧ ಹೊಂದಿದೆ ಎಂದು ಯಾರೂ ತಪ್ಪಾಗಿ ತಿಳಿಯಬಾರದು. ಅಲ್ಲದೆ ಆ ಕಾಲದಲ್ಲಿ ಆ ತತ್ವವು ಯಾವ ಪ್ರಭಾವವನ್ನೂ ಹೊಂದಿರಲಿಲ್ಲ; ಶ್ರೀಕೃಷ್ಣನು ಅಂಥ ನಿರೀಶ್ವರ ತತ್ವ ಊಹಾಪೋಹಗಳನ್ನು ಕುರಿತು ಪ್ರಸ್ತಾಪಿಸಲು ಎಂದೂ ಲಕ್ಷಿಸುವುದಿಲ್ಲ. ನಿಜಸಾಂಖ್ಯತತ್ವವು ಭಗವಾನ್ ಕಪಿಲನಿಂದ ಶ್ರೀಮದ್ಭಾಗವತದಲ್ಲಿ ವರ್ಣಿತವಾಗಿದೆ. ಆದರೆ ಅದೂ ಕೂಡ ಪ್ರಸಕ್ತ ವಿಷಯಗಳಿಗೆ ಸಂಬಂಧಿಸಿಲ್ಲ. ಇಲ್ಲಿ ಸಾಂಖ್ಯ ಎಂದರೆ ದೇಹ ಮತ್ತು ಆತ್ಮದ ವಿಶ್ಲೇಷಣಾತ್ಮಕ ವರ್ಣನೆ. ಅರ್ಜುನನನ್ನು **ಬುದ್ಧಿಯೋಗ** ಅಥವಾ **ಭಕ್ತಿಯೋಗ**ದ ಮಟ್ಟಕ್ಕೆ ತರಲೋಸುಗ ಶ್ರೀಕೃಷ್ಣನು ಆತ್ಮನ ವಿಶ್ಲೇಷಣಾತ್ಮಕ ವರ್ಣನೆ ಮಾಡಿದನು. ಆದ್ದರಿಂದ ಶ್ರೀಕೃಷ್ಣನ ಸಾಂಖ್ಯ ಮತ್ತು ಭಾಗವತದಲ್ಲಿ ವರ್ಣಿತವಾದ ಭಗವಾನ್ ಕಪಿಲನ ಸಾಂಖ್ಯ ಒಂದೇ ಆಗಿರುತ್ತವೆ. ಅವೆಲ್ಲವೂ ಭಕ್ತಿಯೋಗ. ಆದುದರಿಂದ ಬುದ್ಧಿಹೀನ ವರ್ಗದಜನರು ಮಾತ್ರ ಸಾಂಖ್ಯಯೋಗ ಮತ್ತು ಭಕ್ತಿಯೋಗಗಳಲ್ಲಿ ಪರಸ್ಪರ ಭೇದ ಮಾಡುತ್ತಾರೆ ಎಂದು ಶ್ರೀಕೃಷ್ಣನು ಹೇಳಿದನು(**ಸಾಂಖ್ಯಯೋಗೌ ಪೃಥಗ್‌ಬಾಲಾಃ ಪ್ರವದನ್ತಿ ನ ಪಂಡಿತಾಃ**).

ನಾಸ್ತಿಕ **ಸಾಂಖ್ಯಯೋಗವು ಭಕ್ತಿಯೋಗಕ್ಕೆ** ಸಂಬಂಧಿಸಿಲ್ಲವಾಗಿದ್ದರೂ, ಬುದ್ಧಿಹೀನರು ಭಗವದ್ಗೀತೆ ನಾಸ್ತಿಕ **ಸಾಂಖ್ಯಯೋಗ**ವನ್ನು ಕುರಿತು ಹೇಳಿದೆ ಎಂದು ಹೇಳುತ್ತಾರೆ.

ಆದ್ದರಿಂದ ಬುದ್ಧಿಯೋಗ ಎಂದರೆ ಕೃಷ್ಣಪ್ರಜ್ಞೆಯಲ್ಲಿ, ಪೂರ್ಣಜ್ಞಾನಾನಂದಮಯ ಭಕ್ತಿಯುತ ಸೇವೆಯಲ್ಲಿ ಕೆಲಸ ಮಾಡುವುದು ಎಂದು ತಿಳಿದುಕೊಳ್ಳಬೇಕು. ಅಂಥ ಕೆಲಸವನ್ನು ಎಷ್ಟೇ ಕಷ್ಟವಾಗಿದ್ದರೂ, ಒಬ್ಬನು ಕೇವಲ ಭಗವತ್‌ತೃಪ್ತಿಗಾಗಿ ಮಾಡುತ್ತಿದ್ದರೆ, ಅವನು ಬುದ್ಧಿಯೋಗತತ್ವಗಳಿಗೆ ಒಳಪಟ್ಟು ಕೆಲಸ ಮಾಡುತ್ತಾನೆ ಮತ್ತು ತನ್ನನ್ನು ಸದಾ ದಿವ್ಯಾನಂದ ಸ್ಥಿತಿಯಲ್ಲಿ ಕಾಣುತ್ತಾನೆ. ಇಂಥ ದಿವ್ಯ ಉದ್ಯೋಗದಿಂದ ಮತ್ತು ಭಗವದನುಗ್ರಹದಿಂದ, ಒಬ್ಬನಿಗೆ ದಿವ್ಯ ಅರಿವು ತಾನಾಗಿಯೇ ಸಾಧಿಸುತ್ತದೆ. ಹೀಗೆ ಅವನು ಜ್ಞಾನ ಪ್ರಾಪ್ತಿಗೆ ಬಾಹ್ಯಪ್ರಯತ್ನ ಮಾಡದೆ ಅವನ ಮೋಕ್ಷವು ಸ್ವಯಂಪೂರ್ಣವಾಗುತ್ತದೆ. ಕೃಷ್ಣಪ್ರಜ್ಞೆಯ ಕರ್ಮಕ್ಕೂ ಮತ್ತು ವಿಶೇಷವಾಗಿ ಕೌಟುಂಬಿಕ ಅಥವಾ ಭೌತಿಕ ಸುಖಫಲಗಳನ್ನು ಹೊಂದಲು ಇಂದ್ರಿಯ ತೋಷಣ ವಿಷಯದ ಕಾಮ್ಯಕರ್ಮಕ್ಕೂ ಬಹಳ ವ್ಯತ್ಯಾಸವಿದೆ. ಆದ್ದರಿಂದ ಬುದ್ಧಿಯೋಗವು ನಾವು ಆಚರಿಸುವ ಕರ್ಮಗಳ ದಿವ್ಯ ಗುಣವಾಗಿದೆ.

**ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ।**
**ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥೪೦॥**

ನ—ಇಲ್ಲ, ಇಹ—ಈ ಯೋಗದಲ್ಲಿ, ಅಭಿಕ್ರಮ—ಪ್ರಯತ್ನಿಸುವುದರಲ್ಲಿ, ನಾಶಃ—ನಷ್ಟವು, ಅಸ್ತಿ—ಇದೆ, ಪ್ರತ್ಯವಾಯಃ—ಕಡಿಮೆಯಾಗುವುದು, ನ—ಎಂದೂ ಇಲ್ಲ, ವಿದ್ಯತೇ—ಇರುವುದು, ಸು ಅಲ್ಪಮ್—ಒಂದು ಸ್ವಲ್ಪ, ಅಪಿ—ಆಗಿದ್ದರೂ, ಅಸ್ಯ—ಇದರ, ಧರ್ಮಸ್ಯ—ವೃತ್ತಿಯ, ತ್ರಾಯತೇ—ವಿಮೋಚಿಸುತ್ತದೆ, ಮಹತಃ—ಬಹುದೊಡ್ಡ, ಭಯಾತ್—ಅಪಾಯದಿಂದ.

**ಈ ಪ್ರಯತ್ನದಲ್ಲಿ ನಷ್ಟ ಅಥವಾ ಕೊರತೆಯಾಗಲೀ ಇಲ್ಲ, ಮತ್ತು ಈ ಮಾರ್ಗದಲ್ಲಿ ಸ್ವಲ್ಪ ಪ್ರಗತಿಯು ಅತ್ಯಂತ ಭಯಂಕರ ಅಪಾಯದಿಂದ ಒಬ್ಬನನ್ನು ರಕ್ಷಿಸುತ್ತದೆ.**

**ಭಾವಾರ್ಥ :** ಕೃಷ್ಣಪ್ರಜ್ಞೆಯಲ್ಲಿನ ಕಾರ್ಯಕಲಾಪ ಅಥವಾ ಇಂದ್ರಿಯ ತೋಷಣದ ನಿರೀಕ್ಷಣೆ ಇಲ್ಲದೆ ಕೃಷ್ಣನ ಪ್ರಯೋಜನಕ್ಕಾಗಿ ಕಾರ್ಯ ಮಾಡುವುದು ಕಾರ್ಯದ ಅತ್ಯಂತ ದಿವ್ಯಗುಣ. ಇಂಥ ಕಾರ್ಯದ ಸಣ್ಣ ಪ್ರಾರಂಭವೂ ಕೂಡ ಯಾವ ಅಡ್ಡಿಯನ್ನೂ ಹೊಂದುವುದಿಲ್ಲ. ಅಥವಾ ಅಂಥ ಸಣ್ಣ ಪ್ರಾರಂಭವು ಯಾವುದೇ ಹಂತದಲ್ಲಿ ನಷ್ಟವಾಗುವುದಿಲ್ಲ. ಭೌತಿಕ ಮಟ್ಟದಲ್ಲಿ ಪ್ರಾರಂಭಿಸಿದ ಯಾವುದೇ ಕ್ರಿಯೆಯನ್ನು ಪೂರ್ತಿಗೊಳಿಸಬೇಕು, ಹಾಗಿಲ್ಲದಿದ್ದಲ್ಲಿ ಆ ಇಡೀ ಪ್ರಯತ್ನವೇ ವಿಫಲವಾಗುತ್ತದೆ. ಆದರೆ ಕೃಷ್ಣಪ್ರಜ್ಞೆಯಲ್ಲಿ ಪ್ರಾರಂಭಿಸಿದ ಯಾವುದೇ ಕಾರ್ಯವು ಮುಗಿಯದೇ ಇದ್ದರೂ ಶಾಶ್ವತ ಪರಿಣಾಮವನ್ನು ಹೊಂದುತ್ತದೆ.ಕೃಷ್ಣಪ್ರಜ್ಞೆಯಲ್ಲಿನ ಕಾರ್ಯ ಅಪೂರ್ಣವಾಗಿದ್ದರೂ ಅಂಥ ಕಾರ್ಯಕರ್ತನಿಗೆ ನಷ್ಟವಿಲ್ಲ. ಕೃಷ್ಣಪ್ರಜ್ಞೆಯಲ್ಲಿ ಪ್ರತಿಶತ ಒಂದರಷ್ಟು ಮಾಡಿದ್ದುದು ಶಾಶ್ವತ ಫಲಿತಾಂಶಗಳನ್ನು ನೀಡುವುದು. ಮುಂದಿನ ಪ್ರಾರಂಭವು ಶೇಕಡ ಎರಡರಿಂದ ಇರುತ್ತದೆ. ಆದರೆ ಭೌತಿಕ ಕಾರ್ಯಗಳಲ್ಲಾದರೋ ನೂರಕ್ಕೆ ನೂರರಷ್ಟು ವಿಜಯವಿಲ್ಲದೆ ಲಾಭವಿಲ್ಲ. ಅಜಾಮಿಳನು ತನ್ನ ಕರ್ತವ್ಯವನ್ನು ಕೆಲವು ಪ್ರತಿಶತ ಕೃಷ್ಣಪ್ರಜ್ಞೆಯಲ್ಲಿ ನೆರವೇರಿಸಿದನು, ಆದರೆ, ಅವನು ಕೊನೆಯಲ್ಲಿ ಅನುಭವಿಸಿದ ಫಲಿತಾಂಶವು ಭಗವಂತನ ದಯೆದಿಂದ, ಪ್ರತಿಶತ ನೂರರಷ್ಟಿತ್ತು. ಈ ಸಂಬಂಧದಲ್ಲಿ ಶ್ರೀಮದ್ಭಾಗವತದಲ್ಲಿ ಒಂದು ಸೊಗಸಾದ ಶ್ಲೋಕವಿದೆ (1.5.17):

ತ್ಯಕ್ತ್ವಾ ಸ್ವಧರ್ಮಂ ಚರಣಾಂಬುಜಂ ಹರೇ-
ರ್ಭಜನ್ನಪಕ್ವೋಽಥ ಪತೇತ್ತತೋ ಯದಿ।
ಯತ್ರ ಕ್ವ ವಾಭದ್ರಮಭೂದಮುಷ್ಯ ಕಿಂ
ಕೋ ವಾರ್ಥ ಆಪ್ತೋಽಭಜತಾಂ ಸ್ವಧರ್ಮತಃ॥

"ಯಾರಾದರೂ ತನ್ನ ವೃತ್ತಿಕರ್ತವ್ಯಗಳನ್ನು ತ್ಯಜಿಸಿ ಕೃಷ್ಣಪ್ರಜ್ಞೆಯ ಕೆಲಸದಲ್ಲಿ ತೊಡಗಿದರೆ, ಮತ್ತು ಆ ಕೆಲಸವನ್ನು ಪೂರೈಸದೆ ಪತಿತನಾದರೂ, ಅವನಿಗಾಗುವ ನಷ್ಟವಾದರೂ ಏನು? ಆದರೆ ಒಬ್ಬನು ಸಾಂಸಾರಿಕ ಕ್ರಿಯೆಗಳನ್ನು ಸಮರ್ಪಕವಾಗಿ ಆಚರಿಸಿದರೂ ಅವನು ಗಳಿಸುವುದಾದರೂ ಏನು?" ಅಥವಾ ಕ್ರಿಶ್ಚಿಯನ್ನರು ಹೇಳುವಂತೆ, "ಒಬ್ಬನು ತನ್ನ ನಿತ್ಯ ಆತ್ಮನ ಹಾನಿಯನ್ನು ಮಾಡಿಕೊಂಡು, ಅವನು ಇಡೀ ಜಗತ್ತನ್ನೇ ಸಂಪಾದಿಸಿಕೊಂಡರೂ ಅವನಿಗೇನು ಲಾಭವಾಗುತ್ತದೆ ?"

ಸಾಂಸಾರಿಕ ಕ್ರಿಯೆಗಳು ಮತ್ತು ಅವುಗಳ ಫಲಗಳು ದೇಹದೊಂದಿಗೆ ಕೊನೆಗೊಳ್ಳುತ್ತವೆ. ಆದರೆ ಕೃಷ್ಣಪ್ರಜ್ಞೆಯಲ್ಲಿನ ಕಾರ್ಯವು ದೇಹನಾಶದ ಅನಂತರವೂ ವ್ಯಕ್ತಿಯೊಬ್ಬನನ್ನು ಮತ್ತೆ ಕೃಷ್ಣಪ್ರಜ್ಞೆಗೆ ಕರೆದೊಯ್ಯುತ್ತದೆ. ಮುಂದಿನ ಜನ್ಮದಲ್ಲಿ ಕನಿಷ್ಠ ಮಾನವನಾಗಿ, ಉನ್ನತಿಯ ಅವಕಾಶ ನೀಡುವಂಥ ಮಹಾನ್ ಸುಸಂಸ್ಕೃತ ಬ್ರಾಹ್ಮಣ ಕುಟುಂಬದಲ್ಲಿ ಅಥವಾ ಶ್ರೀಮಂತ ಕುಟುಂಬದಲ್ಲಿ ಜನಿಸುವ ಅವಕಾಶವನ್ನಾದರೂ ಪಡೆಯುವುದು ಖಂಡಿತ. ಇದೇ ಕೃಷ್ಣಪ್ರಜ್ಞೆಯಲ್ಲಿ ಮಾಡುವ ಕರ್ಮದ ಅನ್ಯಾದೃಶ ಗುಣವಾಗಿದೆ.

**ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ ।**
**ಬಹುಶಾಖಾ ಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್ ॥ ೪೧ ॥**

ವ್ಯವಸಾಯ ಆತ್ಮಿಕಾ—ಕೃಷ್ಣಪ್ರಜ್ಞೆಯಲ್ಲಿ ದೃಢ ನಿಶ್ಚಯವುಳ್ಳ, ಬುದ್ಧಿಃ—ಬುದ್ಧಿಯು, ಏಕಾ—ಏಕೈಕವು, ಇಹ—ಈ ಜಗತ್ತಿನಲ್ಲಿ, ಕುರುನಂದನ—ಹೇ ಕುರುನಂದನನೇ, ಬಹುಶಾಖಾಃ—ಅನೇಕ ಶಾಖೆಗಳಿರುವ, ಹಿ—ನಿಜವಾಗಿ, ಅನನ್ತಾಃ—ಮೇರೆ ಇಲ್ಲದಾಗಿರುವುದು, ಚ—ಕೂಡ, ಬುದ್ಧಯಃ—ಬುದ್ಧಿ, ಆವ್ಯವಸಾಯಿನಾಮ್—ಕೃಷ್ಣಪ್ರಜ್ಞೆಯಲ್ಲಿ ಇಲ್ಲದವರ.

**ಈ ಮಾರ್ಗದಲ್ಲಿರುವವರು ಉದ್ದೇಶದಲ್ಲಿ ದೃಢ ನಿರ್ಧಾರವುಳ್ಳವರು ಮತ್ತು ಅವರ ಗುರಿಯು ಒಂದೇ. ಹೇ ಪ್ರಿಯ ಕುರುನಂದನ, ದೃಢನಿಶ್ಚಯವಿಲ್ಲದವರ ಬುದ್ಧಿಯು ಬಹುಶಾಖೆಗಳಿಂದ ಕೂಡಿರುತ್ತದೆ.**

**ಭಾವಾರ್ಥ :** ಕೃಷ್ಣಪ್ರಜ್ಞೆಯಿಂದ ಒಬ್ಬನು ಜೀವನದ ಅತ್ಯುನ್ನತ ಪೂರ್ಣತೆಗೆ ಏರಿಸಲ್ಪಡುತ್ತಾನೆ ಎಂಬ ಬಲವಾದ ವಿಶ್ವಾಸವೇ **ವ್ಯವಸಾಯಾತ್ಮಿಕಾ** ಬುದ್ಧಿ ಎನಿಸಿಕೊಳ್ಳುತ್ತದೆ. ಚೈತನ್ಯ ಚರಿತಾಮೃತವು (ಮಧ್ಯ 22.62) ಹೀಗೆ ಹೇಳುತ್ತದೆ:

'ಶ್ರದ್ಧಾ' ಶಬ್ದೇ—ವಿಶ್ವಾಸ ಕಹೇ ಸುದೃಢ ನಿಶ್ಚಯ।
ಕೃಷ್ಣೇಭಕ್ತಿ ಕೈಲೇ ಸರ್ವಕರ್ಮ ಕೃತ ಹಯ॥

ಶ್ರದ್ಧೆ ಎಂದರೆ ಒಂದು ಭವ್ಯೋನ್ನತವಾದುದರಲ್ಲಿ ಅಚಲ ವಿಶ್ವಾಸ. ಒಬ್ಬನು ಕೃಷ್ಣಪ್ರಜ್ಞೆಯ ಕರ್ತವ್ಯಗಳಲ್ಲಿ ನಿರತನಾದಾಗ ಒಬ್ಬನು ಸಾಂಸಾರಿಕ ಪ್ರಪಂಚಕ್ಕೆ ಸಂಬಂಧಿಸಿದಂತೆ ಕುಟುಂಬ ಸಂಪ್ರದಾಯಗಳು, ಮಾನವೀಯತೆ ಅಥವಾ ರಾಷ್ಟ್ರೀಯತೆಗಳಿಗೆ ಆಭಾರಿಯಾಗಿ ಕೆಲಸ ಮಾಡಬೇಕಾಗಿಲ್ಲ. ಕಾಮ್ಯಕರ್ಮಗಳು ಒಬ್ಬನ ಹಿಂದಿನ ಒಳ್ಳೆಯ ಅಥವಾ ಕೆಟ್ಟ ಕರ್ಮಗಳ ಫಲದ ಕಾರ್ಯಗಳು. ಒಬ್ಬನು ಕೃಷ್ಣಪ್ರಜ್ಞೆಯಲ್ಲಿ ಜಾಗೃತನಾಗಿದ್ದರೆ, ಅವನು ತನ್ನ ಕರ್ಮಗಳಲ್ಲಿ ಒಳ್ಳೆಯ ಫಲಿತಾಂಶಗಳಿಗಾಗಿ ಪ್ರಯತ್ನಿಸುವ ಅಗತ್ಯವಿಲ್ಲ. ಒಬ್ಬನು ಕೃಷ್ಣಪ್ರಜ್ಞೆಯಲ್ಲಿ ಸನ್ನಿವೇಶಿತನಾಗಿರುವಾಗ ಎಲ್ಲ ಕರ್ಮಗಳೂ ಪರಮ ಮಟ್ಟದಲ್ಲಿ ಇರುತ್ತವೆ, ಏಕೆಂದರೆ ಅವು ಒಳ್ಳೆಯ ಅಥವಾ ಕೆಟ್ಟವೆಂಬ ದ್ವಂದ್ವಗಳಿಗೆ ಒಳಗಾಗುವುದಿಲ್ಲ. ಜೀವನದ ಸಾಂಸಾರಿಕ ಕಲ್ಪನೆಯನ್ನು ತ್ಯಜಿಸುವುದು ಕೃಷ್ಣಪ್ರಜ್ಞೆಯ ಅತ್ಯುನ್ನತ ಪೂರ್ಣತೆಯಾಗಿರುತ್ತದೆ. ಕೃಷ್ಣಪ್ರಜ್ಞೆಯು ವರ್ಧಿಸಿದಂತೆ, ಈ ಸ್ಥಿತಿಯು ತಾನಾಗಿಯೆ ಸಾಧಿಸಲ್ಪಡುತ್ತದೆ.

ಕೃಷ್ಣಪ್ರಜ್ಞೆಯಲ್ಲಿರುವವನ ದೃಢನಿರ್ಧಾರಿತ ಉದ್ದೇಶವು ಜ್ಞಾನವನ್ನಾಧರಿಸಿದೆ. **ವಾಸುದೇವಃ ಸರ್ವಮ್ ಇತಿ ಸ ಮಹಾತ್ಮಾ ಸುದುರ್ಲಭಃ**—ವಾಸುದೇವ ಅಥವಾ ಕೃಷ್ಣನು ಅಭಿವ್ಯಕ್ತ ಕಾರಣಗಳೆಲ್ಲದರ ಮೂಲ ಎಂಬುದನ್ನು ಪೂರ್ಣವಾಗಿ ಅರಿತಿರುವ ಕೃಷ್ಣ ಪ್ರಜ್ಞೆಯಲ್ಲಿನ ವ್ಯಕ್ತಿಯು ಅತ್ಯಂತ ವಿರಳವಾದ ಒಬ್ಬ ಒಳ್ಳೆಯ ಆತ್ಮನು. ಮರದ ಬೇರಿಗೆ ನೀರೆರೆಯುವ ಮೂಲಕ ಒಬ್ಬನು ಹೇಗೆ ಎಲ್ಲ ಎಲೆಗಳಿಗೂ, ಶಾಖೆಗಳಿಗೂ ನೀರನ್ನು ವಿತರಣೆ ಮಾಡುವನೋ ಹಾಗೆಯೇ ಕೃಷ್ಣಪ್ರಜ್ಞೆಯಲ್ಲಿ ವರ್ತಿಸುವುದರಿಂದ, ಒಬ್ಬನು ಪ್ರತಿಯೊಬ್ಬರಿಗೂ—ತನಗೂ, ಕುಟುಂಬಕ್ಕೂ, ಸಮಾಜಕ್ಕೂ, ದೇಶಕ್ಕೂ, ಮಾನವರೆಲ್ಲರಿಗೂ ಅತ್ಯುನ್ನತ ಸೇವೆಯನ್ನು ಸಲ್ಲಿಸಬಹುದು. ಒಬ್ಬನ ಕಾರ್ಯಗಳಿಂದ ಕೃಷ್ಣನು ತೃಪ್ತನಾದರೆ, ಆಗ ಎಲ್ಲರೂ ತೃಪ್ತರಾಗುವರು.

ಆದರೆ ಕೃಷ್ಣಪ್ರಜ್ಞೆಯಲ್ಲಿನ ಸೇವೆಯನ್ನಾದರೋ ಶಿಷ್ಯನ ಸ್ವಭಾವವನ್ನು ಅರಿತು ಮತ್ತು ಶಿಷ್ಯನು ಕೃಷ್ಣಪ್ರಜ್ಞೆಯಲ್ಲಿ ಕಾರ್ಯಮಾಡುವಂತೆ ಮಾರ್ಗದರ್ಶನ ನೀಡುವ ಕೃಷ್ಣನ ನಿಜ ಪ್ರತಿನಿಧಿಯಾದ ಗುರುವಿನ ಸಮರ್ಥ ಮಾರ್ಗದರ್ಶನದಿಂದ ಉತ್ತಮವಾಗಿ ಅಭ್ಯಾಸ ಮಾಡಬಹುದಾಗಿದೆ. ಹಾಗಿರಲು ಕೃಷ್ಣಪ್ರಜ್ಞೆಯಲ್ಲಿ ಪರಿಣತನಾಗಿರಲು ಒಬ್ಬನು ದೃಢವಾಗಿ ವರ್ತಿಸಬೇಕು, ಮತ್ತು ಕೃಷ್ಣನ ಪ್ರತಿನಿಧಿಗೆ ವಿಧೇಯನಾಗಿರಬೇಕು, ಮತ್ತು ನಿಜಗುರುವಿನ ಉಪದೇಶಗಳನ್ನು ತನ್ನ ಜೀವನದ ಧ್ಯೇಯವೆಂದು ಅಂಗೀಕರಿಸಬೇಕು. ಶ್ರೀಲ ವಿಶ್ವನಾಥ ಚಕ್ರವರ್ತಿ ಠಾಕೂರರು ತಮ್ಮ ಪ್ರಸಿದ್ಧ ಗುರುಸ್ತುತಿಯಲ್ಲಿ ಹೀಗೆ ಹೇಳುತ್ತಾರೆ:

ಯಸ್ಯ ಪ್ರಸಾದಾದ್ ಭಗವತ್ಪ್ರಸಾದೋ
ಯಸ್ಯಾಪ್ರಸಾದಾನ್ ನ ಗತಿಃ ಕುತೋಽಪಿ।
ಧ್ಯಾಯಾನ್ಸ್ತುವಂಸ್ತಸ್ಯ ಯಶಸ್ ತ್ರಿ-ಸಂಧ್ಯಂ
ವಂದೇ ಗುರೋಃ ಶ್ರೀ-ಚರಣಾರವಿನ್ದಮ್॥

"ಗುರುವಿನ ತೃಪ್ತಿಯಿಂದ ಪರಮಪುರುಷೋತ್ತಮ ಪುರುಷನು ತೃಪ್ತನಾಗುತ್ತಾನೆ. ಗುರುವನ್ನು ತೃಪ್ತಿಪಡಿಸದೆ ಕೃಷ್ಣಪ್ರಜ್ಞೆಯ ಮಟ್ಟಕ್ಕೆ ಏರಿಸಲ್ಪಡುವ ಅವಕಾಶವೇ ಇಲ್ಲ. ಆದ್ದರಿಂದ ನಾನು ಪ್ರತಿದಿನದ ಮೂರು ಸಂಧ್ಯೆಗಳಲ್ಲಿಯೂ ನನ್ನ ಗುರುಗಳ ಧ್ಯಾನ ಮಾಡುವೆನು ಅವರ ಅನುಗ್ರಹಕ್ಕಾಗಿ ಪ್ರಾರ್ಥಿಸುವೆನು ಮತ್ತು ಅವರಿಗೆ ಗೌರವಪೂರ್ವಕವಾಗಿ ನಮಸ್ಕರಿಸುವೆನು."

ಈ ಸಮಗ್ರವಿಧಾನವು ದೇಹದ ಕಲ್ಪನೆಯ ಅತೀತವಾದ ಆತ್ಮನ ಪೂರ್ಣಜ್ಞಾನವನ್ನು ಅವಲಂಬಿಸಿದೆ. ಈ ಜ್ಞಾನವು ಕೇವಲ ವೈಚಾರಿಕ ಮಟ್ಟದಲ್ಲಿ ಮಾತ್ರವಲ್ಲದೆ ಕಾರ್ಯಸಾಧ್ಯತೆಯನ್ನೂ ಒಳಗೊಂಡಿರಬೇಕು. ಆಗ ಕಾಮ್ಯಕರ್ಮಗಳಲ್ಲಿ ಇಂದ್ರಿಯತೋಷಣೆಯ ಅವಕಾಶವೇ ಎಂದೂ ವ್ಯಕ್ತವಾಗುವುದಿಲ್ಲ. ಮನೋದಾರ್ಢ್ಯ ಇಲ್ಲದವನು ನಾನಾಬಗೆಯ ಕಾಮ್ಯಕರ್ಮಗಳಿಂದ ವಿಚಲಿತನಾಗುತ್ತಾನೆ.

**ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದನ್ತ್ಯವಿಪಶ್ಚಿತಃ।**
**ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ॥೪೨॥**

**ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಮ್ ।**
**ಕ್ರಿಯಾವಿಶೇಷ ಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ॥೪೩॥**

ಯಾಮ್ಇಮಾಮ್—ಈ ಎಲ್ಲ, ಪುಷ್ಪಿತಾಮ್—ಹೂವಿನಂತಹ, ವಾಚಮ್—ಮಾತುಗಳು, ಪ್ರವದನ್ತಿ—ಹೇಳುತ್ತಾರೆ, ಅವಿಪಶ್ಚಿತಃ—ಅಲ್ಪಜ್ಞಾನಿಗಳು, ವೇದವಾದರತಾಃ—ವೇದಗಳ ಅನುಯಾಯಿಗಳೆನಿಸಿಕೊಂಡವರು, ಪಾರ್ಥ—ಹೇ ಪೃಥಾ ಪುತ್ರನೇ, ನ—ಇಲ್ಲ, ಅನ್ಯತ್—ಬೇರೆ ಯಾವುದೂ, ಅಸ್ತಿ—ಇರುವುದು, ಇತಿ—ಹೀಗೆ, ವಾದಿನಃ—ವಾದಿಸುವವರು, ಕಾಮಆತ್ಮಾನಃ—ಇಂದ್ರಿಯ ತೋಷಣೆ ಬಯಸುವವರು, ಸ್ವರ್ಗಪರಾಃ—ಸ್ವರ್ಗಗಳನ್ನೂ ಸಾಧಿಸುವ ಗುರಿಯುಳ್ಳವರು, ಜನ್ಮ-ಕರ್ಮ-ಫಲ-ಪ್ರದಾಮ್—ಉತ್ತಮ ಜನ್ಮ ಮತ್ತು ಇತರ ಕಾಮ್ಯ ಫಲಗಳಲ್ಲಿ ಪರಿಣಮಿಸುವ, ಕ್ರಿಯಾ ವಿಶೇಷ—ವೈಭವಯುಕ್ತ ಉತ್ಸವಗಳು, ಬಹುಲಾಮ್—ವಿವಿಧ, ಭೋಗ—ಇಂದ್ರಿಯಾನುಭವ, ಐಶ್ವರ್ಯ—ಮತ್ತು ಸಂಪತ್ತು, ಗತಿಮ್—ವೃದ್ಧಿಯ, ಪ್ರತಿ—ಕಡೆಗೆ.

**ಸ್ವರ್ಗಲೋಕಗಳಿಗೆ ಏರಿಸಲ್ಪಡುವಿಕೆ, ಉತ್ತಮ ಜನ್ಮ, ಅಧಿಕಾರ ಮುಂತಾದವುಗಳಿಗಾಗಿ ಅನೇಕ ಕಾಮ್ಯಕರ್ಮಗಳನ್ನು ಬೋಧಿಸುವ ವೇದಗಳ ಹೂವಿನಂತಹ ಮಾತುಗಳಿಗೆ ಅಲ್ಪಜ್ಞಾನಿಗಳು ಬಹಳ ಅನುರಕ್ತರಾಗಿರುತ್ತಾರೆ. ಇಂದ್ರಿಯತೋಷಣೆ ಮತ್ತು ಸಂಪದ್ಯುಕ್ತ ಜೀವನವನ್ನು ಬಯಸುವವರಾಗಿ, ಇದಕ್ಕಿಂತ ಹೆಚ್ಚಿನದೇನೂ ಇಲ್ಲವೆಂದು ಅವರು ಹೇಳುತ್ತಾರೆ.**

**ಭಾವಾರ್ಥ :** ಸಾಮಾನ್ಯ ಜನರು ಬಹಳ ಬುದ್ಧಿವಂತರಲ್ಲ, ಮತ್ತು ಅಜ್ಞಾನದ ಕಾರಣ ಅವರು ವೇದಗಳ ಕರ್ಮಕಾಂಡ ಭಾಗಗಳಲ್ಲಿ ಹೇಳಿರುವ ನಾನಾ ಬಗೆಯ ಕಾಮ್ಯಕರ್ಮಗಳಿಗೆ ಬಹಳ ಅನುರಕ್ತರಾಗಿರುತ್ತಾರೆ. ಸುರೆ ಮತ್ತು ಸ್ತ್ರೀಯರು ಸಿಗುವ ಮತ್ತು ಸಾಂಸಾರಿಕ ಸಂಪತ್ತು ಸರ್ವೇಸಾಮಾನ್ಯವಾಗಿರುವ ಸ್ವರ್ಗದಲ್ಲಿ ಜೀವನವನ್ನು ಅನುಭವಿಸಲು ಇಂದ್ರಿಯ ತೋಷಣದ ಪ್ರಸ್ತಾವಗಳಿಗಿಂತ ಹೆಚ್ಚಿನದೇನನ್ನೂ ಅವರು ಬಯಸುವುದಿಲ್ಲ. ಸ್ವರ್ಗಲೋಕಗಳಿಗೆ ಏರಿಸಲ್ಪಡಲು ಅನೇಕ ಯಾಗಗಳನ್ನು, ಅದರಲ್ಲೂ ವಿಶೇಷವಾಗಿ ಜ್ಯೋತಿಷ್ಟೋಮ ಯಾಗವನ್ನು ವೇದಗಳಲ್ಲಿ ಸೂಚಿಸಿದೆ. ನಿಜವಾಗಿ ಸ್ವರ್ಗಲೋಕಗಳಿಗೆ ಔನ್ನತ್ಯ ಹೊಂದಲು ಇಚ್ಛಿಸುವವನು ಈ ಯಾಗಗಳನ್ನು ಮಾಡಬೇಕು ಎಂದು ಹೇಳಿದೆ. ಮತ್ತು ಅಲ್ಪಜ್ಞಾನಿಗಳು ವೈದಿಕ ವಿವೇಕದ ಸಮಗ್ರ ಉದ್ದೇಶವು ಇದುವೇ ಎಂದು ಭಾವಿಸುತ್ತಾರೆ. ಇಂಥ ಅನನುಭವಿ ಜನರಿಗೆ ಕೃಷ್ಣಪ್ರಜ್ಞೆಯ ನಿರ್ಧಾರಿತ ಕಾರ್ಯವೆಸಗುವುದರಲ್ಲಿ ಸನ್ನಿವೇಶಿತರಾಗಿರುವುದು ಬಹಳ ಕಷ್ಟ. ಮೂಢರು ಆಕರ್ಷಣೆಗಳ ಪರಿಣಾಮವನ್ನರಿಯದೆ ವಿಷವೃಕ್ಷಗಳ ಹೂಗಳಿಗೆ ಆಕರ್ಷಿತರಾಗುವಂತೆ, ಜ್ಞಾನೋದಯವಿಲ್ಲದವರು ಅದೇ ಪ್ರಕಾರ ಸ್ವರ್ಗದ ಸಂಪತ್ತು ಮತ್ತು ಅದರ ಇಂದ್ರಿಯಾನುಭವಗಳಿಗೆ ಆಕರ್ಷಿತರಾಗುತ್ತಾರೆ.

ವೇದಗಳ ಕರ್ಮಕಾಂಡ ಭಾಗದಲ್ಲಿ, **ಅಪಾಮ ಸೋಮಮ್ ಅಮೃತಾ ಅಭೂಮ** ಮತ್ತು **ಅಕ್ಷಯ್ಯಂ ಹವೈ ಚಾತುರ್ಮಾಸ್ಯ ಯಾಜಿನಃ ಸುಕೃತಂ ಭವತಿ** ಎಂದು ಹೇಳಿದೆ. ಅರ್ಥಾತ್ ಚಾತುರ್ಮಾಸ್ಯ ವ್ರತಮಾಡುವವರು ಅಮರರಾಗಿ ನಿತ್ಯಸುಖಿಗಳಾಗಲು ಸೋಮರಸಪಾನಮಾಡಲು ಅರ್ಹರಾಗುತ್ತಾರೆ. ಈ ಭೂಮಿಯ ಮೇಲೆ ಕೂಡ ಬಲಿಷ್ಠರಾಗಲು

ಮತ್ತು ಇಂದ್ರಿಯತೋಷಣೆಗಳನ್ನು ಅನುಭವಿಸಲು ಸಮರ್ಥರಾಗಲು ಸೋಮರಸಪಾನ ಮಾಡಲು ಕೆಲವರು ಬಹಳ ಕಾತುರರಾಗಿದ್ದಾರೆ. ಅಂಥ ವ್ಯಕ್ತಿಗಳಿಗೆ ಸಾಂಸಾರಿಕ ಬಂಧನದ ವಿಮೋಚನೆಯಲ್ಲಿ ನಂಬಿಕೆ ಇಲ್ಲ ಮತ್ತು ಅವರು ವೈದಿಕ ಯಾಗಗಳ ವೈಭವೋಪೇತ ಆಚರಣೆಗಳಿಗೆ ಬಹಳ ಆಸಕ್ತರಾಗಿರುತ್ತಾರೆ. ಇವರು ಸಾಮಾನ್ಯವಾಗಿ ವಿಷಯಾಸಕ್ತರು ಮತ್ತು ಅವರು ಜೀವನದ ಸ್ವರ್ಗ ಸುಖಗಳನ್ನುಳಿದು ಬೇರೆ ಏನನ್ನೂ ಬಯಸುವುದಿಲ್ಲ. ಅಲ್ಲಿ ನಂದನಕಾನನ ಎಂಬ ತೋಟಗಳಲ್ಲಿ ಸುಂದರ ಅಪ್ಸರಾಂಗನೆಯರೊಂದಿಗೆ ವಿಹರಿಸಲು ಮತ್ತು ಅಲ್ಲಿ ಯಥೇಚ್ಛ ಸೋಮರಸ ಪಾನ ಮಾಡಲು ಒಳ್ಳೆಯ ಅವಕಾಶವಿದೆ ಎಂಬುದಾಗಿ ತಿಳಿಯಲ್ಪಟ್ಟಿದೆ. ಇಂಥ ದೈಹಿಕ ಆನಂದವು ಖಂಡಿತವಾಗಿ ವಿಷಯಸಕ್ತವಾಗಿರುತ್ತದೆ. ಆದ್ದರಿಂದ ಭೌತಿಕ ಜಗತ್ತಿನ ಒಡೆಯರಾಗಿ ಇಂಥ ಭೌತಿಕ ಅನಿತ್ಯ ಸುಖಗಳಲ್ಲಿಯೇ ಆಸಕ್ತರಾದವರು ಅಲ್ಲಿರುತ್ತಾರೆ.

**ಭೋಗೈಶ್ವರ್ಯ ಪ್ರಸಕ್ತಾನಾಂ ತಯಾಪಹೃತಚೇತಸಾಮ್ ।**
**ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥೪೪॥**

ಭೋಗಃ—ಭೌತಿಕ ಭೋಗಕ್ಕೆ, ಐಶ್ವರ್ಯ—ಮತ್ತು ಸಂಪತ್ತು, ಪ್ರಸಕ್ತಾನಾಮ್—ಆಸಕ್ತರಾದವರಿಗೆ, ತಯಾ—ಅಂಥವುಗಳಿಂದ, ಅಪಹೃತಚೇತಸಾಮ್—ಮನದಲ್ಲಿ ಭ್ರಮಿತರಾಗಿ, ವ್ಯವಸಾಯ ಆತ್ಮಿಕಾ—ನಿರ್ಧಾರದಲ್ಲಿ ಅಚಲರಾಗಿ, ಬುದ್ಧಿಃ—ಭಗವಂತನ ಭಕ್ತಿಯುತ ಸೇವೆಯಲ್ಲಿ, ಸಮಾಧೌ—ನಿಯಂತ್ರಿತ ಮನವು, ನ—ಎಂದೂ ಇಲ್ಲ, ವಿಧೀಯತೇ—ಉಂಟಾಗುವುದು,

**ಇಂದ್ರಿಯಭೋಗ ಮತ್ತು ಭೌತಿಕ ಸಂಪತ್ತಿಗೆ ಅತ್ಯಾಸಕ್ತರಾದವರ ಮನದಲ್ಲಿ ಮತ್ತು ಇಂಥ ವಸ್ತುಗಳಿಂದ ದಿಗ್ಭ್ರಮೆಗೊಂಡವರಿಗೆ ಪರಮಪ್ರಭುವಿಗೆ ಭಕ್ತಿಯುತ ಸೇವೆಯಲ್ಲಿ ದೃಢನಿಶ್ಚಯವು ಉಂಟಾಗುವುದಿಲ್ಲ.**

**ಭಾವಾರ್ಥ** : ಸಮಾಧಿ ಎಂದರೆ 'ಸ್ಥಿರವಾದ ಮನಸ್ಸು'. ವೈದಿಕ ನಿಘಂಟು, ನಿರುಕ್ತಿಯು **ಸಂಯಗ್ ಅಧೀಯತೇಽಸ್ಮಿನ್ ಆತ್ಮ ತತ್ವ ಯಾಥಾತ್ಮ್ಯಮ್**—"ಮನಸ್ಸು ಆತ್ಮಜ್ಞಾನಕ್ಕೆ ನಿಶ್ಚಿತವಾದಾಗ ಅದು ಸಮಾಧಿಯಲ್ಲಿದೆ," ಎಂದು ಹೇಳಿದೆ. ಭೌತಿಕ ಇಂದ್ರಿಯ ಭೋಗದಲ್ಲಿ ಆಸಕ್ತರಾದವರಿಗೆ ಅಥವಾ ಇಂಥ ಅನಿತ್ಯ ವಸ್ತುಗಳಿಂದ ದಿಗ್ಭ್ರಮೆ ಹೊಂದಿದವರಿಗೆ ಸಮಾಧಿಯು ಎಂದಿಗೂ ಸಾಧ್ಯವಿಲ್ಲ. ಅವರು ಸರಿಸುಮಾರು ಭೌತಿಕ ಶಕ್ತಿಯ ಪ್ರಕ್ರಿಯೆಯಿಂದ ನಿಂದಿತರಾಗಿದ್ದಾರೆ.

**ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।**
**ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥೪೫॥**

ತ್ರೈಗುಣ್ಯ—ಭೌತಿಕ ಪ್ರಕೃತಿಯ ಮೂರು ಗುಣಗಳಿಗೆ ಸಂಬಂಧಿಸಿದ, ವಿಷಯಾಃ—ವಿಷಯಗಳಲ್ಲಿ, ವೇದಾಃ—ವೇದಸಾಹಿತ್ಯಗಳು, ನಿಸ್ತ್ರೈಗುಣ್ಯಃ—ಈ ಮೂರು ಪ್ರಕೃತಿ ಗುಣಗಳಿಗೆ ಅತೀತನಾಗಿ, ಭವ—ಇರು, ಅರ್ಜುನ—ಹೇ ಅರ್ಜುನ, ನಿರ್ದ್ವಂದ್ವಃ—ದ್ವಂದ್ವರಹಿತ, ನಿತ್ಯಸತ್ವಸ್ಥಃ—ಆಧ್ಯಾತ್ಮ ಅಸ್ತಿತ್ವದ ಶುದ್ಧ ಸ್ಥಿತಿಯಲ್ಲಿ, ನಿರ್ಯೋಗಕ್ಷೇಮಃ—ಲಾಭ ಮತ್ತು ರಕ್ಷಣೆಯ ವಿಚಾರಗಳಿಂದ ಮುಕ್ತನಾಗಿ,ಆತ್ಮವಾನ್—ಆತ್ಮನಲ್ಲಿ ಸ್ಥಿತನಾಗಿ.

**ವೇದಗಳು ಮುಖ್ಯವಾಗಿ ಭೌತಿಕ ಪ್ರಕೃತಿಯ ಮೂರು ಗುಣಗಳನ್ನು ಕುರಿತು ವಿವೇಚಿಸುತ್ತವೆ. ಹೇ ಅರ್ಜುನ, ಪ್ರಕೃತಿಯ ಈ ಮೂರು ಗುಣಗಳಿಗೆ ಅತೀತನಾಗು. ಎಲ್ಲ ದ್ವಂದ್ವಗಳಿಂದಲೂ, ಲಾಭ ಮತ್ತು ರಕ್ಷಣೆಯ ಆತಂಕಗಳಿಂದಲೂ ಮುಕ್ತನಾಗು, ಮತ್ತು ಆತ್ಮನಲ್ಲಿ ಸ್ಥಿತನಾಗು.**

**ಭಾವಾರ್ಥ :** ಎಲ್ಲ ಭೌತಿಕ ಕಾರ್ಯಕ್ರಮಗಳು ಭೌತಿಕ ಪ್ರಕೃತಿಯ ಮೂರು ಗುಣಗಳಲ್ಲಿ ಕ್ರಿಯೆ ಮತ್ತು ಪ್ರತಿಕ್ರಿಯಗಳನ್ನು ಒಳಗೊಂಡಿರುತ್ತವೆ. ಅವು ಸಾಂಸಾರಿಕ ಪ್ರಪಂಚದಲ್ಲಿ ಬಂಧನಕ್ಕೆ ಕಾರಣವಾದ ಕಾಮ್ಯಾರ್ಥಗಳಿಗೆ ಉದ್ದೇಶಿತವಾಗಿವೆ. ಜನಸಾಮಾನ್ಯರನ್ನು ಇಂದ್ರಿಯತೋಷಣದ ಕ್ಷೇತ್ರದಿಂದ ಕ್ರಮೇಣ ದಿವ್ಯಮಟ್ಟಕ್ಕೆ ಮೇಲೆತ್ತಲು ವೇದಗಳು ಹೆಚ್ಚಾಗಿ ಕಾಮ್ಯಕರ್ಮಗಳನ್ನು ಕುರಿತು ವಿವೇಚಿಸುತ್ತವೆ. ಅರ್ಜುನನು ಶ್ರೀಕೃಷ್ಣನ ಶಿಷ್ಯನು ಮತ್ತು ಸಖನಾಗಿ, ಬ್ರಹ್ಮ ಜಿಜ್ಞಾಸೆ ಅಥವಾ ಪರಮ ಅತಿಶಯದ ಬಗ್ಗೆ ಪ್ರಶ್ನೆಗಳಿಂದ ಪ್ರಾರಂಭವಾಗುವ ವೇದಾಂತ ತತ್ವದ ದಿವ್ಯ ಸ್ಥಾನಕ್ಕೆ ತನ್ನನ್ನು ಏರಿಸಿಕೊಳ್ಳಲು ಬೋಧಿಸಲ್ಪಟ್ಟನು. ಭೌತಿಕ ಜಗತ್ತಿನಲ್ಲಿರುವ ಎಲ್ಲ ಜೀವಿಗಳು ಅಸ್ತಿತ್ವಕ್ಕಾಗಿ ಬಹಳ ಹೋರಾಡುತ್ತಿದ್ದಾರೆ. ಅವರಿಗೆ ಭಗವಂತನು ಭೌತಿಕ ಪ್ರಪಂಚದ ಸೃಷ್ಟಿಯ ನಂತರ, ಹೇಗೆ ಬದುಕಬೇಕು ಮತ್ತು ಭೌತಿಕ ಬಂಧನದಿಂದ ಹೇಗೆ ಪಾರಾಗಬೇಕು ಎಂಬುದನ್ನು ತಿಳಿಸುವ, ವೇದಜ್ಞಾನವನ್ನು ನೀಡಿದನು. ಇಂದ್ರಿಯತೋಷಣದ ಕಾರ್ಯಗಳು, ಎಂದರೆ ಕರ್ಮಕಾಂಡ ಅಧ್ಯಾಯವು ಮುಗಿದ ಬಳಿಕ, ಭಗವದ್ಗೀತೆಯು ಪಂಚಮ ವೇದವೆನಿಸಿದ ಮಹಾಭಾರತದ ಭಾಗವಾಗಿರುವಂತೆ, ವಿವಿಧ ವೇದಗಳ ಭಾಗಗಳಾಗಿರುವ ಉಪನಿಷತ್ತುಗಳ ರೂಪದಲ್ಲಿ ಅಧ್ಯಾತ್ಮ ಸಾಕ್ಷಾತ್ಕಾರದ ಅವಕಾಶವನ್ನು ಒದಗಿಸಿದೆ. ಉಪನಿಷತ್ತುಗಳು ದಿವ್ಯ ಜೀವನದ ಆರಂಭವನ್ನೂ ಸೂಚಿಸುತ್ತವೆ.

ಭೌತಿಕ ದೇಹವು ಇರುವವರೆಗೆ ಪ್ರಕೃತಿಗುಣಗಳಲ್ಲಿ ಕ್ರಿಯೆ ಮತ್ತು ಪ್ರತಿಕ್ರಿಯೆಗಳು ಇರುತ್ತವೆ. ಸುಖದುಃಖ, ಅಥವಾ ಶೀತೋಷ್ಣ ಇಂಥ ದ್ವಂದ್ವಗಳು ಇದಿರಾದಾಗ, ಸಹಿಸಿಕೊಳ್ಳಲು ಕಲಿಯಬೇಕು, ಮತ್ತು ಇಂಥ ದ್ವಂದ್ವಗಳನ್ನು ಸಹಿಸಿಕೊಳ್ಳುವುದರಿಂದ ಲಾಭ ನಷ್ಟದ ಆತಂಕಗಳಿಂದ ಮುಕ್ತನಾಗಬೇಕು. ಒಬ್ಬನು ಕೃಷ್ಣನ ಸದಿಚ್ಛೆಗಳನ್ನು ಪೂರ್ಣ ಅವಲಂಬಿಸಿದಾಗ ಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಈ ದಿವ್ಯ ಸ್ಥಿತಿಯು ಪ್ರಾಪ್ತವಾಗುತ್ತದೆ.

**ಯಾವಾನರ್ಥ ಉದಪಾನೇ ಸರ್ವತಃ ಸಮ್ಪ್ಲುತೋದಕೇ ।**
**ತಾವಾನ್‌ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥೪೬॥**

ಯಾವಾನ್—ಅದೆಲ್ಲ, ಅರ್ಥಃ—ಉದ್ದೇಶಿತವಾಗಿ, ಉದಪಾನೇ—ನೀರಿನ ಬಾವಿಯಲ್ಲಿ, ಸರ್ವತಃ—ಎಲ್ಲ ಪ್ರಕಾರಗಳಲ್ಲಿ, ಸಮ್ಪ್ಲುತ ಉದಕೇ—ನೀರಿನ ದೊಡ್ಡ ಜಲಾಶಯದಲ್ಲಿ, ತಾವಾನ್—ಅದರಂತೆಯೇ, ಸರ್ವೇಷು—ಎಲ್ಲ, ವೇದೇಷು—ವೇದ ಸಾಹಿತ್ಯಗಳಲ್ಲಿ, ಬ್ರಾಹ್ಮಣಸ್ಯ—ಪರಬ್ರಹ್ಮನನ್ನೂ ತಿಳಿದವನ, ವಿಜಾನತಃ—ಪೂರ್ಣ ಜ್ಞಾನದಲ್ಲಿ ಇರುವವನು.

**ಒಂದು ಸಣ್ಣ ಬಾವಿಯಿಂದ ಪೂರೈಸಲ್ಪಡುವ ಎಲ್ಲ ಉದ್ದೇಶಗಳು ಒಂದು ದೊಡ್ಡ ಜಲಾಶಯದಿಂದ ಕೂಡಲೇ ಪೂರೈಸಬಹುದು. ಅದೇ ಪ್ರಕಾರ, ವೇದಗಳ**

**ಎಲ್ಲ ಉದ್ದೇಶಗಳು ಅವುಗಳ ಹಿಂದಿರುವ ಉದ್ದೇಶವನ್ನು ತಿಳಿದವನಿಗೆ ಉಪಯುಕ್ತ ವಾಗುವುದು.**

**ಭಾವಾರ್ಥ :** ವೇದ ಸಾಹಿತ್ಯದ ಕರ್ಮಕಾಂಡ ಭಾಗದಲ್ಲಿ ಉಲ್ಲೇಖಿತವಾದ ಎಲ್ಲ ಕರ್ಮಾಚರಣೆ ಮತ್ತು ಯಜ್ಞಗಳು ಆತ್ಮ ಸಾಕ್ಷಾತ್ಕಾರದ ಕ್ರಮೇಣ ಬೆಳವಣಿಗೆಯನ್ನು ಪ್ರೋತ್ಸಾಹಿಸಲು ಉದ್ದಿಷ್ಟವಾಗಿವೆ. ಆತ್ಮ ಸಾಕ್ಷಾತ್ಕಾರದ ಉದ್ದೇಶವನ್ನು ಭಗವದ್ಗೀತೆಯ ಹದಿನೈದನೆಯ ಅಧ್ಯಾಯದಲ್ಲಿ (15.15) ಸ್ಪಷ್ಟವಾಗಿ ಹೇಳಿದೆ; ವೇದಗಳ ಅಧ್ಯಯನದ ಉದ್ದೇಶವು ಎಲ್ಲದರ ಆದಿಕಾರಣನಾದ ಭಗವಾನ್ ಕೃಷ್ಣನನ್ನು ಅರಿತುಕೊಳ್ಳುವುದು. ಹೀಗೆ ಆತ್ಮಸಾಕ್ಷಾತ್ಕಾರವೆಂದರೆ, ಕೃಷ್ಣನನ್ನೂ ಮತ್ತು ಅವನೊಂದಿಗೆ ಇರುವ ಒಬ್ಬನ ನಿತ್ಯ ಸಂಬಂಧವನ್ನು ಅರಿತುಕೊಳ್ಳುವುದು. ಕೃಷ್ಣನೊಂದಿಗೆ ಜೀವಿಗಳ ಸಂಬಂಧವನ್ನು ಕೂಡ ಭಗವದ್ಗೀತೆಯ ಹದಿನೈದನೆಯ ಅಧ್ಯಾಯದಲ್ಲಿ (15.7) ಪ್ರಸ್ತಾಪಿಸಿದೆ. ಜೀವಿಗಳು ಕೃಷ್ಣನ ವಿಭಿನ್ನಾಂಶರು; ಆದ್ದರಿಂದ ವ್ಯಕ್ತಿಗತ ಜೀವಿಯಿಂದ ಕೃಷ್ಣಪ್ರಜ್ಞೆಯ ಪುನರುಜ್ಜೀವನವು ವೇದಜ್ಞಾನದ ಅತ್ಯುನ್ನತ ಪರಿಪೂರ್ಣ ಹಂತ. ಇದು ಶ್ರೀಮದ್ಭಾಗವತದಲ್ಲಿ (3.33.7) ಹೀಗೆ ದೃಢಪಟ್ಟಿದೆ:

ಅಹೋ ಬತಶ್ವಪಚೋऽತೋ ಗರೀಯಾನ್
ಯಂಜ್ಜಿಹ್ವಾಗ್ರೇ ವರ್ತತೇ ನಾಮ ತುಭ್ಯಮ್।
ತೇಪುಸ್ತಪಸ್ತೇ ಜುಹುಂವುಃ ಸಸ್ನುರಾರ್ಯಾ
ಬ್ರಹ್ಮಾನೂಚುರ್ನಾಮ ಗೃಣನ್ತಿ ಯೇ ತೇ॥

"ಹೇ ಭಗವಾನ್, ಚಂಡಾಲನಂತಹ (ನಾಯಿಯನ್ನು ತಿನ್ನುವ) ಕೀಳು ಕುಟುಂಬದಲ್ಲಿ ಜನಿಸಿದ್ದರೂ ನಿನ್ನ ಪವಿತ್ರನಾಮವನ್ನು ಜಪಿಸುತ್ತಿರುವ ವ್ಯಕ್ತಿಯು ಆತ್ಮ ಸಾಕ್ಷಾತ್ಕಾರದ ಅತ್ಯುನ್ನತ ಮಟ್ಟದಲ್ಲಿರುತ್ತಾನೆ. ಅಂಥ ವ್ಯಕ್ತಿಯು ವೈದಿಕ ವಿಧಿಗೆ ಅನುಗುಣವಾಗಿ ಅನೇಕ ವಿಧವಾದ ತಪಸ್ಸುಗಳನ್ನೂ ಮತ್ತು ಯಜ್ಞಗಳನ್ನೂ ಮಾಡಿರಬೇಕು, ಮತ್ತು ಎಲ್ಲ ಪವಿತ್ರ ಸ್ಥಳಗಳಲ್ಲಿ ಸ್ನಾನ ಮಾಡಿದ ನಂತರ ವೇದ ಸಾಹಿತ್ಯಗಳನ್ನೂ ಅನೇಕ ಸಲ ಅಧ್ಯಯನ ಮಾಡಿರಬೇಕು. ಅಂಥ ವ್ಯಕ್ತಿಯು ಆರ್ಯಕುಟುಂಬದ ಅತ್ಯುತ್ತಮನೆಂದು ಪರಿಗಣಿಸಲ್ಪಡುತ್ತಾನೆ."

ಆದ್ದರಿಂದ ಕೇವಲ ಕರ್ಮಾಚರಣೆಗಳಿಗೆ ಆಸಕ್ತನಾಗದೆ ಮತ್ತು ಉತ್ತಮ ಮಟ್ಟದ ಇಂದ್ರಿಯತೋಷಣಕ್ಕಾಗಿ ಸ್ವರ್ಗಲೋಕಗಳಿಗೆ ಏರಿಸಲ್ಪಡಲು ಆಶಿಸದೆ, ವೇದದ ಉದ್ದೇಶ ವನ್ನು ತಿಳಿದುಕೊಳ್ಳುವಷ್ಟು ಒಬ್ಬನು ಬುದ್ಧಿವಂತನಾಗಿರಬೇಕು. ಈ ಯುಗದಲ್ಲಿ ಜನ ಸಾಮಾನ್ಯನಿಗೆ ಎಲ್ಲ ವೈದಿಕ ವಿಧಿ ವಿಧಾನಗಳನ್ನು ಅನುಸರಿಸುವುದಾಗಲಿ ಅಥವಾ ಎಲ್ಲ ವೇದಾಂತ ಮತ್ತು ಉಪನಿಷತ್ತುಗಳನ್ನು ಚೆನ್ನಾಗಿ ಅಧ್ಯಯನ ಮಾಡುವುದಾಗಲೀ ಸಾಧ್ಯವಿಲ್ಲ. ವೇದಗಳ ಉದ್ದೇಶಗಳನ್ನು ನಿರ್ವಹಿಸಲು ಸಾಕಷ್ಟು ಕಾಲ, ಶಕ್ತಿ, ಜ್ಞಾನ ಮತ್ತು ಸಾಧನ ಸಂಪತ್ತು ಅಗತ್ಯ. ಇದು ಈ ಯುಗದಲ್ಲಿ ತೀರಾ ಅಸಾಧ್ಯ. ಆದರೆ ಸಕಲ ಪತಿತೋದ್ಧಾರಕ ರಾದ ಭಗವಾನ್ ಚೈತನ್ಯರು ಹೇಳಿದಂತೆ ಭಗವಂತನ ದಿವ್ಯನಾಮಗಳ ಜಪದಿಂದ ವೇದ ಸಂಸ್ಕೃತಿಯ ಘನ ಉದ್ದೇಶವು ಈಡೇರಿಸಲ್ಪಡುತ್ತದೆ. ವೇದಾಂತ ತತ್ವವನ್ನು ಅಧ್ಯಯನ

ಮಾಡುವ ಬದಲಾಗಿ ಭಾವುಕರಂತೆ ಭಗವಂತನ ದಿವ್ಯ ನಾಮಕೀರ್ತನೆಯನ್ನು ತಾವು ಮಾಡುತ್ತಿರುವುದೇಕೆ ಎಂದು ಭಗವಾನ್ ಚೈತನ್ಯರನ್ನು, ಮಹಾವೇದವಿದ್ವಾಂಸರಾದ ಪ್ರಕಾಶಾನಂದ ಸರಸ್ವತಿಯವರು ಕೇಳಿದಾಗ, ತಾನು ಮಹಾಮೂಢನೆಂದು ತಮ್ಮ ಗುರುಗಳು ತಿಳಿದು, ಭಗವಾನ್ ಕೃಷ್ಣನ ದಿವ್ಯನಾಮಸಂಕೀರ್ತನೆ ಮಾಡಲು ಹೇಳಿದರೆಂದು ಉತ್ತರಕೊಟ್ಟರು. ಅವರು ಹಾಗೆ ಮಾಡಿದರು, ಮತ್ತು ಹುಚ್ಚರಂತೆ ಆನಂದಭರಿತರಾದರು. ಈ ಕಲಿಯುಗದಲ್ಲಿ ಬಹುತೇಕ ಜನರು ಮೂಢರು ಮತ್ತು ವೇದಾಂತ ತತ್ತ್ವವನ್ನು ಅರ್ಥಮಾಡಿಕೊಳ್ಳುವಷ್ಟು ವಿದ್ಯಾವಂತರಲ್ಲ; ಅಪರಾಧರಹಿತವಾಗಿ ಭಗವಂತನ ದಿವ್ಯನಾಮ ಜಪ ಮಾಡುವುದರಿಂದ ವೇದಾಂತತತ್ತ್ವದ ಘನ ಉದ್ದೇಶವು ಕೈಗೂಡುತ್ತದೆ. ವೇದಾಂತವು ವೇದಜ್ಞಾನದ ಕೊನೆಯ ಮಾತು, ಮತ್ತು ವೇದಾಂತತತ್ತ್ವದ ಕರ್ತೃವೂ ಹಾಗೂ ತಿಳಿದವನೂ ಭಗವಾನ್ ಕೃಷ್ಣನೇ; ಭಗವನ್ನಾಮ ಜಪದಲ್ಲಿ ಸುಖಿಸುವ ಮಹಾತ್ಮನೇ ಅತ್ಯುನ್ನತ ವೇದಾಂತಿ. ಇದುವೇ ವೇದ ರಹಸ್ಯವೆಲ್ಲದರ ಅಂತಿಮ ಉದ್ದೇಶ.

**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।**
**ಮಾ ಕರ್ಮಫಲಹೇತುರ್ಭೂರ್ ಮಾ ತೇ ಸಂಗೋಽಸ್ತ್ವಕರ್ಮಣಿ ॥೪೭॥**

ಕರ್ಮಣಿ—ವಿಧಿತ ಕರ್ತವ್ಯಗಳಲ್ಲಿ, ಏವ—ಖಂಡಿತವಾಗಿ, ಅಧಿಕಾರಃ—ಅಧಿಕಾರವು, ತೇ—ನಿನ್ನ, ಮಾ—ಎಂದಿಗೂ ಇಲ್ಲ, ಫಲೇಷು—ಫಲಗಳಲ್ಲಿ, ಕದಾಚನ—ಯಾವುದೇ ಕಾಲದಲ್ಲಿಯೂ, ಮಾ—ಎಂದಿಗೂ ಇಲ್ಲ, ಕರ್ಮಫಲ—ಕರ್ಮದ ಫಲದಲ್ಲಿ, ಹೇತುಃ—ಕಾರಣ, ಭೂಃ—ಆಗುವುದು, ಮಾ—ಎಂದಿಗೂ ಇಲ್ಲ, ತೇ—ನಿನ್ನ, ಸಂಗಃ—ಆಕ್ಕರೆ, ಅಸ್ತು—ಇರಬೇಕು, ಅಕರ್ಮಣಿ—ವಿಧಿತ ಕರ್ಮಗಳನ್ನು ಮಾಡದಿರುವುದರಲ್ಲಿ.

**ನಿನ್ನ ಕರ್ಮಗಳನ್ನು ಮಾಡಲು ನಿನಗೆ ಹಕ್ಕಿರುವುದು. ಆದರೆ ನೀನು ಕರ್ಮ ಫಲಗಳಿಗೆ ಬಾಧ್ಯನಲ್ಲ. ನಿನ್ನ ಕರ್ಮಫಲಗಳಿಗೆ ನೀನೆ ಕಾರಣನೆಂದು ಎಂದೂ ತಿಳಿಯಬೇಡ ಮತ್ತು ನಿನ್ನ ಕರ್ತವ್ಯವನ್ನು ಮಾಡದಿರುವುದಕ್ಕೆ ಎಂದಿಗೂ ಆಸಕ್ತನಾಗಬೇಡ.**

**ಭಾವಾರ್ಥ :** ಇಲ್ಲಿ ಮೂರು ವಿಚಾರಗಳಿವೆ: ವಿಧಿತ ಕರ್ತವ್ಯಗಳು, ಮನಬಂದಂತೆ ಮಾಡುವ ಕೆಲಸ ಮತ್ತು ಕೆಲಸ ಮಾಡದಿರುವಿಕೆ. ಈ ವಿಧಿತ ಕರ್ತವ್ಯಗಳು ಒಬ್ಬನು ಗಳಿಸಿಕೊಂಡಿರುವ ಭೌತಿಕ ಪ್ರಕೃತಿಯ ಗುಣಾನುಸಾರ ಮಾಡಬೇಕಾದ ಕಾರ್ಯಗಳು. ಮನಬಂದಂತೆ ಮಾಡುವ ಕೆಲಸವೆಂದರೆ ಶಾಸ್ತ್ರಾಧಿಕಾರದ ಅನುಮತಿ ಇಲ್ಲದ ಕಾರ್ಯಗಳು, ಮತ್ತು ಕೆಲಸ ಮಾಡದಿರುವಿಕೆ ಎಂದರೆ ಒಬ್ಬನು ತನ್ನ ವಿಧಿತ ಕರ್ತವ್ಯಗಳನ್ನು ಮಾಡದಿರುವುದು. ಅರ್ಜುನನು ಕೆಲಸ ಮಾಡದಿರಬಾರದೆಂದೂ, ಆದರೆ ಫಲಿತಾಂಶಕ್ಕೆ ಆಸಕ್ತಿಯುಳ್ಳದವನಾಗಿ ತನ್ನ ವಿಧಿತ ಕರ್ತವ್ಯಗಳನ್ನು ಮಾಡಬೇಕೆಂದೂ ಭಗವಂತನು ಬೋಧಿಸಿದನು. ತನ್ನ ಕೆಲಸದ ಫಲಕ್ಕೆ ಆಸಕ್ತನಾದವನು ಕೆಲಸಕ್ಕೆ ಕಾರಣನೂ ಸಹ ಆಗುತ್ತಾನೆ. ಹೀಗೆ ಅಂಥ ಕ್ರಿಯೆಗಳ ಸುಖಭೋಗಿ ಅಥವಾ ಕಷ್ಟಾನುಭವಿ ಆಗುವನು.

ವಿಧಿತ ಕರ್ತವ್ಯಗಳ ಮಟ್ಟಿಗೆ ಹೇಳುವುದಾದರೆ, ಅವುಗಳನ್ನು ಮೂರು ಉಪ ವಿಭಾಗಗಳಲ್ಲಿ, ಎಂದರೆ ನಿತ್ಯಕರ್ಮ, ನೈಮಿತ್ತಿಕ ಕರ್ಮ ಮತ್ತು ಕಾಮ್ಯಕರ್ಮ ಎಂದು ವಿಭಜಿಸ

ಲಾಗಿದೆ. ಫಲಾಪೇಕ್ಷೆ ಇಲ್ಲದೆ ಶಾಸ್ತ್ರಾಜ್ಞೆಗಳಿಗೆ ಅನುಸಾರವಾಗಿ ಆಚರಿಸುವ ನಿತ್ಯಕರ್ಮವು ಸತ್ತ್ವಗುಣದಲ್ಲಿನ ಕರ್ಮವಾಗುತ್ತದೆ. ಫಲಾಪೇಕ್ಷೆಯಿಂದ ಮಾಡಿದ ಕರ್ಮಗಳು ಬಂಧನಕ್ಕೆ ಕಾರಣವಾಗುತ್ತವೆ: ಆದ್ದರಿಂದ ಅಂಥವು ಮಂಗಳಕರವಲ್ಲ. ಪ್ರತಿಯೊಬ್ಬನಿಗೂ ವಿಧಿತ ಕರ್ತವ್ಯಗಳಿಗೆ ಸಂಬಂಧಿಸಿದಂತೆ ಅವನ ಸ್ವಾಮ್ಯಾಧಿಕಾರವಿರುತ್ತದೆ. ಆದರೆ ಫಲಿತಾಂಶಕ್ಕೆ ಆಸಕ್ತರಾಗದೆ ಕೆಲಸಮಾಡಬೇಕು. ಇಂಥ ಅನಾಸಕ್ತ ಆಭಾರ ಕರ್ತವ್ಯಗಳು ನಿಸ್ಸಂದೇಹವಾಗಿ ಒಬ್ಬನನ್ನು ಮೋಕ್ಷ ಮಾರ್ಗಕ್ಕೆ ಕರೆದೊಯ್ಯುತ್ತವೆ.

ಆದ್ದರಿಂದ ಫಲಾಸಕ್ತಿಯಿಲ್ಲದೆ ಕರ್ತವ್ಯವೆಂದು ತಿಳಿದು ಯುದ್ಧ ಮಾಡಬೇಕೆಂದು ಅರ್ಜುನನಿಗೆ ಭಗವಂತನು ಬೋಧಿಸಿದನು. ಅವನು ಯುದ್ಧದಲ್ಲಿ ಭಾಗವಹಿಸದಿರುವುದು ಆಸಕ್ತಿಯ ಮತ್ತೊಂದು ಪಾರ್ಶ್ವ. ಅಂಥ ಆಸಕ್ತಿಯು ಒಬ್ಬನನ್ನು ಎಂದಿಗೂ ಮೋಕ್ಷ ಮಾರ್ಗಕ್ಕೆ ಕೊಂಡೊಯ್ಯುವುದಿಲ್ಲ. ಧನಾತ್ಮಕ ಅಥವಾ ಋಣಾತ್ಮಕವಾದ ಯಾವುದೇ ಆಸಕ್ತಿಯಾಗಿರಲಿ, ಬಂಧನಕ್ಕೆ ಕಾರಣವಾಗುತ್ತದೆ. ವಿಧಿತ ಕರ್ತವ್ಯಗಳನ್ನು ಮಾಡದಿರುವುದು ಪಾಪ. ಆದ್ದರಿಂದ ಕರ್ತವ್ಯವೆಂದು ತಿಳಿದು ಯುದ್ಧ ಮಾಡುವುದು ಅರ್ಜುನನಿಗೆ ಮೋಕ್ಷಕ್ಕೆ ಏಕೈಕ ಮಂಗಳ ಮಾರ್ಗವಾಗಿದ್ದಿತು.

**ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ।**
**ಸಿದ್ಧ್ಯಸಿದ್ಧ್ಯೋಃ ಸಮೋಭೂತ್ವಾ ಸಮತ್ವಂ ಯೋಗ ಉಚ್ಯತೇ ॥ ೪೮ ॥**

ಯೋಗಸ್ಥ —ಸಾಮ್ಯಾವಸ್ಥೆಯಲ್ಲಿದ್ದು, ಕುರು—ಮಾಡು, ಕರ್ಮಾಣಿ—ನಿನ್ನ ಕರ್ತವ್ಯಗಳನ್ನು, ಸಂಗಮ್—ಅಕ್ಕರೆಯನ್ನು, ತ್ಯಕ್ತ್ವಾ—ಬಿಟ್ಟು, ಧನಂಜಯ—ಹೇ ಅರ್ಜುನ,ಸಿದ್ಧಿ–ಅಸಿದ್ಧ್ಯೋಃ—ಜಯಾಪಜಯಗಳಲ್ಲಿ,ಸಮಃ—ಸಾಮ್ಯಾವಸ್ಥೆ,ಭೂತ್ವಾಃ— ಉಳ್ಳವನಾಗಿ, ಸಮತ್ವಮ್—ಸಮಚಿತ್ತತೆಯು, ಯೋಗಃ—ಯೋಗ, ಉಚ್ಯತೇ—ಎನಿಸಿಕೊಳ್ಳುತ್ತದೆ.

**ಹೇ ಅರ್ಜುನ, ಜಯಾಪಜಯಗಳಲ್ಲಿ ಎಲ್ಲ ಅಕ್ಕರೆಯನ್ನೂ ತೊರೆದು, ಸಮಚಿತ್ತತೆಯಲ್ಲಿ ನಿನ್ನ ಕರ್ತವ್ಯಮಾಡು. ಇಂಥ ಸಾಮ್ಯಾವಸ್ಥೆಯು ಯೋಗವೆಂದು ಕರೆಯಲ್ಪಡುವುದು.**

**ಭಾವಾರ್ಥ :** ಅರ್ಜುನನು ಯೋಗಸ್ಥನಾಗಿ ಕರ್ಮಮಾಡಬೇಕೆಂದು ಕೃಷ್ಣನು ಹೇಳುತ್ತಾನೆ. ಯೋಗ ಎಂದರೆ ಏನು ? ಸದಾ ಕ್ಷೋಭೆ ಉಂಟುಮಾಡುವ ಇಂದ್ರಿಯಗಳನ್ನು ನಿಗ್ರಹಿಸಿ ಮನಸ್ಸನ್ನು ಪರಮನಲ್ಲಿ ಕೇಂದ್ರೀಕರಿಸುವುದು ಯೋಗದ ಅರ್ಥ. ಪರಮನು ಯಾರು ? ಪರಮನು ಭಗವಂತ. ಯುದ್ಧ ಮಾಡುವಂತೆ ಸ್ವತಃ ಭಗವಂತನೇ ಅರ್ಜುನನಿಗೆ ಹೇಳುತ್ತಿರುವುದರಿಂದ, ಅರ್ಜುನನು ಯುದ್ಧ ಪರಿಣಾಮಗಳನ್ನು ಕುರಿತು ಮಾಡಬೇಕಾದುದು ಏನೂ ಇಲ್ಲ. ಜಯ ಅಥವಾ ಲಾಭ ಕೃಷ್ಣನಿಗೆ ಸಂಬಂಧಿಸಿದ್ದು. ಅರ್ಜುನನು ಕೃಷ್ಣನ ಆದೇಶಾನುಸಾರ ಕೇವಲ ವರ್ತಿಸುವಂತೆ ಬೋಧಿಸಲ್ಪಟ್ಟನು. ಕೃಷ್ಣನ ಆದೇಶವನ್ನು ಅನುಸರಿಸುವುದು ನಿಜವಾದ ಯೋಗ; ಮತ್ತು ಇದನ್ನು ಆಚರಿಸುವುದೇ ಕೃಷ್ಣಪ್ರಜ್ಞಾ ಎನಿಸಿರುವ ವಿಧಾನ. ಕೃಷ್ಣ ಪ್ರಜ್ಞೆಯಿಂದ ಮಾತ್ರವೇ ಒಬ್ಬನು ಸ್ವಾಮಿತ್ವದ ಭಾವವನ್ನು ತ್ಯಜಿಸಬಹುದು.

ಒಬ್ಬನು ಕೃಷ್ಣದಾಸನಾಗಬೇಕು ಅಥವಾ ಕೃಷ್ಣನ ದಾಸನ ದಾಸನಾಗಬೇಕು. ಕೃಷ್ಣಪ್ರಜ್ಞೆಯಲ್ಲಿ ಕರ್ತವ್ಯ ನಿರ್ವಹಣೆಗೆ, ಇದೇ ಸರಿಯಾದ ಮಾರ್ಗ. ಒಬ್ಬನು ಯೋಗಸ್ಥನಾಗಿ ಕರ್ಮ ಮಾಡಲು ಇದೊಂದೇ ಸಹಾಯಕವಾಗುವುದು.

ಅರ್ಜುನನು ಕ್ಷತ್ರಿಯನು, ಮತ್ತು ಹಾಗಿದ್ದು ಅವನು ವರ್ಣಾಶ್ರಮಧರ್ಮ ಪದ್ಧತಿಯಲ್ಲಿ ಭಾಗವಹಿಸುತ್ತಿರುವನು. ವರ್ಣಾಶ್ರಮಧರ್ಮದ ಪೂರ್ಣೋದ್ದೇಶವು ವಿಷ್ಣುವನ್ನು ತೃಪ್ತಿಗೊಳಿಸುವುದು, ಎಂದು ವಿಷ್ಣುಪುರಾಣದಲ್ಲಿ ಹೇಳಿದೆ. ಭೌತಿಕ ಪ್ರಪಂಚದಲ್ಲಿನ ರೂಢಿಯಂತೆ, ಯಾರೂ ತನ್ನನ್ನೇ ತೃಪ್ತಿಪಡಿಸಿಕೊಳ್ಳದೆ, ಕೃಷ್ಣನನ್ನು ತೃಪ್ತಿಪಡಿಸಬೇಕು. ಆದ್ದರಿಂದ ಕೃಷ್ಣನನ್ನು ತೃಪ್ತಿಪಡಿಸದೆ ಒಬ್ಬನು ವರ್ಣಾಶ್ರಮದ ಧರ್ಮತತ್ವಗಳನ್ನು ಸರಿಯಾಗಿ ಪಾಲಿಸಲಾರನು. ಕೃಷ್ಣನು ಹೇಳಿದಂತೆ ನಡೆಯಬೇಕೆಂದು, ಪರೋಕ್ಷವಾಗಿ ಅರ್ಜುನನಿಗೆ ಸೂಚಿಸಲಾಯಿತು.

**ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ ।**
**ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ॥ ೪೯ ॥**

ದೂರೇಣ—ಅದನ್ನು ಬಹುದೂರದಲ್ಲೇ ತೊರೆದು, ಹಿ—ಖಂಡಿತವಾಗಿ, ಅವರಮ್—ಹೇಯ, ಕರ್ಮ—ಕರ್ಮವನ್ನು, ಬುದ್ಧಿಯೋಗಾತ್—ಕೃಷ್ಣ ಪ್ರಜ್ಞೆಯ ಬಲದಿಂದ, ಧನಂಜಯ—ಹೇ ಸಂಪತ್ತಿನ ವಿಜಯನೇ, ಬುದ್ಧೌ—ಅಂಥ ಪ್ರಜ್ಞೆಯಲ್ಲಿ, ಶರಣಮ್—ಪೂರ್ಣ ಶರಣಾಗತಿಗೆ, ಅನ್ವಿಚ್ಛ—ಪ್ರಯತ್ನಿಸು, ಕೃಪಣಾಃ—ಕೃಪಣರು, ಫಲಹೇತವಃ—ಕಾಮ್ಯಕರ್ಮ ಫಲಾಪೇಕ್ಷಿಗಳು.

**ಹೇ ಧನಂಜಯ, ಭಕ್ತಿಯುತ ಸೇವೆಯ ಮೂಲಕ ಎಲ್ಲ ಹೇಯ ಕರ್ಮಗಳನ್ನು ದೂರವಿರಿಸು, ಮತ್ತು ಆ ಪ್ರಜ್ಞೆಯಲ್ಲಿ ಭಗವಂತನಿಗೆ ಶರಣಾಗತನಾಗು. ತಮ್ಮ ಕರ್ಮಫಲಗಳನ್ನು ಆನಂದಿಸಲು ಬಯಸುವವರು ಕೃಪಣರು.**

**ಭಾವಾರ್ಥ :** ತಾನು ಭಗವಂತನ ನಿತ್ಯದಾಸನೆಂಬ ತನ್ನ ಸ್ವರೂಪಸ್ಥಿತಿಯನ್ನು ನಿಜವಾಗಿ ಅರಿತುಕೊಂಡವನು, ಕೃಷ್ಣಪ್ರಜ್ಞೆಯಲ್ಲಿ ಕೆಲಸ ಮಾಡುವುದರ ಹೊರತು, ಬೇರೆ ಎಲ್ಲ ಕೆಲಸಗಳನ್ನು ತ್ಯಜಿಸುತ್ತಾನೆ. ಈಗಾಗಲೇ ವಿವರಿಸಿದಂತೆ, ಬುದ್ಧಿಯೋಗ ಎಂದರೆ ಭಗವಂತನಿಗೆ ಮಾಡುವ ದಿವ್ಯಪ್ರೇಮಯುತ ಸೇವೆ. ಇಂಥ ಭಕ್ತಿಯುತ ಸೇವೆಯು ಜೀವನಿಗೆ ಕರ್ಮದ ಉಚಿತಮಾರ್ಗವಾಗಿದೆ. ಕೃಪಣರು ಮಾತ್ರವೇ ಮತ್ತಷ್ಟು ಭೌತಿಕ ಬಂಧನದಲ್ಲಿ ಸಿಲುಕಿಕೊಳ್ಳಲು ತಮ್ಮ ಕರ್ಮ ಫಲಗಳನ್ನು ಭೋಗಿಸಬಯಸುತ್ತಾರೆ. ಕೃಷ್ಣಪ್ರಜ್ಞೆಯಲ್ಲಿನ ಕರ್ಮವನ್ನುಳಿದು ಎಲ್ಲವೂ ಹೇಯಕರವಾದುದು, ಏಕೆಂದರೆ ಅವು ಕರ್ಮ ಮಾಡುವವನನ್ನು ಜನನ ಮರಣಗಳ ಚಕ್ರಕ್ಕೆ ನಿರಂತರವಾಗಿ ಸಿಲುಕಿಸುತ್ತವೆ. ಆದುದರಿಂದ ಒಬ್ಬನು ಕರ್ಮಕ್ಕೆ ಕಾರಣನಾಗಲು ಎಂದಿಗೂ ಇಚ್ಛಿಸಕೂಡದು. ಪ್ರತಿಯೊಂದನ್ನು ಕೃಷ್ಣಪ್ರಜ್ಞೆಯಲ್ಲಿ ಕೃಷ್ಣನ ತೃಪ್ತಿಗಾಗಿ ಮಾಡಬೇಕು. ಸುದೈವದಿಂದಲೋ ಬಹುಶ್ರಮದಿಂದಲೋ ಗಳಿಸಿದ ಸಂಪತ್ತನ್ನು ಹೇಗೆ ವಿನಿಯೋಗಿಸಬೇಕು ಎಂಬುದು ಕೃಪಣರಿಗೆ ತಿಳಿದಿರುವುದಿಲ್ಲ. ಒಬ್ಬನು ಕೃಷ್ಣಪ್ರಜ್ಞೆಯಲ್ಲಿ ಕೆಲಸಮಾಡುತ್ತ ಎಲ್ಲ ಶಕ್ತಿಗಳನ್ನು ವಿನಿಯೋಗಿಸಬೇಕು, ಮತ್ತು ಅದುವೇ

ಒಬ್ಬನ ಜೀವನವನ್ನು ಜಯಪ್ರದವಾಗಿಸುತ್ತದೆ. ಕೃಪಣರಂತೆ, ದುರದೃಷ್ಟವ್ಯಕ್ತಿಗಳು ತಮ್ಮ ಮಾನವಶಕ್ತಿಯನ್ನು ಭಗವಂತನ ಸೇವೆಯಲ್ಲಿ ವಿನಿಯೋಗಿಸುವುದಿಲ್ಲ.

**ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ ।**
**ತಸ್ಮಾದ್ ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಮ್ ॥ ೫೦ ॥**

ಬುದ್ಧಿಯುಕ್ತಃ—ಭಕ್ತಿಯುತ ಸೇವೆಯಲ್ಲಿ ತೊಡಗಿರುವವನು, ಜಹಾತಿ—ವಿಮೋಚಿಸಿಕೊಳ್ಳಬಹುದು, ಇಹ—ಈ ಜನ್ಮದಲ್ಲಿ, ಉಭೇ—ಎರಡರಿಂದ, ಸುಕೃತದುಷ್ಕೃತೇ—ಒಳ್ಳೆಯ ಮತ್ತು ಕೆಟ್ಟ ಫಲಗಳಿಂದ, ತಸ್ಮಾತ್—ಆದುದರಿಂದ, ಯೋಗಾಯ—ಭಕ್ತಿಯುತ ಸೇವೆಯ ಸಲುವಾಗಿ, ಯುಜ್ಯಸ್ವ—ಹಾಗೇ ತೊಡಗಿರು, ಯೋಗಃ—ಕೃಷ್ಣಪ್ರಜ್ಞೆಯು, ಕರ್ಮಸು—ಎಲ್ಲ ಕಾರ್ಯಕಲಾಪಗಳಲ್ಲಿನ, ಕೌಶಲಮ್—ಕೌಶಲ್ಯವು.

**ಭಕ್ತಿಯುತ ಸೇವೆಯಲ್ಲಿ ತೊಡಗಿದವನು ಈ ಜನ್ಮದಲ್ಲಿಯೇ ಸತ್ಕರ್ಮ ದುಷ್ಕರ್ಮಗಳಿಂದ ವಿಮೋಚಿಸಿಕೊಳ್ಳುತ್ತಾನೆ. ಆದ್ದರಿಂದ ಕರ್ಮವೆಲ್ಲದರ ಕೌಶಲವಾಗಿರುವ ಯೋಗಕ್ಕಾಗಿ ಯತ್ನಿಸು.**

**ಭಾವಾರ್ಥ:** ಅನಾದಿಕಾಲದಿಂದಲೂ ಪ್ರತಿಯೊಬ್ಬ ಜೀವಿಯೂ ತನ್ನ ಒಳ್ಳೆಯ ಮತ್ತು ಕೆಟ್ಟ ಕೆಲಸಗಳ ಫಲಗಳನ್ನು ಸಂಚಯ ಮಾಡಿಕೊಂಡಿದ್ದಾನೆ. ಹಾಗಾಗಿ ಅವನು ತನ್ನ ನಿಜಸ್ವರೂಪಸ್ಥಿತಿಯ ಬಗ್ಗೆ ಸತತವಾಗಿ ಅಜ್ಞಾನಿ. ಎಲ್ಲ ವಿಧಗಳಲ್ಲಿಯೂ ಶ್ರೀಕೃಷ್ಣನಿಗೆ ಶರಣಾಗತನಾಗಿ ಜನ್ಮಜನ್ಮಾನುಗತವಾಗಿರುವ ಕ್ರಿಯೆ-ಪ್ರತಿಕ್ರಿಯೆಗಳ ಶೃಂಖಲ ಬಂಧನದಿಂದ ವಿಮೋಚಿಸಿಕೊಳ್ಳುವಂತೆ ಭಗವದ್ಗೀತೆಯು ಬೋಧಿಸುತ್ತದೆ ಮತ್ತು ಈ ಉಪದೇಶದಿಂದ ಒಬ್ಬನ ಅಜ್ಞಾನವನ್ನು ನಿವಾರಿಸಬಹುದು. ಆದ್ದರಿಂದ ಕರ್ಮಫಲಗಳನ್ನು ಪರಿಶುದ್ಧಗೊಳಿಸುವ ವಿಧಾನವಾದ ಕೃಷ್ಣಪ್ರಜ್ಞೆಯಲ್ಲಿ ಕರ್ಮಮಾಡುವಂತೆ ಅರ್ಜುನನಿಗೆ ಸಲಹೆ ನೀಡಲಾಯಿತು.

**ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ ।**
**ಜನ್ಮಬನ್ಧವಿನಿರ್ಮುಕ್ತಾಃ ಪದಂ ಗಚ್ಛನ್ತ್ಯನಾಮಯಮ್ ॥ ೫೧ ॥**

ಕರ್ಮಜಮ್—ಕಾಮ್ಯಕರ್ಮಗಳ ನಿಮಿತ್ತ, ಬುದ್ಧಿಯುಕ್ತಾಃ—ಭಕ್ತಿಯುತ ಸೇವೆಯಲ್ಲಿ ತೊಡಗಿ, ಹಿ—ಖಂಡಿತವಾಗಿ, ಫಲಮ್—ಫಲಗಳನ್ನು, ತ್ಯಕ್ತ್ವಾ—ತ್ಯಜಿಸಿ, ಮನೀಷಿಣಃ—ಮಹರ್ಷಿಗಳು ಮತ್ತು ಭಕ್ತರು, ಜನ್ಮಬನ್ಧ—ಜನನ ಮರಣಗಳ ಬಂಧನದಿಂದ, ವಿನಿರ್ಮುಕ್ತಾಃ—ಮುಕ್ತರಾಗಿ, ಪದಮ್—ಸ್ಥಾನವನ್ನು, ಗಚ್ಛನ್ತಿ—ಅವರು ತಲಪುತ್ತಾರೆ, ಅನಾಮಯಮ್—ಕ್ಲೇಶರಹಿತವಾದ.

**ಹೀಗೆ ಮಹರ್ಷಿಗಳು ಅಥವಾ ಭಕ್ತರು ಭಗವಂತನ ಭಕ್ತಿಯುತ ಸೇವೆಯಲ್ಲಿ ತೊಡಗಿ, ತಮ್ಮನ್ನು ಭೌತಿಕ ಪ್ರಪಂಚದ ಕರ್ಮಫಲಗಳಿಂದ ವಿಮೋಚಿಸಿಕೊಳ್ಳುತ್ತಾರೆ. ಹೀಗೆ ಅವರು ಜನನ-ಮರಣಗಳ ಚಕ್ರದಿಂದ ಮುಕ್ತರಾಗುತ್ತಾರೆ ಮತ್ತು (ಭಗವದ್ಧಾಮಕ್ಕೆ ತೆರಳಿ) ಸಕಲ ಕ್ಲೇಶಗಳಿಗೆ ಅತೀತವಾದ ಸ್ಥಾನವನ್ನು ಹೊಂದುತ್ತಾರೆ.**

**ಭಾವಾರ್ಥ :** ಮುಕ್ತ ಜೀವಿಗಳು ಭೌತಿಕ ಕ್ಲೇಶರಹಿತ ಸ್ಥಳಕ್ಕೆ ಸೇರಿದವರು. ಭಾಗವತವು (10. 14. 58) ಹೀಗೆ ಹೇಳುತ್ತದೆ :

ಸಮಾಶ್ರಿತಾ ಯೇ ಪದಪಲ್ಲವಪ್ಲವಂ
ಮಹತ್ಪದಂ ಪುಣ್ಯಯಶೋ ಮುರಾರೇಃ।
ಭವಾಂಬುಧಿರ್ ವತ್ಸಪದಂ ಪರಂ ಪದಂ
ಪದಂ ಪದಂ ಯದ್ವಿಪದಾಂ ನ ತೇಷಾಮ್॥

"ವಿಶ್ವದ ಅಭಿವ್ಯಕ್ತತೆಗೆ ಆಶ್ರಯದಾತನು ಮತ್ತು ಮುಕ್ತಿಪ್ರದನಾದ ಮುಕುಂದನೆಂದು ಪ್ರಸಿದ್ಧನಾದ ಭಗವಂತನ ಪಾದಕಮಲಗಳ ದೋಣಿಯನ್ನು ಸ್ವೀಕರಿಸಿದವನಿಗೆ, ಈ ಸಾಂಸಾರಿಕ ಜಗತ್ತಿನ ಸಾಗರವು ಒಂದು ಕರುವಿನ ಹೆಜ್ಜೆಯ ಗುರುತಿನಲ್ಲಿ ನಿಂತ ನೀರಿನಂತೆ. **ಪರಂ ಪದಮ್,** ಅಥವಾ ಭೌತಿಕ ಕ್ಲೇಶರಹಿತ ಸ್ಥಳ ಅಥವಾ ವೈಕುಂಠ, ಅವನ ಗುರಿಯೇ ವಿನಾ ಜೀವನದ ಪ್ರತಿಯೊಂದು ಹೆಜ್ಜೆಯಲ್ಲಿಯೂ ಅಪಾಯವಿರುವ ಸ್ಥಳವಲ್ಲ."

ಅಜ್ಞಾನದಿಂದಾಗಿ, ಒಬ್ಬನು ಈ ಭೌತಿಕ ಜಗತ್ತು ಹೆಜ್ಜೆ ಹೆಜ್ಜೆಗೂ ಕ್ಲೇಶಮಯ ಸ್ಥಳವೆಂದು ತಿಳಿದಿರುವುದಿಲ್ಲ. ಅಜ್ಞಾನದಿಂದಲೇ, ಬುದ್ಧಿಹೀನರು ಕರ್ಮ ಫಲಗಳು ತಮ್ಮನ್ನು ಸಂತೋಷಪಡಿಸುವುವೆಂದು ತಿಳಿದು ಕಾಮ್ಯ ಕರ್ಮಗಳಿಂದ ಸ್ಥಿತಿಗತಿಗಳಿಗೆ ಹೊಂದಾಣಿಕೆ ಮಾಡಿಕೊಳ್ಳಲು ಯತ್ನಿಸುತ್ತಾರೆ. ಈ ಬ್ರಹ್ಮಾಂಡದಲ್ಲಿನ ಯಾವ ಬಗೆಯ ದೇಹವೂ ಕ್ಲೇಶರಹಿತವಾದ ಜೀವನವನ್ನು ನೀಡುವುದಿಲ್ಲ ಎಂಬುದನ್ನು ಅವರು ತಿಳಿದಿರುವುದಿಲ್ಲ. ಈ ಭೌತಿಕ ಪ್ರಪಂಚದಲ್ಲಿ ಎಲ್ಲ ಕಡೆಯಲ್ಲಿಯೂ ಜೀವನದ ಕ್ಲೇಶಗಳು, ಎಂದರೆ ಜನನ, ಮರಣ, ಜರಾ ಮತ್ತು ವ್ಯಾಧಿಗಳು ಇವೆ. ಆದರೆ ತಾನು ಭಗವಂತನ ನಿತ್ಯದಾಸನೆಂಬ ನಿಜ ಸ್ವರೂಪ ಸ್ಥಿತಿಯನ್ನು ಅರಿತವನು ಮತ್ತು ಹೀಗೆ ದೇವೋತ್ತಮ ಪುರುಷನ ಸ್ಥಾನವನ್ನು ತಿಳಿದವನು, ಭಗವಂತನ ದಿವ್ಯ ಪ್ರೇಮಯುತ ಸೇವೆಯಲ್ಲಿ ತೊಡಗುತ್ತಾನೆ. ಪರಿಣಾಮವಾಗಿ, ಅವನು ಭೌತಿಕ ಅಥವಾ ಕ್ಲೇಶದಾಯಕ ಜೀವನವಿಲ್ಲದ, ಮತ್ತು ಕಾಲ ಮತ್ತು ಮೃತ್ಯುವಿನ ಪ್ರಭಾವವೂ ಇಲ್ಲದ ವೈಕುಂಠಲೋಕಗಳನ್ನು ಪ್ರವೇಶಿಸಲು ಅರ್ಹನಾಗುತ್ತಾನೆ. ಒಬ್ಬನು ತನ್ನ ಸ್ವರೂಪ ಸ್ಥಿತಿಯನ್ನು ತಿಳಿದುಕೊಳ್ಳುವುದೆಂದರೆ ಭಗವಂತನ ಭವ್ಯೋನ್ನತ ಸ್ಥಾನವನ್ನೂ ತಿಳಿದುಕೊಳ್ಳುವುದು. ಜೀವಿಯ ಮತ್ತು ಭಗವಂತನ ಸ್ಥಾನವು ಒಂದೇ ಮಟ್ಟದಲ್ಲಿವೆ ಎಂದು ತಪ್ಪಾಗಿ ಭಾವಿಸುವವನು ಅಂಧಕಾರದಲ್ಲಿದ್ದಾನೆ ಎಂದು ತಿಳಿಯಬೇಕು. ಆ ಕಾರಣದಿಂದ ಅವನು ಭಗವಂತನ ಭಕ್ತಿಯುತ ಸೇವೆಯಲ್ಲಿ ನಿರತನಾಗಲಾರನು. ಅವನು ಸ್ವಯಂ ಸ್ವಾಮಿಯಾಗಿ, ಜನನಮರಣಗಳ ಪುನರಾವೃತ್ತಿಗೆ ಮಾರ್ಗ ನಿರ್ಮಿಸಿಕೊಳ್ಳುತ್ತಾನೆ. ಆದರೆ ಯಾರು, ಸೇವೆ ಮಾಡುವುದೇ ತನ್ನ ಸ್ಥಾನ ಎಂದು ಅರಿತು ಭಗವತ್ಸೇವೆಗೆ ವರ್ಗಾಯಿಸಿಕೊಳ್ಳುವನೋ, ಅವನು ಕೂಡಲೇ ವೈಕುಂಠಲೋಕಕ್ಕೆ ಅರ್ಹನಾಗುತ್ತಾನೆ. ಭಗವಂತನ ನಿಮಿತ್ತಸೇವೆಯನ್ನು **ಕರ್ಮಯೋಗ** ಅಥವಾ **ಬುದ್ಧಿಯೋಗ** ಅಥವಾ ಸರಳ ಶಬ್ದಗಳಲ್ಲಿ, ಭಗವಂತನಲ್ಲಿ ಭಕ್ತಿಯುತಸೇವೆ ಎಂದು ಕರೆಯುವರು.

**ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ ।**
**ತದಾ ಗನ್ತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ । ।।೫೨।।**

ಯದಾ—ಯಾವಾಗ, ತೇ—ನಿನ್ನ, ಮೋಹ—ಭ್ರಮೆಯ, ಕಲಿಲಂ—ಗೊಂಡಾರಣ್ಯವನ್ನು, ಬುದ್ಧಿಃ—ಬುದ್ಧಿಯುಕ್ತ ದಿವ್ಯಸೇವೆಯಿಂದ, ವ್ಯತಿತರಿಷ್ಯತಿ—ದಾಟುವುದೋ, ತದಾ—ಆಗ, ಗನ್ತಾಅಸಿ—ನೀನು ಆಗುವೆ, ನಿರ್ವೇದಮ್—ಕಠಿಣ, ಶ್ರೋತವ್ಯಸ್ಯ—ಕೇಳಬೇಕಾದುದರೆಲ್ಲದರ ಬಗ್ಗೆ, ಶ್ರುತಸ್ಯ—ಈಗಾಗಲೇ ಕೇಳಿರುವುದರ ಬಗ್ಗೆ, ಚ—ಕೂಡ.

**ನಿನ್ನ ಬುದ್ಧಿಯು ಭ್ರಮೆಯ ಗೊಂಡಾರಣ್ಯವನ್ನು ದಾಟಿಹೋದಾಗ, ನೀನು ಕೇಳಿದ್ದ ಎಲ್ಲದರ ಮತ್ತು ಕೇಳಬೇಕಾಗಿರುವ ಎಲ್ಲದರ ಬಗ್ಗೆ ಉದಾಸೀನನಾಗುವೆ.**

**ಭಾವಾರ್ಥ :** ಭಗವಂತನಲ್ಲಿ ಭಕ್ತಿಯುತ ಸೇವೆ ಮಾತ್ರದಿಂದಲೇ ವೈದಿಕ ಕರ್ಮಾಚರಣೆಗಳ ಬಗ್ಗೆ ಉದಾಸೀನರಾದ ಮಹಾ ಭಗವದ್ಭಕ್ತರ ಜೀವನಗಳಲ್ಲಿ ಅನೇಕ ಒಳ್ಳೆಯ ಉದಾಹರಣೆಗಳಿವೆ. ಒಬ್ಬನು ಕೃಷ್ಣನನ್ನು ಮತ್ತು ಕೃಷ್ಣನೊಂದಿಗೆ ತನ್ನ ಸಂಬಂಧವನ್ನು ವಾಸ್ತವಿಕವಾಗಿ ಅರಿತಾಗ, ಅವನು, ಅನುಭವೀ ಬ್ರಾಹ್ಮಣನಾಗಿದ್ದರೂ, ಕಾಮ್ಯಕರ್ಮಗಳ ಆಚರಣೆಗಳಲ್ಲಿ ಸಹಜವಾಗಿಯೇ ಪೂರ್ಣ ಉದಾಸೀನನಾಗುತ್ತಾನೆ. ಭಕ್ತರ ಶ್ರೇಣಿಯಲ್ಲಿ ಮಹಾಭಕ್ತರು ಮತ್ತು ಆಚಾರ್ಯರಾದ ಶ್ರೀಮಾಧವೇಂದ್ರ ಪುರಿಯವರು ಹೀಗೆ ಹೇಳುತ್ತಾರೆ :

ಸಂಧ್ಯಾವಂದನ ಭದ್ರಮಸ್ತು ಭವತೋ ಭೋಃ ಸ್ನಾನ ತುಭ್ಯಂ ನಮೋ
ಭೋ ದೇವಾಃ ಪಿತರಶ್ಚ ತರ್ಪಣವಿಧೌ ನಾಹಂ ಕ್ಷಮಃ ಕ್ಷಮ್ಯತಾಮ್।
ಯತ್ರಕ್ವಾಪಿ ನಿಷದ್ಯ ಯಾದವಕುಲೋತ್ತಮಸ್ಯ ಕಂಸದ್ವಿಷಃ
ಸ್ಮಾರಂ ಸ್ಮಾರಮ್ ಅಘಂ ಹರಾಮಿ ತದಲಂ ಮನ್ಯೇ ಕಿಮನ್ಯೇನ ಮೇ॥

"ಹೇ ನನ್ನ ತ್ರಿಕಾಲ ಸಂಧ್ಯಾವಂದನವೇ, ನಿನಗೆ ಎಲ್ಲ ಜಯವಾಗಲಿ. ಹೇ ಸ್ನಾನವೇ, ನಿನಗೆ ನನ್ನ ನಮಸ್ಕಾರಗಳು. ಹೇ ದೇವತೆಗಳೇ ! ಹೇ ಪಿತೃಗಳೇ ! ನಿಮಗೆ ನನ್ನ ಗೌರವ ಅರ್ಪಿಸಲು ನನ್ನ ಅಶಕ್ತತೆಗಾಗಿ ನನ್ನನ್ನು ದಯವಿಟ್ಟು ಕ್ಷಮಿಸಿ. ಈಗ ನಾನು ಎಲ್ಲಿಯೇ ಕುಳಿತಿರಲಿ, ಅಲ್ಲಿ ಮಹಾ ಯಾದವಕುಲ ಸಂಭೂತನಾದ ಕಂಸಾರಿಯನ್ನು (ಕೃಷ್ಣನನ್ನು) ಸ್ಮರಿಸಬಲ್ಲೆ, ಮತ್ತು ಇದರಿಂದ ನಾನು ಸರ್ವಪಾಪಬಂಧನದಿಂದ ವಿಮೋಚಿಸಿಕೊಳ್ಳಬಲ್ಲೆ. ನನಗೆ ಇಷ್ಟು ಸಾಕು ಎಂದು ನಾನು ಭಾವಿಸುತ್ತೇನೆ."

ದಿನದ ತ್ರಿಸಂಧ್ಯಗಳಲ್ಲಿ ಎಲ್ಲ ವಿಧವಾದ ಸ್ತೋತ್ರಗಳನ್ನು ಗ್ರಹಿಸುವುದು, ಪ್ರಾತಃಸ್ನಾನ, ಪೂರ್ವಜರಿಗೆ ಗೌರವ ಸಮರ್ಪಣೆ ಇತ್ಯಾದಿಗಳನ್ನೊಳಗೊಂಡ ವೈದಿಕ ಕರ್ಮಾಚರಣೆಗಳು ಆರಂಭದಲ್ಲಿರುವವರಿಗೆ ಅವಶ್ಯ. ಆದರೆ ಒಬ್ಬನು ಸಂಪೂರ್ಣ ಕೃಷ್ಣಪ್ರಜ್ಞೆಯಲ್ಲಿದ್ದು ಭಗವಂತನ ದಿವ್ಯ ಪ್ರೇಮಯುತ ಸೇವೆಯಲ್ಲಿ ನಿರತನಾಗಿರುವಾಗ, ಅವನು ಆಗಲೇ ಪೂರ್ಣತೆಯನ್ನು ಪಡೆದಿರುವುದರಿಂದ, ಅವನು ಈ ಎಲ್ಲ ನಿಯಂತ್ರಣತತ್ವಗಳ ಬಗ್ಗೆ ಉದಾಸೀನನಾಗುತ್ತಾನೆ.ಒಬ್ಬನು ಪರಮಪ್ರಭು ಶ್ರೀಕೃಷ್ಣನ ಸೇವೆಯಿಂದ ಅರಿವಿನ ವೇದಿಕೆಯನ್ನು ತಲುಪಿದರೆ ದೃಷ್ಟಶಾಸ್ತ್ರಗಳಲ್ಲಿ ಹೇಳಿರುವ ನಾನಾ ಬಗೆಯ ತಪಸ್ಸು ಮತ್ತು ಯಜ್ಞಗಳನ್ನು ಆ ಮುಂದೆ

ಅವನು ಆಚರಿಸಬೇಕಾಗಿಲ್ಲ. ಮತ್ತು ಇದರಂತೆಯೇ, ಕೃಷ್ಣನನ್ನು ಸೇರುವುದೇ ವೇದಗಳ ಉದ್ದೇಶ ಎಂಬುದನ್ನು ಅರಿಯದವನು ಮತ್ತು ಕೇವಲ ಕರ್ಮಾಚರಣೆಗಳು ಇತ್ಯಾದಿಗಳಲ್ಲಿ ನಿರತನಾಗಿರುವವನು ಅಂಥ ಕಾರ್ಯಕಲಾಪಗಳಲ್ಲಿ ಕಾಲಹರಣ ಮಾಡುತ್ತಿರುತ್ತಾನೆ. ಕೃಷ್ಣಪ್ರಜ್ಞೆಯಲ್ಲಿನ ವ್ಯಕ್ತಿಗಳು ಶಬ್ದಬ್ರಹ್ಮದ ಪರಿಮಿತಿಯನ್ನು ಅಥವಾ ವೇದೋಪನಿಷತ್ತುಗಳ ವ್ಯಾಪ್ತಿಯನ್ನು ದಾಟಿ ಹೋಗಿರುತ್ತಾರೆ.

**ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ ।**
**ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ ॥ ೫೩ ॥**

ಶ್ರುತಿ—ವೈದಿಕ ವೇದಗಳ, ವಿಪ್ರತಿಪನ್ನಾ—ಕಾಮ್ಯಕರ್ಮಫಲಗಳಿಂದ ಪ್ರಭಾವಿತನಾಗದ, ತೇ—ನಿನ್ನ, ಯಥಾ—ಯಾವಾಗ, ಸ್ಥಾಸ್ಯತಿ—ಉಳಿಯುತ್ತದೋ, ನಿಶ್ಚಲಾ—ವಿಚಲಿತವಾಗದೆ, ಸಮಾಧೌ—ದಿವ್ಯ ಪ್ರಜ್ಞೆಯಲ್ಲಿ, ಅಥವಾ ಕೃಷ್ಣಪ್ರಜ್ಞೆಯಲ್ಲಿ, ಅಚಲಾ—ನಿಶ್ಚಲ, ಬುದ್ಧಿಃ—ಬುದ್ಧಿಯು, ತದಾ—ಆ ಕಾಲದಲ್ಲಿ, ಯೋಗಮ್—ಆತ್ಮಸಾಕ್ಷಾತ್ಕಾರವನ್ನು, ಅವಾಪ್ಸ್ಯಸಿ—ನೀನು ಹೊಂದುವೆ.

**ನಿನ್ನ ಮನಸ್ಸು ವೇದಗಳ ಪುಷ್ಪಿತ ಮಾತುಗಳಿಂದ ವಿಚಲಿತವಾಗದಿರುವಾಗ, ಮತ್ತು ನಿಶ್ಚಲವಾಗಿ ಆತ್ಮಸಾಕ್ಷಾತ್ಕಾರ ಸಮಾಧಿಯಲ್ಲಿ ಸನ್ನಿವೇಶಿತವಾದಾಗ, ನೀನು ದಿವ್ಯ ಪ್ರಜ್ಞೆಯನ್ನು ಪಡೆದುಕೊಂಡಿರುವೆ.**

**ಭಾವಾರ್ಥ :** ಒಬ್ಬನು ಸಮಾಧಿಯಲ್ಲಿದ್ದಾನೆ ಎಂದು ಹೇಳುವುದಾದರೆ, ಕೃಷ್ಣಪ್ರಜ್ಞೆಯನ್ನು ಪೂರ್ಣಸಾಕ್ಷಾತ್ಕರಿಸಿಕೊಂಡಿದ್ದಾನೆ ಎಂದು ಹೇಳಿದಂತೆ; ಹಾಗೆಂದರೆ, ಪೂರ್ಣ ಸಮಾಧಿಯಲ್ಲಿರುವವನು ಬ್ರಹ್ಮನ್, ಪರಮಾತ್ಮ ಮತ್ತು ಭಗವಂತನನ್ನು ಸಾಕ್ಷಾತ್ಕರಿಸಿಕೊಂಡಿರುತ್ತಾನೆ. ಆತ್ಮ ಸಾಕ್ಷಾತ್ಕಾರದ ಅತ್ಯುನ್ನತ ಪರಿಪೂರ್ಣತೆಯು ತಾನು ಕೃಷ್ಣನ ನಿತ್ಯ ದಾಸ, ಮತ್ತು ಕೃಷ್ಣಪ್ರಜ್ಞೆಯಲ್ಲಿ ತನ್ನ ಕರ್ತವ್ಯಗಳನ್ನು ನಿರ್ವಹಿಸುವುದು ತನ್ನ ಏಕೈಕ ಕರ್ಮವು ಎಂದು ಅರಿಯುವುದು. ಕೃಷ್ಣಪ್ರಾಜ್ಞನು ಅಥವಾ ನಿಶ್ಚಲ ಭಗವದ್ಭಕ್ತನು, ವೇದಗಳ ಪುಷ್ಪಿತ ಭಾಷೆಯಿಂದ ವಿಚಲಿತನೂ ಆಗಬಾರದು ಮತ್ತು ಸ್ವರ್ಗಲೋಕಗಳಿಗೆ ಏರಿಸಲ್ಪಡಲು ಕಾಮ್ಯಕರ್ಮಗಳಲ್ಲಿ ತೊಡಗಲೂಬಾರದು. ಕೃಷ್ಣಪ್ರಜ್ಞೆಯಲ್ಲಿ ಒಬ್ಬನು ನೇರವಾಗಿ ಕೃಷ್ಣನೊಡನೆ ಸಂಯೋಗಕ್ಕೆ ಬರುತ್ತಾನೆ ಮತ್ತು ಆ ದಿವ್ಯಸ್ಥಿತಿಯಲ್ಲಿ ಕೃಷ್ಣನಿಂದ ಎಲ್ಲ ನಿರ್ದೇಶಗಳನ್ನು ಅರಿತುಕೊಳ್ಳಬಹುದು. ಇಂಥ ಕಾರ್ಯಕಲಾಪಗಳಿಂದ ಒಬ್ಬನು ಖಂಡಿತವಾಗಿ ಫಲಹೊಂದಿ ನಿಶ್ಚಯ ಜ್ಞಾನವನ್ನೂ ಹೊಂದುವನು. ಒಬ್ಬನು ಕೃಷ್ಣನ ಅಥವಾ ಅವನ ಪ್ರತಿನಿಧಿ, ಗುರುವಿನ ಆಜ್ಞೆಯನ್ನು ಪಾಲಿಸಬೇಕು, ಅಷ್ಟೆ.

**ಅರ್ಜುನ ಉವಾಚ**

**ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ ।**
**ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಮ್ ॥ ೫೪ ॥**

ಅರ್ಜುನಃ ಉವಾಚ—ಅರ್ಜುನನು ನುಡಿದನು, ಸ್ಥಿತಪ್ರಜ್ಞಸ್ಯ—ಸ್ಥಿರವಾದ ಕೃಷ್ಣಪ್ರಜ್ಞೆಯಲ್ಲಿ ಸನ್ನಿವೇಶಿತವಾಗಿರುವವನ, ಕಾ—ಏನು, ಭಾಷಾ—ಭಾಷೆ, ಸಮಾಧಿಸ್ಥಸ್ಯ—

ಸಮಾಧಿಯಲ್ಲಿ ಸನ್ನಿವೇಶಿತನಾದವನ, ಕೇಶವ—ಹೇ ಕೃಷ್ಣ, ಸ್ಥಿತಧೀಃ—ಕೃಷ್ಣಪ್ರಜ್ಞೆಯಲ್ಲಿ ಸ್ಥಿರನಾಗಿರುವವನು, ಕಿಮ್—ಏನು, ಪ್ರಭಾಷೇತ—ಮಾತನಾಡುತ್ತಾನೆ, ಕಿಮ್—ಹೇಗೆ, ಆಸೀತ—ಸುಮ್ಮನೆ ಕುಳಿತಿರುತ್ತಾನೆ, ವ್ರಜೇತ—ನಡೆಯುತ್ತಾನೆ, ಕಿಮ್—ಹೇಗೆ.

**ಅರ್ಜುನನು ನುಡಿದನು : ಹೇ ಕೃಷ್ಣ, ಹೀಗೆ ಪ್ರಜ್ಞೆಯು ದಿವ್ಯತೆಯಲ್ಲಿ ಲೀನವಾಗಿರುವವನ ಲಕ್ಷಣಗಳೇನು? ಅವನು ಹೇಗೆ ಮಾತನಾಡುತ್ತಾನೆ, ಮತ್ತು ಅವನ ಭಾಷೆ ಏನು? ಅವನು ಹೇಗೆ ಕುಳಿತುಕೊಳ್ಳುತ್ತಾನೆ, ಮತ್ತು ಹೇಗೆ ನಡೆಯುತ್ತಾನೆ?**

**ಭಾವಾರ್ಥ :** ಪ್ರತಿಯೊಬ್ಬನಿಗೂ ಅವನ ನಿರ್ದಿಷ್ಟ ಸನ್ನಿವೇಶದಂತೆ ಲಕ್ಷಣಗಳಿರುವಂತೆಯೇ, ಕೃಷ್ಣಪ್ರಾಜ್ಞಿಯು ತನ್ನ ಮಾತನಾಡುವ, ನಡೆಯುವ, ವಿಚಾರ ಮಾಡುವ, ಭಾವಿಸುವ ಮುಂತಾದ—ವಿಶಿಷ್ಟ ಸ್ವಭಾವವನ್ನು ಹೊಂದಿರುತ್ತಾನೆ. ಶ್ರೀಮಂತನೆಂದು ತಿಳಿಯುವಂತೆ ಸಿರಿವಂತನಿಗೆ ಅವನ ಲಕ್ಷಣಗಳಿರುವಂತೆ, ಒಬ್ಬನನ್ನು ವ್ಯಾಧಿಗ್ರಸ್ಥನೆಂದು ತಿಳಿಯುವಂತೆ ವ್ಯಾಧಿಗ್ರಸ್ಥನಿಗೆ ಲಕ್ಷಣಗಳಿರುವಂತೆ, ಅಥವಾ ಒಬ್ಬ ವಿದ್ವಾಂಸನಿಗೆ ಅವನ ಲಕ್ಷಣಗಳಿರುವಂತೆ, ಕೃಷ್ಣನ ದಿವ್ಯಪ್ರಜ್ಞೆಯಲ್ಲಿರುವವನು ನಾನಾ ಬಗೆಯ ವ್ಯವಹಾರಗಳಲ್ಲಿ ವಿಶಿಷ್ಟ ಲಕ್ಷಣಗಳನ್ನು ಹೊಂದಿರುತ್ತಾನೆ. ಅವನ ವಿಶಿಷ್ಟ ಲಕ್ಷಣಗಳನ್ನು ಭಗವದ್ಗೀತೆಯಿಂದ ತಿಳಿದುಕೊಳ್ಳಬಹುದು, ಕೃಷ್ಣಪ್ರಜ್ಞೆಯಲ್ಲಿರುವವನು ಹೇಗೆ ಮಾತನಾಡುತ್ತಾನೆ ಎಂಬುದು ಅತ್ಯಂತ ಮಹತ್ವದ್ದು; ಏಕೆಂದರೆ ಮಾತು ಮನುಷ್ಯನ ಅತ್ಯಂತ ಮುಖ್ಯವಾದ ಗುಣ. ಮೂರ್ಖನು ಮಾತನಾಡದಿರುವವರೆಗೆ, ಅವನು ಬಯಲಾಗುವುದಿಲ್ಲ ಎಂದು ಹೇಳಿದೆ, ಮತ್ತು ಚೆನ್ನಾಗಿ ಪೋಷಾಕನ್ನು ಧರಿಸಿರುವ ಮೂರ್ಖನನ್ನು ಮಾತನಾಡದಿದ್ದಲ್ಲಿ ಗುರುತಿಸಲಾಗುವುದಿಲ್ಲ. ಆದರೆ ಅವನು, ಮಾತನಾಡಿದೊಡನೆಯೇ ತನ್ನನ್ನು ಪ್ರಕಟಿಸಿಕೊಳ್ಳುತ್ತಾನೆ. ಕೃಷ್ಣಪ್ರಾಜ್ಞಿಯ ಅತಿನಿಕಟ ಲಕ್ಷಣವೆಂದರೆ, ಅವನು ಕೃಷ್ಣನ ಮತ್ತು ಅವನಿಗೆ ಸಂಬಂಧಿಸಿದ ವಿಷಯಗಳನ್ನು ಮಾತ್ರ ಮಾತನಾಡುತ್ತಾನೆ. ಈ ಮುಂದೆ ಹೇಳಿದಂತೆ, ಇನ್ನುಳಿದ ಲಕ್ಷಣಗಳು ತಾವಾಗಿಯೇ ಅನುಗತವಾಗುತ್ತವೆ.

**ಶ್ರೀಭಗವಾನುವಾಚ**

**ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್ ।**
**ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥ ೫೫ ॥**

ಶ್ರೀಭಗವಾನ್ ಉವಾಚ—ಪರಮ ದೇವೋತ್ತಮ ಪುರುಷನು ನುಡಿದನು, ಪ್ರಜಹಾತಿ—ತ್ಯಜಿಸುತ್ತಾನೆ, ಯದಾ—ಯಾವಾಗ, ಕಾಮಾನ್—ಇಂದ್ರಿಯ ತೋಷಣದ ಆಸೆಗಳನ್ನು, ಸರ್ವಾನ್—ಎಲ್ಲ ಬಗೆಯ, ಪಾರ್ಥ—ಹೇ ಪೃಥಾಪುತ್ರನೇ, ಮನಃ ಗತಾನ್—ಮಾನಸಿಕ ಸೃಷ್ಟನೆಗಳ, ಆತ್ಮನಿ—ಆತ್ಮನ ಶುದ್ಧ ಸ್ಥಿತಿಯಲ್ಲಿ, ಏವ—ಖಂಡಿತವಾಗಿ, ಆತ್ಮನಾ—ಶುದ್ಧ ಮನಸ್ಸಿನಿಂದ, ತುಷ್ಟಃ—ತೃಪ್ತನಾಗಿ, ಸ್ಥಿತಪ್ರಜ್ಞಃ—ದಿವ್ಯ ಸ್ಥಿತನು, ತದಾ—ಆ ಕಾಲದಲ್ಲಿ, ಉಚ್ಯತೇ—ಹೇಳಲ್ಪಡುತ್ತಾನೆ.

**ಪರಮ ದೇವೋತ್ತಮ ಪುರುಷನು ನುಡಿದನು : ಹೇ ಪಾರ್ಥ, ಮನುಷ್ಯನು ಮಾನಸಿಕ ಸೃಷ್ಟನೆಯಿಂದ ಉಂಟಾಗುವ, ಎಲ್ಲ ಬಗೆಯ ಇಂದ್ರಿಯ ತೋಷಣೆಯ ಆಸೆಗಳನ್ನು ಯಾವಾಗ ತ್ಯಜಿಸುವನೋ, ಮತ್ತು ಹೀಗೆ ಅವನ ಮನಸ್ಸು ಶುದ್ಧಿಗೊಂಡು, ಆತ್ಮನಲ್ಲಿ ಮಾತ್ರವೇ ತೃಪ್ತಿಯನ್ನು ಕಾಣುವನೋ, ಆಗ ಅವನು ಶುದ್ಧ ದಿವ್ಯ ಪ್ರಜ್ಞೆಯಲ್ಲಿರುವನೆಂದು ಹೇಳಲ್ಪಡುವನು.**

**ಭಾವಾರ್ಥ :** ಶ್ರೀಮದ್ಭಾಗವತವು ದೃಢಪಡಿಸುವಂತೆ ಕೃಷ್ಣಪ್ರಜ್ಞೆಯಲ್ಲಿ ಅಥವಾ ಭಗವಂತನ ಭಕ್ತಿಯುತ ಸೇವೆಯಲ್ಲಿ ಪೂರ್ಣವಾಗಿ ಇರುವವನಿಗೆ, ಮಹರ್ಷಿಗಳ ಸದ್ಗುಣಗಳೆಲ್ಲವೂ ಇರುತ್ತವೆ. ಹಾಗೆ ದಿವ್ಯವಾಗಿ ಸನ್ನಿವೇಶಿತನಾಗದಿರುವವನಿಗಾದರೋ ಒಳ್ಳೆಯ ಅರ್ಹತೆಗಳಿರುವುದಿಲ್ಲ. ಏಕೆಂದರೆ ಅವನು ಖಂಡಿತವಾಗಿ ತನ್ನ ಸ್ವಂತ ಮನೋಸೃಷ್ಟನೆಗಳನ್ನು ಆಶ್ರಯಿಸಿರುತ್ತಾನೆ. ಪರಿಣಾಮವಾಗಿ, ಒಬ್ಬನು ಮನೋಸೃಷ್ಟನೆಯಿಂದಾದ ಎಲ್ಲ ಬಗೆಯ ಇಂದ್ರಿಯೇಚ್ಛೆಗಳನ್ನು ತ್ಯಜಿಸಬೇಕೆಂದು ಇಲ್ಲಿ ಸರಿಯಾಗಿ ಹೇಳಿದೆ. ಅಂಥ ಇಂದ್ರಿಯೇಚ್ಛೆಗಳನ್ನು ಕೃತಕವಾಗಿ ನಿಲ್ಲಿಸಲಾಗದು. ಆದರೆ ಒಬ್ಬನು ಕೃಷ್ಣಪ್ರಜ್ಞೆಯಲ್ಲಿ ತೊಡಗಿದರೆ, ಇಂದ್ರಿಯೇಚ್ಛೆಗಳೆಲ್ಲ ಬಾಹ್ಯ ಪ್ರಯತ್ನವಿಲ್ಲದೆ ತಾವಾಗಿಯೇ ತಗ್ಗುತ್ತವೆ. ಆದ್ದರಿಂದ ಒಬ್ಬನು ಹಿಂದೆಮುಂದೆ ನೋಡದೆ ಕೃಷ್ಣಪ್ರಜ್ಞೆಯಲ್ಲಿ ತೊಡಗಬೇಕು. ಏಕೆಂದರ ಇಂಥ ಭಕ್ತಿಯುತ ಸೇವೆಯು ಒಬ್ಬನು ದಿವ್ಯ ಪ್ರಜ್ಞೆಯ ವೇದಿಕೆಗೆ ಏರಲು ಕೂಡಲೇ ಸಹಾಯಕವಾಗುತ್ತದೆ. ಉತ್ಕೃಷ್ಟವಾಗಿ ವರ್ಧಿಸಿದ ಆತ್ಮನು ತಾನು ಪರಮ ಪ್ರಭುವಿನ ನಿತ್ಯ ದಾಸನೆಂದು ಸಾಕ್ಷಾತ್ಕರಿಸಿಕೊಂಡು ಸದಾ ತನ್ನಲ್ಲಿಯೇ ತೃಪ್ತನಾಗಿರುತ್ತಾನೆ. ಇಂಥ ದಿವ್ಯವಾಗಿ ಸನ್ನಿವೇಶಿತನಾದ ವ್ಯಕ್ತಿಗೆ, ಕ್ಷುದ್ರ ಭೌತಿಕ ವಿಷಯಗಳಿಂದ ಉಂಟಾಗುವ ಇಂದ್ರಿಯೇಚ್ಛೆಗಳು ಇರುವುದಿಲ್ಲ ; ಪ್ರತಿಯಾಗಿ, ಪರಮ ಪ್ರಭುವನ್ನು ನಿತ್ಯವಾಗಿ ಸೇವಿಸಿಕೊಂಡಿರುವ ತನ್ನ ಸಹಜಸ್ಥಾನದಲ್ಲಿ ಅವನು ಸದಾ ಸುಖಿಯಾಗಿರುತ್ತಾನೆ.

**ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।**
**ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ॥ ೫೬ ॥**

ದುಃಖೇಷು—ತ್ರಿವಿಧ ಕ್ಲೇಶಗಳಲ್ಲಿ, ಅನುದ್ವಿಗ್ನಮನಾಃ—ಮನಸ್ಸಿನಲ್ಲಿ ಕ್ಷೋಭೆಗೊಳ್ಳದೆ, ಸುಖೇಷು—ಸುಖದಲ್ಲಿ, ವಿಗತಸ್ಪೃಹಃ—ಆಸಕ್ತನಾಗದೆ, ವೀತ—ಮುಕ್ತನಾಗಿ, ರಾಗ—ಅಕ್ಕರೆ, ಭಯ—ಭಯ, ಕ್ರೋಧಃ—ಮತ್ತು ಕೋಪ, ಸ್ಥಿತಧೀಃ—ಯಾರ ಮನಸ್ಸು ಸ್ಥಿರವಾಗಿರುವುದೋ, ಮುನಿಃ—ಋಷಿ, ಉಚ್ಯತೇ—ಎನಿಸಿಕೊಳ್ಳುತ್ತಾನೆ.

**ಮೂರು ಬಗೆಯ ಕ್ಲೇಶಗಳ ನಡುವೆಯೂ ಸಹ ಮನಸ್ಸಿನಲ್ಲಿ ಕ್ಷೋಭೆಗೊಳ್ಳದವನು ಅಥವಾ ಸುಖವಿದ್ದಾಗ ಹಿಗ್ಗದವನು, ಮತ್ತು ಅಕ್ಕರೆ, ಭಯ ಮತ್ತು ಕೋಪದಿಂದ ಮುಕ್ತನಾದವನು, ಸ್ಥಿತಪ್ರಜ್ಞನಾದ ಮುನಿ ಎನಿಸಿಕೊಳ್ಳುತ್ತಾನೆ.**

**ಭಾವಾರ್ಥ:** ಮುನಿ ಎಂದರೆ ವಾಸ್ತವ ನಿರ್ಣಯಕ್ಕೆ ಬರದೆ ಮನಸ್ಸಿನ ಊಹಾಪೋಹಗಳಿಗೆ ತನ್ನ ಮನಸ್ಸನ್ನು ಉದ್ವಿಗ್ನಗೊಳಿಸಿಕೊಳ್ಳಬಲ್ಲವನು ಎಂದು ಅರ್ಥ. ಪ್ರತಿಯೊಬ್ಬ ಮುನಿಗೂ

ಭಿನ್ನದೃಷ್ಟಿಕೋನವಿದೆ. ಮತ್ತು ಒಬ್ಬ ಮುನಿಯು ಮತ್ತೊಬ್ಬನಿಂದ ಭಿನ್ನನಾಗದ ಹೊರತು, ಕಟ್ಟುನಿಟ್ಟಾದ ಅರ್ಥದಲ್ಲಿ ಅವನನ್ನು ಮುನಿ ಎಂದು ಹೇಳಲಾಗದು. **ನ ಚಾಸಾವ್ ಋಷಿರ್ ಯಸ್ಯ ಮತಂ ನ ಭಿನ್ನಮ್** (ಭಾರತ, ವನಪರ್ವ 313.117). ಆದರೆ ಇಲ್ಲಿ ಭಗವಂತನು ಹೇಳುವ **ಸ್ಥಿತಧೀರ್** ಮುನಿಯು ಸಾಮಾನ್ಯ ಮುನಿಯಿಂದ ಭಿನ್ನನು. **ಸ್ಥಿತಧೀರ್** ಮುನಿಯು ಸದಾ ಕೃಷ್ಣಪ್ರಜ್ಞೆಯಲ್ಲಿರುತ್ತಾನೆ. ಏಕೆಂದರೆ ಎಲ್ಲ ಸೃಜನಾತ್ಮಕ ಊಹಾಪೋಹಗಳ ತನ್ನ ಕಾರ್ಯಗಳನ್ನು ಮುಗಿಸಿದ್ದಾನೆ. ಅವನನ್ನು **ಪ್ರಶಾನ್ತ ನಿಶ್ಶೇಷ ಮನೋರಥಾನ್ತರ** (ಸ್ತೋತ್ರ ರತ್ನ 43), ಅಥವಾ ಮಾನಸಿಕ ಊಹಾಪೋಹದ ಹಂತವನ್ನು ದಾಟಿದವನು ಮತ್ತು ಶ್ರೀಕೃಷ್ಣ ಅಥವಾ ವಾಸುದೇವನೇ ಸರ್ವಸ್ವ ಎಂಬ ನಿರ್ಣಯಕ್ಕೆ ಬಂದವನು **(ವಾಸುದೇವಃ ಸರ್ವಮಿತಿ ಸ ಮಹಾತ್ಮಾಸುದುರ್ಲಭಃ)** ಎಂದು ಕರೆಯುತ್ತಾರೆ. ಅವನನ್ನು ಮನಸ್ಸಿನಲ್ಲಿ ನಿಶ್ಚಿತನಾದ ಮುನಿ ಎಂದು ಕರೆಯುತ್ತಾರೆ. ಇಂಥ ಪೂರ್ಣ ಕೃಷ್ಣಪ್ರಾಜ್ಞನು ತ್ರಿವಿಧ ಕ್ಲೇಶಗಳಿಂದ ಕ್ಷೋಭೆಗೊಳ್ಳುವುದಿಲ್ಲ. ಏಕೆಂದರೆ ತನ್ನ ಪೂರ್ವ ದುಷ್ಕರ್ಮಗಳ ಕಾರಣ, ತಾನು ಇನ್ನೂ ಹೆಚ್ಚಿನ ತೊಂದರೆಗಳಿಗೆ ಅರ್ಹನೆಂದು ಭಾವಿಸಿ, ಆ ಕ್ಲೇಶಗಳೆಲ್ಲವನ್ನು ಭಗವಂತನ ಅನುಗ್ರಹವೆಂದು ಸ್ವೀಕರಿಸುತ್ತಾನೆ; ಮತ್ತು ಭಗವಂತನ ದಯೆಯಿಂದ ತನ್ನ ಕ್ಲೇಶಗಳೆಲ್ಲ ಅತ್ಯಂತ ಕನಿಷ್ಠ ಪ್ರಮಾಣಕ್ಕೆ ತರಲ್ಪಟ್ಟಿವೆ ಎಂದು ಕಾಣುತ್ತಾನೆ. ಅದೇ ಪ್ರಕಾರ ಅವನು ಸುಖಿಯಾದಾಗ, ತಾನು ಅಂಥ ಸುಖಕ್ಕೆ ಅನರ್ಹನೆಂದು ಭಾವಿಸಿ, ಭಗವಂತನಿಗೆ ಕೀರ್ತಿಯನ್ನು ಅರ್ಪಿಸುತ್ತಾನೆ; ಅವನು ಭಗವಂತನ ಕೃಪೆಯಿಂದಲೇ ಅಂಥ ಅನುಕೂಲ ಸ್ಥಿತಿಯಲ್ಲಿರುವನು ಮತ್ತು ಭಗವಂತನಿಗೆ ಉತ್ತಮ ಸೇವೆ ಸಲ್ಲಿಸಲು ಸಾಧ್ಯವಾಯಿತೆಂದು ತಿಳಿದುಕೊಳ್ಳುತ್ತಾನೆ. ಭಗವಂತನ ಸೇವೆಗಾಗಿ ಅವನು ಸದಾ ಸಾಹಸಿ ಮತ್ತು ಕ್ರಿಯಾಶೀಲನಾಗಿರುತ್ತಾನೆ, ಮತ್ತು ಅವನು ಅಕ್ಕರೆ ಹಾಗೂ ದ್ವೇಷಗಳಿಂದ ಪ್ರಭಾವಿತನಾಗುವುದಿಲ್ಲ. ಅಕ್ಕರೆ ಎಂದರೆ ವಸ್ತುಗಳನ್ನು ತನ್ನ ಸ್ವಂತ ಇಂದ್ರಿಯ ತೋಷಣಕ್ಕಾಗಿ ಸ್ವೀಕರಿಸುವುದು. ಮತ್ತು ವಿರಕ್ತಿ ಎಂದರೆ ಅಂಥ ಇಂದ್ರಿಯಾಸಕ್ತಿ ಇಲ್ಲದಿರುವುದು. ಆದರೆ ಸ್ಥಿತ ಕೃಷ್ಣಪ್ರಾಜ್ಞನಿಗೆ, ಅವನ ಜೀವನವು ಭಗವಂತನ ಸೇವೆಗೇ ಅರ್ಪಿತವಾಗಿರುವುದರಿಂದ, ಅಕ್ಕರೆ ಅಥವಾ ವಿರಕ್ತಿಯು ಇರುವುದಿಲ್ಲ. ಪರಿಣಾಮವಾಗಿ ತನ್ನ ಪ್ರಯತ್ನಗಳೆಲ್ಲ ವಿಫಲವಾದರೂ ಕೂಡ ಅವನು ಕೋಪಗೊಳ್ಳುವುದಿಲ್ಲ. ಸಫಲವಾಗಲಿ ಅಥವಾ ವಿಫಲವಾಗಲಿ, ಕೃಷ್ಣಪ್ರಾಜ್ಞನು ತನ್ನ ನಿರ್ಧಾರದಲ್ಲಿ ಸದಾ ಸ್ಥಿರನಾಗಿರುತ್ತಾನೆ.

**ಯಃ ಸರ್ವತ್ರಾನಭಿಸ್ನೇಹಸ್ತತ್ತತ್ಪ್ರಾಪ್ಯ ಶುಭಾಶುಭಮ್ ।**
**ನಾಭಿನನ್ದತಿ ನ ದ್ವೇಷ್ಟಿ ತಸ್ಯಪ್ರಜ್ಞಾ ಪ್ರತಿಷ್ಠಿತಾ ॥ ೫೭ ॥**

ಯಃ—ಯಾರೊಬ್ಬನು, ಸರ್ವತ್ರ—ಎಲ್ಲ ಕಡೆಯಲ್ಲಿಯೂ, ಅನಭಿಸ್ನೇಹಃ—ಪ್ರೀತಿಯಿಲ್ಲದೆ, ತತ್—ಅದನ್ನು, ಪ್ರಾಪ್ಯ—ಪಡೆದ, ಶುಭ—ಒಳ್ಳೆಯದನ್ನು, ಅಶುಭಮ್—ಕೆಟ್ಟದ್ದನ್ನು, ನ—ಇಲ್ಲ, ಅಭಿನನ್ದತಿ—ಪ್ರಶಂಸಿಸುವುದು, ನ—ಇಲ್ಲ, ದ್ವೇಷ್ಟಿ—ದ್ವೇಷಿಸು, ತಸ್ಯ—ಅವನ, ಪ್ರಜ್ಞಾ—ಪೂರ್ಣಜ್ಞಾನ, ಪ್ರತಿಷ್ಠಿತಾ—ಸ್ಥಿರವಾಗಿರುತ್ತದೆ.

**ಭೌತಿಕ ಪ್ರಪಂಚದಲ್ಲಿ, ತಾನು ಹೊಂದಬಹುದಾದ ಯಾವುದೇ ಒಳ್ಳೆಯದು ಅಥವಾ ಕೆಟ್ಟದರಿಂದ ಪ್ರಭಾವಿತನಾಗದವನು, ಅದನ್ನು ಪ್ರಶಂಸಿಸದೆ ಅಥವಾ**

**ಉಪೇಕ್ಷಿಸದೆ ಇರುವವನು, ಪೂರ್ಣಜ್ಞಾನದಲ್ಲಿ ದೃಢವಾಗಿ ಸ್ಥಿತನಾಗಿರುತ್ತಾನೆ.**

**ಭಾವಾರ್ಥ :** ಭೌತಿಕ ಪ್ರಪಂಚದಲ್ಲಿ ಒಳ್ಳೆಯ ಅಥವಾ ಕೆಟ್ಟದ್ದೇನಾದರೊಂದು ಏರುಪೇರು ಸದಾ ಇರುತ್ತದೆ. ಅಂಥ ಭೌತಿಕ ಏರುಪೇರುಗಳಿಂದ ಕ್ಷೋಭೆಗೊಳ್ಳದವನು, ಶುಭಾಶುಭಗಳಿಂದ ಪ್ರಭಾವಿತನಾಗದವನು, ಕೃಷ್ಣಪ್ರಜ್ಞೆಯಲ್ಲಿ ಸ್ಥಿರನಾಗಿರುವವನೆಂದು ಅರಿತುಕೊಳ್ಳಬೇಕು. ಒಬ್ಬನು ಈ ಭೌತಿಕ ಪ್ರಪಂಚದಲ್ಲಿ ಇರುವವರೆಗೆ, ಈ ಪ್ರಪಂಚವು ದ್ವಂದ್ವಮಯವಾಗಿರುವುದರಿಂದ, ಶುಭಾಶುಭಗಳ ಸಾಧ್ಯತೆಯು ಸದಾ ಇದ್ದೇ ಇರುತ್ತದೆ. ಆದರೆ ಕೃಷ್ಣಪ್ರಜ್ಞೆಯಲ್ಲಿ ಸ್ಥಿರನಾದವನು ಶುಭಾಶುಭಗಳಿಂದ ಬಾಧಿತನಾಗುವುದಿಲ್ಲ. ಏಕೆಂದರೆ ಅವನು, ಸಕಲ ಮಂಗಳಪೂರ್ಣನಾದ ಶ್ರೀಕೃಷ್ಣನೊಡನೆ ಸಂಬಂಧಿತನಾಗಿರುತ್ತಾನೆ. ಕೃಷ್ಣನಲ್ಲಿನ ಇಂಥ ಪ್ರಜ್ಞೆಯು ಒಬ್ಬನನ್ನು ಪೂರ್ಣದಿವ್ಯ ಸ್ಥಾನದಲ್ಲಿ ಸನ್ನಿವೇಶಿಸುತ್ತದೆ. ಅದನ್ನು ಶಾಸ್ತ್ರಪರಿಭಾಷೆಯಲ್ಲಿ "ಸಮಾಧಿ" ಎನ್ನುವರು.

**ಯದಾ ಸಂಹರತೇ ಚಾಯಂ ಕೂರ್ಮೋಽಂಗಾನೀವ ಸರ್ವಶಃ ।**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೮ ॥**

ಯದಾ—ಯಾವಾಗ, ಸಂಹರತೇ—ಹಿಂದೆಗೆದುಕೊಳ್ಳುತ್ತದೆ, ಚ—ಕೂಡ, ಅಯಮ್—ಅವನು, ಕೂರ್ಮಃ—ಆಮೆ, ಅಂಗಾನಿ—ಅಂಗಗಳನ್ನು, ಇವ—ಅದರಂತೆ, ಸರ್ವಶಃ—ಪೂರ್ತಿಯಾಗಿ, ಇಂದ್ರಿಯಾಣಿ—ಇಂದ್ರಿಯಗಳನ್ನು, ಇಂದ್ರಿಯ ಅರ್ಥೇಭ್ಯಃ—ಇಂದ್ರಿಯ ವಿಷಯಗಳಿಂದ, ತಸ್ಯ—ಅವನ, ಪ್ರಜ್ಞಾ—ಪ್ರಜ್ಞೆಯು, ಪ್ರತಿಷ್ಠಿತಾ—ಸ್ಥಿರವಾಗಿರುವುದು.

**ಆಮೆಯು ತನ್ನ ಅಂಗಗಳನ್ನು ಹೇಗೆ ಚಿಪ್ಪಿನೊಳಗೆ ಎಳೆದುಕೊಳ್ಳುವುದೋ, ಹಾಗೆ ತನ್ನ ಇಂದ್ರಿಯಗಳನ್ನು ಇಂದ್ರಿಯ ವಿಷಯಗಳಿಂದ ಹಿಂದೆಗೆದುಕೊಳ್ಳಲು ಸಮರ್ಥನಾದವನು, ಪೂರ್ಣಪ್ರಜ್ಞೆಯಲ್ಲಿ ಸ್ಥಿರವಾಗಿ ಪ್ರತಿಷ್ಠಿತನು.**

**ಭಾವಾರ್ಥ :** ಯೋಗಿಯ, ಭಕ್ತನ ಅಥವಾ ಆತ್ಮ ಸಾಕ್ಷಾತ್ಕಾರ ಹೊಂದಿದ ಆತ್ಮನ ಪರೀಕ್ಷೆಯು, ತನ್ನ ಯೋಜನೆಗೆ ಅನುಸಾರವಾಗಿ ಇಂದ್ರಿಯಗಳನ್ನು ತಾನು ನಿಯಂತ್ರಿಸಲು ಸಮರ್ಥನೇ ಎಂಬುದಾಗಿರುತ್ತದೆ. ಆದರೆ ಹೆಚ್ಚು ಜನರು ಇಂದ್ರಿಯ ದಾಸರು, ಮತ್ತು ಇಂದ್ರಿಯಗಳ ಆದೇಶದಿಂದ ನಿರ್ದೇಶಿಸಲ್ಪಡುತ್ತಾರೆ. ಯೋಗಿಯು ಹೇಗೆ ಸನ್ನಿವೇಶಿತನಾಗಿರುವನು ಎಂಬ ಪ್ರಶ್ನೆಗೆ, ಇದೇ ಉತ್ತರ. ಇಂದ್ರಿಯಗಳನ್ನು ವಿಷಸರ್ಪಗಳಿಗೆ ಹೋಲಿಸಲಾಗಿದೆ. ಅವು ಬಹು ಶಿಥಿಲ ಮತ್ತು ನಿರ್ಬಂಧವಿಲ್ಲದೆ ವರ್ತಿಸಬಯಸುತ್ತವೆ. ಯೋಗಿ ಅಥವಾ ಭಕ್ತನು, ಹಾವಾಡಿಗನಂತೆ ಈ ಸರ್ಪಗಳನ್ನು ನಿಗ್ರಹಿಸಲು ಬಲಾಢ್ಯನಾಗಿರಬೇಕು. ಅವುಗಳನ್ನು ಸ್ವತಂತ್ರವಾಗಿ ವರ್ತಿಸಲು ಅವನು ಎಂದಿಗೂ ಅನುಮತಿಸುವುದಿಲ್ಲ. ದೃಷ್ಟಶಾಸ್ತ್ರಗಳಲ್ಲಿ ಅನೇಕ ಆಜ್ಞೆಗಳಿವೆ; ಅವುಗಳಲ್ಲಿ ಕೆಲವು ನಿಷೇಧಾತ್ಮಕ, ಮತ್ತು ಕೆಲವು ಆಜ್ಞಾತ್ಮಕವಾಗಿವೆ. ಒಬ್ಬನು ತನ್ನನ್ನು ಇಂದ್ರಿಯ ಭೋಗದಿಂದ ನಿಗ್ರಹಿಸಿಕೊಂಡು, ಈ ವಿಧಿನಿಷೇಧಗಳನ್ನು ಅನುಸರಿಸದ ಹೊರತು, ಸ್ಥಿರಸ್ಥಿತ ಕೃಷ್ಣಪ್ರಜ್ಞೆಯಾಗಲು ಸಾಧ್ಯವಿಲ್ಲ. ಇಲ್ಲಿ ಆಮೆಯ ಅತ್ಯುತ್ತಮ ಉದಾಹರಣೆಯನ್ನು ಕೊಡಲಾಗಿದೆ. ಆಮೆಯು ಯಾವುದೇ ಸಮಯದಲ್ಲಿಯೂ ತನ್ನ ಇಂದ್ರಿಯಗಳನ್ನು ಒಳಗೆ ಎಳೆದುಕೊಳ್ಳಬಹುದು ಮತ್ತು ವಿಶಿಷ್ಟ ಉದ್ದೇಶಗಳಿಗಾಗಿ,

ಅವುಗಳನ್ನು ಹೊರಗೆ ತೋರಬಹುದು. ಅದರಂತೆಯೇ ಕೃಷ್ಣಪ್ರಾಜ್ಞಿಯಾದವರ ಇಂದ್ರಿಯಗಳು ಯಾವುದೇ ನಿರ್ದಿಷ್ಟ ಉದ್ದೇಶಕ್ಕಾಗಿ ಮಾತ್ರವೇ ಭಗವಂತನ ಸೇವೆಯಲ್ಲಿ ಉಪಯೋಗಿಸಲ್ಪಡುತ್ತವೆ, ಅನ್ಯಥಾ ಹಿಂದೆಗೆದುಕೊಳ್ಳಲ್ಪಡುತ್ತವೆ. ಅರ್ಜುನನು ತನ್ನ ಇಂದ್ರಿಯಗಳನ್ನು ತನ್ನ ಸ್ವಂತ ತೃಪ್ತಿಗೆ ಬಳಸದೆ, ಭಗವಂತನ ಸೇವೆಗಾಗಿ ಉಪಯೋಗಿಸುವಂತೆ ಇಲ್ಲಿ ಉಪದೇಶಿಸಲ್ಪಡುತ್ತಾನೆ. ಇಂದ್ರಿಯಗಳನ್ನು ಒಳಗಿರಿಸಿಕೊಳ್ಳುವ ಆಮೆಯ ದೃಷ್ಟಾಂತದಿಂದ, ಇಂದ್ರಿಯಗಳನ್ನು ಸದಾ ಭಗವತ್‌ಸೇವೆಯಲ್ಲಿ ಇರಿಸುವುದನ್ನು ಇಲ್ಲಿ ಸೂಚಿಸಿದೆ.

**ವಿಷಯಾ ವಿನಿವರ್ತನ್ತೇ ನಿರಾಹಾರಸ್ಯ ದೇಹಿನಃ ।**
**ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥ ೫೯ ॥**

ವಿಷಯಾಃ—ಇಂದ್ರಿಯಾನುಭವ ವಿಷಯಗಳಿಂದ, ವಿನಿವರ್ತನ್ತೇ—ನಿಗ್ರಹಿಸಲು ಅಭ್ಯಾಸಮಾಡುವುದು. ನಿರಾಹಾರಸ್ಯ—ನಿಷೇಧಾತ್ಮಕ ನಿರ್ಬಂಧಗಳಿಂದ, ದೇಹಿನಃ—ದೇಹಧಾರಿಗೆ, ರಸವರ್ಜಮ್—ರುಚಿಯನ್ನು ತ್ಯಜಿಸಿ, ರಸಃ—ಇಂದ್ರಿಯ ಭೋಗವು, ಅಪಿ—ಅಲ್ಲಿ ಇದ್ದರೂ, ಅಸ್ಯ—ಅವನು, ಪರಮ್—ಶ್ರೇಷ್ಠವಾದ ವಿಷಯಗಳನ್ನು, ದೃಷ್ಟ್ವಾ—ಅನುಭವಿಸಿ, ನಿವರ್ತತೇ—ಬಿಡುತ್ತಾನೆ.

**ಇಂದ್ರಿಯ ವಿಷಯಗಳಿಗೆ ರುಚಿಯು ಉಳಿದುಕೊಂಡಿದ್ದರೂ, ದೇಹಧಾರಿಯಾದ ಆತ್ಮನನ್ನು ಇಂದ್ರಿಯ ತೋಷಣದಿಂದ ನಿರ್ಬಂಧಿಸಬಹುದು. ಆದರೆ, ಉತ್ತಮವಾದರುಚಿಯನ್ನು ಅನುಭವಿಸುವುದರಿಂದ, ಅಂಥ ಕಾರ್ಯಕಲಾಪಗಳನ್ನು ನಿಲ್ಲಿಸಿ, ಅವನು ಪ್ರಜ್ಞೆಯಲ್ಲಿ ಸ್ಥಿರನಾಗುತ್ತಾನೆ.**

**ಭಾವಾರ್ಥ :** ಒಬ್ಬನು ದಿವ್ಯವಾಗಿ ಸನ್ನಿವೇಶಿತನಾಗದ ಹೊರತು, ಇಂದ್ರಿಯಭೋಗವನ್ನು ನಿಲ್ಲಿಸುವುದು ಸಾಧ್ಯವಿಲ್ಲ. ನೇಮ–ನಿಯಮಗಳಿಂದ ಇಂದ್ರಿಯಭೋಗವನ್ನು ನಿರ್ಬಂಧಿಸುವ ವಿಧಾನವು, ರೋಗಿಯನ್ನು ಕೆಲವೊಂದು ತಿಂಡಿತಿನಿಸುಗಳಿಂದ ನಿರ್ಬಂಧಿಸಿದ ಹಾಗೆ. ಆದರೆ ರೋಗಿಯಾದರೋ ಅಂಥ ನಿರ್ಬಂಧಗಳನ್ನು ಇಷ್ಟಪಡುವುದೂ ಇಲ್ಲ, ಮತ್ತು ತಿಂಡಿತಿನಿಸುಗಳಿಗೆ ಅವನು ರುಚಿಯನ್ನು ಕಳೆದುಕೊಳ್ಳುವುದೂ ಇಲ್ಲ. ಅದೇ ಪ್ರಕಾರ, ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ ಇತ್ಯಾದಿಗಳಿರುವ ಅಷ್ಟಾಂಗ ಯೋಗದಂತಹ ಹಲವು ಆಧ್ಯಾತ್ಮಿಕ ವಿಧಾನಗಳಿಂದ ಇಂದ್ರಿಯಗಳನ್ನು ನಿರ್ಬಂಧಿಸುವುದನ್ನು ಉತ್ತಮ ಜ್ಞಾನವಿಲ್ಲದ ಅಲ್ಪ ಬುದ್ಧಿವಂತರಿಗಾಗಿ ಸೂಚಿಸಲ್ಪಟ್ಟಿದೆ. ಕೃಷ್ಣಪ್ರಜ್ಞೆಯ ಪ್ರಗತಿ ಪಥದಲ್ಲಿ ಪುರುಷೋತ್ತಮನಾದ ಕೃಷ್ಣನ ಸೌಂದರ್ಯವನ್ನು ಸವಿದವನಿಗೆ ಇನ್ನೆಷ್ಟು ಕಾಲವೂ ಮೃತ ಭೌತಿಕ ವಸ್ತುಗಳು ರುಚಿಸುವುದಿಲ್ಲ. ಆದ್ದರಿಂದ ಜೀವನದ ಆಧ್ಯಾತ್ಮಿಕ ಪ್ರಗತಿಯಲ್ಲಿ ಕಡಿಮೆ ಬುದ್ಧಿಯುಳ್ಳ ಆರಂಭಿಗಳಿಗಾಗಿ ಈ ನಿರ್ಬಂಧಗಳಿರುತ್ತವೆ.ಆದರೆ ಅಂಥ ನಿರ್ಬಂಧಗಳು ಕೃಷ್ಣಪ್ರಜ್ಞೆಯ ರುಚಿಯನ್ನು ವಾಸ್ತವವಾಗಿ ಹೊಂದುವವರೆಗೆ ಮಾತ್ರ ಒಳ್ಳೆಯವು. ಒಬ್ಬನು ವಾಸ್ತವಿಕವಾಗಿ ಕೃಷ್ಣಪ್ರಾಜ್ಞಿಯಾದಾಗ ಅವನು ನಿಸ್ಸಾರ ವಸ್ತುಗಳಿಗೆ ತಾನಾಗಿಯೇ ರುಚಿ ಕಳೆದುಕೊಳ್ಳುತ್ತಾನೆ.

**ಯತತೋಹ್ಯಪಿ ಕೌನ್ತೇಯ ಪುರುಷಸ್ಯ ವಿಪಶ್ಚಿತಃ ।**
**ಇಂದ್ರಿಯಾಣಿ ಪ್ರಮಾಥೀನಿ ಹರನ್ತಿ ಪ್ರಸಭಂ ಮನಃ ॥ ೬೦ ॥**

ಯತತಃ—ಪ್ರಯತ್ನಿಸುವಾಗ, ಹಿ—ಖಂಡಿತವಾಗಿ, ಅಪಿ—ಆದಾಗ್ಯೂ, ಕೌನ್ತೇಯ—ಹೇ ಕುಂತೀ ಪುತ್ರನೇ, ಪುರುಷಸ್ಯ—ಮನುಷ್ಯನ, ವಿಪಶ್ಚಿತಃ—ಸಾರಾಸಾರ ವಿಚಾರ ಪೂರ್ಣನು, ಇಂದ್ರಿಯಾಣಿ—ಇಂದ್ರಿಯಗಳು, ಪ್ರಮಾಥೀನಿ—ಉದ್ವಿಗ್ನಗೊಳ್ಳುತ್ತಿರುವ ಹರನ್ತಿ—ಎಳೆಯುತ್ತವೆ. ಪ್ರಸಭಮ್—ಒತ್ತಾಯ ಪೂರ್ವಕವಾಗಿ, ಮನಃ—ಮನಸ್ಸನ್ನು.

**ಇಂದ್ರಿಯಗಳು ಎಷ್ಟು ಬಲವತ್ತರ ಮತ್ತು ರಭಸಮಯವಾಗಿವೆಯೆಂದರೆ, ಹೇ ಅರ್ಜುನ, ಅವುಗಳನ್ನು ನಿಗ್ರಹಿಸಲು ಯತ್ನಿಸುತ್ತಿರುವ ವಿವೇಕಿಯ ಮನಸ್ಸನ್ನು ಕೂಡ ಬಲವಂತವಾಗಿ ಸೆಳೆದೊಯ್ಯುತ್ತವೆ.**

**ಭಾವಾರ್ಥ :** ಇಂದ್ರಿಯಗಳನ್ನು ಜಯಿಸಲು ಪ್ರಯತ್ನಿಸುವ ಅನೇಕ ವಿದ್ವಾಂಸರಾದ ಋಷಿಗಳು, ತತ್ತ್ವದರ್ಶಿಗಳು ಮತ್ತು ದಿವ್ಯವಾದಿಗಳು ಇದ್ದಾರೆ. ಆದರೆ, ಅವರ ಪ್ರಯತ್ನ ನಡೆದಿದ್ದರೂ, ಅವರಲ್ಲಿ ಅತ್ಯುನ್ನತರೂ ಸಹ ಕೆಲವು ಸಲ ಮನೋದ್ವಿಗ್ನತೆಯ ಕಾರಣ ಭೌತಿಕ ಇಂದ್ರಿಯ ಭೋಗಕ್ಕೆ ಬಲಿಯಾಗುತ್ತಾರೆ. ಮಹರ್ಷಿ ಮತ್ತು ಪೂರ್ಣಯೋಗಿಯೂ ಆಗಿದ್ದ ವಿಶ್ವಾಮಿತ್ರರು, ತಪಸ್ಸಿನ ಕಠೋರ ವಿಧಿಗಳು ಮತ್ತು ಯೋಗಾಭ್ಯಾಸಗಳಿಂದ ಇಂದ್ರಿಯ ನಿಗ್ರಹಕ್ಕಾಗಿ ಯತ್ನಿಸುತ್ತಿದ್ದರೂ, ಮೇನಕೆಯಿಂದ ಲೈಂಗಿಕ ಭೋಗಕ್ಕೆ ಮಾರ್ಗ ಭ್ರಷ್ಟರಾದರು. ಇಂಥ ಅನೇಕ ಪ್ರಸಂಗಗಳು ಪ್ರಪಂಚದ ಇತಿಹಾಸದಲ್ಲಿರುವುದುಂಟು. ಆದ್ದರಿಂದ ಪೂರ್ಣವಾಗಿ ಕೃಷ್ಣ ಪ್ರಜ್ಞೆಯುಳ್ಳವನಾಗದೆ, ಮನಸ್ಸನ್ನೂ ಇಂದ್ರಿಯಗಳನ್ನೂ ನಿಗ್ರಹಿಸುವುದು ಬಹು ಕಷ್ಟ. ಕೃಷ್ಣನಲ್ಲಿ ಮನಸ್ಸನ್ನು ನಿರತವಾಗಿಸದೆ, ಒಬ್ಬನು ಇಂಥ ಭೌತಿಕ ಕಾರ್ಯಕಲಾಪಗಳನ್ನು ನಿಲ್ಲಿಸಲಾಗದು. ಮಹಾ ಸಂತರೂ ಭಕ್ತರೂ ಆದ ಶ್ರೀ ಯಾಮುನಾಚಾರ್ಯರು ಒಂದು ಕಾರ್ಯಸಾಧ್ಯವಾದ ಉದಾಹರಣೆಯನ್ನು ಕೊಟ್ಟಿದ್ದಾರೆ:

ಯದವಧಿ ಮಮ ಚೇತಃ ಕೃಷ್ಣಪದಾರವಿನ್ದೇ
ನವನವರಸಧಾಮನ್ಯುದ್ಯತಂ ರನ್ತುಮಾಸೀತ್।
ತದವಧಿ ಬತ ನಾರೀಸಂಗಮೇ ಸ್ಮರ್ಯಮಾನೇ
ಭವತಿ ಮುಖವಿಕಾರಃ ಸುಷ್ಠುನಿಷ್ಠೀವನಂ ಚ॥

"ನನ್ನ ಮನಸ್ಸು ಶ್ರೀ ಕೃಷ್ಣನ ಪಾದಾರವಿಂದಗಳ ಸೇವೆಯಲ್ಲಿ ನಿರತವಾಗಿರುವುದರಿಂದ, ಮತ್ತು ನಿತ್ಯ ನೂತನ ದಿವ್ಯ ರಸಾನುಭವವನ್ನು ಅನುಭವಿಸುತ್ತಿರುವುದರಿಂದ, ನಾನು ಸ್ತ್ರೀಯರೊಡನೆ ಲೈಂಗಿಕ ಜೀವನವನ್ನು ಯೋಚಿಸಿದಾಗಲೆಲ್ಲ, ನನ್ನ ಮುಖವು ಅದರಿಂದ ಕೂಡಲೇ ದೂರಕ್ಕೆ ತಿರುಗುತ್ತದೆ, ಮತ್ತು ನಾನು ಆ ವಿಚಾರದೆಡೆಗೆ ಉಗಿಯುತ್ತೇನೆ."

ಕೃಷ್ಣ ಪ್ರಜ್ಞೆ ಎಂಬುದು ಎಷ್ಟು ದಿವ್ಯ ಅರೋಚಕವಾದುದೆಂದರೆ, ಭೌತಿಕ ಉಪ ಭೋಗವು ತಾನಾಗಿಯೇ ಅಸಾರವಾಗುತ್ತದ. ಅದು ಹೊಟ್ಟೆ ಹಸಿದವನು ಸಾಕಷ್ಟು ಪೌಷ್ಟಿಕ ತಿನಿಸುಗಳಿಂದ ತನ್ನ ಹಸಿವನ್ನು ತೃಪ್ತಿಪಡಿಸಿದಂತೆ ಇರುವುದು. ಮಹಾರಾಜ ಅಂಬರೀಷನು ಕೂಡ, ತನ್ನ ಮನಸ್ಸು ಕೃಷ್ಣ ಪ್ರಜ್ಞೆಯಲ್ಲಿ ನಿರತವಾಗಿಸಿದ್ದ ಕಾರಣದಿಂದಲೇ ಮಹಾಯೋಗಿಗಳಾದ ದುರ್ವಾಸ ಮುನಿಗಳನ್ನು ಜಯಿಸಿದನು **(ಸ ವೈ ಮನಃ ಕೃಷ್ಣ**

**ಪದಾರವಿನ್ದಯೋರ್ ವಚಾಂಸಿ ವೈಕುಂಠಗುಣಾನುವರ್ಣನೇ).**

**ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ ।**
**ವಶೇ ಹಿ ಯಸ್ಯೇನ್ದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೬೧ ॥**

ತಾನಿ—ಆ ಇಂದ್ರಿಯಗಳನ್ನು, ಸರ್ವಾಣಿ—ಎಲ್ಲ, ಸಂಯಮ್ಯ—ನಿಯಂತ್ರಣದಲ್ಲಿ ಇಟ್ಟು ಕೊಂಡು. ಯುಕ್ತಃ—ನಿರತನಾಗಿ, ಆಸೀತ್—ಸನ್ನಿವೇಶಿತನಾಗಿರಬೇಕು, ಮತ್ಪರಃ—ನನ್ನೊಡನೆ ಸಂಬಂಧದಲ್ಲಿ, ವಶೇ—ಸಂಪೂರ್ಣ ಅಧೀನತೆಯಲ್ಲಿ, ಹಿ—ಖಂಡಿತವಾಗಿ, ಯಸ್ಯ—ಯಾರೊಬ್ಬನ, ಇನ್ದ್ರಿಯಾಣಿ—ಇಂದ್ರಿಯಗಳು. ತಸ್ಯ—ಅವನ, ಪ್ರಜ್ಞಾ—ಪ್ರಜ್ಞೆಯು, ಪ್ರತಿಷ್ಠಿತಾ—ಸ್ಥಿರವಾಗಿರುವುದು.

**ಯಾವನು ತನ್ನ ಇಂದ್ರಿಯಗಳನ್ನು ಪೂರ್ಣ ನಿಯಂತ್ರಣದಲ್ಲಿ ಇಟ್ಟುಕೊಂಡು, ಅವುಗಳನ್ನು ನಿಗ್ರಹಿಸುತ್ತಾನೋ, ಮತ್ತು ತನ್ನ ಪ್ರಜ್ಞೆಯನ್ನು ನನ್ನ ಮೇಲೆ ಸ್ಥಿರಗೊಳಿಸುತ್ತಾನೋ, ಅವನು ಸ್ಥಿರ ಬುದ್ಧಿಯುವನೆಂದು ತಿಳಿಯಲ್ಪಡುವನು.**

**ಭಾವಾರ್ಥ :** ಯೋಗ ಪೂರ್ಣತೆಯ ಅತ್ಯುನ್ನತ ಕಲ್ಪನೆಯು ಕೃಷ್ಣ ಪ್ರಜ್ಞೆ ಎಂಬುದನ್ನು ಈ ಶ್ಲೋಕದಲ್ಲಿ ಸ್ಪಷ್ಟವಾಗಿ ವಿವರಿಸಿದೆ. ಒಬ್ಬನು ಕೃಷ್ಣ ಪ್ರಜ್ಞೆಯಾಗದ ಹೊರತು ಇಂದ್ರಿಯಗಳನ್ನು ನಿಯಂತ್ರಿಸುವುದು ಸಾಧ್ಯವೇ ಇಲ್ಲ. ಮೇಲೆ ಹೇಳಿರುವಂತೆ, ದುರ್ವಾಸ ಮುನಿಗಳು ಅಂಬರೀಷ ಮಹಾರಾಜನೊಂದಿಗೆ ಕಲಹವೊಂದನ್ನು ತೆಗೆದರು. ಮತ್ತು ದುರ್ವಾಸಮುನಿಯು ಅಹಂಕಾರದಿಂದ ಅನವಶ್ಯಕವಾಗಿ ಕೋಪಗೊಂಡು, ತಮ್ಮ ಇಂದ್ರಿಯಗಳನ್ನು ಬಿಗಿ ಹಿಡಿಯಲು ಆಗಲಿಲ್ಲ. ಅತ್ತಲಾಗಿ, ಆ ರಾಜನು ಆ ಮುನಿಯಷ್ಟು ಬಲಶಾಲಿಯಾದ ಯೋಗಿಯಲ್ಲದಿದ್ದರೂ, ಭಗವದ್ಭಕ್ತನಾಗಿದ್ದು, ಆ ಮುನಿಯ ಎಲ್ಲ ಅನ್ಯಾಯಗಳನ್ನು ಶಾಂತವಾಗಿ ಸಹಿಸಿಕೊಂಡನು ಮತ್ತು ಆದರಿಂದ ವಿಜಯಿಯಾದನು. ಶ್ರೀಮದ್ಭಾಗವತದಲ್ಲಿ (9.4.18-20) ಹೇಳಿರುವಂತೆ, ಆ ರಾಜನು ಈ ಮುಂದೆ ಹೇಳಿರುವ ಅರ್ಹತೆಗಳ ಕಾರಣ, ಇಂದ್ರಿಯಗಳನ್ನು ನಿಯಂತ್ರಿಸಲು ಸಮರ್ಥನಾಗಿದ್ದನು :

ಸ ವೈ ಮನಃ ಕೃಷ್ಣಪದಾರವಿನ್ದಯೋ—
ರ್ವಚಾಂಸಿ ವೈಕುಣ್ಠಗುಣಾನುವರ್ಣನೇ।
ಕರೌ ಹರೇರ್ಮನ್ದಿರಮಾರ್ಜನಾದಿಷು
ಶ್ರುತಿಂ ಚಕಾರಾಚ್ಯುತಸತ್ಕಥೋದಯೇ॥
ಮುಕುನ್ದಲಿಂಗಾಲಯದರ್ಶನೇ ದೃಶೌ
ತದ್ಭೃತ್ಯಗಾತ್ರಸ್ಪರ್ಶೇಽಂಗಸಂಗಮಮ್।
ಘ್ರಾಣಂ ಚ ತತ್ಪಾದಸರೋಜಸೌರಭೇ
ಶ್ರೀಮತ್ತುಲಸ್ಯಾ ರಸನಾಂ ತದರ್ಪಿತೇ॥
ಪಾದೌ ಹರೇಃ ಕ್ಷೇತ್ರಪದಾನುಸರ್ಪಣೇ
ಶಿರೋ ಹೃಷೀಕೇಶಪದಾಭಿವನ್ದನೇ।
ಕಾಮಂ ಚ ದಾಸ್ಯೇ ನ ತು ಕಾಮಕಾಮ್ಯಯಾ
ಯಥೋತ್ತಮಶ್ಲೋಕಜನಾಶ್ರಯಾ ರತಿಃ॥

"ಅಂಬರೀಷ ಮಹಾರಾಜನು ತನ್ನ ಮನಸ್ಸನ್ನು ಕೃಷ್ಣನ ಪಾದಾರವಿಂದಗಳಲ್ಲಿ ಸ್ಥಿರಗೊಳಿಸಿದ್ದನು, ತನ್ನ ಮಾತುಗಳನ್ನು ಭಗವಂತನ ಧಾಮವನ್ನು ವರ್ಣಿಸುವುದರಲ್ಲಿಯೂ, ತನ್ನ ಕೈಗಳನ್ನು ಭಗವನ್ಮಂದಿರವನ್ನು ಸ್ವಚ್ಛಗೊಳಿಸುವುದರಲ್ಲಿಯೂ, ತನ್ನ ಕಿವಿಗಳನ್ನು ಭಗವಂತನ ಲೀಲೆಗಳನ್ನು ಕೇಳುವುದರಲ್ಲಿಯೂ, ತನ್ನ ಕಣ್ಣುಗಳನ್ನು ಭಗವಂತನ ಮೂರ್ತಿಯನ್ನು ನೋಡುವುದರಲ್ಲಿಯೂ, ತನ್ನ ದೇಹವನ್ನು ಭಕ್ತರ ದೇಹವನ್ನು ಸ್ಪರ್ಶಿಸುವುದರಲ್ಲಿಯೂ, ತನ್ನ ಮೂಗನ್ನು ಭಗವಂತನ ಚರಣಕಮಲಗಳಿಗೆ ಅರ್ಪಿಸಿದ ಪುಷ್ಪಗಳ ಸುಗಂಧವನ್ನು ಆಘ್ರಾಣಿಸುವುದರಲ್ಲಿಯೂ, ತನ್ನ ನಾಲಿಗೆಯನ್ನು ಭಗವದರ್ಪಿತ ತುಳಸಿಯ ರುಚಿ ನೋಡುವುದರಲ್ಲಿಯೂ, ತನ್ನ ಕಾಲುಗಳನ್ನು ಭಗವಂತನ ಮಂದಿರವಿರುವ ಪುಣ್ಯಸ್ಥಳಕ್ಕೆ ಪ್ರಯಾಣ ಮಾಡುವುದರಲ್ಲಿಯೂ, ತನ್ನ ಶಿರವನ್ನು ಭಗವಂತನಿಗೆ ನಮಸ್ಕಾರಗಳ ಸಮರ್ಪಣೆಯಲ್ಲಿಯೂ ಮತ್ತು ತನ್ನ ಇಚ್ಛೆಗಳನ್ನು ಭಗವದಿಚ್ಛೆಗಳನ್ನು ಪೂರೈಸುವುದರಲ್ಲಿಯೂ ನಿರತವಾಗಿಸಿದ್ದನು............ಮತ್ತು ಈ ಎಲ್ಲ ಅರ್ಹತೆಗಳು ಭಗವಂತನ **ಮತ್ಪರ** ಭಕ್ತನಾಗಲು ಅವನನ್ನು ಯೋಗ್ಯವಾಗಿಸಿದ್ದವು."

**ಮತ್ಪರ** ಎಂಬುದು ಈ ಸಂದರ್ಭದಲ್ಲಿ ಬಹಳ ಮಹತ್ವದ ಪದ. ಒಬ್ಬನು ಹೇಗೆ **ಮತ್ಪರ**ನಾಗಬಹುದು ಎಂಬುದನ್ನು ಅಂಬರೀಷ ಮಹಾರಾಜನ ಜೀವನದಲ್ಲಿ ವರ್ಣಿಸಿದೆ. **ಮತ್ಪರ** ಪಂಕ್ತಿಯಲ್ಲಿನ ಮಹಾ ವಿದ್ವಾಂಸರೂ ಆಚಾರ್ಯರೂ ಆದ ಶ್ರೀಲ ಬಲದೇವ ವಿದ್ಯಾಭೂಷಣರು ಹೀಗೆ ಹೇಳಿದ್ದಾರೆ: **ಮದ್ಭಕ್ತಿ ಪ್ರಭಾವೇನ ಸರ್ವೇನ್ದ್ರಿಯ ವಿಜಯಪೂರ್ವಿಕಾ ಸ್ವಾತ್ಮ ದೃಷ್ಟಿಃ ಸುಲಭೇತಿ ಭಾವಃ**—"ಕೃಷ್ಣನಲ್ಲಿನ ಭಕ್ತಿಯುತ ಸೇವಾ ಬಲದಿಂದ ಮಾತ್ರವೇ ಇಂದ್ರಿಯಗಳನ್ನು ಪೂರ್ಣವಾಗಿ ನಿಯಂತ್ರಿಸಲು ಸಾಧ್ಯ." ಅಲ್ಲದೆ, ಕೆಲ ಸಮಯಗಳಲ್ಲಿ ಬೆಂಕಿಯ ಉದಾಹರಣೆಯನ್ನು ಕೊಡುತ್ತಾರೆ: "ಧಗಧಗಿಸುತ್ತಿರುವ ಅಗ್ನಿಯು ಕೋಣೆಯಲ್ಲಿ ಇರುವುದೆಲ್ಲವನ್ನೂ ಸುಡುವಂತೆ, ಯೋಗಿಯ ಹೃದಯದಲ್ಲಿ ಸನ್ನಿವೇಶಿತನಾದ ಭಗವಾನ್ ವಿಷ್ಣುವು, ಎಲ್ಲ ವಿಧವಾದ ಕಲುಷತೆಗಳನ್ನು ಸುಟ್ಟು ಹಾಕುತ್ತಾನೆ." **ಯೋಗ ಸೂತ್ರವು** ಕೂಡ ವಿಷ್ಣುವಿನ ಧ್ಯಾನವನ್ನು ಆಜ್ಞಾಪಿಸುವುದೇ ವಿನಾ ಶೂನ್ಯವನ್ನು ಕುರಿತ ಧ್ಯಾನವನ್ನಲ್ಲ. ವಿಷ್ಣು ವೇದಿಕೆಯ ಮೇಲಿಲ್ಲದ ಯಾವುದನ್ನೋ ಕುರಿತು ಧ್ಯಾನಮಾಡುವ ಯೋಗಿಗಳೆಂದು ಕರೆಯಲ್ಪಡುವವರು, ಯಾವುದೋ ಒಂದು ಮಾಯಾರೂಪದ ಶೋಧದಲ್ಲಿ ವ್ಯರ್ಥ ಕಾಲಹರಣ ಮಾಡುತ್ತಿರುತ್ತಾರೆ. ನಾವು ಕೃಷ್ಣಪ್ರಜ್ಞೆಗಳಾಗಬೇಕು—ದೇವೋತ್ತಮ ಪುರುಷನಿಗೆ ಅರ್ಪಿತರಾಗಬೇಕು. ಇದುವೇ ನಿಜವಾದ ಯೋಗದ ಗುರಿ.

**ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।**
**ಸಂಗಾತ್ಸಂಜಾಯತೇ ಕಾಮಃ ಕಾಮಾತ್ಕ್ರೋಧೋಽಭಿಜಾಯತೇ ॥ ೬೨ ॥**

ಧ್ಯಾಯತಃ—ಕುರಿತು ಚಿಂತಿಸುವಾಗ, ವಿಷಯಾನ್—ಇಂದ್ರಿಯ ವಿಷಯಗಳು, ಪುಂಸಃ—ವ್ಯಕ್ತಿಯ, ಸಂಗಃ—ಅಕ್ಕರೆಯು, ತೇಷು—ಇಂದ್ರಿಯ ವಿಷಯಗಳಲ್ಲಿ, ಉಪಜಾಯತೇ—ವರ್ಧಿಸುತ್ತದೆ, ಸಂಗಾತ್—ಸಂಗದಿಂದ, ಸಂಜಾಯತೇ—ವರ್ಧಿಸುತ್ತದೆ, ಕಾಮಃ—ಆಸೆಯು, ಕಾಮಾತ್—ಆಸೆಯಿಂದ, ಕ್ರೋಧಃ—ಕೋಪವು, ಅಭಿಜಾಯತೇ—ವ್ಯಕ್ತವಾಗುತ್ತದೆ.

**ಇಂದ್ರಿಯಗಳ ವಿಷಯಗಳನ್ನು ಕುರಿತು ಚಿಂತಿಸುವಾಗ, ವ್ಯಕ್ತಿಯು ಅವುಗಳಿಗೆ ಅಕ್ಕರೆಯನ್ನು ಹೊಂದುತ್ತಾನೆ, ಮತ್ತು ಅಂಥ ಅಕ್ಕರೆಯಿಂದ ಕಾಮಾಸಕ್ತಿಯು ವರ್ಧಿಸುತ್ತದೆ, ಮತ್ತು ಕಾಮಾಸಕ್ತಿಯಿಂದ ಕೋಪವು ಮೂಡುತ್ತದೆ.**

**ಭಾವಾರ್ಥ :** ಕೃಷ್ಣ ಪ್ರಾಜ್ಞಿಯಲ್ಲದವನು ಇಂದ್ರಿಯಗಳ ವಿಷಯಗಳನ್ನು ಕುರಿತು ಚಿಂತಿಸುವಾಗ, ಭೌತಿಕ ಕಾಮನೆಗಳಿಗೆ ಗುರಿಯಾಗುತ್ತಾನೆ. ಇಂದ್ರಿಯಗಳಿಗೆ ನೈಜವಾದ ತೊಡಗುವಿಕೆ ಅಗತ್ಯ, ಮತ್ತು ಅವುಗಳನ್ನು ಭಗವಂತನ ದಿವ್ಯ ಪ್ರೇಮಪೂರ್ವಕ ಸೇವೆಯಲ್ಲಿ ತೊಡಗಿಸದಿದ್ದರೆ, ಅವು ಖಂಡಿತವಾಗಿ ಸಾಂಸಾರಿಕತೆಯ ಸೇವೆಯಲ್ಲಿ ತೊಡಗುವುದನ್ನು ಅರಸುತ್ತವೆ. ಪ್ರಪಂಚದಲ್ಲಿ, ಸ್ವರ್ಗಲೋಕಗಳಲ್ಲಿನ ಇತರ ದೇವತೆಗಳ ಮಾತು ಹಾಗಿರಲಿ, ಬ್ರಹ್ಮರುದ್ರರೂ ಸೇರಿ–ಪ್ರತಿಯೊಬ್ಬರೂ ಇಂದ್ರಿಯ ವಿಷಯಗಳ ಪ್ರಭಾವಕ್ಕೆ ಗುರಿಯಾಗುತ್ತಾರೆ ಮತ್ತು ಈ ಭೌತಿಕ ಅಸ್ತಿತ್ವದ ತೊಡಕಿನಿಂದ ಪಾರಾಗಲು ಕೃಷ್ಣ ಪ್ರಾಜ್ಞಿಯಾಗುವುದೊಂದೇ ಮಾರ್ಗ. ಭಗವಾನ್ ಶಿವನು ಗಾಢವಾಗಿ ಧ್ಯಾನಮಗ್ನನಾಗಿದ್ದನು, ಆದರೆ ಪಾರ್ವತಿಯು ಅವನನ್ನು ಇಂದ್ರಿಯ ಸುಖಕ್ಕಾಗಿ ಉದ್ವಿಗ್ನಗೊಳಿಸಿದಾಗ, ಅವನು ಅದಕ್ಕೆ ಒಪ್ಪಿಕೊಂಡನು, ಪರಿಣಾಮವಾಗಿ ಕಾರ್ತಿಕೇಯನು ಹುಟ್ಟಿದನು. ಹರಿದಾಸ ಠಾಕುರರು ಯುವಭಗವದ್ಭಕ್ತರಾಗಿದ್ದಾಗ, ಅವರೂ ಹಾಗೆಯೇ ಮಾಯಾದೇವಿಯ ಅವತಾರದಿಂದ ಆಮಿಷ ಪ್ರಸಂಗ ಒದಗಿದರೂ, ಶ್ರೀಕೃಷ್ಣನಲ್ಲಿನ ತಮ್ಮ ಅನನ್ಯ ಭಕ್ತಿಯ ಕಾರಣ, ಅವರು ಈ ಪರೀಕ್ಷೆಯಲ್ಲಿ ಸುಲಭವಾಗಿ ತೇರ್ಗಡೆಯಾದರು. ಮೇಲೆ ಹೇಳಿರುವ ಯಾಮುನಾಚಾರ್ಯರ ಶ್ಲೋಕದಲ್ಲಿ ಉದಹರಿಸಿರುವಂತೆ, ಭಗವಂತನ ಪ್ರಾಮಾಣಿಕ ಭಕ್ತನು ಭಗವತ್ಸಂಗದಲ್ಲಿನ ಅಧ್ಯಾತ್ಮ ಭೋಗದ ಉತ್ತಮ ರುಚಿಯನ್ನು ಅನುಭವಿಸಿರುವುದರಿಂದ, ಅವನು ಸಕಲ ಭೌತಿಕ ಇಂದ್ರಿಯ ಭೋಗಗಳನ್ನು ದೂರವಿಡುತ್ತಾನೆ. ಅದುವೇ ಯಶಸ್ಸಿನ ರಹಸ್ಯ. ಆದರಿಂದ, ಕೃಷ್ಣಪ್ರಜ್ಞೆಯಲ್ಲಿ ಇಲ್ಲದವನು, ಕೃತಕ ದಮನದಿಂದ ಇಂದ್ರಿಯಗಳನ್ನು ನಿಯಂತ್ರಿಸುವುದರಲ್ಲಿ ಎಷ್ಟೇ ಬಲಶಾಲಿಯಾಗಿದ್ದರೂ ಕೂಡ, ಇಂದ್ರಿಯ ಸುಖದ ಲವಲೇಶ ಚಿಂತೆ ಬಂದರೂ ಸಾಕು, ಅದು ಅವನ ಆಸೆಗಳನ್ನು ತೃಪ್ತಿಪಡಿಸಲು ಉದ್ವಿಗ್ನಗೊಳಿಸುವುದರಿಂದ, ಅಂತಿಮವಾಗಿ ಅವನು ವಿಫಲನಾಗುವುದು ಖಂಡಿತ.

**ಕ್ರೋಧಾದ್ ಭವತಿ ಸಮ್ಮೋಹಃ ಸಮ್ಮೋಹಾತ್ಸ್ಮೃತಿವಿಭ್ರಮಃ ।**
**ಸ್ಮೃತಿಭ್ರಂಶಾದ್‌ಬುದ್ಧಿನಾಶೋ ಬುದ್ಧಿನಾಶಾತ್ಪ್ರಣಶ್ಯತಿ ॥ ೬೩ ॥**

ಕ್ರೋಧಾದ್—ಕೋಪದಿಂದ, ಭವತಿ—ಉಂಟಾಗುತ್ತದೆ, ಸಮ್ಮೋಹಃ—ಪರಿಪೂರ್ಣ ಭ್ರಮೆಯು, ಸಮ್ಮೋಹಾತ್—ಭ್ರಮೆಯಿಂದ, ಸ್ಮೃತಿ—ನೆನಪಿನ, ವಿಭ್ರಮಃ—ದಿಗ್ಭ್ರಮೆಯು, ಸ್ಮೃತಿ ಭ್ರಂಶಾತ್—ನೆನಪಿನ ದಿಗ್ಭ್ರಮೆಯನಂತರ, ಬುದ್ಧಿ ನಾಶಃ—ಬುದ್ಧಿಯ ನಾಶವು, ಬುದ್ಧಿನಾಶಾತ್—ಮತ್ತು ಬುದ್ಧಿನಾಶದಿಂದ, ಪ್ರಣಶ್ಯತಿ—ಒಬ್ಬನು ಪತನ ಹೊಂದುತ್ತಾನೆ.

**ಕೋಪದಿಂದ ಪೂರ್ಣ ಭ್ರಾಂತಿಯು ಮೂಡುತ್ತದೆ, ಮತ್ತು ಭ್ರಾಂತಿಯಿಂದ ನೆನಪಿನ ದಿಗ್ಭ್ರಮೆಯು ಉಂಟಾಗುತ್ತದೆ. ನೆನಪು ದಿಗ್ಭ್ರಮೆಯಾದಾಗ ಬುದ್ಧಿ ನಾಶವಾಗುತ್ತದೆ, ಮತ್ತು ಬುದ್ಧಿಯು ನಾಶವಾದಾಗ ಒಬ್ಬನ ಮತ್ತೆ ಸಾಂಸಾರಿಕ ಮಡುವಿನಲ್ಲಿ ಬೀಳುತ್ತಾನೆ.**

**ಭಾವಾರ್ಥ:** ಶ್ರೀಲ ರೂಪ ಗೋಸ್ವಾಮಿಯವರು ನಮಗೆ ಈ ನಿರ್ದೇಶನವನ್ನು ನೀಡಿದ್ದಾರೆ:

ಪ್ರಾಪಂಚಿಕತಯಾ ಬುದ್ಧ್ಯಾ ಹರಿಸಂಬಂಧಿವಸ್ತುನಃ।
ಮುಮುಕ್ಷುಭಿಃ ಪರಿತ್ಯಾಗೋ ವೈರಾಗ್ಯಂ ಫಲ್ಗು ಕಥ್ಯತೇ॥
(ಭಕ್ತಿರಸಾಮೃತ ಸಿಂಧು 1-2-258)

ಕೃಷ್ಣಪ್ರಜ್ಞೆಯ ವರ್ಧನೆಯಿಂದ ಪ್ರತಿಯೊಂದು ವಸ್ತುವೂ ಭಗವತ್ಸೇವೆಯಲ್ಲಿ ಉಪಯುಕ್ತ ಎಂಬುದನ್ನು ಒಬ್ಬನು ತಿಳಿದುಕೊಳ್ಳಬಹುದು. ಕೃಷ್ಣಪ್ರಜ್ಞಾ ಜ್ಞಾನವಿಲ್ಲದವರು ಕೃತಕವಾಗಿ ಭೌತಿಕ ವಸ್ತುಗಳನ್ನು ವರ್ಜಿಸಲು ಯತ್ನಿಸುತ್ತಾರೆ, ಮತ್ತು ಅದರ ಪರಿಣಾಮವಾಗಿ, ಅವರು ಭೌತಿಕ ಬಂಧನದಿಂದ ವಿಮೋಚನೆಯನ್ನು ಆಶಿಸಿದರೂ ಕೂಡ, ಅವರು ಪೂರ್ಣ ವೈರಾಗ್ಯ ಹಂತವನ್ನು ಸಾಧಿಸುವುದಿಲ್ಲ. ಅವರ ವೈರಾಗ್ಯವೆಂಬುದು **ಫಲ್ಗು** ಅಥವಾ ಕಡಿಮೆ ಮಹತ್ವದ್ದು ಎನಿಸಿಕೊಳ್ಳುತ್ತದೆ. ಅತ್ತಲಾಗಿ, ಕೃಷ್ಣಪ್ರಾಜ್ಞೆಯು ಪ್ರತಿಯೊಂದನ್ನೂ ಭಗವತ್ಸೇವೆಯಲ್ಲಿ ಹೇಗೆ ಬಳಸಬಹುದು ಎಂಬುದನ್ನು ತಿಳಿದಿರುತ್ತಾನೆ; ಆದ್ದರಿಂದ ಅವನು ಭೌತಿಕ ಪ್ರಜ್ಞೆಗೆ ಬಲಿಯಾಗುವುದಿಲ್ಲ. ಉದಾಹರಣೆಗೆ, ವ್ಯಕ್ತಿಶೂನ್ಯವಾದಿಗ, ಭಗವಂತನು ಅಥವಾ ಪೂರ್ಣವು-ವ್ಯಕ್ತಿಶೂನ್ಯವಾಗಿರುವುದರಿಂದ, ತಿನ್ನಲಾರನು. ವ್ಯಕ್ತಿಶೂನ್ಯವಾದಿಯು ಒಳ್ಳೆಯ ತಿನಿಸುಗಳನ್ನು ವರ್ಜಿಸಲು ಯತ್ನಿಸುತ್ತಿರಲು, ಭಕ್ತನಾದರೋ ಕೃಷ್ಣನು ಪರಮ ಭೋಕ್ತಾರನು ಮತ್ತು ಭಕ್ತಿಯಿಂದ ಸಮರ್ಪಿಸಿದ್ದೆಲ್ಲವನ್ನು ಅವನು ತಿನ್ನುವನು ಎಂದು ತಿಳಿದಿರುತ್ತಾನೆ. ಹೀಗೆ ಭಗವಂತನಿಗೆ ಒಳ್ಳೆಯ ತಿನಿಸುಗಳನ್ನು ಅರ್ಪಿಸಿದ ನಂತರ **ಪ್ರಸಾದ** ಎಂಬ ಶೇಷಾಂಶವನ್ನು ಭಕ್ತನು ಸ್ವೀಕರಿಸುತ್ತಾನೆ. ಹೀಗೆ ಎಲ್ಲವೂ ಅಧ್ಯಾತ್ಮೀಕೃತವಾಗುತ್ತದೆ ಮತ್ತು ಅಧಃಪತನದ ಅಪಾಯ ಇರುವುದಿಲ್ಲ. ಭಕ್ತನು ಪ್ರಸಾದವನ್ನು ಕೃಷ್ಣಪ್ರಜ್ಞೆಯಲ್ಲಿ ಸ್ವೀಕರಿಸುತ್ತಾನೆ, ಅಭಕ್ತನು ಅದು ಭೌತಿಕವೆಂದು ತಿರಸ್ಕರಿಸುತ್ತಾನೆ. ಆದ್ದರಿಂದ ವ್ಯಕ್ತಿಶೂನ್ಯವಾದಿಯು ತನ್ನ ಕೃತಕ ವೈರಾಗ್ಯದಿಂದಾಗಿ, ಜೀವನವನ್ನು ಭೋಗಿಸಲಾರನು; ಮತ್ತು ಈ ಕಾರಣದಿಂದ ಮನಸ್ಸಿನ ಅತ್ಯಲ್ಪ ಉದ್ವಿಗ್ನತೆ ಉಂಟಾದರೂ ಸಾಕು, ಅವನನ್ನು ಮತ್ತೆ ಸಾಂಸಾರಿಕ ಅಸ್ತಿತ್ವದ ಮಡುವಿಗೆ ಎಳೆದು ಕೆಡವುತ್ತದೆ. ಇಂಥ ಆತ್ಮನು ವಿಮೋಚನೆಯ ಮಟ್ಟದವರೆಗೂ ಮೇಲೇರಿದ್ದರೂ, ಭಕ್ತಿಯುತ ಸೇವೆಯ ಆಸರೆಯಿಲ್ಲದ ಕಾರಣ, ಅವನು ಮತ್ತೆ ಪತನ ಹೊಂದುತ್ತಾನೆ.

**ರಾಗದ್ವೇಷವಿಮುಕ್ತೈಸ್ತು ವಿಷಯಾನಿನ್ದ್ರಿಯೈಶ್ಚರನ್ ।**
**ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ॥ ೬೪ ॥**

ರಾಗ—ಅಕ್ಕರೆ, ದ್ವೇಷ—ಮತ್ತು ವಿರಕ್ತಿ, ವಿಮುಕ್ತೈಃ—ಮುಕ್ತನಾದವನಿಂದ, **ತು**—ಆದರೆ, ವಿಷಯಾನ್—ಇಂದ್ರಿಯ ವಿಷಯಗಳು, ಇನ್ದ್ರಿಯೈಃ—ಇಂದ್ರಿಯಗಳಿಂದ, **ಚರನ್**—ವರ್ತಿಸಿ, ಆತ್ಮವಶ್ಯೈಃ—ಒಬ್ಬನ ವಶದಲ್ಲಿ, ವಿಧೇಯ ಆತ್ಮಾ—ನಿಯಂತ್ರಿತ **ಸ್ವಾತಂತ್ರ್ಯ**ವನ್ನು ಅನುಸರಿಸುವವನು, ಪ್ರಸಾದಮ್—ಭಗವಂತನ ಅನುಗ್ರಹವನ್ನು, **ಅಧಿಗಚ್ಛತಿ—ಹೊಂದುತ್ತಾನೆ.**

**ಆದರೆ ಎಲ್ಲ ಅಕ್ಕರೆ ಮತ್ತು ದ್ವೇಷಗಳಿಂದ ಮುಕ್ತನಾದವನು ಮತ್ತು ಸ್ವಾತಂತ್ರ್ಯದ ನಿಯಂತ್ರಣ ತತ್ವಗಳಿಂದ ತನ್ನ ಇಂದ್ರಿಯಗಳನ್ನು ನಿಯಂತ್ರಿಸಲು ಸಮರ್ಥನಾದವನು ಭಗವಂತನ ಪೂರ್ಣ ಅನುಗ್ರಹವನ್ನು ಪಡೆಯಬಹುದು.**

**ಭಾವಾರ್ಥ :** ಒಬ್ಬನು ಕೃತಕ ವಿಧಾನಗಳಿಂದ ಬಾಹ್ಯವಾಗಿ ಇಂದ್ರಿಯಗಳನ್ನು ನಿಯಂತ್ರಿಸ ಬಹುದು. ಆದರೆ ಇಂದ್ರಿಯಗಳನ್ನು ಭಗವಂತನ ದಿವ್ಯ ಸೇವೆಯಲ್ಲಿ ತೊಡಗಿಸದ ಹೊರತು, ಪತನದ ಸಂಭವ ಇರುತ್ತದೆ ಎಂದು ಈಗಾಗಲೇ ವಿವರಿಸಲಾಗಿದೆ. ಪೂರ್ಣ ಕೃಷ್ಣಪ್ರಜ್ಞೆ ಯಲ್ಲಿನ ವ್ಯಕ್ತಿಯು ಇಂದ್ರಿಯಾಸಕ್ತಮಟ್ಟದಲ್ಲಿರುವಂತೆ ತೋರಿದರೂ, ಅವನ ಕೃಷ್ಣಪ್ರಜ್ಞೆ ಯಿಂದ ಅವನಿಗೆ ಇಂದ್ರಿಯ ಕ್ರಿಯೆಗಳಲ್ಲಿ ಅಕ್ಕರೆಯಿಲ್ಲ. ಕೃಷ್ಣಪ್ರಾಜ್ಞೆಯು ಕೃಷ್ಣನ ತೃಪ್ತಿ ಯನ್ನು ಕುರಿತು ಯೋಚಿಸುವನೇ ಹೊರತು ಬೇರೆ ಯಾವುದನ್ನೂ ಅಲ್ಲ. ಆದ್ದರಿಂದ ಅವನು ಎಲ್ಲ ಬಗೆಯ ಅಕ್ಕರೆ ಮತ್ತು ವಿರಕ್ತಿಗಳಿಗೆ ಅತೀತನು. ಕೃಷ್ಣನು ಇಚ್ಛೆಪಟ್ಟಲ್ಲಿ, ಸಾಮಾನ್ಯ ವಾಗಿ ಅನಪೇಕ್ಷಿತವಾದುದನ್ನು ಕೂಡ ಭಕ್ತನು ಮಾಡಬಹುದು; ಮತ್ತು ಕೃಷ್ಣನು ಇಚ್ಛೆ ಪಡದಿದ್ದಲ್ಲಿ, ಅವನು ಸಾಮಾನ್ಯವಾಗಿ ತನ್ನ ಸ್ವಯಂ ತೃಪ್ತಿಗಾಗಿ ಮಾಡುತ್ತಿದ್ದುದ್ದನ್ನೂ ಅವನು ಮಾಡುವುದಿಲ್ಲ. ಆದ್ದರಿಂದ, ಅವನು ಕೃಷ್ಣನ ನಿರ್ದೇಶನದಲ್ಲಿ ಮಾತ್ರ ವರ್ತಿಸುವುದ ರಿಂದ, ವರ್ತಿಸುವುದು ಅಥವ ವರ್ತಿಸದಿರುವುದು ಅವನ ನಿಯಂತ್ರಣಕ್ಕೆ ಒಳಪಟ್ಟಿದೆ. ಭಕ್ತನು ವಿಷಯ ವೇದಿಕೆಗೆ ಆಸಕ್ತನಾಗಿದ್ದರೂ, ಅವನು ಸಾಧಿಸಬಹುದಾದ ಈ ಪ್ರಜ್ಞೆಯು ಭಗವಂತನ ನಿರ್ಹೇತುಕ ದಯೆಯಾಗಿರುತ್ತದೆ.

**ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ ।**
**ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತೇ ॥ ೬೫ ॥**

ಪ್ರಸಾದೇ—ಭಗವಂತನ ನಿರ್ಹೇತುಕ ದಯೆಯನ್ನು ಸಾಧಿಸಿದ ನಂತರ, ಸರ್ವ— ಎಲ್ಲದರ, ದುಃಖಾನಾಮ್—ಭೌತಿಕ ಕ್ಲೇಶಗಳು, ಹಾನಿಃ—ನಾಶ, ಅಸ್ಯ—ಅವನ, ಉಪ ಜಾಯತೇ—ಉಂಟಾಗುತ್ತದೆ, ಪ್ರಸನ್ನಚೇತಸಃ—ಆನಂದಿತ ಮನಸ್ಸುಳ್ಳವನ, ಹಿ— ಖಂಡಿತವಾಗಿ, ಆಶು—ಬಹು ಶೀಘ್ರವೇ, ಬುದ್ಧಿಃ—ಬುದ್ಧಿಯು, ಪರಿ—ಸಾಕಷ್ಟು, ಅವತಿಷ್ಠತೇ—ಸ್ಥಾಪಿತವಾಗುತ್ತದೆ.

**ಹೀಗೆ (ಕೃಷ್ಣಪ್ರಜ್ಞೆಯಲ್ಲಿ) ತೃಪ್ತನಾದವನಿಗೆ, ಸಾಂಸಾರಿಕ ಅಸ್ತಿತ್ವದ ಮೂರು ವಿಧವಾದ ಕ್ಲೇಶಗಳು ಇನ್ನೆಷ್ಟು ಕಾಲವೂ ಇರುವುದಿಲ್ಲ; ಅಂಥ ತೃಪ್ತ ಪ್ರಜ್ಞೆ ಯಲ್ಲಿ, ಒಬ್ಬನ ಬುದ್ಧಿಯು ಶೀಘ್ರವೇ ಚೆನ್ನಾಗಿ ನೆಲೆಗೊಳ್ಳುತ್ತದೆ.**

**ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ ।**
**ನ ಚಾಭಾವಯತಃ ಶಾನ್ತಿರಶಾನ್ತಸ್ಯ ಕುತಃ ಸುಖಮ್ ॥ ೬೬ ॥**

ನ ಅಸ್ತಿ—ಇರಲಾರದು, ಬುದ್ಧಿಃ—ದಿವ್ಯ ಬುದ್ಧಿಯು, ಅಯುಕ್ತಸ್ಯ—(ಕೃಷ್ಣ ಪ್ರಜ್ಞೆಯ) ಸಂಪರ್ಕವಿಲ್ಲದವನ, ನ—ಇಲ್ಲ, ಚ—ಮತ್ತು, ಅಯುಕ್ತಸ್ಯ—ಕೃಷ್ಣಪ್ರಜ್ಞಾ ರಹಿತನಾದವನ, ಭಾವನಾ—ಸ್ಥಿರ ಮನಸ್ಸುಳ್ಳವನು (ಸುಖದಲ್ಲಿ), ನ—ಇರುವುದಿಲ್ಲ, ಚ—

ಮತ್ತು, ಅಭಾವಯತಃ—ಸ್ಥಿರನಲ್ಲದವನ, ಶಾನ್ತಿಃ—ಶಾಂತಿಯು, ಅಶಾನ್ತಸ್ಯ—ಅಶಾಂತ ನಿಗೆ, ಕುತಃ—ಎಲ್ಲಿದೆ, ಸುಖಮ್—ಸುಖವು.

**ಪರಮನೊಂದಿಗೆ (ಕೃಷ್ಣ ಪ್ರಜ್ಞೆಯಲ್ಲಿ) ಸಂಪರ್ಕವಿಲ್ಲದವನು ದಿವ್ಯ ಬುದ್ಧಿಯನ್ನಾಗಲಿ ಅಥವಾ ಸ್ಥಿರ ಮನಸ್ಸನ್ನಾಗಲಿ ಹೊಂದಲಾರನು. ಅವಿಲ್ಲದೆ ಶಾಂತಿಯು ಅಸಾಧ್ಯ. ಶಾಂತಿಯಿಲ್ಲದೆ ಯಾವುದೇ ಸುಖ ದೊರೆಯುವುದು ಹೇಗೆ ಸಾಧ್ಯ?**

**ಭಾವಾರ್ಥ :** ಒಬ್ಬನು ಕೃಷ್ಣಪ್ರಜ್ಞೆಯಲ್ಲಿ ಇದ್ದ ಹೊರತು ಶಾಂತಿಯ ಸಾಧ್ಯತೆ ಇಲ್ಲ. ಕೃಷ್ಣನೇ ಯಜ್ಞ ಮತ್ತು ತಪಸ್ಸಿನ ಎಲ್ಲ ಸತ್ಫಲಗಳ ಏಕೈಕ ಭೋಕ್ತಾರನು ಮತ್ತು ಅವನೇ ವಿಶ್ವದ ಸಕಲ ಅಭಿವ್ಯಕ್ತತೆಗಳ ಒಡೆಯನು, ಮತ್ತು ಅವನೇ ಸಕಲ ಜೀವಿಗಳ ನಿಜವಾದ ಮಿತ್ರನೆಂದು ಅರಿತುಕೊಂಡಾಗ ಮಾತ್ರ ಒಬ್ಬನು ನಿಜವಾದ ಶಾಂತಿಯನ್ನು ಹೊಂದ ಬಲ್ಲನು ಎಂದು ಐದನೆಯ ಅಧ್ಯಾಯದಲ್ಲಿ (5.29) ದೃಢಪಡಿಸಿದೆ. ಆದ್ದರಿಂದ, ಒಬ್ಬನು ಕೃಷ್ಣಪ್ರಜ್ಞೆಯಲ್ಲಿ ಇಲ್ಲದಿದ್ದರೆ, ಮನಸ್ಸಿಗೆ ಅಂತಿಮ ಗುರಿಯೇ ಇರುವುದಿಲ್ಲ. ಅಂತಿಮ ಗುರಿಯ ಕೊರತೆಯೇ ಕ್ಷೋಭೆಗೆ ಕಾರಣ, ಮತ್ತು ಕೃಷ್ಣನು ಎಲ್ಲರ ಮತ್ತು ಎಲ್ಲದರ ಭೋಕ್ತಾರನು, ಒಡೆಯನು ಮತ್ತು ಸಖನು ಎಂದು ನಿಶ್ಚಿತವಾಗಿ ತಿಳಿದುಕೊಂಡಾಗ, ಒಬ್ಬನು ನಿಶ್ಚಲ ಮನಸ್ಸಿನಿಂದ ಶಾಂತಿಯನ್ನು ತಂದುಕೊಳ್ಳಬಹುದು. ಆದ್ದರಿಂದ, ಕೃಷ್ಣ ಸಂಬಂಧವಿಲ್ಲದೆ ನಿರತನಾಗಿರುವವನು, ಅವನು ಜೀವನದಲ್ಲಿ ಎಷ್ಟೇ ಶಾಂತಿ ಮತ್ತು ಅಧ್ಯಾತ್ಮ ಪ್ರಗತಿಯನ್ನು ಪ್ರದರ್ಶನ ಮಾಡಿದರೂ, ಖಂಡಿತವಾಗಿ ಸದಾ ದುಃಖಿಯಾಗಿರುತ್ತಾನೆ ಮತ್ತು ಅಶಾಂತನಾಗಿರುತ್ತಾನೆ. ಕೃಷ್ಣಪ್ರಜ್ಞೆ ಎಂಬುದು ಸ್ವಯಂ ವ್ಯಕ್ತ ಶಾಂತ ಸ್ಥಿತಿ, ಅದನ್ನು ಕೃಷ್ಣನೊಡನೆ ಸಂಬಂಧದಿಂದಲೇ ಸಾಧಿಸಬಹುದು.

**ಇನ್ದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ ।**
**ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಮ್ಭಸಿ ॥ ೬೭ ॥**

ಇನ್ದ್ರಿಯಾಣಾಮ್—ಇಂದ್ರಿಯಗಳ, ಹಿ—ಖಂಡಿತವಾಗಿ, ಚರತಾಮ್—ಅಲೆದಾಡುವಾಗ, ಯತ್—ಯಾವುದರೊಡನೆ, ಮನಃ—ಮನಸ್ಸು, ಅನುವಿಧೀಯತೇ—ನಿರಂತರವಾಗಿ ನಿರತವಾಗುವುದು, ತತ್—ಅದು, ಅಸ್ಯ—ಅವನ, ಹರತಿ—ಎಳೆದುಕೊಂಡು ಹೋಗುತ್ತದೆ, ಪ್ರಜ್ಞಾಮ್—ಬುದ್ಧಿಯನ್ನು, ವಾಯುಃ—ವಾಯು, ನಾವಮ್—ದೋಣಿಯನ್ನು, ಇವ—ಅಂತೆ, ಅಮ್ಭಸಿ—ನೀರಿನ ಮೇಲೆ.

**ನೀರಿನ ಮೇಲಿನ ದೋಣಿಯೊಂದು ಬಲವಾದ ಗಾಳಿಯಿಂದ ಎಳೆದೊಯ್ಯಲ್ಪಡುವಂತೆ, ಅಲೆಯುತ್ತಿರುವ ಇಂದ್ರಿಯಗಳಲ್ಲಿ ಒಂದರ ಮೇಲಾದರೂ ಕೇಂದ್ರೀಕರಿಸಿದ ಮನಸ್ಸು, ಮನುಷ್ಯನೊಬ್ಬನ ಬುದ್ಧಿಯನ್ನು ಎಳೆದೊಯ್ಯಬಲ್ಲದು.**

**ಭಾವಾರ್ಥ :** ಸಕಲೇಂದ್ರಿಯಗಳನ್ನು ಭಗವಂತನ ಸೇವೆಯಲ್ಲಿ ತೊಡಗಿಸದ ಹೊರತು, ಅವುಗಳಲ್ಲಿ ಇಂದ್ರಿಯ ತೋಷಣದಲ್ಲಿ ತೊಡಗಿರುವ ಒಂದಾದರೂ, ಭಕ್ತನನ್ನು ದಿವ್ಯ ಪ್ರಗತಿ ಪಥದಿಂದ ವಿಚಲಗೊಳಿಸಬಹುದು. ಅಂಬರೀಷ ಮಹಾರಾಜನ ಜೀವನದಲ್ಲಿ ಪ್ರಸ್ತಾಪಿತ

**ಮಾದಂತೆ,** ಸಕಲೇಂದ್ರಿಯಗಳನ್ನು ಕೃಷ್ಣ ಪ್ರಜ್ಞೆಯಲ್ಲಿ ಪೂರ್ಣ ತೊಡಗಿಸಬೇಕು, ಏಕೆಂದರೆ, ಮನಸ್ಸನ್ನು ನಿಯಂತ್ರಿಸಲು ಅದೇ ಸರಿಯಾದ ವಿಧಾನ.

**ತಸ್ಮಾದ್ ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ ।**
**ಇನ್ದ್ರಿಯಾಣೀನ್ದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೬೮ ॥**

ತಸ್ಮಾತ್—ಆದ್ದರಿಂದ, ಯಸ್ಯ—ಯಾರ, ಮಹಾಬಾಹೋ—ಹೇ ಮಹಾಬಾಹುವೇ, ನಿಗೃಹೀತಾನಿ—ಹಾಗೆ ನಿಗ್ರಹಿಸಲ್ಪಟ್ಟ, ಸರ್ವಶಃ—ಎಲ್ಲೆಡೆಯೂ, ಇನ್ದ್ರಿಯಾಣಿ—ಇಂದ್ರಿಯಗಳು, ಇನ್ದ್ರಿಯ ಅರ್ಥೇಭ್ಯಃ—ಇಂದ್ರಿಯ ವಿಷಯಗಳಿಂದ, ತಸ್ಯ—ಅವನ, ಪ್ರಜ್ಞಾ—ಬುದ್ಧಿಯು, ಪ್ರತಿಷ್ಠಿತಾ—ಸ್ಥಿರವಾಗಿರುವುದು.

**ಆದ್ದರಿಂದ, ಹೇ ಮಹಾಬಾಹು, ಯಾರ ಇಂದ್ರಿಯಗಳು ಅವುಗಳ ವಿಷಯಗಳಿಂದ ನಿಗ್ರಹಿಸಲ್ಪಟ್ಟಿರುವುವೋ, ಅವನು ಖಂಡಿತವಾಗಿ ಸ್ಥಿರ ಬುದ್ಧಿಯುವನು.**

**ಭಾವಾರ್ಥ :** ಒಬ್ಬನು ಕೃಷ್ಣಪ್ರಜ್ಞೆಯಿಂದ, ಅಥವಾ ಭಗವಂತನ ದಿವ್ಯ ಪ್ರೇಮಪೂರ್ವಕ ಸೇವೆಯಲ್ಲಿ ಸಕಲೇಂದ್ರಿಯಗಳನ್ನು ತೊಡಗಿಸುವುದರಿಂದ ಮಾತ್ರ ಇಂದ್ರಿಯ ತೋಷಣದ ಒತ್ತಡಗಳನ್ನು ಕುಗ್ಗಿಸಬಹುದು. ವೈರಿಗಳನ್ನು ಶ್ರೇಷ್ಠ ಬಲದಿಂದ ನಿಗ್ರಹಿಸುವಂತೆ, ಇಂದ್ರಿಯಗಳನ್ನು ಅದೇ ರೀತಿಯಲ್ಲಿ, ಮನುಷ್ಯ ಪ್ರಯತ್ನದಿಂದಲ್ಲ, ಭಗವಂತನ ಸೇವೆಯಲ್ಲಿ ತೊಡಗಿಸುವ ಮೂಲಕ ಮಾತ್ರವೇ ನಿಗ್ರಹಿಸಬಹುದು. ಕೃಷ್ಣ ಪ್ರಜ್ಞೆಯಿಂದ ಮಾತ್ರ ಒಬ್ಬನು ಬುದ್ಧಿಯಲ್ಲಿ ನಿಜವಾಗಿ ಸ್ಥಾಪಿತನಾಗುವನು ಮತ್ತು ಈ ಕಲೆಯನ್ನು ಅಧಿಕೃತ ಗುರುವಿನ ಮಾರ್ಗದರ್ಶನದಲ್ಲಿ ಸಾಧಿಸಬೇಕು–ಎಂಬುದನ್ನು ಯಾರು ಅರಿತಿರುವನೋ, ಅವನು **ಸಾಧಕ** ಅಥವಾ ಮೋಕ್ಷಕ್ಕೆ ಉಚಿತ ಅಭ್ಯರ್ಥಿ ಎಂದು ಕರೆಯಲ್ಪಡುತ್ತಾನೆ.

**ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿಸಂಯಮೀ ।**
**ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥ ೬೯ ॥**

ಯಾ—ಯಾವುದು, ನಿಶಾ—ರಾತ್ರಿಯೋ, ಸರ್ವ—ಎಲ್ಲ, ಭೂತಾನಾಮ್—ಜೀವಿಗಳ, ತಸ್ಯಾಮ್—ಅದರಲ್ಲಿ, ಜಾಗರ್ತಿ—ಎಚ್ಚರವಾಗಿರುವನು, ಸಂಯಮೀ—ಆತ್ಮಸಂಯಮಿಯು, ಯಸ್ಯಾಮ್—ಯಾವುದರಲ್ಲಿ, ಜಾಗ್ರತಿ—ಎಚ್ಚರವಾಗಿರುವನು, ಭೂತಾನಿ—ಎಲ್ಲ ಜೀವಿಗಳು, ಸಾ—ಅದು, ನಿಶಾ—ರಾತ್ರಿ, ಪಶ್ಯತಃ—ಅಂತರ್ಮುಖಿಯಾದ, ಮುನೇಃ—ಋಷಿಗೆ.

**ಯಾವುದು ಸಕಲ ಜೀವಿಗಳಿಗೆ ರಾತ್ರಿಯೋ, ಅದು ಸಂಯಮಿಗೆ ಎಚ್ಚರದ ಸಮಯ; ಮತ್ತು ಎಲ್ಲ ಜೀವಿಗಳ ಎಚ್ಚರದ ಸಮಯವು, ಅಂತರ್ಮುಖಿಯಾದ ಋಷಿಗೆ ರಾತ್ರಿಯು.**

**ಭಾವಾರ್ಥ :** ಬುದ್ಧಿವಂತರಲ್ಲಿ ಎರಡು ವರ್ಗಗಳಿವೆ. ಒಂದು ಇಂದ್ರಿಯ ತೋಷಣಕ್ಕಾಗಿ ಭೌತಿಕ ಕಾರ್ಯಕಲಾಪಗಳಲ್ಲಿ ಬುದ್ಧಿಯುಳ್ಳವರ ವರ್ಗ, ಮತ್ತೊಂದು ಅಂತರ್ಮುಖಿ ಯಾದ

ವರ ಮತ್ತು ಆತ್ಮಸಾಕ್ಷಾತ್ಕಾರ ಸಾಧನೆಯಲ್ಲಿ ಜಾಗ್ರತರಾದವರ ವರ್ಗ. ಅಂತರ್ಮುಖಿಯಾದ ಸಾಧುವಿನ ಅಥವಾ ವಿಚಾರಪರನ ಕಾರ್ಯಕಲಾಪಗಳು ಭೌತಿಕವಾಗಿ ತಲ್ಲೀನರಾದವರಿಗೆ ರಾತ್ರಿ. ಸಾಂಸಾರಿಕವ್ಯಕ್ತಿಗಳು ತಮ್ಮ ಆತ್ಮಸಾಕ್ಷಾತ್ಕಾರದ ಅಜ್ಞಾನ ಕಾರಣ ಅಂಥ ರಾತ್ರಿಯಲ್ಲಿ ನಿದ್ರಿಸಿರುತ್ತಾರೆ. ಅಂತರ್ಮುಖಿಯಾದ ಮುನಿಯು ಸಾಂಸಾರಿಕರ ಆ "ರಾತ್ರಿ" ಯಲ್ಲಿ ಎಚ್ಚರವಾಗಿರುತ್ತಾನೆ. ಸಾಧುವಾದವನು ಅಧ್ಯಾತ್ಮ ಸಂಸ್ಕೃತಿಯ ಕ್ರಮೇಣ ಉನ್ನತಿಯಲ್ಲಿ ದಿವ್ಯಾನಂದವನ್ನು ಅನುಭವಿಸುತ್ತಾನೆ, ಆದರೆ ಭೌತಿಕ ಚಟುವಟಿಕೆಯಲ್ಲಿರುವವನು ಆತ್ಮ ಸಾಕ್ಷಾತ್ಕಾರದ ವಿಷಯದಲ್ಲಿ ನಿದ್ರಿಸಿದ್ದು, ಇಂದ್ರಿಯ ಸುಖಗಳ ವಿಧವಿಧವಾದ ಕನಸುಗಳನ್ನು ಕಾಣುತ್ತಾ, ತನ್ನ ನಿದ್ರಾವಸ್ಥೆಯಲ್ಲಿ ಕೆಲವು ಸಲ ಸುಖ, ಮತ್ತೆ ಕೆಲವು ಸಲ ದುಃಖ ಅನುಭವಿಸುತ್ತಾನೆ. ಅಂತರ್ಮುಖಿಯಾದವನು ಭೌತಿಕ ಸುಖದುಃಖಗಳ ಬಗ್ಗೆ ಸದಾ ಉದಾಸೀನನಾಗಿರುತ್ತಾನೆ. ಭೌತಿಕ ಕರ್ಮಫಲಗಳಿಂದ ಕ್ಷೋಭೆಗೊಳ್ಳದೆ ಅವನು ಆತ್ಮ ಸಾಕ್ಷಾತ್ಕಾರದ ಚಟುವಟಿಕೆಗಳಲ್ಲಿ ತೊಡಗಿರುತ್ತಾನೆ.

**ಆಪೂರ್ಯಮಾಣಮಚಲಪ್ರತಿಷ್ಠಂ**
**ಸಮುದ್ರಮಾಪಃ ಪ್ರವಿಶನ್ತಿ ಯದ್ವತ್ ।**
**ತದ್ವತ್ ಕಾಮಾ ಯಂ ಪ್ರವಿಶನ್ತಿ ಸರ್ವೇ**
**ಸ ಶಾನ್ತಿಮಾಪ್ನೋತಿ ನ ಕಾಮಕಾಮೀ ॥ ೭೦ ॥**

ಆಪೂರ್ಯಮಾಣಮ್—ಸದಾ ತುಂಬುತ್ತಿರುವ, ಅಚಲ ಪ್ರತಿಷ್ಠಮ್—ಸ್ಥಿರವಾಗಿ ಸನ್ನಿವೇಶಿತನಾಗಿರುವ, ಸಮುದ್ರಮ್—ಸಮುದ್ರವನ್ನು, ಆಪಃ—ಜಲವು, ಪ್ರವಿಶನ್ತಿ—ಪ್ರವೇಶಿಸುವುದೋ, ಯದ್ವತ್—ಹೀಗೆ, ತದ್ವತ್—ಹಾಗೆಯೇ, ಕಾಮಾಃ—ಆಸೆಗಳು, ಯಮ್—ಯಾವನಲ್ಲಿ, ಪ್ರವಿಶನ್ತಿ—ಪ್ರವೇಶಿಸುವುವೋ, ಸರ್ವೇ—ಎಲ್ಲ, ಸಃ—ಆ ವ್ಯಕ್ತಿಯು, ಶಾನ್ತಿಮ್—ಶಾಂತಿಯನ್ನು, ಆಪ್ನೋತಿ—ಹೊಂದುವನು, ನ—ಇಲ್ಲ, ಕಾಮ ಕಾಮೀ—ಆಸೆಗಳನ್ನು ಪೂರೈಸಿಕೊಳ್ಳಲು ಆಶಿಸುವವನು.

**ನಿರಂತರವಾಗಿ ತುಂಬಿಕೊಳ್ಳುತ್ತಿದ್ದರೂ ಸದಾ ಅಚಲವಾಗಿರುವ ಸಮುದ್ರಕ್ಕೆ ನದಿಗಳು ಪ್ರವೇಶಿಸುವಂತೆ, ಆಸೆಗಳು ನಿರಂತರ ಪ್ರವಹಿಸುತ್ತಿದ್ದರೂ ಕ್ಷೋಭೆಗೊಳ್ಳದ ವ್ಯಕ್ತಿಯು ಮಾತ್ರ ಶಾಂತಿಯನ್ನು ಹೊಂದುವನೇ ವಿನಾ, ಅಂಥ ಆಸೆಗಳನ್ನು ತೃಪ್ತಿಗೊಳಿಸಲು ಪ್ರಯತ್ನಿಸುವವನಲ್ಲ.**

**ಭಾವಾರ್ಥ ;** ವಿಶಾಲವಾದ ಸಾಗರವು ಸದಾ ಜಲದಿಂದ ತುಂಬಿರುವುದಾದರೂ, ಅದು ಯಾವಾಗಲೂ, ವಿಶೇಷವಾಗಿ ಮಳೆಗಾಲದಲ್ಲಿ ಮತ್ತಷ್ಟು ಹೆಚ್ಚು ನೀರಿನಿಂದ ತುಂಬಲ್ಪಡುವುದು. ಆದರೆ ಸಾಗರವು ಹಾಗೆಯೇ ಸ್ಥಿರವಾಗಿ ಇರುತ್ತದೆ; ಅದು ಪ್ರಕ್ಷುಬ್ಧವಾಗುವುದಿಲ್ಲ, ಅಥವಾ ತನ್ನ ತೀರದ ಮೇರೆಯ ಆಚೆಗೆ ದಾಟುವುದಿಲ್ಲ. ಸ್ಥಿರ ಕೃಷ್ಣಪ್ರಾಜ್ಞಿಯ ವಿಷಯವೂ ಅಷ್ಟೇ ಸತ್ಯ. ಒಬ್ಬನಿಗೆ ಭೌತಿಕ ದೇಹವಿರುವವರೆಗೆ ಇಂದ್ರಿಯ ತೋಷಣಕ್ಕಾಗಿ ದೇಹದ ಬೇಡಿಕೆಗಳು ಮುಂದುವರಿಯುತ್ತವೆ. ಭಕ್ತನಾದರೋ ತನ್ನ ಪೂರ್ಣತೆಯ ಕಾರಣ, ಅಂಥ ಆಸೆಗಳಿಂದ ಕ್ಷೋಭೆಗೊಳ್ಳುವುದಿಲ್ಲ. ಕೃಷ್ಣಪ್ರಾಜ್ಞಿಗೆ, ಭಗವಂತನು ಎಲ್ಲ

ಭೌತಿಕ ಅವಶ್ಯಕತೆಗಳನ್ನು ಪೂರೈಸುವುದರಿಂದ, ಯಾವುದರ ಅಗತ್ಯವೂ ಇಲ್ಲ. ಆದ್ದರಿಂದ ಅವನು ಸಾಗರದಂತೆ ತನ್ನಲ್ಲಿ ಸದಾ ಪೂರ್ಣವಾಗಿ ಇರುವನು. ಸಾಗರಕ್ಕೆ ನದಿಗಳ ನೀರು ಹರಿದು ಬರುವಂತೆ, ಅವನಿಗೆ ಇಚ್ಛೆಗಳು ಬರಬಹುದು, ಆದರೆ ಅವನು ತನ್ನ ಚಟುವಟಿಕೆಗಳಲ್ಲಿ ಸ್ಥಿರನು ಮತ್ತು ಅವನು ಇಂದ್ರಿಯ ತೋಷಣದ ಇಚ್ಛೆಗಳಿಂದ ಕಿಂಚಿತ್ತೂ ಕ್ಷೋಭೆಗೊಳ್ಳುವುದಿಲ್ಲ. ಕೃಷ್ಣ ಪ್ರಾಜ್ಞನ ರುಜುವಾತು ಇದೇ—ಇಚ್ಛೆಗಳು ಇದ್ದರೂ, ಅವನು ಭೌತಿಕ ಇಂದ್ರಿಯ ತೋಷಣದ ಇಚ್ಛೆಗಳನ್ನೆಲ್ಲ ತೊರೆದು ಬಿಟ್ಟವನು. ಅವನು ಭಗವಂತನ ಪ್ರೇಮ ಪೂರ್ವಕ ದಿವ್ಯ ಸೇವೆಯಲ್ಲಿ ತೃಪ್ತನಾಗಿ ಉಳಿದುಕೊಳ್ಳುವುದರಿಂದ, ಸಾಗರದಂತೆ ಅವನು ಸ್ಥಿರವಾಗಿರಬಹುದು, ಮತ್ತು ಅದರಿಂದ ಪೂರ್ಣ ಶಾಂತಿಯನ್ನು ಅನುಭವಿಸಬಹುದು. ಭೌತಿಕ ಯಶಸ್ಸಿನ ಮಾತೇನು, ಮೋಕ್ಷದ ಮಿತಿಯವರೆಗೂ ಇಚ್ಛೆಗಳನ್ನು ಪೂರೈಸಲು ಬಯಸುವ ಇತರರು, ಎಂದಿಗೂ ಶಾಂತಿಯನ್ನು ಹೊಂದುವುದಿಲ್ಲ. ಕಾಮ್ಯ ಕರ್ಮಿಗಳು, ಮೋಕ್ಷಾಪೇಕ್ಷಿಗಳು ಮತ್ತು ಯೋಗ ಸಿದ್ಧಿಗಳನ್ನು ಅರಸುತ್ತಿರುವ ಯೋಗಿಗಳು—ಇವರೆಲ್ಲರೂ ನೆರವೇರದ ಆಸೆಗಳಿಂದಾಗಿ ಅಸಂತುಷ್ಟರಾಗಿರುತ್ತಾರೆ. ಆದರೆ ಕೃಷ್ಣ ಪ್ರಾಜ್ಞನು ಭಗವಂತನ ಸೇವೆಯಲ್ಲಿ ಆನಂದವಾಗಿರುತ್ತಾನೆ. ಅವನಿಗೆ ಪೂರೈಸಬೇಕಾದ ಆಸೆಗಳು ಇರುವುದಿಲ್ಲ. ನಿಜವಾಗಿ, ಅವನು ಸಾಂಸಾರಿಕ ಬಂಧನವೆಂಬುದರಿಂದಲೂ ವಿಮೋಚನೆಯನ್ನು ಬಯಸುವುದಿಲ್ಲ. ಕೃಷ್ಣ ಭಕ್ತರಿಗೆ ಭೌತಿಕ ಆಸೆಗಳಿರುವುದಿಲ್ಲ. ಆದ್ದರಿಂದ ಅವರು ಪರಿಪೂರ್ಣ ಶಾಂತಿಯಲ್ಲಿರುತ್ತಾರೆ.

**ವಿಹಾಯ ಕಾಮಾನ್ ಯಃ ಸರ್ವಾನ್ ಪುಮಾಂಶ್ಚರತಿ ನಿಃಸ್ಪೃಹಃ ।**
**ನಿರ್ಮಮೋ ನಿರಹಂಕಾರಃ ಸ ಶಾನ್ತಿಮಧಿಗಚ್ಛತಿ ॥ ೭೧ ॥**

ವಿಹಾಯ—ತ್ಯಜಿಸಿ, ಕಾಮಾನ್—ಇಂದ್ರಿಯ ತೋಷಣದ ಭೌತಿಕ ಆಸೆಗಳನ್ನು, ಯಃ—ಯಾರು, ಸರ್ವಾನ್—ಎಲ್ಲ, ಪುಮಾನ್—ಒಬ್ಬ ವ್ಯಕ್ತಿಯು, ಚರತಿ—ಜೀವಿಸುತ್ತಾನೆ, ನಿಃಸ್ಪೃಹಃ—ಇಚ್ಛಾರಹಿತನಾಗಿ, ನಿರ್ಮಮಃ—ಒಡೆತನದ ಭಾವನೆ ಇಲ್ಲದೆ, ನಿರಹಂಕಾರಃ—ಮಿಥ್ಯಾಹಂಕಾರವಿಲ್ಲದೆ, ಸಃ—ಅವನು, ಶಾನ್ತಿಮ್—ಪೂರ್ಣ ಶಾಂತಿಯನ್ನು, ಅಧಿಗಚ್ಛತಿ—ಹೊಂದುತ್ತಾನೆ.

**ಇಂದ್ರಿಯ ತೋಷಣದ ಎಲ್ಲ ಇಚ್ಛೆಗಳನ್ನು ತ್ಯಜಿಸಿರುವ, ಇಚ್ಛಾಮುಕ್ತನಾಗಿ ಜೀವಿಸುತ್ತಿರುವ, ಒಡೆತನದ ಭಾವವನ್ನೆಲ್ಲಾ ತ್ಯಜಿಸಿರುವ ಮತ್ತು ಮಿಥ್ಯಾಹಂಕಾರ ರಹಿತನಾದ ವ್ಯಕ್ತಿಯು ಮಾತ್ರ ನಿಜವಾದ ಶಾಂತಿಯನ್ನು ಹೊಂದುತ್ತಾನೆ.**

**ಭಾವಾರ್ಥ :** ಇಚ್ಛಾರಹಿತನಾಗುವುದೆಂದರೆ ಇಂದ್ರಿಯ ತೋಷಣಕ್ಕಾಗಿ ಏನನ್ನೂ ಇಚ್ಛಿಸದಿರುವುದು. ಅರ್ಥಾತ್, ಕೃಷ್ಣಪ್ರಾಜ್ಞನಾಗಬೇಕೆಂಬ ಇಚ್ಛೆಯೇ ನಿಜವಾಗಿ ಇಚ್ಛಾರಹಿತತ್ವ. ಒಬ್ಬನು ಈ ಭೌತಿಕ ದೇಹವು ತಾನೆಂದು ತಪ್ಪಾಗಿ ತಿಳಿಯದೆ, ಮತ್ತು ಜಗತ್ತಿನಲ್ಲಿ ಯಾವುದೇ ವಸ್ತುವಿನ ಮೇಲೆ ತನ್ನ ಸುಳ್ಳು ಒಡೆತನವನ್ನು ಸಾಧಿಸದೆ, ತಾನು ಕೃಷ್ಣನ ನಿತ್ಯದಾಸನೆಂಬ ತನ್ನ ನಿಜಸ್ಥಿತಿಯನ್ನು ಅರಿತುಕೊಳ್ಳುವುದು ಕೃಷ್ಣ ಪ್ರಜ್ಞೆಯ ಪರಿಪೂರ್ಣ ಹಂತವಾಗಿದೆ. ಇಂಥ ಪರಿಪೂರ್ಣ ಸ್ಥಿತಿಯಲ್ಲಿ ಸನ್ನಿವೇಶಿತನಾಗಿರುವವನು

ಕೃಷ್ಣನೇ ಎಲ್ಲದರ ಸ್ವಾಮಿಯಾಗಿರುವುದರಿಂದ, ಪ್ರತಿಯೊಂದನ್ನು ಕೃಷ್ಣನ ತೃಪ್ತಿಗಾಗಿ ಉಪಯೋಗಿಸಬೇಕೆಂಬುದನ್ನು ತಿಳಿದಿರುತ್ತಾನೆ. ಅರ್ಜುನನು ತನ್ನ ಸ್ವಂತ ಇಂದ್ರಿಯ ತೃಪ್ತಿಗಾಗಿ ಯುದ್ಧ ಮಾಡಬಯಸಲಿಲ್ಲ. ಆದರೆ ಅವನು ಪೂರ್ಣ ಕೃಷ್ಣ ಪ್ರಜ್ಞೆಯಾದಾಗ ಯುದ್ಧ ಮಾಡಬೇಕೆಂದು ಕೃಷ್ಣನು ಬಯಸಿದ ಕಾರಣ, ಯುದ್ಧ ಮಾಡಿದನು. ತನಗಾಗಿ ಯುದ್ಧ ಮಾಡುವ ಇಚ್ಛೆ ಇರಲಿಲ್ಲ. ಆದರೆ ಕೃಷ್ಣನಿಗಾಗಿ ಅದೇ ಅರ್ಜುನನು ತನ್ನ ಅತ್ಯುತ್ತಮ ಸಾಮರ್ಥ್ಯದಿಂದ ಯುದ್ಧ ಮಾಡಿದನು. ನಿಜವಾದ ಇಚ್ಛಾರಾಹಿತ್ಯವೆಂದರೆ ಕೃಷ್ಣನ ತೃಪ್ತಿಗಾಗಿ ಆಶಿಸುವುದೇ ವಿನಾ ಇಚ್ಛೆಗಳನ್ನು ಉಚ್ಚಾಟಿಸುವ ಕೃತಕ ಪ್ರಯತ್ನವಲ್ಲ. ಜೀವಿಯು ಇಚ್ಛಾರಹಿತನು ಅಥವಾ ಇಂದ್ರಿಯರಹಿತನು ಆಗಲಾರನು. ಆದರೆ, ಅವನು ಇಚ್ಛೆಗಳ ಗುಣವನ್ನು ಬದಲಾಯಿಸ ಬೇಕಾಗುವುದು. ಭೌತಿಕ ಇಚ್ಛಾರಹಿತ ವ್ಯಕ್ತಿಯು ಎಲ್ಲವೂ ಕೃಷ್ಣನಿಗೆ ಸೇರಿದ್ದು (**ಈಶಾವಾಸ್ಯಮ್ ಇದಂ ಸರ್ವಮ್**), ಎಂಬುದನ್ನು ನಿಶ್ಚಿತವಾಗಿ ತಿಳಿದಿರುತ್ತಾನೆ. ಆದ್ದರಿಂದ ಅವನು ಯಾವ ವಸ್ತುವಿನ ಮೇಲೂ ಮಿಥ್ಯೆಯಾಗಿ ಒಡೆತನವನ್ನು ಸಾಧಿಸುವುದಿಲ್ಲ. ಈ ದಿವ್ಯ ಜ್ಞಾನವು ಆತ್ಮ ಸಾಕ್ಷಾತ್ಕಾರದ ಮೇಲೆ, ಎಂದರೆ—ಆಧ್ಯಾತ್ಮ ವ್ಯಕ್ತಿತ್ವದಲ್ಲಿ ಪ್ರತಿಯೊಬ್ಬ ಜೀವಿಯು ಕೃಷ್ಣನ ನಿತ್ಯ ವಿಭಿನ್ನಾಂಶ. ಜೀವಿಯ ಶಾಶ್ವತ ಸ್ಥಾನವು ಎಂದಿಗೂ ಕೃಷ್ಣನ ಮಟ್ಟದಲ್ಲಾಗಲೀ ಅಥವಾ ಕೃಷ್ಣನಿಗಿಂತ ಅಧಿಕ ಮಟ್ಟದಲ್ಲಾಗಲೀ ಇಲ್ಲ—ಎಂಬ ಪರಿಪೂರ್ಣ ಅರಿವನ್ನು ಆಧರಿಸಿದೆ. ಕೃಷ್ಣ ಪ್ರಜ್ಞೆಯ ಈ ಅರಿವೇ ನಿಜವಾದ ಶಾಂತಿಯ ಮೂಲ ತತ್ವ.

**ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಂ ಪ್ರಾಪ್ಯ ವಿಮುಹ್ಯತಿ ।**
**ಸ್ಥಿತ್ವಾಸ್ಯಾಮನ್ತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ ॥ ೭೨ ॥**

ಏಷಾ—ಈ, ಬ್ರಾಹ್ಮೀ—ಆಧ್ಯಾತ್ಮಿಕ, ಸ್ಥಿತಿಃ—ಸ್ಥಿತಿಯು, ಪಾರ್ಥ—ಹೇ ಪೃಥಾ ಪುತ್ರನೇ, ನ—ಎಂದೂ ಇಲ್ಲ, ಏನಮ್—ಇದನ್ನು, ಪ್ರಾಪ್ಯ—ಹೊಂದಿ, ವಿಮುಹ್ಯತಿ—ದಿಗ್ಭ್ರಮೆಗೊಳ್ಳುವುದಿಲ್ಲ, ಸ್ಥಿತ್ವಾ—ಸನ್ನಿವೇಶಿತನಾಗಿದ್ದು, ಅಸ್ಯಾಮ್—ಇದರಲ್ಲಿ, ಅನ್ತಕಾಲೇ—ಜೀವಿತದ ಕೊನೆಯಲ್ಲಿ, ಅಪಿ—ಕೂಡ, ಬ್ರಹ್ಮ ನಿರ್ವಾಣಮ್—ಭಗವಂತನ ಆಧ್ಯಾತ್ಮ ಲೋಕವನ್ನು; ಋಚ್ಛತಿ—ಒಬ್ಬನು ಹೊಂದುತ್ತಾನೆ.

**ಇದೇ ಅಧ್ಯಾತ್ಮ ಮತ್ತು ದೈವೀ ಜೀವನದ ಮಾರ್ಗ. ಇದನ್ನು ತಲುಪಿದ ನಂತರ ಮನುಷ್ಯನು ಭ್ರಮೆಗೆ ಒಳಗಾಗುವುದಿಲ್ಲ. ಅಂತ್ಯ ಕಾಲದಲ್ಲಿಯೂ ಕೂಡ ಒಬ್ಬನು ಹೀಗೆ ಸನ್ನಿವೇಶಿತನಾದರೆ, ಅವನು ಭಗವಂತನ ರಾಜ್ಯವನ್ನು ಪ್ರವೇಶಿಸ ಬಹುದು.**

**ಭಾವಾರ್ಥ :** ಒಬ್ಬನು ಕೃಷ್ಣಪ್ರಜ್ಞೆಯನ್ನು ಅಥವಾ ದಿವ್ಯ ಜೀವನವನ್ನು ತಕ್ಷಣವೇ ಹೊಂದಬಹುದು—ಅಥವಾ ಲಕ್ಷಾಂತರ ಜನ್ಮಗಳ ನಂತರವೂ ಜೀವನದ ಅಂಥ ಸ್ಥಿತಿಯನ್ನು ಹೊಂದದೇ ಇರಬಹುದು. ಇದು ಸಂಗತಿಯನ್ನು ಕೇವಲ ಅರಿಯುವ ಮತ್ತು ಅಂಗೀಕರಿಸುವ ವಿಷಯ. ಖಟ್ವಾಂಗ ಮಹಾರಾಜನು, ಕೃಷ್ಣನಿಗೆ ಶರಣಾಗುವುದರಿಂದ ತನ್ನ

ಮರಣಕ್ಕೆ ಕೆಲವು ನಿಮಿಷಗಳ ಮುಂಚೆ ಜೀವನದ ಇಂಥ ಸ್ಥಿತಿಯನ್ನು ಪಡೆದನು. **'ನಿರ್ವಾಣ'** ಎಂದರೆ ಸಾಂಸಾರಿಕ ಜೀವನದ ವಿಧಾನವನ್ನು ಕೊನೆಗೊಳಿಸುವುದು. ಬೌದ್ಧ ತತ್ವದ ಪ್ರಕಾರ ಈ ಸಾಂಸಾರಿಕ ಜೀವನವು ಮುಗಿದ ತರುವಾಯ ಇರುವುದು ಶೂನ್ಯ ಮಾತ್ರ; ಆದರೆ ಭಗವದ್ಗೀತೆಯು ಬೇರೆಯಾಗಿ ಬೋಧಿಸುತ್ತದೆ. ಸಾಂಸಾರಿಕ ಜೀವನ ಮುಗಿದ ನಂತರವೇ ನಿಜವಾದ ಜೀವನ ಪ್ರಾರಂಭವಾಗುತ್ತದೆ. ಮಂದ ಸಾಂಸಾರಿಕನಿಗೆ ಜೀವನದ ಈ ಸಾಂಸಾರಿಕ ರೀತಿಯನ್ನು ಕೊನೆಗೊಳಿಸಬೇಕು ಎಂಬುದು ತಿಳಿದರೆ ಸಾಕು; ಆದರೆ ಆಧ್ಯಾತ್ಮಿಕವಾಗಿ ಮುಂದುವರಿದ ವ್ಯಕ್ತಿಗಳಿಗೆ ಈ ಸಾಂಸಾರಿಕ ಜೀವನದ ತರುವಾಯ ಮತ್ತೊಂದು ಜೀವನವಿದೆ. ಈ ಜೀವಿತವನ್ನು ಮುಗಿಸುವ ಮೊದಲು, ಒಬ್ಬನು ಸುದೈವದಿಂದ ಕೃಷ್ಣ ಪ್ರಾಜ್ಞಿಯಾದರೆ, ಅವನು ತಕ್ಷಣವೇ **ಬ್ರಹ್ಮ ನಿರ್ವಾಣ** ಹಂತವನ್ನು ತಲುಪುತ್ತಾನೆ. ಭಗವಂತನ ರಾಜ್ಯ ಮತ್ತು ಭಗವಂತನ ಭಕ್ತಿಯುತ ಸೇವೆಯ ನಡುವೆ ಯಾವ ವ್ಯತ್ಯಾಸವೂ ಇಲ್ಲ. ಅವು ಎರಡೂ ಪರಮ ಮಟ್ಟದಲ್ಲಿರುವುದರಿಂದ, ಭಗವಂತನ ದಿವ್ಯ ಪ್ರೇಮಯುತ ಸೇವೆಯಲ್ಲಿ ತೊಡಗಿರುವುದು ಭಗವಂತನ ರಾಜ್ಯವನ್ನು ಸೇರಿದಂತೆಯೇ. ಭೌತಿಕ ಪ್ರಪಂಚದಲ್ಲಿ ಇಂದ್ರಿಯ ತೋಷಣೆಯ ಕಾರ್ಯಕಲಾಪಗಳಿವೆ, ಆದರೆ ಆಧ್ಯಾತ್ಮ ಪ್ರಪಂಚದಲ್ಲಿ ಕೃಷ್ಣ ಪ್ರಜ್ಞೆಯ ಕಾರ್ಯಕಲಾಪಗಳಿವೆ. ಈ ಜೀವಿತದಲ್ಲಿಯೇ ಕೃಷ್ಣ ಪ್ರಜ್ಞೆಯನ್ನು ಪಡೆಯುವುದೆಂದರೆ ತಕ್ಷಣವೇ ಬ್ರಹ್ಮನ್ ಪ್ರಾಪ್ತಿಯಾದಂತೆಯೇ, ಮತ್ತು ಕೃಷ್ಣ ಪ್ರಜ್ಞೆಯಲ್ಲಿ ಸನ್ನಿವೇಶಿತನಾದವನು ಖಂಡಿತವಾಗಿ ಆಗಲೇ ಭಗವಂತನ ರಾಜ್ಯವನ್ನು ಪ್ರವೇಶಿಸಿರುತ್ತಾನೆ.

ಬ್ರಹ್ಮನ್ ಎಂಬುದು ಜಡಕ್ಕೆ ವಿರುದ್ಧ ಪದ. ಆದ್ದರಿಂದ **ಬ್ರಾಹ್ಮೀ ಸ್ಥಿತಿ** ಎಂದರೆ "ಭೌತಿಕ ಚಟುವಟಿಕೆಗಳ ವೇದಿಕೆಯ ಮೇಲಿನದಲ್ಲ." ಭಗವಂತನ ಭಕ್ತಿಯುತ ಸೇವೆಯನ್ನು ವಿಮೋಚಿತ ಹಂತವೆಂದು (**ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ**) ಭಗವದ್ಗೀತೆಯಲ್ಲಿ ಅಂಗೀಕರಿಸಿದೆ. ಆದ್ದರಿಂದ **ಬ್ರಾಹ್ಮೀ ಸ್ಥಿತಿ**ಯೆಂಬುದು ಸಾಂಸಾರಿಕ ಬಂಧನದಿಂದ ವಿಮೋಚನೆ.

ಭಗವದ್ಗೀತೆಯ ಈ ಎರಡನೆಯ ಅಧ್ಯಾಯವನ್ನು, ಇಡೀ ಗ್ರಂಥದ ಪರಿವಿಡಿ ಎಂದು ಶ್ರೀಲ ಭಕ್ತಿವಿನೋದ ಠಾಕೂರರು ಸಂಗ್ರಹವಾಗಿ ಹೇಳಿರುತ್ತಾರೆ. ಭಗವದ್ಗೀತೆಯಲ್ಲಿ **ಕರ್ಮ ಯೋಗ, ಜ್ಞಾನ ಯೋಗ** ಮತ್ತು **ಭಕ್ತಿಯೋಗ**ದ ವಿಷಯಗಳಿವೆ. ಎರಡನೆಯ ಅಧ್ಯಾಯದಲ್ಲಿ ಸಮಗ್ರ ಗ್ರಂಥದ ಪರಿವಿಡಿಯಾಗಿ **ಕರ್ಮಯೋಗ**ವು ಮತ್ತು **ಜ್ಞಾನ ಯೋಗ**ವು ಸ್ಪಷ್ಟವಾಗಿ ಚರ್ಚಿಸಲ್ಪಟ್ಟಿವೆ, ಮತ್ತು **ಭಕ್ತಿಯೋಗ**ದ ಕ್ಷಣಿಕನೋಟವನ್ನೂ ನೀಡಿದೆ.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯಲ್ಲಿನ ಗೀತಾಸಾರ ಸಂಗ್ರಹ ಎಂಬ ಎರಡನೆಯ ಅಧ್ಯಾಯದ ಭಕ್ತಿವೇದಾಂತ ತಾತ್ಪರ್ಯವು ಮುಗಿಯಿತು.**

## ಅಧ್ಯಾಯ ಮೂರು



# ಕರ್ಮಯೋಗ

**ಅರ್ಜುನ ಉವಾಚ**

> **ಜ್ಯಾಯಸೀ ಚೇತ್ ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ ।**
> **ತತ್ ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ॥ ೧ ॥**

ಅರ್ಜುನ ಉವಾಚ—ಅರ್ಜುನನು ನುಡಿದನು, ಜ್ಯಾಯಸೀ—ಉತ್ತಮ, ಚೇತ್—ಆಗಿದ್ದರೆ, ಕರ್ಮಣಃ—ಕಾಮ್ಯ ಕರ್ಮಕ್ಕಿಂತಲೂ, ತೇ—ನಿನ್ನಿಂದ, ಮತಾ—ಭಾವಿಸಲ್ಪಟ್ಟಿರುವುದು, ಬುದ್ಧಿಃ—ಬುದ್ಧಿಯು, ಜನಾರ್ದನ—ಹೇ ಕೃಷ್ಣ, ತತ್—ಆದ್ದರಿಂದ, ಕಿಮ್—ಏಕೆ, ಕರ್ಮಣಿ—ಕರ್ಮದಲ್ಲಿ, ಘೋರೇ—ಭೀಕರವಾದ, ಮಾಮ್—ನನ್ನನ್ನು, ನಿಯೋಜಯಸಿ ನೀನು ನಿರತನಾಗಿಸುತ್ತಿರುವೆ, ಕೇಶವ—ಹೇ ಕೃಷ್ಣ.

**ಅರ್ಜುನನು ನುಡಿದನು : ಹೇ ಜನಾರ್ದನ, ಹೇ ಕೇಶವ, ಬುದ್ಧಿಯು ಕಾಮ್ಯ ಕರ್ಮಕ್ಕಿಂತಲೂ ಉತ್ತಮ ಎಂದು ನೀನು ಭಾವಿಸುವುದಾದರೆ, ನನ್ನನ್ನು ಈ ಭೀಕರ ಸಮರದಲ್ಲಿ ನಿರತನಾಗಿಸಲು ಏಕೆ ಅಪೇಕ್ಷಿಸುವೆ?**

**ಭಾವಾರ್ಥ :** ತನ್ನ ಆಪ್ತ ಸಖನಾದ ಅರ್ಜುನನನ್ನು ಸಾಂಸಾರಿಕ ದುಃಖ ಸಾಗರದಿಂದ ಪಾರುಮಾಡಲು, ಪರಮ ದೇವೋತ್ತಮ ಪುರುಷನಾದ ಶ್ರೀಕೃಷ್ಣನು ಹಿಂದಿನ ಅಧ್ಯಾಯದಲ್ಲಿ, ಆತ್ಮನ ಸ್ವರೂಪವನ್ನು ಬಹು ವಿಸ್ತಾರವಾಗಿ ವರ್ಣಿಸಿದ್ದಾನೆ. ಮತ್ತು ಸಾಕ್ಷಾತ್ಕಾರದ ಮಾರ್ಗವನ್ನು—**ಬುದ್ಧಿ ಯೋಗ** ಅಥವಾ ಕೃಷ್ಣ ಪ್ರಜ್ಞೆಯನ್ನು—ಸೂಚಿಸಿದ್ದಾನೆ. ಕೆಲವು ಸಲ ಕೃಷ್ಣ ಪ್ರಜ್ಞೆಯನ್ನು ಕಾರ್ಯಹೀನತೆ ಎಂದು ತಪ್ಪಾಗಿ ತಿಳಿಯುವುದುಂಟು. ಅಂಥ ತಪ್ಪು ಅರಿವಿನಿಂದ, ಒಬ್ಬನು ಅನೇಕ ಸಲ ಕೃಷ್ಣನ ಪುಣ್ಯನಾಮವನ್ನು ಜಪಿಸುವುದರಿಂದ ಪೂರ್ಣ ಕೃಷ್ಣ ಪ್ರಜ್ಞನಾಗಲು ಏಕಾಂತ ಸ್ಥಳಕ್ಕೆ ಹೋಗುತ್ತಾನೆ. ಆದರೆ, ಕೃಷ್ಣಪ್ರಜ್ಞಾ ತತ್ವದಲ್ಲಿ ತರಬೇತಿ ಪಡೆಯದೆ, ಒಬ್ಬನು ಅಮಾಯಕ ಜನರ ಅಗ್ಗದ ವಂದನಾದಿಗಳನ್ನು

ಗಳಿಸಬಹುದೇ ಹೊರತು, ಏಕಾಂತ ಸ್ಥಳದಲ್ಲಿ ಕುಳಿತು ಕೃಷ್ಣನ ಪುಣ್ಯನಾಮ ಜಪಿಸುವುದ ವಿಹಿತವಲ್ಲ. ಅರ್ಜುನನೂ ಕೂಡ, ಕೃಷ್ಣ ಪ್ರಜ್ಞೆ ಅಥವಾ **ಬುದ್ಧಿಯೋಗ** ಅಥವಾ ಜ್ಞಾನದ ಆಧ್ಯಾತ್ಮಿಕ ಮುಂದುವರಿಕೆಯಲ್ಲಿನ ಬುದ್ಧಿಯು ಸಕ್ರಿಯಾ ಜೀವನದಿಂದ ನಿವೃತ್ತಿ ಹೊಂದುವುದು ಮತ್ತು ಏಕಾಂತ ಸ್ಥಳದಲ್ಲಿ ತಪಸ್ಸು ಮತ್ತು ಕಠಿಣ ವ್ರತಗಳನ್ನು ಆಚರಿಸುವುದು ಎಂದು ಭಾವಿಸಿದನು. ಅರ್ಥಾತ್, ಅವನು ಕೃಷ್ಣ ಪ್ರಜ್ಞೆಯನ್ನು ನೆಪವಾಗಿ ಉಪಯೋಗಿಸಿಕೊಂಡು, ಚಾತುರ್ಯದಿಂದ ಯುದ್ಧವನ್ನು ತಪ್ಪಿಸಿಕೊಳ್ಳಬೇಕೆಂದು ಬಯಸಿದನು. ಆದರೆ, ಪ್ರಾಮಾಣಿಕ ಶಿಷ್ಯನಾಗಿ, ಅವನು ತನ್ನ ವಿಚಾರವನ್ನು ಗುರುವಿನ ಮುಂದೆ ಇರಿಸಿದನು, ಮತ್ತು ತನಗೆ ಅತ್ಯುತ್ತಮ ಪ್ರವೃತ್ತಿಮಾರ್ಗ ಯಾವುದು ಎಂದು ಕೃಷ್ಣನನ್ನು ಪ್ರಶ್ನಿಸಿದನು. ಉತ್ತರವಾಗಿ, ಕೃಷ್ಣನು **ಕರ್ಮಯೋಗ**ವನ್ನು ಅಥವಾ ಕೃಷ್ಣ ಪ್ರಜ್ಞೆಯಲ್ಲಿ ಕರ್ಮಮಾಡುವುದನ್ನು ಈ ಮೂರನೆಯ ಅಧ್ಯಾಯದಲ್ಲಿ ವಿಸ್ತಾರವಾಗಿ ವಿವರಿಸಿದ್ದಾನೆ.

**ವ್ಯಾಮಿಶ್ರೇಣೇವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ ।**
**ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಮ್ ॥ ೨ ॥**

ವ್ಯಾಮಿಶ್ರೇಣ—ದ್ವಂದ್ವಾರ್ಥವಿರುವ, ಇವ—ಖಂಡಿತವಾಗಿ, ವಾಕ್ಯೇನ—ಶಬ್ದ ಗಳಿಂದ, ಬುದ್ಧಿಮ್—ಬುದ್ಧಿಯನ್ನು, ಮೋಹಯಸಿ—ನೀನು ಭ್ರಮೆಗೊಳಿಸುತ್ತಿರುವೆ, ಇವ—ಖಂಡಿತವಾಗಿ, ಮೇ—ನನ್ನ, ತತ್—ಆದ್ದರಿಂದ, ಏಕಮ್—ಒಂದನ್ನು ಮಾತ್ರ, ವದ—ದಯವಿಟ್ಟು ಹೇಳು, ನಿಶ್ಚಿತ್ಯ—ನಿಶ್ಚಯಿಸಿ, ಯೇನ—ಯಾವುದರಿಂದ, ಶ್ರೇಯಃ—ನಿಜವಾದ ಪ್ರಯೋಜನ, ಅಹಮ್—ನಾನು, ಆಪ್ನುಯಾಮ್—ಹೊಂದಬಹುದು.

**ನಿನ್ನ ದ್ವಂದ್ವಾರ್ಥದ ಉಪದೇಶಗಳಿಂದ ನನ್ನ ಬುದ್ಧಿಯು ಭ್ರಮೆಗೊಂಡಿದೆ. ಆದ್ದರಿಂದ, ಯಾವುದು ನನಗೆ ಅತ್ಯಂತ ಪ್ರಯೋಜನಕಾರಿ ಎಂಬುದನ್ನು ದಯವಿಟ್ಟು ನಿಶ್ಚಿತವಾಗಿ ಹೇಳು.**

**ಭಾವಾರ್ಥ:** ಹಿಂದಿನ ಅಧ್ಯಾಯದಲ್ಲಿ, ಭಗವದ್ಗೀತೆಗೆ ಪೀಠಿಕೆಯಾಗಿ **ಸಾಂಖ್ಯಯೋಗ ಬುದ್ಧಿಯೋಗ**, ಬುದ್ಧಿಯಿಂದ ಇಂದ್ರಿಯಗಳ ನಿಯಂತ್ರಣ, ಫಲಾಪೇಕ್ಷರಹಿತ ಕರ್ಮ, ಮತ್ತು ಆರಂಭಗಾರನ ಸ್ಥಾನ ಮೊದಲಾದ ಅನೇಕ ಬೇರೆ ಬೇರೆ ಮಾರ್ಗಗಳನ್ನು ವಿವರಿಸ ಲಾಯಿತು. ಇವೆಲ್ಲವನ್ನೂ ಕ್ರಮ ಬದ್ಧವಾಗಿ ನಿರೂಪಿಸಿರಲಿಲ್ಲ. ಆಚರಣೆಗಾಗಿ ಮತ್ತು ಅರಿವಿಗಾಗಿ ಮಾರ್ಗದ ಇನ್ನೂ ಹೆಚ್ಚು ವ್ಯವಸ್ಥಿತ ವಿವರಣೆ ಅಗತ್ಯ. ಆದ್ದರಿಂದ ಯಾವೊಬ್ಬ ಸಾಮಾನ್ಯನು ತಪ್ಪಾಗಿ ವ್ಯಾಖ್ಯಾನಿಸದೆ ಅವುಗಳನ್ನು ಅಂಗೀಕರಿಸುವುದಕ್ಕೆ ಗೊಂದಲಕಾರಿಯೆನಿಸುವ ಈ ವಿಷಯಗಳನ್ನು ಸ್ಪಷ್ಟಗೊಳಿಸಬೇಕೆಂದು ಅರ್ಜುನನು ಬಯಸಿದನು. ಶಬ್ದಾಡಂಬರದ ಮೂಲಕ ಅರ್ಜುನನಿಗೆ ವಿಚಾರ ಗೊಂದಲವುಂಟು ಮಾಡುವ ಇಚ್ಛೆ ಕೃಷ್ಣನಿಗೆ ಇರಲಿಲ್ಲವಾದರೂ , ಅರ್ಜುನನು ಕೃಷ್ಣಪ್ರಜ್ಞೆಯ ವಿಧಾನವನ್ನು ಕಾರ್ಯರಹಿತತೆಯಿಂದಲೋ ಅಥವಾ ಸಕ್ರಿಯಾ ಸೇವೆಯಿಂದಲೋ ಎಂದು ಅರಿತು ಕೊಳ್ಳಲಾಗಲಿಲ್ಲ. ಅರ್ಥಾತ್, ಭಗವದ್ಗೀತೆಯ ರಹಸ್ಯವನ್ನು ನಿಜವಾಗಿ ಅರಿತು

**ಕೊಳ್ಳ** ಬಯಸುವ ಎಲ್ಲ ವಿದ್ಯಾರ್ಥಿಗಳಿಗೂ, ತನ್ನ ಪ್ರಶ್ನೆಗಳಿಂದ ಅವನು ಕೃಷ್ಣಪ್ರಜ್ಞಾ **ಮಾರ್ಗ**ವನ್ನು ಸ್ಪಷ್ಟ ಮಾಡುತ್ತಿದ್ದಾನೆ.

**ಶ್ರೀಭಗವಾನುವಾಚ**

**ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾನಘ ।**
**ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಮ್ ॥೩॥**

ಶ್ರೀಭಗವಾನ್ ಉವಾಚ—ಪರಮದೇವೋತ್ತಮ ಪುರುಷನು ನುಡಿದನು, ಲೋಕೇ—ಪ್ರಪಂಚದಲ್ಲಿ, ಅಸ್ಮಿನ್—ಈ, ದ್ವಿವಿಧಾ—ಎರಡು ಬಗೆಯ, ನಿಷ್ಠಾ—ನಿಷ್ಠೆಯು, ಪುರಾ—ಹಿಂದೆಯೇ, ಪ್ರೋಕ್ತಾ—ಹೇಳಲ್ಪಟ್ಟವು, ಮಯಾ—ನನ್ನಿಂದ, ಅನಘ—ಹೇ ಪಾಪ ರಹಿತನೇ, ಜ್ಞಾನಯೋಗೇನ—ಜ್ಞಾನದ ಯೋಗ ವಿಧಾನದಿಂದ, ಸಾಂಖ್ಯಾನಾಮ್—ಪ್ರಾಯೋಗಿಕ ತಾತ್ವಿಕರ, ಕರ್ಮಯೋಗೇನ—ಭಕ್ತಿ ಯೋಗ ವಿಧಾನದಿಂದ, ಯೋಗಿನಾಮ್—ಭಕ್ತರ.

**ಪರಮ ದೇವೋತ್ತಮ ಪುರುಷನು ನುಡಿದನು : ಹೇ ಪಾಪರಹಿತನಾದ ಅರ್ಜುನನೇ, ಆತ್ಮ ಸಾಕ್ಷಾತ್ಕಾರ ಹೊಂದಲು ಯತ್ನಿಸುವ ಜನರಲ್ಲಿ ಎರಡು ವರ್ಗಗಳಿವೆ ಎಂಬುದನ್ನು ನಾನು ಈಗಾಗಲೇ ವಿವರಿಸಿದ್ದೇನೆ. ಕೆಲವರು ಇದನ್ನು ಪ್ರಾಯೋಗಿಕ ತಾತ್ವಿಕ ಊಹಾಪೋಹೆಯಿಂದ, ಮತ್ತು ಇತರರು ಭಕ್ತಿಯುತ ಸೇವೆಯಿಂದ ಅರಿತು ಕೊಳ್ಳ ಬಯಸುತ್ತಾರೆ.**

**ಭಾವಾರ್ಥ:**—ಎರಡನೆಯ ಅಧ್ಯಾಯದ, 39ನೆಯ ಶ್ಲೋಕದಲ್ಲಿ. ಭಗವಂತನು **ಸಾಂಖ್ಯ** ಮತ್ತು **ಕರ್ಮಯೋಗ** ಅಥವಾ **ಬುದ್ಧಿಯೋಗ** ಎಂಬ ಎರಡು ವಿಧವಾದ ವಿಧಾನಗಳನ್ನು ವಿವರಿಸಿದನು. ಈ ಶ್ಲೋಕದಲ್ಲಿ ಭಗವಂತನು ಅದನ್ನೇ ಇನ್ನಷ್ಟು ಸ್ಪಷ್ಟವಾಗಿ ವಿವರಿಸುತ್ತಾನೆ. **ಸಾಂಖ್ಯಯೋಗ**ವು ಅಥವಾ ಚೇತನಾತ್ಮನ ಮತ್ತು ಜಡದ ಸ್ವಭಾವದ ವಿಶ್ಲೇಷಣಾತ್ಮಕ ಅಧ್ಯಯನವು ಊಹಾಪೋಹ ಮಾಡಬಯಸುವವರ ಮತ್ತು ಪ್ರಾಯೋಗಿಕ ಜ್ಞಾನದ ಮತ್ತು ತತ್ವಜ್ಞಾನದ ಮೂಲಕ ಅರಿಯಲು ಬಯಸುವವರ ವಿಷಯ. ಇತರ ವರ್ಗದ ಜನರು ಎರಡನೆಯ ಅಧ್ಯಾಯದ 61ನೆಯ ಶ್ಲೋಕದಲ್ಲಿ ವಿವರಿಸಿದಂತೆ, ಕೃಷ್ಣ ಪ್ರಜ್ಞೆಯಲ್ಲಿ ಕರ್ಮಮಾಡುತ್ತಾರೆ. **ಬುದ್ಧಿಯೋಗ**ದ ಅಥವಾ ಕೃಷ್ಣಪ್ರಜ್ಞೆಯ ತತ್ವಾನುಸಾರ ಕರ್ಮ ಮಾಡುವುದರಿಂದ, ಒಬ್ಬನು ಕರ್ಮಬಂಧಗಳಿಂದ ಬಿಡುಗಡೆ ಹೊಂದಬಹುದು ಎಂದು ಭಗವಂತನು, 39ನೆಯ ಶ್ಲೋಕದಲ್ಲೂ ವಿವರಿಸಿದ್ದಾನೆ; ಮತ್ತು ಇಷ್ಟೇ ಅಲ್ಲದೆ ಈ ವಿಧಾನದಲ್ಲಿ ಯಾವ ದೋಷವೂ ಇಲ್ಲ. ಇದೇ ತತ್ವವನ್ನು 61ನೆಯ ಶ್ಲೋಕದಲ್ಲಿ ಹೆಚ್ಚು ಸ್ಪಷ್ಟವಾಗಿ ವಿವರಿಸಲಾಗಿದೆ—ಈ **ಬುದ್ಧಿಯೋಗ**ವೆಂದರೆ ಸಂಪೂರ್ಣವಾಗಿ ಪರಮನ ಮೇಲೆ (ಇನ್ನೂ ನಿರ್ದಿಷ್ಟವಾಗಿ, ಶ್ರೀಕೃಷ್ಣನ ಮೇಲೆ) ಅವಲಂಬಿಸುವುದು ಮತ್ತು ಈ ರೀತಿಯಲ್ಲಿ ಎಲ್ಲ ಇಂದ್ರಿಯಗಳನ್ನು ಬಹು ಸುಲಭವಾಗಿ ನಿಗ್ರಹಿಸಬಹುದು. ಆದ್ದರಿಂದ ಧರ್ಮ ಮತ್ತು ತತ್ವಶಾಸ್ತ್ರದಂತೆ ಈ ಎರಡು ಯೋಗಗಳು ಪರಸ್ಪರಾವಲಂಬಿಗಳು. ತತ್ವಜ್ಞಾನರಹಿತ ಧರ್ಮವು ಕೇವಲ ಒಂದು ಭಾವನೆ ಅಥವಾ ಕೆಲವು ಸಮಯದಲ್ಲಿ

ಧರ್ಮಾಂಧತೆ; ಹಾಗೆಯೇ ಧರ್ಮರಹಿತ ತತ್ವಜ್ಞಾನವು ಮಾನಸಿಕ ಊಹಾಪೋಹ. ಅಂತಿಮ ಗುರಿಯು ಕೃಷ್ಣನೇ, ಏಕೆಂದರೆ ಪರಮಸತ್ಯವನ್ನು ಪ್ರಾಮಾಣಿಕವಾಗಿ ಅರಸುತ್ತಿರುವ ತತ್ವಜ್ಞಾನಿಗಳೂ ಸಹ ಕೊನೆಯಲ್ಲಿ ಕೃಷ್ಣಪ್ರಜ್ಞೆಗೆ ಬರುತ್ತಾರೆ. ಇದನ್ನೂ ಸಹ ಭಗವದ್ಗೀತೆಯಲ್ಲಿ ಹೇಳಿದೆ. ಸಮಗ್ರವಿಧಾನವು ಪರಮಾತ್ಮನಿಗೆ ಸಂಬಂಧಿಸಿದಂತೆ ಆತ್ಮನ ನಿಜ ಸ್ಥಾನವನ್ನು ಅರಿಯುವುದಾಗಿದೆ. ತಾತ್ವಿಕ ಊಹಾಪೋಹವು ಪರೋಕ್ಷವಿಧಾನ, ಆದರಿಂದ ಒಬ್ಬನು ಕ್ರಮೇಣ ಕೃಷ್ಣಪ್ರಜ್ಞೆಗೆ ಬರಬಹುದು ಮತ್ತೊಂದು ವಿಧಾನವು ಕೃಷ್ಣಪ್ರಜ್ಞೆಯಲ್ಲಿ ಪ್ರತಿಯೊಂದರೊಡನ ನೇರವಾಗಿ ಸಂಪರ್ಕಿಸುವುದು. ಈ ಎರಡರಲ್ಲಿ,ಕೃಷ್ಣಪ್ರಜ್ಞೆಯ ಮಾರ್ಗವು ಉತ್ತಮ, ಏಕೆಂದರೆ ಇದು ತಾತ್ವಿಕ ವಿಧಾನದಿಂದ ಇಂದ್ರಿಯಗಳ ಶುದ್ಧೀಕರಣವನ್ನು ಅವಲಂಬಿಸಿರುವುದಿಲ್ಲ. ಸ್ವಯಂ ಕೃಷ್ಣಪ್ರಜ್ಞೆಯೇ ಶುದ್ಧೀಕರಣ ವಿಧಾನ, ಮತ್ತು ಭಕ್ತಿಯುತ ಸೇವೆಯ ನೇರ ವಿಧಾನದಿಂದ ಇದು ಏಕಕಾಲದಲ್ಲಿ ಸುಲಭ ಮತ್ತು ಭವ್ಯೋನ್ನತ.

**ನ ಕರ್ಮಣಾಮನಾರಮ್ಭಾನ್ ನೈಷ್ಕರ್ಮ್ಯಂ ಪುರುಷೋಽಶ್ನುತೇ ।**
**ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ॥ ೪ ॥**

ನ—ಇಲ್ಲ, ಕರ್ಮಣಾಮ್—ವಿಧಿತ ಕರ್ತವ್ಯಗಳ, ಅನಾರಮ್ಭಾತ್—ಅನಾಚರಣೆಯಿಂದ ನೈಷ್ಕರ್ಮ್ಯಮ್—ಪ್ರತಿಕ್ರಿಯೆಯಿಂದ ವಿಮೋಚನೆಯನ್ನು, ಪುರುಷಃ—ಮನುಷ್ಯನು, ಅಶ್ನುತೇ—ಸಾಧಿಸುವನು, ನ—ಅಲ್ಲದೆ, ಚ —ಕೂಡ, ಸಂನ್ಯಸನಾತ್—ಸನ್ಯಾಸದಿಂದ, ಏವ—ಕೇವಲ, ಸಿದ್ಧಿಮ್—ಜಯವನ್ನು, ಸಮಧಿಗಚ್ಛತಿ—ಹೊಂದುವನು.

**ಕೇವಲ ಕರ್ಮಮಾಡದಿರುವುದರಿಂದ ಒಬ್ಬನು ಪ್ರತಿಕ್ರಿಯೆಯಿಂದ ವಿಮೋಚನೆಯನ್ನು ಸಾಧಿಸಲಾರನು, ಅಥವಾ ಸನ್ಯಾಸದಿಂದ ಮಾತ್ರವೇ ಒಬ್ಬನು ಪರಿಪೂರ್ಣತೆಯನ್ನು ಹೊಂದಲಾರನು.**

**ಭಾವಾರ್ಥ :** ಸಾಂಸಾರಿಕ ಜನರ ಹೃದಯಗಳನ್ನು ಶುದ್ಧಿಮಾಡಲು ವಿಧಿಸಿದ ನಿಯತ ಕರ್ತವ್ಯಗಳನ್ನು ನಿರ್ವಹಿಸಿ ಶುದ್ಧನಾದ ನಂತರ, ಒಬ್ಬನು ಸನ್ಯಾಸಾಶ್ರಮವನ್ನು ಸ್ವೀಕರಿಸಬಹುದು. ಶುದ್ಧೀಕರಣವಿಲ್ಲದೆ, ಒಬ್ಬನು ಒಮ್ಮಿಂದೊಮ್ಮೆ ಜೀವನದ ನಾಲ್ಕನೆಯ ಆಶ್ರಮವನ್ನು (ಸನ್ಯಾಸ) ಸ್ವೀಕರಿಸುವುದರಿಂದ ಯಶಸ್ಸನ್ನು ಪಡೆಯಲಾರನು. ಪ್ರಾಯೋಗಿಕ ತತ್ವಜ್ಞಾನಿಗಳ ಪ್ರಕಾರ ಕೇವಲ ಸನ್ಯಾಸ ಸ್ವೀಕಾರದಿಂದಲೇ, ಅಥವಾ ಕಾಮ್ಯಕರ್ಮಗಳಿಂದ ನಿವೃತ್ತಿಯಿಂದಲೇ, ಒಬ್ಬನು ತಕ್ಷಣ ನಾರಾಯಣನಂತೇ ಆಗುವನು. ಆದರೆ ಶ್ರೀಕೃಷ್ಣನು ಈ ತತ್ವವನ್ನು ಸಮ್ಮತಿಸುವುದಿಲ್ಲ. ಹೃದಯದ ಶುದ್ಧೀಕರಣವಿಲ್ಲದೆ ಸನ್ಯಾಸವು ಸಮಾಜ ವ್ಯವಸ್ಥೆಯಲ್ಲಿ ಕೇವಲ ಒಂದು ಕ್ಷೋಭೆ ಅಷ್ಟೆ. ಇದಕ್ಕೆ ಬದಲಾಗಿ, ಒಬ್ಬನು ತನ್ನ ವಿಧಿತ ಕರ್ತವ್ಯಗಳನ್ನು ನಿರ್ವಹಿಸದೆಯೂ, ಭಗವಂತನ ದಿವ್ಯ ಸೇವೆಯಲ್ಲಿ ನಿರತನಾದರೆ, ಆ ಮಾರ್ಗದಲ್ಲಿ ಅವನು ಸಾಧಿಸಿದ ಪ್ರಗತಿಯು ಎಷ್ಟೇ ಆಗಿದ್ದರೂ, ಅದು ಭಗವಂತನಿಂದ ಸ್ವೀಕರಿಸಲ್ಪಡುತ್ತದೆ (ಬುದ್ಧಿಯೋಗ). **ಸ್ವಲ್ಪಮ್ ಅಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್.** ಇಂಥ ತತ್ವವೊಂದರ ಸ್ವಲ್ಪ ಆಚರಣೆಯೂ ಸಹ ಒಬ್ಬನನ್ನು ಮಹಾ ಕಷ್ಟಗಳನ್ನು ಗೆಲ್ಲಲು ಸಮರ್ಥನಾಗಿಸುತ್ತದೆ.

**ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥ ೫ ॥**

ನ—ಇಲ್ಲ, ಹಿ—ಖಂಡಿತವಾಗಿ, ಕಶ್ಚಿತ್—ಯಾರೊಬ್ಬನು, ಕ್ಷಣಮ್—ಒಂದುಕ್ಷಣ, ಅಪಿ—ಕೂಡ, ಜಾತು—ಯಾವುದೇ ಕಾಲದಲ್ಲಿಯೂ, ತಿಷ್ಠತಿ—ಇರುವುದು, ಅಕರ್ಮಕೃತ್—ಯಾವುದನ್ನಾದರೂ ಮಾಡದೆ, ಕಾರ್ಯತೇ—ಮಾಡಲು ಒತ್ತಾಯಿಸಲ್ಪಡುವನು, ಹಿ—ಖಂಡಿತವಾಗಿ, ಅವಶಃ—ಅಸಹಾಯಕವಾಗಿ, ಕರ್ಮ—ಕೆಲಸ, ಸರ್ವಃ—ಎಲ್ಲ, ಪ್ರಕೃತಿಜೈಃ—ಭೌತಿಕ ಗುಣಗಳಿಂದ ಹುಟ್ಟಿದ, ಗುಣೈಃ—ಗುಣಗಳಿಂದ.

**ಪ್ರತಿಯೊಬ್ಬನೂ ಭೌತಿಕ ಪ್ರಕೃತಿಯ ಗುಣಗಳಿಂದ ತಾನು ಗಳಿಸಿಕೊಂಡಿರುವ ಸ್ವಭಾವಗಳಿಗನುಸಾರ ಅಸಹಾಯಕವಾಗಿ ವರ್ತಿಸಲು ಒತ್ತಾಯಿಸಲ್ಪಡುವನು; ಆದ್ದರಿಂದ ಯಾರೂ, ಒಂದು ಕ್ಷಣವೂ ಯಾವುದನ್ನೂ ಮಾಡದೆ ಇರಲು ಸಾಧ್ಯವಿಲ್ಲ.**

**ಭಾವಾರ್ಥ :** ಸದಾ ಸಕ್ರಿಯನಾಗಿರುವುದು ದೇಹಧಾರಿ ಜೀವನಪ್ರಶ್ನೆಯಾಗಿಲ್ಲ, ಆದರೆ ಆತ್ಮನ ಸ್ವಭಾವವಾಗಿದೆ. ಚೇತನಾತ್ಮನ ಸಾನ್ನಿಧ್ಯವಿಲ್ಲದೆ, ಭೌತಿಕ ದೇಹವು ಚಲಿಸದು. ಸದಾ ಸಕ್ರಿಯನಾದ ಮತ್ತು ಒಂದು ಕ್ಷಣವೂ ಸುಮ್ಮನಿರಲಾರದ ಚೇತನಾತ್ಮನಿಂದ ನಡೆಸಲ್ಪಡುವ ದೇಹವು, ಒಂದು ನಿಷ್ಕ್ರಿಯ ವಾಹನ ಮಾತ್ರ. ಹಾಗಿರಲು ಚೇತನಾತ್ಮನನ್ನು ಕೃಷ್ಣಪ್ರಜ್ಞೆಯ ಒಳ್ಳೆಯ ಕಾರ್ಯದಲ್ಲಿ ನಿರತನಾಗಿಸಬೇಕು, ಇಲ್ಲದಿದ್ದರೆ ಅತ್ಮನು ಮಾಯಾ ಶಕ್ತಿಯಿಂದ ಆಜ್ಞಾಪಿತವಾದ ವೃತ್ತಿಗಳಲ್ಲಿ ನಿರತನಾಗುತ್ತಾನೆ. ಭೌತಿಕ ಶಕ್ತಿಯ ಸಂಪರ್ಕದಲ್ಲಿ, ಚೇತನಾತ್ಮನು ಭೌತಿಕ ಗುಣಗಳನ್ನು ಹೊಂದುತ್ತಾನೆ, ಮತ್ತು ಇಂಥ ವ್ಯಾಮೋಹಗಳಿಂದ ಆತ್ಮನನ್ನು ಶುದ್ಧಿಗೊಳಿಸಲು, ಶಾಸ್ತ್ರಗಳಲ್ಲಿ ಉಕ್ತವಾಗಿರುವ ವಿಧಿತ ಕರ್ತವ್ಯಗಳಲ್ಲಿ ತೊಡಗುವುದು ಅವಶ್ಯ. ಆದರೆ ಆತ್ಮನು, ತನ್ನ ಸಹಜ ಧರ್ಮವಾದ ಕೃಷ್ಣಪ್ರಜ್ಞೆಯಲ್ಲಿ ತೊಡಗಿದ್ದರೆ, ಅವನು ಮಾಡಲು ಸಾಧ್ಯವಾಗುವುದೆಲ್ಲವೂ ಅವನಿಗೆ ಒಳ್ಳೆಯದೇ ಆಗಿರುತ್ತದೆ. ಶ್ರೀಮದ್ಭಾಗವತವು ಇದನ್ನು ದೃಢಪಡಿಸುತ್ತದೆ (1.5.17) :

ತ್ಯಕ್ತ್ವಾ ಸ್ವಧರ್ಮಂ ಚರಣಾಂಬುಜಂ ಹರೇ-
ರ್ಭಜನ್ನಪಕ್ವೋಽಥ ಪತೇತ್ತತೋ ಯದಿ।
ಯತ್ರ ಕ್ವ ವಾಭದ್ರಮಭೂದಮುಷ್ಯ ಕಿಂ
ಕೋ ವಾರ್ಥ ಆಪ್ತೋಽಭಜತಾಂ ಸ್ವಧರ್ಮತಃ॥

"ಯಾರೊಬ್ಬನು ಕೃಷ್ಣ ಪ್ರಜ್ಞೆಯಲ್ಲಿ ನಿರತನಾದರೆ, ಶಾಸ್ತ್ರಗಳಲ್ಲಿನ ವಿಧಿತ ಕರ್ತವ್ಯಗಳನ್ನು ಆಚರಿಸದಿದ್ದರೂ. ಅಥವಾ ಭಕ್ತಿಯುತ ಸೇವೆಯನ್ನು ಸರಿಯಾಗಿ ನಿರ್ವಹಿಸದಿದಿದ್ದರೂ, ಅಥವಾ ಮೇಲ್ಮಟ್ಟದಿಂದ ಪತನ ಹೊಂದಿದರೂ, ಅವನಿಗೆ ಯಾವ ನಷ್ಟ ಅಥವಾ ಕೆಡಕೂ ಇಲ್ಲ. ಆದರೆ, ಕೃಷ್ಣ ಪ್ರಾಜ್ಞೆಯಲ್ಲದಿದ್ದರೆ, ಅವನು ಶುದ್ಧಿಗಾಗಿ ಶಾಸ್ತ್ರಾಜ್ಞೆಗಳನ್ನೆಲ್ಲಾ ಪಾಲಿಸಿದರೂ, ಅದರಿಂದ ಅವನಿಗೆ ಏನು ದೊರೆಯುವುದು ?" ಆದ್ದರಿಂದ ಕೃಷ್ಣಪ್ರಜ್ಞೆಯ ಈ ಮಟ್ಟವನ್ನು ತಲುಪಲು ಶುದ್ಧೀಕರಣ ವಿಧಾನವು ಅಗತ್ಯ ಆದ್ದರಿಂದ

ಸನ್ಯಾಸ, ಅಥವಾ ಯಾವುದೇ ಶುದ್ಧೀಕರಣ ವಿಧಾನವು ಕೃಷ್ಣ ಪ್ರಜ್ಞೆಯಾಗುವ ಅಂತಿಮ ಗುರಿಯನ್ನು ತಲುಪಲು ಸಹಾಯಕ, ಅದಿಲ್ಲದೆ ಎಲ್ಲವೂ ವ್ಯರ್ಥವೆಂದು ತಿಳಿಯಲಾಗುವುದು.

**ಕರ್ಮೇನ್ದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।**
**ಇನ್ದ್ರಿಯಾರ್ಥಾನ್ ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥ ೬ ॥**

ಕರ್ಮೇನ್ದ್ರಿಯಾಣಿ—ಪಂಚ ಕರ್ಮೇಂದ್ರಿಯಗಳನ್ನು, ಸಂಯಮ್ಯ—ನಿಯಂತ್ರಿಸಿ, ಯಃ—ಯಾವನು, ಆಸ್ತೇ—ಇರುತ್ತಾನೆ, ಮನಸಾ—ಮನಸ್ಸಿನಿಂದ, ಸ್ಮರನ್—ಯೋಚಿಸುತ್ತಾ, ಇಂದ್ರಿಯ ಅರ್ಥಾನ್—ಇಂದ್ರಿಯ ವಿಷಯಗಳನ್ನು, ವಿಮೂಢ—ಮೂರ್ಖ, ಆತ್ಮಾ—ಆತ್ಮನು, ಮಿಥ್ಯಾಚಾರಃ—ಸೋಗು ಹಾಕುವವನು, ಸಃ—ಅವನು, ಉಚ್ಯತೇ—ಕರೆಯಲ್ಪಡುತ್ತಾನೆ.

**ಒಬ್ಬನು ಕರ್ಮೇಂದ್ರಿಯಗಳನ್ನು ನಿಗ್ರಹಿಸಿದ್ದರೂ, ಮನಸ್ಸು ಇಂದ್ರಿಯ ವಿಷಯಗಳಲ್ಲಿ ನೆಲೆಸಿದ್ದಲ್ಲಿ, ಅವನು ಖಂಡಿತ ಭ್ರಮಿತನಾಗುತ್ತಾನೆ, ಮತ್ತು ಮಿಥ್ಯಾಚಾರಿ ಎನಿಸಿಕೊಳ್ಳುತ್ತಾನೆ.**

**ಭಾವಾರ್ಥ :** ವಾಸ್ತವಿಕವಾಗಿ ಮನದಲ್ಲಿ ಇಂದ್ರಿಯ ಭೋಗಾಸಕ್ತರಾಗಿ, ಧ್ಯಾನದ ಪ್ರದರ್ಶನ ಮಾಡುವ ಮತ್ತು ಕೃಷ್ಣ ಪ್ರಜ್ಞೆಯಲ್ಲಿ ಕೆಲಸ ಮಾಡಲು ನಿರಾಕರಿಸುವ ಮಿಥ್ಯಾಚಾರಿಗಳಿದ್ದಾರೆ. ಅಂಥ ಮಿಥ್ಯಾಚಾರಿಗಳು, ತಮ್ಮ ಕುತರ್ಕ ಅನುಯಾಯಿಗಳನ್ನು ಗೊಡ್ಡು ಹೇಳಿಕೆಗಳಿಂದ ಮೋಸಗೊಳಿಸಲು ಶುಷ್ಕ ತತ್ವ ಶಾಸ್ತ್ರದ ಮೇಲೆ ಮಾತನಾಡಬಹುದು. ಆದರೆ ಈ ಶ್ಲೋಕದ ಪ್ರಕಾರ, ಅವರು ಅತ್ಯಂತ ವಂಚಕರು. ಇಂದ್ರಿಯ ತೋಷಣಕ್ಕಾಗಿ, ಸಾಮಾಜಿಕ ವ್ಯವಸ್ಥೆಯ ಯಾವುದೇ ಸ್ಥಾನದಲ್ಲಿಯಾದರೂ ಕಾರ್ಯಮಾಡಬಹುದು, ಆದರೆ ಒಬ್ಬನು ತನ್ನ ವಿಶಿಷ್ಟ ಸ್ಥಾನಮಾನದ ನಿಯಮಗಳನ್ನು ಮತ್ತು ನಿಬಂಧನೆಗಳನ್ನು ಅನುಸರಿಸಿದರೆ, ಅವನು ತನ್ನ ಅಸ್ತಿತ್ವವನ್ನು ಶುದ್ಧಿಗೊಳಿಸಿಕೊಳ್ಳುವಲ್ಲಿ ಕ್ರಮೇಣ ಪ್ರಗತಿ ಸಾಧಿಸಬಹುದು. ಆದರೆ, ಯೋಗಿಯ ಸೋಗು ಹಾಕಿ, ವಾಸ್ತವಿಕವಾಗಿ ಇಂದ್ರಿಯ ತೋಷಣದ ವಿಷಯಗಳನ್ನು ಹುಡುಕುತ್ತಿದ್ದು, ಕೆಲವು ಸಲ ತತ್ವಶಾಸ್ತ್ರದ ಬಗ್ಗೆ ಮಾತನಾಡಿದರೂ, ಅವನನ್ನು ಅತ್ಯಂತ ವಂಚಕನೆಂದು ಹೇಳಬೇಕು. ಅವನ ಜ್ಞಾನಕ್ಕೆ ಯಾವ ಬೆಲೆಯೂ ಇಲ್ಲ. ಏಕೆಂದರೆ, ಅಂಥ ಪಾಪಪೂರಿತನ ಜ್ಞಾನ ಪರಿಣಾಮಗಳು ಭಗವಂತನ ಮಾಯಾಶಕ್ತಿಯಿಂದ ಅಪಹರಿಸಲ್ಪಟ್ಟಿವೆ. ಇಂಥ ಮಿಥ್ಯಾಚಾರಿಯ ಮನಸ್ಸು ಸದಾ ಅಶುದ್ಧ, ಆದ್ದರಿಂದ ಅವನ ಯೋಗ ಧ್ಯಾನದ ಪ್ರದರ್ಶನಕ್ಕೆ ಯಾವ ಬೆಲೆಯೂ ಇಲ್ಲ,

**ಯಸ್ತ್ವಿನ್ದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।**
**ಕರ್ಮೇನ್ದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ ॥ ೭ ॥**

ಯಃ—ಯಾರೊಬ್ಬನು, ತು—ಆದರೆ, ಇನ್ದ್ರಿಯಾಣಿ—ಇಂದ್ರಿಯಗಳನ್ನು, ಮನಸಾ—ಮನಸ್ಸಿನಿಂದ, ನಿಯಮ್ಯ—ನಿಯಂತ್ರಿಸುತ್ತಾ, ಆರಭತೇ—ಆರಂಭಿಸುತ್ತಾನೆ, ಅರ್ಜುನ—ಹೇ ಅರ್ಜುನ, ಕರ್ಮೇನ್ದ್ರಿಯೈಃ—ಸಕ್ರಿಯ ಇಂದ್ರಿಯಗಳಿಂದ, ಕರ್ಮ

**ಯೋ**ಗಮ್—ಭಕ್ತಿ, ಅಸಕ್ತಃ—ಅಕ್ಕರೆಯಿಲ್ಲದೆ, ಸಃ—ಅವನು, ವಿಶಿಷ್ಯತೇ—ಎಷ್ಟೋ **ಉ**ತ್ತಮನು.

**ಪ್ರತಿಯಾಗಿ, ಒಬ್ಬ ಪ್ರಾಮಾಣಿಕನು ಸಕ್ರಿಯ ಇಂದ್ರಿಯಗಳನ್ನು ಮನಸ್ಸಿನಿಂದ ನಿಗ್ರಹಿಸಲು ಪ್ರಯತ್ನಿಸಿ, ಮತ್ತು ಅನಾಸಕ್ತನಾಗಿ ಕರ್ಮಯೋಗವನ್ನು (ಕೃಷ್ಣ ಪ್ರಜ್ಞೆಯಲ್ಲಿ) ಆರಂಭಿಸಿದರೆ, ಅವನು ಎಷ್ಟೋ ಉತ್ತಮನು.**

**ಭಾವಾರ್ಥ :** ಸ್ವೇಚ್ಛಾ ಜೀವನ ಮತ್ತು ಇಂದ್ರಿಯ ತೋಷಣಕ್ಕಾಗಿ ಮಿಥ್ಯಾ ದಿವ್ಯವಾದಿಯಾಗುವ ಬದಲು, ಒಬ್ಬನು ತನ್ನ ಸ್ವಂತ ವ್ಯವಹಾರದಲ್ಲಿದ್ದುಕೊಂಡು, ಜೀವನದ ಉದ್ದೇಶವನ್ನು, ಎಂದರೆ–ಸಾಂಸಾರಿಕ ಬಂಧದಿಂದ ವಿಮೋಚಿಸುವುದನ್ನು ಮತ್ತು ಭಗವಂತನ ರಾಜ್ಯವನ್ನು ಪ್ರವೇಶಿಸುವುದನ್ನು—ನಿರ್ವಹಿಸುವುದು ಎಷ್ಟೋ ಉತ್ತಮ. ಪ್ರಧಾನ ಸ್ವಾರ್ಥಗತಿ, ಅಥವಾ ಸ್ವಪ್ರಯೋಜನದ ಗುರಿಯು ವಿಷ್ಣುವನ್ನು ಸೇರುವುದು. ಸಮಗ್ರ ವರ್ಣಾಶ್ರಮ ಧರ್ಮದ ವ್ಯವಸ್ಥೆಯು, ನಾವು ಜೀವನದ ಈ ಗುರಿಯನ್ನು ತಲುಪಲು ಸಹಾಯಕವಾಗುವಂತೆ ರೂಪಿತವಾಗಿದೆ. ಕೃಷ್ಣಪ್ರಜ್ಞೆಯಲ್ಲಿನ ನಿಯಂತ್ರಿತ ಸೇವೆಯಿಂದ ಒಬ್ಬ ಗೃಹಸ್ಥನೂ ಈ ಗುರಿಯನ್ನು ತಲುಪಬಹುದು. ಆತ್ಮ ಸಾಕ್ಷಾತ್ಕಾರಕ್ಕಾಗಿ ಒಬ್ಬನು ಶಾಸ್ತ್ರಗಳಲ್ಲಿ ವಿಧಿಸಿರುವಂತೆ ನಿಯಂತ್ರಿತ ಜೀವನವನ್ನು ನಡೆಸಬಹುದು ಮತ್ತು ಆಸಕ್ತರಹಿತವಾಗಿ ತನ್ನ ವ್ಯವಹಾರ ಮಾಡುವುದನ್ನು ಮುಂದುವರಿಸಬಹುದು, ಮತ್ತು ಆ ರೀತಿಯಲ್ಲಿ ಪ್ರಗತಿ ಹೊಂದಬಹುದು. ಈ ವಿಧಾನವನ್ನು ಅನುಸರಿಸುವ ಪ್ರಾಮಾಣಿಕ ವ್ಯಕ್ತಿಯು, ಅಮಾಯಕ ಜನರನ್ನು ವಂಚಿಸಲು ಅಧ್ಯಾತ್ಮತೆಯ ತೋರಿಕೆಯನ್ನು ಅನುಸರಿಸುವ ಮಿಥ್ಯಾಚಾರಿಗಿಂತಲೂ ಎಷ್ಟೋ ಉತ್ತಮವಾಗಿ ಸನ್ನಿವೇಶಿತನಾಗಿರುವನು. ಜೀವನೋಪಯೋಗಕ್ಕಾಗಿಯೇ ಧ್ಯಾನಮಗ್ನನಾಗಿರುವಂತೆ ಸೋಗುಹಾಕುವವನಿಗಿಂತ, ಪ್ರಾಮಾಣಿಕನಾದ ಬೀದಿ ಗುಡಿಸುವವನು ಎಷ್ಟೋ ಉತ್ತಮನು.

**ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ ।**
**ಶರೀರಯಾತ್ರಾಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ ॥ ೮ ॥**

ನಿಯತಮ್—ವಿಧಿತವಾದ, ಕುರು—ಮಾಡು, ಕರ್ಮ—ಕರ್ತವ್ಯಗಳನ್ನು, ತ್ವಮ್—ನೀನು, ಕರ್ಮ—ಕರ್ಮವನ್ನು, ಜ್ಯಾಯಃ—ಮೇಲು, ಹಿ—ಖಂಡಿತವಾಗಿ, ಅಕರ್ಮಣಃ—ಕರ್ಮಮಾಡದಿರುವುದಕ್ಕಿಂತ, ಶರೀರ—ದೈಹಿಕ, ಯಾತ್ರಾ—ಪೋಷಣೆಯು, ಅಪಿ—ಕೂಡ, ಚ—ಸಹ, ತೇ—ನಿನ್ನ, ನ—ಇಲ್ಲ, ಪ್ರಸಿದ್ಧ್ಯೇತ್—ಪರಿಣಮಿಸುವುದು, ಅಕರ್ಮಣಃ—ಕೆಲಸ ಮಾಡದೆ.

**ನಿನ್ನ ವಿಧಿತ ಕರ್ತವ್ಯಗಳನ್ನು ಆಚರಿಸು; ಹಾಗೆ ಮಾಡುವುದು ಕರ್ಮ ಮಾಡದಿರುವುದಕ್ಕಿಂತಲೂ ಉತ್ತಮ; ಕರ್ಮ ಮಾಡದೆ ಒಬ್ಬನಿಗೆ ತನ್ನ ಭೌತಿಕ ದೇಹದ ಅತನಾರ್ಥವೂ ಸಹ ಸಾಧ್ಯವಿಲ್ಲ.**

**ಭಾವಾರ್ಥ :** ತಾವು ಸತ್ಕುಲಪ್ರಸೂತರೆಂದು ಮಿಥ್ಯೆಯಾಗಿ ಪ್ರತಿಸಿಧಿಸಿಕೊಳ್ಳುವ ಮಿಥ್ಯಾ

ಧ್ಯಾನಿಗಳು ಮತ್ತು ಅಧ್ಯಾತ್ಮ ಜೀವನದಲ್ಲಿನ ಉನ್ನತಿಗಾಗಿ ಎಲ್ಲವನ್ನೂ ತ್ಯಾಗಮಾಡಿದ್ದೇವೆ ಎಂದು ಮಿಥ್ಯೆಯಾಗಿ ವೇಷಹಾಕುವ ಮಹಾ ವೃತ್ತಿಗಾರರೂ ಅನೇಕರಿದ್ದಾರೆ. ಅರ್ಜುನನು ಒಬ್ಬ ಮಿಥ್ಯಾಚಾರಿಯಾಗುವುದನ್ನು ಶ್ರೀ ಕೃಷ್ಣ ಅಪೇಕ್ಷಿಸಲಿಲ್ಲ. ಬದಲಾಗಿ, ಅರ್ಜುನನು ಕ್ಷತ್ರಿಯರಿಗಾಗಿ ವಿಧಿತ ತನ್ನ ಕರ್ತವ್ಯಗಳನ್ನು ಮಾಡಲೆಂದೇ ಭಗವಂತನು ಆಶಿಸಿದನು. ಅರ್ಜುನನು ಗೃಹಸ್ಥನು, ಮತ್ತು ಸೇನಾದಂಡನಾಯಕನು ಆಗಿದ್ದನು, ಆದ್ದರಿಂದ ಅವನು ಹಾಗೆಯೇ ಇದ್ದುಕೊಂಡು, ಗೃಹಸ್ಥ ಕ್ಷತ್ರಿಯನಿಗೆ ವಿಧಿತವಾದ ತನ್ನ ಧಾರ್ಮಿಕ ಕರ್ತವ್ಯಗಳನ್ನು ಆಚರಿಸುವುದು ಅವನಿಗೆ ಮೇಲಾದುದಾಗಿತ್ತು. ಅಂಥ ಕಾರ್ಯಕಲಾಪಗಳು ಐಹಿಕ ಮನುಷ್ಯನ ಹೃದಯವನ್ನು ಕ್ರಮೇಣ ಶುದ್ಧಿಗೊಳಿಸುತ್ತವೆ. ಕೇವಲ ಹೊಟ್ಟೆ ಹೊರೆಯುವುದಕ್ಕಾಗಿ ವೈರಾಗ್ಯವೆಂಬುದನ್ನು ತಾಳುವುದನ್ನು ಭಗವಂತನಾಗಲಿ ಅಥವಾ ಯಾವುದೇ ಧರ್ಮಶಾಸ್ತ್ರವಾಗಲೀ ಎಂದಿಗೂ ಅನುಮೋದಿಸುವುದಿಲ್ಲ. ಯಾವುದಾದರೂ ಉದ್ಯೋಗದಿಂದ ಒಬ್ಬನು ತನ್ನ ದೇಹ ಮತ್ತು ಆತ್ಮವನ್ನು ಒಟ್ಟಿಗಿರಿಸಲೇ ಬೇಕು. ಭೌತಿಕ ಪ್ರವೃತ್ತಿಗಳನ್ನು ಶುದ್ಧೀಕರಿಸದೆ, ಮನಬಂದಹಾಗೆ ಕರ್ಮವನ್ನು ತ್ಯಜಿಸಬಾರದು. ಭೌತಿಕ ಜಗತ್ತಿನಲ್ಲಿರುವವನು ಭೌತಿಕ ಪ್ರಕೃತಿಯ ಮೇಲಿನ ಒಡೆತನಕ್ಕಾಗಿ ಅಥವಾ ಇಂದ್ರಿಯ ತೋಷಣಕ್ಕಾಗಿ ಅಶುದ್ಧ ಪ್ರವೃತ್ತಿಯನ್ನು ಹೊಂದಿರುವುದು ಖಂಡಿತ. ಇಂಥ ಕಲುಷಿತ ಪ್ರವೃತ್ತಿಗಳನ್ನು ಶುದ್ಧಗೊಳಿಸಬೇಕು. ವಿಧಿತ ಕರ್ತವ್ಯಗಳ ಮೂಲಕ ಹಾಗೆ ಮಾಡದೆ, ಕರ್ಮವನ್ನು ತ್ಯಜಿಸಿ ಪರಾನ್ನಪುಷ್ಟನಾಗಿ ಜೀವಿಸುವ ದಿವ್ಯವಾದಿ ಎನಿಸಿ ಕೊಂಡಿರುವವನಾಗಲುಒಬ್ಬನು ಎಂದಿಗೂ ಪ್ರಯತ್ನಿಸಕೂಡದು.

**ಯಜ್ಞಾರ್ಥಾತ್ ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬನ್ಧನಃ ।**
**ತದರ್ಥಂ ಕರ್ಮ ಕೌನ್ತೇಯ ಮುಕ್ತಸಂಗಃ ಸಮಾಚರ ॥ ೯ ॥**

ಯಜ್ಞ ಅರ್ಥಾತ್—ಯಜ್ಞನ ಅಥವಾ ವಿಷ್ಣುವಿನ ನಿಮಿತ್ತವಾಗಿ ಮಾತ್ರಮಾಡಿದ ಕರ್ಮಣಃ—ಅಂಥ ಕರ್ಮಗಳು, ಅನ್ಯತ್ರ—ಇತರ, ಲೋಕಃ—ಪ್ರಪಂಚ, ಅಯಮ್—ಈ, ಕರ್ಮಬನ್ಧನಃ—ಕರ್ಮದಿಂದ ಬಂಧನವು, ತತ್—ಅವನ, ಅರ್ಥಮ್—ನಿಮಿತ್ತವಾಗಿ, ಕರ್ಮ—ಕರ್ಮವನ್ನು, ಕೌನ್ತೇಯ—ಹೇ ಕುಂತೀ ಪುತ್ರನೇ, ಮುಕ್ತ ಸಂಗಃ—ಸಂಗವರ್ಜಿತನಾಗಿ, ಸಮಾಚರ—ಪರಿಪೂರ್ಣವಾಗಿ ಮಾಡು.

**ವಿಷ್ಣುವಿಗಾಗಿ ಯಜ್ಞವೆಂದು ಮಾಡುವ ಕರ್ಮವನ್ನು ಆಚರಿಸಬೇಕು. ಅನ್ಯಥಾ ಕರ್ಮವು ಭೌತಿಕ ಜಗತ್ತಿನಲ್ಲಿ ಬಂಧನಕ್ಕೆ ಕಾರಣವಾಗುತ್ತದೆ. ಆದ್ದರಿಂದ, ಹೇ ಕುಂತೀಪುತ್ರನೇ, ನಿನ್ನ ವಿಧಿತ ಕರ್ತವ್ಯಗಳನ್ನು ಅವನ ತೃಪ್ತಿಗಾಗಿ ಮಾಡು, ಮತ್ತು ಆ ರೀತಿಯಲ್ಲಿ ನೀನು ಸದಾ ಕರ್ಮ ಬಂಧನದಿಂದ ಮುಕ್ತನಾಗಿರುವೆ.**

**ಭಾವಾರ್ಥ:** ಒಬ್ಬನು ಕನಿಷ್ಠ ತನ್ನ ದೇಹ ಪೋಷಣಕ್ಕಾದರೂ ಕರ್ಮ ಮಾಡಬೇಕಾದ್ದರಿಂದ, ನಿರ್ದಿಷ್ಟ ಸಾಮಾಜಿಕ ಸ್ಥಾನಮಾನಕ್ಕೆ ಮತ್ತು ಗುಣಕ್ಕೆ ತಕ್ಕಂತೆ ವಿಧಿಸಿರುವ ಕರ್ತವ್ಯಗಳು, ಆ ಉದ್ದೇಶವು ನೆರವೇರುವಂತೆ ನಿರೂಪಿತವಾಗಿವೆ. ಯಜ್ಞ ಎಂದರೆ ಭಗವಾನ್ ವಿಷ್ಣು ಅಥವಾ ಯಜ್ಞದ ಆಚರಣೆಗಳು. ಎಲ್ಲ ಯಜ್ಞ ಆಚರಣೆಗಳು ಭಗವಾನ್

ವಿಷ್ಣುವಿನ ತೃಪ್ತಿಗಾಗಿಯೇ ಉದ್ದೇಶಿತವಾಗಿವೆ. **ಯಜ್ಞೋ ವೈ ವಿಷ್ಣುಃ** ಎಂದು ವೇದಗಳು ಆಜ್ಞಾಪಿಸುತ್ತವೆ. ಅರ್ಥಾತ್, ಒಬ್ಬನು ವಿಧಿತ ಯಜ್ಞಗಳನ್ನು ಆಚರಿಸಿದಾಗ, ಅಥವಾ ನೇರವಾಗಿ ಭಗವಾನ್ ವಿಷ್ಣುವಿನ ಸೇವೆ ಮಾಡಿದಾಗ, ಸಾಧಿಸುವ ಉದ್ದೇಶ ಒಂದೇ. ಆದ್ದರಿಂದ, ಕೃಷ್ಣ ಪ್ರಜ್ಞೆಯು ಈ ಶ್ಲೋಕದಲ್ಲಿ ವಿಧಿಸಿರುವಂತೆ, ಯಜ್ಞಾಚರಣೆ. ವರ್ಣಾಶ್ರಮ ಧರ್ಮಪದ್ಧತಿಯೂ ಸಹ ವಿಷ್ಣು ತುಷ್ಟಿಯನ್ನೇ ಉದ್ದೇಶಿಸಿದೆ. **ವರ್ಣಾಶ್ರಮಾಚಾರ ವತಾ ಪುರುಷೇಣ ಪರಃ ಪುಮಾನ್ ವಿಷ್ಣುರಾರಾಧ್ಯತೇ** (ವಿಷ್ಣು ಪುರಾಣ 3.8.8).

ಆದ್ದರಿಂದ ಒಬ್ಬನು ವಿಷ್ಣುವಿನ ತೃಪ್ತಿಗಾಗಿ ಕರ್ಮಮಾಡಬೇಕು. ಈ ಭೌತಿಕ ಪ್ರಪಂಚದಲ್ಲಿ ಮಾಡಿದ ಇತರ ಯಾವುದೇ ಕರ್ಮವು ಬಂಧನಕ್ಕೆ ಕಾರಣವಾಗುತ್ತದೆ,ಏಕೆಂದರೆ, ಒಳ್ಳೆಯ ಮತ್ತು ಕೆಟ್ಟ ಕರ್ಮಗಳೆರಡಕ್ಕೂ ಪ್ರತಿಕ್ರಿಯೆಗಳಿರುತ್ತವೆ, ಮತ್ತು ಯಾವುದೇ ಪ್ರತಿಕ್ರಿಯೆಯು ಕರ್ತೃವನ್ನು ಬಂಧಿಸುತ್ತದೆ. ಆದ್ದರಿಂದ ಒಬ್ಬನು ಕೃಷ್ಣ ಪ್ರಜ್ಞೆಯಲ್ಲಿ, ಕೃಷ್ಣನ (ಅಥವಾ ವಿಷ್ಣುವಿನ) ತೃಪ್ತಿಗಾಗಿ ಕರ್ಮಮಾಡಬೇಕು; ಅಂಥ ಕಾರ್ಯಕಲಾಪಗಳನ್ನು ಆಚರಿಸುವಾಗ ಅವನು ವಿಮೋಚನೆಯ ಹಂತದಲ್ಲಿರುತ್ತಾನೆ. ಇದೇ, ಕರ್ಮ ಮಾಡುವ ಒಂದು ಮಹಾಕಲೆ, ಮತ್ತು ಪ್ರಾರಂಭದಲ್ಲಿ ಈ ವಿಧಾನಕ್ಕೆ ಬಹಳ ನುರಿತ ಮಾರ್ಗದರ್ಶನವು ಅಗತ್ಯ. ಆದ್ದರಿಂದ ಭಗವಾನ್ ಕೃಷ್ಣನ ಒಬ್ಬ ಭಕ್ತನ ನುರಿತ ಮಾರ್ಗದರ್ಶನದಲ್ಲಿ, ಅಥವಾ ಸ್ವಯಂ ಕೃಷ್ಣನ (ಅರ್ಜುನನಿಗೆ ದೊರೆತ ಅವಕಾಶದ ಹಾಗೆ) ನೇರ ಉಪದೇಶಾನುಸಾರ ಬಹಳ ಶ್ರಮ ಶೀಲತೆಯಿಂದ ಕಾರ್ಯಮಾಡಬೇಕು. ಇಂದ್ರಿಯ ತೋಷಣೆಗಾಗಿ ಯಾವುದನ್ನೂ ಮಾಡಕೂಡದು. ಎಲ್ಲವನ್ನೂ ಕೃಷ್ಣನ ತೃಪ್ತಿಗಾಗಿ ಮಾಡಬೇಕು. ಈ ಅಭ್ಯಾಸವು ಒಬ್ಬನನ್ನು ಕರ್ಮದ ಪ್ರತಿಕ್ರಿಯೆಯಿಂದ ರಕ್ಷಿಸುವುದಲ್ಲದೆ, ಅವನನ್ನು ಭಗವದ್ಧಾಮಕ್ಕೆ ಏರಿಸುವ ಏಕೈಕವಾದ ಭಗವಂತನ ದಿವ್ಯ ಪ್ರೇಮಯುತ ಸೇವೆಗೆ ಕ್ರಮೇಣ ಉನ್ನತಿಸುತ್ತದೆ.

**ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।**
**ಅನೇನ ಪ್ರಸವಿಷ್ಯಧ್ವಮೇಷ ವೋಽಸ್ತ್ವಿಷ್ಟ ಕಾಮಧುಕ್ ॥ ೧೦ ॥**

ಸಹ—ಜೊತೆಗೆ, ಯಜ್ಞಾಃ—ಯಜ್ಞಗಳು, ಪ್ರಜಾಃ—ಪೀಳಿಗೆಗಳು, ಸೃಷ್ಟ್ವಾ—ಸೃಷ್ಟಿಸಿ, ಪುರಾ—ಪ್ರಾಚೀನದಲ್ಲಿ, ಉವಾಚ—ನುಡಿದನು, ಪ್ರಜಾಪತಿಃ—ಪ್ರಜಾಪತಿಯು, ಅನೇನ—ಇದರಿಂದ, ಪ್ರಸವಿಷ್ಯಧ್ವಮ್—ಹೆಚ್ಚು ಹೆಚ್ಚು ಸಮೃದ್ಧರಾಗಿರಿ, ಏಷಃ—ಇದು, ವಃ—ನಿಮ್ಮ, ಅಸ್ತು—ಆಗಲಿ, ಇಷ್ಟ—ಇಷ್ಟವಾದ ಎಲ್ಲ ವಸ್ತುಗಳ, ಕಾಮಧುಕ್—ಪ್ರದಾಯಕ.

**ಸೃಷ್ಟಿಯ ಪ್ರಾರಂಭದಲ್ಲಿ, ಪ್ರಜಾಪತಿಯು ಮಾನವರ ಮತ್ತು ದೇವತೆಗಳ ಪೀಳಿಗೆಗಳನ್ನು, ವಿಷ್ಣುವಿಗಾಗಿ ಯಜ್ಞಗಳೊಡನೆ ಕಳುಹಿಸಿಕೊಟ್ಟನು, ಮತ್ತು, "ಈ ಯಜ್ಞದಿಂದ ನೀವು ಸುಖವಾಗಿ ಬಾಳಿ, ಏಕೆಂದರೆ ಇದರ ಆಚರಣೆಯು ಸುಖವಾಗಿ ಜೀವಿಸಲು ಮತ್ತು ಮೋಕ್ಷಪ್ರಾಪ್ತಿಗಾಗಿ ನೀವು ಬಯಸುವ ಪ್ರತಿಯೊಂದನ್ನೂ ನಿಮಗೆ ನೀಡುತ್ತದೆ," ಎಂದು ಹೇಳುತ್ತ ಅವರನ್ನು ಆಶೀರ್ವದಿಸಿದನು.**

**ಭಾವಾರ್ಥ :** ಪ್ರಜಾಪತಿಯಿಂದ (ವಿಷ್ಣು) ಆಗಿರುವ ಭೌತಿಕ ಸೃಷ್ಟಿಯು, ಬದ್ಧ ಜೀವಿಗಳು ಮನೆಗೆ—ಭಗವದ್ಧಾಮಕ್ಕೆ—ಹಿಂದಿರುಗಿಬರಲು ನೀಡಲ್ಪಟ್ಟ ಒಂದು ಅವಕಾಶ. ಈ ಭೌತಿಕ ಸೃಷ್ಟಿಯಲ್ಲಿನ ಜೀವಿಗಳೆಲ್ಲರೂ, ಪರಮ ದೇವೋತ್ತಮ ಪುರುಷನಾದ ವಿಷ್ಣು ಅಥವಾ ಕೃಷ್ಣನೊಡನೆ ತಮ್ಮ ಸಂಬಂಧದ ಮರವಿನ ಕಾರಣ ಭೌತಿಕ ಪ್ರಕೃತಿಯಿಂದ ಬದ್ಧರಾಗಿದ್ದಾರೆ. ಭಗವದ್ಗೀತೆಯಲ್ಲಿ ಹೇಳಿದಂತೆ, ಈ ನಿತ್ಯ ಸಂಬಂಧವನ್ನು ಅರಿತುಕೊಳ್ಳಲು ವೇದ ತತ್ವಗಳು ನಮಗೆ ಸಹಾಯಕವಾಗಿವೆ: **ವೇದೈಶ್ಚ ಸರ್ವೈರಹಮೇವ ವೇದ್ಯಃ. ಆತ**ನನ್ನು ಅರಿತುಕೊಳ್ಳುವುದೇ ವೇದಗಳ ಉದ್ದೇಶ ಎಂದು ಭಗವಂತನು ಹೇಳುತ್ತಾನೆ. **ವೇದ** ಮಂತ್ರಗಳಲ್ಲಿ, **ಪತಿಂ ವಿಶ್ವಸ್ಯಾತ್ಮೇಶ್ವರವ್** ಎಂದು ಹೇಳಿದೆ. ಆದ್ದರಿಂದ ಪ್ರಜಾಪತಿಯು ಪರಮ ದೇವೋತ್ತಮ ಪುರುಷನಾದ ವಿಷ್ಣುವೇ. ಶ್ರೀಮದ್ಭಾಗವತದಲ್ಲಿ ಕೂಡ (2.4.20) ಶ್ರೀಶುಕಾಚಾರ್ಯರು ಭಗವಂತನನ್ನು **ಪತಿ** ಎಂದು ಅನೇಕ ವಿಧವಾಗಿ ವರ್ಣಿಸಿದ್ದಾರೆ:

ಶ್ರೀಯಃ ಪತಿರ್ಯಜ್ಞಪತಿಃ ಪ್ರಜಾಪತಿ-
ರ್ಧಿಯಾಂ ಪತಿರ್ಲೋಕಪತಿರ್ಧರಾಪತಿಃ।
ಪತಿರ್ಗತಿಶ್ಚಾನ್ಧಕವೃಷ್ಣಿಸಾತ್ವತಾಂ
ಪ್ರಸೀದತಾಂ ಮೇ ಭಗವಾನ್ ಸತಾಂ ಪತಿಃ॥

ಪ್ರಜಾಪತಿಯು ಭಗವಾನ್ ವಿಷ್ಣು ಮತ್ತು ಅವನು ಸಕಲ ಜೀವ ಜಂತುಗಳ, ಸಕಲ ಲೋಕಗಳ, ಸಕಲ ಸೌಂದರ್ಯಗಳ ಒಡೆಯನು ಮತ್ತು ಸರ್ವರಕ್ಷಕನು. ಬದ್ಧ ಆತ್ಮರು ವಿಷ್ಣುವಿನ ತೃಪ್ತಿಗಾಗಿ ಯಜ್ಞಗಳನ್ನು ಹೇಗೆ ಆಚರಿಸಬೇಕು ಎಂಬುದನ್ನು ಕಲಿಯಲು ಭಗವಂತನು ಈ ಭೌತಿಕ ಪ್ರಪಂಚವನ್ನು ಸೃಷ್ಟಿಸಿರುವನು. ಇದರಿಂದ ಬದ್ಧ ಆತ್ಮರು ಭೌತಿಕ ಪ್ರಪಂಚದಲ್ಲಿರುವಾಗ, ಬಹಳ ಸೌಖ್ಯವಾಗಿ ಮತ್ತು ನಿರಾತಂಕವಾಗಿ ಜೀವಿಸಬಹುದು ಮತ್ತು ಭೌತಿಕ ದೇಹದ ಕೊನೆಯ ನಂತರ ಭಗವಂತನ ರಾಜ್ಯವನ್ನು ಪ್ರವೇಶಿಸಬಹುದು. ಇದೇ ಬದ್ಧ ಆತ್ಮರಿಗಾಗಿರುವ ಸಮಗ್ರ ಕಾರ್ಯಕ್ರಮ. ಯಜ್ಞಾಚರಣೆಯಿಂದ ಬದ್ಧ ಆತ್ಮರು ಕ್ರಮೇಣ ಕೃಷ್ಣಪ್ರಾಜ್ಞಿಗಳಾಗುತ್ತಾರೆ ಮತ್ತು ಎಲ್ಲ ವಿಧಗಳಲ್ಲಿಯೂ ದೈವೀಕರಾಗುತ್ತಾರೆ. ಕಲಿಯುಗದಲ್ಲಿ ವೇದ ಶಾಸ್ತ್ರಗಳು **ಸಂಕೀರ್ತನ ಯಜ್ಞ**ವನ್ನು ಮಾಡಬೇಕೆಂದು ಹೇಳಿವೆ, ಮತ್ತು ಈ ಯುಗದಲ್ಲಿ ಸಕಲ ಮಾನವರ ಉದ್ಧಾರಕ್ಕಾಗಿ ಭಗವಾನ್ ಚೈತನ್ಯರು, ಈ ದಿವ್ಯ ಪದ್ಧತಿಯನ್ನು ಆಚರಣೆಗೆ ತಂದರು. ಸಂಕೀರ್ತನ ಯಜ್ಞ ಮತ್ತು ಕೃಷ್ಣ ಪ್ರಜ್ಞೆ ಚೆನ್ನಾಗಿ ಜೊತೆಗೂಡಿ ಸಾಗುತ್ತವೆ. ಭಗವಾನ್ ಕೃಷ್ಣನು ತನ್ನ ಭಕ್ತನ ರೂಪದಲ್ಲಿ (ಭಗವಾನ್ ಚೈತನ್ಯರಾಗಿ) ಶ್ರೀಮದ್ಭಾಗವತದಲ್ಲಿ (11.5.32) ವಿಶೇಷವಾಗಿ ಸಂಕೀರ್ತನ ಯಜ್ಞಕ್ಕೆ ಸಂಬಂಧಿಸಿದಂತೆ, ಹೀಗೆ ಪ್ರಸ್ತಾಪಿಸಲ್ಪಟ್ಟಿದ್ದಾನೆ:

ಕೃಷ್ಣವರ್ಣಂ ತ್ವಿಷಾಕೃಷ್ಣಂ ಸಾಂಗೋಪಾಂಗಾಸ್ತ್ರ ಪಾರ್ಷದವ್।
ಯಜ್ಞೈಃ ಸಂಕೀರ್ತನಪ್ರಾಯೈರ್ಯಜನ್ತಿ ಹಿ ಸುಮೇಧಸಃ॥

**"ಈ ಕಲಿಯುಗದಲ್ಲಿ ಸಾಕಷ್ಟು ಬುದ್ಧಿಯುಳ್ಳವರು, ಅವನ ಸಹಚರರೊಡನೆ ಕೂಡಿರುವ ಭಗವಂತನನ್ನು ಸಂಕೀರ್ತನ ಯಜ್ಞ ಆಚರಣೆಯಿಂದ ಪೂಜಿಸುತ್ತಾರೆ."** ವೇದಸಾಹಿತ್ಯಗಳಲ್ಲಿ

ವಿಧಿಸಿರುವ ಇತರ ಯಜ್ಞಗಳನ್ನು ಈ ಕಲಿಯುಗದಲ್ಲಿ ಆಚರಿಸುವುದು ಸುಲಭವಲ್ಲ. ಆದರೆ, ಭಗವದ್ಗೀತೆಯಲ್ಲಿಯೂ (9.14) ಹೇಳಿದಂತೆ, ಸಂಕೀರ್ತನ ಯಜ್ಞವು ಎಲ್ಲ ಉದ್ದೇಶಗಳಿಗಾಗಿ ಸುಲಭ ಮತ್ತು ಭವ್ಯೋನ್ನತವಾಗಿದೆ.

**ದೇವಾನ್ ಭಾವಯತಾನೇನ ತೇ ದೇವಾ ಭಾವಯನ್ತು ವಃ ।**
**ಪರಸ್ಪರಂ ಭಾವಯನ್ತಃ ಶ್ರೇಯಃ ಪರಮವಾಪ್ಸ್ಯಥ ॥ ೧೧ ॥**

ದೇವಾನ್—ದೇವತೆಗಳು, ಭಾವಯತಾ—ಸಂತುಷ್ಟರಾಗಿ, ಅನೇನ—ಈ ಯಜ್ಞದಿಂದ, ತೇ—ಆ, ದೇವಾಃ—ದೇವತೆಗಳು, ಭಾವಯನ್ತು—ಸಂತೋಷಪಡಿಸುವರು, ವಃ—ನೀವು, ಪರಸ್ಪರಮ್—ಪರಸ್ಪರವಾಗಿ, ಭಾವಯನ್ತಃ—ಒಬ್ಬರನ್ನೊಬ್ಬರು ಸಂತೋಷಪಡಿಸಿ, ಶ್ರೇಯಃ—ಶ್ರೇಯಸ್ಸನ್ನು, ಪರಮ್—ಉತ್ಕೃಷ್ಟ, ಅವಾಪ್ಸ್ಯಥ—ನೀವು ಹೊಂದುವಿರಿ.

**ದೇವತೆಗಳು ಯಜ್ಞದಿಂದ ಪ್ರೀತರಾಗಿ, ನಿಮ್ಮನ್ನು ಕೂಡ ಪ್ರೀತರಾಗಿಸುತ್ತಾರೆ. ಹೀಗೆ ಮಾನವರು ಮತ್ತು ದೇವತೆಗಳ ಪರಸ್ಪರ ಸಹಕಾರದಿಂದ, ಎಲ್ಲರಿಗೂ ಸಮೃದ್ಧಿಯು ಉಂಟಾಗುತ್ತದೆ.**

**ಭಾವಾರ್ಥ :** ದೇವತೆಗಳು ಭೌತಿಕ ವ್ಯವಹಾರಗಳ ಶಕ್ತ್ಯಾವಿಷ್ಟ ಆಡಳಿತಗಾರರು. ಪ್ರತಿಯೊಬ್ಬ ಜೀವಿಯ ದೇಹ ಮತ್ತು ಆತ್ಮಪೋಷಣೆಗಾಗಿ ಗಾಳಿ, ಬೆಳಕು, ನೀರು ಮತ್ತು ಇತರ ಎಲ್ಲ ವರಗಳನ್ನು ಒದಗಿಸುವುದನ್ನು, ಪರಮ ದೇವೋತ್ತಮ ಪುರುಷನ ದೇಹದ ವಿವಿಧ ಭಾಗಗಳಲ್ಲಿನ ಅಸಂಖ್ಯಾತ ಸಹಾಯಕರಾಗಿರುವ ದೇವತೆಗಳಿಗೆ ವಹಿಸಿದೆ. ಅವರ ಸಂತೋಷ ಮತ್ತು ಅಸಂತೋಷ ಮಾನವನು ಆಚರಿಸುವ ಯಜ್ಞಗಳನ್ನು ಅವಲಂಬಿಸಿವೆ. ಕೆಲವು ಯಜ್ಞಗಳು ವಿಶಿಷ್ಟ ದೇವತೆಗಳನ್ನು ತೃಪ್ತಿಪಡಿಸಲು ಉದ್ದಿಷ್ಟವಾಗಿವೆ; ಹಾಗೆ ಮಾಡುವಾಗಲೂ, ಎಲ್ಲ ಯಜ್ಞಗಳಲ್ಲಿಯೂ ಭಗವಾನ್ ವಿಷ್ಣುವನ್ನು ಮುಖ್ಯ ಭೋಕ್ತಾರನಾಗಿ ಪೂಜಿಸಲಾಗುತ್ತದೆ. ಕೃಷ್ಣನೇ ಎಲ್ಲ ಬಗೆಯ ಯಜ್ಞಗಳ ಭೋಕ್ತಾರ ಎಂದು ಭಗವದ್ಗೀತೆಯಲ್ಲಿಯೂ ಹೇಳಿದೆ: **ಭೋಕ್ತಾರಂ ಯಜ್ಞತಪಸಾಮ್.** ಆದ್ದರಿಂದ ಎಲ್ಲ ಯಜ್ಞಗಳ ಮುಖ್ಯ ಉದ್ದೇಶವು **ಯಜ್ಞಪತಿಯ** ಅಂತಿಮ ತೃಪ್ತಿಯಾಗಿರುತ್ತದೆ. ಈ ಯಜ್ಞಗಳನ್ನು ಪರಿಪೂರ್ಣವಾಗಿ ಆಚರಿಸಿದಾಗ, ಸಹಜವಾಗಿಯೇ ವಿವಿಧ ಪೂರೈಕೆ ವಿಭಾಗಗಳನ್ನು ವಹಿಸಿರುವ ದೇವತೆಗಳು ಪ್ರೀತರಾಗುತ್ತಾರೆ, ಮತ್ತು ನೈಸರ್ಗಿಕ ಉತ್ಪನ್ನಗಳ ಪೂರೈಕೆಯಲ್ಲಿ ಕೊರತೆ ಇರುವುದಿಲ್ಲ.

ಯಜ್ಞಗಳ ಆಚರಣೆಗಳಲ್ಲಿ, ಅನೇಕ ಉಪಪ್ರಯೋಜನಗಳಿವೆ. ಮತ್ತು ಅಂತಿಮವಾಗಿ ಅವು ಸಾಂಸಾರಿಕ ಬಂಧನದಿಂದ ಮುಕ್ತಿಗೆ ಕರೆದೊಯ್ಯುತ್ತವೆ. ವೇದಗಳಲ್ಲಿ ಹೇಳಿರುವಂತೆ, ಯಜ್ಞಗಳ ಆಚರಣೆಯಿಂದ ಎಲ್ಲ ಕಾರ್ಯಕಲಾಪಗಳು ಶುದ್ಧಗೊಳ್ಳುತ್ತವೆ: ಆಹಾರ ಶುದ್ಧೌ **ಸತ್ತ್ವಶುದ್ಧಿಃ ಸತ್ತ್ವಶುದ್ಧೌ ಧ್ರುವಾಸ್ಮೃತಿಃ ಸ್ಮೃತಿಲಮ್ಭೇ ಸರ್ವಗ್ರನ್ಥೀನಾಂ ವಿಪ್ರಮೋಕ್ಷಃ.** ಯಜ್ಞಾಚರಣೆಯಿಂದ ಒಬ್ಬನ ಆಹಾರ ಪವಿತ್ರವಾಗುತ್ತದೆ,ಮತ್ತು ಪವಿತ್ರವಾದ

ಆಹಾರ ಸೇವನೆಯಿಂದ ಒಬ್ಬನ ಅಸ್ತಿತ್ವವೇ ಶುದ್ಧಿಯಾಗುತ್ತದೆ; ಅಸ್ತಿತ್ವದ ಶುದ್ಧಿಯಿಂದ ಸ್ಮೃತಿಯ ಸೂಕ್ಷ್ಮ ಅಂಗಾಂಶಗಳು ಶುದ್ಧಿಗೊಳ್ಳುತ್ತವೆ ಮತ್ತು ಸ್ಮೃತಿಯ ಶುದ್ಧಿಯಿಂದ ಒಬ್ಬನು ಮೋಕ್ಷಮಾರ್ಗದ ಚಿಂತನೆ ಮಾಡಬಹುದು. ಮತ್ತು ಇವೆಲ್ಲವೂ ಒಟ್ಟುಸೇರಿ, ಇಂದಿನ ಸಮಾಜಕ್ಕೆ ಅತ್ಯಗತ್ಯವಾದ ಕೃಷ್ಣಪ್ರಜ್ಞೆಗೆ ಕೊಂಡೊಯ್ಯುತ್ತವೆ.

**ಇಷ್ಟಾನ್ ಭೋಗಾನ್ ಹಿ ವೋ ದೇವಾ ದಾಸ್ಯನ್ತೇ ಯಜ್ಞಭಾವಿತಾಃ ।**
**ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ॥ ೧೨ ॥**

ಇಷ್ಟಾನ್—ಇಚ್ಛೆಪಟ್ಟ, ಭೋಗಾನ್—ಜೀವನ ಅವಶ್ಯಕತೆಗಳು, ಹಿ—ಖಂಡಿತವಾಗಿ, ವಃ—ನಿಮಗೆ, ದೇವಾಃ—ದೇವತೆಗಳು, ದಾಸ್ಯನ್ತೇ—ನೀಡುತ್ತಾರೆ, ಯಜ್ಞಭಾವಿತಾಃ—ಯಜ್ಞಾಚರಣೆಗಳಿಂದ ಪ್ರೀತರಾಗಿ, ತೈಃ—ಅವರಿಂದ, ದತ್ತಾನ್—ಕೊಡಲ್ಪಟ್ಟವು, ಅಪ್ರದಾಯ—ಅರ್ಪಿಸದೇ, ಏಭ್ಯಃ—ಈ ದೇವತೆಗಳಿಗೆ, ಯಃ—ಯಾವನು, ಭುಂಕ್ತೇ—ಭುಂಜಿಸುವನೋ, ಸ್ತೇನಃ—ಕಳ್ಳನು, ಏವ—ಖಂಡಿತವಾಗಿ, ಸಃ—ಅವನು.

**ಜೀವನದ ಅನೇಕ ಅವಶ್ಯಕತೆಗಳ ಪ್ರಭಾರಿಗಳಾದ ದೇವತೆಗಳು, ಯಜ್ಞಾಚರಣೆಯಿಂದ ತೃಪ್ತರಾಗಿ ಎಲ್ಲ ಅವಶ್ಯಕತೆಗಳನ್ನು ನಿಮಗೆ ಒದಗಿಸುತ್ತಾರೆ. ಆದರೆ ಇಂಥ ಕೊಡುಗೆಗಳನ್ನು ಮತ್ತೆ ದೇವತೆಗಳಿಗೆ ಸಮರ್ಪಿಸದೆ ಭೋಗಿಸುವವನು ಖಂಡಿತ ಕಳ್ಳನು.**

**ಭಾವಾರ್ಥ :** ದೇವತೆಗಳು ಪರಮ ದೇವೋತ್ತಮ ಪುರುಷ ವಿಷ್ಣುವಿನ ಪರವಾಗಿ ಪೂರೈಕೆಯ ಅಧಿಕೃತ ಅಭಿಕರ್ತರು. ಆದ್ದರಿಂದ ವಿಧಿತ ಯಜ್ಞಗಳ ಆಚರಣೆಯಿಂದ ಅವರನ್ನು ತೃಪ್ತಿಪಡಿಸಬೇಕು. ವೇದಗಳಲ್ಲಿ ವಿವಿಧ ದೇವತೆಗಳಿಗಾಗಿ ವಿವಿಧ ಯಜ್ಞಗಳು ವಿಧಿಸಲ್ಪಟ್ಟಿವೆ. ಆದರೆ ಅಂತಿಮವಾಗಿ ಎಲ್ಲವೂ ಪರಮ ದೇವೋತ್ತಮ ಪುರುಷನಿಗೆ ಅರ್ಪಿತ. ಪರಮ ದೇವೋತ್ತಮ ಪುರುಷನೆಂದರೆ ಯಾರು ಎಂದು ಅರಿಯಲಾಗದವನಿಗೆ, ದೇವತೆಗಳನ್ನು ಕುರಿತು ಯಜ್ಞಗಳನ್ನು ಹೇಳಿದೆ. ಸಂಬಂಧಪಟ್ಟ ವ್ಯಕ್ತಿಗಳ ವಿವಿಧ ಭೌತಿಕ ಗುಣಾನುಸಾರ ವೇದಗಳಲ್ಲಿ ವಿವಿಧ ಬಗೆಯ ಯಜ್ಞಗಳನ್ನು ಸೂಚಿಸಲಾಗಿದೆ. ವಿವಿಧ ದೇವತೆಗಳ ಅರ್ಚನೆಯೂ ಕೂಡ ಇದೇ ಆಧಾರದ ಮೇಲೆ–ಎಂದರೆ, ವಿವಿಧ ಗುಣಾನುಸಾರ. ಉದಾಹರಣೆಗೆ, ಮಾಂಸಾಹಾರಿಗಳು ಭೌತಿಕ ಪ್ರಕೃತಿಯ ಕರಾಳ ರೂಪಿಣಿ ಕಾಳೀದೇವತೆಯನ್ನು ಅರ್ಚಿಸಬೇಕೆಂದು ಮತ್ತು ದೇವಿಯ ಮುಂದೆ ಪಶು ಬಲಿಯನ್ನು ನೀಡಬೇಕೆಂದು ಹೇಳಿದೆ. ಆದರೆ ಸತ್ವಗುಣದಲ್ಲಿ ಇರುವವರಿಗೆ ವಿಷ್ಣುವಿನ ದಿವ್ಯ ಅರ್ಚನೆಯನ್ನು ಸೂಚಿಸಿದೆ. ಆದರೆ ಎಲ್ಲ ಯಜ್ಞಗಳು ಅಂತಿಮವಾಗಿ ದಿವ್ಯ ಸ್ಥಾನಕ್ಕೆ ಕ್ರಮೇಣ ಏರಿಸಲ್ಪಡಲೆಂದೇ ಉದ್ದೇಶಿತವಾಗಿವೆ. ಸಾಮಾನ್ಯರಿಗೆ ಕನಿಷ್ಠ **ಪಂಚ ಮಹಾ ಯಜ್ಞ**ಗಳೆಂಬ ಐದು ಯಜ್ಞಗಳು ಅವಶ್ಯ.

ಮಾನವ ಸಮಾಜಕ್ಕೆ ಬೇಕಾಗುವ ಜೀವನದ ಎಲ್ಲ ಅವಶ್ಯಕತೆಗಳನ್ನು ಭಗವಂತನ ಅಧೀನ ದೇವತೆಗಳು ಒದಗಿಸುವರು ಎಂಬುದನ್ನು ತಿಳಿಯಬೇಕು. ಯಾರೂ ಯಾವುದನ್ನೂ

ಸೃಷ್ಟಿಸುವುದಿಲ್ಲ. ಉದಾಹರಣೆಗೆ, ಮಾನವ ಸಮಾಜದ ಎಲ್ಲ ಆಹಾರವನ್ನೇ ತೆಗೆದುಕೊಳ್ಳಿ. ಈ ಆಹಾರ ಪದಾರ್ಥಗಳು ಸತ್ವಗುಣದಲ್ಲಿನ ವ್ಯಕ್ತಿಗಳಿಗೆ ಧಾನ್ಯಗಳು, ಹಣ್ಣುಗಳು, ತರಕಾರಿಗಳು, ಹಾಲು ಸಕ್ಕರೆ ಇತ್ಯಾದಿ, ಮತ್ತು ಶಾಕಾಹಾರಿಗಳಲ್ಲದವರಿಗೆ ಮಾಂಸಗಳಂಥಹವು. ಇವು ಯಾವುದನ್ನೂ ಮನುಷ್ಯರಿಂದ ತಯಾರಿಸಲಾಗದು. ಮತ್ತೆ ಉದಾಹರಣೆಗೆ, ಜೀವನದ ಅವಶ್ಯಕತೆಗಳಾದ ಶಾಖ, ಬೆಳಕು, ನೀರು, ಗಾಳಿ ಇತ್ಯಾದಿಗಳಲ್ಲಿ ಯಾವುದನ್ನೂ ಮಾನವ ಸಮಾಜವು ತಯಾರಿಸಲಾರದು. ಯಥೇಷ್ಟವಾದ ಸೂರ್ಯನ ಬೆಳಕು, ಚಂದ್ರನ ಬೆಳಕು, ಮಳೆ, ಮಂದ ಮಾರುತ ಇತ್ಯಾದಿಗಳು ಪರಮ ಪ್ರಭು ಇಲ್ಲದೆ ಇರಲಾರವು. ಇವುಗಳಿಲ್ಲದೆ ಯಾರೂ ಜೀವಿಸುವುದು ಸಾಧ್ಯವಿಲ್ಲ. ನಿಸ್ಸಂದೇಹವಾಗಿ ನಮ್ಮ ಜೀವನವು ಭಗವಂತನಿಂದ ದತ್ತವಾದ ಪೂರೈಕೆಗಳನ್ನು ಅವಲಂಬಿಸಿದೆ. ನಮ್ಮ ತಯಾರಿಕೆಯ ಉದ್ಯಮಗಳಿಗೂ ಕೂಡ, ನಾನಾ ಬಗೆಯ ಲೋಹ, ಗಂಧಕ, ಪಾದರಸ, ಅಭ್ರಕ ಮತ್ತು ಇನ್ನೂ ಎಷ್ಟೋ ಅವಶ್ಯಕ ಕಚ್ಚಾ ಸಾಮಗ್ರಿಗಳು ಆಗತ್ಯ. ಇವುಗಳೆಲ್ಲವೂ ಭಗವಂತನ ಅಭಿಕರ್ತರಿಂದ ಪೂರೈಸಲ್ಪಟ್ಟಿವೆ. ನಾವು ಆತ್ಮಸಾಕ್ಷಾತ್ಕಾರದ ಉದ್ದೇಶಕ್ಕಾಗಿ ಯೋಗ್ಯವಾಗಿ ಮತ್ತು ಆರೋಗ್ಯವಾಗಿರಲು, ಇವುಗಳನ್ನು ಸರಿಯಾಗಿ ಉಪಯೋಗಿಸಿಕೊಳ್ಳಬೇಕೆಂಬ ಉದ್ದೇಶದಿಂದ, ನಮಗೆ ಪೂರೈಸಲ್ಪಟ್ಟಿವೆ. ಈ ಆತ್ಮಸಾಕ್ಷಾತ್ಕಾರವು ಜೀವನದ ಅಂತಿಮ ಗುರಿಯಾದ ಭೌತಿಕ ಅಸ್ತಿತ್ವದ ಹೋರಾಟದಿಂದ ಮೋಕ್ಷಕ್ಕೆ ಕರೆದೊಯ್ಯುತ್ತದೆ. ಜೀವನದ ಈ ಉದ್ದೇಶವನ್ನು ಯಜ್ಞಗಳ ಆಚರಣೆಯಿಂದ ಹೊಂದಬಹುದಾಗಿದೆ. ನಾವು ಮಾನವ ಜೀವನದ ಉದ್ದೇಶವನ್ನು ಮರೆತು ಮತ್ತು ಭಗವಂತನ ಅಭಿಕರ್ತರಿಂದ ಪೂರೈಸಲಾದವುಗಳನ್ನು ಕೇವಲ ಇಂದ್ರಿಯ ತೋಷಣೆಗಾಗಿ ಸ್ವೀಕರಿಸಿದರೆ, ಭೌತಿಕ ಅಸ್ತಿತ್ವದಲ್ಲಿ ಇನ್ನೂ ಹೆಚ್ಚು ಹೆಚ್ಚಾಗಿ ಸಿಲುಕಿಕೊಳ್ಳುತ್ತೇವೆ (ಇದು ಸೃಷ್ಟಿಯ ಉದ್ದೇಶವೇ ಅಲ್ಲ). ಹೀಗೆ ನಾವು ಖಂಡಿತ ಕಳ್ಳರಾಗುತ್ತೇವೆ ಮತ್ತು ಭೌತಿಕ ಪ್ರಕೃತಿಯ ನಿಯಮಗಳಿಂದ ಶಿಕ್ಷಿಸಲ್ಪಡುತ್ತೇವೆ. ಕಳ್ಳರ ಸಮಾಜವು ಎಂದೂ ಸುಖವಾಗಿರುವುದಿಲ್ಲ, ಏಕೆಂದರೆ ಅವರಿಗೆ ಜೀವನದ ಗುರಿಯಿಲ್ಲ. ಮಂದರಾದ ಐಹಿಕ ಭೋಗಾಸಕ್ತ ಕಳ್ಳರು ಜೀವನದಲ್ಲಿ ಅಂತಿಮ ಧ್ಯೇಯವನ್ನು ಹೊಂದಿರುವುದಿಲ್ಲ. ಅವರು ಕೇವಲ ಇಂದ್ರಿಯ ತೋಷಣೆಯ ಕಡೆಗೆ ನಿರ್ದೇಶಿತರು; ಅಥವಾ ಯಜ್ಞಗಳನ್ನು ಹೇಗೆ ಆಚರಿಸಬೇಕೆಂಬ ಜ್ಞಾನವೂ ಅವರಿಗೆ ಇರುವುದಿಲ್ಲ. ಕೃಷ್ಣಪ್ರಜ್ಞೆಯ ತತ್ವಗಳನ್ನು ಅಂಗೀಕರಿಸುವ ಯಾರಾದರೂ ಪ್ರಪಂಚದಲ್ಲಿ ಆಚರಿಸಬಹುದಾದ, ಸಂಕೀರ್ತನ ಯಜ್ಞವೆಂಬ ಅತ್ಯಂತ ಸುಲಭವಾದ ಯಜ್ಞಾಚರಣೆಯನ್ನು, ಭಗವಾನ್ ಚೈತನ್ಯರು ಆರಂಭಿಸಿದರು.

**ಯಜ್ಞಶಿಷ್ಟಾಶಿನಃ ಸನ್ತೋ ಮುಚ್ಯನ್ತೇ ಸರ್ವಕಿಲ್ಬಿಷೈಃ ।**
**ಭುಞ್ಜತೇ ತೇ ತ್ವಘಂ ಪಾಪಾ ಯೇ ಪಚನ್ತ್ಯಾತ್ಮಕಾರಣಾತ್ ॥ ೧೩ ॥**

ಯಜ್ಞಶಿಷ್ಟ—ಯಜ್ಞಾಚರಣೆಯ ನಂತರ ಸ್ವೀಕರಿಸಿದ ಆಹಾರ, ಅಶಿನಃ—ತಿಂದವರು, ಸನ್ತಃ—ಭಕ್ತರು, ಮುಚ್ಯನ್ತೇ—ಪರಿಹಾರವನ್ನು ಹೊಂದುವರು, ಸರ್ವ—ಎಲ್ಲ ವಿಧಗಳ, ಕಿಲ್ಬಿಷೈಃ—ಪಾಪಗಳಿಂದ, ಭುಞ್ಜತೇ— ಅನುಭವಿಸುವವರು, ತೇ—ಅವರು, ತು—ಆದರೆ, ಅಘಮ್—ಘೋರಪಾಪಗಳನ್ನು, ಪಾಪಾಃ—ಪಾಪಗಳು, ಯೇ—ಯಾರು, ಪಚನ್ತಿ—ಆಹಾರ ಸಿದ್ಧಮಾಡುವರೋ, ಆತ್ಮಕಾರಣಾತ್—ಇಂದ್ರಿಯ ತೋಷಣಕ್ಕಾಗಿ.

**ಭಗವದ್ಭಕ್ತರು ಯಜ್ಞಾರ್ಪಿತವಾದ ಆಹಾರವನ್ನು ತಿನ್ನುವುದರಿಂದ, ಎಲ್ಲ ವಿಧವಾದ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾರೆ. ತಮ್ಮ ಇಂದ್ರಿಯ ತೋಷಣೆಗಾಗಿ ಆಹಾರ ತಯಾರಿಸುವ ಇತರರು, ನಿಜವಾಗಿ ಪಾಪವನ್ನು ಮಾತ್ರ ತಿನ್ನುತ್ತಾರೆ.**

**ಭಾವಾರ್ಥ :** ಪರಮ ಪ್ರಭುವಿನ ಭಕ್ತರು ಅಥವಾ ಕೃಷ್ಣಪ್ರಜ್ಞೆಯಲ್ಲಿರುವ ವ್ಯಕ್ತಿಗಳು **ಸನ್ತ**ರೆಂದು ಕರೆಯಲ್ಪಡುತ್ತಾರೆ, ಮತ್ತು ಬ್ರಹ್ಮ ಸಂಹಿತೆಯಲ್ಲಿ (5.38) ವರ್ಣಿಸಿರುವಂತೆ, ಅವರು ಸದಾ ಭಗವಂತನೊಡನೆ ಪ್ರೇಮಸಂಬಂಧ ಹೊಂದಿರುತ್ತಾರೆ: **ಪ್ರೇಮಾಂಜನಚ್ಛುರಿತ ಭಕ್ತಿ ವಿಲೋಚನೇನ ಸನ್ತಃ ಸದೈವ ಹೃದಯೇಷು ವಿಲೋಕಯನ್ತಿ.** ಪರಮ ದೇವೋತ್ತಮ ಪುರುಷನಾದ ಗೋವಿಂದ (ಸಕಲಾನಂದ ಪ್ರದಾಯಕ), ಅಥವಾ ಮುಕುಂದ (ಮೋಕ್ಷದಾಯಕ), ಅಥವಾ ಕೃಷ್ಣ (ಸರ್ವಾಕರ್ಷಕ) ನೊಂದಿಗೆ ಸದಾ ಸ್ನಿಗ್ಧ ಪ್ರೇಮದಲ್ಲಿ ಇರುವುದರಿಂದ, ಸಂತರು ಪರಮ ಪುರುಷನಿಗೆ ಮೊದಲು ಅರ್ಪಿಸದೆ ಯಾವುದನ್ನೂ ಸ್ವೀಕರಿಸುವುದಿಲ್ಲ. ಆದ್ದರಿಂದ ಅಂಥ ಭಕ್ತರು ಶ್ರವಣ, ಕೀರ್ತನ, ಸ್ಮರಣ, ಅರ್ಚನ ಇತ್ಯಾದಿ ಭಕ್ತಿಯುತ ಸೇವೆಯ ವಿವಿಧ ರೀತಿಗಳಲ್ಲಿ ಯಜ್ಞಗಳನ್ನು ಸದಾ ಆಚರಿಸುತ್ತಾರೆ, ಮತ್ತು ಈ ಯಜ್ಞಗಳ ಆಚರಣೆಗಳು ಅವರನ್ನು ಭೌತಿಕ ಪ್ರಪಂಚದಲ್ಲಿನ ಪಾಪಮಯ ಸಹವಾಸದ ಸಕಲ ವಿಧವಾದ ಕಲುಷತೆಗಳಿಂದ ಸದಾ ದೂರವಿರಿಸುತ್ತವೆ. ತಮಗಾಗಿ ಅಥವಾ ಇಂದ್ರಿಯತೋಷಣೆಗಾಗಿ ಆಹಾರವನ್ನು ತಯಾರಿಸುವ ಇತರರು, ಕಳ್ಳರಷ್ಟೇ ಅಲ್ಲದೆ, ಸಕಲ ವಿಧವಾದ ಪಾಪಗಳನ್ನು ತಿನ್ನುವರಾಗುತ್ತಾರೆ. ವ್ಯಕ್ತಿಯೊಬ್ಬನು ಕಳ್ಳ ಮತ್ತು ಪಾಪಿ ಎರಡೂ ಆಗಿದ್ದರೆ, ಅವನು ಸುಖಿಯಾಗಿರುವುದು ಹೇಗೆ? ಅದು ಸಾಧ್ಯವಿಲ್ಲ. ಆದ್ದರಿಂದ ಎಲ್ಲ ವಿಧಗಳಲ್ಲಿಯೂ ಜನರು ಸುಖಿಗಳಾಗಲು, ಅವರಿಗೆ ಪೂರ್ಣ ಕೃಷ್ಣ ಪ್ರಜ್ಞೆಯಲ್ಲಿ ಸಂಕೀರ್ತನ ಯಜ್ಞದ ಸುಲಭ ವಿಧಾನದ ಆಚರಣೆಯನ್ನು ಕಲಿಸಬೇಕು, ಅನ್ಯಥಾ, ಪ್ರಪಂಚದಲ್ಲಿ ಸುಖ ಶಾಂತಿಗಳು ಇರಲಾರವು.

**ಅನ್ನಾದ್ ಭವನ್ತಿ ಭೂತಾನಿ ಪರ್ಜನ್ಯಾದನ್ನಸಮ್ಭವಃ ।**
**ಯಜ್ಞಾದ್ ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥ ೧೪ ॥**

ಅನ್ನಾತ್—ಧಾನ್ಯಗಳಿಂದ, ಭವನ್ತಿ—ಬೆಳೆಯುತ್ತವೆ, ಭೂತಾನಿ—ಭೌತಿಕ ದೇಹಗಳು, ಪರ್ಜನ್ಯಾತ್—ಮಳೆಯಿಂದ, ಅನ್ನ—ಆಹಾರ ಧಾನ್ಯಗಳ, ಸಮ್ಭವಃ—ಉತ್ಪತ್ತಿ, ಯಜ್ಞಾತ್—ಯಜ್ಞಾಚರಣೆಯಿಂದ, ಭವತಿ—ಸಾಧ್ಯವಾಗುತ್ತದೆ, ಪರ್ಜನ್ಯಃ—ಮಳೆ, ಯಜ್ಞಃ—ಯಜ್ಞಾಚರಣೆ, ಕರ್ಮ—ವಿಧಿತ ಕರ್ತವ್ಯಗಳಿಂದ, ಸಮುದ್ಭವಃ—ಹುಟ್ಟುತ್ತದೆ.

**ಎಲ್ಲ ಸಜೀವ ದೇಹಗಳು ಮಳೆಗಳಿಂದ ಉತ್ಪತ್ತಿಯಾಗುವ ಆಹಾರ ಧಾನ್ಯಗಳಿಂದ ಜೀವಿಸುತ್ತವೆ. ಯಜ್ಞಾಚರಣೆಯಿಂದ ಮಳೆ ಸಂಭವಿಸುತ್ತದೆ, ಮತ್ತು ವಿಧಿತ ಕರ್ತವ್ಯಗಳಿಂದ ಯಜ್ಞವು ಹುಟ್ಟುತ್ತದೆ.**

**ಭಾವಾರ್ಥ :** ಭಗವದ್ಗೀತೆಯ ಮಹಾ ವ್ಯಾಖ್ಯಾನಕಾರರಾದ ಶ್ರೀಲ ಬಲದೇವ ವಿದ್ಯಾಭೂಷಣರು ಹೀಗೆ ಬರೆಯುತ್ತಾರೆ : **ಯೇ ಇನ್ದ್ರಾದಿ ಅಂಗತಯಾವಸ್ಥಿತಂ ಯಜ್ಞಂ ಸರ್ವೇಶ್ವರಂ ವಿಷ್ಣುಮಭ್ಯರ್ಚ್ಯ ತಚ್ಛೇಷಮಶ್ನನ್ತಿ ತೇನ ತದ್ದೇಹಯಾತ್ರಾಂ ಸಂಪಾದಯನ್ತಿ, ತೇ ಸನ್ತಃ ಸರ್ವೇಶ್ವರಸ್ಯ ಯಜ್ಞ ಪುರುಷಸ್ಯ ಭಕ್ತಾಃ ಸರ್ವಕಿಲ್ಬಿಷೈರ್ ಅನಾದಿ ಕಾಲ ವಿವೃದ್ಧೈರ್ ಆತ್ಮಾನುಭವ ಪ್ರತಿಬನ್ಧಕೈರ್ನಿಖಿಲೈಃ ಪಾಪೈರ್ವಿಮುಚ್ಯನ್ತೇ.** ಯಜ್ಞಪುರುಷ ಅಥವಾ ಸಕಲ ಯಜ್ಞಗಳ ಸ್ವಯಂ ಭೋಕ್ತಾರ, ಪರಮ ಪ್ರಭುವು ಸಕಲ ದೇವತೆಗಳ ಒಡೆಯನು. ವಿವಿಧ ಅಂಗಗಳು ಇಡೀ ದೇಹವನ್ನು ಸೇವಿಸುವಂತೆ, ಸಕಲ ದೇವತೆಗಳೂ ಅವನನ್ನು ಸೇವಿಸುತ್ತಾರೆ. ಇಂದ್ರ, ಚಂದ್ರ ಮತ್ತು ವರುಣನಂತಹ ದೇವತೆಗಳು ಭೌತಿಕ ವ್ಯವಹಾರಗಳನ್ನು ನಿರ್ವಹಿಸಲು ನೇಮಿತರಾದ ಅಧಿಕಾರಿಗಳು. ಮತ್ತು ಈ ದೇವತೆಗಳು ಸಂತುಷ್ಟರಾಗಿ, ಆಹಾರ ಧಾನ್ಯಗಳ ಉತ್ಪತ್ತಿಗಾಗಿ, ಸಾಕಷ್ಟು ಗಾಳಿ, ಬೆಳಕು ಮತ್ತು ನೀರನ್ನು ಪೂರೈಸಲು, ವೇದಗಳು ಈ ದೇವತೆಗಳನ್ನು ತೃಪ್ತಿಪಡಿಸಲು ಯಜ್ಞಗಳನ್ನು ನಿರ್ದೇಶಿಸಿವೆ. ಭಗವಾನ್ ಕೃಷ್ಣನನ್ನು ಅರ್ಚಿಸಿದಾಗ, ಅವನ ವಿವಿಧ ಅಂಗಾಂಗಗಳಾಗಿರುವ ದೇವತೆಗಳು ಕೂಡ ತಾವಾಗಿಯೇ ಅರ್ಚಿತರಾಗುವರು; ಆದ್ದರಿಂದ ದೇವತೆಗಳನ್ನು ಪ್ರತ್ಯೇಕವಾಗಿ ಅರ್ಚಿಸುವ ಅಗತ್ಯವಿಲ್ಲ. ಈ ನಿಮಿತ್ತದಿಂದ, ಕೃಷ್ಣಪ್ರಜ್ಞೆಯಲ್ಲಿರುವ ಭಗವದ್ಭಕ್ತರು, ಆಹಾರವನ್ನು ಕೃಷ್ಣನಿಗೆ ಸಮರ್ಪಿಸಿ ತಿನ್ನುತ್ತಾರೆ—ಇದು ದೇಹವನ್ನು ಆಧ್ಯಾತ್ಮಿಕವಾಗಿ ಪೋಷಿಸುವ ಒಂದು ವಿಧಾನ. ಹೀಗೆ ಮಾಡುವುದರಿಂದ ದೇಹದಲ್ಲಿನ ಪೂರ್ವ ಪಾಪ ಫಲಗಳು ನಾಶವಾಗುವುದಲ್ಲದೆ, ದೇಹವು ಭೌತಿಕ ಪ್ರಕೃತಿಯ ಎಲ್ಲ ಕಲುಷತೆಗಳೂ ತಾಗದಂತೆ ರಕ್ಷಿತವಾಗುತ್ತದೆ. ಸಾಂಕ್ರಾಮಿಕ ರೋಗವಿರುವಾಗ, ಪ್ರತಿರೋಧಿ ಚುಚ್ಚುಮದ್ದು ಅಂಥ ಸಾಂಕ್ರಾಮಿಕ ರೋಗವು ತಾಗದಂತೆ ವ್ಯಕ್ತಿಯನ್ನು ರಕ್ಷಿಸುತ್ತದೆ. ಅದೇ ಪ್ರಕಾರ, ಶ್ರೀ ವಿಷ್ಣುವಿಗೆ ಅರ್ಪಿತ ಆಹಾರ ಸ್ವೀಕರಿಸಿದಾಗ, ಭೌತಿಕ ಮೋಹಕ್ಕೆ ನಮ್ಮನ್ನು ಸಾಕಷ್ಟು ಪ್ರತಿರೋಧ ಮಾಡುತ್ತದೆ, ಮತ್ತು ಯಾರು ಈ ಪದ್ಧತಿಗೆ ಒಗ್ಗಿರುತ್ತಾರೋ ಅವರನ್ನು ಭಗವದ್ಭಕ್ತರೆನ್ನುವರು. ಆದ್ದರಿಂದ, ಕೃಷ್ಣಾರ್ಪಿತ ಆಹಾರವನ್ನು ಮಾತ್ರ ತಿನ್ನುವ ಕೃಷ್ಣ ಪ್ರಾಜ್ಞನು, ಆತ್ಮ ಸಾಕ್ಷಾತ್ಕಾರದ ಪ್ರಗತಿಗೆ ವಿಘ್ನಗಳಾಗಿರುವ ಗತಕಾಲದ ಸಾಂಸಾರಿಕ ಸಂಸರ್ಗಗಳ ಸಕಲ ಪ್ರತಿಕ್ರಿಯೆಗಳನ್ನು ಎದುರಿಸಬಲ್ಲನು. ಪ್ರತಿಯಾಗಿ, ಹಾಗೆ ಮಾಡದವನು ಪಾಪ ಕರ್ಮದ ಪ್ರಮಾಣವನ್ನು ಹೆಚ್ಚಿಸುತ್ತ ಹೋಗುತ್ತಾನೆ, ಮತ್ತು ಇದು ಎಲ್ಲ ಪಾಪಗಳ ಫಲಗಳನ್ನು ಅನುಭವಿಸಲು ಹಂದಿ ಮತ್ತು ನಾಯಿಯನ್ನು ಹೋಲುವ ಮುಂದಿನ ದೇಹಗಳನ್ನು ಸಿದ್ಧಗೊಳಿಸುತ್ತದೆ. ಭೌತಿಕ ಪ್ರಪಂಚವು ಕಲ್ಮಷಗಳಿಂದ ತುಂಬಿದೆ ಮತ್ತು ಭಗವತ್ಪ್ರಸಾದವನ್ನು (ವಿಷ್ಣುವಿಗೆ ಸಮರ್ಪಿತ ಆಹಾರ) ಸ್ವೀಕರಿಸುವುದರಿಂದ ರಕ್ಷಿತನಾದವನು ಅವುಗಳ ಧಾಳಿಯಿಂದ ಕಾಪಾಡಲ್ಪಡುತ್ತಾನೆ. ಆದರೆ ಹೀಗೆ ಮಾಡದವನು ಕಲ್ಮಷಕ್ಕೆ ಗುರಿಯಾಗುತ್ತಾನೆ.

ಧಾನ್ಯಗಳು ಅಥವಾ ತರಕಾರಿಗಳು ವಾಸ್ತವಿಕ ಆಹಾರ. ಮಾನವನು ನಾನಾ ಬಗೆಯ ಆಹಾರ ಧಾನ್ಯಗಳು, ತರಕಾರಿಗಳು, ಫಲಗಳು ಇತ್ಯಾದಿಗಳನ್ನು ತಿನ್ನುತ್ತಾನೆ, ಮತ್ತು ಪ್ರಾಣಿಗಳು ಆಹಾರ ಧಾನ್ಯಗಳ ಮತ್ತು ತರಕಾರಿಗಳ ಉಳಿದ ಭಾಗ, ಹುಲ್ಲು ಮತ್ತು ಗಿಡ

ಗಳನ್ನು ತಿನ್ನುತ್ತವೆ. ಖಂಡ ಮಾಂಸ ಸೇವನೆಗೆ ಒಗ್ಗಿದ ಮನುಷ್ಯರು ಕೂಡ, ಪ್ರಾಣಿಗಳನ್ನು ತಿನ್ನಲು ಸಸ್ಯೋತ್ಪತ್ತಿಯನ್ನು ಅವಲಂಬಿಸಬೇಕಾಗುತ್ತದೆ. ಆದ್ದರಿಂದ, ಅಂತಿಮವಾಗಿ ನಾವು ಹೊಲಗದ್ದೆಗಳ ಉತ್ಪನ್ನವನ್ನು ಅವಲಂಬಿಸಬೇಕಾಗುವುದೇ ಹೊರತು ದೊಡ್ಡ ಕಾರ್ಖಾನೆಯ ಉತ್ಪನ್ನಗಳನ್ನಲ್ಲ. ಹೊಲಗದ್ದೆಗಳ ಉತ್ಪನ್ನಗಳು ಸಾಕಷ್ಟು ಮಳೆಯಿಂದ ಆಗುತ್ತವೆ ಮತ್ತು ಅಂಥ ಮಳೆಗಳನ್ನು ನಿಯಂತ್ರಿಸುವ ಇಂದ್ರ, ಸೂರ್ಯ, ಚಂದ್ರ ಮೊದಲಾದ ದೇವತೆಗಳೆಲ್ಲರೂ ಭಗವಂತನ ಸೇವಕರು. ಭಗವಂತನನ್ನು ಯಜ್ಞಗಳಿಂದ ತೃಪ್ತಿಪಡಿಸಬಹುದು; ಆದ್ದರಿಂದ, ಅವುಗಳನ್ನು ಆಚರಿಸಲಾಗದವನು ಅಭಾವ ಪೀಡಿತನು—ಅದೇ ಪ್ರಕೃತಿ ನಿಯಮ. ಆದ್ದರಿಂದ, ಕನಿಷ್ಠ ನಮ್ಮನ್ನು ಆಹಾರ ಕೊರತೆಯಿಂದಾದರೂ ರಕ್ಷಿಸಿಕೊಳ್ಳಲು ಯಜ್ಞವನ್ನು, ಅದರಲ್ಲಿಯೂ ವಿಶೇಷವಾಗಿ ಈ ಯುಗಕ್ಕೆ ವಿಧಿಸಲ್ಪಟ್ಟ ಸಂಕೀರ್ತನ ಯಜ್ಞವನ್ನು, ಅವಶ್ಯವಾಗಿ ಆಚರಿಸಲೇ ಬೇಕು.

**ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಮ್ ।**
**ತಸ್ಮಾತ್ ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ॥ ೧೫ ॥**

ಕರ್ಮ—ಕರ್ಮವು, ಬ್ರಹ್ಮ—ವೇದಗಳಿಂದ, ಉದ್ಭವಮ್—ಉದ್ಭವವಾಗುತ್ತದೆ, ವಿದ್ಧಿ—ನೀನು ತಿಳಿಯಬೇಕು, ಬ್ರಹ್ಮ—ವೇದಗಳು, ಅಕ್ಷರ—ಪರಬ್ರಹ್ಮನಿಂದ (ದೇವೋತ್ತಮ ಪುರುಷ), ಸಮುದ್ಭವಮ್—ನೇರವಾಗಿ ವ್ಯಕ್ತವಾಗುತ್ತವೆ, ತಸ್ಮಾತ್—ಆದ್ದರಿಂದ, ಸರ್ವಗತಮ್—ಸರ್ವವ್ಯಾಪ್ತ, ಬ್ರಹ್ಮ—ದಿವ್ಯತ್ವ, ನಿತ್ಯಮ್—ನಿತ್ಯವಾಗಿ, ಯಜ್ಞೇ—ಯಜ್ಞದಲ್ಲಿ, ಪ್ರತಿಷ್ಠಿತಮ್—ಸನ್ನಿವೇಶಿತ.

**ನಿಯಂತ್ರಿತ ಕಾರ್ಯಗಳು ವೇದಗಳಲ್ಲಿ ವಿಧಿಸಲ್ಪಟ್ಟಿವೆ, ಮತ್ತು ವೇದಗಳು ಪರಮ ದೇವೋತ್ತಮ ಪುರುಷನಿಂದ ನೇರವಾಗಿ ವ್ಯಕ್ತವಾಗಿವೆ. ಪರಿಣಾಮವಾಗಿ, ಸರ್ವವ್ಯಾಪಿ ಪರಬ್ರಹ್ಮನು ನಿತ್ಯವಾಗಿ ಯಜ್ಞಕರ್ಮಗಳಲ್ಲಿ ಸನ್ನಿವೇಶಿತನು.**

**ಭಾವಾರ್ಥ : ಯಜ್ಞಾರ್ಥ ಕರ್ಮ** ಅಥವಾ ಕೃಷ್ಣನ ತೃಪ್ತಿಗಾಗಿ ಮಾತ್ರವೇ ಮಾಡುವ ಕರ್ಮದ ಅವಶ್ಯಕತೆಯನ್ನು, ಇನ್ನೂ ಹೆಚ್ಚು ಸ್ಪಷ್ಟವಾಗಿ ಈ ಶ್ಲೋಕದಲ್ಲಿ ಹೇಳಿದೆ. ಯಜ್ಞಪುರುಷ ವಿಷ್ಣುವಿನ ತೃಪ್ತಿಗಾಗಿ ನಾವು ಕರ್ಮಮಾಡುವುದಾದರೆ, ನಾವು ಕರ್ಮದ ನಿರ್ದೇಶನವನ್ನು ಬ್ರಹ್ಮನಲ್ಲಿ ಅಥವಾ ದಿವ್ಯ ವೇದಗಳಲ್ಲಿ ಕಾಣಬೇಕು. ಆದ್ದರಿಂದ ವೇದಗಳು ಕರ್ಮ ನಿರ್ದೇಶನಗಳ ಸಂಹಿತೆ. ವೇದಗಳ ನಿರ್ದೇಶನವಿಲ್ಲದೆ ಆಚರಿಸಿದ ಯಾವುದಾದರೂ ಕ್ರಿಯೆ **ವಿಕರ್ಮ**, ಅಥವಾ ಅನಧಿಕೃತ ಅಥವಾ ಪಾಪ ಕರ್ಮ ಎನಿಸಿಕೊಳ್ಳುತ್ತದೆ. ಆದ್ದರಿಂದ ಕರ್ಮದ ಪ್ರತಿಕ್ರಿಯೆಯಿಂದ ರಕ್ಷಿತನಾಗಬೇಕಾದರೆ, ಒಬ್ಬನು ಸದಾ ವೇದಗಳಿಂದ ನಿರ್ದೇಶನವನ್ನು ತೆಗೆದುಕೊಳ್ಳಬೇಕು. ಸಾಮಾನ್ಯ ಜೀವನದಲ್ಲಿ ಒಬ್ಬನು ಹೇಗೆ ರಾಜ್ಯ ನಿರ್ದೇಶನದಂತೆ ಕಾರ್ಯಮಾಡಬೇಕಾಗಿದೆಯೋ, ಹಾಗೆಯೇ ಒಬ್ಬನು ಭಗವಂತನ ಪರಮ ಸಾರ್ವಭೌಮತ್ವದ ನಿರ್ದೇಶನದಲ್ಲಿ ಕಾರ್ಯಮಾಡಬೇಕಾಗುವುದು. ವೇದಗಳಲ್ಲಿರುವ ಇಂಥ ನಿರ್ದೇಶನಗಳು ಪರಮ ದೇವೋತ್ತಮ ಪುರುಷನ ಉಸಿರಾಟದಿಂದ ನೇರವಾಗಿ ಅಭಿವ್ಯಕ್ತ

ವಾಗಿವೆ. **ಅಸ್ಯ ಮಹತೋ ಭೂತಸ್ಯ ನಿಶ್ವಸಿತಮ್ ಏತದ್ ಯದ್ ಋಗ್ವೇದೋ ಯಜುರ್ ವೇದಃ ಸಾಮವೇದೋಽಥರ್ವಾಂಗಿರಸಃ,** "ನಾಲ್ಕು ವೇದಗಳು—ಎಂದರೆ ಋಗ್ವೇದ, ಯಜುರ್ವೇದ,ಸಾಮವೇದ, ಮತ್ತು ಅಥರ್ವವೇದ—ಎಲ್ಲವೂ ಮಹಾ ದೇವೋತ್ತಮ ಪುರುಷನ ಶ್ವಾಸೋಚ್ಛ್ವಾಸದಿಂದ ಉದ್ಭೂತ," (ಬೃಹದಾರಣ್ಯಕ ಉಪನಿಷದ್ 4.5 11) ಎಂದು ಹೇಳಿದೆ. ಭಗವಂತನು ಸರ್ವಶಕ್ತನಾಗಿದ್ದು, ಶ್ವಾಸೋಚ್ಛ್ವಾಸದಿಂದ ಮಾತನಾಡ ಬಲ್ಲನು, ಏಕೆಂದರೆ ಬ್ರಹ್ಮಸಂಹಿತೆಯಲ್ಲಿ ದೃಢಪಟ್ಟಿರುವಂತೆ, ಭಗವಂತನು ತನ್ನ ಪ್ರತಿಯೊಂದು ಇಂದ್ರಿಯಗಳಿಂದ ಇತರ ಸಕಲೇಂದ್ರಿಯಗಳ ಕಾರ್ಯಮಾಡಲು ಸರ್ವಶಕ್ತನು. ಅರ್ಥಾತ್, ಭಗವಂತನು ತನ್ನ ಶ್ವಾಸೋಚ್ಛ್ವಾಸದಿಂದ ಮಾತನಾಡಬಲ್ಲನು, ಮತ್ತು ದೃಷ್ಟಿಯಿಂದ ಗರ್ಭಾದಾನ ಮಾಡಬಲ್ಲನು. ವಾಸ್ತವಿಕವಾಗಿ ಅವನು ಭೌತಿಕ ಪ್ರಕೃತಿಯ ಮೇಲೆ ಕುಡಿನೋಟ ಬೀರಿದನು, ಪರಿಣಾಮವಾಗಿ ಸಕಲ ಜೀವಿಗಳ ತಂದೆಯಾದನು ಎಂದು ಹೇಳಿದೆ. ಸೃಷ್ಟಿಯ ನಂತರ ಅಥವಾ ಭೌತಿಕ ಪ್ರಕೃತಿಯ ಗರ್ಭದಲ್ಲಿ ಬದ್ಧಾತ್ಮರನ್ನು ತುಂಬಿದ ತರುವಾಯ, ಇಂಥ ಬದ್ಧಾತ್ಮರು ಹೇಗೆ ಮತ್ತೆ ಭಗವದ್ಧಾಮಕ್ಕೆ ಹಿಂದಿರುಗಬಹುದು ಎಂದು ವೇದ ಜ್ಞಾನದಲ್ಲಿ, ತನ್ನ ನಿರ್ದೇಶನಗಳನ್ನು ನೀಡಿದನು. ಭೌತಿಕ ಪ್ರಕೃತಿಯಲ್ಲಿರುವ ಬದ್ಧಾತ್ಮರೆಲ್ಲರೂ ಸಾಂಸಾರಿಕ ಭೋಗಕ್ಕೆ ಕಾತುರರು ಎಂಬುದನ್ನು ನಾವು ಸದಾ ನೆನಪಿನಲ್ಲಿಡಬೇಕು. ಒಬ್ಬನು ತನ್ನ ತಿರೋಹಿತ ಇಚ್ಛೆಗಳನ್ನು ಪೂರೈಸಿ, ತನ್ನ ಭೋಗಾನುಭವವೆಂಬುದನ್ನು ಮುಗಿಸಿಕೊಂಡ ನಂತರ ಭಗವದ್ಧಾಮಕ್ಕೆ ಹಿಂದಿರುಗುವಂತೆ ವೈದಿಕ ನಿರ್ದೇಶನಗಳು ರಚಿಸಲ್ಪಟ್ಟಿವೆ. ಬದ್ಧಾತ್ಮರಿಗೆ ಮೋಕ್ಷ ಹೊಂದಲು ಇದೊಂದು ಅವಕಾಶ; ಆದ್ದರಿಂದ ಬದ್ಧಾತ್ಮರು ಕೃಷ್ಣ ಪ್ರಾಜ್ಞಿಗಳಾಗಿ ಯಜ್ಞ ವಿಧಾನವನ್ನು ಅನುಸರಿಸಲು ಯತ್ನಿಸಬೇಕು. ವೇದಾಜ್ಞೆಗಳನ್ನು ಅನುಸರಿಸದವರು ಕೂಡ ಕೃಷ್ಣ ಪ್ರಜ್ಞಾ ತತ್ವಗಳನ್ನು ಅನುಸರಿಸಬಹುದು ಮತ್ತು ಅದು ವೈದಿಕ ಯಜ್ಞಗಳ ಅಥವಾ ಕರ್ಮಗಳ ಆಚರಣೆಯ ಸ್ಥಾನವನ್ನು ತೆಗೆದುಕೊಳ್ಳುತ್ತದೆ.

**ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।**
**ಅಘಾಯುರಿನ್ದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥ ೧೬ ॥**

ಏವಮ್—ಹೀಗೆ, ಪ್ರವರ್ತಿತಮ್—ವೇದಗಳಿಂದ ಸ್ಥಾಪಿತವಾದ, ಚಕ್ರಮ್—ಚಕ್ರವು, ನ—ಇಲ್ಲ, ಅನುವರ್ತಯತಿ—ಅನುಸರಿಸುವುದು, ಇಹ—ಈ ಜೀವನದಲ್ಲಿ, ಯಃ—ಯಾರೊಬ್ಬನು,ಅಘ ಆಯುಃ—ಪಾಪಭರಿತ ಜೀವನದವನ, ಇನ್ದ್ರಿಯಾರಾಮಃ—ಇಂದ್ರಿಯ ತೋಷಣದಲ್ಲಿ ತೃಪ್ತನಾಗಿ, ಮೋಘಮ್—ವ್ಯರ್ಥವಾಗಿ, ಪಾರ್ಥ—ಹೇ ಪೃಥಾಪುತ್ರನೇ (ಅರ್ಜುನ), ಸಃ—ಅವನು, ಜೀವತಿ—ಜೀವಿಸುತ್ತಾನೆ.

**ಪ್ರಿಯ ಅರ್ಜುನನೇ, ಹೀಗೆ ವೇದಗಳಿಂದ ಸ್ಥಾಪಿತವಾದ ಯಜ್ಞ ಸರಣಿಯನ್ನು, ತನ್ನ ಮಾನವ ಜೀವನದಲ್ಲಿ ಅನುಸರಿಸದವನು ಖಂಡಿತವಾಗಿಯೂ ಪಾಪಭರಿತ ಜೀವನವನ್ನು ನಡೆಸುತ್ತಾನೆ. ಕೇವಲ ಇಂದ್ರಿಯಗಳ ತೃಪ್ತಿಗಾಗಿಯೇ ಬದುಕುವ ಇಂಥ ವ್ಯಕ್ತಿಯು, ವ್ಯರ್ಥವಾಗಿ ಜೀವಿಸುತ್ತಾನೆ.**

**ಭಾವಾರ್ಥ :** "ಕಷ್ಟಪಟ್ಟು ದುಡಿಯಿರಿ, ಇಂದ್ರಿಯಗಳನ್ನು ಸಂತೋಷಪಡಿಸಿ," ಎಂಬ ಧನಪಿಶಾಚಿಗಳ ತತ್ವವನ್ನು ಇಲ್ಲಿ ಭಗವಂತನು ಖಂಡಿಸಿದ್ದಾನೆ. ಆದ್ದರಿಂದ ಭೌತಿಕ ಪ್ರಪಂಚವನ್ನು ಭೋಗಿಸಬಯಸುವವರು ಮೇಲೆ ಹೇಳಿದ ಯಜ್ಞ ಸರಣಿಯನ್ನು ಆಚರಿಸುವುದು ಅತ್ಯಗತ್ಯ. ಇಂಥ ವಿಧಿಗಳನ್ನು ಪಾಲಿಸದವನು, ಇನ್ನು ಹೆಚ್ಚು ಹೆಚ್ಚಾಗಿ ಖಂಡನೆಗೀಡಾಗುವ ಬಹಳ ಅಪಾಯಕರ ಜೀವನವನ್ನು ನಡೆಸುತ್ತಾನೆ. ಪ್ರಕೃತಿ ನಿಯಮದಂತೆ, ಈ ಮಾನವ ಜೀವಿತವು ಮೂರು ಮಾರ್ಗಗಳಲ್ಲಿ, ಎಂದರೆ—ಕರ್ಮಯೋಗ, ಜ್ಞಾನಯೋಗ ಅಥವಾ ಭಕ್ತಿಯೋಗ, ಇವುಗಳಲ್ಲಿ ಯಾವುದಾದರೊಂದರ ಮೂಲಕ ಆತ್ಮ ಸಾಕ್ಷಾತ್ಕಾರ ಹೊಂದಲು ನಿರ್ದಿಷ್ಟವಾಗಿ ಉದ್ದೇಶಿತವಾಗಿದೆ. ಪಾಪಪುಣ್ಯಗಳಿಗೆ ಅತೀತರಾದ ದಿವ್ಯವಾದಿಗಳು ವಿಧಿತ ಯಜ್ಞಗಳ ಆಚರಣೆಗಳನ್ನು ಅಷ್ಟೊಂದು ಕಟ್ಟುನಿಟ್ಟಾಗಿ ಅನುಸರಿಸುವ ಅವಶ್ಯಕತೆ ಇಲ್ಲ. ಆದರೆ ಇಂದ್ರಿಯಗಳನ್ನು ತೃಪ್ತಿಪಡಿಸುವುದರಲ್ಲಿ ನಿರತರಾದವರಿಗೆ ಮೇಲೆ ಹೇಳಿದ ಯಜ್ಞ ಸರಣಿಯ ಮೂಲಕ ಶುದ್ಧೀಕರಣವು ಅಗತ್ಯ. ಅನೇಕ ಬಗೆಯ ಚಟುವಟಿಕೆಗಳಿವೆ. ಕೃಷ್ಣ ಪ್ರಾಜ್ಞಿಗಳಲ್ಲದವರು ಖಂಡಿತ ವಿಷಯ ಪ್ರಜ್ಞೆಯಲ್ಲಿ ತೊಡಗಿರುತ್ತಾರೆ; ಆದ್ದರಿಂದ ಅವರು ಪುಣ್ಯ ಕಾರ್ಯಗಳನ್ನು ಮಾಡುವುದು ಅಗತ್ಯ. ವಿಷಯ ಪ್ರಜ್ಞೆಯುಳ್ಳವರು ಇಂದ್ರಿಯ ತೋಷಣೆಯ ಪ್ರತಿಕ್ರಿಯೆಗಳಿಗ ಸಿಲುಕದೆ, ತಮ್ಮ ಇಚ್ಛೆಗಳನ್ನು ತೃಪ್ತಿಪಡಿಸಲಾಗುವಂತೆ ಯಜ್ಞ ಪದ್ಧತಿಯನ್ನು ಯೋಜಿಸಿದೆ. ಪ್ರಪಂಚದ ಅಭ್ಯುದಯವು ನಮ್ಮ ಪ್ರಯತ್ನಗಳನ್ನು ಅವಲಂಬಿಸದೆ, ದೇವತೆಗಳಿಂದ ನೇರವಾಗಿ ನೆರವೇರಿಸಲ್ಪಡುವ ಭಗವಂತನ ಹಿನ್ನೆಲೆಯ ಏರ್ಪಾಡುಗಳನ್ನು ಅವಲಂಬಸಿದೆ. ಆದ್ದರಿಂದ ಯಜ್ಞಗಳು, ವೇದಗಳಲ್ಲಿ ಹೇಳಿರುವ ನಿರ್ದಿಷ್ಟ ದೇವತೆಗಳನ್ನು ನೇರವಾಗಿ ಉದ್ದೇಶಿಸಿವೆ. ಪರೋಕ್ಷವಾಗಿ ಇದು ಕೃಷ್ಣ ಪ್ರಜ್ಞೆಯ ಆಚರಣೆ, ಏಕೆಂದರೆ ಒಬ್ಬನು ಯಜ್ಞಗಳ ಆಚರಣೆಯಲ್ಲಿ ಪಾರಂಗತನಾದರೆ, ಅವನು ಕೃಷ್ಣ ಪ್ರಾಜ್ಞಿಯಾಗುವುದು ಖಂಡಿತ. ಆದರೆ ಯಜ್ಞಗಳನ್ನು ಮಾಡಿಯೂ ಕೃಷ್ಣ ಪ್ರಾಜ್ಞಿಯಾಗದಿದ್ದರೆ, ಅಂಥ ತತ್ವಗಳು ಕೇವಲ ನೀತಿ ಸೂತ್ರಗಳೆಂದು ಎಣಿಸಲ್ಪಡುತ್ತವೆ. ಆದ್ದರಿಂದ ಒಬ್ಬನು ತನ್ನ ಪ್ರಗತಿಯನ್ನು ಕೇವಲ ನೀತಿ ಸೂತ್ರಗಳ ಮಟ್ಟಕ್ಕೆ ಸೀಮಿತಗೊಳಿಸದೆ, ಕೃಷ್ಣ ಪ್ರಜ್ಞೆಯನ್ನು ಹೊಂದಲು ಅವುಗಳನ್ನು ದಾಟಿ ಹೋಗಬೇಕು.

**ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ ।**
**ಆತ್ಮನ್ಯೇವ ಚ ಸನ್ತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥ ೧೭ ॥**

ಯಃ—ಯಾರೊಬ್ಬನು, ತು—ಆದರೆ, ಆತ್ಮರತಿಃ—ಆತ್ಮನಲ್ಲಿ ಸುಖ ಪಡೆಯುವುದು, ಏವ—ಖಂಡಿತವಾಗಿ, ಸ್ಯಾತ್—ಉಳಿಯುತ್ತಾನೆ, ಆತ್ಮತೃಪ್ತಃ—ಆತ್ಮ ಪ್ರಕಾಶಿತನಾಗಿ, ಚ—ಮತ್ತು, ಮಾನವಃ—ಮನುಷ್ಯನು, ಆತ್ಮನಿ—ತನ್ನಲ್ಲಿಯೇ, ಏವ—ಮಾತ್ರ, ಚ—ಮತ್ತು, ಸನ್ತುಷ್ಟಃ—ಪೂರ್ಣ ತೃಪ್ತನಾಗಿ, ತಸ್ಯ—ಅವನ, ಕಾರ್ಯಮ್—ಕರ್ತವ್ಯವು, ನ—ಇಲ್ಲ, ವಿದ್ಯತೇ—ಇರುವುದು.

**ಯಾರು ಆತ್ಮನಲ್ಲಿ ಆನಂದವನ್ನು ಪಡೆಯುವನೋ, ಯಾರ ಮಾನವ ಜೀವನವು ಆತ್ಮ ಸಾಕ್ಷಾತ್ಕಾರದ್ದಾಗಿದೆಯೋ, ಮತ್ತು ಯಾರು ಆತ್ಮನಲ್ಲಿ ಮಾತ್ರವೇ ತೃಪ್ತ**

**ನಾಗಿರುವನೋ, ಪೂರ್ಣ ಸಂತೃಪ್ತನಾಗಿ—ಅವನಿಗೆ ಯಾವ ಕರ್ತವ್ಯವೂ ಇರುವುದಿಲ್ಲ.**

**ಭಾವಾರ್ಥ :** ಪೂರ್ಣ ಕೃಷ್ಣ ಪ್ರಜ್ಞೆಯು, ಮತ್ತು ಕೃಷ್ಣ ಪ್ರಜ್ಞೆಯಲ್ಲಿನ ತನ್ನ ಕಾರ್ಯಗಳಿಂದ ಪೂರ್ಣ ತೃಪ್ತನಾದವನು, ಇನ್ನೆಂದಿಗೂ ಆಚರಿಸಬೇಕಾದ ಕರ್ತವ್ಯವೇನೂ ಇಲ್ಲ. ಒಳಗಿರುವ ಅಪವಿತ್ರತೆಯನ್ನು ಶುದ್ಧಗೊಳಿಸುವ ಸಹಸ್ರಾರು ಯಜ್ಞಾಚರಣೆಗಳ ಪರಿಣಾಮವು, ಅವನು ಕೃಷ್ಣ ಪ್ರಜ್ಞೆಯಲ್ಲಿರುವುದರಿಂದ, ಕೂಡಲೇ ಉಂಟಾಗುವುದು. ಅಂಥ ಶುದ್ಧಿಗೊಳಿಸಲ್ಪಟ್ಟ ಪ್ರಜ್ಞೆಯಿಂದ, ಭಗವಂತನೊಂದಿಗೆ ಸಂಬಂಧಗಲ್ಲಿ ತನ್ನ ಸ್ಥಾನದ ಬಗ್ಗೆ ಪೂರ್ಣ ವಿಶ್ವಾಸಿಯಾಗುತ್ತಾನೆ. ಹೀಗೆ ಭಗವಂತನ ಕೃಪೆಯಿಂದ ಅವನ ಕರ್ತವ್ಯವು ಸ್ವಯಂ ದೀಪ್ತವಾಗುತ್ತದೆ. ಆದ್ದರಿಂದ ಅವನು ವೇದಾಜ್ಞೆಗಳಿಗೆ ಇನ್ನೆಂದಿಗೂ ಬದ್ಧನಲ್ಲ. ಇಂಥ ಕೃಷ್ಣ ಪ್ರಜ್ಞೆಯು ಆ ಮುಂದೆ ಭೌತಿಕ ಚಟುವಟಿಕೆಗಳಲ್ಲಿ ಆಸಕ್ತನಲ್ಲ. ಮತ್ತು ಭೌತಿಕ ಏರ್ಪಾಡುಗಳಾದ ಮದ್ಯ, ಮಾನಿನಿ ಮತ್ತು ಇತರ ಪ್ರಚೋದಕಗಳಲ್ಲಿ ಇನ್ನೆಂದೂ ಆನಂದಿಸುವುದಿಲ್ಲ.

**ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ ।**
**ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥ ೧೮ ॥**

ನ—ಇಲ್ಲ, ಏವ—ಖಂಡಿತವಾಗಿ, ತಸ್ಯ—ಅವನ, ಕೃತೇನ—ಕರ್ತವ್ಯ ನಿರ್ವಹಣೆಯಿಂದ, ಅರ್ಥಃ—ಉದ್ದೇಶವು, ನ—ಇಲ್ಲದೆ, ಅಕೃತೇನ—ಕರ್ತವ್ಯವನ್ನು ನಿರ್ವಹಿಸದಿರುವುದರಿಂದ, ಇಹ—ಈ ಪ್ರಪಂಚದಲ್ಲಿ, ಕಶ್ಚನ—ಯಾವುದಾದರೂ, ನ—ಇಲ್ಲ, ಚ—ಮತ್ತು, ಅಸ್ಯ—ಅವನ, ಸರ್ವಭೂತೇಷು—ಎಲ್ಲ ಜೀವಿಗಳಲ್ಲಿ, ಕಶ್ಚಿತ್—ಯಾವುದೇ, ಅರ್ಥ—ಉದ್ದೇಶವು, ವ್ಯಪಾಶ್ರಯಃ—ಆಶ್ರಯವನ್ನು ಪಡೆದು ಕೊಂಡು.

**ಆತ್ಮಸಾಕ್ಷಾತ್ಕಾರಿಗೆ ತನ್ನ ವಿಧಿತ ಕರ್ತವ್ಯಗಳ ನಿರ್ವಹಣೆಯಲ್ಲಿ ನೆರವೇರಬೇಕಾದ ಉದ್ದೇಶವೇನೂ ಇಲ್ಲ. ಅಥವಾ ಅವನಿಗೆ ಅಂಥ ಕರ್ತವ್ಯವನ್ನು ನಿರ್ವಹಿಸದಿರಲು ಕಾರಣವೇನೂ ಇಲ್ಲ. ಅವನು ಬೇರೆ ಯಾವ ಜೀವಿಯನ್ನು ಅವಲಂಬಿಸುವ ಅಗತ್ಯವೂ ಇಲ್ಲ.**

**ಭಾವಾರ್ಥ :** ಆತ್ಮಸಾಕ್ಷಾತ್ಕಾರಿಯು ಇನ್ನೆಂದಿಗೂ, ಕೃಷ್ಣಪ್ರಜ್ಞಾ ಕಾರ್ಯಗಳನ್ನು ಬಿಟ್ಟು ಯಾವುದೇ ವಿಧಿತ ಕರ್ತವ್ಯವನ್ನು ಆಚರಿಸುವ ಆಭಾರವಿಲ್ಲ. ಈ ಮುಂದಿನ ಶ್ಲೋಕಗಳಲ್ಲಿ ವಿವರಿಸಿರುವಂತೆ, ಕೃಷ್ಣ ಪ್ರಜ್ಞೆಯು ನಿಷ್ಕ್ರಿಯೆಯೂ ಅಲ್ಲ. ಕೃಷ್ಣ ಪ್ರಾಜ್ಞೆಯು ಯಾವ ವ್ಯಕ್ತಿಯನ್ನೂ—ಮಾನವನನ್ನಾಗಲಿ ಅಥವಾ ದೇವತೆಯನ್ನಾಗಲಿ—ಆಶ್ರಯಿಸುವುದಿಲ್ಲ. ಅವನು ಕೃಷ್ಣ ಪ್ರಜ್ಞೆಯಲ್ಲಿ ಏನೇ ಮಾಡಿದರೂ, ಅದು ಅವನ ಆಭಾರ ನಿರ್ವಹಣೆಗೆ ಸಾಕು.

**ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ ।**
**ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ॥ ೧೯ ॥**

ತಸ್ಮಾತ್—ಆದ್ದರಿಂದ, ಅಸಕ್ತಃ—ಅಕ್ಕರೆಯಿಲ್ಲದೆ, ಸತತಮ್—ನಿರಂತರವಾಗಿ, ಕಾರ್ಯಮ್—ಕರ್ತವ್ಯವೆಂದು, ಕರ್ಮ—ಕರ್ಮವನ್ನು, ಸಮಾಚರ—ಆಚರಿಸು, ಅಸಕ್ತಃ—ಅನಾಸಕ್ತನಾಗಿ, ಹಿ—ಖಂಡಿತವಾಗಿ, ಆಚರನ್—ಆಚರಿಸುತ್ತ, ಕರ್ಮ—ಕರ್ಮವನ್ನು, ಪರಮ್—ಪರಮನನ್ನು, ಆಪ್ನೋತಿ—ಹೊಂದುತ್ತಾನೆ, ಪೂರುಷಃ—ಮಾನವನು.

**ಆದ್ದರಿಂದ, ಕರ್ಮಫಲಗಳಲ್ಲಿ ಅಕ್ಕರೆಯಿಲ್ಲದೆ, ಒಬ್ಬನು ಕರ್ತವ್ಯವೆಂದು ತಿಳಿದು ಕಾರ್ಯಮಾಡಬೇಕು, ಏಕೆಂದರೆ ಅನಾಸಕ್ತಿಯಿಂದ ಕರ್ಮ ಮಾಡುವುದರಿಂದ ಒಬ್ಬನು ಪರಮನನ್ನು ಹೊಂದುತ್ತಾನೆ.**

**ಭಾವಾರ್ಥ :** ಪರಮ ಎಂಬುದು ಭಕ್ತರಿಗೆ ದೇವೋತ್ತಮ ಪುರುಷ, ಮತ್ತು ವ್ಯಕ್ತಿಶೂನ್ಯವಾದಿಗಳಿಗೆ ಮೋಕ್ಷ. ಆದ್ದರಿಂದ ಕೃಷ್ಣನಿಗಾಗಿ ಅಥವಾ ಕೃಷ್ಣಪ್ರಜ್ಞೆಯಲ್ಲಿ, ಯೋಗ್ಯ ಮಾರ್ಗದರ್ಶನದಲ್ಲಿ ಮತ್ತು ಕರ್ಮಫಲಗಳಿಗೆ ಅಕ್ಕರೆಯಿಲ್ಲದೆ ವರ್ತಿಸುತ್ತಿರುವವನು, ಜೀವನದ ಪರಮ ಗುರಿಯಕಡೆಗೆ ಖಂಡಿತ ಪ್ರಗತಿ ಹೊಂದುತ್ತಿರುವನು. ಅರ್ಜುನನುಯುದ್ಧಮಾಡಬೇಕೆಂದು ಕೃಷ್ಣನು ಬಯಸಿದ್ದರಿಂದ, ಅರ್ಜುನನು ಕುರುಕ್ಷೇತ್ರ ಯುದ್ಧದಲ್ಲಿ ಕೃಷ್ಣನ. ಸಲುವಾಗಿ ಯುದ್ಧ ಮಾಡಬೇಕೆಂದು ಹೇಳಲ್ಪಟ್ಟನು. ಸಾತ್ವಿಕನಾಗುವುದಾಗಲೀ ಅಥವಾ ಅಹಿಂಸಾ ಪರನಾಗುವುದಾಗಲೀ ಒಂದು ವೈಯಕ್ತಿಕ ಆಸಕ್ತಿ, ಆದರೆ ಭಗವತ್ಪರವಾಗಿ ಕರ್ಮ ಮಾಡುವುದು ಫಲಾಪೇಕ್ಷೆಯಿಲ್ಲದೆ ಕರ್ಮ ಮಾಡಿದಂತೆ. ಇದೇ ಪರಮ ದೇವೋತ್ತಮ ಪುರುಷ, ಶ್ರೀ ಕೃಷ್ಣನು ಹೇಳಿದ ಅತ್ಯುನ್ನತ ಮಟ್ಟದ ಪರಿಪೂರ್ಣ ಕರ್ಮ.

ಇಂದ್ರಿಯ ತೋಷಣದ ಕ್ಷೇತ್ರದಲ್ಲಿ ಮಾಡಿದ ಅಪವಿತ್ರ ಕರ್ಮಗಳನ್ನು ಶುದ್ಧಿ ಮಾಡಿಕೊಳ್ಳಲು ವಿಧಿತ ಯಜ್ಞಾದಿಗಳಾದ ವೈದಿಕ ಸಂಸ್ಕಾರಗಳು ಆಚರಿಸಲ್ಪಡುತ್ತವೆ. ಆದರೆ ಕೃಷ್ಣ ಪ್ರಾಜ್ಞೆಯಲ್ಲಿ ಮಾಡಿದ ಕಾರ್ಯವು ಶುಭಾಶುಭ ಪ್ರತಿಕ್ರಿಯೆಗಳಿಗೆ ಅತೀತ. ಕೃಷ್ಣ ಪ್ರಾಜ್ಞಿಗೆ ಕರ್ಮಫಲಾಸಕ್ತಿ ಇಲ್ಲ. ಆದರೆ ಕೃಷ್ಣನಿಗೋಸ್ಕರ ಮಾತ್ರ ಕರ್ಮಮಾಡುತ್ತಾನೆ. ಅವನು ಎಲ್ಲ ಬಗೆಯ ಚಟುವಟಿಕೆಗಳಲ್ಲಿ ತೊಡಗುತ್ತಾನೆ, ಆದರೆ ಸಂಪೂರ್ಣ ಅನಾಸಕ್ತನು.

**ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ ।**
**ಲೋಕಸಂಗ್ರಹಮೇವಾಪಿ ಸಮ್ಪಶ್ಯನ್ ಕರ್ತುಮರ್ಹಸಿ ॥ ೨೦ ॥**

ಕರ್ಮಣಾ—ಕರ್ಮದಿಂದ, ಏವ—ಕೂಡ, ಹಿ—ಖಂಡಿತವಾಗಿ, ಸಂಸಿದ್ಧಿಮ್—ಪರಿಪೂರ್ಣತೆಯಲ್ಲಿ, ಆಸ್ಥಿತಾಃ—ಸನ್ನಿವೇಶಿತರಾಗಿ, ಜನಕ ಆದಯಃ—ಜನಕ ಮತ್ತು ಇತರ ರಾಜರು, ಲೋಕ ಸಂಗ್ರಹಮ್—ಸಾಮಾನ್ಯ ಜನರು, ಏವ ಅಪಿ—ಕೂಡ, ಸಂಪಶ್ಯನ್—ಗಮನಿಸಿ, ಕರ್ತುಮ್—ವರ್ತಿಸಲು, ಅರ್ಹಸಿ—ನೀನು ಅರ್ಹ.

**ಜನಕನಂಥ ರಾಜರು ಕೇವಲ ವಿಧಿತ ಕರ್ತವ್ಯಗಳ ಆಚರಣೆಯಿಂದಲೇ ಪರಿಪೂರ್ಣತೆಯನ್ನು ಪಡೆದರು. ಆದ್ದರಿಂದ, ಕೇವಲ ಜನಸಾಮಾನ್ಯರ ಶಿಕ್ಷಣಕ್ಕಾಗಿ ನೀನು ನಿನ್ನ ಕರ್ಮವನ್ನು ಆಚರಿಸಬೇಕು.**

**ಭಾವಾರ್ಥ :** ಜನಕನಂಥ ರಾಜರೆಲ್ಲರೂ ಆತ್ಮ ಸಾಕ್ಷಾತ್ಕಾರಿಗಳಾಗಿದ್ದರು; ಆದ್ದರಿಂದ ಅವರು ವೇದಗಳಲ್ಲಿನ ವಿಧಿತ ಕರ್ತವ್ಯಗಳನ್ನು ಆಚರಿಸಲು ಆಭಾರಿಗಳಾಗಿರಲಿಲ್ಲ. ಆದರೂ ಜನಸಾಮಾನ್ಯರಿಗೆ ಮೇಲ್ಪಂಕ್ತಿ ಹಾಕುವುದಕ್ಕಾಗಿ ಅವರು ಎಲ್ಲ ವಿಧಿತ ಕರ್ಮಗಳನ್ನು ಆಚರಿಸಿದರು. ಜನಕನು ಸೀತೆಯ ತಂದೆಯೂ, ಶ್ರೀರಾಮನ ಹೆಣ್ಣುಕೊಟ್ಟ ಮಾವನೂ ಆಗಿದ್ದನು. ಮಹಾಭಗವದ್ಭಕ್ತನಾಗಿದ್ದು, ಅವನು ದಿವ್ಯವಾಗಿ ಸನ್ನಿವೇಶಿತನಾಗಿದ್ದನು. ಆದರೆ ಆತನು ಮಿಥಿಲೆಯ(ಭಾರತದ ಬಿಹಾರ ಪ್ರಾಂತ್ಯದ ಉಪವಿಭಾಗ)ರಾಜನಾಗಿದ್ದರಿಂದ. ಅವನು ವಿಧಿತ ಕರ್ತವ್ಯಗಳನ್ನು ಹೇಗೆ ಆಚರಿಸುವುದೆಂದು ತನ್ನ ಪ್ರಜೆಗಳಿಗೆ ಶಿಕ್ಷಣ ನೀಡ ಬೇಕಾಗಿದ್ದಿತು. ಶ್ರೀ ಕೃಷ್ಣನು ಮತ್ತು ಭಗವಂತನ ನಿತ್ಯ ಸಖನಾದ ಅರ್ಜುನನು, ಕುರು ಕ್ಷೇತ್ರ ಯುದ್ಧದಲ್ಲಿ ಯುದ್ಧ ಮಾಡಬೇಕಾದ ಅವಶ್ಯಕತೆ ಇರಲಿಲ್ಲ, ಆದರೆ ಸಾತ್ವಿಕವಾದಗಳು ವಿಫಲವಾದಾಗ, ಹಿಂಸೆಯೂ ಕೂಡ ಅವಶ್ಯ ಎಂಬುದನ್ನು ಅವರು ಜನಸಾಮಾನ್ಯರಿಗೆ ತಿಳಿಸಿ ಕೊಡಲು ಯುದ್ಧ ಮಾಡಿದರು. ಕುರುಕ್ಷೇತ್ರ ಯುದ್ಧಕ್ಕೆ ಮೊದಲು, ಪರಮ ದೇವೋತ್ತಮ ಪುರುಷನಿಂದಲೂ, ಯುದ್ಧವನ್ನು ತಪ್ಪಿಸಲು ಸರ್ವಪ್ರಯತ್ನ ಮಾಡಲಾಯಿತು. ಆದರೆ ಪ್ರತಿ ಪಕ್ಷವು ಯುದ್ಧಮಾಡಲು ನಿರ್ಧರಿಸಿದ್ದಿತು. ಉಚಿತ ಕಾರಣಕ್ಕೆ ಯುದ್ಧದ ಅವಶ್ಯಕತೆ ಇರುತ್ತದೆ. ಕೃಷ್ಣಪ್ರಜ್ಞೆಯಲ್ಲಿ ಸನ್ನಿವೇಶಿತನಾದವನಿಗೆ ಪ್ರಪಂಚದಲ್ಲಿ ಯಾವುದೇ ಆಸಕ್ತಿ ಇಲ್ಲದಿದ್ದರೂ, ಜನಸಾಮಾನ್ಯರಿಗೆ ಹೇಗೆ ಬದುಕಬೇಕು, ಮತ್ತು ಹೇಗೆ ವರ್ತಿಸಬೇಕು ಎಂದು ಬೋಧಿಸಲು ಅವನು ಕೆಲಸ ಮಾಡುವನು. ಕೃಷ್ಣ ಪ್ರಜ್ಞೆಯಲ್ಲಿನ ಅನುಭವಿಗಳು ಇತರರು ತಮ್ಮನ್ನು ಅನುಸರಿಸುವಂತೆ ಕರ್ಮಮಾಡಬಲ್ಲರು, ಮತ್ತು ದು ಇಈ ಮುಂದಿನ ಶ್ಲೋಕದಲ್ಲಿ ವಿವರಿಸಲ್ಪಟ್ಟಿದೆ.

**ಯದ್ ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ ।**
**ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥ ೨೧ ॥**

ಯತ್ ಯತ್—ಯಾವುದೇ, ಆಚರತಿ—ಅವನು ಮಾಡುತ್ತಾನೋ, ಶ್ರೇಷ್ಠಃ—ಗೌರವಾರ್ಹ ನಾಯಕನು, ತತ್—ಅದು, ತತ್—ಮತ್ತು ಅದನ್ನು ಮಾತ್ರವೇ, ಏವ—ಖಂಡಿತವಾಗಿ, ಇತರಃ—ಸಾಮಾನ್ಯ, ಜನಃ—ಮನುಷ್ಯನು, ಸಃ—ಅವನು, ಯತ್—ಯಾವುದನ್ನು, ಪ್ರಮಾಣಮ್—ಉದಾಹರಣೆ, ಕುರುತೇ—ಆಚರಿಸುತ್ತಾನೋ, ಲೋಕಃ—ಪ್ರಪಂಚವೆಲ್ಲವೂ, ತತ್—ಅದನ್ನೇ, ಅನುವರ್ತತೇ—ಹೆಜ್ಜೆಗಳಲ್ಲಿ ಅನುಸರಿಸುತ್ತದೆ.

**ಮಹಾವ್ಯಕ್ತಿಯು ಆಚರಿಸಿದ ಕಾರ್ಯವನ್ನು, ಜನಸಾಮಾನ್ಯರು ಅನುಸರಿಸು ತ್ತಾರೆ. ಮತ್ತು ಅವನು ಆದರ್ಶ ಕ್ರಿಯೆಗಳಿಂದ ಸ್ಥಾಪಿಸಿದ ಯಾವುದೇ ಪ್ರಮಾಣ ಗಳನ್ನು ಪ್ರಪಂಚವೆಲ್ಲವೂ ಅನುಸರಿಸುತ್ತದೆ.**

**ಭಾವಾರ್ಥ:** ಕಾರ್ಯತಃ ನಡತೆಯಿಂದ ಜನಸಾಮಾನ್ಯರಿಗೆ ಶಿಕ್ಷಣವನ್ನು ನೀಡಬಲ್ಲ ನಾಯ ಕನು ಸದಾ ಅವಶ್ಯ. ನಾಯಕನು ತಾನೇ ಧೂಮಪಾನ ಮಾಡಿದರೆ, ಅವನು ಜನರಿಗೆ ಧೂಮ ಪಾನ ಮಾಡದಿರಲು ಬೋಧಿಸಲಾರನು. ಬೋಧನೆ ನೀಡಲು ಪ್ರಾರಂಭಿಸುವ ಮೊದಲು,

ಬೋಧಕನು ಸ್ವತಃ ಉಚಿತವಾಗಿ ನಡೆದುಕೊಳ್ಳಬೇಕು ಎಂದು ಭಗವಾನ್ ಚೈತನ್ಯರು ಹೇಳಿದರು. ಈ ರೀತಿಯಲ್ಲಿ ಬೋಧಿಸುವವನು **ಆಚಾರ್ಯ,** ಅಥವಾ ಆದರ್ಶ ಶಿಕ್ಷಕ ಎನಿಸುತ್ತಾನೆ. ಆದ್ದರಿಂದ ಜನಸಾಮಾನ್ಯರಿಗೆ ಬೋಧಿಸಲು ಶಾಸ್ತ್ರ ತತ್ವಗಳನ್ನು ಅನುಸರಿಸಬೇಕು. ಬೋಧಕನು ದೃಷ್ಟ ಶಾಸ್ತ್ರಗಳಿಗೆ ವಿರುದ್ಧವಾಗಿ ನಿಯಮಗಳನ್ನು ತಯಾರಿಸಲಾರನು. ಮನು ಸಂಹಿತೆ ಮತ್ತು ಇತರ ದೃಷ್ಟ ಶ್ರುತಿಗಳು ಮಾನವ ಸಮಾಜಕ್ಕೆ ಅನುಕರಣೀಯ ಪ್ರಮಾಣ ಗ್ರಂಥಗಳೆಂದು ಪರಿಗಣಿಸಲಾಗಿವೆ. ಹೀಗೆ ನಾಯಕನ ಉಪದೇಶವು ಇಂಥ ಪ್ರಮಾಣ ಶಾಸ್ತ್ರಗಳ ತತ್ವಗಳನ್ನು ಆಧರಿಸಿರಬೇಕು. ತನ್ನನ್ನು ಸುಧಾರಣೆ ಮಾಡಿಕೊಳ್ಳ ಬಯಸುವವನು ಮಹದಾಚಾರ್ಯರುಗಳಿಂದ ಆಚರಿಸಲ್ಪಟ್ಟಂತೆ, ಪ್ರಮಾಣ ನಿಯಮಗಳನ್ನು ಅನುಸರಿಸಬೇಕು, ಒಬ್ಬನು ಮಹಾ ಭಗವದ್ಭಕ್ತರ ಹೆಜ್ಜೆಗಳನ್ನೇ ಅನುಸರಿಸಬೇಕು, ಮತ್ತು ಅದುವೇ ಆತ್ಮ ಸಾಕ್ಷಾತ್ಕಾರದ ಪ್ರಗತಿಯ ಮಾರ್ಗವೆಂದು ಶ್ರೀಮದ್ಭಾಗವತವು ದೃಢಪಡಿಸುತ್ತದೆ. ರಾಜನು ಅಥವಾ ರಾಜ್ಯದ ಕಾರ್ಯಾಂಗದ ಮುಖ್ಯಸ್ಥನು, ತಂದೆ ಅಥವಾ ಶಾಲಾ ಗುರು— ಇವರೆಲ್ಲರನ್ನೂ ಮುಗ್ಧ ಜನರ ಸಹಜ ನಾಯಕರೆಂದು ಅಂಗೀಕರಿಸಿದೆ. ಇಂಥ ನಾಯಕರೆಲ್ಲರಿಗೂ ತಮ್ಮ ಆಶ್ರಿತರ ಬಗ್ಗೆ ಮಹತ್ತರ ಜವಾಬ್ದಾರಿ ಇರುತ್ತದೆ; ಆದ್ದರಿಂದ ಅವರು ನೀತಿ ಮತ್ತು ಆಧ್ಯಾತ್ಮಿಕ ಸಂಹಿತೆಗಳ ಪ್ರಮಾಣ ಗ್ರಂಥಗಳನ್ನು ಬಲ್ಲವರಾಗಿರಬೇಕು.

**ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ।**
**ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥ ೨೨ ॥**

ನ—ಇಲ್ಲ, ಮೇ—ನನ್ನ, ಪಾರ್ಥ—ಹೇ ಪೃಥಾ ಪುತ್ರನೇ, ಅಸ್ತಿ—ಇರುವುದು, ಕರ್ತವ್ಯಮ್—ವಿಧಿತ ಕರ್ತವ್ಯವು, ತ್ರಿಷು—ಮೂರು, ಲೋಕೇಷು—ಲೋಕಗಳಲ್ಲಿ, ಕಿಂಚನ—ಯಾವುದೇ, ನ—ಏನೂ ಇಲ್ಲ, ಅನವಾಪ್ತಮ್—ಅಪೇಕ್ಷಿತವು, ಅವಾಪ್ತವ್ಯಮ್—ಗಳಿಸಬೇಕಾದುದು, ವರ್ತೇ—ನಾನು ತೊಡಗಿದ್ದೇನೆ, ಏವ—ಖಂಡಿತವಾಗಿ, ಚ—ಕೂಡ, ಕರ್ಮಣಿ—ವಿಧಿತ ಕರ್ತವ್ಯದಲ್ಲಿ.

**ಹೇ ಪೃಥಾಪುತ್ರನೇ, ಇಡೀ ತ್ರಿಲೋಕವ್ಯೂಹಗಳಲ್ಲಿ ನನಗಾಗಿ ವಿಧಿತವಾದ ಕಾರ್ಯವಿಲ್ಲ. ಅಥವಾ ನನಗೆ ಯಾವುದೇ ಕೊರತೆಯಿಲ್ಲ, ಅಥವಾ ನಾನು ಯಾವುದನ್ನೂ ಪಡೆಯ ಬೇಕಾದ ಅವಶ್ಯಕತೆಯೂ ಇಲ್ಲ—ಆದರೂ ನಾನು ವಿಧಿತ ಕರ್ತವ್ಯಗಳಲ್ಲಿ ತೊಡಗಿದ್ದೇನೆ.**

**ಭಾವಾರ್ಥ:** ವೈದಿಕ ಸಾಹಿತ್ಯದಲ್ಲಿ ಪರಮ ದೇವೋತ್ತಮ ಪುರುಷನನ್ನು ಹೀಗೆ ವರ್ಣಿಸಿದೆ:

ತಮೀಶ್ವರಾಣಾಂ ಪರಮಂ ಮಹೇಶ್ವರಂ
ತಂ ದೇವತಾನಾಂ ಪರಮಂ ಚ ದೈವತಮ್।
ಪತಿಂ ಪತೀನಾಂ ಪರಮಂ ಪರಸ್ತಾದ್
ವಿದಾಮ ದೇವಂ ಭುವನೇಶಮ್ ಈಡ್ಯಮ್॥
ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ
ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ।

ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ
ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ॥

"ಪರಮ ಪ್ರಭುವು ಇತರ ಎಲ್ಲಾ ನಿಯಂತ್ರಕರಿಗೂ ನಿಯಂತ್ರಕನು, ಮತ್ತು ಅವನು ವಿವಿಧ ಲೋಕಗಳ ಅಧಿಪತಿಗಳಲ್ಲಿ ಸರ್ವಶ್ರೇಷ್ಠನು. ಪ್ರತಿಯೊಬ್ಬನೂ ಅವನ ನಿಯಂತ್ರಣಕ್ಕೆ ಒಳಪಟ್ಟಿದ್ದಾನೆ. ಪರಮ ಪ್ರಭುವಿನಿಂದಲೇ ಎಲ್ಲ ಜೀವಿಗಳಿಗೂ ನಿರ್ದಿಷ್ಟ ಶಕ್ತಿ ವಹಿಸಲ್ಪಟ್ಟಿದೆ; ಅವರು ಸ್ವಯಂ ಪರಮರಲ್ಲ. ಅವನು ಸರ್ವ ದೇವತೆಗಳಿಗೂ ಪೂಜಾರ್ಹನು ಮತ್ತು ಸರ್ವ ನಿರ್ದೇಶಕರಿಗೂ ಪರಮ ನಿರ್ದೇಶಕನು. ಆದ್ದರಿಂದ, ಅವನು ಎಲ್ಲ ಬಗೆಯ ಭೌತಿಕ ನಾಯಕರಿಗೂ ಮತ್ತು ನಿಯಾಮಕರಿಗೂ ಅತೀತನಾಗಿದ್ದು, ಸರ್ವರಿಂದಲೂ ಪೂಜಾರ್ಹನು. ಅವನಿಗಿಂತ ಅಧಿಕರು ಬೇರೊಬ್ಬರಿಲ್ಲ. ಅವನೇ ಸರ್ವ ಕಾರಣಗಳ ಪರಮ ಕಾರಣನು.

"ಅವನು ಸಾಮಾನ್ಯ ಜೀವಿಯಂತೆ ದೈಹಿಕರೂಪವನ್ನು ಹೊಂದಿಲ್ಲ. ಅವನ ದೇಹ ಮತ್ತು ಆತ್ಮ ಅಭಿನ್ನ. ಅವನು ಪರತರನು. ಅವನ ಸರ್ವೇಂದ್ರಿಯಗಳೂ ದಿವ್ಯ. ಅವನ ಇಂದ್ರಿಯಗಳಲ್ಲಿ ಯಾವುದಾದರೊಂದು ಇಂದ್ರಿಯವು ಯಾವುದೇ ಮತ್ತೊಂದು ಇಂದ್ರಿಯದ ಕಾರ್ಯವನ್ನು ಮಾಡಬಲ್ಲದು. ಆದ್ದರಿಂದ, ಅವನಿಗೆ ಸಮಾನರು ಅಥವಾ ಅಧಿಕರು ಯಾರೂ ಇಲ್ಲ. ಅವನ ಶಕ್ತಿಗಳು ವಿವಿಧ, ಮತ್ತು ಹೀಗೆ ಅವನ ಕ್ರಿಯೆಗಳೆಲ್ಲವೂ ಸಹಜಾನುಕ್ರಮದಲ್ಲಿ ತಾವಾಗಿಯೇ ನಡೆಯುತ್ತವೆ." (ಶ್ವೇತಾಶ್ವತರ ಉಪನಿಷದ್ 6.7-8)

ಪರಮ ದೇವೋತ್ತಮ ಪುರುಷನಲ್ಲಿ ಎಲ್ಲವೂ ಪೂರ್ಣೈಶ್ವರ್ಯ ಮತ್ತು ಪೂರ್ಣಸತ್ಯವಾಗಿಯೂ ಇರುವುದರಿಂದ, ಪರಮ ದೇವೋತ್ತಮ ಪುರುಷನು ಆಚರಿಸಬೇಕಾದ ಕರ್ತವ್ಯವೇನೂ ಇಲ್ಲ. ಕರ್ಮಫಲವನ್ನು ಪಡೆಯಬೇಕಾದವನಿಗೆ, ನಿಶ್ಚಿತವಾದ ಕರ್ತವ್ಯವಿರುತ್ತದೆ. ಆದರೆ ಮೂರು ಲೋಕಗಳಲ್ಲಿ ಸಾಧಿಸಬೇಕಾದದ್ದೇನೂ ಇಲ್ಲದವನಿಗೆ ಖಂಡಿತ ಕರ್ತವ್ಯವಿಲ್ಲ. ಆದರೂ ಭಗವಾನ್ ಕೃಷ್ಣನು ಕ್ಷತ್ರಿಯರ ನಾಯಕನಂತೆ ಕುರುಕ್ಷೇತ್ರ ಯುದ್ಧದಲ್ಲಿ ನಿರತನಾಗಿರುವನು, ಏಕೆಂದರೆ, ಸಂಕಷ್ಟದಲ್ಲಿರುವವರಿಗೆ ರಕ್ಷಣೆ ನೀಡಲು ಕ್ಷತ್ರಿಯರು ಕರ್ತವ್ಯ ಬದ್ಧರು. ಅವನು ಎಲ್ಲ ದೃಷ್ಟ ಶಾಸ್ತ್ರಗಳ ನಿಯಮಗಳಿಗೆ ಅತೀತನಾಗಿದ್ದರೂ, ಅವನು ದೃಷ್ಟ ಶಾಸ್ತ್ರಗಳನ್ನು ಉಲ್ಲಂಘಿಸುವ ಯಾವುದನ್ನೂ ಮಾಡುವುದಿಲ್ಲ.

**ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತನ್ದ್ರಿತಃ ।**
**ಮಮ ವರ್ತ್ಮಾನುವರ್ತನ್ತೇ ಮನುಷ್ಯಾಃ ಪಾರ್ಥ ಸರ್ವಶಃ ॥ ೨೩ ॥**

ಯದಿ—ಆದರೆ, ಹಿ—ಖಂಡಿತವಾಗಿ, ಅಹಮ್—ನಾನು, ನ—ಇಲ್ಲ, ವರ್ತೇಯಮ್—ಹೀಗೆ ನಿರತನಾಗಿರುವುದು, ಜಾತು—ಎಂದಿಗೂ, ಕರ್ಮಣಿ—ವಿಧಿತ ಕರ್ತವ್ಯಗಳ ಆಚರಣೆಯಲ್ಲಿ, ಅತನ್ದ್ರಿತಃ—ಬಹಳ ಎಚ್ಚರಿಕೆಯಿಂದ, ಮಮ—ನನ್ನ, ವರ್ತ್ಮ—ಮಾರ್ಗವನ್ನು, ಅನುವರ್ತನ್ತೇ—ಅನುಸರಿಸುತ್ತಾರೆ, ಮನುಷ್ಯಾಃ—ಎಲ್ಲ ಮನುಷ್ಯರು, ಪಾರ್ಥ—ಹೇ ಪೃಥಾ ಪುತ್ರನೇ, ಸರ್ವಶಃ—ಎಲ್ಲ ವಿಧದಲ್ಲಿಯೂ.

**ಏಕೆಂದರೆ, ಆಜ್ಞಾಪಿತವಾದ ಕರ್ತವ್ಯಗಳನ್ನು ಎಚ್ಚರಿಕೆಯಿಂದ ಆಚರಿಸುವುದರಲ್ಲಿ ನಾನು ಎಂದಾದರೂ ತಪ್ಪಿದರೆ, ಹೇ ಪೃಥಾ ಪುತ್ರನೇ, ಖಂಡಿತ ಎಲ್ಲ ಮಾನವರು ನನ್ನ ಮಾರ್ಗವನ್ನೇ ಅನುಸರಿಸುವರು.**

**ಭಾವಾರ್ಥ :** ಅಧ್ಯಾತ್ಮ ಜ್ಞಾನದಲ್ಲಿ ಪ್ರಗತಿಗೆ ಸಾಮಾಜಿಕ ಶಾಂತಿ ಸಮತೋಲನವನ್ನು ಕಾಯ್ದು ಕೊಳ್ಳಲು ಪ್ರತಿಯೊಬ್ಬ ನಾಗರಿಕನಿಗೂ ಸಾಂಪ್ರದಾಯಿಕ ಕುಟುಂಬ ಆಚಾರಗಳಿವೆ. ಇಂಥ ನೀತಿ ನಿಯಂತ್ರಣಗಳು ಬದ್ಧ ಆತ್ಮರಿಗಾಗಿದ್ದು, ಕೃಷ್ಣನಿಗೆ ಇಲ್ಲವಾಗಿದ್ದರೂ, ಅವನು ಧರ್ಮ ತತ್ವಗಳನ್ನು ಸಂಸ್ಥಾಪಿಸಲು ಅವತರಿಸಿದ್ದರಿಂದ, ಅವನು ಆಜ್ಞಾಪಿತ ನಿಯಮಗಳನ್ನು ಅನುಸರಿಸಿದನು. ಹಾಗಿಲ್ಲದಿದ್ದಲ್ಲಿ, ಅವನೇ ಅತ್ಯಂತ ಶ್ರೇಷ್ಠ ಅಧಿಕಾರಿಯಾದ್ದರಿಂದ, ಸಾಮಾನ್ಯ ಜನರು ಅವನನ್ನೇ ಅನುಸರಿಸುವರು. ಶ್ರೀಕೃಷ್ಣನು ಮನೆಯಲ್ಲಿಯೂ ಮತ್ತು ಮನೆಯ ಹೊರಗಡೆಯೂ ಗೃಹಸ್ಥನು ಪಾಲಿಸಬೇಕಾದ ಎಲ್ಲ ಧರ್ಮಕರ್ತವ್ಯಗಳನ್ನು ಆಚರಿಸುತ್ತಿದ್ದನು ಎಂದು ಶ್ರೀಮದ್ಭಾಗವತದಿಂದ ತಿಳಿದುಬರುವುದು.

**ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಮ್ ।**
**ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ ॥ ೨೪ ॥**

ಉತ್ಸೀದೇಯುಃ—ನಾಶಹೊಂದುತ್ತವೆ, ಇಮೇ—ಈ ಎಲ್ಲ, ಲೋಕಾಃ—ಲೋಕಗಳು, ನ—ಇಲ್ಲ, ಕುರ್ಯಾಮ್—ನಾನು ಆಚರಿಸುವುದು, ಕರ್ಮ—ವಿಧಿತ ಕರ್ತವ್ಯಗಳು, ಚೇತ್—ಆದರೆ, ಅಹಮ್—ನಾನು, ಸಂಕರಸ್ಯ—ಅನಪೇಕ್ಷಿತ ಜನಸಂಖ್ಯೆಯ, ಚ—ಮತ್ತು, ಕರ್ತಾ—ಸೃಷ್ಟಿಕರ್ತನು, ಸ್ಯಾಮ್—ಆಗುವುದು, ಉಪಹನ್ಯಾಮ್—ನಾಶಮಾಡುವುದು, ಇಮಾಃ—ಈ ಎಲ್ಲಾ, ಪ್ರಜಾಃ—ಜೀವಿಗಳು.

**ನಾನು ವಿಧಿತ ಕರ್ತವ್ಯಗಳನ್ನು ಆಚರಿಸದಿದ್ದರೆ, ಈ ಎಲ್ಲ ಲೋಕಗಳು ನಾಶ ಹೊಂದುವುವು. ಅನಪೇಕ್ಷಿತ ಜನಸಂಖ್ಯೆಯ ಸೃಷ್ಟಿಗೆ ನಾನು ಕಾರಣನಾಗುವೆನು, ಮತ್ತು ಅದರಿಂದ ಜೀವಿಗಳೆಲ್ಲರ ಶಾಂತಿಯನ್ನು ನಾನು ನಾಶಮಾಡಿದಂತಾಗುವುದು.**

**ಭಾವಾರ್ಥ :** **ವರ್ಣಸಂಕರ** ಎಂಬುದು ಸಾಮಾನ್ಯ ಸಮಾಜದ ಶಾಂತಿಯನ್ನು ಕದಡುವ ಅನಪೇಕ್ಷಿತ ಜನಸಂಖ್ಯೆ. ಈ ಸಾಮಾಜಿಕ ಕ್ಷೋಭೆಯನ್ನು ತಡೆಯಲು, ಆಜ್ಞಾಪಿತವಾದ ನಿಯಮ ನಿಯಂತ್ರಣಗಳಿವೆ. ಅವುಗಳಿಂದ ಜನಸಂಖ್ಯೆಯು ತಾನಾಗಿಯೇ ಜೀವನದಲ್ಲಿ ಆಧ್ಯಾತ್ಮಿಕ ಪ್ರಗತಿಗಾಗಿ ಶಾಂತಿಯುತವೂ ಮತ್ತುಸುವ್ಯಸ್ಥಿತವೂ ಆಗಬಲ್ಲದು. ಸಹಜವಾಗಿಯೇ ಶ್ರೀಕೃಷ್ಣನು ಅವತರಿಸಿದಾಗ, ಇಂಥ ಅತಿ ಮುಖ್ಯ ನೀತಿನಿಯಮಗಳ ಆಚಾರಗಳ ಗೌರವ ಮತ್ತು ಅವಶ್ಯಕತೆಯನ್ನು ಕಾಪಾಡಲು ಅವುಗಳನ್ನು ಕುರಿತು ಅವನು ವ್ಯವಹರಿಸುತ್ತಾನೆ. ಭಗವಂತನು ಸಕಲ ಜೀವಿಗಳ ತಂದೆ, ಮತ್ತು ಜೀವಿಗಳು ತಪ್ಪಾಗಿ ಮಾರ್ಗದರ್ಶಿತರಾದರೆ, ಪರೋಕ್ಷವಾಗಿ ಅದರ ಹೊಣೆ ಭಗವಂತನಿಗೆ ಸೇರುತ್ತದೆ. ಆದ್ದರಿಂದ, ಸಾಮಾನ್ಯವಾಗಿ ನಿಯಂತ್ರಣ ತತ್ವಗಳು ಉಪೇಕ್ಷಿತವಾದಾಗಲೆಲ್ಲ, ಭಗವಂತನು ತಾನೇ ಅವತರಿಸಿ ಸಮಾಜವನ್ನು ತಿದ್ದುತ್ತಾನೆ. ನಾವು ಭಗವಂತನನ್ನು ಅನುಸರಿಸಬೇಕಾಗಿದ್ದರೂ, ನಾವು ಅವನನ್ನು ಅನುಕರಿಸಲಾಗದು ಎಂಬುದನ್ನು ನೆನಪಿನಲ್ಲಿಡಲು ಎಚ್ಚರಿಕೆಯಿಂದ ಗಮನಿಸಬೇಕು. ಅನುಸರಿಸುವುದು ಮತ್ತು ಅನುಕರಿಸುವುದು ಒಂದೇ ಮಟ್ಟದಲ್ಲಿಲ್ಲ. ಭಗವಂತನು ತನ್ನ ಬಾಲ್ಯದಲ್ಲಿ ಗೋವರ್ಧನ ಗಿರಿಯನ್ನೆತ್ತಿದಂತೆ, ನಾವು ಭಗವಂತನನ್ನು ಅನುಕರಿಸಲು ಆಗುವುದಿಲ್ಲ. ಇದು ಯಾವ ಮಾನವನಿಗೂ ಅಸಾಧ್ಯ. ನಾವು ಅವನ ಉಪದೇಶಗಳನ್ನು ಅನು

ಸರಿಸಬೇಕು. ಆದರೆ ಯಾವ ಕಾಲದಲ್ಲಿಯೂ ನಾವು ಅವನನ್ನು ಅನುಕರಿಸಲಾಗದು. ಶ್ರೀಮದ್ಭಾಗವತವು (10.33.30,31) ಹೀಗೆ ದೃಢಪಡಿಸಿದೆ :

ನೈತತ್ಸಮಾಚರೇಜ್ಜಾತು ಮನಸಾಪಿ ಹ್ಯನೀಶ್ವರಃ।
ವಿನಶ್ಯತ್ಯಾಚರನ್ಮೌಢ್ಯಾದ್ಯಥಾರುದ್ರೋಽಬ್ಧಿಜಂ ವಿಷಮ್॥
ಈಶ್ವರಾಣಾಂ ವಚಃ ಸತ್ಯಂ ತಥೈವಾಚರಿತಂ ಕ್ವಚಿತ್।
ತೇಷಾಂ ಯತ್ಸ್ವವಚೋಯುಕ್ತಂ ಬುದ್ಧಿಮಾಂಸ್ತತ್ಸಮಾಚರೇತ್॥

"ಮನುಷ್ಯನು ಭಗವಂತನ ಮತ್ತು ಅವನ ಶಕ್ತ್ಯಾವಿಷ್ಟ ದಾಸರ ಉಪದೇಶಗಳನ್ನು ಸುಮ್ಮನೆ ಅನುಸರಿಸಬೇಕು. ಅವರ ಉಪದೇಶಗಳೆಲ್ಲವೂ ನಮಗೆ ವಿಹಿತ ಮತ್ತು ಉಪದೇಶಿಸಿದಂತೆ ಅವುಗಳನ್ನು ಬುದ್ಧಿವಂತನು ಆಚರಿಸುತ್ತಾನೆ. ಆದರೆ ಅವರ ಕಾರ್ಯಗಳ ಅನುಕರಣೆಯ ಪ್ರಯತ್ನವಾಗದಂತೆ ಒಬ್ಬನು ಎಚ್ಚರಿಕೆ ವಹಿಸಬೇಕು. ಭಗವಾನ್ ಶಿವನನ್ನು ಅನುಕರಿಸ ಹೋಗಿ ವಿಷಸಾಗರವನ್ನು ಕುಡಿಯಲು ಪ್ರಯತ್ನಿಸಕೂಡದು."

ನಾವು ಈಶ್ವರರ ಅಥವಾ ಸೂರ್ಯ ಚಂದ್ರರ ಚಲನೆಯನ್ನು ವಾಸ್ತವಿಕವಾಗಿ ನಿಯಂತ್ರಿಸಬಲ್ಲವರ ಸ್ಥಾನವನ್ನು ಹಿರಿಯದೆಂದು ಸದಾ ಗಮನಿಸಬೇಕು. ಅಂಥ ಸಾಮರ್ಥ್ಯವಿಲ್ಲದೆ, ಅತ್ಯಂತ ಸಮರ್ಥರಾದ ಈಶ್ವರರನ್ನು ಅನುಕರಿಸಲಾಗದು. ಭಗವಾನ್ ಶಿವನು ಒಂದು ಸಾಗರವನ್ನೇ ನುಂಗುವ ಮಟ್ಟಿಗೆ ವಿಷವನ್ನು ಕುಡಿದನು. ಆದರೆ ಸಾಮಾನ್ಯ ಮನುಷ್ಯನು ಅಂಥ ವಿಷದ ಒಂದು ಹನಿಯನ್ನು ಕುಡಿಯಲು ಯತ್ನಿಸಿದರೂ ಅವನು ಸಾಯುತ್ತಾನೆ. ಗಾಂಜಾ ಮತ್ತು ಇತರ ಮಾದಕ ದ್ರವ್ಯಗಳನ್ನು ಸೇವಿಸಲು ಅಪೇಕ್ಷಿಸುವ ಭಗವಾನ್ ಶಿವನ ಅನೇಕ ಮಿಥ್ಯಾ ಭಕ್ತರಿದ್ದಾರೆ. ಭಗವಾನ್ ಶಿವನ ಕಾರ್ಯಗಳನ್ನು ಹೀಗೆ ಅನುಕರಿಸುವುದರಿಂದ ಅವರು ಮರಣವನ್ನು ಹತ್ತಿರಕ್ಕೆ ಕರೆಯುತ್ತಿರುವರೆಂಬುದನ್ನು ಮರೆತಿರುತ್ತಾರೆ. ಅದೇ ಪ್ರಕಾರ, ಭಗವಾನ್ ಕೃಷ್ಣನ ಕೆಲವು ಮಿಥ್ಯಾಭಕ್ತರು,ಗೋವರ್ಧನ ಗಿರಿಯನ್ನೆತ್ತಲು ತಾವು ಅಸಮರ್ಥರೆಂಬುದನ್ನು ಮರೆತು, ಭಗವಂತನ ರಾಸ ಲೀಲೆ ಅಥವಾ ಪ್ರೇಮ ನೃತ್ಯವನ್ನು ಅನುಕರಿಸಬಯಸುತ್ತಾರೆ. ಆದ್ದರಿಂದ ಬಲಿಷ್ಠರನ್ನು ಅನುಕರಿಸಲು ಒಬ್ಬನು ಯತ್ನಿಸದೆ, ಅವರ ಉಪದೇಶಗಳನ್ನು ಸುಮ್ಮನೆ ಅನುಸರಿಸುವುದು ಅತ್ಯುತ್ತಮ; ಅಥವಾ ಅರ್ಹತೆಯಿಲ್ಲದೆ ಅಂಥವರ ಸ್ಥಾನಗಳನ್ನು ಹೊಂದಲು ಯತ್ನಿಸಕೂಡದು. ಪರಮ ದೇವೋತ್ತಮನ ಶಕ್ತಿಯಿಲ್ಲದ ಅನೇಕ ದೇವರ "ಅವತಾರಗಳು" ಇವೆ.

**ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವನ್ತಿ ಭಾರತ ।**
**ಕುರ್ಯಾದ್ ವಿದ್ವಾಂಸ್ತಥಾಸಕ್ತಶ್ ಚಿಕೀರ್ಷುರ್ಲೋಕಸಂಗ್ರಹಮ್ ॥೨೫॥**

ಸಕ್ತಾಃ—ಆಸಕ್ತರಾಗಿ, ಕರ್ಮಣಿ—ವಿಧಿತ ಕರ್ತವ್ಯಗಳಲ್ಲಿ, ಅವಿದ್ವಾಂಸಃ—ಅಜ್ಞಾನಿಯು, ಯಥಾ—ಅಷ್ಟಾದರೂ, ಕುರ್ವನ್ತಿ—ಅವರು ಮಾಡುತ್ತಾರೆ, ಭಾರತ—ಹೇ ಭರತ ವಂಶಜನೇ, ಕುರ್ಯಾತ್—ಮಾಡಲೇಬೇಕು, ವಿದ್ವಾನ್—ವಿದ್ವಾಂಸರು, ತಥಾ—ಹೀಗೆ, ಅಸಕ್ತಃ—ಆಸಕ್ತಿಯಿಲ್ಲದೆ, ಚಿಕೀರ್ಷುಃ—ಮುನ್ನಡೆಸಲು ಆಶಿಸಿ, ಲೋಕ ಸಂಗ್ರಹಮ್—ಜನಸಾಮಾನ್ಯರನ್ನು.

**ಅಜ್ಞಾನಿಗಳು ಕರ್ಮಫಲಗಳಿಗೆ ಅಕ್ಕರೆಯಿಂದ ತಮ್ಮ ಕರ್ತವ್ಯಗಳನ್ನು ಆಚರಿಸು ವಂತೆ, ಜನರನ್ನು ಸರಿಯಾದ ಮಾರ್ಗದಲ್ಲಿ ಮುನ್ನಡೆಸಲು, ವಿದ್ವಾಂಸರು, ಅಕ್ಕರೆ ಯಿಲ್ಲದೆ, ಅದೇ ರೀತಿಯಲ್ಲಿ ಕಾರ್ಯವೆಸಗಬಹುದು.**

**ಭಾವಾರ್ಥ :** ಕೃಷ್ಣ ಪ್ರಾಜ್ಞಿಯ ಮತ್ತು ಕೃಷ್ಣಪ್ರಾಜ್ಞಿಯಲ್ಲದವರನ್ನು ಅವರ ಭಿನ್ನ ಇಚ್ಛೆಗಳಿಂದ ವ್ಯತ್ಯಾಸಿಸಿದೆ. ಕೃಷ್ಣಪ್ರಾಜ್ಞಿಯು ಕೃಷ್ಣ ಪ್ರಜ್ಞೆಯ ಬೆಳವಣಿಗೆಗೆ ಸಹಾಯಕ ವಲ್ಲದ ಯಾವುದನ್ನೂ ಮಾಡುವುದಿಲ್ಲ. ಅವನು ಭೌತಿಕ ಕಾರ್ಯಕಲಾಪಗಳಿಗೆ ಅತಿ ಆಸಕ್ತನಾದ ಅಜ್ಞಾನಿಯಂತೆ ಕೂಡ ವರ್ತಿಸಬಹುದು, ಆದರೆ ಅವರಲ್ಲಿ ಒಬ್ಬನು ತನ್ನ ಇಂದ್ರಿಯ ತೋಷಣೆಗಾಗಿ 'ಅಂಥ ಕಾರ್ಯಕಲಾಪಗಳಲ್ಲಿ ತೊಡಗಿರುತ್ತಾನೆ, ಆದರೆ ಮತ್ತೊಬ್ಬನು ಕೃಷ್ಣನ ತೃಪ್ತಿಗಾಗಿ ಹಾಗೆ ನಿರತನಾಗಿರುತ್ತಾನೆ. ಆದ್ದರಿಂದ ಕೃಷ್ಣ ಪ್ರಾಜ್ಞಿಯು, ಜನರು ಹೇಗೆ ಕರ್ಮ ಮಾಡಬೇಕು ಮತ್ತು ಕರ್ಮಫಲಗಳನ್ನು ಕೃಷ್ಣ ಪ್ರಜ್ಞೆಯ ಉದ್ದೇಶಕ್ಕೆ ಹೇಗೆ ತೊಡಗಿಸಬೇಕು ಎಂಬುದನ್ನು ತೋರಿಸಿಕೊಡಬೇಕಾಗಿದೆ.

**ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಮ್ ।**
**ಜೋಷಯೇತ್ಸರ್ವಕರ್ಮಾಣಿ ವಿದ್ವಾನ್ ಯುಕ್ತಃ ಸಮಾಚರನ್ ॥ ೨೬ ॥**

ನ—ಇಲ್ಲ, ಬುದ್ಧಿಭೇದಮ್—ಬುದ್ಧಿ ಭಂಗವನ್ನು, ಜನಯೇತ್—ಅವನು ಮಾಡ ಕೂಡದು, ಅಜ್ಞಾನಾಮ್—ಮೂರ್ಖರ, ಕರ್ಮ—ಸಂಗಿನಾಮ್—ಕಾಮ್ಯಕರ್ಮಾಸಕ್ತರ, ಜೋಷಯೇತ್—ಅವನು ಕೂಡಿಸಬೇಕು, ಸರ್ವ—ಎಲ್ಲ, ಕರ್ಮಾಣಿ—ಕಾರ್ಯ, ವಿದ್ವಾನ್—ವಿದ್ವಾಂಸನು, ಯುಕ್ತಃ—ನಿರತನಾಗಿ, ಸಮಾಚರನ್—ಆಚರಿಸುತ್ತಾ.

**ವಿಧಿತ ಕರ್ತವ್ಯಗಳ ಫಲಪ್ರದ ಫಲಿತಾಂಶಗಳಿಗೆ ಅಕ್ಕರೆಯುಳ್ಳ ಅಜ್ಞಾನಿಗಳ ಮನಸ್ಸುಗಳನ್ನು ಭಂಗಪಡಿಸದ ಹಾಗೆ, ವಿದ್ವಾಂಸನು ಅವರು ಕರ್ಮ ನಿಲ್ಲಿಸಲು ಪ್ರೇರೇಪಿಸಕೂಡದು. ಬದಲಾಗಿ, ಭಕ್ತಿಭಾವದಲ್ಲಿ ಕಾರ್ಯಮಾಡುತ್ತಾ, ಅವನು ಅವರನ್ನು ಎಲ್ಲ ವಿಧವಾದ ಚಟುವಟಿಕೆಗಳಲ್ಲಿ (ಕೃಷ್ಣ ಪ್ರಜ್ಞೆಯು ಕ್ರಮೇಣ ವರ್ಧಿಸಲು) ನಿರತನಾಗಿಸಬೇಕು.**

**ಭಾವಾರ್ಥ :** **ವೇದೈಶ್ಚ ಸರ್ವೈರಹಮೇವ ವೇದ್ಯಃ.** ಇದೇ ಎಲ್ಲ ವೈದಿಕ ಆಚರಣೆಗಳ ಕೊನೆ. ಎಲ್ಲ ಕರ್ಮಾಚರಣೆಗಳು, ಎಲ್ಲ ಯಜ್ಞಾಚರಣೆಗಳು ಮತ್ತು ಎಲ್ಲ ಭೌತಿಕ ಕಾರ್ಯ ಕಲಾಪಗಳ ನಿರ್ದೇಶನಗಳೂ ಸೇರಿದಂತೆ, ವೇದಗಳಲ್ಲಿ ಪ್ರೋಕ್ತವಾಗಿರುವ ಪ್ರತಿಯೊಂದೂ, ಜೀವನದ ಪರಮ ಧ್ಯೇಯನಾದ ಕೃಷ್ಣನನ್ನು ಅರಿತುಕೊಳ್ಳಲು ಉದ್ದೇಶಿತವಾಗಿವೆ. ಆದರೆ ಬದ್ಧ ಆತ್ಮರು ಇಂದ್ರಿಯ ತೋಷಣೆಗಿಂತ ಹೆಚ್ಚಿನದೇನನ್ನೂ ತಿಳಿದಿರುವುದಿಲ್ಲವಾದ್ದರಿಂದ, ಅವರು ವೇದಗಳನ್ನೂ ಆ ಉದ್ದೇಶದಿಂದಲೇ ಅಧ್ಯಯನ ಮಾಡುತ್ತಾರೆ. ಆದರೆ ವೈದಿಕ ಆಚರಣೆಗಳಿಂದ ನಿಯಂತ್ರಿತವಾದ ಕಾಮ್ಯ ಕರ್ಮಗಳ ಮತ್ತು ಇಂದ್ರಿಯ ತೋಷಣೆಯ ಮೂಲಕ ಒಬ್ಬನು ಕ್ರಮೇಣ ಕೃಷ್ಣ ಪ್ರಜ್ಞೆಗೆ ಏರಿಸಲ್ಪಡುತ್ತಾನೆ. ಆದ್ದರಿಂದ ಕೃಷ್ಣ ಪ್ರಜ್ಞೆಯಲ್ಲಿನ ಸಾಕ್ಷಾತ್ಕಾರಿಯು ಇತರರನ್ನು ಅವರ ಚಟುವಟಿಕೆಗಳಲ್ಲಿ ಅಥವಾ ಅರಿವಿನಲ್ಲಿ ಕ್ಷೋಭೆಗೊಳಿಸಕೂಡದು. ಆದರೆ ಕೃಷ್ಣನ ಸೇವೆಗೆ ಎಲ್ಲ ಕರ್ಮಫಲಗಳನ್ನು ಹೇಗೆ

ಸಮರ್ಪಿಸಬಹುದು ಎಂಬುದನ್ನು ಸ್ವಯಂ ಆಚರಿಸಿ ತೋರಿಸಬೇಕು. ಇಂದ್ರಿಯ ತೋಷಣೆಗಾಗಿ ಕೆಲಸ ಮಾಡುತ್ತಿರುವ ಅಜ್ಞಾನಿಯು ಹೇಗೆ ಕಾರ್ಯಮಾಡಬೇಕು, ಮತ್ತು ಹೇಗೆ ವರ್ತಿಸಬೇಕು ಎಂಬುದನ್ನು ಕಲಿಯುವ ಹಾಗೆ, ವಿದ್ವಾಂಸನಾದ ಕೃಷ್ಣಪ್ರಾಜ್ಞಿಯು ಕಾರ್ಯ ಮಾಡಬಹುದು. ಅಜ್ಞಾನಿಯನ್ನು ಅವನ ಕಾರ್ಯಕಲಾಪಗಳಲ್ಲಿ ಕ್ಷೋಭೆಗೊಳಿಸ ಬಾರದೆಂಬುದಿದ್ದರೂ, ಸ್ವಲ್ಪ ಮಟ್ಟಿಗೆ ಕೃಷ್ಣ ಪ್ರಜ್ಞೆಯನ್ನು ಬೆಳಸಿಕೊಂಡವನನ್ನು, ಇತರ ವೈದಿಕ ನಿಯಮಗಳಿಗೆ ಕಾಯದೇ, ನೇರವಾಗಿ ಭಗವಂತನ ಸೇವೆಯಲ್ಲಿ ತೊಡಗಿಸಬಹುದು. ಇಂಥ ಭಾಗ್ಯಶಾಲಿಯು ವೈದಿಕ ವಿಧಿಗಳನ್ನು ಅನುಸರಿಸಬೇಕಾಗಿಲ್ಲ. ಏಕೆಂದರೆ, ಅನ್ಯಥಾ ವಿಧಿತ ಕರ್ಮಾಚರಣೆಯಿಂದ ಪಡೆಯಬಹುದಾದ ಎಲ್ಲ ಫಲಿತಾಂಶಗಳನ್ನು, ನೇರ ಕೃಷ್ಣ ಪ್ರಜ್ಞೆಯಿಂದಲೇ ಒಬ್ಬನು ಪಡೆಯಬಹುದು.

**ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।**
**ಅಹಂಕಾರವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ॥ ೨೭ ॥**

ಪ್ರಕೃತೇಃ—ಭೌತಿಕ ಪ್ರಕೃತಿಯ, ಕ್ರಿಯಮಾಣಾನಿ—ಮಾಡಲ್ಪಡುತ್ತಿರುವ, ಗುಣೈಃ—ಗುಣಗಳಿಂದ, ಕರ್ಮಾಣಿ—ಚಟುವಟಿಕೆಗಳು, ಸರ್ವಶಃ—ಎಲ್ಲ ಬಗೆಯ, ಅಹಂಕಾರ ವಿಮೂಢ—ಮಿಥ್ಯಾ ಅಹಂಕಾರದಿಂದ ದಿಗ್ಭ್ರಮೆಗೊಂಡು, ಆತ್ಮಾ—ಚೇತನಾತ್ಮನು, ಕರ್ತಾ—ಕರ್ತನು, ಅಹಮ್—ನಾನು, ಇತಿ—ಹೀಗೆ, ಮನ್ಯತೇ—ತಿಳಿಯುತ್ತಾನೆ.

**ಮಿಥ್ಯಾಹಂಕಾರದ ಪ್ರಭಾವದಿಂದ ದಿಗ್ಭ್ರಮೆಗೊಂಡು ಚೇತನಾತ್ಮನು, ವಾಸ್ತವಿಕವಾಗಿ ಭೌತಿಕ ಪ್ರಕೃತಿಯ ತ್ರಿಗುಣಗಳಿಂದ ಪೂರೈಸಲ್ಪಡುವ ಕ್ರಿಯೆಗಳಿಗೆ, ಕರ್ತನು ತಾನೇ ಎಂದು ಭಾವಿಸುತ್ತಾನೆ.**

**ಭಾವಾರ್ಥ :** ಕೃಷ್ಣ ಪ್ರಾಜ್ಞಿ ಮತ್ತು ಭೌತಿಕ ಪ್ರಾಜ್ಞಿ, ಇಬ್ಬರೂ ಒಂದೇ ಮಟ್ಟದಲ್ಲಿ ಕೆಲಸ ಮಾಡುತ್ತಿದ್ದು, ಒಂದೇ ವೇದಿಕೆಯ ಮೇಲೆ ಕರ್ಮ ಮಾಡುತ್ತಿರುವುದಾಗಿ ಕಂಡು ಬಂದರೂ, ಅವರವರ ಸ್ಥಾನಗಳ ನಡುವೆ ವ್ಯತ್ಯಾಸದ ಬಹು ದೊಡ್ಡ ಕಂದರವಿದೆ. ಭೌತಿಕ ಪ್ರಾಜ್ಞಿಯು ತಾನೇಎಲ್ಲದರ ಕರ್ತನೆಂದು ಮಿಥ್ಯಾಹಂಕಾರದಿಂದ ಮನಗಾಣಿಸಲ್ಪಟ್ಟಿರುತ್ತಾನೆ. ಪರಮ ಪ್ರಭುವಿನ ಅಧೀಕ್ಷಣೆಯಲ್ಲಿ ಕೆಲಸ ಮಾಡುತ್ತಿರುವ ಭೌತಿಕ ಪ್ರಕೃತಿಯಿಂದ, ಈ ದೇಹದ ಯಾಂತ್ರಿಕತೆಯು ಉತ್ಪನ್ನವಾಗಿದೆ ಎಂಬುದನ್ನು ಅವನು ತಿಳಿದಿರುವುದಿಲ್ಲ. ಐಹಿಕ ಭೋಗಾಸಕ್ತನಾದ ವ್ಯಕ್ತಿಗೆ, ಆತ್ಯಂತಿಕವಾಗಿ ತಾನು ಕೃಷ್ಣನ ಅಧೀನದಲ್ಲಿ ಇರುವೆನೆಂಬ ಜ್ಞಾನವಿಲ್ಲ. ಮಿಥ್ಯಾಹಂಕಾರಿಯು ಸ್ವತಂತ್ರವಾಗಿ ಎಲ್ಲವನ್ನು ಮಾಡಿದ್ದಕ್ಕೆ ಕೀರ್ತಿಯನ್ನು ತೆಗೆದುಕೊಳ್ಳುತ್ತಾನೆ, ಇದೇ ಅವನ ಅಜ್ಞಾನದ ಲಕ್ಷಣ. ಈ ಸ್ಥೂಲ ಮತ್ತು ಸೂಕ್ಷ್ಮ ದೇಹವು ಪರಮ ದೇವೋತ್ತಮ ಪುರುಷನ ಆಜ್ಞೆಯ ಮೇರೆಗೆ ಭೌತಿಕ ಪ್ರಕೃತಿಯ ಸೃಷ್ಟಿ ಎಂಬುದಾಗಿಯೂ, ಹಾಗಿರಲು ಅವನ ದೈಹಿಕ ಮತ್ತು ಮಾನಸಿಕ ಚಟುವಟಿಕೆಗಳನ್ನು ಕೃಷ್ಣ ಪ್ರಜ್ಞೆಯಲ್ಲಿ ಕೃಷ್ಣ ಸೇವೆಗೆ ತೊಡಗಿಸಬೇಕು ಎಂಬುದನ್ನೂ ಅವನು ಅರಿತಿರುವುದಿಲ್ಲ. ಪರಮ ದೇವೋತ್ತಮ ಪುರುಷನು ಹೃಷಿಕೇಶ ಅಥವಾ ಭೌತಿಕ ದೇಹದ ಇಂದ್ರಿಯಗಳ ಒಡೆಯ

ನೆನಿಸಿರುವವನು ಎಂಬುದನ್ನು ಅಜ್ಞಾನಿಯು ಮರೆತಿರುತ್ತಾನೆ. ಏಕೆಂದರೆ ಇಂದ್ರಿಯ ತೋಷಣೆಯಲ್ಲಿ ಇಂದ್ರಿಯಗಳ ದೀರ್ಘ ಕಾಲದ ದುರುಪಯೋಗದ ಕಾರಣ, ಅವನು ಮಿಥ್ಯಾಹಂಕಾರದಿಂದ ವಾಸ್ತವಿಕವಾಗಿ ದಿಗ್ಭ್ರಮೆಗೊಂಡಿರುತ್ತಾನೆ. ಅದು ಕೃಷ್ಣನೊಂದಿಗೆ ಅವನ ನಿತ್ಯ ಸಂಬಂಧವನ್ನು ಮರೆಯುವಂತೆ ಮಾಡುತ್ತದೆ.

**ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ ।**
**ಗುಣಾ ಗುಣೇಷು ವರ್ತನ್ತ ಇತಿ ಮತ್ವಾ ನ ಸಜ್ಜತೇ ॥೨೮॥**

ತತ್ತ್ವವಿತ್—ಪರಮ ಸತ್ಯವನ್ನು ತಿಳಿದವನು, ತು—ಆದರೆ, ಮಹಾಬಾಹೋ—ಹೇ ಮಹಾಬಾಹುವೇ, ಗುಣಕರ್ಮ—ಭೌತಿಕ ಪ್ರಭಾವದಲ್ಲಿನ ಕರ್ಮಗಳ, ವಿಭಾಗಯೋಃ—ವ್ಯತ್ಯಾಸಗಳು, ಗುಣಾಃ—ಇಂದ್ರಿಯಗಳು, ಗುಣೇಷು—ಇಂದ್ರಿಯ ತೋಷಣೆಯಲ್ಲಿ, ವರ್ತನ್ತೇ—ತೊಡಗಿಸಲ್ಪಡುತ್ತವೆ, ಇತಿ—ಹೀಗೆ, ಮತ್ವಾ—ತಿಳಿದು, ನ—ಇಲ್ಲ, ಸಜ್ಜತೇ—ಅನುರಕ್ತನಾಗುವುದಿಲ್ಲ.

**ಪರಮ ಸತ್ಯದ ಜ್ಞಾನವುಳ್ಳವನು, ಹೇ ಮಹಾಬಾಹುವೇ, ಭಕ್ತಿಯುತವಾದ ಕರ್ಮ ಮತ್ತು ಕಾಮ್ಯ ಕರ್ಮಗಳ ವ್ಯತ್ಯಾಸವನ್ನು ಚೆನ್ನಾಗಿ ತಿಳಿದವನಾಗಿದ್ದು, ಇಂದ್ರಿಯಗಳಲ್ಲಿ ಮತ್ತು ಇಂದ್ರಿಯ ತೋಷಣೆಯಲ್ಲಿ ತೊಡಗುವುದಿಲ್ಲ.**

**ಭಾವಾರ್ಥ :** ಪರಮ ಸತ್ಯದ ಜ್ಞಾನಿಯು ಈ ಭೌತಿಕ ಸಂಪರ್ಕದಲ್ಲಿ ತನ್ನ ತೊಡಕಿನ ಸ್ಥಿತಿಯನ್ನು ಮನಗಂಡಿರುತ್ತಾನೆ. ತಾನು ಪರಮ ದೇವೋತ್ತಮ ಪುರುಷನಾದ ಕೃಷ್ಣನ ವಿಭಿನ್ನಾಂಶನೆಂದು, ತನ್ನ ಸ್ಥಾನವು ಭೌತಿಕ ಸೃಷ್ಟಿಯಲ್ಲಿ ಇರುವುದಿಲ್ಲ ಎಂದು ತಿಳಿದಿರುತ್ತಾನೆ. ತಾನು ನಿತ್ಯಜ್ಞಾನಾನಂದನಾದ ಪರಮನ ವಿಭಿನ್ನಾಂಶನೆಂಬ ತನ್ನ ನಿಜ ವ್ಯಕ್ತಿತ್ವವನ್ನು, ಮತ್ತು ಹೇಗೋ ಏನೋ ಜೀವನದ ಭೌತಿಕ ಕಲ್ಪನೆಯಲ್ಲಿ ತಾನು ಸಿಲುಕಿಕೊಂಡಿರುವನೆಂದು ತಿಳಿದಿರುತ್ತಾನೆ. ತನ್ನ ಶುದ್ಧ ಅಸ್ತಿತ್ವದ ಸ್ಥಿತಿಯಲ್ಲಿ, ತನ್ನ ಕ್ರಿಯೆಗಳನ್ನೆಲ್ಲ ಪರಮ ದೇವೋತ್ತಮ ಪುರುಷನಾದ ಕೃಷ್ಣನ ಭಕ್ತಿಯುತ ಸೇವೆಯಲ್ಲಿ ಹೊಂದಿಸಿಕೊಳಲು ಅವನು ಉದ್ದೇಶಿತನು. ಆದ್ದರಿಂದ, ಅವನು ಕೃಷ್ಣ ಪ್ರಜ್ಞೆಯ ಕಾರ್ಯಕಲಾಪಗಳಲ್ಲಿ ತೊಡಗುತ್ತಾನೆ ಮತ್ತು ಅಶಾಶ್ವತ ಮತ್ತು ಸಾಂದರ್ಭಿಕವೂ ಆಗಿರುವ ಭೌತಿಕ ಇಂದ್ರಿಯಗಳ ಕಾರ್ಯ ಕಲಾಪಗಳಲ್ಲಿ ಸಹಜವಾಗಿಯೇ ಅಕ್ಕರೆ ಇಲ್ಲದವನಾಗುತ್ತಾನೆ. ತನ್ನ ಜೀವನದ ಭೌತಿಕ ಸ್ಥಿತಿಯು ಭಗವಂತನ ಪರಮ ನಿಯಂತ್ರಣಕ್ಕೆ ಅಧೀನ ಎಂದು ತಿಳಿದಿರುತ್ತಾನೆ; ಅದರ ಪರಿಣಾಮವಾಗಿ, ಎಲ್ಲ ಬಗೆಯ ಭೌತಿಕ ಕರ್ಮಫಲಗಳಿಂದ ಅವನು ಕ್ಷೋಭೆಗೊಳ್ಳುವುದಿಲ್ಲ, ಮತ್ತು ಅವುಗಳನ್ನು ಭಗವದನುಗ್ರಹವೆಂದು ಭಾವಿಸುತ್ತಾನೆ. ಶ್ರೀಮದ್ಭಾಗವತದ ಪ್ರಕಾರ, ಪರಮ ಸತ್ಯವನ್ನು ಬ್ರಹ್ಮನ್, ಪರಮಾತ್ಮ ಮತ್ತು ಪರಮ ದೇವೋತ್ತಮ ಪುರುಷ ಎಂಬ ಈ ತ್ರಿವಿಧ ಭಿನ್ನ ರೂಪಲಕ್ಷಣಗಳಲ್ಲಿ ತಿಳಿದವನು **ತತ್ತ್ವವಿತ್** ಎನಿಸಿಕೊಳ್ಳುತ್ತಾನೆ. ಏಕೆಂದರೆ ಅವನು ಪರಮನೊಂದಿಗೆ ತನ್ನ ನಿಜ ಸಂಬಂಧವನ್ನೂ ಅರಿತಿರುತ್ತಾನೆ.

**ಪ್ರಕೃತೇರ್ಗುಣಸಮ್ಮೂಢಾಃ ಸಜ್ಜನ್ತೇ ಗುಣಕರ್ಮಸು ।**
**ತಾನಕೃತ್ಸ್ನವಿದೋ ಮನ್ದಾನ್ ಕೃತ್ಸ್ನವಿನ್ನ ವಿಚಾಲಯೇತ್ ॥ ೨೯ ॥**

ಪ್ರಕೃತೇಃ—ಭೌತಿಕ ಪ್ರಕೃತಿಯ, ಗುಣ—ಗುಣಗಳಿಂದ, [redacted] ಗುರುತಿಸುವಿಕೆಯಿಂದ ಮೂಢರಾಗಿ, ಸಜ್ಜನ್ತೇ—ಅವರು ನಿರತರಾಗುತ್ತಾರೆ, ಗುಣಕರ್ಮಸು—ಭೌತಿಕ ಚಟುವಟಿಕೆಗಳಲ್ಲಿ, ತಾನ್—ಅವುಗಳು, ಅಕೃತ್ಸ್ನವಿದಃ—ಅಲ್ಪಜ್ಞಾನಿಗಳು, **ಮನ್ದಾನ್**—ಆತ್ಮ ಸಾಕ್ಷಾತ್ಕಾರವನ್ನು ಅರಿಯಲು ಸೋಮಾರಿಗಳು, ಕೃತ್ಸ್ನವಿತ್—ನಿಜ ಜ್ಞಾನದಲ್ಲಿರುವವನು, ನ—ಇಲ್ಲ, ವಿಚಾಲಯೇತ್—ಉದ್ವಿಗ್ನಗೊಳಿಸಲು ಪ್ರಯತ್ನಿಸುವುದು.

**ಭೌತಿಕ ಪ್ರಕೃತಿಯ ಗುಣಗಳಿಂದ ದಿಗ್ಭ್ರಾಂತರಾಗಿ, ಅಜ್ಞಾನಿಗಳು ಪೂರ್ಣವಾಗಿ ಭೌತಿಕ ಚಟುವಟಿಕೆಗಳಲ್ಲಿ ನಿರತರಾಗುವರು ಮತ್ತು ಆಸಕ್ತರಾಗುವರು. ಆದರೆ, ಆಚರಿಸುವವರ ಜ್ಞಾನಾಭಾವದ ಕಾರಣ ಈ ಕರ್ತವ್ಯಗಳು ಕನಿಷ್ಠವಾಗಿದ್ದರೂ, ಜ್ಞಾನಿಯು ಅವರನ್ನು ಅಸ್ಥಿರಗೊಳಿಸಬಾರದು.**

**ಭಾವಾರ್ಥ :** ಅಜ್ಞಾನಿಗಳು ತಪ್ಪಾಗಿ ತಮ್ಮನ್ನು ಸ್ಥೂಲ ಭೌತಿಕ ಪ್ರಜ್ಞೆಯೊಂದಿಗೆ ಗುರುತಿಸಿಕೊಳ್ಳುತ್ತಾರೆ, ಮತ್ತು ಭೌತಿಕ ಉಪಾಧಿಮಯರಾಗಿರುತ್ತಾರೆ. ಈ ದೇಹವು ಭೌತಿಕ ಪ್ರಕೃತಿಯ ಕೊಡುಗೆ, ಮತ್ತು ದೈಹಿಕ ಪ್ರಜ್ಞೆಯಲ್ಲಿ ಅತ್ಯಾಸಕ್ತನು **ಮಂದ** ಅಥವಾ ಆತ್ಮನ ಅರಿವಿಲ್ಲದ ಸೋಮಾರಿ ಎನಿಸಿಕೊಳ್ಳುತ್ತಾನೆ. ಅಜ್ಞಾನಿಗಳು ತಮ್ಮ ದೇಹವನ್ನು ಆತ್ಮವೆಂದು ಭಾವಿಸುತ್ತಾರೆ ; ಇತರರೊಡನೆ ತಮ್ಮ ದೈಹಿಕ ಸಂಬಂಧಗಳನ್ನು ಬಂಧುತ್ವ ಎಂದು ಸ್ವೀಕರಿಸುತ್ತಾರೆ, ಯಾವ ಭೂಮಿಯಲ್ಲಿ ದೇಹ ಲಭಿಸಿದೆಯೋ ಅದು ಅವರಿಗೆ ಪೂಜ್ಯವಸ್ತು, ಮತ್ತು ಧಾರ್ಮಿಕ ಸಂಸ್ಕಾರಗಳ ಔಪಚಾರಿಕಗಳೇ ಅಂತಿಮವೆಂದು ಭಾವಿಸುತ್ತಾರೆ. ಇಂಥ ಭೌತಿಕ ಉಪಾಧಿಯುಕ್ತರಿಗೆ ಸಾಮಾಜಿಕ ಕಾರ್ಯ, ರಾಷ್ಟ್ರೀಯತೆ ಮತ್ತು ಪರಹಿತ ಕಾರ್ಯಗಳು ಕೆಲವು ಚಟುವಟಿಕೆಗಳು. ಇಂಥ ಉಪಾಧಿಗಳ ಪ್ರಭಾವದಲ್ಲಿ, ಅವರು ಭೌತಿಕ ಜಗತ್ತಿನಲ್ಲಿ ಸದಾ ಪ್ರವೃತ್ತರು. ಅವರಿಗೆ ಅಧ್ಯಾತ್ಮ ಸಾಕ್ಷಾತ್ಕಾರವು ಕೇವಲ ಒಂದು ಕಟ್ಟು ಕಥೆ, ಆದ್ದರಿಂದ ಅವರು ಅದರಲ್ಲಿ ಆಸಕ್ತರಲ್ಲ. ಹೀಗಾಗಿ, ಅಧ್ಯಾತ್ಮ ಜೀವನದಲ್ಲಿ ಜ್ಞಾನೋದಿತರು ಭೌತಿಕವಾಗಿ ಆಸಕ್ತರಾದ ಅಂಥ ಜನರನ್ನು ಕ್ಷೋಭೆಗೊಳಿಸಲು ಯತ್ನಿಸಕೂಡದು. ತಮ್ಮ ಸ್ವಂತ ಆಧ್ಯಾತ್ಮಿಕ ಚಟುವಟಿಕೆಗಳಲ್ಲಿ ಪ್ರಶಾಂತವಾಗಿ ತೊಡಗಿರುವುದೇ ಲೇಸು. ಇಂಥ ದಿಗ್ಭ್ರಾಂತರು ಜೀವನದ ಪ್ರಾಥಮಿಕ ನೈತಿಕ ತತ್ವಗಳಾದ ಅಹಿಂಸೆ, ಮತ್ತು ಅಂಥ ಭೌತಿಕ ಕಲ್ಯಾಣ ಕಾರ್ಯಗಳಲ್ಲಿ ತೊಡಗಿರಬಹುದು.

ಅಜ್ಞಾನಿಗಳು ಕೃಷ್ಣಪ್ರಜ್ಞಾ ಚಟುವಟಿಕೆಗಳನ್ನು ಮೆಚ್ಚಲಾರರು, ಆದ್ದರಿಂದ ಅವರನ್ನು ಕ್ಷೋಭೆಗೊಳಿಸದೆ, ಅಮೂಲ್ಯವಾದ ಕಾಲವನ್ನು ಹಾಳುಮಾಡಕೂಡದೆಂದು ಶ್ರೀಕೃಷ್ಣನು ಬೋಧಿಸಿದ್ದಾನೆ. ಆದರೆ ಭಗವದ್ಭಕ್ತರು ಭಗವಂತನ ಉದ್ದೇಶವನ್ನು ಅರಿತುಕೊಂಡಿರುವುದರಿಂದ, ಭಗವಂತನಿಗಿಂತಲೂ ಹೆಚ್ಚು ದಯಾವಂತರು. ಪರಿಣಾಮವಾಗಿ, ಮಾನವನಿಗೆ ಅತ್ಯಗತ್ಯವಾದ ಕೃಷ್ಣಪ್ರಜ್ಞಾ ಕಾರ್ಯಗಳಲ್ಲಿ ತೊಡಗಿಸಲು ಅವರು ಅಜ್ಞಾನಿಗಳನ್ನು ಸಮೀಪಿಸುವರು ಮತ್ತು ಇತರ ಎಲ್ಲ ಅಪಾಯಗಳನ್ನು ಕೈಗೊಳ್ಳುವರು.

**ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮ ಚೇತಸಾ ।**
**ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥ ೩೦ ॥**

ಮಯಿ—ನನಗೆ, ಸರ್ವಾಣಿ—ಎಲ್ಲ ಬಗೆಯ, ಕರ್ಮಾಣಿ—ಚಟುವಟಿಕೆಗಳು, ಸಂನ್ಯಸ್ಯ—ಸಂಪೂರ್ಣವಾಗಿ ತ್ಯಜಿಸುವುದು, ಅಧ್ಯಾತ್ಮ—ಆತ್ಮನ ಪೂರ್ಣಜ್ಞಾನದೊಡನೆ, ಚೇತಸಾ—ಪ್ರಜ್ಞೆಯಿಂದ, ನಿರಾಶೀಃ—ಲಾಭದ ಇಚ್ಛೆಯಿಲ್ಲದೆ, ನಿರ್ಮಮಃ—ಮಮಕಾರ ವಿಲ್ಲದೆ, ಭೂತ್ವಾ—ಹಾಗೆ ಆಗಿ, ಯುಧ್ಯಸ್ವ—ಯುದ್ಧಮಾಡು, ವಿಗತಜ್ವರಃ—ನಿರುತ್ಸಾಹಿ ಯಾಗದೆ.

**ಆದ್ದರಿಂದ, ಹೇ ಅರ್ಜುನ, ನಿನ್ನ ಕರ್ಮಗಳನ್ನೆಲ್ಲ ನನಗೆ ಸಮರ್ಪಿಸಿ, ನನ್ನ ಪೂರ್ಣ ಜ್ಞಾನದೊಡನೆ, ಲಾಭೇಚ್ಛೆಯಿಲ್ಲದೆ, ಸ್ವಾಮಿತ್ವ ಬಯಸದೆ, ಮತ್ತು ನಿರುತ್ಸಾಹದಿಂದ ಮುಕ್ತನಾಗಿ, ಯುದ್ಧಮಾಡು.**

**ಭಾವಾರ್ಥ :** ಈ ಶ್ಲೋಕವು ಭಗವದ್ಗೀತೆಯ ಉದ್ದೇಶವನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಸೈನ್ಯದ ಶಿಸ್ತಿನಲ್ಲಿರುವಂತೆ ಒಬ್ಬನು ಕರ್ತವ್ಯಗಳನ್ನು ನಿರ್ವಹಿಸಲು ಪೂರ್ಣ ಕೃಷ್ಣಪ್ರಜ್ಞೆಯಾಗಬೇಕು ಎಂದು ಭಗವಂತನು ಉಪದೇಶಿಸುತ್ತಾನೆ. ಇಂಥ ಆಜ್ಞೆಯು ಕರ್ತವ್ಯಗಳನ್ನು ಸ್ವಲ್ಪಕಷ್ಟಸಾಧ್ಯಗೊಳಿಸಬಹುದು; ಆದರೂ ಕೃಷ್ಣನನ್ನು ಅವಲಂಬಿಸಿ ಕರ್ತವ್ಯಗಳನ್ನು ನಿರ್ವಹಿಸಬೇಕು, ಏಕೆಂದರೆ ಅದೇ ಜೀವಿಯ ಸ್ವರೂಪ ಸ್ಥಾನ. ಜೀವಿಯು ಭಗವಂತನ ಸಹಕಾರದಿಂದ ಸ್ವತಂತ್ರವಾಗಿ ಸುಖಿಯಾಗಲಾರನು, ಏಕೆಂದರೆ, ಭಗವದಿಚ್ಛೆಗಳಿಗೆ ಅಧೀನನಾಗಿರುವುದು ಜೀವಿಯ ಶಾಶ್ವತ ಸ್ವರೂಪ. ಆದ್ದರಿಂದ ಅವನು ಸೇನಾಧಿಪತಿಯೋ ಎಂಬಂತೆ, ಅರ್ಜುನನು ಯುದ್ಧಮಾಡಲು ಶ್ರೀಕೃಷ್ಣನಿಂದ ಆದೇಶಿಸಲ್ಪಟ್ಟನು. ಒಬ್ಬನು ಭಗವಂತನ ಸದಿಚ್ಛೆಗಾಗಿ ಸರ್ವಸ್ವವನ್ನೂ ತ್ಯಾಗಮಾಡಬೇಕು, ಮತ್ತು ಜೊತೆಗೆ ಮಮಕಾರವಿಲ್ಲದೆ ವಿಧಿತ ಕರ್ತವ್ಯಗಳನ್ನು ನಿರ್ವಹಿಸಬೇಕು. ಅರ್ಜುನನು ಭಗವಂತನ ಆದೇಶವನ್ನು ಕುರಿತು ಯೋಚಿಸುವ ಪ್ರಶ್ನೆ ಇರಲಿಲ್ಲ. ಅವನು ಭಗವಂತನ ಆಜ್ಞೆಯನ್ನು ನಿರ್ವಹಿಸಬೇಕಾಗಿತ್ತು, ಅಷ್ಟೇ. ಪರಮ ಪ್ರಭು ಸರ್ವ ಆತ್ಮರ ಆತ್ಮನು ; ಆದ್ದರಿಂದ ಯಾವ ಸ್ವಯೋಚನೆಯಿಲ್ಲದೆ, ಏಕೈಕವಾಗಿ ಮತ್ತು ಪೂರ್ಣವಾಗಿ ಪರಮಾತ್ಮನನ್ನು ಅವಲಂಬಿಸುವನು, ಎಂದರೆ ಪೂರ್ಣ ಕೃಷ್ಣ ಪ್ರಾಜ್ಞೆಯು, **ಅಧ್ಯಾತ್ಮ ಚೇತಸ್** ಎಂದು ಕರೆಯಲ್ಪಡುತ್ತಾನೆ. **ನಿರಾಶೀಃ** ಎಂದರೆ ಫಲೇಚ್ಛೆಯಿಲ್ಲದೆ ಒಡೆಯನ ಆದೇಶಾನುಸಾರ ವರ್ತಿಸುವವನು. ನಗದಿ ಗುಮಾಸ್ತನು ತನ್ನ ನಿಯೋಜಕನ ಸಲುವಾಗಿ ಲಕ್ಷೋಪಲಕ್ಷ ಹಣವನ್ನು ಎಣಿಕೆ ಮಾಡಬಹುದು, ಆದರೆ ಒಂದು ಬಿಡಿಕಾಸನ್ನೂ ತನ್ನದೆಂದು ಹೇಳುವುದಿಲ್ಲ. ಅದೇ ಪ್ರಕಾರ ಈ ಜಗತ್ತಿನಲ್ಲಿರುವ ಯಾವುದೂ ಯಾವೊಬ್ಬ ವ್ಯಕ್ತಿಗೆ ಸೇರಿದ್ದಲ್ಲ, ಆದರೆ ಎಲ್ಲವೂ ಭಗವಂತನಿಗೆ ಸೇರಿದ್ದು ಎಂಬುದನ್ನು ಒಬ್ಬನು ಅರಿತುಕೊಳ್ಳಬೇಕು. ಅದುವೇ **ಮಯಿ** ಅಥವಾ "ನನಗೆ" ಎಂಬುದರ ನಿಜವಾದ ತಾತ್ಪರ್ಯ. ಒಬ್ಬನು ಇಂಥ ಕೃಷ್ಣಪ್ರಜ್ಞೆಯಲ್ಲಿ ಕೆಲಸ ಮಾಡುವಾಗ ಅವನು ನಿಶ್ಚಯವಾಗಿಯೂ ಯಾವುದರ ಮೇಲೆಯೂ ಸ್ವಾಮಿತ್ವವನ್ನು ಸ್ಥಾಪಿಸುವುದಿಲ್ಲ. ಈ ಪ್ರಜ್ಞೆಯನ್ನು **ನಿರ್ಮಮ** ಅಥವಾ "ಏನೂ ನನ್ನದಲ್ಲ" ಎಂದು ಕರೆಯುತ್ತಾರೆ. ದೈಹಿಕ ಸಂಬಂಧದಲ್ಲಿ ಬಂಧುಗಳು ಎಂದು ಕರೆಯಲ್ಪಡುವ. ಪರಿಭಾವನೆಯಿಲ್ಲದೆ ಇಂಥ ಕಠೋರ ಆದೇಶವನ್ನು ಪಾಲಿಸಲು ಹಿಂಜರಿತವಿದ್ದರೆ,

ಅಂಥ ಹಿಂಜರಿತವನ್ನು ಕಿತ್ತೆಸೆಯಬೇಕು ; ಈ ರೀತಿಯಲ್ಲಿ ಒಬ್ಬನು **ವಿಗತಜ್ವರನು** ಅಥವಾ ಜ್ವರೀಯ ಮನೋಭಾವವಿಲ್ಲದವನು ಅಥವಾ ನಿರುತ್ಸಾಹರಹಿತನಾಗಬಹುದು. **ಪ್ರತಿ** **ಯೊಬ್ಬನು**, ತನ್ನ ಸ್ಥಾನ ಮತ್ತು ತನ್ನ ಗುಣಾನುಸಾರವಾಗಿ ನಿರ್ವಹಿಸಬೇಕಾದ ವಿಶಿಷ್ಟ **ವಿಧ** ವಾದ ಕರ್ಮವನ್ನು ಹೊಂದಿರುವನು, ಮತ್ತು ಅಂಥ ಎಲ್ಲ ಕರ್ತವ್ಯಗಳನ್ನು ಮೇಲೆ **ವಿವರಿಸಿ** ದಂತೆ, ಕೃಷ್ಣಪ್ರಜ್ಞೆಯಲ್ಲಿ ನಿರ್ವಹಿಸಬಹುದು. ಅದು ಒಬ್ಬನನ್ನು ಮೋಕ್ಷ ಮಾರ್ಗಕ್ಕೆ ಕರೆದೊಯ್ಯುತ್ತದೆ.

**ಯೇ ಮೇ ಮತಮಿದಂ ನಿತ್ಯಮನುತಿಷ್ಠನ್ತಿ ಮಾನವಾಃ ।**
**ಶ್ರದ್ಧಾವನ್ತೋಽನಸೂಯನ್ತೋ ಮುಚ್ಯನ್ತೇ ತೇಽಪಿ ಕರ್ಮಭಿಃ ॥ ೩೧ ॥**

ಯೇ—ಯಾರು ಅವರು, ಮೇ—ನನ್ನ, ಮತಮ್—ಆಜ್ಞೆಗಳನ್ನು, ಇದಮ್—ಈ, ನಿತ್ಯಮ್—ನಿತ್ಯ ಧರ್ಮವೆಂದು, ಅನುತಿಷ್ಠನ್ತಿ—ತಪ್ಪದೇ ಪಾಲಿಸುವ, ಮಾನವಾಃ—ಮಾನವರು, ಶ್ರದ್ಧಾವನ್ತಃ—ಶ್ರದ್ಧಾ ಭಕ್ತಿಯೊಡನೆ, ಅನಸೂಯನ್ತಃ—ಅಸೂಯೆಯಿಲ್ಲ**ದೆ,** ಮುಚ್ಯನ್ತೇ—ಮುಕ್ತರಾಗುತ್ತಾರೆ, ತೇ—ಅವರೆಲ್ಲರು, ಅಪಿ—ಕೂಡ, ಕರ್ಮಭಿಃ—**ಫಲ** ಪ್ರದ ಕ್ರಿಯೆಗಳ ನಿಯಮದ ಬಂಧನದಿಂದ.

**ನನ್ನ ಆಜ್ಞೆಗಳಿಗನುಸಾರ ತಮ್ಮ ಕರ್ತವ್ಯಗಳನ್ನು ನಿರ್ವಹಿಸುವವರು, ಮತ್ತು ಅಸೂಯೆಯಿಲ್ಲದೆ ಶ್ರದ್ಧೆಯಿಂದ ಈ ಉಪದೇಶವನ್ನು ಅನುಸರಿಸುವವರು ಕಾಮ್ಯ ಕರ್ಮಗಳ ಬಂಧನದಿಂದ ವಿಮೋಚಿತರಾಗುವರು.**

**ಭಾವಾರ್ಥ :** ಪರಮ ದೇವೋತ್ತಮ ಪುರುಷ ಶ್ರೀಕೃಷ್ಣನ ಆಜ್ಞೆಯು ಸಕಲ ವೇದ ಜ್ಞಾನದಸಾರ, ಆದ್ದರಿಂದ ಪ್ರತಿಷೇಧ ರಹಿತವಾಗಿ ನಿತ್ಯ ಸತ್ಯವಾಗಿದೆ. ವೇದಗಳು ನಿತ್ಯ ವಾಗಿರುವಂತೆ, ಕೃಷ್ಣಪ್ರಜ್ಞಾ ಸತ್ಯವೂ ನಿತ್ಯವಾದುದು. ಭಗವಂತನ ಬಗ್ಗೆ ಅಸೂಯೆ ಪಡದೆ, ಒಬ್ಬನು ಈ ಆಜ್ಞೆಯಲ್ಲಿ ಅಚಲ ಶ್ರದ್ಧೆಯನ್ನು ಹೊಂದಿರಬೇಕು. ಕೃಷ್ಣನಲ್ಲಿ ನಂಬಿಕೆಯಿಲ್ಲದೆ ಭಗವದ್ಗೀತೆಯನ್ನು ಕುರಿತು ವ್ಯಾಖ್ಯಾನಗಳನ್ನು ಬರೆಯುವ ಅನೇಕ ತಾತ್ವಿಕ ರಿದ್ದಾರೆ. ಅವರು ಎಂದಿಗೂ ಕಾಮ್ಯ ಕರ್ಮ ಬಂಧನದಿಂದ ಮುಕ್ತರಾಗುವುದಿಲ್ಲ. ಆದರೆ ಭಗವಂತನ ಶಾಶ್ವತ ಆಜ್ಞೆಗಳಲ್ಲಿ ದೃಢ ಶ್ರದ್ಧೆಯಿರುವ ಸಾಮಾನ್ಯ ಮನುಷ್ಯನು, ಅಂಥ ಆಜ್ಞೆಗಳನ್ನು ನಿರ್ವಹಿಸಲು ಶಕ್ತನಲ್ಲದಿದ್ದರೂ, ಕರ್ಮನಿಯಮ ಬಂಧನದಿಂದ ಮುಕ್ತನಾಗು ತ್ತಾನೆ. ಕೃಷ್ಣ ಪ್ರಜ್ಞಾ ಪ್ರಾರಂಭದಲ್ಲಿ ಒಬ್ಬನು ಭಗವಂತನ ಆಜ್ಞೆಗಳನ್ನು ಪೂರ್ಣವಾಗಿ ನಿರ್ವಹಿಸದೇ ಇರಬಹುದು, ಆದರೆ ಈ ತತ್ವದ ಬಗ್ಗೆ ತಿರಸ್ಕಾರಭಾವವಿಲ್ಲದವನಾದ್ದರಿಂದ, ಮತ್ತು ಅಪಜಯ ಮತ್ತು ಅಸಹಾಯಕತೆಯನ್ನು ಗಮನಿಸದೆ ಪ್ರಾಮಾಣಿಕವಾಗಿ ಕಾರ್ಯ ಮಾಡುವುದರಿಂದ, ಅವನು ಶುದ್ಧ ಕೃಷ್ಣ ಪ್ರಜ್ಞೆಯ ಮಟ್ಟಕ್ಕೆ ಖಂಡಿತವಾಗಿಯೂ ಉನ್ನತಿ ಹೊಂದುವನು.

**ಯೇ ತ್ವೇತದಭ್ಯಸೂಯನ್ತೋ ನಾನುತಿಷ್ಠನ್ತಿ ಮೇ ಮತಮ್ ।**
**ಸರ್ವಜ್ಞಾನವಿಮೂಢಾಂಸ್ತಾನ್ ವಿದ್ಧಿ ನಷ್ಟಾನಚೇತಸಃ ॥ ೩೨ ॥**

ಯೇ—ಅವರು, ತು—ಆದರೆ, ಏತತ್—ಈ, ಅಭ್ಯಸೂಯನ್ತಃ—**ಅಸೂಯೆ ಯಿಂದ**, ನ—ಇಲ್ಲ, **ಅನುತಿಷ್ಠನ್ತಿ**—ಕ್ರಮಬದ್ಧವಾಗಿ ಆಚರಿಸುವುದು, ಮೇ—ನನ್ನ,

ಮತಮ್—ಆಜ್ಞೆಯನ್ನು, ಸರ್ವಜ್ಞಾನ—ಎಲ್ಲ ಬಗೆಯ ಜ್ಞಾನದಲ್ಲಿ, ವಿಮೂಢಾನ್—ಪೂರ್ಣವಾಗಿ ಮೂಢರಾಗಿಸಲ್ಪಟ್ಟ, ತಾನ್—ಅವರು, ವಿದ್ಧಿ—ಚೆನ್ನಾಗಿ ತಿಳಿ, ನಷ್ಟಾನ್—ಎಲ್ಲ ನಷ್ಟರು, ಅಚೇತಸಃ—ಕೃಷ್ಣಪ್ರಜ್ಞಾರಹಿತರಾಗಿ.

**ಆದರೆ, ಅಸೂಯೆಯ ಕಾರಣ, ಈ ಉಪದೇಶಗಳನ್ನು ನಿರ್ಲಕ್ಷಿಸುವವರು ಮತ್ತು ಅವುಗಳನ್ನು ಅನುಸರಿಸದಿರುವವರು ಸಕಲ ಜ್ಞಾನವಿಲ್ಲದವರು, ಮೂಢರಾಗಿರುವರು ಮತ್ತು ಪರಿಪೂರ್ಣತೆಯ ತಮ್ಮ ಪ್ರಯತ್ನದಲ್ಲಿ ನಷ್ಟರು ಎಂದು ತಿಳಿಯಬೇಕು.**

**ಭಾವಾರ್ಥ :** ಕೃಷ್ಣ ಪ್ರಾಜ್ಞಿಯಾಗದಿರುವುದರಿಂದ ಉಂಟಾಗುವ ದೋಷವನ್ನು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಪರಮನಿರ್ವಾಹಕಾಧಿಕಾರಿಯ ಆದೇಶವನ್ನು ಉಲ್ಲಂಘಿಸಿದರೆ ಹೇಗೆ ದಂಡನೆ ಇರುವುದೋ, ಹಾಗೆಯೇ ಪರಮ ದೇವೋತ್ತಮ ಪುರುಷ ಭಗವಂತನ ಆದೇಶದ ಉಲ್ಲಂಘನೆಗೆ ಖಂಡಿತವಾಗಿ ದಂಡನೆ ಇರುತ್ತದೆ. ಉಲ್ಲಂಘಿಸುವವನು ಎಷ್ಟೇ ದೊಡ್ಡವನಾಗಿರಲಿ, ತನ್ನ ಆತ್ಮದ ಬಗ್ಗೆ ಮತ್ತು ಪರಬ್ರಹ್ಮನ್, ಪರಮಾತ್ಮ ಮತ್ತು ದೇವೋತ್ತಮ ಪುರುಷನ ಬಗ್ಗೆ, ಅವನ ಹೃದಯವು ಬರಿದಾಗಿರುವುದರಿಂದ, ಅಜ್ಞಾನಿಯಾಗಿರುತ್ತಾನೆ. ಆದ್ದರಿಂದ ಅವನಿಗೆ ಜೀವನದ ಪರಿಪೂರ್ಣತೆಯ ಪ್ರತೀಕ್ಷೆಯು ಇರುವುದಿಲ್ಲ.

**ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।**
**ಪ್ರಕೃತಿಂ ಯಾನ್ತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥ ೩೩ ॥**

ಸದೃಶಮ್—ಆ ಪ್ರಕಾರ, ಚೇಷ್ಟತೇ—ಪ್ರಯತ್ನಿಸುತ್ತಾನೆ, ಸ್ವಸ್ಯಾಃ—ತನ್ನ ಸ್ವಂತದ, ಪ್ರಕೃತೇಃ—ಪ್ರಕೃತಿಗುಣಗಳಿಂದ, ಜ್ಞಾನವಾನ್—ಜ್ಞಾನಿಯು, ಅಪಿ—ಆಗಿದ್ದರೂ, ಪ್ರಕೃತಿಮ್—ಪ್ರಕೃತಿಯನ್ನು, ಯಾನ್ತಿ—ಹೊಂದುತ್ತಾನೆ, ಭೂತಾನಿ—ಎಲ್ಲ ಜೀವಿಗಳು, ನಿಗ್ರಹಃ—ನಿಗ್ರಹವು, ಕಿಮ್—ಏನನ್ನು, ಕರಿಷ್ಯತಿ—ಮಾಡುವುದು.

**ಜ್ಞಾನಿಯೂ ಕೂಡ ತನ್ನ ಸ್ವಂತ ಸ್ವಭಾವಕ್ಕನುಸಾರ ವರ್ತಿಸುತ್ತಾನೆ, ಏಕೆಂದರೆ, ಪ್ರತಿಯೊಬ್ಬನು ತ್ರಿವಿಧ ಪ್ರಕೃತಿಗುಣಗಳಿಂದ ತಾನು ಪಡೆದ ಸ್ವಭಾವವನ್ನು ಅನುಸರಿಸುತ್ತಾನೆ. ನಿಗ್ರಹವು ಸಾಧಿಸುವುದಾದರೂ ಏನು?**

**ಭಾವಾರ್ಥ :** ಭಗವಂತನು ಏಳನೆಯ ಅಧ್ಯಾಯದಲ್ಲಿ (7.14) ದೃಢಪಡಿಸಿರುವಂತೆ, ಒಬ್ಬನು ಕೃಷ್ಣ ಪ್ರಜ್ಞೆಯ ದಿವ್ಯ ವೇದಿಕೆಯ ಮೇಲಿದ್ದ ಹೊರತು, ಅವನು ಭೌತಿಕ ಪ್ರಕೃತಿ ಗುಣಗಳ ಪ್ರಭಾವದಿಂದ ಮುಕ್ತನಾಗಲಾರನು. ಆದ್ದರಿಂದ, ಈ ಐಹಿಕ ಮಟ್ಟದಲ್ಲಿ ಅತ್ಯಂತ ಉನ್ನತ ಶಿಕ್ಷಣ ಪಡೆದವನಿಗೂ ಕೂಡ, ಕೇವಲ ತಾತ್ವಿಕ ಜ್ಞಾನದಿಂದಾಗಲಿ ಅಥವಾ ಆತ್ಮವನ್ನು ದೇಹದಿಂದ ಪ್ರತ್ಯೇಕಿಸುವುದರಿಂದಾಗಲಿ, ಮಾಯೆಯ ತೊಡಕಿನಿಂದ ಮುಕ್ತನಾಗುವುದು ಸಾಧ್ಯವಾಗುವುದಿಲ್ಲ. ಅಧ್ಯಾತ್ಮ ವಿಜ್ಞಾನದಲ್ಲಿ ತಾವು ಮುಂದುವರಿದವರೆಂದು ಬಾಹ್ಯವಾಗಿ ಸೋಗು ಹಾಕುವ ಅಧ್ಯಾತ್ಮವಾದಿಗಳೆಂದು ಕರೆಯಲ್ಪಡುವವರು ಅನೇಕರು ಇದ್ದಾರೆ. ಆದರೆ ಅವರು ಆಂತರಿಕವಾಗಿ ಅಥವಾ ಖಾಸಗಿಯಾಗಿ ತಮ್ಮಿಂದ ಆಕ್ರಮಿಸಲಾಗದಂಥ ಪ್ರಕೃತಿಯ ವಿಶಿಷ್ಟ ಗುಣಗಳಿಗೆ ಸಂಪೂರ್ಣವಾಗಿ ಒಳಪಟ್ಟಿರುತ್ತಾರೆ, ಶೈಕ್ಷಣಿಕ

ವಾಗಿ ಒಬ್ಬನು ದೊಡ್ಡ ವಿದ್ವಾಂಸನಾಗಿರಬಹುದು, ಆದರೆ, ಸುದೀರ್ಘ ಕಾಲ ಭೌತಿಕ ಪ್ರಕೃತಿಯೊಡನೆ ಅವನ ಸಂಗದಿಂದ ಅವನು ಬಂಧನದಲ್ಲಿರುತ್ತಾನೆ. ಒಬ್ಬನು ಭೌತಿಕ ಅಸ್ತಿತ್ವದ ಸಂಬಂಧದಲ್ಲಿ ತನ್ನ ವಿಧಿತ ಕರ್ತವ್ಯಗಳಲ್ಲಿ ತೊಡಗಿದ್ದರೂ, ಕೃಷ್ಣ ಪ್ರಜ್ಞೆಯು ಭೌತಿಕ ಬಂಧನದಿಂದ ಹೊರಬರಲು ಅವನಿಗೆ ಸಹಾಯ ಮಾಡುವುದು. ಪೂರ್ಣ ಕೃಷ್ಣ ಪ್ರಜ್ಞೆಯಲ್ಲಿ ಇಲ್ಲದ ಹೊರತು, ಒಬ್ಬನು ತನ್ನ ವೃತ್ತಿ ಕರ್ತವ್ಯಗಳನ್ನು ಬಿಡಕೂಡದು. ಯಾರೂ ಇದ್ದಕ್ಕಿದ್ದ ಹಾಗೆ ತನ್ನ ವಿಧಿತ ಕರ್ಮಗಳನ್ನು ಪರಿತ್ಯಜಿಸಿ ಕೃತಕವಾಗಿ ಯೋಗಿ ಅಥವಾ ದಿವ್ಯವಾದಿ ಎನಿಸಿಕೊಳ್ಳುವವನಾಗಬಾರದು. ಒಬ್ಬನು ತಾನಿರುವ ಸ್ಥಾನದಲ್ಲಿಯೇ ಉಳಿದುಕೊಂಡು, ಶ್ರೇಷ್ಠ ತರಬೇತಿಯಲ್ಲಿ ಕೃಷ್ಣ ಪ್ರಜ್ಞೆಯನ್ನು ಹೊಂದಲು ಪ್ರಯತ್ನಿಸುವುದು ಲೇಸು. ಹೀಗೆ ಒಬ್ಬನು ಕೃಷ್ಣನ ಮಾಯೆಯ ಹಿಡಿತದಿಂದ ಮುಕ್ತನಾಗಬಹುದು.

**ಇನ್ದ್ರಿಯಸ್ಯೇನ್ದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।**
**ತಯೋರ್ನ ವಶಮಾಗಚ್ಛೇತ್ ತೌ ಹ್ಯಸ್ಯ ಪರಿಪನ್ಥಿನೌ ॥ ೩೪ ॥**

ಇನ್ದ್ರಿಯಸ್ಯ—ಇಂದ್ರಿಯಗಳ, ಇನ್ದ್ರಿಯಸ್ಯ ಅರ್ಥೇ—ಇಂದ್ರಿಯ ವಿಷಯಗಳಲ್ಲಿ, ರಾಗ—ವ್ಯಾಮೋಹ, ದ್ವೇಷೌ—ಅನಾಸಕ್ತಿಯೂ ಕೂಡ, ವ್ಯವಸ್ಥಿತೌ—ನಿಯಮನಗಳಿಗೆ ಒಳಪಟ್ಟಿರುವುದು, ತಯೋಃ—ಅವುಗಳ, ನ—ಎಂದಿಗೂ, ವಶಮ್—ನಿಯಂತ್ರಣ, ಆಗಚ್ಛೇತ್—ಬರಬೇಕು, ತೌ—ಅವು. ಹಿ—ಖಂಡಿತ, ಅಸ್ಯ—ಅವನ, ಪರಿಪನ್ಥಿನೌ—ಆತಂಕಗಳು.

**ಇಂದ್ರಿಯಗಳಿಗೂ ಮತ್ತು ಇಂದ್ರಿಯ ವಿಷಯಗಳಿಗು ಸಂಬಂಧಿಸಿದಂತೆ ರಾಗ ದ್ವೇಷಗಳನ್ನು ನಿಯಂತ್ರಿಸುವ ತತ್ವಗಳಿವೆ. ಇಂಥ ರಾಗದ್ವೇಷಾದಿಗಳು ಆತ್ಮ ಸಾಕ್ಷಾತ್ಕಾರ ಮಾರ್ಗದಲ್ಲಿ ಅಡ್ಡಿಗಳಾಗಿರುವುದರಿಂದ, ಒಬ್ಬನು ಅವುಗಳ ನಿಯಂತ್ರಣಕ್ಕೆ ವಶನಾಗಬಾರದು.**

**ಭಾವಾರ್ಥ :** ಕೃಷ್ಣ ಪ್ರಾಜ್ಞಗಳು ಸಹಜವಾಗಿಯೇ ಭೌತಿಕ ಇಂದ್ರಿಯ ತೋಷಣದಲ್ಲಿ ತೊಡಗಲು ಹಿಂಜರಿಯುತ್ತಾರೆ. ಆದರೆ ಇಂಥ ಪ್ರಜ್ಞೆಯಲ್ಲಿಲ್ಲದವರು ದೃಷ್ಟ ಶಾಸ್ತ್ರಗಳ ನಿಯಮ ನಿಯಂತ್ರಣಗಳನ್ನು ಅನುಸರಿಸಬೇಕು. ಅನಿರ್ಬಂಧಿತ ಇಂದ್ರಿಯ ಭೋಗವು ಭೌತಿಕ ಬಂಧನಕ್ಕೆ ಕಾರಣ, ಆದರೆ ದೃಷ್ಟ ಶಾಸ್ತ್ರಗಳ ನಿಯಮ ನಿಯಂತ್ರಣಗಳನ್ನು ಪಾಲಿಸುವವನು ಇಂದ್ರಿಯ ವಿಷಯಗಳಿಂದ ಬಂಧನಕ್ಕೆ ಸಿಲುಕುವುದಿಲ್ಲ. ಉದಾಹರಣೆಗೆ, ಲೈಂಗಿಕ ಭೋಗವು ಬದ್ಧ ಆತ್ಮನಿಗೆ ಅಗತ್ಯ ಮತ್ತು ಲೈಂಗಿಕ ಭೋಗವು ವಿವಾಹ ಬಂಧನದ ಅಪ್ಪಣೆಯಲ್ಲಿ ಅನುಮಿತ. ಶಾಸ್ತ್ರ ಆಜ್ಞೆಗಳ ಪ್ರಕಾರ ಒಬ್ಬನು ತನ್ನ ಹೆಂಡತಿಯ ವಿನಾ ಅನ್ಯ ಸ್ತ್ರೀಯೊಂದಿಗೆ ಲೈಂಗಿಕ ಸಂಬಂಧದಲ್ಲಿ ತೊಡಗುವುದು ನಿಷೇಧಿತ. ಇತರ ಎಲ್ಲ ಸ್ತ್ರೀಯರನ್ನು ತನ್ನ ತಾಯಿಯೆಂದು ಪರಿಗಣಿಸಬೇಕು; ಇಲ್ಲದಿದ್ದಲ್ಲಿ, ಅವು ಆತ್ಮಸಾಕ್ಷಾತ್ಕಾರ ಮಾರ್ಗದಲ್ಲಿ ಅಡ್ಡಿಗಳಾಗುತ್ತವೆ. ಭೌತಿಕ ದೇಹವಿರುವವರೆಗೆ, ಭೌತಿಕ ದೇಹದ ಅವಶ್ಯಕತೆಗಳು ಅನುಮತಿಸಲ್ಪಟ್ಟಿವೆ, ಆದರೆ ನಿಯಮ ನಿಯಂತ್ರಣಗಳಿಗೆ ಅಧೀನವಾಗಿ. ಆದರೂ ನಾವು ಅಂಥ ಅನುಮತಿಗಳ ನಿಯಂತ್ರಣದ ಮೇಲೆ ಅವಲಂಬಿಸಕೂಡದು. ಅವುಗಳಿಗೆ

ಆಸಕ್ತನಾಗದೆ, ಒಬ್ಬನು ನಿಯಮ ನಿಯಂತ್ರಣಗಳನ್ನು ಅನುಸರಿಸಬೇಕು. ಏಕೆಂದರೆ, ರಾಜ ಮಾರ್ಗದಲ್ಲಿಯೂ ಸಹ ಅಪಘಾತವೊಂದರ ಅವಕಾಶವು ಸದಾ ಇರುವಂತೆಯೇ, ನಿಯಂತ್ರಣ ಗಳಿಗೆ ಒಳಪಟ್ಟ ಅಂಥ ಇಂದ್ರಿಯ ತೋಷಣದ ಅಭ್ಯಾಸವು ಕೂಡ ಒಬ್ಬನನ್ನು ದಾರಿ ತಪ್ಪಿಸಬಹುದು. ಬಹಳ ಎಚ್ಚರಿಕೆಯಿಂದ ನೋಡಿಕೊಳ್ಳಲ್ಪಡುತ್ತಿದ್ದರೂ, ಅತ್ಯಂತ ಸುರಕ್ಷಿತ ರಸ್ತೆಯಲ್ಲಿಯೂ ಕೂಡ ಅಪಾಯವಿಲ್ಲವೆಂದು ಯಾರೂ ಭರವಸೆ ನೀಡಲು ಆಗುವು ದಿಲ್ಲ. ಭೌತಿಕ ಸಂಪರ್ಕದ ಕಾರಣ, ಇಂದ್ರಿಯ ಭೋಗದ ಸ್ವಭಾವವು ಬಹು ದೀರ್ಘ ಕಾಲದಿಂದಲೂ ಸಾಗಿ ಬಂದಿರುತ್ತದೆ. ಆದ್ದರಿಂದ, ನಿಯಂತ್ರಿತ ಇಂದ್ರಿಯ ಭೋಗ ವಿದ್ದರೂ, ಪತನದ ಸಂಭವವು ಇದ್ದೇ ಇರುತ್ತದೆ; ಆದ್ದರಿಂದ, ನಿಯಂತ್ರಿತ ಇಂದ್ರಿಯ ಭೋಗಕ್ಕಾಗಿ ಆಸಕ್ತಿಯನ್ನು ಕೂಡ ಎಲ್ಲ ಪ್ರಕಾರಗಳಿಂದಲೂ ನಿವಾರಿಸಬೇಕು. ಆದರೆ ಕೃಷ್ಣ ಪ್ರಜ್ಞೆಗೆ ಅನುರಾಗವು, ಅಥವಾ ಸದಾ ಕೃಷ್ಣನ ಪ್ರೇಮ ಪೂರ್ವಕ ಸೇವೆಯಲ್ಲಿ ವರ್ತಿಸುವುದು, ಒಬ್ಬನನ್ನು ಎಲ್ಲ ಬಗೆಯ ಇಂದ್ರಿಯ ಭೋಗದ ಕಾರ್ಯಕಲಾಪಗಳಿಂದ ಅನಾಸಕ್ತಗೊಳಿಸುತ್ತದೆ. ಆದ್ದರಿಂದ ಯಾರೂ ಕೂಡ ಜೀವನದ ಯಾವುದೇ ಹಂತದಲ್ಲಿ, ಕೃಷ್ಣ ಪ್ರಜ್ಞೆಯಿಂದ ಅನಾಸಕ್ತರಾಗಲು ಯತ್ನಿಸಕೂಡದು. ಅಂತಿಮವಾಗಿ ಕೃಷ್ಣಪ್ರಜ್ಞಾ ವೇದಿಕೆಯ ಮೇಲೆ ಸನ್ನಿವೇಶಿತನಾಗುವುದೇ ಸಕಲ ವಿಧ ಇಂದ್ರಿಯ ಆಸಕ್ತಿಯಿಂದ ಅನಾಸಕ್ತ ವಾಗುವುದರ ಸಮಗ್ರ ಉದ್ದೇಶ.

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥ ೩೫ ॥**

ಶ್ರೇಯಾತ್—ಬಹಳ ಉತ್ತಮ, ಸ್ವಧರ್ಮ—ಒಬ್ಬನ ವಿಧಿತ ಕರ್ತವ್ಯಗಳು, ವಿಗುಣಃ—ದೋಷಯುಕ್ತವಾಗಿದ್ದರೂ, ಪರಧರ್ಮಾತ್—ಇತರರಿಗೆ ಹೇಳಿರುವ ಕರ್ತವ್ಯ ಗಳಿಗಿಂತ, ಸು ಅನುಷ್ಠಿತಾತ್—ಪರಿಪೂರ್ಣ ಅನುಷ್ಠಾನ ಮಾಡಿದುದು, ಸ್ವಧರ್ಮೇ— ಒಬ್ಬನ ವಿಧಿತ ಕರ್ತವ್ಯಗಳಲ್ಲಿ, ನಿಧನಮ್—ನಾಶ, ಶ್ರೇಯಃ—ಉತ್ತಮ, ಪರಧರ್ಮಃ— ಇತರರಿಗೆ ವಿಧಿಸಲ್ಪಟ್ಟ ಕರ್ತವ್ಯಗಳು, ಭಯ ಆವಹಃ—ಅಪಾಯಕರ.

**ಇತರರ ಕರ್ತವ್ಯಗಳನ್ನು ಪರಿಪೂರ್ಣವಾಗಿ ನಿರ್ವಹಿಸುವುದಕ್ಕಿಂತ, ಒಬ್ಬನು ತನ್ನ ವಿಧಿತ ಕರ್ತವ್ಯಗಳನ್ನು, ದೋಷಯುಕ್ತವಾಗಿಯಾದರೂ ನಿರ್ವಹಿಸುವುದು ಎಷ್ಟೋ ಉತ್ತಮ. ಇನ್ನೊಬ್ಬನ ಕರ್ತವ್ಯಗಳಲ್ಲಿ ನಿರತನಾಗಿರುವುದಕ್ಕಿಂತ ತನ್ನ ಸ್ವಂತ ಕರ್ತವ್ಯಾಚರಣೆಯಲ್ಲಿ ನಾಶವು ಮೇಲು, ಏಕೆಂದರೆ ಇನ್ನೊಬ್ಬನ ಮಾರ್ಗ ವನ್ನು ಅನುಸರಿಸುವುದು ಅಪಾಯಕರ.**

**ಭಾವಾರ್ಥ :** ಆದ್ದರಿಂದ, ಒಬ್ಬನು ಇತರರಿಗೆ ವಿಧಿತವಾದ ಕರ್ತವ್ಯಗಳಿಗಿಂತ ತನ್ನ ವಿಧಿತ ಕರ್ತವ್ಯಗಳನ್ನು ಪೂರ್ಣ ಕೃಷ್ಣ ಪ್ರಜ್ಞೆಯಲ್ಲಿ ನಿರ್ವಹಿಸಬೇಕು. ಭೌತಿಕವಾಗಿ, ವಿಧಿತ ಕರ್ತವ್ಯಗಳು ಭೌತಿಕ ಪ್ರಕೃತಿ ಗುಣ ಪ್ರಭಾವದಲ್ಲಿ ಒಬ್ಬನ ಮಾನಸಿಕ ಮತ್ತು ಶಾರೀರಿಕ ಸ್ಥಿತಿಗನುಗುಣವಾಗಿ ವಿಧಿಸಿದ ಕರ್ತವ್ಯಗಳು. ಆಧ್ಯಾತ್ಮಿಕ ಕರ್ತವ್ಯಗಳು, ಕೃಷ್ಣನ ದಿವ್ಯ ಸೇವೆಗಾಗಿ ಗುರುಗಳು ಆದೇಶಿಸಿದ ಕರ್ತವ್ಯಗಳು. ಆದರೆ ಭೌತಿಕವಾಗಲಿ, ಆಧ್ಯಾತ್ಮಿಕ

ವಾಗಲಿ, ಒಬ್ಬನು ಮತ್ತೊಬ್ಬರಿಗೆ ವಿಧಿತವಾದ ಕರ್ತವ್ಯಗಳನ್ನು ಅನುಕರಿಸುವುದಕ್ಕಿಂತ ಮರಣಪರ್ಯಂತ ತನ್ನ ವಿಧಿತ ಕರ್ತವ್ಯಗಳಿಗೆ ಅಂಟಿಕೊಂಡಿರಬೇಕು. ಆಧ್ಯಾತ್ಮಿಕ ವೇದಿಕೆಯ ಕರ್ತವ್ಯಗಳು ಮತ್ತು ಭೌತಿಕ ವೇದಿಕೆಯ ಕರ್ತವ್ಯಗಳು ಪರಸ್ಪರ ಭಿನ್ನವಾಗಿರಬಹುದು, ಆದರೆ ಅಧಿಕೃತ ನಿರ್ದೇಶಪಾಲನೆಯ ತತ್ವವು ಆಚರಿಸುವವನಿಗೆ ಸದಾ ಒಳ್ಳೆಯದು. ಒಬ್ಬನು ಭೌತಿಕ ಪ್ರಕೃತಿಯ ಗುಣಗಳ ಪ್ರಭಾವದಲ್ಲಿದ್ದಾಗ, ತನ್ನ ವಿಶಿಷ್ಟ ಸನ್ನಿವೇಶಕ್ಕೆ ವಿಧಿತವಾದ ನಿಯಮಗಳನ್ನು ಅನುಸರಿಸಬೇಕು, ಮತ್ತು ಇತರರನ್ನು ಅನುಕರಿಸಕೂಡದು. ಉದಾಹರಣೆಗೆ ಸಾತ್ವಿಕ ಬ್ರಾಹ್ಮಣನು ಅಹಿಂಸಕನು, ಆದರೆ ರಜೋಗುಣದ ಕ್ಷತ್ರಿಯನು ಹಿಂಸೆಮಾಡಲು ಅನುಮತಿಯಿದೆ. ಆದ್ದರಿಂದ ಅಹಿಂಸಾ ತತ್ವಗಳನ್ನು ಅನುಸರಿಸುವ ಬ್ರಾಹ್ಮಣರನ್ನು ಅನುಕರಿಸುವುದಕ್ಕಿಂತ ಕ್ಷತ್ರಿಯನು ಹಿಂಸಾ ನಿಯಮಗಳನ್ನು ಅನುಸರಿಸಿ ನಾಶವಾಗುವುದು ಲೇಸು. ಪ್ರತಿಯೊಬ್ಬನೂ ಕ್ರಮೇಣ ಪ್ರಕ್ರಿಯೆಯಿಂದ ತನ್ನ ಹೃದಯವನ್ನು ನಿರ್ಮಲಗೊಳಿಸಿಕೊಳ್ಳಬೇಕು, ಇದ್ದಕ್ಕಿದ್ದ ಹಾಗೆ ಅಲ್ಲ.ಆದರೆ ಒಬ್ಬನು ಭೌತಿಕ ಪ್ರಕೃತಿ ಗುಣಗಳನ್ನು ದಾಟಿದಾಗ ಮತ್ತು ಪೂರ್ಣ ಕೃಷ್ಣ ಪ್ರಜ್ಞೆಯಲ್ಲಿದ್ದಾಗ, ಅವನು ತನ್ನ ನಿಜ ಗುರುವಿನ ನಿರ್ದೇಶನದ ಮೇರೆಗೆ ಏನು ಬೇಕಾದರೂ ಮಾಡಬಹುದು. ಅಂಥ ಕೃಷ್ಣ ಪ್ರಜ್ಞೆಯ ಪೂರ್ಣ ಹಂತದಲ್ಲಿ ಕ್ಷತ್ರಿಯನು ಬ್ರಾಹ್ಮಣನಂತೆ, ಅಥವಾ ಬ್ರಾಹ್ಮಣನು ಕ್ಷತ್ರಿಯನಂತೆ ವರ್ತಿಸಬಹುದು. ದಿವ್ಯ ಹಂತದಲ್ಲಿ ಭೌತಿಕ ಜಗತ್ತಿನ ಭೇದಗಳು ಅನ್ವಯಿಸುವುದಿಲ್ಲ. ಉದಾಹರಣೆಗೆ, ವಿಶ್ವಾಮಿತ್ರನು ಮೊದಲು ಕ್ಷತ್ರಿಯನು, ಆದರೆ ಅನಂತರ ಬ್ರಾಹ್ಮಣನಾಗಿ ವರ್ತಿಸಿದನು. ಆದರೆ ಬ್ರಾಹ್ಮಣನಾಗಿದ್ದ ಪರಶುರಾಮನು ಅನಂತರ ಕ್ಷತ್ರಿಯನಾಗಿ ವರ್ತಿಸಿದನು. ದಿವ್ಯವಾಗಿ ಸ್ಥಿತರಾಗಿದ್ದು, ಅವರು ಹಾಗೆ ಮಾಡಲು ಸಾಧ್ಯವಾಯಿತು, ಆದರೆ ಒಬ್ಬನು ಭೌತಿಕ ವೇದಿಕೆಯ ಮೇಲಿರುವವರೆಗೆ ಭೌತಿಕ ಪ್ರಕೃತಿ ಗುಣಾನುಸಾರ ಅವನು ತನ್ನ ಕರ್ತವ್ಯಗಳನ್ನು ಆಚರಿಸಬೇಕು. ಅದೇ ಸಮಯದಲ್ಲಿ, ಅವನು ಕೃಷ್ಣ ಪ್ರಜ್ಞೆಯ ಪೂರ್ಣ ಭಾವವನ್ನು ಹೊಂದಿರಬೇಕು.

**ಅರ್ಜುನ ಉವಾಚ**

**ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ ।**
**ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥ ೩೬ ॥**

ಅರ್ಜುನ ಉವಾಚ—ಅರ್ಜುನನು ನುಡಿದನು, ಅಥ—ಆಗ, ಕೇನ—ಯಾವುದರಿಂದ, ಪ್ರಯುಕ್ತಃ—ಒತ್ತಾಯಿಸಲ್ಪಟ್ಟು, ಅಯಮ್—ಒಬ್ಬನು, ಪಾಪಮ್—ಪಾಪಗಳನ್ನು, ಚರತಿ—ಮಾಡುತ್ತಾನೆ, ಪೂರುಷಃ—ಮನುಷ್ಯನು, ಅನಿಚ್ಛನ್—ಇಚ್ಛಿಸದೆ, ಅಪಿ—ಆಗಿದ್ದರೂ, ವಾರ್ಷ್ಣೇಯ—ಹೇ ವೃಷ್ಣಿ ಕುಲ ಸಂಭೂತನೇ, ಬಲಾತ್—ಬಲವಂತವಾಗಿ, ಇವ—ಎಂಬಂತೆ, ನಿಯೋಜಿತಃ—ತೊಡಗುತ್ತಾನೆ.

**ಅರ್ಜುನನು ನುಡಿದನು; ಹೇ ವೃಷ್ಣಿಕುಲ ಸಂಭೂತನೇ, ಇಚ್ಛೆ ಇಲ್ಲದಿದ್ದರೂ ಬಲವಂತವಾಗಿ ತೊಡಗಿಸಿದಂತೆ, ಯಾವುದರಿಂದ ಒಬ್ಬನು ಪಾಪಕರ್ಮಗಳನ್ನು ಮಾಡಲು ಒತ್ತಾಯಿಸಲ್ಪಡುತ್ತಾನೆ?**

**ಭಾವಾರ್ಥ :** ಜೀವಿಯು, ಪರಮನ ವಿಭಿನ್ನಾಂಶನಾಗಿ, ಮೂಲತಃ ಆಧ್ಯಾತ್ಮಿಕ, ಶುದ್ಧ ಮತ್ತು ಎಲ್ಲ ಭೌತಿಕ ಕಲ್ಮಷಗಳಿಂದ ಮುಕ್ತನು. ಆದ್ದರಿಂದ ಸ್ವಭಾವತಃ ಅವನು ಭೌತಿಕ ಜಗತ್ತಿನ ಪಾಪಗಳಿಗೆ ಒಳಪಟ್ಟವನಲ್ಲ. ಆದರೆ ಅವನು ಭೌತಿಕ ಪ್ರಕೃತಿ ಸಂಬಂಧದಲ್ಲಿದ್ದಾಗ, ಅವನು ಹಿಂದೆ ಮುಂದೆ ನೋಡದೆ ಅನೇಕ ಪಾಪಿಷ್ಠ ರೀತಿಗಳಲ್ಲಿಯು, ಮತ್ತು ಕೆಲವು ಸಲ ತನ್ನ ಇಚ್ಛೆಗೆ ವಿರುದ್ಧವಾಗಿ ಕೂಡ ಕಾರ್ಯಮಾಡುತ್ತಾನೆ. ಹೀಗೆ ಜೀವಿಗಳ ವಕ್ರ ಸ್ವಭಾವಕ್ಕೆ ಕಾರಣವೇನೆಂದು ಕೃಷ್ಣನನ್ನು ಕೇಳಿದ ಅರ್ಜುನನ ಪ್ರಶ್ನೆಯು ಬಹಳ ಆಶಾದಾಯಕವಾಗಿದೆ. ಜೀವಿಯು ಕೆಲವು ಸಲ ಪಾಪ ಮಾಡ ಬಯಸುವುದಿಲ್ಲವಾದರೂ, ಅವನು ಹಾಗೆ ಮಾಡಲು ಒತ್ತಾಯಿಸಲ್ಪಟ್ಟಿರುತ್ತಾನೆ. ಪಾಪಕಾರ್ಯಗಳು ಒಳಗಿರುವ ಪರಮಾತ್ಮನಿಂದ ಪ್ರೇರಿತವಲ್ಲ, ಆದರೆ ಅವುಗಳಿಗೆ ಬೇರೆ ಕಾರಣ ಇರುವುದು ಎಂಬುದನ್ನು ಭಗವಂತನು ಮುಂದಿನ ಶ್ಲೋಕದಲ್ಲಿ ವಿವರಿಸಿದ್ದಾನೆ.

**ಶ್ರೀಭಗವಾನುವಾಚ**

**ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥ ೩೭ ॥**

ಶ್ರೀಭಗವಾನ್ ಉವಾಚ—ಭಗವಂತನು ನುಡಿದನು, ಕಾಮಃ—ಕಾಮವು, ಏಷಃ—ಈ, ಕ್ರೋಧಃ—ಕೋಪ, ಏಷಃ—ಈ, ರಜಃಗುಣ—ರಜೋಗುಣವು, ಸಮುದ್ಭವಃ—ಹುಟ್ಟಿದ, ಮಹಾ ಅಶನಃ—ಎಲ್ಲವನ್ನೂ ತಿಂದುಹಾಕುವ, ಮಹಾಪಾಪ್ಮಾ—ಮಹಾ ಪಾಪ ಪೂರಿತ, ವಿದ್ಧಿ—ತಿಳಿದುಕೋ, ಏನಮ್—ಇದನ್ನು, ಇಹ—ಈ ಭೌತಿಕ ಜಗತ್ತಿನಲ್ಲಿ, ವೈರಿಣಮ್—ಮಹತ್ತಮವೈರಿ.

**ಪರಮ ದೇವೋತ್ತಮ ಪುರುಷನು ನುಡಿದನು : ಹೇ ಅರ್ಜುನ, ಭೌತಿಕ ರಜೋಗುಣ ಸಂಪರ್ಕದಿಂದ ಹುಟ್ಟಿ, ಅನಂತರ ಕ್ರೋಧವಾಗಿ ಪರಿಣಮಿಸಿ ಎಲ್ಲವನ್ನೂ ತಿಂದು ಹಾಕುವ ಜಗತ್ತಿನ ಪಾಪಪೂರಿತ ವೈರಿಯೇ ಕಾಮ.**

**ಭಾವಾರ್ಥ :** ಜೀವಿಯು ಭೌತಿಕ ಸೃಷ್ಟಿಯ ಸಂಪರ್ಕಕ್ಕೆ ಬಂದಾಗ. ಅವನ ಶಾಶ್ವತ ಕೃಷ್ಣ ಪ್ರೇಮವು ರಜೋಗುಣದ ಸಹವಾಸದಿಂದ ಕಾಮವಾಗಿ ಪರಿಣಮಿಸುತ್ತದೆ. ಅಥವಾ ಭಗವತ್ ಪ್ರೇಮ ಭಾವವು, ಹಾಲು ಹುಳಿಯ ಸಂಪರ್ಕದಿಂದ ಮೊಸರು ಆಗುವಂತೆ, ಕಾಮವಾಗಿ ಪರಿವರ್ತನೆ ಹೊಂದುತ್ತದೆ. ಆಗ ಮತ್ತೆ ಈ ಕಾಮವು ಅತೃಪ್ತವಾದಾಗ ಅದು ಕ್ರೋಧವಾಗಿ ಪರಿಣಮಿಸುತ್ತದೆ; ಕ್ರೋಧವು ಮೋಹದಲ್ಲಿ ಪರಿಣಮಿಸುತ್ತದೆ, ಮತ್ತು ಮೋಹವು ಭೌತಿಕ ಅಸ್ತಿತ್ವವನ್ನು ಮುಂದುವರಿಸುತ್ತದೆ. ಆದ್ದರಿಂದ ಕಾಮವು ಜೀವಿಗೆ ಪರಮ ವೈರಿ, ಮತ್ತು ಕಾಮವೇ ಶುದ್ಧ ಜೀವಿಯನ್ನು ಭೌತಿಕ ಜಗತ್ತಿನ ಸಿಲುಕಿನಲ್ಲಿ ಉಳಿದ ಕೊಳ್ಳುವಂತೆ ಪ್ರೇರೇಪಿಸುತ್ತದೆ. ಕ್ರೋಧವು ತಮೋಗುಣದ ಅಭಿವ್ಯಕ್ತತೆ; ಈ ಗುಣಗಳು ಕ್ರೋಧ ಮತ್ತು ಇತರ ಉಪಫಲಿತಾರ್ಥಗಳಾಗಿ ಪ್ರಕಟವಾಗುತ್ತವೆ. ಆದ್ದರಿಂದ ರಜೋಗುಣವು ತಾಮಸ ಗುಣವಾಗಿ ಪತನ ಹೊಂದುವ ಬದಲು, ಬದುಕುವ

ಮತ್ತು ವರ್ತಿಸುವ ನಿಯತ ವಿಧಾನದಿಂದ ಸತ್ವ ಗುಣಕ್ಕೆ ಉನ್ನತಿಸಲ್ಪಟ್ಟರೆ, ಆಗ ಒಬ್ಬನು ಆಧ್ಯಾತ್ಮಿಕ ಅನುರಾಗದ್ವಾರಾ, ಕ್ರೋಧದ ಅಧಃಪತನದಿಂದ ರಕ್ಷಿಸಲ್ಪಡಬಹುದು.

ಪರಮ ದೇವೋತ್ತಮ ಪುರುಷನು ನಿತ್ಯವೃದ್ಧಿಯಾಗುವ ದಿವ್ಯಾನಂದಕ್ಕಾಗಿ ತನ್ನನ್ನೇ ಅನೇಕವಾಗಿ ವಿಸ್ತರಿಸಿಕೊಂಡಿದ್ದಾನೆ, ಮತ್ತು ಜೀವಿಗಳು ಈ ದಿವ್ಯಾನಂದದ ವಿಭಿನ್ನಾಂಶರು. ಅವರಿಗೂ ಕೂಡ ಕೆಲಮಟ್ಟಿನ ಸ್ವಾತಂತ್ರ್ಯವಿದೆ. ಆದರೆ ತಮ್ಮ ಸ್ವಾತಂತ್ರ್ಯದ ದುರುಪಯೋಗದಿಂದ, ಸೇವಾಭಾವವು ಇಂದ್ರಿಯ ಭೋಗದ ಪ್ರವೃತ್ತಿಗೆ ಮಾರ್ಪಾಡುಗೊಂಡಾಗ, ಅವರು ಕಾಮವಶರಾಗುತ್ತಾರೆ. ಬದ್ಧ ಜೀವರು ಈ ಕಾಮ ಪೂರಿತ ಪ್ರವೃತ್ತಿಗಳನ್ನು ಪೂರೈಸಿಕೊಳ್ಳಲೆಂದೇ ಭಗವಂತನು ಭೌತಿಕ ಸೃಷ್ಟಿಯನ್ನು ಮಾಡಿರುತ್ತಾನೆ ; ಮತ್ತು ಅವರ ಸುದೀರ್ಘ ಕಾಮಪೂರಿತ ಕಾರ್ಯಕಲಾಪಗಳಿಂದ ಪೂರ್ಣವಾಗಿ ಭಗ್ನರಾದಾಗ, ಜೀವಿಗಳು ತಮ್ಮ ನಿಜ ಸ್ಥಾನದ ಬಗ್ಗೆ ವಿಚಾರಿಸಲು ಆರಂಭಿಸುತ್ತಾರೆ.

ಈ ವಿಚಾರಣೆಯೇ ವೇದಾಂತ ಸೂತ್ರಗಳ ಆರಂಭ. ಅಲ್ಲಿ, **ಅಥಾತೋ ಬ್ರಹ್ಮಜಿಜ್ಞಾಸಾ** —ಒಬ್ಬನು ಪರಮನನ್ನು ಕುರಿತು ಜಿಜ್ಞಾಸೆ ಮಾಡಬೇಕು ಎಂದು ಹೇಳಿದೆ. ಮತ್ತು ಶ್ರೀಮದ್ಭಾಗವತದಲ್ಲಿ, **ಜನ್ಮಾದ್ಯಸ್ಯ ಯತೋಽನ್ವಯಾತ್ ಇತರತಶ್ಚ**—ಅಥವಾ, "ಎಲ್ಲದರ ಮೂಲ ಕಾರಣನು ಪರಬ್ರಹ್ಮನು," ಎಂದು ಪರಮನನ್ನು ಪರಿಭಾಷಿಸಿದೆ. ಕಾಮದ ಮೂಲವೂ ಸಹ ಪರಮನಲ್ಲಿದೆ. ಹೀಗೆ, ಕಾಮವನ್ನು ಪರಮನಿಗೆ ಪ್ರೇಮವಾಗಿ, ಅಥವಾ ಕೃಷ್ಣ ಪ್ರಜ್ಞೆಯಾಗಿ ಪರಿವರ್ತಿಸಿದರೆ—ಅಥವಾ ಎಲ್ಲವನ್ನೂ ಕೃಷ್ಣನಿಗಾಗಿ ಇಚ್ಛಿಸಿದರೆ—ಆಗ ಕಾಮ ಮತ್ತು ಕ್ರೋಧ ಎರಡನ್ನೂ ಅಧ್ಯಾತ್ಮೀಕರಿಸಬಹುದು. ಶ್ರೀರಾಮನ ಮಹಾದಾಸನಾದ ಹನುಮಂತನು ರಾವಣನ ಸ್ವರ್ಣ ಪಟ್ಟಣವನ್ನು ಸುಡುವ ಮೂಲಕ ತನ್ನ ಕ್ರೋಧವನ್ನು ಪ್ರಕಟಿಸಿದನು. ಆದರೆ ಹಾಗೆ ಮಾಡಿ ಅವನು ಭಗವಂತನ ಪರಮ ಭಕ್ತನಾದನು. ಇಲ್ಲಿ ಕೂಡ, ಭಗವದ್ಗೀತೆಯಲ್ಲಿ, ಭಗವಂತನ ತೃಪ್ತಿಗಾಗಿ ಅರ್ಜುನನು ತನ್ನ ಕ್ರೋಧವನ್ನು ಅವನ ವೈರಿಗಳ ಮೇಲೆ ತೊಡಗಿಸಬೇಕೆಂದು ಭಗವಂತನು ಪ್ರೇರೇಪಿಸುತ್ತಿದ್ದಾನೆ. ಆದ್ದರಿಂದ ಕಾಮ ಮತ್ತು ಕ್ರೋಧಗಳನ್ನು ಕೃಷ್ಣ ಪ್ರಜ್ಞೆಯಲ್ಲಿ ಬಳಸಿದಾಗ, ಅವುಗಳು ನಮ್ಮ ವೈರಿಗಳಾಗುವ ಬದಲು ನಮ್ಮ ಮಿತ್ರರಾಗುತ್ತವೆ.

**ಧೂಮೇನಾವ್ರಿಯತೇ ವಹ್ನಿರ್ಯಥಾದರ್ಶೋ ಮಲೇನ ಚ ।**
**ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಮ್ ॥ ೩೮ ॥**

ಧೂಮೇನ—ಹೊಗೆಯಿಂದ, ಆವ್ರಿಯತೇ—ಆವರಿಸಲ್ಪಡುವುದು, ವಹ್ನಿಃ—ಅಗ್ನಿಯು, ಯಥಾ—ಅದರಂತೆಯೇ, ಆದರ್ಶಃ—ಕನ್ನಡಿಯು, ಮಲೇನ—ಧೂಳಿನಿಂದ, ಚ—ಕೂಡ, ಯಥಾ—ಅದರಂತೆಯೇ, ಉಲ್ಬೇನ—ಗರ್ಭದಿಂದ, ಆವೃತಃ—ಆವರಿಸಲ್ಪಟ್ಟಿರುವುದು, ಗರ್ಭಃ—ಭ್ರೂಣವು, ತಥಾ—ಹಾಗೆ, ತೇನ—ಆ ಕಾಮದಿಂದ, ಇದಮ್—ಇದು, ಆವೃತಮ್—ಆವರಿಸಲ್ಪಟ್ಟಿರುವುದು.

**ಬೆಂಕಿಯು ಹೊಗೆಯಿಂದ ಆವೃತವಾಗಿರುವಂತೆ, ಕನ್ನಡಿಯು ಧೂಳಿನಿಂದ ಆವರಿಸಲ್ಪಟ್ಟಿರುವಂತೆ, ಅಥವಾ ಭ್ರೂಣವು ಗರ್ಭದಿಂದ ಆವೃತವಾಗಿರುವಂತೆ, ಜೀವಿಯು ವಿವಿಧ ಮಟ್ಟದ ಕಾಮದಿಂದ ಆವೃತವಾಗಿದ್ದಾನೆ.**

**ಭಾವಾರ್ಥ :** ಜೀವಿಗೆ ತನ್ನ ಶುದ್ಧ ಪ್ರಜ್ಞೆಯನ್ನು ಮರೆಗೊಳಿಸುವ ಮೂರು ಮಟ್ಟಗಳಲ್ಲಿನ ಆವರಣಗಳಿವೆ. ಈ ಆವರಣಗಳು, ಬೆಂಕಿಯಲ್ಲಿ ಹೊಗೆಯಂತೆ, ಕನ್ನಡಿಯ ಮೇಲೆ ಧೂಳಿನಂತೆ ಮತ್ತು ಭ್ರೂಣದ ಸುತ್ತ ಗರ್ಭದಂತೆ ಕಾಮದ ಬಗೆ ಬಗೆಯ ಅಭಿವ್ಯಕ್ತತೆಗಳು. ಕಾಮವನ್ನು ಧೂಮಕ್ಕೆ ಹೋಲಿಸಿದಾಗ, ಜೀವ ಕಿಡಿಯ ಅಗ್ನಿಯನ್ನು ಸ್ವಲ್ಪ ಮಟ್ಟಿಗೆ ಕಾಣಬಹುದೆಂದು ತಿಳಿಯಲ್ಪಟ್ಟಿದೆ. ಎಂದರೆ, ಜೀವಿಯು ತನ್ನ ಕೃಷ್ಣಪ್ರಜ್ಞೆಯನ್ನು ಸ್ವಲ್ಪವಾಗಿ ಪ್ರದರ್ಶಿಸಿದಾಗ, ಅವನನ್ನು ಹೊಗೆ ಮುಸುಕಿದ ಬೆಂಕಿಗೆ ಹೋಲಿಸಬಹುದು. ಹೊಗೆಯಿದ್ದಲ್ಲಿ ಅಗ್ನಿಯು ಅವಶ್ಯವಾಗಿದ್ದರೂ, ಪ್ರಾರಂಭ ದೆಶೆಯಲ್ಲಿ ಬೆಂಕಿಯ ಸ್ಪಷ್ಟ ಅಭಿವ್ಯಕ್ತತೆ ಇರುವುದಿಲ್ಲ. ಈ ಹಂತವು ಕೃಷ್ಣ ಪ್ರಜ್ಞೆಯ ಪ್ರಾರಂಭವಿದ್ದಂತೆ. ಕನ್ನಡಿಯ ಮೇಲಿನ ಧೂಳು, ಅನೇಕ ಅಧ್ಯಾತ್ಮ ವಿಧಾನಗಳಿಂದ ಮನಸ್ಸೆಂಬ ಕನ್ನಡಿಯನ್ನು ಸ್ವಚ್ಛಗೊಳಿಸುವ ಪ್ರಕ್ರಿಯೆಯನ್ನು ಸೂಚಿಸುತ್ತದೆ. ಭಗವಂತನ ಪುಣ್ಯನಾಮ ಸಂಕೀರ್ತನೆ ಅತ್ಯಂತ ಶ್ರೇಷ್ಠ ವಿಧಾನ. ಗರ್ಭಾವೃತ ಭ್ರೂಣವು ಅಸಹಾಯಕ ಪರಿಸ್ಥಿತಿಯನ್ನು ತೋರಿಸುವ ಸಾದೃಶ್ಯವಾಗಿದೆ, ಏಕೆಂದರೆ ಗರ್ಭಸ್ಥ ಶಿಶುವು ಚಲಿಸಲಾರದಷ್ಟು ಅಸಹಾಯಕವಾಗಿರುತ್ತದೆ. ಬದುಕಿನ ಸ್ಥಿತಿಯ ಈ ಹಂತವನ್ನು ಮರಗಳಿಗೆ ಹೋಲಿಸಬಹುದು. ಮರಗಳೂ ಕೂಡ ಜೀವಿಗಳೇ, ಆದರೆ ಕಾಮಾಸಕ್ತಿಯ ಮಹಾಪ್ರದರ್ಶನದಿಂದಾಗಿ ಜೀವನದ ಎಂಥ ಪರಿಸ್ಥಿತಿಯಲ್ಲಿ ಇರಿಸಲ್ಪಟ್ಟಿವೆಯೆಂದರೆ, ಅವುಗಳು ಸರಿಸುಮಾರು ಪ್ರಜ್ಞಾರಹಿತವಾಗಿವೆ. ಧೂಳು ಮುಸುಕಿದ ಕನ್ನಡಿಯನ್ನು ಪಶುಪಕ್ಷಿಗಳಿಗೂ, ಹೊಗೆ ಮುಚ್ಚಿದ ಬೆಂಕಿಯನ್ನು ಮನುಷ್ಯನಿಗೂ ಹೋಲಿಸಿದೆ. ಮಾನವ ರೂಪದಲ್ಲಿ ಜೀವಿಯು ಸ್ವಲ್ಪ ಮಟ್ಟಿಗೆ ಕೃಷ್ಣ ಪ್ರಜ್ಞೆಯನ್ನು ಪುನರುಜ್ಜೀವಿಸಿಕೊಳ್ಳಬಹುದು, ಮತ್ತು ಅವನು ಮತ್ತಷ್ಟು ವರ್ಧಿಸಿಕೊಂಡರೆ, ಅಧ್ಯಾತ್ಮ ಜೀವನದ ಅಗ್ನಿಯನ್ನು ಮಾನವ ಜೀವನದಲ್ಲಿ ಉತ್ತೇಜಿಸಬಹುದು. ಬೆಂಕಿಯಲ್ಲಿನ ಹೊಗೆಯನ್ನು ಎಚ್ಚರಿಕೆಯಿಂದ ನಿರ್ವಹಿಸಿದಾಗ, ಅಗ್ನಿಯನ್ನು ಧಗಧಗಿಸುವಂತೆ ಮಾಡಬಹುದು. ಆದುದರಿಂದ ಭೌತಿಕ ಅಸ್ತಿತ್ವದ ತೊಡಕಿನಿಂದ ಜೀವಿಯು ತಪ್ಪಿಸಿಕೊಳ್ಳಲು ಮಾನವ ಜನ್ಮವು ಒಂದು ಅವಕಾಶ. ಮಾನವ ಜನ್ಮದಲ್ಲಿ ಸಮರ್ಥ ಮಾರ್ಗದರ್ಶನದಿಂದ ಕೃಷ್ಣಪ್ರಜ್ಞೆಯನ್ನು ಬೆಳೆಸಿಕೊಂಡು ಒಬ್ಬನು ಕಾಮವೆಂಬ ವೈರಿಯನ್ನು ಗೆಲ್ಲಬಹುದು.

**ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ ।**
**ಕಾಮರೂಪೇಣ ಕೌನ್ತೇಯ ದುಷ್ಪೂರೇಣಾನಲೇನ ಚ ॥ ೩೯ ॥**

ಆವೃತಮ್—ಆವೃತವಾಗಿ, ಜ್ಞಾನಮ್—ಶುದ್ಧ ಪ್ರಜ್ಞೆಯು, ಏತೇನ—ಇದರಿಂದ, ಜ್ಞಾನಿನಃ—ಜ್ಞಾನಿಯು, ನಿತ್ಯವೈರಿಣಾ—ನಿತ್ಯ ಶತ್ರುವಿನಿಂದ, ಕಾಮರೂಪೇಣ—ಕಾಮರೂಪದಿಂದ, ಕೌನ್ತೇಯ— ಹೇ ಕುಂತೀ ಪುತ್ರನೇ, ದುಷ್ಪೂರೇಣ—ಎಂದಿಗೂ ತೃಪ್ತಿಯಾಗದ, ಅನಲೇನ—ಅಗ್ನಿಯಿಂದ, ಚ—ಕೂಡ.

**ಹೀಗೆ ಎಂದಿಗೂ ತೃಪ್ತಿಯಾಗದ ಮತ್ತು ಅಗ್ನಿಯಂತೆ ಸುಡುವ ಕಾಮಾಸಕ್ತಿಯ ರೂಪದ ಅವನ ನಿತ್ಯ ವೈರಿಯಿಂದ ವಿವೇಕವುಳ್ಳ ಜೀವಿಯ ಶುದ್ಧ ಪ್ರಜ್ಞೆಯು ಆವೃತವಾಗುತ್ತದೆ.**

**ಭಾವಾರ್ಥ :** ನಿರಂತರ ಇಂಧನ ಪೂರೈಕೆಯಿಂದ ಹೇಗೆ ಬೆಂಕಿಯನ್ನು ಎಂದಿಗೂ ನಂದಿಸಲಾಗುವುದಿಲ್ಲವೋ, ಹಾಗೆಯೇ, ಎಷ್ಟೇ ಇಂದ್ರಿಯ ಭೋಗದಿಂದಲೂ ಕಾಮಾಸಕ್ತಿಯನ್ನು ತೃಪ್ತಿಗೊಳಿಸಲಾಗುವುದಿಲ್ಲ ಎಂದು ಮನುಸ್ಮೃತಿಯಲ್ಲಿ ಹೇಳಿದೆ. ಈ ಭೌತಿಕ ಜಗತ್ತಿನಲ್ಲಿ ಎಲ್ಲ ಚಟುವಟಿಕೆಗಳ ಕೇಂದ್ರವು ಲೈಂಗಿಕ ಜೀವನ, ಆದ್ದರಿಂದ ಈ ಭೌತಿಕ ಜಗತ್ತನ್ನು **ಮೈಥುನ್ಯ ಆಗಾರ**, ಅಥವಾ ಲೈಂಗಿಕ ಜೀವನದ ಶೃಂಖಲೆ ಎಂದು ಕರೆದಿದೆ. ಸಾಮಾನ್ಯ ಸೆರೆಮನೆಯಲ್ಲಿ ಅಪರಾಧಿಗಳನ್ನು ಸಲಾಕಿಗಳ ಹಿಂದೆ ಇರಿಸುತ್ತಾರೆ ; ಹಾಗೆಯೇ ಭಗವಂತನ ನಿಯಮಗಳಿಗೆ ಅವಿಧೇಯರು ಲೈಂಗಿಕ ಜೀವನದ ಸರಪಣಿಯಿಂದ ಬಂಧಿಸಲ್ಪಡುತ್ತಾರೆ. ಇಂದ್ರಿಯ ತೋಷಣೆಯ ಆಧಾರದ ಮೇಲಿನ ಭೌತಿಕ ನಾಗರಿಕತೆಯ ಪ್ರಗತಿ ಎಂದರೆ, ಜೀವಿಯ ಭೌತಿಕ ಅಸ್ತಿತ್ವದ ಅವಧಿಯನ್ನು ಹೆಚ್ಚಿಸಿದಂತೆ. ಆದ್ದರಿಂದ, ಈ ಕಾಮವು ಜೀವಿಯನ್ನು ಭೌತಿಕ ಪ್ರಪಂಚದಲ್ಲಿ ಇರಿಸಲ್ಪಡುವ ಅಜ್ಞಾನದ ಸಂಕೇತ. ಒಬ್ಬನು ಇಂದ್ರಿಯ ತೋಷಣವನ್ನು ಅನುಭವಿಸುವಾಗ, ಆನಂದದ ಸ್ವಲ್ಪ ಭಾವನೆಯು ಇರಬಹುದು. ಆದರೆ ವಾಸ್ತವವಾಗಿ ಆನಂದವೆನಿಸಿಕೊಂಡಿರುವ ಆ ಭಾವನೆಯು ಇಂದ್ರಿಯ ಭೋಗಿಯ ಅಂತಿಮ ವೈರಿ.

**ಇನ್ದ್ರಿಯಾಣಿ ಮನೋ ಬುದ್ಧಿರಸ್ಯಾಧಿಷ್ಠಾನಮುಚ್ಯತೇ ।**
**ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ॥ ೪೦ ॥**

ಇನ್ದ್ರಿಯಾಣಿ—ಇಂದ್ರಿಯಗಳು, ಮನಃ—ಮನಸ್ಸು, ಬುದ್ಧಿಃ—ಬುದ್ಧಿಯು, ಅಸ್ಯ—ಈ ಕಾಮಾಸಕ್ತಿಯ, ಅಧಿಷ್ಠಾನಮ್—ಕೂರುವ ಸ್ಥಳ, ಉಚ್ಯತೇ—ಎನಿಸಿದ, ಏತೈಃ—ಇವೆಲ್ಲವುಗಳಿಂದ, ವಿಮೋಹಯತಿ—ದಿಗ್ಭ್ರಮೆಗೊಳಿಸುತ್ತದೆ, ಏಷಃ—ಈ ಕಾಮಾಸಕ್ತಿಯು, ಜ್ಞಾನಮ್—ಜ್ಞಾನವನ್ನು, ಆವೃತ್ಯ—ಆವರಿಸಿ, ದೇಹಿನಮ್—ದೇಹಧಾರಿಗಳು.

**ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ, ಈ ಕಾಮಾಸಕ್ತಿಯು ಕೂರುವ ಸ್ಥಳಗಳು. ಅವುಗಳ ಮೂಲಕ ಕಾಮಾಸಕ್ತಿಯು ಜೀವಿಯ ನಿಜ ಜ್ಞಾನವನ್ನು ಆವರಿಸುತ್ತದೆ, ಮತ್ತು ಅವನನ್ನು ದಿಗ್ಭ್ರಮೆಗೊಳಿಸುತ್ತದೆ.**

**ಭಾವಾರ್ಥ :** ವೈರಿಯು ಬದ್ಧ ಆತ್ಮನ ದೇಹದಲ್ಲಿ, ವಿವಿಧ ಮಹತ್ವದ ಸ್ಥಾನಗಳನ್ನು ಆಕ್ರಮಿಸಿದ್ದಾನೆ. ಆದ್ದರಿಂದ ಶ್ರೀಕೃಷ್ಣನು, ವೈರಿಯನ್ನು ಗೆಲ್ಲಲು ಇಚ್ಛಿಸುವವನು ಅವನನ್ನು ಎಲ್ಲಿ ಕಾಣಬಹುದೆಂದು ಆ ಸ್ಥಾನಗಳ ಬಗ್ಗೆ ಸೂಚನೆ ನೀಡುತ್ತಿದ್ದಾನೆ. ಮನಸ್ಸು ಇಂದ್ರಿಯಗಳ ಎಲ್ಲ ಚಟುವಟಿಕೆಗಳ ಕೇಂದ್ರ, ಹೀಗೆ ನಾವು ಇಂದ್ರಿಯ ವಿಷಯಗಳನ್ನು ಕುರಿತು ಕೇಳಿದಾಗ, ಸಾಮಾನ್ಯವಾಗಿ, ಮನಸ್ಸು ಇಂದ್ರಿಯ ತೋಷಣದ ಎಲ್ಲ ವಿಚಾರಗಳ ಆಗಾರವಾಗುತ್ತದೆ; ಮತ್ತು ಪರಿಣಾಮವಾಗಿ ಮನಸ್ಸು ಮತ್ತು ಇಂದ್ರಿಯಗಳು ಕಾಮಾಸಕ್ತಿಯ ಭಂಡಾರಗಳಾಗುತ್ತವೆ. ಅನಂತರ ಬುದ್ಧಿಯ ವಿಭಾಗವು ಅಂಥ ಕಾಮಪೂರಿತ ಪ್ರವೃತ್ತಿಗಳ ರಾಜಧಾನಿಯಾಗುತ್ತದೆ. ಬುದ್ಧಿಯೇ ಚೇತನಾತ್ಮನ ನಿಕಟ ನೆರೆಯವನು. ಕಾಮಬುದ್ಧಿಯು ಚೇತನಾತ್ಮನು ಮಿಥ್ಯಾಹಂಕಾರವನ್ನು ಆರ್ಜಿಸಲು ಮತ್ತು ತನ್ನನ್ನು ಜಡದೊಂದಿಗೂ,

ಮತ್ತು ಹೀಗೆ ಮನಸ್ಸು ಮತ್ತು ಇಂದ್ರಿಯಗಳೊಂದಿಗೂ ಗುರುತಿಸಿಕೊಳ್ಳುವಂತೆ ಪ್ರಭಾವ ಬೀರುತ್ತದೆ. ಚೇತನಾತ್ಮನು ಭೌತಿಕ ಇಂದ್ರಿಯ ಭೋಗ ಲಂಪಟನಾಗುತ್ತಾನೆ ಮತ್ತು ಇದನ್ನು ನಿಜ ಸುಖವೆಂದು ತಪ್ಪಾಗಿ ತಿಳಿಯುತ್ತಾನೆ. ಚೇತನಾತ್ಮನ ಮಿಥ್ಯಾ ಗುರುತಿಸುವಿಕೆಯನ್ನು ಶ್ರೀಮದ್ಭಾಗವತದಲ್ಲಿ (10.84.13) ಬಹು ಸೊಗಸಾಗಿ ವಿವರಿಸಿದೆ:

ಯಸ್ಯಾತ್ಮಬುದ್ಧಿಃ ಕುಣಪೇ ತ್ರಿಧಾತುಕೇ
ಸ್ವಧೀಃ ಕಲತ್ರಾದಿಷು ಭೌಮ ಇಜ್ಯಧೀಃ।
ಯತ್ತೀರ್ಥಬುದ್ಧಿಃ ಸಲಿಲೇ ನ ಕರ್ಹಿಚಿಜ್ಜ-
ನೇಷ್ವಭಿಜ್ಞೇಷು ಸ ಏವ ಗೋಖರಃ॥

"ಮೂರು ಧಾತುಗಳಿಂದ ಮಾಡಿರುವ ಈ ದೇಹವನ್ನು ತನ್ನೊಡನೆ ಗುರುತಿಸಿಕೊಳ್ಳುವ, ಈ ದೇಹದ ಉಪಉತ್ಪತ್ತಿಗಳನ್ನು ತನ್ನ ಬಾಂಧವರೆಂದು ತಿಳಿಯುವ, ತನ್ನ ಜನ್ಮಭೂಮಿಯನ್ನು ಪೂಜಾರ್ಹವೆಂದು ತಿಳಿಯುವ ಮತ್ತು ದಿವ್ಯ ಜ್ಞಾನಿಗಳ ಸಂದರ್ಶನಕ್ಕಾಗಿ ಅಲ್ಲದೆ ಕೇವಲ ಸ್ನಾನ ಮಾಡಲು ಮಾತ್ರ ತೀರ್ಥಕ್ಷೇತ್ರಗಳಿಗೆ ಹೋಗುವ ಮಾನವನನ್ನು ಒಂದು ಕತ್ತೆ ಅಥವಾ ಹಸು ಎಂದು ತಿಳಿಯಬೇಕು."

**ತಸ್ಮಾತ್ತ್ವಮಿನ್ದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।**
**ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಮ್ ॥ ೪೧ ॥**

ತಸ್ಮಾತ್—ಆದ್ದರಿಂದ, ತ್ವಮ್—ನೀನು, ಇನ್ದ್ರಿಯಾಣಿ—ಇಂದ್ರಿಯಗಳನ್ನು, ಆದೌ—ಪ್ರಾರಂಭದಲ್ಲಿ, ನಿಯಮ್ಯ—ನಿಯಂತ್ರಿಸುವುದರಿಂದ, ಭರತರ್ಷಭ—ಹೇ ಭರತ ವಂಶ ಶ್ರೇಷ್ಠನೇ, ಪಾಪ್ಮಾನಮ್—ಪಾಪದ ಮಹಾ ಸಂಕೇತವಾದ, ಪ್ರಜಹಿ—ತಡೆಗಟ್ಟು, ಹಿ—ಖಂಡಿತವಾಗಿಯೂ, ಏನಮ್—ಇದು, ಜ್ಞಾನ—ಜ್ಞಾನ, ವಿಜ್ಞಾನ—ಶುದ್ಧ ಆತ್ಮನ ವೈಜ್ಞಾನಿಕ ಜ್ಞಾನ, ನಾಶನಮ್—ನಾಶಕನು.

**ಆದ್ದರಿಂದ, ಹೇ ಅರ್ಜುನ, ಭರತ ಶ್ರೇಷ್ಠನೇ, ಪ್ರಾರಂಭದ ದೆಶೆಯಲ್ಲಿಯೇ ಈ ಮಹಾ ಸಂಕೇತವನ್ನು (ಕಾಮಾಸಕ್ತಿ) ಇಂದ್ರಿಯಗಳ ನಿಯಂತ್ರಣದಿಂದ ತಡೆಗಟ್ಟು, ಮತ್ತು ಜ್ಞಾನ ಮತ್ತು ಆತ್ಮ ಸಾಕ್ಷಾತ್ಕಾರದ ಈ ನಾಶಕನನ್ನು ಸಂಹರಿಸು.**

**ಭಾವಾರ್ಥ :** ಆತ್ಮನ ನಿಶ್ಚಿತ ಜ್ಞಾನ ಮತ್ತು ಆತ್ಮ ಸಾಕ್ಷಾತ್ಕಾರದ ಬಲವತ್ತರವಾದ ಆಸೆಯನ್ನು ನಾಶಮಾಡುವ ಮಹಾ ಪಾಪಮಯ ಶತ್ರುವಾದ ಕಾಮಾಸಕ್ತಿಯನ್ನು ತಡೆಯಲು, ಪ್ರಾರಂಭದಿಂದಲೇ ಇಂದ್ರಿಯಗಳನ್ನು ನಿಯಂತ್ರಿಸುವಂತೆ ಭಗವಂತನು ಅರ್ಜುನನಿಗೆ ಸಲಹೆ ನೀಡಿದನು. **ಜ್ಞಾನವು** ಆತ್ಮೇತರದಿಂದ ಭಿನ್ನವಾದ ಆತ್ಮನ ಜ್ಞಾನಕ್ಕೆ, ಅಥವಾ ಚೇತನಾತ್ಮನು ದೇಹವಲ್ಲ ಎಂಬ ಜ್ಞಾನಕ್ಕೆ ಸಂಬಂಧಿಸುತ್ತದೆ. **ವಿಜ್ಞಾನವು** ಚೇತನಾತ್ಮನ ಸ್ವರೂಪ ಸ್ಥಿತಿಯನ್ನು ಮತ್ತು ಪರಮೋನ್ನತ ಆತ್ಮನೊಡನೆ ಅವನ ಸಂಬಂಧವನ್ನು ಕುರಿತ ನಿಶ್ಚಿತ ಜ್ಞಾನವಾಗಿರುತ್ತದೆ. ಇದು ಶ್ರೀಮದ್ಭಾಗವತದಲ್ಲಿ (2.9.31) ಹೀಗೆ ವಿವರಿಸಲ್ಪಟ್ಟಿದೆ:

ಜ್ಞಾನಂ ಪರಮಗುಹ್ಯಂ ಮೇ ಯದ್ ವಿಜ್ಞಾನಸಮನ್ವಿತಮ್।
ಸರಹಸ್ಯಂ ತದಂಗಂ ಚ ಗೃಹಾಣ ಗದಿತಂ ಮಯಾ।

"ಆತ್ಮ ಮತ್ತು ಪರಮಾತ್ಮನ ಜ್ಞಾನವು ಬಹು ಗೋಪ್ಯವೂ ಮತ್ತು ರಹಸ್ಯ ಗರ್ಭಿತವೂ ಆಗಿರುತ್ತದೆ. ಆದರೆ ಅಂಥ ಜ್ಞಾನ ಮತ್ತು ನಿಶ್ಚಿತ ಸಾಕ್ಷಾತ್ಕಾರವನ್ನು, ಅವುಗಳ ಅನೇಕ ಅಂಶಗಳೊಡನೆ ಭಗವಂತನಿಂದಲೇ ವಿವರಿಸಲ್ಪಟ್ಟರೆ ಅರ್ಥಮಾಡಿಕೊಳ್ಳಬಹುದು." ಭಗವದ್ಗೀತೆಯು ನಮಗೆ ಆತ್ಮನ ಈ ಸಾಮಾನ್ಯ ಮತ್ತು ನಿಶ್ಚಿತ ಜ್ಞಾನವನ್ನು ನೀಡುತ್ತದೆ. ಜೀವಿಗಳು ಭಗವಂತನ ವಿಭಿನ್ನಾಂಶರು, ಆದ್ದರಿಂದ ಅವರು ಭಗವಂತನ ಸೇವೆ ಮಾಡಲೆಂದೇ ಉದ್ದಿಶ್ಯರು. ಈ ಪ್ರಜ್ಞೆಯನ್ನು ಕೃಷ್ಣಪ್ರಜ್ಞೆ ಎಂದು ಕರೆದಿದೆ. ಅದರಂತೆ ಒಬ್ಬನು ಜೀವನದ ಪ್ರಾರಂಭದಿಂದಲೇ ಈ ಕೃಷ್ಣ ಪ್ರಜ್ಞೆಯನ್ನು ಕಲಿತುಕೊಳ್ಳಬೇಕು. ಅದರಿಂದ ಒಬ್ಬನು ಪೂರ್ಣ ಕೃಷ್ಣಪ್ರಾಜ್ಞಿಯಾಗಬಹುದು ಮತ್ತು ಅದರಂತೆ ವರ್ತಿಸಬಹುದು.

ಪ್ರತಿಯೊಬ್ಬ ಜೀವಿಗೂ ಸ್ವಾಭಾವಿಕವಾಗಿರುವ ಭಗವತ್ ಪ್ರೇಮದ ವಕ್ರ ಸ್ವರೂಪವು ಕಾಮ, ಅಷ್ಟೆ. ಆದರೆ ಪ್ರಾರಂಭದಲ್ಲೇ ಒಬ್ಬನು ಕೃಷ್ಣ ಪ್ರಜ್ಞೆಯಲ್ಲಿ ಶಿಕ್ಷಣ ಪಡೆದರೆ, ಸಹಜ ಭಗವತ್ಪ್ರೇಮವು ಕಾಮಾಸಕ್ತಿಗೆ ಕ್ಷೀಣಿಸಲಾರದು. ಭಗವತ್ಪ್ರೇಮವು ಕಾಮಾಸಕ್ತಿಗೆ ಕ್ಷೀಣಿಸಿದಾಗ, ಮತ್ತೆ ಸಾಮಾನ್ಯ ಸ್ಥಿತಿಗೆ ಹಿಂದಿರುಗುವುದು ಬಹಳ ಕಷ್ಟ. ಆದರೂ ಕೃಷ್ಣ ಪ್ರಜ್ಞೆಯು ಅದೆಷ್ಟು ಪ್ರಬಲವಾಗಿದೆಯೆಂದರೆ, ಬಹಳ ತಡವಾಗಿ ಪ್ರಾರಂಭಿಸಿದವನು ಕೂಡ ಭಕ್ತಿಯುತ ಸೇವೆಯ ನಿಯಂತ್ರಣ ತತ್ವಗಳನ್ನು ಅನುಸರಿಸಿ ಭಗವತ್ಪ್ರೇಮಿಯಾಗಬಹುದು. ಹೀಗೆ ಜೀವನದ ಯಾವುದೇ ಹಂತದಿಂದ, ಅಥವಾ ಅದರ ಅವಸರದ ಅರಿವು ಮೂಡಿದ ಕಾಲದಿಂದ, ಒಬ್ಬನು ಇಂದ್ರಿಯಗಳನ್ನು ಕೃಷ್ಣ ಪ್ರಜ್ಞೆಯಲ್ಲಿ, ಎಂದರೆ ಭಗವಂತನ ಭಕ್ತಿಯುತ ಸೇವೆಯಲ್ಲಿ ನಿಯಂತ್ರಿಸಲು ಪ್ರಾರಂಭಿಸಿ, ಕಾಮಾಸಕ್ತಿಯನ್ನು—ಮಾನವ ಜೀವನದ ಅತ್ಯುನ್ನತ ಪರಿಪೂರ್ಣ ಮಟ್ಟವಾದ—ಭಗವತ್ಪ್ರೇಮಕ್ಕೆ ತಿರುಗಿಸಬಹುದು.

**ಇನ್ದ್ರಿಯಾಣಿ ಪರಾಣ್ಯಾಹುರಿನ್ದ್ರಿಯೇಭ್ಯಃ ಪರಂ ಮನಃ ।**
**ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥ ೪೨ ॥**

ಇನ್ದ್ರಿಯಾಣಿ—ಇಂದ್ರಿಯಗಳು, ಪರಾಣಿ—ಶ್ರೇಷ್ಠ, ಆಹುಃ—ಎಂದು ಹೇಳಲ್ಪಟ್ಟಿವೆ, ಇನ್ದ್ರಿಯೇಭ್ಯಃ—ಇಂದ್ರಿಯಗಳಿಗಿಂತ ಹೆಚ್ಚು, ಪರಮ್—ಶ್ರೇಷ್ಠ, ಮನಃ—ಮನಸ್ಸು, ಮನಸಃ—ಮನಸ್ಸಿಗಿಂತ ಹೆಚ್ಚು, ತು—ಕೂಡ, ಪರಾ—ಶ್ರೇಷ್ಠ, ಬುದ್ಧಿಃ—ಬುದ್ಧಿಯು, ಯಃ—ಯಾರು, ಬುದ್ಧೇಃ—ಬುದ್ಧಿಗಿಂತ ಹೆಚ್ಚು, ಪರತಃ—ಶ್ರೇಷ್ಠನು, ತು—ಆದರೆ, ಸಃ—ಅವನು.

**ಕರ್ಮೇಂದ್ರಿಯಗಳು ಜಡ ದ್ರವ್ಯಕ್ಕಿಂತಲೂ ಶ್ರೇಷ್ಠ; ಮನಸ್ಸು ಇಂದ್ರಿಯಗಳಿಗಿಂತ ಶ್ರೇಷ್ಠ; ಬುದ್ಧಿ ಮನಸ್ಸಿಗಿಂತ ಇನ್ನೂ ಶ್ರೇಷ್ಠ; ಮತ್ತು ಅವನು (ಆತ್ಮನು) ಆ ಬುದ್ಧಿಗಿಂತಲೂ ಇನ್ನೂ ಶ್ರೇಷ್ಠನು.**

**ಭಾವಾರ್ಥ :** ಇಂದ್ರಿಯಗಳು ಕಾಮಾಸಕ್ತಿಯ ಚಟುವಟಿಕೆಗಳಿಗೆ ಬೇರೆ ಬೇರೆ ದ್ವಾರಗಳು. ಕಾಮಾಸಕ್ತಿಯು ದೇಹದಲ್ಲಿ ಅಡಗಿರುತ್ತದೆ, ಆದರೆ ಅದು ಇಂದ್ರಿಯಗಳ ಮೂಲಕ

ಹೊರ ಹೊಮ್ಮುತ್ತದೆ.ಆದ್ದರಿಂದ ಇಂದ್ರಿಯಗಳು ಇಡೀ ದೇಹಕ್ಕಿಂತ ಶ್ರೇಷ್ಠ.ಶ್ರೇಷ್ಠ ಪ್ರಜ್ಞೆ ಅಥವಾ ಕೃಷ್ಣ ಪ್ರಜ್ಞೆ ಇರುವಾಗ, ಈ ನಿರ್ಗಮದ್ವಾರಗಳು ಉಪಯೋಗದಲ್ಲಿ ಇರುವುದಿಲ್ಲ. ಕೃಷ್ಣ ಪ್ರಜ್ಞೆಯಲ್ಲಿ ಆತ್ಮನು ಪರಮ ದೇವೋತ್ತಮ ಪುರುಷನೊಂದಿಗೆ ನೇರ ಸಂಪರ್ಕ ಹೊಂದುತ್ತಾನೆ; ಆದ್ದರಿಂದ ದೈಹಿಕ ಕ್ರಿಯೆಗಳ ಕ್ರಮಬದ್ಧ ಶ್ರೇಣಿಯು, ಇಲ್ಲಿ ವರ್ಣಿಸಿರುವಂತೆ, ಪರಮೋತ್ತಮ ಆತ್ಮನಲ್ಲಿ ಅಂತಿಮವಾಗಿ ಕೊನೆಗೊಳ್ಳುತ್ತದೆ. ದೈಹಿಕ ಕ್ರಿಯೆ ಎಂದರೆ ಇಂದ್ರಿಯಗಳ ಕಾರ್ಯ, ಮತ್ತು ಇಂದ್ರಿಯಗಳನ್ನು ನಿಲ್ಲಿಸುವುದು ಎಂದರೆ ದೈಹಿಕ ಎಲ್ಲ ಕಾರ್ಯಗಳನ್ನು ನಿಲ್ಲಿಸುವುದು ಎಂದು ಅರ್ಥ. ಆದರೆ ಮನಸ್ಸು ಕ್ರಿಯಾಶೀಲವಾಗಿರುವುದರಿಂದ, ದೇಹವು ನಿಷ್ಕ್ರಿಯ ಮತ್ತು ವಿಶ್ರಾಂತವಾಗಿದ್ದರೂ, ಅದು ಕನಸು ಕಾಣುವಾಗ ಮಾಡುವಂತೆ—ಮನಸ್ಸು ವರ್ತಿಸುತ್ತದೆ. ಈ ಮನಸ್ಸಿಗೂ ಮೇಲೆ ಬುದ್ಧಿಶಕ್ತಿಯ ನಿರ್ಧಾರವಿದೆ, ಮತ್ತು ಆ ಬುದ್ಧಿಗೂ ಮೇಲೆ ಆತ್ಮವು ಇದೆ. ಆದ್ದರಿಂದ ಆತ್ಮನು ನೇರವಾಗಿ ಪರಮೋತ್ತಮನಲ್ಲಿ ನಿರತನಾಗಿದ್ದರೆ, ಸ್ವಾಭಾವಿಕವಾಗಿಯೇ ಅಧೀನವಾದ ಇತರ ಎಲ್ಲವೂ, ಎಂದರೆ ಬುದ್ಧಿ, ಮನಸ್ಸು ಮತ್ತು ಇಂದ್ರಿಯಗಳು ತಾವಾಗಿಯೇ ನಿರತವಾಗುತ್ತವೆ. ಕಠೋಪನಿಷತ್ತಿನಲ್ಲಿ ಇಂತಹುದೇ ಒಂದು ಶ್ಲೋಕವಿದೆ. ಅದರಲ್ಲಿ ಇಂದ್ರಿಯ ತೋಷಣೆಯ ವಿಷಯಗಳು ಇಂದ್ರಿಯಗಳಿಗಿಂತಲೂ ಶ್ರೇಷ್ಠ, ಮತ್ತು ಮನಸ್ಸು ಇಂದ್ರಿಯ ವಿಷಯಗಳಿಗಿಂತಲೂ ಶ್ರೇಷ್ಠ ಎಂದು ಹೇಳಿದೆ. ಆದ್ದರಿಂದ ಮನಸ್ಸು ನೇರವಾಗಿ ಮತ್ತು ನಿರಂತರವಾಗಿ ಭಗವಂತನ ಸೇವೆಯಲ್ಲಿ ತೊಡಗಿದ್ದರೆ, ಇಂದ್ರಿಯಗಳು ಬೇರೆ ರೀತಿಯಲ್ಲಿ ನಿರತವಾಗುವ ಅವಕಾಶವಿರುವುದಿಲ್ಲ. ಈ ಮಾನಸಿಕ ಪ್ರವೃತ್ತಿಯನ್ನು ಈಗಾಗಲೇ ವಿವರಿಸಲಾಗಿದೆ. **ಪರಂ ದೃಷ್ಟ್ವಾ ನಿವರ್ತತೇ.** ಮನಸ್ಸು ಭಗವಂತನ ದಿವ್ಯ ಸೇವೆಯಲ್ಲಿ ತೊಡಗಿಸಿದ್ದರೆ,ಅದು ಕೀಳು ಪ್ರವೃತ್ತಿಗಳಲ್ಲಿ ತೊಡಗುವ ಸಂಭವವಿಲ್ಲ. ಕಠೋಪನಿಷತ್ತಿನಲ್ಲಿ ಆತ್ಮನನ್ನು ಮಹಾನ್ ಎಂದು ವರ್ಣಿಸಿದೆ. ಆದ್ದರಿಂದ ಆತ್ಮನು ಎಲ್ಲಕ್ಕಿಂತಲೂ, ಎಂದರೆ ಇಂದ್ರಿಯ ವಿಷಯಗಳು, ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿಗಿಂತಲೂ ಮೇಲಿನವನು. ಆದ್ದರಿಂದ ಆತ್ಮನ ಸ್ವರೂಪ ಸ್ಥಿತಿಯನ್ನು ನೇರವಾಗಿ ಅರಿತುಕೊಳ್ಳುವುದು ಇಡೀ ಸಮಸ್ಯೆಯ ಪರಿಹಾರ.

ಬುದ್ಧಿಯಿಂದ ಒಬ್ಬನು ಆತ್ಮನ ಸ್ವರೂಪ ಸ್ಥಿತಿಯನ್ನು ಅರಿತುಕೊಳ್ಳಬೇಕು, ಮತ್ತು ನಂತರ ಮನಸ್ಸನ್ನು ಸದಾ ಕೃಷ್ಣಪ್ರಜ್ಞೆಯಲ್ಲಿ ತೊಡಗಿಸಬೇಕು. ಅದು ಇಡೀ ಸಮಸ್ಯೆಯನ್ನು ಪರಿಹರಿಸುವುದು. ಆರಂಭ ಆಧ್ಯಾತ್ಮಿಗೆ ಇಂದ್ರಿಯ ವಿಷಯಗಳಿಂದ ದೂರವಿರಲು ಸಾಮಾನ್ಯವಾಗಿ ಸಲಹೆ ನೀಡಿದೆ. ಆದರೆ ಅದಲ್ಲದೆ, ಒಬ್ಬನು ಬುದ್ಧಿ ಉಪಯೋಗಿಸಿ ಮನಸ್ಸನ್ನು ಬಲಪಡಿಸಿಕೊಳ್ಳಬೇಕು. ಪರಮ ದೇವೋತ್ತಮ ಪುರುಷನಿಗೆ ಪೂರ್ಣ ಶರಣಾಗತನಾಗಿ, ಬುದ್ಧಿಯಿಂದ ಒಬ್ಬನು ತನ್ನ ಮನಸ್ಸನ್ನು ಕೃಷ್ಣಪ್ರಜ್ಞೆಯಲ್ಲಿ ತೊಡಗಿಸಿದರೆ, ಆಗ ಮನಸ್ಸು ತಾನಾಗಿಯೇ ಹೆಚ್ಚು ಬಲಗೊಳ್ಳುತ್ತದೆ, ಮತ್ತು ಇಂದ್ರಿಯಗಳು ಸರ್ಪಗಳಂತೆ ಬಹಳ ಬಲವಾಗಿದ್ದರೂ, ವಿಷಹಲ್ಲುಗಳಿಲ್ಲದ ಸರ್ಪಗಳಂತೆ ಅವು ಪರಿಣಾಮಕಾರಿಯಾಗಿರುವುದಿಲ್ಲ. ಆತ್ಮನು ಬುದ್ಧಿ, ಮನಸ್ಸು ಮತ್ತು ಇಂದ್ರಿಯಗಳ ಒಡೆಯನಾಗಿದ್ದರೂ, ಅವನನ್ನು ಕೃಷ್ಣಪ್ರಜ್ಞೆಯಲ್ಲಿ ಕೃಷ್ಣನ ಸಂಗದಿಂದ ಬಲಪಡಿಸದ ಹೊರತು, ಅವನು ಉದ್ವಿಗ್ನ ಮನದ ಕಾರಣ ಪತನವಾಗುವ ಅವಕಾಶವು ಇದ್ದೇ ಇರುತ್ತದೆ.

**ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ ।**
**ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ ॥ ೪೩ ॥**

ಏವಮ್—ಹೀಗೆ, ಬುದ್ಧೇಃ—ಬುದ್ಧಿಗಿಂತ, ಪರಮ್—ಶ್ರೇಷ್ಠ, ಬುಧ್ವಾ—ತಿಳಿದು, ಸಂಸ್ತಭ್ಯ—ಸ್ಥಿರಗೊಳಿಸಿ, ಆತ್ಮಾನಮ್—ಮನಸ್ಸನ್ನು, ಆತ್ಮನಾ—ಉದ್ದೇಶಪೂರ್ವಕ ಬುದ್ಧಿಯಿಂದ, ಜಹಿ—ಜಯಿಸು, ಶತ್ರುಮ್—ವೈರಿಯನ್ನು, ಮಹಾಬಾಹೋ—ಹೇ ಮಹಾಬಾಹುವೇ, ಕಾಮರೂಪಮ್—ಕಾಮಾಸಕ್ತಿಯ ರೂಪದಲ್ಲಿ, ದುರಾಸದಮ್—ಭಯಾನಕ.

**ಹೀಗೆ, ತಾನು ಭೌತಿಕ ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿಗೆ ಅತೀತ ನೆಂದು ತಿಳಿದು, ಹೇ ಮಹಾಬಾಹು ಅರ್ಜುನನೇ, ಒಬ್ಬನು ಉದ್ದೇಶಪೂರ್ವಕ ಆಧ್ಯಾತ್ಮಿಕ ಬುದ್ಧಿಯಿಂದ (ಕೃಷ್ಣ ಪ್ರಜ್ಞೆ) ಮನಸ್ಸನ್ನು ಸ್ಥಿರಗೊಳಿಸಬೇಕು, ಮತ್ತು ಹೀಗೆ—ಅಧ್ಯಾತ್ಮ ಶಕ್ತಿಯಿಂದ—ಕಾಮಾಸಕ್ತಿಯೆಂಬ ಈ ತೃಪ್ತಿಪಡಿಸಲಾಗದ ವೈರಿಯನ್ನುಗೆಲ್ಲಬೇಕು.**

**ಭಾವಾರ್ಥ :** ವ್ಯಕ್ತಿತ್ವರಹಿತ ಶೂನ್ಯತೆಯೇ ಅಂತಿಮ ಗುರಿಯೆಂದು ಭಾವಿಸದೆ, ತಾನು ಪರಮ ದೇವೋತ್ತಮ ಪುರುಷನ ನಿತ್ಯ ದಾಸನೆಂಬುದನ್ನು ತಿಳಿದು, ಕೃಷ್ಣಪ್ರಜ್ಞೆಗೆ ಹೋಗಲು, ಭಗವದ್ಗೀತೆಯ ಈ ಮೂರನೆಯ ಅಧ್ಯಾಯವು ನಿರ್ಣಾಯಕ ಮಾರ್ಗದರ್ಶಕ ವಾಗಿದೆ. ಜೀವನದ ಭೌತಿಕ ಅಸ್ತಿತ್ವದಲ್ಲಿ,ಒಬ್ಬನು ನಿಶ್ಚಯವಾಗಿಯೂ ಕಾಮಾಸಕ್ತಿಯ ಮತ್ತು ಭೌತಿಕ ಪ್ರಕೃತಿಯ ಸಂಪನ್ಮೂಲಗಳ ಮೇಲೆ ಅಧಿಪತ್ಯ ಮಾಡುವ ಇಚ್ಛೆಯ ಪ್ರವೃತ್ತಿಗಳಿಂದ ಪ್ರಭಾವಿತನಾಗಿರುತ್ತಾನೆ. ಒಡೆತನದ ಮತ್ತು ಇಂದ್ರಿಯ ತೋಷಣದ ಇಚ್ಛೆ ಬದ್ಧ ಆತ್ಮನ ಪರಮ ವೈರಿ; ಆದರೆ ಕೃಷ್ಣ ಪ್ರಜ್ಞೆಯ ಬಲದಿಂದ ಒಬ್ಬನು ಭೌತಿಕ ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿಯನ್ನು ನಿಯಂತ್ರಿಸಬಹುದು. ಒಬ್ಬನು ಇದ್ದಕ್ಕಿದ್ದಹಾಗೆ ಕರ್ಮ ವನ್ನು ಮತ್ತು ವಿಧಿತ ಕರ್ತವ್ಯಗಳನ್ನು ತ್ಯಜಿಸಬೇಕಾಗಿಲ್ಲ; ಆದರೆ ಕ್ರಮೇಣ ಕೃಷ್ಣ ಪ್ರಜ್ಞೆ ಯನ್ನು ವರ್ಧಿಸಿಕೊಂಡು, ಭೌತಿಕ ಇಂದ್ರಿಯಗಳಿಂದ ಮತ್ತು ಮನಸ್ಸಿನಿಂದ ಪ್ರಭಾವಿತ ನಾಗದೆ—ತನ್ನ ಶುದ್ಧ ವ್ಯಕ್ತಿತ್ವದ ಕಡೆಗೆ ನಿರ್ದೇಶಿತ ಸ್ಥಿರ ಬುದ್ಧಿಯಿಂದ—ಒಬ್ಬನು ದಿವ್ಯ ಸ್ಥಾನದಲ್ಲಿ ಸನ್ನಿವೇಶಿತನಾಗಿರಬಹುದು. ಇದುವೇ ಈ ಅಧ್ಯಾಯದ ಸಮಗ್ರ ಸಾರಾಂಶ. ಭೌತಿಕ ಅಸ್ತಿತ್ವದ ಅಪರಿಪಕ್ವ ಹಂತದಲ್ಲಿ, ತಾತ್ವಿಕ ಊಹಾಪೋಹಗಳು ಮತ್ತು ಯೋಗಾಸನ ಗಳ ಅಭ್ಯಾಸವೆಂದು ಕರೆಯಲ್ಪಡುವ ಇಂದ್ರಿಯಗಳ ನಿಯಂತ್ರಣದ ಕೃತಕ ಪ್ರಯತ್ನಗಳು, ಒಬ್ಬನ ಆಧ್ಯಾತ್ಮ ಜೀವನದೆಡೆಗೆ ಎಂದೂ ಸಹಾಯವಾಗಲಾರವು. ಉನ್ನತ ಬುದ್ಧಿಯಿಂದ ಅವನು ಕೃಷ್ಣಪ್ರಜ್ಞೆಯಲ್ಲಿ ಶಿಕ್ಷಣವನ್ನು ಹೊಂದಬೇಕು.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯಲ್ಲಿನ ಕರ್ಮಯೋಗ ಎಂಬ ಮೂರನೆಯ ಅಧ್ಯಾಯದ ಭಕ್ತಿವೇದಾಂತ ತಾತ್ಪರ್ಯವು ಮುಗಿಯಿತು.**

# ಅಧ್ಯಾಯ ನಾಲ್ಕು



# ದಿವ್ಯಜ್ಞಾನ

**ಶ್ರೀಭಗವಾನುವಾಚ**

**ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್ ।**
**ವಿವಸ್ವಾನ್ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥ ೧ ॥**

ಶ್ರೀಭಗವಾನ್ ಉವಾಚ—ಪರಮ ದೇವೋತ್ತಮ ಪುರುಷನು ನುಡಿದನು, ಇಮಮ್—ಇದನ್ನು, ವಿವಸ್ವತೇ—ಸೂರ್ಯ ದೇವನಿಗೆ, ಯೋಗಮ್–ಭಗವಂತನೊಂದಿಗೆ ಒಬ್ಬನ ಸಂಬಂಧದ ವಿಜ್ಞಾನವನ್ನು, ಪ್ರೋಕ್ತವಾನ್—ಉಪದೇಶಿಸಿದನು, ಅಹಮ್—ನಾನು, ಅವ್ಯಯಮ್—ಅವಿನಾಶಿ, ವಿವಸ್ವಾನ್—ವಿವಸ್ವಾನ್ (ಸೂರ್ಯ ದೇವನು), ಮನವೇ—ಮಾನವ ಕುಲದ ತಂದೆಗೆ (ವೈವಸ್ವತನು), ಪ್ರಾಹ—ಹೇಳಿದನು, ಮನುಃ—ಮಾನವ ಕುಲದ ತಂದೆ, ಇಕ್ಷ್ವಾಕವೇ—ಇಕ್ಷ್ವಾಕು ರಾಜನಿಗೆ, ಅಬ್ರವೀತ್—ಹೇಳಿದನು.

**ದೇವೋತ್ತಮ ಪುರುಷ ಭಗವಾನ್ ಶ್ರೀ ಕೃಷ್ಣನು ನುಡಿದನು: ಈ ಅವಿನಾಶಿಯಾದ ಯೋಗವಿಜ್ಞಾನವನ್ನು ನಾನು ಸೂರ್ಯದೇವ ವಿವಸ್ವಾನನಿಗೆ ಉಪದೇಶಿಸಿದೆನು, ಮತ್ತು ವಿವಸ್ವಾನನು ಅದನ್ನು ಮಾನವ ಕುಲದ ತಂದೆ ಮನುವಿಗೆ ಉಪದೇಶಿಸಿದನು, ಮತ್ತೆ ಸರದಿಯಲ್ಲಿ ಮನು ಇದನ್ನು ಇಕ್ಷ್ವಾಕುವಿಗೆ ಉಪದೇಶಿಸಿದನು.**

**ಭಾವಾರ್ಥ :** ಭಗವದ್ಗೀತೆಯ ಇತಿಹಾಸವನ್ನು ಬಹು ಪ್ರಾಚೀನ ಕಾಲದಿಂದಲೇ ಗುರುತಿಸಿರುವುದನ್ನು ನಾವು ಇಲ್ಲಿ ಕಾಣುತ್ತೇವೆ; ಆಗ ಅದು ಸೂರ್ಯ ಲೋಕದಿಂದ ಆರಂಭವಾಗಿ, ಎಲ್ಲ ಲೋಕಗಳ ರಾಜವರ್ಗಕ್ಕೆ ನೀಡಲ್ಪಟ್ಟಿತ್ತು. ಸಕಲ ಲೋಕಗಳ ರಾಜರು ವಿಶೇಷವಾಗಿ ಪ್ರಜಾರಕ್ಷಣೆಗೆ ಉದ್ದಿಷ್ಟ; ಆದ್ದರಿಂದ ಪ್ರಜೆಗಳನ್ನು ಆಳಲು ಮತ್ತು ಅವರನ್ನು ಕಾಮದ ಭೌತಿಕ ಬಂಧನದಿಂದ ರಕ್ಷಿಸಲು ಸಮರ್ಥರಾಗಲು ಭಗವದ್ಗೀತಾ

ವಿಜ್ಞಾನವನ್ನು ರಾಜವರ್ಗದವರು ಅರಿತಿರಬೇಕು. ಮಾನವ ಜೀವನವು ಪರಮ ದೇವೋತ್ತಮ ಪುರುಷನೊಂದಿಗೆ ನಿತ್ಯ ಸಂಬಂಧದಲ್ಲಿ ಅಧ್ಯಾತ್ಮ ಜ್ಞಾನದ ಅಭಿವೃದ್ಧಿಗಾಗಿ ಉದ್ದಿಷ್ಟ, ಮತ್ತು ಸಕಲ ರಾಜ್ಯಗಳ ಮತ್ತು ಲೋಕಗಳ ಅಧಿಪತಿಗಳು ಈ ಜ್ಞಾನವನ್ನು ಪ್ರಜೆಗಳಿಗೆ ಶಿಕ್ಷಣ, ಸಂಸ್ಕೃತಿ ಮತ್ತು ಭಕ್ತಿಯಿಂದ ವಿತರಣೆಮಾಡುವುದು ಅಗತ್ಯವಾಗಿರುತ್ತದೆ. ಹೀಗೆ ಮಾನವ ಜನ್ಮದ ಅವಕಾಶವನ್ನು ಉಪಯೋಗಿಸಿಕೊಂಡು ಜನರು ಈ ಮಹಾವಿಜ್ಞಾನದ ಲಾಭವನ್ನು ಪಡೆಯಲು ಮತ್ತು ಯಶಸ್ವಿಪಥವನ್ನು ಅನುಸರಿಸಲು ಎಲ್ಲಾ ರಾಜ್ಯಗಳ ಅಧಿಪತಿಗಳು ಈ ಕೃಷ್ಣ ಪ್ರಜ್ಞಾ ವಿಜ್ಞಾನವನ್ನು ಹರಡಬೇಕೆಂದು ಉದ್ದೇಶಿಸಲಾಗಿದೆ.

ಸೌರವ್ಯೂಹದಲ್ಲಿ ಇರುವ ಎಲ್ಲ ಲೋಕಗಳಿಗೆ ಮೂಲವಾದ ಸೂರ್ಯಲೋಕದ ದೊರೆಯಾದ ಸೂರ್ಯದೇವನನ್ನು ಈ ಕಲ್ಪದಲ್ಲಿ ವಿವಸ್ವಾನ್ ಎಂದು ಕರೆಯಲಾಗಿದೆ. ಬ್ರಹ್ಮ ಸಂಹಿತೆಯಲ್ಲಿ (5.52) ಹೀಗೆ ಹೇಳಿದೆ:

ಯಚ್ಚಕ್ಷುರೇಷ ಸವಿತಾ ಸಕಲಗ್ರಹಾಣಾಂ
ರಾಜಾ ಸಮಸ್ತಸುರಮೂರ್ತಿರಶೇಷತೇಜಾಃ।
ಯಸ್ಯಾಜ್ಞಯಾ ಭ್ರಮತಿ ಸಂಭೃತಕಾಲಚಕ್ರೋ
ಗೋವಿನ್ದಮಾದಿಪುರುಷಂ ತಮಹಂ ಭಜಾಮಿ॥

ಬ್ರಹ್ಮನು ಹೇಳಿದನು, "ಯಾರ ಆಜ್ಞೆಗೆ ಒಳಪಟ್ಟು ಸಕಲ ಗ್ರಹಗಳ ರಾಜನಾದ ಸೂರ್ಯನು ಅಪಾರ ಶಕ್ತಿ ಮತ್ತು ಶಾಖವನ್ನು ಹೊಂದುವನೋ, ಆ ಪರಮ ದೇವೋತ್ತಮ ಪುರುಷ, ಗೋವಿಂದ (ಕೃಷ್ಣ), ಆದಿಪುರುಷನನ್ನು ನಾನು ಭಜಿಸುತ್ತೇನೆ. ಸೂರ್ಯನು ಭಗವಂತನ ಕಣ್ಣನ್ನು ಪ್ರತಿನಿಧಿಸುತ್ತಾನೆ ಮತ್ತು ಅವನ ಆಜ್ಞೆಗೆ ವಿಧೇಯನಾಗಿ ತನ್ನ ಪಥದಲ್ಲಿ ಚಲಿಸುತ್ತಾನೆ".

ಸೂರ್ಯ ಗ್ರಹಗಳ ದೊರೆ. ಶಾಖ ಮತ್ತು ಬೆಳಕನ್ನು ಪೂರೈಸುವ ಮೂಲಕ ಇತರ ಎಲ್ಲ ಗ್ರಹಗಳನ್ನು ನಿಯಂತ್ರಿಸುವ ಸೂರ್ಯ ಲೋಕದ ಮೇಲೆ ಸೂರ್ಯ ದೇವನು (ಈಗ ವಿವಸ್ವಾನ್ ಎಂಬ ಹೆಸರಿನ) ಆಧಿಪತ್ಯಮಾಡುತ್ತಾನೆ. ಕೃಷ್ಣನ ಆದೇಶದ ಮೇರೆಗೆ ಅವನು ಪರಿಭ್ರಮಿಸುತ್ತಾನೆ. ಶ್ರೀಕೃಷ್ಣನು ಆದಿಯಲ್ಲಿ ವಿವಸ್ವಾನನನ್ನು ಭಗವದ್ಗೀತಾ ವಿಜ್ಞಾನವನ್ನು ಅರಿತುಕೊಳ್ಳಲು ತನ್ನ ಪ್ರಥಮ ಶಿಷ್ಯನನ್ನಾಗಿ ಮಾಡಿಕೊಂಡನು. ಆದ್ದರಿಂದ ಗೀತೆಯು ಕ್ಷುದ್ರ ನಿಕೃಷ್ಟ ಐಹಿಕ ಪಂಡಿತನಿಗಾಗಿ ಇರುವ ಊಹಾತ್ಮಕ ಗ್ರಂಥವಾಗಿರದೆ, ಅನಾದಿ ಕಾಲದಿಂದ ಬರುತ್ತಿರುವ ಜ್ಞಾನದ ಪ್ರಮಾಣ ಗ್ರಂಥವಾಗಿದೆ.

ಮಹಾಭಾರತದಲ್ಲಿ (ಶಾಂತಿ ಪರ್ವ 348.51.52) ನಾವು ಭಗವದ್ಗೀತೆಯ ಇತಿಹಾಸವನ್ನು ಹೀಗೆ ಗುರುತಿಸಬಹುದು:

ತ್ರೇತಾಯುಗಾದೌ ಚ ತತೋ ವಿವಸ್ವಾನ್ಮನವೇ ದದೌ
ಮನುಶ್ಚ ಲೋಕಭೃತ್ಯರ್ಥಂ ಸುತಾಯೇಕ್ಷ್ವಾಕವೇ ದದೌ
ಇಕ್ಷ್ವಾಕುಣಾ ಚ ಕಥಿತೋ ವ್ಯಾಪ್ಯ ಲೋಕಾನವಸ್ಥಿತಃ

"ತ್ರೇತಾಯುಗದ ಪ್ರಾರಂಭದಲ್ಲಿ, ಭಗವತ್ ಸಂಬಂಧದ ಈ ವಿಜ್ಞಾನವನ್ನು **ವಿವಸ್ವಾನನು** ಮನುವಿಗೆ ನೀಡಿದನು. ಮಾನವ ಕುಲದ ತಂದೆಯಾಗಿ ಮನು ಅದನ್ನು ಈ **ಭೂಲೋಕದ** ಅಧಿಪತಿಯಾದ ತನ್ನ ಮಗ ಮತ್ತು ಭಗವಾನ್ ಶ್ರೀರಾಮಚಂದ್ರನು ಅವತರಿಸಿದ **ರಘು** ವಂಶದ ಪೂರ್ವಜನೂ ಆದ ಇಕ್ಷ್ವಾಕು ಮಹಾರಾಜನಿಗೆ ನೀಡಿದನು." ಆದ್ದರಿಂದ ಭಗವದ್ಗೀತೆಯು ಇಕ್ಷ್ವಾಕು ಮಹಾರಾಜನ ಕಾಲದಿಂದ ಮಾನವ ಸಮಾಜದಲ್ಲಿ ಉಳಿದಿದೆ.

ನಾವು ಈಗ 4,32,000 ವರ್ಷಗಳ ಪರ್ಯಂತ ಕಲಿಯುಗದಲ್ಲಿ ಕೇವಲ ಐದು ಸಾವಿರ ವರ್ಷಗಳನ್ನು ಕಳೆದಿದ್ದೇವೆ, ಇದಕ್ಕಿಂತ ಮುಂಚೆ ದ್ವಾಪರ ಯುಗ (8,00,000 ವರ್ಷಗಳು), ಮತ್ತು ಅದಕ್ಕಿಂತ ಮುಂಚೆ ತ್ರೇತಾಯುಗ (12,00,000 ವರ್ಷಗಳು) ಇದ್ದವು. ಹೀಗೆ ಸುಮಾರು 20,05,000 ವರ್ಷಗಳ ಹಿಂದೆ ಮನು ತನ್ನ ಶಿಷ್ಯ, ಮಗ ಹಾಗೂ ಈ ಭೂಲೋಕದ ದೊರೆಯಾದ ಇಕ್ಷ್ವಾಕು ಮಹಾರಾಜನಿಗೆ ಭಗವದ್ಗೀತೆಯನ್ನು ಬೋಧಿಸಿದನು. ಈಗಿರುವ ಮನುವಿನ ಆಯುರ್ಮಾನವು 30,53,00,000 ವರ್ಷಗಳು, ಅದರಲ್ಲಿ ಈಗಾಗಲೇ 12,04,00,000 ವರ್ಷಗಳು ಮುಗಿದಿವೆ. ಮನು ಹುಟ್ಟುವ ಮುಂಚೆ ಶ್ರೀಕೃಷ್ಣನು ಗೀತೆಯನ್ನು ತನ್ನ ಶಿಷ್ಯ ಸೂರ್ಯದೇವ ವಿವಸ್ವಾನನಿಗೆ ಉಪದೇಶಿಸಿದನೆಂದು ಸ್ವೀಕರಿಸಿದಲ್ಲಿ, ಕನಿಷ್ಠ ಪಕ್ಷ 12,04,00,000 ವರ್ಷಗಳ ಹಿಂದೆಯೇ ಗೀತೆಯು ಬೋಧಿಸಲ್ಪಟ್ಟಿತೆಂಬುದು ಸ್ಥೂಲ ಅಂದಾಜು; ಮತ್ತು ಅದು ಮಾನವ ಸಮಾಜದಲ್ಲಿ ಇಪ್ಪತ್ತು ಲಕ್ಷ ವರ್ಷಗಳಿಂದ ಅಸ್ತಿತ್ವದಲ್ಲಿದೆ. ಅದು ಶ್ರೀಕೃಷ್ಣನಿಂದ ಅರ್ಜುನನಿಗೆ ಐದು ಸಾವಿರ ವರ್ಷಗಳ ಹಿಂದೆ ಮತ್ತೆ ಉಪದೇಶಿಸಲ್ಪಟ್ಟಿತ್ತು. ಇದು ಗೀತೆಯ ಮತ್ತು ಅದನ್ನು ಬೋಧಿಸಿದ ಶ್ರೀಕೃಷ್ಣನ ಪ್ರಕಾರ ಗೀತೆಯ ಇತಿಹಾಸದ ಸ್ಥೂಲ ಅಂದಾಜು. ಅದು ಸೂರ್ಯದೇವ ವಿವಸ್ವಾನನಿಗೆ ಉಪದೇಶಿಸಲ್ಪಟ್ಟಿತು, ಏಕೆಂದರೆ ಅವನು ಕ್ಷತ್ರಿಯನು ಮತ್ತು ಸೂರ್ಯದೇವನ ವಂಶಜರಾದ ಎಲ್ಲ ಕ್ಷತ್ರಿಯರ ಅಥವಾ ಸೂರ್ಯವಂಶ ಕ್ಷತ್ರಿಯರ ತಂದೆ. ಭಗವದ್ಗೀತೆಯು ಪರಮ ದೇವೋತ್ತಮ ಪುರುಷನಿಂದ ಬೋಧಿಸಲ್ಪಟ್ಟಿರುವುದರಿಂದ ವೇದದಷ್ಟೇ—ಶ್ರೇಷ್ಠ, ಮತ್ತು ಈ ಜ್ಞಾನವು **ಅಪೌರುಷೇಯ** ಅಥವಾ ಮಾನವಾತೀತ. ವೇದೋಪದೇಶಗಳನ್ನು ಮಾನವ ವ್ಯಾಖ್ಯಾನವಿಲ್ಲದೆ ಯಥಾರೂಪದಲ್ಲಿ ಅಂಗೀಕರಿಸುವುದರಿಂದ, ಗೀತೆಯನ್ನೂ ಸಹ ಯಾವ ಐಹಿಕ ವ್ಯಾಖ್ಯಾನವಿಲ್ಲದೆ ಅಂಗೀಕರಿಸಬೇಕು. ಐಹಿಕ ವಿವಾದರತರು ತಮ್ಮದೇ ಆದ ರೀತಿಗಳಲ್ಲಿ ಗೀತೆಯ ಬಗ್ಗೆ ಊಹಾಪೋಹ ಮಾಡಬಹುದು, ಆದರೆ ಅದು ಭಗವದ್ಗೀತೆಯ ಯಥಾರೂಪವಲ್ಲ. ಆದ್ದರಿಂದ, ಭಗವದ್ಗೀತೆಯನ್ನು ಯಥಾರೂಪ ಪರಂಪರಾಪ್ರಾಪ್ತವಾಗಿ ಅಂಗೀಕರಿಸಬೇಕು, ಮತ್ತು ಅದನ್ನು ಭಗವಂತನು ಸೂರ್ಯದೇವನಿಗೆ ಹೇಳಿದನೆಂದೂ, ಮತ್ತು ಸೂರ್ಯದೇವನು ತನ್ನ ಮಗನಾದ ಮನುವಿಗೆ ಹೇಳಿದವನೆಂದೂ, ಮತ್ತು ಮನು ತನ್ನ ಮಗನಾದ ಇಕ್ಷ್ವಾಕುವಿಗೆ ಹೇಳಿದನೆಂದೂ ಇಲ್ಲಿ ವರ್ಣಿಸಿದೆ.

**ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ ।**
**ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರನ್ತಪ ॥ ೨ ॥**

ಏವಮ್—ಹೀಗೆ, ಪರಂಪರಾ—ಶಿಷ್ಯ ಪರಂಪರೆಯಿಂದ, ಪ್ರಾಪ್ತಮ್—ಸ್ವೀಕೃತವಾದ, ಇಮಮ್—ಈ ವಿಜ್ಞಾನವು, ರಾಜಋಷಯಃ—ರಾಜ ಋಷಿಗಳು, ವಿದುಃ—ತಿಳಿದುಕೊಂಡರು, ಸಃ—ಆ ಜ್ಞಾನವು, ಕಾಲೇನ—ಕಾಲಕ್ರಮದಲ್ಲಿ, ಇಹ—ಈ ಲೋಕದಲ್ಲಿ, ಮಹತಾ—ಮಹತ್ತಾದ, ಯೋಗಃ—ಭಗವಂತನೊಂದಿಗೆ ಸಂಬಂಧ ವಿಜ್ಞಾನವು, ನಷ್ಟಃ—ಖಿಲವಾಯಿತು, ಪರನ್ತಪ—ಹೇ ಶತ್ರುಸೂದನ ಅರ್ಜುನನೇ.

**ಈ ಸರ್ವೋತ್ಕೃಷ್ಟ ವಿಜ್ಞಾನವು ಹೀಗೆ ಶಿಷ್ಯ ಪರಂಪರೆಯ ಮೂಲಕ ಸ್ವೀಕೃತವಾಯಿತು, ಮತ್ತು ರಾಜಋಷಿಗಳು ಅದನ್ನು ಆ ರೀತಿಯಲ್ಲಿ ಅರಿತುಕೊಂಡರು. ಆದರೆ ಕಾಲಾಂತರದಲ್ಲಿ ಈ ಪರಂಪರೆಯು ಖಿಲವಾಯಿತು. ಅದರಿಂದಾಗಿ, ಯಥಾರೂಪ ಈ ವಿಜ್ಞಾನವು ನಷ್ಟವಾದಂತೆ ಕಾಣುತ್ತದೆ.**

**ಭಾವಾರ್ಥ :** ಗೀತೆಯು ವಿಶೇಷವಾಗಿ ರಾಜಋಷಿಗಳಿಗಾಗಿ ಉದ್ದೇಶಿತವೆಂದು ಸ್ಪಷ್ಟವಾಗಿ ಹೇಳಿದೆ. ಏಕೆಂದರೆ ಪ್ರಜೆಗಳನ್ನು ಆಳುವಾಗ ಅದರ ಉದ್ದೇಶವನ್ನು ಅವರು ಕಾರ್ಯರೂಪಕ್ಕೆ ತರಬೇಕಾಗಿತ್ತು. ಭಗವದ್ಗೀತೆಯ ಮೌಲ್ಯವು ಯಾರಿಗೂ ಪ್ರಯೋಜನವಾಗದಂತೆ ನಷ್ಟಗೊಳಿಸುವ ಮತ್ತು ಅದಕ್ಕೆ ಮನಬಂದಂತೆ ನಾನಾಬಗೆಯ ಅರ್ಥಸೃಷ್ಟಿ ಮಾಡುವ ದೈತ್ಯರಿಗಾಗಿ ಅದು ಖಂಡಿತ ಎಂದೂ ಉದ್ದಿಷ್ಟವಲ್ಲ. ಪಾಪಭೀರುಗಳಲ್ಲದ ವ್ಯಾಖ್ಯಾನಕಾರರುಗಳ ಉದ್ದೇಶಗಳಿಂದ ಮೂಲ ಉದ್ದೇಶವು ನಷ್ಟವಾದೊಡನೆಯೇ ಶಿಷ್ಯ ಪರಂಪರೆಯನ್ನು ಮತ್ತೆ ಸ್ಥಾಪಿಸುವ ಅಗತ್ಯ ತಲೆದೋರಿತು. ಐದು ಸಾವಿರ ವರ್ಷಗಳ ಹಿಂದೆಯೇ, ಶಿಷ್ಯ ಪರಂಪರೆಯು ಖಿಲವಾಗಿದೆ ಎಂಬುದನ್ನು ಶ್ರೀಕೃಷ್ಣನು ಕಂಡನು, ಅಂತೆಯೇ ಗೀತೆಯ ಉದ್ದೇಶವು ನಷ್ಟವಾದಂತೆ ಕಾಣುತ್ತದೆ ಎಂದು ಅವನು ಸಾರಿದನು. ಅದೇ ರೀತಿಯಾಗಿ, ಈ ಕಾಲದಲ್ಲಿ ಕೂಡ ಗೀತೆಯ ಬಹಳಷ್ಟು ಆವೃತ್ತಿಗಳು (ವಿಶೇಷವಾಗಿ ಇಂಗ್ಲೀಷಿನಲ್ಲಿ) ಇವೆ, ಆದರೆ ಸರಿಸುಮಾರು ಅವುಗಳೆಲ್ಲವೂ ಅಧಿಕೃತ ಶಿಷ್ಯ ಪರಂಪರೆಗೆ ಅನುಸಾರವಾಗಿಲ್ಲ. ಅನೇಕ ಲೌಕಿಕ ವಿದ್ವಾಂಸರು ನಾನಾ ಬಗೆಯ ವ್ಯಾಖ್ಯಾನಗಳನ್ನು ಮಾಡಿದ್ದಾರೆ, ಆದರೆ, ಅವರು ಶ್ರೀಕೃಷ್ಣನ ಮಾತುಗಳನ್ನು ಬಳಸಿಕೊಂಡು ಒಳ್ಳೆಯ ವ್ಯಾಪಾರ ಮಾಡುತ್ತಿದ್ದರೂ, ಅವರು ಶ್ರೀಕೃಷ್ಣನನ್ನು ಪರಮ ದೇವೋತ್ತಮ ಪುರುಷನೆಂದು ಒಪ್ಪಿಕೊಳ್ಳುವುದಿಲ್ಲ. ಇದು ಆಸುರೀ ಭಾವ, ಏಕೆಂದರೆ, ಭಗವಂತನಲ್ಲಿ ನಂಬಿಕೆ ಇಲ್ಲದೆ ಭಗವಂತನ ಸ್ವತ್ತನ್ನು ಮಾತ್ರ ಭೋಗಿಸುವವರು ಅಸುರರು. ಆದ್ದರಿಂದ ಪರಂಪರಾ ಪದ್ಧತಿಯಲ್ಲಿ ಸಾಗಿಬಂದ ಯಥಾರೂಪದ ಇಂಗ್ಲೀಷಿನ ಗೀತೆಯ ಆವೃತ್ತಿಯೊಂದರ ಮಹದವಶ್ಯಕತೆ ಇದ್ದುದರಿಂದ, ಈ ಮಹತ್ ಕೊರತೆಯನ್ನು ನೀಗಿಸಲು ಇಲ್ಲಿ ಪ್ರಯತ್ನಿಸಿದೆ. ಭಗವದ್ಗೀತಾ—ಯಥಾರೂಪ ಸ್ವೀಕರಿಸಿದರೆ—ಮಾನವ ಕುಲಕ್ಕೆ ಒಂದು ಮಹಾ ವರಪ್ರಸಾದ. ಆದರೆ ಅದನ್ನು ಒಂದು ತಾತ್ವಿಕ ಊಹಾಪೋಹಗಳ ಗ್ರಂಥವೆಂದು ಅಂಗೀಕರಿಸಿದರೆ, ಕೇವಲ ವ್ಯರ್ಥ ಕಾಲಹರಣ.

**ಸ ಏವಾಯಂ ಮಯಾ ತೇsದ್ಯ ಯೋಗಃ ಪ್ರೋಕ್ತಃ ಪುರಾತನಃ ।**
**ಭಕ್ತೋsಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಮ್ ॥ ೩ ॥**

ಸಃ—ಅದೇ, ಏವ—ಖಂಡಿತವಾಗಿ, ಅಯಮ್—ಇದು, ಮಯಾ—ನನ್ನಿಂದ, ತೇ—ನಿನಗೆ, ಅದ್ಯ—ಈ ದಿನ, ಯೋಗಃ—ಯೋಗ ವಿಜ್ಞಾನವು, ಪ್ರೋಕ್ತಃ—ಹೇಳಲ್ಪಟ್ಟಿದೆ, ಪುರಾತನಃ—ಬಹು ಪುರಾತನವಾದ, ಭಕ್ತಃ—ಭಕ್ತನು, ಅಸಿ—ನೀನು ಆಗಿರುವೆ, ಮೇ—ನನ್ನ, ಸಖಾ—ಸ್ನೇಹಿತ, ಚ—ಕೂಡ, ಇತಿ—ಆದ್ದರಿಂದ, ರಹಸ್ಯಮ್—ರಹಸ್ಯವು, ಹಿ—ಖಂಡಿತವಾಗಿ, ಏತತ್—ಈ, ಉತ್ತಮಮ್—ದಿವ್ಯವಾದುದು.

**ಪರಮನೊಂದಿಗೆ ಸಂಬಂಧದ ಬಹು ಪ್ರಾಚೀನವಾದ ವಿಜ್ಞಾನವು ಈ ದಿನ ನಿನಗೆ ನನ್ನಿಂದ ಹೇಳಲ್ಪಟ್ಟಿದೆ, ಏಕೆಂದರೆ ನೀನು ನನ್ನ ಭಕ್ತನೂ ಹಾಗೂ ಸಖನೂ ಆಗಿರುವೆ, ಮತ್ತು ಇದರಿಂದ ಈ ವಿಜ್ಞಾನದ ದಿವ್ಯ ರಹಸ್ಯವನ್ನು ಅರಿಯಬಲ್ಲೆ.**

**ಭಾವಾರ್ಥ :** ಭಕ್ತ ಮತ್ತು ಅಸುರ ಎಂಬ ಎರಡು ವರ್ಗದ ಜನರಿದ್ದಾರೆ. ಅರ್ಜುನನು ಭಗವದ್ಭಕ್ತನಾದ ಕಾರಣ, ಈ ಮಹಾ ವಿಜ್ಞಾನವನ್ನು ನೀಡಲು ಅವನನ್ನು ಭಗವಂತನು ಆಯ್ದುಕೊಂಡನು, ಆದರೆ ಈ ಮಹಾನ್ ರಹಸ್ಯ ವಿಜ್ಞಾನವನ್ನು ಅರಿತುಕೊಳ್ಳುವುದು ಅಸುರರಿಗೆ ಸಾಧ್ಯವಿಲ್ಲ. ಈ ಮಹಾ ಜ್ಞಾನ ಗ್ರಂಥದ ಅನೇಕ ಆವೃತ್ತಿಗಳಲ್ಲಿ ಕೆಲವು ಭಕ್ತರ ವ್ಯಾಖ್ಯಾನಗಳಿಂದ ಕೂಡಿವೆ, ಮತ್ತೆ ಕೆಲವು ಅಸುರರ ವ್ಯಾಖ್ಯಾನಗಳಿಂದ ಕೂಡಿವೆ. ಭಕ್ತರಿಂದ ಪ್ರಣೀತವಾದ ವ್ಯಾಖ್ಯಾನಗಳು ನಿಜವಾದುವು, ಅಸುರರ ವ್ಯಾಖ್ಯಾನಗಳು ಅಪ್ರಯೋಜಕ. ಅರ್ಜುನನು ಶ್ರೀಕೃಷ್ಣನನ್ನು ಪರಮ ದೇವೋತ್ತಮ ಪುರುಷನೆಂದು ಅಂಗೀಕರಿಸಿದನು, ಮತ್ತು ಅರ್ಜುನನನ್ನು ಅನುಸರಿಸಿ ಬಂದ ಗೀತೆಯ ಯಾವುದೇ ವ್ಯಾಖ್ಯಾನವು ಈ ಮಹಾ ವಿಜ್ಞಾನದ ನಿಮಿತ್ತಕ ನಿಜ ಭಕ್ತಿಯುತ ಸೇವೆ. ಆದರೆ ಅಸುರರು ಶ್ರೀಕೃಷ್ಣನನ್ನು ಯಥಾರೂಪ ಸ್ವೀಕರಿಸುವುದಿಲ್ಲ. ಬದಲಾಗಿ, ಅವರು ಕೃಷ್ಣನ ಬಗ್ಗೆ ಯಾವುದೋ ಕಲ್ಪನೆ ಸೃಷ್ಟಿಸುತ್ತಾರೆ ಮತ್ತು ಸಾಮಾನ್ಯ ಓದುಗರನ್ನು ಕೃಷ್ಣನ ಉಪದೇಶಗಳಿಂದ ತಪ್ಪುದಾರಿಗೆ ಎಳೆಯುತ್ತಾರೆ. ಇಲ್ಲಿ ಅಂಥ ದಾರಿತಪ್ಪಿಸುವ ಮಾರ್ಗಗಳ ಬಗ್ಗೆ ಎಚ್ಚರಿಕೆ ಇದೆ. ಅರ್ಜುನನಿಂದ ಶಿಷ್ಯ ಪರಂಪರೆಯನ್ನು ಅನುಸರಿಸಲು ಪ್ರಯತ್ನಿಸಬೇಕು, ಮತ್ತು ಹೀಗೆ ಶ್ರೀಮದ್ಭಗವದ್ಗೀತೆಯ ಮಹಾ ಜ್ಞಾನದಿಂದ ಪ್ರಯೋಜನವನ್ನು ಪಡೆಯಬೇಕು.

**ಅರ್ಜುನ ಉವಾಚ**

**ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ ।**
**ಕಥಮೇತದ್ ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ॥ ೪ ॥**

ಅರ್ಜುನ ಉವಾಚ—ಅರ್ಜುನನು ನುಡಿದನು, ಅಪರಮ್—ಕಿರಿಯ, ಭವತಃ—ನಿನ್ನ, ಜನ್ಮ—ಜನನವು, ಪರಮ್—ಹಿರಿಯ, ಜನ್ಮ—ಜನನವು, ವಿವಸ್ವತಃ—ಸೂರ್ಯದೇವನ, ಕಥಮ್—ಹೇಗೆ, ಏತದ್—ಇದನ್ನು, ವಿಜಾನೀಯಾಮ್—ನಾನು ಅರ್ಥಮಾಡಿಕೊಳ್ಳಲಿ, ತ್ವಮ್—ನೀನು, ಆದೌ—ಆದಿಯಲ್ಲಿ, ಪ್ರೋಕ್ತವಾನ್—ಉಪದೇಶಿಸಿದೆ, ಇತಿ—ಹೀಗೆ.

**ಅರ್ಜುನನು ನುಡಿದನು: ಸೂರ್ಯದೇವ ವಿವಸ್ವಾನನು ಜನ್ಮತಃ ನಿನಗಿಂತ ಹಿರಿಯನು. ಆದಿಯಲ್ಲಿ ಅವನಿಗೆ ನೀನು ಈ ವಿಜ್ಞಾನವನ್ನು ಉಪದೇಶಿಸಿದೆ ಎಂದು ನಾನು ಹೇಗೆ ತಿಳಿದುಕೊಳ್ಳಲಿ?**

**ಭಾವಾರ್ಥ :** ಅರ್ಜುನನು ಭಗವಂತನ ಅಂಗೀಕೃತ ಭಕ್ತನು. ಹಾಗಿರಲು ಅವನು ಕೃಷ್ಣನ ಮಾತುಗಳನ್ನು ನಂಬದಿರುವುದು ಹೇಗೆ ಸಾಧ್ಯ? ನಿಜ ಸಂಗತಿ ಎಂದರೆ, ಅರ್ಜುನನು ತನಗಾಗಿ ವಿಚಾರಿಸುತ್ತಿಲ್ಲ. ಕೃಷ್ಣನು ಪರಮ ದೇವೋತ್ತಮ ಪುರುಷನೆಂದು ನಂಬದವರಿಗಾಗಿ, ಅಥವಾ ಕೃಷ್ಣನು ಪರಮ ದೇವೋತ್ತಮ ಪುರುಷನೆಂದು ಅಂಗೀಕರಿಸುವ ವಿಚಾರ ಹಿಡಿಸದ ಅಸುರರಿಗಾಗಿ ವಿಚಾರಿಸುತ್ತಿದ್ದಾನೆ; ಪರಮ ದೇವೋತ್ತಮ ಪುರುಷ ಅಥವಾ ಕೃಷ್ಣನು ತನಗೆ ತಿಳಿದಿಲ್ಲವೆಂಬಂತೆ, ಅವರಿಗಾಗಿಯೇ ಅರ್ಜುನನು ಈ ಬಗ್ಗೆ ವಿಚಾರಿಸುತ್ತಿದ್ದಾನೆ. ಹತ್ತನೆಯ ಅಧ್ಯಾಯದಿಂದ ಸ್ಪಷ್ಟವಾಗುವಂತೆ, ಕೃಷ್ಣನು ಪರಮ ದೇವೋತ್ತಮ ಪುರುಷನು, ಮತ್ತು ಸರ್ವಮೂಲ ಸ್ರೋತನು ಮತ್ತು ದಿವ್ಯತೆಯ ಕೊನೆಯ ಮಾತು ಎಂಬುದು ಅರ್ಜುನನಿಗೆ ಪೂರ್ಣವಾಗಿ ತಿಳಿದಿತ್ತು. ಈ ಭೂಮಿಯ ಮೇಲೆ ಕೃಷ್ಣನು ದೇವಕೀಸುತನಾಗಿ ಕಾಣಿಸಿಕೊಂಡದ್ದು ಉಂಟು. ಶ್ರೀಕೃಷ್ಣನೇ ಶಾಶ್ವತ ಮೂಲ ಪುರುಷನಾಗಿ, ಪರಮ ದೇವೋತ್ತಮ ಪುರುಷನಾಗಿ ಹೇಗೆ ಉಳಿದುಕೊಂಡು ಬಂದನು ಎಂಬುದು ಸಾಮಾನ್ಯ ಮಾನವನಿಗೆ ಅರ್ಥವಾಗುವುದು ಬಹಳ ಕಷ್ಟ. ಆದ್ದರಿಂದ ಈ ಅಂಶದ ಸ್ಪಷ್ಟೀಕರಣಕ್ಕಾಗಿ, ಸ್ವಯಂ ಕೃಷ್ಣನೇ ಅಧಿಕೃತವಾಗಿ ಮಾತನಾಡಲು ಅರ್ಜುನನು ಈ ಪ್ರಶ್ನೆಯನ್ನು ಕೃಷ್ಣನ ಮುಂದೆ ಇರಿಸಿದನು. ಶ್ರೀಕೃಷ್ಣನು ಪರಮಾಧಿಕಾರಿ ಎಂಬುದನ್ನು ಸಮಗ್ರ ಜಗತ್ತು ಈಗಷ್ಟೇ ಅಲ್ಲ, ಅನಾದಿಕಾಲದಿಂದಲೂ ಒಪ್ಪಿಕೊಂಡು ಬಂದಿದೆ; ಅಸುರರು ಮಾತ್ರ ಅವನನ್ನು ನಿರಾಕರಿಸುತ್ತಾರೆ. ಹೇಗಾದರೂ, ಕೃಷ್ಣನು ಎಲ್ಲರೂ ಒಪ್ಪಿಕೊಂಡ ಅಧಿಕಾರಿಯಾಗಿರುವುದರಿಂದ, ಅಸುರರಿಗೆ ಮತ್ತು ಅವರ ಅನುಯಾಯಿಗಳಿಗೆ ತಿಳಿಯುವ ಹಾಗೆ ಅವನನ್ನು ಅಪಾರ್ಥಮಾಡಲು ಸದಾ ಯತ್ನಿಸುವ ಅಸುರರಿಂದ ವರ್ಣಿಸಲ್ಪಡದೆ, ಕೃಷ್ಣನು ತನ್ನನ್ನೇ ವರ್ಣಿಸಿಕೊಳ್ಳಲಿ ಎಂದು ಅರ್ಜುನನು ಕೃಷ್ಣನ ಮುಂದೆ ಈ ಪ್ರಶ್ನೆಯನ್ನು ಇರಿಸಿದನು. ಪ್ರತಿಯೊಬ್ಬನು ತನ್ನ ಸ್ವಂತ ಹಿತಕ್ಕಾಗಿ ಕೃಷ್ಣ ವಿಜ್ಞಾನವನ್ನು ಅರಿಯುವುದು ಅಗತ್ಯ. ಆದ್ದರಿಂದ ಕೃಷ್ಣನು ತನ್ನನ್ನು ಕುರಿತು ತಾನೇ ಹೇಳುತ್ತಿರುವಾಗ, ಅದು ಸಕಲ ಲೋಕಗಳಿಗೆ ಶುಭಪ್ರದ. ಸ್ವಯಂ ಕೃಷ್ಣನಿಂದ ಇಂಥ ವಿವರಣೆಗಳು ಅಸುರರಿಗೆ ವಿಚಿತ್ರವೆನಿಸಬಹುದು. ಏಕೆಂದರೆ, ಅವರು ಕೃಷ್ಣನನ್ನು ತಮ್ಮ ಸ್ವಂತ ದೃಷ್ಟಿಕೋನದಿಂದ ಅಧ್ಯಯನ ಮಾಡುತ್ತಾರೆ, ಆದರೆ ಸ್ವಯಂ ಕೃಷ್ಣನಿಂದಲೇ ಹೇಳಲ್ಪಟ್ಟ ವಚನಗಳನ್ನು, ಭಕ್ತರು ಹೃತ್ಪೂರ್ವಕವಾಗಿ ಸ್ವಾಗತಿಸುತ್ತಾರೆ. ಭಕ್ತರು ಕೃಷ್ಣನ ಬಗ್ಗೆ ಹೆಚ್ಚು ಹೆಚ್ಚು ತಿಳಿದುಕೊಳ್ಳಲು ಸದಾ ಕುತೂಹಲಿಗಳಾಗಿರುವುದರಿಂದ, ಅವರು ಕೃಷ್ಣನ ಅಧಿಕೃತ ನಿರೂಪಣೆಯನ್ನು ಸದಾ ಆರಾಧಿಸುತ್ತಾರೆ. ಕೃಷ್ಣನು ಸಾಮಾನ್ಯ ಮನುಷ್ಯನೆಂದು ಭಾವಿಸುವ ನಾಸ್ತಿಕರು ಹೀಗೆ ಕೃಷ್ಣನು ಅತಿಮಾನುಷನು, **ಸಚ್ಚಿದಾನಂದ ವಿಗ್ರಹನು** ನಿತ್ಯ ಜ್ಞಾನಾನಂದ ಸ್ವರೂಪನು, ದಿವ್ಯನು, ಭೌತಿಕ ಪ್ರಕೃತಿ ಗುಣಗಳ ಆಧಿಪತ್ಯಕ್ಕೆ ಒಳಪಡದವನು ಮತ್ತು ಕಾಲ, ದೇಶಗಳ ಪ್ರಭಾವಗಳನ್ನು ಮೀರಿದವನು ಎಂಬುದನ್ನು ಅರಿತುಕೊಳ್ಳಬಹುದು. ಅರ್ಜುನನಂಥ ಕೃಷ್ಣ ಭಕ್ತನು ಕೃಷ್ಣನ ದಿವ್ಯಸ್ಥಾನದ ಯಾವುದೇ ಅಪಾರ್ಥಕ್ಕೆ ನಿಸ್ಸಂದೇಹವಾಗಿ ಅತೀತನು. ಅರ್ಜುನನು ಭಗವಂತನ ಮುಂದೆ ಈ ಪ್ರಶ್ನೆಯನ್ನು ಹಾಕುವುದು, ಕೃಷ್ಣನು ಭೌತಿಕ ಪ್ರಕೃತಿ ಗುಣಗಳಿಗೆ ಒಳಪಟ್ಟ ಒಬ್ಬ ಸಾಮಾನ್ಯ ಮನುಷ್ಯನೆಂದು ಭಾವಿಸುವ ವ್ಯಕ್ತಿಗಳ ನಾಸ್ತಿಕ ಭಾವನೆಯನ್ನು ತಿರಸ್ಕರಿಸಲು, ಭಕ್ತನು ಮಾಡಿದ ಕೇವಲ ಒಂದು ಪ್ರಯತ್ನ.

**ಶ್ರೀಭಗವಾನುವಾಚ**

**ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।**
**ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರನ್ತಪ ॥ ೫ ॥**

ಶ್ರೀಭಗವಾನ್ ಉವಾಚ—ಪರಮ ದೇವೋತ್ತಮ ಪುರುಷನು ನುಡಿದನು, ಬಹೂನಿ—ಅನೇಕ, ಮೇ—ನನ್ನ, ವ್ಯತೀತಾನಿ—ಸಂದಿವೆ, ಜನ್ಮಾನಿ—ಜನ್ಮಗಳು, ತವ—ನಿನ್ನ, ಚ—ಮತ್ತು ಕೂಡ, ಅರ್ಜುನ—ಹೇ ಅರ್ಜುನ, ತಾನಿ—ಅವುಗಳನ್ನು, ಅಹಮ್—ನಾನು, ವೇದ—ತಿಳಿದಿದ್ದೇನೆ, ಸರ್ವಾಣಿ—ಎಲ್ಲವನ್ನು, ನ—ಇಲ್ಲ, ತ್ವಮ್—ನೀನು, ವೇತ್ಥ—ತಿಳಿದು, ಪರನ್ತಪ—ಹೇ ಶತ್ರುಸೂದನನೇ.

**ಪರಮ ದೇವೋತ್ತಮ ಪುರುಷನು ನುಡಿದನು: ಹೇ ಶತ್ರುಸೂದನನೇ, ನೀನು ಮತ್ತು ನಾನು ಅನೇಕ ಜನ್ಮಗಳನ್ನು ಕಳೆದಿರುವೆವು. ಅವೆಲ್ಲವುಗಳನ್ನು ನಾನು ಜ್ಞಾಪಿಸಿಕೊಳ್ಳಬಲ್ಲೆ, ಆದರೆ ನೀನಗೆ ಸಾಧ್ಯವಿಲ್ಲ.**

**ಭಾವಾರ್ಥ:** ಬ್ರಹ್ಮ ಸಂಹಿತೆಯಲ್ಲಿ (5.33) ನಾವು ಭಗವಂತನ ಅನೇಕಾನೇಕ ಅವತಾರಗಳ ಬಗ್ಗೆ ತಿಳಿಯುತ್ತೇವೆ. ಅಲ್ಲಿ ಹೀಗೆ ಹೇಳಿದೆ:

ಅದ್ವೈತಮಚ್ಯುತಮನಾದಿಮನನ್ತರೂಪಮ್
ಆದ್ಯಂ ಪುರಾಣಪುರುಷಂ ನವಯೌವನಂ ಚ।
ವೇದೇಷು ದುರ್ಲಭಮದುರ್ಲಭಮಾತ್ಮಭಕ್ತೌ
ಗೋವಿನ್ದಮಾದಿಪುರುಷಂ ತಮಹಂ ಭಜಾಮಿ॥

"ಪರಮಪುರುಷನೂ, ಅಚ್ಯುತನೂ, ಅನಾದಿಯೂ, ಆದಿಪುರುಷನೂ ಆಗಿರುವ ಪರಮ ದೇವೋತ್ತಮಪುರುಷ ಗೋವಿಂದನನ್ನು (ಕೃಷ್ಣ) ನಾನು ಭಜಿಸುತ್ತೇನೆ. ಅಪರಿಮಿತ ರೂಪಗಳಲ್ಲಿ ವಿಸ್ತೃತನಾಗಿದ್ದರೂ ಅವನು ಅದೇ ಮೂಲನು, ಪುರಾಣಪುರುಷನು, ಮತ್ತು ಸದಾ ನವ ಯುವಕನಾಗಿ ತೋರುವನು. ಭಗವಂತನ ಇಂಥ ನಿತ್ಯಜ್ಞಾನಾನಂದ ರೂಪಗಳು ಸಾಮಾನ್ಯವಾಗಿ ಅತ್ಯಂತ ಶ್ರೇಷ್ಠ ವೇದಜ್ಞಾನಿಗಳಿಂದ ತಿಳಿಯಲ್ಪಡುತ್ತವೆ; ಆದರೆ ಅವು ಶುದ್ಧ ಅಮಿಶ್ರ ಭಕ್ತರಿಗೆ ಸದಾ ಗೋಚರವಾಗುತ್ತವೆ." ಬ್ರಹ್ಮಸಂಹಿತೆಯಲ್ಲಿ (5.39) ಹೀಗೆಯೂ ಹೇಳಿದೆ:

ರಾಮಾದಿಮೂರ್ತಿಷು ಕಲಾನಿಯಮೇನ ತಿಷ್ಠನ್
ನಾನಾವತಾರಮಕರೋದ್ ಭುವನೇಷು ಕಿನ್ತು
ಕೃಷ್ಣಃ ಸ್ವಯಂ ಸಮಭವತ್ಪರಮಃ ಪುಮಾನ್ ಯೋ
ಗೋವಿನ್ದಮಾದಿಪುರುಷಂ ತಮಹಂ ಭಜಾಮಿ॥

"ರಾಮ ನರಸಿಂಹಗಳಂತಹ ವಿವಿಧ ಅವತಾರಗಳಲ್ಲಿಯೂ, ಮತ್ತು ಇನ್ನೂ ಅನೇಕ ಉಪಾವತಾರಗಳಲ್ಲಿಯೂ ಸದಾ ಸ್ಥಿತನಾಗಿರುವ, ಆದರೆ ಮೂಲದಲ್ಲಿ ಪರಮ ದೇವೋತ್ತಮ

ಪುರುಷ ಕೃಷ್ಣನಾಗಿರುವ ಮತ್ತು ಸ್ವಯಂ ತಾನೇ ಅವತರಿಸುವ ಪರಮ ಪುರುಷ ಗೋವಿಂದ ನನ್ನು (ಕೃಷ್ಣ) ನಾನು ಭಜಿಸುತ್ತೇನೆ. "

ಭಗವಂತನು ಅದ್ವಿತೀಯನಾದರೂ ಅಸಂಖ್ಯ ರೂಪಗಳಲ್ಲಿ ಸ್ವಯಂ ಗೋಚರನಾಗುತ್ತಾನೆ ಎಂದು ವೇದಗಳಲ್ಲಿಯೂ ಹೇಳಿದೆ. ಅವನು, ಬಣ್ಣ ಬದಲಾಯಿಸುತ್ತಿದ್ದರೂ ಮೂಲದಲ್ಲಿ ಒಂದೇ ಆಗಿ ಉಳಿಯುವ ವೈಡೂರ್ಯದಂತೆ. ಈ ಎಲ್ಲ ವಿವಿಧ ರೂಪಗಳು ಶುದ್ಧ ಅಮಿಶ್ರ ಭಕ್ತರಿಂದ ತಿಳಿಯಲ್ಪಡುತ್ತವೆ. ಆದರೆ ಕೇವಲ ವೇದಾಧ್ಯಯನದಿಂದ ತಿಳಿಯಲ್ಪಡುವುದಿಲ್ಲ (**ವೇದೇಷು ದುರ್ಲಭಮದುರ್ಲಭಮಾತ್ಮಭಕ್ತೌ**). ಅರ್ಜುನನಂಥ ಭಕ್ತರು ಭಗವಂತನ ನಿತ್ಯ ಸಂಗಡಿಗರು, ಮತ್ತು ಭಗವಂತನು ಅವತರಿಸಿದಾಗಲೆಲ್ಲ, ಸಂಗಡಿಗ ಭಕ್ತರೂ ಕೂಡಾ ನಾನಾ ಪಾತ್ರಗಳಲ್ಲಿ ಭಗವಂತನ ಸೇವೆ ಮಾಡಲು ಅವತರಿಸುತ್ತಾರೆ. ಅರ್ಜುನನು ಇಂಥ ಭಕ್ತರಲ್ಲಿ ಒಬ್ಬನು. ಲಕ್ಷೋಪಲಕ್ಷ ವರ್ಷಗಳ ಹಿಂದೆ ಶ್ರೀಕೃಷ್ಣನು ಸೂರ್ಯದೇವ ವಿವಸ್ವಾನನಿಗೆ ಭಗವದ್ಗೀತೆಯನ್ನು ಉಪದೇಶಿಸುವಾಗ, ಅರ್ಜುನನೂ ಕೂಡ ಬೇರೊಂದು ಪಾತ್ರದಲ್ಲಿ ಇದ್ದನು ಎಂದು ಈ ಶ್ಲೋಕದಿಂದ ತಿಳಿದು ಬರುತ್ತದೆ. ಭಗವಂತನಿಗೂ ಅರ್ಜುನನಿಗೂ ಇರುವ ವ್ಯತ್ಯಾಸವೆಂದರೆ, ಭಗವಂತನು ಆ ಪ್ರಸಂಗವನ್ನು ನೆನಪಿಟ್ಟುಕೊಂಡಿದ್ದನು, ಆದರೆ ಅರ್ಜುನನಿಗೆ ಸಾಧ್ಯವಾಗಲಿಲ್ಲ. ಇದೇ ವಿಭಿನ್ನಾಂಶ ಜೀವನಿಗೂ ಭಗವಂತನಿಗೂ ಇರುವ ವ್ಯತ್ಯಾಸ. ಅರ್ಜುನನನ್ನು ಇಲ್ಲಿ ಶತ್ರುಸೂದನನೆಂದು ಸಂಬೋಧಿಸಲಾಗಿದ್ದರೂ, ಹಿಂದಿನ ಅನೇಕ ಜನ್ಮಗಳಲ್ಲಿ ಏನು ನಡೆಯಿತೆಂಬುದನ್ನು ಅವನು ನೆನಪಿಸಿಕೊಳ್ಳಲು ಅಶಕ್ತನಾದನು. ಆದ್ದರಿಂದ ಜೀವಿಯು ಭೌತಿಕ ದೃಷ್ಟಿಯಲ್ಲಿ ಎಷ್ಟೇ ದೊಡ್ಡವನಾಗಿದ್ದರೂ ಪರಮ ಪ್ರಭುವಿಗೆ ಸಮನಾಗಲಾರನು. ಭಗವಂತನ ನಿತ್ಯ ಸಂಗಡಿಗನಾದವನು ಖಂಡಿತ ಮುಕ್ತ ಜೀವನು, ಆದರೆ ಅವನು ಭಗವಂತನಿಗೆ ಸಮನಾಗಲಾರನು. ಬ್ರಹ್ಮಸಂಹಿತೆಯಲ್ಲಿ ಭಗವಂತನು ಅಚ್ಯುತನೆಂದು ವರ್ಣಿಸಲ್ಪಟ್ಟಿದ್ದಾನೆ, ಹಾಗೆಂದರೆ ಅವನು ಭೌತಿಕ ಸಂಪರ್ಕ ಹೊಂದಿದ್ದರೂ ತನ್ನನ್ನು ತಾನು ಎಂದಿಗೂ ಮರೆಯುವುದಿಲ್ಲ ಎಂದು ಅರ್ಥ. ಆದ್ದರಿಂದ ಜೀವನು ಅರ್ಜುನನಷ್ಟೇ ಮುಕ್ತನಾಗಿದ್ದರೂ, ಭಗವಂತನಿಗೆ ಸರ್ವಸಮನಾಗಲಾರನು. ಅರ್ಜುನನು ಭಗವಂತನ ಭಕ್ತನಾಗಿದ್ದರೂ, ಅವನು ಕೆಲವು ಸಲ ಭಗವತ್ಸ್ವಭಾವವನ್ನು ಮರೆಯುತ್ತಾನೆ. ಆದರೆ ಭಗವದನುಗ್ರಹದಿಂದ ಭಕ್ತನು ಕೂಡಲೇ ಭಗವಂತನ ಅಚ್ಯುತ ಸ್ಥಿತಿಯನ್ನು ಅರಿತುಕೊಳ್ಳಬಲ್ಲನು. ಆದರೆ ಅಭಕ್ತನು ಅಥವಾ ಅಸುರನು ಈ ದಿವ್ಯ ಸ್ವಭಾವವನ್ನು ಅರಿತುಕೊಳ್ಳಲಾರನು. ಪರಿಣಾಮವಾಗಿ ಗೀತೆಯ ಈ ವರ್ಣನೆಗಳು ಅಸುರ ಬುದ್ಧಿಗಳಿಗೆ ತಿಳಿಯುವುದಿಲ್ಲ. ಕೃಷ್ಣನೂ ಅರ್ಜುನನೂ ಸ್ವಭಾವತಃ ನಿತ್ಯರಾಗಿದ್ದರೂ, ಕೃಷ್ಣನು ತಾನು ಲಕ್ಷಾಂತರ ವರ್ಷಗಳ ಹಿಂದೆ ಮಾಡಿದ ಕಾರ್ಯಗಳನ್ನು ನೆನಪಿಟ್ಟುಕೊಂಡಿದ್ದನು, ಆದರೆ ಅರ್ಜುನನಿ ಗೆಸಾಧ್ಯವಾಗಲಿಲ್ಲ. ಜೀವಿಯು ದೇಹವನ್ನು ಬದಲಾಯಿಸುವುದರಿಂದ ಎಲ್ಲವನ್ನು ಮರೆತುಬಿಡುತ್ತಾನೆ.ಆದರೆ ಭಗವಂತನು ತನ್ನ ಸಚ್ಚಿದಾನಂದ ದೇಹವನ್ನು ಬದಲಾಯಿಸುವುದಿಲ್ಲವಾದ್ದರಿಂದ ಅವನು ನೆನಪಿಟ್ಟುಕೊಳ್ಳುತ್ತಾನೆ ಎಂಬುದನ್ನು ನಾವು ಇಲ್ಲಿ ಗಮನಿಸಬಹುದು.ಅವನು **ಅದ್ವೈತ**, ಎಂದರೆ ಅವನ ದೇಹಕ್ಕೂ ಅವನಿಗೂ ಭೇದವಿಲ್ಲ. ಅವನಿಗೆ ಸಂಬಂಧಿಸಿದ್ದೆಲ್ಲವೂ ಚೈತನ್ಯಮಯವಾದುದು—ಆದರೆ ಬದ್ಧಾತ್ಮನು ತನ್ನ ಭೌತಿಕ

ದೇಹದಿಂದ ಭಿನ್ನನು. ಭಗವಂತನ ದೇಹ ಮತ್ತು ಆತ್ಮಗಳಲ್ಲಿ ವ್ಯತ್ಯಾಸವಿಲ್ಲದ್ದರಿಂದ, ಭೌತಿಕ ವೇದಿಕೆಗೆ ಇಳಿದುಬಂದಾಗಲೂ ಅವನ ಸ್ಥಿತಿಯು ಸಾಮಾನ್ಯ ಜೀವಿಯ ಸ್ಥಿತಿಗಿಂತ ಸದಾ ಭಿನ್ನ ವಾಗಿರುತ್ತದೆ. ಅಸುರರು ಭಗವಂತನ ಈ ದಿವ್ಯ ಸ್ವರೂಪಕ್ಕೆ ಹೊಂದಿಕೊಳ್ಳಲಾರರು. ತನ್ನ ದಿವ್ಯ ಸ್ವರೂಪವನ್ನು ಭಗವಂತನೇ ಮುಂದಿನ ಶ್ಲೋಕದಲ್ಲಿ ವಿವರಿಸುತ್ತಾನೆ.

**ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ ।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಮ್ಭವಾಮ್ಯಾತ್ಮಮಾಯಯಾ ॥ ೬ ॥**

ಅಜಃ—ಜನ್ಮರಹಿತನು, ಅಪಿ—ಕೂಡ, ಸನ್—ಹಾಗಿದ್ದು, ಅವ್ಯಯ—ಕ್ಷೀಣರಹಿತ, ಆತ್ಮಾ—ದೇಹವು, ಭೂತಾನಾಮ್—ಜನ್ಮವೆತ್ತಿದ ಎಲ್ಲರ, ಈಶ್ವರಃ—ಪರಮ ಪ್ರಭು, ಅಪಿ—ಕೂಡ, ಸನ್—ಹಾಗಿದ್ದು, ಪ್ರಕೃತಿಮ್—ದಿವ್ಯರೂಪದಲ್ಲಿ, ಸ್ವಾಮ್—ನನ್ನ, ಅಧಿಷ್ಠಾಯ—ಹಾಗೆ ಇದ್ದುಕೊಂಡು, ಸಮ್ಭವಾಮಿ—ಅವತರಿಸುತ್ತೇನೆ, ಆತ್ಮ ಮಾಯಯಾ—ನನ್ನ ಅಂತರಂಗ ಶಕ್ತಿಯಿಂದ.

**ನಾನು ಜನ್ಮರಹಿತನಾಗಿದ್ದರೂ, ಮತ್ತು ನನ್ನ ದೇಹವು ಎಂದಿಗೂ ಕ್ಷೀಣಿಸ ದಿದ್ದರೂ, ಮತ್ತು ನಾನು ಸಕಲ ಜೀವಿಗಳ ಸ್ವಾಮಿಯಾಗಿದ್ದರೂ, ನಾನು ಪ್ರತಿ ಯೊಂದು ಕಲ್ಪದಲ್ಲಿಯೂ ನನ್ನ ಮೂಲ ದಿವ್ಯರೂಪದಲ್ಲಿ ಅವತರಿಸುತ್ತೇನೆ.**

**ಭಾವಾರ್ಥ :** ಭಗವಂತನು ತನ್ನ ಜನ್ಮದ ವೈಶಿಷ್ಟ್ಯವನ್ನು ಕುರಿತು ಹೇಳಿದ್ದಾನೆ: ಒಬ್ಬ ಸಾಮಾನ್ಯ ಮನುಷ್ಯನ ಹಾಗೆ ಕಾಣಿಸಿದರೂ, ಅವನು ತನ್ನ ಅನೇಕಾನೇಕ ಹಿಂದಿನ "ಜನ್ಮಗಳ" ಪ್ರತಿಯೊಂದನ್ನೂ ನೆನಪಿಟ್ಟುಕೊಂಡಿರುತ್ತಾನೆ. ಸಾಮಾನ್ಯ ಮನುಷ್ಯನಾದರೋ ಕೆಲವೇ ಗಂಟೆಗಳ ಹಿಂದೆ ಅವನು ಮಾಡಿದ್ದನ್ನು ಕೂಡ ನೆನಪಿಟ್ಟುಕೊಳ್ಳಲಾರನು. ಒಬ್ಬನು ಹಿಂದಿನ ದಿನ ಅದೇ ಸಮಯದಲ್ಲಿ ಏನು ಮಾಡಿದನೆಂದು ಕೇಳಿದರೆ ಕೂಡಲೇ ಉತ್ತರ ಕೊಡಲು ಒಬ್ಬ ಸಾಮಾನ್ಯ ಮನುಷ್ಯನಿಗೆ ಕಷ್ಟವಾಗುತ್ತದೆ. ಅವನು ಹಿಂದಿನ ದಿನ ಅದೇ ಸಮಯ ದಲ್ಲಿ ಏನು ಮಾಡುತ್ತಿದ್ದನೆಂಬುದನ್ನು ಜ್ಞಾಪಿಸಿಕೊಳ್ಳಲು, ತಲೆ ಜಜ್ಜಿಕೊಳ್ಳಬೇಕಾಗುತ್ತದೆ. ಹೀಗಿದ್ದು ಮನುಷ್ಯರು ತಾವೇ ದೇವರು ಅಥವಾ ಕೃಷ್ಣನೆಂದು ಅನೇಕ ಸಲ ಹೇಳಿಕೊಳ್ಳು ತ್ತಾರೆ. ಇಂಥ ಅರ್ಥಹೀನ ಮಾತುಗಳಿಂದ ಯಾರೂ ಮೋಸಹೋಗಬಾರದು. ಮತ್ತೆ, ಭಗವಂತನು ತನ್ನ **ಪ್ರಕೃತಿ** ಅಥವಾ ಸ್ವರೂಪವನ್ನು ಕುರಿತು ವಿವರಿಸುತ್ತಾನೆ. **ಪ್ರಕೃತಿ** ಯೆಂದರೆ ಸ್ವಭಾವ ಹಾಗೂ **ಸ್ವರೂಪ**, ಅಥವಾ ಒಬ್ಬನ ಸ್ವಯಂ ರೂಪ ಎಂದು ಅರ್ಥ. ತನ್ನದೇ ಆದ ಸ್ವಂತ ದೇಹದಿಂದ ತಾನು ಕಾಣಿಸಿಕೊಳ್ಳುತ್ತೇನೆ ಎಂದು ಭಗವಂತನು ಹೇಳು ತ್ತಾನೆ. ಜೀವಿಗಳು ದೇಹ ಬದಲಾಯಿಸಿಕೊಳ್ಳುವ ಹಾಗೆ, ಅವನು ದೇಹ ಬದಲಾಯಿಸು ವುದಿಲ್ಲ. ಬದ್ಧ ಜೀವನಿಗೆ ಈ ಜನ್ಮದಲ್ಲಿ ಒಂದು ಬಗೆಯ ದೇಹವಿರಬಹುದು, ಆದರೆ ಮುಂದಿನ ಜನ್ಮದಲ್ಲಿ ಮತ್ತೊಂದು ಬಗೆಯ ದೇಹವಿರುತ್ತದೆ. ಭೌತಿಕ ಜಗತ್ತಿನಲ್ಲಿ ಜೀವನಿಗೆ ನಿಶ್ಚಿತ ದೇಹವಿಲ್ಲ, ಒಂದು ದೇಹದಿಂದ ಮತ್ತೊಂದು ದೇಹಕ್ಕೆ ವರ್ಗಾಯಿಸಿಕೊಳ್ಳುತ್ತಾನೆ. ಆದರೆ ಭಗವಂತನಾದರೋ ಹಾಗೆ ಮಾಡುವುದಿಲ್ಲ. ಅವನು ಅವತರಿಸಿದಾಗಲೆಲ್ಲ ತನ್ನ ಅಂತರಂಗ ಶಕ್ತಿಯಿಂದ ತನ್ನ ಅದೇ ಮೂಲ ದೇಹದಲ್ಲಿ ಅವತರಿಸುತ್ತಾನೆ. ಅರ್ಥಾತ್,

ಮನೋಕಲ್ಪನೆಗಳ ಮೇಲಲ್ಲದೆ, ಪರಮ ಪ್ರಭುವಿನ ಯಥಾರೂಪದ ಮೇಲೆ ಮನಸ್ಸನ್ನು ಕೇಂದ್ರೀಕರಿಸಲು ಸಾಧ್ಯವಾಗುವುದು. ಆದರೆ ವ್ಯಕ್ತಿಶೂನ್ಯವಾದಿಗಳು, ಭಗವಂತನ ರೂಪಗಳು ಮಾನಸಿಕ ಊಹಾಪೋಹಗಳು ಅಥವಾ ಮನೋಕಲ್ಪನೆಗಳೆಂದು ತಪ್ಪಾಗಿ ತಿಳಿಯುವರು. **ಮಾಯಾ** ಅಥವಾ **ಆತ್ಮಮಾಯಾ** ಎಂಬ ಪದಗಳು ವಿಶ್ವಕೋಶ ನಿಘಂಟಿನ ಪ್ರಕಾರ ಭಗವಂತನ ಅವ್ಯಾಜ ಅನುಗ್ರಹವನ್ನು ಸೂಚಿಸುತ್ತವೆ. ಭಗವಂತನು ತನ್ನ ಹಿಂದಿನ ಎಲ್ಲಾ ದೇಹಗಳ ಕಾಣಿಸಿಕೊಳ್ಳುವಿಕೆ ಮತ್ತು ಮರೆಯಾಗುವಿಕೆಗಳ ಪ್ರಾಜ್ಞನು. ಆದರೆ ಸಾಮಾನ್ಯ ಜೀವಿಯು ಒಂದು ದೇಹ ಪಡೆದೊಡನೆಯೇ ತನ್ನ ಹಿಂದಿನ ದೇಹದ ಬಗ್ಗೆ ಎಲ್ಲವನ್ನೂ ಮರೆತುಬಿಡುತ್ತಾನೆ. ಭಗವಂತನು ಈ ಲೋಕದಲ್ಲಿರುವಾಗ ಅದ್ಭುತ ಮಾನವಾತೀತ ಲೀಲೆಗಳನ್ನು ತೋರುವುದರಿಂದ, ಅವನು ಸಕಲ ಜೀವಿಗಳ ಪ್ರಭು. ಆದ್ದರಿಂದ ಭಗವಂತನು ಸದಾ ಪರಮ ಸತ್ಯನು, ಮತ್ತು ಅವನ ರೂಪ ಮತ್ತು ಆತ್ಮದ ನಡುವೆ, ಅಥವಾ ಅವನ ಗುಣ ಮತ್ತು ದೇಹದ ನಡುವೆ ವ್ಯತ್ಯಾಸವಿರುವುದಿಲ್ಲ. ಈಗ ಭಗವಂತನು ಈ ಪ್ರಪಂಚದಲ್ಲಿ ಏಕೆ ಕಾಣಿಸಿಕೊಳ್ಳುತ್ತಾನೆ ಮತ್ತು ಮರೆಯಾಗುತ್ತಾನೆ ಎಂದು ಪ್ರಶ್ನೆಯೊಂದನ್ನು ಎತ್ತಬಹುದು. ಇದನ್ನು ಮುಂದಿನ ಶ್ಲೋಕದಲ್ಲಿ ವಿವರಿಸಲಾಗಿದೆ.

**ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್** ॥ ೭ ॥

ಯದಾ ಯದಾ—ಯಾವಯಾವಾಗ ಮತ್ತು ಎಲ್ಲೆಲ್ಲಿ, ಹಿ—ಖಂಡಿತ, ಧರ್ಮಸ್ಯ—ಧರ್ಮದ, ಗ್ಲಾನಿಃ—ಏರುಪೇರುಗಳು, ಭವತಿ—ವ್ಯಕ್ತವಾಗುವುವೋ, ಭಾರತ—ಹೇ ಭರತ ಕುಲಪ್ರಸೂತನೇ, ಅಭ್ಯುತ್ಥಾನಮ್—ಪ್ರಾಬಲ್ಯವು, ಅಧರ್ಮಸ್ಯ—ಅಧರ್ಮದ, ತದಾ—ಆ ಕಾಲದಲ್ಲಿ, ಆತ್ಮಾನಮ್—ಸ್ವಯಂ, ಸೃಜಾಮಿ—ಗೋಚರಿಸುತ್ತೇನೆ, ಅಹಮ್—ನಾನು.

**ಹೇ ಭರತ ಕುಲಪ್ರಸೂತನೇ, ಯಾವಯಾವಾಗ ಮತ್ತು ಎಲ್ಲೆಲ್ಲಿ ಧಾರ್ಮಿಕ ಆಚರಣೆಯಲ್ಲಿ ಅವನತಿಯಾಗುವುದೋ, ಮತ್ತು ಅಧರ್ಮವು ಪ್ರಬಲವಾಗುವುದೋ, ಆ ಸಮಯದಲ್ಲಿ ನಾನು ಸ್ವಯಂ ಅವತರಿಸುತ್ತೇನೆ.**

**ಭಾವಾರ್ಥ:** ಇಲ್ಲಿ **ಸೃಜಾಮಿ** ಎಂಬ ಪದವು ಬಹಳ ಮಹತ್ವದ್ದು. **ಸೃಜಾಮಿ** ಎಂಬುದನ್ನು ಸೃಷ್ಟಿಯ ಅರ್ಥದಲ್ಲಿ ಬಳಸಲು ಆಗುವುದಿಲ್ಲ, ಏಕೆಂದರೆ, ಹಿಂದಿನ ಶ್ಲೋಕದ ಪ್ರಕಾರ, ಭಗವಂತನ ರೂಪಗಳೆಲ್ಲವೂ ಶಾಶ್ವತವಾಗಿರುವುದರಿಂದ, ಭಗವಂತನ ರೂಪ ಅಥವಾ ದೇಹದ ಸೃಷ್ಟಿ ಇರುವುದಿಲ್ಲ. ಆದ್ದರಿಂದ **ಸೃಜಾಮಿ** ಎಂದರೆ ಭಗವಂತನು ತಾನಿರುವಂತೆಯೇ ಪ್ರಕಟಿಸಿಕೊಳ್ಳುವನೆಂದು ಅರ್ಥ. ಭಗವಂತನು ಗೊತ್ತಾದ ಕಾಲದಲ್ಲಿ, ಎಂದರೆ ಬ್ರಹ್ಮನ ಒಂದು ದಿನದ ಏಳನೆಯ ಮನುವಿನ ಇಪ್ಪತ್ತೆಂಟನೆಯ ಕಲ್ಪದ ದ್ವಾಪರಯುಗದ ಕೊನೆಯಲ್ಲಿ ಕಾಣಿಸಿಕೊಂಡರೂ, ಅವನು ಅಂಥ ನಿಯಮ ನಿರ್ಬಂಧನೆಗಳಿಗೆ ಬದ್ಧನಾಗಲು ಆಭಾರಿಯಲ್ಲ, ಏಕೆಂದರೆ ಅವನ ಇಚ್ಛೆಯಂತೆ ಅನೇಕ ರೀತಿಗಳಲ್ಲಿ ವರ್ತಿಸಲು ಅವನು ಪೂರ್ಣ ಸ್ವತಂತ್ರನು. ಆದ್ದರಿಂದ ಅಧರ್ಮವು ಪ್ರಬಲವಾಗಿ ನಿಜ ಧರ್ಮ ಕಣ್ಮರೆಯಾದಾಗಲೆಲ್ಲ, ಅವನು ತನ್ನ ಇಚ್ಛಾನುಸಾರ ಅವತರಿಸುತ್ತಾನೆ. ಧರ್ಮ ತತ್ವಗಳನ್ನು

ವೇದಗಳಲ್ಲಿ ವಿಧಿಸಲಾಗಿದೆ ಮತ್ತು ವೇದ ತತ್ವಗಳ ವಿಹಿತ ಆಚರಣೆಗಳ ವಿಷಯದಲ್ಲಿ ಯಾವುದೇ ವ್ಯತ್ಯಾಸವು ಒಬ್ಬನನ್ನು ಅಧರ್ಮಿಯಾಗಿಸುತ್ತದೆ. ಇಂಥ ತತ್ವಗಳು ಭಗವಂತನ ಶಾಸನಗಳೆಂದು ಭಾಗವತದಲ್ಲಿ ಹೇಳಿದೆ. ಭಗವಂತನು ಮಾತ್ರ ಧರ್ಮಪದ್ಧತಿಯನ್ನು ನಿರ್ಮಿಸಬಲ್ಲನು. ವೇದಗಳೂ ಸಹ ಬ್ರಹ್ಮನ ಹೃದಯದೊಳಗಿನಿಂದ ಭಗವಂತನಿಂದಲೇ ಮೂಲತಃ ಉಪದೇಶಿಸಲ್ಪಟ್ಟವು ಎಂದು ಸ್ವೀಕೃತವಾಗಿದೆ. ಆದ್ದರಿಂದ ಧರ್ಮ ತತ್ವಗಳು ಪರಮ ದೇವೋತ್ತಮ ಪುರುಷನ ನೇರ ಆದೇಶಗಳಾಗಿವೆ (**ಧರ್ಮಂ ತು ಸಾಕ್ಷಾದ್ಭಗವತ್ಪ್ರಣೀತಮ್**). ಈ ತತ್ವಗಳನ್ನು ಭಗವದ್ಗೀತೆಯ ಎಲ್ಲ ಕಡೆಯೂ ಸ್ಪಷ್ಟವಾಗಿ ಸೂಚಿಸಲಾಗಿದೆ. ಭಗವಂತನ ಆದೇಶಾನುಸಾರ, ಈ ತತ್ವಗಳನ್ನು ಸ್ಥಾಪಿಸುವುದೇ ವೇದಗಳ ಉದ್ದೇಶ, ಮತ್ತು ಭಗವಂತನು ಗೀತೆಯ ಕೊನೆಯಲ್ಲಿ, ತನಗೆ ಶರಣಾಗತನಾಗುವುದೇ ಧರ್ಮದ ಪರಮ ತತ್ವ, ಇದಕ್ಕಿಂತ ಹೆಚ್ಚಿನದೇನು ಇಲ್ಲ ಎಂದು ನೇರವಾಗಿ ಆದೇಶಿಸುತ್ತಾನೆ. ವೇದ ತತ್ವಗಳು ಸಂಪೂರ್ಣವಾಗಿ ಭಗವಂತನಿಗೆ ಶರಣಾಗತರಾಗುವಂತೆ ಒಬ್ಬನನ್ನು ಮುಂದೂಡುತ್ತವೆ; ಇಂಥ ತತ್ವಗಳಿಗೆ ಅಸುರರಿಂದ ಕ್ಷೋಭೆಯುಂಟಾದಾಗ ಭಗವಂತನು ಅವತರಿಸುತ್ತಾನೆ. ಬುದ್ಧನು ಕೃಷ್ಣನ ಅವತಾರ, ಮತ್ತು ಸಾಂಸಾರಿಕತೆಯು ಪ್ರಬಲವಾಗಿ, ಐಹಿಕ ಭೋಗಾಸಕ್ತರು ವೇದ ಪ್ರಮಾಣದ ನೆಪಗಳನ್ನು ಬಳಸುತ್ತಿದ್ದಾಗ, ಬುದ್ಧನು ಕಾಣಿಸಿಕೊಂಡನೆಂದು ಶ್ರೀಮದ್ಭಾಗವತದಿಂದ ನಾವು ತಿಳಿಯುತ್ತೇವೆ. ವೇದಗಳಲ್ಲಿ ವಿಶಿಷ್ಟ ಉದ್ದೇಶಗಳಿಗಾಗಿ ಪಶುಬಲಿಗೆ ಸಂಬಂಧಿಸಿದಂತೆ ನಿಶ್ಚಿತವಾದ ನಿರ್ಬಂಧಕ ನಿಯಮಗಳಿದ್ದರೂ, ಆಸುರೀ ಪ್ರವೃತ್ತಿಯ ಜನರು, ವೈದಿಕ ತತ್ವಗಳನ್ನು ಗಮನಿಸದೆ ಪಶುಬಲಿಯನ್ನು ಆಚರಿಸುತ್ತಿದ್ದರು. ಭಗವಾನ್ ಬುದ್ಧನು ಈ ಹುಚ್ಚುತನವನ್ನು ನಿಲ್ಲಿಸಲು ಮತ್ತು ವೈದಿಕ ತತ್ವಗಳನ್ನು ಸ್ಥಾಪಿಸಲು ಕಾಣಿಸಿಕೊಂಡನು. ಆದ್ದರಿಂದ ಭಗವಂತನ ಪ್ರತಿಯೊಂದು ಅವತಾರಕ್ಕೂ ಉದ್ದಿಷ್ಟ ಕಾರ್ಯವಿರುತ್ತದೆ, ಮತ್ತು ಅವುಗಳೆಲ್ಲವೂ ದೃಷ್ಟ ಶಾಸ್ತ್ರಗಳಲ್ಲಿ ವರ್ಣಿಸಲ್ಪಟ್ಟಿವೆ. ಶಾಸ್ತ್ರಗಳಲ್ಲಿ ಉಲ್ಲೇಖಿಸಲ್ಪಡದವ ಯಾರನ್ನೂ **ಅವತಾರ** ಎಂದು ಸ್ವೀಕರಿಸಕೂಡದು. ಭಗವಂತನು ಭಾರತ ಭೂಮಿಯಲ್ಲಿಯೇ ಅವತರಿಸುವನೆಂಬುದು ಸತ್ಯಸಂಗತಿಯಲ್ಲ. ಕಾಣಿಸಿಕೊಳ್ಳಲು ಇಚ್ಛಿಸಿದಾಗ ಎಂದಾದರೂ ಮತ್ತು ಎಲ್ಲಾದರೂ ಅವನು ತನ್ನನ್ನೇ ಪ್ರಕಟಿಸಿಕೊಳ್ಳಬಲ್ಲನು. ಪ್ರತಿಯೊಂದು ಅವತಾರದಲ್ಲಿಯೂ ವಿಶಿಷ್ಟ ಜನರು ವಿಶಿಷ್ಟ ಸನ್ನಿವೇಶಗಳಲ್ಲಿ ಅರಿಯಲು ಸಾಧ್ಯವಾಗುವಷ್ಟು, ಅವನು ಧರ್ಮದ ಬಗ್ಗೆ ಮಾತನಾಡುತ್ತಾನೆ. ಆದರೆ ಉದ್ದಿಷ್ಟ ಕಾರ್ಯವು ಒಂದೇ—ಜನರನ್ನು ಭಗವತ್ ಪ್ರಜ್ಞೆಯುಳ್ಳವರನ್ನಾಗಿ ಮತ್ತು ಧರ್ಮದ ತತ್ವಗಳಿಗೆ ವಿಧೇಯರನ್ನಾಗಿ ಮಾಡುವುದು. ಭಗವಂತನು ಸ್ವಯಂ ಇಳಿದು ಬರುತ್ತಾನೆ, ಮತ್ತು ಕೆಲವು ಸಲ ತನ್ನ ನಿಜ ಪ್ರತಿನಿಧಿಗಳನ್ನು ತನ್ನ ಪುತ್ರ ಅಥವಾ ಸೇವಕನ ರೂಪದಲ್ಲಿ ಕಳುಹಿಸುತ್ತಾನೆ, ಅಥವಾ ತಾನೇ ಯಾವುದೋ ಪ್ರಚ್ಛನ್ನ ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ.

ಭಗವದ್ಗೀತೆಯ ತತ್ವಗಳನ್ನು ಅರ್ಜುನನಿಗೂ ಮತ್ತು ಇತರ ಮಹೋನ್ನತ ವ್ಯಕ್ತಿಗಳಿಗೂ ಬೋಧಿಸಲಾಯಿತು. ಏಕೆಂದರೆ, ಪ್ರಪಂಚದ ಇತರ ಭಾಗಗಳಲ್ಲಿನ ಸಾಮಾನ್ಯ ವ್ಯಕ್ತಿಗಳಿಗೆ ಹೋಲಿಸಿದಲ್ಲಿ, ಅವನು ಬಹಳವಾಗಿ ಮುಂದುವರಿದಿದ್ದನು. ಎರಡಕ್ಕೆ ಎರಡು ಸೇರಿಸಿದರೆ ನಾಲ್ಕು ಎಂಬ ಗಣಿತದ ತತ್ವವು ಪ್ರಾರಂಭಿಕ ಗಣಿತದ ತರಗತಿಯಲ್ಲೂ ಹಾಗು ಮುಂದು

ವರಿದ ತರಗತಿಯಲ್ಲೂ ನಿಜವಾದುದು. ಆದರೂ ಪ್ರೌಢ ಮತ್ತು ಕಿರಿಯ ಗಣಿತ ಎಂಬ ಪ್ರಭೇದಗಳಿವೆ. ಭಗವಂತನ ಎಲ್ಲ ಅವತಾರಗಳಲ್ಲಿಯೂ ಅದೇ ತತ್ವಗಳು ಬೋಧಿಸಲ್ಪಟ್ಟಿವೆ. ಆದರೆ ವೈವಿಧ್ಯ ಸನ್ನಿವೇಶಗಳಿಂದ ಅವು ಹಿರಿದು ಮತ್ತು ಕಿರಿದು ಎಂದು ತೋರುತ್ತವೆ. ಧರ್ಮದ ಹಿರಿಯ ತತ್ವಗಳು, ಈ ಮುಂದೆ ವಿವರಿಸಲ್ಪಡುವಂತೆ, ನಾಲ್ಕು ವರ್ಣ ಮತ್ತು ನಾಲ್ಕು ಆಶ್ರಮಗಳ ಅಂಗೀಕಾರದಿಂದ ಪ್ರಾರಂಭವಾಗುತ್ತವೆ. ಎಲ್ಲೆಡೆಗಳಲ್ಲೂ ಕೃಷ್ಣ ಪ್ರಜ್ಞೆಯನ್ನು ಮೂಡಿಸುವುದೇ ಅವತಾರಗಳ ಸಮಗ್ರ ಉದ್ದೇಶ. ಅಂಥ ಪ್ರಜ್ಞೆಯು ಭಿನ್ನ ಭಿನ್ನ ಸನ್ನಿವೇಶಗಳಲ್ಲಿ ಮಾತ್ರ ಪ್ರಕಟ ಮತ್ತು ಅಪ್ರಕಟವಾಗುತ್ತದೆ.

**ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್।**
**ಧರ್ಮಸಂಸ್ಥಾಪನಾರ್ಥಾಯ ಸಮ್ಭವಾಮಿ ಯುಗೇ ಯುಗೇ ॥ ೮ ॥**

ಪರಿತ್ರಾಣಾಯ—ಉದ್ಧಾರಕ್ಕಾಗಿ, ಸಾಧೂನಾಮ್—ಭಗವದ್ಭಕ್ತರ, ವಿನಾಶಾಯ—ನಾಶಕ್ಕಾಗಿ, ಚ—ಮತ್ತು, ದುಷ್ಕೃತಾಮ್—ದುರ್ಜನರ, ಧರ್ಮ—ಧರ್ಮತತ್ವಗಳನ್ನು, ಸಂಸ್ಥಾಪನ ಅರ್ಥಾಯ—ಪುನಃ ಸ್ಥಾಪಿಸಲು, ಸಮ್ಭವಾಮಿ—ನಾನು ಕಾಣಿಸಿಕೊಳ್ಳುತ್ತೇನೆ. ಯುಗೇ—ಯುಗ, ಯುಗೇ—ಯುಗದನಂತರ.

**ಸಾಧುಸಂತರನ್ನು ಉದ್ಧರಿಸಲು, ದುಷ್ಟರನ್ನು ನಾಶಪಡಿಸಲು ಮತ್ತು ಧರ್ಮ ತತ್ವಗಳನ್ನು ಪುನಃಸ್ಥಾಪಿಸಲು, ನಾನು ಯುಗಯುಗಾಂತರಗಳಲ್ಲಿ ಆವಿರ್ಭವಿಸುತ್ತೇನೆ.**

**ಭಾವಾರ್ಥ:** ಭಗವದ್ಗೀತೆಯ ಪ್ರಕಾರ **ಸಾಧು** (ಪುಣ್ಯ ಮಾನವ) ಎಂದರೆ ಕೃಷ್ಣ ಪ್ರಾಜ್ಞ. ಒಬ್ಬ ವ್ಯಕ್ತಿಯು ಅಧರ್ಮಿ ಎಂದು ತೋರಬಹುದು, ಆದರೆ ಅವನು ಅಖಂಡ ವಾಗಿ ಮತ್ತು ಪೂರ್ಣವಾಗಿ ಕೃಷ್ಣ ಪ್ರಜ್ಞೆಯ ಅರ್ಹತೆಗಳನ್ನು ಹೊಂದಿದ್ದರೆ, ಅವನು **ಸಾಧು** ಎಂದು ತಿಳಿಯಬೇಕು. ಮತ್ತು **ದುಷ್ಕೃತಾಮ್** ಎಂಬುದು ಕೃಷ್ಣ ಪ್ರಜ್ಞೆಗೆ ಗಮನನೀಡದ ವರಿಗೆ ಅನ್ವಯಿಸುತ್ತದೆ. ಇಂಥ ದುಷ್ಟರು ಐಹಿಕ ವಿದ್ಯಾವಿಭೂಷಿತರಾಗಿದ್ದರೂ, ಅವರನ್ನು ಮೂಢರು, ನರಾಧಮರು ಎಂದು ವರ್ಣಿಸಲಾಗಿದೆ. ಆದರೆ ಶತಶಃ ಕೃಷ್ಣ ಪ್ರಜ್ಞೆಯಲ್ಲಿ ನಿರತನು, ವಿದ್ವಾಂಸನು ಅಥವಾ ಸುಸಂಸ್ಕೃತನಲ್ಲದಿದ್ದರೂ ಅವನನ್ನು **ಸಾಧು** ಎಂದು ಅಂಗೀ ಕರಿಸಲಾಗಿದೆ. ನಾಸ್ತಿಕರ ಮಟ್ಟಿಗೆ ಹೇಳುವುದಾದರೆ, ರಾವಣ ಕಂಸಾದಿಗಳನ್ನು ನಾಶಮಾಡಿ ದಂತೆ ಅವರನ್ನು ನಾಶಮಾಡಲು ಭಗವಂತನು ತನ್ನ ಯಥಾರೂಪದಲ್ಲಿ ಕಾಣಿಸಿಕೊಳ್ಳುವ ಅಗತ್ಯವಿಲ್ಲ. ದೈತ್ಯರನ್ನು ಸಂಹರಿಸಲು ಶಕ್ತರಾದ ಭಗವಂತನ ಅನೇಕ ಪ್ರತಿನಿಧಿಗಳಿದ್ದಾರೆ. ಆದರೆ ವಿಶೇಷವಾಗಿ ಭಗವಂತನು ಅವತರಿಸುವುದು, ಅಸುರರಿಂದ ಸದಾ ತೊಂದರೆಗೊಳ ಗಾದ ಅಮಿಶ್ರ ಭಕ್ತರನ್ನು ಸಮಾಧಾನಪಡಿಸುವುದಕ್ಕಾಗಿ. ಭಕ್ತನು ತನ್ನ ಬಂಧುವೇ ಆಗಿದ್ದರೂ ದೈತ್ಯನು ಅವನಿಗೆ ತೊಂದರೆ ಕೊಡುತ್ತಾನೆ. ಪ್ರಹ್ಲಾದ ಮಹಾರಾಜನು ಹಿರಣ್ಯಕಶಿಪುವಿನ ಮಗನೇ ಆಗಿದ್ದರೂ, ಅವನು ತನ್ನ ತಂದೆಯಿಂದ ಹಿಂಸಿಸಲ್ಪಟ್ಟನು. ಕೃಷ್ಣನ ತಾಯಿಯಾದ ದೇವಕಿಯು ಕಂಸನ ಸೋದರಿಯಾಗಿದ್ದಳು. ಆದರೂ, ದೇವಕಿಯ ಗರ್ಭದಲ್ಲಿ ಕೃಷ್ಣನು ಜನಿಸುವನೆಂಬ ಕಾರಣದಿಂದ, ಕಂಸನು ದೇವಕಿಯನ್ನು, ಅವಳ ಪತಿ ವಸು ದೇವನನ್ನೂ ಹಿಂಸಿಸಿದನು. ಹೀಗೆ ಕಂಸನನ್ನು ಕೊಲ್ಲುವುದಕ್ಕಿಂತ ಹೆಚ್ಚಾಗಿ, ದೇವಕಿಯನ್ನು

ರಕ್ಷಿಸಲು ಕೃಷ್ಣನು ಕಾಣಿಸಿಕೊಂಡನು. ಆದರೆ ಉಭಯ ಕಾರ್ಯಗಳೂ ಏಕಕಾಲದಲ್ಲಿ ನಡೆದವು. ಆದ್ದರಿಂದ ಭಕ್ತರ ಉದ್ಧಾರ ಮತ್ತು ದುಷ್ಟರ ನಾಶಕ್ಕಾಗಿ ಭಗವಂತನು ನಾನಾವತಾರಗಳಲ್ಲಿ ಕಾಣಿಸಿಕೊಳ್ಳುತ್ತಾನೆ ಎಂದು ಇಲ್ಲಿ ಹೇಳಿದೆ.

ಕೃಷ್ಣದಾಸ ಕವಿರಾಜರ **ಚೈತನ್ಯ ಚರಿತಾಮೃತದ**ಲ್ಲಿಯ ಕೆಳಗಿನ ಶ್ಲೋಕಗಳು ಸಾರ ರೂಪವಾಗಿ, ಈ ಅವತಾರ ತತ್ವಗಳನ್ನು ನಿರೂಪಿಸಿವೆ (ಮಧ್ಯ 20.263–264):

ಸೃಷ್ಟಿಹೇತು ಯೆೈ ಮೂರ್ತಿ ಪ್ರಪಂಚೇ ಅವತರೇ।
ಸೈ ಈಶ್ವರಮೂರ್ತಿ 'ಅವತಾರ' ನಾಮ ಧರೇ॥
ಮಾಯಾತೀತ ಪರವ್ಯೋಮೇ ಸಬಾರ ಅವಸ್ಥಾನ।
ವಿಶ್ವೇ ಅವತರಿ ಧರೇ 'ಅವತಾರ' ನಾಮ॥

"ಭಗವಂತನ ಅವತಾರವು ಭೌತಿಕ ಉದ್ಘೋಷಿತಿಗಾಗಿ ಭಗವದ್ಧಾಮದಿಂದ ಇಳಿದು ಬರುತ್ತದೆ. ಹಾಗೆ ಇಳಿದು ಬರುವ ಭಗವಂತನ ವಿಶಿಷ್ಟ ರೂಪವನ್ನು ಅವತಾರ ಎಂದು ಕರೆಯುತ್ತಾರೆ. ಈ ಅವತಾರಗಳು ಅಧ್ಯಾತ್ಮ ಲೋಕ ಭಗವದ್ಧಾಮದಲ್ಲಿ ಸ್ಥಿತವಾಗಿರುತ್ತವೆ. ಅವು ಭೌತಿಕ ಜಗತ್ತಿಗೆ ಬಂದಾಗ ಅವತಾರ ಎಂಬ ಹೆಸರು ಪಡೆಯುತ್ತವೆ."

ಪುರುಷಾವತಾರ, ಗುಣಾವತಾರ, ಲೀಲಾವತಾರ, ಶಕ್ತ್ಯಾವೇಶ ಅವತಾರ, ಮನ್ವಂತರ ಅವತಾರ ಮತ್ತು ಯುಗಾವತಾರ ಎಂದು ಅವತಾರಗಳು ನಾನಾ ಬಗೆ. ಎಲ್ಲವೂ ಕಾಲಕ್ಕೆ ಸರಿಯಾಗಿ ವಿಶ್ವದಲ್ಲೆಲ್ಲ ಗೋಚರವಾಗುತ್ತವೆ. ಆದರೆ, ಎಲ್ಲ ಅವತಾರಗಳ ಮೂಲ ಸ್ರೋತನಾದ ಶ್ರೀಕೃಷ್ಣನೇ ಆದಿ ಪ್ರಭು. ಅವನ ಮೂಲ ವೃಂದಾವನ ಲೀಲೆಗಳನ್ನು ನೋಡಲು ಬಹಳ ಕಾತುರರಾದ ಶುದ್ಧ ಭಕ್ತರ ಆತಂಕವನ್ನು ನಿವಾರಿಸುವ ವಿಶಿಷ್ಟ ಉದ್ದೇಶಕ್ಕಾಗಿ ಶ್ರೀಕೃಷ್ಣನು ಅವತರಿಸುತ್ತಾನೆ. ಆದ್ದರಿಂದ ತನ್ನ ಅಮಿಶ್ರ ಭಕ್ತರನ್ನು ತೃಪ್ತಿಗೊಳಿಸುವುದು ಕೃಷ್ಣಾವತಾರದ ಮುಖ್ಯ ಉದ್ದೇಶ.

ತಾನು ಪ್ರತಿಯುಗದಲ್ಲಿಯೂ ಸ್ವಯಂ ಅವತರಿಸುವುದಾಗಿ ಭಗವಂತನು ಹೇಳುತ್ತಾನೆ. ಇದು, ಅವನು ಕಲಿಯುಗದಲ್ಲಿಯೂ ಅವತರಿಸುತ್ತಾನೆ ಎಂಬುದನ್ನು ಸೂಚಿಸುತ್ತದೆ. ಶ್ರೀಮದ್ಭಾಗವತದಲ್ಲಿ ಹೇಳಿದ ಹಾಗೆ, ಸಂಕೀರ್ತನ ಆಂದೋಲನದ ಮೂಲಕ (ಪುಣ್ಯನಾಮಗಳ ಸಂಕೀರ್ತನೆ) ಕೃಷ್ಣಾರ್ಚನೆಯನ್ನು ಪ್ರಚುರ ಪಡಿಸಿದ ಮತ್ತು ಕೃಷ್ಣಪ್ರಜ್ಞೆಯನ್ನು ಭಾರತದಲ್ಲೆಲ್ಲ ಹರಡಿದ ಶ್ರೀ ಚೈತನ್ಯ ಮಹಾಪ್ರಭುಗಳು ಕಲಿಯುಗದಲ್ಲಿನ ಅವತಾರ. ಈ ಸಂಕೀರ್ತನ ಸಂಸ್ಕೃತಿಯು ನಗರನಗರಕ್ಕೂ ಹಳ್ಳಿಹಳ್ಳಿಗೂ ವಿಶ್ವದಾದ್ಯಂತ ಪ್ರಸಾರವಾಗುವುದೆಂದು ಅವರು ಭವಿಷ್ಯ ನುಡಿದರು. ಶ್ರೀ ಚೈತನ್ಯರು ದೇವೋತ್ತಮ ಪುರುಷ ಕೃಷ್ಣನ ಅವತಾರವೆಂಬುದನ್ನು ಉಪನಿಷತ್ತುಗಳು, ಮಹಾಭಾರತ ಮತ್ತು ಭಾಗವತಾದಿ ದೃಷ್ಟ ಶಾಸ್ತ್ರಗಳ ರಹಸ್ಯಭಾಗಗಳಲ್ಲಿ, ನೇರವಾಗಿ ಹೇಳದೆ, ರಹಸ್ಯವಾಗಿ ವರ್ಣಿಸಿದೆ. ಕೃಷ್ಣ ಭಕ್ತರು ಶ್ರೀ ಚೈತನ್ಯರ ಸಂಕೀರ್ತನೆ ಆಂದೋಲನದಿಂದ ಬಹಳ ಆಕರ್ಷಿತರಾಗಿದ್ದಾರೆ. ಭಗವಂತನ ಈ ಅವತಾರವು ದುಷ್ಟರನ್ನು ಸಂಹರಿಸದೆ, ಅವನ ಅವ್ಯಾಜ ಕರುಣೆಯಿಂದ ಅವರನ್ನು ಉದ್ಧರಿಸುತ್ತದೆ.

**ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ ।**
**ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥ ೯ ॥**

ಜನ್ಮ—ಜನ್ಮ, ಕರ್ಮ—ಕರ್ಮ, ಚ—ಕೂಡ, ಮೇ—ನನ್ನ, ದಿವ್ಯಮ್—ದಿವ್ಯ, ಏವಮ್—ಹೀಗೆ, ಯಃ—ಯಾರು, ವೇತ್ತಿ—ತಿಳಿದಿರುವನೋ, ತತ್ತ್ವತಃ—ನೈಜತೆಯಲ್ಲಿ, ತ್ಯಕ್ತ್ವಾ—ತ್ಯಜಿಸಿ, ದೇಹಮ್—ಈ ದೇಹವನ್ನು, ಪುನಃ—ಮತ್ತೆ, ಜನ್ಮ—ಜನ್ಮವನ್ನು, ನ—ಎಂದೂ ಇಲ್ಲ, ಏತಿ—ಹೊಂದುವುದು, ಮಾಮ್—ನನ್ನನ್ನು, ಏತಿ—ಹೊಂದುವನು, ಸಃ—ಅವನು, ಅರ್ಜುನ—ಹೇ ಅರ್ಜುನ.

**ಹೇ ಅರ್ಜುನ, ನನ್ನ ಕಾಣಿಸಿಕೊಳ್ಳುವಿಕೆಯ ಮತ್ತು ಕಾರ್ಯಕಲಾಪಗಳ ದಿವ್ಯ ಸ್ವಭಾವವನ್ನು ಅರಿತವನು, ತನ್ನ ದೇಹವನ್ನು ತ್ಯಜಿಸಿದನಂತರ ಮತ್ತೆ ಈ ಭೌತಿಕ ಜಗತ್ತಿನಲ್ಲಿ ಜನ್ಮವೆತ್ತದೆ, ನನ್ನ ನಿತ್ಯ ಧಾಮವನ್ನು ಸೇರುತ್ತಾನೆ.**

**ಭಾವಾರ್ಥ:** ಭಗವಂತನು ತನ್ನ ದಿವ್ಯಧಾಮದಿಂದ ಅವತರಿಸಿ ಬರುವ ವಿಷಯವನ್ನು ಆರನೆಯ ಶ್ಲೋಕದಲ್ಲಿ ಈಗಾಗಲೇ ವಿವರಿಸಿದೆ. ಪರಮ ದೇವೋತ್ತಮ ಪುರುಷನ ಕಾಣಿಸಿಕೊಳ್ಳುವಿಕೆಯ ತತ್ತ್ವವನ್ನು ಅರಿತುಕೊಳ್ಳಬಲ್ಲವನು, ಸಾಂಸಾರಿಕ ಬಂಧನದಿಂದ ಆಗಲೇ ವಿಮೋಚಿತನಾಗಿರುತ್ತಾನೆ, ಆದ್ದರಿಂದ ಅವನು ಈ ಭೌತಿಕ ದೇಹವನ್ನು ತ್ಯಜಿಸಿದನಂತರ ಭಗವದ್ಧಾಮಕ್ಕೆ ಹಿಂದಿರುಗುತ್ತಾನೆ. ಜೀವಿಯ ಇಂಥ ವಿಮೋಚನೆಯು ಸುಲಭ ಸಾಧ್ಯವಲ್ಲ. ವ್ಯಕ್ತಿಶೂನ್ಯವಾದಿಗಳು ಮತ್ತು ಯೋಗಿಗಳು ಅನೇಕಾನೇಕ ಜನ್ಮಗಳ ಮತ್ತು ಬಹಳ ತೊಂದರೆಯ ತರುವಾಯ ಮಾತ್ರ ವಿಮೋಚನೆಯನ್ನು ಹೊಂದುತ್ತಾರೆ. ಆಗಲೂ ಕೂಡ ಅವರು ಸಾಧಿಸುವ ವಿಮೋಚನೆಯು—ಭಗವಂತನ ವ್ಯಕ್ತಿಶೂನ್ಯ ಬ್ರಹ್ಮಜ್ಯೋತಿಯಲ್ಲಿ ಲೀನವಾಗುವುದು—ಕೇವಲ ಆಂಶಿಕ ಮತ್ತು, ಮತ್ತೆ ಈ ಭೌತಿಕ ಜಗತ್ತಿಗೆ ಹಿಂದಿರುಗುವ ಅಪಾಯ ಇರುತ್ತದೆ. ಆದರೆ ಭಕ್ತನು ಭಗವಂತನ ದೇಹ ಮತ್ತು ಕಾರ್ಯಕಲಾಪಗಳ ದಿವ್ಯ ಸ್ವಭಾವವನ್ನು ಕೇವಲ ಅರಿಯುವುದರಿಂದಲೇ, ಈ ದೇಹಾಂತ್ಯದ ನಂತರ ಭಗವದ್ಧಾಮವನ್ನು ಸೇರುತ್ತಾನೆ, ಮತ್ತು ಈ ಭೌತಿಕ ಜಗತ್ತಿಗೆ ಹಿಂದಿರುಗುವ ಅಪಾಯವಿರುವುದಿಲ್ಲ. ಭಗವಂತನಿಗೆ ಅನೇಕಾನೇಕ ರೂಪಗಳು ಮತ್ತು ಅವತಾರಗಳಿವೆ ಎಂದು ಬ್ರಹ್ಮಸಂಹಿತೆಯಲ್ಲಿ (5.33) ಹೇಳಿದೆ, **ಅದ್ವೈತಮಚ್ಯುತಮನಾದಿಮನನ್ತರೂಪಮ್.** ಭಗವಂತನಿಗೆ ಅನೇಕ ದಿವ್ಯ ರೂಪಗಳಿದ್ದರೂ, ಅವೆಲ್ಲವೂ ಪರಮ ದೇವೋತ್ತಮಪುರುಷನೇ. ಐಹಿಕ ಪಂಡಿತರಿಗೂ ಮತ್ತು ಪ್ರಾಯೋಗಿಕ ತಾತ್ವಿಕರಿಗೂ ತಿಳಿಯಲು ಅಸಾಧ್ಯವಾಗಿದ್ದರೂ, ಒಬ್ಬನು ಈ ಸತ್ಯಾಂಶವನ್ನು ದೃಢವಿಶ್ವಾಸದಿಂದ ಅರಿಯಬೇಕು. ವೇದಗಳಲ್ಲಿ (ಪುರುಷಬೋಧಿನೀ ಉಪನಿಷದ್) ಹೇಳಿರುವಂತೆ:

ಏಕೋ ದೇವೋ ನಿತ್ಯಲೀಲಾನುರಕ್ತೋ।
ಭಕ್ತವ್ಯಾಪೀ ಹೃದ್ಯನ್ತರಾತ್ಮಾ॥

"ಪರಮ ದೇವೋತ್ತಮ ಪುರುಷನು, ತನ್ನ ಅನನ್ಯ ಭಕ್ತರೊಡನೆ ಅನೇಕಾನೇಕ ದಿವ್ಯ ರೂಪಗಳಲ್ಲಿ, ಸಂಬಂಧಗಳಲ್ಲಿ ಸದಾ ನಿರತನಾಗಿರುತ್ತಾನೆ." ಈ ವೇದ ವಾಕ್ಯವು ಸ್ವಯಂ ಭಗವಂತನಿಂದಲೇ ಗೀತೆಯ ಈ ಶ್ಲೋಕದಲ್ಲಿ ದೃಢಪಟ್ಟಿದೆ. ತಾತ್ವಿಕ ಊಹಾಪೋಹಗಳಲ್ಲಿ ವ್ಯರ್ಥ ಕಾಲಹರಣ ಮಾಡದೆ, ವೇದಗಳ ಮತ್ತು ಪರಮ ದೇವೋತ್ತಮ ಪುರುಷನಪ್ರಾಮಾಣ್ಯದಿಂದ ಈ ತತ್ವವನ್ನು ಅಂಗಿಕರಿಸುವವನು, ಮೋಕ್ಷದ ಅತ್ಯುನ್ನತ ಪರಿಪೂರ್ಣತೆಯ ಹಂತವನ್ನು ಹೊಂದುತ್ತಾನೆ. ಕೇವಲ ಶ್ರದ್ಧೆಯಿಂದ ಈ ತತ್ವವನ್ನು ಅಂಗೀಕರಿಸುವವನು ನಿಸ್ಸಂದೇಹವಾಗಿ ಮೋಕ್ಷವನ್ನು ಹೊಂದುತ್ತಾನೆ. **ತತ್ ತ್ವಮ್ ಅಸಿ** ಎಂಬ ವೇದವಾಕ್ಯವು ಈ ಸಂದರ್ಭದಲ್ಲಿ ಅನ್ವಯಿಸುತ್ತದೆ. ಶ್ರೀಕೃಷ್ಣನನ್ನು ಪರಮನೆಂದು ಅರಿತವನು, ಅಥವಾ ಭಗವಂತನನ್ನು ಕುರಿತು, "ನೀನು ಅದೇ ಪರಬ್ರಹ್ಮನು, ದೇವೋತ್ತಮ ಪುರುಷನು," ಎಂದು ಹೇಳುವವನು ತಕ್ಷಣವೇ ಮುಕ್ತನಾಗುತ್ತಾನೆ, ಮತ್ತು ಪರಿಣಾಮವಾಗಿ ಭಗವಂತನ ದಿವ್ಯ ಸಾಹಚರ್ಯಕ್ಕೆ ಅವನ ಪ್ರವೇಶವು ಖಚಿತ. ಅರ್ಥಾತ್ ಭಗವಂತನಲ್ಲಿ ಅಂಥ ಶ್ರದ್ಧೆಯುಳ್ಳ ಭಕ್ತನು ಪರಿಪೂರ್ಣತೆಯನ್ನು ಪಡೆಯುತ್ತಾನೆ ಮತ್ತು ಇದು ಈ ಕೆಳಗಿನ ವೇದ ವಾಕ್ಯದಿಂದ ದೃಢಪಟ್ಟಿದೆ :

ತಮೇವ ವಿದಿತ್ವಾತಿ ಮೃತ್ಯುಮೇತಿ।
ನಾನ್ಯಃ ಪನ್ಥಾ ವಿದ್ಯತೇಽಯನಾಯ॥

"ಪರಮ ದೇವೋತ್ತಮ ಪುರುಷನನ್ನು ಅರಿಯುವುದರಿಂದಲೇ ಒಬ್ಬನು ಜನನ ಮರಣಗಳಿಂದ ವಿಮೋಚನೆಯ ಪರಿಪೂರ್ಣ ಹಂತವನ್ನು ಸಾಧಿಸಬಹುದು. ಮತ್ತು ಇದನ್ನು ಬಿಟ್ಟು ಪರಿಪೂರ್ಣತೆಯನ್ನು ಹೊಂದಲು ಅನ್ಯ ಮಾರ್ಗವಿಲ್ಲ."(ಶ್ವೇತಾಶ್ವತರ ಉಪನಿಷದ್ 3.8). ಅನ್ಯ ಮಾರ್ಗವಿಲ್ಲ ಎಂದರೆ, ಶ್ರೀಕೃಷ್ಣನನ್ನು ಪರಮ ದೇವೋತ್ತಮ ಪುರುಷನೆಂದು ಅರಿಯದವನು ಖಂಡಿತವಾಗಿ ತಮೋಗುಣದಲ್ಲಿ ಇರುವವನು ಎಂದರ್ಥ. ಪರಿಣಾಮವಾಗಿ, ಜೇನಿನ ಸೀಸೆಯ ಹೊರಮೈಯನ್ನು ನೆಕ್ಕುವುದರಿಂದ ಅಥವಾ ಭಗವದ್ಗೀತೆಯನ್ನು ಕೇವಲ ಐಹಿಕ ಪಾಂಡಿತ್ಯದಿಂದ ವ್ಯಾಖ್ಯಾನಿಸುವುದರಿಂದ ಅವನು ಮೋಕ್ಷವನ್ನು ಹೊಂದಲಾರನು. ಅಂಥ ಪ್ರಾಯೋಗಿಕ ತತ್ವಜ್ಞಾನಿಗಳು ಭೌತಿಕ ಪ್ರಪಂಚದಲ್ಲಿ ಮಹತ್ವದ ಸ್ಥಾನಗಳನ್ನು ಹೊಂದಿದ್ದರೂ, ಅವರೆಲ್ಲ ಅವಶ್ಯವಾಗಿ ಮೋಕ್ಷಾರ್ಹರಲ್ಲ. ಅಂಥ ಅತಿಗರ್ವಿತ ಐಹಿಕ ಪಂಡಿತರು ಭಗವದ್ಭಕ್ತನ ಅವ್ಯಾಜ ಕರುಣೆಗಾಗಿ ಕಾಯಬೇಕಾಗುವುದು. ಆದ್ದರಿಂದ ಒಬ್ಬನು ಕೃಷ್ಣಪ್ರಜ್ಞೆಯನ್ನು ಶ್ರದ್ಧೆ ಮತ್ತು ಜ್ಞಾನದೊಡನೆ ಬೆಳಸಿಕೊಳ್ಳಬೇಕು, ಮತ್ತು ಹೀಗೆ ಪರಿಪೂರ್ಣತೆಯನ್ನು ಪಡೆಯಬೇಕು.

**ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ ।**
**ಬಹವೋ ಜ್ಞಾನತಪಸಾ ಪೂತಾ ಮದ್‌ಭಾವಮಾಗತಾಃ ॥ ೧೦ ॥**

ವೀತ—ಮುಕ್ತರಾಗಿ, ರಾಗ—ಅಕ್ಕರೆ, ಭಯ—ಭಯ, ಕ್ರೋಧಾಃ—ಮತ್ತು ಕೋಪ, ಮತ್‌ಮಯಾ—ಪೂರ್ಣವಾಗಿ ನನ್ನಲ್ಲಿ, ಮಾಮ್—ನನ್ನಲ್ಲಿ, ಉಪಾಶ್ರಿತಾಃ—ಪೂರ್ಣಸನ್ನಿವೇಶಿತರಾಗಿ, ಬಹವಃ—ಅನೇಕ, ಜ್ಞಾನ—ಜ್ಞಾನದ, ತಪಸಾ—ತಪಸ್ಸಿನಿಂದ,

ಪೂತಾಃ—ಪರಿಶುದ್ಧರಾಗಿ, ಮತ್‌ಭಾವಮ್—ನನ್ನಲ್ಲಿ ದಿವ್ಯ ಪ್ರೇಮವನ್ನು, ಆಗತಾಃ—ಹೊಂದಿರುತ್ತಾರೆ.

**ಅಕ್ಕರೆ, ಭಯ ಮತ್ತು ಕೋಪಗಳಿಂದ ಮುಕ್ತರಾಗಿ, ನನ್ನಲ್ಲಿ ಸಂಪೂರ್ಣವಾಗಿ ತಲ್ಲೀನರಾಗಿ ಮತ್ತು ನನ್ನಲ್ಲಿ ಆಶ್ರಯವನ್ನು ತೆಗೆದುಕೊಂಡು, ಹಿಂದೆ ಅನೇಕಾನೇಕ ವ್ಯಕ್ತಿಗಳು ನನ್ನ ಜ್ಞಾನದಿಂದ ಶುದ್ಧರಾದರು—ಮತ್ತು ಹೀಗೆ ಅವರೆಲ್ಲರೂ ನನಗಾಗಿ ದಿವ್ಯ ಪ್ರೇಮವನ್ನು ಹೊಂದಿದರು.**

**ಭಾವಾರ್ಥ :** ಮೇಲೆ ವರ್ಣಿಸಿದಂತೆ ಭೌತಿಕ ಪ್ರಭಾವಕ್ಕೆ ಒಳಪಟ್ಟ ವ್ಯಕ್ತಿಗೆ, ಪರಮ ಸತ್ಯದ ವ್ಯಕ್ತಿಸ್ವರೂಪವನ್ನು ಅರಿತುಕೊಳ್ಳುವುದು ಬಹಳ ಕಷ್ಟ. ಸಾಮಾನ್ಯವಾಗಿ, ಜೀವನದ ದೈಹಿಕ ಕಲ್ಪನೆಯಲ್ಲಿ ಆಸಕ್ತರಾದವರು ಐಹಿಕ ಭೋಗಾಸಕ್ತಿಯಲ್ಲಿ ಎಷ್ಟು ತಲ್ಲೀನರೆಂದರೆ, ಅವರಿಗೆ ಪರಮನು ಒಬ್ಬ ವ್ಯಕ್ತಿಯೆಂದು ಅರಿತುಕೊಳ್ಳುವುದು ಬಹು ಮಟ್ಟಿಗೆ ಅಸಾಧ್ಯವೇ ಆಗಿರುತ್ತದೆ. ಇಂಥ ಭೋಗಾಸಕ್ತರು ಪೂರ್ಣ ಜ್ಞಾನವುಳ್ಳ ನಿತ್ಯ ಆನಂದವಾದ ಅವಿನಾಶಿ ದಿವ್ಯ ದೇಹವೊಂದಿರುವುದು ಎಂದು ಸಹ ಊಹಿಸಲಾರರು. ಭೌತಿಕ ಕಲ್ಪನೆಯಲ್ಲಿ ದೇಹವು ನಶ್ವರ, ಅಜ್ಞಾನಮಯ ಮತ್ತು ಪೂರ್ಣವಾಗಿ ದುಃಖಮಯ, ಆದ್ದರಿಂದ ಜನಸಾಮಾನ್ಯರಿಗೆ ಭಗವಂತನ ವ್ಯಕ್ತಿರೂಪದ ವಿಷಯವನ್ನು ತಿಳಿಸಿದಾಗ, ಅವರು ಈ ಭೌತಿಕ ದೈಹಿಕ ಕಲ್ಪನೆಯನ್ನೇ ಮನಸ್ಸಿನಲ್ಲಿ ಇಟ್ಟುಕೊಂಡಿರುತ್ತಾರೆ. ಇಂಥ ಭೋಗಾಸಕ್ತ ಜನರಿಗೆ ಬೃಹತ್ ಭೌತಿಕ ಅಭಿವ್ಯಕ್ತತೆಯ ರೂಪವೇ ಪರಮ. ಪರಿಣಾಮ ವಾಗಿ, ಅವರು ಪರಮನನ್ನು ವ್ಯಕ್ತಿಶೂನ್ಯವೆಂದು ಭಾವಿಸುತ್ತಾರೆ. ಅಂಥ ಜನರು ಭೋಗಾ ಸಕ್ತರಾಗಿರುವುದರಿಂದ, ಸಂಸಾರ ವಿಮೋಚನೆಯ ನಂತರ ವ್ಯಕ್ತಿತ್ವವನ್ನು ಉಳಿಸಿಕೊಳ್ಳುವ ಕಲ್ಪನೆ ಅವರಿಗೆ ಭಯವನ್ನುಂಟು ಮಾಡುತ್ತದೆ. ಆಧ್ಯಾತ್ಮಿಕ ಜೀವನವು ವೈಯಕ್ತಿಕ ಹಾಗು ವ್ಯಕ್ತಿ ವೈಲಕ್ಷಣಗಳುಳ್ಳದ್ದೆಂದು ತಿಳಿಸಲ್ಪಟ್ಟಾಗ, ಮತ್ತೆ ವ್ಯಕ್ತಿಗಳಾಗಲು ಭಯ ಪಡುವರು ಮತ್ತು ಇದರಿಂದ ಒಂದು ವಿಧವಾದ ನಿರಾಕಾರ ಶೂನ್ಯತೆಯಲ್ಲಿ ಲೀನವಾಗಲು ಅವರು ಸಹಜವಾಗಿಯೇ ಇಷ್ಟಪಡುವರು. ಸಾಮಾನ್ಯವಾಗಿ, ಅವರು ಜೀವಾತ್ಮರನ್ನು, ಸಾಗರದಲ್ಲಿ ಲೀನವಾಗುವ ಸಾಗರದ ಮೇಲಿನ ಗುಳ್ಳೆಗಳಿಗೆ ಹೋಲಿಸುತ್ತಾರೆ. ಅದುವೇ ಪ್ರತ್ಯೇಕ ವ್ಯಕ್ತಿ ವೈಲಕ್ಷಣವಿಲ್ಲದೆ ಸಾಧಿಸಬಹುದಾದ ಆಧ್ಯಾತ್ಮ ಅಸ್ತಿತ್ವದ ಅತ್ಯುನ್ನತ ಪರಿ ಪೂರ್ಣತೆ. ಇದು ಆಧ್ಯಾತ್ಮಿಕ ಅಸ್ತಿತ್ವದ ಪರಿಪೂರ್ಣ ಜ್ಞಾನವಿಲ್ಲದ ಜೀವನದ ಒಂದು ವಿಧವಾದ ಭಯಂಕರ ಹಂತವಾಗಿರುತ್ತದೆ. ಅಲ್ಲದೆ ಆಧ್ಯಾತ್ಮ ಅಸ್ತಿತ್ವವನ್ನೇ ಅರಿಯಲಾಗದ ಅನೇಕ ವ್ಯಕ್ತಿಗಳಿದ್ದಾರೆ. ಅನೇಕ ವಾದಗಳ ಮತ್ತು ಅನೇಕ ಬಗೆಯ ಅಸಂಗತ ತಾತ್ವಿಕ ಊಹಾಪೋಹಗಳಿಂದ ಕಂಗೆಟ್ಟು, ಬೇಸರಗೊಳ್ಳುವರು ಅಥವಾ ಕೋಪಗೊಳ್ಳುವರು, ಮತ್ತು ಪರಮ ಕಾರಣವೇ ಇಲ್ಲ, ಎಲ್ಲವೂ ಶೂನ್ಯ ಎಂದು ಮೂರ್ಖತನದಿಂದ ತೀರ್ಮಾನಿಸುವರು. ಅಂಥ ಜನರು ಜೀವನದ ವ್ಯಾಧಿಗ್ರಸ್ತ ಸ್ಥಿತಿಯಲ್ಲಿರುವರು. ಕೆಲವರು ಭೌತಿಕ ವಿಷಯದಲ್ಲಿ ಬಹಳ ಆಸಕ್ತರಾಗಿರುವರು, ಮತ್ತು ಇದರಿಂದ ಆಧ್ಯಾತ್ಮ ಜೀವನಕ್ಕೆ ಗಮನ ನೀಡುವುದಿಲ್ಲ. ಕೆಲವರು ಪರಮ ಆಧ್ಯಾತ್ಮಿಕ ಕಾರಣದಲ್ಲಿ ಲೀನರಾಗಲು ಬಯಸುವರು. ಮತ್ತು ಕೆಲವರು

ಎಲ್ಲ ಬಗೆಯ ಆಧ್ಯಾತ್ಮಿಕ ಊಹಾಪೋಹಗಳಿಂದ ಹತಾಶರಾಗಿ, ಕೋಪಗೊಂಡು ಯಾವುದನ್ನೂ ನಂಬದಿರುವವರು. ಈ ಕೊನೆಯ ವರ್ಗದ ಜನರು ಮತ್ತೇರಿಸುವ ಯಾವುದನ್ನಾದರೂ ಆಶ್ರಯಿಸುವರು ಮತ್ತು ಅವರ ಮನಸ್ಸಿನ ಭ್ರಾಂತಿಯನ್ನು ಕೆಲವು ಸಲ ಅಧ್ಯಾತ್ಮ ದರ್ಶನವೆಂದು ಸ್ವೀಕರಿಸುವರು. ಭೌತಿಕ ಜಗತ್ತಿನ ಆಸಕ್ತಿಯ ಮೂರು ಹಂತಗಳಿಂದ ಮುಕ್ತರಾಗಬೇಕು : ಅಧ್ಯಾತ್ಮ ಜೀವನದ ನಿರ್ಲಕ್ಷತೆ, ಅಧ್ಯಾತ್ಮ ವ್ಯಕ್ತಿತ್ವದ ಭಯ, ಮತ್ತು ಜೀವನದ ನಿರಾಶೆಯಿಂದುಂಟಾಗುವ ಶೂನ್ಯ ಕಲ್ಪನೆ. ಜೀವನದ ಭೌತಿಕ ಕಲ್ಪನೆಯ ಈ ಮೂರು ಹಂತಗಳಿಂದ ಮುಕ್ತನಾಗಲು, ಅಧಿಕೃತ ಗುರುವಿನ ಮಾರ್ಗದರ್ಶನದಲ್ಲಿ ಭಗವಂತನ ಪೂರ್ಣ ಆಶ್ರಯವನ್ನು ತೆಗೆದುಕೊಳ್ಳಬೇಕು, ಮತ್ತು ಭಕ್ತಿಯುತ ಜೀವನದ ಶಿಸ್ತುಗಳನ್ನು ಮತ್ತು ನಿಯಂತ್ರಣ ತತ್ವಗಳನ್ನು ಪಾಲಿಸಬೇಕು. ಭಕ್ತಿಯುತ ಜೀವನದ ಅಂತಿಮ ಹಂತವನ್ನು **ಭಾವ,** ಅಥವಾ ಭಗವಂತನ ದಿವ್ಯ ಪ್ರೇಮವೆಂದು ಕರೆಯುತ್ತಾರೆ.

**ಭಕ್ತಿರಸಾಮೃತಸಿಂಧು** (1. 4. 15–16) ಅಥವಾ ಭಕ್ತಿಯುತ ಸೇವೆಯ ವಿಜ್ಞಾನದ ಪ್ರಕಾರ :

> ಆದೌ ಶ್ರದ್ಧಾ ತತಃ ಸಾಧುಸಂಗೋऽಥ ಭಜನಕ್ರಿಯಾ।
> ತತೋऽನರ್ಥನಿವೃತ್ತಿಃ ಸ್ಯಾತ್ತತೋ ನಿಷ್ಠಾ ರುಚಿಸ್ತತಃ॥
> ಅಥಾಸಕ್ತಿಸ್ತತೋಭಾವಸ್ತತಃ ಪ್ರೇಮಾಭ್ಯುದಂಚತಿ।
> ಸಾಧಕಾನಾಮ್ ಅಯಂ ಪ್ರೇಮ್ಣಃ ಪ್ರಾದುರ್ಭಾವೇ ಭವೇತ್ಕ್ರಮಃ॥

"ಆರಂಭದಲ್ಲಿ ಒಬ್ಬನಿಗೆ ಆತ್ಮ ಸಾಕ್ಷಾತ್ಕಾರದಲ್ಲಿ ಆಸೆಯಿರಬೇಕು. ಇದು ಅಧ್ಯಾತ್ಮಿಕವಾಗಿ ಉನ್ನತರಾದ ವ್ಯಕ್ತಿಗಳ ಜೊತೆ ಸಹವಾಸ ಮಾಡಲು ಪ್ರಯತ್ನಿಸುವ ಹಂತಕ್ಕೆ ತರುತ್ತದೆ. ಮುಂದಿನ ಹಂತದಲ್ಲಿ ಒಬ್ಬನು ಉನ್ನತ ಗುರುವಿನಿಂದ ದೀಕ್ಷೆಯನ್ನು ಪಡೆಯುತ್ತಾನೆ ಮತ್ತು ಅವರ ಉಪದೇಶಾನುಸಾರ ಆರಂಭ ಭಕ್ತನು ಭಕ್ತಿಯುತ ಸೇವೆಯ ವಿಧಾನವನ್ನು ಪ್ರಾರಂಭಿಸುತ್ತಾನೆ. ಗುರುವಿನ ಮಾರ್ಗದರ್ಶನದಲ್ಲಿ ಭಕ್ತಿಯುತ ಸೇವೆಯ ನಿರ್ವಹಣೆಯಿಂದ, ಒಬ್ಬನು ಎಲ್ಲ ವಿಧವಾದ ಭೌತಿಕ ಆಸಕ್ತಿಗಳಿಂದ ಮುಕ್ತನಾಗುತ್ತಾನೆ, ಆತ್ಮ ಸಾಕ್ಷಾತ್ಕಾರದಲ್ಲಿ ಸ್ಥಿರತೆಯನ್ನು ಹೊಂದುತ್ತಾನೆ, ಮತ್ತು ಪರಮ ದೇವೋತ್ತಮ ಪುರುಷ ಶ್ರೀಕೃಷ್ಣನ ಬಗ್ಗೆ ಶ್ರವಣ ಮಾಡಲು ಅಭಿರುಚಿಯನ್ನು ಹೊಂದುತ್ತಾನೆ. ಈ ಅಭಿರುಚಿಯು ಕೃಷ್ಣ ಪ್ರಜ್ಞೆಗೆ ಅನುರಕ್ತನಾಗಲು ಒಬ್ಬನನ್ನು ಮತ್ತಷ್ಟು ಮುನ್ನಡೆಸುತ್ತದೆ. ಇದು **ಭಾವ** ಅಥವಾ ಭಗವಂತನ ದಿವ್ಯ ಪ್ರೇಮದ ಪೀಠಿಕಾ ಹಂತದಲ್ಲಿ ಪಕ್ವವಾಗುತ್ತದೆ. ನಿಜವಾದ ಭಗವತ್ ಪ್ರೇಮವನ್ನು **ಪ್ರೇಮ** ಎಂದು ಕರೆಯುತ್ತಾರೆ. ಇದು ಜೀವನದ ಅತ್ಯುನ್ನತ ಪರಿಪೂರ್ಣ ಹಂತ." **ಪ್ರೇಮ** ಹಂತದಲ್ಲಿ ಒಬ್ಬನು ಭಗವಂತನ ಪ್ರೇಮಯುತ ದಿವ್ಯ ಸೇವೆಯಲ್ಲಿ ನಿರಂತರ ತೊಡಗಿರುತ್ತಾನೆ. ಹೀಗೆ, ಅಧಿಕೃತ ಗುರುವಿನ ಮಾರ್ಗದರ್ಶನದಲ್ಲಿ, ಭಕ್ತಿಯುತ ಸೇವೆಯ ಸುಧಾರಿತ ವಿಧಾನದಿಂದ. ಒಬ್ಬನು ಸಕಲ ಭೌತಿಕ ಆಸಕ್ತಿಗಳಿಂದಲೂ, ಒಬ್ಬನ ಅಧ್ಯಾತ್ಮಿಕ ವ್ಯಕ್ತಿತ್ವದ ಭಯದಿಂದಲೂ ಮತ್ತು ಶೂನ್ಯ ಸಿದ್ಧಾಂತದಿಂದ ಪರಿಣಮಿಸುವ ನಿರಾಶಾಭಂಗಗಳಿಂದಲೂ ಮುಕ್ತನಾಗಿ, ಅತ್ಯುನ್ನತ ಹಂತವನ್ನು ಹೊಂದಬಹುದು. ಆಗ ಒಬ್ಬನು ಭಗವಂತನ ಧಾಮವನ್ನು ಸೇರಬಹುದು.

**ಯೇ ಯಥಾ ಮಾಂ ಪ್ರಪದ್ಯನ್ತೇ ತಾಂಸ್ತಥೈವ ಭಜಾಮ್ಯಹಮ್ ।**
**ಮಮ ವರ್ತ್ಮಾನುವರ್ತನ್ತೇ ಮನುಷ್ಯಾಃ ಪಾರ್ಥ ಸರ್ವಶಃ ॥ ೧೧ ॥**

ಯೇ—ಯಾರೆಲ್ಲರೂ, ಯಥಾ—ಹೇಗೆ, ಮಾಮ್—ನನಗೆ, ಪ್ರಪದ್ಯನ್ತೇ—ಶರಣಾಗತರಾಗುವರೋ, ತಾನ್—ಅವರಿಗೆ, ತಥಾ—ಹಾಗೆ, ಏವ—ಖಂಡಿತವಾಗಿ, ಭಜಾಮಿ—ಪ್ರತಿಫಲನೀಡುವೆನು, ಅಹಮ್—ನಾನು, ಮಮ—ನನ್ನ, ವರ್ತ್ಮ—ಮಾರ್ಗ, ಅನುವರ್ತನ್ತೇ—ಅನುಸರಿಸುವ, ಮನುಷ್ಯಾಃ—ಎಲ್ಲ ಮನುಷ್ಯರು, ಪಾರ್ಥ—ಹೇ ಪೃಥಾ ಪುತ್ರನೇ, ಸರ್ವಶಃ—ಎಲ್ಲ ವಿಷಯಗಳಲ್ಲಿಯೂ.

**ಎಲ್ಲರೂ ನನಗೆ ಹೇಗೆ ಶರಣಾಗತರಾಗುವರೋ ಹಾಗೆಯೇ ನಾನು ಅವರಿಗೆ ಪ್ರತಿಫಲವನ್ನು ನೀಡುವೆನು. ಹೇ ಪೃಥಾ ಪುತ್ರನೇ, ಎಲ್ಲರೂ ಎಲ್ಲ ವಿಷಯಗಳಲ್ಲೂ ನನ್ನ ಮಾರ್ಗವನ್ನೇ ಅನುಸರಿಸುವರು.**

**ಭಾವಾರ್ಥ :** ಪ್ರತಿಯೊಬ್ಬನೂ ಕೃಷ್ಣನನ್ನು ಅವನ ಅಭಿವ್ಯಕ್ತತೆಗಳ ವಿವಿಧ ರೂಪಗಳಲ್ಲಿ ಹುಡುಕುತ್ತಿದ್ದಾರೆ. ಪರಮ ದೇವೋತ್ತಮ ಪುರುಷ ಕೃಷ್ಣನು, ಅವನ ವ್ಯಕ್ತಿ ಶೂನ್ಯ ಬ್ರಹ್ಮಜ್ಯೋತಿ ಪ್ರಕಾಶದಲ್ಲಿ,ಮತ್ತು ಪರಮಾಣುಗಳೂ ಒಳಗೊಂಡಂತೆ ಸರ್ವಾಂತರ್ಯಾಮಿಯಾಗಿ ವ್ಯಾಪಿಸಿರುವ ಪರಮಾತ್ಮನಂತೆ ಆಂಶಿಕವಾಗಿ ಸಾಕ್ಷಾತ್ಕರಿಸಲ್ಪಡುತ್ತಾನೆ. ಆದರೆ ಕೃಷ್ಣನು ತನ್ನ ಶುದ್ಧ ಭಕ್ತರಿಂದ ಮಾತ್ರವೇ ಪೂರ್ಣವಾಗಿ ಸಾಕ್ಷಾತ್ಕರಿಸಲ್ಪಡುತ್ತಾನೆ. ಪರಿಣಾಮವಾಗಿ, ಕೃಷ್ಣನು ಪ್ರತಿಯೊಬ್ಬನ ಸಾಕ್ಷಾತ್ಕಾರದ ಗುರಿಯಾಗಿದ್ದಾನೆ, ಮತ್ತು ಹೀಗೆ ಪ್ರತಿಯೊಬ್ಬನೂ, ಯಾರೇ ಆಗಿರಲಿ ಅವನನ್ನು ಹೊಂದುವ ತನ್ನ ಇಚ್ಛಾನುಸಾರ ತೃಪ್ತನಾಗುತ್ತಾನೆ. ದಿವ್ಯ ಲೋಕದಲ್ಲಿಯೂ ಕೂಡ, ಭಕ್ತನು ಅಪೇಕ್ಷಿಸುವಂತೆಯೇ ಕೃಷ್ಣನು ತನ್ನ ಶುದ್ಧ ಭಕ್ತರೊಡನೆ ದಿವ್ಯ ಮನೋವೃತ್ತಿಯಲ್ಲಿ ತನ್ನನ್ನು ವಿನಿಮಯಿಸಿಕೊಳ್ಳುತ್ತಾನೆ. ಒಬ್ಬ ಭಕ್ತನು ಕೃಷ್ಣನನ್ನು ಪರಮ ಒಡೆಯನಾಗಿ, ಮತ್ತೊಬ್ಬನು ತನ್ನ ಆತ್ಮ ಸಖನಾಗಿ, ಮತ್ತೊಬ್ಬನು ತನ್ನ ಮಗನಾಗಿ ಮತ್ತು ಮತ್ತೊಬ್ಬರು ತನ್ನ ಪ್ರಿಯತಮನಾಗಿ ಪಡೆಯಲು ಅಪೇಕ್ಷಿಸಬಹುದು. ಕೃಷ್ಣನು ತನ್ನ ಭಕ್ತರನ್ನು ಸಮಾನವಾಗಿ, ಅವರವರ ಪ್ರೇಮದ ಆಧಿಕ್ಯತೆಗೆ ಅನುಸಾರವಾಗಿ ಪುರಸ್ಕರಿಸುತ್ತಾನೆ. ಭೌತಿಕ ಪ್ರಪಂಚದಲ್ಲಿ ಕೂಡ ಇಂಥ ಭಾವನೆಗಳ ವಿನಿಮಯಗಳುಂಟು, ಮತ್ತು ಅವುಗಳು ಭಗವಂತನಿಂದ ತನ್ನ ವಿವಿಧ ಬಗೆಯ ಆರಾಧಕರೊಂದಿಗೆ ಸಮಾನವಾಗಿ ವಿನಿಮಯಿಸಲ್ಪಡುತ್ತವೆ. ಶುದ್ಧ ಭಕ್ತರು ಇಲ್ಲಿಯೂ ಮತ್ತು ದಿವ್ಯ ಧಾಮದಲ್ಲಿಯೂ ವೈಯಕ್ತಿಕವಾಗಿ ಭಗವಂತನೊಡನೆ ಸಾಹಚರ್ಯ ಮಾಡುತ್ತಾರೆ ಮತ್ತು ಭಗವಂತನಿಗೆ ವೈಯಕ್ತಿಕ ಸೇವೆ ಸಲ್ಲಿಸಲು ಸಮರ್ಥರಾಗುತ್ತಾರೆ, ಮತ್ತು ಹೀಗೆ ಅವನ ಪ್ರೇಮಯುತ ಸೇವೆಯಲ್ಲಿ ದಿವ್ಯಾನಂದವನ್ನು ಪಡೆಯುತ್ತಾರೆ. ಜೀವಾತ್ಮನ ಪ್ರತ್ಯೇಕ ಅಸ್ತಿತ್ವವನ್ನೇ ನಾಶಮಾಡುವುದರಿಂದ ಆಧ್ಯಾತ್ಮಿಕ ಆತ್ಮಹತ್ಯೆಯನ್ನು ಮಾಡಿಕೊಳ್ಳಲು ಅಪೇಕ್ಷಿಸುವವರನ್ನೂ ಮತ್ತು ವ್ಯಕ್ತಿಶೂನ್ಯವಾದಿಗಳನ್ನೂ, ತನ್ನ ಬ್ರಹ್ಮಜ್ಯೋತಿಯಲ್ಲಿ ಐಕ್ಯ ಮಾಡಿಕೊಳ್ಳುವುದರಿಂದ ಅವರಿಗೂ ಕೃಷ್ಣನು ಸಹಾಯ ಮಾಡುತ್ತಾನೆ. ಇಂಥ ವ್ಯಕ್ತಿಶೂನ್ಯವಾದಿಗಳು ನಿತ್ಯ ಆನಂದಮಯ ದೇವೋತ್ತಮ ಪುರುಷನನ್ನು ಸ್ವೀಕರಿಸಲು ಒಪ್ಪುವುದಿಲ್ಲ; ಅದರ ಪರಿಣಾಮವಾಗಿ, ಅವರು ತಮ್ಮ ಪ್ರತ್ಯೇಕ ವ್ಯಕ್ತಿತ್ವವನ್ನೇ

ನಂದಿಸಿಕೊಳ್ಳುವುದರಿಂದ, ಭಗವಂತನ ದಿವ್ಯ ವೈಯಕ್ತಿಕ ಸೇವೆಯ ಆನಂದವನ್ನು ಅವರು ಆಸ್ವಾದಿಸಲಾರರು. ಅವರಲ್ಲಿ ಕೆಲವರು, ವ್ಯಕ್ತಿಶೂನ್ಯ ಅಸ್ತಿತ್ವದಲ್ಲಿಯೂ ದೃಢವಾಗಿ ಸ್ಥಿತರಾಗದವರು, ಚಟುವಟಿಕೆಗಳಿಗಾಗಿ ಇರುವ ತಮ್ಮ ಸುಪ್ತ ಇಚ್ಛೆಗಳನ್ನು ಪ್ರದರ್ಶಿಸಲು ಈ ಭೌತಿಕ ಕ್ಷೇತ್ರಕ್ಕೆ ಹಿಂದಿರುಗುವರು. ಅವರಿಗೆ ಅಧ್ಯಾತ್ಮ ಲೋಕಗಳಲ್ಲಿ ಪ್ರವೇಶ ದೊರೆಯುವುದಿಲ್ಲ, ಆದರೆ ಭೌತಿಕ ಲೋಕಗಳಲ್ಲಿ ಕರ್ಮ ಮಾಡಲು ಮತ್ತೆ ಅವಕಾಶ ನೀಡಲಾಗುತ್ತದೆ. ಕಾಮ್ಯ ಕರ್ಮಿಗಳಿಗೆ ಭಗವಂತನು ಯಜ್ಞೇಶ್ವರನಾಗಿ, ಅವರ ವಿಧಿತ ಕರ್ತವ್ಯಗಳಿಗೆ ಬಯಸಿದ ಫಲಗಳನ್ನು ನೀಡುತ್ತಾನೆ; ಮತ್ತು ಯೋಗ ಶಕ್ತಿಯನ್ನು ಬಯಸುವ ಯೋಗಿಗಳಿಗೆ ಅಂಥ ಶಕ್ತಿಗಳನ್ನು ನೀಡುತ್ತಾನೆ. ಅರ್ಥಾತ್, ಪ್ರತಿಯೊಬ್ಬನೂ ತನ್ನ ಯಶಸ್ಸಿಗೆ ಭಗವಂತನ ದಯೆಯನ್ನೇ ಅವಲಂಬಿಸಿದ್ದಾನೆ, ಮತ್ತು ಎಲ್ಲ ಬಗೆಯ ಆಧ್ಯಾತ್ಮಿಕ ಪ್ರಕ್ರಿಯೆಗಳು, ಒಂದೇ ಮಾರ್ಗದ ಯಶಸ್ಸಿನ ಪ್ರಾಪ್ತಿಯ ಬೇರೆ ಬೇರೆ ಹಂತ ಗಳಾಗಿವೆ. ಆದ್ದರಿಂದ, ಒಬ್ಬನು ಕೃಷ್ಣ ಪ್ರಜ್ಞೆಯ ಅತ್ಯುನ್ನತ ಮಟ್ಟಕ್ಕೆ ಬಂದ ಹೊರತು, ಭಾಗವತದಲ್ಲಿ ಹೇಳಿದಂತೆ, ಎಲ್ಲ ಪ್ರಯತ್ನಗಳು ಅಪೂರ್ಣವಾಗಿಯೇ ಉಳಿದಿರುತ್ತವೆ :

ಅಕಾಮಃ ಸರ್ವಕಾಮೋ ವಾ ಮೋಕ್ಷಕಾಮ ಉದಾರಧೀಃ।
ತೀವ್ರೇಣ ಭಕ್ತಿಯೋಗೇನ ಯಜೇತ ಪುರುಷಂ ಪರಮ್॥

"ಒಬ್ಬನು ಇಚ್ಛಾರಹಿತನಾಗಿರಲಿ (ಭಕ್ತನ ಸ್ಥಿತಿ), ಅಥವಾ ಎಲ್ಲ ಕಾಮ್ಯಕರ್ಮ ಫಲಾ ಪೇಕ್ಷಿಯಾಗಿರಲಿ, ಅಥವಾ ಮೋಕ್ಷಾಪೇಕ್ಷಿಯಾಗಿರಲಿ,ಅಂಥವನು ಕೃಷ್ಣಪ್ರಜ್ಞೆಯಲ್ಲಿ ಕೊನೆ ಗಾಣುವ ಸಂಪೂರ್ಣ ಪರಿಪೂರ್ಣತೆಗಾಗಿ, ತನ್ನ ಎಲ್ಲ ಪ್ರಯತ್ನಗಳಲ್ಲಿ ಪರಮ ದೇವೋತ್ತಮ ಪುರುಷನನ್ನು ಆರಾಧಿಸಲು ಯತ್ನಿಸಬೇಕು." (ಭಾಗವತ 2. 3. 10)

**ಕಾಂಕ್ಷನ್ತಃ ಕರ್ಮಣಾಂ ಸಿದ್ಧಿಂ ಯಜನ್ತ ಇಹ ದೇವತಾಃ ।**
**ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ॥ ೧೨ ॥**

ಕಾಂಕ್ಷನ್ತಃ—ಇಚ್ಛಿಸುತ್ತ, ಕರ್ಮಣಾಮ್—ಕಾಮ್ಯಕರ್ಮಗಳ, ಸಿದ್ಧಿಮ್—ಪರಿಪೂರ್ಣತೆಯನ್ನು, ಯಜನ್ತೇ—ಅವರು ಯಜ್ಞಾದಿಗಳಿಂದ ಪೂಜಿಸುತ್ತಾರೆ, ಇಹ—ಭೌತಿಕ ಪ್ರಪಂಚದಲ್ಲಿ, ದೇವತಾಃ—ದೇವತೆಗಳು, ಕ್ಷಿಪ್ರಮ್—ಬಹು ಶೀಘ್ರವಾಗಿ, ಹಿ—ಖಂಡಿತ ವಾಗಿ, ಮಾನುಷೇ—ಮಾನವ ಸಮಾಜದಲ್ಲಿ, ಲೋಕೇ—ಈ ಪ್ರಪಂಚದಲ್ಲಿ, ಸಿದ್ಧಿಃ—ಯಶಸ್ಸು, ಭವತಿ—ಉಂಟಾಗುತ್ತದೆ, ಕರ್ಮಜಾ—ಕಾಮ್ಯಕರ್ಮದಿಂದ.

**ಈ ಜಗತ್ತಿನಲ್ಲಿ ಜನರು ಕಾಮ್ಯಕರ್ಮಗಳಿಂದ ಯಶಃಪ್ರಾಪ್ತಿಯನ್ನು ಬಯಸು ತ್ತಾರೆ. ಆದ್ದರಿಂದ ಅವರು ದೇವತೆಗಳನ್ನು ಪೂಜಿಸುತ್ತಾರೆ. ಜನರು ಈ ಜಗತ್ತಿನಲ್ಲಿ ಕಾಮ್ಯಕರ್ಮದಿಂದ ಬೇಗನೆ ಫಲಿತಾಂಶಗಳು ಪಡೆಯುತ್ತಾರೆಂಬುದು ನಿಜ.**

**ಭಾವಾರ್ಥ:** ಈ ಭೌತಿಕ ಜಗತ್ತಿನ ದೇವರುಗಳು ಅಥವಾ ದೇವತೆಗಳ ಬಗ್ಗೆ ಮಹಾ ತಪ್ಪು ಕಲ್ಪನೆಯಿದೆ, ಮತ್ತು ಬುದ್ಧಿಹೀನರು ಮಹಾ ವಿದ್ವಾಂಸರೆನಿಸಿಕೊಂಡು, ಈ ದೇವತೆ ಗಳು ಭಗವಂತನ ಅನೇಕ ರೂಪಗಳೆಂದು ಭಾವಿಸುತ್ತಾರೆ. ವಾಸ್ತವಿಕವಾಗಿ ಈ ದೇವತೆಗಳು

**ಭಗ**ವಂತನ ಭಿನ್ನರೂಪಗಳಲ್ಲ, ಆದರೆ ಅವನ ವಿಭಿನ್ನಾಂಶರು. ಭಗವಂತನು ಒಬ್ಬ**ನೇ, ಮ**ತ್ತು ವಿಭಿನ್ನಾಂಶರು ಅನೇಕ. ವೇದಗಳು **ನಿತ್ಯೋ ನಿತ್ಯಾನಾಮ್,** ಎಂದರೆ ಭಗವಂತನು ಒಬ್ಬನೇ ಎಂದು ಹೇಳುತ್ತವೆ. **ಈಶ್ವರಃ ಪರಮಃ ಕೃಷ್ಣಃ,** ಪರಮ ದೇವನು—ಕೃಷ್ಣನು—ಒಬ್ಬನೇ ಮತ್ತು ಭೌತಿಕ ಜಗತ್ತನ್ನು ನಿರ್ವಹಿಸಲು ದೇವತೆಗಳಿಗೆ ಪ್ರಾತಿನಿಧ್ಯ ಅಧಿ**ಕಾರ ಗಳ**ನ್ನು ವಹಿಸಲಾಗಿದೆ. ದೇವತೆಗಳು ಭೌತಿಕ ಶಕ್ತಿಯ ವಿವಿಧ ಶ್ರೇಣಿಗಳನ್ನು ಹೊಂದಿರು**ವ ಜೀ**ವಿಗಳು (**ನಿತ್ಯಾನಾಮ್**), ಅವರು ಪರಮ ದೇವನಾದ ನಾರಾಯಣ, ವಿಷ್ಣು ಅಥ**ವಾ ಕೃ**ಷ್ಣನಿಗೆ ಸಮಾನರಾಗಲಾರರು.ಭಗವಂತನು ಮತ್ತು ದೇವತೆಗಳು ಒಂದೇ ಮಟ್ಟದವ**ರೆಂದು ಭಾ**ವಿಸುವವನು ನಾಸ್ತಿಕ ಅಥವಾ **ಪಾಷಂಡೀ.** ಬ್ರಹ್ಮ ಮತ್ತು ಶಿವನಂಥ ಮಹಾದೇ**ವತೆ** ಗಳನ್ನು ಕೂಡ ಪರಮ ಪ್ರಭುವಿಗೆ ಹೋಲಿಸಲಾಗದು. ವಾಸ್ತವಿಕವಾಗಿ, ಭಗವಂತನು ಬ್ರಹ್ಮ ಮತ್ತು ಶಿವನಂಥ ದೇವತೆಗಳಿಂದ ಆರಾಧಿತನು (**ಶಿವವಿರಿಂಚಿನುತಮ್**). ಅತಿವಿಚಿತ್ರ ವಾಗಿದ್ದರೂ, ಭಗವಂತನಿಗೆ ಮನುಷ್ಯತ್ವಾರೋಪಣೆ ಅಥವಾ ಪ್ರಾಣಿತ್ವಾರೋಪಣೆಯ ತಪ್ಪು ತಿಳಿವಳಿಕೆಯಲ್ಲಿ, ಮೂರ್ಖರಿಂದ ಪೂಜಿಸಲ್ಪಡುವ ಅನೇಕ ಜನನಾಯಕರಿದ್ದಾರೆ. **ಇಹ ದೇವತಾಃ,** ಈ ಭೌತಿಕ ಜಗತ್ತಿನ ಬಲಿಷ್ಠ ಮನುಷ್ಯನನ್ನು ಅಥವಾ ದೇವತೆಯನ್ನು ಸೂಚಿಸುತ್ತದೆ. ಆದರೆ ನಾರಾಯಣ, ವಿಷ್ಣು ಅಥವಾ ಕೃಷ್ಣ, ಪರಮ ದೇವೋತ್ತಮ ಪುರುಷನು ಈ ಜಗತ್ತಿಗೆ ಸೇರಿದವನಲ್ಲ. ಅವನು ಭೌತಿಕ ಸೃಷ್ಟಿಗೆ ಅತೀತನು ಅಥವಾ ದಿವ್ಯನು. ನಾರಾಯಣನು ಅಥವಾ ಕೃಷ್ಣನು ಈ ಭೌತಿಕ ಸೃಷ್ಟಿಗೆ ಅತೀತನೆಂದು ವ್ಯಕ್ತಿಶೂನ್ಯ ವಾದಿಗಳ ನಾಯಕರಾದ ಶ್ರೀಪಾದ ಶಂಕರಾಚಾರ್ಯರೂ ಕೂಡ ಹೇಳುತ್ತಾರೆ. ಹೀಗಿದ್ದರೂ, ಮೂರ್ಖರು (**ಹೃತಜ್ಞಾನ**) ಶೀಘ್ರ ಫಲಿತಾಂಶಗಳಿಗಾಗಿ ದೇವತೆಗಳನ್ನು ಪೂಜಿಸುತ್ತಾರೆ. ಅವರಿಗೆ ಫಲಗಳು ದೊರಕುತ್ತವೆ, ಆದರೆ ದೊರಕಿದ ಫಲಗಳು ತಾತ್ಕಾಲಿಕ, ಮತ್ತು ಅವು ಬುದ್ಧಿಹೀನರಿಗೆ ಉದ್ದೇಶಿತ ಎಂದು ಅವರಿಗೆ ತಿಳಿದಿಲ್ಲ. ಬುದ್ಧಿವಂತನು ಕೃಷ್ಣಪ್ರಜ್ಞೆ ಯಲ್ಲಿರುತ್ತಾನೆ, ಮತ್ತು ಅವನು ಶೀಘ್ರ ಮತ್ತು ತಾತ್ಕಾಲಿಕ ಪ್ರಯೋಜನಕ್ಕಾಗಿ ಅಲ್ಪ ದೇವತೆಗಳನ್ನು ಆರಾಧಿಸಬೇಕಾಗಿಲ್ಲ. ಈ ಭೌತಿಕ ಜಗತ್ತಿನ ದೇವತೆಗಳು ಹಾಗೂ ಅವರ ಆರಾಧಕರು ಈ ಭೌತಿಕ ಜಗತ್ತಿನ ನಾಶದೊಂದಿಗೆ ಕಣ್ಮರೆಯಾಗುತ್ತಾರೆ. ದೇವತೆ**ಗಳು** ನೀಡುವ ವರಗಳು ಭೌತಿಕ ಮತ್ತು ತಾತ್ಕಾಲಿಕ. ಈ ಭೌತಿಕ ಜಗತ್ತುಗಳು ಮತ್ತು ಅವುಗಳ ನಿವಾಸಿಗಳು, ಉಭಯವೂ, ದೇವತೆಗಳು ಮತ್ತು ಅವರ ಆರಾಧಕರೂ ಸೇರಿ ವಿಶ್ವ ಸಾಗರಲ್ಲಿನ ನೀರುಗುಳ್ಳೆಗಳು. ಆದರೆ ಈ ಜಗತ್ತಿನಲ್ಲಿ ಮಾನವ ಸಮಾಜವು, ಭೌತಿಕ ಸಂಪತ್ತಾದ ಭೂಸ್ವಾಧೀನ, ಕುಟುಂಬ ಮತ್ತು ಭೋಗ ಸಾಮಗ್ರಿಗಳು, ಇಂಥ ತಾತ್ಕಾಲಿಕ ವಸ್ತುಗಳ ಹಿಂದೆ ಹುಚ್ಚರಂತೆ ಬೆನ್ನುಹತ್ತಿದೆ. ಇಂಥ ಅನಿತ್ಯವಸ್ತುಗಳನ್ನು ಪಡೆಯಲು ಜನರು ದೇವತೆಗಳನ್ನು ಅಥವಾ ಮಾನವ ಸಮಾಜದ ಬಲಿಷ್ಠರನ್ನು ಪೂಜಿಸುತ್ತಾರೆ. ಮನುಷ್ಯನೊಬ್ಬನು, ರಾಜಕೀಯ ನಾಯಕನನ್ನು ಆರಾಧಿಸಿ ಸರ್ಕಾರದಲ್ಲಿ ಮಂತ್ರಿ ಪದವಿಯನ್ನು ಪಡೆದಾಗ, ಅವನು ಒಂದು ಮಹಾ ವರವನ್ನು ಪಡೆದಂತೆ ಭಾವಿಸುತ್ತಾನೆ. ಆದ್ದರಿಂದ, ಅವರೆಲ್ಲರು ತಾತ್ಕಾಲಿಕ ವರಗಳನ್ನು ಪಡೆಯಲು ಜನನಾಯಕರೆನಿಸಿಕೊಳ್ಳುವವರ ಅಥವಾ "ಗಣ್ಯರ" ಹಿಂಬಾಲಕರಾಗಿದ್ದಾರೆ, ಮತ್ತು ಅವರು ಅಂಥವುಗಳನ್ನು ಪಡೆಯುವುದೂ

ನಿಜ. ಇಂಥ ಮೂರ್ಖರು ಭೌತಿಕ ಅಸ್ತಿತ್ವದ ಕಷ್ಟಗಳ ಶಾಶ್ವತ ಪರಿಹಾರಕ್ಕಾಗಿ ಕೃಷ್ಣ ಪ್ರಜ್ಞೆಯಲ್ಲಿ ಆಸಕ್ತರಾಗಿರುವುದಿಲ್ಲ. ಅವರೆಲ್ಲರೂ ಇಂದ್ರಿಯ ತೋಷಣೆಯನ್ನು ಹಿಂಬಾಲಿಸುತ್ತಿದ್ದಾರೆ, ಮತ್ತು ಇಂದ್ರಿಯ ಭೋಗಕ್ಕಾಗಿ ಅಲ್ಪ ಸೌಲಭ್ಯ ಪಡೆಯಲು ಶಕ್ತ್ಯಾವೇಶ ಜೀವಿಗಳಾದ ದೇವತೆಗಳನ್ನು ಆರಾಧಿಸಲು ಆಕರ್ಷಿತರಾಗುತ್ತಾರೆ. ಜನರು ಕೃಷ್ಣಪ್ರಜ್ಞೆಯಲ್ಲಿ ಆಸಕ್ತರಾಗಿರುವುದು ಬಹಳ ವಿರಳ ಎಂದು ಈ ಶ್ಲೋಕವು ಸೂಚಿಸುತ್ತದೆ. ಅವರೆಲ್ಲರೂ ಹೆಚ್ಚಾಗಿ ಭೌತಿಕ ಭೋಗಾನುಭವದಲ್ಲಿಯೇ ಆಸಕ್ತರು. ಆದ್ದರಿಂದ ಅವರು ಯಾವುದಾದರೂ ಬಲಿಷ್ಠ ಜೀವಿಯನ್ನು ಪೂಜಿಸುತ್ತಾರೆ.

**ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ।**
**ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್ ॥ ೧೩ ॥**

ಚಾತುಃ ವರ್ಣ್ಯಮ್—ಮಾನವ ಸಮಾಜದ ನಾಲ್ಕು ವಿಭಾಗಗಳು, ಮಯಾ—ನನ್ನಿಂದ, ಸೃಷ್ಟಮ್—ಸೃಷ್ಟವಾಗಿವೆ, ಗುಣ—ಗುಣದ, ಕರ್ಮ—ಮತ್ತು ಕೆಲಸ, ವಿಭಾಗಶಃ—ಪ್ರಕಾರ ವಿಭಾಗಿತವಾಗಿದೆ, ತಸ್ಯ—ಅದರ, ಕರ್ತಾರಮ್—ತಂದೆ, ಅಪಿ—ಆಗಿದ್ದರೂ, ಮಾಮ್—ನನ್ನನ್ನು, ವಿದ್ಧಿ—ನೀನು ತಿಳಿಯಬಹುದು, ಅಕರ್ತಾರಮ್—ಕರ್ತಾರನಲ್ಲವೆಂದು, ಅವ್ಯಯಮ್—ಬದಲಾಯಿಸಲಾಗದ.

**ಭೌತಿಕ ಪ್ರಕೃತಿಯ ತ್ರಿಗುಣಗಳು ಮತ್ತು ಅವುಗಳ ಕರ್ಮಸಂಬಂಧಾನುಸಾರವಾಗಿ ಮಾನವ ಸಮಾಜದ ನಾಲ್ಕು ವಿಭಾಗಗಳು ನನ್ನಿಂದ ಸೃಷ್ಟಿಸಲ್ಪಟ್ಟಿವೆ ಮತ್ತು ನಾನೇ ಈ ವ್ಯವಸ್ಥೆಯ ಸೃಷ್ಟಿಕರ್ತನಾಗಿದ್ದರೂ, ನಾನು ಬದಲಾವಣೆರಹಿತನಾದುದರಿಂದ ನನ್ನನ್ನು ಅಕರ್ತಾರನೆಂದು ನೀನು ತಿಳಿಯಬೇಕು.**

**ಭಾವಾರ್ಥ :** ಭಗವಂತನು ಪ್ರತಿಯೊಂದರ ಸೃಷ್ಟಿಕರ್ತ, ಪ್ರತಿಯೊಂದೂ ಅವನಿಂದ ಹುಟ್ಟುತ್ತದೆ, ಪ್ರತಿಯೊಂದೂ ಅವನಿಂದ ಸಂರಕ್ಷಿತ, ಮತ್ತು ಪ್ರಳಯಾನಂತರ ಪ್ರತಿಯೊಂದೂ ಅವನಲ್ಲಿ ಉಳಿದಿರುತ್ತದೆ. ಆದ್ದರಿಂದ, ಸತ್ವಗುಣದಲ್ಲಿ ಸನ್ನಿವೇಶಿತವಾಗಿರುವುದರಿಂದ ಬ್ರಾಹ್ಮಣರೆಂದು ಕರೆಯಲ್ಪಡುವ, ಬುದ್ಧಿವಂತ ವರ್ಗದ ಜನರಿಂದ ಆರಂಭಿಸಿ ಸಮಾಜದ ನಾಲ್ಕು ವಿಭಾಗಗಳ ಸೃಷ್ಟಿಕರ್ತನು ಅವನು. ಮುಂದಿನದು ರಜೋಗುಣದಲ್ಲಿ ಸನ್ನಿವೇಶಿತನಾಗಿರುವುದರಿಂದ ಕ್ಷತ್ರಿಯರೆಂದು ಕರೆಯಲ್ಪಡುವ ಆಡಳಿತ ವರ್ಗ. ವಣಿಕ್ ವರ್ಗದ ಜನರಾದ ವೈಶ್ಯರು ಮಿಶ್ರಿತ ರಜತಮೋಗುಣದಲ್ಲಿ ಸನ್ನಿವೇಶಿತರು, ಮತ್ತು ಶೂದ್ರರು ಅಥವಾ ಕಾರ್ಮಿಕ ವರ್ಗದವರು ಭೌತಿಕಪ್ರಕೃತಿಯ ತಮೋಗುಣದಲ್ಲಿ ಸನ್ನಿವೇಶಿತರು. ಮಾನವ ಸಮಾಜದ ನಾಲ್ಕು ವಿಭಾಗಗಳು ಅವನಿಂದ ಸೃಷ್ಟವಾಗಿದ್ದರೂ, ಶ್ರೀಕೃಷ್ಣನು, ಈ ನಾಲ್ಕು ವರ್ಗಗಳಲ್ಲಿ ಯಾವುದಕ್ಕೂ ಸೇರಿಲ್ಲ, ಏಕೆಂದರೆ ಅವನು ಬದ್ಧಾತ್ಮರಲ್ಲಿ ಒಬ್ಬನಲ್ಲ. ಮಾನವ ಸಮಾಜವು ಬದ್ಧಾತ್ಮರ ಒಂದು ಭಾಗ. ಮಾನವ ಸಮಾಜವು ಯಾವುದೇ ಇತರ ಪಶು ಸಮಾಜಕ್ಕೆ ಸದೃಶ. ಆದರೆ ಮನುಷ್ಯರನ್ನು ಪಶು ಮಟ್ಟದಿಂದ ಮೇಲೆತ್ತಲು, ಕೃಷ್ಣಪ್ರಜ್ಞೆಯ ವ್ಯವಸ್ಥಿತ ವರ್ಧನೆಗಾಗಿ ಮೇಲೆ ಉಲ್ಲೇಖಿತವಾದ ವರ್ಗವಿಭಾಗಗಳು ಭಗವತ್ಸೃಷ್ಟ. ಒಬ್ಬ

ವಿಶಿಷ್ಟ ಮನುಷ್ಯನ ಕರ್ಮ ಪ್ರವೃತ್ತಿಯು ಅವನು ಆರ್ಜಿಸಿರುವ ಭೌತಿಕ ಪ್ರಕೃತಿ ಗುಣಗಳಿಂದ ನಿರ್ಧರಿಸಲ್ಪಡುತ್ತದೆ. ಭೌತಿಕ ಪ್ರಕೃತಿಯ ವಿವಿಧ ಗುಣಾನುಸಾರ ಅಂಥ ಜೀವನ ಲಕ್ಷಣಗಳು ಈ ಗ್ರಂಥದ ಹದಿನೆಂಟನೆಯ ಅಧ್ಯಾಯದಲ್ಲಿ ವಿವರಿಸಲ್ಪಟ್ಟಿವೆ. ಆದರೆ ಕೃಷ್ಣ ಪ್ರಾಜ್ಞನಯು ಬ್ರಾಹ್ಮಣರಿಗಿಂತಲೂ ಶ್ರೇಷ್ಠನು. ಗುಣಾತ್ಮಕವಾಗಿ ಬ್ರಾಹ್ಮಣರು ಬ್ರಹ್ಮನ್, ಪರಮ ಸತ್ಯದ ಬಗ್ಗೆ ತಿಳಿಯಬೇಕಾದವರಾಗಿದ್ದರೂ, ಅವರಲ್ಲಿ ಬಹು ಜನರು ಶ್ರೀಕೃಷ್ಣನ ವ್ಯಕ್ತಿ ಶೂನ್ಯ ಬ್ರಹ್ಮನ ಅಭಿವ್ಯಕ್ತತೆಯನ್ನು ಮಾತ್ರ ಸಮೀಪಿಸುತ್ತಾರೆ. ಆದರೆ ಬ್ರಾಹ್ಮಣನ ಪರಿಮಿತ ಜ್ಞಾನವನ್ನು ದಾಟಿ ಹೋದವನು, ಮತ್ತು ಪರಮ ದೇವೋತ್ತಮ ಪುರುಷ ಶ್ರೀಕೃಷ್ಣನ ಜ್ಞಾನವನ್ನು ತಲುಪಿದವನು, ಕೃಷ್ಣ ಪ್ರಾಜ್ಞನಯಾಗುತ್ತಾನೆ, ಎಂದರೆ, ವೈಷ್ಣವನಾಗುತ್ತಾನೆ. ಕೃಷ್ಣ ಪ್ರಜ್ಞೆಯು, ಕೃಷ್ಣನ ಎಲ್ಲ ವಿವಿಧ ಸಮಗ್ರ ವಿಸ್ತರಣೆಗಳಾದ ರಾಮ, ನೃಸಿಂಹ, ವರಾಹ, ಮೊದಲಾದ ರೂಪಗಳ ಜ್ಞಾನವನ್ನು ಒಳಗೊಂಡಿರುತ್ತದೆ. ಕೃಷ್ಣನು ಮಾನವ ಸಮಾಜದ ನಾಲ್ಕು ವಿಭಾಗಗಳ ಈ ವ್ಯವಸ್ಥೆಗೆ ಅತೀತನಾಗಿರುವನು, ಹಾಗೆಯೇ, ನಾವು ಸಮುದಾಯ, ರಾಷ್ಟ್ರ ಅಥವಾ ಯೋನಿಗಳ ವಿಭಾಗಗಳನ್ನು ಪರಿಗಣಿಸಿದರೂ, ಕೃಷ್ಣ ಪ್ರಾಜ್ಞನಯೂ ಸಹ ಮಾನವ ಸಮಾಜದ ಎಲ್ಲ ವಿಭಾಗಗಳಿಗೆ ಅತೀತನು.

**ನ ಮಾಂ ಕರ್ಮಾಣಿ ಲಿಮ್ಪನ್ತಿ ನ ಮೇ ಕರ್ಮಫಲೇ ಸ್ಪೃಹಾ।**
**ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬಧ್ಯತೇ ॥ ೧೪ ॥**

ನ—ಎಂದಿಗೂ ಇಲ್ಲ, ಮಾಮ್—ನನ್ನನ್ನು, ಕರ್ಮಾಣಿ—ಎಲ್ಲ ಬಗೆಯ ಕರ್ಮಗಳು, ಲಿಮ್ಪನ್ತಿ—ಅಂಟುವುದು, ನ—ಇಲ್ಲ, ಮೇ—ನನ್ನ, ಕರ್ಮ ಫಲೇ—ಕಾಮ್ಯ ಕರ್ಮದಲ್ಲಿ, ಸ್ಪೃಹಾ—ಹಾರೈಕೆ, ಇತಿ—ಹೀಗೆ, ಮಾಮ್—ನನ್ನನ್ನು, ಯಃ—ಯಾರು, ಅಭಿಜಾನಾತಿ—ತಿಳಿಯುತ್ತಾನೆ, ಕರ್ಮಭಿಃ—ಅಂಥ ಕರ್ಮ ಪ್ರತಿಕ್ರಿಯೆಯಿಂದ, ನ—ಎಂದಿಗೂ ಇಲ್ಲ, ಸಃ—ಅವನು, ಬಧ್ಯತೇ—ಸಿಲುಕಿಕೊಳ್ಳುವುದು.

**ನನ್ನನ್ನು ಅಂಟುವ ಯಾವ ಕರ್ಮವೂ ಇಲ್ಲ; ಅಥವಾ ಕರ್ಮಫಲಗಳಿಗಾಗಿ ನಾನು ಹಾರೈಸುವುದಿಲ್ಲ. ನನ್ನ ಬಗ್ಗೆ ಈ ಸತ್ಯವನ್ನು ಅರಿತುಕೊಳ್ಳುವವನೂ ಕೂಡ ಕರ್ಮದ ಕಾಮ್ಯಫಲಗಳಲ್ಲಿ ಸಿಲುಕಿಕೊಳ್ಳುವುದಿಲ್ಲ.**

**ಭಾವಾರ್ಥ :** ರಾಜನು ತಪ್ಪು ಮಾಡುವುದಿಲ್ಲ, ಅಥವಾ ಅವನು ರಾಜ್ಯನಿಯಮಾಧೀನನಲ್ಲ ಎಂದು ಹೇಳುವ ಭೌತಿಕ ಜಗತ್ತಿನಲ್ಲಿ ಸಂವಿಧಾನದ ಕಾನೂನುಗಳು ಇರುವಂತೆ, ಹಾಗೆಯೇ ಭಗವಂತನು ಈ ಭೌತಿಕ ಜಗತ್ತಿನ ಸೃಜಕನಾಗಿದ್ದರೂ, ಅದರ ಚಟುವಟಿಕೆಗಳಿಂದ ಪ್ರಭಾವಿತನಾಗುವುದಿಲ್ಲ. ಅವನು ಸೃಷ್ಟಿ ಮಾಡುತ್ತಾನೆ, ಮತ್ತು ಅದರಿಂದ ದೂರವಿರುತ್ತಾನೆ. ಆದರೆ ಜೀವಿಗಳು ಭೌತಿಕ ಸಂಪನ್ಮೂಲಗಳ ಮೇಲೆ ಒಡೆತನ ಚಲಾಯಿಸುವ ಪ್ರವೃತ್ತಿಯನ್ನು ಹೊಂದುವುದರಿಂದ, ಭೌತಿಕ ಚಟುವಟಿಕೆಗಳ ಕಾಮ್ಯ ಫಲಗಳಲ್ಲಿ ಸಿಲುಕಿಕೊಂಡಿದ್ದಾರೆ. ಕಾರ್ಮಿಕರ ಕಾರ್ಯಕಲಾಪಗಳ ಗುಣದೋಷಗಳಿಗೆ ಒಂದು ಸಂಸ್ಥೆಯ ಒಡೆಯನು ಹೊಣೆಗಾರನಲ್ಲ, ಆದರೆ ಕಾರ್ಮಿಕರೇ ಹೊಣೆಗಾರರು. ಜೀವಿಗಳು ಇಂದ್ರಿಯ ತೋಷಣದ ತಮ್ಮ ತಮ್ಮ ಚಟುವಟಿಕೆಗಳಲ್ಲಿ ತೊಡಗಿದ್ದಾರೆ. ಇವು ಭಗವಂತನಿಂದ

ವಿಧಿಸಲ್ಪಟ್ಟಿಲ್ಲ. ಇಂದ್ರಿಯ ತೋಷಣದ ಪ್ರಗತಿಗಾಗಿ ಜೀವಿಗಳು ಈ ಜಗತ್ತಿನಲ್ಲಿ ಕರ್ಮದಲ್ಲಿ ತೊಡಗಿದ್ದಾರೆ, ಮತ್ತು ಮರಣಾನಂತರ ಸ್ವರ್ಗ ಸುಖಕ್ಕಾಗಿ ಹಾರೈಸುತ್ತಾರೆ. ಭಗವಂತನು ಸ್ವಯಂ ಪೂರ್ಣನಾಗಿರುವುದರಿಂದ, ಅವನಿಗೆ ಸ್ವರ್ಗ ಸುಖಗಳೆನಿಸಿಕೊಂಡಿರುವುದಕ್ಕೆ ಆಕರ್ಷಣೆಯಿಲ್ಲ. ಸ್ವರ್ಗದಲ್ಲಿನ ದೇವತೆಗಳು ಅವನ ಪ್ರವೃತ್ತ ಸೇವಕರು ಮಾತ್ರ. ಕಾರ್ಮಿಕರು ಬಯಸುವಂಥ ಕೀಳು ದರ್ಜೆಯ ಸುಖವನ್ನು ಒಡೆಯನು ಎಂದೂ ಬಯಸುವುದಿಲ್ಲ. ಅವನು ಭೌತಿಕ ಕ್ರಿಯೆ ಪ್ರತಿಕ್ರಿಯೆಗಳಿಂದ ದೂರವಿರುವನು. ಉದಾಹರಣೆಗೆ, ಮಳೆಯಿಲ್ಲದೆ ಸಸ್ಯಗಳ ಬೆಳವಣಿಗೆ ಸಾಧ್ಯವಿಲ್ಲದಿದ್ದರೂ, ಭೂಮಿಯ ಮೇಲೆ ಕಾಣಿಸಿಕೊಳ್ಳುವ ವಿವಿಧ ಸಸ್ಯಗಳಿಗೆ ಮಳೆಯು ಹೊಣೆಯಲ್ಲ. ಈ ಸಂಗತಿಯನ್ನು ವೈದಿಕ ಸ್ಮೃತಿಯು ಹೀಗೆ ದೃಢಪಡಿಸಿದೆ :

> ನಿಮಿತ್ತಮಾತ್ರಮ್ ಏವಾಸೌ ಸೃಜ್ಯಾನಾಂ ಸರ್ಗಕರ್ಮಣಿ।
> ಪ್ರಧಾನಕಾರಣೀಭೂತಾ ಯತೋ ವೈ ಸೃಜ್ಯಶಕ್ತಯಃ॥

"ಭೌತಿಕ ಸೃಷ್ಟಿಗಳಲ್ಲಿ ಭಗವಂತನು ಪರಮ ಕಾರಣನು ಮಾತ್ರ. ವಿಶ್ವೋದ್ಭೂತಿಯನ್ನು ಪ್ರಕಟಿಸಿದ ಭೌತಿಕ ಪ್ರಕೃತಿಯು ನಿಕಟ ಕಾರಣ." ದೇವತೆಗಳು, ಮಾನವರು ಮತ್ತು ಕೀಳು ಪ್ರಾಣಿಗಳು, ಹೀಗೆ ನಾನಾಬಗೆಯ ಸೃಷ್ಟ ಜೀವರು ಇರುವರು, ಮತ್ತು ಅವರೆಲ್ಲರೂ ತಮ್ಮ ಪೂರ್ವದ ಒಳ್ಳೆಯ ಅಥವಾ ಕೆಟ್ಟ ಕರ್ಮಫಲಗಳಿಗೆ ಬದ್ಧರು.ಅವರ ಅಂಥ ಚಟುವಟಿಕೆಗಳಿಗೆ ತಕ್ಕ ಸೌಲಭ್ಯಗಳನ್ನು ಮತ್ತು ಪ್ರಕೃತಿಗುಣಗಳ ನಿಯಂತ್ರಣಗಳನ್ನು ಮಾತ್ರ ಭಗವಂತನು ಒದಗಿಸುತ್ತಾನೆ. ಆದರೆ, ಅವನು ಅವರ ಹಿಂದಿನ ಅಥವಾ ಇಂದಿನ ಚಟುವಟಿಕೆಗಳಿಗೆ ಹೊಣೆಯಲ್ಲ. ವೇದಾಂತ ಸೂತ್ರದಲ್ಲಿ (2-1-34) ಹೀಗೆ ದೃಢೀಕರಿಸಿದೆ: **ವೈಷಮ್ಯ-ನೈರ್ಘೃಣ್ಯೇ ನ ಸಾಪೇಕ್ಷತ್ವಾತ್**, ಭಗವಂತನು ಯಾವ ಜೀವಿಗೂ ಪಕ್ಷಪಾತಿಯಲ್ಲ. ಜೀವಿಯು ತನ್ನ ಸ್ವಂತ ಕರ್ಮಗಳಿಗೆ ತಾನೇ ಹೊಣೆ. ಭಗವಂತನು ಭೌತಿಕ ಪ್ರಕೃತಿ, ಎಂದರೆ ಬಹಿರಂಗ ಶಕ್ತಿಯ ಮೂಲಕ ಅವನಿಗೆ ಸೌಲಭ್ಯಗಳನ್ನು ಮಾತ್ರ ಒದಗಿಸುತ್ತಾನೆ. ಈ ಕರ್ಮ ನಿಯಮದ ಅಥವಾ ಕಾಮ್ಯ ಕರ್ಮಗಳ ಕ್ಲಿಷ್ಟತೆಯನ್ನು ಪೂರ್ಣ ತಿಳಿದವನು ತನ್ನ ಕರ್ಮಫಲಗಳಿಂದ ಪ್ರಭಾವಿತನಾಗುವುದಿಲ್ಲ. ಹಾಗೆಂದರೆ, ಭಗವಂತನ ಈ ದಿವ್ಯ ಸ್ವಭಾವವನ್ನು ಅರಿತುಕೊಳ್ಳುವವನು ಕೃಷ್ಣ ಪ್ರಜ್ಞೆಯಲ್ಲಿ ಪರಿಣತನು. ಮತ್ತು ಹೀಗೆ ಅವನು ಎಂದಿಗೂ ಕರ್ಮ ನಿಯಮಗಳಿಗೆ ಒಳಗಾಗುವುದಿಲ್ಲ. ಭಗವಂತನ ದಿವ್ಯ ಸ್ವಭಾವವನ್ನು ತಿಳಿಯದೆ, ಸಾಮಾನ್ಯ ಜೀವಿಗಳ ಕಾರ್ಯಕಲಾಪಗಳಂತೆಯೇ, ಭಗವಂತನ ಕಾರ್ಯಕಲಾಪಗಳೆಲ್ಲವೂ ಫಲಪ್ರದ ಫಲಿತಾಂಶಗಳಿಗೆ ಉದ್ದೇಶಿತವೆಂದು ಭಾವಿಸುವವನು, ನಿಶ್ಚಿತವಾಗಿಯೂ ತನ್ನ ಫಲಪ್ರದ ಪ್ರತಿಕ್ರಿಯೆಗಳಲ್ಲಿ ಸಿಲುಕಿಕೊಳ್ಳುತ್ತಾನೆ. ಆದರೆ ಪರಮ ಸತ್ಯವನ್ನು ತಿಳಿದವನು ಕೃಷ್ಣಪ್ರಜ್ಞೆಯಲ್ಲಿ ಸ್ಥಿರನಾಗಿರುವ ಮುಕ್ತಾತ್ಮನು.

> **ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ ।**
> **ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಮ್ ॥ ೧೫ ॥**

ಏವಮ್—ಹೀಗೆ, ಜ್ಞಾತ್ವಾ—ಚೆನ್ನಾಗಿ ತಿಳಿದು, ಕೃತಮ್—ಆಚರಿಸಲ್ಪಟ್ಟಿತ್ತು, ಕರ್ಮ—ಕರ್ಮವು, ಪೂರ್ವೈಃ—ಪೂರ್ವಾಧಿಕಾರಿಗಳಿಂದ, ಅಪಿ—ನಿಜವಾಗಿ, ಮುಮುಕ್ಷುಭಿಃ

—ಮೋಕ್ಷಪಡೆದವರು, ಕುರು—ಆಚರಿಸು, ಕರ್ಮ—ವಿಧಿತ ಕರ್ತವ್ಯ, ಏವ—ಖಂಡಿತ ವಾಗಿ, ತಸ್ಮಾತ್—ಆದ್ದರಿಂದ, ತ್ವಮ್—ನೀನು, ಪೂರ್ವೈಃ—ಪೂರ್ವಜರಿಂದ, ಪೂರ್ವ ತರಮ್—ಪುರಾತನ ಕಾಲದಲ್ಲಿ, ಕೃತಮ್—ಆಚರಿಸಲ್ಪಟ್ಟಂತೆ.

**ಪ್ರಾಚೀನ ಕಾಲದ ಎಲ್ಲ ಮುಕ್ತಾತ್ಮರು ನನ್ನ ದಿವ್ಯ ಸ್ವಭಾವದ ಈ ಅರಿವಿನಿಂದ ಕಾರ್ಯಮಾಡಿದರು. ಆದ್ದರಿಂದ ಅವರ ಮಾರ್ಗವನ್ನು ಅನುಸರಿಸಿ ನಿನ್ನ ಕರ್ತವ್ಯವನ್ನು ನೀನು ಆಚರಿಸಬೇಕು.**

**ಭಾವಾರ್ಥ :** ಮನುಷ್ಯರು ಎರಡು ವಿಧ. ಕೆಲವರ ಹೃದಯದಲ್ಲಿ ಕಲುಷಿತ ಭೌತಿಕ ವಿಚಾರಗಳು ತುಂಬಿವೆ. ಮತ್ತೆ ಕೆಲವರು ಭೌತಿಕವಾಗಿ ಮುಕ್ತರು. ಕೃಷ್ಣ ಪ್ರಜ್ಞೆಯು ಉಭಯರಿಗೂ ಸಮನಾಗಿ ಪ್ರಯೋಜನಕರ. ಕೆಟ್ಟ ವಿಚಾರಗಳನ್ನು ತುಂಬಿಕೊಂಡಿರುವವರು ಭಕ್ತಿಯುತ ಸೇವೆಯ ನಿಯಂತ್ರಣ ತತ್ವಗಳನ್ನನುಸರಿಸಿ, ಕ್ರಮೇಣ ಶುದ್ಧಿ ಪ್ರಕ್ರಿಯೆಗಾಗಿ ಕೃಷ್ಣಪ್ರಜ್ಞೆಯ ಮಾರ್ಗವನ್ನು ಸ್ವೀಕರಿಸಬಹುದು. ಈಗಾಗಲೇ ಮಾಲಿನ್ಯ ಶುದ್ಧಿಮಾಡಿಕೊಂಡವರು, ಇತರರು ಅವರ ಆದರ್ಶ ಚಟುವಟಿಕೆಗಳನ್ನು ಅನುಸರಿಸಿ ಪ್ರಯೋಜನ ಪಡೆಯಲು ಅದೇ ಕೃಷ್ಣಪ್ರಜ್ಞೆಯಲ್ಲಿ ವರ್ತಿಸಲು ಮುಂದುವರಿಸಬಹುದು. ಮೂಢರು ಅಥವಾ ಕೃಷ್ಣಪ್ರಜ್ಞೆಯಲ್ಲಿ ಆರಂಭಿಗಳು ಕೃಷ್ಣಪ್ರಜ್ಞೆಯ ಜ್ಞಾನರಹಿತರಾಗಿ ಚಟುವಟಿಕೆಗಳಿಂದ ನಿವೃತ್ತರಾಗ ಬಯಸುತ್ತಾರೆ. ಯುದ್ಧಭೂಮಿಯಿಂದ ನಿವೃತ್ತನಾಗುವ ಅರ್ಜುನನ ಆಸೆಯು ಭಗವಂತನಿಂದ ಅನುಮೋದಿಸಲ್ಪಡಲಿಲ್ಲ. ಒಬ್ಬನು ಹೇಗೆ ಕಾರ್ಯಮಾಡಬೇಕು ಎಂಬುದನ್ನು ಮಾತ್ರ ತಿಳಿದುಕೊಳ್ಳಬೇಕು. ಕೃಷ್ಣಪ್ರಜ್ಞೆಯ ಚಟುವಟಿಕೆಗಳಿಂದ ನಿವೃತ್ತರಾಗಿ, ಏಕಾಂತದಲ್ಲಿ ದೂರ ಕುಳಿತು ಕೃಷ್ಣಪ್ರಜ್ಞೆಯ ನಟನೆಮಾಡುವುದು, ವಾಸ್ತವಿಕವಾಗಿ ಕೃಷ್ಣನಿಗಾಗಿ ಕರ್ಮದಲ್ಲಿ ನಿರತರಾಗುವುದಕ್ಕಿಂತ ಹೆಚ್ಚು ಮುಖ್ಯವಾದುದಲ್ಲ. ಈ ಮುಂಚೆ ಹೇಳಿದಂತೆ, ಸೂರ್ಯದೇವ ವಿವಸ್ವಾನ್‌ರಂಥ ಭಗವಂತನ ಪೂರ್ವ ಶಿಷ್ಯರನ್ನು ಅನುಸರಿಸಿ ಕೃಷ್ಣಪ್ರಜ್ಞೆಯಲ್ಲಿ ಕರ್ಮಮಾಡುವಂತೆ ಇಲ್ಲಿ ಅರ್ಜುನನಿಗೆ ಬೋಧಿಸಲಾಗಿದೆ. ಪರಮ ಪ್ರಭು ತನ್ನ ಹಿಂದಿನ ಎಲ್ಲ ಕಾರ್ಯಕಲಾಪಗಳನ್ನು, ಹಾಗೂ ಹಿಂದೆ ಕೃಷ್ಣಪ್ರಜ್ಞೆಯಲ್ಲಿ ವರ್ತಿಸಿದವರ ಕಾರ್ಯಕಲಾಪಗಳನ್ನು ತಿಳಿದಿರುತ್ತಾನೆ. ಆದ್ದರಿಂದ ಭಗವಂತನು, ಲಕ್ಷಾವಧಿ ವರ್ಷಗಳ ಹಿಂದೆ ತನ್ನಿಂದ ಈ ಕಲೆಯನ್ನು ಕಲಿತುಕೊಂಡ ಸೂರ್ಯದೇವನ ಹಾಗೆ ಕರ್ಮಮಾಡುವಂತೆ ಬೋಧಿಸಿದ್ದಾನೆ. ಕೃಷ್ಣನಿಂದ ವಿಧಿಸಲ್ಪಟ್ಟ ಕರ್ತವ್ಯಗಳ ನಿರ್ವಹಣೆಯಲ್ಲಿ ತೊಡಗಿರುವ ಕೃಷ್ಣನ ಅಂಥ ಶಿಷ್ಯರೆಲ್ಲರೂ ಪ್ರಾಚೀನ ಮುಕ್ತಾತ್ಮರೆಂದು ಇಲ್ಲಿ ಹೇಳಿದೆ.

**ಕಿಂ ಕರ್ಮ ಕಿಮಕರ್ಮೇತಿ ಕವಯೋऽಪ್ಯತ್ರ ಮೋಹಿತಾಃ ।**
**ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್‌ಜ್ಞಾತ್ವಾ ಮೋಕ್ಷ್ಯಸೇऽಶುಭಾತ್ ॥೧೬॥**

ಕಿಮ್—ಏನು, ಕರ್ಮ—ಕರ್ಮವು, ಕಿಮ್—ಏನು, ಅಕರ್ಮ—ಅಕರ್ಮವು, ಇತಿ—ಹೀಗೆ, ಕವಯಃ—ಬುದ್ಧಿವಂತರು, ಅಪಿ—ಕೂಡ, ಅತ್ರ—ಈ ವಿಷಯದಲ್ಲಿ, ಮೋಹಿತಾಃ—ದಿಗ್ಭ್ರಮೆಗೊಂಡಿದ್ದಾರೆ, ತತ್—ಆ, ತೇ—ನಿನಗೆ, ಕರ್ಮ—ಕರ್ಮವನ್ನು,

ಪ್ರವಕ್ಷ್ಯಾಮಿ—ನಾನು ವಿವರಿಸುತ್ತೇನೆ, ಯತ್—ಯಾವುದನ್ನು, ಜ್ಞಾತ್ವಾ—ತಿಳಿದು, ಮೋಕ್ಷ್ಯಸೇ—ನೀನು ಮುಕ್ತನಾಗುವೆ, ಅಶುಭಾತ್—ಅಶುಭಗಳಿಂದ.

**ಕರ್ಮ ಮತ್ತು ಅಕರ್ಮ ಎಂದರೇನು ಎಂಬುದನ್ನು ನಿರ್ಧರಿಸುವ ವಿಷಯದಲ್ಲಿ ಬುದ್ಧಿವಂತರು ಕೂಡ ದಿಗ್ಭ್ರಮೆಗೊಳ್ಳುತ್ತಾರೆ. ಈಗ ನಾನು ಕರ್ಮ ಎಂದರೇನು ಎಂಬುದನ್ನು ನಿನಗೆ ವಿವರಿಸುತ್ತೇನೆ. ಇದನ್ನು ತಿಳಿದು ನೀನು ಎಲ್ಲ ಅಶುಭಗಳಿಂದ ಮುಕ್ತನಾಗುವೆ.**

**ಭಾವಾರ್ಥ :** ಕೃಷ್ಣಪ್ರಜ್ಞೆಯಲ್ಲಿ ಕಾರ್ಯವನ್ನು ಪೂರ್ವದ ಅಧಿಕೃತ ಭಕ್ತರ ಉದಾಹರಣೆಗಳ ಅನುಸರಣೆಯಲ್ಲಿ ನಿರ್ವಹಿಸಬೇಕು. ಇದನ್ನು 15ನೆಯ ಶ್ಲೋಕದಲ್ಲಿ ಹೇಳಿದೆ. ಇಂಥ ಕಾರ್ಯವು ಏಕೆ ಸ್ವತಂತ್ರವಾಗಿರಕೂಡದು ಎಂಬುದನ್ನು ಮುಂದಿನ ಶ್ಲೋಕದಲ್ಲಿ ವಿವರಿಸಲಾಗುವುದು.

ಕೃಷ್ಣ ಪ್ರಜ್ಞೆಯಲ್ಲಿ ಕಾರ್ಯಮಾಡಲು, ಒಬ್ಬನು ಈ ಅಧ್ಯಾಯದ ಪ್ರಾರಂಭದಲ್ಲಿ ವಿವರಿಸಿದಂತೆ ಪರಂಪರಾಗತ ಅಧಿಕೃತ ವ್ಯಕ್ತಿಗಳ ನಾಯಕತ್ವವನ್ನು ಅನುಸರಿಸಬೇಕು. ಕೃಷ್ಣ ಪ್ರಜ್ಞಾ ಪದ್ಧತಿಯನ್ನು ಮೊದಲು ಸೂರ್ಯದೇವನಿಗೆ ವಿವರಿಸಲಾಯಿತು, ಸೂರ್ಯದೇವನು ಅದನ್ನು ತನ್ನ ಮಗನಾದ ಮನುವಿಗೆ ವಿವರಿಸಿದನು, ಮನು ಅದನ್ನು ತನ್ನ ಮಗ ಇಕ್ಷ್ವಾಕುವಿಗೆ ವಿವರಿಸಿದನು, ಮತ್ತು ಬಹು ಪ್ರಾಚೀನ ಕಾಲದಿಂದಲೂ ಈ ಪದ್ಧತಿಯು ಈ ಭೂಮಿಯ ಮೇಲೆ ಪ್ರಚಲಿತವಾಗಿದೆ. ಆದ್ದರಿಂದ ಒಬ್ಬನು ಪರಂಪರಾಗತ ಪೂರ್ವ ಅಧಿಕಾರಿಗಳನ್ನು ಅನುಸರಿಸಬೇಕು. ಇಲ್ಲದಿದ್ದರೆ, ಕೃಷ್ಣಪ್ರಜ್ಞೆಯ ಪ್ರಮಾಣಕಾರ್ಯಗಳ ಬಗ್ಗೆ ಮಹಾ ಬುದ್ಧಿವಂತರೂ ಕೂಡ ದಿಗ್ಭ್ರಮೆಗೊಳ್ಳುತ್ತಾರೆ. ಈ ಕಾರಣಕ್ಕಾಗಿ, ಭಗವಂತನು ಅರ್ಜುನನಿಗೆ ನೇರವಾಗಿ ಕೃಷ್ಣಪ್ರಜ್ಞೆಯನ್ನು ಉಪದೇಶಿಸಲು ತೀರ್ಮಾನಿಸಿದನು. ಭಗವಂತನು ಅರ್ಜುನನಿಗೆ ನೇರವಾಗಿ ಉಪದೇಶ ಮಾಡಿರುವುದರಿಂದ, ಅರ್ಜುನನನ್ನು ಅನುಸರಿಸುವವನು ಖಂಡಿತ ದಿಗ್ಭ್ರಮೆಗೊಳ್ಳುವುದಿಲ್ಲ.

ದೋಷಯುಕ್ತ ಪ್ರಾಯೋಗಿಕ ಜ್ಞಾನದಿಂದ ಒಬ್ಬನು ಧರ್ಮದ ಮಾರ್ಗವನ್ನು ನಿಶ್ಚಿತವಾಗಿ ತಿಳಿದುಕೊಳ್ಳಲಾಗುವುದಿಲ್ಲ ಎಂದು ಹೇಳಿದೆ. ವಾಸ್ತವಿಕವಾಗಿ, ಧರ್ಮ ತತ್ವಗಳು ಸ್ವಯಂ ಭಗವಂತನಿಂದ ಮಾತ್ರ ವಿಧಿಸಲ್ಪಡಬಹುದು. **ಧರ್ಮಂ ತು ಸಾಕ್ಷಾದ್ಭಗವತ್ಪ್ರಣೀತಮ್** (ಭಾಗವತ 6. 3. 19). ದೋಷಯುಕ್ತ ಊಹಾಪೋಹಗಳಿಂದ ಧರ್ಮ ತತ್ವವೊಂದನ್ನು ಯಾರೂ ತಯಾರಿಸಲಾರರು. ಒಬ್ಬನು ಬ್ರಹ್ಮ, ಶಿವ, ನಾರದ, ಮನು, ಕುಮಾರರು, ಕಪಿಲ, ಪ್ರಹ್ಲಾದ, ಭೀಷ್ಮ, ಶುಕಾಚಾರ್ಯ, ಯಮರಾಜ, ಜನಕ ಮತ್ತು ಬಲಿ ಮಹಾರಾಜ– ಮಹಾಧಿಕಾರಿಗಳನ್ನು ಅನುಸರಿಸಬೇಕು. ಮಾನಸಿಕ ಊಹಾಪೋಹದಿಂದ ಧರ್ಮ ಅಥವಾ ಆತ್ಮಸಾಕ್ಷಾತ್ಕಾರ ಎಂದರೇನು ಎಂಬುದನ್ನು ಒಬ್ಬನು ನಿರ್ಧರಿಸಲಾರನು. ಆದ್ದರಿಂದ ಭಕ್ತರ ಮೇಲಿನ ಅವನ ಅವ್ಯಾಜ ಕರುಣೆಯಿಂದ ಭಗವಂತನು ಅರ್ಜುನನಿಗೆ ಕರ್ಮ ಮತ್ತು ಅಕರ್ಮ ಎಂದರೇನು ಎಂಬುದನ್ನು ನೇರವಾಗಿ ವಿವರಿಸುತ್ತಾನೆ. ಕೃಷ್ಣ ಪ್ರಜ್ಞೆಯಲ್ಲಿ ಮಾಡಿದ ಕರ್ಮವು ಮಾತ್ರ ಒಬ್ಬನನ್ನು ಭೌತಿಕ ಅಸ್ತಿತ್ವದ ತೊಡಕಿನಿಂದ ಮುಕ್ತಗೊಳಿಸುವುದು.

**ಕರ್ಮಣೋ ಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ ।**
**ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ॥ ೧೭ ॥**

ಕರ್ಮಣಃ—ಕರ್ಮಗಳ, ಹಿ—ಖಂಡಿತವಾಗಿ, ಅಪಿ—ಕೂಡ, ಬೋದ್ಧವ್ಯಮ್—ತಿಳಿದುಕೊಳ್ಳಬೇಕು, ಬೋದ್ಧವ್ಯಮ್—ತಿಳಿದುಕೊಳ್ಳಬೇಕು, ಚ—ಕೂಡ, ವಿಕರ್ಮಣಃ—ನಿಷಿದ್ಧ ಕರ್ಮಗಳ, ಅಕರ್ಮಣಃ—ಅಕರ್ಮಗಳ, ಚ—ಕೂಡ, ಬೋದ್ಧವ್ಯಮ್—ತಿಳಿದುಕೊಳ್ಳಬೇಕು, ಗಹನಾ—ಬಹಳ ಕಷ್ಟ, ಕರ್ಮಣಃ—ಕರ್ಮಗಳ, ಗತಿಃ—ಪ್ರವೇಶ.

**ಕರ್ಮದ ಕ್ಲಿಷ್ಟತೆಯನ್ನು ಅರಿತುಕೊಳ್ಳುವುದು ಬಹಳ ಕಷ್ಟ. ಆದ್ದರಿಂದ ಯಾವುದು ಕರ್ಮ, ಯಾವುದು ನಿಷಿದ್ಧ ಕರ್ಮ ಮತ್ತು ಯಾವುದು ಅಕರ್ಮ ಎಂಬುದನ್ನು ಒಬ್ಬನು ಸರಿಯಾಗಿ ತಿಳಿದುಕೊಳ್ಳಬೇಕು**

**ಭಾವಾರ್ಥ :** ಒಬ್ಬನು ಭೌತಿಕ ಬಂಧನ ವಿಮೋಚನೆಯ ಬಗ್ಗೆ ವಿಚಾರಪರನಾಗಿದ್ದರೆ, ಅವನು ಕರ್ಮ, ಅಕರ್ಮ ಮತ್ತು ವಿಕರ್ಮಗಳ ಭೇದಗಳನ್ನು ಅರಿತುಕೊಳ್ಳಬೇಕು. ಒಬ್ಬನು ಕ್ರಿಯೆ,ಪ್ರತಿಕ್ರಿಯೆ ಮತ್ತು ವಕ್ರ ಕ್ರಿಯೆಗಳ ವಿಶ್ಲೇಷಣೆಗೆ ತನ್ನ ಗಮನ ನೀಡಬೇಕು,ಏಕೆಂದರೆ ಇದು ಬಹು ಗಹನವಾದ ವಿಷಯ. ಕೃಷ್ಣಪ್ರಜ್ಞೆಯನ್ನು ಮತ್ತು ಅದರ ಕ್ರಮಾನುಸಾರ ಕರ್ಮಗಳನ್ನು ಅರಿತುಕೊಳ್ಳಲು ಒಬ್ಬನು ಪರಮನೊಂದಿಗೆ ತನ್ನ ಸಂಬಂಧವನ್ನು ತಿಳಿದುಕೊಳ್ಳಬೇಕು. ಎಂದರೆ ಪ್ರತಿಯೊಬ್ಬ ಜೀವಿಯು ಭಗವಂತನ ನಿತ್ಯದಾಸ ಮತ್ತು ಪರಿಣಾಮವಾಗಿ ಕೃಷ್ಣ ಪ್ರಜ್ಞೆಯಲ್ಲಿ ಒಬ್ಬನು ಕರ್ಮಮಾಡಬೇಕು ಎಂದು ಪೂರ್ಣವಾಗಿ ತಿಳಿದಿರುತ್ತಾನೆ. ಇಡೀ ಭಗವದ್ಗೀತೆಯು ಈ ಸಿದ್ಧಾಂತದ ಕಡೆಗೆ ನಿರ್ದೇಶಿತ. ಈ ಪ್ರಜ್ಞೆಗೆ ಮತ್ತು ಅದಕ್ಕೇ ಸಂಬಂಧಿಸಿದ ಕರ್ಮಗಳ ವಿರುದ್ಧವಾದ ಯಾವುದೇ ಇತರ ಸಿದ್ಧಾಂತಗಳು, ವಿಕರ್ಮ ಅಥವಾ ನಿಷಿದ್ಧ ಕರ್ಮಗಳು. ಇದನ್ನೆಲ್ಲ ಅರಿತುಕೊಳ್ಳಲು ಒಬ್ಬನು ಕೃಷ್ಣಪ್ರಜ್ಞೆಯಲ್ಲಿ ಅಧಿಕಾರಿಗಳೊಂದಿಗೆ ಸಂಗಮಾಡಬೇಕು ಮತ್ತು ಅವರಿಂದ ರಹಸ್ಯವನ್ನು ತಿಳಿದುಕೊಳ್ಳಬೇಕು; ಇದು ನೇರವಾಗಿ ಭಗವಂತನಿಂದ ಕಲಿತುಕೊಂಡಂತೆಯೇ. ಹಾಗಿಲ್ಲವಾದರೆ. ಮಹಾ ಬುದ್ಧಿವಂತರೂ ಕೂಡ ದಿಗ್ಭ್ರಮೆಗೊಳ್ಳುತ್ತಾರೆ.

**ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ ।**
**ಸ ಬುದ್ಧಿಮಾನ್ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ॥ ೧೮ ॥**

ಕರ್ಮಣಿ—ಕರ್ಮದಲ್ಲಿ, ಅಕರ್ಮ—ಅಕರ್ಮವನ್ನು, ಯಃ—ಯಾರು, ಪಶ್ಯೇತ್—ಕಾಣುತ್ತಾನೋ,ಅಕರ್ಮಣಿ—ಅಕರ್ಮದಲ್ಲಿ, ಚ—ಕೂಡ, ಕರ್ಮ—ಕಾಮ್ಯ ಕರ್ಮವನ್ನು, ಯಃ—ಯಾರು, ಸಃ—ಅವನು, ಬುದ್ಧಿಮಾನ್—ಬುದ್ಧಿವಂತನು, ಮನುಷ್ಯೇಷು—ಮಾನವ ಸಮಾಜದಲ್ಲಿ, ಸಃ—ಅವನು, ಯುಕ್ತಃ—ದಿವ್ಯಸ್ಥಾನದಲ್ಲಿರುತ್ತಾನೆ, ಕೃತ್ಸ್ನ ಕರ್ಮಕೃತ್—ಎಲ್ಲ ಚಟುವಟಿಕೆಗಳಲ್ಲಿ ತೊಡಗಿದ್ದರೂ.

**ಕರ್ಮದಲ್ಲಿ ಅಕರ್ಮವನ್ನು, ಮತ್ತು ಅಕರ್ಮದಲ್ಲಿ ಕರ್ಮವನ್ನು ಕಾಣುವವನು ಮನುಷ್ಯರಲ್ಲಿ ಬುದ್ಧಿವಂತನು. ಅವನು ಎಲ್ಲ ಬಗೆಯ ಚಟುವಟಿಕೆಗಳಲ್ಲಿ ತೊಡಗಿದ್ದರೂ ದಿವ್ಯಸ್ಥಿತನು.**

**ಭಾವಾರ್ಥ :** ಕೃಷ್ಣಪ್ರಜ್ಞೆಯಲ್ಲಿ ಕಾರ್ಯಮಾಡುವವನು ಸ್ವಾಭಾವಿಕವಾಗಿ ಕರ್ಮಬಂಧಗಳಿಂದ ಮುಕ್ತನು. ಅವನ ಚಟುವಟಿಕೆಗಳೆಲ್ಲ ಕೃಷ್ಣನಿಗಾಗಿ ಆಚರಿಸಲ್ಪಡುತ್ತವೆ; ಆದ್ದರಿಂದ ಅವನು ಕರ್ಮದ ಯಾವುದೇ ಫಲಗಳನ್ನು ಭೋಗಿಸುವುದಿಲ್ಲ ಅಥವಾ ಅನುಭವಿಸುವುದಿಲ್ಲ. ಪರಿಣಾಮವಾಗಿ, ಅವನು ಕೃಷ್ಣನಿಗಾಗಿ ಎಲ್ಲ ಬಗೆಯ ಚಟುವಟಿಕೆಗಳಲ್ಲಿ ತೊಡಗಿದ್ದರೂ, ಮಾನವ ಸಮಾಜದಲ್ಲಿ ಅವನು ಬುದ್ಧಿವಂತನು. **ಅಕರ್ಮ** ಎಂದರೆ ಪ್ರತಿಕ್ರಿಯೆಯಿಲ್ಲದ ಕರ್ಮ. ಕರ್ಮ ಫಲವು ಆತ್ಮಸಾಕ್ಷಾತ್ಕಾರದ ದಾರಿಯಲ್ಲಿ ತೊಡಕಾಗಬಾರದು ಎಂದು ವ್ಯಕ್ತಿಶೂನ್ಯವಾದಿಯು ಭಯಗ್ರಸ್ತನಾಗಿ ಕಾಮ್ಯಕರ್ಮಾಚರಣೆಗಳನ್ನು ನಿಲ್ಲಿಸಿಬಿಡುತ್ತಾನೆ, ಆದರೆ ಸಾಕಾರವಾದಿಯು ತನ್ನ ಸ್ಥಾನವು ಪರಮ ದೇವೋತ್ತಮ ಪುರುಷನ ನಿತ್ಯದಾಸನೆಂಬುದನ್ನು ಸರಿಯಾಗಿ ತಿಳಿದುಕೊಂಡಿರುತ್ತಾನೆ. ಆದ್ದರಿಂದ ಅವನು ಕೃಷ್ಣ ಪ್ರಜ್ಞೆಯ ಚಟುವಟಿಕೆಗಳಲ್ಲಿ ತನ್ನನ್ನು ತೊಡಗಿಸಿಕೊಂಡಿರುತ್ತಾನೆ. ಪ್ರತಿಯೊಂದೂ ಕೃಷ್ಣನಿಗಾಗಿ ಮಾಡಲ್ಪಡುವುದರಿಂದ, ಅವನು ಈ ಸೇವೆಯ ನಿರ್ವಹಣೆಯಲ್ಲಿ ದಿವ್ಯಾನಂದವನ್ನೇ ಅನುಭವಿಸುತ್ತಾನೆ. ಈ ಪ್ರಕ್ರಿಯೆಯಲ್ಲಿ ತೊಡಗಿದವರು ಸ್ವೇಂದ್ರಿಯ ತೋಷಣೆಯ ಇಚ್ಛೆಯನ್ನು ಹೊಂದಿರುವುದಿಲ್ಲ ಎಂದು ತಿಳಿಯಲ್ಪಟ್ಟಿದ್ದಾರೆ. ಕೃಷ್ಣನ ನಿತ್ಯದಾಸನೆಂಬ ಭಾವವು ಒಬ್ಬನನ್ನು ಕರ್ಮದ ಎಲ್ಲಬಗೆಯ ಫಲಗಳಿಂದ ರಕ್ಷಿಸುತ್ತದೆ.

**ಯಸ್ಯ ಸರ್ವೇ ಸಮಾರಮ್ಭಾಃ ಕಾಮಸಂಕಲ್ಪವರ್ಜಿತಾಃ ।**
**ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಣ್ಡಿತಂ ಬುಧಾಃ ॥ ೧೯ ॥**

ಯಸ್ಯ—ಯಾರ, ಸರ್ವೇ—ಎಲ್ಲ ಬಗೆಯ, ಸಮಾರಮ್ಭಾಃ—ಪ್ರಯತ್ನಗಳು, ಕಾಮ—ಇಂದ್ರಿಯ ತೋಷಣೆಯ ಇಚ್ಛೆಯನ್ನು ಆಧರಿಸಿದ, ಸಂಕಲ್ಪ—ನಿರ್ಧಾರ, ವರ್ಜಿತಾಃ—ರಹಿತವಾಗಿ, ಜ್ಞಾನ—ಪರಿಪೂರ್ಣ ಜ್ಞಾನದ, ಅಗ್ನಿ—ಅಗ್ನಿಯಿಂದ, ದಗ್ಧ—ಸುಟ್ಟುಹೋಗುತ್ತವೆ, ಕರ್ಮಾಣಮ್—ಯಾರ ಕರ್ಮವು, ತಮ್—ಅವನನ್ನು, ಆಹುಃ—ಘೋಷಿಸುತ್ತಾರೆ, ಪಣ್ಡಿತಮ್—ಪಂಡಿತನು, ಬುಧಾಃ—ತಿಳಿದಿರುವವರು.

**ಪ್ರತಿಯೊಂದು ಪ್ರಯತ್ನದಲ್ಲಿ ಇಂದ್ರಿಯ ತೋಷಣೆಯ ಇಚ್ಛಾರಹಿತನಾದವನು, ಪೂರ್ಣ ಜ್ಞಾನದಲ್ಲಿರುವವನು ಎಂದು ತಿಳಿಯಲ್ಪಟ್ಟಿದೆ. ಅವನು, ಕರ್ಮ ಫಲಗಳನ್ನು ಪೂರ್ಣಜ್ಞಾನಾಗ್ನಿಯಿಂದ ಸುಟ್ಟಿರುವ ಕೆಲಸಗಾರನು ಎಂದು ಸಾಧುಗಳಿಂದ ಹೇಳಲ್ಪಟ್ಟಿದ್ದಾನೆ.**

**ಭಾವಾರ್ಥ:** ಪೂರ್ಣಜ್ಞಾನದಲ್ಲಿನ ವ್ಯಕ್ತಿಯು ಮಾತ್ರ ಕೃಷ್ಣಪ್ರಜ್ಞೆಯ ಚಟುವಟಿಕೆಗಳನ್ನು ಅರಿಯಬಲ್ಲನು. ಕೃಷ್ಣಪ್ರಾಜ್ಞೆಯು ಎಲ್ಲ ಬಗೆಯ ಇಂದ್ರಿಯ ತೋಷಣೆಯ ಪ್ರವೃತ್ತಿರಹಿತನಾದ್ದರಿಂದ ಅವನು, ತಾನು ಪರಮ ದೇವೋತ್ತಮ ಪುರುಷನ ನಿತ್ಯ ದಾಸನೆಂಬ ಸ್ವರೂಪ ಸ್ಥಿತಿಯ ಪರಿಪೂರ್ಣಜ್ಞಾನದಿಂದ, ತನ್ನ ಕರ್ಮಫಲಗಳನ್ನು ಭಸ್ಮೀಕರಿಸಿಕೊಂಡಿದ್ದಾನೆಂದು ತಿಳಿಯಬೇಕು. ಜ್ಞಾನದ ಇಂಥ ಪರಿಪೂರ್ಣತೆಯನ್ನು ಸಾಧಿಸಿದವನೇ ನಿಜವಾಗಿ ಪಂಡಿತ. ಭಗವಂತನ ನಿತ್ಯದಾಸನೆಂಬ ಈ ಜ್ಞಾನದ ವರ್ಧನೆಯನ್ನು ಅಗ್ನಿಗೆ ಹೋಲಿಸಿದೆ. ಇಂಥ ಅಗ್ನಿಯು ಒಮ್ಮೆ ಪ್ರಜ್ವಲಿಸಿದರೆ, ಎಲ್ಲ ಬಗೆಯ ಕರ್ಮ ಫಲಗಳನ್ನು ಸುಟ್ಟುಹಾಕಬಹುದು.

**ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ ।**
**ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಞ್ಚಿತ್ ಕರೋತಿ ಸಃ ॥ ೨೦ ॥**

ತ್ಯಕ್ತ್ವಾ—ತ್ಯಜಿಸಿ, ಕರ್ಮಫಲ ಆಸಂಗಮ್—ಕಾಮ್ಯಕಾರ್ಯ ಫಲಗಳಲ್ಲಿ ಆಸಕ್ತಿ, ನಿತ್ಯ—ಸದಾ, ತೃಪ್ತಃ—ತೃಪ್ತನಾಗಿ, ನಿರಾಶ್ರಯಃ—ಯಾವುದೇ ಆಶ್ರಯವಿಲ್ಲದೆ, ಕರ್ಮಣಿ—ಚಟುವಟಿಕೆಯಲ್ಲಿ, ಅಭಿಪ್ರವೃತ್ತಃ—ಪೂರ್ಣ ನಿರತನಾಗಿ, ಅಪಿ—ಆದರೂ, ನ—ಇಲ್ಲ, ಏವ—ಖಂಡಿತವಾಗಿ, ಕಿಞ್ಚಿತ್—ಏನಾದರೂ, ಕರೋತಿ—ಮಾಡುವುದು, ಸಃ—ಅವನು.

**ತನ್ನ ಕಾರ್ಯ ಫಲಗಳ ಸಕಲ ಆಸಕ್ತಿಯನ್ನು ತ್ಯಜಿಸಿ, ಸದಾ ತೃಪ್ತನೂ ಸ್ವತಂತ್ರನೂ ಆಗಿ, ಎಲ್ಲ ವಿದಧ ಕಾರ್ಯಗಳಲ್ಲಿ ತೊಡಗಿದ್ದರೂ, ಯಾವ ಕಾಮ್ಯ ಕರ್ಮವನ್ನೂ ಆಚರಿಸುವುದಿಲ್ಲ.**

**ಭಾವಾರ್ಥ:** ಕರ್ಮ ಬಂಧದಿಂದ ವಿಮೋಚನೆಯು ಕೃಷ್ಣ ಪ್ರಜ್ಞೆಯಲ್ಲಿ ಮಾತ್ರ ಸಾಧ್ಯ; ಆಗ ಒಬ್ಬನು ಎಲ್ಲವನ್ನೂ ಕೃಷ್ಣನಿಗಾಗಿ ಮಾಡುತ್ತಾನೆ. ಕೃಷ್ಣ ಪ್ರಾಜ್ಞನು ಪರಮ ದೇವೋತ್ತಮ ಪುರುಷನಿಗಾಗಿ ಶುದ್ಧ ಪ್ರೇಮದಿಂದ ಕಾರ್ಯ ಮಾಡುತ್ತಾನೆ, ಮತ್ತು ಹೀಗಾಗಿ ಕಾರ್ಯ ಫಲಗಳಲ್ಲಿ ಅವನಿಗೆ ಯಾವ ಆಕರ್ಷಣೆಯೂ ಇರುವುದಿಲ್ಲ. ಪ್ರತಿಯೊಂದನ್ನೂ ಕೃಷ್ಣನಿಗೆ ಬಿಟ್ಟಿದ್ದರಿಂದ, ಸ್ವಯಂ ಪೋಷಣೆಯ ಬಗ್ಗೆ ಕೂಡ ಅವನಿಗೆ ಆಸಕ್ತಿ ಇರುವುದಿಲ್ಲ. ಅಥವಾ ಅವನು ವಸ್ತುಗಳನ್ನು ಹೊಂದಲು, ಅಥವಾ ತನ್ನಲ್ಲಿರುವ ವಸ್ತುಗಳ ರಕ್ಷಣೆ ಮಾಡಲು ಕಾತರನಿರುವುದಿಲ್ಲ. ಅವನು ತನಗೆ ಸಾಧ್ಯವಿದ್ದ ಮಟ್ಟಿಗೆ ಅತ್ಯುತ್ತಮವಾಗಿ ತನ್ನ ಕರ್ತವ್ಯ ನಿರ್ವಹಣೆ ಮಾಡುತ್ತಾನೆ, ಮತ್ತು ಎಲ್ಲವನ್ನೂ ಕೃಷ್ಣನಿಗೆ ಬಿಟ್ಟು ಬಿಡುತ್ತಾನೆ. ಇಂಥ ಅನಾಸಕ್ತ ವ್ಯಕ್ತಿಯು ಒಳ್ಳೆಯ ಅಥವಾ ಕೆಟ್ಟ ಕಾರ್ಯಗಳ ಫಲಗಳಿಂದ ಸದಾ ಮುಕ್ತನಾಗಿರುತ್ತಾನೆ; ಅವನು ಏನೂ ಮಾಡುತ್ತಿಲ್ಲ ಎಂಬಂತೆ ಇರುತ್ತದೆ. ಇದು **ಅಕರ್ಮ**ದ, ಅಥವಾ ಪ್ರತಿಫಲವಿಲ್ಲದ ಕರ್ಮದ ಸಂಕೇತ. ಆದ್ದರಿಂದ ಕೃಷ್ಣ ಪ್ರಜ್ಞಾರಹಿತವಾದ ಇತರ ಯಾವುದೇ ಕ್ರಿಯೆಯು ಕರ್ತೃವಿಗೆ ಬಂಧಕ, ಮತ್ತು ಅದು, ಈ ಮುಂಚೆ ವಿವರಿಸಿದಂತೆ **ವಿಕರ್ಮ** ದ ನಿಜ ಅಂಶ.

**ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ ।**
**ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥ ೨೧ ॥**

ನಿರಾಶೀಃ—ಫಲಾಪೇಕ್ಷೆ ಇಲ್ಲದೆ, ಯತ—ನಿಯಂತ್ರಿತ, ಚಿತ್ತ ಆತ್ಮಾ—ಮನಸ್ಸು ಮತ್ತು ಬುದ್ಧಿ, ತ್ಯಕ್ತ—ತ್ಯಜಿಸಿ, ಸರ್ವ—ಎಲ್ಲ, ಪರಿಗ್ರಹಃ—ತನ್ನ ವಸ್ತುಗಳ ಮೇಲೆ ಒಡೆತನದ ಭಾವ, ಶಾರೀರಮ್—ದೇಹಾತ್ಮಗಳನ್ನು ಒಟ್ಟಿಗಿರಿಸಿಕೊಳ್ಳುವುದರಲ್ಲಿ, ಕೇವಲಮ್—ಮಾತ್ರ, ಕರ್ಮ—ಕಾರ್ಯ, ಕುರ್ವನ್—ಮಾಡುತ್ತಾ, ನ—ಇಲ್ಲ, ಆಪ್ನೋತಿ—ಹೊಂದುವುದು, ಕಿಲ್ಬಿಷಮ್—ಪಾಪ ಫಲಗಳು.

**ಅಂಥ ಅರಿವುಳ್ಳ ಮಾನವನು ಪರಿಪೂರ್ಣವಾಗಿ ನಿಯಂತ್ರಿತ ಮನಸ್ಸು ಮತ್ತು ಬುದ್ಧಿಯಿಂದ ಕಾರ್ಯಮಾಡುತ್ತಾನೆ, ತನ್ನ ವಸ್ತುಗಳ ಮೇಲೆ ಒಡೆತನದ ಎಲ್ಲ ಭಾವ**

**ವನ್ನು ತ್ಯಜಿಸುತ್ತಾನೆ, ಮತ್ತು ಜೀವನದ ಕೇವಲ ಅವಶ್ಯಕತೆಗಳಿಗಾಗಿ ಮಾತ್ರ ಕಾರ್ಯ ಮಾಡುತ್ತಾನೆ. ಹೀಗೆ ಕಾರ್ಯಮಾಡಿ ಅವನು ಪಾಪ ಪ್ರತಿಕ್ರಿಯೆಗಳಿಂದ ಬಾಧಿತ ನಾಗುವುದಿಲ್ಲ.**

**ಭಾವಾರ್ಥ :** ಕೃಷ್ಣ ಪ್ರಾಜ್ಞನಿಯು ತನ್ನ ಕಾರ್ಯಗಳಲ್ಲಿ ಒಳ್ಳೆಯ ಅಥವಾ ಕೆಟ್ಟ ಫಲಗಳನ್ನು ನಿರೀಕ್ಷಿಸುವುದಿಲ್ಲ. ಅವನ ಮನಸ್ಸು ಮತ್ತು ಬುದ್ಧಿ ಪೂರ್ಣವಾಗಿ ನಿಯಂತ್ರಿತ. ತಾನು ಪರಮನ ವಿಭಿನ್ನಾಂಶನಾಗಿರುವುದರಿಂದ, ಪೂರ್ಣದ ವಿಭಿನ್ನಾಂಶನಾಗಿ, ತಾನು ನಡೆಸುವ ಪಾತ್ರವು ತನ್ನ ಸ್ವಂತ ಕಾರ್ಯವಲ್ಲ, ಬದಲಿಗೆ ತನ್ನ ಮೂಲಕ ಪರಮನು ಮಾಡಿಸುವ ಕಾರ್ಯ ಮಾತ್ರ ಎಂದು ತಿಳಿದಿರುತ್ತಾನೆ. ಕೈಚಲಿಸಿದಾಗ ಅದು ತಾನಾಗಿಯೇ ತನ್ನ ಸ್ವಂತ ಸಮ್ಮತಿಯಿಂದ ಚಲಿಸುವುದಿಲ್ಲ, ಇಡೀ ದೇಹದ ಯತ್ನದಿಂದ ಚಲಿಸುತ್ತದೆ. ಕೃಷ್ಣ ಪ್ರಾಜ್ಞನಿಯು ಪರಮನ ಇಚ್ಛೆಯೊಂದಿಗೆ ಸದಾ ಜೊತೆಗೂಡಿರುತ್ತಾನೆ, ಏಕೆಂದರೆ ಅವನಿಗೆ ವೈಯಕ್ತಿಕ ಇಂದ್ರಿಯ ತೋಷಣದ ಯಾವ ಇಚ್ಛೆಯೂ ಇರುವುದಿಲ್ಲ. ಅವನು ಯಂತ್ರದ ಭಾಗದಂತೆಯೇ ಚಲಿಸುತ್ತಾನೆ. ಯಂತ್ರದ ಭಾಗಕ್ಕೆ ಎಣ್ಣೆ ಬಿಡುವುದು ಮತ್ತು ಸ್ವಚ್ಛಮಾಡುವುದು ದುರಸ್ತಾಗಿಟ್ಟಿರಲು ಹೇಗೆ ಅಗತ್ಯವೋ, ಹಾಗೆಯೇ ಕೃಷ್ಣಪ್ರಾಜ್ಞನಿಯು ಭಗವಂತನ ದಿವ್ಯ ಪ್ರೇಮಯುತ ಸೇವಾ ಕಾರ್ಯಕ್ಕೆ ಯೋಗ್ಯನಾಗಿರಲು ತನ್ನ ಕಾರ್ಯ ದಿಂದ ತನ್ನನ್ನು ಪೋಷಿಸಿಕೊಳ್ಳುತ್ತಾನೆ. ಆದ್ದರಿಂದ ಅವನು ತನ್ನ ಪ್ರಯತ್ನಗಳ ಪರಿಣಾಮಗಳಿಂದ ರಕ್ಷಿತನು. ಪ್ರಾಣಿಯಂತೆ, ಅವನು ಸ್ವಯಂ ತನ್ನ ದೇಹದ ಮೇಲೆ ಕೂಡ ಒಡೆತನ ಹೊಂದಿರುವುದಿಲ್ಲ. ಪ್ರಾಣಿಯ ಒಬ್ಬ ಕ್ರೂರ ಒಡೆಯನು ಕೆಲವು ಸಲ ತನ್ನ ಬಳಿ ಇರುವ ಪ್ರಾಣಿಯನ್ನು ಕೊಂದು ಹಾಕುತ್ತಾನೆ, ಆದರೂ ಆ ಪ್ರಾಣಿಯು ಪ್ರತಿಭಟಿಸುವುದಿಲ್ಲ ; ಅದಕ್ಕೆ ನಿಜವಾದ ಸ್ವಾತಂತ್ರ್ಯವೂ ಇಲ್ಲ. ಆತ್ಮ ಸಾಕ್ಷಾತ್ಕಾರದಲ್ಲಿ ಪೂರ್ಣವಾಗಿ ತೊಡಗಿದ ಕೃಷ್ಣ ಪ್ರಾಜ್ಞನಿಗೆ ಯಾವುದೇ ಭೌತಿಕ ವಸ್ತುವಿನ ಮಿಥ್ಯಾ ಒಡೆತನ ಹೊಂದಲು ಸಮಯವೇ ಇರುವುದಿಲ್ಲ. ದೇಹಾತ್ಮ ಪೋಷಣೆಗೆ ಅನ್ಯಾಯ ಮಾರ್ಗದಿಂದ ಅವನು ಹಣ ಗಳಿಸಬೇಕಾಗಿಲ್ಲ. ಆದ್ದರಿಂದ, ಅವನು ಅಂಥ ಭೌತಿಕ ಪಾಪಗಳಿಂದ ಕಲುಷಿತ ನಾಗುವುದಿಲ್ಲ. ಅವನು ತನ್ನ ಕಾರ್ಯಗಳ ಎಲ್ಲ ಪ್ರತಿಫಲಗಳಿಂದ ಮುಕ್ತನು.

**ಯದೃಚ್ಛಾಲಾಭಸನ್ತುಷ್ಟೋ ದ್ವನ್ದ್ವಾತೀತೋ ವಿಮತ್ಸರಃ ।**
**ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಪಿ ನ ನಿಬಧ್ಯತೇ ॥ ೨೨ ॥**

ಯದೃಚ್ಛಾ—ತಾನಾಗಿಯೇ ಒದಗಿದ, ಲಾಭ—ಲಾಭದಿಂದ, ಸನ್ತುಷ್ಟಃ—ತೃಪ್ತನು, ದ್ವನ್ದ್ವ—ದಂದ್ವ, ಅತೀತಃ—ಮೀರಿದವನು, ವಿಮತ್ಸರಃ—ಮಾತ್ಸರ್ಯ ರಹಿತನು, ಸಮಃ—ಸ್ಥಿರನು, ಸಿದ್ಧೌ—ಯಶಸ್ಸಿನಲ್ಲಿ, ಅಸಿದ್ಧೌ—ವಿಫಲತೆಯಲ್ಲಿ, ಚ—ಕೂಡ, ಕೃತ್ವಾ—ಮಾಡಿ, ಅಪಿ—ಕೂಡ, ನನಿಬಧ್ಯತೇ—ಬಾಧಿತನಾಗುವುದಿಲ್ಲ.

**ತಾನಾಗಿಯೇ ಒದಗಿದ ಲಾಭದಿಂದ ತೃಪ್ತನು, ದಂದ್ವಾತೀತನು ಮತ್ತು ಮಾತ್ಸರ್ಯರಹಿತನು, ಜಯಾಪಜಯಗಳಲ್ಲಿ ಸ್ಥಿರನು, ಕಾರ್ಯಮಾಡು ತ್ತಿದ್ದರೂ ಕೂಡ ಎಂದಿಗೂ ಸಿಲುಕಿಕೊಳ್ಳುವುದಿಲ್ಲ.**

**ಭಾವಾರ್ಥ**—ಕೃಷ್ಣ ಪ್ರಾಜ್ಞನಾಯು ತನ್ನ ದೇಹ ಪೋಷಣೆಗಾಗಿ ಕೂಡ ಹೆಚ್ಚು ಪ್ರಯತ್ನ ಮಾಡುವುದಿಲ್ಲ. ತಾವಾಗಿಯೇ ಒದಗಿ ಬರುವ ಲಾಭಗಳಿಂದ ಅವನು ತೃಪ್ತನು. ಅವನು ಬೇಡುವುದಿಲ್ಲ, ಅಥವಾ ಸಾಲಮಾಡುವುದಿಲ್ಲ, ಮತ್ತು ತನ್ನ ಸ್ವಂತ ಪ್ರಾಮಾಣಿಕ ಶ್ರಮದಿಂದ ದೊರೆತಿದ್ದರಿಂದ ತೃಪ್ತನು. ಆದ್ದರಿಂದ ಅವನು ತನ್ನ ಜೀವನೋಪಾಯದಲ್ಲಿ ಸ್ವತಂತ್ರನು. ಅವನು ತನ್ನ ಕೃಷ್ಣ ಪ್ರಜ್ಞಾ ಸೇವೆಗೆ ಮತ್ತೊಬ್ಬರ ಸೇವೆಯು ಆತಂಕವಾಗಲು ಅವಕಾಶ ಕೊಡುವುದಿಲ್ಲ. ಆದರೆ ಭಗವಂತನ ಸೇವೆಗಾಗಿ ಅವನು ಭೌತಿಕ ಜಗತ್ತಿನ ದ್ವಂದ್ವದಿಂದ ಕ್ಷೋಭೆಗೊಳ್ಳದೆ, ಯಾವುದೇ ಕಾರ್ಯದಲ್ಲಿ ಭಾಗವಹಿಸಬಲ್ಲನು. ಭೌತಿಕ ಜಗತ್ತಿನ ದ್ವಂದ್ವವು ಶಾಖ ಮತ್ತು ಶೀತ, ಅಥವಾ ಕ್ಲೇಶ ಮತ್ತು ಸುಖಗಳ ರೂಪದಲ್ಲಿ ಅನುಭವಕ್ಕೆ ಬರುತ್ತದೆ. ಕೃಷ್ಣಪ್ರಾಜ್ಞನಾಯು ದ್ವಂದ್ವಾತೀತನು, ಏಕೆಂದರೆ ಕೃಷ್ಣನ ತೃಪ್ತಿಗಾಗಿ ಅವನು ಯಾವ ರೀತಿಯಲ್ಲಿಯೂ ಕಾರ್ಯಮಾಡಲು ಹಿಂಜರಿಯುವುದಿಲ್ಲ. ಆದ್ದರಿಂದ ಅವನು ಜಯಾಪಜಯಗಳಲ್ಲಿ ಸ್ಥಿರನು. ಒಬ್ಬನು ಪೂರ್ಣವಾಗಿ ಜ್ಞಾನಾವಸ್ಥೆಯಲ್ಲಿ ಇರುವಾಗ ಈ ಲಕ್ಷಣಗಳು ಅವನಲ್ಲಿ ಕಂಡು ಬರುತ್ತವೆ.

**ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ ।**
**ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥ ೨೩ ॥**

ಗತಸಂಗಸ್ಯ—ಭೌತಿಕ ಪ್ರಕೃತಿಗುಣಗಳಲ್ಲಿ ಅನಾಸಕ್ತನು, ಮುಕ್ತಸ್ಯ—ಮುಕ್ತನ, ಜ್ಞಾನ ಅವಸ್ಥಿತ—ದಿವ್ಯತೆಯಲ್ಲಿ ಸನ್ನಿವೇಶಿತನು, ಚೇತಸಃ—ಯಾರ ಜ್ಞಾನವು, ಯಜ್ಞಾಯ—ಯಜ್ಞ (ಕೃಷ್ಣ)ನಿಗಾಗಿ, ಆಚರತಃ—ಮಾಡುತ್ತ, ಕರ್ಮ—ಕರ್ಮವನ್ನು, ಸಮಗ್ರಮ್—ಸಮಗ್ರವಾಗಿ, ಪ್ರವಿಲೀಯತೇ—ಸಂಪೂರ್ಣವಾಗಿ ಲೀನವಾಗುತ್ತದೆ.

**ಭೌತಿಕ ಪ್ರಕೃತಿ ಗುಣಗಳಲ್ಲಿ ಅನಾಸಕ್ತನಾದವನ, ಮತ್ತು ದಿವ್ಯಜ್ಞಾನದಲ್ಲಿ ಪೂರ್ಣವಾಗಿ ಸ್ಥಿತನಾದವನ ಕರ್ಮವು-ಸಂಪೂರ್ಣವಾಗಿ ದಿವ್ಯತ್ವದಲ್ಲಿ ಲೀನವಾಗುತ್ತದೆ.**

**ಭಾವಾರ್ಥ** : ಪೂರ್ಣ ಕೃಷ್ಣಪ್ರಜ್ಞನಾಗಿ ಒಬ್ಬನು ಎಲ್ಲ ದ್ವಂದ್ವಗಳಿಂದ ವಿಮೋಚಿತನಾಗುತ್ತಾನೆ, ಮತ್ತು ಹೀಗೆ ಭೌತಿಕ ಗುಣಗಳ ಕಲ್ಮಷದಿಂದ ಮುಕ್ತನಾಗುತ್ತಾನೆ. ಕೃಷ್ಣ ಸಂಬಂಧದಲ್ಲಿ ತನ್ನ ಸ್ವರೂಪ ಸ್ಥಿತಿಯನ್ನು ತಿಳಿದಿರುವುದರಿಂದ ಅವನು ಮುಕ್ತನಾಗಬಲ್ಲನು. ಮತ್ತು ಅಂತೆಯೇ ಅವನ ಮನಸ್ಸನ್ನು ಕೃಷ್ಣಪ್ರಜ್ಞೆಯಿಂದ ಸೆಳೆಯಲಾಗದು. ಅದರ ಪರಿಣಾಮವಾಗಿ ಅವನು ಏನೇ ಮಾಡಿದರೂ, ಆದಿ ವಿಷ್ಣುವಾದ ಶ್ರೀಕೃಷ್ಣನಿಗಾಗಿಯೇ ಮಾಡುತ್ತಾನೆ. ಆದ್ದರಿಂದ ಅವನ ಕರ್ಮಗಳೆಲ್ಲವೂ ವಿಶಿಷ್ಟಾರ್ಥದಲ್ಲಿ ಯಜ್ಞಗಳು, ಏಕೆಂದರೆ ಯಜ್ಞವು ಪರಮ ಪುರುಷ, ವಿಷ್ಣು, ಕೃಷ್ಣನನ್ನು ತೃಪ್ತಿಗೊಳಿಸಲು ಉದ್ದೇಶಿಸಿದೆ. ಅಂಥ ಎಲ್ಲಾ ಪರಿಣಾಮಕ ಪ್ರತಿಕ್ರಿಯೆಗಳು ಖಂಡಿತ ದಿವ್ಯದಲ್ಲಿ ಲೀನವಾಗುತ್ತವೆ, ಮತ್ತು ಒಬ್ಬನು ಭೌತಿಕ ಪರಿಣಾಮಗಳನ್ನು ಅನುಭವಿಸುವುದಿಲ್ಲ.

**ಬ್ರಹ್ಮಾರ್ಪಣಂ ಬ್ರಹ್ಮ ಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತವ್ ।**
**ಬ್ರಹ್ಮೈವ ತೇನ ಗನ್ತವ್ಯಂ ಬ್ರಹ್ಮಕರ್ಮಸಮಾಧಿನಾ ॥ ೨೪ ॥**

ಬ್ರಹ್ಮ—ಆಧ್ಯಾತ್ಮ ಸ್ವಭಾವದ, ಅರ್ಪಣಮ್—ಅರ್ಪಣೆ, ಬ್ರಹ್ಮ—ಪರಮ, ಹವಿಃ—ಆಜ್ಯ, ಬ್ರಹ್ಮ—ಅಧ್ಯಾತ್ಮ, ಅಗ್ನೌ—ಹುತಾಗ್ನಿಯಲ್ಲಿ, ಬ್ರಹ್ಮಣಾ—ಚೇತನಾತ್ಮನಿಂದ, ಹುತಮ್—ಅರ್ಪಿಸಲ್ಪಟ್ಟು, ಬ್ರಹ್ಮ—ಆಧ್ಯಾತ್ಮಿಕ ಧಾಮವು, ಏವ—ಖಂಡಿತವಾಗಿ, ತೇನ—ಅವನಿಂದ, ಗನ್ತವ್ಯಮ್—ಹೊಂದಬೇಕಾದುದು, ಬ್ರಹ್ಮ—ಆಧ್ಯಾತ್ಮಿಕ, ಕರ್ಮ—ಚಟುವಟಿಕೆಗಳಲ್ಲಿ, ಸಮಾಧಿನಾ—ಪೂರ್ಣ ತಲ್ಲೀನತೆಯಿಂದ.

**ಆಹುತಿಯು ಬ್ರಹ್ಮವಾಗಿರುವ, ಮತ್ತು ಅರ್ಪಿತವಾದದ್ದೂ ಅದೇ ಅಧ್ಯಾತ್ಮ ಸ್ವಭಾವದ್ದಾಗಿರುವ ಅಧ್ಯಾತ್ಮ ಚಟುವಟಿಕೆಗಳಲ್ಲಿ ತನ್ನ ಪೂರ್ಣಾರ್ಪಣೆಯ ಕಾರಣದಿಂದಾಗಿ, ಕೃಷ್ಣಪ್ರಜ್ಞೆಯಲ್ಲಿ ಪೂರ್ತಿಯಾಗಿ ಮಗ್ನನಾದವನು ಅಧ್ಯಾತ್ಮಿಕ ಧಾಮವನ್ನು ಸೇರುವುದು ಖಂಡಿತ.**

**ಭಾವಾರ್ಥ :** ಕೃಷ್ಣ ಪ್ರಜ್ಞೆಯಲ್ಲಿನ ಚಟುವಟಿಕೆಗಳು ಹೇಗೆ ಒಬ್ಬನನ್ನು ಅಂತಿಮವಾಗಿ ಆಧ್ಯಾತ್ಮಿಕ ಗುರಿಗೆ ಕರೆದೊಯ್ಯುತ್ತವೆ ಎಂಬುದನ್ನು ಇಲ್ಲಿ ವಿವರಿಸಿದೆ. ಕೃಷ್ಣ ಪ್ರಜ್ಞೆಯಲ್ಲಿನ ಚಟುವಟಿಕೆಗಳು ನಾನಾ ಬಗೆ ಮತ್ತು ಅವೆಲ್ಲವೂ ಈ ಮುಂದಿನ ಶ್ಲೋಕಗಳಲ್ಲಿ ವಿವರಿಸಲ್ಪಡುವುವು. ಆದರೆ ಈಗ, ಕೃಷ್ಣ ಪ್ರಜ್ಞೆಯ ತತ್ವವನ್ನು ಮಾತ್ರ ವಿವರಿಸಿದೆ. ಬದ್ಧ ಆತ್ಮನು ಭೌತಿಕ ಕಲ್ಮಷದಲ್ಲಿ ಸಿಲುಕಿ, ಭೌತಿಕ ವಾತಾವರಣದಲ್ಲಿ ಕಾರ್ಯ ಮಾಡುವುದು ಖಂಡಿತ. ಆದರೆ ಅಂಥ ಪರಿಸರದಿಂದ ಅವನು ಹೊರಬರಬೇಕಾಗಿದೆ. ಭೌತಿಕ ವಾತಾವರಣದಿಂದ ಬದ್ಧಾತ್ಮನು ಹೊರಬರುವ ಪ್ರಕ್ರಿಯೆ ಕೃಷ್ಣ ಪ್ರಜ್ಞೆ. ಉದಾಹರಣೆಗೆ ಅತಿಯಾಗಿ ಹಾಲಿನ ಪದಾರ್ಥಗಳನ್ನು ತಿಂದು, ಅಜೀರ್ಣವಾಗಿ ತೊಂದರೆ ಪಡುತ್ತಿರುವ ರೋಗಿಯು ಹಾಲಿನ ಮತ್ತೊಂದು ಪದಾರ್ಥವಾದ ಮೊಸರಿನಿಂದ ಗುಣ ಹೊಂದುತ್ತಾನೆ. ಭೌತಿಕವಾಗಿ ಮಗ್ನನಾದ ಬದ್ಧ ಆತ್ಮನನ್ನು, ಇಲ್ಲಿ ಗೀತೆಯಲ್ಲಿ ನಿರ್ದೇಶಿಸಿರುವಂತೆ ಕೃಷ್ಣ ಪ್ರಜ್ಞೆಯಿಂದ ವಾಸಿಮಾಡಬಹುದು. ಈ ಪ್ರಕ್ರಿಯೆಯು ಸಾಮಾನ್ಯವಾಗಿ **ಯಜ್ಞ,** ಅಥವಾ ವಿಷ್ಣು, ಕೃಷ್ಣನ ತೃಪ್ತಿಗಾಗಿ ಉದ್ದೇಶಿತ ಚಟುವಟಿಕೆಗಳು ಎನಿಸಿಕೊಂಡಿದೆ. ಭೌತಿಕ ಜಗತ್ತಿನ ಚಟುವಟಿಕೆಗಳು ಕೃಷ್ಣ ಪ್ರಜ್ಞೆಯಲ್ಲಿ ಅಥವಾ ವಿಷ್ಣುವಿಗಾಗಿ ಮಾತ್ರವೇ ಹೆಚ್ಚು ಹೆಚ್ಚಾಗಿ ಆಚರಿಸಿದಂತೆ, ಪೂರ್ಣ ತನ್ಮಯತೆಯಿಂದ ವಾತಾವರಣವು ಹೆಚ್ಚು ಹೆಚ್ಚಾಗಿ ಆಧ್ಯಾತ್ಮೀಕೃತವಾಗುತ್ತದೆ. **ಬ್ರಹ್ಮ** ಎಂದರೆ "ಆಧ್ಯಾತ್ಮಿಕ" ಎಂದರ್ಥ. ಭಗವಂತನು ಆಧ್ಯಾತ್ಮಿಕನು ಮತ್ತು ಅವನ ದಿವ್ಯ ದೇಹದ ಕಿರಣಗಳನ್ನು **ಬ್ರಹ್ಮಜ್ಯೋತಿ** ಎಂದು ಕರೆಯುತ್ತಾರೆ. ಇದು ಅವನ ಆಧ್ಯಾತ್ಮಿಕ ಪ್ರಕಾಶ. ಅಸ್ತಿತ್ವದಲ್ಲಿರುವ ಪ್ರತಿಯೊಂದೂ **ಬ್ರಹ್ಮಜ್ಯೋತಿ**ಯಲ್ಲಿ ಸನ್ನಿವೇಶಿತ. ಆದರೆ, ಆ **ಜ್ಯೋತಿ** ಯು ಮಾಯೆಯಿಂದ ಅಥವಾ ಇಂದ್ರಿಯ ತೋಷಣದಿಂದ ಆವೃತವಾದಾಗ, ಅದನ್ನು ಭೌತಿಕ ಎಂದು ಕರೆಯಲಾಗಿದೆ. ಈ ಭೌತಿಕ ತೆರೆಯನ್ನು ಕೃಷ್ಣ ಪ್ರಜ್ಞೆಯಿಂದ ಕೂಡಲೇ ನಿವಾರಿಸಬಹುದು; ಹೀಗೆ ಕೃಷ್ಣಪ್ರಜ್ಞೆಗಾಗಿ ಸಮರ್ಪಿತವು, ಮತ್ತು ಅಂಥ ಅರ್ಪಿತವನ್ನು ಅಥವಾ ಅರ್ಪಣೆಯನ್ನು ಆಹುತಿಗೊಳ್ಳುವ ಅಭಿಕರಣ, ಆಹುತಿ ಪ್ರಕ್ರಿಯೆ, ಕರ್ತೃ ಮತ್ತು ಫಲವು—ಎಲ್ಲವೂ ಒಟ್ಟು ಸೇರಿ—ಬ್ರಹ್ಮನ್ ಅಥವಾ ಪರಮ ಸತ್ಯ. **ಮಾಯೆಯಿಂದ ಆವೃತವಾದ ಪರಮ ಸತ್ಯವು ಜಡ ಎಂದು ಕರೆಯಲ್ಪಡುತ್ತದೆ.**

ಪರಮ ಸತ್ಯದ ಸಲುವಾಗಿ ಜೊತೆಗೂಡಿಸಿದ ಜಡವು ತನ್ನ ಆಧ್ಯಾತ್ಮಿಕ ಗುಣವನ್ನು ಮತ್ತೆ ಪಡೆಯುತ್ತದೆ. ಕೃಷ್ಣ ಪ್ರಜ್ಞೆಯು ಮಾಯಾ ಪ್ರಜ್ಞೆಯನ್ನು ಬ್ರಹ್ಮನ್ ಅಥವಾ ಪರಮದಲ್ಲಿ ಪರಿವರ್ತಿಸುವ ಪ್ರಕ್ರಿಯೆ. ಮನಸ್ಸು ಸಂಪೂರ್ಣವಾಗಿ ಕೃಷ್ಣ ಪ್ರಜ್ಞೆಯಲ್ಲಿ ಮಗ್ನವಾದಾಗ, ಅದು **ಸಮಾಧಿ** ಸ್ಥಿತಿಯಲ್ಲಿದೆ ಎಂದು ಹೇಳಿದೆ. ಅಂಥ ದಿವ್ಯ ಪ್ರಜ್ಞೆಯಲ್ಲಿ ಏನೇ ಮಾಡಿದರೂ ಅದು **ಯಜ್ಞ** ಅಥವಾ ಪರಮನಿಗಾಗಿ ಮಾಡಿದ ಯಜ್ಞವೆಂದು ಕರೆಯಲ್ಪಡುತ್ತದೆ. ಅಂಥ ಆಧ್ಯಾತ್ಮಿಕ ಪ್ರಜ್ಞೆಯ ಸ್ಥಿತಿಯಲ್ಲಿ ಸಮರ್ಪಿಸುವ, ಅರ್ಪಿತ, ಆಹುತಿ, ಕರ್ತೃ, ಅಥವಾ ಆಚರಣೆಯ ನಾಯಕ ಮತ್ತು ಫಲ ಅಥವಾ ಅಂತಿಮ ಪ್ರಯೋಜನ—ಎಲ್ಲವೂ—ಪರಮನಲ್ಲಿ ಪರಬ್ರಹ್ಮನಲ್ಲಿ ಸೇರುತ್ತವೆ. ಇದೇ ಕೃಷ್ಣ ಪ್ರಜ್ಞೆಯ ವಿಧಾನ.

**ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ ।**
**ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ॥ ೨೫ ॥**

ದೈವಮ್—ದೇವತೆಗಳ ಆರಾಧನೆಯಲ್ಲಿ, ಏವ—ಈ ರೀತಿಯಾಗಿ, ಅಪರೇ—ಇತರರು, ಯಜ್ಞಮ್—ಯಜ್ಞಗಳು, ಯೋಗಿನಃ—ಯೋಗಿಗಳು, ಪರ್ಯುಪಾಸತೇ—ಸರಿಯಾಗಿ ಆರಾಧಿಸುತ್ತಾರೆ, ಬ್ರಹ್ಮ—ಪರಮ ಸತ್ಯದ, ಅಗ್ನೌ—ಅಗ್ನಿಯಲ್ಲಿ, ಅಪರೇ—ಇತರರು, ಯಜ್ಞಮ್—ಯಜ್ಞವನ್ನು, ಯಜ್ಞೇನ—ಯಜ್ಞದಿಂದ, ಏವ—ಹೀಗೆ, ಉಪಜುಹ್ವತಿ—ಅರ್ಪಿಸುತ್ತಾರೆ.

**ಕೆಲವು ಯೋಗಿಗಳು ನಾನಾ ಬಗೆಯ ಯಜ್ಞಾರ್ಪಣೆಗಳಿಂದ ದೇವತೆಗಳನ್ನು ಪರಿಪೂರ್ಣವಾಗಿ ಅರಾಧಿಸುತ್ತಾರೆ, ಮತ್ತೆ ಕೆಲವರು ಪರಬ್ರಹ್ಮಾಗ್ನಿಯಲ್ಲಿ ಯಜ್ಞಾರ್ಪಣೆಗಳನ್ನು ಮಾಡುತ್ತಾರೆ.**

**ಭಾವಾರ್ಥ :** ಮೇಲೆ ವರ್ಣಿಸಿದಂತೆ, ಕೃಷ್ಣಪ್ರಜ್ಞೆಯಲ್ಲಿ ಕರ್ತವ್ಯಗಳನ್ನು ನಿರ್ವಹಿಸುವಲ್ಲಿ ನಿರತನಾದ ವ್ಯಕ್ತಿಯನ್ನು ಪರಿಪೂರ್ಣ ಅಥವಾ ಶ್ರೇಷ್ಠಯೋಗಿ ಎಂದೂ ಕರೆದಿದೆ. ಆದರೆ ದೇವತೆಗಳ ಆರಾಧನೆಯಲ್ಲಿ ಇದೇ ಬಗೆಯ ಯಜ್ಞಾಚರಣೆ ಮಾಡುವವರೂ, ಮತ್ತು ಪರಬ್ರಹ್ಮನಿಗೆ ಅಥವಾ ಪರಮಪ್ರಭುವಿನ ವ್ಯಕ್ತಿಶೂನ್ಯ ಲಕ್ಷಣಕ್ಕೆ ಯಜ್ಞ ಮಾಡುವವರೂ ಕೆಲವರಿದ್ದಾರೆ. ಹೀಗೆ ನಾನಾ ಶ್ರೇಣಿಯ ಭಿನ್ನ ಭಿನ್ನ ಯಜ್ಞಗಳು ಇವೆ. ವಿವಿಧ ಕರ್ತೃಗಳ ನಾನಾ ಬಗೆಯ ಯಜ್ಞಗಳು ಹೊರನೋಟದಲ್ಲಿ ಮಾತ್ರ ಭಿನ್ನ ಭಿನ್ನವಾಗಿರುತ್ತವೆ. ವಾಸ್ತವಿಕವಾಗಿ, ಯಜ್ಞ ಎಂದರೆ ಯಜ್ಞನೆಂದೂ ತಿಳಿಯಲ್ಪಟ್ಟಿರುವ ಪರಮ ಪ್ರಭು ವಿಷ್ಣುವನ್ನು ತೃಪ್ತಿಪಡಿಸುವುದು. ಎಲ್ಲ ಬಗೆಯ ಯಜ್ಞಗಳನ್ನು ಕೇವಲ ಎರಡೇ ವಿಭಾಗಗಳಲ್ಲಿ ಎಂದರೆ, ಭೌತಿಕ ವಸ್ತುಗಳ ಪರಿತ್ಯಾಗ ಮತ್ತು ದಿವ್ಯ ಜ್ಞಾನದ ಅನ್ವೇಷಣೆಯಲ್ಲಿ ಪರಿತ್ಯಾಗ ಎಂದು ವಿಂಗಡಿಸಬಹುದು. ಕೃಷ್ಣ ಪ್ರಾಜ್ಞಗಳು ಭಗವತ್ ತೃಪ್ತಿಗಾಗಿ ಎಲ್ಲ ಭೌತಿಕ ವಸ್ತುಗಳನ್ನು ತ್ಯಜಿಸುತ್ತಾರೆ. ಇತರರು ತಾತ್ಕಾಲಿಕ ಭೌತಿಕ ಸುಖವನ್ನು ಬಯಸುವವರು ಇಂದ್ರ, ಸೂರ್ಯದೇವ ಮೊದಲಾದ ದೇವತೆಗಳನ್ನು ತೃಪ್ತಿಪಡಿಸಲು ತಮ್ಮ ಭೌತಿಕವಸ್ತುಗಳನ್ನು ತ್ಯಾಗ ಮಾಡುತ್ತಾರೆ. ವ್ಯಕ್ತಿಶೂನ್ಯವಾದಿಗಳಾದ ಮತ್ತಿತರರು

ವ್ಯಕ್ತಿಶೂನ್ಯ ಬ್ರಹ್ಮನ ಅಸ್ತಿತ್ವದಲ್ಲಿ ಲೀನವಾಗುವುದರಿಂದ ತಮ್ಮ ವ್ಯಕ್ತಿತ್ವವನ್ನು ತ್ಯಾಗ ಮಾಡುವವರು. ದೇವತೆಗಳು ವಿಶ್ವದ ಶಾಖ, ಜಲ ಮತ್ತು ಬೆಳಕು ಪೂರೈಕೆಗಳಂಥ ಎಲ್ಲ ಭೌತಿಕ ಕಾರ್ಯಗಳ ಸಂರಕ್ಷಣೆ ಮತ್ತು ಮೇಲ್ವಿಚಾರಣೆಗಾಗಿ ಭಗವಂತನಿಂದ ನಿಯಮಿಸಲ್ಪಟ್ಟ ಬಲಿಷ್ಠ ಜೀವಿಗಳು. ಭೌತಿಕ ವಸ್ತುಗಳಲ್ಲಿ ಆಸಕ್ತರಾದವರು ವೈದಿಕ ಸಂಸ್ಕಾರಗಳಿಗನುಸಾರವಾಗಿ ಬಗೆಬಗೆಯ ಯಜ್ಞಗಳಿಂದ ದೇವತೆಗಳನ್ನು ಅರ್ಚಿಸುತ್ತಾರೆ. ಅವರನ್ನು **ಬಹ್ವೀಶ್ವರವಾದೀ** ಅಥವಾ ಅನೇಕ ದೇವತೆಗಳನ್ನು ನಂಬುವವರೆಂದು ಕರೆಯುತ್ತಾರೆ. ಆದರೆ ಪರಮ ಸತ್ಯದ ವ್ಯಕ್ತಿಶೂನ್ಯ ಲಕ್ಷಣವನ್ನು ಅರ್ಚಿಸುವ ಮತ್ತು ದೇವತೆಗಳ ರೂಪಗಳನ್ನು ಅನಿತ್ಯವೆಂದು ಭಾವಿಸುವ ಇತರರು, ಪರಮಾಗ್ನಿಯಲ್ಲಿ ತಮ್ಮ ವ್ಯಕ್ತಿತ್ವವನ್ನು ತ್ಯಜಿಸುವರು ಮತ್ತು ಹೀಗೆ ಪರಮನ ಅಸ್ತಿತ್ವದಲ್ಲಿ ಲೀನವಾಗುವುದರಿಂದ ವೈಯಕ್ತಿಕ ಅಸ್ತಿತ್ವಗಳನ್ನು ಕೊನೆಗಾಣಿಸುತ್ತಾರೆ. ಅಂಥ ವ್ಯಕ್ತಿಶೂನ್ಯವಾದಿಗಳು ಪರಮನ ದಿವ್ಯ ಸ್ವಭಾವವನ್ನು ಅರಿತುಕೊಳ್ಳುವ ದಾರ್ಶನಿಕ ಊಹಾಪೋಹಗಳಲ್ಲಿ ತಮ್ಮ ಕಾಲವನ್ನು ತ್ಯಾಗಮಾಡುತ್ತಾರೆ. ಎಂದರೆ,ಕಾಮ್ಯಕರ್ಮಿಗಳು ಭೌತಿಕ ಭೋಗಕ್ಕಾಗಿ ತಮ್ಮ ಭೌತಿಕ ವಸ್ತುಗಳನ್ನು ತ್ಯಾಗಮಾಡುತ್ತಾರೆ, ಆದರೆ ವ್ಯಕ್ತಿಶೂನ್ಯವಾದಿಯು ಪರಮನ ಅಸ್ತಿತ್ವದಲ್ಲಿ ಲೀನವಾಗುವ ಉದ್ದೇಶದಿಂದ ತನ್ನ ಭೌತಿಕ ಉಪಾಧಿಗಳನ್ನು ತ್ಯಾಗಮಾಡುವನು. ವ್ಯಕ್ತಿಶೂನ್ಯವಾದಿಗೆ ಯಜ್ಞದ ಅಗ್ನಿಕುಂಡವು ಪರಬ್ರಹ್ಮನು ಮತ್ತು ಬ್ರಹ್ಮಾಗ್ನಿಯಿಂದ ಭುಂಜಿಸಲ್ಪಟ್ಟ ಅರ್ಪಿತವು ವ್ಯಕ್ತಿತ್ವವೇ. ಆದರೆ, ಅರ್ಜುನನಂಥ ಕೃಷ್ಣ ಪ್ರಾಜ್ಞನಿಯು ಕೃಷ್ಣ ತೃಪ್ತಿಗಾಗಿ ಎಲ್ಲವನ್ನೂ ತ್ಯಾಗಮಾಡುತ್ತಾನೆ, ಮತ್ತು ಹೀಗೆ ಅವನ ಎಲ್ಲ ಭೌತಿಕ ವಸ್ತುಗಳು ಮತ್ತು ತನ್ನನ್ನೇ- ಎಲ್ಲವನ್ನೂ- ಕೃಷ್ಣನಿಗಾಗಿ ಯಜ್ಞದಲ್ಲಿ ತ್ಯಾಗಮಾಡುತ್ತಾನೆ. ಆದ್ದರಿಂದ ಅವನು ಪ್ರಥಮ ಶ್ರೇಣಿಯ ಯೋಗಿ. ಆದರೆ ಅವನು ತನ್ನ ವ್ಯಕ್ತಿಶಃ ಅಸ್ತಿತ್ವವನ್ನು ಕಳೆದುಕೊಳ್ಳುವುದಿಲ್ಲ.

**ಶ್ರೋತ್ರಾದೀನೀನ್ದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ ।**
**ಶಬ್ದಾದೀನ್ ವಿಷಯಾನನ್ಯ ಇನ್ದ್ರಿಯಾಗ್ನಿಷು ಜುಹ್ವತಿ ॥ ೨೬ ॥**

ಶ್ರೋತ್ರ ಆದೀನಿ—ಶ್ರವಣ ಪ್ರಕ್ರಿಯೆಯಂಥ, ಇನ್ದ್ರಿಯಾಣಿ—ಇಂದ್ರಿಯಗಳು, ಅನ್ಯೇ—ಇತರರು, ಸಂಯಮ—ಸಂಯಮದ, ಅಗ್ನಿಷು—ಅಗ್ನಿಗಳಲ್ಲಿ, ಜುಹ್ವತಿ—ಅರ್ಪಿಸುತ್ತಾರೆ, ಶಬ್ದ ಆದೀನ್—ಶಬ್ದ ಕಂಪನ, ಇತ್ಯಾದಿ, ವಿಷಯಾನ್—ಇಂದ್ರಿಯ ತೋಷಣೆಯ ವಿಷಯಗಳನ್ನು, ಅನ್ಯೇ—ಇತರರು, ಇನ್ದ್ರಿಯ—ಇಂದ್ರಿಯಗಳ, ಅಗ್ನಿಷು—ಅಗ್ನಿಗಳಲ್ಲಿ, ಜುಹ್ವತಿ—ಅವರು ಅರ್ಪಿಸುತ್ತಾರೆ.

**ಕೆಲವರು (ಅಮಿಶ್ರ ಬ್ರಹ್ಮಚಾರಿಗಳು) ಮಾನಸಿಕ ಸಂಯಮಾಗ್ನಿಯಲ್ಲಿ ಶ್ರವಣ ಪ್ರಕ್ರಿಯೆ ಮತ್ತು ಇಂದ್ರಿಯಗಳನ್ನು ತ್ಯಾಗ ಮಾಡುತ್ತಾರೆ, ಮತ್ತು ಇತರರು (ಸಂಯಮ ಗೃಹಸ್ಥರು) ಇಂದ್ರಿಯಾಗ್ನಿಯಲ್ಲಿ ಇಂದ್ರಿಯ ವಿಷಯಗಳನ್ನು ತ್ಯಾಗ ಮಾಡುತ್ತಾರೆ.**

**ಭಾವಾರ್ಥ :** ಮಾನವ ಜೀವನದ ನಾಲ್ಕು ವಿಭಾಗಗಳ ಸದಸ್ಯರು. ಎಂದರೆ ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸಿ, ಇವರೆಲ್ಲರೂ ಪರಿಪೂರ್ಣ ಯೋಗಿಗಳು ಅಥವಾ ದಿವ್ಯೋಪಾಸಕರು ಆಗಬೇಕೆಂದು ಉದ್ದಿಷ್ಟ. ಮಾನವ ಜೀವನವು ಪಶುಗಳಂತೆ ನಮ್ಮ ಇಂದ್ರಿಯ ತೋಷಣ ಭೋಗಕ್ಕಾಗಿ ಉದ್ದೇಶಿತವಲ್ಲ. ಆದ್ದರಿಂದ, ಒಬ್ಬನು ಆಧ್ಯಾತ್ಮಿಕ ಜೀವನದಲ್ಲಿ ಪರಿಪೂರ್ಣನಾಗಲು ಮಾನವ ಜೀವನದ ನಾಲ್ಕು ಆಶ್ರಮಗಳನ್ನು ವ್ಯವಸ್ಥೆಗೊಳಿಸಿದೆ. ಬ್ರಹ್ಮಚಾರಿಗಳು ಅಥವಾ ಸದ್ಗುರುವಿನ ಆಶ್ರಯದಲ್ಲಿರುವ ಶಿಷ್ಯರು, ಇಂದ್ರಿಯ ತೋಷಣದಿಂದ ದೂರವಿದ್ದು, ಮನಸ್ಸನ್ನು ನಿಗ್ರಹಿಸುತ್ತಾರೆ. ಬ್ರಹ್ಮಚಾರಿಯು ಕೃಷ್ಣಪ್ರಜ್ಞೆಗೆ ಸಂಬಂಧಪಟ್ಟ ಮಾತುಗಳನ್ನು ಮಾತ್ರ ಕೇಳುತ್ತಾನೆ ; ಶ್ರವಣವು ಜ್ಞಾನಪ್ರಾಪ್ತಿಗೆ ಮೂಲ ತತ್ವ. ಆದ್ದರಿಂದ ಶುದ್ಧ ಬ್ರಹ್ಮಚಾರಿಯು **ಹರೇರ್ನಾಮಾನುಕೀರ್ತನಮ್,** ಎಂದರೆ ಭಗವಂತನ ಮಹಿಮೆಗಳ ಶ್ರವಣ ಮತ್ತು ಕೀರ್ತನೆಯಲ್ಲಿ ಸಂಪೂರ್ಣವಾಗಿ ತೊಡಗಿರುತ್ತಾನೆ. ಅವನು ಭೌತಿಕ ಶಬ್ದ ಕಂಪನಗಳಿಂದ ದೂರವಿರುತ್ತಾನೆ, ಮತ್ತು ಹರೇ ಕೃಷ್ಣ, ಹರೇ ಕೃಷ್ಣ ಎಂಬ ದಿವ್ಯ ಶಬ್ದ ಕಂಪನದಲ್ಲಿ ಅವನ ಶ್ರವಣವು ನಿರತವಾಗಿರುತ್ತದೆ. ಅದೇ ಪ್ರಕಾರ, ಇಂದ್ರಿಯ ತೋಷಣೆಗಾಗಿ ಕಿಂಚಿದನುಮತಿಯುಳ್ಳ ಗೃಹಸ್ಥರು ಅಂಥ ಕ್ರಿಯೆಗಳನ್ನು ಮಹಾ ಸಂಯಮದಿಂದ ಆಚರಿಸುತ್ತಾರೆ. ಲೈಂಗಿಕ ಜೀವನ, ಮದ್ಯ ಸೇವನೆ ಮತ್ತು ಮಾಂಸಾಹಾರ, ಇವು ಮಾನವ ಸಮಾಜದ ಸಾಮಾನ್ಯ ಪ್ರವೃತ್ತಿಗಳು; ಆದರೆ ಸಂಯಮಿ ಗೃಹಸ್ಥನು ಅನಿರ್ಬಂಧಿತ ಲೈಂಗಿಕ ಜೀವನ ಮತ್ತು ಇತರ ಇಂದ್ರಿಯ ತೋಷಣೆಯಲ್ಲಿ ತೊಡಗುವುದಿಲ್ಲ. ಆದ್ದರಿಂದಲೇ ಧಾರ್ಮಿಕ ಜೀವನದ ತತ್ವಗಳ ಮೇಲೆ ವಿವಾಹವು ಎಲ್ಲ ನಾಗರಿಕ ಮಾನವ ಸಮಾಜದಲ್ಲಿ ಪ್ರಚಲಿತ, ಏಕೆಂದರೆ ಅದೇ ನಿರ್ಬಂಧ ಲೈಂಗಿಕ ಜೀವನ ವಿಧಾನ. ಇಂಥ ನಿರ್ಬಂಧಿತ ಅನಾಸಕ್ತ ಲೈಂಗಿಕ ಜೀವನವೂ ಒಂದು ಬಗೆಯ ಯಜ್ಞ ಏಕೆಂದರೆ ಸಂಯಮಿ ಗೃಹಸ್ಥನು ಉತ್ತರೋತ್ತರ ದಿವ್ಯ ಜೀವನಕ್ಕಾಗಿ ಇಂದ್ರಿಯ ತೋಷಣೆಯ ತನ್ನ ಸಾಮಾನ್ಯ ಪ್ರವೃತ್ತಿಯನ್ನು ತ್ಯಜಿಸುತ್ತಾನೆ.

**ಸರ್ವಾಣೀನ್ದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ ।**
**ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ॥ ೨೭ ॥**

ಸರ್ವಾಣಿ—ಎಲ್ಲವುಗಳ, ಇನ್ದ್ರಿಯ—ಇಂದ್ರಿಯಗಳು, ಕರ್ಮಾಣಿ—ಕ್ರಿಯೆಗಳು, ಪ್ರಾಣಕರ್ಮಾಣಿ—ಪ್ರಾಣ ವಾಯುವಿನ ಕ್ರಿಯೆಗಳು, ಚ—ಕೂಡ, ಅಪರೇ—ಇತರರು, ಆತ್ಮಸಂಯಮ—ಮನೋನಿಗ್ರಹದ, ಯೋಗ—ಸಂಬಂಧಿಸುವ ಪ್ರಕ್ರಿಯೆ, ಅಗ್ನೌ—ಅಗ್ನಿಯಲ್ಲಿ, ಜುಹ್ವತಿ—ಅರ್ಪಿಸುತ್ತಾರೆ, ಜ್ಞಾನದೀಪಿತೇ—ಆತ್ಮಸಾಕ್ಷಾತ್ಕಾರದ ಹಂಬಲದಿಂದ.

**ಮನಸ್ಸು ಮತ್ತು ಇಂದ್ರಿಯಗಳ ನಿಗ್ರಹದಿಂದ ಆತ್ಮ ಸಾಕ್ಷಾತ್ಕಾರ ಹೊಂದ ಬಯಸುವ ಇತರರು, ನಿಯಂತ್ರಿತ ಮನಸ್ಸಿನ ಅಗ್ನಿಯಲ್ಲಿ ಸಕಲೇಂದ್ರಿಯಗಳ ಮತ್ತು ಪ್ರಾಣವಾಯುವಿನ ಕ್ರಿಯೆಗಳನ್ನು ಆಹುತಿಯಾಗಿ ಅರ್ಪಿಸುತ್ತಾರೆ.**

**ಭಾವಾರ್ಥ:** ಪತಂಜಲಿಯಿಂದ ಕಲ್ಪಿತವಾದ ಯೋಗಪದ್ಧತಿಯನ್ನು ಇಲ್ಲಿ ಉಲ್ಲೇಖಿಸಿದೆ. ಪತಂಜಲಿಯು **ಯೋಗ ಸೂತ್ರ**ದಲ್ಲಿ ಆತ್ಮನನ್ನು **ಪ್ರತ್ಯಗಾತ್ಮಾ** ಮತ್ತು **ಪರಾಗಾತ್ಮಾ** ಎಂದು ಕರೆಯಲಾಗಿದೆ. ಆತ್ಮವು ಇಂದ್ರಿಯ ಭೋಗದಲ್ಲಿ ಆಸಕ್ತವಾಗಿರುವವರೆಗೆ ಅದನ್ನು **ಪರಾಗಾತ್ಮಾ** ಎಂದು ಕರೆದಿದೆ. ಆದರೆ, ಅದೇ ಆತ್ಮವು ಅಂಥ ಇಂದ್ರಿಯ ಭೋಗದಿಂದ ವಿರಕ್ತವಾದೊಡನೆಯೇ ಆದನ್ನು **ಪ್ರತ್ಯಗಾತ್ಮಾ** ಎಂದು ಕರೆದಿದೆ. ಆತ್ಮವು ದೇಹದಲ್ಲಿನ ಹತ್ತು ವಿಧವಾದ ಪ್ರಾಣ ವಾಯುವಿನ ಕ್ರಿಯೆಗಳಿಗೆ ಒಳಪಟ್ಟಿದೆ, ಮತ್ತು ಇದು ಶ್ವಾಸ ಕ್ರಮದ ಮೂಲಕ ವೇದ್ಯವಾಗುತ್ತದೆ. ಅಂತಿಮವಾಗಿ ಆಂತರಿಕ ಪ್ರಾಣ ವಾಯುವಿನ ಎಲ್ಲ ಕ್ರಿಯೆಗಳು ಆತ್ಮನನ್ನು ಭೌತಿಕ ಆಸಕ್ತಿಯಿಂದ ಶುದ್ಧಿಗೊಳಿಸಲು ಅನುಕೂಲವಾಗುವಂತೆ ದೇಹದ ವಾಯುವಿನ ಕ್ರಿಯೆಗಳನ್ನು ವಿಶಿಷ್ಟ ರೀತಿಯಲ್ಲಿ ಹೇಗೆ ನಿಗ್ರಹಿಸಬೇಕು ಎಂದು ಪತಂಜಲಿ ಯೋಗಪದ್ಧತಿಯು ಬೋಧಿಸುತ್ತದೆ. ಈ ಯೋಗ ಪದ್ಧತಿಯ ಪ್ರಕಾರ, **ಪ್ರತ್ಯಗಾತ್ಮಾ**ವು ಅಂತಿಮ ಗುರಿ. ಈ **ಪ್ರತ್ಯಗಾತ್ಮಾ**ವನ್ನು ಭೌತಿಕ ಚಟುವಟಿಕೆಗಳಿಂದ ಹಿಂತೆಗೆದಿದೆ. ಕಿವಿಯು ಕೇಳುವುದರಲ್ಲಿ. ಕಣ್ಣುಗಳು ನೋಡುವುದರಲ್ಲಿ, ಮೂಗು ಮೂಸುವುದರಲ್ಲಿ, ನಾಲಿಗೆಯು ರುಚಿನೋಡುವುದರಲ್ಲಿ, ಕೈ ಸ್ಪರ್ಶದಲ್ಲಿ, ಹೀಗೆ ಇಂದ್ರಿಯಗಳು ಇಂದ್ರಿಯ ವಿಷಯಗಳಲ್ಲಿ ಪರಸ್ಪರ ವರ್ತಿಸುತ್ತವೆ, ಮತ್ತು ಹೀಗಾಗಿ ಅವೆಲ್ಲವು ಆತ್ಮಬಾಹ್ಯವಾದ ಚಟುವಟಿಕೆಗಳಲ್ಲಿ ತೊಡಗುತ್ತವೆ. ಅವುಗಳನ್ನು **ಪ್ರಾಣ ವಾಯು**ವಿನ ಕ್ರಿಯೆಗಳೆಂದು ಕರೆದಿದೆ. **ಅಪಾನವಾಯು** ಕೆಳಗೆ ಹೋಗುತ್ತದೆ, **ವ್ಯಾನವಾಯು** ಸಂಕೋಚನ ವಿಕಸನ ಕ್ರಿಯೆಗೆ ವರ್ತಿಸುತ್ತದೆ, **ಸಮಾನವಾಯು** ಸಮಭಾರ ಸ್ಥಿತಿಯನ್ನು ಸರಿದೂಗಿಸುತ್ತದೆ, **ಉದಾನವಾಯು** ಮೇಲಕ್ಕೆ ಹೋಗುತ್ತದೆ— ಮತ್ತು ಒಬ್ಬನಿಗೆ ಜ್ಞಾನೋದಯವಾದಾಗ, ಅವನು ಇವುಗಳನ್ನೆಲ್ಲ ಆತ್ಮ ಸಾಕ್ಷಾತ್ಕಾರ ಶೋಧದಲ್ಲಿ ತೊಡಗಿಸುತ್ತಾನೆ.

**ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ ।**
**ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥ ೨೮ ॥**

ದ್ರವ್ಯ ಯಜ್ಞಾಃ—ತನ್ನ ವಸ್ತುಗಳನ್ನು ತ್ಯಜಿಸುವುದು, ತಪಃಯಜ್ಞಾಃ—ತಪೋವ್ರತ ಯಜ್ಞಗಳ, ಯೋಗ ಯಜ್ಞಾಃ—ಅಷ್ಟಾಂಗ ಯೋಗದ ಯಜ್ಞ, ತಥಾ—ಹೀಗೆ, ಅಪರೇ—ಇತರರು, ಸ್ವಾಧ್ಯಾಯ—ವೇದಾಧ್ಯಯನ ಯಜ್ಞ, ಜ್ಞಾನ ಯಜ್ಞಾಃ—ದಿವ್ಯ ಜ್ಞಾನ ಪ್ರಗತಿಯಲ್ಲಿ ಯಜ್ಞ, ಚ—ಕೂಡ, ಯತಯಃ—ಜ್ಞಾನೋದಯವಾಗಿರುವ ವ್ಯಕ್ತಿಗಳು, ಸಂಶಿತವ್ರತಾಃ—ಕಠೋರ ವ್ರತಗಳನ್ನು ಆಚರಿಸುವವರು.

**ಕಠೋರ ವ್ರತಗಳನ್ನು ಕೈಗೊಂಡು, ಕೆಲವರು ತಮ್ಮ ವಸ್ತುಗಳ ತ್ಯಾಗದಿಂದಲೂ, ಮತ್ತಿತರರು ಕಠೋರ ತಪೋವ್ರತಾಚರಣೆಯಿಂದಲೂ, ಅಷ್ಟಾಂಗ ಯೋಗ ಪದ್ಧತಿಯ ಆಚರಣೆಗಳಿಂದಲೂ, ಅಥವಾ ದಿವ್ಯ ಜ್ಞಾನದಲ್ಲಿ ಪ್ರಗತಿಗಾಗಿ ವೇದಾಧ್ಯಯನದಿಂದಲೂ ಜ್ಞಾನೋದಯ ಹೊಂದುತ್ತಾರೆ.**

**ಭಾವಾರ್ಥ :** ಈ ಯಜ್ಞಗಳನ್ನು ವಿವಿಧ ಭಾಗಗಳಾಗಿ ಹೊಂದಿಸಿಕೊಳ್ಳಬಹುದು. ನಾನಾ ಬಗೆಯ ದಾನರೂಪದಲ್ಲಿ ತಮ್ಮ ವಸ್ತುಗಳನ್ನು ತ್ಯಾಗಮಾಡುವ ವ್ಯಕ್ತಿಗಳಿದ್ದಾರೆ ಭಾರತದಲ್ಲಿ ಶ್ರೀಮಂತವಣಿಗ್ ಸಮುದಾಯವು ಅಥವಾ ರಾಜವಂಶೀಯರು ಧರ್ಮಶಾಲೆ, ಅನ್ನಕ್ಷೇತ್ರ, ಅತಿಥಿಶಾಲೆ, ಅನಾಥಾಲಯ ಮತ್ತು ವಿದ್ಯಾಪೀಠ ಮೊದಲಾದ ನಾನಾ ಬಗೆಯ ಧರ್ಮ ಸಂಸ್ಥೆಗಳನ್ನು ತೆರೆಯುತ್ತಾರೆ. ಬೇರೆ ದೇಶಗಳಲ್ಲಿ ಕೂಡ ಬಡವರಿಗೆ ಉಚಿತವಾಗಿ ಅನ್ನಹಂಚಲು, ಶಿಕ್ಷಣ ನೀಡಲು ಮತ್ತು ವೈದ್ಯಕೀಯ ಉಪಚಾರ ಒದಗಿಸಲು ಅನೇಕ ಆಸ್ಪತ್ರೆಗಳು, ವೃದ್ಧಾಶ್ರಮಗಳು ಮತ್ತು ಇಂಥ ಧರ್ಮಾರ್ಥ ಪ್ರತಿಷ್ಠಾನಗಳಿವೆ. ಈ ಎಲ್ಲ ದಾನರೂಪದ ಕ್ರಿಯೆಗಳು **ದ್ರವ್ಯಮಯ ಯಜ್ಞ** ಎನಿಸಿಕೊಂಡಿವೆ. ಇನ್ನಿತರರು ಜೀವನದಲ್ಲಿ ಅತಿ ಉನ್ನತಿಗಾಗಿ ಅಥವಾ ಬ್ರಹ್ಮಾಂಡದ ಊರ್ಧ್ವ ಲೋಕಗಳಿಗೆ ಉನ್ನತಿ ಹೊಂದಲು,ಸ್ವಇಚ್ಛೆಯಿಂದ ಚಂದ್ರಾಯಣ ಮತ್ತು ಚಾತುರ್ಮಾಸ್ಯ ಮೊದಲಾದ ಕಠೋರ ವ್ರತಗಳನ್ನು ಅಂಗೀಕರಿಸುತ್ತಾರೆ. ಈ ಪ್ರಕ್ರಿಯೆಗಳು ಕೆಲವೊಂದು ಕಟ್ಟುನಿಟ್ಟಾದ ನಿಯಮಾಧಾರದಿಂದ ಜೀವನ ನಡೆಸಲು ಕಠೋರ ವ್ರತಗಳನ್ನು ವಿಧಿಸುತ್ತವೆ. ಉದಾ ಹರಣೆಗೆ, ಚಾತುರ್ಮಾಸ್ಯ ವ್ರತದಲ್ಲಿ. ಸಾಧಕನು ವರ್ಷದಲ್ಲಿ ನಾಲ್ಕು ತಿಂಗಳ ಕಾಲ (ಜುಲೈ ನಿಂದ ಅಕ್ಟೋಬರ್‌ವರೆಗೆ) ಕ್ಷೌರಮಾಡಿಕೊಳ್ಳುವುದಿಲ್ಲ. ಅವನು ಕೆಲವೊಂದು ಆಹಾರ ಗಳನ್ನು ತಿನ್ನುವುದಿಲ್ಲ. ದಿನಕ್ಕೆ ಎರಡು ಸಲ ಊಟಮಾಡುವುದಿಲ್ಲ ಅಥವಾ ಸ್ಥಳ ಬಿಟ್ಟು ಹೋಗುವುದಿಲ್ಲ. ಹೀಗೆ ಜೀವನದ ಸುಖಗಳ ತ್ಯಾಗವನ್ನು **ತಪೋಮಯ ಯಜ್ಞ**ವೆಂದು ಕರೆದಿದೆ. ಪತಂಜಲಿ ಯೋಗ ಪದ್ಧತಿ (ಪರಮನ ಅಸ್ತಿತ್ವದಲ್ಲಿ ಲೀನವಾಗಲು), ಅಥವಾ ಹಠಯೋಗ, ಅಥವಾ ಅಷ್ಟಾಂಗ ಯೋಗ (ವಿಶಿಷ್ಟ ಪರಿಪೂರ್ಣತೆಗಳಿಗಾಗಿ) ಮುಂತಾದ ನಾನಾ ಬಗೆಯ ಯೋಗಪದ್ಧತಿಗಳಲ್ಲಿ ತೊಡಗುವ ಮತ್ತಿತರರೂ ಇದ್ದಾರೆ. ಮತ್ತೆ ಕೆಲ ವರು ಎಲ್ಲ ಪವಿತ್ರ ತೀರ್ಥ ಕ್ಷೇತ್ರಗಳಿಗೂ ಯಾತ್ರೆ ಹೋಗುತ್ತಾರೆ. ಈ ಎಲ್ಲ ಆಚರಣೆ ಗಳನ್ನು **ಯೋಗ ಯಜ್ಞ**, ಎಂದರೆ ಭೌತಿಕ ಜಗತ್ತಿನಲ್ಲಿ ಒಂದು ವಿಶಿಷ್ಟ ರೀತಿಯ ಪರಿ ಪೂರ್ಣತೆಗಾಗಿ ತ್ಯಾಗ ಎಂದು ಕರೆದಿದೆ. ಇನ್ನೂ ಕೆಲವರು ವಿವಿಧ ವೇದ ಸಾಹಿತ್ಯಗಳ, ವಿಶೇಷವಾಗಿ ಉಪನಿಷತ್ತುಗಳ ಮತ್ತು ವೇದಾಂತ ಸೂತ್ರಗಳ ಅಥವಾ ಸಾಂಖ್ಯ ತತ್ತ್ವ ದರ್ಶನದ ಅಧ್ಯಯನದಲ್ಲಿ ತೊಡಗುತ್ತಾರೆ. ಇವುಗಳನ್ನೆಲ್ಲ **ಸ್ವಾಧ್ಯಾಯ ಯಜ್ಞ**, ಅಥವಾ ಅಧ್ಯಯನ ಯಜ್ಞದಲ್ಲಿ ತೊಡಗುವುದೆಂದು ಕರೆದಿದೆ. ಈ ಎಲ್ಲ ಯೋಗಿಗಳು ವಿವಿಧ ಯಜ್ಞಗಳಲ್ಲಿ ಶ್ರದ್ಧಾಪೂರ್ವಕ ತೊಡಗಿ ಜೀವನದ ಉತ್ತಮ ಸ್ಥಿತಿಯನ್ನು ಅರಸು ತ್ತಿದ್ದಾರೆ. ಆದರೆ ಕೃಷ್ಣ ಪ್ರಜ್ಞೆಯು ಭಗವಂತನ ನೇರ ಸೇವೆಯಾಗಿರುವುದರಿಂದ ಅದು ಇವುಗಳೆಲ್ಲದರಿಂದಲೂ ಭಿನ್ನ. ಕೃಷ್ಣ ಪ್ರಜ್ಞೆಯನ್ನು ಮೇಲೆ ಹೇಳಿದ ಯಾವುದೇ ವಿಧ ವಾದ ಯಜ್ಞದಿಂದ ಗಳಿಸಿಕೊಳ್ಳುವುದು ಸಾಧ್ಯವಿಲ್ಲ. ಆದರೆ ಅದನ್ನು ಭಗವಂತನ ಮತ್ತು ಅವನ ನಿಜ ಭಕ್ತರ ಅನುಗ್ರಹದಿಂದ ಮಾತ್ರ ಗಳಿಸಿಕೊಳ್ಳಬಹುದು. ಆದ್ದರಿಂದ ಕೃಷ್ಣ ಪ್ರಜ್ಞೆಯು ದಿವ್ಯವಾದುದು.

**ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಪರೇ ।**
**ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರಾಯಣಾಃ ।**
**ಅಪರೇ ನಿಯತಾಹಾರಾಃ ಪ್ರಾಣಾನ್ ಪ್ರಾಣೇಷು ಜುಹ್ವತಿ ॥ ೨೯ ॥**

ಅಪಾನೇ—ಕೆಳಗೆ ಹೋಗುವ ವಾಯುವಿನಲ್ಲಿ, ಜುಹ್ವತಿ—ಅರ್ಪಿಸುತ್ತಾರೆ, ಪ್ರಾಣಮ್—ಬಾಹ್ಯವಾಗಿ ವರ್ತಿಸುವ ವಾಯುವನ್ನು, ಪ್ರಾಣೇ—ಹೊರಗೆ ಹೋಗುವ ವಾಯುವಿನಲ್ಲಿ, ಅಪಾನಮ್—ಕೆಳಗೆ ಹೋಗುವ ವಾಯುವನ್ನು. ತಥಾ—ಅದರಂತೆ, ಅಪರೇ—ಇತರರು, ಪ್ರಾಣ—ಹೊರಗೆ ಹೋಗುವ ವಾಯುವನ್ನು, ಅಪಾನ—ಮತ್ತು ಕೆಳಗೆ ಹೋಗುವ ವಾಯುವನ್ನು. ಗತೀ—ಚಲನೆಯನ್ನು, ರುದ್ಧ್ವಾ—ತಡೆದು, ಪ್ರಾಣ-ಆಯಾಮ—ಎಲ್ಲ ಶ್ವಾಸ ನಿರೋಧದಿಂದ ಉಂಟಾಗುವ ಸಮಾಧಿಯನ್ನು, ಪರಾಯಣಾಃ—ಹಾಗೆ ಮನಸ್ಸಿರುವವರು, ಅಪರೇ—ಇತರರು, ನಿಯತ—ನಿಗ್ರಹಿಸಿ, ಆಹಾರಾಃ—ತಿನ್ನುವುದನ್ನು, ಪ್ರಾಣಾನ್—ಹೊರಗೆ ಹೋಗುವ ವಾಯುವನ್ನು, ಪ್ರಾಣೇಷು—ಹೊರಗೆ ಹೋಗುವ ವಾಯುವಿನಲ್ಲಿ, ಜುಹ್ವತಿ—ಅರ್ಪಿಸುತ್ತಾರೆ.

**ಶ್ವಾಸ ನಿರೋಧದ ಸಮಾಧಿ ಸ್ಥಿತಿಯಲ್ಲಿರಲು ಪ್ರಕ್ರಿಯೆಯನ್ನು ಬಯಸುವ ಇನ್ನುಕೆಲವರು, ಹೊರಬಿಡುವ ಶ್ವಾಸ ಚಲನೆಯನ್ನು ಒಳ ಬರುವ ಶ್ವಾಸದಲ್ಲಿ ಮತ್ತು ಒಳ ಬರುವ ಶ್ವಾಸವನ್ನು ಹೊರಹೋಗುವ ಶ್ವಾಸದಲ್ಲಿ ಅರ್ಪಿಸುವುದರಿಂದ ಅಭ್ಯಾಸ ಮಾಡಿ, ಕೊನೆಗೆ ಎಲ್ಲ ಶ್ವಾಸೋಚ್ಛ್ವಾಸವನ್ನು ನಿಲ್ಲಿಸಿ, ಸಮಾಧಿ ಸ್ಥಿತಿಯಲ್ಲಿ ನೆಲೆನಿಲ್ಲುತ್ತಾರೆ. ಇತರರು ತಿನ್ನುವ ಪ್ರಕ್ರಿಯೆಯನ್ನು ನಿಗ್ರಹಿಸಿ, ಹೊರ ಹೋಗುವ ಶ್ವಾಸವನ್ನು ಅದರಲ್ಲಿಯೇ ಯಜ್ಞವಾಗಿ ಸಮರ್ಪಿಸುತ್ತಾರೆ.**

**ಭಾವಾರ್ಥ :** ಉಸಿರಾಟದ ಪ್ರಕ್ರಿಯೆಯನ್ನು ನಿಯಂತ್ರಿಸುವ ಈ ಯೋಗ ಪದ್ಧತಿಯನ್ನು **ಪ್ರಾಣಾಯಾಮ** ಎಂದು ಕರೆದಿದೆ. ಪ್ರಾರಂಭದಲ್ಲಿ ಇದನ್ನು ನಾನಾ ಬಗೆಯ ಕುಳಿತುಕೊಳ್ಳುವ ಭಂಗಿಗಳ ಮೂಲಕ **ಹಠಯೋಗ** ಪದ್ಧತಿಯಲ್ಲಿ ಅಭ್ಯಾಸ ಮಾಡಲಾಗುತ್ತದೆ. ಈ ಎಲ್ಲ ಪ್ರಕ್ರಿಯೆಗಳು ಇಂದ್ರಿಯ ನಿಗ್ರಹ ಮತ್ತು ಅಧ್ಯಾತ್ಮ ಸಾಕ್ಷಾತ್ಕಾರದ ಪ್ರಗತಿಗಾಗಿ ಹೇಳಲ್ಪಟ್ಟಿವೆ. ಈ ಪದ್ಧತಿಯು ದೇಹಗತ ವಾಯುಗಳ ಗತಿಯ ಮಾರ್ಗಗಳನ್ನು ಹಿಂದು ಮುಂದಾಗಿಸುವಂತೆ ಅವುಗಳನ್ನು ನಿಗ್ರಹಿಸುವ ಪ್ರಕ್ರಿಯೆಯನ್ನು ಒಳಗೊಂಡಿದೆ. **ಅಪಾನ** ವಾಯು ಕೆಳಗೆ ಹೋಗುತ್ತದೆ, ಮತ್ತು **ಪ್ರಾಣ** ವಾಯು ಮೇಲೆ ಹೋಗುತ್ತದೆ. **ಪ್ರಾಣಾಯಾಮ ಯೋಗಿ**ಯು ವಾಯು ಚಲನೆಯು **ಪೂರಕ** ಅಥವಾ ಸಮತ್ವದಲ್ಲಿ ತಟಸ್ಥಗೊಳ್ಳುವವರೆಗೆ ಉಸಿರಾಟವನ್ನು ವಿರುದ್ಧ ಗತಿಯಲ್ಲಿ ಅಭ್ಯಾಸ ಮಾಡುತ್ತಾನೆ. ಹೊರಗೆ ಬಿಟ್ಟ ಉಸಿರನ್ನು ಒಳಗೆ ತೆಗೆದುಕೊಳ್ಳುವ ಉಸಿರಿನಲ್ಲಿ ಅರ್ಪಿಸುವುದನ್ನು **ರೇಚಕ** ಎಂದು ಕರೆದಿದೆ. ಈ ಉಭಯ ಶ್ವಾಸ ಚಲನೆಗಳು ಸಂಪೂರ್ಣವಾಗಿ ನಿಂತಾಗ, ಒಬ್ಬನು **ಕುಂಭಕ ಯೋಗ**ದಲ್ಲಿ ಇದ್ದಾನೆ ಎಂದು ಹೇಳಲಾಗಿದೆ. ಕುಂಭಕ ಯೋಗಾಭ್ಯಾಸದಿಂದ ಒಬ್ಬನು ಅಧ್ಯಾತ್ಮ ಸಾಕ್ಷಾತ್ಕಾರದಲ್ಲಿ ಪರಿಪೂರ್ಣತೆಗಾಗಿ ಆಯುರ್ಮಾನವನ್ನು ಹೆಚ್ಚಿಸಿಕೊಳ್ಳಬಹುದು. ಬುದ್ಧಿವಂತ ಯೋಗಿಯು ಮತ್ತೊಂದು ಜನ್ಮಕ್ಕಾಗಿ ಕಾಯದೇ ಒಂದೇ ಜನ್ಮದಲ್ಲಿ ಪರಿಪೂರ್ಣತೆ ಸಾಧಿಸಲು ಆಸಕ್ತನು. ಕುಂಭಕ ಯೋಗಾಭ್ಯಾಸದಿಂದ ಯೋಗಿಗಳು ತಮ್ಮ ಆಯುಷ್ಯವನ್ನು ಅನೇಕಾನೇಕ ವರ್ಷಗಳವರೆಗೆ ಹೆಚ್ಚಿಸಿಕೊಳ್ಳುತ್ತಾರೆ. ಆದರೆ ಕೃಷ್ಣ ಪ್ರಜ್ಞೆಯು ಭಗವಂತನ ದಿವ್ಯ ಪ್ರೀತಿಯುತ ಸೇವೆ

ಯಲ್ಲಿ ಸದಾ ಸ್ಥಿತನಾಗಿದ್ದು, ತಾನಾಗಿಯೇ ಇಂದ್ರಿಯ ನಿಯಂತ್ರಕನಾಗುತ್ತಾನೆ. ಅವನ ಇಂದ್ರಿಯಗಳು ಸದಾ ಕೃಷ್ಣ ಸೇವೆಯಲ್ಲಿ ತೊಡಗಿರುವುದರಿಂದ, ಅವು ಅನ್ಯಥಾ ತೊಡಗುವ ಅವಕಾಶವಿಲ್ಲ. ಅವನು ಜೀವನದ ಕೊನೆಗೆ ಸಹಜವಾಗಿಯೇ ಶ್ರೀಕೃಷ್ಣನ ದಿವ್ಯ ವೇದಿಕೆಗೆ ವರ್ಗವಾಗುತ್ತಾನೆ. ಅದರ ಪರಿಣಾಮವಾಗಿ, ಅವನು ತನ್ನ ಆಯುಷ್ಯವನ್ನು ಹೆಚ್ಚಿಸಿ ಕೊಳ್ಳಲು ಪ್ರಯತ್ನಿಸುವುದಿಲ್ಲ. ಭಗವದ್ಗೀತೆಯಲ್ಲಿ (14-26) ಹೇಳಿದಂತೆ, ಅವನು ಕೂಡಲೇ ವಿಮೋಚನೆಯ ವೇದಿಕೆಗೆ ಏರಿಸಲ್ಪಡುತ್ತಾನೆ:

ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ।
ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ॥

"ಭಗವಂತನ ಅಮಿಶ್ರ ಭಕ್ತಿಯುತ ಸೇವೆಯಲ್ಲಿ ತೊಡಗಿರುವವನು ಭೌತಿಕ ಪ್ರಕೃತಿ ಗುಣಗಳನ್ನು ದಾಟುವನು ಮತ್ತು ಕೂಡಲೇ ಅಧ್ಯಾತ್ಮ ವೇದಿಕೆಗೆ ಏರಿಸಲ್ಪಡುವನು." ಕೃಷ್ಣ ಪ್ರಜ್ಞೆಯು ದಿವ್ಯ ಹಂತದಿಂದ ಪ್ರಾರಂಭಿಸುವವನು ಮತ್ತು ಅವನು ಸತತವಾಗಿ ಆ ಪ್ರಜ್ಞೆಯಲ್ಲಿ ಸ್ಥಿತನು. ಆದ್ದರಿಂದ ಅವನಿಗೆ ಪತನವಿಲ್ಲ, ಮತ್ತು ಅಂತಿಮವಾಗಿ ವಿಲಂಬವಿಲ್ಲದೆ ಭಗವದ್ಧಾಮವನ್ನು ಪ್ರವೇಶಿಸುತ್ತಾನೆ. ಒಬ್ಬನು ಕೃಷ್ಣಪ್ರಸಾದ ಅಥವಾ ಪ್ರಥಮವಾಗಿ ಭಗವದರ್ಪಿತ ಆಹಾರವನ್ನು ಮಾತ್ರ ಸೇವಿಸಿದಾಗ, ಸಹಜವಾಗಿಯೇ ಮಿತ ಭೋಜನದ ಅಭ್ಯಾಸವಾಗುತ್ತದೆ. ಇಂದ್ರಿಯ ನಿಗ್ರಹ ವಿಚಾರದಲ್ಲಿ ಮಿತಾಹಾರ ಸೇವನೆಯ ಕ್ರಮವು ಬಹು ಸಹಾಯಕ. ಇಂದ್ರಿಯ ನಿಗ್ರಹವಿಲ್ಲದೆ ಭೌತಿಕ ತೊಡಕಿನಿಂದ ಪಾರಾಗುವ ಸಾಧ್ಯತೆ ಇಲ್ಲ.

**ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ ।**
**ಯಜ್ಞಶಿಷ್ಟಾಮೃತಭುಜೋ ಯಾನ್ತಿ ಬ್ರಹ್ಮ ಸನಾತನಮ್ ॥ ೩೦ ॥**

ಸರ್ವೇ—ಎಲ್ಲರು, ಅಪಿ—ನೋಡಲು ಭಿನ್ನವಾಗಿದ್ದರೂ, ಏತೇ—ಇವರು, ಯಜ್ಞವಿದಾಃ—ಯಜ್ಞಾಚರಣೆಯ ಉದ್ದೇಶವನ್ನು ಅರಿತವರು, ಯಜ್ಞಕ್ಷಪಿತ—ಅಂಥ ಯಜ್ಞಾಚರಣೆಗಳಿಂದ ಶುದ್ಧರಾಗಿ, ಕಲ್ಮಷಾಃ—ಪಾಪಪೂರ್ಣ ಪ್ರತಿಕ್ರಿಯೆಗಳಿಂದ, ಯಜ್ಞ ಶಿಷ್ಟ—ಅಂಥ ಯಜ್ಞಾಚರಣೆಗಳ ಫಲ, ಅಮೃತ ಭುಜಃ—ಇಂಥ ಅಮೃತವನ್ನು ಸವಿದವರು, ಯಾನ್ತಿ—ಖಂಡಿತ ಸೇರುವರು, ಬ್ರಹ್ಮ—ಪರಮ, ಸನಾತನಮ್—ಶಾಶ್ವತ ವಾತಾವರಣವನ್ನು.

**ಯಜ್ಞದ ಅರ್ಥವನ್ನು ತಿಳಿದುಕೊಂಡಿರುವ ಈ ಯಜ್ಞಕರ್ತೃಗಳೆಲ್ಲರೂ ಪಾಪಪೂರ್ಣ ಪ್ರತಿಕ್ರಿಯೆಗಳಿಂದ ಶುದ್ಧರಾಗಿರುತ್ತಾರೆ, ಮತ್ತು ಯಜ್ಞ ಫಲಗಳ ಅಮೃತವನ್ನು ಸವಿದು ಅವರು ಪರಮ ಶಾಶ್ವತ ವಾತಾವರಣದ ಕಡೆಗೆ ಸಾಗುತ್ತಾರೆ.**

**ಭಾವಾರ್ಥ :** ಹಿಂದಿನ ನಾನಾ ಬಗೆಯ ಯಜ್ಞಗಳ ವಿವರಣೆಯಿಂದ (ಎಂದರೆ ಒಬ್ಬನ ವಸ್ತುಗಳ ತ್ಯಾಗ, ವೇದಗಳು ಅಥವಾ ತಾತ್ವಿಕ ಸೂತ್ರಗಳ ಅಧ್ಯಯನ, ಮತ್ತು ಯೋಗ ಪದ್ಧತಿಯ ಆಚರಣೆ), ಎಲ್ಲದರ ಸಾಮಾನ್ಯ ಗುರಿಯು ಇಂದ್ರಿಯ ನಿಗ್ರಹವೇ ಎಂದು

ಕಂಡುಬಂದಿದೆ. ಇಂದ್ರಿಯ ತೋಷಣವೇ ಭೌತಿಕ ಅಸ್ತಿತ್ವದ ಮೂಲಕಾರಣ. ಆದ್ದರಿಂದ ಒಬ್ಬನು ಇಂದ್ರಿಯ ತೋಷಣೆಯಿಂದ ಬೇರೆಯಾದ ವೇದಿಕೆಯ ಮೇಲೆ ಸನ್ನಿವೇಶಿತನಾಗದ ಹೊರತು ಪೂರ್ಣಜ್ಞಾನ ಪೂರ್ಣಾನಂದ ಮತ್ತು ಪೂರ್ಣಜೀವನದ ಶಾಶ್ವತ ವೇದಿಕೆಗೆ ಏರುವ ಅವಕಾಶವಿಲ್ಲ. ಇಂಥ ವೇದಿಕೆಯು ಶಾಶ್ವತ ವಾತಾವರಣ ಅಥವಾ ಬ್ರಹ್ಮನ್ ವಾತಾವರಣದಲ್ಲಿದೆ. ಮೇಲೆ ಹೇಳಿದ ಎಲ್ಲ ಯಜ್ಞಗಳು ಒಬ್ಬನು ಭೌತಿಕ ಅಸ್ತಿತ್ವದ ಪಾಪ ಪೂರ್ಣ ಪ್ರತಿಕ್ರಿಯೆಗಳಿಂದ ಶುದ್ಧನಾಗಲು ಸಹಾಯ ಮಾಡುತ್ತವೆ. ಜೀವನದಲ್ಲಿ ಈ ಪ್ರಗತಿಯಿಂದ, ಒಬ್ಬನು ಇಹ ಜೀವನದಲ್ಲಿ ಆನಂದ ಮತ್ತು ಸಂಪತ್ತನ್ನು ಹೊಂದುವುದಲ್ಲದೆ, ಕೊನೆಯಲ್ಲಿ ವ್ಯಕ್ತಿ ಶೂನ್ಯ ಬ್ರಹ್ಮನಲ್ಲಿ ಲೀನವಾಗುವುದರಿಂದ ಅಥವಾ ಪರಮ ದೇವೋತ್ತಮ ಪುರುಷ ಕೃಷ್ಣನ ಸಹವಾಸ ಮಾಡುವುದರಿಂದ ಶಾಶ್ವತ ಭಗವದ್ಧಾಮವನ್ನು ಪ್ರವೇಶಿಸುತ್ತಾನೆ.

**ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ॥ ೩೧ ॥**

ನ—ಎಂದಿಗೂ ಇಲ್ಲ, ಅಯಮ್—ಈ, ಲೋಕಃ—ಲೋಕವು, ಅಸ್ತಿ—ಇರುವುದು, ಅಯಜ್ಞಸ್ಯ—ಯಜ್ಞವನ್ನು ಆಚರಿಸದವನಿಗೆ, ಕುತಃ—ಎಲ್ಲಿರುವುದು, ಅನ್ಯಃ—ಇತರ, ಕುರುಸತ್ತಮ—ಓ ಕುರು ಶ್ರೇಷ್ಠನೇ.

**ಹೇ ಕುರು ಕುಲ ಶ್ರೇಷ್ಠನೇ, ಯಜ್ಞ ಮಾಡದೆ ಒಬ್ಬನು ಈ ಲೋಕದಲ್ಲಿ ಅಥವಾ ಇಹ ಜೀವನದಲ್ಲಿ ಸುಖಿಯಾಗಲಾರನು. ಹಾಗಿರಲು ಮುಂದಿನದೇನು ?**

**ಭಾವಾರ್ಥ:**—ಒಬ್ಬನು ಭೌತಿಕ ಅಸ್ತಿತ್ವದ ಯಾವ ರೂಪದಲ್ಲಿಯೇ ಇದ್ದರೂ, ಅವನು ತನ್ನ ನಿಜಸ್ಥಿತಿಯ ಬಗ್ಗೆ ಖಂಡಿತ ಅಜ್ಞಾನಿಯಾಗಿರುತ್ತಾನೆ. ಅರ್ಥಾತ್, ಭೌತಿಕ ಜಗತ್ತಿನ ಅಸ್ತಿತ್ವಕ್ಕೆ ನಮ್ಮ ಪಾಪಪೂರ್ಣ ಜೀವನದ ವಿಪುಲ ಪ್ರತಿಕ್ರಿಯೆಗಳೇ ಕಾರಣ. ಅಜ್ಞಾನವು ಪಾಪ ಜೀವನಕ್ಕೆ ಕಾರಣ, ಮತ್ತು ಪಾಪ ಜೀವನವೇ ಭೌತಿಕ ಅಸ್ತಿತ್ವದಲ್ಲಿ ಒಬ್ಬನ ಬಹುಕಾಲ ಮುಂದುವರಿಕೆಗೆ ಕಾರಣ. ಈ ಬಂಧನದಿಂದ ಪಾರಾಗಲು ಮಾನವ ಜನ್ಮವು ಏಕೈಕ ಅವಕಾಶ. ಆದ್ದರಿಂದ ನಮಗೆ ಪಾರಾಗಲು ಅವಕಾಶವೊಂದನ್ನು ನೀಡಲು ವೇದಗಳು ಧರ್ಮ, ಅರ್ಥ, ನಿಯಂತ್ರಿತ ಇಂದ್ರಿಯ ತೋಷಣೆಯ ಪಥಗಳನ್ನು, ಮತ್ತು ಕೊನೆಗೆ ಕ್ಲೇಶಸ್ಥಿತಿಯಿಂದ ಸಂಪೂರ್ಣವಾಗಿ ಪಾರಾಗಲು ಉಪಾಯವನ್ನು ನಿರ್ದೇಶಿಸುತ್ತವೆ. ಧರ್ಮ ಮಾರ್ಗ, ಅಥವಾ ಮೇಲೆ ಹೇಳಿದಂತೆ ನಾನಾ ಬಗೆಯ ಯಜ್ಞಗಳು ನಮ್ಮ ಆರ್ಥಿಕ ಸಮಸ್ಯೆಗಳನ್ನು ತಾವಾಗಿಯೇ ಪರಿಹರಿಸುತ್ತವೆ. ಜನಸಂಖ್ಯೆಯ ಏರಿಕೆ ಎಂಬುದಿದ್ದರೂ, ಯಜ್ಞಾಚರಣೆಯಿಂದ ನಾವು ಸಾಕಷ್ಟು ಆಹಾರ, ಸಾಕಷ್ಟು ಹಾಲು, ಇತ್ಯಾದಿ ಪಡೆಯಬಹುದು. ದೇಹಕ್ಕೆ ಪೂರ್ಣವಾಗಿ ಒದಗಿಸಿದಾಗ, ಸಹಜವಾಗಿಯೇ ಮುಂದಿನ ಹಂತವು ಇಂದ್ರಿಯಗಳ ತೋಷಣೆ. ಆದ್ದರಿಂದ ವೇದಗಳು ಸಂಯಮ ಇಂದ್ರಿಯ ತೋಷಣೆಗಾಗಿ ಪವಿತ್ರ ವಿವಾಹವನ್ನು ವಿಧಿಸಿವೆ. ಅದರಿಂದ ಒಬ್ಬನು ಭೌತಿಕ ಬಂಧನದಿಂದ ವಿಮೋಚನೆಯ ವೇದಿಕೆಗೆ ಕ್ರಮೇಣ ಮೇಲೇರುತ್ತಾನೆ, ಮತ್ತು ಪರಮ

ಪ್ರಭುವಿನೊಂದಿಗೆ ಸಹವಾಸವೇ ವಿಮೋಚಿತ ಜೀವನದ ಅತ್ಯುನ್ನತ ಪರಿಪೂರ್ಣತೆ. ಮೇಲೆ ವಿವರಿಸಿದಂತೆ ಯಜ್ಞಾಚರಣೆಯಿಂದ ಒಬ್ಬನು ಪರಿಪೂರ್ಣತೆಯನ್ನು ಪಡೆಯ ಬಹುದು. ಈಗ ಒಬ್ಬನು ವೇದಾನುಸಾರ ಯಜ್ಞಾಚರಣೆಗೆ ಗಮನ ನೀಡದಿದ್ದರೆ ಇತರ ಲೋಕದಲ್ಲಿ ಮತ್ತೊಂದು ದೇಹದ ಮಾತಂತೂ ಇರಲಿ, ಈ ದೇಹದಲ್ಲಿಯೂ ಅವನು ಸುಖ ಜೀವನವನ್ನು ಹೇಗೆ ನಿರೀಕ್ಷಿಸಬಹುದು ? ವಿವಿಧ ಸ್ವರ್ಗಲೋಕಗಳಲ್ಲಿ ವಿವಿಧ ದರ್ಜೆಗಳ ಭೌತಿಕ ಸುಖಗಳಿವೆ, ಮತ್ತು ಈ ಎಲ್ಲ ಸಂದರ್ಭಗಳಲ್ಲಿಯೂ ನಾನಾ ಬಗೆಯ ಯಜ್ಞಗಳಲ್ಲಿ ತೊಡಗಿರುವವರಿಗೆ ಅಪಾರ ಸುಖ ಇದೆ. ಆದರೆ ಕೃಷ್ಣಪ್ರಜ್ಞೆಯ ಆಚರಣೆಯಿಂದ ಅಧ್ಯಾತ್ಮ ಲೋಕಕ್ಕೆ ಉನ್ನತಿಸುವುದು ಒಬ್ಬನು ಗಳಿಸಬಹುದಾದ ಅತ್ಯುನ್ನತ ಬಗೆಯ ಸುಖ. ಆದ್ದರಿಂದ ಕೃಷ್ಣಪ್ರಜ್ಞಾ ಜೀವನವೇ ಭೌತಿಕ ಅಸ್ತಿತ್ವದ ಸರ್ವಸಮಸ್ಯೆಗಳಿಗೆ ಪರಿಹಾರ.

**ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ ।**
**ಕರ್ಮಜಾನ್ ವಿದ್ಧಿ ತಾನ್ ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥ ೩೨ ॥**

ಏವಮ್—ಹೀಗೆ, ಬಹುವಿಧಾಃ—ವಿವಿಧ ಬಗೆಯ, ಯಜ್ಞಾಃ—ಯಜ್ಞಗಳು, ವಿತತಾಃ—ಹರಡಿವೆ, ಬ್ರಹ್ಮಣಃ—ವೇದಗಳ, ಮುಖತಃ—ಬಾಯಿ ಮೂಲಕ, ಕರ್ಮ ಜಾನ್—ಕರ್ಮಜನ್ಯ, ವಿದ್ಧಿ—ನೀನು ತಿಳಿದುಕೊಳ್ಳಬೇಕು, ತಾನ್—ಅವುಗಳನ್ನು, ಸರ್ವಾನ್—ಎಲ್ಲವನ್ನು, ಏವಮ್—ಹೀಗೆ, ಜ್ಞಾತ್ವಾ—ತಿಳಿದು, ವಿಮೋಕ್ಷ್ಯಸೇ— ನೀನು ಮುಕ್ತನಾಗುವೆ.

**ಈ ನಾನಾ ಬಗೆಯ ಯಜ್ಞಗಳು ವೇದ ಸಮ್ಮತ, ಮತ್ತು ಇವು ನಾನಾ ಬಗೆಯ ಕರ್ಮಜನ್ಯ. ಇದನ್ನು ಹಾಗೆ ತಿಳಿದು, ನೀನು ಮುಕ್ತನಾಗುವೆ.**

**ಭಾವಾರ್ಥ:**—ಮೇಲೆ ಚರ್ಚಿಸಲ್ಪಟ್ಟ ನಾನಾ ಬಗೆಯ ಯಜ್ಞಗಳು ಬೇರೆ ಬೇರೆ ಕರ್ಮನಿರತನಿಗೆ ಅನುಕೂಲವಾಗುವಂತೆ ವೇದಗಳಲ್ಲಿ ಹೇಳಲ್ಪಟ್ಟಿವೆ. ಮಾನವರು ದೈಹಿಕ ಕಲ್ಪನೆಯಲ್ಲಿ ಗಾಢವಾಗಿ ತಲ್ಲೀನರಾಗಿರುವುದರಿಂದ, ಈ ಯಜ್ಞಗಳನ್ನು ದೇಹದಿಂದ ಅಥವಾ ಮನಸ್ಸಿನಿಂದ, ಅಥವಾ ಬುದ್ಧಿಯಿಂದ ಒಬ್ಬನು ಆಚರಿಸಲಾಗುವಂತೆ ವ್ಯವಸ್ಥೆಗೊಳಿಸಿದೆ. ಆದರೆ ಕೊನೆಗೆ ದೇಹದಿಂದ ವಿಮೋಚನೆಯನ್ನು ಹೊಂದಲು ಅವೆಲ್ಲವುಗಳನ್ನು ಹೇಳಿದೆ. ಇದು ಸ್ವಯಂ ಭಗವನ್ಮುಖದಿಂದಲೇ ಇಲ್ಲಿ ದೃಢಪಟ್ಟಿದೆ.

**ಶ್ರೇಯಾನ್ ದ್ರವ್ಯಮಯಾದ್ ಯಜ್ಞಾಜ್ ಜ್ಞಾನಯಜ್ಞಃ ಪರನ್ತಪ ।**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥ ೩೩ ॥**

ಶ್ರೇಯಾನ್—ಮೇಲಾದುದು, ದ್ರವ್ಯಮಯಾತ್—ಭೌತಿಕ ವಸ್ತುಗಳ, ಯಜ್ಞಾತ್—ತ್ಯಾಗಕ್ಕಿಂತ, ಜ್ಞಾನಯಜ್ಞಃ—ಜ್ಞಾನದಲ್ಲಿನ ಯಜ್ಞವು, ಪರನ್ತಪ—ಹೇ ವೈರಿಮರ್ದನನೇ, ಸರ್ವಮ್—ಎಲ್ಲ, ಕರ್ಮ—ಚಟುವಟಿಕೆಗಳು, ಅಖಿಲಮ್—ಸಮಗ್ರತೆಯಲ್ಲಿ, ಪಾರ್ಥ—ಹೇ ಪೃಥಾ ಪುತ್ರನೇ, ಜ್ಞಾನೇ—ಜ್ಞಾನದಲ್ಲಿ, ಪರಿಸಮಾಪ್ಯತೇ—ಕೊನೆಗೊಳ್ಳುತ್ತವೆ.

**ಹೇ ವೈರಿಮರ್ದನನೇ, ಜ್ಞಾನದಲ್ಲಿ ಆಚರಿಸಿದ ಯಜ್ಞವು ಭೌತಿಕ ವಸ್ತುಗಳ ಕೇವಲ ತ್ಯಾಗಕ್ಕಿಂತ ಮೇಲಾದುದು. ಹೇ ಪೃಥಾ ಪುತ್ರನೇ, ಎಷ್ಟಾದರೂ ಸಕಲ ಯಜ್ಞ ಕಾರ್ಯಗಳು ದಿವ್ಯ ಜ್ಞಾನದಲ್ಲಿ ಉಚ್ಛ್ರಾಯ ಹೊಂದುತ್ತವೆ.**

**ಭಾವಾರ್ಥ:**—ಪೂರ್ಣ ಜ್ಞಾನಸ್ಥಾನಕ್ಕೆ ಬರುವುದು, ಆಮೇಲೆ ಭೌತಿಕ ಕ್ಲೇಶಗಳಿಂದ ಬಿಡುಗಡೆ ಹೊಂದುವುದು ಮತ್ತು ಅಂತಿಮವಾಗಿ ಪರಮ ಪ್ರಭುವಿನ ದಿವ್ಯ ಪ್ರೇಮಯುತಸೇವೆಯಲ್ಲಿ ತೊಡಗುವುದು (ಕೃಷ್ಣ ಪ್ರಜ್ಞೆ) ಇದೇ ಎಲ್ಲ ಯಜ್ಞಗಳ ಉದ್ದೇಶ. ಆದರೂ ಯಜ್ಞದ ಈ ಎಲ್ಲ ವಿವಿಧ ಚಟುವಟಿಕೆಗಳ ವಿಷಯವು ರಹಸ್ಯವಾದುದು, ಮತ್ತು ಒಬ್ಬನು ಈ ರಹಸ್ಯವನ್ನು ಅರಿಯಬೇಕು. ಯಜ್ಞಗಳು ಯಜ್ಞಕರ್ತೃವಿನ ವಿಶಿಷ್ಟ ಶ್ರದ್ಧೆಗನುಗುಣವಾಗಿ ಬೇರೆ ಬೇರೆ ರೂಪಗಳನ್ನು ತೆಗೆದುಕೊಳ್ಳುತ್ತವೆ. ಒಬ್ಬನ ಶ್ರದ್ಧೆಯು ದಿವ್ಯಜ್ಞಾನದ ಮಟ್ಟವನ್ನು ತಲುಪಿದಾಗ, ಯಜ್ಞಕರ್ತೃವನ್ನು ಅಂಥ ಜ್ಞಾನರಹಿತನಾಗಿ ಭೌತಿಕ ವಸ್ತುಗಳನ್ನು ಕೇವಲ ತ್ಯಾಗಮಾಡುವವನಿಗಿಂತ ಹೆಚ್ಚು ಪ್ರಗತಿಪರನೆಂದು ಪರಿಗಣಿಸಬೇಕು. ಏಕೆಂದರೆ, ಜ್ಞಾನಪ್ರಾಪ್ತಿಯಿಲ್ಲದೆ ಯಜ್ಞಗಳು ಆಧ್ಯಾತ್ಮಿಕ ಲಾಭವನ್ನು ಅನುಗ್ರಹಿಸದೆ, ಭೌತಿಕ ಮಟ್ಟದಲ್ಲಿಯೇ ಉಳಿಯುತ್ತವೆ. ನಿಜವಾದ ಜ್ಞಾನವು ದಿವ್ಯಜ್ಞಾನದ ಅತ್ಯುನ್ನತ ಹಂತವಾದ ಕೃಷ್ಣ ಪ್ರಜ್ಞೆಯಲ್ಲಿ ಉಚ್ಛ್ರಾಯವಾಗುತ್ತದೆ. ಜ್ಞಾನದ ಔನ್ನತ್ಯವಿಲ್ಲದೆ, ಯಜ್ಞಗಳು ಕೇವಲ ಭೌತಿಕ ಚಟುವಟಿಕೆಗಳು. ಆದರೆ, ಅವುಗಳನ್ನು ದಿವ್ಯಜ್ಞಾನದ ಮಟ್ಟಕ್ಕೇರಿಸಿದಾಗ ಅಂಥ ಚಟುವಟಿಕೆಗಳು ಆಧ್ಯಾತ್ಮಿಕ ವೇದಿಕೆಯನ್ನು ಪ್ರವೇಶಿಸುತ್ತವೆ. ಪ್ರಜ್ಞೆಯಲ್ಲಿನ ವ್ಯತ್ಯಾಸಗಳನ್ನು ಅವಲಂಬಿಸಿ ಯಜ್ಞಾಚರಣೆಗಳು ಕೆಲವು ಸಲ **ಕರ್ಮ ಕಾಂಡ** (ಕಾಮ್ಯ ಕರ್ಮಗಳು) ಮತ್ತು ಕೆಲವು ಸಲ **ಜ್ಞಾನ ಕಾಂಡ** (ಸತ್ಯಾನ್ವೇಷಣೆಯ ಜ್ಞಾನ) ಎಂದು ಕರೆಯಲ್ಪಟ್ಟಿವೆ. ಗುರಿಯು ಜ್ಞಾನವಾಗಿರುವುದೇ ಮೇಲು.

**ತದ್ ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**
**ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥ ೩೪ ॥**

ತತ್—ವಿವಿಧ ಯಜ್ಞಗಳ ಆ ಜ್ಞಾನವನ್ನು, ವಿದ್ಧಿ—ಅರಿಯಲು ಪ್ರಯತ್ನಿಸು, ಪ್ರಣಿಪಾತೇನ—ಗುರುಗಳ ಬಳಿಗೆ ಹೋಗಿ, ಪರಿಪ್ರಶ್ನೇನ—ವಿನಯಪೂರ್ವಕ ವಿಚಾರಣೆಗಳಿಂದ, ಸೇವಯಾ—ಸೇವೆ ಸಲ್ಲಿಸುವುದರಿಂದ, ಉಪದೇಕ್ಷ್ಯಂತಿ—ಅವರು ದೀಕ್ಷೆ ನೀಡುವರು, ತೇ—ನಿನಗೆ, ಜ್ಞಾನಮ್—ಜ್ಞಾನದಲ್ಲಿ, ಜ್ಞಾನಿನಃ—ಆತ್ಮ ಸಾಕ್ಷಾತ್ಕಾರಿಗಳು, ತತ್ತ್ವ—ತತ್ತ್ವದ, ದರ್ಶಿನಃ—ದರ್ಶಿಗಳು.

**ಗುರುಗಳ ಬಳಿಗೆ ಹೋಗಿ ಸತ್ಯವನ್ನು ತಿಳಿಯಲು ಯತ್ನಿಸು. ವಿನಯ ಪೂರ್ವಕವಾಗಿ ಅವರನ್ನು ಪ್ರಶ್ನಿಸು ಮತ್ತು ಅವರಿಗೆ ಸೇವೆಯನ್ನು ಸಲ್ಲಿಸು. ಆತ್ಮ ಸಾಕ್ಷಾತ್ಕಾರಿಗಳು ತತ್ತ್ವದರ್ಶಿಗಳಾಗಿರುವುದರಿಂದ, ನಿನಗೆ ಜ್ಞಾನ ನೀಡಬಲ್ಲರು.**

**ಭಾವಾರ್ಥ :** ಆಧ್ಯಾತ್ಮಿಕ ಸಾಕ್ಷಾತ್ಕಾರ ಮಾರ್ಗವು ನಿಸ್ಸಂದೇಹವಾಗಿ ಕಷ್ಟ. ಆದ್ದರಿಂದ ಭಗವಂತನು ತನ್ನಿಂದಲೇ ಪ್ರಾರಂಭವಾದ ಪರಂಪರೆಯಲ್ಲಿ ಅಧಿಕೃತ ಗುರುವೊಬ್ಬರನ್ನು

ಸಮೀಪಿಸಲು ನಮಗೆ ಸೂಚಿಸಿದ್ದಾನೆ. ಈ ಪರಂಪರಾ ತತ್ತ್ವವನ್ನು ಅನುಸರಿಸದೆ ಯಾರೂ ಅಧಿಕೃತ ಗುರುಗಳಾಗಲಾರರು. ಭಗವಂತನೇ ಆದಿ ಗುರು ಮತ್ತು ಪರಂಪರೆಯಲ್ಲಿ ಬಂದ ವ್ಯಕ್ತಿಯು ಭಗವಂತನ ಸಂದೇಶವನ್ನು ಯಥಾವತ್ತಾಗಿ ತನ್ನ ಶಿಷ್ಯನಿಗೆ ನೀಡಬಲ್ಲನು. ಮೂರ್ಖ ಮಿಥ್ಯಾಚಾರಿಗಳಂತೆ ಸ್ವಯಂ ಸೃಷ್ಟ ಪ್ರಕ್ರಿಯೆಯಿಂದ ಆಧ್ಯಾತ್ಮಿಕ ಸಾಕ್ಷಾತ್ಕಾರಿಗಳಾಗಲಾರರು. **ಧರ್ಮಂ ತು ಸಾಕ್ಷಾದ್ ಭಗವತ್ಪ್ರಣೀತಮ್** ಧರ್ಮ ಮಾರ್ಗವು ಸಾಕ್ಷಾತ್ತಾಗಿ ಭಗವಂತನಿಂದಲೇ ನಿರೂಪಿತವಾಗಿದೆ ಎಂದು ಭಾಗವತವು (6. 3. 19) ಹೇಳುತ್ತದೆ. ಆದ್ದರಿಂದ ಮಾನಸಿಕ ಊಹಾಪೋಹ ಅಥವಾ ಶುಷ್ಕವಾಗ್ವಾದಗಳು ಒಬ್ಬನು ಸರಿಯಾದ ಮಾರ್ಗಕ್ಕೆ ಹೋಗಲು ಸಹಾಯಕವಲ್ಲ. ಅಥವಾ ಜ್ಞಾನಗ್ರಂಥಗಳನ್ನು ಸ್ವತಂತ್ರವಾಗಿ ಅಧ್ಯಯನ ಮಾಡಿದರೂ ಒಬ್ಬನು ಆಧ್ಯಾತ್ಮ ಜೀವನದಲ್ಲಿ ಪ್ರಗತಿ ಪಡೆಯಲಾರನು. ಜ್ಞಾನವನ್ನು ಪಡೆಯಲು ಒಬ್ಬನು ಅಧಿಕೃತ ಗುರುವಿನ ಬಳಿ ಹೋಗಬೇಕು. ಅಂಥ ಗುರುವನ್ನು ಪೂರ್ಣ ಶರಣಾಗತಿಯಿಂದ ಅಂಗೀಕರಿಸಬೇಕು, ಮತ್ತು ಮಿಥ್ಯಾಪ್ರತಿಷ್ಠೆಯಿಲ್ಲದೆ ಒಬ್ಬ ಕನಿಷ್ಠ ಭೃತ್ಯನಂತೆ ಗುರುವಿನ ಸೇವೆ ಮಾಡಬೇಕು. ಆತ್ಮ ಸಾಕ್ಷಾತ್ಕಾರಿ ಗುರುವಿನ ತೃಪ್ತಿಯೇ ಅಧ್ಯಾತ್ಮ ಜೀವನದ ಪ್ರಗತಿಯ ರಹಸ್ಯ. ವಿಚಾರಣೆಗಳು ಮತ್ತು ವಿನಯಶೀಲತೆ ಅಧ್ಯಾತ್ಮ ಅರಿವಿಗೆ ಉಚಿತ ಸಂಯೋಜನೆ. ವಿನಯವೂ ಸೇವೆಯೂ ಇದ್ದ ಹೊರತು, ಪಾಂಡಿತ್ಯವುಳ್ಳ ಗುರುಗಳಲ್ಲಿ ಮಾಡಿದ ವಿಚಾರಣೆಗಳು ಪರಿಣಾಮಕಾರಿಯಾಗುವುದಿಲ್ಲ. ಒಬ್ಬನು ಗುರುವಿನ ಪರೀಕ್ಷೆಯಲ್ಲಿ ತೇರ್ಗಡೆಹೊಂದಲು ಸಮರ್ಥನಾಗಬೇಕು ಮತ್ತು ಅವರು ಶಿಷ್ಯನ ನಿಜವಾದ ಆಸೆಯನ್ನು ಕಂಡಾಗ. ಅವರು ತಾವಾಗಿಯೇ ಶಿಷ್ಯನಿಗೆ ನಿಜ ಅಧ್ಯಾತ್ಮ ಅರಿವನ್ನು ಆಶೀರ್ವದಿಸುತ್ತಾರೆ. ಈ ಶ್ಲೋಕದಲ್ಲಿ ಅಂಧಾನುಸರಣೆಯನ್ನು ಮತ್ತು ಅಸಂಬದ್ಧ ವಿಚಾರಣೆಗಳನ್ನು ಖಂಡಿಸಿದೆ. ಒಬ್ಬನು ಗುರುಗಳಿಂದ ವಿನೀತನಾಗಿ ಶ್ರವಣ ಮಾಡುವುದಲ್ಲದೆ, ಗುರುಗಳಿಗೆ ವಿಧೇಯತೆ, ಸೇವೆ ಮತ್ತು ವಿಚಾರಣೆಗಳಿಂದ ಸ್ಪಷ್ಟ ಜ್ಞಾನವನ್ನು ಅವರಿಂದ ಪಡೆಯಬೇಕು. ಅಧಿಕೃತ ಗುರುಗಳು ಸ್ವಾಭಾವಿಕವಾಗಿಯೇ ಶಿಷ್ಯನ ಬಗ್ಗೆ ಬಹು ಕರುಣೆಯುಳ್ಳವರು. ಆದ್ದರಿಂದ ಶಿಷ್ಯನು ವಿನೀತನೂ, ಸೇವೆ ಸಲ್ಲಿಸಲು ಸದಾ ಸಿದ್ಧನೂ ಆಗಿದ್ದಾಗ ಜ್ಞಾನ ಮತ್ತು ವಿಚಾರಣೆಗಳ ಪಾರಸ್ಪರ್ಯವು ಪರಿಪೂರ್ಣವಾಗುತ್ತದೆ.

**ಯಜ್ ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಣ್ಡವ।**
**ಯೇನ ಭೂತಾನ್ಯಶೇಷಾಣಿ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ॥ ೩೫ ॥**

ಯತ್—ಯಾವುದನ್ನು, ಜ್ಞಾತ್ವಾ—ತಿಳಿದು, ನ—ಎಂದಿಗೂ ಇಲ್ಲ, ಪುನಃ—ಮತ್ತೆ, ಮೋಹಮ್—ಭ್ರಮೆಗೆ, ಏವಮ್—ಹೀಗೆ, ಯಾಸ್ಯಸಿ—ನೀನು ಹೋಗುವುದು, ಪಾಣ್ಡವ—ಹೇ ಪಾಂಡು ಪುತ್ರನೇ, ಯೇನ—ಯಾವುದರಿಂದ, ಭೂತಾನಿ—ಜೀವಿಗಳು, ಅಶೇಷಾಣಿ—ಎಲ್ಲ, ದ್ರಕ್ಷ್ಯಸಿ—ನೀನು ನೋಡುವೆ, ಆತ್ಮನಿ—ಪರಮಾತ್ಮನಲ್ಲಿ, ಅಥೌ—ಅಥವಾ ಬೇರೆ ಶಬ್ದಗಳಲ್ಲಿ, ಮಯಿ—ನನ್ನಲ್ಲಿ.

**ಆತ್ಮ ಸಾಕ್ಷಾತ್ಕಾರಿಯಿಂದ ನಿಜ ಜ್ಞಾನವನ್ನು ಪಡೆದ ನಂತರ, ನೀನು ಎಂದಿಗೂ ಮತ್ತೆ ಇಂಥ ಭ್ರಮೆಯಲ್ಲಿ ಬೀಳುವುದಿಲ್ಲ, ಏಕೆಂದರೆ ಈ ಜ್ಞಾನದಿಂದ ಸಕಲ ಜೀವಿಗಳು ಭಗವಂತನ ಅಂಶರು ಅಥವಾ ಬೇರೆ ಶಬ್ದಗಳಲ್ಲಿ ಅವರು ನನ್ನವರು ಎಂದು ನೀನು ಕಾಣುವೆ.**

**ಭಾವಾರ್ಥ :** ಆತ್ಮ ಸಾಕ್ಷಾತ್ಕಾರಿಯಿಂದ ಅಥವಾ ಯಥಾರ್ಥ ಜ್ಞಾನಿಯಿಂದ ಜ್ಞಾನ ಪಡೆಯುವುದರ ಫಲವು ಸಕಲ ಜೀವಿಗಳು ಪರಮ ದೇವೋತ್ತಮ ಪುರುಷ ಶ್ರೀಕೃಷ್ಣನ ವಿಭಿನ್ನಾಂಶರೆಂದು ಅರಿತುಕೊಳ್ಳುವುದು. ಕೃಷ್ಣನಿಂದ ಪ್ರತ್ಯೇಕ ಅಸ್ತಿತ್ವಭಾವವನ್ನು **ಮಾಯಾ** ಎಂದು ಕರೆದಿದೆ (**ಮಾ**—ಅಲ್ಲ **ಯಾ**—ಇದು). ಕೃಷ್ಣನಿಗೂ ನಮಗೂ ಯಾವ ಸಂಬಂಧವಿಲ್ಲ, ಕೃಷ್ಣನು ಕೇವಲ ಒಬ್ಬ ಮಹಾನ್ ಐತಿಹಾಸಿಕ ಪುರುಷ ಮಾತ್ರ, ಮತ್ತು ಪರತತ್ವವು ವ್ಯಕ್ತಿ ಶೂನ್ಯ ಬ್ರಹ್ಮನ್ ಎಂದು ಕೆಲವರು ಭಾವಿಸುತ್ತಾರೆ. ಭಗವದ್ಗೀತೆಯಲ್ಲಿ ಹೇಳಿರುವಂತೆ, ವಾಸ್ತವಿಕವಾಗಿ ಈ ನಿರಾಕಾರ ಬ್ರಹ್ಮನ್, ಕೃಷ್ಣನ ಸ್ವಯಂಪ್ರಕಾಶ. ಪರಮ ದೇವೋತ್ತಮ ಪುರುಷ ಕೃಷ್ಣನು ಎಲ್ಲದರ ಕಾರಣನು. ಸಕಲ ಕಾರಣಗಳ ಕಾರಣನಾದ ಕೃಷ್ಣನು ಪರಮ ದೇವೋತ್ತಮ ಪುರುಷನೆಂದು ಬ್ರಹ್ಮ ಸಂಹಿತೆಯಲ್ಲಿ ಸ್ಪಷ್ಟವಾಗಿ ಹೇಳಿದೆ. ಲಕ್ಷೋಪಲಕ್ಷ ಅವತಾರಗಳೂ ಕೂಡ ಅವನ ನಾನಾ ವಿಸ್ತರಣೆಗಳು ಮಾತ್ರ. ಅದೇ ಪ್ರಕಾರ ಜೀವಿಗಳೂ ಕೂಡ ಕೃಷ್ಣನ ವಿಸ್ತರಣೆಗಳು. ಕೃಷ್ಣನು ತನ್ನ ಅನೇಕ ವಿಸ್ತರಣೆಗಳಲ್ಲಿ ತನ್ನ ಪ್ರತ್ಯೇಕ ಅಸ್ತಿತ್ವವನ್ನು ಕಳೆದುಕೊಳ್ಳುತ್ತಾನೆಂದು ಮಾಯಾವಾದಿ ತಾತ್ವಿಕರು ತಪ್ಪಾಗಿ ಭಾವಿಸುತ್ತಾರೆ. ಈ ಭಾವನೆಯು ಭೌತಿಕ ಸ್ವಭಾವದ್ದು. ಒಂದು ಪದಾರ್ಥವು ತುಂಡು ತುಂಡಾಗಿ ಹಂಚಲ್ಪಟ್ಟಾಗ ತನ್ನ ಮೂಲ ವ್ಯಕ್ತಿತ್ವವನ್ನು ಕಳೆದುಕೊಳ್ಳುವುದೆಂಬ ಅನುಭವವು ಭೌತಿಕ ಜಗತ್ತಿನಲ್ಲಿ ನಮಗಿದೆ. ಆದರೆ ಪರತತ್ವ ಎಂದರೆ ಒಂದಕ್ಕೊಂದನ್ನು ಸೇರಿಸಿದರೆ ಒಂದೇ ಆಗುತ್ತದೆ, ಮತ್ತು ಒಂದರಿಂದ ಒಂದನ್ನು ಕಳೆದರೆ ಕೂಡ ಒಂದೇ ಉಳಿಯುತ್ತದೆ ಎಂಬುದನ್ನು ಮಾಯಾವಾದಿ ದಾರ್ಶನಿಕರು ಅರಿತಿರುವುದಿಲ್ಲ. ಇದು ಅಧ್ಯಾತ್ಮ ಜಗತ್ತಿನ ವಿಷಯ.

ಪರತತ್ವ ವಿಜ್ಞಾನದಲ್ಲಿ ಸಾಕಷ್ಟು ಜ್ಞಾನಾಭಾವದಿಂದಾಗಿ, ನಮಗೆ ಈಗ ಮಾಯೆ ಮುಸುಕಿದೆ. ಆದ್ದರಿಂದ ನಾವು ಕೃಷ್ಣನಿಂದ ಪ್ರತ್ಯೇಕವಾಗಿರುವೆವೆಂದು ಭಾವಿಸುತ್ತೇವೆ. ನಾವು ಕೃಷ್ಣನ ಪ್ರತ್ಯೇಕ ಭಾಗಗಳಾಗಿದ್ದರೂ ನಾವು ಅವನಿಂದ ಭಿನ್ನರಲ್ಲ. ಜೀವಿಗಳ ದೈಹಿಕ ಭೇದವು ಮಾಯೆ, ಅಥವಾ ನಿಜ ಸಂಗತಿಯಲ್ಲವಾದುದು. ನಾವೆಲ್ಲರೂ ಕೃಷ್ಣನನ್ನು ತೃಪ್ತಿಪಡಿಸಲು ಉದ್ದೇಶಿತರು. ಮಾಯೆಯಿಂದಲೇ, ತನ್ನ ಬಂಧುಗಳೊಂದಿಗೆ ಅನಿತ್ಯ ದೈಹಿಕ ಸಂಬಂಧವು ಕೃಷ್ಣನೊಂದಿಗೆ ತನ್ನ ನಿತ್ಯ ಆಧ್ಯಾತ್ಮಿಕ ಸಂಬಂಧಕ್ಕಿಂತ ಹೆಚ್ಚು ಮುಖ್ಯವೆಂದು ಅರ್ಜುನನು ಭಾವಿಸಿದನು. ಇದೇ ಇಡೀ ಗೀತೋಪದೇಶದ ಗುರಿ. ಕೃಷ್ಣನ ನಿತ್ಯದಾಸನಾಗಿ, ಜೀವಿಯನ್ನು ಕೃಷ್ಣನಿಂದ ಪ್ರತ್ಯೇಕಿಸುವುದು ಸಾಧ್ಯವಿಲ್ಲ, ಮತ್ತು ಕೃಷ್ಣನಿಂದ ಪ್ರತ್ಯೇಕಿತ ವ್ಯಕ್ತಿತ್ವದ ಅವನ ಭಾವನೆಯೇ ಮಾಯೆ. ಭಗವಂತನ ಪ್ರತ್ಯೇಕ ವಿಭಿನ್ನಾಂಶರಾದ ಜೀವಿಗಳು ಪೂರೈಸಬೇಕಾದ ಉದ್ದೇಶವೊಂದಿದೆ. ಅನಾದಿಕಾಲ

ದಿಂದಲೂ ಆ ಉದ್ದೇಶವನ್ನು ಮರೆತವರಾಗಿ, ಅವರು ಮಾನವರು, ಪ್ರಾಣಿಗಳು; ದೇವತೆಗಳು ಇತ್ಯಾದಿಯಾಗಿ ನಾನಾ ದೇಹಸ್ಥಿತರಾಗಿದ್ದಾರೆ. ಭಗವಂತನ ದಿವ್ಯ ಸೇವೆಯ ವಿಸ್ಮೃತಿಯಿಂದ ಅಂಥ ದೈಹಿಕ ಭೇದಗಳು ಉಂಟಾಗುತ್ತವೆ. ಆದರೆ ಕೃಷ್ಣ ಪ್ರಜ್ಞೆಯ ಮೂಲಕ ದಿವ್ಯ ಸೇವೆಯಲ್ಲಿ ನಿರತನಾದಾಗ ಒಬ್ಬನು ಮಾಯೆಯಿಂದ ಕೂಡಲೇ ಮುಕ್ತನಾಗುತ್ತಾನೆ. ಅಂಥ ಶುದ್ಧ ಜ್ಞಾನವನ್ನು ಅಧಿಕೃತ ಗುರುವಿನಿಂದ ಮಾತ್ರ ಪಡೆದುಕೊಳ್ಳಬಹುದು ಮತ್ತು ಇದರಿಂದ ಜೀವಿಯು ಕೃಷ್ಣನಿಗೆ ಸಮ ಎಂಬ ಭ್ರಾಂತಿಯನ್ನು ತಪ್ಪಿಸಬಹುದು. ಪರಮ ಆತ್ಮ ಕೃಷ್ಣನು ಸಕಲ ಜೀವಿಗಳಿಗೆ ಪರಮ ಆಶ್ರಯನು ಎಂಬುದೇ ಪೂರ್ಣ ಜ್ಞಾನ ಮತ್ತು ಅಂಥ ಆಶ್ರಯವನ್ನು ಬಿಟ್ಟು, ಜೀವಿಗಳು ಭೌತಿಕ ಶಕ್ತಿಯಿಂದ ಭ್ರಮಿತರಾಗಿ ತಮಗೆ ಪ್ರತ್ಯೇಕ ವ್ಯಕ್ತಿತ್ವವಿದೆ ಎಂದು ಭಾವಿಸುತ್ತಾರೆ—ಹೀಗೆ ಭೌತಿಕ ವ್ಯಕ್ತಿತ್ವದ ವಿವಿಧ ಮಟ್ಟಗಳಲ್ಲಿ ಅವರು ಕೃಷ್ಣನನ್ನು ಮರೆಯುತ್ತಾರೆ. ಆದರೆ ಅಂಥ ಭ್ರಮಿತ ಜೀವಿಗಳು ಕೃಷ್ಣ ಪ್ರಜ್ಞೆಯಲ್ಲಿ ಸನ್ನಿವೇಶಿತರಾದಾಗ, **ಮುಕ್ತಿರ್ಹಿತ್ವಾನ್ಯಥಾ-ರೂಪಂ ಸ್ವರೂಪೇಣ ವ್ಯವಸ್ಥಿತಿಃ,** ಎಂದು ಶ್ರೀಮದ್ಭಾಗವತದಲ್ಲಿ (2. 10. 6) ದೃಢಪಡಿಸಿರುವಂತೆ, ಅವರು ಮುಕ್ತಿಮಾರ್ಗದಲ್ಲಿ ಇದ್ದಾರೆಂದು ತಿಳಿಯಬೇಕು. ಮುಕ್ತಿ ಎಂದರೆ ಸ್ವರೂಪ ಸ್ಥಿತಿಯಲ್ಲಿ ಕೃಷ್ಣನ ನಿತ್ಯ ದಾಸನಾಗಿರುವುದು (ಕೃಷ್ಣ ಪ್ರಜ್ಞೆ).

**ಅಪಿ ಚೇದಪಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ ।**
**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸನ್ತರಿಷ್ಯಸಿ ॥ ೩೬ ॥**

ಅಪಿ—ಕೂಡ, ಚೇತ್—ಆದರೆ, ಅಸಿ—ನೀನು ಆಗಿದ್ದರೂ, ಪಾಪೇಭ್ಯಃ—ಪಾಪಿಗಳ, ಸರ್ವೇಭ್ಯಃ—ಎಲ್ಲರಲ್ಲಿ, ಪಾಪಕೃತ್ತಮಃ—ಮಹಾಪಾಪಿಷ್ಠನು, ಸರ್ವಮ್—ಅಂಥ ಪಾಪ ಫಲಗಳೆಲ್ಲವನ್ನು, ಜ್ಞಾನ ಪ್ಲವೇನ—ದಿವ್ಯ ಜ್ಞಾನದ ನಾವೆಯಿಂದ, ಏವ—ಖಂಡಿತವಾಗಿ, ವೃಜಿನಮ್—ಕ್ಲೇಶಸಾಗರವನ್ನು, ಸನ್ತರಿಷ್ಯಸಿ—ನೀನು ಪೂರ್ತಿಯಾಗಿ ದಾಟುವೆ.

**ನೀನು ಎಲ್ಲ ಪಾಪಿಗಳಲ್ಲಿ ಅತ್ಯಂತ ಪಾಪಿಷ್ಠನೆಂದು ಪರಿಗಣಿಸಲ್ಪಟ್ಟಿದ್ದರೂ ನೀನು ದಿವ್ಯ ಜ್ಞಾನದ ನಾವೆಯಲ್ಲಿ ಸನ್ನಿವೇಶಿತನಾದಾಗ ಕ್ಲೇಶಗಳ ಸಾಗರವನ್ನು ದಾಟಬಲ್ಲೆ.**

**ಭಾವಾರ್ಥ :** ಕೃಷ್ಣ ಸಂಬಂಧದಲ್ಲಿ ಒಬ್ಬನ ಸ್ವರೂಪ ಸ್ಥಿತಿಯ ಸರಿಯಾದ ತಿಳುವಳಿಕೆಯು ಎಷ್ಟು ಸೊಗಸಾಗಿದೆಯೆಂದರೆ, ಅವಿದ್ಯಾ ಸಾಗರದಲ್ಲಿ ಸಾಗುತ್ತಿರುವ ಅಸ್ತಿತ್ವದ ಹೋರಾಟದಿಂದ ಒಬ್ಬನನ್ನು ಕೂಡಲೇ ಮೇಲೆತ್ತುತ್ತದೆ. ಈ ಭೌತಿಕ ಜಗತ್ತನ್ನು ಕೆಲವು ಸಲ ಅವಿದ್ಯಾ ಸಾಗರವೆಂದೂ, ಮತ್ತೆ ಕೆಲವು ಸಲ ಉರಿಯುವ ಕಾಡ್ಗಿಚ್ಚು ಎಂದು ಭಾವಿಸಿದೆ. ಎಷ್ಟೇ ಅನುಭವೀ ಈಜುಗಾರನಾಗಿದ್ದರೂ, ಸಾಗರದಲ್ಲಿ ಒಬ್ಬನ ಬದುಕಿನ ಹೋರಾಟವು ಬಹಳ ಕಠಿಣವಾಗಿರುತ್ತದೆ. ಯಾರಾದರೂ ಹತ್ತಿರ ಬಂದು ಹೋರಾಡುತ್ತಿರುವ ಈಜುಗಾರನನ್ನು ಸಾಗರದಿಂದ ಮೇಲೆತ್ತಿದರೆ, ಅವನೇ ಮಹಾನ್ ರಕ್ಷಕನು. ಪರಮ ದೇವೋತ್ತಮ ಪುರುಷನಿಂದ ಪ್ರಾಪ್ತವಾದ ಪರಿಪೂರ್ಣ ಜ್ಞಾನ, ಮೋಕ್ಷಕ್ಕೆ ದಾರಿ. ಕೃಷ್ಣ ಪ್ರಜ್ಞಾ ಪೋತವು ಬಹು ಸರಳವಾದುದು ಮತ್ತು ಅತಿ ಮಹೋನ್ನತವಾದುದು.

**ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ ಕುರುತೇಽರ್ಜುನ ।**
**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ ॥ ೩೭ ॥**

ಯಥಾ—ಹೇಗೆ, ಏಧಾಂಸಿ—ಇಂಧನ, ಸಮಿದ್ಧಃ—ಉರಿಯುತ್ತಿರುವ, ಅಗ್ನಿಃ—ಬೆಂಕಿಯು, ಭಸ್ಮಸಾತ್—ಬೂದಿ, ಕುರುತೇ—ಮಾಡುವುದೋ, ಅರ್ಜುನ—ಹೇ ಅರ್ಜುನ, ಜ್ಞಾನಾಗ್ನಿಃ—ಜ್ಞಾನಾಗ್ನಿಯು, ಸರ್ವ ಕರ್ಮಾಣಿ—ಭೌತಿಕ ಚಟುವಟಿಕೆಗಳ ಎಲ್ಲ ಪ್ರತಿಕ್ರಿಯೆಗಳನ್ನು, ಭಸ್ಮಸಾತ್—ಬೂದಿಯಾಗಿ, ಕುರುತೇ—ಮಾಡುತ್ತದೆ, ತಥಾ—ಹಾಗೆಯೇ.

**ಉರಿಯುತ್ತಿರುವ ಬೆಂಕಿಯು ಹೇಗೆ ಇಂಧನವನ್ನು ಬೂದಿ ಮಾಡುವುದೋ, ಹೇ ಅರ್ಜುನ, ಹಾಗೆಯೇ ಜ್ಞಾನಾಗ್ನಿಯು ಭೌತಿಕ ಚಟುವಟಿಕೆಗಳ ಎಲ್ಲ ಪ್ರತಿಕ್ರಿಯೆಗಳನ್ನು ಸುಟ್ಟು ಬೂದಿ ಮಾಡುತ್ತದೆ.**

**ಭಾವಾರ್ಥ :** ಆತ್ಮ ಮತ್ತು ಪರಮಾತ್ಮ ಮತ್ತು ಅವರ ಸಂಬಂಧದ ಪರಿಪೂರ್ಣ ಜ್ಞಾನವನ್ನು ಇಲ್ಲಿ ಅಗ್ನಿಗೆ ಹೋಲಿಸಿದೆ. ಈ ಅಗ್ನಿಯು ಪಾಪ ಕಾರ್ಯಗಳ ಪ್ರತಿಕ್ರಿಯೆಗಳೆಲ್ಲವನ್ನೂ ಸುಡುವುದಲ್ಲದೆ, ಪುಣ್ಯ ಕಾರ್ಯಗಳ ಎಲ್ಲ ಫಲಗಳನ್ನೂ ಕೂಡ ಸುಟ್ಟು ಬೂದಿ ಮಾಡುತ್ತದೆ. ಪ್ರತಿಕ್ರಿಯೆಗಳ ಹಂತಗಳು ಅನೇಕ : ರೂಪಗೊಳ್ಳುತ್ತಿರುವ ಪ್ರತಿಕ್ರಿಯೆ, ಫಲಿಸುತ್ತಿರುವ ಪ್ರತಿಕ್ರಿಯೆ, ಆಗಲೇ ಒದಗಿದ ಪ್ರತಿಕ್ರಿಯೆ ಮತ್ತು ಪ್ರಾರಬ್ಧ ಪ್ರತಿಕ್ರಿಯೆ. ಆದರೆ ಜೀವಿಯ ಸ್ವರೂಪ ಸ್ಥಿತಿಯ ಜ್ಞಾನವು ಎಲ್ಲವನ್ನೂ ಭಸ್ಮಗೊಳಿಸುತ್ತದೆ. ಒಬ್ಬನು ಪೂರ್ಣ ಜ್ಞಾನದಲ್ಲಿದ್ದಾಗ, ಅನಾದಿ ಕಾಲ ಸಂಚಿತ ಮತ್ತು ಆಗಾಮಿ ಪ್ರತಿಕ್ರಿಯೆಗಳೆಲ್ಲವೂ ಭಸ್ಮವಾಗುತ್ತವೆ. ವೇದಗಳಲ್ಲಿ (ಬೃಹದಾರಣ್ಯಕ ಉಪನಿಷತ್ 4. 4. 22) **ಉಭೇ ಉಹೈವೈಷ ಏತೇ ತರತ್ಯಮೃತಃ ಸಾಧ್ವಸಾಧೂನೀ**— "ಒಬ್ಬನು ಪುಣ್ಯ ಮತ್ತು ಪಾಪ ಕರ್ಮಫಲಗಳನ್ನೂ ದಾಟುತ್ತಾನೆ," ಎಂದು ಹೇಳಿದೆ.

**ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ।**
**ತತ್ ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿನ್ದತಿ ॥ ೩೮ ॥**

ನ—ಇಲ್ಲ, ಹಿ—ಖಂಡಿತವಾಗಿ, ಜ್ಞಾನೇನ—ಜ್ಞಾನದೊಂದಿಗೆ, ಸದೃಶಮ್—ಹೋಲಿಕೆಯಲ್ಲಿ, ಪವಿತ್ರಮ್—ಪವಿತ್ರವಾದುದು, ಇಹ—ಈ ಜಗತ್ತಿನಲ್ಲಿ, ವಿದ್ಯತೇ—ಇರುವುದು, ತತ್—ಅದನ್ನು, ಸ್ವಯಮ್—ಸ್ವತಃ, ಯೋಗ—ಭಕ್ತಿಯಲ್ಲಿ, ಸಂಸಿದ್ಧಃ—ಪರಿಪಕ್ವನಾದವನು, ಕಾಲೇನ—ಕಾಲಕ್ರಮದಲ್ಲಿ, ಆತ್ಮನಿ—ತನ್ನಲ್ಲಿ, ವಿನ್ದತಿ—ಅನುಭವಿಸುತ್ತಾನೆ.

**ಈ ಜಗತ್ತಿನಲ್ಲಿ ದಿವ್ಯ ಜ್ಞಾನದಷ್ಟು ಶುದ್ಧ ಮತ್ತು ಮಹೋನ್ನತವಾದದ್ದು ಯಾವುದೂ ಇಲ್ಲ. ಇಂಥ ಜ್ಞಾನವು ಸಕಲ ಯೋಗ ರಹಸ್ಯದ ಪಕ್ವ ಫಲ. ಭಕ್ತಿಯುತ ಸೇವೆಯ ಆಚರಣೆಯಲ್ಲಿ ಪಾರಂಗತನಾದವನು ಕಾಲಕ್ರಮದಲ್ಲಿ ತನ್ನಲ್ಲಿಯೇ ಈ ಜ್ಞಾನವನ್ನು ಅನುಭವಿಸುತ್ತಾನೆ.**

**ಭಾವಾರ್ಥ:**—ನಾವು ದಿವ್ಯ ಜ್ಞಾನವನ್ನು ಕುರಿತು ಮಾತನಾಡಿದಾಗ, ಆಧ್ಯಾತ್ಮಿಕ ಅರಿವನ್ನು ಉದ್ದೇಶಿಸಿ ಮಾತನಾಡುತ್ತೇವೆ. ದಿವ್ಯ ಜ್ಞಾನದಷ್ಟು ಶುದ್ಧ ಮತ್ತು ಮಹೋನ್ನತವಾದುದು ಯಾವುದೂ ಇಲ್ಲ. ನಮ್ಮ ಬಂಧನಕ್ಕೆ ಅಜ್ಞಾನವೇ ಕಾರಣ. ಮತ್ತು ನಮ್ಮ ಮೋಕ್ಷಕ್ಕೆ ಜ್ಞಾನವೇ ಕಾರಣ. ಈ ಜ್ಞಾನವು ಭಕ್ತಿಯುತ ಸೇವೆಯ ಪಕ್ವ ಫಲ ಮತ್ತು ಒಬ್ಬನು ದಿವ್ಯ ಜ್ಞಾನದಲ್ಲಿ ಸ್ಥಿತನಾಗಿರುವಾಗ, ಅವನು ಶಾಂತಿಗಾಗಿ ಇನ್ನೆಲ್ಲಿಯೂ ಅರಸಬೇಕಾಗಿಲ್ಲ, ಏಕೆಂದರೆ ಅವನು ತನ್ನಲ್ಲಿಯೇ ಶಾಂತಿಯನ್ನು ಅನುಭವಿಸುತ್ತಾನೆ. ಅರ್ಥಾತ್, ಈ ಜ್ಞಾನ ಮತ್ತು ಶಾಂತಿಯು ಕೃಷ್ಣಪ್ರಜ್ಞೆಯಲ್ಲಿ ಉಚ್ಚಾಯ್ರಯವಾಗುತ್ತದೆ. ಅದೇ ಭಗವದ್ಗೀತೆಯ ಕೊನೆಯ ಮಾತು.

**ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಃ ಸಂಯತೇನ್ದ್ರಿಯಃ ।**
**ಜ್ಞಾನಂ ಲಬ್ಧ್ವಾ ಪರಾಂ ಶಾನ್ತಿಮಚಿರೇಣಾಧಿಗಚ್ಛತಿ ॥ ೩೯ ॥**

ಶ್ರದ್ಧಾವಾನ್—ಶ್ರದ್ಧಾವಂತನು, ಲಭತೇ—ಹೊಂದುತ್ತಾನೆ,ಜ್ಞಾನಮ್—ಜ್ಞಾನವನ್ನು, ತತ್ ಪರಃ—ಅದಕ್ಕೆ ಬಹು ಆಸಕ್ತನಾಗಿ, ಸಂಯತ—ನಿಯಂತ್ರಿಸಿದ, ಇನ್ದ್ರಿಯಃ—ಇಂದ್ರಿಯಗಳು, ಜ್ಞಾನಮ್—ಜ್ಞಾನವನ್ನು, ಲಬ್ಧ್ವಾ—ಪಡೆದು, ಪರಾಮ್—ದಿವ್ಯವಾದ, ಶಾನ್ತಿಮ್—ಶಾಂತಿಯನ್ನು, ಅಚಿರೇಣ—ಅತಿ ಶೀಘ್ರವಾಗಿ, ಅಧಿಗಚ್ಛತಿ—ಹೊಂದುತ್ತಾನೆ.

**ದಿವ್ಯ ಜ್ಞಾನಕ್ಕೆ ಅರ್ಪಿಸಿಕೊಂಡ ಶ್ರದ್ಧಾವಂತನು, ಮತ್ತು ತನ್ನ ಇಂದ್ರಿಯಗಳನ್ನು ಸಂಯಮದಲ್ಲಿಟ್ಟುಕೊಂಡವನು ಅಂಥ ಜ್ಞಾನಪ್ರಾಪ್ತಿಗೆ ಅರ್ಹನಾಗುತ್ತಾನೆ, ಮತ್ತು ಅದನ್ನು ಪಡೆದು ಅವನು ಪರಮ ಆಧ್ಯಾತ್ಮಿಕ ಶಾಂತಿಯನ್ನು ಶೀಘ್ರವಾಗಿ ಹೊಂದುತ್ತಾನೆ.**

**ಭಾವಾರ್ಥ:** ಕೃಷ್ಣ ಪ್ರಜ್ಞೆಯಲ್ಲಿನ ಅಂಥ ಜ್ಞಾನವು ಕೃಷ್ಣನಲ್ಲಿ ದೃಢ ನಂಬಿಕೆಯುಳ್ಳ ಶ್ರದ್ಧಾವಂತನಿಗೆ ಲಭ್ಯ. ಕೇವಲ ಕೃಷ್ಣ ಪ್ರಜ್ಞೆಯಲ್ಲಿ ವರ್ತಿಸುವುದರಿಂದ ತಾನು ಅತ್ಯುನ್ನತ ಪರಿಪೂರ್ಣತೆ ಪಡೆಯಬಹುದೆಂದು ಭಾವಿಸುವವನನ್ನು ಶ್ರದ್ಧಾವಂತನೆಂದು ಕರೆದಿದೆ. ಭಕ್ತಿಯುತ ಸೇವೆಯ ನಿರ್ವಹಣೆಯಿಂದ ಮತ್ತು ಹೃದಯದ ಸಕಲ ಭೌತಿಕ ಕಲ್ಮಷಗಳನ್ನು ಶುದ್ಧಗೊಳಿಸುವ ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ನಾಮ ಸಂಕೀರ್ತನೆಯಿಂದ ಈ ಶ್ರದ್ಧೆಯು ಲಭಿಸುತ್ತದೆ. ಇದಲ್ಲದೆ ಒಬ್ಬನು ಇಂದ್ರಿಯಗಳನ್ನು ನಿಗ್ರಹಿಸಬೇಕು. ಕೃಷ್ಣನಿಗೆ ದೃಢ ಬದ್ಧನಾಗಿರುವವನು ಮತ್ತು ಇಂದ್ರಿಯಗಳನ್ನು ನಿಗ್ರಹಿಸುವವನು ವಿಳಂಬವಿಲ್ಲದೆ ಕೃಷ್ಣ ಪ್ರಜ್ಞೆಯ ಜ್ಞಾನದಲ್ಲಿ ಪರಿಪೂರ್ಣತೆಯನ್ನು ಸುಲಭವಾಗಿ ಹೊಂದಬಲ್ಲನು.

**ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ ।**
**ನಾಯಂ ಲೋಕೋऽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ॥ ೪೦ ॥**

ಅಜ್ಞಃ—ಪ್ರಮಾಣ ಶಾಸ್ತ್ರ ಗ್ರಂಥಗಳ ಜ್ಞಾನವಿಲ್ಲದ ಮೂಢನು, ಚ—ಮತ್ತು, ಅಶ್ರದ್ದಧಾನಃ—ದೃಷ್ಟ ಶಾಸ್ತ್ರಗಳಲ್ಲಿ ಶ್ರದ್ಧೆಯಿಲ್ಲದವನು, ಚ—ಕೂಡ, ಸಂಶಯ—

ಸಂಶಯಗಳ, ಆತ್ಮಾ—ವ್ಯಕ್ತಿಯು, ವಿನಶ್ಯತಿ—ಪತನ ಹೊಂದುತ್ತಾನೆ, ನ—ಇಲ್ಲ, ಅಯಮ್—ಇದರಲ್ಲಿ, ಲೋಕಃ—ಜಗತ್ತು, ಅಸ್ತಿ—ಇರುವುದು, ನ—ಇಲ್ಲ, ಪರಃ—ಮುಂದಿನ ಜನ್ಮದಲ್ಲಿ, ನ—ಇಲ್ಲ, ಸುಖಮ್—ಸುಖವು, ಸಂಶಯ—ಸಂದೇಹಿಸುವ, ಆತ್ಮನಃ— ವ್ಯಕ್ತಿಯ.

**ಆದರೆ ದೃಷ್ಟ ಶಾಸ್ತ್ರಗಳನ್ನು ಶಂಕಿಸುವ ಅಜ್ಞಾನಿ ಮತ್ತು ಶ್ರದ್ಧಾಹೀನರು ದೈವ ಪ್ರಜ್ಞೆಯನ್ನು ಹೊಂದುವುದಿಲ್ಲ; ಅವರು ಪತನನಾಗುತ್ತಾರೆ. ಸಂಶಯಾತ್ಮನಿಗೆ ಇಹಪರಗಳಲ್ಲಿಯೂ ಸುಖವಿಲ್ಲ.**

**ಭಾವಾರ್ಥ** : ಅನೇಕ ಪ್ರಮಾಣ ಮತ್ತು ಅಧಿಕೃತ ದೃಷ್ಟ ಶಾಸ್ತ್ರಗಳಲ್ಲಿ ಭಗವದ್ಗೀತೆಯು ಪರಮೋತ್ಕೃಷ್ಟವಾದುದು. ಸರಿಸುಮಾರು ಪಶುಗಳಂಥ ಜನರಿಗೆ ಪ್ರಮಾಣ ದೃಷ್ಟ ಶಾಸ್ತ್ರಗಳಲ್ಲಿ ಶ್ರದ್ಧೆ ಅಥವಾ ಜ್ಞಾನ ಇರುವುದಿಲ್ಲ; ಮತ್ತು ಕೆಲವರಿಗೆ ದೃಷ್ಟ ಶಾಸ್ತ್ರಗಳ ಜ್ಞಾನವಿದ್ದರೂ, ಅಥವಾ ಅದರಿಂದ ವಾಕ್ಯಗಳನ್ನು ಉದಾಹರಿಸಬಲ್ಲವರಾಗಿದ್ದರೂ, ವಾಸ್ತವಿಕವಾಗಿ ಆ ವಾಕ್ಯಗಳಲ್ಲಿ ಶ್ರದ್ಧೆ ಇರುವುದಿಲ್ಲ. ಇತರರಿಗೆ ಭಗವದ್ಗೀತೆಯಂಥ ಶಾಸ್ತ್ರಗಳಲ್ಲಿ ಶ್ರದ್ಧೆಯಿದ್ದರೂ, ದೇವೋತ್ತಮ ಪುರುಷ ಶ್ರೀಕೃಷ್ಣನಲ್ಲಿ ನಂಬಿಕೆ ಇರುವುದಿಲ್ಲ ಅಥವಾ ಅವನ ಆರಾಧನೆಯನ್ನು ಮಾಡುವುದಿಲ್ಲ. ಅಂಥವರಿಗೆ ಕೃಷ್ಣ ಪ್ರಜ್ಞೆಯಲ್ಲಿ ಯಾವ ಸ್ಥಾನಮಾನವೂ ಇಲ್ಲ. ಅವರು ಪತನ ಹೊಂದುತ್ತಾರೆ. ಮೇಲೆ ಹೇಳಿದ ಎಲ್ಲ ಜನರಲ್ಲಿ, ಶ್ರದ್ಧೆಯಿಲ್ಲದವರು ಮತ್ತು ಸದಾ ಸಂಶಯಗ್ರಸ್ತರು ಯಾವ ಪ್ರಗತಿಯನ್ನೂ ಸಾಧಿಸಲಾರರು. ಭಗವಂತನಲ್ಲಿ ಮತ್ತು ಅವನ ದೃಷ್ಟ ವಾಕ್ಯಗಳಲ್ಲಿ ಶ್ರದ್ಧಾಹೀನರು ಇಹಪರಗಳಲ್ಲಿ ಯಾವ ಒಳ್ಳೆಯದನ್ನೂ ಕಾಣರು. ಅವರಿಗೆ ಸುಖವೆಂಬುದು ಯಾವುದೂ ಇಲ್ಲ. ಆದ್ದರಿಂದ ಒಬ್ಬನು ದೃಷ್ಟ ಶಾಸ್ತ್ರ ತತ್ವಗಳನ್ನು ಶ್ರದ್ಧೆಯಿಂದ ಅನುಸರಿಸಿ ಜ್ಞಾನ ವೇದಿಕೆಗೆ ಏರಬೇಕು. ಇಂಥ ಜ್ಞಾನವೇ ಒಬ್ಬನನ್ನು ಅಧ್ಯಾತ್ಮ ಅರಿವಿನ ದಿವ್ಯ ವೇದಿಕೆಗೆ ಏರಿಸಲು ಸಹಾಯಕ. ಅರ್ಥಾತ್, ಸಂಶಯಾತ್ಮರಿಗೆ ಅಧ್ಯಾತ್ಮ ವಿಮೋಚನೆಯಲ್ಲಿ ಯಾವ ಸ್ಥಾನಮಾನವೂ ಇಲ್ಲ. ಆದ್ದರಿಂದ ಒಬ್ಬನು ಪರಂಪರಾಗತ ಮಹಾ ಆಚಾರ್ಯರ ಮಾರ್ಗವನ್ನು ಅನುಸರಿಸಿ ಯಶಸ್ಸನ್ನುಗಳಿಸಬೇಕು.

**ಯೋಗಸಂನ್ಯಸ್ತ ಕರ್ಮಾಣಂ ಜ್ಞಾನಸಂಛಿನ್ನಸಂಶಯಮ್ ।**
**ಆತ್ಮವನ್ತಂ ನ ಕರ್ಮಾಣಿ ನಿಬಧ್ನನ್ತಿ ಧನಂಜಯ ॥ ೪೧ ॥**

ಯೋಗ—ಕರ್ಮ ಯೋಗದಲ್ಲಿ ಭಕ್ತಿಯುತ ಸೇವೆಯಿಂದ, ಸನ್ನ್ಯಸ್ತ—ತ್ಯಾಗಿ, ಕರ್ಮಾಣಮ್—ಕರ್ಮಫಲಗಳನ್ನು, ಜ್ಞಾನ—ಜ್ಞಾನದಿಂದ, ಸಂಛಿನ್ನ—ಕತ್ತರಿಸಿ, ಸಂಶಯಮ್—ಸಂಶಯಗಳನ್ನು, ಆತ್ಮವನ್ತಮ್—ಆತ್ಮದಲ್ಲಿ ಸ್ಥಿತನನ್ನು, ನ—ಎಂದಿಗೂ ಇಲ್ಲ, ಕರ್ಮಾಣಿ—ಕರ್ಮಗಳು, ನಿಬಧ್ನನ್ತಿ—ಬಂಧಿಸುವುದು, ಧನಂಜಯ—ಹೇ ಧನಂಜಯನೇ.

**ತನ್ನ ಕರ್ಮಗಳ ಫಲಗಳನ್ನು ತ್ಯಾಗ ಮಾಡಿ, ಭಕ್ತಿಯುತ ಸೇವೆಯಲ್ಲಿ ನಿರತನಾದವನು ಮತ್ತು ದಿವ್ಯ ಜ್ಞಾನದಿಂದ ಸಂಶಯಗಳು ನಾಶವಾದವನು ವಾಸ್ತವಿಕವಾಗಿ**

**ಆತ್ಮನಲ್ಲಿ ಸನ್ನಿವೇಶಿತನು. ಹೇ ಧನಂಜಯ, ಅವನು ಹೀಗೆ ಕರ್ಮ ಪ್ರತಿಕ್ರಿಯೆಗಳಿಗೆ ಬದ್ಧನಲ್ಲ.**

**ಭಾವಾರ್ಥ :** ಸ್ವಯಂ ದೇವೋತ್ತಮ ಪುರುಷ ಭಗವಂತನಿಂದ ನೀಡಲ್ಪಟ್ಟಂತೆ ಭಗವದ್ಗೀತೆಯ ಉಪದೇಶವನ್ನು ಅನುಸರಿಸುವವನು, ದಿವ್ಯ ಜ್ಞಾನಾನುಗ್ರಹದಿಂದ ಸಕಲ ಸಂಶಯಗಳಿಂದ ಮುಕ್ತನಾಗುತ್ತಾನೆ. ಅವನು, ಭಗವಂತನ ವಿಭಿನ್ನಾಂಶನಾಗಿ, ಪೂರ್ಣ ಕೃಷ್ಣ ಪ್ರಜ್ಞೆಯಲ್ಲಿ ಈಗಾಗಲೇ ಆತ್ಮಜ್ಞಾನದಲ್ಲಿ ಪ್ರತಿಷ್ಠಿತನು. ಹೀಗಾಗಿ, ಅವನು ನಿಸ್ಸಂದೇಹವಾಗಿ ಕರ್ಮ ಬದ್ಧತೆಗೆ ಅತೀತನು.

**ತಸ್ಮಾದಜ್ಞಾನಸಮ್ಭೂತಂ ಹೃತ್ಸ್ಥಂ ಜ್ಞಾನಾಸಿನಾತ್ಮನಃ ।**
**ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ ॥ ೪೨ ॥**

ತಸ್ಮಾತ್—ಆದ್ದರಿಂದ, ಅಜ್ಞಾನಸಮ್ಭೂತಮ್—ಅಜ್ಞಾನ ಜನ್ಯವಾದ, ಹೃತ್‌ಸ್ಥಮ್—ಹೃದಯದಲ್ಲಿ ಸ್ಥಿತವಾದ, ಜ್ಞಾನ—ಜ್ಞಾನದ, ಅಸಿನಾ—ಶಸ್ತ್ರದಿಂದ, ಆತ್ಮನಃ—ಆತ್ಮನ, ಛಿತ್ತ್ವಾ—ಛೇದಿಸಿ, ಏನಮ್—ಈ, ಸಂಶಯಮ್—ಸಂಶಯವನ್ನು, ಯೋಗಮ್—ಯೋಗದಲ್ಲಿ, ಆತಿಷ್ಠ—ಸನ್ನಿವೇಶಿತನಾಗು, ಉತ್ತಿಷ್ಠ—ಹೋರಾಡಲು ಎದ್ದೇಳು, ಭಾರತ—ಹೇ ಭರತವಂಶಜನೇ.

**ಆದ್ದರಿಂದ ಅಜ್ಞಾನದಿಂದ ನಿನ್ನ ಹೃದಯದಲ್ಲಿ ಮೂಡಿರುವ ಸಂಶಯಗಳನ್ನು ಜ್ಞಾನ ಶಸ್ತ್ರದಿಂದ ಛೇದಿಸಬೇಕು. ಹೇ ಭಾರತ, ಯೋಗ ಸಜ್ಜಿತನಾಗಿ ಎದ್ದೇಳು ಮತ್ತು ಯುದ್ಧ ಮಾಡು.**

**ಭಾವಾರ್ಥ :** ಈ ಅಧ್ಯಾಯದಲ್ಲಿ ಉಪದೇಶಿಸಿದ ಯೋಗ ಪದ್ಧತಿಯನ್ನು ಜೀವಿಯ ನಿತ್ಯ ಕ್ರಿಯಾಚರಣೆಗಳು ಅಥವಾ **ಸನಾತನ ಯೋಗ** ಎಂದು ಕರೆದಿದೆ. ಈ ಯೋಗದಲ್ಲಿ ಎರಡು ಬಗೆಯ ಯಜ್ಞ ಕರ್ಮಗಳಿವೆ: ಮೊದಲನೆಯದು ಒಬ್ಬನ ಭೌತಿಕ ವಸ್ತುಗಳ ತ್ಯಾಗ ಮತ್ತು ಎರಡನೆಯದು ಶುದ್ಧ ಆಧ್ಯಾತ್ಮಿಕ ಚಟುವಟಿಕೆಯಾದ ಆತ್ಮಜ್ಞಾನ. ಒಬ್ಬನ ಭೌತಿಕ ವಸ್ತುಗಳ ತ್ಯಾಗವನ್ನು ಆಧ್ಯಾತ್ಮಿಕ ಸಾಕ್ಷಾತ್ಕಾರಕ್ಕಾಗಿ ಹೊಂದಿಸಿಕೊಳ್ಳದಿದ್ದರೆ, ಆಗ ಅಂಥ ಯಜ್ಞವು ಭೌತಿಕವಾಗುತ್ತದೆ. ಆದರೆ ಅಂಥ ಯಜ್ಞಗಳನ್ನು ಆಧ್ಯಾತ್ಮ ಗುರಿಯೊಡನೆ, ಅಥವಾ ಭಕ್ತಿಯುತ ಸೇವೆಯಲ್ಲಿ ಆಚರಿಸುವವನು ಪರಿಪೂರ್ಣ ಯಜ್ಞವನ್ನು ಮಾಡುತ್ತಾನೆ. ನಾವು ಆಧ್ಯಾತ್ಮಿಕ ಚಟುವಟಿಕೆಗಳಿಗೆ ಬಂದಾಗ, ಇವು ಕೂಡ ಎರಡು ಬಗೆ ಎಂದು ಕಾಣುತ್ತೇವೆ: ಎಂದರೆ, ತನ್ನ ಸ್ವಂತ ಆತ್ಮನನ್ನು (ಅಥವಾ ಒಬ್ಬನ ಸ್ವರೂಪ ಸ್ಥಿತಿಯನ್ನು) ಅರಿಯುವುದು, ಮತ್ತು ಪರಮ ದೇವೋತ್ತಮ ಪುರುಷನನ್ನು ಕುರಿತ ತತ್ವ. ಯಥಾವತ್ತಾಗಿ ಭಗವದ್ಗೀತೆಯ ಮಾರ್ಗವನ್ನು ಅನುಸರಿಸುವವನು ಅಧ್ಯಾತ್ಮ ಜ್ಞಾನದ ಈ ಎರಡು ಮುಖ್ಯ ವಿಭಾಗಗಳನ್ನು ಬಹಳ ಸುಲಭವಾಗಿ ಅರಿಯಬಹುದು. ಅಂಥವನಿಗೆ ಆತ್ಮನು ಭಗವಂತನ ವಿಭಿನ್ನಾಂಶನೆಂಬ ಪರಿಪೂರ್ಣ ಜ್ಞಾನ ಹೊಂದಲು ಯಾವ ಕಷ್ಟವೂ ಇಲ್ಲ. ಅಂಥ ಜ್ಞಾನವು ಪ್ರಯೋಜನಕಾರಿ, ಏಕೆಂದರೆ ಅಂಥ ವ್ಯಕ್ತಿಯು ಭಗವಂತನ ದಿವ್ಯಲೀಲೆಗಳನ್ನು ಸುಲಭವಾಗಿ ಅರಿತುಕೊಳ್ಳಬಲ್ಲನು. ಈ ಅಧ್ಯಾಯದ

ಪ್ರಾರಂಭದಲ್ಲಿ ಸ್ವಯಂ ಭಗವಂತನೇ ತನ್ನ ದಿವ್ಯ ಲೀಲೆಗಳನ್ನು ಕುರಿತು ಚರ್ಚಿಸಿದನು. ಗೀತೆಯ ಉಪದೇಶಗಳನ್ನು ಅರಿತುಕೊಳ್ಳದವನು ಶ್ರದ್ಧಾಹೀನನು, ಮತ್ತು ಭಗವಂತ ನಿಂದ ಅವನಿಗೆ ನೀಡಲ್ಪಟ್ಟ ಅಲ್ಪ ಸ್ವಾತಂತ್ರ್ಯವನ್ನು ದುರುಪಯೋಗ ಮಾಡಿ ಕೊಳ್ಳುತ್ತಿರುವನೆಂದು ಭಾವಿಸಬೇಕು. ಇಂಥ ಉಪದೇಶಗಳಿಂದಲೂ ಭಗವಂತನ ನಿಜ ಸ್ವರೂಪವು ನಿತ್ಯ, ಆನಂದಮಯ, ಸರ್ವಜ್ಞ ದೇವೋತ್ತಮ ಪುರುಷನೆಂದು ಅರಿತು ಕೊಳ್ಳದಿದ್ದರೆ, ಅವನು ಖಂಡಿತ ಮೂರ್ಖಾಗ್ರೇಸರನು. ಕೃಷ್ಣ ಪ್ರಜ್ಞೆಯ ತತ್ವಗಳನ್ನು ಕ್ರಮೇಣ ಸ್ವೀಕರಿಸಿ ಅಜ್ಞಾನವನ್ನು ನಿವಾರಿಸಬಹುದು. ದೇವತೆಗಳನ್ನು ಕುರಿತು ನಾನಾ ಬಗೆಯ ಯಜ್ಞಗಳು, ಬ್ರಹ್ಮ ಯಜ್ಞ, ಬ್ರಹ್ಮಚರ್ಯೆ, ಗೃಹಸ್ಥಾಶ್ರಮ, ಇಂದ್ರಿಯ ನಿಗ್ರಹ, ಯೋಗಸಿದ್ಧಿ ಸಾಧನೆ, ತಪಸ್ಸು, ಭೌತಿಕ ವಸ್ತುಗಳ ತ್ಯಾಗ, ವೇದಾಧ್ಯಯನ ಮತ್ತು ವರ್ಣಾಶ್ರಮಧರ್ಮವೆಂಬ ಸಾಮಾಜಿಕ ವ್ಯವಸ್ಥೆಯಲ್ಲಿ ಭಾಗವಹಿಸುವ ಯಜ್ಞ ದಿಂದ ಕೃಷ್ಣ ಪ್ರಜ್ಞೆಯನ್ನು ಜಾಗೃತಗೊಳಿಸಬಹುದು. ಇವುಗಳೆಲ್ಲವೂ ಯಜ್ಞ ಗಳೆಂದು ಕರೆಯಲ್ಪಟ್ಟಿವೆ ಮತ್ತು ಇವುಗಳೆಲ್ಲವೂ ನಿಯಂತ್ರಿತ ಕ್ರಿಯೆಯ ಮೇಲೆ ಆಧರಿತ ವಾಗಿವೆ. ಆದರೆ ಈ ಎಲ್ಲ ಚಟುವಟಿಕೆಗಳಲ್ಲಿ ಆತ್ಮ ಸಾಕ್ಷಾತ್ಕಾರವು ಮುಖ್ಯಾಂಶ. ಈ ಉದ್ದೇಶವನ್ನು ಅರಸುವವನು ಭಗವದ್ಗೀತೆಯ ನಿಜವಾದ ವಿದ್ಯಾರ್ಥಿ, ಆದರೆ ಕೃಷ್ಣನ ಅಧಿಕಾರವನ್ನು ಶಂಕಿಸುವವನು ಪತನವಾಗುತ್ತಾನೆ. ಆದ್ದರಿಂದ ಒಬ್ಬನು ಸೇವೆ ಮತ್ತು ಶರಣಾಗತಿಯಿಂದ ಅಧಿಕೃತ ಗುರುವಿನಿಂದ ಭಗವದ್ಗೀತೆಯನ್ನು ಅಥವಾ ಇತರ ಯಾವುದೇ ಶಾಸ್ತ್ರವನ್ನು ಅಧ್ಯಯನ ಮಾಡುವಂತೆ ಉಪದೇಶಿಸಿದೆ. ಅಧಿಕೃತ ಗುರುವು ಅನಾದಿ ಕಾಲದಿಂದ ಬಂದ ಪರಂಪರೆಯಲ್ಲಿ ಇರುತ್ತಾರೆ ಮತ್ತು ಅವರು ಭಗವಂತನ ಉಪದೇಶ ಗಳನ್ನು ಬಿಟ್ಟು ಹೋಗುವುದೇ ಇಲ್ಲ. ಈ ಉಪದೇಶಗಳನ್ನೇ ಲಕ್ಷಾಂತರ ವರ್ಷಗಳ ಹಿಂದೆ ಭಗವಂತನು ಸೂರ್ಯದೇವನಿಗೆ ವಿವರಿಸಿದನು, ಮತ್ತು ಅವನಿಂದ ಭಗವದ್ಗೀತೆಯ ಉಪದೇಶಗಳು ಈ ಭೂಲೋಕಕ್ಕೆ ಇಳಿದು ಬಂದಿವೆ. ಆದ್ದರಿಂದ ಗೀತೆಯಲ್ಲಿಯೇ ಹೇಳಿರುವಂತೆ ಭಗವದ್ಗೀತಾ ಮಾರ್ಗವನ್ನು ಒಬ್ಬನು ಅನುಸರಿಸಬೇಕು ಮತ್ತು ಇತರರನ್ನು ನಿಜಮಾರ್ಗದಿಂದ ದಾರಿತಪ್ಪಿಸುವ, ವೈಯಕ್ತಿಕ ಅಭಿವೃದ್ಧಿಕಾಂಕ್ಷಿಗಳಾದ ಸ್ವಾರ್ಥಜನ ರಿಂದ ಎಚ್ಚರವಿರಬೇಕು. ಭಗವಂತನು ನಿಶ್ಚಿತವಾಗಿ ಪರಮ ಪುರುಷನು, ಮತ್ತು ಅವನ ಲೀಲೆಗಳು ದಿವ್ಯ. ಇದನ್ನು ಅರಿಯುವವನು ಭಗವದ್ಗೀತೆಯ ಅಧ್ಯಯನದ ಪ್ರಾರಂಭ ದಿಂದಲೇ ಮುಕ್ತಾತ್ಮನು.

**ಇಲ್ಲಿಗೆ "ಶ್ರೀಮದ್ ಭಗವದ್ಗೀತಾ" ದಲ್ಲಿನ ನಾಲ್ಕನೆಯ ಅಧ್ಯಾಯವಾದ 'ದಿವ್ಯಜ್ಞಾನ' ಎಂಬುದರ ಭಕ್ತಿವೇದಾಂತ ತಾತ್ಪರ್ಯವು ಮುಗಿಯಿತು.**



## ಅಧ್ಯಾಯ ಐದು



# ಕರ್ಮ ಯೋಗ

## ಕೃಷ್ಣ ಪ್ರಜ್ಞೆಯಲ್ಲಿ ಕಾರ್ಯ

**ಅರ್ಜುನ ಉವಾಚ—**

**ಸಂನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ ।**
**ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಮ್ ॥ ೧ ॥**

ಅರ್ಜುನ ಉವಾಚ—ಅರ್ಜುನನು ಹೇಳಿದನು, ಸನ್ನ್ಯಾಸಮ್—ಪರಿತ್ಯಾಗವನ್ನು, ಕರ್ಮಣಾಮ್—ಎಲ್ಲ ಕಾರ್ಯಗಳ, ಕೃಷ್ಣ—ಓ ಕೃಷ್ಣ, ಪುನಃ—ಮತ್ತೆ, ಯೋಗಮ್—ಭಕ್ತಿಯುತ ಸೇವೆಯನ್ನು, ಚ—ಕೂಡ, ಶಂಸಸಿ—ನೀನು ಹೊಗಳುತ್ತಿರುವೆ, ಯತ್—ಯಾವುದು, ಶ್ರೇಯಃ—ಹೆಚ್ಚು ಪ್ರಯೋಜನಕಾರಿ, ಏತಯೋಃ—ಈ ಎರಡರಲ್ಲಿ, ಏಕಮ್—ಒಂದನ್ನು, ತತ್—ಅದು, ಮೇ—ನನಗೆ, ಬ್ರೂಹಿ—ದಯವಿಟ್ಟು ಹೇಳು, ಸುನಿಶ್ಚಿತಮ್—ನಿಶ್ಚಿತವಾಗಿ.

**ಅರ್ಜುನನು ನುಡಿದನು : ಹೇ ಕೃಷ್ಣ, ಮೊಟ್ಟಮೊದಲು ಕಾರ್ಯ ಪರಿತ್ಯಾಗ ಮಾಡು ಎಂದು ಹೇಳಿದೆ, ಮತ್ತೆ ಭಕ್ತಿಯೊಡನೆ ಕಾರ್ಯ ಮಾಡಲು ಸೂಚಿಸುತ್ತಿರುವೆ. ಈಗ ಈ ಎರಡರಲ್ಲಿ ಯಾವುದು ಹೆಚ್ಚು ಪ್ರಯೋಜನಕರ ಎಂಬುದನ್ನು ದಯವಿಟ್ಟು ಸುನಿಶ್ಚಿತವಾಗಿ ನನಗೆ ಹೇಳುವೆಯಾ ?**

**ಭಾವಾರ್ಥ:**—ಭಗವದ್ಗೀತೆಯ ಈ ಐದನೆಯ ಅಧ್ಯಾಯದಲ್ಲಿ ಭಕ್ತಿಯುತ ಸೇವಾ ಕಾರ್ಯವು ಶುಷ್ಕ ಮಾನಸಿಕ ಊಹಾಪೋಹಗಳಿಗಿಂತ ಶ್ರೇಷ್ಠವಾದುದು ಎಂದು ಭಗವಂತನು

ಹೇಳುತ್ತಾನೆ. ಮಾನಸಿಕ ಊಹಾಪೋಹಕ್ಕಿಂತ ಭಕ್ತಿಯುತ ಸೇವೆಯು ಸುಲಭವು, ಏಕೆಂದರೆ ಅದು ದಿವ್ಯ ಸ್ವಭಾವವಾದ್ದರಿಂದ ಒಬ್ಬನನ್ನು ಕರ್ಮಫಲದಿಂದ ಮುಕ್ತಗೊಳಿಸುತ್ತದೆ. ಎರಡನೆಯ ಅಧ್ಯಾಯದಲ್ಲಿ, ಆತ್ಮನ ಪೀಠಿಕಾ ಜ್ಞಾನ ಮತ್ತು ಅದು ಭೌತಿಕ ದೇಹದಲ್ಲಿ ಸಿಲುಕಿಕೊಂಡಿರುವುದನ್ನು ವಿವರಿಸಿದೆ. ಬುದ್ಧಿಯೋಗ ಅಥವಾ ಭಕ್ತಿಯುತ ಸೇವೆಯಿಂದ ಈ ಭೌತಿಕ ಬಂಧನದಿಂದ ಹೇಗೆ ಪಾರಾಗುವುದು ಎಂಬುದು ಕೂಡ ಅಲ್ಲಿ ವಿವರಿಸಲಾಯಿತು. ಮೂರನೆಯ ಅಧ್ಯಾಯದಲ್ಲಿ, ಜ್ಞಾನವೇದಿಕೆಯ ಮೇಲೆ ಸನ್ನಿವೇಶಿತನಾಗಿರುವವನಿಗೆ ಆಚರಿಸಲು ಯಾವುದೇ ಕರ್ತವ್ಯಗಳಿಲ್ಲವೆಂದೂ ವಿವರಿಸಲಾಯಿತು. ಮತ್ತು ನಾಲ್ಕನೆಯ ಅಧ್ಯಾಯದಲ್ಲಿ ಎಲ್ಲ ಬಗೆಯ ಯಜ್ಞಕಾರ್ಯಗಳು ಜ್ಞಾನದಲ್ಲಿ ಉಚ್ಛ್ರಾಯವಾಗುತ್ತವೆ ಎಂದು ಅರ್ಜುನನಿಗೆ ಭಗವಂತನು ಹೇಳಿದನು. ಆದರೆ ನಾಲ್ಕನೆಯ ಅಧ್ಯಾಯದ ಕೊನೆಯಲ್ಲಿ, ಪರಿಪೂರ್ಣಜ್ಞಾನದಲ್ಲಿ ಸ್ಥಿತನಾಗಿದ್ದು, ಜಾಗೃತನಾಗಿ ಯುದ್ಧ ಮಾಡಲು ಭಗವಂತನು ಬೋಧಿಸಿದನು. ಆದುದರಿಂದ ಏಕಕಾಲದಲ್ಲಿ ಭಕ್ತಿಯಲ್ಲಿ ಕಾರ್ಯ ಮತ್ತು ಜ್ಞಾನದಲ್ಲಿ ಅಕರ್ಮ ಈ ಎರಡರ ಮಹತ್ವವನ್ನು ಹೇಳುತ್ತಾ ಕೃಷ್ಣನು ಅರ್ಜುನನಿಗೆ ದಿಗ್ಭ್ರಮೆಗೊಳಿಸಿದನು ಮತ್ತು ಅವನ ನಿರ್ಧಾರದಲ್ಲಿ ಕಂಗೆಡಿಸಿದನು. ಜ್ಞಾನದಲ್ಲಿ ಪರಿತ್ಯಾಗವು ಇಂದ್ರಿಯ ಚಟುವಟಿಕೆಗಳೆಂದು ಆಚರಿಸುವ ಎಲ್ಲ ಬಗೆಯ ಕಾರ್ಯಗಳನ್ನು ನಿಲ್ಲಿಸಿ ಬಿಡುವುದನ್ನು ಒಳಗೊಂಡಿದೆ ಎಂದು ಅರ್ಜುನನು ಅರಿಯುತ್ತಾನೆ. ಆದರೆ ಒಬ್ಬನು ಭಕ್ತಿಯುತ ಸೇವೆಯಲ್ಲಿ ಕಾರ್ಯವನ್ನಾಚರಿಸಿದರೆ, ಆಗ ಕಾರ್ಯವು ಹೇಗೆ ನಿಲ್ಲಿಸಲ್ಪಡುತ್ತದೆ ? ಅರ್ಥಾತ್, ಸಂನ್ಯಾಸ ಅಥವಾ ಜ್ಞಾನದಲ್ಲಿ ಪರಿತ್ಯಾಗವು ಎಲ್ಲ ಬಗೆಯ ಚಟುವಟಿಕೆಗಳಿಂದ ಪೂರ್ಣವಾಗಿ ಮುಕ್ತರಾಗಬೇಕು ಎಂದು ಅವನು ಭಾವಿಸುತ್ತಾನೆ, ಏಕೆಂದರೆ ಕಾರ್ಯ ಮತ್ತು ಸಂನ್ಯಾಸ ಹೊಂದಿಕೆಯಾಗುವುದಿಲ್ಲ ಎಂದು ಅವನಿಗೆ ತೋರುತ್ತದೆ. ಪೂರ್ಣ ಜ್ಞಾನದಲ್ಲಿ ಕಾರ್ಯವು ಪ್ರತಿಕ್ರಿಯಾರಹಿತ. ಆದ್ದರಿಂದ ಅದು ಅಕರ್ಮದಂತೆಯೇ ಎಂದು ಅರ್ಜುನನು ಅರಿತಂತೆ ತೋರುವುದಿಲ್ಲ. ಆದ್ದರಿಂದ ತಾನು ಕಾರ್ಯವನ್ನು ಸಂಪೂರ್ಣವಾಗಿ ನಿಲ್ಲಿಸಬೇಕೋ ಅಥವಾ ಪೂರ್ಣ ಜ್ಞಾನದಲ್ಲಿ ಮಾಡಬೇಕೋ ಎಂದು ಕೇಳುತ್ತಾನೆ.

**ಶ್ರೀಭಗವಾನುವಾಚ—**

**ಸಂನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ ।**
**ತಯೋಸ್ತು ಕರ್ಮಸಂನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ ॥ ೨ ॥**

ಶ್ರೀ ಭಗವಾನ್ ಉವಾಚ—ಪರಮ ದೇವೋತ್ತಮ ಪುರುಷನು ನುಡಿದನು, ಸನ್ನ್ಯಾಸಃ—ಕಾರ್ಯಗಳ ಪರಿತ್ಯಾಗ, ಕರ್ಮಯೋಗಃ—ಭಕ್ತಿಯಲ್ಲಿ ಕಾರ್ಯವು, ಚ— ಮತ್ತು, ನಿಃಶ್ರೇಯಸ ಕರೌ—ಮೋಕ್ಷ ಮಾರ್ಗಕ್ಕೆ ಕೊಂಡೊಯ್ಯುವ, ಉಭೌ— ಉಭಯ, ತಯೋಃ—ಎರಡರಲ್ಲಿ, ತು— ಆದರೆ, ಕರ್ಮಸನ್ನ್ಯಾಸಾತ್—ಕಾಮ್ಯ ಕಾರ್ಯ ಪರಿತ್ಯಾಗಕ್ಕೆ ಹೋಲಿಸಲಾಗಿ, ಕರ್ಮಯೋಗಃ—ಭಕ್ತಿಯಲ್ಲಿ ಕಾರ್ಯವು, ವಿಶಿಷ್ಯತೇ— ಮೇಲಾದುದು.

**ಪರಮ ದೇವೋತ್ತಮ ಪುರುಷನು ಉತ್ತರಿಸಿದನು : ಕಾರ್ಯಗಳ ಪರಿತ್ಯಾಗ ಮತ್ತು ಭಕ್ತಿಯಲ್ಲಿ ಕಾರ್ಯ—ಎರಡೂ ಮೋಕ್ಷಕ್ಕೆ ಒಳ್ಳೆಯದು. ಆದರೆ, ಅವೆರಡರಲ್ಲಿ ಭಕ್ತಿಯುತ ಸೇವೆಯು ಕಾರ್ಯಗಳ ಪರಿತ್ಯಾಗಕ್ಕಿಂತ ಮೇಲಾದುದು.**

**ಭಾವಾರ್ಥ:**—ಕಾಮ್ಯ ಕಾರ್ಯಗಳು (ಇಂದ್ರಿಯ ತೋಷಣೆಯನ್ನು ಅರಸುವ ಕಾರ್ಯಗಳು) ಭೌತಿಕ ಬಂಧನಕ್ಕೆ ಕಾರಣ. ದೈಹಿಕ ಸುಖದ ಮಟ್ಟವನ್ನು ಸುಧಾರಿಸುವ ಗತಿಯಿಂದ ಚಟುವಟಿಕೆಗಳಲ್ಲಿ ತೊಡಗಿರುವವರೆಗೆ, ಒಬ್ಬನು ಭಿನ್ನ ಭಿನ್ನ ದೇಹಗಳಿಗೆ ದೇಹಾಂತರ ಹೊಂದುವುದು ಖಂಡಿತ. ಮತ್ತು ಆ ಮೂಲಕ ಭೌತಿಕ ಬಂಧನವು ನಿರಂತರವಾಗಿ ಮುಂದುವರಿಯುವುದು. ಶ್ರೀಮದ್ಭಾಗವತದಲ್ಲಿ (5. 5. 4–6) ಇದನ್ನು ಹೀಗೆ ದೃಢಪಡಿಸಿದೆ :

ನೂನಂ ಪ್ರಮತ್ತಃ ಕುರುತೇ ವಿಕರ್ಮ
ಯದಿನ್ದ್ರಿಯಪ್ರೀತಯ ಆಪೃಣೋತಿ।
ನ ಸಾಧು ಮನ್ಯೇ ಯತ ಆತ್ಮನೋऽಯಮ್
ಅಸನ್ನಪಿ ಕ್ಲೇಶದ ಆಸ ದೇಹಃ॥
ಪರಾಭವಸ್ತಾವದಬೋಧಜಾತೋ
ಯಾವನ್ನ ಜಿಜ್ಞಾಸತ ಆತ್ಮತತ್ತ್ವಮ್।
ಯಾವತ್ಕ್ರಿಯಾಸ್ತಾವದಿದಂ ಮನೋ ವೈ
ಕರ್ಮಾತ್ಮಕಂ ಯೇನ ಶರೀರಬನ್ಧಃ॥
ಏವಂ ಮನಃ ಕರ್ಮವಶಂ ಪ್ರಯುಂಕ್ತೇ
ಅವಿದ್ಯಯಾऽऽತ್ಮನ್ಯುಪ ಧೀಯಮಾನೇ।
ಪ್ರೀತಿರ್ನಯಾವನ್ಮಯಿ ವಾಸುದೇವೇ
ನ ಮುಚ್ಯತೇ ದೇಹಯೋಗೇನತಾವತ್॥

"ಜನ ಇಂದ್ರಿಯ ತೋಷಣಕ್ಕಾಗಿ ಹುಚ್ಚರಾಗಿದ್ದಾರೆ, ಮತ್ತು ಕ್ಲೇಶಮಯವಾದ ಈ ಶರೀರವು ಒಬ್ಬನ ಪೂರ್ವ ಕಾಮ್ಯ ಕಾರ್ಯಗಳ ಫಲ ಎಂಬುದನ್ನು ಅವರು ತಿಳಿದಿಲ್ಲ. ಈ ದೇಹವು ತಾತ್ಕಾಲಿಕವಾದರೂ ಅದು ಸದಾ ಅನೇಕ ರೀತಿಯಲ್ಲಿ ಒಬ್ಬನಿಗೆ ತೊಂದರೆ ಕೊಡುತ್ತದೆ. ಆದ್ದರಿಂದ, ಇಂದ್ರಿಯ ತೋಷಣೆಗಾಗಿ ಕಾರ್ಯಮಾಡುವುದು ಒಳ್ಳೆಯದಲ್ಲ. ಒಬ್ಬನು ತನ್ನ ನಿಜ ವ್ಯಕ್ತಿತ್ವದ ಬಗ್ಗೆ ಜಿಜ್ಞಾಸೆ ಮಾಡದವರೆಗೆ, ಅವನು ಜೀವನದಲ್ಲಿ ವಿಫಲನೆಂದು ಪರಿಗಣಿಸಲ್ಪಡುತ್ತಾನೆ. ತನ್ನ ವ್ಯಕ್ತಿತ್ವವನ್ನು ತಿಳಿಯದವರೆಗೆ, ಅವನು ಇಂದ್ರಿಯತೋಷಣಕ್ಕಾಗಿ ಕಾಮ್ಯ ಫಲಗಳಿಗಾಗಿ ಕಾರ್ಯ ಮಾಡಬೇಕಾಗುವುದು ಮತ್ತು ಒಬ್ಬನು ಇಂದ್ರಿಯತೋಷಣ ಪ್ರಜ್ಞೆಯಲ್ಲಿ ಮಗ್ನನಾಗಿರುವವರೆಗೆ, ಒಂದು ದೇಹದಿಂದ ಮತ್ತೊಂದಕ್ಕೆ ದೇಹಾಂತರ ಹೊಂದಬೇಕಾಗುವುದು. ಮನಸ್ಸು ಕಾಮ್ಯ ಕಾರ್ಯಗಳಲ್ಲಿ ಮಗ್ನವಾಗಿದ್ದರೂ ಮತ್ತು ಅಜ್ಞಾನದಿಂದ ಪ್ರಭಾವಿತವಾಗಿದ್ದರೂ ಒಬ್ಬನು

ವಾಸುದೇವನ ಭಕ್ತಿಯುತ ಸೇವೆಯಲ್ಲಿ ಪ್ರೀತಿಯನ್ನು ಬೆಳಸಿಕೊಳ್ಳಬೇಕು. ಆಗ ಮಾತ್ರ ಒಬ್ಬನು ಭೌತಿಕ ಅಸ್ತಿತ್ವದ ಬಂಧನದಿಂದ ಹೊರಬರುವ ಅವಕಾಶ ಹೊಂದಬಲ್ಲನು."

ಆದ್ದರಿಂದ ಜ್ಞಾನವು (ಒಬ್ಬನು ಈ ಭೌತಿಕ ದೇಹವಲ್ಲ. ಚೇತನಾತ್ಮನು ಎಂಬ ಅರಿವು) ಮೋಕ್ಷಕ್ಕೆ ಸಾಲದು. ಒಬ್ಬನು ಚೇತನಾತ್ಮನ ಸ್ಥಾನದಲ್ಲಿ ಕಾರ್ಯಮಾಡಬೇಕು. ಹಾಗಿಲ್ಲದಿದ್ದರೆ ಭೌತಿಕ ಬಂಧನದಿಂದ ತಪ್ಪಿಸಿಕೊಳ್ಳಲು ಆಗದು. ಕೃಷ್ಣ ಪ್ರಜ್ಞೆಯಲ್ಲಿನ ಕಾರ್ಯವಾದರೋ– ಕಾಮ್ಯ ವೇದಿಕೆಯ ಮೇಲಿನದಲ್ಲ. ಪೂರ್ಣಜ್ಞಾನದಲ್ಲಿ ಆಚರಿಸಿದ ಚಟುವಟಿಕೆಗಳು ನಿಜ ಜ್ಞಾನದಲ್ಲಿ ಒಬ್ಬನ ಪ್ರಗತಿಯನ್ನು ಬಲಗೊಳಿಸುವುದು. ಕೃಷ್ಣ ಪ್ರಜ್ಞೆಯಿಲ್ಲದೆ, ಕಾಮ್ಯ ಕಾರ್ಯಗಳ ತ್ಯಾಗಮಾತ್ರವೇ ವಾಸ್ತವಿಕವಾಗಿ ಬದ್ಧಾತ್ಮನ ಹೃದಯವನ್ನು ಶುದ್ಧಗೊಳಿಸುವುದಿಲ್ಲ. ಹೃದಯವು ಶುದ್ಧವಾಗದವರೆಗೆ ಒಬ್ಬನು ಕಾಮ್ಯ ವೇದಿಕೆಯ ಮೇಲೆ ಕಾರ್ಯಮಾಡಬೇಕಾಗುವುದು. ಆದರೆ ಕೃಷ್ಣ ಪ್ರಜ್ಞಾ ಕಾರ್ಯವು, ಭೌತಿಕ ವೇದಿಕೆಗೆ ಇಳಿಯುವ ಅಗತ್ಯವಿಲ್ಲದಂತೆ ಕಾಮ್ಯ ಕಾರ್ಯ ಫಲದಿಂದ ತಪ್ಪಿಸಿಕೊಳ್ಳಲು ಒಬ್ಬನಿಗೆ ಸ್ವಾಭಾವಿಕವಾಗಿಯೇ ಸಹಾಯಕವಾಗುತ್ತದೆ. ಆದ್ದರಿಂದ ಕೃಷ್ಣಪ್ರಜ್ಞೆಯಲ್ಲಿ ಕಾರ್ಯವು, ಸದಾ ಪತನಾಪಾಯವಿರುವ ಕಾರ್ಯತ್ಯಾಗಕ್ಕಿಂತಲೂ ಸದಾ ಶ್ರೇಷ್ಠ. ಕೃಷ್ಣ ಪ್ರಜ್ಞೆ ಇಲ್ಲದ ತ್ಯಾಗವು ಅಪೂರ್ಣವೆಂದು ಶ್ರೀಲ ರೂಪ ಗೋಸ್ವಾಮಿಯವರು ಭಕ್ತಿರಸಾಮೃತ ಸಿಂಧುವಿನಲ್ಲಿ (1.2.258) ಹೀಗೆ ದೃಢೀಕರಿಸಿದ್ದಾರೆ :

ಪ್ರಾಪಂಚಿಕತಯಾ ಬುದ್ಧ್ಯಾ ಹರಿಸಂಬನ್ಧಿವಸ್ತುನಃ।
ಮುಮುಕ್ಷುಭಿಃ ಪರಿತ್ಯಾಗೋ ವೈರಾಗ್ಯಂ ಫಲ್ಗು ಕಥ್ಯತೇ॥

"ಮೋಕ್ಷಾಕಾಂಕ್ಷಿಗಳಾದವರು ಪರಮ ದೇವೋತ್ತಮ ಪುರುಷನಿಗೆ ಸಂಬಂಧಿಸಿದ ವಸ್ತುಗಳನ್ನು, ಅವುಗಳು ಭೌತಿಕವೆಂದು ಭಾವಿಸಿ ತ್ಯಜಿಸಿದಾಗ, ಅವರ ಪರಿತ್ಯಾಗವನ್ನು(ವೈರಾಗ್ಯ) ಅಪೂರ್ಣ ಎಂದು ಕರೆದಿದೆ." ಅಸ್ತಿತ್ವದಲ್ಲಿರುವ ಪ್ರತಿಯೊಂದೂ ಭಗವಂತನಿಗೆ ಸೇರಿದ್ದು ಮತ್ತು ಯಾವುದರ ಮೇಲೆಯೂ ಯಾರೂ ಒಡೆತನದ ಹಕ್ಕು ಸಾಧಿಸಕೂಡದು ಎಂಬ ಜ್ಞಾನವನ್ನೊಳಗೊಂಡ ಪರಿತ್ಯಾಗವು ಪೂರ್ಣವಾದುದು. ವಾಸ್ತವಿಕವಾಗಿ, ಯಾವುದೂ ಯಾರಿಗೂ ಸೇರಿದ್ದಲ್ಲ ಎಂಬುದನ್ನು ಅರಿತುಕೊಳ್ಳಬೇಕು. ಆಗ ಪರಿತ್ಯಾಗದ ಪ್ರಶ್ನೆ ಎಲ್ಲಿ ? ಪ್ರತಿಯೊಂದೂ ಕೃಷ್ಣನ ಸ್ವತ್ತು ಎಂದು ತಿಳಿದವನು ಸದಾ ವೈರಾಗ್ಯದಲ್ಲಿ ಸನ್ನಿವೇಶಿತನು. ಪ್ರತಿಯೊಂದೂ ಕೃಷ್ಣನದಾಗಿರುವುದರಿಂದ, ಪ್ರತಿಯೊಂದನ್ನೂ ಕೃಷ್ಣನ ಸೇವೆಯಲ್ಲಿ ನಿಯೋಜಿಸಬೇಕು. ಕೃಷ್ಣ ಪ್ರಜ್ಞೆಯಲ್ಲಿ ಇಂಥ ಪರಿಪೂರ್ಣ ಕಾರ್ಯವು, ಮಾಯಾವಾದಿ ಸಿದ್ಧಾಂತದ ಸನ್ಯಾಸಿಯ ಯಾವುದೇ ಪ್ರಮಾಣದ ಕೃತಕ ವೈರಾಗ್ಯಕ್ಕಿಂತ ಎಷ್ಟೋ ಉತ್ತಮವಾಗಿರುತ್ತದೆ.

**ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ ।**
**ನಿರ್ದ್ವನ್ದ್ವೋ ಹಿ ಮಹಾಬಾಹೋ ಸುಖಂ ಬನ್ಧಾತ್ ಪ್ರಮುಚ್ಯತೇ ॥ ೩ ॥**

ಜ್ಞೇಯಃ—ತಿಳಿಯಬೇಕು, ಸಃ—ಅವನು, ನಿತ್ಯ—ಸದಾ, ಸನ್ನ್ಯಾಸೀ—ತ್ಯಾಗಿಯು, **ಯಃ**—**ಯಾರು**, ನ—ಇಲ್ಲ, ದ್ವೇಷ್ಟಿ—ದ್ವೇಷಿಸುವುದು, ನ—ಇಲ್ಲ, ಕಾಂಕ್ಷತಿ—

ಇಚ್ಛಿಸುವುದು, ನಿರ್ದ್ವನ್ದ್ವಃ—ಸರ್ವ ದಂದ್ವ ಮುಕ್ತನಾಗಿ, ಹಿ—ಖಂಡಿತವಾಗಿ, ಮಹಾಬಾಹೋ—ಹೇ ಮಹಾ ಬಾಹುವೇ, ಸುಖಮ್—ಸುಖವಾಗಿ, ಬನ್ಧಾತ್—ಬಂಧನದಿಂದ, ಪ್ರಮುಚ್ಯತೇ—ಪೂರ್ಣವಾಗಿ ಮುಕ್ತನು.

**ಯಾರು ತನ್ನ ಚಟುವಟಿಕೆಗಳ ಫಲಗಳನ್ನು ದ್ವೇಷಿಸುವುದು ಇಲ್ಲವೋ ಮತ್ತು ಇಚ್ಛಿಸುವುದೂ ಇಲ್ಲವೋ, ಅವನು ಪರಿತ್ಯಾಗಿ ಎಂದು ತಿಳಿಯಲ್ಪಡುತ್ತಾನೆ. ಹೇ ಮಹಾಬಾಹು ಅರ್ಜುನ, ಅಂಥ ವ್ಯಕ್ತಿಯು, ಸರ್ವ ದ್ವಂದ್ವಗಳಿಂದ ಮುಕ್ತನಾಗಿ, ಸುಲಭವಾಗಿ ಭೌತಿಕ ಬಂಧನವನ್ನು ಗೆಲ್ಲುತ್ತಾನೆ ಮತ್ತು ಪೂರ್ಣವಾಗಿ ಮುಕ್ತನಾಗುತ್ತಾನೆ.**

**ಭಾವಾರ್ಥ :** ಪೂರ್ಣ ಕೃಷ್ಣಪ್ರಾಜ್ಞನು ಸದಾ ಪರಿತ್ಯಾಗಿ, ಏಕೆಂದರೆ ಅವನಿಗೆ ತನ್ನ ಕಾರ್ಯಗಳ ಫಲಗಳ ಬಗ್ಗೆ ದ್ವೇಷ ಅಥವಾ ಇಚ್ಛೆ ಇರುವುದಿಲ್ಲ. ಭಗವಂತನ ದಿವ್ಯ ಪ್ರೇಮಯುತ ಸೇವೆಗೆ ಅರ್ಪಿತನಾದ ಅಂಥ ಪರಿತ್ಯಾಗಿಯು ಜ್ಞಾನದಲ್ಲಿ ಪೂರ್ಣ ಅರ್ಹನು, ಏಕೆಂದರೆ ಅವನು ಕೃಷ್ಣ ಸಂಬಂಧದಲ್ಲಿ ತನ್ನ ಸ್ವರೂಪ ಸ್ಥಿತಿಯನ್ನು ತಿಳಿದಿರುತ್ತಾನೆ. ಕೃಷ್ಣನು ಪೂರ್ಣನು, ಮತ್ತು ತಾನು ಕೃಷ್ಣನ ವಿಭಿನ್ನಾಂಶನು ಎಂಬುದನ್ನು ಚೆನ್ನಾಗಿ ತಿಳಿದಿರುತ್ತಾನೆ. ಅಂಥ ಜ್ಞಾನವು ಪರಿಪೂರ್ಣ, ಏಕೆಂದರೆ ಅದು ಗುಣಾತ್ಮಕವಾಗಿ ಮತ್ತು ಪರಿಮಾಣಾತ್ಮಕವಾಗಿ ಸರಿಯಾಗಿರುತ್ತದೆ. ಕೃಷ್ಣನೊಂದಿಗೆ ಒಂದಾಗುವ ಕಲ್ಪನೆ ಸರಿಯಲ್ಲ. ಏಕೆಂದರೆ ಭಾಗವು ಪೂರ್ಣಕ್ಕೆ ಸಮವಾಗಲಾರದು. ಒಬ್ಬನು ಗುಣದಲ್ಲಿ ಒಂದಾಗಿರುವನು. ಆದರೂ ಪರಿಮಾಣದಲ್ಲಿ ಬೇರೆ ಎಂಬ ಜ್ಞಾನವು ಒಬ್ಬನನ್ನು ತನ್ನಲ್ಲಿಯೇ ಪೂರ್ಣನಾಗಲು ಕರೆದೊಯ್ಯುವ ಸರಿಯಾದ ದಿವ್ಯ ಜ್ಞಾನ ; ಆಗ ಅವನಿಗೆ ಆಶಿಸುವಂಥ ಅಥವಾ ವಿಷಾದಿಸುವಂಥದ್ದೇನೂ ಇಲ್ಲ. ಅವನ ಮನಸ್ಸಿನಲ್ಲಿ ದಂದ್ವವಿಲ್ಲ, ಏಕೆಂದರೆ ಅವನು ಏನೇ ಮಾಡಿದರೂ ಅವನು ಕೃಷ್ಣನಿಗಾಗಿ ಮಾಡುತ್ತಾನೆ. ಹೀಗೆ ದಂದ್ವಗಳ ವೇದಿಕೆಯಿಂದ ಮುಕ್ತನಾಗಿ— ಈ ಭೌತಿಕ ಜಗತ್ತಿನಲ್ಲಿಯೂ ಅವನು ಮುಕ್ತನು.

**ಸಾಂಖ್ಯಯೋಗೌ ಪೃಥಗ್ ಬಾಲಾಃ ಪ್ರವದನ್ತಿ ನ ಪಣ್ಡಿತಾಃ ।**
**ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿನ್ದತೇ ಫಲಮ್ ॥ ೪ ॥**

ಸಾಂಖ್ಯ—ಭೌತಿಕ ಜಗತ್ತಿನ ವಿಶ್ಲೇಷಣಾತ್ಮಕ ಅಧ್ಯಯನ, ಯೋಗೌ—ಭಕ್ತಿಯುತ ಸೇವೆಯಲ್ಲಿ ಕಾರ್ಯ, ಪೃಥಕ್—ಭಿನ್ನ, ಬಾಲಾಃ—ಮಂದಮತಿಗಳು, ಪ್ರವದನ್ತಿ—ಹೇಳುತ್ತಾರೆ, ನ—ಇಲ್ಲ, ಪಣ್ಡಿತಾಃ—ವಿದ್ವಾಂಸರು, ಏಕಮ್—ಒಂದರಲ್ಲಿ, ಅಪಿ—ಕೂಡ, ಆಸ್ಥಿತಃ—ಸನ್ನಿವೇಶಿತರಾಗಿ, ಸಮ್ಯಕ್—ಪೂರ್ತಿಯಾಗಿ, ಉಭಯೋಃ—ಎರಡರ, ವಿನ್ದತೇ—ಆನಂದಿಸುತ್ತಾರೆ, ಫಲಮ್—ಫಲವನ್ನು.

**ಅಜ್ಞಾನಿಗಳು ಮಾತ್ರ ಭಕ್ತಿಯುತ ಸೇವೆಯು (ಕರ್ಮಯೋಗ) ಭೌತಿಕ ಜಗತ್ತಿನ ವಿಶ್ಲೇಷಣಾತ್ಮಕ ಅಧ್ಯಯನದಿಂದ (ಸಾಂಖ್ಯ) ಭಿನ್ನವೆಂದು ಹೇಳುತ್ತಾರೆ. ಈ ಈ ಪಥಗಳಲ್ಲಿ ಒಂದಕ್ಕೆ ತನ್ನನ್ನು ಚೆನ್ನಾಗಿ ಅರ್ಪಿಸಿಕೊಂಡವನು ಎರಡರ ಫಲಗಳನ್ನೂ ಹೊಂದುತ್ತಾನೆಂದು ವಾಸ್ತವಿಕ ವಿದ್ವಾಂಸರು ಹೇಳುತ್ತಾರೆ.**

**ಭಾವಾರ್ಥ :** ಅಸ್ತಿತ್ವದ ಆತ್ಮವನ್ನು ಕಂಡುಹಿಡಿಯುವುದೇ ಭೌತಿಕ ಜಗತ್ತಿನ ವಿಶ್ಲೇಷಣಾತ್ಮಕ ಅಧ್ಯಯನದ ಗುರಿ. ಭೌತಿಕ ಜಗತ್ತಿನ ಆತ್ಮವು ವಿಷ್ಣು, ಅಥವಾ ಪರಮಾತ್ಮ. ಭಗವಂತನಿಗೆ ಭಕ್ತಿಯುತ ಸೇವೆಯು ಪರಮಾತ್ಮನ ಸೇವೆಯನ್ನು ಒಳಗೊಂಡಿದೆ. ಒಂದು ಮರದ ಬೇರನ್ನು ಹುಡುಕುವುದು, ಬೇರಿಗೆ ನೀರೆರೆಯುವುದು ವಿಧಾನ ಮತ್ತೊಂದು. ಸಾಂಖ್ಯ ತತ್ವದ ನಿಜ ವಿದ್ಯಾರ್ಥಿಯು ಭೌತಿಕ ಜಗತ್ತಿನ ಬೇರು ಎಂದರೆ ವಿಷ್ಣುವನ್ನು ಕಂಡುಕೊಳ್ಳುತ್ತಾನೆ ಮತ್ತು ಅನಂತರ, ಪರಿಪೂರ್ಣ ಜ್ಞಾನದಲ್ಲಿ ಭಗವತ್ಸೇವೆಯಲ್ಲಿ ತೊಡಗುತ್ತಾನೆ. ಆದ್ದರಿಂದ, ಸಾರದಲ್ಲಿ ಇವೆರಡರ ನಡುವೆ ಭೇದವಿಲ್ಲ, ಏಕೆಂದರೆ ಎರಡರ ಗುರಿಯೂ ವಿಷ್ಣು. ಅಂತಿಮ ಗುರಿಯನ್ನು ತಿಳಿಯದವರು ಸಾಂಖ್ಯ ಮತ್ತು ಕರ್ಮ ಯೋಗಗಳ ಉದ್ದೇಶಗಳು ಒಂದೇ ಅಲ್ಲವೆಂದು ಹೇಳುತ್ತಾರೆ, ಆದರೆ ವಿದ್ವಾಂಸನು ಈ ವಿವಿಧ ಪ್ರಕ್ರಿಯೆಗಳಲ್ಲಿ ಒಂದುಗೂಡಿಸುವ ಗುರಿಯನ್ನು ತಿಳಿದಿರುತ್ತಾನೆ.

**ಯತ್ ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ ಯೋಗೈರಪಿ ಗಮ್ಯತೇ ।**
**ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ ॥ ೫ ॥**

ಯತ್—ಯಾವುದು, ಸಾಂಖ್ಯೈಃ—ಸಾಂಖ್ಯ ತತ್ವದ ಮೂಲಕ, ಪ್ರಾಪ್ಯತೇ—ಹೊಂದಲ್ಪಡುವುದು, ಸ್ಥಾನಮ್—ಸ್ಥಾನವು, ತತ್—ಅದು, ಯೋಗೈಃ—ಭಕ್ತಿಯುತ ಸೇವೆಯಿಂದ, ಅಪಿ—ಕೂಡ, ಗಮ್ಯತೇ—ಒಬ್ಬನು ಹೊಂದಬಹುದು, ಏಕಮ್—ಒಂದು, ಸಾಂಖ್ಯಮ್—ವಿಶ್ಲೇಷಣಾತ್ಮಕ ಅಧ್ಯಯನ, ಚ—ಮತ್ತು, ಯೋಗಮ್—ಭಕ್ತಿಯಲ್ಲಿ ಕಾರ್ಯ, ಚ—ಮತ್ತು, ಯಃ—ಯಾರು, ಪಶ್ಯತಿ—ನೋಡುತ್ತಾನೆ, ಸಃ—ಅವನು, ಪಶ್ಯತಿ—ವಾಸ್ತವಿಕವಾಗಿ ನೋಡುತ್ತಾನೆ.

**ವಿಶ್ಲೇಷಣಾತ್ಮಕ ಅಧ್ಯಯನ ಮೂಲಕ ಹೊಂದಿದ ಸ್ಥಾನವನ್ನು ಭಕ್ತಿಯುತ ಸೇವೆಯ ಮೂಲಕವೂ ಹೊಂದಬಹುದೆಂದು ತಿಳಿದವನು, ಮತ್ತು ಇದರಿಂದ ವಿಶ್ಲೇಷಣಾತ್ಮಕ ಅಧ್ಯಯನ ಮತ್ತು ಭಕ್ತಿಯುತ ಸೇವೆಯು ಒಂದೇ ಮಟ್ಟದಲ್ಲಿ ಇವೆಯೆಂದು ಕಾಣುವವನು, ವಿಚಾರಗಳನ್ನು ಯಥಾವತ್ತಾಗಿ ಕಾಣುತ್ತಾನೆ.**

**ಭಾವಾರ್ಥ :** ಜೀವನದ ಅಂತಿಮ ಗುರಿಯನ್ನು ಕಂಡುಕೊಳ್ಳುವುದು ತಾತ್ವಿಕ ಸಂಶೋಧನೆಯ ನಿಜ ಉದ್ದೇಶ. ಆತ್ಮ ಸಾಕ್ಷಾತ್ಕಾರವು ಜೀವನದ ಅಂತಿಮ ಗುರಿಯಾಗಿರುವುದರಿಂದ, ಈ ಎರಡು ಪ್ರಕ್ರಿಯೆಗಳಿಂದ ತಲುಪಿದ ನಿರ್ಣಯಗಳಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಸಾಂಖ್ಯ ತಾತ್ವಿಕ ಸಂಶೋಧನೆಯಿಂದ ಜೀವಿಯೊಬ್ಬನು ಭೌತಿಕ ಜಗತ್ತಿಗೆ ವಿಭಿನ್ನಾಂಶನಲ್ಲ, ಆದರೆ ಪರಮ ಚೇತನದ ವಿಭಿನ್ನಾಂಶ ಎಂಬ ನಿರ್ಣಯಕ್ಕೆ ಬರುತ್ತಾನೆ. ಪರಿಣಾಮವಾಗಿ, ಚೇತನಾತ್ಮನಿಗೂ ಭೌತಿಕ ಜಗತ್ತಿಗೂ ಏನೂ ಸಂಬಂಧ ಇಲ್ಲ; ಅವನ ಕ್ರಿಯೆಗಳು ಪರಮನೊಂದಿಗೆ ಯಾವುದಾದರೂ ಸಂಬಂಧದಲ್ಲಿ ಇರಬೇಕು. ಅವನು ಕೃಷ್ಣ ಪ್ರಜ್ಞೆಯಲ್ಲಿ ಕಾರ್ಯ ಮಾಡಿದಾಗ, ಅವನು ವಾಸ್ತವಿಕವಾಗಿ ತನ್ನ ಸ್ವರೂಪ ಸ್ಥಿತಿಯಲ್ಲಿ ಇರುತ್ತಾನೆ. ಮೊದಲನೆಯ ಪ್ರಕ್ರಿಯೆಯಾದ ಸಾಂಖ್ಯದಲ್ಲಿ ಒಬ್ಬನು ಜಡದಿಂದ ಅನಾಸಕ್ತನಾಗಬೇಕು. ಮತ್ತು ಭಕ್ತಿಯೋಗ ಪ್ರಕ್ರಿಯೆಯಲ್ಲಿ ಒಬ್ಬನು

ಕೃಷ್ಣ ಪ್ರಜ್ಞಾ ಕಾರ್ಯಗಳಿಗೆ ಆಸಕ್ತನಾಗಬೇಕು. ಒಂದು ಪ್ರಕ್ರಿಯೆಯು ಅನಾಸಕ್ತಿಯನ್ನು ಒಳಗೊಂಡಿರುವಂತೆ, ಮತ್ತೊಂದು ಪ್ರಕ್ರಿಯೆಯು ಆಸಕ್ತಿಯನ್ನು ಒಳಗೊಂಡಿರುವಂತೆ ತೋರಿದರೂ, ವಾಸ್ತವಿಕವಾಗಿ ಉಭಯ ಪ್ರಕ್ರಿಯೆಗಳೂ ಒಂದೇ. ಜಡದಿಂದ ಅನಾಸಕ್ತಿ ಮತ್ತು ಕೃಷ್ಣನೊಂದಿಗೆ ಆಸಕ್ತಿ, ಎರಡೂ ಒಂದೇ ಆಗಿವೆ. ಇದನ್ನು ಕಾಣುವವನು ವಿಚಾರಗಳನ್ನು ಇರುವಂತೆ ಕಾಣುತ್ತಾನೆ.

**ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ ।**
**ಯೋಗಯುಕ್ತೋ ಮುನಿರ್ಬ್ರಹ್ಮ ನ ಚಿರೇಣಾಧಿಗಚ್ಛತಿ ॥ ೬ ॥**

ಸನ್ನ್ಯಾಸಃ—ಸನ್ನ್ಯಾಸ ಆಶ್ರಮವು, ತು—ಆದರೆ, ಮಹಾಬಾಹೋ—ಹೇ ಮಹಾಬಾಹುವೇ, ದುಃಖಮ್—ದುಃಖವು, ಆಪ್ತುಮ್—ಒಬ್ಬನನ್ನು ಬಾಧಿಸುತ್ತದೆ, ಅಯೋಗತಃ—ಭಕ್ತಿಯುತ ಸೇವೆ ಇಲ್ಲದೆ, ಯೋಗಯುಕ್ತಃ—ಭಕ್ತಿಯೋಗ ನಿರತನು, ಮುನಿಃ—ವಿಚಾರಪರನು, ಬ್ರಹ್ಮ—ಪರಮನನ್ನು, ನ ಚಿರೇಣ—ವಿಲಂಬವಿಲ್ಲದೆ. ಅಧಿಗಚ್ಛತಿ—ಹೊಂದುತ್ತಾನೆ.

**ಭಗವಂತನ ಭಕ್ತಿಯುತ ಸೇವೆಯಲ್ಲಿ ನಿರತನಾಗದೆ, ಸಕಲ ಚಟುವಟಿಕೆಗಳ ಕೇವಲ ಪರಿತ್ಯಾಗದಿಂದ ಒಬ್ಬನು ಸುಖಿಯಾಗಲಾರನು. ಆದರೆ ಭಕ್ತಿಯುತ ಸೇವಾ ನಿರತ ವಿಚಾರಪರನು ತಡವಿಲ್ಲದೆ ಪರಮನನ್ನು ಹೊಂದಬಹುದು.**

**ಭಾವಾರ್ಥ :** ಸನ್ನ್ಯಾಸಿಗಳು ಎರಡು ವರ್ಗದವರು. ಮಾಯಾವಾದಿ ಸನ್ನ್ಯಾಸಿಗಳು ಸಾಂಖ್ಯ ತತ್ವ ಅಧ್ಯಯನ ನಿರತರು. ಆದರೆ ವೈಷ್ಣವ ಸನ್ನ್ಯಾಸಿಗಳು ವೇದಾಂತ ಸೂತ್ರಗಳಿಗೆ ಸಮುಚಿತ ವ್ಯಾಖ್ಯಾನವನ್ನು ಒದಗಿಸುವ ಭಾಗವತ ತತ್ವ ಅಧ್ಯಯನ ನಿರತರು. ಮಾಯಾವಾದಿ ಸನ್ನ್ಯಾಸಿಗಳು ಕೂಡ ವೇದಾಂತ ಸೂತ್ರಗಳನ್ನು ಅಧ್ಯಯನ ಮಾಡುತ್ತಾರೆ, ಆದರೆ ತಮ್ಮದೇ ಆದ ಶಂಕರಾಚಾರ್ಯ ರಚಿತ **ಶಾರೀರಕ ಭಾಷ್ಯ**ವೆಂದು ಕರೆಯಲ್ಪಡುವ ವ್ಯಾಖ್ಯಾನವನ್ನು ಉಪಯೋಗಿಸುತ್ತಾರೆ. ಭಾಗವತ ಸಂಪ್ರದಾಯದ ಅಧ್ಯಾಯಿಗಳು **ಪಾಂಚರಾತ್ರಿಕೀ** ನಿಯಮಗಳಿಗೆ ಅನುಸಾರವಾಗಿ ಭಗವಂತನ ಭಕ್ತಿಯುತ ಸೇವೆಯಲ್ಲಿ ನಿರತರು. ಆದ್ದರಿಂದ ವೈಷ್ಣವ ಸನ್ನ್ಯಾಸಿಗಳಿಗೆ ಭಗವಂತನ ದಿವ್ಯ ಸೇವೆಯಲ್ಲಿ ಬಹುಮುಖ ಚಟುವಟಿಕೆಗಳು ಇರುತ್ತವೆ. ವೈಷ್ಣವ ಸನ್ನ್ಯಾಸಿಗಳಿಗೆ ಭೌತಿಕ ಚಟುವಟಿಕೆಗಳ ಯಾವ ಸಂಬಂಧವೂ ಇರುವುದಿಲ್ಲ. ಆದರೂ ಅವರು ಭಗವಂತನ ಭಕ್ತಿಯುತ ಸೇವೆಯಲ್ಲಿ ವಿವಿಧ ಚಟುವಟಿಕೆಗಳನ್ನು ಆಚರಿಸುತ್ತಾರೆ. ಆದರೆ ಮಾಯಾವಾದಿ ಸನ್ನ್ಯಾಸಿಗಳು, ಸಾಂಖ್ಯ ಮತ್ತು ವೇದಾಂತ ಅಧ್ಯಯನ ಮತ್ತು ಊಹಾಪೋಹಗಳಲ್ಲಿ ತೊಡಗಿ, ಭಗವಂತನ ದಿವ್ಯ ಸೇವೆಯನ್ನು ಆಸ್ವಾದಿಸಲಾರರು. ಅವರ ಅಧ್ಯಯನವು ಬಹಳ ತ್ರಾಸಕರವಾಗಿರುವುದರಿಂದ ಅವರು ಕೆಲವು ಸಲ ಬ್ರಹ್ಮನ್ ಊಹಾಪೋಹದಲ್ಲಿ ದಣಿದವರಾಗುತ್ತಾರೆ, ಮತ್ತು ಸರಿಯಾದ ಅರಿವಿಲ್ಲದೆ ಭಾಗವತವನ್ನು ಆಶ್ರಯಿಸುತ್ತಾರೆ. ಪರಿಣಾಮವಾಗಿ ಅವರ ಶ್ರೀಮದ್ ಭಾಗವತ ಅಧ್ಯಯನವು ಕಷ್ಟದಾಯಕವಾಗುತ್ತದೆ. ಶುಷ್ಕ ಊಹಾಪೋಹಗಳು ಮತ್ತು ಕೃತಕ ಮಾರ್ಗಗಳಿಂದ ವ್ಯಕ್ತಿಶೂನ್ಯ ವ್ಯಾಖ್ಯಾನಗಳೆಲ್ಲವೂ

ಮಾಯಾವಾದಿ ಸನ್ಯಾಸಿಗೆ ನಿರುಪಯುಕ್ತ. ಭಕ್ತಿಯುತ ಸೇವಾ ನಿರತ ವೈಷ್ಣವ ಸನ್ಯಾಸಿಗಳು ತಮ್ಮ ದಿವ್ಯ ಕರ್ತವ್ಯ ನಿರ್ವಹಣೆಯಲ್ಲಿ ಸುಖಿಗಳು ಮತ್ತು ಅವರಿಗೆ ಭಗವದ್ಧಾಮಕ್ಕೆ ಅಂತಿಮ ಪ್ರವೇಶ ಸುನಿಶ್ಚಿತ. ಮಾಯಾವಾದಿ ಸನ್ಯಾಸಿಗಳು ಕೆಲವು ಸಲ ಆತ್ಮ ಸಾಕ್ಷಾತ್ಕಾರ ಪಥದಿಂದ ಪತನ ಹೊಂದುತ್ತಾರೆ, ಮತ್ತು ಜನೋಪಕಾರ ಮತ್ತು ಲೋಕ ಹಿತಾರ್ಥ ಸ್ವಭಾವದ ಭೌತಿಕ ಚಟುವಟಿಕೆಗಳನ್ನು ಪ್ರವೇಶಿಸುತ್ತಾರೆ. ಇವು ಭೌತಿಕ ಚಟುವಟಿಕೆಗಳಲ್ಲದೆ ಬೇರೇನೂ ಅಲ್ಲ. ಆದ್ದರಿಂದ, ಬ್ರಹ್ಮನ್ ಯಾವುದು ಮತ್ತು ಬ್ರಹ್ಮನ್ ಯಾವುದಲ್ಲ ಎಂಬ ಸರಳ ಊಹಾಪೋಹ ನಿರತ ಸನ್ಯಾಸಿಗಳು ಅನೇಕಾನೇಕ ಜನ್ಮಗಳ ತರುವಾಯ ಕೃಷ್ಣ ಪ್ರಜ್ಞೆಗೆ ಬರುವವರಾಗಿದ್ದರೂ, ಕೃಷ್ಣ ಪ್ರಜ್ಞಾ ಚಟುವಟಿಕೆಗಳಲ್ಲಿ ನಿರತರು ಅವರಿಗಿಂತ ಉತ್ತಮವಾಗಿ ಸನ್ನಿವೇಶಿತರು ಎಂಬುದೇ ನಿರ್ಣಯ.

**ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇನ್ದ್ರಿಯಃ ।**
**ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ॥ ೭ ॥**

ಯೋಗಯುಕ್ತ—ಭಕ್ತಿಯುತ ಸೇವಾ ನಿರತನು, ವಿಶುದ್ಧ ಆತ್ಮಾ—ಶುದ್ಧ ಆತ್ಮನು, ವಿಜಿತ ಆತ್ಮಾ—ಆತ್ಮ ನಿಗ್ರಹಿಯು, ಜಿತ ಇನ್ದ್ರಿಯಃ—ಇಂದ್ರಿಯಗಳನ್ನು ಗೆದ್ದವನು, ಸರ್ವಭೂತ—ಎಲ್ಲ ಜೀವಿಗಳಿಗೂ, ಆತ್ಮ ಭೂತ ಆತ್ಮಾ—ಕರುಣೆಯುಳ್ಳವನು, ಕುರ್ವನ್ ಅಪಿ—ಕಾರ್ಯನಿರತನಾಗಿದ್ದರೂ, ನ—ಇಲ್ಲ, ಲಿಪ್ಯತೇ—ಸಿಲುಕುವುದು.

**ಭಕ್ತಿಯಲ್ಲಿ ಕಾರ್ಯ ಮಾಡುವವನು, ಶುದ್ಧ ಆತ್ಮನು, ತನ್ನ ಮನಸ್ಸು ಮತ್ತು ಇಂದ್ರಿಯಗಳನ್ನು ನಿಗ್ರಹಿಸುವವನು ಪ್ರತಿಯೊಬ್ಬರಿಗೂ ಪ್ರಿಯನು. ಮತ್ತು ಪ್ರತಿಯೊಬ್ಬನೂ ಅವನಿಗೆ ಪ್ರಿಯನು. ಸದಾ ಕಾರ್ಯ ಮಾಡುತ್ತಿದ್ದರೂ ಅಂಥ ಮನುಷ್ಯನು ಎಂದೂ ತೊಡಕಿನಲ್ಲಿ ಸಿಲುಕುವುದಿಲ್ಲ.**

**ಭಾವಾರ್ಥ :** ಕೃಷ್ಣ ಪ್ರಜ್ಞೆಯಿಂದ ಮೋಕ್ಷ ಮಾರ್ಗಗಾಮಿಯು ಪ್ರತಿಯೊಬ್ಬ ಜೀವಿಗೂ ಬಹು ಪ್ರಿಯನು ಮತ್ತು ಪ್ರತಿಯೊಬ್ಬ ಜೀವಿಯು ಅವನಿಗೆ ಬಹು ಪ್ರಿಯನು. ಇದಕ್ಕೆ ಅವನ ಕೃಷ್ಣ ಪ್ರಜ್ಞೆಯೇ ಕಾರಣ. ಒಂದು ಮರದ ಎಲೆಗಳು ಮತ್ತು ಶಾಖೆಗಳು ಹೇಗೆ ಮರದಿಂದ ಪ್ರತ್ಯೇಕವಲ್ಲವೋ ಹಾಗೆ, ಅಂಥ ವ್ಯಕ್ತಿಯು, ಯಾವುದೇ ಜೀವಿಯು ಕೃಷ್ಣನಿಂದ ಪ್ರತ್ಯೇಕನೆಂದು ಚಿಂತನೆ ಮಾಡಲಾರನು. ಮರದ ಬೇರಿಗೆ ನೀರೆರೆಯುವುದರಿಂದ ನೀರು ಎಲ್ಲ ಎಲೆಗಳು ಮತ್ತು ಶಾಖೆಗಳಿಗೆ ವಿತರಣೆಯಾಗುವುದು, ಅಥವಾ ಹೊಟ್ಟೆಗೆ ಅನ್ನ ಒದಗಿಸುವುದರಿಂದ ಸ್ವಾಭಾವಿಕವಾಗಿ ಇಡೀ ದೇಹದಲ್ಲಿ ಶಕ್ತಿ ವಿತರಣೆಯಾಗುವುದು ಎಂಬುದನ್ನು ಅವನು ಚೆನ್ನಾಗಿ ತಿಳಿದಿರುವನು. ಕೃಷ್ಣಪ್ರಜ್ಞೆಯಲ್ಲಿ ಕಾರ್ಯ ನಿರತನು ಎಲ್ಲರ ಸೇವಕನಾದ್ದರಿಂದ, ಅವನು ಪ್ರತಿಯೊಬ್ಬನಿಗೂ ಬಹು ಪ್ರಿಯನು. ಅವನ ಕಾರ್ಯದಿಂದ ಪ್ರತಿಯೊಬ್ಬನೂ ತೃಪ್ತನಾಗಿರುವುದರಿಂದ ಅವನು ಪ್ರಜ್ಞೆಯಲ್ಲಿ ಶುದ್ಧನು. ಅವನ ಪ್ರಜ್ಞೆ ಶುದ್ಧವಾದ್ದರಿಂದ ಅವನ ಮನಸ್ಸು ಸಂಪೂರ್ಣ ನಿಯಂತ್ರಿತ. ಅವನ ಮನಸ್ಸು ನಿಯಂತ್ರಿತವಾದ್ದರಿಂದ ಅವನ ಇಂದ್ರಿಯಗಳೂ ನಿಯಂತ್ರಿತ. ಅವನ ಮನಸ್ಸು ಸದಾ ಕೃಷ್ಣನ ಮೇಲೆ ಸ್ಥಿತವಾದ್ದರಿಂದ, ಅವನು ಕೃಷ್ಣನಿಂದ ವಿಚಲಿತವಾಗುವ

ಅವಕಾಶವಿಲ್ಲ. ಅಥವಾ ಅವನು ತನ್ನ ಇಂದ್ರಿಯಗಳನ್ನು ಭಗವತ್ ಸೇವಾತಿರಕ್ತ ವಿಷಯ ಗಳಲ್ಲಿ ತೊಡಗಿಸುವ ಅವಕಾಶವೂ ಇಲ್ಲ. ಕೃಷ್ಣನಿಗೆ ಸಂಬಂಧಿಸಿದ ವಿಷಯುಗಳನ್ನು ಹೊರತು ಬೇರೆ ಏನನ್ನೂ ಅವನು ಕೇಳಬಯಸುವುದಿಲ್ಲ; ಕೃಷ್ಣಾರ್ಪಿತವಲ್ಲದ ಏನನ್ನೂ ಅವನು ತಿನ್ನಬಯಸುವುದಿಲ್ಲ; ಕೃಷ್ಣನಿಗೆ ಸಂಬಂಧಿಸದ ಯಾವ ಸ್ಥಳಕ್ಕೂ ಅವನು ಹೋಗ ಬಯಸುವುದಿಲ್ಲ. ಆದ್ದರಿಂದ ಅವನ ಇಂದ್ರಿಯಗಳು ನಿಯಂತ್ರಿತ. ಇಂದ್ರಿಯ ನಿಗ್ರಹಿಯು ಯಾರನ್ನೂ ನೋಯಿಸಲಾರನು. "ಹಾಗಿದ್ದರೆ ಅರ್ಜುನನು (ಯುದ್ಧದಲ್ಲಿ) ಇತರರನ್ನು ನೋಯಿಸುವುದು ಏಕೆ ? ಅವನು ಕೃಷ್ಣಪ್ರಜ್ಞೆಯಲ್ಲಿ ಇರಲಿಲ್ಲವೇ ?" ಎಂದು ಒಬ್ಬರು ಕೇಳಬಹುದು. ಅರ್ಜುನನು (ಎರಡನೆಯ ಅಧ್ಯಾಯದಲ್ಲಿ ಈಗಾಗಲೇ ವಿವರಿಸಿರುವಂತೆ) ಮೇಲ್ನೋಟಕ್ಕೆ ಮಾತ್ರ ನೋವನ್ನು ಉಂಟು ಮಾಡುವಂತೆ ಇದ್ದನು, ಏಕೆಂದರೆ ಆತ್ಮನು ಅವಿನಾಶಿಯಾದ್ದರಿಂದ, ಯುದ್ಧ ಭೂಮಿಯಲ್ಲಿ ನೆರೆದಿದ್ದವರೆಲ್ಲರೂ ವ್ಯಕ್ತಿಶಃ ಬದುಕಿ ರುತ್ತಾರೆ. ಆದ್ದರಿಂದ ಕುರುಕ್ಷೇತ್ರ ಯುದ್ಧ ಭೂಮಿಯಲ್ಲಿ ಯಾರೂ ಕೊಲ್ಲಲ್ಪಡಲಿಲ್ಲ. ವೈಯಕ್ತಿಕವಾಗಿ ಸಾನ್ನಿಧ್ಯ ನೀಡಿದ್ದ ಕೃಷ್ಣನ ಆಜ್ಞೆಯಿಂದ ಅವರ ಉಡುಪುಗಳು ಮಾತ್ರ ಬದಲಾಯಿಸಲ್ಪಟ್ಟವು. ಆದ್ದರಿಂದ ಅರ್ಜುನನು ಕುರುಕ್ಷೇತ್ರ ರಣರಂಗದಲ್ಲಿ ಯುದ್ಧ ಮಾಡುತ್ತಿದ್ದಾಗ, ಅವನು ನಿಜವಾಗಿ ಯುದ್ಧ ಮಾಡುತ್ತಲೇ ಇರಲಿಲ್ಲ: ಅವನು ಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಕೃಷ್ಣನ ಆಜ್ಞೆಗಳನ್ನು ಸುಮ್ಮನೆ ನೆರವೇರಿಸುತ್ತಿದ್ದನು. ಅಂಥ ವ್ಯಕ್ತಿಯು ಕರ್ಮದ ಪ್ರತಿಕ್ರಿಯೆಗಳಲ್ಲಿ ಎಂದಿಗೂ ಸಿಲುಕಿಕೊಳ್ಳುವುದಿಲ್ಲ.

**ನೈವ ಕಿಞ್ಚಿತ್ ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ ।**
**ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ ಗಚ್ಛನ್ ಸ್ವಪನ್ ಶ್ವಸನ್ ॥ ೮ ॥**
**ಪ್ರಲಪನ್ ವಿಸೃಜನ್ ಗೃಹ್ಣನ್ನುನ್ಮಿಷನ್ನಿಮಿಷನ್ನಪಿ ।**
**ಇನ್ದ್ರಿಯಾಣೀನ್ದ್ರಿಯಾರ್ಥೇಷು ವರ್ತನ್ತ ಇತಿ ಧಾರಯನ್ ॥ ೯ ॥**

ನ—ಎಂದಿಗೂ ಇಲ್ಲ, ಏವ—ಖಂಡಿತವಾಗಿ, ಕಿಞ್ಚಿತ್—ಯಾವುದೂ, ಕರೋಮಿ—ನಾನು ಮಾಡುವುದು, ಇತಿ—ಹೀಗೆ, ಯುಕ್ತಃ—ದೈವೀಕ ಪ್ರಜ್ಞಾ ನಿರತನು, ಮನ್ಯತೇ—ಭಾವಿಸುವನು, ತತ್ತ್ವವಿತ್—ತತ್ತ್ವವನ್ನು ತಿಳಿದವನು, ಪಶ್ಯನ್—ನೋಡುತ್ತಾ, ಶೃಣ್ವನ್—ಕೇಳುತ್ತಾ, ಸ್ಪೃಶನ್—ಮುಟ್ಟುತ್ತಾ, ಜಿಘ್ರನ್—ಮೂಸುತ್ತಾ, ಅಶ್ನನ್—ತಿನ್ನುತ್ತಾ, ಗಚ್ಛನ್—ಹೋಗುತ್ತಾ, ಸ್ವಪನ್—ಕನಸು ಕಾಣುತ್ತಾ, ಶ್ವಸನ್—ಉಸಿರಾಡುತ್ತಾ, ಪ್ರಲಪನ್—ಮಾತನಾಡುತ್ತಾ, ವಿಸೃಜನ್—ವಿಸರ್ಜಿಸುತ್ತಾ, ಗೃಹ್ಣನ್—ಸ್ವೀಕರಿಸುತ್ತಾ, ಉನ್ಮಿಷನ್—ತೆರೆಯುತ್ತಾ, ನಿಮಿಷನ್—ಮುಚ್ಚುತ್ತಾ, ಅಪಿ—ಆದರೂ, ಇನ್ದ್ರಿಯಾಣಿ—ಇಂದ್ರಿಯಗಳು, ಅರ್ಥೇಷು—ಇಂದ್ರಿಯ ತೋಷಣದಲ್ಲಿ, ವರ್ತನ್ತೇ—ಅವು ಹಾಗೆ ನಿರತವಾಗಿರಲಿ, ಇತಿ—ಹೀಗೆ, ಧಾರಯನ್—ಭಾವಿಸುತ್ತಾ.

**ದೈವ ಪ್ರಾಜ್ಞಿಯು ನೋಡುವುದರಲ್ಲಿ, ಕೇಳುವುದರಲ್ಲಿ, ಮುಟ್ಟುವುದರಲ್ಲಿ, ಮೂಸುವುದರಲ್ಲಿ, ತಿನ್ನುವುದರಲ್ಲಿ, ಓಡಾಡುವುದರಲ್ಲಿ, ನಿದ್ರಿಸುವುದರಲ್ಲಿ ಮತ್ತು**

**ಉಸಿರಾಡುವುದರಲ್ಲಿ ನಿರತನಾಗಿದ್ದರೂ ತಾನು ವಾಸ್ತವಿಕವಾಗಿ ಏನನ್ನೂ ಮಾಡುತ್ತಿಲ್ಲ ವೆಂದು ತನ್ನೊಳಗೆ ಸದಾ ತಿಳಿದಿರುತ್ತಾನೆ. ಏಕೆಂದರೆ ಮಾತನಾಡುವಾಗ, ವಿಸರ್ಜಿಸು ವಾಗ, ಸ್ವೀಕರಿಸುವಾಗ ಅಥವಾ ತನ್ನ ಕಣ್ಣುಗಳನ್ನು ತೆರೆಯುವಾಗ ಅಥವಾ ಮುಚ್ಚು ವಾಗ, ಕೇವಲ ಭೌತಿಕ ಇಂದ್ರಿಯಗಳು ತಮ್ಮ ವಿಷಯಗಳೊಡನೆ ನಿರತವಾಗಿವೆ ಮತ್ತು ತಾನು ಅವುಗಳಿಂದ ದೂರವಿದ್ದೇನೆ ಎಂದು ಅವನು ಸದಾ ತಿಳಿದಿರುತ್ತಾನೆ.**

**ಭಾವಾರ್ಥ :** ಕೃಷ್ಣ ಪ್ರಾಜ್ಞೆಯು ತನ್ನ ಅಸ್ತಿತ್ವದಲ್ಲಿ ಶುದ್ಧನು, ಮತ್ತು ಅದರ ಪರಿ ಣಾಮವಾಗಿ, ಕರ್ತ, ಕಾರ್ಯ, ಸನ್ನಿವೇಶ, ಪ್ರಯತ್ನ ಮತ್ತು ದೈವ—ಈ ಐದು ನಿಕಟ ಮತ್ತು ದೂರ ಕಾರಣಗಳನ್ನು ಅವಲಂಬಿಸುವ ಯಾವುದೇ ಕಾರ್ಯದೊಂದಿಗೆ ಅವನಿಗೆ ಸಂಬಂಧವಿಲ್ಲ. ಏಕೆಂದರೆ ಅವನು ಕೃಷ್ಣನ ಪ್ರೀತಿಯುತ ದಿವ್ಯ ಸೇವೆಯಲ್ಲಿ ನಿರತನು. ಅವನು ತನ್ನ ದೇಹ ಮತ್ತು ಇಂದ್ರಿಯಗಳಿಂದ ಕಾರ್ಯ ಮಾಡುತ್ತಿರುವಂತೆ ತೋರಿದರೂ. ಅವನು ಆಧ್ಯಾತ್ಮಿಕ ಪ್ರವರ್ತನೆಯಾದ ತನ್ನ ವಾಸ್ತವಿಕ ಸ್ಥಾನದ ಬಗ್ಗೆ ಸದಾ ಪ್ರಾಜ್ಞ ನಾಗಿರುತ್ತಾನೆ. ಭೌತಿಕ ಪ್ರಜ್ಞೆಯಲ್ಲಿ ಇಂದ್ರಿಯಗಳು ಇಂದ್ರಿಯ ತೋಷಣದಲ್ಲಿ ನಿರತ. ಆದರೆ ಕೃಷ್ಣ ಪ್ರಜ್ಞೆಯಲ್ಲಿ ಇಂದ್ರಿಯಗಳು ಕೃಷ್ಣನ ಇಂದ್ರಿಯಗಳನ್ನು ತೃಪ್ತಿಪಡಿಸುವುದ ರಲ್ಲಿ ನಿರತ. ಆದ್ದರಿಂದ ಕೃಷ್ಣ ಪ್ರಾಜ್ಞೆಯು ಇಂದ್ರಿಯ ವ್ಯವಹಾರಗಳಲ್ಲಿ ತೊಡಗಿದಂತೆ ತೋರಿದರೂ ಅವನು ಸದಾ ಮುಕ್ತನು. ನೋಡುವ ಮತ್ತು ಕೇಳುವಂಥ ಚಟುವಟಿಕೆ ಗಳು ಜ್ಞಾನ ಸ್ವೀಕಾರಕ್ಕಾಗಿ ಉದ್ದೇಶಿತ ಇಂದ್ರಿಯ ಕಾರ್ಯಗಳು, ಆದರೆ ಓಡಾಡುವುದು, ಮಾತನಾಡುವುದು, ವಿಸರ್ಜಿಸುವುದು, ಇತ್ಯಾದಿ ಕ್ರಿಯೆಗಳು, ಕರ್ಮೋದ್ದೇಶಿತ ಇಂದ್ರಿಯ ಕಾರ್ಯಗಳು. ಕೃಷ್ಣ ಪ್ರಾಜ್ಞೆಯು ಇಂದ್ರಿಯಗಳ ಕಾರ್ಯಗಳಿಂದ ಎಂದಿಗೂ ಪ್ರಭಾವಿತ ನಾಗುವುದಿಲ್ಲ. ತಾನು ಭಗವಂತನ ನಿತ್ಯದಾಸನೆಂದು ತಿಳಿದಿರುವ ಕಾರಣ, ಅವನು ಭಗವತ್ ಸೇವಾತಿರಿಕ್ತವಾದ ಯಾವುದೇ ಕೆಲಸವನ್ನು ಆಚರಿಸಲಾರನು.

**ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ ।**
**ಲಿಪ್ಯತೇ ನ ಸ ಪಾಪೇನ ಪದ್ಮಪತ್ರ ಮಿವಾಮ್ಭಸಾ ॥ ೧೦ ॥**

ಬ್ರಹ್ಮಣಿ—ಪರಮ ದೇವೋತ್ತಮ ಪುರುಷನಿಗೆ, ಆಧಾಯ—ಸಮರ್ಪಿಸಿ, ಕರ್ಮಾಣಿ —ಎಲ್ಲ ಕಾರ್ಯಗಳ, ಸಂಗಮ್—ಆಸಕ್ತಿಯನ್ನು, ತ್ಯಕ್ತ್ವಾ—ತ್ಯಜಿಸಿ, ಕರೋತಿ— ಆಚರಿಸುತ್ತಾನೆ, ಯಃ—ಯಾರು, ಲಿಪ್ಯತೇ—ಬಾಧಿಸಲ್ಪಡುವುದು, ನ—ಎಂದಿಗೂ ಇಲ್ಲ, ಸಃ—ಅವನು, ಪಾಪೇನ—ಪಾಪದಿಂದ, ಪದ್ಮಪತ್ರಮ್—ತಾವರೆಯ ಎಲೆ, ಇವ—ಹಾಗೆ, ಅಮ್ಭಸಾ—ನೀರಿನಿಂದ.

**ಅನಾಸಕ್ತನಾಗಿ ತನ್ನ ಕರ್ತವ್ಯವನ್ನು ಆಚರಿಸಿ, ಫಲಗಳನ್ನು ಪರಮ ಪ್ರಭುವಿಗೆ ಸಮರ್ಪಿಸುವವನು, ತಾವರೆಯ ಎಲೆಯು ನೀರಿನಿಂದ ಸ್ಪರ್ಶಿಸಲ್ಪಡದೆ ಇರುವಂತೆ, ಪಾಪ ಕಾರ್ಯದಿಂದ ಬಾಧಿತನಾಗುವುದಿಲ್ಲ.**

**ಭಾವಾರ್ಥ :** ಇಲ್ಲಿ **ಬ್ರಹ್ಮಣಿ** ಎಂದರೆ ಕೃಷ್ಣ ಪ್ರಜ್ಞೆಯಲ್ಲಿ ಎಂದು ಅರ್ಥ. ಪಾರಿಭಾಷಿಕ ನಿರೂಪಣೆಯಲ್ಲಿ **ಪ್ರಧಾನ** ಎಂದು ಕರೆಯಲ್ಪಡುವ ಭೌತಿಕ ತ್ರಿಗುಣಗಳ ಸಮಗ್ರ

**ಅಭಿ**ವ್ಯಕ್ತತೆಯೇ ಈ ಭೌತಿಕ ಜಗತ್ತು. **ಸರ್ವಮ್ ಹ್ಯೇತದ್ ಬ್ರಹ್ಮ** (ಮಾಂಡೂಕ್ಯ **ಉಪ ನಿಷದ್** 2), **ತಸ್ಮಾದ್ ಏತದ್ ಬ್ರಹ್ಮ ನಾಮರೂಪಮ್ ಅನ್ನಂ ಚ ಜಾಯತೇ** (ಮುಂಡಕ **ಉಪನಿಷದ್** 1. 2. 10) ಎಂಬ ವೇದಮಂತ್ರಗಳು, ಮತ್ತು ಭಗವದ್ಗೀತೆಯಲ್ಲಿ (14.3), **ಮಮ ಯೋನಿರ್ಮಹದ್ ಬ್ರಹ್ಮ**, ಇವು ಭೌತಿಕ ಜಗತ್ತಿನ ಪ್ರತಿಯೊಂದೂ ಬ್ರಹ್ಮನ್‌ನ **ಅಭಿ**ವ್ಯಕ್ತತೆ ಎಂಬುದನ್ನು ಸೂಚಿಸುತ್ತವೆ, ಮತ್ತು ಪರಿಣಾಮಗಳು ಭಿನ್ನ ಭಿನ್ನವಾಗಿ ಪ್ರ**ಕಟ** ವಾದರೂ, ಅವುಗಳು ಕಾರಣದಿಂದ ಅಭಿನ್ನ. ಪ್ರತಿಯೊಂದೂ ಪರಮ ಬ್ರಹ್ಮನ್ ಅಥ**ವಾ** **ಕೃ**ಷ್ಣನಿಗೆ ಸಂಬಂಧಿಸಿದುದು, ಮತ್ತು ಹೀಗೆ ಪ್ರತಿಯೊಂದೂ ಅವನಿಗೆ ಮಾತ್ರವೇ ಸೇರಿದೆ **ಎಂದು ಈಶೋಪನಿಷತ್ತಿ**ನಲ್ಲಿ ಹೇಳಿದೆ ಪ್ರತಿಯೊಂದು ಕೃಷ್ಣನಿಗೆ ಸೇರಿದುದು, ಅವ**ನೇ** **ಪ್ರ**ತಿಯೊಂದರ ಒಡೆಯನು, ಮತ್ತು ಆದ್ದರಿಂದ ಪ್ರತಿಯೊಂದನ್ನೂ ಭಗವಂತನ **ಸೇ**ವೆಯಲ್ಲಿ ತೊಡಗಿಸಬೇಕು ಎಂದು ಪರಿಪೂರ್ಣವಾಗಿ ತಿಳಿದವನಿಗೆ ತನ್ನ ಚಟುವ**ಟಿಕೆ** ಗಳ ಪಾಪ ಅಥವಾ ಪುಣ್ಯ ಫಲಗಳೊಡನೆ ಸ್ವಾಭಾವಿಕವಾಗಿ ಯಾವ ಸಂಬಂಧವೂ ಇಲ್ಲ. ವಿಶಿಷ್ಟಮಾದರಿಯ ಕಾರ್ಯವನ್ನು ನಿರ್ವಹಿಸಲು ಭಗವದ್ದತ್ತವಾದ ಪ್ರತಿಯೊಬ್ಬನ ಭೌತಿಕ ದೇಹವನ್ನು ಕೂಡ ಕೃಷ್ಣಪ್ರಜ್ಞೆಯಲ್ಲಿ ತೊಡಗಿಸಬಹುದು. ಹೇಗೆ ಕಮಲ ಪತ್ರವು ನೀರಿನಲ್ಲಿದ್ದರೂ ಒದ್ದೆಯಾಗುವುದಿಲ್ಲವೋ ಹಾಗೆ, ಆಗ ಅದು ಪಾಪ ಫಲಗಳ ಕಲ್ಮಷಕ್ಕೆ ಅತೀತ. ಗೀತೆಯಲ್ಲಿ (3. 30. ) **ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯ** "ಎಲ್ಲ ಕಾರ್ಯಗಳನ್ನು ನನಗೆ (ಕೃಷ್ಣ) ಒಪ್ಪಿಸಿಬಿಡು," ಎಂದು ಭಗವಂತನು ಕೂಡ ಹೇಳುತ್ತಾನೆ. ನಿರ್ಣಯವೇನೆಂದರೆ, ಕೃಷ್ಣಪ್ರಜ್ಞೆ ಇಲ್ಲದವನು ಭೌತಿಕ ದೇಹ ಮತ್ತು ಇಂದ್ರಿಯಗಳ ಕಲ್ಪನೆಗೆ ಅನುಸಾರವಾಗಿ ಕಾರ್ಯಮಾಡುತ್ತಾನೆ, ಆದರೆ ಕೃಷ್ಣ **ಪ್ರಾ**ಜ್ಞನು, ದೇಹವು ಕೃಷ್ಣನ ಸ್ವತ್ತು, ಆದ್ದರಿಂದ ಕೃಷ್ಣನ ಸೇವೆಯಲ್ಲಿ ತೊಡಗಿಸಬೇಕು ಎಂಬ ಜ್ಞಾನಕ್ಕೆ ಅನುಸಾರವಾಗಿ ವರ್ತಿಸುತ್ತಾನೆ.

**ಕಾಯೇನ ಮನಸಾ ಬುದ್ಧ್ಯಾ ಕೇವಲೈರಿನ್ದ್ರಿಯೈರಪಿ ।**
**ಯೋಗಿನಃ ಕರ್ಮ ಕುರ್ವನ್ತಿ ಸಂಗಂ ತ್ಯಕ್ತ್ವಾತ್ಮಶುದ್ಧಯೇ ॥ ೧೧ ॥**

ಕಾಯೇನ—ದೇಹದಿಂದ, ಮನಸಾ—ಮನಸ್ಸಿನಿಂದ, ಬುದ್ಧ್ಯಾ—ಬುದ್ಧಿಯಿಂದ, **ಕೇ**ವಲೈಃ—ಶುದ್ಧವಾದ, ಇನ್ದ್ರಿಯೈಃ—ಇಂದ್ರಿಯಗಳಿಂದ, ಅಪಿ—ಕೂಡ, ಯೋಗಿನಃ—ಕೃಷ್ಣಪ್ರಾಜ್ಞರುಗಳು, ಕರ್ಮ—ಕಾರ್ಯಗಳು, ಕುರ್ವನ್ತಿ—ಅವರು ಮಾಡುತ್ತಾರೆ, ಸಂಗಮ್—ಅಕ್ಕರೆಯನ್ನು, ತ್ಯಕ್ತ್ವಾ—ಬಿಟ್ಟು, ಆತ್ಮ—ಆತ್ಮನ, ಶುದ್ಧಯೇ—ಶುದ್ಧೀಕರಣದ ಉದ್ದೇಶಕ್ಕಾಗಿ.

**ಯೋಗಿಗಳು, ಅಕ್ಕರೆಯನ್ನು ತ್ಯಜಿಸಿ ಶುದ್ಧೀಕರಣದ ಉದ್ದೇಶಕ್ಕಾಗಿ ಮಾತ್ರ ದೇಹ, ಮನಸ್ಸು, ಬುದ್ಧಿ ಮತ್ತು ಇಂದ್ರಿಯಗಳಿಂದಲೂ ಕೂಡ ಕಾರ್ಯ ಮಾಡುತ್ತಾರೆ.**

**ಭಾವಾರ್ಥ :** ಕೃಷ್ಣನ ಇಂದ್ರಿಯಗಳ ತೃಪ್ತಿಗಾಗಿ ಒಬ್ಬನು ಕೃಷ್ಣಪ್ರಜ್ಞೆಯಲ್ಲಿ ಕಾರ್ಯ ಮಾಡಿದಾಗ, ದೇಹ ಮನಸ್ಸು, ಬುದ್ಧಿ, ಅಥವಾ ಇಂದ್ರಿಯಗಳಿಂದಲೂ ಕೂಡ

**ಮಾಡಿದ** ಯಾವುದೇ ಕಾರ್ಯವು ಭೌತಿಕ ಕಲ್ಮಷದಿಂದ ಶುದ್ಧಿಗೊಳ್ಳುತ್ತದೆ. ಕೃಷ್ಣ **ಪ್ರಜ್ಞೆಯ** ಚಟುವಟಿಕೆಗಳಿಂದ ಯಾವ ಭೌತಿಕ ಪ್ರತಿಕ್ರಿಯೆಗಳೂ ಉಂಟಾಗುವುದಿಲ್ಲ. ಆದ್ದರಿಂದ, ಸಾಮಾನ್ಯವಾಗಿ **ಸದಾಚಾರ** ಎಂದು ಕರೆಯುವ ಶುದ್ಧ ಚಟುವಟಿಕೆಗಳು **ಕೃಷ್ಣ** ಪ್ರಜ್ಞೆಯಲ್ಲಿ ಕಾರ್ಯ ಮಾಡಿ ಸುಲಭವಾಗಿ ಆಚರಿಸಬಹುದು. ಶ್ರೀ **ರೂಪ ಗೋಸ್ವಾಮಿಯುವರು** ತಮ್ಮ ಭಕ್ತಿರಸಾಮೃತಸಿಂಧುವಿನಲ್ಲಿ (1.2. 187) ಇದನ್ನು **ಹೀಗೆ** ವರ್ಣಿಸುತ್ತಾರೆ.

> ಈಹಾ ಯಸ್ಯ ಹರೇರ್ದಾಸ್ಯೇ ಕರ್ಮಣಾ ಮನಸಾ ಗಿರಾ।
> ನಿಖಿಲಾಸ್ವಪ್ಯವಸ್ಥಾಸು ಜೀವನ್ಮುಕ್ತಃ ಸ ಉಚ್ಯತೇ॥

"**ಕೃಷ್ಣ ಪ್ರಜ್ಞೆಯಲ್ಲಿ** (ಎಂದರೆ ಕೃಷ್ಣನ ಸೇವೆಯಲ್ಲಿ) ತನ್ನ ದೇಹ, ಮನಸ್ಸು, **ಬುದ್ಧಿ** ಮತ್ತು ಮಾತುಗಳಿಂದ ಕಾರ್ಯ ಮಾಡುವವನು. ಅನೇಕ ಭೌತಿಕ ಚಟುವಟಿಕೆ **ಗಳನ್ನು**ಸುವುದರಲ್ಲಿ ತೊಡಗಿದ್ದರೂ, ಅವನು ಈ ಭೌತಿಕ ಜಗತ್ತಿನಲ್ಲಿದ್ದೂ ಮುಕ್ತನು." **ಅವನಿಗೆ** ಮಿಥ್ಯಾಹಂಕಾರವಿಲ್ಲ,ಏಕೆಂದರೆ ತಾನು ಈ ಭೌತಿಕ ದೇಹವೆಂದೂ ಅಥವಾ ಆ ದೇಹ **ತನ್ನದೇ** ಎಂದು ಅವನು ಭಾವಿಸುವುದಿಲ್ಲ. ತಾನು ಈ ದೇಹವಲ್ಲ ಮತ್ತು ಈ ದೇಹವು **ತನಗೆ** ಸೇರಿದ್ದಲ್ಲ ಎಂಬುದನ್ನು ಅವನು ತಿಳಿದಿರುತ್ತಾನೆ. ಸ್ವಯಂ ಅವನೇ ಕೃಷ್ಣನಿಗೆ ಸೇರಿ **ದವನು**, ಮತ್ತು ದೇಹವು ಕೂಡ ಕೃಷ್ಣನಿಗೆ ಸೇರಿದುದು. ದೇಹ, ಮನಸ್ಸು, ಬುದ್ಧಿ, **ಮಾತುಗಳು**, ಜೀವನ, ಸಂಪತ್ತು, ಇತ್ಯಾದಿಗಳ ಉತ್ಪನ್ನಗಳನ್ನು—ತನ್ನ ವಶದಲ್ಲಿರುವ ಪ್ರತಿಯೊಂದನ್ನೂ—ಕೃಷ್ಣನ ಸೇವೆಗೆ ಅನ್ವಯಿಸಿದಾಗ, ಅವನು ಕೂಡಲೇ ಕೃಷ್ಣ **ನೊಂದಿಗೆ** ಜೊತೆಗೂಡುತ್ತಾನೆ. ಅವನು ಕೃಷ್ಣನೊಂದಿಗೆ ಒಂದಾಗಿರುವನು, ಮತ್ತು **ತಾನು** ದೇಹ, ಇತ್ಯಾದಿ ಎಂದು, ನಂಬಲು ಕೊಂಡೊಯ್ಯುವ ಮಿಥ್ಯಾಹಂಕಾರರಹಿತನು. **ಇದು** ಕೃಷ್ಣ ಪ್ರಜ್ಞೆಯ ಪರಿಪೂರ್ಣ ಹಂತ.

**ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾನ್ತಿಮಾಪ್ನೋತಿ ನೈಷ್ಠಿಕೀಮ್ ।**
**ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ॥ ೧೨ ॥**

ಯುಕ್ತಃ—ಭಕ್ತಿಯುತ ಸೇವಾ ನಿರತನು, ಕರ್ಮಫಲಮ್—ಎಲ್ಲ ಚಟುವಟಿಕೆಗಳ **ಫಲಗಳನ್ನು**, ತ್ಯಕ್ತ್ವಾ—ತ್ಯಜಿಸಿ, ಶಾನ್ತಿಮ್—ಪರಿಪೂರ್ಣ ಶಾಂತಿಯನ್ನು, ಆಪ್ನೋತಿ—ಹೊಂದುತ್ತಾನೆ, ನೈಷ್ಠಿಕೀಮ್—ದೃಢ, ಅಯುಕ್ತಃ—ಕೃಷ್ಣಪ್ರಜ್ಞೆಯಲ್ಲದವನು, **ಕಾಮಕಾರೇಣ**—ಕರ್ಮಫಲವನ್ನು ಭೋಗಿಸಲು, ಫಲೇ—ಫಲದಲ್ಲಿ, ಸಕ್ತಃ—ಆಸಕ್ತನು, ನಿಬಧ್ಯತೇ—ಸಿಲುಕುತ್ತಾನೆ.

**ಸ್ಥಿರ ಭಕ್ತಿಯುಳ್ಳ ಆತ್ಮನು ಶುದ್ಧವಾದ ಶಾಂತಿಯನ್ನು ಹೊಂದುವನು, ಏಕೆಂದರೆ ಎಲ್ಲಾ ಚಟುವಟಿಕೆಗಳ ಫಲಗಳನ್ನು ಅವನು ನನಗೆ ಸಮರ್ಪಿಸುವನು; ದೈವಯುಕ್ತನಲ್ಲದವನು ತನ್ನ ಶ್ರಮದ ಫಲಗಳಿಗೆ ದುರಾಶೆಯುಳ್ಳವನಾಗಿ ತೊಡಕಿನಲ್ಲಿ ಸಿಲುಕಿಕೊಳ್ಳುವನು.**

**ಭಾವಾರ್ಥ :** ಕೃಷ್ಣಪ್ರಜ್ಞೆ ಮತ್ತು ದೇಹಪ್ರಜ್ಞೆಯ ನಡುವಿನ ವ್ಯತ್ಯಾಸ, ಕೃಷ್ಣ ಪ್ರಜ್ಞೆಯು ಕೃಷ್ಣನಲ್ಲಿ ಆಸಕ್ತನು, ಆದರೆ ದೇಹಪ್ರಜ್ಞೆಯು ತನ್ನ ಚಟುವಟಿಕೆಗಳ ಫಲ ಗಳಲ್ಲಿ ಆಸಕ್ತನು. ಕೃಷ್ಣನಲ್ಲಿ ಆಸಕ್ತನು ಮತ್ತು ಕೃಷ್ಣನಿಗಾಗಿ ಮಾತ್ರ ಕಾರ್ಯ ಮಾಡುವವನು ಖಂಡಿತವಾಗಿ ಮುಕ್ತನು, ಮತ್ತು ಅವನಿಗೆ ತನ್ನ ಕಾರ್ಯ ಫಲಗಳ ಬಗ್ಗೆ ಆತಂಕ ಇರುವುದಿಲ್ಲ. ಭಾಗವತದಲ್ಲಿ, ಚಟುವಟಿಕೆಗಳ ಫಲವನ್ನು ಕುರಿತು ಆತಂಕಕ್ಕೆ ಕಾರಣವನ್ನು, ಒಬ್ಬನು ದ್ವಂದ್ವ ಕಲ್ಪನೆಯಲ್ಲಿ, ಎಂದರೆ ಪರಮ ಸತ್ಯದ ಜ್ಞಾನವಿಲ್ಲದೆ ಕಾರ್ಯಮಾಡುವುದು ಎಂದು ವಿವರಿಸಲಾಗಿದೆ. ಕೃಷ್ಣನು ಪರಮ ಸತ್ಯನು, ದೇವೋತ್ತಮ ಪುರುಷನು. ಕೃಷ್ಣ ಪ್ರಜ್ಞೆಯಲ್ಲಿ ದ್ವಂದ್ವವಿಲ್ಲ. ಇರುವುದೆಲ್ಲವೂ ಕೃಷ್ಣನ ಶಕ್ತಿಯ ಉತ್ಪನ್ನ ಮತ್ತು ಕೃಷ್ಣನು ಸರ್ವ ಶುಭನು. ಆದ್ದರಿಂದ ಕೃಷ್ಣ ಪ್ರಜ್ಞಾ ಚಟುವಟಿಕೆಗಳು ಪರಮ ಮಟ್ಟದಲ್ಲಿರುತ್ತವೆ. ಅವು ದಿವ್ಯ ಮತ್ತು ಅವುಗಳಿಗೆ ಭೌತಿಕ ಪರಿಣಾಮವಿಲ್ಲ. ಆದ್ದರಿಂದ ಒಬ್ಬನು ಕೃಷ್ಣಪ್ರಜ್ಞೆಯಲ್ಲಿ ಶಾಂತಿಯಿಂದ ತುಂಬಿರುತ್ತಾನೆ. ಆದರೆ ಇಂದ್ರಿಯ ತೋಷಣಕ್ಕಾಗಿ ಲಾಭ ಲೆಕ್ಕಾಚಾರದಲ್ಲಿ ಸಿಲುಕಿದವನು ಆ ಶಾಂತಿಯನ್ನು ಹೊಂದಲಾರನು. ಕೃಷ್ಣನಿಲ್ಲದೆ ಅಸ್ತಿತ್ವವಿಲ್ಲ ಎಂಬ ಸಾಕ್ಷಾತ್ಕಾರವೇ ಶಾಂತಿ ಮತ್ತು ಅಭಯದ ವೇದಿಕೆ— ಇದೇ ಕೃಷ್ಣ ಪ್ರಜ್ಞೆಯ ರಹಸ್ಯ.

**ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ।**
**ನವದ್ವಾರೇ ಪುರೇ ದೇಹೀ ನೈವ ಕುರ್ವನ್ನ ಕಾರಯನ್ ॥ ೧೩ ॥**

ಸರ್ವ—ಎಲ್ಲ, ಕರ್ಮಾಣಿ—ಕಾರ್ಯಕಲಾಪಗಳನ್ನು, ಮನಸಾ—ಮನಸ್ಸಿನಿಂದ, ಸನ್ನ್ಯಸ್ಯ—ತ್ಯಜಿಸಿ, ಆಸ್ತೇ—ಇರುತ್ತಾನೆ, ಸುಖಮ್—ಆನಂದದಲ್ಲಿ, ವಶೀ—ನಿಯಂತ್ರಿತನು, ನವದ್ವಾರೇ—ನವದ್ವಾರಗಳಿರುವ ಸ್ಥಳದಲ್ಲಿ, ಪುರೇ—ನಗರದಲ್ಲಿ, ದೇಹೀ—ದೇಹಧಾರಿ ಆತ್ಮನು, ನ—ಎಂದಿಗೂ ಇಲ್ಲ, ಏವ—ಖಂಡಿತವಾಗಿ, ಕುರ್ವನ್—ಏನನ್ನಾದರೂ ಮಾಡುವುದು, ನ—ಇಲ್ಲ, ಕಾರಯನ್—ಮಾಡಿಸುವುದು.

**ದೇಹಧಾರಿ ಜೀವಿಯು ತನ್ನ ಸ್ವಭಾವವನ್ನು ನಿಯಂತ್ರಿಸಿ, ಮತ್ತು ಮಾನಸಿಕವಾಗಿ ಎಲ್ಲ ಕಾರ್ಯಗಳನ್ನು ತ್ಯಜಿಸಿದಾಗ, ಕಾರ್ಯವನ್ನು ಮಾಡದೆ ಮತ್ತು ಮಾಡಿಸದೆಯೂ, ನವದ್ವಾರಗಳ ನಗರದಲ್ಲಿ (ಭೌತಿಕ ದೇಹ) ಆನಂದವಾಗಿ ವಾಸಿಸುವನು.**

**ಭಾವಾರ್ಥ :** ದೇಹಧಾರಿ ಆತ್ಮನು ನವದ್ವಾರಗಳ ನಗರದಲ್ಲಿ ವಾಸಿಸುತ್ತಾನೆ. ದೇಹದ ಅಥವಾ ಅಲಂಕಾರಿಕವಾಗಿ ವಿವರಿಸಲ್ಪಟ್ಟ ದೇಹದ ನಗರದ ಚಟುವಟಿಕೆಗಳು ಅದರ ವಿಶಿಷ್ಟ ಪ್ರಕೃತಿ ಗುಣಾನುಸಾರ ಸ್ವಾಭಾವಿಕವಾಗಿ ನಡೆಯುತ್ತವೆ. ಆತ್ಮನು, ದೇಹದ ಸ್ಥಿತಿಗಳಿಗೆ ತನ್ನನ್ನು ಒಳಪಡಿಸಿಕೊಂಡಿದ್ದರೂ, ಅವನು ಇಚ್ಛೆಪಟ್ಟರೆ, ಆ ಸ್ಥಿತಿಗಳಿಗೆ ಅತೀತನಾಗಬಲ್ಲನು. ತನ್ನ ಶ್ರೇಷ್ಠ ಸ್ವಭಾವದ ವಿಸ್ಮೃತಿಯಿಂದ ಮಾತ್ರವೇ ಅವನು ಭೌತಿಕ ದೇಹದೊಂದಿಗೆ ತನ್ನನ್ನು ಗುರುತಿಸಿಕೊಳ್ಳುತ್ತಾನೆ, ಮತ್ತು ಅದರಿಂದ ನರಳುತ್ತಾನೆ. ಕೃಷ್ಣಪ್ರಜ್ಞೆಯಿಂದ, ಅವನು ತನ್ನ ನಿಜ ಸ್ಥಾನವನ್ನು ಪುನರುಜ್ಜೀವಿಸಿಕೊಳ್ಳ

ಬಹುದು ಮತ್ತು ಹೀಗೆ ದೇಹಬಂಧನದಿಂದ ಹೊರ ಬರಬಹುದು. ಆದ್ದರಿಂದ, ಒಬ್ಬನು **ಕೃಷ್ಣ**ಪ್ರಜ್ಞೆಯನ್ನು ಗ್ರಹಿಸಿದಾಗ, ಅವನು **ಕೂಡಲೇ** ದೈಹಿಕ ಚಟುವಟಿಕೆಗಳಿಂದ **ಸಂಪೂರ್ಣ**ವಾಗಿ ದೂರನಾಗುವನು. ಅವನ ವಿಚಾರಗಳು ಬದಲಾಗುವ ಅಂಥ ನಿಯಂತ್ರಿ**ತ** **ಜೀವ**ನದಲ್ಲಿ ಅವನು ನವದ್ವಾರದ ನಗರದಲ್ಲಿ ಸಂತೋಷವಾಗಿ ವಾಸಿಸುತ್ತಾನೆ. **ಆ** ಒಂಭತ್ತು ದ್ವಾರಗಳು ಹೀಗೆ ಉಲ್ಲೇಖಿತವಾಗಿವೆ :

ನವದ್ವಾರೇ ದೇಹಿ ಹಂಸೋ ಲೇಲಾಯತೇ ಬಹಿಃ।
ವಶೀ ಸರ್ವಸ್ಯ ಲೋಕಸ್ಯ ಸ್ಥಾವರಸ್ಯ ಚರಸ್ಯ ಚ॥

"**ಜೀ**ವಿಯೊಬ್ಬನ ದೇಹದಲ್ಲಿ ವಾಸಿಸುತ್ತಿರುವ ಪರಮ ದೇವೋತ್ತಮ ಪುರುಷ**ನು**, **ವಿಶ್ವಾ**ದ್ಯಂತ ಸಕಲ ಜೀವಿಗಳ ನಿಯಂತ್ರಕನಾಗಿದ್ದಾನೆ. ದೇಹವು ಒಂಭತ್ತು ದ್ವಾರಗಳಿಂದ (ಎರಡು ಕಣ್ಣುಗಳು. ಮೂಗಿನ ಎರಡು ಹೊಳ್ಳೆಗಳು, ಎರಡು ಕಿವಿಗಳು, ಒಂದು ಬಾಯಿ, ಗುದ ಮತ್ತು ಜನನೇಂದ್ರಿಯ) ಕೂಡಿದೆ. ಜೀವಿಯು ತನ್ನ ಬದ್ಧ ಹಂತದಲ್ಲಿ ದೇಹದೊಂದಿಗೆ ತನ್ನನ್ನು ಗುರುತಿಸಿಕೊಳ್ಳುತ್ತಾನೆ. ಆದರೆ ಅವನು ತನ್ನೊಳಗಿರುವ ಭಗವಂತನೊಂದಿಗೆ ತನ್ನನ್ನು ಗುರುತಿಸಿಕೊಂಡಾಗ ಅವನು ಈ ದೇಹದಲ್ಲಿರುವಾಗಲೇ ಭಗವಂತನಷ್ಟೇ ಸ್ವತಂತ್ರನಾಗುತ್ತಾನೆ." **(ಶ್ವೇತಾಶ್ವತರ ಉಪನಿಷದ್ 3. 18)**.

ಆದ್ದರಿಂದ ಕೃಷ್ಣಪ್ರಜ್ಞೆಯು ಭೌತಿಕ ದೇಹದ ಹೊರಗಿನ ಮತ್ತು ಒಳಗಿನ ಉಭಯ ಚಟುವಟಿಕೆಗಳಿಂದ ಸ್ವತಂತ್ರನು.

**ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ||**
**ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ || ೧೪ ||**

ನ—ಎಂದಿಗೂ ಇಲ್ಲ, ಕರ್ತೃತ್ವಮ್—ಮಾಲೀಕತ್ವ, ನ—ಇಲ್ಲ, ಕರ್ಮಾಣಿ—ಚಟುವಟಿಕೆಗಳನ್ನು, ಲೋಕಸ್ಯ—ಜನರ, ಸೃಜತಿ—ಸೃಷ್ಟಿಸುವುದು, ಪ್ರಭುಃ—ದೇಹವೆಂಬ ನಗರದ ಒಡೆಯನು, ನ—ಇಲ್ಲ, ಕರ್ಮಫಲ—ಚಟುವಟಿಕೆಗಳ ಫಲಗಳೊಂದಿಗೆ, ಸಂಯೋಗಮ್—ಸಂಪರ್ಕವನ್ನು, ಸ್ವಭಾವಃ—ಭೌತಿಕ ಪ್ರಾಕೃತಿಕ ಗುಣಗಳು, ತು—ಆದರೆ, ಪ್ರವರ್ತತೇ—ಪ್ರವರ್ತಿಸುತ್ತದೆ.

**ತನ್ನ ದೇಹವೆಂಬ ನಗರದ ಒಡೆಯನಾದ ದೇಹಧಾರಿ ಚೇತನನು ಚಟುವಟಿಕೆಗಳನ್ನು ಸೃಷ್ಟಿಸುವುದಿಲ್ಲ, ಅಥವಾ ಜನರನ್ನು ಕಾರ್ಯ ಮಾಡುವಂತೆ ಪ್ರೇರಿಸುವುದಿಲ್ಲ, ಅಥವಾ ಅವನು ಕರ್ಮಫಲಗಳನ್ನು ಸೃಷ್ಟಿಸುವುದಿಲ್ಲ. ಇವೆಲ್ಲವೂ ಭೌತಿಕ ಪ್ರಕೃತಿಯ ಗುಣಗಳಿಂದ ನಡೆಯುತ್ತವೆ.**

**ಭಾವಾರ್ಥ :** ಏಳನೆಯ ಅಧ್ಯಾಯದಲ್ಲಿ ವಿವರಿಸಿರುವಂತೆ, ಜೀವಾತ್ಮನು ಭಗವಂ**ತನ** ಶಕ್ತಿಗಳಲ್ಲಿ ಅಥವಾ ಪ್ರಕೃತಿಗಳಲ್ಲಿ ಒಬ್ಬನು. ಆದರೆ ಭಗವಂತನ ಕನಿಷ್ಠ ಶಕ್ತಿ ಎಂದು ಕರೆಯಲ್ಪಡುವ ಮತ್ತೊಂದು ಪ್ರಕೃತಿಯಾದ ಜಡದಿಂದ ಭಿನ್ನನು. ಶ್ರೇಷ್ಠ ಸ್ವಭಾವದ ಜೀವಾತ್ಮನು ಅದು ಹೇಗೋ ಅನಾದಿ ಕಾಲದಿಂದಲೂ ಭೌತಿಕ ಪ್ರಕೃತಿಯ ಸಂಪರ್ಕದಲ್ಲಿ

ದ್ದಾನೆ. ಅವನು ಪಡೆಯುವ ಅನಿತ್ಯ ದೇಹವು ಅಥವಾ ಭೌತಿಕ ನಿವಾಸಸ್ಥಳವು ನಾನಾ ಬಗೆಯ ಚಟುವಟಿಕೆಗಳಿಗೆ ಮತ್ತು ಅವುಗಳ ಫಲರೂಪ ಪ್ರತಿಕ್ರಿಯೆಗಳಿಗೆ ಕಾರಣವಾಗಿದೆ. ಇಂಥ ಬದ್ಧ ವಾತಾವರಣದಲ್ಲಿ ಇರುತ್ತಾ, ಒಬ್ಬನು (ಅಜ್ಞಾನದಲ್ಲಿ) ತನ್ನನ್ನು ದೇಹದೊಂದಿಗೆ ಗುರುತಿಸಿಕೊಂಡು, ದೇಹ ಚಟುವಟಿಕೆಗಳ ಫಲಗಳನ್ನು ಅನುಭವಿಸುತ್ತಾನೆ. ಅನಾದಿ ಕಾಲದಿಂದ ಆರ್ಜಿತ ಅಜ್ಞಾನವೇ ದೈಹಿಕ ನೋವು ಮತ್ತು ದುಃಖದ ಕಾರಣವಾಗಿದೆ. ಜೀವಿಯು ದೇಹದ ಚಟುವಟಿಕೆಗಳಿಂದ ದೂರನಾದೊಡನೆಯೇ, ಅವನು ಪ್ರತಿಕ್ರಿಯೆಗಳಿಂದಲೂ ಮುಕ್ತನಾಗುತ್ತಾನೆ. ಅವನು ದೇಹವೆಂಬ ನಗರದಲ್ಲಿ ಇರುವವರೆಗೆ ಅವನು ಅದರ ಒಡೆಯನೂ ಅಲ್ಲ, ಅಥವಾ ಅದರ ಕ್ರಿಯೆ ಮತ್ತು ಪ್ರತಿಕ್ರಿಯೆಗಳ ನಿಯಂತ್ರಕನೂ ಅಲ್ಲ, ಅವನು ಕೇವಲ ಅಸ್ತಿತ್ವಕ್ಕಾಗಿ ಹೋರಾಡುತ್ತಾ ಭವಸಾಗರದಲ್ಲಿದ್ದಾನೆ. ಸಾಗರದ ಅಲೆಗಳು ಅವನನ್ನು ಅತ್ತಿತ್ತ ತೊನೆಯುತ್ತಿವೆ, ಮತ್ತು ಅವನಿಗೆ ಅವುಗಳ ಮೇಲೆ ಹಿಡಿತವಿಲ್ಲ.

ದಿವ್ಯ ಕೃಷ್ಣಪ್ರಜ್ಞೆಯಿಂದ, ನೀರಿನಿಂದ ಹೊರ ಬರುವುದೇ ಅವನ ಅತ್ಯುತ್ತಮ ಪರಿಹಾರ. ಅದೊಂದೇ ಅವನನ್ನು ಎಲ್ಲ ಸಂಕಟಗಳಿಂದ ಪಾರುಮಾಡುವುದು.

**ನಾದತ್ತೇ ಕಸ್ಯಚಿತ್ ಪಾಪಂ ನ ಚೈವ ಸುಕೃತಂ ವಿಭುಃ ।**
**ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯನ್ತಿ ಜನ್ತವಃ ॥ ೧೫ ॥**

ನ—ಎಂದಿಗೂ ಇಲ್ಲ, ಆದತ್ತೇ—ಸ್ವೀಕರಿಸುವುದು, ಕಸ್ಯಚಿತ್—ಯಾರೊಬ್ಬನ, ಪಾಪಮ್—ಪಾಪವನ್ನು. ನ—ಇಲ್ಲ, ಚ—ಕೂಡ, ಏವ—ಖಂಡಿತವಾಗಿ, ಸುಕೃತಮ್—ಪುಣ್ಯ ಚಟುವಟಿಕೆಗಳನ್ನು, ವಿಭುಃ—ಪರಮ ಪ್ರಭು, ಅಜ್ಞಾನೇನ—ಅಜ್ಞಾನದಿಂದ, ಆವೃತಮ್—ಆವರಿಸಿದ, ಜ್ಞಾನಮ್—ಜ್ಞಾನವು, ತೇನ—ಅದರಿಂದ, ಮುಹ್ಯನ್ತಿ—ದಿಗ್ಭ್ರಮಿತರು, ಜನ್ತವಃ—ಜೀವಿಗಳು.

**ಪರಮ ಪ್ರಭು ಯಾರೊಬ್ಬನ ಪಾಪಮಯ ಅಥವಾ ಪುಣ್ಯ ಚಟುವಟಿಕೆಗಳನ್ನು ವಹಿಸಿಕೊಳ್ಳುವುದಿಲ್ಲ. ಆದರೆ ದೇಹಧಾರಿ ಜೀವರಾದರೋ ತಮ್ಮ ನಿಜ ಜ್ಞಾನವನ್ನು ಆವರಿಸುವ ಅಜ್ಞಾನದ ಕಾರಣದಿಂದ ದಿಗ್ಭ್ರಮಿತರಾಗಿದ್ದಾರೆ.**

**ಭಾವಾರ್ಥ:—ವಿಭು** ಎಂಬ ಸಂಸ್ಕೃತ ಪದಕ್ಕೆ ಅಪರಿಮಿತ ಜ್ಞಾನ, ಐಶ್ವರ್ಯ, ಬಲ, ಕೀರ್ತಿ, ಸೌಂದರ್ಯ ಮತ್ತು ವೈರಾಗ್ಯ ಭರಿತ ಪರಮ ಪ್ರಭು ಎಂದು ಅರ್ಥ. ಅವನು ಪಾಪಮಯ ಅಥವಾ ಪುಣ್ಯ ಚಟುವಟಿಕೆಗಳಿಂದ ಕ್ಷೋಭಿತನಾಗದೆ ಸದಾ ಸ್ವಯಂ ಸಂತುಷ್ಟನು. ಅವನು ಯಾವನೊಬ್ಬ ಜೀವಿಗಾಗಿಯೂ ವಿಶಿಷ್ಟ ಸನ್ನಿವೇಶವನ್ನು ಸೃಷ್ಟಿಸುವುದಿಲ್ಲ. ಆದರೆ ಜೀವಿಯು ಅಜ್ಞಾನದಿಂದ ದಿಗ್ಭ್ರಮಿತನಾಗಿ, ಜೀವನದ ವಿಶಿಷ್ಟ ಸ್ಥಿತಿಗಳಲ್ಲಿ ತನ್ನನ್ನು ಇರಿಸಿಕೊಳ್ಳಲು ಇಚ್ಛಿಸುತ್ತಾನೆ, ಮತ್ತು ಆ ಮೂಲಕ ಅವನ ಕ್ರಿಯೆ ಮತ್ತು ಪ್ರತಿಕ್ರಿಯೆಗಳ ಸರಪಣಿಯು ಪ್ರಾರಂಭವಾಗುತ್ತದೆ. ಜೀವಾತ್ಮನು ಶ್ರೇಷ್ಠ ಸ್ವಭಾವದಿಂದ ಜ್ಞಾನಪೂರ್ಣನು. ಆದರೂ ಅವನ ಪರಿಮಿತ ಶಕ್ತಿಯು ನಿಮಿತ್ತ ಅಜ್ಞಾನದ ಪ್ರಭಾವಕ್ಕೆ ಒಳಪಡುವ ಪ್ರವೃತ್ತಿಯುಳ್ಳವನು. ಭಗವಂತನು ಸರ್ವಶಕ್ತನು.

ಆದರೆ ಜೀವಾತ್ಮನು ಹಾಗಲ್ಲ. ಭಗವಂತನು **ವಿಭು,** ಅಥವಾ ಸರ್ವಜ್ಞ. ಆದರೆ. ಜೀವಾತ್ಮನು, **ಅಣು**, ಅವನು ಚೇತನ ಆತ್ಮನಾಗಿರುವುದರಿಂದ, ಅವನು ತನ್ನ ಇಚ್ಛಾ ಸ್ವಾತಂತ್ರ್ಯದಿಂದ ಆಶಿಸಲು ಸಮರ್ಥನು. ಅಂಥ ಇಚ್ಛೆಯು ಸರ್ವಶಕ್ತನಾದ ಭಗವಂತನಿಂದ ಮಾತ್ರವೇ ಪೂರೈಸಲ್ಪಡುವುದು. ಹಾಗಿರಲು ಜೀವಿಯು ತನ್ನ ಇಚ್ಛೆಗಳಲ್ಲಿ ದಿಗ್ಭ್ರಮಿತನಾದಾಗ ಆ ಇಚ್ಛೆಗಳನ್ನು ಪೂರೈಸಿಕೊಳ್ಳಲು ಅವನಿಗೆ ಭಗವಂತನು ಅವಕಾಶ ನೀಡುತ್ತಾನೆ. ಆದರೆ ಆಶಿಸಿದ ವಿಶಿಷ್ಟ ಸನ್ನಿವೇಶದ ಕ್ರಿಯೆ ಮತ್ತು ಪ್ರತಿಕ್ರಿಯೆಗಳಿಗೆ ಭಗವಂತನು ಎಂದೂ ಹೊಣೆಗಾರನಲ್ಲ. ಆದ್ದರಿಂದ ಭ್ರಮಿತ ಸ್ಥಿತಿಯಲ್ಲಿದ್ದು, ದೇಹಧಾರಿ ಆತ್ಮನು ತನ್ನನ್ನು ಸಾಂದರ್ಭಿಕ ಭೌತಿಕ ದೇಹದೊಂದಿಗೆ ಗುರುತಿಸಿಕೊಳ್ಳುತ್ತಾನೆ ಮತ್ತು ಜೀವನದ ತಾತ್ಕಾಲಿಕ ಕಷ್ಟ ಮತ್ತು ಸುಖಕ್ಕೆ ಗುರಿಯಾಗುತ್ತಾನೆ. ಭಗವಂತನು ಪರಮಾತ್ಮನಾಗಿ ಜೀವಾತ್ಮನ ಸದಾ ಸಂಗಾತಿ. ಆದ್ದರಿಂದ ಒಬ್ಬನು ಹೂವಿನ ಸನಿಹದಲ್ಲಿರುವುದರಿಂದ ಅದರ ಸುವಾಸನೆಯನ್ನು ಹೇಗೆ ಆಘ್ರಾಣಿಸಬಹುದೋ ಹಾಗೆಯೇ ಅವನು ವ್ಯಕ್ತಿಗತ ಆತ್ಮನ ಇಚ್ಛೆಗಳನ್ನು ಅರಿತುಕೊಳ್ಳಬಲ್ಲನು. ಇಚ್ಛೆಯು ಜೀವಿಗೆ ಸೂಕ್ಷ್ಮರೂಪದ ಬಂಧನ ಕಾರಕ. ಅವನ ಅರ್ಹತಾನುಸಾರ ಭಗವಂತನು ಅವನ ಇಚ್ಛೆಯನ್ನು ಪೂರೈಸುತ್ತಾನೆ. ತಾನು ಒಂದು ನೆನೆದರೆ ದೈವವು ಮತ್ತೊಂದು ಬಗೆಯುತ್ತದೆ. ಆದ್ದರಿಂದ ವ್ಯಕ್ತಿಯು ತನ್ನ ಇಚ್ಛೆಗಳನ್ನು ನೆರವೇರಿಸಿಕೊಳ್ಳುವುದರಲ್ಲಿ ಸರ್ವಶಕ್ತನಲ್ಲ. ಆದರೆ ಭಗವಂತನಾದರೋ ಎಲ್ಲಾ ಆಸೆಗಳನ್ನು ಪೂರೈಸಬಲ್ಲನು, ಮತ್ತು ಭಗವಂತನು ಪ್ರತಿಯೊಬ್ಬರಿಗೂ ನಿಷ್ಪಕ್ಷಪಾತಿಯಾಗಿದ್ದು ಅಲ್ಪ ಸ್ವತಂತ್ರರಾದ ಜೀವಾತ್ಮರ ಇಚ್ಛೆಗಳಲ್ಲಿ ಕೈಹಾಕುವುದಿಲ್ಲ. ಆದರೆ ಒಬ್ಬನು ಕೃಷ್ಣನನ್ನು ಇಚ್ಛಿಸಿದಾಗ, ಭಗವಂತನು ವಿಶೇಷ ರಕ್ಷಣೆ ವಹಿಸುತ್ತಾನೆ ಮತ್ತು ಒಬ್ಬನು ಕೃಷ್ಣನನ್ನು ಹೊಂದುವಂತೆ ಮತ್ತು . ಶಾಶ್ವತ ಸುಖಿಯಾಗಲು ಇಚ್ಛಿಸುವ ಹಾಗೆ ಒಬ್ಬನನ್ನು ಪ್ರೋತ್ಸಾಹಿಸುತ್ತಾನೆ. ಆದ್ದರಿಂದ ವೇದಮಂತ್ರಗಳು, **ಏಷ ಉ ಹಿ ಏವ ಸಾಧು ಕರ್ಮ ಕಾರಯತಿ ತಂ ಯಮ್ ಏಭ್ಯೋ ಲೋಕೇಭ್ಯೊ ಉನ್ನಿನೀಷತೇ. ಏಷ ಉ ಏವಾಸಾಧು ಕರ್ಮ ಕಾರಯತಿ ಯಮ್ ಅಧೋ ನಿನೀಷತೇ**

"ಆತ್ಮನು ಉನ್ನತಿಸುವಂತೆ ಭಗವಂತನು ಅವನನ್ನು ಪುಣ್ಯ ಕಾರ್ಯದಲ್ಲಿ ತೊಡಗಿಸುತ್ತಾನೆ. ಅವನು ನರಕಕ್ಕೆ ಹೋಗುವಂತೆ ಅವನನ್ನು ಪಾಪ ಕಾರ್ಯಗಳಲ್ಲಿ ತೊಡಗಿಸುತ್ತಾನೆ," ಎಂದು ದೃಢವಾಗಿ ಹೇಳುತ್ತದೆ. **(ಕೌಷೀತಕೀ ಉಪನಿಷದ್ 3.8)**

ಅಜ್ಞೋ ಜನ್ತುರ್ ಅನಿಶೋऽಯಮ್ ಆತ್ಮನಃ ಸುಖದುಃಖಯೋಃ
ಈಶ್ವರಪ್ರೇರಿತೋ ಗಚ್ಛೇತ್ ಸ್ವರ್ಗಂ ವಾಶ್ವಭ್ರಮ್ ಏವ ಚ॥

"ಜೀವಿಯು ತನ್ನ ಸುಖದುಃಖಗಳಲ್ಲಿ ಸಂಪೂರ್ಣವಾಗಿ ಅಸ್ವತಂತ್ರನು. ಮೋಡವು ಗಾಳಿಯಿಂದ ಅಟ್ಟಲ್ಪಡುವಂತೆ ಪರಮನ ಇಚ್ಛೆಯಿಂದ ಅವನು ಸ್ವರ್ಗ ಅಥವಾ ನರಕಕ್ಕೆ ಹೋಗಬಹುದು."

ಆದ್ದರಿಂದ ದೇಹಧಾರಿ ಆತ್ಮನು ಕೃಷ್ಣ ಪ್ರಜ್ಞೆಯನ್ನು ತಪ್ಪಿಸಿಕೊಳ್ಳಬೇಕೆಂಬ ತನ್ನ **ನೆನಪಿಗೆ ಮೀರಿದ ಇಚ್ಛಾನಿಮಿತ್ತ, ಸ್ವಯಂ ದಿಗ್ಭ್ರಮೆಯನ್ನು ಉಂಟುಮಾಡಿಕೊಳ್ಳು**

ತ್ತಾನೆ. ಅದರ ಪರಿಣಾಮವಾಗಿ, ಸ್ವರೂಪತಃ ಅವನು ನಿತ್ಯನು, ಆನಂದಮಯನು ಮತ್ತು ಜ್ಞಾನವುಳ್ಳವನಾಗಿದ್ದರೂ ತನ್ನ ಅಸ್ತಿತ್ವದ ಅಲ್ಪತೆಯ ಕಾರಣ, ಅವನು ಭಗವಂತನ ದಾಸನಾದ ತನ್ನ ಸ್ವರೂಪ ಸ್ಥಿತಿಯನ್ನು ಮರೆಯುತ್ತಾನೆ ಮತ್ತು ಹೀಗೆ ಅವಿದ್ಯೆಯಿಂದ ಬಲೆಗೆ ಬೀಳುತ್ತಾನೆ. ಅಜ್ಞಾನದ ಪ್ರಭಾವದಲ್ಲಿ, ತನ್ನ ಬದ್ಧ ಅಸ್ತಿತ್ವಕ್ಕೆ ಭಗವಂತನು ಹೊಣೆಗಾರನೆಂದು ಜೀವಿಯು ಹೇಳುತ್ತಾನೆ. ವೇದಾಂತ ಸೂತ್ರಗಳು (2.1.34) ಕೂಡ ಇದನ್ನು ದೃಢಪಡಿಸುತ್ತವೆ : **ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷ-ತ್ವಾತ್ ತಥಾ ಹಿ ದರ್ಶಯತಿ,** "ಭಗವಂತನು ಹಾಗೆ ತೋರಿದರೂ ಅವನು ಯಾರನ್ನೂ ದ್ವೇಷಿಸುವುದಿಲ್ಲ ಅಥವಾ ಪ್ರೀತಿಸುವುದೂ ಇಲ್ಲ.

**ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।**
**ತೇಷಾಮಾದಿತ್ಯವಜ್ ಜ್ಞಾನಂ ಪ್ರಕಾಶಯತಿ ತತ್ ಪರಮ್** ॥ ೧೬ ॥

ಜ್ಞಾನೇನ—ಜ್ಞಾನದಿಂದ, ತು—ಆದರೆ, ತತ್—ಆ, ಅಜ್ಞಾನಮ್—ಅಜ್ಞಾನವು, ಯೇಷಾಮ್—ಯಾರ, ನಾಶಿತಮ್—ನಾಶವಾಗುವುದೋ. ಆತ್ಮನಃ—ಜೀವಿಯ, ತೇಷಾಮ್—ಅವರ, ಆದಿತ್ಯವತ್—ಉದಯಿಸುವ ಸೂರ್ಯನಂತೆ, ಜ್ಞಾನಮ್—ಜ್ಞಾನವು, ಪ್ರಕಾಶಯತಿ—ಪ್ರಕಟಪಡಿಸುತ್ತದೆ, ತತ್ ಪರಮ್—ಕೃಷ್ಣಪ್ರಜ್ಞೆಯನ್ನು.

**ಅಜ್ಞಾನವನ್ನು ನಾಶಮಾಡುವ ಜ್ಞಾನದಿಂದ ಒಬ್ಬನು ಜ್ಞಾನೋದಿತನಾದಾಗ, ಹೇಗೆ ಹಗಲಿನಲ್ಲಿ ಸೂರ್ಯನು ಪ್ರತಿಯೊಂದನ್ನೂ ಪ್ರಕಾಶಪಡಿಸುವಂತೆ, ಅವನ ಜ್ಞಾನವು ಪ್ರತಿಯೊಂದನ್ನು ಪ್ರಕಟಗೊಳಿಸುವುದು.**

**ಭಾವಾರ್ಥ :** ಕೃಷ್ಣನನ್ನು ಮರೆತವರು ಖಂಡಿತ ದಿಗ್ಭ್ರಮಿತರಾಗಿರಬೇಕು. ಆದರೆ ಕೃಷ್ಣಪ್ರಾಜ್ಞಿಗಳು ಸರ್ವಥಾ ದಿಗ್ಭ್ರಮಿತರಾಗುವುದೇ ಇಲ್ಲ. **ಸರ್ವಂ ಜ್ಞಾನ ಪ್ಲವೇನ, ಜ್ಞಾನಾಗ್ನಿಃ ಸರ್ವಕರ್ಮಾಣಿ** ಮತ್ತು **ನ ಹಿ ಜ್ಞಾನೇನ ಸದೃಶಮ್** ಎಂದು **ಭಗವದ್ಗೀತೆ**ಯಲ್ಲಿ ಹೇಳಿದೆ. ಜ್ಞಾನವು ಸದಾ ಅತ್ಯಂತ ಮಾನನೀಯವು. ಆ ಜ್ಞಾನವು ಯಾವುದು ? ಏಳನೆಯ ಅಧ್ಯಾಯದ 19ನೆಯ ಶ್ಲೋಕದಲ್ಲಿ ಹೇಳಿರುವಂತೆ, ಒಬ್ಬನು ಕೃಷ್ಣನಿಗೆ ಶರಣಾಗತನಾದಾಗ ಪರಿಪೂರ್ಣ ಜ್ಞಾನವನ್ನು ಪಡೆಯಬಹುದು : **ಬಹೂನಾಂ ಜನ್ಮನಾಮ್ ಅನ್ತೇ ಜ್ಞಾನವಾನ್ ಮಾಂ ಪ್ರಪದ್ಯತೇ** ಅನೇಕಾನೇಕ ಜನ್ಮಗಳನ್ನು ಕಳೆದ ತರುವಾಯ, ಒಬ್ಬನು ಜ್ಞಾನದಲ್ಲಿ ಪರಿಪೂರ್ಣನಾಗಿರುವವನು ಕೃಷ್ಣನಿಗೆ ಶರಣಾಗತನಾದಾಗ, ಅಥವಾ ಒಬ್ಬನು ಕೃಷ್ಣಪ್ರಜ್ಞೆಯನ್ನು ಪಡೆದಾಗ, ಹಗಲಿನಲ್ಲಿ ಸೂರ್ಯನಿಂದ ಪ್ರತಿಯೊಂದೂ ಪ್ರಕಟವಾಗುವಂತೆ, ಎಲ್ಲವೂ ಪ್ರಕಟವಾಗುತ್ತವೆ. ಜೀವಿಯು ಅನೇಕ ರೀತಿಗಳಲ್ಲಿ ದಿಗ್ಭ್ರಮಿತನು. ಉದಾಹರಣೆಗೆ, ಅವನು ವಿನಯಹೀನನಾಗಿ ತಾನೇ ದೇವರೆಂದು ಯೋಚಿಸಿದಾಗ ಅವನು ವಾಸ್ತವಿಕವಾಗಿ ಅವಿದ್ಯೆಯ ಕೊನೆಯ ಬಲೆಯಲ್ಲಿ ಬೀಳುತ್ತಾನೆ. ಜೀವಿಯು ದೇವರಾಗಿದ್ದರೆ, ಅವನು ಅವಿದ್ಯೆಯಿಂದ ದಿಗ್ಭ್ರಮಿತನಾಗುವುದು ಹೇಗೆ ? ದೇವರು ಅವಿದ್ಯೆಯಿಂದ ದಿಗ್ಭ್ರಮಿತನಾಗುವನೇ ? ಹಾಗಿದ್ದರೆ, ಅವಿದ್ಯೆ

ಅಥವಾ ಸೈತಾನನೇ (ಸೇಟಾನ್) ದೇವರಿಗಿಂತ ದೊಡ್ಡವನು. ಪರಿಪೂರ್ಣ ಕೃಷ್ಣಪ್ರಜ್ಞೆಯಿಂದ ನಿಜ ಜ್ಞಾನವನ್ನು ಪಡೆಯಬಹುದು. ಆದ್ದರಿಂದ, ಒಬ್ಬನು ಅಂಥ ಅಧಿಕೃತ ಗುರುವನ್ನು ಅರಸಬೇಕು, ಮತ್ತು ಅವನ ಅಧೀನದಲ್ಲಿ, ಕೃಷ್ಣಪ್ರಜ್ಞೆ ಎಂದರೇನು ಎಂಬುದನ್ನು ಕಲಿಯಬೇಕು, ಏಕೆಂದರೆ ಸೂರ್ಯನು ಕತ್ತಲೆಯನ್ನು ಹೊಡೆದಟ್ಟುವಂತೆ, ಕೃಷ್ಣಪ್ರಜ್ಞೆಯು ಎಲ್ಲ ಅವಿದ್ಯೆಯನ್ನು ಹೊಡೆದಟ್ಟುವುದು. ಒಬ್ಬನು ತಾನು ಈ ದೇಹವಲ್ಲ, ಆದರೆ ದೇಹಾತೀತನು ಎಂಬ ಪೂರ್ಣ ಜ್ಞಾನದಲ್ಲಿ ಇರಬಹುದಾದರೂ ಅವನು ಆತ್ಮ ಮತ್ತು ಪರಮಾತ್ಮರ ನಡುವೆ ಭೇದವನ್ನು ಗುರುತಿಸಲು ಶಕ್ತನಾಗದಿರಬಹುದು. ಆದರೆ ಅವನು ಪರಿಪೂರ್ಣ ಅಧಿಕೃತ ಕೃಷ್ಣಪ್ರಜ್ಞ ಗುರುವಿನ ಆಶ್ರಯ ಪಡೆಯಲು ಎಚ್ಚರಿಕೆ ವಹಿಸಿದರೆ, ಅವನು ಪ್ರತಿಯೊಂದನ್ನು ಚೆನ್ನಾಗಿ ತಿಳಿದುಕೊಳ್ಳಬಹುದು. ಒಬ್ಬನು ವಾಸ್ತವಿಕವಾಗಿ ಭಗವತ್ ಪ್ರತಿನಿಧಿಯನ್ನು ಸಂಧಿಸಿದಾಗ ಮಾತ್ರ ಭಗವಂತನನ್ನು ಮತ್ತು ಭಗವಂತನೊಂದಿಗೆ ತನ್ನ ಸಂಬಂಧವನ್ನು ಅವನು ತಿಳಿದುಕೊಳ್ಳಬಹುದು. ಭಗವತ್ ಪ್ರತಿನಿಧಿಯು ಭಗವತ್ ಜ್ಞಾನವನ್ನು ಹೊಂದಿರುವುದರಿಂದ, ಸಾಮಾನ್ಯವಾಗಿ ಭಗವಂತನಿಗೆ ಸಲ್ಲಿಸುವ ಸಕಲ ಗೌರವವನ್ನು ಪಡೆದರೂ, ಅವನು ತಾನೇ ಭಗವಂತನೆಂದು ಎಂದಿಗೂ ಹಕ್ಕು ಸಾಧಿಸುವುದಿಲ್ಲ. ಒಬ್ಬನು ಭಗವಂತ ಮತ್ತು ಜೀವಿಯ ನಡುವಿನ ಭೇದವನ್ನು ತಿಳಿದುಕೊಳ್ಳಬೇಕು. ಆದ್ದರಿಂದಲೇ ಪ್ರತಿಯೊಬ್ಬ ಜೀವನೂ ಒಬ್ಬ ಪ್ರತ್ಯೇಕ ವ್ಯಕ್ತಿ ಮತ್ತು ಭಗವಂತನೂ ಒಬ್ಬ ಪ್ರತ್ಯೇಕ ವ್ಯಕ್ತಿ ಎಂದು ಶ್ರೀಕೃಷ್ಣನು ಎರಡನೆಯ ಅಧ್ಯಾಯದಲ್ಲಿ (2. 12) ಹೇಳಿದ್ದಾನೆ. ಅವರೆಲ್ಲರೂ ಹಿಂದೆ ಪ್ರತ್ಯೇಕ ವ್ಯಕ್ತಿಗಳಾಗಿದ್ದರು, ಈಗಲೂ ಅವರು ಪ್ರತ್ಯೇಕ ವ್ಯಕ್ತಿಗಳಾಗಿದ್ದಾರೆ, ಮತ್ತು ಮುಂದೆಯೂ, ಮೋಕ್ಷಾನಂತರದಲ್ಲಿಯೂ ಸಹ ಅವರು ಪ್ರತ್ಯೇಕ ವ್ಯಕ್ತಿಗಳಾಗಿ ಮುಂದುವರಿಯುತ್ತಾರೆ. ರಾತ್ರಿಯಲ್ಲಿ ಕತ್ತಲೆಯಲ್ಲಿ ನಾವು ಪ್ರತಿಯೊಂದನ್ನೂ ಒಂದಾಗಿ ನೋಡುತ್ತೇವೆ, ಆದರೆ ಹಗಲಿನಲ್ಲಿ, ಸೂರ್ಯನು ಮೇಲೇರಿದಾಗ, ನಾವು ಪ್ರತಿಯೊಂದನ್ನು ಅದರ ನಿಜರೂಪದಲ್ಲಿ ಕಾಣುತ್ತೇವೆ. ಅಧ್ಯಾತ್ಮ ಜೀವನದಲ್ಲಿ ಪ್ರತ್ಯೇಕ ಲಕ್ಷಣವುಳ್ಳ ಏಕತ್ವವೇ ನಿಜವಾದ ಜ್ಞಾನ.

**ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ ।**
**ಗಚ್ಛನ್ತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥ ೧೭ ॥**

ತತ್‌ಬುದ್ಧಯಃ—ಯಾರ ಬುದ್ಧಿಯು ಸದಾ ಪರಮನಲ್ಲಿರುವುದೋ, ತತ್ ಆತ್ಮಾನಃ—ಯಾರ ಮನಸ್ಸು ಸದಾ ಪರಮನಲ್ಲಿರುವುದೋ, ತತ್‌ನಿಷ್ಠಾಃ—ಯಾರ ಶ್ರದ್ಧೆಯು ಪರಮನಿಗೆ ಮಾತ್ರ ಉದ್ದಿಷ್ಟವೋ, ತತ್ ಪರಾಯಣಾಃ—ಯಾರು ಅವನ ಆಶ್ರಯವನ್ನು ಸಂಪೂರ್ಣವಾಗಿ ತೆಗೆದುಕೊಂಡಿರುವರೋ, ಗಚ್ಛನ್ತಿ—ಹೋಗುತ್ತಾರೆ, ಅಪುನಃ ಆವೃತ್ತಿಮ್—ಮೋಕ್ಷಕ್ಕೆ, ಜ್ಞಾನ—ಜ್ಞಾನದಿಂದ, ನಿರ್ಧೂತ—ಶುದ್ಧವಾಗಿ, ಕಲ್ಮಷಾಃ—ಸಂಶಯಗಳು.

**ಒಬ್ಬನ ಬುದ್ಧಿ, ಮನಸ್ಸು, ಶ್ರದ್ಧೆ ಮತ್ತು ಆಶ್ರಯ ಎಲ್ಲವೂ ಪರಮನಲ್ಲಿ ಸ್ಥಿತವಾದಾಗ, ಅವನು ಸಂಪೂರ್ಣ ಜ್ಞಾನದ ಮೂಲಕ ಸಂಶಯಗಳಿಂದ ಪೂರ್ತಿ ಶುದ್ಧನಾಗುತ್ತಾನೆ, ಮತ್ತು ಹೀಗೆ ಮೋಕ್ಷಮಾರ್ಗದಲ್ಲಿ ನೇರವಾಗಿ ಸಾಗುತ್ತಾನೆ.**

**ಭಾವಾರ್ಥ :** ಶ್ರೀಕೃಷ್ಣನು ಪರಮ ದಿವ್ಯ ಸತ್ಯ. ಶ್ರೀಕೃಷ್ಣನು ಪರಮದೇವೋತ್ತಮ ಪುರುಷ ಎಂಬ ಘೋಷಣೆಯುಸುತ್ತಲೂ ಇಡೀ ಭಗವದ್ಗೀತೆಯು ಕೇಂದ್ರೀಕೃತ ಇದೇ ಸಮಗ್ರ ವೇದ ಸಾಹಿತ್ಯದ ಹೇಳಿಕೆ. ಬ್ರಹ್ಮ, ಪರಮಾತ್ಮ ಮತ್ತು ಭಗವಾನ್ ಎಂಬುದಾಗಿ ಪರಮನನ್ನು ತಿಳಿದಿರುವವರಿಂದ ಅರಿಯಲ್ಪಡುವ ಪರಮ ಸತ್ಯವೇ **ಪರತತ್ವ.** ಭಗವಾನ್ ಅಥವಾ ಪರಮದೇವೋತ್ತಮ ಪುರುಷನು ಪರತತ್ವದಲ್ಲಿ ಕೊನೆಯ ಮಾತು. ಅದಕ್ಕಿಂತ ಹೆಚ್ಚಿನದು ಏನೂ ಇಲ್ಲ. **ಮತ್ತಃ ಪರತರಂ ನಾನ್ಯತ್ ಕಿಞ್ಚಿದ್ ಅಸ್ತಿ ಧನಞ್ಜಯ** ಎಂದು ಭಗವಂತನು ಹೇಳುತ್ತಾನೆ. **ಬ್ರಹ್ಮಣೋ ಹಿ ಪ್ರತಿಷ್ಠಾಹಮ್** ಎಂದರೆ, ವ್ಯಕ್ತಿಶೂನ್ಯ ಬ್ರಹ್ಮನ್‌ನನಿಗೂ ಶ್ರೀಕೃಷ್ಣನೇ ಆಧಾರ. ಆದ್ದರಿಂದ ಎಲ್ಲ ರೀತಿಗಳಲ್ಲಿ ಕೃಷ್ಣನು ಪರಮ ಸತ್ಯನು. ಯಾರೊಬ್ಬನ ಮನಸ್ಸು, ಬುದ್ಧಿ, ಶ್ರದ್ಧೆ ಮತ್ತು ಆಶ್ರಯ ಸದಾ ಕೃಷ್ಣನಲ್ಲಿ ಇರುವುವೋ ಅಥವಾ ಅರ್ಥಾತ್,ಯಾರೊಬ್ಬನು ಪೂರ್ಣ ಕೃಷ್ಣಪ್ರಾಜ್ಞಿಯೋ ಅವನು ನಿಸ್ಸಂದೇಹವಾಗಿ ಸಕಲ ಸಂಶಯಗಳಿಂದಲೂ ನಿರ್ಧೂತನು ಮತ್ತು ದಿವ್ಯಕ್ಕೆ ಸಂಬಂಧಿಸಿದ ಪ್ರತಿಯೊಂದರಲ್ಲಿಯೂ ಪರಿಪೂರ್ಣ ಜ್ಞಾನದಲ್ಲಿರುವನು. ಕೃಷ್ಣನಲ್ಲಿ ದ್ವಂದ್ವವಿದೆ (ಏಕಕಾಲದಲ್ಲಿ ಏಕತ್ವ ಮತ್ತು ಪ್ರತ್ಯೇಕತೆ) ಎಂಬುದನ್ನು ಕೃಷ್ಣಪ್ರಾಜ್ಞಿಯು ಚೆನ್ನಾಗಿ ಅರಿತುಕೊಳ್ಳಬಲ್ಲನು, ಮತ್ತು ಇಂಥ ದಿವ್ಯ ಜ್ಞಾನಯುಕ್ತನಾಗಿ ಒಬ್ಬನು ಮುಕ್ತಿಮಾರ್ಗದಲ್ಲಿ ಸ್ಥಿರಪ್ರಗತಿಯನ್ನು ಸಾಧಿಸಬಲ್ಲನು.

**ವಿದ್ಯಾವಿನಯಸಮ್ಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।**
**ಶುನಿ ಚೈವ ಶ್ವಪಾಕೇ ಚ ಪಣ್ಡಿತಾಃ ಸಮದರ್ಶಿನಃ ॥ ೧೮ ॥**

ವಿದ್ಯಾ—ವಿದ್ಯೆಯಿಂದ, ವಿನಯ—ಮತ್ತು ವಿನಯತೆ, ಸಮ್ಪನ್ನೇ—ಪೂರ್ಣಯುಕ್ತರು, ಬ್ರಾಹ್ಮಣೇ—ಬ್ರಾಹ್ಮಣನಲ್ಲಿ, ಗವಿ—ಗೋವಿನಲ್ಲಿ, ಹಸ್ತಿನಿ—ಆನೆಯಲ್ಲಿ, ಶುನಿ—ನಾಯಿಯಲ್ಲಿ, ಚ—ಮತ್ತು, ಏವ—ಖಂಡಿತವಾಗಿ, ಶ್ವಪಾಕೇ—ನಾಯಿಯನ್ನು ತಿನ್ನುವನಲ್ಲಿ, (ಅಂತ್ಯಜ), ಚ—ಕ್ರಮವಾಗಿ, ಪಣ್ಡಿತಾಃ—ಪಂಡಿತರು, ಸಮದರ್ಶಿನಃ—ಸಮದೃಷ್ಟಿಯಿಂದ ನೋಡುವವರು.

**ನಿಜ ಜ್ಞಾನ ನಿಮಿತ್ತ ವಿನಯ ಸಂಪನ್ನರಾದ ಋಷಿಗಳು, ಒಬ್ಬ ವಿದ್ಯೆ ಮತ್ತು ವಿನಯಸಂಪನ್ನನಾದ ಬ್ರಾಹ್ಮಣ, ಹಸು, ಆನೆ, ನಾಯಿ ಮತ್ತು ನಾಯಿಯನ್ನು ತಿನ್ನುವನನ್ನು (ಅಂತ್ಯಜ) ಸಮದೃಷ್ಟಿಯಿಂದ ನೋಡುತ್ತಾರೆ.**

**ಭಾವಾರ್ಥ:** ಕೃಷ್ಣಪ್ರಾಜ್ಞಿಯು ಯೋನಿಗಳ ಅಥವಾ ಜಾತಿಗಳ ನಡುವೆ ಭೇದಗಳನ್ನು ಮಾಡುವುದಿಲ್ಲ. ಬ್ರಾಹ್ಮಣ ಮತ್ತು ಚಂಡಾಲ ಸಾಮಾಜಿಕ ದೃಷ್ಟಿಯಿಂದ ಭಿನ್ನರಾಗಿರಬಹುದು, ಅಥವಾ ನಾಯಿ, ಪಶು, ಮತ್ತು ಆನೆ ಯೋನಿಗಳ ದೃಷ್ಟಿಯಿಂದ ಭಿನ್ನವಾಗಿರಬಹುದು. ಆದರೆ ಒಬ್ಬ ದಿವ್ಯ ಜ್ಞಾನಿಯ ದೃಷ್ಟಿಯಿಂದ ಈ ದೈಹಿಕ ವ್ಯತ್ಯಾಸಗಳು

**ಅರ್ಥಹೀನ.** ಇದು ಪರಮನೊಂದಿಗೆ ಅವುಗಳ ಸಂಬಂಧ ನಿಮಿತ್ತ, ಏಕೆಂದರೆ ಪರಮ ಪ್ರಭುವು, ಪರಮಾತ್ಮನಾಗಿ ತನ್ನ ಪೂರ್ಣಾಂಶದಿಂದ ಪ್ರತಿಯೊಬ್ಬನ ಹೃದಯದಲ್ಲಿದ್ದಾನೆ. ಪರಮನ ಅಂಥ ಅರಿವು ನಿಜವಾದ ಜ್ಞಾನ. ವಿವಿಧ ಜಾತಿಗಳಲ್ಲಿನ ಅಥವಾ ವಿವಿಧ ಜೀವ ರಾಶಿಗಳ ಯೋನಿಗಳಲ್ಲಿನ ದೇಹಗಳ ಮಟ್ಟಿಗಾದರೋ ಭಗವಂತನು ಪ್ರತಿಯೊಬ್ಬನಿಗೂ ಸಮಾನವಾಗಿ ದಯೆಯುಳ್ಳವನು, ಏಕೆಂದರೆ ಅವನು ಪ್ರತಿಯೊಬ್ಬ ಜೀವಿಯನ್ನು ತನ್ನ ಸಖನಾಗಿ ಭಾವಿಸುತ್ತಾನೆ. ಆದರೂ ಜೀವಿಗಳ ಸನ್ನಿವೇಶಗಳನ್ನು ಗಮನಿಸದೆ ತಾನು ಪರಮಾತ್ಮನಾಗಿ ಇರುತ್ತಾನೆ. ಬ್ರಾಹ್ಮಣನ ಮತ್ತು ಚಂಡಾಲನ ದೇಹಗಳು ಒಂದೇ ಅಲ್ಲವಾದರೂ, ಚಂಡಾಲ ಮತ್ತು ಬ್ರಾಹ್ಮಣ ಉಭಯರಲ್ಲಿಯೂ ಭಗವಂತನು ಪರಮಾತ್ಮನಾಗಿ ಇದ್ದಾನೆ. ದೇಹಗಳು ಭೌತಿಕ ಪ್ರಕೃತಿಯ ಭಿನ್ನ ಗುಣಗಳ ಭೌತಿಕ ಉತ್ಪನ್ನಗಳು, ಆದರೆ ದೇಹಗತ ಆತ್ಮ ಮತ್ತು ಪರಮಾತ್ಮ ಅಧ್ಯಾತ್ಮಿಕ ಗುಣದಲ್ಲಿ ಒಂದೇ. ಆತ್ಮ ಮತ್ತು ಪರಮಾತ್ಮರ ಗುಣ ಸಾದೃಶ್ಯತೆಯು ಅವರನ್ನು ಪರಿಮಾಣದಲ್ಲಿ ಸಮಾನರನ್ನಾಗಿ ಮಾಡುವುದಿಲ್ಲ, ಏಕೆಂದರೆ ವ್ಯಕ್ತಿಗತ ಆತ್ಮನು ಒಂದು ವಿಶಿಷ್ಟ ದೇಹದಲ್ಲಿ ಮಾತ್ರ ಇರುವವನು, ಆದರೆ ಪರಮಾತ್ಮನಾದರೋ ಪ್ರತಿಯೊಂದು ದೇಹದಲ್ಲಿಯೂ ಇರುವವನು. ಕೃಷ್ಣಪ್ರಾಜ್ಞಿಗೆ ಇದರ ಪೂರ್ಣ ಜ್ಞಾನ ಇರುತ್ತದೆ, ಆದ್ದರಿಂದ ಅವನು ನಿಜವಾಗಿಯೂ ಪಂಡಿತನು ಮತ್ತು ಸಮದೃಷ್ಟಿಯುಳ್ಳವನು. ಆತ್ಮ ಮತ್ತು ಪರಮಾತ್ಮರ ಗುಣಲಕ್ಷಣಗಳ ಸಾದೃಶ್ಯವೆಂದರೆ ಉಭಯರೂ ಪ್ರಾಜ್ಞಿಗಳು, ಶಾಶ್ವತರು ಮತ್ತು ಆನಂದ ಮಯರು. ವ್ಯತ್ಯಾಸವೆಂದರೆ, ವ್ಯಕ್ತಿಗತ ಆತ್ಮನು ದೇಹ ಪರಿಮಿತ ವ್ಯಾಪ್ತಿಯಲ್ಲಿ ಪ್ರಾಜ್ಞನು, ಪರಮಾತ್ಮನಾದರೋ ಸಕಲ ದೇಹಗಳ ಪ್ರಾಜ್ಞನು. ಪರಮಾತ್ಮನು ಎಲ್ಲ ದೇಹಗಳಲ್ಲಿಯೂ ಭೇದವಿಲ್ಲದೆ ಇದ್ದಾನೆ.

**ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ ।**
**ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ ಬ್ರಹ್ಮಣಿ ತೇ ಸ್ಥಿತಾಃ ॥೧೯॥**

ಇಹ—ಈ ಜನ್ಮದಲ್ಲಿಯೇ, ಏವ—ಖಂಡಿತವಾಗಿ, ತೈಃ—ಅವರಿಂದ, ಜಿತಃ—ಗೆಲ್ಲಲ್ಪಡುವುದು, ಸರ್ಗಃ—ಜನನ ಮತ್ತು ಮರಣ, ಯೇಷಾಮ್—ಯಾರ, ಸಾಮ್ಯೇ—ಸಮಭಾವದಲ್ಲಿ, ಸ್ಥಿತಮ್—ಸನ್ನಿವೇಶಿತವು, ಮನಃ—ಮನಸ್ಸು, ನಿರ್ದೋಷಮ್—ದೋಷರಹಿತ, ಹಿ—ಖಂಡಿತವಾಗಿ, ಸಮಮ್—ಸಮಭಾವದಲ್ಲಿ, ಬ್ರಹ್ಮ—ಪರಮನಂತೆ, ತಸ್ಮಾತ್—ಆದ್ದರಿಂದ, ಬ್ರಹ್ಮಣಿ—ಪರಮನಲ್ಲಿ, ತೇ—ಅವರು, ಸ್ಥಿತಾಃ—ಸನ್ನಿವೇಶಿತರು.

**ಯಾರ ಮನಸ್ಸು ಒಂದೇ ರೀತಿಯಲ್ಲಿ ಮತ್ತು ಸಮಭಾವದಲ್ಲಿ ಸ್ಥಾಪಿತವಾಗಿರುವುದೋ ಅವರು ಆಗಲೇ ಜನನ ಮರಣ ನಿಯಮನಗಳನ್ನು ಜಯಿಸಿರುತ್ತಾರೆ. ಅವರು ಬ್ರಹ್ಮನ್ ಹಾಗೆ ದೋಷರಹಿತರು, ಮತ್ತು ಹೀಗೆ ಅವರು ಆಗಲೇ ಬ್ರಹ್ಮನ್‌ನಲ್ಲಿ ಸನ್ನಿವೇಶಿತರು.**

**ಭಾವಾರ್ಥ :** ಮೇಲೆ ಹೇಳಿದಂತೆ, ಮನಸ್ಸಿನ ಸಮಭಾವವು ಆತ್ಮ ಸಾಕ್ಷಾತ್ಕಾರದ ಗುರುತು. ಅಂಥ ಹಂತವನ್ನು ವಾಸ್ತವಿಕವಾಗಿ ತಲುಪಿದವರು ಭೌತಿಕ ಸ್ಥಿತಿಗಳನ್ನು,

ವಿಶೇಷವಾಗಿ ಜನನ ಮರಣಗಳನ್ನು ಗೆದ್ದವರೆಂದು ತಿಳಿಯಬೇಕು. ಒಬ್ಬನು ಈ ದೇಹದೊಂದಿಗೆ ಗುರುತಿಸಿಕೊಳ್ಳುವವರೆಗೆ, ಅವನು ಬದ್ಧ ಆತ್ಮನು ಎಂದು ತಿಳಿಯಲ್ಪಡುವನು, ಆದರೆ ಅವನು ಆತ್ಮ ಸಾಕ್ಷಾತ್ಕಾರ ಮೂಲಕ ಸಮಭಾವದ ಹಂತಕ್ಕೆ ಉನ್ನತಿಸಲ್ಪಟ್ಟ ಕೂಡಲೇ ಅವನು ಬದ್ಧ ಜೀವನದಿಂದ ವಿಮೋಚಿತನಾಗುತ್ತಾನೆ. ಅರ್ಥಾತ್ ಆ ಮುಂದೆ ಅವನು ಈ ಭೌತಿಕ ಜಗತ್ತಿನಲ್ಲಿ ಜನ್ಮವೆತ್ತಲು ಬದ್ಧನಲ್ಲ, ಆದರೆ ತನ್ನ ಮರಣಾನಂತರ ಪರವ್ಯೋಮವನ್ನು ಪ್ರವೇಶಿಸಬಲ್ಲನು. ಭಗವಂತನು ದೋಷರಹಿತನು, ಏಕೆಂದರೆ ಅವನಿಗೆ ಆಕರ್ಷಣೆ ಅಥವಾ ದ್ವೇಷ ಇಲ್ಲ. ಅದೇ ಪ್ರಕಾರ ಜೀವಿಯು ಆಕರ್ಷಣೆ ಅಥವಾ ದ್ವೇಷರಹಿತನಾದಾಗ, ಅವನು ದೋಷವಿಲ್ಲದವನಾಗುವನು ಮತ್ತು ಪರವ್ಯೋಮ ಪ್ರವೇಶಕ್ಕೆ ಅರ್ಹನು. ಅಂಥ ವ್ಯಕ್ತಿಗಳನ್ನು ಆಗಲೇ ಮುಕ್ತರೆಂದು ತಿಳಿಯಬೇಕು, ಮತ್ತು ಅವರ ಲಕ್ಷಣಗಳು ಕೆಳಗೆ ವಿವರಿಸಲ್ಪಟ್ಟಿವೆ.

**ನ ಪ್ರಹೃಷ್ಯೇತ್ ಪ್ರಿಯಂ ಪ್ರಾಪ್ಯ ನೋದ್ವಿಜೇತ್ ಪ್ರಾಪ್ಯ ಚಾಪ್ರಿಯಮ್ ।**
**ಸ್ಥಿರಬುದ್ಧಿರಸಮ್ಮೂಢೋ ಬ್ರಹ್ಮವಿದ್ ಬ್ರಹ್ಮಣಿ ಸ್ಥಿತಃ ॥ ೨೦ ॥**

ನ—ಎಂದಿಗೂ ಇಲ್ಲ, ಪ್ರಹೃಷ್ಯೇತ್—ಹರ್ಷಿಸುವುದು, ಪ್ರಿಯಮ್—ಪ್ರಿಯವಾದುದನ್ನು, ಪ್ರಾಪ್ಯ—ಪಡೆದು, ನ—ಇಲ್ಲ, ಉದ್ವಿಜೇತ್—ಉದ್ವಿಗ್ನನಾಗುವುದು, ಪ್ರಾಪ್ಯ—ಪಡೆದು, ಚ—ಮತ್ತು, ಅಪ್ರಿಯಮ್—ಅಪ್ರಿಯವಾದುದನ್ನು, ಸ್ಥಿರಬುದ್ಧಿಃ—ಸ್ವಯಂ ಬುದ್ಧಿವಂತನು, ಅಸಮ್ಮೂಢಃ—ದಿಗ್ಭ್ರಾಂತನಾಗದ, ಬ್ರಹ್ಮವಿತ್—ಪರಮನನ್ನು ಪರಿಪೂರ್ಣವಾಗಿ ತಿಳಿದವನು, ಬ್ರಹ್ಮಣಿ—ದಿವ್ಯದಲ್ಲಿ, ಸ್ಥಿತಃ—ಸನ್ನಿವೇಶಿತನು.

**ಪ್ರಿಯವಾದುದನ್ನು ಪಡೆದಾಗ ಹರ್ಷಿಸದ ಮತ್ತು ಅಪ್ರಿಯವಾದುದನ್ನು ಪಡೆದಾಗ ಶೋಕಿಸದ ವ್ಯಕ್ತಿಯು, ಸ್ವಯಂಬುದ್ಧಿವಂತನು, ದಿಗ್ಭ್ರಾಂತನಾಗದವನು, ಮತ್ತು ಭಗವದ್ ವಿಜ್ಞಾನವನ್ನು ತಿಳಿದವನು, ಈಗಾಗಲೇ ದಿವ್ಯದಲ್ಲಿ ಸನ್ನಿವೇಶಿತನು.**

**ಭಾವಾರ್ಥ** : ಆತ್ಮ ಸಾಕ್ಷಾತ್ಕಾರಿ ವ್ಯಕ್ತಿಯ ಲಕ್ಷಣಗಳು ಇಲ್ಲಿ ಕೊಡಲ್ಪಟ್ಟಿವೆ. ಮೊದಲನೆಯ ಲಕ್ಷಣವೆಂದರೆ ಅವನು ದೇಹವನ್ನು ತನ್ನ ನಿಜ ಆತ್ಮನೊಂದಿಗೆ ಮಿಥ್ಯಾ ಗುರುತಿಸುವಿಕೆಯಿಂದ ಮೋಹಿತನಲ್ಲ. ತಾನು ಈ ದೇಹವಲ್ಲ, ಆದರೆ ಪರಮದೇವೋತ್ತಮ ಪುರುಷನ ಪ್ರತ್ಯೇಕ ಭಾಗ ಎಂಬುದನ್ನು ಚೆನ್ನಾಗಿ ತಿಳಿದಿರುತ್ತಾನೆ. ಆದ್ದರಿಂದ ಅವನು ತನ್ನ ದೇಹಸಂಬಧಿತವಾದ ಏನನ್ನೂ ಹೊಂದಿದರೆ ಹರ್ಷಿಸುವುದಿಲ್ಲ, ಅಥವಾ ಏನನ್ನೋ ಕಳೆದುಕೊಂಡರೆ ವಿಷಾದಿಸುವುದಿಲ್ಲ. ಮನಸ್ಸಿನ ಈ ಸ್ಥಿರತೆಯನ್ನು **ಸ್ಥಿರಬುದ್ಧಿ**, ಅಥವಾ ಸ್ವಯಂ ಬುದ್ಧಿ ಎಂದು ಕರೆದಿದೆ. ಆದ್ದರಿಂದ ಈ ಜಡದೇಹವನ್ನು ಆತ್ಮನೆಂದು ತಪ್ಪಾಗಿ ತಿಳಿದು ಅವನೆಂದೂ ದಿಗ್ಭ್ರಾಂತನಾಗುವುದಿಲ್ಲ; ಅಥವಾ ಈ ದೇಹವು ಶಾಶ್ವತವೆಂದೂ ಅಂಗೀಕರಿಸಿ ಆತ್ಮನ ಅಸ್ತಿತ್ವವನ್ನು ಕಡೆಗಣಿಸುವುದಿಲ್ಲ. ಈ ಜ್ಞಾನವು ಅವನನ್ನು ಬ್ರಹ್ಮನ್, ಪರಮಾತ್ಮ ಮತ್ತು ಭಗವಾನ್ ಎಂಬುದಾಗಿ ಪರಮ ಸತ್ಯದ ಸಂಪೂರ್ಣ ವಿಜ್ಞಾನವನ್ನು ತಿಳಿಯುವ ಮಟ್ಟಕ್ಕೆ ಉನ್ನತಿಸುತ್ತದೆ. ಎಲ್ಲ ವಿಷಯಗಳಲ್ಲಿ ಪರಮ

ನೊಂದಿಗೆ ಒಂದಾಗುವ ಮಿಥ್ಯಾ ಪ್ರಯತ್ನವನ್ನು ಮಾಡದೆ, ಅವನು ಹೀಗೆ ತನ್ನ ಸ್ವರೂಪ ಸ್ಥಿತಿಯನ್ನು ಚೆನ್ನಾಗಿ ತಿಳಿದಿರುತ್ತಾನೆ. ಇದನ್ನು ಬ್ರಹ್ಮನ್ ಸಾಕ್ಷಾತ್ಕಾರ, ಅಥವಾ ಆತ್ಮ ಸಾಕ್ಷಾತ್ಕಾರ ಎಂದು ಕರೆದಿದೆ. ಅಂಥ ಸ್ಥಿರ ಪ್ರಜ್ಞೆಯನ್ನು ಕೃಷ್ಣಪ್ರಜ್ಞೆ ಎಂದು ಕರೆದಿದೆ.

**ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿನ್ದತ್ಯಾತ್ಮನಿ ಯತ್ ಸುಖಮ್ ।**
**ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯಮಶ್ನುತೇ ॥೨೧॥**

ಬಾಹ್ಯಸ್ಪರ್ಶೇಷು—ಬಾಹ್ಯ ಇಂದ್ರಿಯ ಆನಂದದಲ್ಲಿ, ಅಸಕ್ತಆತ್ಮಾ—ಆಸಕ್ತನಲ್ಲದವನು, ವಿನ್ದತಿ—ಭೋಗಿಸುತ್ತಾನೆ, ಆತ್ಮನಿ—ಆತ್ಮನಲ್ಲಿ, ಯತ್—ಯಾವುದು, ಸುಖಮ್—ಸುಖವು, ಸಃ—ಅವನು, ಬ್ರಹ್ಮಯೋಗ—ಬ್ರಹ್ಮನಲ್ಲಿ ಕೇಂದ್ರೀಕರಿಸುವುದರಿಂದ, ಯುಕ್ತ ಆತ್ಮಾ—ಆತ್ಮಸಂಬಂಧಿತ, ಸುಖಮ್—ಸುಖವನ್ನು, ಅಕ್ಷಯಮ್—ಅಪರಿಮಿತ, ಅಶ್ನುತೇ—ಭೋಗಿಸುತ್ತಾನೆ.

**ಅಂಥ ಮುಕ್ತ ವ್ಯಕ್ತಿಯು ಭೌತಿಕ ಇಂದ್ರಿಯ ಸುಖಕ್ಕೆ ಆಕರ್ಷಿತನಾಗದೆ, ಅಂತರ್ಯದಲ್ಲಿ ಆನಂದವನ್ನು ಅನುಭವಿಸುತ್ತಾ ಸದಾ ಸಮಾಧಿಯಲ್ಲಿರುವನು. ಈ ರೀತಿಯಲ್ಲಿ ಆತ್ಮಸಾಕ್ಷಾತ್ಕಾರಿಯು ಪರಮನ ಮೇಲೆ ಕೇಂದ್ರೀಕರಿಸುವುದರಿಂದ ಅವನು ಅಪರಿಮಿತ ಆನಂದವನ್ನು ಅನುಭವಿಸುತ್ತಾನೆ.**

**ಭಾವಾರ್ಥ :** ಕೃಷ್ಣಪ್ರಜ್ಞೆಯಲ್ಲಿನ ಮಹಾಭಕ್ತರಾದ ಶ್ರೀಯಾಮುನಾಚಾರ್ಯರು ಹೇಳಿದ್ದಾರೆ :

ಯದ್‌ಅವಧಿ ಮಮ ಚೇತಃ ಕೃಷ್ಣಪದಾರವಿನ್ದೇ
ನವನವರಸಧಾಮನಿ ಉದ್ಯತಂ ರನ್ತುಂ ಆಸೀತ್।
ತದವಧಿ ಬತ ನಾರೀಸಂಗಮೇ ಸ್ಮರ್ಯಮಾನೇ
ಭವತಿ ಮುಖವಿಕಾರಃ ಸುಷ್ಠು ನಿಷ್ಠೀವನಂ ಚ॥

"ಕೃಷ್ಣನಲ್ಲಿ ನಿತ್ಯನೂತನ ಆನಂದವನ್ನು ನಾನು ಅನುಭವಿಸುತ್ತಾ ಅವನ ದಿವ್ಯ ಪ್ರೇಮಯುತ ಸೇವೆಯಲ್ಲಿ ನಿರತನಾಗಿದ್ದರಿಂದ, ಲೈಂಗಿಕ ಸುಖ ವಿಚಾರವನ್ನು ನಾನು ಮಾಡಿದಾಗಲೆಲ್ಲಾ ಆ ವಿಚಾರದೆಡೆಗೆ ಉಗಿಯುತ್ತೇನೆ, ಮತ್ತು ನನ್ನ ತುಟಿಗಳು ಅಸಹ್ಯದಿಂದ ಸುರುಟಿಕೊಳ್ಳುತ್ತವೆ." ಬ್ರಹ್ಮಯೋಗಿ ಅಥವಾ ಕೃಷ್ಣ ಪ್ರಜ್ಞೆಯು, ಭಗವಂತನ ಪ್ರೇಮಯುತ ಸೇವೆಯಲ್ಲಿ ಅದೆಷ್ಟು ಮಗ್ನನೆಂದರೆ, ಅವನು ಭೌತಿಕ ಇಂದ್ರಿಯ ಸುಖಕ್ಕೆ ತನ್ನ ರುಚಿಯನ್ನು ಪೂರ್ಣವಾಗಿ ಕಳೆದುಕೊಳ್ಳುತ್ತಾನೆ. ಲೈಂಗಿಕ ಸುಖವು ಅತ್ಯಧಿಕ ಭೌತಿಕ ಸುಖ ಮತ್ತು ಐಹಿಕ ಭೋಗಾಸಕ್ತನು ಈ ಪ್ರೇರಣೆ ಇಲ್ಲದೆ ಖಂಡಿತ ಕೆಲಸಮಾಡಲಾರನು. ಆದರೆ ಕೃಷ್ಣಪ್ರಜ್ಞಾ ನಿರತನು ಲೈಂಗಿಕ ಸುಖವನ್ನು ವರ್ಜಿಸುವುದಲ್ಲದೆ, ಲೈಂಗಿಕ ಸುಖವಿಲ್ಲದೆಯೇ ಇನ್ನೂ ಹೆಚ್ಚಿನ ಓಜಸ್ಸಿನಿಂದ ಕಾರ್ಯಮಾಡಬಲ್ಲನು. ಅದೇ ಆಧ್ಯಾತ್ಮ ಸಾಕ್ಷಾತ್ಕಾರದ ಪರೀಕ್ಷೆ. ಆಧ್ಯಾತ್ಮ ಸಾಕ್ಷಾತ್ಕಾರ ಮತ್ತು ಲೈಂಗಿಕ ಸುಖ ಜೊತೆಗೂಡಿ

ಸಾಗಲಾರವು. ಕೃಷ್ಣಪ್ರಜ್ಞೆಯು ಮುಕ್ತಾತ್ಮನಾದ್ದರಿಂದ, ಯಾವ ಬಗೆಯ ಇಂದ್ರಿಯ ಸುಖಕ್ಕೂ ಆಕರ್ಷಿತನಾಗುವುದಿಲ್ಲ.

**ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ ।**
**ಆದ್ಯನ್ತವನ್ತಃ ಕೌನ್ತೇಯ ನ ತೇಷು ರಮತೇ ಬುಧಃ ॥೨೨॥**

ಯೇ—ಯಾವುವು, ಹಿ—ಖಂಡಿತವಾಗಿ, ಸಂಸ್ಪರ್ಶಜಾ—ಭೌತಿಕ ಇಂದ್ರಿಯಗಳೊಡನೆ ಸಂಪರ್ಕದಿಂದ, ಭೋಗಾಃ—ಭೋಗಗಳು, ದುಃಖ—ದುಃಖ, ಯೋನಯಃ—ಮೂಲಗಳು, ಏವ—ಖಂಡಿತವಾಗಿ, ತೇ—ಅವುಗಳು. ಆದಿ—ಪ್ರಾರಂಭ. ಅನ್ತ—ಕೊನೆ, ವನ್ತಃ—ಒಳಪಟ್ಟವು, ಕೌನ್ತೇಯ—ಹೇ ಕುಂತೀಪುತ್ರನೇ. ನ—ಎಂದಿಗೂ ಇಲ್ಲ, ತೇಷು—ಅವುಗಳಲ್ಲಿ, ರಮತೇ—ಆನಂದವನ್ನು ಆಸ್ವಾದಿಸುವುದು, ಬುಧಃ—ಬುದ್ಧಿವಂತನು.

**ಬುದ್ಧಿವಂತನು ಭೌತಿಕ ಇಂದ್ರಿಯಗಳೊಡನೆ ಸಂಪರ್ಕದ ನಿಮಿತ್ತವಾದ ಕ್ಲೇಶ ಮೂಲಗಳಲ್ಲಿ ಭಾಗವಹಿಸುವುದಿಲ್ಲ. ಹೇ ಕುಂತೀಪುತ್ರನೇ, ಅಂಥ ಸುಖಗಳು ಆದಿ ಮತ್ತು ಅಂತ್ಯವುಳ್ಳವು, ಆದ್ದರಿಂದ ಬುದ್ಧಿವಂತನು ಅವುಗಳಲ್ಲಿ ಆನಂದಿಸುವುದಿಲ್ಲ.**

**ಭಾವಾರ್ಥ :** ಭೌತಿಕ ಇಂದ್ರಿಯ ಸುಖಗಳು ಭೌತಿಕ ಇಂದ್ರಿಯ ಸಂಪರ್ಕ ನಿಮಿತ್ತವಾದವು, ಮತ್ತು ಅವೆಲ್ಲ ಅನಿತ್ಯ. ಏಕೆಂದರೆ ಸ್ವತಃ ದೇಹವೇ ಅನಿತ್ಯ. ಮುಕ್ತಾತ್ಮನು ಅನಿತ್ಯವಾದ ಯಾವುದರಲ್ಲಿಯೂ ಆಸಕ್ತನಲ್ಲ. ದಿವ್ಯಾನಂದ ಸುಖವನ್ನು ಚೆನ್ನಾಗಿ ತಿಳಿದ ಮುಕ್ತಾತ್ಮನು ಮಿಥ್ಯಾಸುಖವನ್ನು ಆನಂದಿಸಲು ಒಪ್ಪುವುದು ಹೇಗೆ ಸಾಧ್ಯ ? ಪದ್ಮ ಪುರಾಣದಲ್ಲಿ ಹೀಗೆ ಹೇಳಿದೆ :

ರಮನ್ತೇ ಯೋಗಿನೋಽನನ್ತೇ ಸತ್ಯಾನನ್ದೇ ಚಿದಾತ್ಮನಿ।
ಇತಿ ರಾಮಪದೇನಾಸೌ ಪರಂ ಬ್ರಹ್ಮಾಭಿಧೀಯತೇ॥

"ಯೋಗಿಗಳು ಪರಮ ಸತ್ಯದಿಂದ ಅಪರಿಮಿತ ದಿವ್ಯಾನಂದವನ್ನು ಪಡೆಯುತ್ತಾರೆ, ಆದ್ದರಿಂದಲೇ ಪರಮ ಪೂರ್ಣ ಸತ್ಯನು ದೇವೋತ್ತಮ ಪುರುಷನು ರಾಮನೆಂದು ತಿಳಿಯಲ್ಪಡುತ್ತಾನೆ."

ಶ್ರೀಮದ್ ಭಾಗವತದಲ್ಲಿ ಕೂಡ (5. 5. 1) ಹೀಗೆ ಹೇಳಿದೆ :

ನಾಯಂ ದೇಹೋ ದೇಹಭಾಜಾಂ ನೃಲೋಕೇ
ಕಷ್ಟಾನ್ ಕಾಮಾನ್ ಅರ್ಹತೇ ವಿಡ್ಭುಜಾಂ ಯೇ।
ತಪೋ ದಿವ್ಯಂ ಪುತ್ರಕಾ ಯೇನ ಸತ್ತ್ವಂ
ಶುದ್ಧ್ಯೇದ್ ಯಸ್ಮಾದ್ ಬ್ರಹ್ಮಸೌಖ್ಯಂ ತ್ವನನ್ತಮ್॥

"ನನ್ನ ಪ್ರಿಯ ಪುತ್ರನೇ, ಈ ಮಾನವ ಜನ್ಮದಲ್ಲಿರುವಾಗ ಇಂದ್ರಿಯ ಸುಖಕ್ಕಾಗಿ ಬಹುಕಷ್ಟಪಟ್ಟು ದುಡಿಯುವುದರಲ್ಲಿ ಅರ್ಥವಿಲ್ಲ ; ಇಂಥ ಸುಖಗಳು ಮಲಭಕ್ಷಕಗಳಿಗೂ (ಹಂದಿಗಳು) ಸಿಗುತ್ತವೆ. ಬದಲಿಗೆ, ನಿಮ್ಮ ಜೀವನವನ್ನು ಶುದ್ಧಗೊಳಿಸುವ ತಪಸ್ಸುಗಳನ್ನು ಆಚರಿಸಬೇಕು ಮತ್ತು ಅವರಿಂದ ಅಪರಿಮಿತ ದಿವ್ಯಾನಂದವನ್ನು ಅನುಭವಿಸಲು ನಿಮಗೆ ಸಾಧ್ಯವಾಗುವುದು."

ಆದ್ದರಿಂದ, ನಿಜಯೋಗಿಗಳು ಅಥವಾ ವಿದ್ವದ್‌ದಿವ್ಯವಾದಿಗಳು, ನಿರಂತರ ಭೌತಿಕ ಅಸ್ತಿತ್ವಕ್ಕೆ ಕಾರಣವಾಗುವ ಇಂದ್ರಿಯ ಸುಖಗಳಿಂದ ಆಕರ್ಷಿತರಾಗುವುದಿಲ್ಲ. ಒಬ್ಬನು ಭೌತಿಕ ಸುಖಗಳಿಗೆ ಹೆಚ್ಚು ಆಸಕ್ತನಾದಷ್ಟು ಅವನು ಭೌತಿಕ ಕ್ಲೇಶಗಳಿಗೆ ಹೆಚ್ಚಾಗಿ ಬಲಿಯಾಗುತ್ತಾನೆ.

**ಶಕ್ನೋತೀಹೈವ ಯಃ ಸೋಢುಂ ಪ್ರಾಕ್ ಶರೀರವಿಮೋಕ್ಷಣಾತ್ ।**
**ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ॥೨೩॥**

ಶಕ್ನೋತಿ—ಶಕ್ತನು, ಇಹ ಏವ—ಸದ್ಯದ ದೇಹದಲ್ಲಿ, ಯಃ—ಯಾರು, ಸೋಢುಮ್—ಸಹಿಸಲು, ಪ್ರಾಕ್—ಮುಂಚೆ, ಶರೀರ—ಶರೀರ, ವಿಮೋಕ್ಷಣಾತ್—ತ್ಯಜಿಸಿ, ಕಾಮ—ಆಸೆ, ಕ್ರೋಧ—ಮತ್ತು ಕೋಪ, ಉದ್ಭವಮ್—ಜನ್ಯವಾದ, ವೇಗಮ್—ಒತ್ತಾಯಗಳನ್ನು, ಸಃ—ಅವನು, ಯುಕ್ತಃ—ಸಮಾಧಿಯಲ್ಲಿ, ಸಃ—ಅವನು, ಸುಖೀ—ಸುಖಿಯು, ನರಃ—ಮಾನವನು.

**ಸದ್ಯದ ದೇಹ ಬಿಡುವ ಮುಂಚೆ, ಒಬ್ಬನು ಭೌತಿಕ ಇಂದ್ರಿಯಗಳ ಒತ್ತಾಯಗಳನ್ನು ಸಹಿಸಿಕೊಳ್ಳಲು ಸಮರ್ಥನಾದರೆ, ಮತ್ತು ಕಾಮಕ್ರೋಧಗಳ ಬಲವನ್ನು ನಿಗ್ರಹಿಸಿದರೆ ಅವನು ಸುಸನ್ನಿವೇಶಿತನು ಮತ್ತು ಈ ಲೋಕದಲ್ಲಿ ಸುಖಿ.**

**ಭಾವಾರ್ಥ :** ಒಬ್ಬನು ಆತ್ಮ ಸಾಕ್ಷಾತ್ಕಾರ ಪಥದಲ್ಲಿ ಸ್ಥಿರ ಪ್ರಗತಿ ಸಾಧಿಸ ಬಯಸಿದರೆ, ಅವನು ಭೌತಿಕ ಇಂದ್ರಿಯಗಳ ಒತ್ತಡಗಳನ್ನು ನಿಯಂತ್ರಿಸಲು ಪ್ರಯತ್ನಿಸಬೇಕು. ಇವು ಮಾತಿನ, ಕೋಪದ, ಮನಸ್ಸಿನ, ಉದರದ, ಜನನೇಂದ್ರಿಯಗಳ ಮತ್ತು ನಾಲಿಗೆಯ ಒತ್ತಡಗಳು. ಈ ಎಲ್ಲಾ ವಿವಿಧ ಇಂದ್ರಿಯಗಳ ಮತ್ತು ಮನಸ್ಸಿನ ಒತ್ತಡಗಳನ್ನು ನಿಯಂತ್ರಿಸಲು ಶಕ್ತನಾದವನು **ಗೋಸ್ವಾಮಿ** ಅಥವಾ **ಸ್ವಾಮಿ** ಎಂದು ಕರೆಯಲ್ಪಡುತ್ತಾನೆ. ಇಂಥ **ಗೋಸ್ವಾಮಿ**ಗಳು ಕಟ್ಟುನಿಟ್ಟಾದ ನಿಯಂತ್ರಿತ ಜೀವನವನ್ನು ನಡೆಸುತ್ತಾರೆ ಮತ್ತು ಇಂದ್ರಿಯಗಳ ಒತ್ತಡಗಳನ್ನು ಸಂಪೂರ್ಣವಾಗಿ ತೊರೆಯುತ್ತಾರೆ. ಭೌತಿಕ ಕಾಮಗಳು ತೃಪ್ತವಾಗದಿದ್ದಾಗ ಕೋಪವನ್ನು ಹುಟ್ಟಿಸುತ್ತವೆ, ಮತ್ತು ಹೀಗೆ ಮನಸ್ಸು, ಕಣ್ಣುಗಳು ಎದೆ ಉದ್ವಿಗ್ನವಾಗುತ್ತವೆ. ಆದ್ದರಿಂದ, ಒಬ್ಬನು ಈ ಭೌತಿಕ ದೇಹ ಬಿಡುವ ಮುಂಚೆಯೇ ಅವುಗಳನ್ನು ನಿಯಂತ್ರಿಸಲು ಅಭ್ಯಾಸ ಮಾಡಬೇಕು. ಇದನ್ನು ಮಾಡಬಲ್ಲವನು ಆತ್ಮಸಾಕ್ಷಾತ್ಕಾರಿ ಎಂದು ತಿಳಿಯಲ್ಪಡುತ್ತಾನೆ ಮತ್ತು ಆತ್ಮಸಾಕ್ಷಾತ್ಕಾರ ಸ್ಥಿತಿಯಲ್ಲಿ ಹೀಗೆ ಸುಖಿಯಾಗಿರುತ್ತಾನೆ. ಕಾಮಕ್ರೋಧಗಳನ್ನು ಪರಿಶ್ರಮದಿಂದ ನಿಯಂತ್ರಿಸಲು ಪ್ರಯತ್ನಿಸುವುದು ದಿವ್ಯವಾದಿಯ ಕರ್ತವ್ಯ.

**ಯೋಽನ್ತಃ ಸುಖೋಽನ್ತರಾರಾಮಸ್ತಥಾನ್ತರ್ಜ್ಯೋತಿರೇವ ಯಃ ।**
**ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ॥ ೨೪ ॥**

ಯಃ—ಯಾರು, ಅನ್ತಃ ಸುಖಃ—ಅಂತಃ ಸುಖಿಯು, ಅನ್ತಃ ಆರಾಮಃ—ಅಂತರ್ಯದಲ್ಲಿ ಕ್ರಿಯಾಶೀಲನಾಗಿ ಆನಂದಿಸುತ್ತಾ, ತಥಾ—ಹಾಗೂ, ಅನ್ತಃ ಜ್ಯೋತಿಃ—ಅಂತರ್ಧ್ಯೇಯಿ, ಏವ—ಖಂಡಿತವಾಗಿ, ಯಃ—ಯಾವನು, ಸಃ—ಅವನು, ಯೋಗೀ—

ಯೋಗಿಯು, ಬ್ರಹ್ಮನಿರ್ವಾಣಮ್—ಪರಮನಲ್ಲಿ ಮೋಕ್ಷವನ್ನು, ಬ್ರಹ್ಮಭೂತಃ—ಆತ್ಮಸಾಕ್ಷಾತ್ಕಾರಿಯಾಗಿ, ಅಧಿಗಚ್ಛತಿ—ಹೊಂದುತ್ತಾನೆ.

**ಯಾರು ಅಂತಃ ಸುಖಿಯೂ, ಯಾರು ಅಂತರ್ಯದಲ್ಲಿ ಕ್ರಿಯಾಶೀಲನೋ ಮತ್ತು ಆನಂದಿಸುವನೋ ಮತ್ತು ಯಾರು ಅಂತರ್ಧ್ಯೇಯಿಯೋ, ಅವನು ವಾಸ್ತವಿಕವಾಗಿ ಪರಿಪೂರ್ಣ ಯೋಗಿಯು, ಅವನು ಪರಮನಲ್ಲಿ ಮುಕ್ತನು ಮತ್ತು ಅಂತಿಮವಾಗಿ ಪರಮನನ್ನು ಹೊಂದುತ್ತಾನೆ.**

**ಭಾವಾರ್ಥ:**—ಒಬ್ಬನು ಒಳಗಿನಿಂದ ಸುಖಾಸ್ವಾದನಕ್ಕೆ ಶಕ್ತನಾಗದ ಹೊರತು, ಅವನು ಮೇಲ್ನೋಟದ ಸುಖವನ್ನು ಪಡೆಯಲು ಉದ್ದೇಶಿತವಾಗಿರುವ ಬಾಹ್ಯ ಚಟುವಟಿಕೆಗಳಿಂದ ನಿವೃತ್ತನಾಗಿರುವುದು ಹೇಗೆ ? ಮುಕ್ತನು ವಾಸ್ತವ ಅನುಭವದಿಂದ ಸಂತೋಷವನ್ನು ಅನುಭವಿಸುತ್ತಾನೆ. ಆದ್ದರಿಂದ, ಅವನು ಯಾವುದೇ ಸ್ಥಳದಲ್ಲಿ ಮೌನವಾಗಿ ಕುಳಿತು ಜೀವನದ ಚಟುವಟಿಕೆಗಳನ್ನು ಅಂತರಂಗದಲ್ಲಿ ಆನಂದಿಸಬಹುದು. ಅಂಥ ಮುಕ್ತನು ಬಾಹ್ಯ ಭೌತಿಕ ಸುಖಗಳನ್ನು ಆಶಿಸುವುದಿಲ್ಲ. ಈ ಸ್ಥಿತಿಯನ್ನು **ಬ್ರಹ್ಮಭೂತ** ಎಂದು ಕರೆದಿದೆ ಇದನ್ನು ಪಡೆದರೆ ಒಬ್ಬನು ದೇವತ್ವಕ್ಕೆ ಮರಳಿ ಭಗವದ್ಧಾಮಕ್ಕೆ ಹಿಂದಿರುಗುವುದು ಸುನಿಶ್ಚಿತ.

**ಲಭನ್ತೇ ಬ್ರಹ್ಮನಿರ್ವಾಣಮ್ ಋಷಯಃ ಕ್ಷೀಣಕಲ್ಮಷಾಃ ।**
**ಛಿನ್ನದ್ವೈಧಾ ಯತಾತ್ಮಾನಃ ಸರ್ವಭೂತಹಿತೇ ರತಾಃ ॥ ೨೫ ॥**

ಲಭನ್ತೇ—ಹೊಂದುತ್ತಾರೆ, ಬ್ರಹ್ಮನಿರ್ವಾಣಮ್—ಪರಮನಲ್ಲಿ ಮೋಕ್ಷವನ್ನು, ಋಷಯಃ—ಅಂತಃಕ್ರಿಯಾ ಶೀಲರು, ಕ್ಷೀಣ ಕಲ್ಮಷಾಃ—ಸಕಲಪಾಪ ರಹಿತರು, ಛಿನ್ನ—ಹರಿದೆಸೆದವರು, ದ್ವೈಧಾಃ—ದ್ವಂದ್ವವನ್ನು, ಯತ ಆತ್ಮಾನಃ—ಆತ್ಮಸಾಕ್ಷಾತ್ಕಾರ ನಿರತರು, ಸರ್ವಭೂತ—ಸಕಲ ಜೀವಿಗಳಿಗಾಗಿ, ಹಿತೇ—ಕಲ್ಯಾಣಕಾರ್ಯದಲ್ಲಿ, ರತಾಃ—ನಿರತರು.

**ಯಾರು ಸಂದೇಹಜನ್ಯ ದ್ವಂದ್ವಾತೀತರು, ಅಂತರ್ಯದಲ್ಲಿ ಮನಸ್ಸನ್ನು ನಿರತಗೊಳಿಸಿದವರು, ಸಕಲ ಜೀವಿಗಳ ಕಲ್ಯಾಣ ಕಾರ್ಯದಲ್ಲಿ ಸದಾ ನಿರತರು, ಮತ್ತು ಸಕಲ ಪಾಪ ಮುಕ್ತರು ಅವರು ಪರಮನಲ್ಲಿ ಮೋಕ್ಷಹೊಂದುವರು.**

**ಭಾವಾರ್ಥ:**—ಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಇರುವ ವ್ಯಕ್ತಿಯು ಮಾತ್ರ ಸಕಲ ಜೀವಿಗಳ ಕಲ್ಯಾಣ ಕಾರ್ಯಗಳಲ್ಲಿ ನಿರತನೆಂದು ಹೇಳಬಹುದು. ಕೃಷ್ಣನೇ ಪ್ರತಿಯೊಂದರ ಮೂಲ ಸ್ರೋತನು ಎಂಬ ವಾಸ್ತವಿಕ ಜ್ಞಾನದಲ್ಲಿರುವವನು, ಆ ಭಾವದಲ್ಲಿ ಕಾರ್ಯ ಮಾಡಿದಾಗ, ಅವನು ಪ್ರತಿಯೊಬ್ಬರಿಗಾಗಿ ಕಾರ್ಯ ಮಾಡುತ್ತಾನೆ. ಮಾನವರ ದುಃಖಾನುಭವಗಳಿಗೆ, ಕೃಷ್ಣನು ಪರಮ ಭೋಕ್ತಾರನು, ಪರಮ ಸ್ವಾಮಿ ಮತ್ತು ಪರಮ ಸಖ ಎಂಬುದರ ವಿಸ್ಮೃತಿಯೇ ಕಾರಣ. ಆದ್ದರಿಂದ, ಇಡೀ ಮಾನವ ಸಮಾಜದಲ್ಲಿ ಈ ಪ್ರಜ್ಞೆಯನ್ನು ಪುನರುಜ್ಜೀವಿಸಲು ಕಾರ್ಯ ಮಾಡುವುದೇ ಅತ್ಯುನ್ನತ ಕಲ್ಯಾಣಕಾರ್ಯ. ಪರಮನಲ್ಲಿ ಮೋಕ್ಷ ಹೊಂದದೆ, ಅಂಥ ಶ್ರೇಷ್ಠ ಕಲ್ಯಾಣ ಕಾರ್ಯದಲ್ಲಿ

ಒಬ್ಬನು ನಿರತನಾಗಲಾರನು. ಕೃಷ್ಣಪ್ರಾಜ್ಞನಿಗೆ ಕೃಷ್ಣನ ಪಾರಮ್ಯದಲ್ಲಿ ಯಾವ ಸಂದೇಹವೂ ಇರುವುದಿಲ್ಲ. ಅವನು ಸರ್ವಪಾಪಗಳಿಂದ ಸಂಪೂರ್ಣ ವಿಮುಕ್ತನಾದ್ದರಿಂದ, ಅವನಿಗೆ ಯಾವ ಸಂದೇಹವೂ ಇರುವುದಿಲ್ಲ. ಇದೇ ದೈವೀ ಪ್ರೇಮದ ಸ್ಥಿತಿ.

ಮಾನವ ಸಮಾಜದ ಕೇವಲ ಭೌತಿಕ ಕಲ್ಯಾಣ ಕಾರ್ಯದಲ್ಲಿ ನಿರತನಾದವನು ವಾಸ್ತವಿಕವಾಗಿ ಯಾರಿಗೂ ಸಹಾಯ ಮಾಡಲಾರನು. ಬಾಹ್ಯ ಶರೀರದ ಮತ್ತು ಮನಸ್ಸಿನ ತಾತ್ಕಾಲಿಕ ಪರಿಹಾರವು ತೃಪ್ತಿಕರವಲ್ಲ. ಜೀವನದ ಕಡು ಹೋರಾಟದಲ್ಲಿನ ಒಬ್ಬನ ಕಷ್ಟಗಳಿಗೆ ನಿಜ ಕಾರಣವನ್ನು, ಪರಮ ಪ್ರಭುವಿನೊಂದಿಗೆ ಅವನ ಸಂಬಂಧ ವಿಸ್ಮೃತಿಯಲ್ಲಿ ಕಾಣಬಹುದು. ಒಬ್ಬನು ಕೃಷ್ಣನೊಂದಿಗೆ ತನ್ನ ಸಂಬಂಧದ ಪೂರ್ಣ ಪ್ರಾಜ್ಞನಾದಾಗ, ಅವನು ಭೌತಿಕ ದೇಹದಲ್ಲಿದ್ದರೂ, ಅವನು ವಾಸ್ತವಿಕವಾಗಿ ಮುಕ್ತಾತ್ಮನು.

**ಕಾಮಕ್ರೋಧವಿಮುಕ್ತಾನಾಂ ಯತೀನಾಂ ಯತಚೇತಸಾಮ್ ।**
**ಅಭಿತೋಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಮ್॥ ೨೬ ॥**

ಕಾಮ—ಆಸೆಗಳಿಂದ, ಕ್ರೋಧ—ಮತ್ತು ಕೋಪ, ವಿಮುಕ್ತಾನಾಮ್—ಮುಕ್ತರಾದವರ, ಯತೀನಾಮ್—ಸಾಧುಪುರುಷರ, ಯತ ಚೇತಸಾಮ್—ಪೂರ್ಣಮನೋನಿಗ್ರಹವುಳ್ಳ, ಅಭಿತಃ—ಸನಿಹ ಭವಿಷ್ಯದಲ್ಲಿ ಆಶ್ವಾಸಿತರು, ಬ್ರಹ್ಮನಿರ್ವಾಣಮ್—ಪರಮನಲ್ಲಿ ಮೋಕ್ಷವು. ವರ್ತತೇ—ಇದೆ, ವಿದಿತ ಆತ್ಮನಾಮ್—ಆತ್ಮಸಾಕ್ಷಾತ್ಕಾರಿಗಳ.

**ಕೋಪ ಮತ್ತು ಸಕಲ ಭೌತಿಕ ಆಸೆಗಳಿಂದ ಮುಕ್ತರು, ಆತ್ಮ ಸಾಕ್ಷಾತ್ಕಾರಿಗಳು, ಆತ್ಮಶಿಸ್ತರು ಮತ್ತು ಪರಿಪೂರ್ಣತೆಗೆ ಸತತವಾಗಿ ಪ್ರಯತ್ನಿಸುವವರು, ಅನತಿ ಕಾಲದಲ್ಲಿ ಪರಮನಲ್ಲಿ ಮೋಕ್ಷದ ಆಶ್ವಾಸಿತರು.**

**ಭಾವಾರ್ಥ**—ಮೋಕ್ಷ ದಿಶೆಯಲ್ಲಿ ಸತತವಾಗಿ ಪ್ರಯತ್ನಿಸುವುದರಲ್ಲಿ ನಿರತರಾದ ಸಾಧು ಪುರುಷರಲ್ಲಿ ಕೃಷ್ಣಪ್ರಾಜ್ಞನಯು ಅತ್ಯುತ್ತಮನು. ಈ ಸಂಗತಿಯನ್ನು ಭಾಗವತವು (4.22.39) ಈ ಕೆಳಗಿನಂತೆ ಧೃಡಪಡಿಸುತ್ತದೆ.

ಯತ್ಪಾದಕಪಂಕಜಪಲಾಶ ವಿಲಾಸಭಕ್ತ್ಯಾ
ಕರ್ಮಾಶಯಂ ಗ್ರಥಿತಮ್ ಉದ್ಗ್ರಂಥಯನ್ತಿ ಸನ್ತಃ
ತದ್ವನ್ ನ ರಿಕ್ತಮತಯೋऽ ಯತಯೋಽಪಿ ರುದ್ಧ—
ಸ್ರೋತೋಗಣಾಸ್ತಮ್ ಅರಣಂ ಭಜ ವಾಸುದೇವಮ್

"ಪರಮ ದೇವೋತ್ತಮ ಪುರುಷ ವಾಸುದೇವನನ್ನು, ಭಕ್ತಿಯುತ ಸೇವೆಯಲ್ಲಿ ಆರಾಧಿಸಲು ಯತ್ನಿಸು. ಕಾಮ್ಯ ಕಾರ್ಯಗಳಿಗಾಗಿ ಆಳವಾಗಿ ಬೆಳೆದಿರುವ ಆಸೆಯನ್ನು ನಿರ್ಮೂಲಮಾಡಿ ಭಗವಂತನ ಪಾದ ಕಮಲಗಳ ಸೇವೆಯಿಂದ ದಿವ್ಯಾನಂದದಲ್ಲಿ ನಿರತರಾದವರಷ್ಟು ಪರಿಣಾಮಕಾರಿಯಾಗಿ ಮಹಾಸಾಧುಗಳು ಕೂಡ ಇಂದ್ರಿಯಗಳ ಒತ್ತಡಗಳನ್ನು ನಿಯಂತ್ರಿಸಲು ಸಮರ್ಥರಲ್ಲ."

ಬದ್ಧ ಆತ್ಮನಲ್ಲಿ ಕಾರ್ಯದ ಕಾಮ್ಯ ಫಲಗಳನ್ನು ಭೋಗಿಸುವ ಇಚ್ಛೆಯು ಅದೆಷ್ಟು ಆಳವಾಗಿ ಬೇರು ಬಿಟ್ಟಿದೆ ಎಂದರೆ, ಮಹಾ ಪ್ರಯತ್ನಗಳಿಂದಲೂ ಅಂಥ ಕಾಮಗಳನ್ನು ನಿಯಂತ್ರಿಸುವುದು ಮಹಾ ಸಂತರಿಗೂ ಕೂಡ ಬಹು ಕಷ್ಟ. ಭಗವದ್ ಭಕ್ತನು, ಕೃಷ್ಣ ಪ್ರಜ್ಞೆಯಲ್ಲಿ ಸತತವಾಗಿ ಭಕ್ತಿಯುತ ಸೇವಾನಿರತನು ಆತ್ಮ ಸಾಕ್ಷಾತ್ಕಾರದಲ್ಲಿ ಪರಿಪೂರ್ಣನು ಬಹು ಶೀಘ್ರವಾಗಿ ಪರಮನಲ್ಲಿ ಮೋಕ್ಷ ಹೊಂದುತ್ತಾನೆ. ಆತ್ಮ ಸಾಕ್ಷಾತ್ಕಾರದಲ್ಲಿ ಅವನ ಸಂಪೂರ್ಣ ಜ್ಞಾನ ನಿಮಿತ್ತ, ಅವನು ಸದಾ ಸಮಾಧಿ ಸ್ಥಿತನು. ಇದಕ್ಕೆ ಸದೃಶ ಉದಾಹರಣೆ ನೀಡಲು :

ದರ್ಶನಧ್ಯಾನಸಂಸ್ಪರ್ಶೈರ್ ಮತ್ಸ್ಯಕೂರ್ಮವಿಹಙ್ಗಮಾಃ
ಸ್ವಾನ್ಯಪತ್ಯಾನಿ ಪುಷ್ಣನ್ತಿ ತಥಾಹಮ್ ಅಪಿ ಪದ್ಮಜ

"ದೃಷ್ಟಿಯಿಂದ, ಧ್ಯಾನದಿಂದ ಮತ್ತು ಸ್ಪರ್ಶದಿಂದ ಮಾತ್ರ ಮೀನುಗಳು, ಆಮೆಗಳು ಮತ್ತು ಪಕ್ಷಿಗಳು ತಮ್ಮ ಸಂತತಿಯನ್ನು ಪೋಷಿಸುತ್ತವೆ. ಹೇ ಪದ್ಮಜ ! ನಾನೂ ಹಾಗೆಯೇ ಮಾಡುತ್ತೇನೆ."

ಮೀನು ತನ್ನ ಮರಿಗಳತ್ತ ಕೇವಲ ದೃಷ್ಟಿಸುವುದರಿಂದಲೇ ಅವುಗಳನ್ನು ಪೋಷಿಸುತ್ತದೆ. ಆಮೆಯು ಕೇವಲ ಧ್ಯಾನದಿಂದ ತನ್ನ ಸಂತತಿಯನ್ನು ಪೋಷಿಸುತ್ತದೆ. ಆಮೆಯು ದಂಡೆಯ ಮೇಲೆ ಮೊಟ್ಟೆಗಳನ್ನು ಇಡುತ್ತದೆ ಮತ್ತು ತಾನು ನೀರಿನಲ್ಲಿರುವಾಗ ಮೊಟ್ಟೆಗಳ ಬಗ್ಗೆ ಧ್ಯಾನಿಸುತ್ತದೆ. ಅದರಂತೆಯೇ ಕೃಷ್ಣಪ್ರಜ್ಞಾ ಭಕ್ತನು, ಭಗವದ್ಧಾಮದಿಂದ ದೂರವಿದ್ದರೂ, ಭಗವಂತನನ್ನು ಕೇವಲ ಸತತವಾಗಿ ಚಿಂತಿಸುವುದರಿಂದಲೇ—ಕೃಷ್ಣ ಪ್ರಜ್ಞೆಯಲ್ಲಿ ನಿರತತೆಯಿಂದ—ತನ್ನನ್ನು ಆ ಧಾಮಕ್ಕೆ ಉನ್ನತಿಸಿಕೊಳ್ಳುವನು. ಅವನು ಭೌತಿಕ ಕ್ಲೇಶಗಳ ವೇದನೆಗಳನ್ನು ಅನುಭವಿಸುವುದಿಲ್ಲ; ಈ ಸ್ಥಿತಿಯು **ಬ್ರಹ್ಮನಿರ್ವಾಣ** ಅಥವಾ ಪರಮನಲ್ಲಿ ನಿರಂತರ ನಿಮಗ್ನತೆಯಿಂದ ಭೌತಿಕ ಕ್ಲೇಶಗಳ ಇಲ್ಲದಿರುವಿಕೆ ಎನ್ನುತ್ತಾರೆ.

**ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾನ್ತರೇ ಭ್ರುವೋಃ ।**
**ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯನ್ತರ ಚಾರಿಣೌ ॥ ೨೭ ॥**
**ಯತೇನ್ದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ ।**
**ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ ॥ ೨೮ ॥**

ಸ್ಪರ್ಶಾನ್—ಶಬ್ದದಂಥ ಇಂದ್ರಿಯ ವಿಷಯಗಳು, ಕೃತ್ವಾ—ಇರಿಸಿ, ಬಹಿಃ—ಹೊರಗೆ, ಬಾಹ್ಯಾನ್—ಅನವಶ್ಯಕ, ಚಕ್ಷುಃ—ಕಣ್ಣುಗಳು, ಚ—ಹಾಗೂ, ಏವ—ಖಂಡಿತವಾಗಿ, ಅನ್ತರೇ—ನಡುವ, ಭ್ರುವೋಃ—ಹುಬ್ಬುಗಳು, ಪ್ರಾಣ ಅಪಾನೌ—ಮೇಲೆ ಕೆಳಗೆ ಚಲಿಸುವ ವಾಯು, ಸಮೌ—ನಿಲ್ಲಿಸುವುದು, ಕೃತ್ವಾ—ಇರಿಸಿ, ನಾಸ ಅಭ್ಯನ್ತರ—ಮೂಗಿನ ಹೊಳ್ಳೆಗಳಲ್ಲಿ, ಚಾರಿಣೌ—ಉಸಿರಾಡುತ್ತಾ, ಯತ—ನಿಯಂತ್ರಿತ, ಇನ್ದ್ರಿಯ—ಇಂದ್ರಿಯಗಳು, ಮನಃ—ಮನಸ್ಸು, ಬುದ್ಧಿಃ—ಬುದ್ಧಿ, ಮುನಿಃ—ದಿವ್ಯವಾದಿಯು, ಮೋಕ್ಷ—ಮೋಕ್ಷಕ್ಕಾಗಿ, ಪರಾಯಣಃ—ಹಾಗೆ ಉದ್ದೇಶಿತ

ನಾಗಿ, ವಿಗತ—ವಿಸರ್ಜಿಸಿ, ಇಚ್ಛಾ—ಆಸೆಗಳು, ಭಯ—ಭಯ, ಕ್ರೋಧಃ—ಕ್ರೋಧ, ಯಃ—ಯಾರು, ಸದಾ—ಯಾವಾಗಲು, ಮುಕ್ತಃ—ಮುಕ್ತನು, ಏವ—ಖಂಡಿತ, ಸಃ—ಅವನು.

**ಎಲ್ಲಾ ಬಾಹ್ಯ ಇಂದ್ರಿಯ ವಿಷಯಗಳನ್ನು ಹೊರದೂಡಿ, ಕಣ್ಣು ಮತ್ತು ದೃಷ್ಟಿಯನ್ನು ಎರಡು ಕಣ್ಣು ಹುಬ್ಬುಗಳ ನಡುವೆ ಕೇಂದ್ರೀಕರಿಸಿ, ಶ್ವಾಸೋಚ್ಛ್ವಾಸಗಳನ್ನು ಮೂಗಿನ ಹೊಳ್ಳೆಗಳಲ್ಲಿ ತಡೆಹಿಡಿದು, ಹೀಗೆ ಮನಸ್ಸನ್ನು ಇಂದ್ರಿಯಗಳನ್ನು ಮತ್ತು ಬುದ್ಧಿಯನ್ನು ನಿಯಂತ್ರಿಸಿ, ಮೋಕ್ಷ ಗುರಿ ಹೊಂದಿದ ದಿವ್ಯವಾದಿಯು, ಆಸೆ, ಭಯ ಮತ್ತು ಕೋಪದಿಂದ ಮುಕ್ತನಾಗುತ್ತಾನೆ. ಸದಾ ಈ ಸ್ಥಿತಿಯಲ್ಲಿರುವವನು ನಿಶ್ಚಿತವಾಗಿಯೂ ಮುಕ್ತನು.**

**ಭಾವಾರ್ಥ :** ಕೃಷ್ಣಪ್ರಜ್ಞೆಯಲ್ಲಿ ನಿರತನಾಗಿ, ಒಬ್ಬನು ಕೂಡಲೇ ತನ್ನ ಅಧ್ಯಾತ್ಮ ವ್ಯಕ್ತಿತ್ವವನ್ನು ಅರಿತುಕೊಳ್ಳಬಹುದು ಮತ್ತು ನಂತರ ಭಕ್ತಿಯುತ ಸೇವೆಯ ಮೂಲಕ ಪರಮ ಪ್ರಭುವನ್ನು ಅರಿತುಕೊಳ್ಳಬಹುದು. ಒಬ್ಬನು ಭಕ್ತಿಯುತ ಸೇವೆಯಲ್ಲಿ ಸುಸನ್ನಿವೇಶಿತನಾದಾಗ, ತನ್ನ ಚಟುವಟಿಕೆಯ ಕ್ಷೇತ್ರದಲ್ಲಿ ಭಗವತ್ ಸಾನ್ನಿಧ್ಯವನ್ನು ಅನುಭವಿಸಲು ಅರ್ಹನಾಗುವ ದಿವ್ಯ ಸ್ಥಾನಕ್ಕೆ ಬರುತ್ತಾನೆ. ಈ ವಿಶಿಷ್ಟ ಸ್ಥಾನವು ಪರಮನಲ್ಲಿ ಮೋಕ್ಷ ಎಂದು ಕರೆಯಲ್ಪಟ್ಟಿದೆ.

ಪರಮನಲ್ಲಿ ಮೋಕ್ಷದ ತತ್ವಗಳನ್ನು ವಿವರಿಸಿದ ಬಳಿಕ, ಒಬ್ಬನು ಯೋಗಾಭ್ಯಾಸದ ಮೂಲಕ ಅಥವಾ **ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ** ಮತ್ತು **ಸಮಾಧಿ** ಎಂಬುದಾಗಿ ಎಂಟು ವಿಧವಾಗಿ ವಿಭಾಗಿತವಾದ ಕ್ರಮಗಳಿರುವ **ಅಷ್ಟಾಂಗಯೋಗ** ವೆಂಬ ಯೋಗಾಭ್ಯಾಸದ ಮೂಲಕ ಒಬ್ಬನು ಹೇಗೆ ಆ ಸ್ಥಾನಕ್ಕೆ ಬರಬಹುದು ಎಂದು ಅರ್ಜುನನಿಗೆ ಭಗವಂತನು ಉಪದೇಶ ನೀಡುತ್ತಾನೆ. ಆರನೆಯ ಅಧ್ಯಾಯದಲ್ಲಿ ಯೋಗ ವಿಷಯವು ಸುಸ್ಪಷ್ಟವಾಗಿ ವಿವರಿಸಲ್ಪಟ್ಟಿದೆ, ಮತ್ತು ಐದನೆಯದರ ಕೊನೆಯಲ್ಲಿ ಅದು ಕೇವಲ ಪೂರ್ವಭಾವಿಯಾಗಿ ವಿವರಿಸಲ್ಪಟ್ಟದೆ. ಯೋಗದಲ್ಲಿ **ಪ್ರತ್ಯಾಹಾರ** ಪ್ರಕ್ರಿಯೆಯಿಂದ ಒಬ್ಬನು ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಗಳೆಂಬ ಇಂದ್ರಿಯ ವಿಷಯಗಳನ್ನು ಹೊಡೆದಟ್ಟಬೇಕು, ಮತ್ತು ನಂತರ ದೃಷ್ಟಿಯನ್ನು ಎರಡು ಕಣ್ಣುಹುಬ್ಬುಗಳ ಮಧ್ಯೆ ಇರಿಸಬೇಕು, ಮತ್ತು ಕಣ್ಣುಗಳನ್ನು ಅರ್ಧ ಮುಚ್ಚಿ ಮೂಗಿನ ತುದಿಯ ಮೇಲೆ ಕೇಂದ್ರೀಕರಿಸಬೇಕು. ಕಣ್ಣುಗಳನ್ನು ಪೂರ್ತಿ ಮುಚ್ಚುವಲ್ಲಿ ಯಾವ ಪ್ರಯೋಜನವೂ ಇಲ್ಲ, ಏಕೆಂದರೆ ಆಗ ನಿದ್ರಿಸುವ ಎಲ್ಲ ಸಾಧ್ಯತೆ ಇರುತ್ತದೆ. ಕಣ್ಣುಗಳನ್ನು ಪೂರ್ತಿ ತೆರೆಯುವಲ್ಲಿಯೂ ಪ್ರಯೋಜನವಿಲ್ಲ, ಏಕೆಂದರೆ ಆಗ ಇಂದ್ರಿಯ ವಿಷಯಗಳಿಂದ ಆಕರ್ಷಿತವಾಗುವ ಅಪಾಯವುಂಟು. ದೇಹದೊಳಗೆ ಮೇಲಕ್ಕೆ ಚಲಿಸುವ ಮತ್ತು ಕೆಳಕ್ಕೆ ಚಲಿಸುವ ವಾಯುವನ್ನು ತಟಸ್ಥಗೊಳಿಸಿ ಉಸಿರಾಟದ ಚಲನೆಯನ್ನು ಮೂಗಿನ ಹೊಳ್ಳೆಗಳಲ್ಲಿ ನಿಗ್ರಹಿಸಬಹುದು. ಅಂಥ ಯೋಗಾಭ್ಯಾಸದಿಂದ ಒಬ್ಬನು ಇಂದ್ರಿಯಗಳ ಮೇಲೆ ನಿಯಂತ್ರಣವನ್ನುಗಳಿಸಲು, ಬಾಹ್ಯೇಂದ್ರಿಯ ವಿಷಯ

ಗಳಿಂದ ವಿಮುಖನಾಗಲು ಮತ್ತು ಹೀಗೆ ಪರಮನಲ್ಲಿ ಮೋಕ್ಷಕ್ಕಾಗಿ ತನ್ನನ್ನು ಸಿದ್ಧಮಾಡಿಕೊಳ್ಳಲು ಶಕ್ತನಾಗುವನು.

ಈ ಯೋಗ ಪ್ರಕ್ರಿಯೆಯು ಒಬ್ಬನು ಎಲ್ಲ ಬಗೆಯ ಭಯ ಮತ್ತು ಕ್ರೋಧದಿಂದ ಮುಕ್ತನಾಗಲು ಮತ್ತು ಹೀಗೆ ದಿವ್ಯ ಸನ್ನಿವೇಶದಲ್ಲಿ ಪರಮಾತ್ಮನ ಸಾನ್ನಿಧ್ಯವನ್ನು ಅನುಭವಿಸಲು ಸಹಾಯಕವಾಗುತ್ತದೆ. ಅರ್ಥಾತ್ ಕೃಷ್ಣಪ್ರಜ್ಞೆಯು ಯೋಗತತ್ವಗಳ ಅನುಷ್ಠಾನಕ್ಕೆ ಅತ್ಯಂತ ಸುಲಭ ಪ್ರಕ್ರಿಯೆ. ಇದು ಮುಂದಿನ ಅಧ್ಯಾಯದಲ್ಲಿ ಚೆನ್ನಾಗಿ ವಿವರಿಸಲ್ಪಡುವುದು. ಕೃಷ್ಣಪ್ರಜ್ಞನಾದವನು ಸದಾ ಭಕ್ತಿಯುತ ಸೇವಾ ನಿರತನಾಗಿರುವುದರಿಂದ, ತನ್ನ ಇಂದ್ರಿಯಗಳನ್ನು ಇತರ ನಿರತತೆಯಲ್ಲಿ ಕಳೆದುಕೊಳ್ಳುವ ಅಪಾಯ ಇರುವುದಿಲ್ಲ. ಇದು ಇಂದ್ರಿಯ ನಿಯಂತ್ರಣದಲ್ಲಿ **ಅಷ್ಟಾಂಗ ಯೋಗ**ಕ್ಕಿಂತ ಉತ್ತಮ ಮಾರ್ಗವಾಗಿದೆ.

**ಭೋಕ್ತಾರಂ ಯಜ್ಞತಪಸಾಂ ಸರ್ವಲೋಕ ಮಹೇಶ್ವರಮ್ ।**
**ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾನ್ತಿಮೃಚ್ಛತಿ ॥ ೨೯ ॥**

ಭೋಕ್ತಾರಮ್—ಭೋಕ್ತಾರನು, ಯಜ್ಞ—ಯಜ್ಞಗಳ, ತಪಸಾಮ್—ತಪಸ್ಸುಗಳು ಮತ್ತು ವ್ರತಗಳು, ಸರ್ವಲೋಕ—ಎಲ್ಲಾ ಲೋಕಗಳ ಮತ್ತು ಅವುಗಳ ದೇವತೆಗಳ, ಮಹ ಈಶ್ವರಮ್—ಪರಮ ಪ್ರಭು. ಸುಹೃದಮ್—ಆಶ್ರಯದಾತ, ಸರ್ವ—ಎಲ್ಲ, ಭೂತಾನಾಮ್—ಜೀವಿಗಳ, ಜ್ಞಾತ್ವಾ—ಹೀಗೆ ತಿಳಿದು, ಮಾಮ್—ನನ್ನನ್ನು (ಭಗವಾನ್ ಕೃಷ್ಣ), ಶಾನ್ತಿಮ್—ಭೌತಿಕ ವೇದನೆಗಳಿಂದ ಪರಿಹಾರವನ್ನು, ಋಚ್ಛತಿ—ಒಬ್ಬನು ಪಡೆಯುತ್ತಾನೆ.

**ಪೂರ್ಣವಾಗಿ ನನ್ನ ಪ್ರಜ್ಞೆಯಲ್ಲಿರುವವನು, ನನ್ನನ್ನು ಎಲ್ಲ ಯಜ್ಞಗಳ ಮತ್ತು ವ್ರತಗಳ ಅಂತಿಮ ಭೋಕ್ತಾರನೆಂದು, ಸಕಲ ಲೋಕಗಳ ಮತ್ತು ದೇವತೆಗಳ ಪರಮ ಪ್ರಭುವೆಂದು ಮತ್ತು ಸಕಲ ಜೀವಿಗಳ ಆಶ್ರಯದಾತ ಮತ್ತು ಹಿತೈಷಿಯೆಂದು ತಿಳಿದು ಭೌತಿಕ ವೇದನೆಗಳಿಂದ ಶಾಂತಿಯನ್ನು ಹೊಂದುತ್ತಾನೆ.**

**ಭಾವಾರ್ಥ :** ಮಾಯಾಶಕ್ತಿಯ ಬಿಗಿ ಹಿಡಿತದಲ್ಲಿರುವ ಬದ್ಧಾತ್ಮರೆಲ್ಲರೂ ಭೌತಿಕ ಜಗತ್ತಿನಲ್ಲಿ ಶಾಂತಿ ಪಡೆಯಲು ಕಾತುರರಾಗಿದ್ದಾರೆ. ಆದರೆ, ಭಗವದ್ಗೀತೆಯ ಈ ಭಾಗದಲ್ಲಿ ವಿವರಿಸಿದ ಶಾಂತಿ ಸೂತ್ರವು ಅವರಿಗೆ ತಿಳಿಯದು. ಮಹಾನ್ ಶಾಂತಿಸೂತ್ರ ಕೇವಲ ಹೀಗಿದೆ : ಸಕಲ ಮಾನವ ಚಟುವಟಿಕೆಗಳ ಭೋಕ್ತಾರನು ಭಗವಾನ್ ಕೃಷ್ಣನು. ಭಗವಂತನು ಸಕಲ ಲೋಕಗಳ ಮತ್ತು ಅಲ್ಲಿಯ ದೇವತೆಗಳ ಒಡೆಯನಾದ್ದರಿಂದ ಜನರು ಭಗವಂತನ ದಿವ್ಯ ಸೇವೆಗೆ ಪ್ರತಿಯೊಂದನ್ನೂ ಅರ್ಪಿಸಬೇಕು. ಅವನಿಗಿಂತ ದೊಡ್ಡವನಿಲ್ಲ. ಮಹಾದೇವತೆಗಳಾದ ಶಿವ ಮತ್ತು ಬ್ರಹ್ಮರಿಗಿಂತಲೂ ಅವನು ದೊಡ್ಡವನು. ವೇದಗಳಲ್ಲಿ **(ಶ್ವೇತಾಶ್ವತರ ಉಪನಿಷದ್** 6.7) ಭಗವಂತನನ್ನು **ತಮ್ ಈಶ್ವರಾಣಾಂ ಪರಮಂ ಮಹೇಶ್ವರಮ್** ಎಂದು ವರ್ಣಿಸಿದೆ. ಮಾಯೆಯ ಪ್ರಭಾವಕ್ಕೆ ಒಳಪಟ್ಟು ಜೀವಿಗಳು ಕಂಡದ್ದಕ್ಕೆಲ್ಲಾ ಒಡೆಯರಾಗಲು ಯತ್ನಿಸುತ್ತಾರೆ, ಆದರೆ ವಾಸ್ತವಿಕವಾಗಿ ಅವರು

ಭಗವಂತನ ಭೌತಿಕ ಶಕ್ತಿಯ ಆಧಿಪತ್ಯಕ್ಕೆ ಒಳಪಟ್ಟಿದ್ದಾರೆ. ಭಗವಂತನು ಭೌತಿಕ ಪ್ರಕೃತಿಯ ಒಡೆಯನು, ಮತ್ತು ಬದ್ಧಾತ್ಮರು ಭೌತಿಕ ಪ್ರಕೃತಿಯ ಕಠೋರ ನಿಯಮಗಳಿಗೆ ಒಳಪಟ್ಟಿರುತ್ತಾರೆ. ಒಬ್ಬನು ಕನಿಷ್ಠ ಈ ವಿಷಯಗಳನ್ನು ಅರಿಯದ ಹೊರತು ಜಗತ್ತಿನಲ್ಲಿ ವೈಯಕ್ತಿಕವಾಗಿ ಅಥವಾ ಸಾಮೂಹಿಕವಾಗಿ ಶಾಂತಿ ಸಾಧನೆಯು ಸಾಧ್ಯವಿಲ್ಲ. ಇದೇ ಕೃಷ್ಣ ಪ್ರಜ್ಞೆಯ ಅರ್ಥ: ಶ್ರೀಕೃಷ್ಣನು ಪರಮಾಧಿಪತಿ, ಮತ್ತು ಎಲ್ಲಾ ಜೀವಿಗಳು, ಮಹಾ ದೇವತೆಗಳೂ ಸೇರಿದಂತೆ ಅವನ ಅಧೀನರು. ಒಬ್ಬನು ಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಮಾತ್ರ ಪರಿಪೂರ್ಣ ಶಾಂತಿಯನ್ನು ಪಡೆಯಬಹುದು.

ಐದನೆಯ ಅಧ್ಯಾಯವು ಸಾಮಾನ್ಯವಾಗಿ **ಕರ್ಮಯೋಗ** ಎಂದು ಕರೆಯಲ್ಪಡುವ ಕೃಷ್ಣಪ್ರಜ್ಞೆಯ ಕಾರ್ಯರೂಪದ ವಿವರಣೆ. ಕರ್ಮಯೋಗವು ಹೇಗೆ ಮೋಕ್ಷದಾಯಕ ಎಂಬ ಮಾನಸಿಕ ಊಹಾಪೋಹೆಯ ಪ್ರಶ್ನೆಗೆ ಇಲ್ಲಿ ಉತ್ತರವಿದೆ. ಕೃಷ್ಣಪ್ರಜ್ಞೆಯಲ್ಲಿ ಕಾರ್ಯಮಾಡುವುದು ಎಂದರೆ ಭಗವಂತನು ಪರಮಾಧಿಪತಿ ಎಂಬ ಸಂಪೂರ್ಣ ಜ್ಞಾನ ದೊಡನೆ ಕಾರ್ಯ ಮಾಡುವುದು. ಇಂಥ ಕಾರ್ಯವು ದಿವ್ಯ ಜ್ಞಾನದಿಂದ ಭಿನ್ನವಲ್ಲ. ನೇರ ಕೃಷ್ಣಪ್ರಜ್ಞೆಯು **ಭಕ್ತಿ-ಯೋಗ,** ಮತ್ತು **ಜ್ಞಾನಯೋಗ**ವು ಭಕ್ತಿಯೋಗಕ್ಕೆ ಕರೆದೊಯ್ಯುವ ಮಾರ್ಗ. ಕೃಷ್ಣಪ್ರಜ್ಞೆ ಎಂದರೆ ಪರಮ ಸತ್ಯದೊಂದಿಗೆ ಒಬ್ಬನು ಸಂಬಂಧದ ಪೂರ್ಣ ಜ್ಞಾನದಲ್ಲಿ ಕಾರ್ಯ ಮಾಡುವುದು, ಮತ್ತು ಈ ಪ್ರಜ್ಞೆಯ ಪರಿ ಪೂರ್ಣತೆಯೇ ಕೃಷ್ಣನ, ಅಥವಾ ಪರಮದೇವೋತ್ತಮ ಪುರುಷನ ಪೂರ್ಣಜ್ಞಾನ. ಶುದ್ಧಾತ್ಮನು ಭಗವಂತನ ವಿಭಿನ್ನಾಂಶನಾಗಿ ಭಗವಂತನ ನಿತ್ಯ ದಾಸನು. ಮಾಯೆಯ ಮೇಲೆ ಒಡೆತನ ನಡೆಸುವ ಇಚ್ಛಾನಿಮಿತ್ತ ಅವನು ಮಾಯೆಯೊಂದಿಗೆ ಸಂಪರ್ಕಕ್ಕೆ ಬರುತ್ತಾನೆ, ಮತ್ತು ಅದೇ ಅವನ ಅನೇಕ ದುಃಖಗಳಿಗೆ ಕಾರಣ. ಅವನು ಜಡ ಸಂಪರ್ಕದಲ್ಲಿ ಇರುವವರೆಗೆ, ಅವನು ಭೌತಿಕ ಅವಶ್ಯಕತೆಗಳ ಅನುಸಾರ ಕಾರ್ಯ ಮಾಡ ಬೇಕಾಗುವುದು. ಕೃಷ್ಣಪ್ರಜ್ಞೆಯಾದರೋ ಒಬ್ಬನು ಜಡದ ವ್ಯಾಪ್ತಿಯಲ್ಲಿ ಇರುವಾಗಲೇ ಅವನನ್ನು ಆಧ್ಯಾತ್ಮ ಜೀವನಕ್ಕೆ ತರುತ್ತದೆ, ಏಕೆಂದರೆ ಅದು ಭೌತಿಕ ಜಗತ್ತಿನಲ್ಲಿ ಅಭ್ಯಾಸ ದಿಂದ ಆಧ್ಯಾತ್ಮಿಕ ಅಸ್ತಿತ್ವವನ್ನು ಎಚ್ಚರಿಸುವುದು. ಒಬ್ಬನು ಪ್ರಗತಿಸಿದಷ್ಟೂ ಅವನು ಜಡ ಹಿಡಿತದಿಂದ ಮುಕ್ತನಾಗುತ್ತಾನೆ. ಭಗವಂತನು ಯಾರ ಪಕ್ಷಪಾತಿಯೂ ಅಲ್ಲ. ಎಲ್ಲವೂ ಕೃಷ್ಣಪ್ರಜ್ಞೆಯಲ್ಲಿ ಒಬ್ಬನ ಕಾರ್ಯತಃ ಕರ್ತವ್ಯಾಚರಣೆಯನ್ನು ಅವಲಂಬಿಸಿದೆ. ಅದು ಒಬ್ಬನಿಗೆ ಪ್ರತಿಯೊಂದು ವಿಷಯದಲ್ಲಿ ಇಂದ್ರಿಯಗಳನ್ನು ನಿಗ್ರಹಿಸಲು ಮತ್ತು ಕಾಮ ಕ್ರೋಧ ಪ್ರಭಾವವನ್ನು ಗೆಲ್ಲಲು ಸಹಾಯಕವಾಗುತ್ತದೆ. ಮೇಲೆ ಹೇಳಿದ ಕಾಮ ಶಕ್ತಿಗಳನ್ನು ನಿಯಂತ್ರಿಸಿಕೊಂಡು ದೃಢವಾಗಿ ಕೃಷ್ಣಪ್ರಜ್ಞೆಯಲ್ಲಿ ನಿಲ್ಲುವವನು, ವಾಸ್ತವಿಕ ವಾಗಿ ದಿವ್ಯ ಹಂತದಲ್ಲಿ ಅಥವಾ **ಬ್ರಹ್ಮನಿರ್ವಾಣ**ದಲ್ಲಿ ಇರುತ್ತಾನೆ. ಅಂತಿಮ ಉದ್ದೇಶವು ಫಲಿತವಾಗುವ ಕಾರಣ, ಅಷ್ಟಾಂಗ ಯೋಗವು ಸ್ವಾಭಾವಿಕವಾಗಿಯೇ ಕೃಷ್ಣಪ್ರಜ್ಞೆಯಲ್ಲಿ ಆಚರಿಸಲ್ಪಡುತ್ತದೆ. **ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ** ಮತ್ತು **ಸಮಾಧಿ** ಅಭ್ಯಾಸವು ಕ್ರಮೇಣ ಉನ್ನತಿಸುವವಿಧಾನ. ಆದರೆ ಇವು ಭಕ್ತಿಯುತ ಸೇವೆಗೆ ಪರಿಪೂರ್ಣತೆಗೆ ಪೀಠಿಕಾರೂಪ ಮಾತ್ರ; ಭಕ್ತಿಯುತ

**ಸೇವೆಯೊಂದೇ ಮಾನವನಿಗೆ ಶಾಂತಿ ನೀಡಬಲ್ಲದು. ಅದು ಜೀವನದ ಅತ್ಯುನ್ನತ ಪರಿಪೂರ್ಣತೆ.**

ಇಲ್ಲಿಗೆ **ಶ್ರೀಮದ್ ಭಗವದ್ಗೀತೆ**ಯಲ್ಲಿನ ಐದನೆಯ ಅಧ್ಯಾಯವಾದ **ಕರ್ಮಯೋಗ** ಅಥವಾ ಕೃಷ್ಣಪ್ರಜ್ಞೆಯಲ್ಲಿ ಕಾರ್ಯ ಎಂಬ ವಿಷಯದಲ್ಲಿ ಭಕ್ತಿವೇದಾಂತ ತಾತ್ಪರ್ಯವು ಮುಗಿಯಿತು.



**ಅಧ್ಯಾಯ ಆರು**



# ಧ್ಯಾನ ಯೋಗ

**ಶ್ರೀ ಭಗವಾನುವಾಚ**

**ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।**
**ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ ॥ ೧ ॥**

ಶ್ರೀ ಭಗವಾನ್ ಉವಾಚ—ಭಗವಂತನು ನುಡಿದನು, ಅನಾಶ್ರಿತಃ—ಆಶ್ರಯವನ್ನು ತೆಗೆದುಕೊಳ್ಳದೆ, ಕರ್ಮ ಫಲಮ್—ಕಾರ್ಯದ ಫಲದ, ಕಾರ್ಯಮ್—ಆಭಾರಾತ್ಮಕ, ಕರ್ಮ—ಕಾರ್ಯ, ಕರೋತಿ—ಆಚರಿಸುವ, ಯಃ—ಯಾರೊಬ್ಬನು, ಸಃ—ಅವನು, ಸಂನ್ಯಾಸೀ—ಸನ್ಯಾಸಾಶ್ರಮದಲ್ಲಿನ, ಚ—ಮತ್ತು, ಯೋಗೀ—ಯೋಗಿಯು, ಚ—ಕೂಡ, ನ—ಇಲ್ಲ, ನಿಃ—ಇಲ್ಲದೆ. ಅಗ್ನಿಃ—ಅಗ್ನಿ, ನ—ಇಲ್ಲ, ಚ—ಕೂಡ, ಅಕ್ರಿಯಃ—ಕರ್ತವ್ಯವಿಲ್ಲದೆ.

**ಪರಮ ದೇವೋತ್ತಮ ಪುರುಷನು ನುಡಿದನು : ತನ್ನ ಕಾರ್ಯಫಲಗಳಲ್ಲಿ ಅನಾಸಕ್ತನು ಮತ್ತು ಆಭಾರಿಯಾಗಿ ಕಾರ್ಯಮಾಡುವವನು ಸನ್ಯಾಸಾಶ್ರಮದಲ್ಲಿರುವನು, ಮತ್ತು ಅವನೇ ನಿಜವಾದ ಯೋಗಿಯು—ಅಗ್ನಿಯನ್ನು ಹಚ್ಚಿಸದವನೂ ಮತ್ತು ಕರ್ತವ್ಯವನ್ನು ಆಚರಿಸದವನೂ ಅಲ್ಲ.**

**ಭಾವಾರ್ಥ :** ಅಷ್ಟಾಂಗ ಯೋಗ ಪದ್ಧತಿಯು ಮನಸ್ಸು ಮತ್ತು ಇಂದ್ರಿಯಗಳನ್ನು ನಿಗ್ರಹಿಸಲು ಒಂದು ವಿಧಾನ ಎಂದು ಭಗವಂತನು ಈ ಅಧ್ಯಾಯದಲ್ಲಿ ವಿವರಿಸುತ್ತಾನೆ. ಆದರೆ, ಇದನ್ನು ಆಚರಿಸುವುದು, ಅದರಲ್ಲಿಯೂ ಈ ಕಲಿಯುಗದಲ್ಲಿ ಜನಸಾಮಾನ್ಯರಿಗೆ ಬಹು ಕಷ್ಟ. ಈ ಅಧ್ಯಾಯದಲ್ಲಿ ಅಷ್ಟಾಂಗ ಯೋಗ ಪದ್ಧತಿಯು ಹೇಳಲ್ಪಟ್ಟಿದ್ದರೂ, ಕರ್ಮಯೋಗ ವಿಧಾನ ಅಥವಾ ಕೃಷ್ಣಪ್ರಜ್ಞೆಯಲ್ಲಿ ಕಾರ್ಯಮಾಡುವುದು ಉತ್ತಮ ಎಂದು ಭಗವಂತನು ಒತ್ತಿ ಹೇಳುತ್ತಾನೆ. ಈ ಜಗತ್ತಿನಲ್ಲಿ ಪ್ರತಿಯೊಬ್ಬನು ತನ್ನ

ಕುಟುಂಬ ಮತ್ತು ಪರಿವಾರದವರ ಪೋಷಣೆಗಾಗಿ ಕಾರ್ಯ ಮಾಡುತ್ತಾನೆ. ಆದರೆ ಯಾರೂ ಕೂಡ ಸ್ವಲ್ಪ ಸ್ವಾರ್ಥವಿಲ್ಲದೆ, ಕೇಂದ್ರೀಕೃತ ಅಥವಾ ವಿಸ್ತಾರಿತವಾದ ಸ್ವಲ್ಪ ವೈಯಕ್ತಿಕ ತೋಷಣೆಯಿಲ್ಲದೆ ಕಾರ್ಯ ಮಾಡುತ್ತಿಲ್ಲ. ಕೃಷ್ಣಪ್ರಜ್ಞೆಯಲ್ಲಿ ಕಾರ್ಯ ಮಾಡುವುದು ಪರಿಪೂರ್ಣತೆಯ ಮಾನದಂಡವೇ ಹೊರತು ಕಾರ್ಯಫಲಗಳನ್ನು ಭೋಗಿಸುವ ದೃಷ್ಟಿಯಿಂದ ಕಾರ್ಯಮಾಡುವುದಲ್ಲ.

ಕೃಷ್ಣಪ್ರಜ್ಞೆಯಲ್ಲಿ ಕಾರ್ಯ ಮಾಡುವುದು ಪ್ರತಿಯೊಬ್ಬ ಜೀವಿಯ ಕರ್ತವ್ಯ, ಏಕೆಂದರೆ ಎಲ್ಲರೂ ಸ್ವರೂಪತಃ ಪರಮನ ವಿಭಿನ್ನಾಂಶರು. ದೇಹದ ಅವಯವಗಳು ಇಡೀ ದೇಹದ ತುಷ್ಟಿಗಾಗಿ ಕೆಲಸ ಮಾಡುತ್ತವೆ. ದೇಹದ ಅಂಗಗಳು ತಮ್ಮ ತುಷ್ಟಿಗಾಗಿ ಕಾರ್ಯ ಮಾಡದೆ ಇಡೀ ಪೂರ್ಣದ ತುಷ್ಟಿಗಾಗಿ ಕಾರ್ಯ ಮಾಡುತ್ತವೆ. ಅದೇ ಪ್ರಕಾರ, ತನ್ನ ತೃಪ್ತಿಗಾಗಿ ಕಾರ್ಯಮಾಡದೆ ಪರಮ ಪೂರ್ಣನ ತುಷ್ಟಿಗಾಗಿ ಕಾರ್ಯ ಮಾಡುವ ಜೀವಿಯು ಪರಿಪೂರ್ಣ ಸನ್ಯಾಸಿ, ಪರಿಪೂರ್ಣ ಯೋಗಿ.

ಕೆಲವು ಸಲ ಸನ್ಯಾಸಿಗಳು ತಾವು ಎಲ್ಲ ಭೌತಿಕ ಕರ್ತವ್ಯಗಳಿಂದ ಮುಕ್ತರಾಗಿದ್ದೇವೆ ಎಂದು ಅಸ್ವಾಭಾವಿಕವಾಗಿ ಭಾವಿಸುತ್ತಾರೆ, ಆದ್ದರಿಂದ ಅವರು **ಅಗ್ನಿಹೋತ್ರ ಯಜ್ಞ**ಗಳ ಆಚರಣೆಯನ್ನು ನಿಲ್ಲಿಸುತ್ತಾರೆ. ಆದರೆ ವಾಸ್ತವಿಕವಾಗಿ ಅವರು ಸ್ವಾರ್ಥಿಗಳು, ಏಕೆಂದರೆ ವ್ಯಕ್ತಿಶೂನ್ಯ ಬ್ರಹ್ಮನ್‌ನೊಡನೆ ಒಂದಾಗುವುದು ಅವರ ಗುರಿ. ಅಂಥ ಇಚ್ಛೆಯು ಯಾವುದೇ ಭೌತಿಕ ಇಚ್ಛೆಗಿಂತ ದೊಡ್ಡದು, ಆದರೆ ಅದು ಸ್ವಾರ್ಥರಹಿತವಲ್ಲ. ಅದೇ ಪ್ರಕಾರ, ಅರ್ಧ ತೆರೆದ ಕಣ್ಣುಗಳೊಡನೆ, ಎಲ್ಲ ಭೌತಿಕ ಚಟುವಟಿಕೆಗಳನ್ನು ನಿಲ್ಲಿಸಿ ಯೋಗ ಪದ್ಧತಿಯನ್ನು ಅಭ್ಯಾಸಿಸುವ ಯೋಗಿಯು ತನ್ನ ವೈಯಕ್ತಿಕ ತೃಪ್ತಿಗಾಗಿ ಅರಸುತ್ತಾನೆ. ಆದರೆ ಕೃಷ್ಣಪ್ರಜ್ಞೆಯಲ್ಲಿ ವರ್ತಿಸುವವನು ಸ್ವಾರ್ಥವಿಲ್ಲದೆ ಪೂರ್ಣನ ತೃಪ್ತಿಗಾಗಿ ಕಾರ್ಯ ಮಾಡುತ್ತಾನೆ. ಕೃಷ್ಣಪ್ರಾಜ್ಞಿಗೆ ಸ್ವಂತ ತೃಪ್ತಿಯ ಇಚ್ಛೆ ಇರುವುದಿಲ್ಲ. ಕೃಷ್ಣನ ತೃಪ್ತಿಯು ಅವನ ಯಶಸ್ಸಿನ ಮಾನದಂಡ, ಹೀಗೆ ಅವನು ಪರಿಪೂರ್ಣ ಸನ್ಯಾಸಿ, ಅಥವಾ ಪರಿಪೂರ್ಣ ಯೋಗಿ. ವೈರಾಗ್ಯದ ಅತ್ಯುನ್ನತ ಪರಿಪೂರ್ಣತೆಯ ಸಂಕೇತವಾಗಿರುವ ಭಗವಾನ್ ಚೈತನ್ಯರು ಹೀಗೆ ಪ್ರಾರ್ಥಿಸುತ್ತಾರೆ :

ನ ಧನಂ ನ ಜನಂ ನ ಸುಂದರೀಂ ಕವಿತಾಂ ವಾ ಜಗದೀಶ ಕಾಮಯೇ।
ಮಮ ಜನ್ಮನಿ ಜನ್ಮನೀಶ್ವರೇ ಭವತಾದ್ಭಕ್ತಿರಹೈತುಕೀ ತ್ವಯಿ॥

"ಹೇ ಸರ್ವಶಕ್ತ ಭಗವಂತನೇ, ನನಗೆ ಧನ ಸಂಚಯದ ಆಸೆಯಾಗಲಿ ಅಥವಾ ಸುಂದರ ಸ್ತ್ರೀಯರನ್ನು ಭೋಗಿಸುವ ಆಸೆಯಾಗಲಿ ಇಲ್ಲ. ನನಗೆ ಬಹು ಜನ ಶಿಷ್ಯರ ಅಪೇಕ್ಷೆಯೂ ಇಲ್ಲ. ನನಗೆ ಬೇಕಾದುದು ಜನ್ಮಜನ್ಮಾಂತರಗಳ ನನ್ನ ಜೀವನದಲ್ಲಿ ನಿನ್ನ ಭಕ್ತಿಯುತ ಸೇವೆಯ ನಿರ್ಹೇತುಕ ದಯೆಯು ಮಾತ್ರ."

**ಯಂ ಸಂನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಣ್ಡವ ।**
**ನ ಹ್ಯಸಂನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ ॥ ೨ ॥**

ಯಮ್—ಯಾವುದು, ಸನ್ಯಾಸಮ್—ಸನ್ಯಾಸ, ಪರಿತ್ಯಾಗ, ಇತಿ—ಹೀಗೆ, ಪ್ರಾಹುಃ—ಅವರು ಹೇಳುತ್ತಾರೆ, ಯೋಗಮ್—ಪರಮನೊಂದಿಗೆ ಸಂಪರ್ಕ. ತಮ್—ಅದನ್ನು, ವಿದ್ಧಿ—ನೀನು ತಿಳಿಯಬೇಕು, ಪಾಣ್ಡವ—ಹೇ ಪಾಂಡು ಪುತ್ರನೇ, ನ—ಇಲ್ಲ, ಹಿ—ಖಂಡಿತವಾಗಿ, ಅಸನ್ಯಸ್ತ—ತ್ಯಜಿಸದೆ, ಸಂಕಲ್ಪಃ—ಸ್ವತೃಪ್ತಿಗಾಗಿ ಇಚ್ಛೆ, ಯೋಗೀ—ಯೋಗಿ, ದಿವ್ಯವಾದಿ, ಭವತಿ—ಆಗುವನು, ಕಶ್ಚನ—ಯಾರಾದರೊಬ್ಬನು.

**ಹೇ ಪಾಂಡುಪುತ್ರನೇ, ಪರಿತ್ಯಾಗ ಅಥವಾ ಸನ್ಯಾಸ ಎಂಬುದು ಯೋಗದಂತೆಯೇ, ಅಥವಾ ಪರಮನೊಂದಿಗೆ ತನ್ನನ್ನು ಸಂಪರ್ಕಿಸುವುದರಂತೆಯೇ ಎಂದು ನೀನು ತಿಳಿಯಬೇಕು, ಏಕೆಂದರೆ ಇಂದ್ರಿಯತೋಷಣೆಯ ಇಚ್ಛೆಯನ್ನು ತ್ಯಜಿಸದ ಹೊರತು ಯಾರು ಕೂಡ ಯೋಗಿಯಾಗಲಾರನು.**

**ಭಾವಾರ್ಥ :** ನಿಜ **ಸನ್ಯಾಸ-ಯೋಗ** ಅಥವಾ ಭಕ್ತಿ ಎಂದರೆ ಒಬ್ಬ ಜೀವಿಯು ತನ್ನ ಸ್ವರೂಪಸ್ಥಿತಿಯನ್ನು ತಿಳಿಯಬೇಕು, ಮತ್ತು ಅದರ ಅನುಸಾರ ವರ್ತಿಸಬೇಕು. ಜೀವಿಗೆ ಪ್ರತ್ಯೇಕ ಸ್ವತಂತ್ರ ವ್ಯಕ್ತಿತ್ವ ಇಲ್ಲ. ಅವನು ಪರಮನ ತಟಸ್ಥಶಕ್ತಿ. ಭೌತಿಕ ಶಕ್ತಿಯ ಬಲೆಗೆ ಸಿಕ್ಕಾಗ, ಅವನು ಬದ್ಧನು, ಮತ್ತು ಅವನು ಕೃಷ್ಣಪ್ರಜ್ಞ ಯಾಗಿರುವಾಗ, ಅಥವಾ ಆಧ್ಯಾತ್ಮ ಶಕ್ತಿಯನ್ನು ಅರಿತಿರುವಾಗ, ಅವನು ತನ್ನ ಜೀವನದ ನಿಜ ಮತ್ತು ಸ್ವಾಭಾವಿಕ ಸ್ಥಿತಿಯಲ್ಲಿರುತ್ತಾನೆ. ಆದ್ದರಿಂದ ಒಬ್ಬನು ಸಂಪೂರ್ಣ ಜ್ಞಾನದಲ್ಲಿರುವಾಗ, ಅವನು ಎಲ್ಲ ಭೌತಿಕ ಇಂದ್ರಿಯ ತೋಷಣಗಳನ್ನು ನಿಲ್ಲಿಸುತ್ತಾನೆ, ಅಥವಾ ಇಂದ್ರಿಯ ತೋಷಕವಾದ ಎಲ್ಲ ಬಗೆಯ ಚಟುವಟಿಕೆಗಳನ್ನು ತ್ಯಜಿಸುತ್ತಾನೆ. ಭೌತಿಕ ಆಸಕ್ತಿಯಿಂದ ಇಂದ್ರಿಯಗಳನ್ನು ನಿಗ್ರಹಿಸುವ ಯೋಗಿಗಳಿಂದ ಇದು ಆಚರಿಸಲ್ಪಡುತ್ತದೆ. ಆದರೆ ಕೃಷ್ಣಪ್ರಜ್ಞಿಗೆ ಕೃಷ್ಣನಿಗೆ ಉದ್ದೇಶಿತವಲ್ಲದ ಯಾವುದರಲ್ಲಿಯೂ ತನ್ನ ಇಂದ್ರಿಯಗಳನ್ನು ತೊಡಗಿಸುವ ಅವಕಾಶ ಇರುವುದಿಲ್ಲ. ಆದ್ದರಿಂದ, ಕೃಷ್ಣಪ್ರಜ್ಞಿಯು ಏಕಕಾಲದಲ್ಲಿ ಸನ್ಯಾಸಿ ಮತ್ತು ಯೋಗಿ. ಜ್ಞಾನ ಮತ್ತು ಯೋಗ ಪ್ರಕ್ರಿಯೆಗಳಲ್ಲಿ ವಿಧಿಸಿರುವಂತೆ, ಜ್ಞಾನದ ಉದ್ದೇಶವು ಮತ್ತು ಇಂದ್ರಿಯ ನಿಗ್ರಹದ ಉದ್ದೇಶವು, ಕೃಷ್ಣಪ್ರಜ್ಞೆಯಲ್ಲಿ ತಾವಾಗಿಯೇ ಪೂರೈಸುತ್ತವೆ. ಒಬ್ಬನು ತನ್ನ ಸ್ವಾರ್ಥ ಸ್ವಭಾವದ ಚಟುವಟಿಕೆಗಳನ್ನು ತ್ಯಜಿಸಲು ಶಕ್ತನಾಗದಿದ್ದರೆ, ಆಗ ಜ್ಞಾನ ಮತ್ತು ಯೋಗ ಅಪ್ರಯೋಜಕ. ಜೀವಿಯು ಎಲ್ಲ ಸ್ವಾರ್ಥ ತೃಪ್ತಿಯನ್ನು ತ್ಯಜಿಸುವುದು ಮತ್ತು ಪರಮನನ್ನು ತೃಪ್ತಿಪಡಿಸಲು ಸಿದ್ಧನಾಗುವುದು ಇದೇ ನಿಜವಾದ ಗುರಿ. ಕೃಷ್ಣಪ್ರಜ್ಞಿಗೆ ಯಾವುದೇ ಬಗೆಯ ಸ್ವಯಂ ಭೋಗದ ಇಚ್ಛೆ ಇರುವುದಿಲ್ಲ. ಅವನು ಪರಮನ ಭೋಗಕ್ಕಾಗಿ ಸದಾ ನಿರತನು. ಪರಮನ ಬಗ್ಗೆ ತಿಳಿಯದವನು ಸ್ವಯಂ ತುಷ್ಟಿಯಲ್ಲಿ ತೊಡಗಿರಬೇಕಾಗುವುದು, ಏಕೆಂದರೆ ಯಾವನೂ ನಿಷ್ಕ್ರಿಯ ವೇದಿಕೆಯ ಮೇಲೆ ಇರಲಾರನು. ಕೃಷ್ಣಪ್ರಜ್ಞೆಯ ಆಚರಣೆಯಿಂದ ಎಲ್ಲಾ ಉದ್ದೇಶಗಳು ಪರಿಪೂರ್ಣವಾಗಿ ಪೂರೈಸುತ್ತವೆ.

**ಆರುರುಕ್ಷೋರ್ಮುನೇರ್ಯೋಗಂ ಕರ್ಮ ಕಾರಣಮುಚ್ಯತೇ ।**
**ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ॥೩॥**

ಆರುರುಕ್ಷೋಃ—ಈಗ ತಾನೇ ಯೋಗ ಪ್ರಾರಂಭಿಸಿದ, ಮುನೇಃ—ಮುನಿಯ, **ಯೋ**ಗಮ್—ಅಷ್ಟಾಂಗ ಯೋಗಪದ್ಧತಿಯನ್ನು, ಕರ್ಮ—ಕಾರ್ಯ, ಕಾರಣಮ್—**ಸಾ**ಧನೆ, ಉಚ್ಯತೇ—ಎಂದು ಹೇಳಲಾಗಿದೆ, ಯೋಗ—ಅಷ್ಟಾಂಗ ಯೋಗ, ಆರೂಢಸ್ಯ—ಹೊಂದಿದವನು, ತಸ್ಯ—ಅವನ, ಏವ—ಖಂಡಿತವಾಗಿ, ಶಮಃ—ಎಲ್ಲಾ ಭೌತಿಕ ಚಟುವಟಿಕೆಗಳ ನಿಲ್ಲಿಸುವಿಕೆ, ಕಾರಣಮ್—ಸಾಧನ, ಉಚ್ಯತೇ—ಎಂದು ಹೇಳಿದೆ.

**ಅಷ್ಟಾಂಗ ಯೋಗ ಪದ್ಧತಿಯಲ್ಲಿನ ಪ್ರಾರಂಭಿಕನಿಗೆ, ಕಾರ್ಯವು ಸಾಧನೆವೆಂದು ಹೇಳಿದೆ ; ಮತ್ತು ಈಗಾಗಲೇ ಯೋಗದಲ್ಲಿ ಉನ್ನತಿಸಿದವನಿಗೆ, ಸಕಲ ಭೌತಿಕ ಚಟುವಟಿಕೆಗಳ ನಿಲ್ಲಿಸುವಿಕೆಯು ಸಾಧನವೆಂದು ಹೇಳಿದೆ.**

**ಭಾವಾರ್ಥ :** ತನ್ನನ್ನು ಪರ**ಮನೊಂ**ದಿಗೆ ಸಂಪರ್ಕಿಸಿಕೊಳ್ಳುವ ಪ್ರಕ್ರಿಯೆಯನ್ನು **ಯೋಗ** ಎಂದು ಕರೆದಿದೆ. ಅದನ್ನು ಅತ್ಯುನ್ನತ ಅಧ್ಯಾತ್ಮ ಸಾಕ್ಷಾತ್ಕಾರ ಪ್ರಾಪ್ತಿಗಾಗಿ ಇರುವ ಏಣಿಗೆ ಹೋಲಿಸಬಹುದು. ಈ ಏಣಿಯು ಜೀವಿಯ ಅತ್ಯಂತ ಕೆಳಗಿನ ಭೌತಿಕ ಸ್ಥಿತಿಯಿಂದ ಆರಂಭವಾಗಿ, ಶುದ್ಧ ಅಧ್ಯಾತ್ಮ ಜೀವನದಲ್ಲಿನ ಪರಿಪೂರ್ಣ ಆತ್ಮಸಾಕ್ಷಾತ್ಕಾರದವರೆಗೆ ಮೇಲೇರುತ್ತದೆ. ವಿವಿಧ ಉನ್ನತಿಗಳಿಗನುಸಾರ, ಏಣಿಯ ಬೇರೆ ಬೇರೆ ಭಾಗಗಳು ಬೇರೆ ಬೇರೆ ಹೆಸರು ಹೊಂದಿವೆ. ಆದರೆ ಒಟ್ಟಾಗಿ ಸಂಪೂರ್ಣ ಏಣಿಯನ್ನು **ಯೋಗ** ಎಂದು ಕರೆದಿದೆ ಮತ್ತು ಅದನ್ನು ಜ್ಞಾನಯೋಗ, ಧ್ಯಾನಯೋಗ ಮತ್ತು ಭಕ್ತಿಯೋಗ ಎಂಬ ಮೂರು ಭಾಗಗಳಾಗಿ ವಿಭಾಗಿಸಬಹುದು. ಏಣಿಯ ಆರಂಭವನ್ನು **ಯೋಗಾರುರುಕ್ಷು** ಮಟ್ಟ ಎಂದು, ಮತ್ತು ಅತ್ಯಂತ ಮೇಲಿನ ಮೆಟ್ಟಿಲನ್ನು **ಯೋಗಾರೂಢ** ಎಂದು ಕರೆದಿದೆ.

ಅಷ್ಟಾಂಗ ಯೋಗ ಪದ್ಧತಿಗೆ ಸಂಬಂಧಿಸಿದಂತೆ, ಜೀವನದ ನಿಯಂತ್ರಣದ ತತ್ತ್ವಗಳು ಮತ್ತು ವಿವಿಧ ಆಸನಗಳ ಅಭ್ಯಾಸದ (ಸರಿಸುಮಾರು ದೈಹಿಕ ವ್ಯಾಯಾಮಗಳು) ಮೂಲಕ ಧ್ಯಾನಕ್ಕೆ ಪ್ರವೇಶಮಾಡುವ ಪ್ರಾರಂಭದ ಪ್ರಯತ್ನಗಳು ಕಾಮ್ಯ ಭೌತಿಕ ಚಟುವಟಿಕೆಗಳೆಂದು ಭಾವಿಸಲ್ಪಟ್ಟಿವೆ. ಅಂಥ ಚಟುವಟಿಕೆಗಳೆಲ್ಲವೂ ಇಂದ್ರಿಯಗಳನ್ನು ನಿಯಂತ್ರಿಸಲು ಪರಿಪೂರ್ಣ ಮಾನಸಿಕ ಸಮತೋಲನ ಪ್ರಾಪ್ತಿಗೆ ಕೊಂಡೊಯ್ಯುತ್ತವೆ. ಒಬ್ಬನು ಧ್ಯಾನಾಭ್ಯಾಸದಲ್ಲಿ ಸಿದ್ಧಿ ಪಡೆದಾಗ, ಅವನು ಕ್ಷೋಭಕಾರಕ ಎಲ್ಲ ಮಾನಸಿಕ ಚಟುವಟಿಕೆಗಳನ್ನು ನಿಲ್ಲಿಸುತ್ತಾನೆ.

ಆದರೆ ಕೃಷ್ಣಪ್ರಾಜ್ಞಿಯು, ಪ್ರಾರಂಭದಿಂದಲೇ ಧ್ಯಾನಮಟ್ಟದಲ್ಲಿ ಸನ್ನಿವೇಶಿತನು, ಏಕೆಂದರೆ ಅವನು ಸದಾ ಕೃಷ್ಣನನ್ನು ಚಿಂತಿಸುತ್ತಾನೆ. ಮತ್ತು, ಸತತವಾಗಿ ಕೃಷ್ಣ ಸೇವಾ ನಿರತನಾಗಿ, **ಅವನು ಎಲ್ಲ ಭೌತಿಕ ಚಟುವಟಿಕೆಗಳನ್ನು ನಿಲ್ಲಿಸಿರುವವ**ನೆಂದು ತಿಳಿಯಲ್ಪಡುವನು.

**ಯದಾ ಹಿ ನೇನ್ದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ ।**
**ಸರ್ವಸಂಕಲ್ಪಸಂನ್ಯಾಸೀ ಯೋಗಾರೂಢಸ್ತದೋಚ್ಯತೇ ॥೪॥**

ಯದಾ—ಯಾವಾಗ, ಹಿ—ಖಂಡಿತವಾಗಿ, ನ—ಇಲ್ಲ, ಇನ್ದ್ರಿಯ ಅರ್ಥೇಷು—ಇಂದ್ರಿಯ ತೋಷಣದಲ್ಲಿ, ನ—ಎಂದೂ ಇಲ್ಲ, ಕರ್ಮಸು—ಕಾಮ್ಯಕಾರ್ಯಗಳಲ್ಲಿ, ಅನುಷಜ್ಜತೇ—ಅವಶ್ಯವಾಗಿ ನಿರತನಾಗುವ ಒಬ್ಬನು, ಸರ್ವಸಂಕಲ್ಪ—ಎಲ್ಲ ಭೌತಿಕ ಇಚ್ಛೆಗಳ, ಸಂನ್ಯಾಸೀ—ಪರಿತ್ಯಾಗಿ, ಯೋಗಆರೂಢಃ—ಯೋಗದಲ್ಲಿ ಉನ್ನತಿಸಿದ, ತದಾ—ಆಗ, ಉಚ್ಯತೇ—ಹೇಳಲ್ಪಡುತ್ತಾನೆ.

**ಒಬ್ಬನು ಎಲ್ಲಾ ಭೌತಿಕ ಇಚ್ಛೆಗಳನ್ನು ತ್ಯಜಿಸಿ, ಇಂದ್ರಿಯ ತೋಷಣಕ್ಕಾಗಿ ಕಾರ್ಯಮಾಡದಿರುವಾಗ, ಅಥವಾ ಕಾಮ್ಯ ಕಾರ್ಯಗಳಲ್ಲಿ ತೊಡಗದಿರುವಾಗ ಯೋಗೋನ್ನತನೆಂದು ಹೇಳಲ್ಪಡುತ್ತಾನೆ.**

**ಭಾವಾರ್ಥ:** ಒಬ್ಬನು ಭಗವಂತನ ದಿವ್ಯ ಪ್ರೀತಿಯುತ ಸೇವೆಯಲ್ಲಿ ಪೂರ್ಣವಾಗಿ ತೊಡಗಿದಾಗ,ಅವನು ತನ್ನಲ್ಲಿಯೇ ತೃಪ್ತನು,ಮತ್ತು ಹೀಗೆ ಅವನು ಇನ್ನೆಷ್ಟುಕಾಲವೂ ಇಂದ್ರಿಯ ತೋಷಣದಲ್ಲಿ ಅಥವಾ ಕಾಮ್ಯಕಾರ್ಯಗಳಲ್ಲಿ ತೊಡಗಿರುವುದಿಲ್ಲ. ಇಲ್ಲದಿದ್ದರೆ. ಒಬ್ಬನು ನಿಷ್ಕ್ರಿಯನಾಗಿ ಇರಲಾಗದೆ ಅವನು ಇಂದ್ರಿಯ ತೋಷಣದಲ್ಲಿ ತೊಡಗಲೇಬೇಕು. ಕೃಷ್ಣಪ್ರಜ್ಞೆಯಿಲ್ಲದೆ, ಒಬ್ಬನು ಸದಾ ಸ್ವಾರ್ಥಪರ ಅಥವಾ ವಿಸ್ತೃತ ಸ್ವಾರ್ಥ ಚಟುವಟಿಕೆಗಳನ್ನು ಅರಸಬೇಕಾಗುತ್ತದೆ. ಆದರೆ ಕೃಷ್ಣಪ್ರಾಜ್ಞನು ಪ್ರತಿಯೊಂದನ್ನು ಕೃಷ್ಣ ತುಷ್ಟಿಗಾಗಿ ಮಾಡಬಲ್ಲನು ಮತ್ತು ಆ ಮೂಲಕ ಪರಿಪೂರ್ಣವಾಗಿ ಇಂದ್ರಿಯ ತೋಷಣದಿಂದ ವಿರಕ್ತನಾಗಿರಬಹುದು. ಅಂಥ ಸಾಕ್ಷಾತ್ಕಾರವಿಲ್ಲದವನು ಯೋಗ ಏಣಿಯ ಮೇಲಿನ ಮೆಟ್ಟಿಲಿಗೆ ಉನ್ನತಿಸುವ ಮುಂಚೆ ಭೌತಿಕ ಇಚ್ಛೆಗಳಿಂದ ತಪ್ಪಿಸಿಕೊಳ್ಳಲು ಯಾಂತ್ರಿಕವಾಗಿ ಯತ್ನಿಸಬೇಕಾಗುವುದು.

**ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್ ।**
**ಆತ್ಮೈವ ಹ್ಯಾತ್ಮನೋ ಬನ್ಧುರಾತ್ಮೈವ ರಿಪುರಾತ್ಮನಃ ॥೫॥**

ಉದ್ಧರೇತ್—ಉದ್ಧರಿಸಬೇಕು, ಆತ್ಮನಾ—ಮನಸ್ಸಿನಿಂದ, ಆತ್ಮಾನಮ್—ಬದ್ಧ ಆತ್ಮನನ್ನು, ನ—ಇಲ್ಲ, ಆತ್ಮಾನಮ್—ಬದ್ಧ ಆತ್ಮನನ್ನು, ಅವಸಾದಯೇತ್—ಕೀಳುಗೊಳಿಸಬಾರದು ಆತ್ಮಾ—ಮನಸ್ಸು, ಏವ—ಖಂಡಿತವಾಗಿ, ಹಿ—ನಿಜವಾಗಿ, ಆತ್ಮನಃ—ಬದ್ಧಾತ್ಮನ, ಬನ್ಧುಃ—ಮಿತ್ರನು, ಆತ್ಮಾ—ಮನಸ್ಸು, ಏವ—ಖಂಡಿತವಾಗಿ, ರಿಪುಃ—ವೈರಿ, ಆತ್ಮನಃ—ಬದ್ಧಾತ್ಮನ.

**ಒಬ್ಬನು ತನ್ನ ಮನಸ್ಸಿನ ಸಹಾಯದಿಂದ ತನ್ನನ್ನು ಉದ್ಧರಿಸಿಕೊಳ್ಳಬೇಕು, ಮತ್ತು ತನ್ನನ್ನು ಕೀಳುಗೊಳಿಸಿಕೊಳ್ಳಬಾರದು. ಮನಸ್ಸು ಬದ್ಧಾತ್ಮನ ಮಿತ್ರ, ಹಾಗೂ ಅವನ ವೈರಿ.**

**ಭಾವಾರ್ಥ : ಆತ್ಮಾ** ಎಂಬ ಪದವು– ವಿವಿಧ ಸನ್ನಿವೇಶಗಳನ್ನು ಅವಲಂಬಿಸಿ, ದೇಹ, ಮನಸ್ಸು ಮತ್ತು ಆತ್ಮನನ್ನು ಸೂಚಿಸುತ್ತದೆ. ಯೋಗ ಪದ್ಧತಿಯಲ್ಲಿ, ಮನಸ್ಸು ಮತ್ತು

ಬದ್ಧಾತ್ಮನು ವಿಶೇಷವಾಗಿ ಮುಖ್ಯ. ಮನಸ್ಸು ಯೋಗ ಆಚರಣೆಯ ಕೇಂದ್ರ ಬಿಂದುವಾಗಿರುವುದರಿಂದ, **ಆತ್ಮಾ** ಇಲ್ಲಿ ಮನಸ್ಸನ್ನು ಸೂಚಿಸುತ್ತದೆ. ಮನಸ್ಸನ್ನು ನಿಯಂತ್ರಿಸುವುದು ಮತ್ತು ಇಂದ್ರಿಯ ವಿಷಯಗಳ ಅಕ್ಕರೆಯಿಂದ ಅದನ್ನು ದೂರಸೆಳೆದುಕೊಳ್ಳುವುದು ಯೋಗಪದ್ಧತಿಯ ಉದ್ದೇಶ. ಅಜ್ಞಾನದ ಕೆಸರಿನಿಂದ ಬದ್ಧಾತ್ಮನನ್ನು ಉದ್ಧರಿಸುವ ಹಾಗೆ ಮನಸ್ಸನ್ನು ತರಬೇತಿಗೊಳಿಸಬೇಕೆಂದು ಇಲ್ಲಿ ಒತ್ತಿಹೇಳಿದೆ. ಭೌತಿಕ ಅಸ್ತಿತ್ವದಲ್ಲಿ ಒಬ್ಬನು ಮನಸ್ಸು ಮತ್ತು ಇಂದ್ರಿಯಗಳ ಪ್ರಭಾವಕ್ಕೆ ಒಳಪಟ್ಟಿರುತ್ತಾನೆ. ಭೌತಿಕ ಪ್ರಕೃತಿಯ ಮೇಲೆ ಒಡೆತನ ನಡೆಸಬಯಸುವ ಮಿಥ್ಯಾಹಂಕಾರದೊಡನೆ ಮನಸ್ಸು ತೊಡರಿಸಲ್ಪಟ್ಟ ಕಾರಣ ಶುದ್ಧಾತ್ಮನು ಭೌತಿಕ ಜಗತ್ತಿನಲ್ಲಿ ಸಿಲುಕಿದ್ದಾನೆ, ಆದ್ದರಿಂದ ಮನಸ್ಸು ಭೌತಿಕ ಪ್ರಕೃತಿಯ ಥಳಕಿನಿಂದ ಆಕರ್ಷಿತವಾಗದಂತೆ ಅದನ್ನು ತರಬೇತಿಗೊಳಿಸಬೇಕು, ಮತ್ತು ಹೀಗೆ ಬದ್ಧಾತ್ಮನನ್ನು ರಕ್ಷಿಸಬಹುದು. ಒಬ್ಬನು ಇಂದ್ರಿಯ ವಿಷಯಗಳ ಆಕರ್ಷಣೆಯಿಂದ ತನ್ನನ್ನು ಹೀನಾಯಿಸಿಕೊಳ್ಳಬಾರದು. ಒಬ್ಬನು ಇಂದ್ರಿಯ ವಿಷಯಗಳಿಂದ ಹೆಚ್ಚು ಆಕರ್ಷಿತನಾದಷ್ಟೂ, ಅವನು ಮತ್ತಷ್ಟು ಭೌತಿಕ ಅಸ್ತಿತ್ವದಲ್ಲಿ ಸಿಲುಕಿಕೊಳ್ಳುತ್ತಾನೆ. ತಾನು ಸಿಲುಕಿಕೊಳ್ಳದಂತೆ ಮಾಡಿಕೊಳ್ಳಲು ಮನಸ್ಸನ್ನು ಕೃಷ್ಣಪ್ರಜ್ಞೆಯಲ್ಲಿ ತೊಡಗಿಸುವುದೇ ಅತ್ಯುತ್ತಮ ಮಾರ್ಗ. ಈ ಅಂಶವನ್ನು ಒತ್ತಿ ಹೇಳಲು ಅಂದರೆ ಒಬ್ಬನು ಇದನ್ನು ಮಾಡಲೇಬೇಕೆಂದು ಹೇಳಲು "**ಹಿ**" ಪದವನ್ನು ಉಪಯೋಗಿಸಿದೆ. ಹೀಗೂ ಹೇಳಿದೆ.

ಮನ ಏವ ಮನುಷ್ಯಾಣಾಂ ಕಾರಣಂ ಬನ್ಧಮೋಕ್ಷಯೋಃ।
ಬನ್ಧಾಯ ವಿಷಯಾಸಂಗೋ ಮುಕ್ತ್ಯೈನಿರ್ವಿಷಯಂ ಮನಃ॥

"ಮಾನವನಿಗೆ, ಮನಸ್ಸು ಬಂಧನಕ್ಕೆ ಕಾರಣ ಮತ್ತು ಮನಸ್ಸೇ ಮೋಕ್ಷಕ್ಕೆ ಕಾರಣ. ಇಂದ್ರಿಯ ವಿಷಯಗಳಲ್ಲಿ ಮಗ್ನವಾದ ಮನಸ್ಸು ಬಂಧನಕ್ಕೆ ಕಾರಣ, ಮತ್ತು ಇಂದ್ರಿಯ ವಿಷಯಗಳಿಂದ ಅನಾಸಕ್ತವಾದ ಮನಸ್ಸು ಮೋಕ್ಷಕ್ಕೆ ಕಾರಣ." (**ಅಮೃತ ಬಿಂದು ಉಪನಿಷದ್** 2). ಆದ್ದರಿಂದ, ಸದಾ ಕೃಷ್ಣಪ್ರಜ್ಞೆಯಲ್ಲಿ ನಿರತವಾದ ಮನಸ್ಸು ಪರಮ ಮೋಕ್ಷಕ್ಕೆ ಕಾರಣ.

**ಬನ್ಧುರಾತ್ಮಾತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ ।**
**ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥ ೬ ॥**

ಬನ್ಧುಃ—ಮಿತ್ರ, ಆತ್ಮಾ—ಮನಸ್ಸು, ಆತ್ಮನಃ—ಜೀವಿಯ, ತಸ್ಯ—ಅವನ, ಯೇನ—ಯಾರಿಂದ, ಆತ್ಮಾ—ಮನಸ್ಸು, ಏವ—ಖಂಡಿತವಾಗಿ, ಆತ್ಮನಾ—ಜೀವಿಯಿಂದ, ಜಿತಃ—ಗೆಲ್ಲಲ್ಪಟ್ಟಿರುವುದು, ಅನಾತ್ಮನಃ—ಮನಸ್ಸನ್ನು ನಿಯಂತ್ರಿಸಲು ವಿಫಲನಾದವನ, ತು—ಆದರೆ, ಶತ್ರುತ್ವೇ—ಶತ್ರುತ್ವದ ಕಾರಣ, ವರ್ತೇತ—ಇರುತ್ತಾನೆ, ಆತ್ಮಾಏವ—ಮನಸ್ಸೇ, ಶತ್ರುವತ್—ಶತ್ರುವಿನಂತೆ.

**ಮನಸ್ಸನ್ನು ಜಯಿಸಿದವನಿಗೆ, ಮನಸ್ಸು ಮಿತ್ರೋತ್ತಮ; ಆದರೆ ಹಾಗೆ ಮಾಡಲು ವಿಫಲನಾದವನಿಗೆ, ಅವನ ಮನಸ್ಸು ಮಹಾ ವೈರಿ.**

**ಭಾವಾರ್ಥ:** ಮಾನವನ ಉದ್ದಿಷ್ಟ ಕಾರ್ಯವನ್ನು ನಿರ್ವಹಿಸಲು ಮನಸ್ಸನ್ನು **ಮಿತ್ರ** **ನಾಗಿ** ಮಾಡಿಕೊಳ್ಳಲು ಮನಸ್ಸನ್ನು ನಿಯಂತ್ರಿಸುವುದು ಅಷ್ಟಾಂಗ ಯೋಗಾಚರಣೆ**ಯ** ಉದ್ದೇಶ. ಮನಸ್ಸನ್ನು ನಿಯಂತ್ರಿಸದ ಹೊರತು, ಯೋಗಾಚರಣೆಯು (ತೋರಿಕೆಗೆ) ಕೇವಲ ವ್ಯರ್ಥಕಾಲಹರಣ. ತನ್ನ ಮನಸ್ಸನ್ನು ನಿಯಂತ್ರಿಸಲಾಗದವನು ಸದಾ ಅತಿದೊಡ್ಡ ವೈರಿಯೊಂದಿಗೆ ಜೀವಿಸುತ್ತಾನೆ, ಮತ್ತು ಹೀಗೆಅವನ ಜೀವನ ಮತ್ತು ಅದರ ಉದ್ದೇಶ ಹಾಳಾಗುತ್ತವೆ. ವರಿಷ್ಠರ ಆಜ್ಞೆಯನ್ನು ಪಾಲಿಸುವುದೇ ಜೀವಿಯ ಸ್ವರೂಪ ಸ್ಥಿತಿ. ಮನಸ್ಸು ಅಜಿತ ವೈರಿಯಾಗಿರುವವರೆಗೆ, ಅವನು ಕಾಮಾಸಕ್ತಿ, ಕ್ರೋಧ, ಲೋಭ, ಭ್ರಮೆ ಇತ್ಯಾದಿಗಳ ಪ್ರೇರಣೆಗಳನ್ನು ಪಾಲಿಸಬೇಕಾಗುವುದು. ಆದರೆ ಮನಸ್ಸನ್ನು ಗೆದ್ದಾಗ, ಪ್ರತಿಯೊಬ್ಬನ ಹೃದಯ ಸ್ಥಿತ ಪರಮಾತ್ಮನಾಗಿರುವ ದೇವೋತ್ತಮ ಪುರುಷನ ಪ್ರೇರಣೆಯನ್ನು ಪಾಲಿಸಲು ಸ್ವ ಇಚ್ಛೆಯಿಂದ ಒಬ್ಬನು ಒಪ್ಪಿಕೊಳ್ಳುತ್ತಾನೆ. ಒಳಗಿರುವ ಪರಮಾತ್ಮನನ್ನು ಕಾಣುವುದು, ನಂತರ ಅವನ ಪ್ರೇರಣೆಯನ್ನು ಅನುಸರಿಸುವುದು ನಿಜ ಯೋಗಾಚರಣೆಯ ಉದ್ದೇಶ. ನೇರವಾಗಿ ಕೃಷ್ಣಪ್ರಜ್ಞೆಯನ್ನು ಸ್ವೀಕರಿಸಿದವನಿಗೆ, ಭಗವಂತನ ಆದೇಶಕ್ಕೆ ಪರಿಪೂರ್ಣವಾಗಿ ಶರಣಾಗುವುದು ತಾನಾಗಿಯೇ ಹಿಂಬಾಲಿಸುತ್ತದೆ.

**ಜಿತಾತ್ಮನಃ ಪ್ರಶಾನ್ತಸ್ಯ ಪರಮಾತ್ಮಾ ಸಮಾಹಿತಃ ।**
**ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ ॥ ೭ ॥**

ಜಿತ ಆತ್ಮನಃ—ತನ್ನ ಮನಸ್ಸನ್ನು ಗೆದ್ದವನ, ಪ್ರಶಾನ್ತಸ್ಯ—ಮನಸ್ಸಿನ ಮೇಲೆ ಅಂಥ ನಿಯಂತ್ರಣದಿಂದ ಶಾಂತಿಯನ್ನು ಹೊಂದಿದವನು, ಪರಮ ಆತ್ಮಾ—ಪರಮಾತ್ಮ ಸಮಾಹಿತಃ—ಸಂಪೂರ್ಣವಾಗಿ ತಲುಪಿದ, ಶೀತ—ಶೀತದಲ್ಲಿ, ಉಷ್ಣ—ಉಷ್ಣದಲ್ಲಿ, ಸುಖ—ಸುಖ, ದುಃಖೇಷು—ಮತ್ತು ದುಃಖದಲ್ಲಿ, ತಥಾ—ಕೂಡ, ಮಾನ—ಮಾನ, ಅಪಮಾನಯೋಃ—ಮತ್ತು ಅಪಮಾನ.

**ಮನಸ್ಸನ್ನು ಗೆದ್ದವನಿಗೆ ಪರಮಾತ್ಮನು ಆಗಲೇ ಪ್ರಾಪ್ತನು, ಏಕೆಂದರೆ ಅವನು ಶಾಂತಿಯನ್ನು ಹೊಂದಿರುವನು. ' ಅಂಥವನಿಗೆ ಸುಖದುಃಖ, ಶೀತೋಷ್ಣ, ಮಾನಾಪಮಾನ ಎಲ್ಲವೂ ಒಂದೇ.**

**ಭಾವಾರ್ಥ:** ಪ್ರತಿಯೊಬ್ಬನ ಹೃದಯದಲ್ಲಿಯೂ ಪರಮಾತ್ಮನಾಗಿ ಕುಳಿತಿರುವ ಪರಮ ದೇವೋತ್ತಮ ಪುರುಷನ ಪ್ರೇರಣೆಗಳನ್ನು ಅನುಸರಿಸಲು ವಾಸ್ತವಿಕವಾಗಿ ಪ್ರತಿಯೊಬ್ಬ ಜೀವಿಯೂ ಉದ್ದೇಶಿತನು. ಮನಸ್ಸು ಬಾಹ್ಯ ಮಾಯಾಶಕ್ತಿಯಿಂದ ಮಾರ್ಗಭ್ರಷ್ಟವಾದಾಗ, ಒಬ್ಬನು ಭೌತಿಕ ಚಟುವಟಿಕೆಗಳಲ್ಲಿ ಸಿಲುಕಿಕೊಳ್ಳುತ್ತಾನೆ. ಆದ್ದರಿಂದ ಯೋಗಪದ್ಧತಿಗಳಲ್ಲೊಂದರ ಮೂಲಕ ಒಬ್ಬನ ಮನಸ್ಸು ನಿಯಂತ್ರಿತ ವಾದೊಡನೆಯೇ, ಅವನು ಆಗಲೇ ಗುರಿಯನ್ನು ತಲುಪಿರುವನೆಂದು ತಿಳಿಯಬೇಕು. ಒಬ್ಬನು ವರಿಷ್ಠ ಪ್ರೇರಣೆಯನ್ನು ಅನುಸರಿಸಬೇಕು. ಒಬ್ಬನ ಮನಸ್ಸು ಶ್ರೇಷ್ಠ ಸ್ವಭಾವದಲ್ಲಿ ಸ್ಥಿತವಾದಾಗ, ಪರಮನ ಪ್ರೇರಣೆಯನ್ನು ಅನುಸರಿಸುವುದನ್ನು ಬಿಟ್ಟು ಅವನಿಗೆ ಬೇರೆ ಮಾರ್ಗವೇ ಇಲ್ಲ. ಮನಸ್ಸು ಯಾವುದಾದರೂ ಶ್ರೇಷ್ಠ ಪ್ರೇರಣೆಯನ್ನು

ಒಪ್ಪಬೇಕು ಮತ್ತು ಅದನ್ನು ಅನುಸರಿಸಬೇಕು. ಮನಸ್ಸನ್ನು ನಿಯಂತ್ರಿಸುವುದರ ಪರಿಣಾಮವೆಂದರೆ, ಒಬ್ಬನು ತಾನಾಗಿಯೇ ಪರಮಾತ್ಮನ ಪ್ರೇರಣೆಯನ್ನು ಅನುಸರಿಸುತ್ತಾನೆ. ಈ ದಿವ್ಯ ಸ್ಥಿತಿಯು ಕೃಷ್ಣಪ್ರಜ್ಞೆಯಲ್ಲಿರುವವನಿಂದ ಕೂಡಲೇ ಪೊಂದಲ್ಪಡುವುದರಿಂದ ಭಗವದ್ಭಕ್ತನು ಭೌತಿಕ ಅಸ್ತಿತ್ವದ ದ್ವಂದ್ವಗಳಿಂದ, ಎಂದರೆ ಸುಖದುಃಖ, ಶೀತೋಷ್ಣ ಇತ್ಯಾದಿಗಳಿಂದ ಅಬಾಧಿತನು. ಈ ಸ್ಥಿತಿಯು ನಿಜವಾದ **ಸಮಾಧಿ** ಅಥವಾ ಪರಮನಲ್ಲಿ ತಲ್ಲೀನತೆ.

**ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇನ್ದ್ರಿಯಃ ।**
**ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟ್ರಾಶ್ಮಕಾಞ್ಚನಃ ॥ ೮ ॥**

ಜ್ಞಾನ—ಆರ್ಜಿತ ಜ್ಞಾನದಿಂದ, ವಿಜ್ಞಾನ—ಮತ್ತು ಸಾಕ್ಷಾತ್ಕರಿತ ಜ್ಞಾನ, ತೃಪ್ತ—ತೃಪ್ತನಾಗಿ, ಆತ್ಮಾ—ಜೀವಿಯು, ಕೂಟಸ್ಥಃ—ಆಧ್ಯಾತ್ಮಿಕವಾಗಿ ಸನ್ನಿವೇಶಿತನು, ವಿಜಿತ ಇನ್ದ್ರಿಯಃ—ಇಂದ್ರಿಯಗಳನ್ನು ನಿಯಂತ್ರಿಸಿದವನು, ಯುಕ್ತಃ—ಆತ್ಮ ಸಾಕ್ಷಾತ್ಕಾರಕ್ಕೆ ಅರ್ಹನು, ಇತಿ—ಹೀಗೆ ಉಚ್ಯತೇ—ಹೇಳಲ್ಪಟ್ಟಿದೆ, ಯೋಗೀ—ಯೋಗಿಯು, ಸಮ—ಸಮಚಿತ್ತನು, ಲೋಷ್ಟ್ರ—ಮಣ್ಣಿನ ಹೆಂಟೆಗಳು, ಅಶ್ಮ—ಕಲ್ಲು, ಕಾಞ್ಚನಃ—ಚಿನ್ನ.

**ಒಬ್ಬನು ಆರ್ಜಿತ ಜ್ಞಾನ ಮತ್ತು ಸಾಕ್ಷಾತ್ಕಾರದಿಂದ ಪೂರ್ಣತೃಪ್ತನಾದಾಗ, ಅವನು ಆತ್ಮಸಾಕ್ಷಾತ್ಕಾರದಲ್ಲಿ ಸ್ಥಾಪಿತನಾಗಿರುವನು ಎಂದು ಹೇಳಲ್ಪಡುವನು ಮತ್ತು ಯೋಗಿಯೆಂದು ಕರೆಯಲ್ಪಡುವನು. ಅಂಥ ವ್ಯಕ್ತಿಯು ದಿವ್ಯತೆಯಲ್ಲಿ ಸನ್ನಿವೇಶಿತನು ಮತ್ತು ಆತ್ಮನಿಯಂತ್ರಿತನು. ಅವನು—ಕಲ್ಲಿನ ಹರಳುಗಳು, ಕಲ್ಲುಗಳು ಅಥವಾ ಚಿನ್ನ—ಪ್ರತಿಯೊಂದನ್ನು ಸಮಾನವಾಗಿ ಕಾಣುತ್ತಾನೆ.**

**ಭಾವಾರ್ಥ :** ಪರಮ ಸತ್ಯನನ್ನು ಸಾಕ್ಷಾತ್ಕರಿಸಿಕೊಳ್ಳದೆ ಪುಸ್ತಕ ಜ್ಞಾನವು ನಿರುಪಯುಕ್ತ. ಇದು ಹೀಗೆ ಹೇಳಲ್ಪಟ್ಟಿದೆ.

ಅತಃ ಶ್ರೀ ಕೃಷ್ಣನಾಮಾದಿ ನ ಭವೇದ್ ಗ್ರಾಹ್ಯಮಿನ್ದ್ರಿಯೈಃ।
ಸೇವೋನ್ಮುಖೇ ಹಿ ಜಿಹ್ವಾದೌ ಸ್ವಯಮೇವ ಸ್ಫುರತ್ಯದಃ॥

"ಯಾವನೂ ಶ್ರೀಕೃಷ್ಣನ ನಾಮ, ರೂಪ, ಗುಣ ಮತ್ತು ಲೀಲೆಗಳ ದಿವ್ಯ ಸ್ವಭಾವವನ್ನು ಭೌತಿಕವಾಗಿ ಕಲುಷಿತವಾದ ತನ್ನ ಇಂದ್ರಿಯಗಳಿಂದ ಅರಿತುಕೊಳ್ಳಲಾರನು. ಭಗವಂತನಿಗೆ ದಿವ್ಯಸೇವೆಯಿಂದ ಒಬ್ಬನು ಆಧ್ಯಾತ್ಮಿಕವಾಗಿ ಪೂರಿತನಾದಾಗ ಭಗವಂತನ ದಿವ್ಯ ನಾಮ ರೂಪ, ಗುಣ ಮತ್ತು ಲೀಲೆಗಳು ಅವನಿಗೆ ಪ್ರಕಾಶಿತವಾಗುತ್ತವ." **(ಭಕ್ತಿರಸಾಮೃತಸಿಂಧು** 1. 2. 234)

ಈ ಭಗವದ್ಗೀತೆಯು ಕೃಷ್ಣಪ್ರಜ್ಞಾ ವಿಜ್ಞಾನ. ಕೇವಲ ಐಹಿಕ ಪಾಂಡಿತ್ಯದಿಂದ ಯಾರೂ ಕೃಷ್ಣಪ್ರಾಜ್ಞಿಯಾಗಲಾರರು. ಒಬ್ಬನು ಶುದ್ಧಪ್ರಾಜ್ಞಿಯೊಂದಿಗೆ ಸಂಗ ಹೊಂದಲು ಸಾಕಷ್ಟು ಭಾಗ್ಯವಂತನಾಗಿರಬೇಕು. ಕೃಷ್ಣಪ್ರಾಜ್ಞಿಯು ಕೃಷ್ಣನ ಕೃಪೆಯಿಂದ ಸಾಕ್ಷಾತ್ಕಾರಿತ ಜ್ಞಾನಹೊಂದಿರುತ್ತಾನೆ, ಏಕೆಂದರೆ ಅವನು ಶುದ್ಧ ಭಕ್ತಿಯುತ ಸೇವೆ

ಯಿಂದ ತೃಪ್ತನಾಗಿರುತ್ತಾನೆ. ಸಾಕ್ಷಾತ್ಕಾರಿತ ಜ್ಞಾನದಿಂದ ಒಬ್ಬನು ಪರಿಪೂರ್ಣನಾಗುತ್ತಾನೆ. ದಿವ್ಯಜ್ಞಾನದಿಂದ ಒಬ್ಬನು ತನ್ನ ನಂಬಿಕೆಗಳಲ್ಲಿ ಸ್ಥಿರನಾಗಿರಬಹುದು. ಆದರೆ ಕೇವಲ ಶೈಕ್ಷಣಿಕ ಜ್ಞಾನದಿಂದ ಒಬ್ಬನು ಸುಲಭವಾಗಿ ಭ್ರಮೆಗೊಳಗಾಗಬಹುದು ಮತ್ತು ತೋರಿಕೆಯ ವೈರುದ್ಧ್ಯತೆಗಳಿಂದ ಕಂಗೆಡಬಹುದು. ಸಾಕ್ಷಾತ್ಕಾರ ಹೊಂದಿದ ಆತ್ಮನು ಮಾತ್ರವೇ ವಾಸ್ತವಿಕವಾಗಿ ಆತ್ಮ ಸಂಯಮಿ, ಏಕೆಂದರೆ ಅವನು ಕೃಷ್ಣನಿಗೆ ಶರಣಾಗತನು. ಅವನಿಗೆ ಐಹಿಕ ಪಾಂಡಿತ್ಯದಿಂದ ಆಗಬೇಕಾದುದೇನೂ ಇಲ್ಲವಾದ್ದರಿಂದ, ಅವನು ದಿವ್ಯನು. ಇತರರಿಗೆ ಚಿನ್ನವಾಗಿರಬಹುದಾದ ಐಹಿಕ ಪಾಂಡಿತ್ಯ ಮತ್ತು ಮಾನಸಿಕ ಊಹಾಪೋಹಗಳು ಅವನಿಗೆ ಮಣ್ಣಿನ ಹೆಂಟೆ ಅಥವಾ ಕಲ್ಲುಗಳಿಗಿಂತ ಹೆಚ್ಚಿನ ಬೆಲೆಯುವಲ್ಲ.

**ಸುಹೃನ್ಮಿತ್ರಾರ್ಯುದಾಸೀನಮಧ್ಯಸ್ಥದ್ವೇಷ್ಯಬನ್ಧುಷು ।**
**ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ॥ ೯ ॥**

ಸುಹೃತ್—ಸ್ವಭಾವತಃ ಹಿತೈಷಿಗಳಿಗೆ, ಮಿತ್ರ—ವಾತ್ಸಲ್ಯಯುತ ಉಪಕಾರಿಗಳು, ಅರಿ—ವೈರಿಗಳು, ಉದಾಸೀನ—ಯುದ್ಧ ನಿರತರ ನಡುವೆ ಅಲಿಪ್ತರು, ಮಧ್ಯಸ್ಥ—ಯುದ್ಧ ನಿರತರ ನಡುವೆ ಸಂಧಿಕಾರರು, ದ್ವೇಷ್ಯ—ಅಸೂಯಾಪರರು. ಬನ್ಧುಷು—ಮತ್ತು ಬಂಧುಗಳು ಅಥವಾ ಹಿತೈಷಿಗಳು. ಸಾಧುಷು—ಸಾಧುಗಳಿಗೆ, ಅಪಿ—ಹಾಗೂ, ಚ—ಮತ್ತು, ಪಾಪೇಷು—ಪಾಪಿಷ್ಠರಿಗೆ, ಸಮಬುದ್ಧಿಃ—ಸಮ ಬುದ್ಧಿಯುಳ್ಳವನು, ವಿಶಿಷ್ಯತೇ—ಬಹು ಪ್ರಗತಿಶೀಲನು.

**ಒಬ್ಬ ವ್ಯಕ್ತಿಯು ಪ್ರಾಮಾಣಿಕ ಹಿತೈಷಿಗಳು, ವಾತ್ಸಲ್ಯಮಯಿ ಉಪಕಾರಿಗಳು, ತಟಸ್ಥರು, ಮಧ್ಯಸ್ಥರು, ಅಸೂಯಿಗಳು, ಮಿತ್ರರು ಮತ್ತು ವೈರಿಗಳು, ಪುಣ್ಯವಂತರು ಮತ್ತು ಪಾಪಿಷ್ಠರು, ಎಲ್ಲರನ್ನು ಸಮಚಿತ್ತದೊಡನೆ ಲಕ್ಷ್ಯಮಾಡಿದಾಗ, ಅವನು ಮತ್ತಷ್ಟು ಪ್ರಗತಿಶೀಲನೆಂದು ಪರಿಗಣಿಸಲ್ಪಡುವನು.**

**ಯೋಗೀ ಯುಞ್ಜೀತ ಸತತಮಾತ್ಮಾನಂ ರಹಸಿ ಸ್ಥಿತಃ ।**
**ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ ॥ ೧೦ ॥**

ಯೋಗೀ—ದಿವ್ಯವಾದಿಯು, ಯುಞ್ಜೀತ—ಕೃಷ್ಣಪ್ರಜ್ಞೆಯಲ್ಲಿ ಏಕಾಗ್ರನಾಗಬೇಕು, ಸತತಮ್—ಸತತವಾಗಿ, ಆತ್ಮಾನಮ್—ತನ್ನನ್ನು (ಕಾಯಾ, ಮನಸಾ ಮತ್ತು ಆತ್ಮಗಳಿಂದ), ರಹಸಿ—ಏಕಾಂತ ಸ್ಥಳದಲ್ಲಿ, ಸ್ಥಿತಃ—ಸನ್ನಿವೇಶಿತನಾಗಿ, ಏಕಾಕೀ—ಒಬ್ಬನೇ, ಯತಚಿತ್ತ ಆತ್ಮಾ—ಮನದಲ್ಲಿ ಸದಾ ಜಾಗ್ರತನಾಗಿ, ನಿರಾಶೀಃ—ಬೇರೆಯಾವುದರಿಂದಲೂ ಆಕರ್ಷಿತನಾಗದೆ, ಅಪರಿಗ್ರಹಃ—ಸ್ವಾಧೀನತಾಭಾವದಿಂದ ಮುಕ್ತನಾಗಿ.

**ದಿವ್ಯವಾದಿಯು ತನ್ನ ದೇಹ, ಮನಸ್ಸು ಮತ್ತು ಆತ್ಮವನ್ನು ಸದಾ ಪರಮನ ಸಂಬಂಧದಲ್ಲಿ ತೊಡಗಿಸಬೇಕು; ಅವನು ಏಕಾಂತ ಸ್ಥಳದಲ್ಲಿ ಒಂಟಿಯಾಗಿ ವಾಸಿಸಬೇಕು ಮತ್ತು ಸದಾ ಜಾಗರೂಕತೆಯಿಂದ ತನ್ನ ಮನಸ್ಸನ್ನು ನಿಯಂತ್ರಿಸಬೇಕು. ಅವನು ಇಚ್ಛೆಗಳಿಂದ ಮತ್ತು ಸ್ವಾಧೀನತಾಭಾವದಿಂದ ಮುಕ್ತನಾಗಿರಬೇಕು.**

**ಭಾವಾರ್ಥ** : ಕೃಷ್ಣನು ಬ್ರಹ್ಮನ್, ಪರಮಾತ್ಮ ಮತ್ತು ಪರಮದೇವೋತ್ತಮ ಪುರುಷನಾಗಿ ಭಿನ್ನಭಿನ್ನ ಮಟ್ಟಗಳಲ್ಲಿ ಸಾಕ್ಷಾತ್ಕೃತನಾಗುತ್ತಾನೆ. ಕೃಷ್ಣಪ್ರಾಜ್ಞಿ ಎಂದರೆ, ಸಂಕ್ಷೇಪವಾಗಿ, ಸದಾ ಭಗವಂತನ ದಿವ್ಯ ಪ್ರೀತಿಯುತ ಸೇವೆಯಲ್ಲಿ ನಿರತನಾಗಿರುವುದು. ಆದರೆ ವ್ಯಕ್ತಿಶೂನ್ಯ ಬ್ರಹ್ಮನ್‌ನಲ್ಲಿ ಅಥವಾ ಸ್ಥಳೀಯ ಅಂತರ್ಯಾಮಿ ಪರಮಾತ್ಮನಲ್ಲಿ ಆಸಕ್ತರಾದವರು ಕೂಡ ಭಾಗಶಃ ಕೃಷ್ಣಪ್ರಾಜ್ಞಿಗಳು, ಏಕೆಂದರೆ ವ್ಯಕ್ತಿ ಶೂನ್ಯ ಬ್ರಹ್ಮನ್ ಕೃಷ್ಣನ ಆಧ್ಯಾತ್ಮಿಕ ಕಿರಣ ಮತ್ತು ಪರಮಾತ್ಮನು ಸರ್ವವ್ಯಾಪಿ ಆಂಶಿಕ ವಿಸ್ತರಣ. ಹೀಗೆ ವ್ಯಕ್ತಿಶೂನ್ಯವಾದಿ ಮತ್ತು ಧ್ಯಾನಿ ಉಭಯರೂ ಸಹ ಪರೋಕ್ಷವಾಗಿ ಕೃಷ್ಣಪ್ರಾಜ್ಞಿಗಳು. ನೇರ ಕೃಷ್ಣಪ್ರಾಜ್ಞಿಯು ಅತ್ಯುನ್ನತ ದಿವ್ಯವಾದಿ, ಏಕೆಂದರೆ ಅಂಥ ಭಕ್ತನು ಬ್ರಹ್ಮನ್ ಮತ್ತು ಪರಮಾತ್ಮಾ ಎಂದರೇನು ಎಂಬುದನ್ನು ತಿಳಿದಿರುತ್ತಾನೆ. ಪರಮ ತತ್ವದ ಅವನ ಜ್ಞಾನವು ಪರಿಪೂರ್ಣ, ಆದರೆ ವ್ಯಕ್ತಿಶೂನ್ಯವಾದಿ ಮತ್ತು ಧ್ಯಾನಯೋಗಿ ಅಪರಿಪೂರ್ಣ ಕೃಷ್ಣಪ್ರಾಜ್ಞಿಗಳು.

ಆದಾಗ್ಯೂ, ಈ ಎಲ್ಲರೂ ತಮ್ಮ ವಿಶಿಷ್ಟ ಉದ್ಯೋಗಗಳಲ್ಲಿ ಸತತವಾಗಿ ನಿರತರಾಗಿರಲು ಉಪದೇಶಿಸಲಾಗಿದೆ. ಏಕೆಂದರೆ ಅವರು ಶೀಘ್ರ ಅಥವಾ ತಡವಾಗಿ ಅತ್ಯುನ್ನತ ಪರಿಪೂರ್ಣತೆಗೆ ಬರಬಹುದು. ಮನಸ್ಸನ್ನು ಸದಾ ಕೃಷ್ಣನಲ್ಲಿಡುವುದು ದಿವ್ಯವಾದಿಯ ಪ್ರಥಮ ಕಾರ್ಯ. ಒಬ್ಬನು ಸದಾ ಕೃಷ್ಣನನ್ನು ಚಿಂತಿಸಬೇಕು, ಮತ್ತು ಒಂದು ಕ್ಷಣವೂ ಕೂಡ ಅವನನ್ನು ಮರೆಯಕೂಡದು. ಮನಸ್ಸನ್ನು ಪರಮನಲ್ಲಿ ಕೇಂದ್ರೀಕರಿಸುವುದು **ಸಮಾಧಿ** ಎನಿಸಿದೆ. ಮನಸ್ಸನ್ನು ಕೇಂದ್ರೀಕರಿಸಲು ಒಬ್ಬನು ಸದಾ ಏಕಾಂತದಲ್ಲಿರಬೇಕು ಮತ್ತು ಬಾಹ್ಯವಸ್ತುಗಳಿಂದ ಕ್ಷೋಭೆಯನ್ನು ತಪ್ಪಿಸಿಕೊಳ್ಳಬೇಕು. ತನ್ನ ಸಾಕ್ಷಾತ್ಕಾರದ ಮೇಲೆ ಪರಿಣಾಮ ಬೀರುವ ಅನುಕೂಲಕರ ಸ್ಥಿತಿಗಳನ್ನು ಸ್ವೀಕರಿಸಲು ಮತ್ತು ಅನನುಕೂಲಕರ ಸ್ಥಿತಿಗಳನ್ನು ತಿರಸ್ಕರಿಸಲು ಅವನು ಬಹಳ ಜಾಗರೂಕನಾಗಿರಬೇಕು, ಮತ್ತು ಪರಿಪೂರ್ಣ ನಿರ್ಧಾರದಲ್ಲಿ, ತನ್ನನ್ನು ಸ್ವಾಧೀನತಾ ಭಾವನೆಗಳಲ್ಲಿ ಸಿಲುಕಿಸುವ ಅನವಶ್ಯಕ ಭೌತಿಕ ವಸ್ತುಗಳನ್ನು ಹಂಬಲಿಸಕೂಡದು.

ಒಬ್ಬನು ನೇರವಾಗಿ ಕೃಷ್ಣಪ್ರಜ್ಞೆಯಲ್ಲಿದ್ದಾಗ ಈ ಎಲ್ಲಾ ಪರಿಪೂರ್ಣತೆಗಳು ಮತ್ತು ಮುನ್ನೆಚ್ಚರಿಕೆಗಳು ಪರಿಪೂರ್ಣವಾಗಿ ನಿರ್ವಹಿಸಲ್ಪಡುತ್ತವೆ, ಏಕೆಂದರೆ ನೇರ ಕೃಷ್ಣಪ್ರಜ್ಞೆಯೆಂದರೆ ಸ್ವಾರ್ಥನಿರಾಕರಣೆ; ಇದರಲ್ಲಿ ಭೌತಿಕ ಸ್ವಾಧೀನತೆಗೆ ಅತ್ಯಲ್ಪ ಅವಕಾಶವುಂಟು. ಶ್ರೀಲ ರೂಪ ಗೋಸ್ವಾಮಿಯವರು ಕೃಷ್ಣಪ್ರಜ್ಞೆಯನ್ನು ಹೀಗೆ ಗುಣಲಕ್ಷಣ ಮಾಡುತ್ತಾರೆ :

ಅನಾಸಕ್ತಸ್ಯ ವಿಷಯಾನ್ ಯಥಾರ್ಹಮ್ ಉಪಯುಞ್ಜತಃ।
ನಿರ್ಬನ್ಧಃ ಕೃಷ್ಣಸಂಬನ್ಧೇ ಯುಕ್ತಂ ವೈರಾಗ್ಯಮುಚ್ಯತೇ॥
ಪ್ರಾಪಂಚಿಕತಯಾ ಬುದ್ಧ್ಯಾ ಹರಿಸಂಬನ್ಧಿ ವಸ್ತುನಃ।
ಮುಮುಕ್ಷುಭಿಃ ಪರಿತ್ಯಾಗೋ ವೈರಾಗ್ಯಂ ಫಲ್ಗು ಕಥ್ಯತೇ॥

"ಒಬ್ಬನು ಯಾವುದಕ್ಕೂ ಅಕ್ಕರೆಯುಳ್ಳವನಾಗದೆ, ಮತ್ತು ಅದೇ ಸಮಯದಲ್ಲಿ ಕೃಷ್ಣ ಸಂಬಂಧದಲ್ಲಿ ಪ್ರತಿಯೊಂದನ್ನೂ ಸ್ವೀಕರಿಸಿದಾಗ, ಅವನು ಸ್ವಾಧೀನತಾ ಭಾವನೆಯನ್ನು

ಮೀರಿ ಸರಿಯಾಗಿ ಸನ್ನಿವೇಶಿತನು. ಬದಲಾಗಿ ಪ್ರತಿಯೊಂದನ್ನೂ, ಅದರ ಕೃಷ್ಣ ಸಂಬಂಧದ ಜ್ಞಾನವಿಲ್ಲದೆ, ತಿರಸ್ಕರಿಸುವವನು ತನ್ನ ಪರಿತ್ಯಾಗದಲ್ಲಿ ಅಷ್ಟು ಪರಿಪೂರ್ಣನಲ್ಲ." **(ಭಕ್ತಿ ರಸಾಮೃತ ಸಿಂಧು** 2.255-256)

ಕೃಷ್ಣಪ್ರಾಜ್ಞನಿಯು ಸರ್ವವೂ ಕೃಷ್ಣನಿಗೆ ಸೇರಿದ್ದು ಎಂದು ಚೆನ್ನಾಗಿ ಅರಿತಿರುತ್ತಾನೆ, ಮತ್ತು ಹೀಗಾಗಿ ಅವನು ಸ್ವಯಂ ಒಡೆತನದ ಭಾವನೆಯಿಂದ ಸದಾ ಮುಕ್ತನು. ಆದ್ದರಿಂದ, ತನಗಾಗಿ ಅವನಿಗೆ ಯಾವುದರ ಹಂಬಲವೂ ಇರುವುದಿಲ್ಲ. ಕೃಷ್ಣಪ್ರಜ್ಞೆಗೆ ಅನುಕೂಲವಾಗಿರುವ ವಸ್ತುಗಳನ್ನು ಹೇಗೆ ಸ್ವೀಕರಿಸಬೇಕು ಮತ್ತು ಕೃಷ್ಣಪ್ರಜ್ಞೆಗೆ ಪ್ರತಿಕೂಲವಾಗಿರುವ ವಸ್ತುಗಳನ್ನು ಹೇಗೆ ತಿರಸ್ಕರಿಸಬೇಕು ಎಂಬುದನ್ನು ಅವನು ಅರಿತಿರುತ್ತಾನೆ. ಅವನು ಸದಾ ದಿವ್ಯವಾಗಿರುವುದರಿಂದ ಭೌತಿಕ ವಸ್ತುಗಳಿಂದ ಸದಾ ದೂರವಿರುತ್ತಾನೆ, ಮತ್ತು ಕೃಷ್ಣಪ್ರಾಜ್ಞನಿಗಳಲ್ಲದವರೊಡನೆ ಯಾವುದೇ ಸಂಬಂಧವಿಲ್ಲದಿರುವುದರಿಂದ ಅವನು ಸದಾ ಏಕಾಂಗಿ. ಆದ್ದರಿಂದ ಕೃಷ್ಣಪ್ರಾಜ್ಞನಿಯು ಪರಿಪೂರ್ಣಯೋಗಿ.

**ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ।**
**ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನ ಕುಶೋತ್ತರಮ್ ॥ ೧೧ ॥**
**ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇನ್ದ್ರಿಯ ಕ್ರಿಯಃ ।**
**ಉಪವಿಶ್ಯಾಸನೇ ಯುಞ್ಜ್ಯಾದ್ ಯೋಗಮಾತ್ಮವಿಶುದ್ಧಯೇ ॥ ೧೨ ॥**

ಶುಚೌ—ಪವಿತ್ರೀಕರಿಸಿದ, ದೇಶೇ—ನೆಲದಲ್ಲಿ, ಪ್ರತಿಷ್ಠಾಪ್ಯ—ಇರಿಸಿ, ಸ್ಥಿರಮ್—ಸ್ಥಿರವಾಗಿ, ಆಸನಮ್—ಆಸನವನ್ನು, ಆತ್ಮನಃ—ತನ್ನ ಸ್ವಂತ, ನ—ಅಲ್ಲ, ಅತಿ—ಬಹಳ, ಉಚ್ಛ್ರಿತಮ್—ಎತ್ತರ, ನ—ಇಲ್ಲ, ಅತಿ—ಬಹಳ, ನೀಚಮ್—ತಗ್ಗು, ಚೈಲ ಅಜಿನ—ಮೃದುವಾದ ಬಟ್ಟೆ ಮತ್ತು ಕೃಷ್ಣಾಜಿನದ, ಕುಶ—ಮತ್ತು ಕುಶ ಹುಲ್ಲು, ಉತ್ತರಮ್—ಮುಚ್ಚಿದ, ತತ್ರ—ಅದರಮೇಲೆ, ಏಕ ಅಗ್ರಮ್—ಏಕಾಗ್ರತೆಯೊಡನೆ, ಮನಃ—ಮನಸ್ಸು, ಕೃತ್ವಾ—ಮಾಡಿದ, ಯತಚಿತ್ತ—ಮನಸ್ಸನ್ನು ನಿಯಂತ್ರಿಸಿ, ಇನ್ದ್ರಿಯ—ಇಂದ್ರಿಯಗಳು, ಕ್ರಿಯಃ—ಮತ್ತು ಕ್ರಿಯೆಗಳು, ಉಪವಿಶ್ಯ—ಕುಳಿತು, ಆಸನೇ—ಆಸನದ ಮೇಲೆ, ಯುಞ್ಜ್ಯಾತ್—ಆಚರಿಸಬೇಕು, ಯೋಗಮ್—ಯೋಗಾಭ್ಯಾಸ, ಆತ್ಮ—ಹೃದಯ, ವಿಶುದ್ಧಯೇ—ಶುದ್ಧಿಗಾಗಿ.

**ಯೋಗಾಭ್ಯಾಸಮಾಡಲು, ಒಬ್ಬನು ಏಕಾಂತ ಸ್ಥಳಕ್ಕೆ ಹೋಗಬೇಕು ಮತ್ತು ಭೂಮಿಯ ಮೇಲೆ ಕುಶ ಹುಲ್ಲನ್ನು ಇರಿಸಿ ನಂತರ ಅದರ ಮೇಲೆ ಕೃಷ್ಣಾಜಿನ ಮತ್ತು ಮೃದುವಾದ ವಸ್ತ್ರವನ್ನು ಹರಡಬೇಕು. ಆಸನವು ಅತಿ ಎತ್ತರವೂ ಅತಿ ತಗ್ಗೂ ಆಗಿರಕೂಡದು ಮತ್ತು ಪವಿತ್ರ ಸ್ಥಳದಲ್ಲಿ ಸನ್ನಿವೇಶಿತವಾಗಿರಬೇಕು. ಆಗ ಯೋಗಿಯು ಅದರ ಮೇಲೆ ಸ್ಥಿರವಾಗಿ ಕುಳಿತುಕೊಳ್ಳಬೇಕು ಮತ್ತು ತನ್ನ ಮನಸ್ಸು, ಇಂದ್ರಿಯ ಮತ್ತು ಚಟುವಟಿಕೆಗಳನ್ನು ನಿಯಂತ್ರಿಸಿ ಮತ್ತು ಮನಸ್ಸನ್ನು ಏಕಾಗ್ರಗೊಳಿಸಿ ಹೃದಯ ಶುದ್ಧಿಗಾಗಿ ಯೋಗಾಭ್ಯಾಸ ಮಾಡಬೇಕು.**

**ಭಾವಾರ್ಥ :** "ಪವಿತ್ರ ಸ್ಥಳ ಎಂಬುದು ಯಾತ್ರಾಸ್ಥಳಗಳನ್ನು ಸೂಚಿಸುತ್ತದೆ." ಭಾರತದಲ್ಲಿ ಯೋಗಿಗಳು, ದಿವ್ಯವಾದಿಗಳು ಅಥವಾ ಭಕ್ತರು, ಎಲ್ಲರೂ ಗೃಹವನ್ನು ತ್ಯಜಿಸಿ ಪ್ರಯಾಗ, ಮಥುರಾ, ವೃಂದಾವನ, ಹೃಷೀಕೇಶ ಮತ್ತು ಹರಿದ್ವಾರ, ಅಂಥ ಪವಿತ್ರ ಸ್ಥಳಗಳಲ್ಲಿ ವಾಸಿಸುತ್ತಾರೆ ಮತ್ತು ಯಮುನಾ ಗಂಗೆಯಂಥ ಪವಿತ್ರ ನದಿಗಳು ಹರಿಯು ವಲ್ಲಿ ಏಕಾಂತದಲ್ಲಿ ಯೋಗಾಭ್ಯಾಸ ಮಾಡುತ್ತಾರೆ. ಆದರೆ ಅನೇಕ ಸಲ ಇದು,ವಿಶೇಷವಾಗಿ ಪಾಶ್ಚಿಮಾತ್ಯರಿಗೆ ಸಾಧ್ಯವಿಲ್ಲ. ದೊಡ್ಡ ನಗರಗಳಲ್ಲಿರುವ ಯೋಗ ಸಂಘಗಳೆಂದು ಕರೆಯ ಲ್ಪಡುವವುಗಳು ಭೌತಿಕ ಪ್ರಯೋಜನಾರ್ಜನೆಯಲ್ಲಿ ಯಶಸ್ವಿಯಾಗಿರಬಹುದು, ಆದರೆ ಅವು ವಾಸ್ತವಿಕ ಯೋಗಾಭ್ಯಾಸಕ್ಕೆ ಎಂದಿಗೂ ಸೂಕ್ತವಲ್ಲ. ಆತ್ಮ ಸಂಯಮಿಯಲ್ಲದವನು ಮತ್ತು ಉದ್ವಿಗ್ನ ಮನಸ್ಸಿನವನು ಧ್ಯಾನಸಾಧನೆಮಾಡಲಾರನು. ಆದ್ದರಿಂದ, ಕಲಿಯುಗ ದಲ್ಲಿ (ವರ್ತಮಾನಯುಗ) ಸಾಮಾನ್ಯವಾಗಿ ಜನರು ಅಲ್ಪಾಯುಗಳು, ಆತ್ಮಸಾಕ್ಷಾತ್ಕಾರ ದಲ್ಲಿ ಮಂದರು, ಮತ್ತು ಅನೇಕ ಆತಂಕಗಳಿಂದ ಸದಾ ಕ್ಷೋಭಿತರಾಗಿರುವಾಗ, ಭಗವಂತನ ಪುಣ್ಯನಾಮ ಸಂಕೀರ್ತನೆಯೇ ಆತ್ಮಸಾಕ್ಷಾತ್ಕಾರಕ್ಕೆ ಅತ್ಯುತ್ತಮ ಮಾರ್ಗವಾಗಿದೆಯೆಂದು **ಬೃಹನ್ನಾರದೀಯ ಪುರಾಣ**ವಲ್ಲಿ ಹೇಳಿದೆ.

> ಹರೇರ್ ನಾಮ ಹರೇರ್ ನಾಮ ಹರೇರ್ ನಾಮೈವ ಕೇವಲಮ್।
> ಕಲೌ ನಾಸ್ತಿ ಏವ ನಾಸ್ತಿ ಏವ ನಾಸ್ತಿ ಏವ ಗತಿರ್ ಅನ್ಯಥಾ॥

"ಕದನ ಮತ್ತು ವಂಚನೆಯ ಈ ಯುಗದಲ್ಲಿ ಭಗವಂತನ ಪುಣ್ಯನಾಮ ಸಂಕೀರ್ತನೆಯೇ ಉದ್ಧಾರದ ಏಕೈಕ ಉಪಾಯವಾಗಿದೆ. ಅನ್ಯಮಾರ್ಗವಿಲ್ಲ. ಅನ್ಯಮಾರ್ಗವಿಲ್ಲ. ಅನ್ಯ ಮಾರ್ಗವಿಲ್ಲ."

> **ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ।**
> **ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ||೧೩||**
> **ಪ್ರಶಾನ್ತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ ।**
> **ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ||೧೪||**

ಸಮಮ್—ಋಜುವಾಗಿ, ಕಾಯ—ದೇಹ, ಶಿರಃ—ತಲೆ, ಗ್ರೀವಮ್—ಮತ್ತು ಕತ್ತು, ಧಾರಯನ್—ನಿಲ್ಲಿಸಿ, ಅಚಲಮ್—ಚಲಿಸದೆ, ಸ್ಥಿರಃ—ನಿಶ್ಚಲನಾಗಿ, ಸಂಪ್ರೇಕ್ಷ್ಯ —ನೋಡುತ್ತ, ನಾಸಿಕಾ—ಮೂಗಿನ, ಅಗ್ರಮ್—ತುದಿಯನ್ನು, ಸ್ವಮ್—ತನ್ನ, ದಿಶಃ —ಎಲ್ಲಾ ದಿಕ್ಕುಗಳಲ್ಲಿ, ಚ—ಹಾಗೂ, ಅನವಲೋಕಯನ್—ನೋಡದೆ, ಪ್ರಶಾನ್ತ— ಅನುದ್ವಿಗ್ನನಾಗಿ, ಆತ್ಮಾ—ಮನಸ್ಸು, ವಿಗತಭೀಃ—ಭಯರಹಿತನಾಗಿ, ಬ್ರಹ್ಮಚಾರಿವ್ರತೇ —ಬ್ರಹ್ಮಚರ್ಯವ್ರತದಲ್ಲಿ, ಸ್ಥಿತಃ—ಸನ್ನಿವೇಶಿತನಾಗಿ, ಮನಃ—ಮನಸ್ಸನ್ನು, ಸಂಯಮ್ಯ—ಸಂಪೂರ್ಣವಾಗಿ ನಿಗ್ರಹಿಸಿ, ಮತ್—ನನ್ನ ಮೇಲೆ, (ಕೃಷ್ಣ), ಚಿತ್ತಃ— ಮನಸ್ಸನ್ನು ಕೇಂದ್ರೀಕರಿಸಿ, ಯುಕ್ತಃ—ವಾಸ್ತವಿಕ ಯೋಗಿಯು, ಆಸೀತ—ಕುಳಿತುಕೊಳ್ಳ ಬೇಕು, ಮತ್—ನನ್ನ, ಪರಃ—ಅಂತಿಮ ಧ್ಯೇಯ.

**ಒಬ್ಬನು ತನ್ನ ದೇಹ, ಕತ್ತು ಮತ್ತು ತಲೆಯನ್ನು ನೇರವಾಗಿ ನಿಲ್ಲಿಸಬೇಕು ಮತ್ತು ಮೂಗಿನ ತುದಿಯನ್ನೇ ಸ್ಥಿರವಾಗಿ ದಿಟ್ಟಿಸಿ ನೋಡಬೇಕು. ಹೀಗೆ, ಅನುದ್ವಿಗ್ನ, ನಿಗ್ರಹಿಸಿದ ಮನಸ್ಸಿನಿಂದ, ಭಯರಹಿತನಾಗಿ, ಲೈಂಗಿಕ ಜೀವನದಿಂದ ಸಂಪೂರ್ಣ ಮುಕ್ತನಾಗಿ, ಒಬ್ಬನು ಹೃದಯದಲ್ಲಿ ನನ್ನನ್ನು ಧ್ಯಾನಿಸಬೇಕು ಮತ್ತು ನನ್ನನ್ನು ಜೀವನದ ಅಂತಿಮ ಧ್ಯೇಯವನ್ನಾಗಿ ಮಾಡಿಕೊಳ್ಳಬೇಕು.**

**ಭಾವಾರ್ಥ :** ಚತುರ್ಭುಜ ವಿಷ್ಣು ರೂಪದಲ್ಲಿ ಪರಮಾತ್ಮನಾಗಿ ಪ್ರತಿಯೊಬ್ಬ ಜೀವಿಯ ಹೃದಯದಲ್ಲಿ ಸನ್ನಿವೇಶಿತನಾಗಿರುವ ಕೃಷ್ಣನನ್ನು ತಿಳಿಯುವುದು ಜೀವನದಗುರಿ. ಈ ಸ್ಥಳೀಯ ವಿಷ್ಣುರೂಪವನ್ನು ಶೋಧನೆ ಮಾಡಲು ಮತ್ತು ನೋಡಲು ಯೋಗ ಪ್ರಕ್ರಿಯೆಯನ್ನು ಆಚರಿಸಲಾಗುತ್ತದೆಯೇ ವಿನಾ ಯಾವ ಇತರ ಉದ್ದೇಶಕ್ಕೂ ಅಲ್ಲ. ಒಬ್ಬನ ಹೃದಯದಲ್ಲಿ ನೆಲೆಸಿರುವ **ವಿಷ್ಣುಮೂರ್ತಿ**ಯು, ಕೃಷ್ಣನ ಸಮಗ್ರ ಪ್ರತಿನಿಧಿ. ಈ **ವಿಷ್ಣುಮೂರ್ತಿ**ಯನ್ನು ಸಾಕ್ಷಾತ್ಕರಿಸುವ ಯೋಜನೆಯಿಲ್ಲದವನು ನಿರರ್ಥಕ ಅಣಕು ಯೋಗಾಭ್ಯಾಸ ನಿರತನಾಗಿರುತ್ತಾನೆ ಮತ್ತು ತನ್ನ ಕಾಲವನ್ನು ಖಂಡಿತ ವ್ಯರ್ಥ ಮಾಡುತ್ತಿದ್ದಾನೆ. ಕೃಷ್ಣನು ಜೀವನದ ಅಂತಿಮ ಗುರಿ, ಮತ್ತು ಒಬ್ಬನ ಹೃದಯ ಸನ್ನಿವೇಶಿತನಾದ **ವಿಷ್ಣುಮೂರ್ತಿ**ಯು ಯೋಗಾಭ್ಯಾಸದ ಧ್ಯೇಯ. ಹೃದಯದಲ್ಲಿನ ಈ **ವಿಷ್ಣುಮೂರ್ತಿ**ಯನ್ನು ಸಾಕ್ಷಾತ್ಕರಿಸಿಕೊಳ್ಳಲು, ಒಬ್ಬನು ಸಂಪೂರ್ಣವಾಗಿ ಲೈಂಗಿಕ ಜೀವನವನ್ನು ವರ್ಜಿಸಬೇಕು; ಆದ್ದರಿಂದ ಒಬ್ಬನು ಗೃಹವನ್ನು ತ್ಯಜಿಸಿ, ಏಕಾಂಗಿಯಾಗಿ ಏಕಾಂತ ಸ್ಥಳದಲ್ಲಿ ಮೇಲೆ ಹೇಳಿದಂತೆ ಆಸೀನನಾಗಿರಬೇಕು. ಒಬ್ಬನು ದಿನವೂ ಮನೆಯಲ್ಲಿ ಅಥವಾ ಬೇರೆಡೆಯಲ್ಲಿ ಲೈಂಗಿಕ ಜೀವನವನ್ನು ಭೋಗಿಸುತ್ತಾ, ಯೋಗ ತರಗತಿಗಳು ಎಂದು ಹೇಳಲ್ಪಡುವಲ್ಲಿಗೆ ಹೋಗಿ ಹೀಗೆ **ಯೋಗಿ** ಯಾಗಲಾರನು. ಒಬ್ಬನು ಮನೋ ನಿಯಂತ್ರಣವನ್ನು ಮತ್ತು ಲೈಂಗಿಕ ಜೀವನವೇ ಮುಖ್ಯವಾಗಿರುವ ಎಲ್ಲ ಬಗೆಯ ಇಂದ್ರಿಯ ತೋಷಣಗಳನ್ನು ವರ್ಜಿಸುವುದನ್ನು ಅಭ್ಯಾಸ ಮಾಡಬೇಕು. ಮಹರ್ಷಿ ಯಾಜ್ಞವಲ್ಕ್ಯರ ಬ್ರಹ್ಮಚರ್ಯದ ನಿಯಮಗಳಲ್ಲಿ ಹೀಗೆ ಹೇಳಿದೆ :

ಕರ್ಮಣಾ ಮನಸಾ ವಾಚಾ ಸರ್ವಾವಸ್ಥಾಸು ಸರ್ವದಾ।
ಸರ್ವತ್ರ ಮೈಥುನತ್ಯಾಗೋ ಬ್ರಹ್ಮಚರ್ಯಂ ಪ್ರಚಕ್ಷತೇ॥

"ಬ್ರಹ್ಮಚರ್ಯ ವ್ರತವು, ಒಬ್ಬನು ಸಂಪೂರ್ಣವಾಗಿ—ಎಲ್ಲ ಕಾಲಗಳಲ್ಲಿ, ಎಲ್ಲ ಸಂದರ್ಭ ಗಳಲ್ಲಿ ಮತ್ತು ಎಲ್ಲ ಸ್ಥಳಗಳಲ್ಲಿ—ಕ್ರಿಯೆ, ವಾಚಾ ಮತ್ತು ಮನಸ್ಸಿನಲ್ಲಿ ಕಾಮ ಲಂಪಟನೆ ಯಿಂದ ದೂರವಿರಲು ಸಹಾಯಕವಾಗಲು ಉದ್ದಿಶ್ಯವಾಗಿದೆ." ಕಾಮ ಲಂಪಟನೆಯೊಡನೆ ಯಾರೂ ಸರಿಯಾದ ಯೋಗಾಚರಣೆಯನ್ನು ಮಾಡಲಾಗದು. ಆದ್ದರಿಂದ ಒಬ್ಬನಿಗೆ ಲೈಂಗಿಕ ಜೀವನದ ಜ್ಞಾನವಿರದ ಬಾಲ್ಯದಿಂದಲೇ ಬ್ರಹ್ಮಚರ್ಯ ವ್ರತವನ್ನು ಬೋಧಿಸ ಲಾಗುತ್ತದೆ. ಐದು ವರ್ಷ ವಯಸ್ಸಿನ ಮಕ್ಕಳನ್ನು ಗುರುಕುಲಕ್ಕೆ ಅಥವಾ ಗುರುಗಳ ಸ್ಥಳಕ್ಕೆ ಕಳುಹಿಸಲಾಗುತ್ತದೆ, ಮತ್ತು ಗುರುಗಳು ಎಳೆಯ ಹುಡುಗರಿಗೆ ಬ್ರಹ್ಮಚಾರಿ ಗಳಾಗಲು ಕಠೋರ ಶಿಸ್ತಿನ ತರಬೇತಿ ನೀಡುತ್ತಾರೆ. ಅಂಥ ಅಭ್ಯಾಸವಿಲ್ಲದೆ, ಯಾರೂ

**ಕೂಡ**—ಧ್ಯಾನ, ಜ್ಞಾನ ಅಥವಾ ಭಕ್ತಿಯೋಗ—ಯಾವುದರಲ್ಲಿಯೂ **ಪ್ರಗತಿ** ಹೊಂದಲಾರನು. ಆದರೆ ವಿವಾಹಿತ ಜೀವನದ ನಿಯಮ ನಿಯಂತ್ರಣಗಳನ್ನು ಅನುಸರಿಸುವವನು, ತನ್ನ ಹೆಂಡತಿಯೊಂದಿಗೆ ಮಾತ್ರ ಲೈಂಗಿಕ ಸಂಬಂಧ ಹೊಂದಿರುವವನು (ಅದೂ ಕೂಡ ನಿಯಂತ್ರಣಕ್ಕೆ ಒಳಪಟ್ಟು), ಕೂಡ ಬ್ರಹ್ಮಚಾರಿ ಎನಿಸುತ್ತಾನೆ. ಅಂಥ ನಿರ್ಬಂಧಿತ ಗೃಹಸ್ಥ ಬ್ರಹ್ಮಚಾರಿಯನ್ನು ಭಕ್ತಿ ಪಂಥಕ್ಕೆ ಸೇರಿಸಿಕೊಳ್ಳಬಹುದು, ಆದರೆ ಜ್ಞಾನ ಮತ್ತು ಧ್ಯಾನ ಪಂಥಗಳು ಗೃಹಸ್ಥ ಬ್ರಹ್ಮಚಾರಿಗಳನ್ನು ಕೂಡ ಸೇರಿಸಿ ಕೊಳ್ಳುವುದಿಲ್ಲ. ಅವು ಕಿಂಚಿತ್ತೂ ಅವಕಾಶವಿಲ್ಲದೆ ಸಂಪೂರ್ಣ ವರ್ಜನೆಯು ಅಗತ್ಯ ವೆನ್ನುತ್ತವೆ. ಭಕ್ತಿಪಂಥದಲ್ಲಿ ಗೃಹಸ್ಥ ಬ್ರಹ್ಮಚಾರಿಗೆ ನಿಯಂತ್ರಿತ ಲೈಂಗಿಕ ಜೀವನಕ್ಕೆ ಅನುಮತಿಯುಂಟು, ಏಕೆಂದರೆ ಭಕ್ತಿಯೋಗವು ಅದೆಷ್ಟು ಶಕ್ತಿಶಾಲಿಯೆಂದರೆ ಒಬ್ಬನು, ಭಗವಂತನ ಶ್ರೇಷ್ಠ ಸೇವೆಯಲ್ಲಿ ನಿರತನಾಗಿ, ತಾನಾಗಿಯೇ ಲೈಂಗಿಕ ಆಕರ್ಷಣೆಯನ್ನು ಕಳೆದುಕೊಳ್ಳುತ್ತಾನೆ. ಭಗವದ್ಗೀತೆಯಲ್ಲಿ (2.59) ಹೀಗೆ ಹೇಳಿದೆ :

ವಿಷಯಾ ವಿನಿವರ್ತನ್ತೇ ನಿರಾಹಾರಸ್ಯ ದೇಹಿನಃ।
ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ॥

ಇತರರು ಇಂದ್ರಿಯ ತೋಷಣೆಯಿಂದ ತಮ್ಮನ್ನು ನಿರ್ಬಂಧಿಸಿಕೊಳ್ಳಲು ಒತ್ತಾಯಿಸಲ್ಪಟ್ಟಿದ್ದಾರೆ, ಆದರೆ ಭಗವದ್ಭಕ್ತನು ಶ್ರೇಷ್ಠ ಅಭಿರುಚಿಯ ನಿಮಿತ್ತ ತಾನಾಗಿಯೇ ನಿರ್ಬಂಧಿಸಿ ಕೊಳ್ಳುತ್ತಾನೆ. ಭಕ್ತನನ್ನುಳಿದು ಬೇರೆ ಯಾರಿಗೂ ಆ ಶ್ರೇಷ್ಠ ರುಚಿಯ ಬಗ್ಗೆ ಏನೂ ಗೊತ್ತಿರುವುದಿಲ್ಲ.

**ವಿಗತಭೀಃ.** ಒಬ್ಬನು ಪೂರ್ಣವಾಗಿ ಕೃಷ್ಣಪ್ರಜ್ಞೆಯಲ್ಲಿದ್ದ ಹೊರತು ಅವನು ಭಯರಹಿತನಾಗಲಾರನು. ಬದ್ಧಾತ್ಮನು ತನ್ನ ವಕ್ರ ಸ್ಮೃತಿ, ಕೃಷ್ಣನೊಂದಿಗೆ ತನ್ನ ನಿತ್ಯ ಸಂಬಂಧದ ವಿಸ್ಮೃತಿ ಕಾರಣದಿಂದ, ಭಯಗ್ರಸ್ತನು. **ಭಯಂ ದ್ವಿತೀಯಾಭಿನಿವೇಶತಃ ಸ್ಯಾದೀಶಾದ್ ಅಪೇತಸ್ಯ ವಿಪರ್ಯಯೋಽಸ್ಮೃತಿಃ** ಎಂದು ಭಾಗವತವು (11. 2. 37) ಹೇಳುತ್ತದೆ. ನಿರ್ಭಯತ್ವಕ್ಕೆ ಕೃಷ್ಣಪ್ರಜ್ಞೆಯೊಂದೇ ಆಧಾರ. ಕೃಷ್ಣಪ್ರಜ್ಞೆಗೆ ಮಾತ್ರ ಪರಿಪೂರ್ಣ ಆಚರಣೆಯು ಸಾಧ್ಯ. ಯೋಗಾಭ್ಯಾಸದ ಅಂತಿಮ ಗುರಿಯು ಅಂತರ್ಯಾಮಿ ಭಗವಂತನನ್ನು ಕಾಣುವುದಾಗಿರುವುದರಿಂದ, ಕೃಷ್ಣಪ್ರಜ್ಞೆಯು ಆಗಲೇ ಯೋಗಿಗಳಲ್ಲೆಲ್ಲಾ ಶ್ರೇಷ್ಠನು. ಇಲ್ಲಿ ಪ್ರಸ್ತಾಪಿತ ಯೋಗ ಪದ್ಧತಿಯ ತತ್ವಗಳು ಜನಪ್ರಿಯ ಯೋಗ ಸಂಘ ಎಂದು ಕರೆಯುವುದರ ತತ್ವಗಳಿಂದ ಭಿನ್ನವಾಗಿರುತ್ತವೆ.

**ಯುಞ್ಜನ್ನೇವಂ ಸದಾತ್ಮಾನಂ ಯೋಗೀ ನಿಯತಮಾನಸಃ ।**
**ಶಾನ್ತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ॥ ೧೫ ॥**

ಯುಞ್ಜನ್—ಅಭ್ಯಾಸ ಮಾಡುತ್ತಾ, ಏವಮ್—ಮೇಲೆ ಹೇಳಿದಂತೆ, ಸದಾ—ಸತತವಾಗಿ, ಆತ್ಮಾನಮ್—ದೇಹ, ಮನಸ್ಸು ಮತ್ತು ಆತ್ಮ, ಯೋಗೀ—ದಿವ್ಯವಾದಿ ಯೋಗಿ, ನಿಯತಮಾನಸಃ—ನಿಯಂತ್ರಿತ ಮನಸ್ಸಿನೊಡನೆ, ಶಾನ್ತಿಮ್—ಶಾಂತಿ, ನಿರ್ವಾಣಪರಮಾಂ—ಭೌತಿಕ ಅಸ್ತಿತ್ವದ ನಿಲುಗಡೆ, ಮತ್‌ಸಂಸ್ಥಾಮ್—ಪರವ್ಯೋಮ (ಭಗವದ್ಧಾಮ), ಅಧಿಗಚ್ಛತಿ—ಸೇರುತ್ತಾನೆ.

**ಹೀಗೆ ದೇಹ, ಮನಸ್ಸು ಮತ್ತು ಚಟುವಟಿಕೆಗಳ ಸತತ ನಿಯಂತ್ರಣವನ್ನು ಅಭ್ಯಾಸ ಮಾಡುತ್ತಾ, ದಿವ್ಯವಾದಿ ಯೋಗಿಯು ತನ್ನ ಮನಸ್ಸು ನಿಯಂತ್ರಿತವಾಗಿದ್ದು, ಭೌತಿಕ ಅಸ್ತಿತ್ವವನ್ನು ನಿಲ್ಲಿಸಿ ಭಗವದ್ಧಾಮವನ್ನು (ಅಥವಾ ಕೃಷ್ಣಧಾಮ) ಸೇರುತ್ತಾನೆ.**

**ಭಾವಾರ್ಥ :** ಯೋಗಾಭ್ಯಾಸದ ಅಂತಿಮ ಗುರಿಯು ಈಗ ಸ್ಪಷ್ಟವಾಗಿ ವಿವರಿಸಲ್ಪಟ್ಟಿದೆ. ಯೋಗಾಭ್ಯಾಸವು ಯಾವುದೇ ಬಗೆಯ ಭೌತಿಕ ಸೌಲಭ್ಯ ಹೊಂದಲು ಉದ್ದಿಷ್ಟವಲ್ಲ: ಅದು ಎಲ್ಲ ಭೌತಿಕ ಅಸ್ತಿತ್ವವನ್ನು ಕೊನೆಗಾಣಿಸಲು ಇದೆ. ಆರೋಗ್ಯದಲ್ಲಿ ಸುಧಾರಣೆ ಬಯಸುವವನು ಅಥವಾ ಭೌತಿಕ ಪರಿಪೂರ್ಣತೆಯನ್ನು ಆಶಿಸುವವನು ಭಗವದ್ಗೀತೆಯ ಪ್ರಕಾರ ಯೋಗಿಯಲ್ಲ, ಅಥವಾ ಭೌತಿಕ ಅಸ್ತಿತ್ವದ ಕೊನೆಯು ಒಬ್ಬನ "ಶೂನ್ಯ" ದೊಳಗೆ ಪ್ರವೇಶವನ್ನೊಳಗೊಂಡಿಲ್ಲ. ಅದು ಕೇವಲ ಕಟ್ಟುಕಥೆ. ಭಗವಂತನ ಸೃಷ್ಟಿಯಲ್ಲಿ ಎಲ್ಲಿಯೂ ಶೂನ್ಯವೆಂಬುದಿಲ್ಲ. ಬದಲಿಗೆ, ಭೌತಿಕ ಅಸ್ತಿತ್ವದ ಕೊನೆಯು ಪರವ್ಯೋಮವನ್ನು, ಭಗವದ್ಧಾಮವನ್ನು ಪ್ರವೇಶಿಸಲು ಒಬ್ಬನನ್ನು ಸಮರ್ಥಗೊಳಿಸುವುದು. ಅಲ್ಲಿ ಸೂರ್ಯ, ಚಂದ್ರ ಅಥವಾ ವಿದ್ಯುಚ್ಛಕ್ತಿಯ ಅವಶ್ಯಕತೆ ಇಲ್ಲವೆಂದು ಭಗವದ್ಧಾಮವನ್ನು ಭಗವದ್ಗೀತೆಯಲ್ಲಿ ಸ್ಪಷ್ಟವಾಗಿ ವರ್ಣಿಸಿದೆ. ಆಧ್ಯಾತ್ಮ ಸಾಮ್ರಾಜ್ಯದಲ್ಲಿ ಎಲ್ಲ ಲೋಕಗಳು ಭೌತಿಕ ಆಕಾಶದ ಸೂರ್ಯನಂತೆ ಸ್ವಯಂ ಪ್ರಕಾಶಿತ. ಭಗವಂತನ ರಾಜ್ಯವು ಎಲ್ಲೆಲ್ಲಿಯೂ ಇದೆ, ಆದರೆ ಪರವ್ಯೋಮ ಮತ್ತು ಅದರಲ್ಲಿನ ಲೋಕಗಳನ್ನು **ಪರಂಧಾಮ** ಎಂದು ಕರೆದಿದೆ,

ಭಗವಾನ್ ಶ್ರೀಕೃಷ್ಣನನ್ನು ಅರಿಯುವುದರಲ್ಲಿ ಪರಿಪೂರ್ಣನಾಗಿರುವ ಒಬ್ಬ ಪರಿಪಕ್ವ ಯೋಗಿಯು, ಸ್ವಯಂ ಭಗವಂತನಿಂದಲೇ ಇಲ್ಲಿ ಸ್ಪಷ್ಟವಾಗಿ ಹೇಳಿರುವಂತೆ (**ಮತ್ ಚಿತ್ತಃ, ಮತ್ ಪರಃ, ಮತ್ ಸ್ಥಾನಮ್**) ನಿಜ ಶಾಂತಿಯನ್ನು ಹೊಂದಬಲ್ಲನು ಮತ್ತು ಅಂತಿಮವಾಗಿ ಕೃಷ್ಣಲೋಕ, ಗೋಲೋಕ ವೃಂದಾವನವೆಂಬ ಅವನ ಪರಮ ಧಾಮವನ್ನು ತಲುಪ ಬಲ್ಲನು. ಬ್ರಹ್ಮಸಂಹಿತೆಯಲ್ಲಿ (5.37), **ಗೋಲೋಕ ಏವ ನಿವಸತಿ ಅಖಿಲಾತ್ಮಭೂತಃ,** ಎಂದು ಸ್ಪಷ್ಟವಾಗಿ ಹೇಳಿದೆ : ಭಗವಂತನು, ಗೋಲೋಕವೆಂಬ ತನ್ನ ಧಾಮದಲ್ಲಿ ಸದಾ ನಿವಾಸವಾಗಿದ್ದರೂ ತನ್ನ ಶ್ರೇಷ್ಠ ಆಧ್ಯಾತ್ಮ ಶಕ್ತಿಗಳ ಮೂಲಕ ಸರ್ವವ್ಯಾಪಿ ಬ್ರಹ್ಮನ್ ಮತ್ತು ಸ್ಥಳೀಯ ರೂಪ ಪರಮಾತ್ಮನೂ ಆಗಿರುವನು. ಕೃಷ್ಣನನ್ನು ಮತ್ತು ಅವನ ಸಮಗ್ರ ವಿಸ್ತರಣೆಯಾದ ವಿಷ್ಣುವನ್ನು ಸರಿಯಾಗಿ ಅರಿತುಕೊಳ್ಳದೆ ಯಾರೂ ಕೂಡ ಪರವ್ಯೋಮವನ್ನು (ವೈಕುಂಠ) ತಲುಪಲಾರನು ಅಥವಾ ಭಗವಂತನ ನಿತ್ಯ ಧಾಮವನ್ನು (ಗೋಲೋಕ—ವೃಂದಾವನ) ಪ್ರವೇಶಿಸಲಾರನು. ಆದ್ದರಿಂದ, ಕೃಷ್ಣಪ್ರಜ್ಞೆಯಲ್ಲಿ ಕಾರ್ಯ ಮಾಡುವವನು ಪರಿಪೂರ್ಣ ಯೋಗಿ, ಏಕೆಂದರೆ ಅವನ ಮನಸ್ಸು ಕೃಷ್ಣನ ಚಟುವಟಿಕೆಗಳಲ್ಲಿ ಸದಾ ತಲ್ಲೀನವಾಗಿರುತ್ತದೆ (**ಸ ವೈ ಮನಃ ಕೃಷ್ಣಪದಾರವಿನ್ದಯೋಃ**) ವೇದಗಳಲ್ಲಿ ಕೂಡ (ಶ್ವೇತಾಶ್ವತರ ಉಪನಿಷದ್ 3.8), **ತಮ್ ಏವ ವಿದಿತ್ವಾತಿ ಮೃತ್ಯುಮ್ ಏತಿ,** ಎಂದರೆ, "ಪರಮ ದೇವೋತ್ತಮ ಪುರುಷ ಕೃಷ್ಣನನ್ನು ಅರಿಯುವುದ

ರಿಂದ ಮಾತ್ರವೇ ಒಬ್ಬನು ಜನನ ಮರಣಗಳ ಪಥವನ್ನು ದಾಟಬಹುದು," ಎಂದು ನಾವು ತಿಳಿಯುತ್ತೇವೆ. ಅರ್ಥಾತ್, ಯೋಗ ಪದ್ಧತಿಯು ಪರಿಪೂರ್ಣತೆ ಎಂದರೆ ಭೌತಿಕ ಅಸ್ತಿತ್ವದಿಂದ ವಿಮೋಚನೆಯನ್ನು ಹೊಂದುವುದೇ ಹೊರತು ಮುಗ್ಧ ಜನರನ್ನು ಮರುಳು ಮಾಡಲು ಏನೋ ಒಂದು ಇಂದ್ರಜಾಲಿಕ ಗಾರುಡಿ ವಿದ್ಯೆ ಅಥವಾ ಅಂಗಸಾಧನೆಯ ಕಸರತ್ತುಗಳು ಆಗಿರುವುದಿಲ್ಲ.

**ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾನ್ತಮನಶ್ನತಃ ।**
**ನ ಚಾತಿಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥ ೧೬ ॥**

ನ—ಎಂದಿಗೂ ಇಲ್ಲ, ಅತಿ—ಅತಿಯಾಗಿ. ಅಶ್ನತಃ—ತಿನ್ನುವವನ, ತು—ಆದರೆ, ಯೋಗಃ—ಪರಮನೊಂದಿಗೆ ಸಂಪರ್ಕವು, ಅಸ್ತಿ—ಇರುವುದು, ನ—ಇಲ್ಲ, ಚ—ಕೂಡ, ಏಕಾನ್ತಮ್—ಅತಿ ಹೆಚ್ಚಾಗಿ, ಅನಶ್ನತಃ—ತಿನ್ನದಿರುವುದು, ನ—ಇಲ್ಲ, ಚ—ಕೂಡ, ಅತಿ—ಅತಿ ಹೆಚ್ಚಾಗಿ, ಸ್ವಪ್ನ ಶೀಲಸ್ಯ—ನಿದ್ರಿಸುವವನ, ಜಾಗ್ರತಃ—ಅಥವಾ ರಾತ್ರಿ ಅತಿಯಾಗಿ ಜಾಗರ ಮಾಡುವವನ, ನ—ಇಲ್ಲ, ಏವ—ಎಂದೂ, ಚ—ಮತ್ತು, ಅರ್ಜುನ—ಹೇ ಅರ್ಜುನ.

**ಹೇ ಅರ್ಜುನ, ಅತಿ ಹೆಚ್ಚಾಗಿ ಅಥವಾ ಅತಿ ಕಡಿಮೆಯಾಗಿ ತಿನ್ನುವ, ಅತಿ ನಿದ್ರಿಸುವ, ಅಥವಾ ಸಾಕಷ್ಟು ನಿದ್ರಿಸದ ಒಬ್ಬನು ಯೋಗಿಯಾಗುವುದು ಅಸಂಭವ.**

**ಭಾವಾರ್ಥ :** ಇಲ್ಲಿ ಯೋಗಿಗಳಿಗೆ ಆಹಾರ ಮತ್ತು ನಿದ್ರೆಯ ನಿಯಂತ್ರಣವನ್ನು ಹೇಳಿದೆ. ಅತಿಯಾಗಿ ತಿನ್ನುವುದು ಎಂದರೆ ದೇಹಾತ್ಮಗಳನ್ನು ಒಟ್ಟಾಗಿ ಇರಿಸಲು ಅಗತ್ಯ ವಾದುದಕ್ಕಿಂತ ಹೆಚ್ಚಾಗಿ ತಿನ್ನುವುದು. ಮನುಷ್ಯನು ಪ್ರಾಣಿಗಳನ್ನು ತಿನ್ನುವ ಅಗತ್ಯವಿಲ್ಲ, ಏಕೆಂದರೆ ಆಹಾರಧಾನ್ಯಗಳು, ತರಕಾರಿಗಳು, ಹಣ್ಣುಗಳು ಮತ್ತು ಹಾಲಿನ ಸಾಕಷ್ಟು ಪೂರೈಕೆ ಇದೆ. ಇಂಥ ಸರಳ ಆಹಾರ ಪದಾರ್ಥಗಳು ಭಗವದ್ಗೀತೆಯ ಪ್ರಕಾರ, ಸತ್ವಗುಣದಲ್ಲಿವೆ ಎಂದು ಪರಿಗಣಿಸಲ್ಪಟ್ಟಿವೆ. ಪ್ರಾಣಿ ಆಹಾರವು ತಮೋಗುಣದಲ್ಲಿ ನವರಿಗೆ, ಆದ್ದರಿಂದ ಪ್ರಾಣಿ ಆಹಾರ, ಮದ್ಯಪಾನ, ಧೂಮಪಾನ, ಮತ್ತು ಮೊದಲು ಕೃಷ್ಣಾರ್ಪಿತವಲ್ಲದ ಆಹಾರ ಸೇವನೆಯಲ್ಲಿ ಕಲುಷಿತ ಪದಾರ್ಥಗಳನ್ನು ಸೇವಿಸುತ್ತಿರುವುದರಿಂದ, ಪಾಪಪೂರ್ಣ ಪ್ರತಿಕ್ರಿಯೆಗಳನ್ನು ಅನುಭವಿಸುತ್ತಾರೆ. **ಭುಂಜತೇ ತೇ ತ್ವಘಂ ಪಾಪಾ ಯೇ ಪಚನ್ತಿ ಆತ್ಮಕಾರಣಾತ್.** ಇಂದ್ರಿಯ ಆನಂದಕ್ಕಾಗಿ ತಿನ್ನುವವನು, ಅಥವಾ ತನ್ನ ಆಹಾರವನ್ನು ಕೃಷ್ಣಾರ್ಪಣೆ ಮಾಡದೆ ತನಗಾಗಿ ಅಡಿಗೆ ಮಾಡಿಕೊಳ್ಳುವವನು ಪಾಪವನ್ನೇ ತಿನ್ನುತ್ತಾನೆ. ಪಾಪವನ್ನು ತಿನ್ನುವವನು ಮತ್ತು ತನಗೆ ನಿಗದಿಯಾದುದಕ್ಕಿಂತ ಹೆಚ್ಚು ತಿನ್ನುವವನು ಪರಿಪೂರ್ಣಯೋಗವನ್ನು ಆಚರಿಸ ಲಾರನು. ಕೃಷ್ಣಾರ್ಪಿತ ಆಹಾರದ ಶೇಷವನ್ನು ತಿನ್ನುವುದು ಮಾತ್ರವೇ ಅತ್ಯುತ್ತಮ. ಕೃಷ್ಣಪ್ರಜ್ಞೆಯು ಮೊದಲು ಕೃಷ್ಣಾರ್ಪಿತವಲ್ಲದ ಯಾವುದನ್ನೂ ತಿನ್ನುವುದಿಲ್ಲ. ಆದ್ದರಿಂದ ಕೃಷ್ಣಪ್ರಜ್ಞೆಯು ಮಾತ್ರವೇ ಯೋಗಾಚರಣೆಯಲ್ಲಿ ಪರಿಪೂರ್ಣತೆಯನ್ನು ಹೊಂದಬಲ್ಲನು. ಅಥವಾ ಕೃತಕವಾಗಿ ತಿನ್ನದಿರುವವನು, ಉಪವಾಸದ ಪ್ರಕ್ರಿಯೆಯನ್ನು

ಸ್ವಯಂ ತಯಾರಿಸಿಕೊಳ್ಳುವವನು ಯೋಗಾಭ್ಯಾಸ ಮಾಡಲಾರನು. ಕೃಷ್ಣಪ್ರಾಜ್ಞಿಯು ಶಾಸ್ತ್ರಪ್ರೋಕ್ತವಾದ ಉಪವಾಸವನ್ನು ಆಚರಿಸುತ್ತಾನೆ. ಅವನು ಅಗತ್ಯಕ್ಕಿಂತ ಹೆಚ್ಚು ಉಪವಾಸ ಮಾಡುವುದಿಲ್ಲ ಅಥವಾ ಹೆಚ್ಚು ತಿನ್ನುವುದಿಲ್ಲ, ಮತ್ತು ಅವನು ಹೀಗೆ ಯೋಗಾಭ್ಯಾಸಕ್ಕೆ ಅರ್ಹನು. ಅಗತ್ಯಕ್ಕಿಂತ ಹೆಚ್ಚು ತಿನ್ನುವವನು ನಿದ್ರಿಸುವಾಗ ಅತಿಯಾಗಿ ಕನಸು ಕಾಣುತ್ತಾನೆ, ಮತ್ತು ಅದರ ಪರಿಣಾಮವಾಗಿ ಅವನು ಅಗತ್ಯಕ್ಕಿಂತ ಹೆಚ್ಚು ನಿದ್ರಿಸಬೇಕಾಗುತ್ತದೆ. ಒಬ್ಬನು ದಿನಕ್ಕೆ ಆರು ಗಂಟೆಗಳಿಗಿಂತ ಹೆಚ್ಚು ನಿದ್ರಿಸಕೂಡದು. ಇಪ್ಪತ್ತನಾಲ್ಕು ಗಂಟೆಗಳಲ್ಲಿ ಆರು ಗಂಟೆಗಳಿಗಿಂತ ಹೆಚ್ಚು ನಿದ್ರಿಸುವವನು ಖಂಡಿತವಾಗಿ ತಮೋ ಗುಣದಿಂದ ಪ್ರಭಾವಿತನು. ತಮೋಗುಣವಲ್ಲಿನ ವ್ಯಕ್ತಿಯು ಸೋಮಾರಿ ಮತ್ತು ಅತಿಯಾಗಿ ನಿದ್ರಿಸುವ ಪ್ರವೃತ್ತಿಯುಳ್ಳವನು. ಅಂಥ ವ್ಯಕ್ತಿಯು ಯೋಗವನ್ನು ಆಚರಿಸಲಾರನು.

**ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।**
**ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥ ೧೭ ॥**

ಯುಕ್ತ—ನಿಯಂತ್ರಿತ, ಆಹಾರ—ತಿನ್ನುವಿಕೆ, ವಿಹಾರಸ್ಯ—ವಿಹಾರದ, ಯುಕ್ತ—ನಿಯಂತ್ರಿತ, ಚೇಷ್ಟಸ್ಯ—ಪೋಷಣೆಗಾಗಿ ಕಾರ್ಯ ಮಾಡುವವನ, ಕರ್ಮಸು—ಕರ್ತವ್ಯ ನಿರ್ವಹಣೆಯಲ್ಲಿ, ಯುಕ್ತ—ನಿಯಂತ್ರಿತ, ಸ್ವಪ್ನ ಅವಬೋಧಸ್ಯ—ನಿದ್ರೆ ಮತ್ತು ಎಚ್ಚರ, ಯೋಗಃ—ಯೋಗಾಭ್ಯಾಸ, ಭವತಿ—ಆಗುತ್ತದೆ, ದುಃಖಹಾ—ನೋವುಗಳನ್ನೂ ಕಡಿಮೆ ಮಾಡುವುದು.

**ತಿನ್ನುವ, ನಿದ್ರಿಸುವ, ವಿಹಾರದ ಮತ್ತು ಕೆಲಸಮಾಡುವ ತನ್ನ ಅಭ್ಯಾಸಗಳಲ್ಲಿ ನಿಯಂತ್ರಣವುಳ್ಳವನು ಯೋಗ ಪದ್ಧತಿಯ ಆಚರಣೆಯಿಂದ ಎಲ್ಲ ಭೌತಿಕ ನೋವುಗಳನ್ನು ಶಮನ ಮಾಡಬಹುದು.**

**ಭಾವಾರ್ಥ :** ದೇಹದ ಬೇಡಿಕೆಗಳಾದ ಆಹಾರ, ನಿದ್ರೆ, ರಕ್ಷಣೆ, ಮೈಥುನ ವಿಷಯಗಳಲ್ಲಿ ಹದ್ದುಮೀರುವಿಕೆಯು ಯೋಗಾಚರಣೆಯ ಮುನ್ನಡೆಯನ್ನು ತಡಗಟ್ಟಬಹುದು. ತಿನ್ನುವ ವಿಚಾರದಲ್ಲಿ, ಒಬ್ಬನು ಪ್ರಸಾದವನ್ನು ಸ್ವೀಕರಿಸುವ ಅಭ್ಯಾಸವನ್ನು ಇಟ್ಟುಕೊಂಡಿದ್ದರೆ ಮಾತ್ರ, ಅದನ್ನು ನಿಯಂತ್ರಿಸಬಹುದು. ಭಗವದ್ಗೀತಾನುಸಾರ (9.26) ಕೃಷ್ಣನಿಗೆ ತರಕಾರಿಗಳು, ಹೂವುಗಳು, ಹಣ್ಣುಗಳು, ಧಾನ್ಯಗಳು, ಹಾಲು ಇತ್ಯಾದಿಗಳನ್ನು ಅರ್ಪಿಸಲಾಗುವುದು. ಹೀಗೆ, ಕೃಷ್ಣಪ್ರಾಜ್ಞಿಯು ಮಾನವನ ಬಳಕೆಗೆ ಉದ್ದಿಷ್ಟವಲ್ಲದ, ಅಥವಾ ಸತ್ವಗುಣ ಶ್ರೇಣಿಯಲ್ಲಿ ಇಲ್ಲದ ಆಹಾರವನ್ನು ಸ್ವೀಕರಿಸದಂತೆ ತಾನಾಗಿಯೇ ತರಬೇತಿ ಹೊಂದುತ್ತಾನೆ. ನಿದ್ರೆಯ ವಿಚಾರದಲ್ಲಿ, ಕೃಷ್ಣಪ್ರಾಜ್ಞಿಯು ಕೃಷ್ಣಪ್ರಜ್ಞೆಯಲ್ಲಿ ತನ್ನ ಕರ್ತವ್ಯ ನಿರ್ವಹಣೆಯಲ್ಲಿ ಸದಾ ಜಾಗ್ರತನು, ಆದ್ದರಿಂದ ನಿದ್ರೆಯಲ್ಲಿ ಅನವಶ್ಯಕವಾಗಿ ಕಾಲಹರಣವು ಮಹಾ ನಷ್ಟವೆಂದು ಎಣಿಸಲ್ಪಡುವುದು. **ಅವ್ಯರ್ಥ ಕಾಲಾತ್ವಮ್,** ಕೃಷ್ಣಪ್ರಾಜ್ಞಿಯು ಭಗವತ್ ಸೇವಾ ನಿರತನಾಗಿರದೆ ತನ್ನ ಜೀವನದ ಒಂದು ನಿಮಿಷವನ್ನೂ ಕೂಡ ಕಳೆಯಲು ಸಹಿಸುವುದಿಲ್ಲ. ಆದ್ದರಿಂದ, ಅವನ ನಿದ್ರೆಯು ಅಲ್ಪ

ತಮ. ಈ ವಿಷಯದಲ್ಲಿ ಸದಾ ಕೃಷ್ಣ ಸೇವಾನಿರತರು ಮತ್ತು ದಿನಕ್ಕೆ ಎರಡು ಗಂಟೆಗಿಂತ ಹೆಚ್ಚು ನಿದ್ರಿಸದ ಮತ್ತು ಕೆಲವು ಸಮಯಗಳಲ್ಲಿ ಅಷ್ಟೂ ಸಹ ನಿದ್ರಿಸದಿದ್ದ ಶ್ರೀಲ ರೂಪ ಗೋಸ್ವಾಮಿಯವರು ಅವನ ಆದರ್ಶ. ಠಾಕೂರ ಹರಿದಾಸರು, ತಪ್ಪ ದಿನಚರಿಯಂತೆ ಜಪಮಾಲೆಯೊಡನೆ ಮೂರು ಲಕ್ಷ ಸಲ ನಾಮ ಜಪವನ್ನು ಮುಗಿಸದ ಹೊರತು ಪ್ರಸಾದ ವನ್ನು ಸ್ವೀಕರಿಸುತ್ತಿರಲಿಲ್ಲ, ಕ್ಷಣಕಾಲ ಕೂಡ ನಿದ್ರಿಸುತ್ತಿರಲಿಲ್ಲ, ಕೆಲಸದ ವಿಚಾರದಲ್ಲಿ ಕೃಷ್ಣಪ್ರಜ್ಞೆಯು, ಕೃಷ್ಣನ ಹಿತದೊಡನೆ ಸಂಬಂಧಿಸದ ಯಾವುದನ್ನೂ ಮಾಡುವುದಿಲ್ಲ, ಮತ್ತು ಹೀಗಾಗಿ ಅವನ ಕೆಲಸವು ಸದಾ ನಿಯಂತ್ರಿತ ಮತ್ತು ಇಂದ್ರಿಯ ತೋಷಣದಿಂದ ಮಲಿನವಾಗುವುದಿಲ್ಲ. ಇಂದ್ರಿಯ ತೋಷಣದ ಪ್ರಶ್ನೆ ಇಲ್ಲದಿರುವುದರಿಂದ, ಕೃಷ್ಣ ಪ್ರಜ್ಞೆಗೆ ಭೌತಿಕ ವಿರಾಮವಿಲ್ಲ. ಅವನು ತನ್ನ ಕೆಲಸ, ಮಾತ. ನಿದ್ರೆ, ಜಾಗರಣೆ ಮತ್ತು ಇತರ ಎಲ್ಲಾ ದೈಹಿಕ ಚಟುವಟಿಕೆಗಳಲ್ಲಿ ನಿಯಂತ್ರಿತನಾಗಿರುವುದರಿಂದ, ಅವನಿಗೆ ಭೌತಿಕ ಕ್ಲೇಶವೇ ಇಲ್ಲ.

**ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ ।**
**ನಿಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥ ೧೮ ॥**

ಯದಾ—ಯಾವಾಗ, ವಿನಿಯತಮ್—ವಿಶಿಷ್ಟವಾಗಿ ಶಿಸ್ತು ಹೊಂದಿದ, ಚಿತ್ತಮ್—ಮನಸ್ಸು ಮತ್ತು ಅದರ ಚಟುವಟಿಕೆಗಳನ್ನು, ಆತ್ಮನಿ—ದಿವ್ಯತೆಯಲ್ಲಿ, ಏವ—ಖಂಡಿತವಾಗಿ, ಅವತಿಷ್ಠತೇ—ಸನ್ನಿವೇಶಿತವಾಗುವುದು, ನಿಸ್ಪೃಹಃ—ಇಚ್ಛಾ ರಹಿತ, ಸರ್ವ—ಎಲ್ಲ ಬಗೆಯ, ಕಾಮೇಭ್ಯಃ—ಭೌತಿಕ ಇಂದ್ರಿಯ ತೋಷಣ, ಯುಕ್ತಃ—ಯೋಗದಲ್ಲಿ ಸುಸನ್ನಿವೇಶಿತನು, ಇತಿ—ಹೀಗೆ, ಉಚ್ಯತೇ—ಹೇಳಲ್ಪಡುತ್ತಾನೆ, ತದಾ—ಆಗ,

**ಯೋಗಿಯು, ಯೋಗಾಭ್ಯಾಸದಿಂದ ತನ್ನ ಮಾನಸಿಕ ಚಟುವಟಿಕೆಗಳನ್ನು ಶಿಸ್ತಿನಲ್ಲಿಟ್ಟಾಗ, ದಿವ್ಯತೆಯಲ್ಲಿ ಸನ್ನಿವೇಶಿತನಾದಾಗ—ಎಲ್ಲ ಭೌತಿಕ ಆಶೆಗಳಿಂದ ರಹಿತನಾಗಿ–ಅವನು ಯೋಗದಲ್ಲಿ ಸುಪ್ರತಿಷ್ಠಿತನು ಎಂದು ಹೇಳಲ್ಪಡುತ್ತಾನೆ.**

**ಭಾವಾರ್ಥ :** ಎಲ್ಲಾ ಬಗೆಯ ಭೌತಿಕ ಕಾಮನೆಗಳ–ಮುಖ್ಯವಾಗಿ ಅವುಗಳಲ್ಲಿ ಲೈಂಗಿಕ ಕಾಮದ–ವಿಶೇಷ ನಿಲುಗಡೆಯ ಲಕ್ಷಣದಿಂದ ಯೋಗಿಯ ಚಟುವಟಿಕೆಗಳು ಸಾಮಾನ್ಯ ವ್ಯಕ್ತಿಯ ಚಟುವಟಿಕೆಗಳಿಂದ ವಿಶೇಷಿತವಾಗುತ್ತವೆ. ಪರಿಪೂರ್ಣ ಯೋಗಿಯು ಮಾನಸಿಕ ಚಟುವಟಿಕೆಗಳಲ್ಲಿ ಅದೆಷ್ಟು ಸುಶಿಷ್ಟನೆಂದರೆ, ಅವನು ಯಾವುದೇ ಭೌತಿಕ ಕಾಮನೆ ಯಿಂದ ಕ್ಷೋಭಿತನಲ್ಲ, ಈ ಪರಿಪೂರ್ಣತೆಯ ಮಟ್ಟವು, ಶ್ರೀಮದ್ ಭಾಗವತದಲ್ಲಿ (9.4.18-20), ಹೇಳಿರುವಂತೆ ಕೃಷ್ಣಪ್ರಜ್ಞೆಗಳಿಂದ ತಾನಾಗಿಯೇ ಹೊಂದಲ್ಪಡ ಬಹುದು.

ಸ ವೈ ಮನಃ ಕೃಷ್ಣಪದಾರವಿನ್ದಯೋರ್
ವಚಾಂಸಿ ವೈಕುಣ್ಠ ಗುಣಾನುವರ್ಣನೇ।

ಕರೌ ಹರೇರ್ ಮನ್ದಿರಮಾರ್ಜನಾದಿಷು
ಶ್ರುತಿಂ ಚಕಾರಾಚ್ಯುತಸತ್ಕಥೋದಯೇ॥
ಮುಕುನ್ದ ಲಿಂಗಾಲಯದರ್ಶನೇ ದೃಶೌ
ತದ್‌ಭೃತ್ಯಗಾತ್ರಸ್ಪರ್ಶೇಽಂಗಸಂಗಮಮ್।
ಘ್ರಾಣಂ ಚ ತತ್ಪಾದಸರೋಜಸೌರಭೇ
ಶ್ರೀಮತ್ತುಲಸ್ಯಾ ರಸನಾಂ ತದರ್ಪಿತೇ॥
ಪಾದೌ ಹರೇಃ ಕ್ಷೇತ್ರಪದಾನುಸರ್ಪಣೇ
ಶಿರೋ ಹೃಷಿಕೇಶಪದಾಭಿವನ್ದನೇ।
ಕಾಮಂ ಚ ದಾಸ್ಯೇ ನ ತು ಕಾಮ ಕಾಮ್ಯಯಾ
ಯಥೋತ್ತಮಶ್ಲೋಕಜನಾಶ್ರಯಾ ರತಿಃ॥

"ಅಂಬರೀಷ ಮಹಾರಾಜನು ಮೊಟ್ಟಮೊದಲು ತನ್ನ ಮನಸ್ಸನ್ನು ಶ್ರೀಕೃಷ್ಣನ ಪಾದಾರವಿಂದಗಳ ಮೇಲೆ ತೊಡಗಿಸಿದನು; ಆಮೇಲೆ ಒಂದರ ಬಳಿಕ ಮತ್ತೊಂದರಂತೆ, ತನ್ನ ಮಾತುಗಳನ್ನು ಭಗವಂತನ ದಿವ್ಯ ಗುಣಗಳ ವರ್ಣನೆಯಲ್ಲಿ ತೊಡಗಿಸಿದನು. ತನ್ನ ಕೈಗಳನ್ನು ಭಗವಂತನ ಮಂದಿರ ಮಾರ್ಜನದಲ್ಲಿ, ತನ್ನ ಕಿವಿಗಳನ್ನು ಭಗವಂತನ ಲೀಲೆಗಳನ್ನು ಕೇಳುವುದರಲ್ಲಿ, ತನ್ನ ಕಣ್ಣುಗಳನ್ನು ಭಗವಂತನ ದಿವ್ಯ ರೂಪಗಳನ್ನು ನೋಡುವುದರಲ್ಲಿ, ತನ್ನ ದೇಹವನ್ನು ಭಗವದ್ಭಕ್ತರ ದೇಹಗಳನ್ನು ಸ್ಪರ್ಶಿಸುವುದರಲ್ಲಿ,ತನ್ನ ಘ್ರಾಣೇಂದ್ರಿಯವನ್ನು ಭಗವಂತನಿಗೆ ಅರ್ಪಿತ ಕಮಲ ಪುಷ್ಪಗಳ ಸುಗಂಧವನ್ನು ಆಘ್ರಾಣಿಸುವುದರಲ್ಲಿ, ತನ್ನ ನಾಲಿಗೆಯನ್ನು ಭಗವಂತನ ಪಾದಕಮಲಗಳಿಗೆ ಅರ್ಪಿತವಾದ ತುಲಸಿಯ ರುಚಿ ನೋಡುವುದರಲ್ಲಿ, ತನ್ನ ಕಾಲುಗಳನ್ನು ಯಾತ್ರಾಸ್ಥಳಗಳು ಮತ್ತು ಭಗವಂತನ ಮಂದಿರಕ್ಕೆ ಹೋಗುವುದರಲ್ಲಿ, ತನ್ನ ತಲೆಯನ್ನು ಭಗವಂತನಿಗೆ ನಮಸ್ಕಾರ ಅರ್ಪಿಸುವುದರಲ್ಲಿ, ಮತ್ತು ತನ್ನ ಇಚ್ಛೆಗಳನ್ನು ಭಗವಂತನ ಉದ್ದಿಷ್ಟ ಕಾರ್ಯ ನಿರ್ವಹಣೆಯಲ್ಲಿ ತೊಡಗಿಸಿದನು. ಈ ಎಲ್ಲ ದಿವ್ಯ ಚಟುವಟಿಕೆಗಳು ಶುದ್ಧ ಭಕ್ತನಿಗೆ ಯೋಗ್ಯವಾಗಿವೆ."

ಈ ದಿವ್ಯ ಹಂತವು ವ್ಯಕ್ತಿಶೂನ್ಯವಾದಿಗಳಿಗೆ ಆಂತರಿಕ ಭಾವನೆಯಲ್ಲಿ ವ್ಯಕ್ತಪಡಿಸಲು ಆಗದಿರಬಹುದು, ಆದರೆ ಅಂಬರೀಷ ಮಹಾರಾಜನ ಚಟುವಟಿಕೆಗಳ ಮೇಲಿನ ವರ್ಣನೆಯಿಂದ ಕಾಣುವಂತೆ, ಕೃಷ್ಣಪ್ರಜ್ಞೆಗೆ ಇದು ಬಹು ಸುಲಭ ಮತ್ತು ಕಾರ್ಯ ಸಾಧ್ಯ. ಸತತ ಸ್ಮರಣೆಯಿಂದ ಮನಸ್ಸು ಭಗವಂತನ ಪಾದಕಮಲಗಳ ಮೇಲೆ ಸ್ಥಿತವಾಗದ ಹೊರತು, ಇಂಥ ದಿವ್ಯ ಚಟುವಟಿಕೆಗಳು ಕಾರ್ಯಸಾಧ್ಯವಲ್ಲ. ಆದ್ದರಿಂದ ಭಗವಂತನ ಭಕ್ತಿಯುತ ಸೇವೆಯಲ್ಲಿ, ಈ ವಿಧದ ಚಟುವಟಿಕೆಗಳು **ಅರ್ಚನ** ಅಥವಾ ಎಲ್ಲ ಇಂದ್ರಿಯಗಳನ್ನು ಭಗವಂತನ ಸೇವೆಯಲ್ಲಿ ತೊಡಗಿಸುವುದು ಎಂದು ಕರೆದಿದೆ. ಇಂದ್ರಿಯಗಳಿಗೆ ಮತ್ತು ಮನಸ್ಸಿಗೆ ತೊಡಗುವಿಕೆಗಳು ಅವಶ್ಯ. ಸುಮ್ಮನೆ ನಿರಾಕರಣೆಯು ಕಾರ್ಯಸಾಧ್ಯವಲ್ಲ. ಆದ್ದರಿಂದ, ಜನಸಾಮಾನ್ಯರಿಗೆ—ವಿಶೇಷವಾಗಿ ಸನ್ಯಾಸಿಗಳಲ್ಲದವರಿಗೆ—ಮೇಲೆ ವಿವರಿಸಿದಂತೆ ಇಂದ್ರಿಯಗಳ ಮತ್ತು ಮನಸ್ಸಿನ ದಿವ್ಯ ತೊಡಗುವಿಕೆಯು ದಿವ್ಯ ಸಾಧನೆಗೆ ಪರಿಪೂರ್ಣ ಪ್ರಕ್ರಿಯೆ. ಅದನ್ನು ಭಗವದ್ಗೀತೆಯಲ್ಲಿ **ಯುಕ್ತ** ಎಂದು ಕರೆದಿದೆ.

**ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ ।**
**ಯೋಗಿನೋ ಯತಚಿತ್ತಸ್ಯ ಯುಞ್ಜತೋ ಯೋಗಮಾತ್ಮನಃ ॥೧೯॥**

ಯಥಾ—ಹೇಗೆ, ದೀಪಃ—ದೀಪವು, ನಿವಾತಸ್ಥಃ—ಗಾಳಿ ಇಲ್ಲದ ಸ್ಥಳದಲ್ಲಿ, ನ—ಇಲ್ಲ, ಇಂಗತೇ—ಹೊಯ್ದಾಡುವುದು, ಸ—ಇದು, ಉಪಮಾ—ಹೋಲಿಕೆ, ಸ್ಮೃತಾ—ಪರಿಗಣಿಸಿದೆ, ಯೋಗಿನಃ,—ಯೋಗಿಯ, ಯತ ಚಿತ್ತಸ್ಯ—ನಿಯಂತ್ರಿತ ಮನಸ್ಸಿನವನ, ಯುಞ್ಜತಃ—ಸತತ ನಿರತನಾಗಿರುವ, ಯೋಗಮ್—ಧ್ಯಾನದಲ್ಲಿ,ಆತ್ಮನಃ—ದಿವ್ಯತೆಯ.

**ಗಾಳಿ ಇಲ್ಲದ ಸ್ಥಳದಲ್ಲಿ ದೀಪವು ಹೇಗೆ ಹೊಯ್ದಾಡುವುದಿಲ್ಲವೋ, ಹಾಗೆ ನಿಯಂತ್ರಿತ ಮನಸ್ಸಿನ ದಿವ್ಯ ಸಾಧಕನು, ದಿವ್ಯಾತ್ಮನ ಮೇಲಿನ ತನ್ನ ಧ್ಯಾನದಲ್ಲಿ ಸದಾ ಸ್ಥಿರನಾಗಿರುತ್ತಾನೆ.**

**ಭಾವಾರ್ಥ :** ನಿಜ ಕೃಷ್ಣಪ್ರಾಜ್ಞನು, ತನ್ನ ಆರಾಧ್ಯದೇವನ ಸತತ ನಿಶ್ಚಲ ಧ್ಯಾನದಲ್ಲಿ, ದಿವ್ಯತೆಯಲ್ಲಿ ಸದಾ ಮಗ್ನನಾಗಿದ್ದು, ಗಾಳಿ ಇಲ್ಲದ ಸ್ಥಳದಲ್ಲಿನ ದೀಪದಂತೆ ಸ್ಥಿರವಾಗಿರುವನು.

**ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ ।**
**ಯತ್ರ ಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥೨೦॥**
**ಸುಖಮಾತ್ಯನ್ತಿಕಂ ಯತ್ತದ್ ಬುದ್ಧಿಗ್ರಾಹ್ಯಮತೀನ್ದ್ರಿಯಮ್ ।**
**ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥೨೧॥**
**ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।**
**ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ ॥೨೨॥**
**ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್ ॥೨೩॥**

ಯತ್ರ—ಆ ಸ್ಥಿತಿಯಲ್ಲಿ, ಉಪರಮತೇ—ನಿಲ್ಲಿಸುತ್ತಾನೋ (ಏಕೆಂದರೆ ಒಬ್ಬನು ದಿವ್ಯಾನಂದವನ್ನು ಅನುಭವಿಸುತ್ತಾನೆ), ಚಿತ್ತಮ್—ಮಾನಸಿಕ ಚಟುವಟಿಕೆಗಳು, ನಿರುದ್ಧಮ್—ಜಡದಿಂದ ನಿರ್ಬಂಧಿತ,ಯೋಗಸೇವಯಾ—ಯೋಗಾಚರಣೆಯಿಂದ, ಯತ್ರ—ಯಾವುದರಲ್ಲಿ, ಚ—ಕೂಡ, ಏವ—ಖಂಡಿತವಾಗಿ, ಆತ್ಮನಾ—ಶುದ್ಧಮನಸ್ಸಿನಿಂದ, ಆತ್ಮಾನಮ್—ಆತ್ಮನ, ಪಶ್ಯನ್—ಸ್ಥಾನವನ್ನು ಸಾಕ್ಷಾತ್ಕಾರಿಸಿಕೊಂಡು, ಆತ್ಮನಿ—ಆತ್ಮನಲ್ಲಿ, ತುಷ್ಯತಿ—ಒಬ್ಬನು ತೃಪ್ತನಾಗುತ್ತಾನೆ, ಸುಖಮ್—ಸುಖವು, ಆತ್ಯನ್ತಿಕಮ್—ಪರಮ, ಯತ್—ಯಾವುದು, ತತ್—ಅದು, ಬುದ್ಧಿ—ಬುದ್ಧಿಯಿಂದ, ಗ್ರಾಹ್ಯಮ್—ಪಡೆಯಲು ಸಾಧ್ಯವಾದ, ಅತೀನ್ದ್ರಿಯಮ್—ದಿವ್ಯ, ವೇತ್ತಿ—ಒಬ್ಬನು ತಿಳಿದಿರುತ್ತಾನೆ, ಯತ್ರ—ಎಲ್ಲಿ, ನ—ಇಲ್ಲ, ಚ—ಕೂಡ, ಏವ—ಖಂಡಿತವಾಗಿ, ಅಯಮ್—ಅವನು, ಸ್ಥಿತಃ—ಸನ್ನಿವೇಶಿತನು, ಚಲತಿ—ಚಲಿಸುತ್ತಾನೆ, ತತ್ತ್ವತಃ—ಸತ್ಯದಿಂದ, ಯಮ್—ಅದು ಯಾವುದನ್ನು, ಲಬ್ಧ್ವಾ—ಪಡೆದು, ಚ—ಕೂಡ, ಅಪರಮ್—ಇತರ ಯಾವುದೇ, ಲಾಭಮ್—ಲಾಭವನ್ನು, ಮನ್ಯತೇ—ಪರಿಗಣಿಸುವುದು, ನ—ಎಂದಿಗೂ ಇಲ್ಲ, ಅಧಿಕಮ್—ಹೆಚ್ಚಾಗಿ, ತತಃ—ಅದಕ್ಕಿಂತ, ಯಸ್ಮಿನ್—ಯಾವುದರಲ್ಲಿ, ಸ್ಥಿತಃ—ಸನ್ನಿವೇಶಿತ

ನಾಗಿ, ನ—ಎಂದಿಗೂ ಇಲ್ಲ, ದುಃಖೇನ—ಕ್ಲೇಶಗಳಿಂದ, ಗುರುಣಾ ಅಪಿ—ಬಹುಕಷ್ಟವಾಗಿದ್ದರೂ ಸಹ, ವಿಚಾಲ್ಯತೇ—ವಿಚಲಿತನಾಗುವುದು, ತಮ್—ಅದನ್ನು, ವಿದ್ಯಾತ್—ನೀನು ತಿಳಿದುಕೊಳ್ಳಬೇಕು, ದುಃಖಸಂಯೋಗ—ಭೌತಿಕ ಸಂಪರ್ಕದ ಕ್ಲೇಶಗಳ, ವಿಯೋಗಮ್—ನಿರ್ಮೂಲನವನ್ನು, ಯೋಗಸಂಜ್ಞಿತಮ್—ಯೋಗದಲ್ಲಿ ಸಮಾಧಿ ಎಂದು ಕರೆಯಲ್ಪಟ್ಟು.

**ಸಮಾಧಿ ಎಂದು ಕರೆಯಲ್ಪಡುವ ಪರಿಪೂರ್ಣತೆಯ ಹಂತದಲ್ಲಿ ಯೋಗಾಭ್ಯಾಸದಿಂದ ಒಬ್ಬನ ಮನಸ್ಸು ಭೌತಿಕ ಮನೋಕ್ರಿಯೆಗಳಿಂದ ಸಂಪೂರ್ಣವಾಗಿ ನಿರ್ಬಂಧಿತವಾಗಿರುತ್ತದೆ. ಈ ಪರಿಪೂರ್ಣತೆಯು ಶುದ್ಧಮನಸ್ಸಿನಿಂದ ಆತ್ಮನನ್ನು ನೋಡುವ ಮತ್ತು ಆತ್ಮನಲ್ಲಿ ಸವಿಯುವ ಮತ್ತು ಆನಂದಿಸುವ ಒಬ್ಬನ ಸಾಮರ್ಥ್ಯದ ಗುಣಲಕ್ಷಣಗಳಿಂದ ವ್ಯಕ್ತವಾಗುತ್ತದೆ. ಆ ಆನಂದ ಸ್ಥಿತಿಯಲ್ಲಿ ಒಬ್ಬನು ದಿವ್ಯ ಇಂದ್ರಿಯಗಳ ಮೂಲಕ ಸಾಕ್ಷಾತ್ಕಾರಿತವಾದ ಅಪಾರ ದಿವ್ಯ ಸುಖದಲ್ಲಿ ಸನ್ನಿವೇಶಿತನಾಗಿರುತ್ತಾನೆ. ಹೀಗೆ ಸ್ಥಾಪಿತನಾಗಿ ಒಬ್ಬನು ಎಂದಿಗೂ ಸತ್ಯದಿಂದ ವಿಚಲಿತನಾಗುವುದಿಲ್ಲ, ಮತ್ತು ಇದನ್ನು ಪಡೆದ ಬಳಿಕ ಇದಕ್ಕಿಂತ ಹೆಚ್ಚಿನ ಲಾಭ ಯಾವುದೂ ಇಲ್ಲ ಎಂದು ತಿಳಿಯುತ್ತಾನೆ. ಇಂಥ ಸ್ಥಾನದಲ್ಲಿ ಸನ್ನಿವೇಶಿತನಾಗಿ, ಒಬ್ಬನು ಅತ್ಯಧಿಕ ಕಷ್ಟಗಳ ಮಧ್ಯದಲ್ಲಿಯೂ ಎಂದಿಗೂ ವಿಚಲಿತನಾಗುವುದಿಲ್ಲ. ಇದುವೇ ನಿಜವಾಗಿ, ಭೌತಿಕ ಸಂಪರ್ಕದಿಂದುಂಟಾಗುವ ಸಕಲ ಕ್ಲೇಶಗಳಿಂದ ವಾಸ್ತವಿಕ ವಿಮೋಚನೆಯಾಗಿರುತ್ತದೆ.**

**ಭಾವಾರ್ಥ :** ಯೋಗಾಭ್ಯಾಸದಿಂದ ಒಬ್ಬನು ಭೌತಿಕ ಕಲ್ಪನೆಗಳಿಂದ ಕ್ರಮೇಣ ವಿರಕ್ತನಾಗುತ್ತಾನೆ. ಇದು ಯೋಗ ತತ್ತ್ವದ ಪ್ರಾಥಮಿಕ ಲಕ್ಷಣ. ಇದರ ನಂತರ ಒಬ್ಬನು **ಸಮಾಧಿ**ಯಲ್ಲಿ ಸನ್ನಿವೇಶಿತನಾಗುತ್ತಾನೆ, ಹಾಗೆಂದರೆ, ಆತ್ಮನನ್ನು ಪರಮಾತ್ಮನೆಂದು ಗುರುತಿಸುವ ಯಾವುದೇ ತಪ್ಪು ಕಲ್ಪನೆಗಳಿಲ್ಲದೆ, ದಿವ್ಯ ಮನಸ್ಸು ಮತ್ತು ಬುದ್ಧಿಯ ಮೂಲಕ ಯೋಗಿಯು ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ. ಯೋಗಾಭ್ಯಾಸವು ಹೆಚ್ಚು ಕಡಿಮೆ ಪತಂಜಲಿ ಪದ್ಧತಿಯ ಸೂತ್ರಗಳನ್ನು ಆಧರಿಸಿದೆ. ಕೆಲವು ಅನಧಿಕೃತ ವ್ಯಾಖ್ಯಾನಕಾರರು ವ್ಯಕ್ತಿಗತ ಆತ್ಮನನ್ನು ಪರಮಾತ್ಮನೆಂದು ಗುರುತಿಸಲು ಯತ್ನಿಸುತ್ತಾರೆ, ಮತ್ತು ಅದ್ವೈತಿಗಳು ಇದನ್ನು ಮೋಕ್ಷವೆಂದು ತಿಳಿಯುತ್ತಾರೆ. ಆದರೆ ಅವರು ಪತಂಜಲಿ ಯೋಗ ಪದ್ಧತಿಯ ನಿಜ ಉದ್ದೇಶವನ್ನು ಅರಿತುಕೊಳ್ಳುವುದಿಲ್ಲ. ಪತಂಜಲಿಯ ಯೋಗ ಪದ್ಧತಿಯಲ್ಲಿ ದಿವ್ಯ ಆನಂದವಿದೆ ಎಂದು ಒಪ್ಪಿದೆ ಆದರೆ ಅದ್ವೈತಿಗಳು, ಅದ್ವೈತ ಸಿದ್ಧಾಂತಕ್ಕೆ ಗಂಡಾಂತರವಾಗುವುದೆಂಬ ಭಯದಿಂದ, ಈ ದಿವ್ಯ ಆನಂದವನ್ನು ಒಪ್ಪಿಕೊಳ್ಳುವುದಿಲ್ಲ. ಜ್ಞಾನ ಮತ್ತು ಜ್ಞಾನಿಯ ದ್ವಂದ್ವವನ್ನು ಅದ್ವೈತಿಗಳು ಒಪ್ಪುವುದಿಲ್ಲ. ಆದರೆ ಈ ಶ್ಲೋಕದಲ್ಲಿ ದಿವ್ಯ ಇಂದ್ರಿಯಗಳ ಮೂಲಕ ಸಾಕ್ಷಾತ್ಕರಿಸಿಕೊಂಡ ದಿವ್ಯ ಸುಖವು ಅಂಗೀಕೃತವಾಗಿದೆ. ಇದು ಯೋಗ ಪದ್ಧತಿಯ ಪ್ರಸಿದ್ಧ ಪ್ರತಿಪಾದಕರಾದ ಪತಂಜಲಿ ಮುನಿಗಳಿಂದ ಸಮರ್ಥಿತವಾಗಿದೆ ಆ ಮಹರ್ಷಿಗಳು ತಮ್ಮ ಯೋಗ ಸೂತ್ರಗಳಲ್ಲಿ (3. 34) ಹೀಗೆ ಹೇಳುತ್ತಾರೆ : **ಪುರುಷಾರ್ಥ ಶೂನ್ಯಾನಾಂ ಗುಣಾನಾಂ ಪ್ರತಿಪ್ರಸವಃ ಕೈವಲ್ಯಂ ಸ್ವರೂಪಪ್ರತಿಷ್ಠಾ ವಾ ಚಿತಿಶಕ್ತಿರಿತಿ.**

**ಚಿತಿ–ಶಕ್ತಿ,** ಅಥವಾ ಅಂತರಂಗ ಶಕ್ತಿಯು ದಿವ್ಯವಾದುದು. ಪುರುಷಾರ್ಥ ಎಂದರೆ ಭೌತಿಕ ಧರ್ಮ, ಅರ್ಥ, ಕಾಮ ಮತ್ತು ಕೊನೆಗೆ ಪರಮನೊಂದಿಗೆ ಒಂದಾಗುವ ಪ್ರಯತ್ನ. "ಪರಮನೊಂದಿಗೆ ಒಂದಾಗುವಿಕೆ"ಯು ಅನೀಶ್ವರವಾದಿಗಳಿಂದ **ಕೈವಲ್ಯಮ್** ಎಂದು ಕರೆಯಲ್ಪಟ್ಟಿದೆ. ಆದರೆ ಪತಂಜಲಿಯ ಪ್ರಕಾರ ಈ **ಕೈವಲ್ಯ** ಎಂಬುದು, ಆತ್ಮನು ತನ್ನ ಸ್ವರೂಪ ಸ್ಥಿತಿಯನ್ನು ಅರಿಯುವಂತೆ ಮಾಡುವ ಅಂತರಂಗ ಅಥವಾ ದಿವ್ಯ ಶಕ್ತಿಯಾಗಿರುತ್ತದೆ. ಭಗವಾನ್ ಚೈತನ್ಯರ ಮಾತುಗಳಲ್ಲಿ, ಈ ಸ್ಥಿತಿಯು **ಚೇತೋದರ್ಪಣಮಾರ್ಜನಮ್** ಅಥವಾ ಮಲಿನ ಮನಸ್ಸಿನ ಕನ್ನಡಿಯ ಶುದ್ಧೀಕರಣ ಎಂದು ಕರೆದಿದೆ ಈ "ಶುದ್ಧೀಕರಣವು" ವಾಸ್ತವಿಕವಾಗಿ ಮೋಕ್ಷ ಅಥವಾ **ಭವದಾವಾಗ್ನಿ ನಿರ್ವಾಪಣಮ್** ಆಗಿರುತ್ತದೆ. **ನಿರ್ವಾಣ** ತತ್ತ್ವವು ಇದು ಕೂಡ ಪ್ರಾಥಮಿಕವಾಗಿದ್ದು — ಈ ತತ್ತ್ವಕ್ಕೆ ಸಂವಾದಿ. ಭಾಗವತದಲ್ಲಿ(2.10.6) ಇದನ್ನು **ಸ್ವರೂಪೇಣ ವ್ಯವಸ್ಥಿತಿಃ** ಎಂದು ಕರೆದಿದೆ. ಭಗವದ್ಗೀತೆಯು ಕೂಡ ಈ ಶ್ಲೋಕದಲ್ಲಿ ಈ ಸನ್ನಿವೇಶವನ್ನು ದೃಢಪಡಿಸಿದೆ.

**ನಿರ್ವಾಣ** ಅಥವಾ ಭೌತಿಕ ನಿಲುಗಡೆಯ ನಂತರ, ಕೃಷ್ಣಪ್ರಜ್ಞೆ ಎಂದು ಕರೆಯುವ ಅಧ್ಯಾತ್ಮ ಚಟುವಟಿಕೆಗಳ ಅಥವಾ ಭಗವಂತನಿಗೆ ಭಕ್ತಿಯುತ ಸೇವೆಯ ಪ್ರಕಟನೆ ಇರುತ್ತದೆ. ಭಾಗವತದ ಮಾತುಗಳಲ್ಲಿ **ಸ್ವರೂಪೇಣ ವ್ಯವಸ್ಥಿತಿಃ** ಇದು "ಜೀವಿಯ ನಿಜವಾದ ಜೀವನ." ಮಾಯೆ ಅಥವಾ ಭ್ರಮೆ ಎಂಬುದು ಭೌತಿಕ ಸೋಂಕಿನಿಂದ ಕಲುಷಿತವಾದ ಅಧ್ಯಾತ್ಮ ಜೀವನದ ಸ್ಥಿತಿ. ಈ ಭೌತಿಕ ಸೋಂಕಿನಿಂದ ವಿಮೋಚನೆ ಎಂದರೆ ಜೀವಿಯ ಮೂಲ ನಿತ್ಯ ಸ್ಥಿತಿಯ ನಾಶವೆಂದು ಅರ್ಥವಲ್ಲ. ಪತಂಜಲಿಯೂ ಕೂಡ **ಕೈವಲ್ಯಂ ಸ್ವರೂಪಪ್ರತಿಷ್ಠಾ ವಾ ಚಿತಿಶಕ್ತಿರಿತಿ** ಎಂಬ ತಮ್ಮ ಮಾತುಗಳಲ್ಲಿ ಇದನ್ನು ಒಪ್ಪಿಕೊಂಡಿ ಕೊಂಡಿದ್ದಾರೆ. ಈ **ಚಿತಿಶಕ್ತಿ** ಅಥವಾ ದಿವ್ಯ ಸುಖವು ನಿಜ ಜೀವನ. ಇದು ವೇದಾಂತ ಸೂತ್ರದಲ್ಲಿ (1. 1. 12) **ಆನಂದಮಯೋಽಭ್ಯಾಸಾತ್** ಎಂದು ದೃಢಪಟ್ಟಿದೆ. ಈ ಸ್ವಾಭಾವಿಕ ದಿವ್ಯ ಆನಂದವು ಯೋಗದ ಅಂತಿಮಗುರಿ, ಮತ್ತು ಭಕ್ತಿಯುತ ಸೇವೆ ಅಥವಾ ಭಕ್ತಿಯೋಗದ ಆಚರಣೆಯಿಂದ ಸುಲಭವಾಗಿ ಪ್ರಾಪ್ತವಾಗುವುದು. ಭಕ್ತಿಯೋಗವು ಭಗವದ್ಗೀತೆಯ ಏಳನೆಯ ಅಧ್ಯಾಯದಲ್ಲಿ ಸ್ಪಷ್ಟವಾಗಿ ವರ್ಣಿಸಲ್ಪಡುವುದು.

ಈ ಅಧ್ಯಾಯದಲ್ಲಿ ವರ್ಣಿಸಿರುವಂತೆ, ಯೋಗ ಪದ್ಧತಿಯಲ್ಲಿ **ಸಂಪ್ರಜ್ಞಾತ ಸಮಾಧಿ** ಮತ್ತು **ಅಸಂಪ್ರಜ್ಞಾತ ಸಮಾಧಿ** ಎಂಬ ಎರಡುಬಗೆಯ **ಸಮಾಧಿ**ಗಳುಂಟು. ಒಬ್ಬನು ವಿವಿಧ ತಾತ್ತ್ವಿಕ ಸಂಶೋಧನೆಗಳಿಂದ ದಿವ್ಯಸ್ಥಿತಿಯಲ್ಲಿ ಸನ್ನಿವೇಶಿತನಾದಾಗ, ಅವನು **ಸಂಪ್ರಜ್ಞಾತ ಸಮಾಧಿ**ಯನ್ನು ಸಾಧಿಸಿರುವನೆಂದು ಹೇಳಿದೆ. **ಅಸಂಪ್ರಜ್ಞಾತ ಸಮಾಧಿ**ಯಲ್ಲಿ ಐಹಿಕ ಸುಖದೊಂದಿಗೆ ಯಾವುದೇ ಸಂಪರ್ಕವಿರುವುದಿಲ್ಲ, ಏಕೆಂದರೆ ಆಗ ಒಬ್ಬನು ಇಂದ್ರಿಯಗಳಿಂದ ಲಬ್ಧವಾದ ಎಲ್ಲ ಬಗೆಯ ಸುಖಗಳಿಗೆ ಅತೀತನು. ಯೋಗಿಯು ಒಂದು ಸಲ ಆ ದಿವ್ಯ ಸ್ಥಿತಿಯಲ್ಲಿ ಸನ್ನಿವೇಶಿತನಾದಾಗ, ಅವನು ಎಂದಿಗೂ ಅದರಿಂದ ವಿಚಲಿತನಾಗುವುದಿಲ್ಲ. ಯೋಗಿಯು ಈ ಸ್ಥಿತಿಯನ್ನು ತಲುಪಲು ಸಮರ್ಥನಾಗದ ಹೊರತು ಅವನು ಯಶಸ್ವಿಯಲ್ಲ. **ಅನೇಕ** ಇಂದ್ರಿಯ ಸುಖಗಳನ್ನೊಳಗೊಂಡ

ಯೋಗಾಚರಣೆಯೆಂದು ಕರೆಯಲ್ಪಡುವ ಈಗಿನ ಪದ್ಧತಿಯು ವಿರುದ್ಧವಾದುದು. ಲೈಂಗಿಕ ಕಾರ್ಯದಲ್ಲಿ ಮತ್ತು ಮದ್ಯಪಾನದಲ್ಲಿ ಲೋಲುಪನಾದ ಯೋಗಿಯು ಒಂದು ಪರಿಹಾಸ್ಯವಷ್ಟೆ. ಯೋಗಸಿದ್ಧಿಗಳಿಂದ ಆಕರ್ಷಿತರಾದ ಯೋಗಿಗಳು ಕೂಡ ಪರಿಪೂರ್ಣವಾಗಿ ಸನ್ನಿವೇಶಿತರಲ್ಲ. ಯೋಗಿಗಳು ಯೋಗದ ಉಪೋತ್ಪತ್ತಿಗಳಿಂದ ಆಕರ್ಷಿತರಾದರೆ, ಈ ಶ್ಲೋಕದಲ್ಲಿ ಹೇಳಿರುವಂತೆ, ಅವರು ಪರಿಪೂರ್ಣತೆಯ ಹಂತವನ್ನು ತಲುಪಲಾರರು. ಆದ್ದರಿಂದ ಕಸರತ್ತಿನ ಸಾಹಸ ಕಾರ್ಯಗಳ ಮತ್ತು ಯೋಗಸಿದ್ಧಿಗಳ ಪ್ರದರ್ಶನದಲ್ಲಿ ಲೋಲುಪರಾದ ವ್ಯಕ್ತಿಗಳು, ಅವರು ಹಾಗೆ ಮಾಡುವುದರಲ್ಲಿ ಯೋಗದ ಉದ್ದೇಶವೇ ನಷ್ಟವಾಗಿದೆ, ಎಂದು ತಿಳಿಯಬೇಕು.

ಈ ಯುಗದಲ್ಲಿ ಶ್ರೇಷ್ಠ ಯೋಗ ಪದ್ಧತಿ ಎಂದರೆ ಕೃಷ್ಣಪ್ರಜ್ಞೆ. ಇದು ದಿಗ್ಭ್ರಮೆ ಮಾಡುವುದಿಲ್ಲ. ಕೃಷ್ಣಪ್ರಜ್ಞೆಯು ತನ್ನ ವೃತ್ತಿಯಲ್ಲಿ ಅದೆಷ್ಟು ಸುಖಿ ಎಂದರೆ ಅವನು ಇತರ ಯಾವುದೇ ಸುಖವನ್ನು ಆಶಿಸುವುದಿಲ್ಲ. **ಹಠಯೋಗ, ಧ್ಯಾನಯೋಗ** ಮತ್ತು **ಜ್ಞಾನಯೋಗಗಳನ್ನು** ಅಭ್ಯಾಸಿಸಲು, ವಿಶೇಷವಾಗಿ ಈ ಕಪಟಾಚರಣೆಯ ಯುಗದಲ್ಲಿ ಅನೇಕ ವಿಘ್ನಗಳಿವೆ. ಆದರೆ **ಕರ್ಮಯೋಗ** ಅಥವಾ **ಭಕ್ತಿಯೋಗ** ಆಚರಣೆಯಲ್ಲಿ ಅಂಥ ಸಮಸ್ಯೆಯೇನೂ ಇಲ್ಲ.

ಭೌತಿಕ ದೇಹವು ಇರುವವರೆಗೆ, ಒಬ್ಬನು ದೇಹದ ಬೇಡಿಕೆಗಳನ್ನು ಎಂದರೆ, ಆಹಾರ, ನಿದ್ರೆ, ರಕ್ಷಣೆ ಮತ್ತು ಮೈಥುನಗಳನ್ನು ಪೂರೈಸಬೇಕಾಗುವುದು. ಆದರೆ, ಶುದ್ಧ ಭಕ್ತಿಯೋಗಿ ಅಥವಾ ಕೃಷ್ಣಪ್ರಜ್ಞೆಯು, ದೇಹದ ಬೇಡಿಕೆಗಳನ್ನು ಪೂರೈಸುವಾಗ ಇಂದ್ರಿಯಗಳನ್ನು ಪ್ರಕ್ಷುಬ್ಧಗೊಳಿಸುವುದಿಲ್ಲ. ಬದಲಾಗಿ, 'ಕೆಟ್ಟವ್ಯಾಪಾರದಲ್ಲಿ ಅವಷ್ಟು ಒಳ್ಳೆಯ ಪ್ರಯೋಜನವನ್ನು ಪಡೆಯುವುದು' ಎನ್ನುವಂತೆ ಅವನು ಜೀವನದ ಅತ್ಯಗತ್ಯ ಅವಶ್ಯಕತೆಗಳನ್ನು ಮಾತ್ರ ಸ್ವೀಕರಿಸುತ್ತಾನೆ, ಮತ್ತು ಕೃಷ್ಣಪ್ರಜ್ಞೆಯಲ್ಲಿ ದಿವ್ಯ ಆನಂದವನ್ನು ಅನುಭವಿಸುತ್ತಾನೆ. ಅವನು ಪ್ರಾಸಂಗಿಕ ಸಂಭವಗಳಾದ ಅಪಘಾತಗಳು, ರೋಗ, ಅಭಾವ ಮತ್ತು ಅತ್ಯಂತ ಪ್ರಿಯ ಬಂಧುವಿನ ಮರಣದಲ್ಲಿ ಕೂಡ—ಅವನು ಉದಾಸೀನನು, ಆದರೆ ಕೃಷ್ಣಪ್ರಜ್ಞೆಯಲ್ಲಿ ಅಥವಾ ಭಕ್ತಿಯೋಗದಲ್ಲಿ ತನ್ನ ಕರ್ತವ್ಯಗಳನ್ನು ನಿರ್ವಹಿಸಲು ಅವನು ಸದಾ ಜಾಗೃತನು. ಅಪಘಾತಗಳು ಅವನನ್ನು ತನ್ನ ಕರ್ತವ್ಯದಿಂದ ಎಂದೂ ವಿಚಲಿತಗೊಳಿಸುವುದಿಲ್ಲ. ಭಗವದ್ಗೀತೆಯಲ್ಲಿ (2. 14) ಹೇಳಿರುವಂತೆ, **ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ.** ಅಂಥ ಎಲ್ಲ ಆಕಸ್ಮಿಕ ಸಂಭವಗಳನ್ನು ಸಹಿಸಿಕೊಳ್ಳುತ್ತಾನೆ, ಏಕೆಂದರೆ, ಅವು ಬಂದು ಹೋಗುತ್ತವೆ. ಮತ್ತು ತನ್ನ ಕರ್ತವ್ಯಗಳನ್ನು ಬಾಧಿಸುವುದಿಲ್ಲ ಎಂದು ಅವನು ತಿಳಿದಿರುತ್ತಾನೆ. ಹೀಗೆ ಯೋಗಾಚರಣೆಯಲ್ಲಿ ಅವನು ಅತ್ಯುನ್ನತ ಪರಿಪೂರ್ಣತೆಯನ್ನು ಸಾಧಿಸುತ್ತಾನೆ.

**ಸ ನಿಶ್ಚಯೇನ ಯೋಕ್ತವ್ಯೋ ಯೋಗೋಽನಿರ್ವಿಣ್ಣಚೇತಸಃ ।**
**ಸಂಕಲ್ಪಪ್ರಭವಾನ್ ಕಾಮಾಂಸ್ತ್ಯಕ್ತ್ವಾ ಸರ್ವಾನಶೇಷತಃ ।**
**ಮನಸೈವೇನ್ದ್ರಿಯಗ್ರಾಮಂ ವಿನಿಯಮ್ಯ ಸಮನ್ತತಃ ॥ ೨೪ ॥**

ಸಃ—ಅದು, ನಿಶ್ಚಯೇನ—ದೃಢ ನಿರ್ಧಾರದಿಂದ, ಯೋಕ್ತವ್ಯಃ—ಅಭ್ಯಾಸ ಮಾಡಬೇಕು, ಯೋಗಃ—ಯೋಗ ಪದ್ಧತಿಯು, ಅನಿರ್ವಿಣ್ಣ ಚೇತಸಾ—ವಿಚಲತೆ ಇಲ್ಲದೆ, ಸಂಕಲ್ಪ—ಮಾನಸಿಕ ಊಹಾಪೋಹಗಳು, ಪ್ರಭವಾನ್—ಜನಿತವಾದ, ಕಾಮಾನ್—ಭೌತಿಕ ಇಚ್ಛೆಗಳು, ತ್ಯಕ್ತ್ವಾ—ತ್ಯಜಿಸಿ, ಸರ್ವಾನ್—ಎಲ್ಲ, ಅಶೇಷತಃ—ಸಂಪೂರ್ಣವಾಗಿ, ಮನಸಾ—ಮನಸ್ಸಿನಿಂದ, ಏವ—ಖಂಡಿತವಾಗಿ, ಇನ್ದ್ರಿಯಗ್ರಾಮಮ್—ಪೂರ್ಣ ಇಂದ್ರಿಯಗಳ ಗಣವನ್ನು, ವಿನಿಯಮ್ಯ—ನಿಯಂತ್ರಿಸುತ್ತಾ, ಸಮನ್ತತಃ— ಎಲ್ಲ ಕಡೆಗಳಿಂದಲೂ.

**ಒಬ್ಬನು ದೃಢ ನಿರ್ಧಾರ ಮತ್ತು ಶ್ರದ್ಧೆಯಿಂದ ಯೋಗಾಭ್ಯಾಸದಲ್ಲಿ ತನ್ನನ್ನು ತೊಡಗಿಸಿಕೊಳ್ಳಬೇಕು, ಮತ್ತು ಆ ಪಥದಿಂದ ವಿಚಲಿತನಾಗಕೂಡದು. ಒಬ್ಬನು ಮಾನಸಿಕ ಊಹಾಪೋಹಗಳಿಂದ ಜನಿತವಾದ ಎಲ್ಲ ಭೌತಿಕ ಇಚ್ಛೆಗಳು, ಒಂದನ್ನೂ ಬಿಡದೆ ತ್ಯಜಿಸಬೇಕು, ಮತ್ತು ಹೀಗೆ ಎಲ್ಲಕಡೆಯಿಂದ ಮನಸ್ಸಿನಿಂದ ಎಲ್ಲ ಇಂದ್ರಿಯ ಗಳನ್ನು ನಿಯಂತ್ರಿಸಬೇಕು.**

**ಭಾವಾರ್ಥ :** ಯೋಗ ಸಾಧಕನು ದೃಢ ನಿರ್ಧಾರವುಳ್ಳವನಾಗಿರಬೇಕು ಮತ್ತು ವಿಚಲಿತನಾಗದೆ ತಾಳ್ಮೆಯಿಂದ ಸಾಧನೆಯನ್ನು ಮುಂದುವರಿಸಬೇಕು. ಒಬ್ಬನು ಕೊನೆಯಲ್ಲಿ ಯಶಸ್ಸಿನ ನಿಶ್ಚಯತೆಯನ್ನು ಹೊಂದಿರಬೇಕು ಮತ್ತು ಯಶಪ್ರಾಪ್ತಿಯಲ್ಲಿ ಯಾವುದೇ ವಿಳಂಬವಾದರೆ ಅದರಿಂದ ನಿರುತ್ಸಾಹಿತನಾಗದೆ ಸತತ ಪ್ರಯತ್ನದಿಂದ ಈ ಮಾರ್ಗವನ್ನು ಅನುಸರಿಸಬೇಕು. ಕಟ್ಟುನಿಟ್ಟಾದ ಸಾಧಕನಿಗೆ ಯಶಸ್ಸು ಖಂಡಿತ. ಭಕ್ತಿಯೋಗದ ಬಗ್ಗೆ ರೂಪ ಗೋಸ್ವಾಮಿಯವರು ಹೇಳುತ್ತಾರೆ.

ಉತ್ಸಾಹಾನ್ ನಿಶ್ಚಯಾದ್ಧೈರ್ಯಾತ್ ತತ್‌ತತ್‌ಕರ್ಮಪ್ರವರ್ತನಾತ್
ಸಂಗತ್ಯಾಗಾತ್ ಸತೋ ವೃತ್ತೇಃ ಷಡ್ಭಿರ್ ಭಕ್ತಿಃ ಪ್ರಸಿದ್ಧ್ಯತಿ

"ಪೂರ್ಣ ಹೃತ್ಪೂರ್ವಕ ಉತ್ಸಾಹ, ಸತತ ಪ್ರಯತ್ನ ಮತ್ತು ದೃಢ ನಿರ್ಧಾರದಿಂದ ಭಕ್ತರ ಸಹವಾಸದಲ್ಲಿ ವಿಧಿತ ಕರ್ತವ್ಯಗಳನ್ನು ಅನುಸರಿಸುತ್ತಾ. ಮತ್ತು ಸಂಪೂರ್ಣವಾಗಿ ಸಾತ್ವಿಕ ಚಟುವಟಿಕೆಗಳಲ್ಲಿ ತೊಡಗಿ ಒಬ್ಬನು ಭಕ್ತಿಯೋಗ ಪ್ರಕ್ರಿಯೆಯನ್ನು ಯಶಸ್ವಿಯಾಗಿ ಆಚರಿಸಬಲ್ಲನು. " (ಉಪದೇಶಾಮೃತ 3)

ದೃಢ ನಿರ್ಧಾರದ ವಿಷಯದಲ್ಲಿ, ಒಬ್ಬನು ಸಾಗರದ ಅಲೆಗಳಲ್ಲಿ ತನ್ನ ಮೊಟ್ಟೆಗಳನ್ನು ಕಳೆದುಕೊಂಡ ಗುಬ್ಬಚ್ಚಿಯ ಉದಾಹರಣೆಯನ್ನು ಅನುಸರಿಸಬೇಕು. ಒಂದು ಗುಬ್ಬಚ್ಚಿಯು ಸಾಗರ ತೀರದಲ್ಲಿ ಮೊಟ್ಟೆಗಳನ್ನಿಟ್ಟಿತ್ತು, ಆದರೆ ಮಹಾ ಸಾಗರವು ಆ ಮೊಟ್ಟೆಗಳನ್ನು ತನ್ನ ಅಲೆಗಳಲ್ಲಿ ಕೊಚ್ಚಿಕೊಂಡು ಹೋಯಿತು, ಗುಬ್ಬಚ್ಚಿಯು ಬಹು ಖಿನ್ನವಾಗಿ ತನ್ನ ಮೊಟ್ಟೆಗಳನ್ನು ಹಿಂದಿರುಗಿಸುವಂತೆ ಸಾಗರವನ್ನು ಕೇಳಿತು. ಸಾಗರವು ಅದರ ಅಹವಾಲನ್ನು ಗಮನಿಸಲೂ ಇಲ್ಲ. ಹಾಗಿರಲು ಗುಬ್ಬಚ್ಚಿಯು ಸಾಗರವನ್ನು ಬತ್ತಿಸಿಬಿಡಲು ನಿರ್ಧರಿಸಿತು. ಅದು ತನ್ನ ಚಿಕ್ಕ ಕೊಕ್ಕಿನಿಂದ ನೀರನ್ನು ತೆಗೆದು ಹಾಕಲು

ಆರಂಭಿಸಿತು. ಆದರ ಈ ಅಸಾಧ್ಯ ನಿರ್ಧಾರವನ್ನು ಕಂಡು ಎಲ್ಲರೂ ನಕ್ಕರು. ಅವರ ಕೆಲಸದ ಸುದ್ದಿ ಹರಡಿತು. ಮತ್ತು ಕೊನೆಗೆ ಭಗವಾನ್ ವಿಷ್ಣುವಿನ ಬೃಹತ್ ಪಕ್ಷಿವಾಹನ ನಾದ ಗರುಡನು ಅದನ್ನು ಕೇಳಿದನು. ಅವನು ಆ ಚಿಕ್ಕ ತನ್ನ ಸೋದರಿ ಪಕ್ಷಿಯ ಬಗ್ಗೆ ಸಹಾನುಭೂತಿ ತಳೆದನು. ಮತ್ತು ಅವನು ಆ ಗುಬ್ಬಚ್ಚಿಯನ್ನು ನೋಡಲು ಬಂದನು ಆ ಚಿಕ್ಕ ಗುಬ್ಬಚ್ಚಿಯ ನಿರ್ಧಾರವನ್ನು ಕಂಡು ಗರುಡನು ಬಹು ಪ್ರೀತನಾದನು ಮತ್ತು ಅವನು ಸಹಾಯ ಮಾಡುವುದಾಗಿ ಮಾತು ಕೊಟ್ಟನು. ಹೀಗೆ ಗರುಡನು ಕೂಡಲೇ ಗುಬ್ಬಚ್ಚಿಯ ಮೊಟ್ಟೆಗಳನ್ನು ಹಿಂದಿರುಗಿಸಬೇಕೆಂದೂ, ಇಲ್ಲದಿದ್ದರೇ ತಾನೆ ಗುಬ್ಬಚ್ಚಿಯ ಕೆಲಸವನ್ನು ವಹಿಸಿಕೊಳ್ಳಬೇಕಾಗುವುದೆಂದು ಸಾಗರಕ್ಕೆ ಹೇಳಿದನು. ಇದಕ್ಕೆ ಸಾಗರವು ಭಯಪಟ್ಟಿತು, ಮತ್ತು ಮೊಟ್ಟೆಗಳನ್ನು ಹಿಂದಿರುಗಿಸಿತು. ಹೀಗೆ ಗರುಡನ ಕೃಪೆಯಿಂದ ಗುಬ್ಬಚ್ಚಿಯು ಸಂತೋಷಗೊಂಡಿತು.

ಇದರಂತೆಯೇ, ಯೋಗಾಭ್ಯಾಸವು, ವಿಶೇಷವಾಗಿ ಕೃಷ್ಣಪ್ರಜ್ಞೆಯಲ್ಲಿ ಭಕ್ತಿ ಯೋಗವು ಬಹು ಕಷ್ಟ ಕಾರ್ಯವೆಂದು ತೋರಬಹುದು. ಆದರೆ ಯಾರಾದರೊಬ್ಬನು ಮಹಾ ನಿರ್ಧಾರದಿಂದ ಈ ತತ್ವಗಳನ್ನು ಅನುಸರಿಸಿದರೆ, ಭಗವಂತನು ಖಂಡಿತವಾಗಿ ಸಹಾಯ ಮಾಡುತ್ತಾನೆ, ಏಕೆಂದರೆ ಭಗವಂತನು ಪ್ರಯತ್ನಶೀಲರಿಗೆ ಸಹಾಯ ಮಾಡುತ್ತಾನೆ.

**ಶನೈಃ ಶನೈರುಪರಮೇದ್ ಬುದ್ಧ್ಯಾ ಧೃತಿಗೃಹೀತಯಾ ।**
**ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಞ್ಚಿದಪಿ ಚಿನ್ತಯೇತ್ ॥ ೨೫ ॥**

ಶನೈಃ—ಕ್ರಮೇಣ, ಶನೈಃ—ಹೆಜ್ಜೆಹೆಜ್ಜೆಯಾಗಿ, ಉಪರಮೇತ್—ಒಬ್ಬನು ತಡೆಗಟ್ಟಬೇಕು, ಬುದ್ಧ್ಯಾ—ಬುದ್ಧಿಯಿಂದ, ಧೃತಿ ಗೃಹೀತಯಾ—ದೃಢ ನಿರ್ಧಾರದಿಂದ ಹೊತ್ತು, ಆತ್ಮಸಂಸ್ಥಮ್—ದಿವ್ಯತೆಯಲ್ಲಿ ಇರಿಸಿದ, ಮನಃ—ಮನಸ್ಸು, ಕೃತ್ವಾ—ಮಾಡಿ, ನ—ಇಲ್ಲ, ಕಿಞ್ಚಿತ್—ಬೇರೆ ಯಾವುದನ್ನು, ಅಪಿ—ಕೂಡ, ಚಿನ್ತಯೇತ್—ಚಿಂತಿಸುವುದು.

**ಕ್ರಮೇಣ, ಹೆಜ್ಜೆಹೆಜ್ಜೆಯಾಗಿ, ದೃಢ ನಿಶ್ಚಯದಿಂದ ಸಮರ್ಥಿತವಾದ ಬುದ್ಧಿಯ ಮೂಲಕ ಒಬ್ಬನು ಸಮಾಧಿಯಲ್ಲಿ ಸನ್ನಿವೇಶಿತನಾಗಬೇಕು, ಮತ್ತು ಹೀಗೆ ಮನಸ್ಸು ಆತ್ಮನ ಮೇಲೆ ಮಾತ್ರವೇ ಸ್ಥಾಪಿಸಬೇಕು ಮತ್ತು ಬೇರೆ ಏನನ್ನೂ ಚಿಂತಿಸಬಾರದು.**

**ಭಾವಾರ್ಥ :** ಉಚಿತ ನಿಶ್ಚಯ ಮತ್ತು ಬುದ್ಧಿಯಿಂದ ಒಬ್ಬನು ಕ್ರಮೇಣ ಇಂದ್ರಿಯ ಚಟುವಟಿಕೆಗಳನ್ನು ನಿಲ್ಲಿಸಬೇಕು. ಇದನ್ನು **ಪ್ರತ್ಯಾಹಾರ** ಎನ್ನುವರು. ದೃಢವಿಶ್ವಾಸದಿಂದ, ಧ್ಯಾನದಿಂದ ಮತ್ತು ಇಂದ್ರಿಯಗಳಿಂದ **ಕೊನೆಗಾಣಿಸುವುದರಿಂದ,** ಮನಸ್ಸು ನಿಯಂತ್ರಿತವಾಗಿ **ಸಮಾಧಿ**ಯಲ್ಲಿ ಸನ್ನಿವೇಶಿತವಾಗಬೇಕು. ಆಗ ಜೀವನದ ಭೌತಿಕ ಕಲ್ಪನೆಯಲ್ಲಿ ನಿರತವಾಗುವ ಯಾವುದೇ ಅಪಾಯ ಇರುವುದಿಲ್ಲ. ಅರ್ಥಾತ್, ಭೌತಿಕ ದೇಹ

ವಿರುವವರೆಗೆ, ಜಡದೊಂದಿಗೆ ಒಳಗೊಂಡಿದ್ದರೂ, ಒಬ್ಬನು ಇಂದ್ರಿಯ ತೋಷಣವನ್ನು ಕುರಿತು ಯೋಚಿಸಕೂಡದು. ಪರಮ ಆತ್ಮನ ಸುಖವನ್ನು ಬಿಟ್ಟು ಬೇರೆ ಯಾವ ಸುಖವನ್ನೂ ಯೋಚಿಸಕೂಡದು. ಈ ಸ್ಥಿತಿಯು ಕೃಷ್ಣಪ್ರಜ್ಞೆಯ ನೇರ ಆಚರಣೆಯಿಂದ ಸುಲಭವಾಗಿ ಹೊಂದಲ್ಪಡುವುದು.

**ಯತೋ ಯತೋ ನಿಶ್ಚಲತಿ ಮನಶ್ಚಞ್ಚಲಮಸ್ಥಿರಮ್ ।**
**ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥ ೨೬ ॥**

ಯತಃ ಯತಃ—ಎಲ್ಲೆಲ್ಲಿ, ನಿಶ್ಚಲತಿ—ನಿಶ್ಚಯವಾಗಿಯೂ ಉದ್ವಿಗ್ನವಾಗುತ್ತದೆ, ಮನಃ—ಮನಸ್ಸು, ಚಞ್ಚಲಮ್—ಚಂಚಲತೆ, ಅಸ್ಥಿರಮ್—ಅಸ್ಥಿರತೆ, ತತಃ ತತಃ—ಅಲ್ಲಿಂದ, ನಿಯಮ್ಯ—ನಿಯಂತ್ರಿಸುತ್ತ, ಏತತ್—ಇದನ್ನು, ಆತ್ಮನಿ—ಆತ್ಮನಲ್ಲಿ, ಏವ—ಖಂಡಿತವಾಗಿ, ವಶಮ್—ನಿಯಂತ್ರಣ, ನಯೇತ್—ತರಬೇಕು.

**ಮನಸ್ಸಿನ ಚಂಚಲ ಮತ್ತು ಅಸ್ಥಿರ ಸ್ವಭಾವದ ಕಾರಣ ಅದು ಎಲ್ಲೆಲ್ಲಿ ಅಲೆಯುವುದೋ ಅಲ್ಲಿಂದ ಒಬ್ಬನು ಖಂಡಿತವಾಗಿ ಅದನ್ನು ಹಿಂದಕ್ಕೆ ಸೆಳೆದುಕೊಳ್ಳಬೇಕು ಮತ್ತು ಅದನ್ನು ಆತ್ಮನ ನಿಯಂತ್ರಣಕ್ಕೆ ಮರಳಿತರಬೇಕು.**

**ಭಾವಾರ್ಥ :** ಮನಸ್ಸಿನ ಸ್ವಭಾವವು ಚಂಚಲ ಮತ್ತು ಅಸ್ಥಿರ. ಆದರೆ ಆತ್ಮಸಾಕ್ಷಾತ್ಕಾರಿ ಯೋಗಿಯು ಮನಸ್ಸನ್ನು ನಿಯಂತ್ರಿಸಬೇಕು; ಮನಸ್ಸು ಅವನನ್ನು ನಿಯಂತ್ರಿಸಕೂಡದು. ಮನಸ್ಸನ್ನು ನಿಯಂತ್ರಿಸಿದವನನ್ನು, (ಮತ್ತು ಅದರಿಂದ ಹಾಗೂ ಇಂದ್ರಿಯಗಳನ್ನೂ ನಿಯಂತ್ರಿಸುವವನನ್ನು) **ಗೋಸ್ವಾಮಿ** ಅಥವಾ **ಸ್ವಾಮಿ** ಎಂದು ಕರೆಯುತ್ತಾರೆ. ಮತ್ತು ಮನಸ್ಸಿನಿಂದ ನಿಯಂತ್ರಿತನನ್ನು **ಗೋದಾಸ,** ಅಥವಾ ಇಂದ್ರಿಯಗಳ ಸೇವಕ ಎನ್ನುತ್ತಾರೆ. **ಗೋಸ್ವಾಮಿಯು** ಇಂದ್ರಿಯ ಸುಖದ ಮಟ್ಟವನ್ನು ತಿಳಿದಿರುತ್ತಾನೆ. ದಿವ್ಯ ಇಂದ್ರಿಯ ಸುಖದಲ್ಲಿ, ಇಂದ್ರಿಯಗಳು ಹೃಷೀಕೇಶ, ಅಥವಾ ಇಂದ್ರಿಯಗಳ ಪರಮಸ್ವಾಮಿ—ಕೃಷ್ಣನ ಸೇವೆಯಲ್ಲಿ ತೊಡಗಿರುತ್ತವೆ. ಶುದ್ಧೀಕೃತ ಇಂದ್ರಿಯಗಳಿಂದ ಕೃಷ್ಣನ ಸೇವೆ ಮಾಡುವುದನ್ನು ಕೃಷ್ಣಪ್ರಜ್ಞೆ ಎನ್ನುತ್ತಾರೆ. ಅದೇ ಇಂದ್ರಿಯಗಳನ್ನು ಪೂರ್ಣ ನಿಯಂತ್ರಣಕ್ಕೆ ಒಳಪಡಿಸುವ ಮಾರ್ಗ, ಹೆಚ್ಚೇನು, ಅದುವೇ ಯೋಗಾಚರಣೆಯ ಅತ್ಯುನ್ನತ ಪರಿಪೂರ್ಣತೆ.

**ಪ್ರಶಾನ್ತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।**
**ಉಪೈತಿ ಶಾನ್ತರಜಸಂ ಬ್ರಹ್ಮಭೂತಮಕಲ್ಮಷಮ್ ॥ ೨೭ ॥**

ಪ್ರಶಾನ್ತ—ಶಾಂತಿಯುತ, ಕೃಷ್ಣ ಪಾದಾರವಿಂದಗಳ ಮೇಲೆ ಸ್ಥಾಪಿತ, ಮನಸಮ್—ಯಾರ ಮನಸ್ಸು, ಹಿ—ಖಂಡಿತವಾಗಿ, ಏನಮ್—ಈ, ಯೋಗಿನಮ್—ಯೋಗಿಯು, ಸುಖಮ್—ಸುಖವನ್ನು, ಉತ್ತಮಮ್—ಅತ್ಯುತ್ತಮ, ಉಪೈತಿ—ಹೊಂದುತ್ತಾನೆ, ಶಾನ್ತರಜಸಮ್—ಅವನ ರಜೋಗುಣವು ಶಾಂತಗೊಳಿಸಲ್ಪಟ್ಟು,

ಬ್ರಹ್ಮಭೂತಮ್—ಪರತತ್ತ್ವದೊಂದಿಗೆ ಗುರುತಿಸಿಕೊಳ್ಳುವಿಕೆಯಿಂದ ಮೋಕ್ಷ, ಅಕಲ್ಮಷಮ್—ಎಲ್ಲಾ ಪೂರ್ವ ಪಾಪ ಫಲಗಳಿಂದ ಮುಕ್ತನಾಗಿ.

**ನನ್ನ ಮೇಲೆ ಸ್ಥಾಪಿತವಾದ ಮನಸ್ಸುಳ್ಳ ಯೋಗಿಯು ಖಂಡಿತವಾಗಿಯೂ ದಿವ್ಯ ಸುಖದ ಅತ್ಯುನ್ನತ ಪರಿಪೂರ್ಣತೆಯನ್ನು ಹೊಂದಿರುತ್ತಾನೆ. ಅವನು ರಜೋಗುಣಾತೀತನು, ಅವನೊಂದಿಗೆ ತನ್ನ ಗುಣಾತ್ಮಕ ಏಕತ್ವವನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ, ಮತ್ತು ಹೀಗೆ ಅವನು ಎಲ್ಲ ಪೂರ್ವ ಕರ್ಮಫಲಗಳಿಂದ ಮುಕ್ತನಾಗುತ್ತಾನೆ.**

**ಭಾವಾರ್ಥ:**—**ಬ್ರಹ್ಮಭೂತ** ಎಂಬುದು ಭೌತಿಕ ಕಲುಷತೆಯಿಂದ ಮುಕ್ತನಾಗಿರುವ ಮತ್ತು ಭಗವಂತನ ದಿವ್ಯ ಸೇವೆಯಲ್ಲಿರುವ ಸ್ಥಿತಿ. **ಮದ್ಭಕ್ತಿಂ ಲಭತೇ ಪರಾಮ್ (ಭಗವದ್ಗೀತೆ** 18. 54). ಒಬ್ಬನ ಮನಸ್ಸು **ಭಗವಂತನ** ಚರಣಾರವಿಂದಗಳಲ್ಲಿ ಸ್ಥಿತವಾದ ಹೊರತು ಅವನು ಪರತತ್ತ್ವದ ಎಂದರೆ ಬ್ರಹ್ಮನ ಗುಣದಲ್ಲಿ ಇರಲಾರನು. **ಸ ವೈ ಮನಃ ಕೃಷ್ಣಪದಾರವಿನ್ದಯೋಃ** ಭಗವಂತನ ದಿವ್ಯ ಪ್ರೀತಿಯುತ ಸೇವೆಯಲ್ಲಿ ಸದಾನಿರತನಾಗಿರುವುದು, ಅಥವಾ ಕೃಷ್ಣಪ್ರಜ್ಞೆಯಲ್ಲಿರುವುದು ಇದೇ ವಾಸ್ತವಿಕವಾಗಿ ರಜೋಗುಣ ಮತ್ತು ಎಲ್ಲ ಭೌತಿಕ ಕಲುಷತೆಗಳಿಂದ ಮುಕ್ತವಾಗಿರುವುದು.

**ಯುಞ್ಜನ್ನೇವಂ ಸದಾತ್ಮಾನಂ ಯೋಗೀ ವಿಗತಕಲ್ಮಷಃ ।**
**ಸುಖೇನ ಬ್ರಹ್ಮಸಂಸ್ಪರ್ಶಮತ್ಯನ್ತಂ ಸುಖಮಶ್ನುತೇ ॥ ೨೮ ॥**

ಯುಞ್ಜನ್—ಯೋಗಾಭ್ಯಾಸದಲ್ಲಿ ತೊಡಗಿ, ಏವಮ್—ಹೀಗೆ, ಸದಾ—ಯಾವಾಗಲೂ, ಆತ್ಮಾನಮ್—ಆತ್ಮನು, ಯೋಗೀ—ಪರಮ ಆತ್ಮನೊಂದಿಗೆ ಸಂಪರ್ಕವುಳ್ಳವನು, ವಿಗತ—ವಿಮೋಚಿಸಲ್ಪಟ್ಟ, ಕಲ್ಮಷಃ—ಎಲ್ಲ ಭೌತಿಕ ಕಲ್ಮಷಗಳು, ಸುಖೇನ—ದಿವ್ಯ ಸುಖದಲ್ಲಿ, ಬ್ರಹ್ಮಸಂಸ್ಪರ್ಶಮ್—ಪರಮನೊಂದಿಗೆ ಸತತ ಸಂಪರ್ಕದಲ್ಲಿದ್ದು, ಅತ್ಯನ್ತಂ—ಅತ್ಯುನ್ನತ, ಸುಖಮ್—ಸುಖವನ್ನು, ಅಶ್ನುತೇ—ಹೊಂದುತ್ತಾನೆ.

**ಹೀಗೆ ಆತ್ಮನಿಯಂತ್ರಿತ ಯೋಗಿಯು, ಸತತ ಯೋಗಾಭ್ಯಾಸದಲ್ಲಿ ನಿರತನಾಗಿದ್ದು, ಎಲ್ಲ ಭೌತಿಕ ಕಲ್ಮಷಗಳಿಂದ ಮುಕ್ತನಾಗುತ್ತಾನೆ ಮತ್ತು ಭಗವಂತನ ದಿವ್ಯ ಪ್ರೀತಿಯುತ ಸೇವೆಯಲ್ಲಿ ಪರಿಪೂರ್ಣ ಸುಖದ ಅತ್ಯುನ್ನತ ಹಂತವನ್ನು ಹೊಂದುತ್ತಾನೆ.**

**ಭಾವಾರ್ಥ :** ಆತ್ಮಸಾಕ್ಷಾತ್ಕಾರ ಎಂದರೆ ಪರಮನ ಸಂಬಂಧದಲ್ಲಿ ಒಬ್ಬನ ಸ್ವರೂಪ ಸ್ಥಿತಿಯನ್ನು ತಿಳಿದಿರುವುದು. ವ್ಯಕ್ತಿಗತ ಆತ್ಮನು ಪರಮನ ವಿಭಿನ್ನಾಂಶ ಮತ್ತು ಭಗವಂತನಿಗೆ ದಿವ್ಯ ಸೇವೆ ಸಲ್ಲಿಸುವುದು ಅವನ ಸ್ಥಾನ. ಪರಮನೊಂದಿಗೆ ಈ ದಿವ್ಯ ಸಂಪರ್ಕವನ್ನು **ಬ್ರಹ್ಮ—ಸಂಸ್ಪರ್ಶ** ಎನ್ನುತ್ತಾರೆ.

**ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥ ೨೯ ॥**

ಸರ್ವಭೂತಸ್ಥಮ್—ಎಲ್ಲ ಜೀವಿಗಳಲ್ಲಿಯೂ ಸನ್ನಿವೇಶಿತನಾದ, ಆತ್ಮಾನಮ್—ಪರಮಾತ್ಮನನ್ನು, ಸರ್ವ—ಎಲ್ಲ, ಭೂತಾನಿ—ಜೀವಿಗಳು, ಚ—ಕೂಡ, ಆತ್ಮನಿ—

ಆತ್ಮನಲ್ಲಿ, ಈಕ್ಷತೇ—ನೋಡುತ್ತಾನೆ, ಯೋಗಯುಕ್ತ ಆತ್ಮಾ—ಕೃಷ್ಣಪ್ರಜ್ಞೆಯಲ್ಲಿ ಕೂಡಿಸಿಕೊಂಡವನು, ಸರ್ವತ್ರ—ಎಲ್ಲ ಕಡೆಯಲ್ಲಿ, ಸಮದರ್ಶನಃ—ಸಮಾನವಾಗಿ ನೋಡುತ್ತಾ.

**ನಿಜಯೋಗಿಯು ಎಲ್ಲ ಜೀವಿಗಳಲ್ಲಿಯೂ ನನ್ನನ್ನು ವೀಕ್ಷಿಸುತ್ತಾನೆ, ಮತ್ತು ಪ್ರತಿಯೊಬ್ಬ ಜೀವಿಯನ್ನೂ ನನ್ನಲ್ಲಿ ವೀಕ್ಷಿಸುತ್ತಾನೆ. ನಿಜವಾಗಿ ಆತ್ಮಸಾಕ್ಷಾತ್ಕಾರಿಯು ನನ್ನನ್ನು, ಅದೇ ಪರಮ ಪ್ರಭುವನ್ನು, ಎಲ್ಲೆಡೆಯೂ ಕಾಣುತ್ತಾನೆ.**

**ಭಾವಾರ್ಥ :** ಕೃಷ್ಣಪ್ರಜ್ಞಾಯೋಗಿಯು ಪರಿಪೂರ್ಣ ದ್ರಷ್ಟಾರನು, ಏಕೆಂದರೆ ಅವನು ಪರಮಾತ್ಮನಾಗಿ ಪ್ರತಿಯೊಬ್ಬರ ಹೃದಯದಲ್ಲಿ ಸನ್ನಿವೇಶಿತನಾದ ಪರಮನನ್ನು, ಕೃಷ್ಣನನ್ನು ಕಾಣುತ್ತಾನೆ. **ಈಶ್ವರಃ ಸರ್ವಭೂತಾನಾಂ ಹೃದ್ದೇಶೇऽರ್ಜುನ ತಿಷ್ಠತಿ.** ಭಗವಂತನು ತನ್ನ ಪರಮಾತ್ಮ ರೂಪದಲ್ಲಿ ನಾಯಿಯ ಹೃದಯದಲ್ಲಿಯೂ ಮತ್ತು ಬ್ರಾಹ್ಮಣನ ಹೃದಯದಲ್ಲಿಯೂ ಸನ್ನಿವೇಶಿತನಾಗಿದ್ದಾನೆ. ಭಗವಂತನು ಶಾಶ್ವತವಾಗಿ ದಿವ್ಯನು ಮತ್ತು ನಾಯಿಯಲ್ಲಿ ಅಥವಾ ಬ್ರಾಹ್ಮಣನಲ್ಲಿ ತನ್ನ ಇರುವಿಕೆಯಿಂದಾಗಿ ಭೌತಿಕವಾಗಿ ಪ್ರಭಾವಿತನಲ್ಲ ಎಂಬುದನ್ನು ಪರಿಪೂರ್ಣ ಯೋಗಿಯು ತಿಳಿದಿರುತ್ತಾನೆ. ಅದು ಭಗವಂತನ ಪರಮ ತಾಟಸ್ಥ್ಯ. ವ್ಯಕ್ತಿಗತ ಆತ್ಮನೂ ಕೂಡ ವ್ಯಕ್ತಿಯ ಹೃದಯದಲ್ಲಿ ಸನ್ನಿವೇಶಿತನು, ಆದರೆ ಅವನು ಎಲ್ಲರ ಹೃದಯದಲ್ಲಿ ಇರುವುದಿಲ್ಲ. ಅದುವೇ ವ್ಯಕ್ತಿಗತ ಆತ್ಮ ಮತ್ತು ಪರಮಾತ್ಮರ ನಡುವೆ ಇರುವ ವ್ಯತ್ಯಾಸ. ವಾಸ್ತವಿಕವಾಗಿ ಯೋಗಾಭ್ಯಾಸದಲ್ಲಿ ಇಲ್ಲದವನು ಅಷ್ಟು ಸ್ಪಷ್ಟವಾಗಿ ಕಾಣಲಾರನು. ಕೃಷ್ಣಪ್ರಜ್ಞಿಯು ಆಸ್ತಿಕನ ಮತ್ತು ನಾಸ್ತಿಕನ ಉಭಯರ ಹೃದಯದಲ್ಲಿಯೂ ಕೃಷ್ಣನನ್ನು ಕಾಣಬಲ್ಲನು. ಸ್ಮೃತಿಯಲ್ಲಿ ಇದು ಹೀಗೆ ದೃಢೀಕೃತವಾಗಿದೆ. **ಆತತತ್ವಾಚ್ಚ ಮಾತೃತ್ವಾಚ್ಚ ಆತ್ಮಾ ಹಿ ಪರಮೋ ಹರಿಃ** ಭಗವಂತನು ಸಕಲ ಜೀವಿಗಳ ಆಕರನಾದ ಕಾರಣ ಅವನು ತಾಯಿ ಮತ್ತು ಪೋಷಕನ ಹಾಗಿರುತ್ತಾನೆ. ಹೇಗೆ ತಾಯಿಯು ಎಲ್ಲ ಭಿನ್ನ ಬಗೆಯ ಮಕ್ಕಳಿಗೆ ತಟಸ್ಥಳಾಗಿರುವಳೋ ಅದರಂತೆಯೇ ಪರಮ ಪಿತನು (ಅಥವಾ ಮಾತೆಯು) ಇರುತ್ತಾನೆ. ಪರಿಣಾಮವಾಗಿ, ಪರಮಾತ್ಮನು ಪ್ರತಿಯೊಂದು ಜೀವಿಯಲ್ಲಿಯೂ ಸದಾ ಇರುತ್ತಾನೆ.

ಬಾಹ್ಯವಾಗಿಯೂ ಕೂಡ ಪ್ರತಿಯೊಬ್ಬ ಜೀವಿಯು ಭಗವಂತನ ಶಕ್ತಿಯಲ್ಲಿ ಸನ್ನಿವೇಶಿತನಾಗಿದ್ದಾನೆ. ಏಳನೆಯ ಅಧ್ಯಾಯದಲ್ಲಿ ವರ್ಣಿಸಲಾಗುವಂತೆ, ಭಗವಂತನಿಗೆ ಪ್ರಾಥಮಿಕವಾಗಿ ಆಧ್ಯಾತ್ಮಿಕ (ಅಥವಾ ಪರಾ) ಮತ್ತು ಭೌತಿಕ (ಅಥವಾ ಅಪರಾ) ಎಂಬ ಎರಡು ಶಕ್ತಿಗಳಿವೆ, ಆತ್ಮನು ಪರಾ ಶಕ್ತಿಯ ಭಾಗವಾಗಿದ್ದರೂ, ಅಪರಾ ಶಕ್ತಿಯಿಂದ ಬದ್ಧನಾಗಿರುತ್ತಾನೆ; ಜೀವಿಯು ಸದಾ ಭಗವತ್‌ಶಕ್ತಿಯಲ್ಲಿ ಇರುತ್ತಾನೆ. ಪ್ರತಿಯೊಬ್ಬ ಜೀವಿಯೂ ಒಂದಲ್ಲಾ ಒಂದು ರೀತಿಯಲ್ಲಿ ಅವನಲ್ಲಿ ಸನ್ನಿವೇಶಿತನಾಗಿರುತ್ತಾನೆ.

ಯೋಗಿಯು ಸಮಾನವಾಗಿ ನೋಡುತ್ತಾನೆ, ಏಕೆಂದರೆ ಸಕಲ ಜೀವಿಗಳು, ಕಾಮ್ಯ ಕರ್ಮಗಳ ಫಲಾನುಸಾರ ಭಿನ್ನ ಭಿನ್ನವಾಗಿ ಸನ್ನಿವೇಶಿತರಾಗಿದ್ದರೂ, ಎಲ್ಲ ಸಂದರ್ಭಗಳಲ್ಲಿಯೂ ಭಗವಂತನ ಸೇವಕರಾಗಿ ಉಳಿಯುತ್ತಾರೆ. ಭೌತಿಕ ಶಕ್ತಿಯಲ್ಲಿ ಇರುವಾಗ

ಜೀವಿಯು ಭೌತಿಕ ಇಂದ್ರಿಯಗಳ ಸೇವೆ ಮಾಡುತ್ತಾನೆ; ಮತ್ತು ಅಧ್ಯಾತ್ಮ ಶಕ್ತಿಯಲ್ಲಿರುವಾಗ ಅವನು ನೇರವಾಗಿ ಪರಮ ಪ್ರಭುವಿನ ಸೇವೆ ಮಾಡುತ್ತಾನೆ. ಉಭಯ ಪ್ರಸಂಗಗಳಲ್ಲಿಯೂ ಜೀವಿಯು ಭಗವಂತನ ದಾಸನು. ಈ ಸಮಾಸ ದೃಷ್ಟಿಯು ಕೃಷ್ಣಪ್ರಜ್ಞೆಯಲ್ಲಿ ಪರಿಪೂರ್ಣ.

**ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।**
**ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥ ೩೦ ॥**

ಯಃ—ಯಾರು, ಮಾಮ್—ನನ್ನನ್ನು, ಪಶ್ಯತಿ—ನೋಡುತ್ತಾನೆ, ಸರ್ವತ್ರ—ಎಲ್ಲೆಡೆಯೂ, ಸರ್ವಮ್—ಪ್ರತಿಯೊಂದನ್ನು, ಚ—ಮತ್ತು, ಮಯಿ—ನನ್ನಲ್ಲಿ, ಪಶ್ಯತಿ—ನೋಡುತ್ತಾನೆ, ತಸ್ಯ—ಅವನಿಗೆ, ಅಹಮ್—ನಾನು, ನ—ಇಲ್ಲ, ಪ್ರಣಶ್ಯಾಮಿ—ನಷ್ಟನು, ಸಃ—ಅವನು, ಚ—ಕೂಡ, ಮೇ—ನನಗೆ. ನ—ಇಲ್ಲ, ಪ್ರಣಶ್ಯತಿ—ನಷ್ಟ.

**ಎಲ್ಲೆಡೆಯೂ ನನ್ನನ್ನು ನೋಡುವವನಿಗೆ ಮತ್ತು ಪ್ರತಿಯೊಂದನ್ನು ನನ್ನಲ್ಲಿ ನೋಡುವವನಿಗೆ, ನಾನು ಎಂದಿಗೂ ನಷ್ಟವಾಗುವುದಾಗಲೀ ಅಥವಾ ಅವನು ನನಗೆ ಎಂದಿಗೂ ನಷ್ಟವಾಗುವುದಾಗಲೀ ಇಲ್ಲ.**

**ಭಾವಾರ್ಥ :** ಕೃಷ್ಣಪ್ರಜ್ಞೆಯು ಖಂಡಿತವಾಗಿ ಎಲ್ಲೆಡೆಯೂ ಕೃಷ್ಣನನ್ನು ಕಾಣುತ್ತಾನೆ, ಮತ್ತು ಅವನು ಪ್ರತಿಯೊಂದನ್ನೂ ಕೃಷ್ಣನಲ್ಲಿ ಕಾಣುತ್ತಾನೆ. ಅಂಥ ವ್ಯಕ್ತಿಯು ಭೌತಿಕ ಪ್ರಕೃತಿಯ ಎಲ್ಲ ಪ್ರತ್ಯೇಕ ಉದ್ಭೂತಿಗಳನ್ನು ಕಾಣುವಂತೆ ತೋರಬಹುದು. ಆದರೆ ಪ್ರತಿಯೊಂದು ಪ್ರಸಂಗದಲ್ಲಿಯೂ, ಪ್ರತಿಯೊಂದೂ ಕೂಡ ಕೃಷ್ಣನ ಶಕ್ತಿಯ ಉದ್ಭೂತಿ ಎಂದು ತಿಳಿದು ಕೃಷ್ಣಪ್ರಜ್ಞೆಯಾಗಿರುತ್ತಾನೆ. ಕೃಷ್ಣನಿಲ್ಲದೆ ಯಾವುದೂ ಇರಲಾರದು ಮತ್ತು ಕೃಷ್ಣನು ಪ್ರತಿಯೊಂದರ ಒಡೆಯನು—ಇದು ಕೃಷ್ಣಪ್ರಜ್ಞೆಯ ಆಧಾರತತ್ವ. ಕೃಷ್ಣ ಪ್ರಜ್ಞೆಯು ಕೃಷ್ಣ ಪ್ರೇಮದ ವರ್ಧನೆ—ಭೌತಿಕ ಮೋಕ್ಷಕ್ಕೂ ಅತೀತವಾದ ಸ್ಥಾನ. ಆತ್ಮ-ಸಾಕ್ಷಾತ್ಕಾರಕ್ಕಿಂತ ಮೀರಿದ ಕೃಷ್ಣಪ್ರಜ್ಞೆಯ ಈ ಹಂತದಲ್ಲಿ ಕೃಷ್ಣನು ಭಕ್ತನಿಗೆ ಸರ್ವಸ್ವವಾಗುತ್ತಾನೆ ಮತ್ತು ಭಕ್ತನು ಕೃಷ್ಣನನ್ನು ಪ್ರೇಮಿಸುವುದರಲ್ಲಿ ಪೂರ್ಣನಾಗುತ್ತಾನೆ; ಈ ಅಭಿಪ್ರಾಯದಲ್ಲಿ ಭಕ್ತನು ಕೃಷ್ಣನೊಡನೆ ಒಂದಾಗುತ್ತಾನೆ. ಆಗ ಭಗವಂತನ ಮತ್ತು ಭಕ್ತನ ನಡುವೆ ನಿಕಟ ಸಂಬಂಧ ಇರುತ್ತದೆ. ಆ ಹಂತದಲ್ಲಿ, ಜೀವಿಯು ಎಂದಿಗೂ ನಾಶವಾಗಲಾರನು, ಅಥವಾ ದೇವೋತ್ತಮ ಪುರುಷನು ಭಕ್ತನ ದೃಷ್ಟಿಯಿಂದ ಎಂದಿಗೂ ಮರೆಯಾಗುವುದಿಲ್ಲ. ಕೃಷ್ಣನಲ್ಲಿ ಲೀನವಾಗುವುದು ಆಧ್ಯಾತ್ಮಿಕ ನಾಶ. ಭಕ್ತನು ಅಂಥ ಅಪಾಯವನ್ನು ಸ್ವೀಕರಿಸುವುದಿಲ್ಲ. ಬ್ರಹ್ಮ-ಸಂಹಿತೆಯಲ್ಲಿ (5.38) ಹೇಳಿದೆ :

ಪ್ರೇಮಾಂಜನಚ್ಛುರಿತಭಕ್ತಿವಿಲೋಚನೇನ
ಸನ್ತಃ ಸದೈವ ಹೃದಯೇಷು ವಿಲೋಕಯನ್ತಿ।
ಯಂ ಶ್ಯಾಮಸುನ್ದರಮ್ ಅಚಿನ್ತ್ಯಗುಣಸ್ವರೂಪಂ
ಗೋವಿನ್ದಮ್ ಆದಿಪುರುಷಂ ತಮ್ ಅಹಂ ಭಜಾಮಿ॥

"ಪ್ರೇಮಾಂಜನದಿಂದ ಪೂಸಿದ ಕಣ್ಣುಗಳುಳ್ಳ ಭಕ್ತನಿಗೆ ಸದಾ ಕಾಣಿಸುವ ಆದಿ ಪುರುಷನಾದ ಗೋವಿಂದನನ್ನು ನಾನು ಭಜಿಸುತ್ತೇನೆ. ಭಕ್ತನ ಹೃದಯದಲ್ಲಿ ಸನ್ನಿವೇಶಿತನಾದ ಶ್ಯಾಮಸುಂದರನೆಂಬ ಅವನ ನಿತ್ಯ ರೂಪದಲ್ಲಿ ಅವನು ಕಾಣುತ್ತಾನೆ."

ಈ ಹಂತದಲ್ಲಿ ಕೃಷ್ಣನು ಭಕ್ತನ ದೃಷ್ಟಿಯಿಂದ ಮರೆಯಾಗುವುದಾಗಲೀ ಅಥವಾ ಭಕ್ತನು ಭಗವಂತನ ನೋಟವನ್ನು ಕಳೆದುಕೊಳ್ಳುವುದಾಗಲೀ ಎಂದಿಗೂ ಇಲ್ಲ. ಹೃದಯದಲ್ಲಿ ಭಗವಂತನನ್ನು ಪರಮಾತ್ಮನಾಗಿ ಕಾಣುವ ಯೋಗಿಯ ವಿಷಯದಲ್ಲಿಯೂ ಇದೇ ಅನ್ವಯಿಸುತ್ತದೆ. ಅಂಥ ಯೋಗಿಯು ಶುದ್ಧ ಭಕ್ತನಾಗಿ ಪರಿವರ್ತನೆ ಹೊಂದುತ್ತಾನೆ ಮತ್ತು ಕ್ಷಣಕಾಲವೂ ಕೂಡ ತನ್ನಲ್ಲಿ ಭಗವಂತನನ್ನು ಕಾಣದೆ ಜೀವಿಸಲು ಸಹಿಸನು.

**ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ ।**
**ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ ॥ ೩೧ ॥**

ಸರ್ವಭೂತ ಸ್ಥಿತಮ್—ಪ್ರತಿಯೊಬ್ಬನ ಹೃದಯದಲ್ಲಿ ಸನ್ನಿವೇಶಿತನಾದ, ಯಃ—ಯಾರು ಅವನು, ಮಾಮ್—ನನ್ನನ್ನು, ಭಜತಿ—ಭಕ್ತಿಯುತ ಸೇವೆಯಲ್ಲಿ ಸೇವಿಸುತ್ತಾನೆ, ಏಕತ್ವಮ್—ಏಕತ್ವದಲ್ಲಿ, ಆಸ್ಥಿತಃ—ಸನ್ನಿವೇಶಿತನಾಗಿ, ಸರ್ವಥಾ—ಎಲ್ಲ ವಿಷಯಗಳಲ್ಲಿ, ವರ್ತಮಾನಃ—ಸನ್ನಿವೇಶಿತನಾಗಿದ್ದು, ಅಪಿ—ಕೂಡ, ಸಃ—ಅವನು, ಯೋಗೀ—ದಿವ್ಯವಾದಿಯು, ಮಯಿ—ನನ್ನಲ್ಲಿ, ವರ್ತತೇ—ಇರುತ್ತಾನೆ.

**ನಾನು ಮತ್ತು ಪರಮಾತ್ಮನು ಒಂದು ಎಂದು ತಿಳಿದು ಪರಮಾತ್ಮನ ಆರಾಧನಾ ಸೇವೆಯಲ್ಲಿ ನಿರತನಾಗುವಂಥ ಯೋಗಿಯು ಎಲ್ಲಾ ಸಂದರ್ಭಗಳಲ್ಲಿಯೂ ಸದಾ ನನ್ನಲ್ಲಿಯೇ ಇರುತ್ತಾನೆ.**

**ಭಾವಾರ್ಥ:** ಪರಮಾತ್ಮನ ಧ್ಯಾನವನ್ನು ಮಾಡುತ್ತಿರುವ ಯೋಗಿಯು ತನ್ನೊಳಗೆ—ಚತುರ್ಭುಜಗಳಲ್ಲಿ ಶಂಖ, ಚಕ್ರ, ಗದೆ ಮತ್ತು ಪದ್ಮವನ್ನು ಹಿಡಿದಿರುವ ಕೃಷ್ಣನ ಪೂರ್ಣಾಂಶನಾದ ವಿಷ್ಣುವನ್ನು ಕಾಣುತ್ತಾನೆ. ವಿಷ್ಣುವು ಕೃಷ್ಣನಿಂದ ಬೇರೆಯಲ್ಲ ಎಂಬುದನ್ನು ಯೋಗಿಯು ತಿಳಿದಿರಬೇಕು. ಕೃಷ್ಣನು ಈ ಪರಮಾತ್ಮರೂಪದಲ್ಲಿ ಪ್ರತಿಯೊಬ್ಬರ ಹೃದಯದಲ್ಲಿಯೂ ಸನ್ನಿವೇಶಿತನು. ಇದಲ್ಲದೆ, ಅಸಂಖ್ಯಾತ ಜೀವಿಗಳ ಹೃದಯಗಳಲ್ಲಿರುವ ಅಸಂಖ್ಯಾತ ಪರಮಾತ್ಮರ ನಡುವೆ ಯಾವ ವ್ಯತ್ಯಾಸವೂ ಇಲ್ಲ. ಅಥವಾ ಕೃಷ್ಣನ ದಿವ್ಯ ಪ್ರೀತಿಯುತ ಸೇವೆಯಲ್ಲಿ ಸದಾ ನಿರತನಾಗಿರುವ ಕೃಷ್ಣಪ್ರಜ್ಞಿ ಮತ್ತು ಪರಮಾತ್ಮನ ಧ್ಯಾನದಲ್ಲಿ ನಿರತರಾಗಿರುವ ಪರಿಪೂರ್ಣಯೋಗಿಯ ನಡುವೆಯೂ ಯಾವ ಭೇದವೂ ಇಲ್ಲ. ಕೃಷ್ಣಪ್ರಜ್ಞೆಯಲ್ಲಿನ ಯೋಗಿಯು—ಭೌತಿಕ ಅಸ್ತಿತ್ವದಲ್ಲಿರುವಾಗ ವಿವಿಧ ಚಟುವಟಿಕೆಗಳಲ್ಲಿ ತೊಡಗಿರಬಹುದಾದರೂ—ಸದಾ ಕೃಷ್ಣನಲ್ಲಿ ಸನ್ನಿವೇಶಿತನಾಗಿರುತ್ತಾನೆ. ಶ್ರೀಲ ರೂಪಗೋಸ್ವಾಮಿಯವರ ಭಕ್ತಿರಸಾಮೃತ—ಸಿಂಧುವಿನಲ್ಲಿ (1. 2. 187), **ನಿಖಿಲಾಸ್ವಪ್ಯವಸ್ಥಾಸು ಜೀವನ್ಮುಕ್ತಃ ಸ ಉಚ್ಯತೇ** ಎಂದು ದೃಢೀಕೃತವಾಗಿದೆ. ಭಗವದ್ಭಕ್ತನು, ಸದಾ ಕೃಷ್ಣಪ್ರಜ್ಞೆಯಲ್ಲಿ ಕಾರ್ಯಮಾಡುತ್ತಿದ್ದು, ತಾನಾಗಿಯೇ **ಮುಕ್ತನಾಗಿರುವನು. ನಾರದ ಪಾಂಚರಾತ್ರ**ದಲ್ಲಿ ಇದು ಹೀಗೆ ದೃಢೀಕೃತವಾಗಿದೆ:

ದಿಕ್ಕಾಲಾದ್ಯನವಚ್ಛಿನ್ನೇ ಕೃಷ್ಣೇ ಚೇತೋವಿಧಾಯ ಚ
ತನ್ಮಯೋ ಭವತಿ ಕ್ಷಿಪ್ರಂ ಜೀವೋ ಬ್ರಹ್ಮಣಿ ಯೋಜಯೇತ್

"ಸರ್ವವ್ಯಾಪ್ತ ಮತ್ತು ದೇಶಕಾಲಾತೀತವೂ, ಆದ ಕೃಷ್ಣನ ದಿವ್ಯರೂಪದಲ್ಲಿ ತನ್ನ ಲಕ್ಷ್ಯವನ್ನು ಕೇಂದ್ರೀಕರಿಸುವುದರಿಂದ ಒಬ್ಬನು ಕೃಷ್ಣನ ಚಿಂತನೆಯಲ್ಲಿ ತಲ್ಲೀನನಾಗುತ್ತಾನೆ ಮತ್ತು ಆಗ ಅವನೊಂದಿಗೆ ದಿವ್ಯ ಸಂಗದ ಸುಖ ಸ್ಥಿತಿಯನ್ನು ಹೊಂದುತ್ತಾನೆ. "

ಕೃಷ್ಣಪ್ರಜ್ಞೆಯು ಯೋಗಾಚರಣೆಯಲ್ಲಿ ಸಮಾಧಿಯ ಅತ್ಯುನ್ನತ ಹಂತ. ಕೃಷ್ಣನು ಪರಮಾತ್ಮನಾಗಿ ಪ್ರತಿಯೊಬ್ಬನ ಹೃದಯದಲ್ಲಿರುವನು ಎಂಬ ಈ ಜ್ಞಾನವೇ ಯೋಗಿಯನ್ನು ದೋಷರಹಿತನಾಗಿ ಮಾಡುತ್ತದೆ. ವೇದಗಳು (ಗೋಪಾಲ ತಾಪನೀ ಉಪನಿಷದ್ 1. 21) ಭಗವಂತನ ಈ ಅಚಿಂತ್ಯ ಶಕ್ತಿಯನ್ನು ಹೀಗೆ ದೃಢಪಡಿಸುತ್ತವೆ: **ಏಕೋಽಪಿ ಸನ್ ಬಹುಧಾ ಯೋಽವಭಾತಿ.** "ಭಗವಂತನು ಒಬ್ಬನೇ ಆಗಿದ್ದರೂ, ಅವನು ಅಸಂಖ್ಯಾತ ಹೃದಯಗಳಲ್ಲಿ ಬಹು ಸಂಖ್ಯೆಯಲ್ಲಿ ಇದ್ದಾನೆ. " ಇದೇ ಪ್ರಕಾರ ಸ್ಮೃತಿಶಾಸ್ತ್ರದಲ್ಲಿ ಹೀಗೆ ಹೇಳಿದೆ:

ಏಕ ಏವ ಪರೋ ವಿಷ್ಣುಃ ಸರ್ವವ್ಯಾಪೀ ನ ಸಂಶಯಃ
ಐಶ್ವರ್ಯಾದ್‌ರೂಪಮ್ ಏಕಂ ಚ ಸೂರ್ಯವತ್ ಬಹುಧೇಯತೇ

"ವಿಷ್ಣು ಒಬ್ಬನೇ ಆದರೂ ಅವನು ಖಂಡಿತ ಸರ್ವವ್ಯಾಪಿ. ಸೂರ್ಯನು ಏಕಕಾಲದಲ್ಲಿ ಅನೇಕ ಸ್ಥಳಗಳಲ್ಲಿ ಕಾಣುವಂತೆ,ತನಗೆ ಒಂದೇ ರೂಪವಿದ್ದರೂ ತನ್ನ ಅಚಿಂತ್ಯ ಶಕ್ತಿಯಿಂದ ಅವನು ಎಲ್ಲೆಡೆಯೂ ಇದ್ದಾನೆ. "

**ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ।**
**ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ ॥೩೨॥**

ಆತ್ಮ—ತನ್ನ ಆತ್ಮನೊಂದಿಗೆ, ಔಪಮ್ಯೇನ—ಹೋಲಿಕೆಯಿಂದ, ಸರ್ವತ್ರ—ಎಲ್ಲ ಕಡೆಯಲ್ಲಿ, ಸಮಮ್—ಸಮಾನವಾಗಿ, ಪಶ್ಯತಿ—ನೋಡುತ್ತಾನೆ, ಯಃ—ಅವನು, ಅರ್ಜುನ-ಹೇ ಅರ್ಜುನ, ಸುಖಮ್—ಸುಖ, ವಾ— ಅಥವಾ, ಯದಿ—ಒಂದು ವೇಳೆ, ವಾ—ಅಥವಾ, ದುಃಖಮ್—ದುಃಖ, ಸಃ—ಅಂಥ, ಯೋಗೀ—ದಿವ್ಯವಾದಿಯು, ಪರಮಃ—ಪರಿಪೂರ್ಣನೆಂದು, ಮತಃ—ಪರಿಗಣಿಸಲ್ಪಡುವನು.

**ಹೇ ಅರ್ಜುನ ! ಯಾರು ತನ್ನ ಆತ್ಮನೊಂದಿಗೆ ಹೋಲಿಸಿಕೊಂಡು, ಅವರ ಸುಖ ಮತ್ತು ದುಃಖದಲ್ಲಿಯೂ ಎಲ್ಲ ಜೀವಿಗಳ ನಿಜ ಸಮಾನತೆಯನ್ನು ಕಾಣುವನೋ ಅವನು ಪರಿಪೂರ್ಣಯೋಗಿ.**

**ಭಾವಾರ್ಥ :** ಕೃಷ್ಣಪ್ರಜ್ಞೆಯು ಪರಿಪೂರ್ಣಯೋಗಿ; ತನ್ನ ಸ್ವಾನುಭವದಿಂದ ಅವನು ಪ್ರತಿಯೊಬ್ಬನ ಸುಖ ದುಃಖವನ್ನು ತಿಳಿದವನು. ದೇವರೊಂದಿಗೆ ತನ್ನ ಸಂಬಂಧದ ವಿಸ್ಮೃತಿಯೇ ಜೀವಿಯ ದುಃಖಕ್ಕೆ ಕಾರಣ. ಕೃಷ್ಣನು ಮಾನವರ ಸಕಲ ಚಟುವಟಿಕೆಗಳ ಪರಮ ಭೋಕ್ತಾರನು,ಎಲ್ಲ ಭೂಮಿ ಮತ್ತು ಲೋಕಗಳ ಒಡೆಯ,ಮತ್ತು ಸಕಲ ಜೀವಿಗಳ

ಅತ್ಯಂತ ಪ್ರಾಮಾಣಿಕ ಮಿತ್ರ ಎಂದು ತಿಳಿಯುವುದೇ ಸುಖಕ್ಕೆ ಕಾರಣ. ಭೌತಿಕ ಪ್ರಕೃತಿಯ ಗುಣಬದ್ಧ ಜೀವಿಯು, ಕೃಷ್ಣನೊಂದಿಗೆ ತನ್ನ ಸಂಬಂಧ ವಿಸ್ಮೃತಿಯಿಂದಾಗಿ ತ್ರಿವಿಧ ಭೌತಿಕ ಕ್ಲೇಶಗಳಿಗೆ ಒಳಪಟ್ಟಿರುವನೆಂಬುದನ್ನು ಪರಿಪೂರ್ಣ ಯೋಗಿಯು ತಿಳಿದಿರುತ್ತಾನೆ. ಕೃಷ್ಣಪ್ರಜ್ಞೆಯು ಸುಖವಾಗಿರುವ ಕಾರಣ, ಅವನು ಕೃಷ್ಣಜ್ಞಾನವನ್ನು ಎಲ್ಲೆಡೆಯೂ ವಿತರಣೆ ಮಾಡಲು ಯತ್ನಿಸುತ್ತಾನೆ. ಪರಿಪೂರ್ಣ ಯೋಗಿಯು ಕೃಷ್ಣಪ್ರಜ್ಞೆಯಾಗುವುದರ ಮಹತ್ವವನ್ನು ಪ್ರಸಾರ ಮಾಡಲು ಯತ್ನಿಸುವುದರಿಂದ, ಅವನು ಪ್ರಪಂಚದಲ್ಲಿ ಅತ್ಯುತ್ತಮ ಲೋಕೋಪಕಾರಿ, ಮತ್ತು ಅವನು ಭಗವಂತನ ಅತ್ಯಂತ ಪ್ರಿಯ ಸೇವಕನು. **ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ** (ಭಗವದ್ಗೀತ 18.69). ಅರ್ಥಾತ್, ಭಗವದ್ಭಕ್ತನು ಸದಾ ಸಕಲ ಜೀವಿಗಳ ಯೋಗಕ್ಷೇಮವನ್ನು ಗಮನಿಸುತ್ತಾನೆ. ಮತ್ತು ಈ ರೀತಿಯಲ್ಲಿ ಅವನು ವಾಸ್ತವಿಕವಾಗಿ ಪ್ರತಿಯೊಬ್ಬನ ಮಿತ್ರನು. ಅವನು ಶ್ರೇಷ್ಠಯೋಗಿ, ಏಕೆಂದರೆ ಅವನು ತನ್ನ ವೈಯಕ್ತಿಕ ಲಾಭಕ್ಕಾಗಿ ಯೋಗ ಪರಿಪೂರ್ಣತೆಯನ್ನು ಆಶಿಸುವುದಿಲ್ಲ, ಆದರೆ ಇತರರ ಸಲುವಾಗಿಯೂ ಯತ್ನಿಸುತ್ತಾನೆ. ಅವನು ತನ್ನ ಸಹಜೀವಿಗಳ ಬಗ್ಗೆ ಅಸೂಯೆಪಡುವುದಿಲ್ಲ. ಇಲ್ಲಿ ಭಗವಂತನ ಶುದ್ಧಭಕ್ತ ಮತ್ತು ತನ್ನ ವೈಯಕ್ತಿಕ ಔನ್ನತ್ಯದಲ್ಲಿ ಮಾತ್ರವೇ ಆಸಕ್ತನಾದ ಯೋಗಿಯ ನಡುವೆ ಇರುವ ವ್ಯತ್ಯಾಸವನ್ನು ಕಾಣಬಹುದು. ಪರಿಪೂರ್ಣವಾಗಿ ಧ್ಯಾನ ಮಾಡಲು ಏಕಾಂತ ಸ್ಥಳಕ್ಕೆ ಹೋಗಿರುವ ಯೋಗಿಯು, ಪ್ರತಿಯೊಬ್ಬನನ್ನು ಕೃಷ್ಣಪ್ರಜ್ಞೆಯನ್ನಾಗಿ ಮಾಡಲು ತನ್ನ ಅತ್ಯುತ್ತಮ ಪ್ರಯತ್ನ ಮಾಡುವ ಭಕ್ತನಷ್ಟು ಪರಿಪೂರ್ಣನಾಗಲಾರನು.

**ಅರ್ಜುನ ಉವಾಚ :**
**ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ ।**
**ಏತಸ್ಯಾಹಂ ನ ಪಶ್ಯಾಮಿ ಚಞ್ಚಲತ್ವಾತ್ ಸ್ಥಿತಿಂ ಸ್ಥಿರಾಮ್ ॥ ೩೩ ॥**

ಅರ್ಜುನ ಉವಾಚ—ಅರ್ಜುನನು ನುಡಿದನು, ಯಃ ಅಯಮ್—ಈ ಪದ್ಧತಿಯು, ಯೋಗಃ—ಯೋಗದ, ತ್ವಯಾ—ನಿನ್ನಿಂದ, ಪ್ರೋಕ್ತಃ—ವರ್ಣಿತವಾದ, ಸಾಮ್ಯೇನ—ಸಾಮಾನ್ಯವಾಗಿ, ಮಧುಸೂದನ—ಹೇ ಮಧು ದೈತ್ಯ ಸಂಹಾರಕನೇ, ಏತಸ್ಯ—ಇದರ, ಅಹಮ್—ನಾನು, ನ—ಇಲ್ಲ, ಪಶ್ಯಾಮಿ—ನೋಡುತ್ತೇನೆ, ಚಞ್ಚಲತ್ವಾತ್—ಚಂಚಲತೆಯ ಕಾರಣ, ಸ್ಥಿತಿಮ್—ಸ್ಥಿತಿಯು, ಸ್ಥಿರಾಮ್—ಸ್ಥಿರ.

**ಅರ್ಜುನನು ನುಡಿದನು : ಹೇ ಮಧುಸೂದನ, ನೀನು ಸಾರಾಂಶೀಕರಿಸಿದ ಯೋಗಪದ್ಧತಿಯು ಅವ್ಯವಹಾರ್ಯ ಮತ್ತು ಸಹಿಸಲು ಅಸಾಧ್ಯವೆಂದು ನನಗೆ ತೋರುತ್ತದೆ, ಏಕೆಂದರೆ ಮನಸ್ಸು ಚಂಚಲ ಮತ್ತು ಅಸ್ಥಿರ.**

**ಭಾವಾರ್ಥ : ಶುಚೌ ದೇಶೇ** ಎಂಬ ಪದದಿಂದ ಆರಂಭವಾಗಿ **ಯೋಗೀಪರಮಃ** ಎಂದು ಕೊನೆಗೊಳ್ಳುವ ಶ್ರೀಕೃಷ್ಣನಿಂದ ಅರ್ಜುನನಿಗೆ ವರ್ಣಿತವಾದ ಯೋಗಪದ್ಧತಿಯು ಇಲ್ಲಿ ಅಶಕ್ತತಾ ಭಾವನಾ ಪ್ರಯುಕ್ತ ಅರ್ಜುನನಿಂದ ತಿರಸ್ಕರಿಸಲ್ಪಡುತ್ತಿದೆ. ಈ ಕಲಿ

ಯುಗದಲ್ಲಿ ಗೃಹವನ್ನು ತ್ಯಜಿಸಿ, ಯೋಗಾಭ್ಯಾಸ ಮಾಡಲು ಪರ್ವತಗಳಲ್ಲಿ ಅಥವಾ ಅರಣ್ಯಗಳಲ್ಲಿನ ಏಕಾಂತ ಸ್ಥಳಕ್ಕೆ ಹೋಗಲು ಸಾಮಾನ್ಯ ಮನುಷ್ಯನಿಗೆ ಸಾಧ್ಯವಿಲ್ಲ. ಈ ಯುಗವು ಅಲ್ಪಾವಧಿಯ ಜೀವಿತಕ್ಕಾಗಿ ಕಠಿಣ ಹೋರಾಟದ ಗುಣಲಕ್ಷಣದಿಂದ ಕೂಡಿರುತ್ತದೆ. ಸರಳ, ಕಾರ್ಯಸಾಧ್ಯ ಮಾರ್ಗಗಳಿಂದಲೂ ಕೂಡ ಜನ ಆತ್ಮಸಾಕ್ಷಾತ್ಕಾರದ ಬಗ್ಗೆ ಗಂಭೀರ ವಿಚಾರಪರರಾಗಿಲ್ಲ. ಹಾಗಿರಲು, ಇನ್ನು ಜೀವನದ ರೀತಿ, ಕುಳಿತುಕೊಳ್ಳುವ ರೀತಿ, ಸ್ಥಳದ ಆಯ್ಕೆ ಮತ್ತು ಭೌತಿಕ ತೊಡಗುವಿಕೆಗಳಿಂದ ಮನಸ್ಸಿನ ವಿರಕ್ತಿ—ಇವಲ್ಲವನ್ನೂ ನಿಯಂತ್ರಿಸುವ ಈ ಕಷ್ಟಸಾಧ್ಯ ಯೋಗಪದ್ಧತಿಯ ಬಗ್ಗೆ ಏನು ಹೇಳುವುದು ? ಅರ್ಜುನನು ಅನೇಕ ರೀತಿಗಳಲ್ಲಿ ಅನುಕೂಲ ಸ್ಥಿತಿಯಲ್ಲಿದ್ದರೂ, ವ್ಯವಹಾರಜ್ಞನಾಗಿ, ಈ ಯೋಗಪದ್ಧತಿಯನ್ನು ಅನುಸರಿಸುವುದು ಅಸಾಧ್ಯವೆಂದು ಭಾವಿಸಿದನು. ಅವನು ರಾಜ ಕುಟುಂಬಕ್ಕೆ ಸೇರಿದ್ದನು ಮತ್ತು ಅನೇಕ ಗುಣಗಳಲ್ಲಿ ಅತ್ಯುನ್ನತನಾಗಿದ್ದನು; ಅವನು ಮಹಾ ವೀರನು, ದೀರ್ಘಾಯುಸ್ಸುಳ್ಳವನು ಮತ್ತು ಎಲ್ಲಕ್ಕಿಂತ ಮಿಗಿಲಾಗಿ ಅವನು ಪರಮ ದೇವೋತ್ತಮ ಪುರುಷ ಭಗವಾನ್ ಕೃಷ್ಣನ ಅತ್ಯಂತ ಆಪ್ತ ಮಿತ್ರನೂ ಆಗಿದ್ದನು. ಐದು ಸಾವಿರ ವರ್ಷಗಳ ಹಿಂದೆ, ಅರ್ಜುನನಿಗೆ ನಮಗೆ ಈಗ ಇರುವುದಕ್ಕಿಂತಲೂ ಅದೆಷ್ಟೋ ಉತ್ತಮವಾದ ಸೌಲಭ್ಯಗಳಿದ್ದರೂ, ಅವನು ಈ ಯೋಗ ಪದ್ಧತಿಯನ್ನು ಅಂಗೀಕರಿಸಲು ನಿರಾಕರಿಸಿದನು. ವಾಸ್ತವಿಕವಾಗಿ, ಅವನು ಈ ಯೋಗವನ್ನು ಯಾವುದೇ ಕಾಲದಲ್ಲಿ ಅಭ್ಯಾಸ ಮಾಡಿದುದರ ಯಾವುದೇ ಐತಿಹಾಸಿಕ ದಾಖಲೆಯನ್ನು ನಾವು ಕಾಣುವುದಿಲ್ಲ. ಆದುದರಿಂದ ಈ ಪದ್ಧತಿಯು ಕಲಿಯುಗದಲ್ಲಿ ಸಾಮಾನ್ಯವಾಗಿ ಅಸಾಧ್ಯವೆಂದು ಪರಿಗಣಿಸಬೇಕು. ಅದು ಅತ್ಯಲ್ಪ ಸಂಖ್ಯೆಯ ಅಪರೂಪ ಜನರಿಗೆ ಸಾಧ್ಯವಿರಬಹುದು, ಆದರೆ ಜನಸಾಮಾನ್ಯರಿಗೆ ಅದು ಅಸಾಧ್ಯ ಪ್ರಸ್ತಾವನೆ. ಐದು ಸಾವಿರ ವರ್ಷಗಳ ಹಿಂದೆಯೇ ಇದು ಹೀಗಿದ್ದರೆ, ಇನ್ನು ಈಗಿನ ಮಾತೇನು ? ವಿವಿಧ ಶಾಲೆಗಳು ಮತ್ತು ಸಂಘಗಳೆಂಬಲ್ಲಿ ಈ ಯೋಗ ಪದ್ಧತಿಯನ್ನು ಅನುಕರಿಸುವವರು, ಸಂತೃಪ್ತರಾಗಿದ್ದರೂ ಖಂಡಿತ ವ್ಯರ್ಥ ಕಾಲಹರಣ ಮಾಡುತ್ತಿದ್ದಾರೆ. ಅವರು ಇಚ್ಛಿತ ಧ್ಯೇಯದ ಬಗ್ಗೆ ಸಂಪೂರ್ಣವಾಗಿ ಅಜ್ಞಾನಿಗಳು.

**ಚಞ್ಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್ ।**
**ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ॥ ೩೪ ॥**

ಚಞ್ಚಲಂ—ಚಂಚಲವು, ಹಿ—ಖಂಡಿತವಾಗಿ, ಮನಃ—ಮನಸ್ಸು, ಕೃಷ್ಣ—ಹೇ ಕೃಷ್ಣ, ಪ್ರಮಾಥಿ—ಉದ್ವಿಗ್ನವಾಗುತ್ತಾ, ಬಲವತ್—ಬಲವಾಗಿ, ದೃಢಮ್—ಬಗ್ಗದ, ಹಟಮಾರಿ, ತಸ್ಯ—ಅದರ, ಅಹಮ್—ನಾನು, ನಿಗ್ರಹಮ್—ನಿಗ್ರಹವನ್ನು, ಮನ್ಯೇ—ಭಾವಿಸುತ್ತೇನೆ, ವಾಯೋಃ—ಗಾಳಿಯ, ಇವ—ಹಾಗೆ, ಸುದುಷ್ಕರಮ್—ಕಷ್ಟವೆಂದು.

**ಹೇ ಕೃಷ್ಣ, ಮನಸ್ಸು ಚಂಚಲವೂ, ಕ್ಷೋಭಕಾರಿಯೂ, ಹಟಮಾರಿಯೂ ಮತ್ತು ಬಹಳ ಬಲವತ್ತರವೂ ಆಗಿರುವುದರಿಂದ, ಅದನ್ನು ನಿಗ್ರಹಿಸುವುದು ಗಾಳಿಯನ್ನು ನಿಗ್ರಹಿಸುವುದಕ್ಕಿಂತ ಹೆಚ್ಚು ಕಷ್ಟವೆಂದು ಭಾವಿಸುತ್ತೇನೆ.**

**ಭಾವಾರ್ಥ :** ಮನಸ್ಸು ಅದೆಷ್ಟು ಬಲಯುತ ಮತ್ತು ಹಠಮಾರಿ ಎಂದರೆ, ಮನಸ್ಸು ಬುದ್ಧಿಗೆ ಅಧೀನವೆಂದು ಎಣಿಸಿದ್ದರೂ, ಅದು ಕೆಲವು ಸಮಯಗಳಲ್ಲಿ ಬುದ್ಧಿಯನ್ನೂ ಗೆಲ್ಲುತ್ತದೆ. ವ್ಯವಹಾರ ಜಗತ್ತಿನಲ್ಲಿ ಅದೆಷ್ಟೋ ವಿರುದ್ಧ ಶಕ್ತಿಗಳನ್ನು ಎದುರಿಸಬೇಕಾದ ಮಾನವನಿಗೆ ಮನಸ್ಸನ್ನು ನಿಗ್ರಹಿಸುವುದು ಖಂಡಿತವಾಗಿಯೂ ಬಹು ಕಷ್ಟ. ಕೃತಕವಾಗಿ. ಒಬ್ಬನು ಮಿತ್ರ ಮತ್ತು ವೈರಿಗಳ ಬಗ್ಗೆ ಮಾನಸಿಕ ಸಮತ್ವವನ್ನು ಸ್ಥಾಪಿಸಬಹುದು, ಆದರೆ ಅಂತಿಮವಾಗಿ ಯಾವ ಪ್ರಾಪಂಚಿಕನೂ ಹಾಗೆ ಮಾಡಲಾರನು, ಏಕೆಂದರೆ ಇದು ಉಗ್ರವಾದ ಗಾಳಿಯನ್ನು ನಿಯಂತ್ರಿಸುವುದಕ್ಕಿಂತ ಹೆಚ್ಚು ಕಷ್ಟ. ವೇದ ಸಾಹಿತ್ಯದಲ್ಲಿ (ಕಠೋಪನಿಷದ್ 1.3.3-4) ಹೀಗೆ ಹೇಳಿದೆ :

ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮ್ ಏವ ಚ।
ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮ್ ಏವ ಚ॥
ಇನ್ದ್ರಿಯಾಣಿ ಹಯಾನಾಹುರ್ವಿಷಯಾಂಸ್ತೇಷು ಗೋಚರಾನ್।
ಆತ್ಮೇನ್ದ್ರಿಯಮನೋಯುಕ್ತಂ ಭೋಕ್ತೇತ್ಯಾಹುರ್ ಮನೀಷಿಣಃ॥

"ಆತ್ಮನು ಭೌತಿಕ ದೇಹ ರಥದಲ್ಲಿ ಪ್ರಯಾಣಿಕನು, ಮತ್ತು ಬುದ್ಧಿಯೇ ಚಾಲಕನು. ಮನಸ್ಸು ಚಾಲನ ಸಾಧನ, ಮತ್ತು ಇಂದ್ರಿಯಗಳೇ ಕುದುರೆಗಳು, ಹೀಗೆ ಆತ್ಮನು ಮನಸ್ಸು ಮತ್ತು ಇಂದ್ರಿಯಗಳ ಸಹವಾಸದಲ್ಲಿ ಸುಖಭೋಗಿ ಅಥವಾ ದುಃಖಾನುಭವಿ. ಮಹಾನ್ ಚಿಂತನಶೀಲರಿಂದ ಅದು ಹಾಗೆ ತಿಳಿಯಲ್ಪಟ್ಟಿದೆ." ಬುದ್ಧಿಯು ಮನಸ್ಸನ್ನು ನಿರ್ದೇಶಿಸುವುದೆಂದು ತಿಳಿಯಲ್ಪಟ್ಟಿದೆ, ಆದರೆ ಮನಸ್ಸು ಅದೆಷ್ಟು ಬಲಯುತ ಮತ್ತು ಹಠಮಾರಿ ಎಂದರೆ, ತೀವ್ರ ಸೋಂಕು ಔಷಧದ ಪ್ರಭಾವವನ್ನು ಮೀರುವಂತೆ, ಅದು ಅನೇಕ ಸಲ ಒಬ್ಬನ ಸ್ವಂತ ಬುದ್ಧಿಯನ್ನೇ ಆಕ್ರಮಿಸುತ್ತದೆ. ಅಂಥ ಬಲವಾದ ಮನಸ್ಸನ್ನು ಯೋಗಾಭ್ಯಾಸದಿಂದ ನಿಯಂತ್ರಿಸಲಾಗುವುದೆಂದು ತಿಳಿಯಲ್ಪಟ್ಟಿದೆ. ಆದರೆ ಅಂಥ ಅಭ್ಯಾಸವು ಅರ್ಜುನನಂಥ ಪ್ರಾಪಂಚಿಕನಿಗೆ ಎಂದಿಗೂ ಕಾರ್ಯಸಾಧ್ಯವಲ್ಲ. ಇನ್ನು ಆಧುನಿಕ ಮಾನವನ ಬಗ್ಗೆ ನಾವೇನು ಹೇಳಬಲ್ಲೆವು ? ಇಲ್ಲಿ ಉಪಯೋಗಿಸಿರುವ ಉಪಮೆಯು ಉಚಿತವಾಗಿದೆ : ಬೀಸುವ ಗಾಳಿಯನ್ನು ಒಬ್ಬನು ಸೆರೆಹಿಡಿಯಲಾರನು, ಪ್ರಕ್ಷುಬ್ಧ ಮನಸ್ಸನ್ನು ಸೆರೆಹಿಡಿಯುವುದು ಇನ್ನೂ ಹೆಚ್ಚು ಕಷ್ಟ. ಮನಸ್ಸನ್ನು ನಿಗ್ರಹಿಸುವ ಅತ್ಯಂತ ಸುಲಭ ಮಾರ್ಗವೆಂದರೆ, ಭಗವಾನ್ ಚೈತನ್ಯರು ಸೂಚಿಸಿದಂತೆ, ಪೂರ್ಣವಿನೀತ ಭಾವದಲ್ಲಿ "ಹರೇ ಕೃಷ್ಣ" ಎಂದರೆ ಉದ್ಧಾರದ ಮಹಾಮಂತ್ರವನ್ನು ಜಪಿಸುವುದು. ವಿಧಿತ ವಿಧಾನವು: **ಸ ವೈ ಮನಃ ಕೃಷ್ಣಪದಾರವಿನ್ದಯೋಃ**, ಒಬ್ಬನು ತನ್ನ ಮನಸ್ಸನ್ನು ಪೂರ್ಣವಾಗಿ ಕೃಷ್ಣನಲ್ಲಿ ತೊಡಗಿಸಬೇಕು. ಆಗ ಮಾತ್ರ ಮನಸ್ಸನ್ನು ಕ್ಷೋಭೆಗೊಳಿಸುವ ಇತರ ಯಾವ ತೊಡಗುವಿಕೆಗಳೂ ಉಳಿಯಲಾರವು.

**ಶ್ರೀ ಭಗವಾನುವಾಚ**
**ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್।**
**ಅಭ್ಯಾಸೇನ ತು ಕೌನ್ತೇಯ ವೈರಾಗ್ಯೇಣ ಚ ಗೃಹ್ಯತೇ ॥ ೩೫ ॥**

ಶ್ರೀ ಭಗವಾನ್ ಉವಾಚ—ದೇವೋತ್ತಮ ಪುರುಷನು ನುಡಿದನು, ಅಸಂಶಯಮ್—ನಿಸ್ಸಂದೇಹವಾಗಿ, ಮಹಾಬಾಹೋ—ಹೇ ಮಹಾಬಾಹುವೇ, ಮನಃ—ಮನಸ್ಸು, ದುರ್ನಿಗ್ರಹಮ್—ನಿಗ್ರಹಿಸುವುದು ಕಷ್ಟ, ಚಲಮ್—ಚಂಚಲ, ಅಭ್ಯಾಸೇನ—ಅಭ್ಯಾಸದಿಂದ, ತು—ಆದರೆ, ಕೌನ್ತೇಯ—ಹೇ ಕುಂತಿಪುತ್ರನೇ, ವೈರಾಗ್ಯೇಣ—ವೈರಾಗ್ಯದಿಂದ, ಚ—ಕೂಡ, ಗೃಹ್ಯತೇ—ಹಾಗೆ ನಿಯಂತ್ರಿಸಬಹುದು.

**ಭಗವಾನ್ ಶ್ರೀಕೃಷ್ಣನು ನುಡಿದನು : ಹೇ ಮಹಾಬಾಹುವಾದ ಕುಂತೀ ಪುತ್ರನೇ, ಚಂಚಲ ಮನಸ್ಸನ್ನು ನಿಗ್ರಹಿಸುವುದು ನಿಸ್ಸಂದೇಹವಾಗಿಯೂ ಬಹು ಕಷ್ಟ, ಆದರೆ ಯೋಗ್ಯ ಅಭ್ಯಾಸದಿಂದ ಮತ್ತು ವೈರಾಗ್ಯದಿಂದ ಅದು ಸಾಧ್ಯ.**

**ಭಾವಾರ್ಥ :** ಅರ್ಜುನನು ವ್ಯಕ್ತಪಡಿಸಿದಂತೆ, ಹಠಮಾರಿ ಮನಸ್ಸಿನ ನಿಯಂತ್ರಣವು ಕಷ್ಟ ಎಂಬುದು ದೇವೋತ್ತಮ ಪುರುಷನಿಂದ ಅಂಗೀಕರಿಸಲ್ಪಟ್ಟಿದೆ. ಆದರೆ ಅದೇ ಸಮಯದಲ್ಲಿ ಅಭ್ಯಾಸ ಮತ್ತು ವೈರಾಗ್ಯದಿಂದ ಅದು ಸಾಧ್ಯವೆಂದು ಅವನು ಸೂಚಿಸುತ್ತಾನೆ. ಆ ಅಭ್ಯಾಸ ಯಾವುದು ? ಈಗಿನ ಯುಗದಲ್ಲಿ ತನ್ನನ್ನು ಒಂದು ಪವಿತ್ರ ಸ್ಥಳದಲ್ಲಿ ಇರಿಸಿಕೊಳ್ಳುವ, ಮನಸ್ಸನ್ನು ಪರಮಾತ್ಮನ ಮೇಲೆ ಕೇಂದ್ರೀಕರಿಸುವ, ಇಂದ್ರಿಯಗಳನ್ನು ಮತ್ತು ಮನಸ್ಸನ್ನು ನಿಗ್ರಹಿಸುವ, ಬ್ರಹ್ಮಚರ್ಯವನ್ನು ಪಾಲಿಸುವ, ಏಕಾಂಗಿಯಾಗಿ ಉಳಿದು ಕೊಳ್ಳುವ, ಇತ್ಯಾದಿ ನಿಯಮ ನಿಯಂತ್ರಣಗಳನ್ನು ಯಾರೊಬ್ಬನೂ ಕಟ್ಟುನಿಟ್ಟಾಗಿ ಪಾಲಿಸಲಾರನು. ಆದರೆ ಕೃಷ್ಣಪ್ರಜ್ಞೆಯ ಆಚರಣೆಯಿಂದ, ಒಬ್ಬನು ಭಗವಂತನಿಗೆ ನವವಿಧ ಭಕ್ತಿಯುತ ತೊಡಗುವಿಕೆಗಳಲ್ಲಿ ತೊಡಗುತ್ತಾನೆ. ಅಂಥ ಭಕ್ತಿಯುತ ತೊಡಗುವಿಕೆಗಳಲ್ಲಿ ಪ್ರಥಮವೂ ಮತ್ತು ಅಗ್ರತಮವೂ ಆಗಿರುವುದು ಕೃಷ್ಣನ ಬಗ್ಗೆ ಶ್ರವಣ. ಮನಸ್ಸನ್ನು ಎಲ್ಲ ತಪ್ಪು ತಿಳುವಳಿಕೆಗಳಿಂದ ಶುದ್ಧೀಕರಿಸಲು ಇದು ಬಹು ಪ್ರಬಲವಾದ ದಿವ್ಯ ವಿಧಾನ. ಒಬ್ಬನು ಕೃಷ್ಣನನ್ನು ಕುರಿತು ಹೆಚ್ಚು ಶ್ರವಣ ಮಾಡಿದಂತೆ, ಅವನು ಹೆಚ್ಚು ಜ್ಞಾನೋದಿತನೂ ಮತ್ತು ಮನಸ್ಸನ್ನು ಕೃಷ್ಣನಿಂದ ಬೇರೆಡೆಗೆ ಸೆಳೆಯುವ ಪ್ರತಿಯೊಂದರಿಂದಲೂ ಹೆಚ್ಚು ವಿರಕ್ತನೂ ಆಗಿರುತ್ತಾನೆ. ಭಗವಂತನಿಗೆ ಅರ್ಪಿತವಿಲ್ಲದ ಚಟುವಟಿಕೆಗಳಿಂದ ಮನಸ್ಸನ್ನು ವಿರಕ್ತಿಗೊಳಿಸುವುದರಿಂದ ಒಬ್ಬನು ಬಹು ಸುಲಭವಾಗಿ **ವೈರಾಗ್ಯ**ವನ್ನು ಕಲಿಯಬಹುದು. **ವೈರಾಗ್ಯ** ಎಂದರೆ ಜಡದಿಂದ ವಿರಕ್ತನಾಗುವುದು ಮತ್ತು ಮನಸ್ಸನ್ನು ಚೇತನದಲ್ಲಿ ತೊಡಗಿಸುವುದು. ವ್ಯಕ್ತಿಶೂನ್ಯ ಅಧ್ಯಾತ್ಮ ವಿರಕ್ತಿಯು ಕೃಷ್ಣನ ಚಟುವಟಿಕೆಗಳಲ್ಲಿ ಮನಸ್ಸನ್ನು ಆಸಕ್ತಗೊಳಿಸುವುದಕ್ಕಿಂತಲೂ ಹೆಚ್ಚು ಕಷ್ಟ. ಇದು ಕಾರ್ಯಸಾಧ್ಯ, ಏಕೆಂದರೆ ಕೃಷ್ಣನ ಬಗ್ಗೆ ಶ್ರವಣದಿಂದಲೇ ಒಬ್ಬನು ತಾನಾಗಿಯೇ ಪರಮ ಚೇತನನಲ್ಲಿ ಅಕ್ಕರೆಯುಳ್ಳವನಾಗುತ್ತಾನೆ. ಈ ಅಕ್ಕರೆಯನ್ನು **ಪರೇಶಾನುಭೂತಿ**, ಆಧ್ಯಾತ್ಮಿಕ ತೃಪ್ತಿ ಎನ್ನುತ್ತಾರೆ. ಇದು ಹಸಿದ ಮನುಷ್ಯನು ತಿನ್ನುವ ಪ್ರತಿಯೊಂದು ತುತ್ತಿಗೂ ಹೊಂದುವ ತೃಪ್ತಿಯ ಭಾವನೆಯಂತೆ ಇರುತ್ತದೆ. ಹಸಿದಾಗ ಒಬ್ಬನು ಹೆಚ್ಚು ತಿಂದಷ್ಟೂ ಹೆಚ್ಚು ತೃಪ್ತಿ ಮತ್ತು ಶಕ್ತಿಯನ್ನು ಅನುಭವಿಸುತ್ತಾನೆ. ಅದೇ ಪ್ರಕಾರ ಭಕ್ತಿಯುತ ಸೇವೆಯ ನಿರ್ವಹಣೆಯಿಂದ ಮನಸ್ಸು ಭೌತಿಕ

ವಿಷಯುಗಳಿಂದ ಅನಾಸಕ್ತವಾದಂತೆ ಒಬ್ಬನು ದಿವ್ಯ ತೃಪ್ತಿಯನ್ನು ಅನುಭವಿಸುತ್ತಾನೆ. ಇದು ರೋಗವನ್ನು ತಜ್ಞ ಚಿಕಿತ್ಸೆ ಮತ್ತು ಉಚಿತ ಆಹಾರದಿಂದ ವಾಸಿಮಾಡುವಂತೆ. ಆದ್ದರಿಂದ ಶ್ರೀಕೃಷ್ಣನ ದಿವ್ಯ ಚಟುವಟಿಕೆಗಳ ಶ್ರವಣವು ಹುಚ್ಚು ಮನಸ್ಸಿಗೆ ತಜ್ಞ ಚಿಕಿತ್ಸೆ, ಮತ್ತು ಕೃಷ್ಣಾರ್ಪಿತ ಆಹಾರದ ಸೇವನೆಯು ನರಳುತ್ತಿರುವ ರೋಗಿಗೆ ತಕ್ಕ ಆಹಾರ ಕೃಷ್ಣಪ್ರಜ್ಞಾ ಪ್ರಕ್ರಿಯೆಯೇ ಈ ಚಿಕಿತ್ಸೆಯಾಗಿರುತ್ತದೆ.

**ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ ।**
**ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತುಮುಪಾಯತಃ ॥೩೬॥**

ಅಸಂಯತ—ಹತೋಟಿಯಲ್ಲಿಡದ, ಸಂಯಮವಿಲ್ಲದ, ಆತ್ಮನಾ—ಮನಸ್ಸಿನಿಂದ, ಯೋಗಃ—ಆತ್ಮಸಾಕ್ಷಾತ್ಕಾರವು, ದುಷ್ಪ್ರಾಪಃ—ಪಡೆಯುವುದು ಕಷ್ಟ, ಇತಿ—ಹೀಗೆ, ಮೇ—ನನ್ನ, ಮತಿಃ—ಅಭಿಪ್ರಾಯ, ವಶ್ಯ—ನಿಯಂತ್ರಿತ, ಆತ್ಮನಾ—ಮನಸ್ಸಿನಿಂದ, ತು—ಆದರೆ, ಯತತಾ—ಪ್ರಯತ್ನಿಸುವಾಗ, ಶಕ್ಯಃ—ಸಾಧ್ಯ, ಅವಾಪ್ತುಮ್—ಪಡೆಯುವುದು, ಉಪಾಯತಃ—ಉಚಿತ ವಿಧಾನಗಳಿಂದ.

**ಹತೋಟಿಗೆ ಒಳಪಡದ ಮನಸ್ಸುಳ್ಳವನಿಗೆ ಆತ್ಮ ಸಾಕ್ಷಾತ್ಕಾರವು ಕಷ್ಟಕಾರ್ಯ. ಆದರೆ ಮನಸ್ಸಿನ ನಿಯಂತ್ರಣವುಳ್ಳವನಿಗೆ ಮತ್ತು ಉಚಿತವಿಧಾನಗಳಿಂದ ಪ್ರಯತ್ನಿಸುವವನಿಗೆ ಯಶಸ್ಸು ಖಂಡಿತ. ಅದು ನನ್ನ ಅಭಿಪ್ರಾಯ.**

**ಭಾವಾರ್ಥ :** ಮನಸ್ಸನ್ನು ಭೌತಿಕ ತೊಡಗುವಿಕೆಯಿಂದ ಅನಾಸಕ್ತಗೊಳಿಸಲು ಉಚಿತ ಚಿಕಿತ್ಸೆಯನ್ನು ಸ್ವೀಕರಿಸದವನು ಆತ್ಮಸಾಕ್ಷಾತ್ಕಾರದಲ್ಲಿ ಯಶಸ್ಸುಗಳಿಸುವುದು ಸಾಧ್ಯವಿಲ್ಲವೆಂದು ಪರಮದೇವೋತ್ತಮ ಪುರುಷನು ಸಾರುತ್ತಾನೆ. ಮನಸ್ಸನ್ನು ಭೌತಿಕ ಭೋಗದಲ್ಲಿ ತೊಡಗಿಸುತ್ತಾ ಯೋಗವನ್ನು ಅಭ್ಯಾಸಮಾಡಲು ಪ್ರಯತ್ನಿಸುವುದು ಬೆಂಕಿಯ ಮೇಲೆ ನೀರು ಸುರಿಯುತ್ತ ಅದನ್ನು ಹೊತ್ತಿಸಲು ಪ್ರಯತ್ನಿಸಿದಂತೆ. ಮನೋ ನಿಯಂತ್ರಣವಿಲ್ಲದೆ ಯೋಗಾಭ್ಯಾಸವು ವ್ಯರ್ಥ ಕಾಲಹರಣ. ಅಂಥ ತೋರಿಕೆಯ ಯೋಗವು ಭೌತಿಕವಾಗಿ ಲಾಭಕರವಾಗಿರಬಹುದು, ಆದರೆ ಅಧ್ಯಾತ್ಮ ಸಾಕ್ಷಾತ್ಕಾರಕ್ಕೆ ಸಂಬಂಧಿಸಿದಂತೆ ಅದು ನಿರುಪಯುಕ್ತ. ಆದ್ದರಿಂದ, ಒಬ್ಬನು ಮನಸ್ಸನ್ನು ಸತತವಾಗಿ ಭಗವಂತನ ದಿವ್ಯ ಪ್ರೀತಿಯುತ ಸೇವೆಯಲ್ಲಿ ತೊಡಗಿಸುವುದರಿಂದ ಅದನ್ನು ನಿಯಂತ್ರಿಸಬೇಕು. ಒಬ್ಬನು ಕೃಷ್ಣಪ್ರಜ್ಞೆಯಲ್ಲಿ ನಿರತನಾದ ಹೊರತು, ಅವನು ಸ್ಥಿರವಾಗಿ ಮನಸ್ಸನ್ನು ನಿಯಂತ್ರಿಸಲಾರನು. ಕೃಷ್ಣಪ್ರಾಜ್ಞನು ಪ್ರತ್ಯೇಕ ಪ್ರಯತ್ನವಿಲ್ಲದೆ ಸುಲಭವಾಗಿ ಯೋಗ ಸಾಧನೆಯ ಫಲವನ್ನು ಹೊಂದುತ್ತಾನೆ. ಆದರೆ ಯೋಗಾಭ್ಯಾಸಿಯು ಕೃಷ್ಣಪ್ರಾಜ್ಞನಾಗದೆ ಯಶಸ್ಸುಗಳಿಸಲಾರನು.

**ಅರ್ಜುನ ಉವಾಚ**
**ಅಯತಿಃ ಶ್ರದ್ಧಯೋಪೇತೋ ಯೋಗಾಚ್ಚಲಿತಮಾನಸಃ ।**
**ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ ॥೩೭॥**

ಅರ್ಜುನಃ ಉವಾಚ—ಅರ್ಜುನನು ನುಡಿದನು, ಅಯತಿಃ—ಅಯಶಸ್ವಿಯಾದ, ದಿವ್ಯಸಾಧಕನು, ಶ್ರದ್ಧಯಾ—ಶ್ರದ್ಧೆಯಿಂದ, ಉಪೇತಃ—ನಿರತನಾದ, ಯೋಗಾತ್—ಯೋಗ ಸಂಪರ್ಕದಿಂದ, ಚಲಿತ—ತಪ್ಪಿಸಲ್ಪಟ್ಟ, ಮಾನಸಃ—ಅಂಥ ಮನಸ್ಸುಳ್ಳವನು, ಅಪ್ರಾಪ್ಯ—ಹೊಂದಲು ವಿಫಲನಾಗಿ, ಯೋಗಸಂಸಿದ್ಧಿಮ್—ಯೋಗದಲ್ಲಿ ಅತ್ಯುನ್ನತ ಪರಿಪೂರ್ಣತೆಯನ್ನು, ಕಾಮ್—ಯಾವುದು, ಗತಿಮ್—ಗತಿಯನ್ನು, ಕೃಷ್ಣ—ಹೇ ಕೃಷ್ಣ, ಗಚ್ಛತಿ—ಹೊಂದುತ್ತಾನೆ.

**ಅರ್ಜುನನು ನುಡಿದನು : ಹೇ ಕೃಷ್ಣ, ಪ್ರಾರಂಭದಲ್ಲಿ ಶ್ರದ್ಧೆಯಿಂದ ಆತ್ಮ ಸಾಕ್ಷಾತ್ಕಾರ ಪ್ರಕ್ರಿಯೆಯನ್ನು ಸ್ವೀಕರಿಸುವ, ಆದರೆ ನಂತರ ಪ್ರಾಪಂಚಿಕ ಮನಸ್ಸಿನ ಕಾರಣ ನಿಲ್ಲಿಸಿಬಿಡುವ ಮತ್ತು ಹೀಗೆ ಯೋಗದಲ್ಲಿ ಪರಿಪೂರ್ಣತೆಯನ್ನು ಪಡೆಯದ ಅಯಶಸ್ವಿ ದಿವ್ಯಸಾಧಕನ ಗತಿ ಏನು ?**

**ಭಾವಾರ್ಥ :** ಆತ್ಮಸಾಕ್ಷಾತ್ಕಾರದ ಅಥವಾ ಯೋಗದ ಮಾರ್ಗವು ಭಗವದ್ಗೀತೆಯಲ್ಲಿ ವರ್ಣಿಸಲ್ಪಟ್ಟಿದೆ. ಜೀವಿಯು ಈ ಭೌತಿಕ ದೇಹವಲ್ಲ, ಅವನು ಅದರಿಂದ ಭಿನ್ನನು ಮತ್ತು ಅವನ ಸುಖವು ಶಾಶ್ವತ ಜೀವನ, ಆನಂದ ಮತ್ತು ಜ್ಞಾನದಲ್ಲಿದೆ ಎಂಬ ಜ್ಞಾನವು ಆತ್ಮ ಸಾಕ್ಷಾತ್ಕಾರದ ಆಧಾರ ತತ್ವ. ಇವು ದಿವ್ಯವಾದುದು, ದೇಹ ಮತ್ತು ಮನಸ್ಸಿನ ಆಚೆಗೆ ಇರುವುದು. ಆತ್ಮ ಸಾಕ್ಷಾತ್ಕಾರವು ಜ್ಞಾನಮಾರ್ಗದಿಂದಲೂ ಅಷ್ಟಾಂಗ ಯೋಗ ಪದ್ಧತಿಯ ಆಚರಣೆಯಿಂದಲೂ, ಅಥವಾ ಭಕ್ತಿಯೋಗದಿಂದಲೂ ಅರಸಲ್ಪಡುತ್ತದೆ. ಈ ಪ್ರತಿಯೊಂದು ಪ್ರಕ್ರಿಯೆಗಳಲ್ಲಿ ಒಬ್ಬನು ಜೀವಿಯ ಸ್ವರೂಪ ಸ್ಥಿತಿ, ದೇವರೊಂದಿಗೆ ಅವನ ಸಂಬಂಧ, ಮತ್ತು ತನ್ನ ಕಳೆದು ಹೋದ ಸಂಪರ್ಕವನ್ನು ಪುನಃ ಸ್ಥಾಪಿಸಿಕೊಳ್ಳುವ ಮತ್ತು ಕೃಷ್ಣಪ್ರಜ್ಞೆಯ ಅತ್ಯುನ್ನತ ಪರಿಪೂರ್ಣ ಹಂತವನ್ನು ಪಡೆಯುವ ಚಟುವಟಿಕೆಗಳ ಸಾಕ್ಷಾತ್ಕಾರವನ್ನು ಹೊಂದಬೇಕು. ಮೇಲೆ ಹೇಳಿದ ಮೂರು ವಿಧಾನಗಳಲ್ಲಿ ಯಾವುದನ್ನೇ ಅನುಸರಿಸುವುದರಿಂದ, ಒಬ್ಬನು ಶೀಘ್ರವಾಗಿ ಅಥವಾ ತಡವಾಗಿ ಪರಮ ಧ್ಯೇಯವನ್ನು ತಲುಪುವುದು ಖಂಡಿತ. ಭಗವಂತನು ಇದನ್ನು ಎರಡನೆಯ ಅಧ್ಯಾಯದಲ್ಲಿ ಒತ್ತಿ ಹೇಳಿದ್ದಾನೆ : ದಿವ್ಯ ಪಥದಲ್ಲಿ ಅತ್ಯಲ್ಪ ಪ್ರಯತ್ನವೂ ಕೂಡ ವಿಮೋಚನೆಯ ಮಹಾ ಅವಕಾಶವನ್ನು ನೀಡುತ್ತದೆ. ಈ ಮೂರು ವಿಧಾನಗಳಲ್ಲಿ ಭಕ್ತಿಯೋಗದ ಪಥವು ಈ ಯುಗಕ್ಕೆ ವಿಶೇಷವಾಗಿ ಸೂಕ್ತವಾಗಿದೆ, ಏಕೆಂದರೆ ಅದು ದೈವಸಾಕ್ಷಾತ್ಕಾರದ ಅತ್ಯಂತ ನೇರ ವಿಧಾನ. ಮತ್ತಷ್ಟು ಖಚಿತಪಡಿಸಿಕೊಳ್ಳಲು, ಭಗವಂತನ ಹಿಂದಿನ ಹೇಳಿಕೆಯನ್ನು ಧೃಢಪಡಿಸಲು ಅರ್ಜುನನು ಶ್ರೀಕೃಷ್ಣನನ್ನು ಕೇಳುತ್ತಿದ್ದಾನೆ.ಒಬ್ಬನು ಪ್ರಾಮಾಣಿಕವಾಗಿ ಆತ್ಮಸಾಕ್ಷಾತ್ಕಾರ ಮಾರ್ಗವನ್ನು ಸ್ವೀಕರಿಸಬಹುದು, ಆದರೆ ಜ್ಞಾನಾಭ್ಯಾಸ ಪ್ರಕ್ರಿಯೆಯು ಮತ್ತು ಅಷ್ಟಾಂಗ ಯೋಗ ಪದ್ಧತಿಯ ಅಭ್ಯಾಸವು ಸಾಮಾನ್ಯವಾಗಿ ಈ ಯುಗಕ್ಕೆ ಬಹುಕಷ್ಟವಾಗಿದೆ ಆದ್ದರಿಂದ ಸತತ ಪ್ರಯತ್ನದಿಂದಲೂ, ಒಬ್ಬನು, ಅನೇಕ ಕಾರಣಗಳಿಗಾಗಿ ವಿಫಲನಾಗಬಹುದು. ಎಲ್ಲಕ್ಕಿಂತ ಮೊದಲು, ಈ ಪ್ರಕ್ರಿಯೆಯನ್ನು ಅನುಸರಿಸುವ ಬಗ್ಗೆ ಒಬ್ಬನು ಸಾಕಷ್ಟು ವಿಚಾರಪರನಲ್ಲದಿರಬಹುದು. ದಿವ್ಯ ಪಥದ ಅನುಸರಣೆಯು ಹೆಚ್ಚು ಕಡಿಮೆ

ಮಾಯಾಶಕ್ತಿಯ ಮೇಲೆ ಯುದ್ಧವನ್ನು ಸಾರಿದಂತೆ. ಅದರ ಪರಿಣಾಮವಾಗಿ, ವ್ಯಕ್ತಿಯೊಬ್ಬನು ಮಾಯಾಶಕ್ತಿಯ ಬಿಗಿಯಾದ ಹಿಡಿತದಿಂದ ಪಾರಾಗಲು ಯತ್ನಿಸಿದಾಗಲೆಲ್ಲ, ಅವಳು ವಿವಿಧ ಪ್ರಲೋಭನೆಗಳ ಮೂಲಕ ಸಾಧಕನನ್ನು ಸೋಲಿಸಲು ಯತ್ನಿಸುತ್ತಾಳೆ. ಬದ್ಧ ಆತ್ಮನು ಈಗಾಗಲೇ ಭೌತಿಕ ಶಕ್ತಿಯ ಗುಣಗಳಿಂದ ಪ್ರಲೋಭಿತನು, ಮತ್ತು ದಿವ್ಯ ಶಿಸ್ತುಗಳನ್ನು ಆಚರಿಸುತ್ತಿರುವಾಗ ಕೂಡ, ಮತ್ತೆ ಪ್ರಲೋಭಿತನಾಗುವ ಅವಕಾಶವೂ ಇರುತ್ತದೆ. ಇದು **ಯೋಗಾಚ್ಚಲಿತ ಮಾನಸಃ,** ದಿವ್ಯ ಪಥದಿಂದ ವಿಚಲತೆ ಎನ್ನುತ್ತಾರೆ. ಆತ್ಮಸಾಕ್ಷಾತ್ಕಾರದ ಮಾರ್ಗದಿಂದ ವಿಚಲಿತವಾಗುವುದರ ಫಲವನ್ನು ತಿಳಿಯಲು ಅರ್ಜುನನು ಕಾತುರನಾಗಿದ್ದಾನೆ.

**ಕಚ್ಚಿನ್ನೋಭಯವಿಭ್ರಷ್ಟಶ್ ಛಿನ್ನಾಭ್ರಮಿವ ನಶ್ಯತಿ ।**
**ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ ॥೩೮॥**

ಕಚ್ಚಿತ್—ಒಂದುವೇಳೆ, ನ—ಇಲ್ಲ, ಉಭಯ—ಉಭಯ, ವಿಭ್ರಷ್ಟಃ—ವಿಚಲಿತನಾಗಿ, ಛಿನ್ನ—ಹರಿದ, ಛಿನ್ನವಾದ, ಅಭ್ರಮ್—ಮೋಡ, ಇವ—ಹಾಗೆ, ನಶ್ಯತಿ—ನಾಶವಾಗುತ್ತಾನೆ, ಅಪ್ರತಿಷ್ಠಃ—ಯಾವುದೇ ಸ್ಥಾನವಿಲ್ಲದೆ, ಮಹಾಬಾಹೋ—ಹೇ ಮಹಾಬಾಹು ಕೃಷ್ಣನೇ, ವಿಮೂಢಃ—ದಿಗ್ಭ್ರಮಿತನಾಗಿ, ಬ್ರಹ್ಮಣಃ—ದಿವ್ಯತೆಯ, ಪಥಿ—ಪಥದಲ್ಲಿ.

**ಹೇ ಮಹಾಬಾಹು ಕೃಷ್ಣನೇ, ದಿವ್ಯ ಪಥದಿಂದ ದಿಗ್ಭ್ರಮಿತನಾದಂಥ ಮನುಷ್ಯನು, ಆಧ್ಯಾತ್ಮಿಕವಾದ ಮತ್ತು ಭೌತಿಕವಾದ ಉಭಯ ಯಶಸ್ಸಿನಿಂದಲೂ ಪತನ ಹೊಂದುವುದಿಲ್ಲವೇ, ಮತ್ತು ಚದರಿದ ಮೋಡದಂತೆ ಯಾವುದೇ ವಲಯದಲ್ಲಿಯೂ ಯಾವ ಸ್ಥಾನಮಾನವಿಲ್ಲದೆ ನಾಶಹೊಂದುವುದಿಲ್ಲವೇ ?**

**ಭಾವಾರ್ಥ :** ಪ್ರಗತಿಗೆ ಎರಡು ಮಾರ್ಗಗಳಿವೆ. ಭೋಗಾಸಕ್ತರಿಗೆ ದಿವ್ಯತೆಯಲ್ಲಿ ಆಸಕ್ತಿ ಇರುವುದಿಲ್ಲ ; ಆದುದರಿಂದ ಅವರು ಆರ್ಥಿಕ ಅಭಿವೃದ್ಧಿಯಿಂದ ಭೌತಿಕ ಮುನ್ನಡೆಯಲ್ಲಿ, ಅಥವಾ ಉಚಿತ ಕಾರ್ಯ ಮೂಲಕ ಊರ್ಧ್ವಲೋಕಗಳಿಗೆ ಏರಲು ಹೆಚ್ಚು ಆಸಕ್ತರು. ಒಬ್ಬನು ದಿವ್ಯ ಪಥವನ್ನು ಕೈಗೊಂಡಾಗ, ಅವನು ಎಲ್ಲ ಭೌತಿಕ ಚಟುವಟಿಕೆಗಳನ್ನು ನಿಲ್ಲಿಸಬೇಕು, ಮತ್ತು ಭೌತಿಕ ಸುಖವೆಂದು ಕರೆಯಲ್ಪಡುವುದೆಲ್ಲವನ್ನು ತ್ಯಜಿಸಬೇಕು. ಉತ್ಕಾಂಕ್ಷಿ ದಿವ್ಯವಾದಿಯು ವಿಫಲನಾದರೆ, ಆಗ ಅವನು ನೋಡುವುದಕ್ಕೆ ಉಭಯ ಮಾರ್ಗಗಳನ್ನೂ ಕಳೆದುಕೊಂಡಂತೆ ; ಅರ್ಥಾತ್, ಅವನು ಭೌತಿಕ ಸುಖವನ್ನಾಗಲೀ ಅಥವಾ ಆಧ್ಯಾತ್ಮಿಕ ಯಶಸ್ಸನ್ನಾಗಲಿ ಆನಂದಿಸಲಾರನು. ಅವನಿಗೆ ಯಾವ ಸ್ಥಾನವೂ ಇಲ್ಲ; ಅವನು ಹರಿದು ಚದುರಿದ ಮೋಡದಂತೆ. ಆಕಾಶದಲ್ಲಿ ಯಾವುದೋ ಸಮಯದಲ್ಲಿ ಒಂದು ಮೋಡವು ಚಿಕ್ಕ ಮೋಡದಿಂದ ದೂರಸಾಗಿ ದೊಡ್ಡದೊಂದಿಗೆ ಕೂಡಿಕೊಳ್ಳುತ್ತದೆ. ಆದರೆ ಅದು ದೊಡ್ಡದೊಂದಿಗೆ ಕೂಡಿಕೊಳ್ಳದಿದ್ದರೆ ಆಗ ಅದು ಗಾಳಿಯಿಂದ ಹೊಡೆದಟ್ಟಲ್ಪಡುತ್ತದೆ, ಮತ್ತು ವಿಶಾಲ ಆಕಾಶದಲ್ಲಿ ಅಸ್ತಿತ್ವ ಇಲ್ಲದಾಗುತ್ತದೆ. ತಾನು ಸಾರಭೂತವಾಗಿ ಆಧ್ಯಾತ್ಮಿಕ, ಬ್ರಹ್ಮನ್, ಪರಮಾತ್ಮ ಮತ್ತು ಭಗವಾನ್ ಆಗಿ ಅಭಿ

ವ್ಯಕ್ತವಾಗುವ ಪರಮ ಪ್ರಭುವಿನ ವಿಭಿನ್ನಾಂಶ—ಎಂದು ತಿಳಿಯುವ ದಿವ್ಯ ಸಾಕ್ಷಾತ್ಕಾರದ ಪಥವು **ಬ್ರಹ್ಮಣಃ ಪಥಿ**. ಭಗವಾನ್ ಶ್ರೀಕೃಷ್ಣನು ಪರತತ್ವದ ಅತ್ಯುತ್ಕೃಷ್ಟ ಅಭಿವ್ಯಕ್ತಿ. ಆದ್ದರಿಂದ ಪರಮಪುರುಷನಿಗೆ ಶರಣಾದವನು ಯಶಸ್ವೀ ದಿವ್ಯವಾದಿ. ಬ್ರಹ್ಮನ್ ಮತ್ತು ಪರಮಾತ್ಮ ಸಾಕ್ಷಾತ್ಕಾರದ ಮೂಲಕ ಜೀವನದ ಈ ಗುರಿಯನ್ನು ತಲುಪಲು ಅನೇಕಾನೇಕ ಜನ್ಮಗಳು ಬೇಕಾಗುತ್ತವೆ (**ಬಹೂನಾಂ ಜನ್ಮನಾಮ್ ಅನ್ತೇ**). ಆದ್ದರಿಂದ ದಿವ್ಯಸಾಕ್ಷಾತ್ಕಾರದ ಪರಮೋತ್ತಮ ಪಥವು ನೇರ ವಿಧಾನವಾದ ಭಕ್ತಿ–ಯೋಗ ಅಥವಾ ನೇರ ಕೃಷ್ಣಪ್ರಜ್ಞೆ.

**ಏತನ್ಮೇ ಸಂಶಯಂ ಕೃಷ್ಣ ಛೇತ್ತುಮರ್ಹಸ್ಯಶೇಷತಃ ।**
**ತ್ವದನ್ಯಃ ಸಂಶಯಸ್ಯಾಸ್ಯ ಛೇತ್ತಾ ನ ಹ್ಯುಪಪದ್ಯತೇ ॥ ೩೯ ॥**

ಏತತ್—ಇದು, ಮೇ—ನನ್ನ, ಸಂಶಯಮ್—ಸಂಶಯವು, ಕೃಷ್ಣ—ಹೇ ಕೃಷ್ಣ, ಛೇತ್ತುಮ್—ನಿವಾರಿಸಲು, ಅರ್ಹಸಿ—ನಿನ್ನನ್ನು ಬೇಡುತ್ತೇನೆ, ಅಶೇಷತಃ—ಸಂಪೂರ್ಣವಾಗಿ, ತ್ವತ್—ನಿನಗಿಂತಲೂ, ಅನ್ಯಃ—ಇತರ, ಸಂಶಯಸ್ಯ—ಸಂಶಯದ, ಅಸ್ಯ—ಇದು, ಛೇತ್ತಾ—ನಿವಾರಕನು, ನ—ಎಂದಿಗೂ ಇಲ್ಲ, ಹಿ—ಖಂಡಿತವಾಗಿ, ಉಪಪದ್ಯತೇ—ಕಾಣುವುದು.

**ಹೇ ಕೃಷ್ಣ, ಇದು ನನ್ನ ಸಂಶಯ, ಮತ್ತು ಇದನ್ನು ಸಂಪೂರ್ಣವಾಗಿ ನಿವಾರಿಸಬೇಕೆಂದು ನಾನು ನಿನ್ನನ್ನು ಕೇಳುತ್ತೇನೆ. ನಿನ್ನನ್ನಲ್ಲದೆ ಈ ಸಂಶಯವನ್ನು ನಾಶಗೊಳಿಸುವ ಬೇರೆ ಯಾರನ್ನೂ ಕಾಣಲಾಗದು.**

**ಭಾವಾರ್ಥ :** ಕೃಷ್ಣನು ಭೂತ, ವರ್ತಮಾನ ಮತ್ತು ಭವಿಷ್ಯವನ್ನು ಪರಿಪೂರ್ಣವಾಗಿ ಬಲ್ಲವನು. ಭಗವದ್ಗೀತೆಯ ಆರಂಭದಲ್ಲಿ ಭಗವಂತನು, ಎಲ್ಲ ಜೀವಿಗಳು ಭೂತಕಾಲದಲ್ಲಿ ಪ್ರತ್ಯೇಕವಾಗಿ ಅಸ್ತಿತ್ವದಲ್ಲಿದ್ದರು, ಈಗ ವರ್ತಮಾನದಲ್ಲಿಯೂ ಅವರು ಅಸ್ತಿತ್ವದಲ್ಲಿದ್ದಾರೆ, ಮತ್ತು ಭವಿಷ್ಯದಲ್ಲಿ, ಭೌತಿಕ ತೊಡಕಿನಿಂದ ವಿಮೋಚನೆಯ ನಂತರವೂ ಅವರು ತಮ್ಮ ಪ್ರತ್ಯೇಕ ವ್ಯಕ್ತಿತ್ವವನ್ನು ಉಳಿಸಿಕೊಳ್ಳುತ್ತಾರೆ ಎಂದು ಹೇಳಿದನು. ಹೀಗೆ ಅವನು ವ್ಯಕ್ತಿಗತ ಜೀವಿಯ ಭವಿಷ್ಯದ ಪ್ರಶ್ನೆಯನ್ನು ಆಗಲೇ ಸ್ಪಷ್ಟವಾಗಿ ಬಗೆಹರಿಸಿದ್ದಾನೆ. ಈಗ, ಅರ್ಜುನನು ಅಯಶಸ್ವೀ ದಿವ್ಯ ಸಾಧಕನ ಭವಿಷ್ಯವನ್ನು ತಿಳಿಯ ಬಯಸುತ್ತಾನೆ. ಕೃಷ್ಣನಿಗೆ ಯಾರೂ ಸಮಾನರಿಲ್ಲ, ಅಥವಾ ಅಧಿಕರಿಲ್ಲ; ಮತ್ತು ಭೌತಿಕ ಪ್ರಕೃತಿಯ ದಯಾವಲಂಬಿಗಳಾಗಿರುವ ಮಹರ್ಷಿಗಳು ಮತ್ತು ತಾತ್ವಿಕರೆಂದು ಕರೆಯಲ್ಪಡುವವರು ನಿಶ್ಚಯವಾಗಿಯೂ ಅವನಿಗೆ ಸಮವಾಗಲಾರರು. ಆದ್ದರಿಂದ ಕೃಷ್ಣನ ನಿರ್ಣಯವು ಎಲ್ಲ ಸಂಶಯಗಳಿಗೂ ಅಂತಿಮ ಮತ್ತು ಪೂರ್ಣ ಉತ್ತರವಾಗಿರುತ್ತದೆ, ಏಕೆಂದರೆ ಅವನು ಭೂತ, ವರ್ತಮಾನ ಮತ್ತು ಭವಿಷ್ಯವನ್ನು ಪರಿಪೂರ್ಣವಾಗಿ ತಿಳಿದಿದ್ದಾನೆ—ಆದರೆ ಯಾರೂ ಅವನನ್ನು ತಿಳಿದಿಲ್ಲ. ಕೃಷ್ಣ ಮತ್ತು ಕೃಷ್ಣಪ್ರಜ್ಞರಾದ ಭಕ್ತರು ಮಾತ್ರವೇ ಯಾವುದು ಏನು ಎಂಬುದನ್ನು ತಿಳಿಯಬಲ್ಲರು.

**ಶ್ರೀ ಭಗವಾನುವಾಚ**
**ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ ।**
**ನ ಹಿ ಕಲ್ಯಾಣಕೃತ್ಕಶ್ಚಿದ್ ದುರ್ಗತಿಂ ತಾತ ಗಚ್ಛತಿ ॥ ೪೦ ॥**

ಶ್ರೀಭಗವಾನ್ ಉವಾಚ—ಪರಮ ದೇವೋತ್ತಮ ಪುರುಷನು ನುಡಿದನು, ಪಾರ್ಥ—ಹೇ ಪೃಥಾಪುತ್ರನೇ, ನ ಏವ—ಎಂದೂ ಅದು ಹಾಗಲ್ಲ, ಇಹ—ಈ ಭೌತಿಕ ಜಗತ್ತಿನಲ್ಲಿ, ನ—ಎಂದಿಗೂ ಇಲ್ಲ, ಅಮುತ್ರ—ಮುಂದಿನ ಜನ್ಮದಲ್ಲಿ, ವಿನಾಶಃ—ವಿನಾಶವು, ತಸ್ಯ—ಅವನ, ವಿದ್ಯತೇ—ಇರುವುದು, ನ—ಎಂದಿಗೂ ಇಲ್ಲ, ಹಿ—ಖಂಡಿತವಾಗಿ, ಕಲ್ಯಾಣಕೃತ್—ಮಂಗಲ ಚಟುವಟಿಕೆಗಳಲ್ಲಿ ತೊಡಗಿದ, ಕಶ್ಚಿತ್—ಯಾರೊಬ್ಬನು, ದುರ್ಗತಿಮ್—ದುರ್ಗತಿಗೆ, ತಾತ—ನನ್ನ ಮಿತ್ರನೇ, ಗಚ್ಛತಿ—ಹೋಗುವುದು.

**ಪರಮ ದೇವೋತ್ತಮ ಪುರುಷನು ನುಡಿದನು: ಹೇ ಪೃಥಾಪುತ್ರನೇ, ಮಂಗಲ ಚಟುವಟಿಕೆಗಳಲ್ಲಿ ನಿರತನಾದ ದಿವ್ಯವಾದಿಯು ಈ ಜಗತ್ತಿನಲ್ಲಾಗಲೀ ಅಥವಾ ಅಧ್ಯಾತ್ಮ ಜಗತ್ತಿನಲ್ಲಾಗಲೀ ವಿನಾಶವನ್ನು ಹೊಂದುವುದಿಲ್ಲ; ನನ್ನ ಮಿತ್ರನೇ, ಒಳ್ಳೆಯದನ್ನು ಮಾಡುವವನು ಕೆಟ್ಟದ್ದರಿಂದ ಎಂದಿಗೂ ಗೆಲ್ಲಲ್ಪಡುವುದಿಲ್ಲ.**

**ಭಾವಾರ್ಥ :** ಶ್ರೀಮದ್ಭಾಗವತದಲ್ಲಿ (1.5.17) ಶ್ರೀ ನಾರದ ಮುನಿಗಳು ವೇದ ವ್ಯಾಸರಿಗೆ ಈ ಕೆಳಕಂಡಂತೆ ಉಪದೇಶಿಸುತ್ತಾರೆ :

ತ್ಯಕ್ತ್ವಾ ಸ್ವಧರ್ಮಂ ಚರಣಾಮ್ಬುಜಂ ಹರೇರ್
  ಭಜನ್ನಪಕ್ವೋऽಥ ಪತೇತ್ ತತೋ ಯದಿ।
ಯತ್ರ ಕ್ವ ವಾಭದ್ರಮಭೂದ್ ಅಮುಷ್ಯ ಕಿಂ
  ಕೋ ವಾರ್ಥಾಪ್ತೋऽಭಜತಾಂ ಸ್ವಧರ್ಮತಃ॥

"ಒಬ್ಬನು ಭೌತಿಕ ಆಶೋತ್ತರಗಳನ್ನೆಲ್ಲಾ ತ್ಯಜಿಸಿ, ಪರಮ ದೇವೋತ್ತಮ ಪುರುಷನ ಆಶ್ರಯವನ್ನು ಸಂಪೂರ್ಣವಾಗಿ ತೆಗೆದುಕೊಂಡರೆ, ಯಾವುದೇ ವಿಧವಾಗಿ ನಷ್ಟ ಅಥವಾ ದುರ್ಗತಿ ಇರುವುದಿಲ್ಲ. ಬದಲಿಗೆ ಒಬ್ಬ ಅಭಕ್ತನು ತನ್ನ ವೃತ್ತಿ ಕರ್ತವ್ಯಗಳಲ್ಲಿ ಪೂರ್ಣವಾಗಿ ತೊಡಗಿರಬಹುದಾದರೂ, ಏನನ್ನೂ ಗಳಿಸದಿರಬಹುದು." ಭೌತಿಕ ಆಶೋತ್ತರಗಳಿಗಾಗಿ ಶಾಸ್ತ್ರೀಯವಾದ ಮತ್ತು ಸಾಂಪ್ರದಾಯಕವಾದ ಅನೇಕ ಚಟುವಟಿಕೆಗಳಿವೆ. ಒಬ್ಬ ದಿವ್ಯ ಸಾಧಕನು ಜೀವನದಲ್ಲಿನ ಅಧ್ಯಾತ್ಮಿಕ ಪ್ರಗತಿಯ ಸಲುವಾಗಿ, ಕೃಷ್ಣ ಪ್ರಜ್ಞೆಗಾಗಿ, ಎಲ್ಲ ಭೌತಿಕ ಚಟುವಟಿಕೆಗಳನ್ನು ತ್ಯಜಿಸಬೇಕೆಂದು ನಿರೀಕ್ಷಿಸಿದೆ. ಕೃಷ್ಣ ಪ್ರಜ್ಞೆಯಿಂದ ಅದು ಪೂರ್ಣವಾದರೆ ಒಬ್ಬನು ಅತ್ಯುನ್ನತ ಪರಿಪೂರ್ಣತೆಯನ್ನು ಪಡೆಯಬಹುದು. ಆದರೆ ಅವನು ಅಂಥ ಪರಿಪೂರ್ಣತೆಯ ಹಂತವನ್ನು ತಲುಪದಿದ್ದರೆ, ಆಗ ಅವನು ಭೌತಿಕವಾಗಿ ಮತ್ತು ಅಧ್ಯಾತ್ಮಿಕವಾಗಿ, ಉಭಯತ್ರ ನಷ್ಟಕ್ಕೊಳಗಾಗಬಹುದು ಎಂದು ಒಬ್ಬನು ವಾದಿಸಬಹುದು. ಒಬ್ಬನು ವಿಧಿತ ಕರ್ತವ್ಯಗಳನ್ನು ಆಚರಿಸದಿದ್ದರೆ, ಪ್ರತಿಕ್ರಿಯೆಯನ್ನೂ ಅನುಭವಿಸಬೇಕಾಗುತ್ತದೆ ಎಂದು ಶಾಸ್ತ್ರ

ಗಳಲ್ಲಿ ವಿಧಿಸಿದೆ; ಆದುದರಿಂದ ದಿವ್ಯ ಚಟುವಟಿಕೆಗಳನ್ನು ಸರಿಯಾಗಿ ನಿರ್ವಹಿಸದವನು ಈ ಪ್ರತಿಕ್ರಿಯೆಗಳಿಗೆ ಒಳಪಡುತ್ತಾನೆ. ಅಯಶಸ್ವೀ ದಿವ್ಯಸಾಧಕನು ಚಿಂತಿಸುವ ಅಗತ್ಯವಿಲ್ಲವೆಂದು ಭಾಗವತವು ಆಶ್ವಾಸನೆ ನೀಡುತ್ತದೆ. ವಿಧಿತ ಕರ್ತವ್ಯಗಳನ್ನು ಪರಿಪೂರ್ಣವಾಗಿ ಆಚರಿಸದಿದ್ದುದಕ್ಕಾಗಿ ಅವನು ಪ್ರತಿಕ್ರಿಯೆಗೆ ಒಳಪಡಬಹುದಾದರೂ, ಆಗಲೂ ಅವನಿಗೆ ನಷ್ಟವಿಲ್ಲ, ಏಕೆಂದರೆ ಮಂಗಲಕರವಾದ ಕೃಷ್ಣಪ್ರಜ್ಞೆಯು ಎಂದಿಗೂ ಮರೆಯಲ್ಪಡುವುದಿಲ್ಲ, ಮತ್ತು ಹಾಗೆ ನಿರತನಾದವನು ಮುಂದಿನ ಜನ್ಮದಲ್ಲಿ ಕೆಳವರ್ಗದಲ್ಲಿ ಹುಟ್ಟಿದರೂ ಕೂಡ ಹಾಗೆಯೇ ಮುಂದುವರಿಯುವನು. ಇದಕ್ಕೆ ಬದಲಾಗಿ, ವಿಧಿತ ಕರ್ತವ್ಯಗಳನ್ನು ಸುಮ್ಮನೆ ಕಟ್ಟುನಿಟ್ಟಾಗಿ ಪಾಲಿಸುವವನು, ಕೃಷ್ಣಪ್ರಜ್ಞೆಯಲ್ಲಿ ಕೊರತೆಯುಳ್ಳವನಾಗಿದ್ದರೆ, ಮಂಗಲಕರ ಫಲಗಳನ್ನು ಅಗತ್ಯವಾಗಿ ಪಡೆಯುವನೆಂದು ಏನೂ ಇಲ್ಲ.

ಭಾವಾರ್ಥವನ್ನು ಹೀಗೆ ಅರಿತುಕೊಳ್ಳಬಹುದು. ಮಾನವ ಕುಲವನ್ನು ನಿಯಂತ್ರಿತ ಮತ್ತು ಅನಿಯಂತ್ರಿತ ಎಂಬ ಎರಡು ಭಾಗಗಳಾಗಿ ವಿಭಾಗಿಸಬಹುದು. ತಮ್ಮ ಮುಂದಿನ ಜನ್ಮದ ಅಥವಾ ಆಧ್ಯಾತ್ಮಿಕ ಮೋಕ್ಷದ ಜ್ಞಾನವಿಲ್ಲದೆ ಸುಮ್ಮನೆ ಪಶುಪ್ರಾಯವಾದ ಇಂದ್ರಿಯ ತೋಷಣಗಳಲ್ಲಿ ನಿರತರಾದವರು ಅನಿಯಂತ್ರಿತ ವಿಭಾಗಕ್ಕೆ ಸೇರಿದವರು. ಶಾಸ್ತ್ರ ವಿಧಿತ ಕರ್ತವ್ಯಗಳ ತತ್ವಗಳನ್ನು ಅನುಸರಿಸುವವರು ನಿಯಂತ್ರಿತ ವಿಭಾಗಕ್ಕೆ ಸೇರಿದವರು. ಅನಿಯಂತ್ರಿತ ವಿಭಾಗದವರು, ನಾಗರಿಕರು ಮತ್ತು ಅನಾಗರಿಕರು, ವಿದ್ಯಾವಂತರು ಮತ್ತು ಅವಿದ್ಯಾವಂತರು, ಸಬಲರು ಮತ್ತು ದುರ್ಬಲರು ಉಭಯತ್ರರೂ ಪಶುಪ್ರಾಯದ ಮನೋಗತವನ್ನೇ ಹೊಂದಿರುವರು. ಅವರ ಕಾರ್ಯಕಲಾಪಗಳು ಎಂದಿಗೂ ಮಂಗಲಕರವಲ್ಲ, ಏಕೆಂದರೆ ತಿನ್ನುವ, ನಿದ್ರಿಸುವ, ರಕ್ಷಿಸಿಕೊಳ್ಳುವ, ಮೈಥುನ ಮಾಡುವ ಪಶುಪ್ರವೃತ್ತಿಗಳನ್ನು ಅನುಭವಿಸುವಾಗ, ಸದಾ ಕ್ಲೇಶಮಯವಾದ ಭೌತಿಕ ಅಸ್ತಿತ್ವದಲ್ಲಿ ಅವರು ನಿರಂತರವಾಗಿ ಇರುತ್ತಾರೆ. ಇದಕ್ಕೆ ಬದಲಾಗಿ, ಶಾಸ್ತ್ರ ವಿಧಿಗಳಿಂದ ನಿಯಂತ್ರಿತರಾದವರು, ಮತ್ತು ಹೀಗೆ ಕ್ರಮೇಣ ಕೃಷ್ಣಪ್ರಜ್ಞೆಗೆ ಏರುವವರು, ಖಂಡಿತವಾಗಿ ಜೀವನದಲ್ಲಿ ಪ್ರಗತಿಯನ್ನು ಹೊಂದುವರು.

ಮಂಗಲಕರ ಮಾರ್ಗವನ್ನು ಅನುಸರಿಸುವವರನ್ನು ಮೂರು ಭಾಗಗಳಾಗಿ ವಿಭಾಗಿಸಬಹುದು : (1) ಶಾಸ್ತ್ರ ನಿಯಮ ನಿಯಂತ್ರಣಗಳನ್ನು ಅನುಸರಿಸಿ ಭೌತಿಕ ಅಭ್ಯುದಯವನ್ನು ಭೋಗಿಸುತ್ತಿರುವವರು, (2) ಭೌತಿಕ ಅಸ್ತಿತ್ವದಿಂದ ಅಂತಿಮ ವಿಮೋಚನೆಯನ್ನು ಕಾಣಲು ಪ್ರಯತ್ನಿಸುತ್ತಿರುವವರು, ಮತ್ತು (3) ಕೃಷ್ಣ ಪ್ರಜ್ಞೆಯಲ್ಲಿನ ಭಕ್ತರು. ಭೌತಿಕ ಸುಖಕ್ಕಾಗಿ ಶಾಸ್ತ್ರಗಳ ನಿಯಮ ನಿಯಂತ್ರಣಗಳನ್ನು ಅನುಸರಿಸುತ್ತಿರುವವರನ್ನು ಮತ್ತೆ ಎರಡು ವರ್ಗಗಳಾಗಿ ವಿಂಗಡಿಸಬಹುದು : ಕಾಮ್ಯ ಕರ್ಮಿಗಳು ಮತ್ತು ಇಂದ್ರಿಯ ತೋಷಣಕ್ಕಾಗಿ ಫಲವನ್ನು ಆಶಿಸದವರು. ಇಂದ್ರಿಯ ತೋಷಣಕ್ಕಾಗಿ ಕಾಮ್ಯ ಫಲಾಪೇಕ್ಷಿಗಳು ಜೀವನದ ಉನ್ನತ ಮಟ್ಟಕ್ಕೆ—ಊರ್ಧ್ವಲೋಕಗಳಿಗೂ ಕೂಡ ಏರಿಸಲ್ಪಡಬಹುದು. ಆದರೂ ಸಹ ಅವರು ಭೌತಿಕ ಅಸ್ತಿತ್ವದಿಂದ ಮುಕ್ತರಲ್ಲದ್ದರಿಂದ ಅವರು ನಿಜವಾಗಿಯೂ ಮಂಗಲಕರ ಮಾರ್ಗವನ್ನು ಅನುಸರಿಸುತ್ತಿರುವುದಿಲ್ಲ. ಒಬ್ಬನನ್ನು ಮೋಕ್ಷಕ್ಕೆ ಕರೆದೊಯ್ಯುವ ಚಟುವಟಿಕೆಗಳು ಮಾತ್ರವೇ ಮಂಗಲಕರ. ಅಂತಿಮ ಆತ್ಮ

ಸಾಕ್ಷಾತ್ಕಾರಕ್ಕೆ ಅಥವಾ ಜೀವನದ ಭೌತಿಕ ದೈಹಿಕ ಕಲ್ಪನೆಯ ವಿಮೋಚನೆಗೆ ಗುರಿಯಿಡದ ಯಾವುದೇ ಚಟುವಟಿಕೆಯು ಮಂಗಲಕರವಾಗುವುದೇ ಇಲ್ಲ. ಕೃಷ್ಣಪ್ರಜ್ಞಾ ಚಟುವಟಿಕೆಯು ಮಾತ್ರ ಮಂಗಲಕರ ಚಟುವಟಿಕೆ, ಮತ್ತು ಕೃಷ್ಣಪ್ರಜ್ಞಾ ಪಥದಲ್ಲಿ ಪ್ರಗತಿ ಸಾಧಿಸುವ ಸಲುವಾಗಿ ಎಲ್ಲ ದೈಹಿಕ ಅನಾನುಕೂಲತೆಗಳನ್ನು ಸ್ವಇಚ್ಛೆಯಿಂದ ಸ್ವೀಕರಿಸುವವನನ್ನು ಕಠೋರ ತಪಶ್ಚರ್ಯೆಗೆ ಒಳಪಟ್ಟ ಪರಿಪೂರ್ಣ ದಿವ್ಯಸಾಧಕನೆಂದು ಕರೆಯಬಹುದು. ಅಷ್ಟಾಂಗ ಯೋಗಪದ್ಧತಿಯು ಕೃಷ್ಣಪ್ರಜ್ಞೆಯ ಅಂತಿಮ ಸಾಕ್ಷಾತ್ಕಾರದೆಡೆಗೆ ನಿರ್ದೇಶಿತವಾಗಿರುವ ಕಾರಣ ಅ[illegible] ಮಂಗಲಕರ ಮತ್ತು ಈ ವಿಷಯದಲ್ಲಿ ತನ್ನ ಅತ್ಯುತ್ತಮ ಪ್ರಯತ್ನ ಮ[illegible] ಯಾರೂ ದುರ್ಗತಿಗೆ ಭಯಪಡುವ ಅಗತ್ಯವಿಲ್ಲ.

**ಪ್ರಾಪ್ಯ ಪುಣ್ಯಕೃತಾಂ ಲೋಕಾನ್ ಉಷಿತ್ವಾ ಶಾಶ್ವತೀಃ ಸಮಾಃ ।**
**ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ ॥ ೪೧ ॥**

ಪ್ರಾಪ್ಯ—ಪಡೆದ ತರುವಾಯ, ಪುಣ್ಯಕೃತಾಮ್—ಪುಣ್ಯಕಾರ್ಯಗಳನ್ನು ಆಚರಿಸಿದವರ, ಲೋಕಾನ್—ಲೋಕಗಳು, ಉಷಿತ್ವಾ—ವಾಸಿಸಿದ ಬಳಿಕ, ಶಾಶ್ವತೀಃ—ಅನೇಕ, ಸಮಾಃ—ವರ್ಷಗಳು, ಶುಚೀನಾಮ್—ಪುಣ್ಯವಂತರ, ಶ್ರೀಮತಾಮ್—ಶ್ರೀಮಂತರ, ಗೇಹೇ—ಮನೆಯಲ್ಲಿ, ಯೋಗಭ್ರಷ್ಟಃ—ಆತ್ಮಸಾಕ್ಷಾತ್ಕಾರ ಮಾರ್ಗದಿಂದ ಪತನವಾದವನು, ಅಭಿಜಾಯತೇ—ಅವನು ಹುಟ್ಟುತ್ತಾನೆ.

**ಅಯಶಸ್ವೀ ಯೋಗಿಯು, ಪುಣ್ಯಜೀವಿಗಳ ಲೋಕಗಳಲ್ಲಿ ಅನೇಕಾನೇಕ ವರ್ಷಗಳ ಭೋಗಾನಂತರ, ಪುಣ್ಯವಂತರ ಕುಟುಂಬದಲ್ಲಿ, ಅಥವಾ ಕುಲೀನ ಶ್ರೀಮಂತರ ಕುಟುಂಬದಲ್ಲಿ ಹುಟ್ಟುತ್ತಾನೆ.**

**ಭಾವಾರ್ಥ :** ಅಯಶಸ್ವಿಯೋಗಿಗಳನ್ನು ಎರಡು ವರ್ಗಗಳಲ್ಲಿ ವಿಂಗಡಿಸಿದ್ದಾರೆ : ಅಲ್ಪ ಪ್ರಗತಿಯ ನಂತರ ಪತನಹೊಂದಿದವನು, ಮತ್ತು ದೀರ್ಘಯೋಗಾಚರಣೆಯ ನಂತರ ಪತನ ಹೊಂದಿದವನು. ಅಲ್ಪಾವಧಿಯ ಆಚರಣೆಯ ನಂತರ ಪತನ ಹೊಂದಿದ ಯೋಗಿಯು ಪುಣ್ಯ ಜೀವಿಗಳು ಪ್ರವೇಶಿಸಲು ಅನುಮತಿಸಲ್ಪಡುವ ಊರ್ಧ್ವಲೋಕಗಳಿಗೆ ಹೋಗುತ್ತಾನೆ. ಅಲ್ಲಿ ಸುದೀರ್ಘ ಜೀವನದ ನಂತರ ಧರ್ಮಿಷ್ಠ ವೈಷ್ಣವ ಬ್ರಾಹ್ಮಣನ ಕುಟುಂಬದಲ್ಲಿ ಅಥವಾ ಶ್ರೀಮಂತ ವೈಶ್ಯರ ಕುಟುಂಬದಲ್ಲಿ ಜನಿಸಲು ಮತ್ತೆ ಈ ಲೋಕಕ್ಕೆ ಕಳುಹಿಸಲ್ಪಡುತ್ತಾನೆ.

ಈ ಅಧ್ಯಾಯದ ಕೊನೆಯ ಶ್ಲೋಕದಲ್ಲಿ ವಿವರಿಸಿರುವಂತೆ, ಕೃಷ್ಣಪ್ರಜ್ಞೆಯ ಅತ್ಯುನ್ನತ ಪರಿಪೂರ್ಣತೆಯನ್ನು ಪಡೆಯುವುದೇ ಯೋಗಾಚರಣೆಯ ನಿಜ ಉದ್ದೇಶ. ಆದರೆ ಆ ಮಟ್ಟದವರೆಗೆ ದೀರ್ಘಪ್ರಯತ್ನಮಾಡದವರು, ಮತ್ತು ಭೌತಿಕ ಪ್ರಲೋಭನಗಳ ನಿಮಿತ್ತ ವಿಫಲರಾದವರು, ಭಗವಂತನ ಕೃಪೆಯಿಂದ, ತಮ್ಮ ಭೌತಿಕ ಪ್ರವೃತ್ತಿಗಳ ಪೂರ್ಣೋಪಯೋಗ ಮಾಡಿಕೊಳ್ಳಲು ಅನುಮತಿಸಲ್ಪಡುವರು. ಅದರ ನಂತರ ಧರ್ಮಿಷ್ಠರ ಅಥವಾ ಶ್ರೀಮಂತರ ಕುಟುಂಬಗಳಲ್ಲಿ ಪ್ರಗತಿಪರ ಜೀವನ ನಡೆಸಲು ಅವಕಾಶ

ನೀಡಲ್ಪಡುವರು. ಅಂಥ ಕುಟುಂಬಗಳಲ್ಲಿ ಜನಿಸಿದವರು ಅನುಕೂಲತೆಗಳ ಪ್ರಯೋಜನವನ್ನು ಪಡೆದುಕೊಳ್ಳಬಹುದು ಮತ್ತು ತಮ್ಮನ್ನು ಪೂರ್ಣ ಕೃಷ್ಣಪ್ರಜ್ಞೆಗೆ ಉನ್ನತಿಸಿಕೊಳ್ಳಲು ಯತ್ನಿಸಬಹುದು.

**ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್ ।**
**ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್ ॥ ೪೨ ॥**

ಅಥ ವಾ—ಅಥವಾ, ಯೋಗಿನಾಮ್—ಅರಿತ ದಿವ್ಯವಾದಿಗಳ, ಏವ—ಖಂಡಿತವಾಗಿ, ಕುಲೇ—ಕುಟುಂಬದಲ್ಲಿ, ಭವತಿ—ಹುಟ್ಟುತ್ತಾನೆ, ಧೀ ಮತಾಮ್—ಮಹಾಜ್ಞಾನಿಗಳ, ಏತತ್—ಇದು, ಹಿ—ಖಂಡಿತವಾಗಿ, ದುರ್ಲಭತರಮ್—ಬಹಳ ಅಪರೂಪ, ಲೋಕೇ—ಈ ಜಗತ್ತಿನಲ್ಲಿ, ಜನ್ಮ—ಜನ್ಮವು, ಯತ್—ಯಾವುದು, ಈ ದೃಶಮ್—ಹೀಗೆ.

**ಅಥವಾ (ದೀರ್ಘಕಾಲದ ಯೋಗಾಭ್ಯಾಸದ ನಂತರ ಅಯಶಸ್ವಿಯಾದರೆ) ಅವನು ಜ್ಞಾನದಲ್ಲಿ ನಿಶ್ಚಯವಾಗಿಯೂ ಶ್ರೇಷ್ಠರಾದ ದಿವ್ಯವಾದಿಗಳ ಕುಟುಂಬದಲ್ಲಿ ಹುಟ್ಟುತ್ತಾನೆ. ಖಂಡಿತವಾಗಿ ಅಂಥ ಜನ್ಮವು ಈ ಪ್ರಪಂಚದಲ್ಲಿ ಅಪರೂಪ.**

**ಭಾವಾರ್ಥ :** ಯೋಗಿಗಳ ಅಥವಾ ದಿವ್ಯವಾದಿಗಳ—ಶ್ರೇಷ್ಠಜ್ಞಾನವುಳ್ಳವರ—ಕುಟುಂಬದಲ್ಲಿ ಜನ್ಮವು ಇಲ್ಲಿ ಪ್ರಶಂಸಿಸಲ್ಪಟ್ಟಿದೆ, ಏಕೆಂದರೆ ಅಂಥ ಕುಟುಂಬದಲ್ಲಿ ಹುಟ್ಟಿದ ಮಗು ತನ್ನ ಜೀವನಾರಭ್ಯದಿಂದಲೇ ಆಧ್ಯಾತ್ಮಿಕ ಪ್ರಚೋದನೆಯನ್ನು ಪಡೆಯುತ್ತದೆ. ಇದನ್ನು **ಆಚಾರ್ಯ** ಅಥವಾ **ಗೋಸ್ವಾಮಿ** ಕುಟುಂಬಗಳಲ್ಲಿ ವಿಶೇಷವಾಗಿ ಕಾಣಬಹುದು. ಅಂಥ ಕುಟುಂಬಗಳು ಸಾಂಪ್ರದಾಯದಿಂದಲೂ ಮತ್ತು ತರಬೇತಿಯಿಂದಲೂ ಬಹು ವಿದ್ವತ್ಪೂರ್ಣ ಮತ್ತು ಭಕ್ತಿಯುತ, ಮತ್ತು ಹೀಗೆ ಅವರು ಗುರುಗಳಾಗುತ್ತಾರೆ. ಭಾರತದಲ್ಲಿ ಅಂಥ ಅನೇಕ **ಆಚಾರ್ಯ** ಕುಟುಂಬಗಳಿವೆ, ಆದರೆ ಅವು ಶಿಕ್ಷಣ ಮತ್ತು ತರಬೇತಿಯ ಕೊರತೆಯಿಂದ ಈಗ ದುರ್ಗತಿ ಹೊಂದಿವೆ. ಭಗವಂತನ ಕೃಪೆಯಿಂದ ಪೀಳಿಗೆ ಪೀಳಿಗೆಗಳಲ್ಲಿ ದಿವ್ಯಸಾಧಕರನ್ನು ಪೋಷಿಸುತ್ತಿರುವ ಅಂಥ ಕುಟುಂಬಗಳು ಇನ್ನೂ ಇವೆ, ಸುದೈವದಿಂದ, ನಮ್ಮ ಗುರುಗಳಾದ ಓಂ ವಿಷ್ಣುಪಾದ ಶ್ರೀ ಶ್ರೀಮದ್ ಭಕ್ತಿಸಿದ್ಧಾಂತ ಸರಸ್ವತೀ ಗೋಸ್ವಾಮಿ ಮಹಾರಾಜರು, ಮತ್ತು ಅಲ್ಪನಾದ ನಾನೂ, ಭಗವಂತನ ಕೃಪೆಯಿಂದ, ಅಂಥ ಕುಟುಂಬಗಳಲ್ಲಿ ಜನ್ಮವೆತ್ತುವ ಅವಕಾಶವನ್ನು ಪಡೆದಿದ್ದೆವು, ಮತ್ತು ನಾವಿಬ್ಬರೂ ನಮ್ಮ ಜೀವನಾರಭ್ಯದಿಂದಲೇ ಭಗವಂತನ ಭಕ್ತಿಯುತ ಸೇವೆಯಲ್ಲಿ ತರಬೇತಿ ನೀಡಲ್ಪಟ್ಟೆವು. ಅನಂತರದಲ್ಲಿ ದಿವ್ಯಪದ್ಧತಿಯ ಕ್ರಮದಂತೆ ನಾವು ಸಂಧಿಸಿದೆವು.

**ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಮ್ ।**
**ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ ॥ ೪೩ ॥**

ತತ್ರ—ಆಮೇಲೆ, ತಮ್—ಆ, ಬುದ್ಧಿಸಂಯೋಗಮ್—ಪ್ರಜ್ಞೆಯ ಪುನರುಜ್ಜೀವನ, ಲಭತೇ—ಹೊಂದುತ್ತಾನೆ, ಪೌರ್ವದೇಹಿಕಮ್—ಹಿಂದಿನ ದೇಹದಿಂದ, ಯತತೇ—

ಅವನು ಪ್ರಯತ್ನಿಸುತ್ತಾನೆ, ಚ—ಹಾಗೂ, ತತಃ—ಅನಂತರ, ಭೂಯಃ—ಮತ್ತೆ, ಸಂಸಿದ್ಧೌ—ಪರಿಪೂರ್ಣತೆಗಾಗಿ, ಕುರುನನ್ದನ—ಹೇ ಕುರುನಂದನನೇ.

**ಅಂಥ ಜನ್ಮ ಪಡೆದಾಗ, ಅವನು ತನ್ನ ಹಿಂದಿನ ಜನ್ಮದ ದೈವೀಪ್ರಜ್ಞೆಯನ್ನು ಪುನರುಜ್ಜೀವಿಸಿಕೊಳ್ಳುತ್ತಾನೆ, ಮತ್ತು ಹೇ ಕುರುನಂದನ, ಅವನು ಸಂಪೂರ್ಣ ಯಶಸ್ಸನ್ನು ಗಳಿಸಲು ಮತ್ತಷ್ಟು ಪ್ರಗತಿ ಸಾಧಿಸಲು ಮತ್ತೆ ಪ್ರಯತ್ನಿಸುತ್ತಾನೆ.**

**ಭಾವಾರ್ಥ :** ಸದ್ಬ್ರಾಹ್ಮಣರ ಕುಟುಂಬದಲ್ಲಿ ತನ್ನ ಮೂರನೆಯ ಜನ್ಮವೆತ್ತಿದ ಭರತ ಮಹಾರಾಜನು, ಪೂರ್ವದ ದೈವೀ ಪ್ರಜ್ಞೆಯ ಪುನರುಜ್ಜೀವನಕ್ಕಾಗಿ ಒಳ್ಳೆಯ ಜನ್ಮ ಪಡೆದ ಉದಾಹರಣೆಯಾಗಿದ್ದಾನೆ. ಭರತ ಮಹಾರಾಜನು ಪ್ರಪಂಚದ ಚಕ್ರವರ್ತಿ ಯಾಗಿದ್ದನು, ಮತ್ತು ಅವನ ಕಾಲದಿಂದ ಈ ಲೋಕವು ದೇವತೆಗಳಲ್ಲಿ ಭಾರತ–ವರ್ಷ ಎಂದು ಪ್ರಸಿದ್ಧವಾಗಿದೆ. ಹಿಂದೆ ಅದು ಇಲಾವೃತವರ್ಷವೆಂದು ತಿಳಿಯಲ್ಪಟ್ಟಿತ್ತು. ಚಕ್ರವರ್ತಿಯು ಚಿಕ್ಕವಯಸ್ಸಿನಲ್ಲಿಯೇ ಆಧ್ಯಾತ್ಮಪರಿಪೂರ್ಣತೆಗಾಗಿ ನಿವೃತ್ತನಾದನು, ಆದರೆ ಯಶಸ್ಸು ಗಳಿಸುವುದರಲ್ಲಿ ವಿಫಲನಾದನು. ತನ್ನ ಮುಂದಿನ ಜನ್ಮದಲ್ಲಿ ಅವನು ಸದ್ಬ್ರಾಹ್ಮಣ ಕುಟುಂಬದಲ್ಲಿ ಜನ್ಮವೆತ್ತಿದನು ಮತ್ತು ಜಡಭರತನೆಂದು ತಿಳಿಯಲ್ಪಟ್ಟನು, ಏಕೆಂದರೆ ಅವನು ಸದಾ ಏಕಾಂಗಿಯಾಗಿ ಉಳಿದುಕೊಳ್ಳುತ್ತಿದ್ದನು ಮತ್ತು ಯಾರೊಡನೆಯೂ ಮಾತನಾಡುತ್ತಿರಲಿಲ್ಲ. ಅನಂತರ ಅವನು ದೊರೆ ರಹೂಗಣನಿಂದ ಮಹಾ ದಿವ್ಯಸಾಧಕನೆಂದು ಕಂಡುಹಿಡಿಯಲ್ಪಟ್ಟನು. ಅವನ ಜೀವನದಿಂದ ತಿಳಿದು ಬಂದಿರುವುದೇನೆಂದರೆ, ದಿವ್ಯ ಪ್ರಯತ್ನಗಳು ಅಥವಾ ಯೋಗಾಚರಣೆಯು ಎಂದಿಗೂ ವ್ಯರ್ಥ ವಾಗುವುದಿಲ್ಲ. ಭಗವಂತನ ಕೃಪೆಯಿಂದ ದಿವ್ಯ ಸಾಧಕನು ಕೃಷ್ಣಪ್ರಜ್ಞೆಯಲ್ಲಿ ಸಂಪೂರ್ಣ ಪರಿಪೂರ್ಣತೆಯನ್ನು ಹೊಂದಲು ಮತ್ತೆ ಮತ್ತೆ ಅವಕಾಶಗಳನ್ನು ಪಡೆಯುತ್ತಾನೆ.

**ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ ।**
**ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ ॥ ೪೪ ॥**

ಪೂರ್ವ—ಹಿಂದಿನ, ಅಭ್ಯಾಸೇನ—ಅಭ್ಯಾಸದಿಂದ, ತೇನ—ಅದರಿಂದ, ಏವ—ಖಂಡಿತವಾಗಿ, ಹ್ರಿಯತೇ—ಆಕರ್ಷಿತನಾಗುತ್ತಾನೆ, ಹಿ—ಖಂಡಿತವಾಗಿ, ಅವಶಃ—ತನ್ನಷ್ಟಕ್ಕೆ ತಾನೇ, ಅಪಿ—ಕೂಡ, ಸಃ—ಅವನು, ಜಿಜ್ಞಾಸುಃ—ತಿಳಿಯಲು ಕುತೂಹಲವುಳ್ಳ, ಅಪಿ—ಕೂಡ, ಯೋಗಸ್ಯ—ಯೋಗದ ಬಗ್ಗೆ, ಶಬ್ದ ಬ್ರಹ್ಮ—ಶಾಸ್ತ್ರಗಳ ಸಂಸ್ಕಾರ ತತ್ವಗಳನ್ನು, ಅತಿವರ್ತತೇ—ದಾಟುತ್ತಾನೆ.

**ತನ್ನ ಹಿಂದಿನ ಜನ್ಮದ ದೈವೀ ಪ್ರಜ್ಞೆಯ ನಿಮಿತ್ತ, ಅವನು—ಅವುಗಳನ್ನು ಅರಸದೆಯೇ—ತನ್ನಷ್ಟಕ್ಕೆ ತಾನೇ ಯೋಗತತ್ವಗಳಿಂದ ಆಕರ್ಷಿತನಾಗುತ್ತಾನೆ. ಅಂಥ ಜಿಜ್ಞಾಸು ದಿವ್ಯವಾದಿಯು ಸದಾ ಶಾಸ್ತ್ರಗಳ ಸಂಸ್ಕಾರಾತ್ಮಕ ತತ್ವಗಳಿಗಿಂತ ಮೇಲಿರುತ್ತಾನೆ.**

**ಭಾವಾರ್ಥ :** ಮುನ್ನಡೆದ ಯೋಗಿಗಳು ಶಾಸ್ತ್ರಗಳ ಸಂಸ್ಕಾರಗಳಿಂದ ಬಹಳಷ್ಟು ಆಕರ್ಷಿತರಲ್ಲ, ಆದರೆ ಅವರು, ಅತ್ಯುನ್ನತ ಯೋಗ ಪರಿಪೂರ್ಣತೆಯಾದ ಸಂಪೂರ್ಣ

ಕೃಷ್ಣಪ್ರಜ್ಞೆಗೆ, ತಮ್ಮನ್ನು ಉನ್ನತಿಸುವ ಯೋಗ ತತ್ವಗಳಿಗೆ ತಾವಾಗಿಯೇ ಆಕರ್ಷಿತರಾಗುವರು. ಮುನ್ನಡೆದ ದಿವ್ಯಸಾಧಕರಿಂದ ವೈದಿಕ ಸಂಸ್ಕಾರಗಳ ಅಂಥ ಉಪೇಕ್ಷೆಯು, ಶ್ರೀಮದ್ಭಾಗವತದಲ್ಲಿ (3.33.7) ಹೀಗೆ ವಿವರಿಸಲ್ಪಟ್ಟಿದೆ :

ಅಹೋ ಬತ ಶ್ವಪಚೋऽತೋ ಗರೀಯಾನ್
ಯಜ್ಜಿಹ್ವಾಗ್ರೇ ವರ್ತತೇ ನಾಮ ತುಭ್ಯಮ್।
ತೇಪುಸ್ತಪಸ್ತೇ ಜುಹುವುಃ ಸಸ್ನುರಾರ್ಯಾ
ಬ್ರಹ್ಮಾನೂಚುರ್ನಾಮ ಗೃಣನ್ತಿ ಯೇ ತೇ॥

"ಹೇ ನನ್ನ ಭಗವಂತನೇ ! ಸ್ವಾಮಿಯಾದ ನಿನ್ನ ಪವಿತ್ರ ನಾಮ ಸಂಕೀರ್ತನ ಮಾಡುವವರು, ನಾಯಿ ತಿನ್ನುವವರ ಕುಟುಂಬಗಳಲ್ಲಿ ಹುಟ್ಟಿದ್ದರೂ, ಅಧ್ಯಾತ್ಮ ಜೀವನದಲ್ಲಿ ಬಹು, ಬಹು ಮುಂದುವರಿದವರು. ಅಂಥ ಸಂಕೀರ್ತನಕಾರರು ನಿಸ್ಸಂದೇಹವಾಗಿ ಎಲ್ಲ ಬಗೆಯ ವ್ರತಗಳನ್ನು ಮತ್ತು ಯಜ್ಞಗಳನ್ನು ಆಚರಿಸಿರುತ್ತಾರೆ, ಎಲ್ಲ ಪವಿತ್ರ ಸ್ಥಳಗಳಲ್ಲಿ ಸ್ನಾನಮಾಡಿರುತ್ತಾರೆ, ಮತ್ತು ಎಲ್ಲ ಶಾಸ್ತ್ರಾಧ್ಯಯನವನ್ನು ಮುಗಿಸಿರುತ್ತಾರೆ."

ಠಾಕುರ ಹರಿದಾಸರನ್ನು ತಮ್ಮ ಅತ್ಯಂತ ಮುಖ್ಯ ಶಿಷ್ಯರಲ್ಲಿ ಒಬ್ಬರನ್ನಾಗಿ ಸ್ವೀಕರಿಸಿದ ಭಗವಾನ್ ಚೈತನ್ಯರು, ಇದಕ್ಕೆ ಪ್ರಸಿದ್ಧ ಉದಾಹರಣೆ ಒದಗಿಸಿದ್ದಾರೆ. ಠಾಕುರ ಹರಿದಾಸರು ಮುಸ್ಲಿಮ್ ಕುಟುಂಬದಲ್ಲಿ ಜನಿಸಿದ್ದರೂ, ಅವರು ಪ್ರತಿದಿನವೂ ಮೂರು ಲಕ್ಷ ಸಲ, ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ, ಹರೇ ರಾಮ, ಹರೇ ರಾಮ,ರಾಮ ರಾಮ, ಹರೇ ಹರೇ, ಭಗವಂತನ ಪವಿತ್ರ ನಾಮ ಜಪವನ್ನು ಕಟ್ಟುನಿಟ್ಟಾಗಿ ಮಾಡುತ್ತಿದ್ದ ಕಾರಣ ಅವರು ಭಗವಾನ್ ಚೈತನ್ಯರಿಂದ **ನಾಮಾಚಾರ್ಯ**ರೆಂಬ ಉನ್ನತ ಪದವಿಗೆ ಏರಿಸಲ್ಪಟ್ಟರು. ಅವರು ಸತತವಾಗಿ ಭಗವಂತನ ಪವಿತ್ರ ನಾಮ ಜಪ ಮಾಡುತ್ತಿದ್ದುದರಿಂದ, ಅವರು ತಮ್ಮ ಪೂರ್ವಜನ್ಮದಲ್ಲಿ, **ಶಬ್ದ-ಬ್ರಹ್ಮ** ಎನಿಸಿಕೊಂಡಿರುವ ವೇದಗಳ ಸಂಸ್ಕಾರ ವಿಧಾನಗಳನ್ನು ಮಾಡಿ ಮುಗಿಸಿರಬೇಕೆಂದು ತಿಳಿದುಬರುತ್ತದೆ. ಆದ್ದರಿಂದ ಒಬ್ಬನು ಶುದ್ಧನಾದ ಹೊರತು, ಕೃಷ್ಣಪ್ರಜ್ಞಾ ತತ್ವಗಳಲ್ಲಿ ನಿರತನಾಗಲಾರನು, ಅಥವಾ ಭಗವಂತನ ಪವಿತ್ರನಾಮ, ಹರೇ ಕೃಷ್ಣ ಜಪದಲ್ಲಿ ನಿರತನಾಗಲಾರನು.

**ಪ್ರಯತ್ನಾದ್ ಯತಮಾನಸ್ತು ಯೋಗೀ ಸಂಶುದ್ಧಕಿಲ್ಬಿಷಃ ।**
**ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್ ॥ ೪೫ ॥**

ಪ್ರಯತ್ನಾತ್—ಕಟ್ಟುನಿಟ್ಟಾದ ಅಭ್ಯಾಸದಿಂದ, ಯತಮಾನಃ—ಯತ್ನಿಸುತ್ತ, ತು—ಮತ್ತು, ಯೋಗೀ—ಅಂಥ ದಿವ್ಯವಾದಿಯು, ಸಂಶುದ್ಧ—ಶುದ್ಧವಾಗಿ, ಕಿಲ್ಬಿಷಃ—ಅವನ ಎಲ್ಲ ಪಾಪಗಳು, ಅನೇಕ—ಅನೇಕಾನೇಕ, ಜನ್ಮ—ಜನ್ಮಗಳು, ಸಂಸಿದ್ಧಃ—ಪರಿಪೂರ್ಣತೆಯನ್ನುಗಳಿಸಿ, ತತಃ—ನಂತರ, ಯಾತಿ—ಹೊಂದುತ್ತಾನೆ, ಪರಾಮ್—ಅತ್ಯುನ್ನತ, ಗತಿಮ್—ಗತಿಯನ್ನು.

**ಮತ್ತು ಯೋಗಿಯು, ಎಲ್ಲ ಬಗೆಯ ಕಲುಷತೆಗಳಿಂದ ಶುದ್ಧನಾಗಿ, ಮತ್ತಷ್ಟು ಪ್ರಗತಿ ಸಾಧಿಸುವಲ್ಲಿ ಪ್ರಾಮಾಣಿಕ ಪ್ರಯತ್ನದಿಂದ ನಿರತನಾದಾಗ, ಆಗ ಅನೇಕಾನೇಕ ಜನ್ಮಗಳ ಅಭ್ಯಾಸದ ನಂತರ ಪರಿಪೂರ್ಣತೆ ಗಳಿಸಿ, ಕೊನೆಗೆ ಅವನು ಪರಮ ಗುರಿಯನ್ನು ಪಡೆಯುತ್ತಾನೆ.**

**ಭಾವಾರ್ಥ :** ವಿಶಿಷ್ಟವಾಗಿ ಧಾರ್ಮಿಕ, ಶ್ರೀಮಂತ ಅಥವಾ ಪವಿತ್ರ ಕುಟುಂಬದಲ್ಲಿ ಜನ್ಮವೆತ್ತಿದವನು ಯೋಗಸಾಧನೆಯ ಆಚರಣೆಗಾಗಿ ತನ್ನ ಅನುಕೂಲಕರ ಸ್ಥಿತಿಯ ಅರಿವಿಗೆ ಬರುತ್ತಾನೆ. ಆದ್ದರಿಂದ, ದೃಢ ನಿರ್ಧಾರದಿಂದ ತನ್ನ ಅಪೂರ್ಣವಾಗಿದ್ದ ಕಾರ್ಯವನ್ನು ಪ್ರಾರಂಭಿಸುತ್ತಾನೆ, ಮತ್ತು ಹೀಗಾಗಿ ಅವನು ತನ್ನನ್ನು ಎಲ್ಲ ಭೌತಿಕ ಕಲ್ಮಷಗಳಿಂದ ಸಂಪೂರ್ಣವಾಗಿ ಶುದ್ಧಗೊಳಿಸಿಕೊಳ್ಳುತ್ತಾನೆ. ಅವನು ಅಂತಿಮವಾಗಿ ಎಲ್ಲ ಕಲ್ಮಷಗಳಿಂದ ಮುಕ್ತನಾದಾಗ, ಅವನು ಅತ್ಯುತ್ಕೃಷ್ಟ ಪರಿಪೂರ್ಣತೆಯನ್ನು—ಕೃಷ್ಣಪ್ರಜ್ಞೆಯನ್ನು—ಹೊಂದುತ್ತಾನೆ. ಕೃಷ್ಣಪ್ರಜ್ಞೆಯು ಸಕಲ ಕಲ್ಮಷಗಳಿಂದ ಮುಕ್ತವಾಗುವ ಪರಿಪೂರ್ಣಹಂತ. ಇದನ್ನು ಭಗವದ್ಗೀತೆಯಲ್ಲಿ (7.28) ದೃಢಪಡಿಸಿದೆ :

ಯೇಷಾಂ ತ್ವನ್ತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಮ್।
ತೇ ದ್ವನ್ದ್ವ ಮೋಹ ನಿರ್ಮುಕ್ತಾ ಭಜನ್ತೇ ಮಾಂ ದೃಢವ್ರತಾಃ॥

"ಅನೇಕಾನೇಕ ಜನ್ಮಗಳಲ್ಲಿ ಪುಣ್ಯ ಚಟುವಟಿಕೆಗಳನ್ನು ಆಚರಿಸಿದ ತರುವಾಯ, ಒಬ್ಬನು ಸಕಲ ಕಲ್ಮಷಗಳಿಂದಲೂ ಮತ್ತು ಎಲ್ಲ ಮಾಯಾತ್ಮಕ ದ್ವಂದ್ವತೆಗಳಿಂದಲೂ ಸಂಪೂರ್ಣವಾಗಿ ಮುಕ್ತನಾದಾಗ, ಅವನು ಭಗವಂತನ ದಿವ್ಯ ಪ್ರೇಮಯುತ ಸೇವೆಯಲ್ಲಿ ನಿರತನಾಗುತ್ತಾನೆ."

**ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ।**
**ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ॥ ೪೬ ॥**

ತಪಸ್ವಿಭ್ಯಃ—ತಪಸ್ವಿಗಳಿಗಿಂತ, ಅಧಿಕಃ—ದೊಡ್ಡವನು, ಯೋಗೀ—ಯೋಗಿಯು, ಜ್ಞಾನಿಭ್ಯಃ—ಜ್ಞಾನಿಗಿಂತ, ಅಪಿ—ಕೂಡ, ಮತಃ—ತಿಳಿಯಲ್ಪಡುತ್ತಾನೆ, ಅಧಿಕಃ—ದೊಡ್ಡವನು, ಕರ್ಮಿಭ್ಯಃ—ಕಾಮ್ಯಕರ್ಮಿಗಳಿಗಿಂತ, ಚ—ಕೂಡ, ಅಧಿಕಃ—ದೊಡ್ಡವನು, ಯೋಗೀ—ಯೋಗಿಯು, ತಸ್ಮಾತ್— ಆದ್ದರಿಂದ, ಯೋಗೀ—ದಿವ್ಯಸಾಧಕ, ಭವ—ಆಗು, ಅರ್ಜುನ—ಹೇ ಅರ್ಜುನ.

**ಯೋಗಿಯು ತಪಸ್ವಿಗಿಂತಲೂ, ಜ್ಞಾನಿಗಿಂತಲೂ ಮತ್ತು ಕಾಮ್ಯಕರ್ಮಿಗಿಂತಲೂ ದೊಡ್ಡವನು. ಆದ್ದರಿಂದ, ಹೇ ಅರ್ಜುನ, ಎಲ್ಲ ಸಂದರ್ಭದಲ್ಲಿಯೂ ಯೋಗಿಯಾಗು.**

**ಭಾವಾರ್ಥ :** ನಾವು ಯೋಗ ಎಂದು ಹೇಳುವಾಗ, ನಮ್ಮ ಪ್ರಜ್ಞೆಯನ್ನು ಪರಮಸತ್ಯದೊಂದಿಗೆ ಸಂಪರ್ಕಿಸುವುದನ್ನು ಸೂಚಿಸುತ್ತೇವೆ. ಅಂಥ ಪ್ರಕ್ರಿಯೆಯು ಅನುಸರಿಸುವ

ವಿಶಿಷ್ಟ ವಿಧಾನುಸಾರ ವಿವಿಧ ಸಾಧಕರಿಂದ ವಿವಿಧವಾಗಿ ಕರೆಯಲ್ಪಟ್ಟಿದೆ. ಸಂಪರ್ಕಿಸುವ ಪ್ರಕ್ರಿಯೆಯು ಪ್ರಧಾನವಾಗಿ ಕಾಮ್ಯಕರ್ಮಗಳಲ್ಲಿರುವಾಗ ಅದನ್ನು **ಕರ್ಮ-ಯೋಗ**ವೆಂದೂ, ಮತ್ತು ಅದು ಪ್ರಧಾನವಾಗಿ ಅನುಭವ ಜ್ಞಾನ ವಿಧಾನದಲ್ಲಿರುವಾಗ ಅದನ್ನು **ಜ್ಞಾನ-ಯೋಗ**ವೆಂದೂ, ಮತ್ತು ಪ್ರಧಾನವಾಗಿ ಪರಮ ಪ್ರಭುವಿನೊಂದಿಗೆ ಭಕ್ತಿಯುತ ಸೇವಾ ಸಂಬಂಧದಲ್ಲಿರುವಾಗ ಅದನ್ನು **ಭಕ್ತಿ-ಯೋಗ**ವೆಂದೂ ಕರೆದಿದೆ. ಭಕ್ತಿಯೋಗ **ಅಥವಾ** ಕೃಷ್ಣಪ್ರಜ್ಞೆಯು, ಮುಂದಿನ ಶ್ಲೋಕದಲ್ಲಿ ವಿವರಿಸುವಂತೆ ಎಲ್ಲ ಯೋಗಗಳ ಅಂತಿಮ ಪರಿಪೂರ್ಣತೆಯಾಗಿದೆ. ಭಗವಂತನು ಇಲ್ಲಿ ಯೋಗದ ಶ್ರೇಷ್ಠತೆಯನ್ನು ದೃಢ ಪಡಿಸಿದ್ದಾನೆ. ಆದರೆ ಅದು **ಭಕ್ತಿಯೋಗ**ಕ್ಕಿಂತಲೂ ಉತ್ತಮವೆಂದು ಹೇಳಿಲ್ಲ. **ಭಕ್ತಿ ಯೋಗ**ವು ಪೂರ್ಣ ಅಧ್ಯಾತ್ಮ ಜ್ಞಾನ, ಆದ್ದರಿಂದ ಯಾವುದೂ ಅದಕ್ಕೆ ಮಿಗಿಲಾಗಿರದು. ಆತ್ಮಜ್ಞಾನವಿಲ್ಲದ ತಪಶ್ಚರ್ಯೆಯು ಅಪರಿಪೂರ್ಣ. ಭಗವಂತನಿಗೆ ಶರಣಾಗತಿ ಇಲ್ಲದ ಪ್ರಾಯೋಗಿಕ ಜ್ಞಾನವು ಕೂಡ ಅಪರಿಪೂರ್ಣ. ಮತ್ತು ಕೃಷ್ಣಪ್ರಜ್ಞೆ ಇಲ್ಲದ ಕಾಮ್ಯ ಕರ್ಮವು ಸುಮ್ಮನೆ ಕಾಲಹರಣ. ಆದ್ದರಿಂದ, ಇಲ್ಲಿ ಉಲ್ಲೇಖಿತವಾಗಿರುವ ಅತ್ಯಂತ ಪ್ರಶಂಸನೀಯವಾದ ಯೋಗಾಚರಣೆಯೆಂದರೆ ಭಕ್ತಿಯೋಗ, ಮತ್ತು ಇದನ್ನು ಮುಂದಿನ ಶ್ಲೋಕದಲ್ಲಿ ಇನ್ನೂ ಹೆಚ್ಚು ಸ್ಪಷ್ಟವಾಗಿ ವಿವರಿಸಲಾಗಿದೆ.

**ಯೋಗಿನಾಮಪಿ ಸರ್ವೇಷಾಂ ಮದ್ಗತೇನಾನ್ತರಾತ್ಮನಾ ।**
**ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ॥೪೭॥**

ಯೋಗಿನಾಮ್—ಯೋಗಿಗಳ, ಅಪಿ—ಕೂಡ, ಸರ್ವೇಷಾಮ್—ಎಲ್ಲ ಬಗೆಯ, ಮತ್‌ಗತೇನ—ನನ್ನಲ್ಲಿ ನೆಲೆಸಿ, ಸದಾ ನನ್ನನ್ನು ಚಿಂತಿಸುತ್ತಾ, ಅಂತಃ ಆತ್ಮನಾ—ತನ್ನೊಳಗೆಯೇ, ಶ್ರದ್ಧಾವಾನ್—ಪೂರ್ಣ ಶ್ರದ್ಧೆಯಲ್ಲಿ, ಭಜತೇ—ದಿವ್ಯ ಪ್ರೇಮ ಸೇವೆ ಸಲ್ಲಿಸುವ, ಯಃ—ಯಾರೊಬ್ಬನು, ಮಾಮ್—ನನಗೆ (ಪರಮ ಪ್ರಭು), ಸಃ—ಅವನು, ಮೇ—ನನ್ನಿಂದ, ಯುಕ್ತತಮಃ—ಮಹತ್ತಮ ಯೋಗಿ, ಮತಃ—ಪರಿಗಣಿಸಲ್ಪಡುತ್ತಾನೆ.

**ಎಲ್ಲ ಯೋಗಿಗಳಲ್ಲಿ, ಮಹಾ ಶ್ರದ್ಧೆಯಿಂದ ನನ್ನಲ್ಲಿ ಸದಾ ನೆಲೆಸಿ, ತನ್ನೊಳಗೆ ನನ್ನ ಚಿಂತನೆ ಮಾಡುತ್ತಾ, ಮತ್ತು ನನಗೆ ದಿವ್ಯ ಪ್ರೇಮಯುತ ಸೇವೆ ಸಲ್ಲಿಸುತ್ತಾನೋ— ಅವನು ಯೋಗದಲ್ಲಿ ನನ್ನೊಡನೆ ಅತ್ಯಂತ ಆತ್ಮೀಯವಾಗಿ ಕೂಡಿರುತ್ತಾನೆ, ಮತ್ತು ಅವನೇ ಎಲ್ಲರಿಗಿಂತ ಅತ್ಯಂತ ಶ್ರೇಷ್ಠನು. ಅದೇ ನನ್ನ ಅಭಿಪ್ರಾಯ.**

**ಭಾವಾರ್ಥ :** **ಭಜತೇ** ಪದವು ಇಲ್ಲಿ ಮಹತ್ವದ್ದು. ಭಜತೇ ಎಂಬುದು ಸೇವೆಯ ಅವಶ್ಯಕತೆಯು ಇರುವಾಗ ಉಪಯೋಗಿಸಲ್ಪಡುವ **ಭಜ್** ಎಂಬ ಕ್ರಿಯಾ ಪದದಲ್ಲಿ ಮೂಲ ಹೊಂದಿದೆ. ಇಂಗ್ಲೀಷ್ ಪದವಾದ "ವರ್ಷಿಪ್" ಎಂಬುದನ್ನು **ಭಜ್** ಎಂಬ ಅರ್ಥದಲ್ಲಿ ಉಪಯೋಗಿಸಲಾಗುವುದಿಲ್ಲ. ವರ್ಷಿಪ್ ಎಂದರೆ ಪೂಜಿಸುವುದು, ಮತ್ತು ಅರ್ಹರಿಗೆ ಆದರ ಮತ್ತು ಗೌರವವನ್ನು ತೋರುವುದು. ಆದರೆ ಪ್ರೇಮ ಮತ್ತು ಶ್ರದ್ಧೆಯಿಂದ ಕೂಡಿದ ಸೇವೆಯು ಪರಮ ದೇವೋತ್ತಮ ಪುರುಷನಿಗೆ ವಿಶೇಷವಾಗಿ ಉದ್ದೇಶಿತವಾಗಿರುತ್ತದೆ. ಒಬ್ಬನು ಒಬ್ಬ ಗೌರವಾನ್ವಿತ ವ್ಯಕ್ತಿಯನ್ನು ಅಥವಾ ದೇವತೆಯನ್ನು

ಪೂಜಿಸುವುದನ್ನು ಬಿಡಬಹುದು ಮತ್ತು ಅವಿನಯಿ ಎಂದು ಕರೆಯಲ್ಪಡಬಹುದು, ಆದರೆ ಸಂಪೂರ್ಣವಾಗಿ ನಿಂದಿತನಾಗದೆ ಪರಮ ಪ್ರಭುವಿಗೆ ಸೇವೆಯನ್ನು ಒಬ್ಬನು ಬಿಡಲಾರನು. ಪ್ರತಿಯೊಬ್ಬ ಜೀವಿಯು ಪರಮದೇವೋತ್ತಮ ಪುರುಷನ ವಿಭಿನ್ನಾಂಶನು, ಮತ್ತು ಹೀಗೆ ತನ್ನ ಸ್ವರೂಪಸ್ಥಿತಿಗನುಸಾರ ಜೀವಿಯೂ ಪರಮ ಪ್ರಭುವಿನ ಸೇವೆಯನ್ನು ಮಾಡಲು ಉದ್ದೇಶಿತನು. ಇದನ್ನು ಮಾಡಲು ತಪ್ಪಿದ್ದಲ್ಲಿ ಅವನು ಪತನ ಹೊಂದುತ್ತಾನೆ. ಭಾಗವತವು (11. 5. 3) ಇದನ್ನು ಹೀಗೆ ದೃಢಪಡಿಸುತ್ತದೆ :

ಯ ಏಷಾಂ ಪುರುಷಂ ಸಾಕ್ಷಾದ್ ಆತ್ಮಪ್ರಭವಮ್ ಈಶ್ವರಮ್।
ನ ಭಜನ್ತ್ಯವಜಾನನ್ತಿ ಸ್ಥಾನಾದ್ ಭ್ರಷ್ಟಾಃಪತನ್ತ್ಯಧಃ॥

"ಸರ್ವ ಜೀವಿಗಳ ಮೂಲನಾದ ಆದಿ ಪ್ರಭುವಿಗೆ ಸೇವೆಯನ್ನು ಸಲ್ಲಿಸದವನು ಮತ್ತು ತನ್ನ ಕರ್ತವ್ಯವನ್ನು ನಿರ್ಲಕ್ಷಿಸುವವನು, ಖಂಡಿತವಾಗಿಯೂ ತನ್ನ ಸ್ವರೂಪ ಸ್ಥಿತಿಯಿಂದ ಪತನ ಹೊಂದುತ್ತಾನೆ."

ಈ ಶ್ಲೋಕದಲ್ಲಿಯೂ ಕೂಡ **ಭಜನ್ತಿ** ಎಂಬ ಪದವನ್ನು ಉಪಯೋಗಿಸಿದೆ. ಆದ್ದರಿಂದ, **ಭಜನ್ತಿ** ಎಂಬುದು ಪರಮ ಪ್ರಭುವಿಗೆ ಮಾತ್ರ ಅನ್ವಯಿಸುತ್ತದೆ, ಆದರೆ "ವರ್ಷಿಪ್" ಪದವು ದೇವತೆಗಳಿಗೆ ಅಥವಾ ಯಾವುದೇ ಇತರ ಸಾಮಾನ್ಯ ಜೀವಿಗೆ ಪ್ರಯೋಗಿಸಬಹುದು. ಶ್ರೀಮದ್ ಭಾಗವತದ ಈ ಶ್ಲೋಕದಲ್ಲಿ ಉಪಯೋಗಿಸಿದ **ಅವಜಾನನ್ತಿ** ಎಂಬ ಪದವು ಭಗವದ್ಗೀತೆಯಲ್ಲಿಯೂ ಕಂಡುಬರುತ್ತದೆ. **ಅವಜಾನನ್ತಿ ಮಾಂ ಮೂಢಾಃ**—"ಕೇವಲ ಮೂರ್ಖರು ಮತ್ತು ನೀಚರು ಮಾತ್ರ ಪರಮ ದೇವೋತ್ತಮ ಪುರುಷನಾದ ಭಗವಾನ್ ಕೃಷ್ಣನನ್ನು ತುಚ್ಛವಾಗಿ ಕಾಣುತ್ತಾರೆ." ಅಂಥ ಮೂರ್ಖರು ಭಗವಂತನಿಗೆ ಸೇವೆ ಮಾಡುವ ಮನೋಭಾವವಿಲ್ಲದೆ ಭಗವದ್ಗೀತೆಗೆ ವ್ಯಾಖ್ಯಾನಗಳನ್ನು ಬರೆಯುವ ಜವಾಬ್ದಾರಿಯನ್ನು ತೆಗೆದುಕೊಳ್ಳುತ್ತಾರೆ. ಅದರ ಪರಿಣಾಮವಾಗಿ ಅವರು **ಭಜನ್ತಿ** ಮತ್ತು "ವರ್ಷಿಪ್" ಎಂಬ ಪದಗಳ ನಡುವೆ ಸರಿಯಾದ ವ್ಯತ್ಯಾಸ ಮಾಡಲಾರರು.

ಎಲ್ಲ ಬಗೆಯ ಯೋಗ ಆಚರಣೆಗಳ ಉಚ್ಛ್ರಾಯವು ಭಕ್ತಿಯೋಗದಲ್ಲಿರುತ್ತದೆ. ಎಲ್ಲ ಇತರ ಯೋಗಗಳು ಭಕ್ತಿಯೋಗದಲ್ಲಿ ಭಕ್ತಿಯ ಮಟ್ಟಕ್ಕೆ ಬರಲು ಸಾಧನವಾಗಿರುತ್ತವೆ. ಯೋಗ ಎಂದರೆ ವಾಸ್ತವಿಕವಾಗಿ ಭಕ್ತಿಯೋಗ : ಎಲ್ಲ ಇತರ ಯೋಗಗಳು ಭಕ್ತಿಯೋಗದ ಗುರಿಯೆಡೆಗೆ ಪ್ರಗತಿಸುವ ಮಾರ್ಗಗಳು. ಕರ್ಮಯೋಗದ ಆರಂಭದಿಂದ ಭಕ್ತಿಯೋಗದ ಕೊನೆಯವರೆಗೆ ಆತ್ಮಸಾಕ್ಷಾತ್ಕಾರದ ದೀರ್ಘ ಮಾರ್ಗ. ಕಾಮ್ಯಫಲರಹಿತವಾದ ಕರ್ಮಯೋಗವು, ಈ ಮಾರ್ಗದ ಆರಂಭ. ಕರ್ಮಯೋಗವು ಜ್ಞಾನ ಮತ್ತು ವೈರಾಗ್ಯದಲ್ಲಿ ವೃದ್ಧಿಸಿದಾಗ, ಆ ಹಂತವು ಜ್ಞಾನಯೋಗವೆಂದು ಕರೆಯಲ್ಪಡುತ್ತದೆ. ವಿವಿಧ ಶಾರೀರಿಕ ಪ್ರಕ್ರಿಯೆಗಳಿಂದ ಪರಮಾತ್ಮನ ಮೇಲಿನ ಧ್ಯಾನದಲ್ಲಿ ಜ್ಞಾನಯೋಗವು ವೃದ್ಧಿಸಿದಾಗ, ಮತ್ತು ಮನಸ್ಸು ಪರಮಾತ್ಮನ ಮೇಲಿದ್ದಾಗ ಅದು **ಅಷ್ಟಾಂಗ ಯೋಗ**ವೆಂದು ಕರೆಯಲ್ಪಡುತ್ತದೆ. ಮತ್ತು ಒಬ್ಬನು ಅಷ್ಟಾಂಗ ಯೋಗವನ್ನು ದಾಟಿಹೋಗಿ **ಪರಮದೇವೋತ್ತಮ ಪುರುಷ ಕೃಷ್ಣ**ನಲ್ಲಿಗೆ ಬಂದಾಗ ಅದು ಭಕ್ತಿ

ಯೋಗ ಎಂದು ಕರೆಯಲ್ಪಡುತ್ತದೆ. ಇದೇ ಅತ್ಯುನ್ನತ ಸ್ಥಿತಿ. ವಾಸ್ತವಿಕವಾಗಿ ಭಕ್ತಿ ಯೋಗವು ಅಂತಿಮ ಗುರಿ, ಆದರೆ ಭಕ್ತಿಯೋಗವನ್ನು ಸೂಕ್ಷ್ಮವಾಗಿ ವಿಶ್ಲೇಷಿಸಲು ಒಬ್ಬನು ಈ ಇತರ ಯೋಗಗಳನ್ನು ಅರಿತುಕೊಳ್ಳಬೇಕಾಗುವುದು. ಆದ್ದರಿಂದ ಪ್ರಗತಿ ಪರ ಯೋಗಿಯು ನಿತ್ಯ ಸೌಭಾಗ್ಯದ ನಿಜಪಥದಲ್ಲಿರುತ್ತಾನೆ. ಒಂದು ವಿಶಿಷ್ಟ ಅಂಶಕ್ಕೆ ಅಂಟಿಕೊಂಡು ಮತ್ತಷ್ಟು ಪ್ರಗತಿಯನ್ನು ಸಾಧಿಸದಿದ್ದರೆ, ಅವನು ಆ ವಿಶಿಷ್ಟ ಹೆಸರಿನಿಂದ ಕರೆಯಲ್ಪಡುತ್ತಾನೆ : ಕರ್ಮಯೋಗಿ, ಜ್ಞಾನಯೋಗಿ, ಅಥವಾ ಧ್ಯಾನಯೋಗಿ, ರಾಜ ಯೋಗಿ, ಹಠಯೋಗಿ ಇತ್ಯಾದಿ. ಒಬ್ಬನು ಭಕ್ತಿಯೋಗದ ಮಟ್ಟಕ್ಕೆ ಬರುವಷ್ಟು ಭಾಗ್ಯಶಾಲಿಯಾಗಿದ್ದರೆ, ಅವನು ಎಲ್ಲ ಇತರ ಯೋಗಗಳನ್ನು ಅತಿಕ್ರಮಿಸಿದ್ದಾನೆ ಎಂದು ಅರಿತುಕೊಳ್ಳಬೇಕು. ನಾವು ಹಿಮಾಲಯವನ್ನು ಕುರಿತು ಮಾತನಾಡುವಾಗ, ಪ್ರಪಂಚದ ಅತ್ಯುನ್ನತ ಪರ್ವತವನ್ನು ಉಲ್ಲೇಖಿಸುತ್ತಾ, ಅದರ ಅತ್ಯುನ್ನತ ಶಿಖರ ಮೌಂಟ್ ಎವರೆಸ್ಟನ್ನು ತುತ್ತತುದಿಯೆಂದು ಪರಿಗಣಿಸಿದಂತೆ ಕೃಷ್ಣಪ್ರಜ್ಞೆಯಾಗುವುದು ಯೋಗದ ಅತ್ಯುನ್ನತ ಹಂತ.

ವೇದ ನಿರ್ದೇಶಾನುಸಾರ ಸುಸನ್ನಿವೇಶಿತನಾಗಲು ಒಬ್ಬನು ಮಹಾಭಾಗ್ಯದಿಂದ ಭಕ್ತಿಯೋಗ ಮಾರ್ಗದಲ್ಲಿ ಕೃಷ್ಣಪ್ರಜ್ಞೆಗೆ ಬರುತ್ತಾನೆ. ಆದರ್ಶ ಯೋಗಿಯು ಶ್ಯಾಮ ಸುಂದರನೆಂದು ಕರೆದಿರುವ, ಮೇಘದಂತೆ ಸುಂದರ ವರ್ಣನಾಗಿರುವ, ಅವನ ಕಮಲ ಮುಖವು ಸೂರ್ಯ ಸದೃಶ ಪ್ರಕಾಶಮಾನವಾಗಿರುವ, ರತ್ನಾಭರಣಗಳಿಂದ ಕೂಡಿರುವ ಪ್ರಜ್ವಲಿಸುವ ವಸ್ತ್ರವುಳ್ಳ ಮತ್ತು ಪುಷ್ಪಹಾರ ಭೂಷಿತ ದೇಹವುಳ್ಳ ಕೃಷ್ಣನ ಮೇಲೆ ತನ್ನ ಮನಸ್ಸನ್ನುಕೇಂದ್ರೀಕರಿಸುತ್ತಾನೆ. ಬ್ರಹ್ಮಜ್ಯೋತಿ ಎಂದು ಕರೆಯಲ್ಪಡುವ ಅವನ ಶೋಭಾ ಯಮಾನ ಉಜ್ವಲ ಕಾಂತಿಯು ದಿಕ್ಕುಗಳೆಲ್ಲವನ್ನು ಬೆಳಗುತ್ತಿದೆ.ಅವನು ರಾಮ,ನರಸಿಂಹ, ವರಾಹ ಮತ್ತು ಪರಮದೇವೋತ್ತಮಪುರುಷನಾದ ಕೃಷ್ಣ, ಹೀಗೆ ನಾನಾ ರೂಪಗಳಲ್ಲಿ ಅವತರಿಸುತ್ತಾನೆ ಮತ್ತು ಅವನು ಯಶೋದಾ ಪುತ್ರನಾಗಿ ಮಾನವನಂತೆ ಇಳಿದು ಬರುತ್ತಾನೆ, ಮತ್ತು ಅವನು ಕೃಷ್ಣ, ಗೋವಿಂದ ಮತ್ತು ವಾಸುದೇವನೆಂದು ಕರೆಯಲ್ಪಡುತ್ತಾನೆ. ಅವನು ಪರಿಪೂರ್ಣನಾದ ಮಗು, ಪತಿ, ಮಿತ್ರ ಮತ್ತು ಒಡೆಯನು ಮತ್ತು ಅವನು ಸಕಲ ಐಶ್ವರ್ಯಗಳು ಮತ್ತು ದಿವ್ಯ ಗುಣಗಳಿಂದ ಪೂರ್ಣನಾಗಿರುವನು. ಒಬ್ಬನು ಭಗವಂತನ ಈ ಲಕ್ಷಣಗಳ ಪೂರ್ಣಪ್ರಜ್ಞೆಯಲ್ಲಿದ್ದರೆ, ಅವನು ಶ್ರೇಷ್ಠತಮಯೋಗಿ ಎಂದು ಕರೆಯಲ್ಪಡುತ್ತಾನೆ.

ಸಕಲ ವೇದ ಸಾಹಿತ್ಯದಲ್ಲಿಯೂ ದೃಢಪಟ್ಟಿರುವಂತೆ, ಯೋಗದ ಈ ಅತ್ಯುನ್ನತ ಪರಿಪೂರ್ಣತೆಯ ಹಂತವನ್ನು ಭಕ್ತಿಯೋಗದಿಂದ ಮಾತ್ರವೇ ಹೊಂದಬಹುದು :

ಯಸ್ಯ ದೇವೇ ಪರಾಭಕ್ತಿರ್ ಯಥಾ ದೇವೇ ತಥಾ ಗುರೌ।
ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶನ್ತೇ ಮಹಾತ್ಮನಃ॥

"ಭಗವಂತನಲ್ಲಿಯೂ ಮತ್ತು ಗುರುವಿನಲ್ಲಿಯೂ ಸಂಪೂರ್ಣ ಶ್ರದ್ಧೆಯುಳ್ಳ ಮಹಾತ್ಮರಿಗೆ ಮಾತ್ರವೇ ವೇದಜ್ಞಾನದ ಸಕಲಾರ್ಥಗಳು ತಾವಾಗಿಯೇ ಪ್ರಕಟವಾಗುತ್ತವೆ." **(ಶ್ವೇತಾಶ್ವತರ ಉಪನಿಷದ್ 6.23).**

**ಭಕ್ತಿರ್ ಅಸ್ಯ ಭಜನಂ ತದ್ ಇಹಾಮುತ್ರೋಪಾಧಿ ನೈರಾಸ್ಯೇನಾಮುಷ್ಮಿನ್ ಮನಃ—ಕಲ್ಪನಮ್, ಏತದ್ ಏವ ನೈಷ್ಕರ್ಮ್ಯಮ್.** "ಭಕ್ತಿಯೆಂದರೆ ಈ ಜನ್ಮದಲ್ಲಿ ಅಥವಾ ಮುಂದಿನ ಜನ್ಮದಲ್ಲಿ ಭೌತಿಕ ಲಾಭಕ್ಕಾಗಿ ಇಚ್ಛಾರಹಿತವಾಗಿರುವ ಭಗವಂತನ ಭಕ್ತಿಯುತ ಸೇವೆ. ಅಂಥ ಇಚ್ಛೆಗಳಿಲ್ಲದೆ, ಒಬ್ಬನು ಮನಸ್ಸನ್ನು ಪೂರ್ಣವಾಗಿ ಪರಮನಲ್ಲಿ ಮಗ್ನಗೊಳಿಸಬೇಕು. ಅದೇ ನೈಷ್ಕರ್ಮ್ಯದ ಉದ್ದೇಶ." (**ಗೋಪಾಲ—ತಾಪನೀ ಉಪನಿಷದ್** 1. 15).

ಇವು ಯೋಗಪದ್ಧತಿಯ ಅತ್ಯುನ್ನತ ಪರಿಪೂರ್ಣತೆಯ ಹಂತವಾದ ಭಕ್ತಿ ಅಥವಾ ಕೃಷ್ಣಪ್ರಜ್ಞೆಯ ಆಚರಣೆಯ ಕೆಲವು ಮಾರ್ಗಗಳು.

**ಇಲ್ಲಿಗೆ "ಶ್ರೀಮದ್ ಭಗವದ್ಗೀತಾ"ದಲ್ಲಿನ ಆರನೆಯ ಅಧ್ಯಾಯವಾದ 'ಧ್ಯಾನಯೋಗ' ಎಂಬುದರ ಭಕ್ತಿವೇದಾಂತ ತಾತ್ಪರ್ಯವು ಮುಗಿಯಿತು.**

## ಅಧ್ಯಾಯ ಏಳು



# ಪರತತ್ತ್ವ ಜ್ಞಾನ

**ಶ್ರೀಭಗವಾನುವಾಚ**

**ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಞ್ಜನ್ಮದಾಶ್ರಯಃ ।**
**ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥ ೧ ॥**

ಶ್ರೀಭಗವಾನ್ ಉವಾಚ—ಪರಮ ಪ್ರಭು ನುಡಿದನು, ಮಯಿ—ನನಗೆ, ಆಸಕ್ತ-ಮನಾಃ—ಮನಸ್ಸನ್ನು ಆಸಕ್ತವಾಗಿಸಿ, ಪಾರ್ಥ—ಹೇ ಪೃಥಾಪುತ್ರನೇ, ಯೋಗಮ್—ಆತ್ಮಸಾಕ್ಷಾತ್ಕಾರವನ್ನು, ಯುಞ್ಜನ್—ಆಚರಿಸುತ್ತಾ, ಮತ್ಆಶ್ರಯಃ—ನನ್ನ ಪ್ರಜ್ಞೆಯಲ್ಲಿ (ಕೃಷ್ಣಪ್ರಜ್ಞೆ), ಅಸಂಶಯಮ್—ಸಂಶಯವಿಲ್ಲದೆ, ಸಮಗ್ರಮ್—ಸಂಪೂರ್ಣವಾಗಿ, ಮಾಮ್—ನನ್ನನ್ನು, ಯಥಾ—ಹೇಗೆ, ಜ್ಞಾಸ್ಯಸಿ—ನೀನು ತಿಳಿಯಬಲ್ಲೆ, ತತ್—ಅದನ್ನು, ಶೃಣು—ಶ್ರವಣಮಾಡಲು ಯತ್ನಿಸು.

**ಪರಮ ದೇವೋತ್ತಮ ಪುರುಷನು ನುಡಿದನು : ಹೇ ಪೃಥಾಪುತ್ರನೇ, ಮನಸ್ಸು ನನ್ನಲ್ಲಿ ಆಸಕ್ತವಾಗಿದ್ದು, ನನ್ನ ಪೂರ್ಣಪ್ರಜ್ಞೆಯಲ್ಲಿ ಯೋಗವನ್ನಾಚರಿಸಿ, ಸಂಶಯವಿಲ್ಲದೆ ನೀನು ಹೇಗೆ ನನ್ನನ್ನು ಪೂರ್ಣವಾಗಿ ತಿಳಿಯಬಲ್ಲೆ ಎಂಬುದನ್ನು ಈಗ ಕೇಳು.**

**ಭಾವಾರ್ಥ :** ಭಗವದ್ಗೀತೆಯ ಏಳನೆಯ ಅಧ್ಯಾಯದಲ್ಲಿ, ಕೃಷ್ಣಪ್ರಜ್ಞಾ ಸ್ವಭಾವವನ್ನು ಪೂರ್ಣವಾಗಿ ವಿವರಿಸಿದೆ. ಕೃಷ್ಣನು ಸಕಲೈಶ್ವರ್ಯಪೂರ್ಣನು, ಮತ್ತು ಅವನು ಅಂಥ ಐಶ್ವರ್ಯಗಳನ್ನು ಹೇಗೆ ಪ್ರಕಟಿಸುತ್ತಾನೆ ಎಂಬುದನ್ನು ಇಲ್ಲಿ ವರ್ಣಿಸಿದೆ. ಹಾಗೂ ಕೃಷ್ಣಾಸಕ್ತರಾಗುವ ನಾಲ್ಕು ಬಗೆಯ ಭಾಗ್ಯವಂತರನ್ನು ಮತ್ತು ಕೃಷ್ಣನನ್ನು ಎಂದೂ ಸ್ವೀಕರಿಸದ ನಾಲ್ಕು ಬಗೆಯ ಭಾಗ್ಯಹೀನರನ್ನು ಈ ಅಧ್ಯಾಯದಲ್ಲಿ ವರ್ಣಿಸಲಾಗಿದೆ.

ಭಗವದ್ಗೀತೆಯ ಮೊದಲನೆಯ ಆರು ಅಧ್ಯಾಯಗಳಲ್ಲಿ, ಜೀವಿಯು ಭಿನ್ನ ಬಗೆಯ ಯೋಗಗಳಿಂದ ತನ್ನನ್ನು ಆತ್ಮಸಾಕ್ಷಾತ್ಕಾರಕ್ಕೆ ಉನ್ನತಿಸಿಕೊಳ್ಳಲು ಸಮರ್ಥನಾದ ಅಭೌತಿಕ ಚೇತನಾತ್ಮ ಎಂದು ವರ್ಣಿಸಲಾಗಿದೆ. ಆರನೆಯ ಅಧ್ಯಾಯದ ಕೊನೆಯಲ್ಲಿ, ಕೃಷ್ಣನ ಮೇಲೆ ಮನಸ್ಸಿನ ಸ್ಥಿರ ಕೇಂದ್ರೀಕರಣವು, ಅಥವಾ ಅನ್ಯಪದಗಳಲ್ಲಿ ಕೃಷ್ಣಪ್ರಜ್ಞೆಯು ಸರ್ವ ಯೋಗಗಳಲ್ಲಿ ಶ್ರೇಷ್ಠತಮವೆಂದು ಸ್ಪಷ್ಟವಾಗಿ ಹೇಳಲಾಗಿದೆ. ಒಬ್ಬನು ಮನಸ್ಸನ್ನು ಕೃಷ್ಣನ ಮೇಲೆ ಕೇಂದ್ರೀಕರಿಸುವುದರಿಂದ, ಪರತತ್ತ್ವವನ್ನು ಸಂಪೂರ್ಣವಾಗಿ ತಿಳಿಯಲು ಶಕ್ತನು, ಅನ್ಯಥಾ ಇಲ್ಲ. ವ್ಯಕ್ತಿಶೂನ್ಯ ಬ್ರಹ್ಮಜ್ಯೋತಿ ಅಥವಾ ಸ್ಥಳೀಯ ಪರಮಾತ್ಮನ ಸಾಕ್ಷಾತ್ಕಾರವು ಆಂಶಿಕವಾಗಿರುವುದರಿಂದ, ಅದು ಪರತತ್ತ್ವದ ಪರಿಪೂರ್ಣ ಜ್ಞಾನವಲ್ಲ. ಕೃಷ್ಣನು ಪೂರ್ಣ ಮತ್ತು ವೈಜ್ಞಾನಿಕ ಜ್ಞಾನ, ಮತ್ತು ಕೃಷ್ಣಪ್ರಾಜ್ಞಿಗೆ ಪ್ರತಿಯೊಂದು ಪ್ರಕಾಶಿತವಾಗುತ್ತದೆ. ಸಂಪೂರ್ಣ ಕೃಷ್ಣಪ್ರಜ್ಞೆಯಲ್ಲಿ, ಕೃಷ್ಣನು ಯಾವುದೇ ಸಂದೇಹ ವಿಲ್ಲದೆ ಅಂತಿಮ ಜ್ಞಾನ ಎಂಬುದನ್ನು ಒಬ್ಬನು ತಿಳಿಯುತ್ತಾನೆ, ಭಿನ್ನ ಭಿನ್ನ ಯೋಗ ಪ್ರಕಾರಗಳು ಕೃಷ್ಣಪ್ರಜ್ಞಾ ಮಾರ್ಗದಲ್ಲಿ ಮೆಟ್ಟುಗಲ್ಲುಗಳು ಮಾತ್ರ. ನೇರವಾಗಿ ಕೃಷ್ಣ ಪ್ರಜ್ಞೆಯಲ್ಲಿ ನಿರತನಾಗುವವನು ತನ್ನಷ್ಟಕ್ಕೆ ತಾನೇ ಬ್ರಹ್ಮಜ್ಯೋತಿ ಮತ್ತು ಪರಮಾತ್ಮ ನನ್ನು ಕುರಿತು ಪೂರ್ಣವಾಗಿ ತಿಳಿಯುತ್ತಾನೆ. ಕೃಷ್ಣಪ್ರಜ್ಞಾಯೋಗಾಭ್ಯಾಸದಿಂದ, ಒಬ್ಬನು ಪ್ರತಿಯೊಂದನ್ನು— ಎಂದರೆ ಪರತತ್ತ್ವ, ಜೀವಿಗಳು, ಭೌತಿಕ ಪ್ರಕೃತಿ, ಮತ್ತು ಪರಿವಾರಸಹಿತ ಅವುಗಳ ಅಭಿವ್ಯಕ್ತತೆಯನ್ನು—ಪೂರ್ಣವಾಗಿ ತಿಳಿಯಬಹುದು.

ಆದ್ದರಿಂದ ಒಬ್ಬನು ಆರನೆಯ ಅಧ್ಯಾಯದ ಕೊನೆಯ ಶ್ಲೋಕದಲ್ಲಿ ನಿರ್ದೇಶಿಸಿ ದಂತೆ ಯೋಗಾಭ್ಯಾಸವನ್ನು ಆರಂಭಿಸಬೇಕು. ಪರಮನಾದ ಕೃಷ್ಣನ ಮೇಲೆ ಮನಸ್ಸಿನ ಕೇಂದ್ರೀಕರಣವನ್ನು ವಿಧಿತವಾದ ನವವಿಧ ಭಕ್ತಿಯುತ ಸೇವೆಯ ಮೂಲಕ ಸಾಧ್ಯ ಗೊಳಿಸಲಾಗಿದೆ ; ಈ ನವವಿಧ ಭಕ್ತಿಯುತ ಸೇವೆಯಲ್ಲಿ **ಶ್ರವಣಮ್** ಪ್ರಥಮ ಮತ್ತು ಅತಿಮುಖ್ಯವಾದುದು. ಆದ್ದರಿಂದ ಭಗವಂತನು ಅರ್ಜುನನಿಗೆ, **ತಚ್ಛೃಣು**, ಅಥವಾ "ನನ್ನಿಂದ ಕೇಳು" ಎಂದು ಹೇಳುತ್ತಾನೆ. ಯಾರೂ ಕೃಷ್ಣನಿಗಿಂತ ಹೆಚ್ಚಿನ ಅಧಿಕಾರಿಯಾಗ ಲಾರರು ; ಆದ್ದರಿಂದ, ಅವನಿಂದ ಶ್ರವಣ ಮಾಡುವುದರಿಂದ ಒಬ್ಬನು ಪರಿಪೂರ್ಣ ಕೃಷ್ಣಪ್ರಾಜ್ಞಿಯಾಗುವ ಮಹತ್ತಾದ ಅವಕಾಶವನ್ನು ಪಡೆಯುತ್ತಾನೆ.ಆದ್ದರಿಂದ ಒಬ್ಬನು ನೇರವಾಗಿ ಕೃಷ್ಣನಿಂದ ಅಥವಾ ಶುದ್ಧ ಕೃಷ್ಣಭಕ್ತನಿಂದ ಕಲಿಯಬೇಕು— ಅಲ್ಲದೆ ಲೌಕಿಕ ಶಿಕ್ಷಣದಿಂದ ಉಬ್ಬಿದ ಅಭಕ್ತ ದುರಹಂಕಾರಿಯಿಂದಲ್ಲ.

ಶ್ರೀಮದ್ಭಾಗವತದ ಪ್ರಥಮ ಸ್ಕಂಧದ ಎರಡನೆಯ ಅಧ್ಯಾಯದಲ್ಲಿ ಪರತತ್ತ್ವ ವಾಗಿರುವ ಪರಮದೇವೋತ್ತಮ ಪುರುಷ ಶ್ರೀಕೃಷ್ಣನನ್ನು ಅರಿತುಕೊಳ್ಳುವ ಈ ವಿಧಾನ ವನ್ನು ಹೀಗೆ ವರ್ಣಿಸಿದೆ :

ಶೃಣ್ವತಾಂ ಸ್ವಕಥಾಃ ಕೃಷ್ಣಃ ಪುಣ್ಯಶ್ರವಣಕೀರ್ತನಃ।
ಹೃದ್ಯನ್ತಃಸ್ಥೋ ಹ್ಯ ಭದ್ರಾಣಿ ವಿಧುನೋತಿ ಸುಹೃತ್ ಸತಾಮ್॥
ನಷ್ಟಪ್ರಾಯೇಷ್ವಭದ್ರೇಷು ನಿತ್ಯಂ ಭಾಗವತಸೇವಯಾ।
ಭಗವತ್ಯುತ್ತಮಶ್ಲೋಕೇ ಭಕ್ತಿರ್ಭವತಿ ನೈಷ್ಠಿಕೀ॥

ತದಾ ರಜಸ್ತಮೋ ಭಾವಾಃ ಕಾಮಲೋಭಾದಯಶ್ಚ ಯೇ।
ಚೇತ ಏತೈರ್ ಅನಾವಿದ್ಧಂ ಸ್ಥಿತಂ ಸತ್ತ್ವೇ ಪ್ರಸೀದತಿ॥
ಏವಂ ಪ್ರಸನ್ನಮನಸೋ ಭಗವದ್ಭಕ್ತಿ–ಯೋಗತಃ।
ಭಗವತ್ತತ್ತ್ವವಿಜ್ಞಾನಂ ಮುಕ್ತಸಙ್ಗಸ್ಯ ಜಾಯತೇ॥
ಭಿದ್ಯತೇ ಹೃದಯಗ್ರಂಥಿಶ್ಛಿದ್ಯನ್ತೇ ಸರ್ವಸಂಶಯಾಃ।
ಕ್ಷೀಯನ್ತೇ ಚಾಸ್ಯ ಕರ್ಮಾಣಿ ದೃಷ್ಟ ಏವಾತ್ಮನೀಶ್ವರೇ॥

"ವೇದಸಾಹಿತ್ಯಗಳಿಂದ ಕೃಷ್ಣನ ಬಗ್ಗೆ ಶ್ರವಣ ಮಾಡುವುದು ಅಥವಾ ಭಗವದ್ಗೀತೆಯ ಮೂಲಕ ನೇರವಾಗಿ ಅವನಿಂದ ಶ್ರವಣಮಾಡುವುದು ಸ್ವಯಂ ಸತ್ಕಾರ್ಯ ಅಥವಾ ಪುಣ್ಯಕಾರ್ಯವಾಗಿದೆ. ಕೃಷ್ಣನನ್ನು ಕುರಿತು ಶ್ರವಣ ಮಾಡುವವನಿಗೆ, ಪ್ರತಿಯೊಬ್ಬರ ಹೃದಯ ಸ್ಥಿತ ಶ್ರೀಕೃಷ್ಣನು, ಶ್ರೇಷ್ಠ ಹಿತೈಷಿ ಸಖನಾಗಿ ವರ್ತಿಸುತ್ತಾನೆ ಮತ್ತು ಸತತವಾಗಿ ಅವನನ್ನು ಕುರಿತು ಶ್ರವಣನಿರತನಾದ ಭಕ್ತನನ್ನು ಶುದ್ಧಗೊಳಿಸುತ್ತಾನೆ. ಈ ರೀತಿಯಾಗಿ, ಒಬ್ಬ ಭಕ್ತನು ಸಹಜವಾಗಿಯೇ ತನ್ನ ಸುಪ್ತ ದಿವ್ಯಜ್ಞಾನವನ್ನು ವರ್ಧಿಸಿಕೊಳ್ಳುತ್ತಾನೆ. ಅವನು ಭಾಗವತದಿಂದ ಮತ್ತು ಭಕ್ತರಿಂದ ಕೃಷ್ಣನ ಬಗ್ಗೆ ಹೆಚ್ಚು ಶ್ರವಣಮಾಡಿದಷ್ಟೂ, ಭಗವಂತನ ಭಕ್ತಿಯುತ ಸೇವೆಯಲ್ಲಿ ಸ್ಥಿತನಾಗುತ್ತಾನೆ. ಭಕ್ತಿಯುತ ಸೇವಾಭಿವೃದ್ಧಿಯಿಂದ ಒಬ್ಬನು ರಜೋ ಮತ್ತು ತಮೋಗುಣಗಳಿಂದ ಮುಕ್ತನಾಗುತ್ತಾನೆ, ಮತ್ತು ಹೀಗೆ ಭೌತಿಕ ಕಾಮಾಸಕ್ತಿ ಮತ್ತು ಲೋಭಗಳು ಕ್ಷೀಣಿಸುತ್ತವೆ. ಈ ಮಾಲಿನ್ಯಗಳು ತೊಡೆದು ಹೋದಾಗ, ಸಾಧಕನು ತನ್ನ ಶುದ್ಧ ಸತ್ವಸ್ಥಿತಿಯಲ್ಲಿ ಸ್ಥಿರನಾಗಿರುತ್ತಾನೆ, ಭಕ್ತಿಯುತ ಸೇವೆಯಿಂದ ಪ್ರಸನ್ನನಾಗುತ್ತಾನೆ ಮತ್ತು ಭಗವದ್ ವಿಜ್ಞಾನವನ್ನು ಪರಿಪೂರ್ಣವಾಗಿ ಅರಿತುಕೊಳ್ಳುತ್ತಾನೆ. ಹೀಗೆ ಭಕ್ತಿಯೋಗವು ಭೌತಿಕ ವ್ಯಾಮೋಹದ ಕಠಿಣ ಗ್ರಂಥಿಯನ್ನು ಕಡಿದು ಹಾಕುತ್ತದೆ ಮತ್ತು ಪರತತ್ವ ದೇವೋತ್ತಮ ಪುರುಷನನ್ನು ಅರಿತುಕೊಳ್ಳುವ **ಅಸಂಶಯಂ ಸಮಗ್ರಮ್** ಮಟ್ಟಕ್ಕೆ ಒಬ್ಬನು ಕೂಡಲೇ ಬರುವಂತೆ ಮಾಡುತ್ತದೆ." (**ಭಾಗವತ 1.2.-17-21**)

ಆದ್ದರಿಂದ ಕೃಷ್ಣನಿಂದಲೇ ಅಥವಾ ಕೃಷ್ಣಪ್ರಾಜ್ಞಿಯಾದ ಅವನ ಭಕ್ತನಿಂದ ಮಾತ್ರವೇ ಶ್ರವಣಮಾಡಿ ಒಬ್ಬನು ಕೃಷ್ಣ ವಿಜ್ಞಾನವನ್ನು ಅರಿತುಕೊಳ್ಳಬಲ್ಲನು.

**ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।**
**ಯಜ್ ಜ್ಞಾತ್ವಾ ನೇಹ ಭೂಯೋಽನ್ಯಜ್ ಜ್ಞಾತವ್ಯಮವಶಿಷ್ಯತೇ ॥ ೨ ॥**

ಜ್ಞಾನಮ್—ಇಂದ್ರಿಯಗೋಚರಜ್ಞಾನ, ತೇ—ನಿನಗೆ, ಅಹಮ್—ನಾನು, ಸ—ಜೊತೆಗೆ, ವಿಜ್ಞಾನಮ್—ಆಧ್ಯಾತ್ಮಿಕ ಜ್ಞಾನವನ್ನು, ಇದಮ್—ಇದನ್ನು, ವಕ್ಷ್ಯಾಮಿ—ವಿವರಿಸುತ್ತೇನೆ, ಅಶೇಷತಃ—ಪೂರ್ಣವಾಗಿ, ಯತ್—ಯಾವುದು, ಜ್ಞಾತ್ವಾ—ತಿಳಿದು, ನ—ಇಲ್ಲ, ಇಹ—ಈ ಜಗತ್ತಿನಲ್ಲಿ, ಭೂಯಃ—ಮತ್ತಷ್ಟು, ಅನ್ಯತ್—ಹೆಚ್ಚಿನದೇನೂ, ಜ್ಞಾತವ್ಯಮ್—ತಿಳಿಯಬೇಕಾದುದು, ಅವಶಿಷ್ಯತೇ—ಉಳಿಯುವುದು.

**ಈಗ ನಾನು ನಿನಗೆ ಇಂದ್ರಿಯ ಗೋಚರ ಜ್ಞಾನವನ್ನು ಮತ್ತು ಆಧ್ಯಾತ್ಮಿಕ ಜ್ಞಾನವನ್ನು ಪೂರ್ಣವಾಗಿ ಹೇಳುತ್ತೇನೆ. ಇದನ್ನು ತಿಳಿದು, ನೀನು ತಿಳಿಯಲು ಮತ್ತೇನೂ ಉಳಿಯುವುದಿಲ್ಲ.**

**ಭಾವಾರ್ಥ :** ಸಂಪೂರ್ಣಜ್ಞಾನವು, ಇಂದ್ರಿಯ ಗೋಚರ ಜಗತ್ತು, ಅದರ ಹಿಂದಿರುವ ಚೇತನ, ಮತ್ತು ಅವೆರಡರ ಮೂಲದ ಜ್ಞಾನವನ್ನೊಳಗೊಂಡಿರುತ್ತದೆ. ಇದೇ ದಿವ್ಯ ಜ್ಞಾನ. ಅರ್ಜುನನು ಕೃಷ್ಣನ ಆಪ್ತ ಭಕ್ತನೂ ಸಖನೂ ಆಗಿರುವುದರಿಂದ, ಭಗವಂತನು ಮೇಲೆ ಪ್ರಾಸ್ತಾಪಿಸಿದ ಜ್ಞಾನವಿಧಾನವನ್ನು ವಿವರಿಸಬಯಸುತ್ತಾನೆ. ನಾಲ್ಕನೆಯ ಅಧ್ಯಾಯದ ಪ್ರಾರಂಭದಲ್ಲಿ, ಭಗವಂತನಿಂದ ಈ ವಿವರಣೆಯು ನೀಡಲ್ಪಟ್ಟಿತು, ಮತ್ತೆ ಅದು ಇಲ್ಲಿ ಧೃಢಪಟ್ಟಿದೆ : ಸಂಪೂರ್ಣಜ್ಞಾನವನ್ನು ಭಗವಂತನಿಂದ ನೇರವಾಗಿ ಬರುವ ಶಿಷ್ಯ ಪರಂಪರೆಯಲ್ಲಿನ ಭಗವದ್ ಭಕ್ತನಿಂದ ಮಾತ್ರವೇ ಪಡೆಯಬಹುದು. ಆದ್ದರಿಂದ, ಸಕಲ ಜ್ಞಾನದ ಆಕರನು, ಸರ್ವಕಾರಣ ಕಾರಣನು ಮತ್ತು ಎಲ್ಲ ಬಗೆಯ ಯೋಗಾಚರಣೆಗಳಲ್ಲಿ ಧ್ಯಾನಕ್ಕಾಗಿ ಏಕೈಕ ಧ್ಯೇಯನು ಯಾರೆಂಬುದನ್ನು ತಿಳಿದುಕೊಳ್ಳುವಷ್ಟು ಒಬ್ಬನು ಬುದ್ಧಿವಂತನಾಗಿರಬೇಕು. ಸರ್ವಕಾರಣಗಳ ಕಾರಣವು ತಿಳಿದಾಗ, ಬೇಕಾದ ಪ್ರತಿಯೊಂದು ತಿಳಿಯುತ್ತದೆ, ಮತ್ತು ಯಾವುದೂ ತಿಳಿಯದೇ ಉಳಿಯುವುದಿಲ್ಲ. ವೇದಗಳು (**ಮುಂಡಕ ಉಪನಿಷದ್ 1.3**) **ಕಸ್ಮಿನ್ ಭಗವೋ ವಿಜ್ಞಾತೇ ಸರ್ವಮ್ ಇದಂ ವಿಜ್ಞಾತಂ ಭವತಿ** ಎಂದು ಹೇಳುತ್ತದೆ.

**ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ ಯತತಿ ಸಿದ್ಧಯೇ ।**
**ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥ ೩ ॥**

ಮನುಷ್ಯಾಣಾಮ್—ಮನುಷ್ಯರ, ಸಹಸ್ರೇಷು—ಅನೇಕ ಸಾವಿರಗಳಲ್ಲಿ, ಕಶ್ಚಿತ್—ಯಾರೋ ಒಬ್ಬನು, ಯತತಿ—ಯತ್ನಿಸುತ್ತಾನೆ, ಸಿದ್ಧಯೇ—ಪರಿಪೂರ್ಣತೆಗಾಗಿ, ಯತತಾಮ್—ಹಾಗೆ ಯತ್ನಿಸುವವರಲ್ಲಿ, ಅಪಿ—ನಿಜವಾಗಿ, ಸಿದ್ಧಾನಾಮ್—ಪರಿಪೂರ್ಣತೆಯನ್ನು ಸಾಧಿಸಿದವರಲ್ಲಿ, ಕಶ್ಚಿತ್—ಯಾರೋ ಒಬ್ಬನು, ಮಾಮ್—ನನ್ನನ್ನು, ವೇತ್ತಿ—ತಿಳಿಯುತ್ತಾನೆ. ತತ್ತ್ವತಃ—ವಾಸ್ತವಿಕವಾಗಿ.

**ಸಹಸ್ರಾರು ಜನರಲ್ಲಿ ಒಬ್ಬನು ಪರಿಪೂರ್ಣತೆಗಾಗಿ ಯತ್ನಿಸಬಹುದು, ಮತ್ತು ಪರಿಪೂರ್ಣತೆಯನ್ನು ಸಾಧಿಸಿದವರಲ್ಲಿ, ಒಬ್ಬನು ನನ್ನನ್ನು ತತ್ತ್ವತಃ ತಿಳಿದಿರುವುದೂ ಕಷ್ಟ.**

**ಭಾವಾರ್ಥ :** ವಿವಿಧ ಮಟ್ಟಗಳಲ್ಲಿ ಜನರಿದ್ದಾರೆ, ಮತ್ತು ಎಷ್ಟೋಸಾವಿರ ಜನಗಳಲ್ಲಿ ಒಬ್ಬನು ಆತ್ಮ ಎಂದರೇನು, ದೇಹ ಎಂದರೇನು ಮತ್ತು ಪರತತ್ವ ಎಂದರೇನು ಎಂದು ತಿಳಿದುಕೊಳ್ಳಲು ಯತ್ನಿಸುವ ದಿವ್ಯ ಸಾಕ್ಷಾತ್ಕಾರದಲ್ಲಿ ಸಾಕಷ್ಟು ಆಸಕ್ತಿಯುಳ್ಳವನಾಗಿರಬಹುದು. ಸಾಮಾನ್ಯವಾಗಿ ಮಾನವ ಕುಲವು ಕೇವಲ ಪಶು ಪ್ರವೃತ್ತಿಗಳಲ್ಲಿ, ಎಂದರೆ ಆಹಾರ, ನಿದ್ರೆ, ರಕ್ಷಣೆ ಮತ್ತು ಮೈಥುನಗಳಲ್ಲಿ ನಿರತವಾಗಿ,ದೆ ಮತ್ತು ದಿವ್ಯಜ್ಞಾನದಲ್ಲಿ

ಆಸಕ್ತರು ಅತಿವಿರಳ. ದಿವ್ಯಜ್ಞಾನದಲ್ಲಿ, ಆತ್ಮ, ಪರಮಾತ್ಮ ಮತ್ತು ಜ್ಞಾನಯೋಗ ಧ್ಯಾನಯೋಗ ಮತ್ತು ಆತ್ಮನನ್ನು ಭೌತವಸ್ತುವಿನಿಂದ ಪ್ರತ್ಯೇಕಿಸುವ ಸಾಕ್ಷಾತ್ಕಾರ ವಿಧಾನಗಳ ಅರಿವಿನಲ್ಲಿ ಆಸಕ್ತರಾದವರಿಗಾಗಿ ಭಗವದ್ಗೀತೆಯ ಮೊದಲನೆಯ ಆರು ಅಧ್ಯಾಯಗಳು ಉದ್ದಿಷ್ಟ. ಆದರೆ ಕೃಷ್ಣನು ಕೃಷ್ಣಪ್ರಾಜ್ಞಗಳಿಂದ ಮಾತ್ರ ತಿಳಿಯಲ್ಪಡ ಬಲ್ಲನು. ಇತರ ದಿವ್ಯವಾದಿಗಳು ವ್ಯಕ್ತಿ ಶೂನ್ಯ ಬ್ರಹ್ಮನ್ ಸಾಕ್ಷಾತ್ಕಾರವನ್ನು ಸಾಧಿಸಿರ ಬಹುದು, ಏಕೆಂದರೆ ಇದು ಕೃಷ್ಣನನ್ನು ಅರಿಯುವುದಕ್ಕಿಂತ ಸುಲಭ. ಕೃಷ್ಣನು ಪರಮ ಪುರುಷನು, ಆದರೆ ಅದೇ ಕಾಲದಲ್ಲಿ ಅವನು ಬ್ರಹ್ಮನ್ ಮತ್ತು ಪರಮಾತ್ಮ ಜ್ಞಾನದ ಆಚೆಗಿರುವನು. ಯೋಗಿಗಳು ಮತ್ತು ಜ್ಞಾನಿಗಳು ಕೃಷ್ಣನನ್ನು ಅರಿತುಕೊಳ್ಳುವ ತಮ್ಮ ಪ್ರಯತ್ನಗಳಲ್ಲಿ ಕಂಗೆಟ್ಟಿರುತ್ತಾರೆ. ಮಾಯಾವಾದಿಗಳಲ್ಲಿ ಅತಿ ಶ್ರೇಷ್ಠರಾದ ಶ್ರೀಪಾದ ಶಂಕರಾಚಾರ್ಯರು ತಮ್ಮ ಗೀತಾ ಭಾಷ್ಯದಲ್ಲಿ ಕೃಷ್ಣನು ಪರಮ ದೇವೋತ್ತಮ ಪುರುಷ ನೆಂದು ಒಪ್ಪಿಕೊಂಡಿದ್ದರೂ, ಅವರ ಅನುಯಾಯಿಗಳು ಕೃಷ್ಣನನ್ನು ಹಾಗೆಂದು ಒಪ್ಪಿ ಕೊಳ್ಳುವುದಿಲ್ಲ. ಏಕೆಂದರೆ, ಒಬ್ಬನು ವ್ಯಕ್ತಿಶೂನ್ಯ ಬ್ರಹ್ಮನ್‌ನ ದಿವ್ಯ ಸಾಕ್ಷಾತ್ಕಾರ ಹೊಂದಿದ್ದರೂ, ಕೃಷ್ಣನನ್ನು ತಿಳಿಯುವುದು ಬಹು ಕಷ್ಟ.

ಕೃಷ್ಣನು ಪರಮ ದೇವೋತ್ತಮ ಪುರುಷನು, ಸಕಲ ಕಾರಣಗಳ ಕಾರಣನು, ಆದಿ ಪುರುಷನಾದ ಭಗವಾನ್ ಗೋವಿಂದನು. **ಈಶ್ವರಃ ಪರಮಃ ಕೃಷ್ಣಃ ಸಚ್ಚಿದಾನನ್ದ ವಿಗ್ರಹಃ । ಅನಾದಿರ್ ಆದಿರ್ ಗೋವಿನ್ದಃ ಸರ್ವಕಾರಣ ಕಾರಣಮ್.** ಅಭಕ್ತರು ಅವನನ್ನು ತಿಳಿಯುವುದು ಬಹು ಕಷ್ಟ. ಭಕ್ತಿ ಪಥವು ಅಥವಾ ಭಕ್ತಿಯುತ ಸೇವೆಯು ಬಹು ಸುಲಭ ಎಂದು ಅಭಕ್ತರು ಹೇಳಿದರೂ ಅವರು ಅದನ್ನು ಆಚರಿಸಲಾರರು. ಭಕ್ತಿ ಪಥವು ಅಭಕ್ತ ವರ್ಗದವರು ಹೇಳುವಂತೆ ಸುಲಭವಾಗಿದ್ದರೆ, ಅವರು ಕಷ್ಟಮಾರ್ಗವನ್ನು ಸ್ವೀಕರಿಸುವುದೇಕೆ ?

ವಾಸ್ತವಿಕವಾಗಿ ಭಕ್ತಿಮಾರ್ಗವು ಸುಲಭವಲ್ಲ, ಅನಧಿಕೃತ ವ್ಯಕ್ತಿಗಳು ಭಕ್ತಿಯ ಜ್ಞಾನವಿಲ್ಲದೆ ಭಕ್ತಿಮಾರ್ಗ ಎನಿಸಿರುವುದನ್ನು ಆಚರಿಸುವುದು ಸುಲಭವಿರಬಹುದು. ಆದರೆ ಅದನ್ನು ನಿಯಮ ನಿಯಂತ್ರಣಗಳಿಗೆ ಅನುಸಾರವಾಗಿ ವಾಸ್ತವಿಕವಾಗಿ ಆಚರಿಸಿದಾಗ, ಊಹಾಪೋಹಾತ್ಮಕ ಪಂಡಿತರು ಮತ್ತು ತಾತ್ವಿಕರು ಆ ಮಾರ್ಗದಿಂದ ದೂರ ಬೀಳುವರು. ಶ್ರೀಲ ರೂಪಗೋಸ್ವಾಮಿಯವರು ತಮ್ಮ ಭಕ್ತಿರಸಾಮೃತ ಸಿಂಧುವಿನಲ್ಲಿ (1.2.101) ಹೀಗೆ ಬರೆಯುತ್ತಾರೆ.

ಶ್ರುತಿ ಸ್ಮೃತಿ ಪುರಾಣಾದಿ ಪಾಂಚರಾತ್ರವಿಧಿಂ ವಿನಾ
ಐಕಾನ್ತಿಕೀ ಹರೇರ್ ಭಕ್ತಿರ್ ಉತ್ಪಾತಾಯೈವ ಕಲ್ಪತೇ

"ಉಪನಿಷತ್ತುಗಳು, ಪುರಾಣಗಳು ಮತ್ತು ನಾರದ ಪಾಂಚರಾತ್ರಗಳಂಥ ಅಧಿಕೃತ ವೇದ ಸಾಹಿತ್ಯಗಳನ್ನು ಉಪೇಕ್ಷಿಸುವ ಭಗವಂತನ ಭಕ್ತಿಯುತ ಸೇವೆಯು ಸಮಾಜದಲ್ಲಿ ಕೇವಲ ಒಂದು ಅನವಶ್ಯಕ ಗಲಭೆ."

ಪರಮ ದೇವೋತ್ತಮ ಪುರುಷ ಕೃಷ್ಣನನ್ನು ಯಶೋದೆಯ ಮಗನೆಂದು ಅಥವಾ ಅರ್ಜುನನ ಸಾರಥಿಯೆಂದು ಬ್ರಹ್ಮನ್ ಸಾಕ್ಷಾತ್ಕಾರಿ ವ್ಯಕ್ತಿಶೂನ್ಯವಾದಿ ಅಥವಾ

**ಪರ**ಮಾತ್ಮ ಸಾಕ್ಷಾತ್ಕಾರಿ ಯೋಗಿಯು ಅರಿಯುವುದು ಅಸಂಭವ. ಮಹಾದೇವತೆ**ಗಳೂ** ಕೂಡ ಕೃಷ್ಣನ ಬಗ್ಗೆ ಕೆಲವು ಸಲ ಕಂಗೆಡುತ್ತಾರೆ (**ಮುಹ್ಯನ್ತಿ ಯತ್ ಸೂರಯಃ**). **ಮಾಂ ತು ವೇದ ನ ಕಶ್ಚನ**—"ನಾನಿರುವಂತೆ ಯಾರೂ ನನ್ನನ್ನು ತಿಳಿದಿಲ್ಲ," ಎಂದು ಭಗವಂತನು ಹೇಳುತ್ತಾನೆ, ಒಬ್ಬನು ಅವನನ್ನು ತಿಳಿದಿದ್ದರೆ, ಆಗ **ಸ ಮಹಾತ್ಮಾ ಸುದುರ್ಲಭಃ**— "ಅಂಥ ಮಹಾತ್ಮನು ಅತಿ ದುರ್ಲಭ." ಆದ್ದರಿಂದ ಭಗವಂತನಿಗೆ ಭಕ್ತಿಯುತ ಸೇವೆಯನ್ನು ಆಚರಿಸಿದ ಹೊರತು, ಒಬ್ಬನು ಮಹಾ ಪಂಡಿತ ಅಥವಾ ತಾತ್ವಿಕನಾಗಿದ್ದರೂ ಕೂಡ, ಕೃಷ್ಣನನ್ನು ಯಥಾವತ್ತಾಗಿ (**ತತ್ವತಃ**) ತಿಳಿಯಲಾರನು. ಕೃಷ್ಣನು ತನ್ನ ಭಕ್ತರಿಗೆ ದಯಾಪರನಾಗಿರುವ ಕಾರಣ, ಕೇವಲ ಶುದ್ಧ ಭಕ್ತರು ಮಾತ್ರ ಕೃಷ್ಣನಲ್ಲಿನ ಅಚಿಂತ್ಯ ದಿವ್ಯ ಗುಣಗಳನ್ನು, ತನ್ನ ಸರ್ವಕಾರಣಗಳ ಕಾರಣಗಳಲ್ಲಿ, ಅವನ ಅನಂತ ಶಕ್ತಿ ಹಾಗೂ ಐಶ್ವರ್ಯದಲ್ಲಿ ಮತ್ತು ಅವನ ಸಂಪತ್ತು, ಕೀರ್ತಿ, ಬಲ, ಲಾವಣ್ಯ, ಜ್ಞಾನ ಮತ್ತು ವೈರಾಗ್ಯದಲ್ಲಿ ಸ್ವಲ್ಪಮಟ್ಟಿಗೆ ಅರಿಯಬಲ್ಲರು. ಬ್ರಹ್ಮನ್ ಸಾಕ್ಷಾತ್ಕಾರದಲ್ಲಿ ಅವನೇ ಕೊನೆಯ ಮಾತು, ಮತ್ತು ಭಕ್ತರು ಮಾತ್ರವೇ ಅವನನ್ನು ಯಥಾರೂಪವಾಗಿ ಸಾಕ್ಷಾತ್ಕರಿಸಬಲ್ಲರು. ಆದ್ದರಿಂದ ಹೀಗೆ ಹೇಳಿದೆ :

ಅತಃ ಶ್ರೀಕೃಷ್ಣನಾಮಾದಿ ನ ಭವೇದ್ಗ್ರಾಹ್ಯಮ್ ಇನ್ದ್ರಿಯೈಃ
ಸೇವೋನ್ಮುಖೇ ಹಿ ಜಿಹ್ವಾದೌ ಸ್ವಯಮೇವ ಸ್ಫುರತ್ಯದಃ

"ಯಾರೂ ಮಸಗೆಟ್ಟ ಭೌತಿಕ ಇಂದ್ರಿಯಗಳಿಂದ ಕೃಷ್ಣನನ್ನು ಯಥಾರೂಪದಲ್ಲಿ ಅರಿಯಲಾಗದು. ಆದರೆ ಭಕ್ತರು ತನಗೆ ಸಲ್ಲಿಸುವ ದಿವ್ಯ ಪ್ರೀತಿಯುತ ಸೇವೆಯಿಂದ ಪ್ರೀತನಾಗಿ ಅವರಿಗೆ ಅವನು ತನ್ನನ್ನೇ ಪ್ರಕಟಿಸಿಕೊಳ್ಳುವನು." (**ಭಕ್ತಿ-ರಸಾಮೃತ-ಸಿಂಧು** 1.2.234)

**ಭೂಮಿರಾಪೋऽನಲೋ ವಾಯುಃ ಖಂ ಮನೋ ಬುದ್ಧಿರೇವ ಚ ।**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥ ೪ ॥**

ಭೂಮಿಃ—ಭೂಮಿ, ಆಪಃ—ನೀರು, ಅನಲಃ—ಅಗ್ನಿ, ವಾಯುಃ—**ಗಾಳಿ**, **ಖಮ್**—ಆಕಾಶ, ಮನಃ—ಮನಸ್ಸು, ಬುದ್ಧಿಃ—ಬುದ್ಧಿಯು, ಏವ—ಖಂಡಿತವಾ**ಗಿ**, **ಚ**—ಮತ್ತು, ಅಹಂಕಾರಃ—ಮಿಥ್ಯಾಹಂಕಾರ, ಇತಿ—ಹೀಗೆ, ಇಯಮ್—ಈ ಎಲ್ಲವೂ, **ಮೇ**—ನನ್ನ, ಭಿನ್ನಾ—ಪ್ರತ್ಯೇಕಿತ, ಪ್ರಕೃತಿಃ—ಶಕ್ತಿಗಳು, ಅಷ್ಟಧಾ—ಅಷ್ಟವಿಧ.

**ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ, ಮಿಥ್ಯಾಹಂಕಾರ—ಒಟ್ಟಾಗಿ ಈ ಎಂಟು ನನ್ನ ಪ್ರತ್ಯೇಕಿತ ಭೌತಿಕ ಶಕ್ತಿಗಳು ಆಗಿರುತ್ತವೆ.**

**ಭಾವಾರ್ಥ :** ಭಗವದ್ವಿಜ್ಞಾನವು ಭಗವತ್ಸ್ವರೂಪ ಸ್ಥಿತಿಯನ್ನು ಮತ್ತು ಅವನ ವಿವಿಧ ಶಕ್ತಿಗಳನ್ನು ವಿಶ್ಲೇಷಿಸುತ್ತದೆ. ಭೌತಿಕ ನಿಸರ್ಗವು **ಪ್ರಕೃತಿ**, ಅಥವಾ ಸಾತ್ವತ—ತಂತ್ರದಲ್ಲಿ ವರ್ಣಿಸಿರುವಂತೆ ಅವನ ವಿವಿಧ **ಪುರುಷ** ಅವತಾರಗಳಲ್ಲಿನ (ವಿಸ್ತರಣೆಗಳಲ್ಲಿನ) ಭಗವಂತನ ಶಕ್ತಿ:

ವಿಷ್ಣೋಸ್ತು ತ್ರೀಣಿ ರೂಪಾಣಿ ಪುರುಷಾಖ್ಯಾನಿ ಅಥೋ ವಿದುಃ
ಏಕಂ ತು ಮಹತಃ ಸ್ರಷ್ಟೃ ದ್ವಿತೀಯಂ ತ್ವಂಡ-ಸಂಸ್ಥಿತಮ್
ತೃತೀಯಂ ಸರ್ವ-ಭೂತ-ಸ್ಥಂ ತಾನಿ ಜ್ಞಾತ್ವಾ ವಿಮುಚ್ಯತೇ

"ಭೌತಿಕ ಸೃಷ್ಟಿಗಾಗಿ, ಶ್ರೀಕೃಷ್ಣನ ಪೂರ್ಣ ವಿಸ್ತರಣೆಯು ಮೂರು ವಿಷ್ಣುರೂಪಗಳನ್ನು ತಾಳುತ್ತದೆ. ಮೊದಲನೆಯದಾದ ಮಹಾವಿಷ್ಣು **ಮಹತ್-ತತ್ವ** ಎಂಬ ಸಮಗ್ರ ಭೌತಿಕ ಶಕ್ತಿಯನ್ನು ಸೃಷ್ಟಿಸುತ್ತಾನೆ. ಎರಡನೆಯದಾದ, ಗರ್ಭೋದಕಶಾಯಿ ವಿಷ್ಣು ಪ್ರತಿಯೊಂದರಲ್ಲಿಯೂ ವೈವಿಧ್ಯತೆಗಳನ್ನು ಸೃಷ್ಟಿಸಲು ಎಲ್ಲ ವಿಶ್ವಗಳನ್ನೂ ಪ್ರವೇಶಿಸುತ್ತಾನೆ. ಮೂರನೆಯದಾದ, ಕ್ಷಿರೋದಕಶಾಯಿ ವಿಷ್ಣು ಸರ್ವವ್ಯಾಪಿ ಪರಮಾತ್ಮನಾಗಿ ಸಕಲ ವಿಶ್ವಗಳಲ್ಲಿಯೂ ವ್ಯಾಪಿಸುತ್ತಾನೆ ಮತ್ತು ಪರಮಾತ್ಮನೆಂದು ತಿಳಿಯಲ್ಪಡುತ್ತಾನೆ. ಅವನು ಪರಮಾಣುಗಳಲ್ಲಿಯೂ ಇರುವವನು. ಈ ಮೂರು ವಿಷ್ಣುರೂಪಗಳನ್ನು ತಿಳಿದವನು ಭೌತಿಕ ತೊಡಕಿನಿಂದ ಮುಕ್ತನಾಗಬಲ್ಲನು."

ಈ ಭೌತಿಕ ಜಗತ್ತು ಭಗವಂತನ ಶಕ್ತಿಗಳಲ್ಲಿ ಒಂದರ ತಾತ್ಕಾಲಿಕ ಅಭಿವ್ಯಕ್ತತೆಯಾಗಿದೆ. ಭೌತಿಕ ಜಗತ್ತಿನ ಎಲ್ಲ ಚಟುವಟಿಕೆಗಳೂ ಭಗವಾನ್ ಕೃಷ್ಣನ ಈ ಮೂರು ವಿಷ್ಣು ವಿಸ್ತರಣೆಗಳಿಂದ ನಿರ್ದೇಶಿತವಾಗಿವೆ. ಇವುಗಳನ್ನು ಪುರುಷಾವತಾರಗಳೆಂದು ಕರೆಯುತ್ತಾರೆ. ಸಾಮಾನ್ಯವಾಗಿ ಭಗವದ್ (ಕೃಷ್ಣ) ವಿಜ್ಞಾನವನ್ನು ತಿಳಿಯದವನು ಈ ಭೌತಿಕ ಜಗತ್ತು ಜೀವಿಗಳ ಅನುಭೋಗಕ್ಕಾಗಿದೆ ಮತ್ತು ಜೀವಿಗಳು **ಪುರುಷರು**—ಎಂದರೆ ಭೌತಿಕ ಶಕ್ತಿಯ ಕಾರಣರು, ನಿಯಂತ್ರಕರು ಮತ್ತು ಭೋಗಿಗಳು ಎಂದು ತಿಳಿಯುತ್ತಾರೆ. ಭಗವದ್ಗೀತಾನುಸಾರ ಈ ನಾಸ್ತಿಕ ಸಿದ್ಧಾಂತವು ಸುಳ್ಳು. ಚರ್ಚೆಯಲ್ಲಿರುವ ಈ ಶ್ಲೋಕದಲ್ಲಿ ಕೃಷ್ಣನು ಭೌತಿಕ ಅಭಿವ್ಯಕ್ತತೆಯ ಮೂಲಕಾರಣನು ಎಂದು ಹೇಳಿದೆ. ಶ್ರೀಮದ್ಭಾಗವತವೂ ಇದನ್ನು ದೃಢಪಡಿಸುತ್ತದೆ. ಭೌತಿಕ ಅಭಿವ್ಯಕ್ತತೆಯ ಘಟಕಾಂಶಗಳು ಭಗವಂತನ ಪ್ರತ್ಯೇಕ ಶಕ್ತಿಗಳು. ವ್ಯಕ್ತಿಶೂನ್ಯವಾದಿಗಳ ಅಂತಿಮ ಗುರಿಯಾದ **ಬ್ರಹ್ಮಜ್ಯೋತಿಯೂ** ಕೂಡ ಪರವ್ಯೋಮದಲ್ಲಿ ಅಭಿವ್ಯಕ್ತಿಸಲ್ಪಟ್ಟ ಆಧ್ಯಾತ್ಮಿಕ ಶಕ್ತಿ. ವೈಕುಂಠಲೋಕಗಳಲ್ಲಿರುವಂತೆ ಬ್ರಹ್ಮಜ್ಯೋತಿಯಲ್ಲಿ ಆಧ್ಯಾತ್ಮಿಕ ವೈವಿಧ್ಯಮಯಗಳಿರುವುದಿಲ್ಲ, ಮತ್ತು ವ್ಯಕ್ತಿಶೂನ್ಯವಾದಿಯು ಈಬ್ರಹ್ಮಜ್ಯೋತಿಯನ್ನು ಅಂತಿಮ ಶಾಶ್ವತಗುರಿಯನ್ನಾಗಿ ಸ್ವೀಕರಿಸುತ್ತಾನೆ. ಪರಮಾತ್ಮಾ ಅಭಿವ್ಯಕ್ತತೆಯೂ ಕೂಡ ಕ್ಷೀರೋದಕಶಾಯಿ ವಿಷ್ಣುವಿನ ತಾತ್ಕಾಲಿಕ ಸರ್ವವ್ಯಾಪ್ತರೂಪ. ಪರಮಾತ್ಮಾ ಅಭಿವ್ಯಕ್ತತೆಯು ಅಧ್ಯಾತ್ಮ ಜಗತ್ತಿನಲ್ಲಿ ನಿತ್ಯವಲ್ಲ. ಆದ್ದರಿಂದ ವಾಸ್ತವಿಕ ಪರತತ್ವವು ಪರಮದೇವೋತ್ತಮ ಪುರುಷನಾದ ಕೃಷ್ಣ. ಅವನು ಪೂರ್ಣಶಕ್ತಿಯುಳ್ಳ ಪುರುಷ, ಮತ್ತು ಅವನು ಭಿನ್ನ ಭಿನ್ನ ಪ್ರತ್ಯೇಕಿತ ಮತ್ತು ಅಂತರಂಗ ಶಕ್ತಿಗಳನ್ನು ಹೊಂದಿದ್ದಾನೆ.

ಭೌತಿಕ ಶಕ್ತಿಯಲ್ಲಿ, ಮುಖ್ಯ ಅಭಿವ್ಯಕ್ತತೆಗಳು ಮೇಲೆ ಹೇಳಿದಂತೆ ಎಂಟು. ಇವುಗಳಲ್ಲಿ, ಮೊದಲನೆಯ ಐದು ಅಭಿವ್ಯಕ್ತತೆಗಳು ಎಂದರೆ, ಭೂಮಿ, ನೀರು, ಅಗ್ನಿ, ವಾಯು ಮತ್ತು ಆಕಾಶ ಈ ಐದು ಮಹಾ ಸೃಷ್ಟಿಗಳು ಅಥವಾ ಸ್ಥೂಲ ಸೃಷ್ಟಿಗಳು;

ಅವುಗಳಲ್ಲಿ ಐದು ಇಂದ್ರಿಯ ವಿಷಯಗಳೂ ಸೇರಿವೆ. ಅವು ಭೌತಿಕ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಗಳ ಅಭಿವ್ಯಕ್ತತೆಗಳು. ಭೌತಿಕ ವಿಜ್ಞಾನವು ಈ ಹತ್ತು ಅಂಶಗಳನ್ನು ಒಳಗೊಂಡಿದೆಯೇ ಹೊರತು, ಬೇರೆ ಏನನ್ನೂ ಅಲ್ಲ. ಆದರೆ ಇತರ ಮೂರು ಅಂಶಗಳು, ಎಂದರೆ ಮನಸ್ಸು, ಬುದ್ಧಿ ಮತ್ತು ಮಿಥ್ಯಾಹಂಕಾರ, ಭೌತವಾದಿಗಳಿಂದ ಉಪೇಕ್ಷಿಸ ಲಾಗಿದೆ. ಮಾನಸಿಕ ಚಟುವಟಿಕೆಗಳನ್ನು ಕುರಿತು ವಿವೇಚಿಸುವ ತತ್ತ್ವಜ್ಞಾನಿಗಳು ಕೂಡ ಅಂತಿಮ ಆಕರನಾದ ಕೃಷ್ಣನನ್ನು ತಿಳಿದಿಲ್ಲವಾದ್ದರಿಂದ, ಜ್ಞಾನದಲ್ಲಿ ಪರಿಪೂರ್ಣರಲ್ಲ. ಭೌತಿಕ ಅಸ್ತಿತ್ವದ ಮುಖ್ಯ ಆಧಾರ ತತ್ತ್ವವಾದ "ನಾನು", ಮತ್ತು "ನನ್ನದು," ಎಂಬ ಮಿಥ್ಯಾಹಂಕಾರವು—ಭೌತಿಕ ಚಟುವಟಿಕೆಗಳಿಗಾಗಿ ಹತ್ತು ಇಂದ್ರಿಯಗಳನ್ನು ಒಳಗೊಂಡಿದೆ. ಬುದ್ಧಿ ಎಂಬುದು **ಮಹತ್-ತತ್ತ್ವ** ಎಂಬ ಸಮಗ್ರ ಭೌತಿಕ ಸೃಷ್ಟಿಯನ್ನು ಸೂಚಿಸುತ್ತದೆ. ಆದ್ದರಿಂದ ಭಗವಂತನ ಎಂಟು ಪ್ರತ್ಯೇಕಿತ ಶಕ್ತಿಗಳಿಂದ ಭೌತಿಕ ಜಗತ್ತಿನ ಇಪ್ಪತ್ತನಾಲ್ಕು ತತ್ತ್ವಗಳು ಅಭಿವ್ಯಕ್ತವಾಗಿವೆ. ಅವು ನಾಸ್ತಿಕ ಸಾಂಖ್ಯದರ್ಶನದ ವಿಷಯ ವಸ್ತು; ಅವು ಮೂಲತಃ ಕೃಷ್ಣನ ಶಕ್ತಿಗಳಿಂದ ನಿಷ್ಪನ್ನಗಳು ಮತ್ತು ಅವನಿಂದ ಪ್ರತ್ಯೇಕಿತವಾಗಿವೆ. ಆದರೆ ಅಲ್ಪಜ್ಞಾನಿಗಳಾದ ನಾಸ್ತಿಕ ಸಾಂಖ್ಯ ತಾತ್ತ್ವಿಕರು ಕೃಷ್ಣನನ್ನು ಸರ್ವಕಾರಣ ಕಾರಣ ನೆಂದು ತಿಳಿದಿಲ್ಲ. ಸಾಂಖ್ಯ ದರ್ಶನದಲ್ಲಿನ ಚರ್ಚಾವಿಷಯವು, ಭಗವದ್ಗೀತೆಯಲ್ಲಿ ವರ್ಣಿಸಿರು ವಂತೆ ಕೃಷ್ಣನ ಬಹಿರಂಗ ಶಕ್ತಿಯ ಅಭಿವ್ಯಕ್ತತೆಯು ಮಾತ್ರ ಆಗಿರುತ್ತದೆ.

**ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್ ।**
**ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ॥೫॥**

ಅಪರಾ—ಅಪರಾ, ಕೆಳಮಟ್ಟದ, ಇಯಮ್—ಈ, ಇತಃ—ಇದಲ್ಲದೇ, ತು—ಆದರೆ, ಅನ್ಯಾಮ್—ಮತ್ತೊಂದು, ಪ್ರಕೃತಿಮ್—ಶಕ್ತಿ, ವಿದ್ಧಿ—ತಿಳಿದುಕೊಳ್ಳಲು ಯತ್ನಿಸು, ಮೇ—ನನ್ನ, ಪರಾಮ್—ಪರಾ, ಶ್ರೇಷ್ಠ, ಜೀವಭೂತಾಮ್—ಜೀವಿಗಳ ನ್ನೊಳಗೊಂಡ, ಮಹಾಬಾಹೋ—ಹೇ ಮಹಾಬಾಹುವೇ, ಯಯಾ—ಯಾರಿಂದ, ಇದಮ್—ಇದು, ಧಾರ್ಯತೇ—ಬಳಸಲ್ಪಟ್ಟಿದೆ ಮತ್ತು ಸ್ವಪ್ರಯೋಜನಕ್ಕೆ ಉಪಯೋಗಿಸಲ್ಪಟ್ಟಿದೆ, ಜಗತ್—ಭೌತಿಕ ಜಗತ್ತು.

**ಇದಲ್ಲದೇ, ಹೇ ಮಹಾಬಾಹು ಅರ್ಜುನನೇ, ಮತ್ತೊಂದು ನನ್ನ ಶ್ರೇಷ್ಠ (ಪರಾ) ಶಕ್ತಿಯಿದೆ; ಅದು ಈ ಭೌತಿಕ ಅಪರಾ ಪ್ರಕೃತಿಯ ಸಂಪನ್ಮೂಲಗಳನ್ನು ಬಳಸಿಕೊಳ್ಳುವ ಜೀವಿಗಳನ್ನೊಳಗೊಂಡಿದೆ.**

**ಭಾವಾರ್ಥ:** ಜೀವಿಗಳು ಭಗವಂತನ ಪರಾ ಪ್ರಕೃತಿಗೆ (ಅಥವಾ ಶಕ್ತಿ) ಸೇರಿದ್ದಾರೆಂದು ಇಲ್ಲಿ ಸ್ಪಷ್ಟವಾಗಿ ಪ್ರಸ್ತಾಪಿತವಾಗಿದೆ. ಅಪರಾ ಶಕ್ತಿಯು ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ ಮತ್ತು ಮಿಥ್ಯಾಹಂಕಾರ ಎಂಬ ತತ್ತ್ವಗಳಾಗಿ ಅಭಿವ್ಯಕ್ತವಾಗುವ ಜಡ ಅಥವಾ ಭೌತಿಕ ವಸ್ತು. ಭೌತಿಕ ಪ್ರಕೃತಿಯ ಉಭಯ ರೂಪಗಳೂ ಎಂದರೆ ಸ್ಥೂಲ (ಪೃಥ್ವಿ ಇತ್ಯಾದಿ) ಮತ್ತು ಸೂಕ್ಷ್ಮ (ಮನಸ್ಸು ಇತ್ಯಾದಿ) ಅಪರಾ ಶಕ್ತಿಯ ಉತ್ಪನ್ನಗಳು. ಈ ಅಪರಾ ಶಕ್ತಿಗಳನ್ನು ವಿವಿಧ ಉದ್ದೇಶಗಳಿಗಾಗಿ

ಬಳಸಿಕೊಳ್ಳುತ್ತಿರುವ ಜೀವಿಗಳು, ಪರಮ ಪ್ರಭುವಿನ ಪರಾ ಶಕ್ತಿ ಮತ್ತು ಈ ಶಕ್ತಿಯ ನಿಮಿತ್ತವೇ ಇಡೀ ಭೌತಿಕ ಜಗತ್ತು ಕಾರ್ಯಪ್ರವೃತ್ತವಾಗಿದೆ. ವಿಶ್ವ ಉದ್ಭೂತಿಯು ಪರಾ ಶಕ್ತಿಯಾದ ಜೀವಿಯಿಂದ ಚಾಲಿತವಾಗದ ಹೊರತು ವರ್ತಿಸಲು ಸಮರ್ಥವಲ್ಲ. ಶಕ್ತಿಗಳು ಸದಾ ಶಕ್ತನಿಂದ ನಿಯಂತ್ರಿತ, ಆದ್ದರಿಂದಲೇ ಜೀವಿಗಳು ಭಗವಂತನಿಂದ ಸದಾ ನಿಯಂತ್ರಿತರು—ಅವರಿಗೆ ಸ್ವತಂತ್ರ ಅಸ್ತಿತ್ವವಿಲ್ಲ. ಬುದ್ಧಿಹೀನ ಜನರು ತಿಳಿಯುವಂತೆ ಅವರು ಎಂದಿಗೂ ಸಮಾನ ಶಕ್ತರಲ್ಲ. ಜೀವಿಗಳ ಮತ್ತು ಭಗವಂತನ ನಡುವಿನ ವ್ಯತ್ಯಾಸವನ್ನು ಶ್ರೀಮದ್ಭಾಗವತದಲ್ಲಿ (10.87.30) ಹೀಗೆ ವರ್ಣಿಸಿದೆ.

ಅಪರಿಮಿತಾ ಧ್ರುವಾ ಸ್ತನುಭೃತೋ ಯದಿ ಸರ್ವಗತಾಸ್
ತರ್ಹಿ ನ ಶಾಸ್ಯತೇತಿ ನಿಯಮೋ ಧ್ರುವ ನೇತರಥಾ।
ಅಜನಿ ಚ ಯನ್ಮಯಂ ತದ್ ಅವಿಮುಚ್ಯ ನಿಯನ್ತೃ ಭವೇತ್
ಸಮಮ್ ಅನುಜಾನತಾಂ ಯದ್ ಅಮತಂ ಮತ ದುಷ್ಟತಯಾ॥

'ಹೇ ಪರಮ ಶಾಶ್ವತನೇ ! ದೇಹಧಾರಿಗಳಾದ ಜೀವಿಗಳು ನಿನ್ನಂತೆ ಶಾಶ್ವತರೂ ಮತ್ತು ಸರ್ವವ್ಯಾಪ್ತರೂ ಆಗಿದ್ದಾರೆ, ಆಗ ಅವರು ನಿನ್ನ ನಿಯಂತ್ರಣಕ್ಕೆ ಒಳಪಡುವುದಿಲ್ಲ. ಆದರೆ ಜೀವಿಗಳನ್ನು ಸ್ವಾಮಿಯಾದ ನಿನ್ನ ಅತ್ಯಲ್ಪ ಶಕ್ತಿಗಳೆಂದು ಸ್ವೀಕರಿಸಿದರೆ, ಆಗ ಅವರು ಕೂಡಲೇ ನಿನ್ನ ಪರಮ ನಿಯಂತ್ರಣಕ್ಕೆ ಒಳಪಡುತ್ತಾರೆ. ಆದ್ದರಿಂದ ನಿಜವಾದ ಮೋಕ್ಷವು ಜೀವಿಗಳು ನಿನ್ನ ನಿಯಂತ್ರಣಕ್ಕೆ ಶರಣಾಗುವುದನ್ನು ಒಳಗೊಳ್ಳುತ್ತದೆ, ಮತ್ತು ಆ ಶರಣಾಗತಿಯು ಅವರನ್ನು ಸಂತೋಷಿಗಳನ್ನಾಗಿ ಮಾಡುತ್ತದೆ. ಆ ಸ್ವರೂಪ ಸ್ಥಿತಿಯಲ್ಲಿ ಮಾತ್ರವೇ ಅವರು ನಿಯಂತ್ರಕರಾಗಿರಬಹುದು. ಆದ್ದರಿಂದ ಭಗವಂತನು ಮತ್ತು ಜೀವಿಗಳು ಸರ್ವವಿಧಗಳಲ್ಲಿಯೂ ಸಮಾನರು ಎಂದು ಪರಿಮಿತ ಜ್ಞಾನದಿಂದ ವಾದಿಸುವ ಜನರು ತಪ್ಪಾದ ಮತ್ತು ಕಲುಷಿತವಾದ ಅಭಿಪ್ರಾಯದಿಂದ ಮಾರ್ಗದರ್ಶಿತರು."

ಪರಮಪ್ರಭು ಕೃಷ್ಣನೇ ಏಕೈಕ ನಿಯಂತ್ರಕನು, ಮತ್ತು ಎಲ್ಲ ಜೀವಿಗಳು ಅವನಿಂದ ನಿಯಂತ್ರಿತರು. ಈ ಜೀವಿಗಳು ಅವನ ಪರಾಶಕ್ತಿ, ಏಕೆಂದರೆ ಅವರ ಅಸ್ತಿತ್ವದ ಗುಣವು ಪರಮನ ಗುಣದಂತೆಯೇ ಆಗಿರುತ್ತದೆ. ಆದರೆ ಅವರು ಶಕ್ತಿ ಪ್ರಮಾಣದಲ್ಲಿ ಭಗವಂತನಿಗೆ ಎಂದಿಗೂ ಸಮಾನರಲ್ಲ. ಸ್ಥೂಲ ಮತ್ತು ಸೂಕ್ಷ್ಮ ಅಪರಾ ಶಕ್ತಿಯನ್ನು (ದಿವ್ಯ ಅಥವಾ ಜಡ ವಸ್ತುವನ್ನು) ಸ್ವಪ್ರಯೋಜನಕ್ಕಾಗಿ ಬಳಸಿಕೊಳ್ಳುವಾಗ ಪರಾಶಕ್ತಿಯು (ಜೀವಿಯು) ತನ್ನ ನಿಜ ಆಧ್ಯಾತ್ಮಿಕ ಮನಸ್ಸು ಮತ್ತು ಬುದ್ಧಿಯನ್ನು ಮರೆಯುತ್ತಾನೆ. ಈ ವಿಸ್ಮೃತಿಗೆ ಜೀವಿಯ ಮೇಲೆ ಜಡವಸ್ತುವಿನ ಪ್ರಭಾವವೇ ಕಾರಣ. ಆದರೆ ಜೀವಿಯು ಭೌತಿಕ ಮಾಯಾ ಶಕ್ತಿಯ ಪ್ರಭಾವದಿಂದ ಮುಕ್ತನಾದಾಗ, ಅವನು ಮುಕ್ತಿ ಎಂಬ ಹಂತವನ್ನು ತಲುಪುತ್ತಾನೆ. ಮಿಥ್ಯಾ ಅಹಂಕಾರವು, ಭೌತಿಕ ಭ್ರಮೆಯ ಪ್ರಭಾವಕ್ಕೆ ಒಳಪಟ್ಟು, "ನಾನು ದ್ರವ್ಯ ಅಥವಾ ಜಡ ವಸ್ತು, ಮತ್ತು ಭೌತಿಕ ಆರ್ಜನೆಗಳೆಲ್ಲಾ ನನ್ನದು," ಎಂದು ಭಾವಿಸುತ್ತಾನೆ. ಅವನು ಎಲ್ಲ ವಿಷಯಗಳಲ್ಲಿ ಭಗವಂತನೊಂದಿಗೆ ಒಂದಾಗುವ ಕಲ್ಪನೆಯೂ ಸೇರಿದಂತೆ, ಎಲ್ಲಾ ಭೌತಿಕ ವಿಚಾರಗಳಿಂದಲೂ ಮುಕ್ತನಾದಾಗ, ಅವನ ವಾಸ್ತವಿಕ ಸ್ಥಿತಿಯ ಸಾಕ್ಷಾತ್ಕಾರವಾಗುತ್ತದೆ. ಆದ್ದರಿಂದ ಜೀವಿಯು ಕೃಷ್ಣನ

ಅನೇಕ ಶಕ್ತಿಗಳಲ್ಲಿ ಒಂದು ಮಾತ್ರ ಎಂಬುದನ್ನು ಗೀತೆಯು ದೃಢಪಡಿಸುತ್ತದೆ ಎಂದು ನಿರ್ಣಯಿಸಬಹುದು; ಮತ್ತು ಈ ಶಕ್ತಿಯು ಭೌತಿಕ ಕಲ್ಮಷದಿಂದ ಮುಕ್ತವಾದಾಗ ಅದು ಪೂರ್ಣ ಕೃಷ್ಣಪ್ರಾಜ್ಞ ಅಥವಾ ಮುಕ್ತವಾಗುತ್ತದೆ.

**ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥ ೬ ॥**

ಏತತ್—ಈ ಎರಡು ಪ್ರಕೃತಿಗಳು, ಯೋನೀನಿ—ಯಾವುದರ ಜನ್ಮ ಆಕರವು, ಭೂತಾನಿ—ಸೃಷ್ಟವಾದ ಪ್ರತಿಯೊಂದರ, ಸರ್ವಾಣಿ—ಎಲ್ಲ, ಇತಿ—ಹೀಗೆ, ಉಪಧಾರಯ—ತಿಳಿ, ಅಹಂ—ನಾನು, ಕೃತ್ಸ್ನಸ್ಯ—ಎಲ್ಲ ಸೇರಿ, ಜಗತಃ—ಜಗತ್ತಿನ, ಪ್ರಭವಃ—ಉದ್ಭೂತಿಯ ಆಕರ, ಪ್ರಲಯಃ—ಲಯವೂ, ತಥಾ—ಹಾಗೂ.

**ಎಲ್ಲಾ ಸೃಷ್ಟ ಜೀವಿಗಳೂ ಈ ಎರಡು ಪ್ರಕೃತಿಗಳಲ್ಲಿ ತಮ್ಮ ಆಕರವನ್ನು ಹೊಂದಿವೆ. ಈ ಜಗತ್ತಿನಲ್ಲಿರುವ ಭೌತಿಕವಾದುದೆಲ್ಲದರ ಮತ್ತು ಆಧ್ಯಾತ್ಮಿಕವಾದುದೆಲ್ಲದರ ಮೂಲವು ಮತ್ತು ಲಯವೂ ನಾನು ಎಂಬುದನ್ನು ನಿಶ್ಚಯವಾಗಿ ತಿಳಿ.**

**ಭಾವಾರ್ಥ :** ಅಸ್ತಿತ್ವದಲ್ಲಿರುವ ಪ್ರತಿಯೊಂದೂ, ಜಡ ಮತ್ತು ಚೇತನದ ಉತ್ಪನ್ನ. ಚೇತನವು ಸೃಷ್ಟಿಯ ಆಧಾರ ಕ್ಷೇತ್ರ, ಮತ್ತು ಜಡವಸ್ತುವು ಚೇತನದಿಂದ ಸೃಷ್ಟ. ಚೇತನವು ಭೌತಿಕ ವರ್ಧನೆಯ ಯಾವುದೋ ಒಂದು ಹಂತದಲ್ಲಿ ಸೃಷ್ಟಿಸಲ್ಪಡುವುದಿಲ್ಲ. ಬದಲಾಗಿ, ಈ ಭೌತಿಕ ಜಗತ್ತು ಆಧ್ಯಾತ್ಮಿಕ ಶಕ್ತಿಯ ಆಧಾರದಿಂದಲೇ ಅಭಿವ್ಯಕ್ತ. ಜಡದಲ್ಲಿ ಚೇತನವು ಇರುವುದರಿಂದ ಈ ಭೌತಿಕ ದೇಹವು ಬೆಳೆದಿದೆ; ಒಂದು ಮಗುವು ಕ್ರಮೇಣ ಹುಡುಗನಾಗಿ ಮತ್ತು ಆಮೇಲೆ ಮಾನವನಾಗಿ ಬೆಳೆಯುತ್ತಾನೆ, ಏಕೆಂದರೆ ಆ ಪರಾ ಶಕ್ತಿಯು, ಚೇತನ ಆತ್ಮನು ಇರುವುದರಿಂದ. ಅದೇ ಪ್ರಕಾರ, ಬೃಹದ್ ವಿಶ್ವದ ಇಡೀ ಉದ್ಭೂತಿಯು ಪರಮಾತ್ಮನಾದ ವಿಷ್ಣುವಿನ ಇರುವಿಕೆಯಿಂದ ಬೆಳೆದಿದೆ. ಆದ್ದರಿಂದ ಈ ಬೃಹದಾಕಾರದ ವಿಶ್ವದ ರೂಪವನ್ನು ಪ್ರಕಟಗೊಳಿಸಲು ಸಂಯೋಗವಾಗುವ ಚೇತನ ಮತ್ತು ಜಡ ವಸ್ತುವು, ಮೂಲತಃ ಭಗವಂತನ ಎರಡು ಶಕ್ತಿಗಳು, ಮತ್ತು ಅದರ ಪರಿಣಾಮವಾಗಿ ಭಗವಂತನು ಪ್ರತಿಯೊಂದರ ಮೂಲ ಕಾರಣನು. ಭಗವಂತನ ವಿಭಿನ್ನಾಂಶ ಭಾಗವು ಎಂದರೆ ಜೀವಿಯು, ದೊಡ್ಡ ಗಗನಚುಂಬಿ ಕಟ್ಟಡದ, ದೊಡ್ಡ ಕಾರ್ಖಾನೆಯ, ಅಥವಾ ಒಂದು ದೊಡ್ಡ ನಗರಕ್ಕೂ ಸಹ ಕಾರಣನಾಗಿರಬಹುದು, ಆದರೆ ಅವನು ಒಂದು ದೊಡ್ಡ ವಿಶ್ವಕ್ಕೆ ಕಾರಣನಾಗಲಾರನು. ಈ ಬೃಹತ್ ವಿಶ್ವಕ್ಕೆ ಕಾರಣನು ಬೃಹತ್ ಆತ್ಮನು, ಅಥವಾ ಪರಮಾತ್ಮನು. ಮತ್ತು ಪರಮನಾದ ಕೃಷ್ಣನು ಬೃಹತ್ ಆತ್ಮನಿಗೂ ಮತ್ತು ವಿಭಿನ್ನಾಂಶ ಆತ್ಮಗಳಿಗೂ ಕಾರಣನು. ಆದ್ದರಿಂದ ಅವನು ಸರ್ವ ಕಾರಣಗಳ ಮೂಲ ಕಾರಣನು. ಇದು ಕಠ ಉಪನಿಷತ್ತಿನಲ್ಲಿ (2. 2. 13), **ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮ್**, ಎಂದು ದೃಢಪಟ್ಟಿದೆ.

**ಮತ್ತಃ ಪರತರಂ ನಾನ್ಯತ್ ಕಿಞ್ಚಿದಸ್ತಿ ಧನಞ್ಜಯ ।**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥ ೭ ॥**

ಮತ್ತಃ—ನನಗೆ ಅತೀತ, ಪರತರಮ್—ಶ್ರೇಷ್ಠತಮ, ನ—ಇಲ್ಲ, **ಅನ್ಯತ್ ಕಿಞ್ಚಿತ್**—ಬೇರೆ ಯಾವುದೂ, ಅಸ್ತಿ—ಇರುವುದು, ಧನಞ್ಜಯ—ಹೇ ಧನಂಜಯನೇ, ಮಯಿ—ನನ್ನಲ್ಲಿ, ಸರ್ವಮ್—ಇರುವುದೆಲ್ಲ, ಇದಮ್—ನಾವು ನೋಡುವ, ಪ್ರೋತಮ್—ಪೋಣಿಸಿದ, ಸೂತ್ರೇ—ದಾರದಲ್ಲಿ, ಮಣಿಗಣಾಃ—ಮುತ್ತುಗಳು, ಇವ—ಹಾಗೆ.

**ಹೇ ಧನಂಜಯನೇ, ನನಗಿಂತ ಶ್ರೇಷ್ಠವಾದ ಸತ್ಯವಿಲ್ಲ. ಮುತ್ತುಗಳು ದಾರದಲ್ಲಿ ಪೋಣಿಸಲ್ಪಟ್ಟಿರುವಂತೆ, ಪ್ರತಿಯೊಂದೂ, ನನ್ನ ಮೇಲೆ ಆಧರಿಸಿದೆ.**

**ಭಾವಾರ್ಥ :** ಪರಮ ಪರಸತ್ಯವು ವ್ಯಕ್ತಿಯೋ ಅಥವಾ ವ್ಯಕ್ತಿಶೂನ್ಯವೋ ಎಂಬ ಬಗ್ಗೆ ಸಾಮಾನ್ಯ ವಿವಾದವಿದೆ. ಭಗವದ್‌ಗೀತೆಯ ಮಟ್ಟಿಗೆ, ಪರಮ ಸತ್ಯವು ದೇವೋತ್ತಮ ಪುರುಷನಾದ ಶ್ರೀಕೃಷ್ಣ, ಮತ್ತು ಇದು ಪ್ರತಿ ಹಂತದಲ್ಲಿಯೂ ದೃಢಪಟ್ಟಿದೆ. ವಿಶೇಷವಾಗಿ ಈ ಶ್ಲೋಕದಲ್ಲಿ, ಪರಮಸತ್ಯವು ಒಬ್ಬ ವ್ಯಕ್ತಿ ಎಂಬುದನ್ನು ಒತ್ತಿ ಹೇಳಿದೆ. ದೇವೋತ್ತಮ ಪುರುಷನು ಪರಮ ಪರಸತ್ಯ ಎಂಬುದು ಬ್ರಹ್ಮ-ಸಂಹಿತೆಯ ದೃಢೀಕರಣವೂ ಆಗಿದೆ: **ಈಶ್ವರಃ ಪರಮಃ ಕೃಷ್ಣಃ ಸಚ್ಚಿದಾನನ್ದ ವಿಗ್ರಹಃ**-ಎಂದರೆ, ಆದಿ ಪುರುಷನೂ, ಸಕಲಾನಂದಗಳ ನಿಧಿಯೂ ಆದ ಗೋವಿಂದನು, ಮತ್ತು ಪೂರ್ಣ ಜ್ಞಾನಾನಂದ ಶಾಶ್ವತ ರೂಪವುಳ್ಳವನೂ ಆದ ಕೃಷ್ಣನು ಪರಮ ಪರಸತ್ಯ ದೇವೋತ್ತಮ ಪುರುಷನು. ಪರಮ ಸತ್ಯವು ಪರಮ ಪುರುಷನು, ಸರ್ವಕಾರಣಗಳ ಕಾರಣನು ಎಂಬುದರಲ್ಲಿ ಈ ಪ್ರಮಾಣಗಳು ಯಾವ ಸಂದೇಹಕ್ಕೂ ಎಡೆಗೊಡುವುದಿಲ್ಲ. ಆದರೆ, ವ್ಯಕ್ತಿ ಶೂನ್ಯವಾದಿಗಳು ಶ್ವೇತಾಶ್ವತರ ಉಪನಿಷತ್ತಿನ (3. 10) : **ತತೋ ಯದ್ ಉತ್ತರತರಂ ತದ್ ಅರೂಪಮ್ ಅನಾಮಯಮ್ ಯ ಏತದ್ ವಿದುರ್ ಅಮೃತಾಸ್ ತೇ ಭವನ್ತಿ ಅಥೇತರೇ ದುಃಖಮ್ ಏವಾಪಿಯನ್ತಿ**, ಎಂಬ ವೇದ ಪಾಠದ ಆಧಾರದ ಮೇಲೆ ವಾದ ಮಾಡುತ್ತಾರೆ. "ಭೌತಿಕ ಜಗತ್ತಿನಲ್ಲಿ ವಿಶ್ವದ ಆದಿ ಜೀವಿಯಾದ ಬ್ರಹ್ಮನನ್ನು ದೇವತೆಗಳಲ್ಲಿ, ಮಾನವರಲ್ಲಿ ಮತ್ತು ಕೀಳು ಪ್ರಾಣಿಗಳಲ್ಲಿ ಪರಮನೆಂದು ತಿಳಿಯಲಾಗಿದೆ. ಆದರೆ ಬ್ರಹ್ಮನಿಗಿಂತ ಮೇಲೆ ದಿವ್ಯನಿದ್ದಾನೆ. ಅವನಿಗೆ ಭೌತಿಕ ರೂಪವಿಲ್ಲ ಮತ್ತು ಸಕಲ ಭೌತಿಕ ಕಲ್ಮಷಗಳಿಂದ ಅವನು ಮುಕ್ತನು. ಅವನನ್ನು ಅರಿಯಬಲ್ಲವನು ಕೂಡ ದಿವ್ಯನಾಗುತ್ತಾನೆ. ಅವನನ್ನು ಅರಿಯದವರು ಭೌತಿಕ ಜಗತ್ತಿನಲ್ಲಿ ಕ್ಲೇಶಗಳನ್ನು ಅನುಭವಿಸುತ್ತಾರೆ."

ವ್ಯಕ್ತಿ ಶೂನ್ಯವಾದಿಯು **ಅರೂಪಮ್** ಎಂಬ ಪದವನ್ನು ಒತ್ತಿ ಹೇಳುತ್ತಾನೆ. ಆದರೆ ಈ **ಅರೂಪಮ್** ಎಂಬುದು ವ್ಯಕ್ತಿ ಶೂನ್ಯವಲ್ಲ. ಅದು, ಮೇಲೆ ಹೇಳಿದ ಬ್ರಹ್ಮ ಸಂಹಿತೆಯಲ್ಲಿ ವರ್ಣಿಸಿದಂತೆ, ನಿತ್ಯ ದಿವ್ಯ ಜ್ಞಾನಾನಂದ ಸ್ವರೂಪವನ್ನು ಸೂಚಿಸುತ್ತದೆ. ಶ್ವೇತಾಶ್ವತರ ಉಪನಿಷತ್ತಿನ ಇತರ ಶ್ಲೋಕಗಳು (3. 8-9) ಇದನ್ನು ಈ ಕೆಳಗಿನಂತೆ ಸಮರ್ಥಿಸುತ್ತವೆ:

ವೇದಾಹಮ್ ಏತಂ ಪುರುಷಂ ಮಹಾನ್ತಮ್।
ಆದಿತ್ಯವರ್ಣಂ ತಮಸಃ ಪರಸ್ತಾತ್॥

ತಮ್ ಏವ ವಿದ್ವಾನ್ ಅತಿ ಮೃತ್ಯುಮ್ ಏತಿ
ನಾನ್ಯಃ ಪನ್ಥಾ ವಿದ್ಯತೇಽಯನಾಯ
ಯಸ್ಮಾತ್ ಪರಂ ನಾಪರಮ್ ಅಸ್ತಿ ಕಿಞ್ಚಿದ್
ಯಸ್ಮಾನ್ ನಾಣೀಯೋ ನೋ ಜ್ಯಾಯೋಽಸ್ತಿ ಕಿಞ್ಚಿತ್
ವೃಕ್ಷ ಇವ ಸ್ತಬ್ಧೋ ದಿವಿ ತಿಷ್ಠತಿ ಏಕಸ್
ತೇನೇದಂ ಪೂರ್ಣಂ ಪುರುಷೇಣ ಸರ್ವಮ್

"ಅಂಧಕಾರದ ಎಲ್ಲ ಭೌತಿಕ ಕಲ್ಪನೆಗಳಿಗೆ ಅತೀತನಾದ ಪರಮದೇವೋತ್ತಮ ಪುರುಷನನ್ನು ನಾನು ಬಲ್ಲೆ. ಅವನನ್ನು ತಿಳಿದವನು ಮಾತ್ರ ಜನನ ಮರಣದ ಬಂಧನಗಳನ್ನು ದಾಟಬಲ್ಲನು. ಆ ಪರಮ ಪುರುಷನ ಈ ಜ್ಞಾನದ ಹೊರತು ಮೋಕ್ಷಕ್ಕೆ ಬೇರೆ ಮಾರ್ಗವಿಲ್ಲ.

"ಆ ಪರಮ ಪುರುಷನಿಗಿಂತ ಶ್ರೇಷ್ಠವಾದ ಸತ್ಯವಿಲ್ಲ, ಏಕೆಂದರೆ ಅವನು ಪರಮತಮನು. ಅವನು ಅತಿ ಚಿಕ್ಕದಕ್ಕಿಂತ ಚಿಕ್ಕವನು, ಮತ್ತು ಅವನು ಮಹತ್ತಿಗಿಂತ ಮಹತ್ತಮನು. ಅವನು ಮೌನ ವೃಕ್ಷದಂತೆ ಸನ್ನಿವೇಶಿತನು, ಮತ್ತು ಅವನು ದಿವ್ಯಾಕಾಶವನ್ನು ಬೆಳಗುವನು, ಮತ್ತು ವೃಕ್ಷವು ತನ್ನ ಬೇರುಗಳನ್ನು ಹರಡುವಂತೆ ಅವನು ತನ್ನ ವ್ಯಾಪಕ ಶಕ್ತಿಗಳನ್ನು ಪ್ರಸರಿಸುವನು."

ಈ ಶ್ಲೋಕಗಳಿಂದ ಪರಮ ಪರಸತ್ಯವು ಪರಮ ದೇವೋತ್ತಮ ಪುರುಷನೆಂದು ಒಬ್ಬನು ನಿರ್ಣಯಿಸುತ್ತಾನೆ; ಆ ಪರಮದೇವೋತ್ತಮ ಪುರುಷನು ತನ್ನ ಅನೇಕ ಶಕ್ತಿಗಳಿಂದ ಭೌತಿಕ ಮತ್ತು ಆಧ್ಯಾತ್ಮಿಕ—ಎಲ್ಲವನ್ನೂ ವ್ಯಾಪಿಸಿರುವನು.

**ರಸೋಽಹಮಪ್ಸು ಕೌನ್ತೇಯ ಪ್ರಭಾಸ್ಮಿ ಶಶಿಸೂರ್ಯಯೋಃ ।**
**ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು ॥ ೮ ॥**

ರಸಃ—ರುಚಿ, ಅಹಂ—ನಾನು, ಅಪ್ಸು—ನೀರಿನಲ್ಲಿನ, ಕೌನ್ತೇಯ—ಹೇ ಕುಂತಿ ಪುತ್ರನೇ, ಪ್ರಭಾ—ಬೆಳಕು, ಅಸ್ಮಿ—ಆಗಿದ್ದೇನೆ, ಶಶಿಸೂರ್ಯಯೋಃ—ಚಂದ್ರ ಮತ್ತು ಸೂರ್ಯರ, ಪ್ರಣವಃ—ಅ-ಉ-ಮ ಎಂಬ ಮೂರು ಅಕ್ಷರಗಳು, ಸರ್ವ—ಎಲ್ಲದರಲ್ಲಿ, ವೇದೇಷು—ವೇದಗಳು, ಶಬ್ದಃ—ಶಬ್ದ ಕಂಪನವು, ಖೇ—ಆಕಾಶದಲ್ಲಿ, ಪೌರುಷಂ—ಸಾಮರ್ಥ್ಯ, ನೃಷು—ಮಾನವರಲ್ಲಿ.

**ಹೇ ಕುಂತೀಪುತ್ರನೇ, ನಾನು ನೀರಿನ ರುಚಿ, ಸೂರ್ಯ ಚಂದ್ರರ ಬೆಳಕು, ವೇದ ಮಂತ್ರಗಳಲ್ಲಿನ ಓಂಕಾರ, ಆಕಾಶದಲ್ಲಿನ ಶಬ್ದ ಮತ್ತು ಮಾನವನಲ್ಲಿನ ಸಾಮರ್ಥ್ಯ ಆಗಿದ್ದೇನೆ.**

**ಭಾವಾರ್ಥ :** ಈ ಶ್ಲೋಕವು ಭಗವಂತನು ತನ್ನ ವಿವಿಧ ಭೌತಿಕ ಮತ್ತು ಆಧ್ಯಾತ್ಮ ಶಕ್ತಿಗಳಿಂದ ಹೇಗೆ ಸರ್ವವ್ಯಾಪ್ತನು ಎಂಬುದನ್ನು ವಿವರಿಸುತ್ತದೆ. ಪರಮ ಪ್ರಭುವನ್ನು ಪ್ರಾರಂಭಿಕವಾಗಿ ಅವನ ಭಿನ್ನ ಭಿನ್ನ ಶಕ್ತಿಗಳಿಂದ ಅರಿಯಬಹುದು, ಮತ್ತು ಈ ರೀತಿಯಲ್ಲಿ ಅವನು ವ್ಯಕ್ತಿತ್ವರಹಿತನಾಗಿ ಸಾಕ್ಷಾತ್ಕೃತನು. ಹೇಗೆ ಸೂರ್ಯನಲ್ಲಿರುವ ದೇವತೆಯು ಒಬ್ಬ ವ್ಯಕ್ತಿಯಾಗಿರುವನೋ, ಮತ್ತು ಅವನ ಸರ್ವವ್ಯಾಪ್ತ ಶಕ್ತಿಯಾದ ಸೂರ್ಯಪ್ರಕಾಶ

**ದಿಂದ** ಕಾಣಲ್ಪಡುವನೋ, ಹಾಗೆಯೇ ಭಗವಂತನು ತನ್ನ ನಿತ್ಯ ಧಾಮದಲ್ಲಿದ್ದರೂ, **ಅವ**ನ ಸರ್ವವ್ಯಾಪ್ತ ವಿಸ್ತರಿಸುವ ಶಕ್ತಿಗಳಿಂದ ಕಾಣಲ್ಪಡುವನು. ನೀರಿನ **ರುಚಿಯು** ನೀರಿನ ಸತ್ವಾಂಶ. ಸಮುದ್ರದ ನೀರನ್ನು ಯಾರೂ ಕುಡಿಯಬಯಸುವುದಿಲ್ಲ, ಏಕೆಂದರೆ ನೀರಿನ ಶುದ್ಧ ರುಚಿಯು ಉಪ್ಪಿನೊಂದಿಗೆ ಮಿಶ್ರಿತವಾಗಿದೆ. ನೀರಿಗಾಗಿ ಆಕರ್ಷಣೆಯು ರುಚಿಯ ಶುದ್ಧತೆಯನ್ನು ಅವಲಂಬಿಸಿದೆ, ಮತ್ತು ಈ ಶುದ್ಧ ರುಚಿಯು ಭಗವಂತನ ಶಕ್ತಿಗಳಲ್ಲಿ ಒಂದು. ವ್ಯಕ್ತಿ ಶೂನ್ಯವಾದಿಯು ನೀರಿನಲ್ಲಿ ಭಗವಂತನ ಇರುವಿಕೆಯನ್ನು ಅದರ ರುಚಿಯಿಂದ ಕಾಣುತ್ತಾನೆ, ಮತ್ತು ಭಕ್ತನು ಸಹ ಮನುಷ್ಯನ ಬಾಯಾರಿಕೆಯನ್ನು ತಣಿಸಲು ರುಚಿಕರ ನೀರನ್ನು ದಯೆಯಿಂದ ಒದಗಿಸಿದ್ದಕ್ಕಾಗಿ ಭಗವಂತನನ್ನು ಕೊಂಡಾಡುತ್ತಾನೆ. ಅದುವೇ ಪರಮನನ್ನು ಕಾಣುವ ರೀತಿ. ವಾಸ್ತವಿಕವಾಗಿ ಹೇಳುವುದಾದರೆ, ವ್ಯಕ್ತಿವಾದ ಮತ್ತು ವ್ಯಕ್ತಿಶೂನ್ಯವಾದಗಳ ನಡುವೆ ವಿರೋಧವೇನೂ ಇಲ್ಲ. ದೇವರನ್ನು ತಿಳಿದವನು, ವ್ಯಕ್ತಿಶೂನ್ಯ ಕಲ್ಪನೆ ಮತ್ತು ವ್ಯಕ್ತಿ ಕಲ್ಪನೆಗಳು ಏಕಕಾಲದಲ್ಲಿ ಪ್ರತಿಯೊಂದರಲ್ಲಿ ಇವೆ ಮತ್ತು ಪರಸ್ಪರ ವಿರೋಧವಿಲ್ಲ ಎಂಬುದನ್ನು ತಿಳಿದಿರುತ್ತಾನೆ. ಆದ್ದರಿಂದ ಭಗವಾನ್ ಚೈತನ್ಯರು ತಮ್ಮ ಮಹೋನ್ನತ ಸಿದ್ಧಾಂತವಾದ—ಅಚಿಂತ್ಯ ಭೇದ ಮತ್ತು ಅಭೇದ ತತ್ವ—ಏಕಕಾಲದಲ್ಲಿನ ಏಕತ್ವ ಮತ್ತು ಭೇದ ಎಂಬುದನ್ನು ಸ್ಥಾಪಿಸಿದರು.

ಸೂರ್ಯ ಮತ್ತು ಚಂದ್ರರ ಬೆಳಕೂ ಸಹ ಭಗವಂತನ ವ್ಯಕ್ತಿಶೂನ್ಯ ಪ್ರಕಾಶವಾದ **ಬ್ರಹ್ಮಜ್ಯೋತಿ**ಯಿಂದ ಮೂಲತಃ ಉಗಮಿಸುತ್ತದೆ. ಮತ್ತು **ಪ್ರಣವ** ಅಥವಾ ಪ್ರತಿಯೊಂದು ವೇದ ಮಂತ್ರ ಪ್ರಾರಂಭದಲ್ಲಿನ **ಓಂಕಾರ** ದಿವ್ಯ ಶಬ್ದವು ಪರಮ ಪ್ರಭುವನ್ನು ಸಂಬೋಧಿಸುತ್ತದೆ. ವ್ಯಕ್ತಿಶೂನ್ಯವಾದಿಗಳು ಪರಮ ಪ್ರಭು ಕೃಷ್ಣನನ್ನು ಅವನ ಅಸಂಖ್ಯ ನಾಮಗಳಿಂದ ಸಂಬೋಧಿಸಲು ಬಹಳ ಭಯಪಡುವುದರಿಂದ, ಅವರು ದಿವ್ಯ ಶಬ್ದವಾದ **ಓಂಕಾರ**ವನ್ನು ಉಚ್ಚರಿಸಲು ಬಯಸುತ್ತಾರೆ. ಆದರೆ **ಓಂಕಾರ**ವು ಕೃಷ್ಣನ ಶಬ್ದ ಪ್ರತಿನಿಧಿ ಎಂಬುದನ್ನು ಅವರು ತಿಳಿದಿರುವುದಿಲ್ಲ. ಕೃಷ್ಣಪ್ರಜ್ಞೆಯ ವ್ಯಾಪ್ತಿಯು ಎಲ್ಲೆಲ್ಲಿಯೂ ವಿಸ್ತೃತವಾಗಿದೆ. ಮತ್ತು ಕೃಷ್ಣ ಪ್ರಜ್ಞೆಯನ್ನು ಬಲ್ಲವನು ಧನ್ಯನು. ಕೃಷ್ಣನನ್ನು ತಿಳಿಯದವರು ಭ್ರಮೆಯಲ್ಲಿದ್ದಾರೆ. ಆದ್ದರಿಂದ ಕೃಷ್ಣ ಜ್ಞಾನವು ವಿಮೋಚನೆ, ಮತ್ತು ಅವನ ಅಜ್ಞಾನವು ಬಂಧನ.

**ಪುಣ್ಯೋ ಗನ್ಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ ।**
**ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ॥ ೯ ॥**

ಪುಣ್ಯಃ—ಮೂಲ, ಗನ್ಧಃ—ಸುವಾಸನೆಯು, ಪೃಥಿವ್ಯಾಮ್—ಭೂಮಿಯಲ್ಲಿನ, ಚ—ಕೂಡ, ತೇಜಃ—ಶಾಖ, ಚ—ಕೂಡ, ಅಸ್ಮಿ—ನಾನು ಆಗಿದ್ದೇನೆ, ವಿಭಾವಸೌ—ಅಗ್ನಿಯಲ್ಲಿ, ಜೀವನಮ್—ಜೀವನವು, ಸರ್ವ—ಎಲ್ಲ, ಭೂತೇಷು—ಜೀವಿಗಳು, ತಪಃ—ತಪಸ್ಸು, ಚ—ಕೂಡ, ಅಸ್ಮಿ—ಆಗಿದ್ದೇನೆ, ತಪಸ್ವಿಷು—ತಪಸ್ವಿಗಳಲ್ಲಿ.

**ನಾನು ಭೂಮಿಯ ಮೂಲ ಸುವಾಸನೆ, ಮತ್ತು ಅಗ್ನಿಯಲ್ಲಿನ ಶಾಖ ಆಗಿದ್ದೇನೆ. ನಾನು ಜೀವಿಸುವುದರೆಲ್ಲದರ ಜೀವವಾಗಿದ್ದೇನೆ, ಮತ್ತು ನಾನು ತಪಸ್ವಿಗಳೆಲ್ಲರ ತಪಸ್ಸು ಆಗಿದ್ದೇನೆ.**

**ಭಾವಾರ್ಥ : ಪುಣ್ಯ** ಎಂದರೆ ಕೊಳೆತು ಹೋಗದಿರುವುದು; **ಪುಣ್ಯವು** ಮೂಲವಾದುದು. ಹೂವಿನಲ್ಲಿ, ಭೂಮಿಯಲ್ಲಿ, ನೀರಿನಲ್ಲಿ, ಅಗ್ನಿಯಲ್ಲಿ, ಗಾಳಿಯಲ್ಲಿ, ಮುಂತಾದವುಗಳಲ್ಲಿ ವಿಶಿಷ್ಟ ರುಚಿ ಅಥವಾ ಗಂಧವು ಇರುವಂತೆ, ಈ ಭೌತಿಕ ಜಗತ್ತಿನ ಪ್ರತಿಯೊಂದರಲ್ಲಿಯೂ ವಿಶಿಷ್ಟ ರುಚಿ ಅಥವಾ ಗಂಧವು ಇರುವುದು. ಪ್ರತಿಯೊಂದನ್ನು ವ್ಯಾಪಿಸಿರುವ ಅಕಲುಷಿತ ವಾಸನೆ ಅಥವಾ ಮೂಲ ವಾಸನೆಯು ಕೃಷ್ಣ. ಆದರಂತೆಯೇ ಪ್ರತಿಯೊಂದೂ ವಿಶಿಷ್ಟ ಮೂಲ ರುಚಿ ಹೊಂದಿರುತ್ತದೆ ಮತ್ತು ಈ ರುಚಿಯನ್ನು ರಾಸಾಯನಿಕ ವಸ್ತುಗಳ ಮಿಶ್ರಣದಿಂದ ಬದಲಾಯಿಸಬಹುದು. ಹೀಗೆ ಮೂಲವಾದ ಪ್ರತಿಯೊಂದೂ ಯಾವುದೋ ವಾಸನೆ, ಯಾವುದೋ ಸುಗಂಧ, ಮತ್ತು ಯಾವುದೋ ರುಚಿಯನ್ನು ಹೊಂದಿರುತ್ತದೆ. **ವಿಭಾವಸು** ಎಂದರೆ ಅಗ್ನಿ. ಅಗ್ನಿಯಿಲ್ಲದೆ ನಾವು ಕಾರ್ಖಾನೆಗಳನ್ನು ನಡೆಸಲಾರೆವು, ಅಡಿಗೆ ಇತ್ಯಾದಿ ಮಾಡಲಾರೆವು, ಮತ್ತು ಆ ಅಗ್ನಿಯು ಕೃಷ್ಣ. ಅಗ್ನಿಯಲ್ಲಿರುವ ಶಾಖವು ಕೃಷ್ಣ. ವೈದಿಕ ವೈದ್ಯಶಾಸ್ತ್ರಾನುಸಾರ ಅಜೀರ್ಣಕ್ಕೆ ಹೊಟ್ಟೆಯಲ್ಲಿನ ಕಡಿಮೆ ಶಾಖವೇ ಕಾರಣ. ಹೀಗೆ ಜೀರ್ಣಕ್ಕೂ ಕೂಡಾ ಅಗ್ನಿಯು ಅವಶ್ಯಕ. ಕೃಷ್ಣಪ್ರಜ್ಞೆಯಲ್ಲಿ ಭೂಮಿ, ನೀರು, ಬೆಂಕಿ, ಗಾಳಿ ಮತ್ತು ಪ್ರತಿಯೊಂದು ಸತ್ವಾಂಶಗಳಿಗೂ, ಎಲ್ಲ ರಾಸಾಯನಿಕ ವಸ್ತುಗಳಿಗೂ ಮತ್ತು ಎಲ್ಲ ಭೌತಿಕ ಅಂಶಗಳಿಗೂ ಕೃಷ್ಣನೇ ನಿಮಿತ್ತ ಎಂದು ನಾವು ಅರಿಯುತ್ತೇವೆ. ಮಾನವನ ಆಯಸ್ಸಿಗೂ ಸಹ ಕೃಷ್ಣನೇ ನಿಮಿತ್ತ. ಆದ್ದರಿಂದ ಕೃಷ್ಣಾನುಗ್ರಹದಿಂದ ಮಾನವನು ತನ್ನ ಆಯಸ್ಸನ್ನು ಹೆಚ್ಚಿಸಬಹುದು ಅಥವಾ ಕುಗ್ಗಿಸಬಹುದು. ಆದ್ದರಿಂದ ಕೃಷ್ಣಪ್ರಜ್ಞೆಯು ಪ್ರತಿಯೊಂದು ವಲಯದಲ್ಲಿಯೂ ಕ್ರಿಯಾಶೀಲವಾಗಿರುತ್ತದೆ.

**ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ ಸನಾತನಮ್ ।**
**ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ॥ ೧೦ ॥**

ಬೀಜಮ್—ಬೀಜ, ಮಾಮ್—ನಾನು, ಸರ್ವಭೂತಾನಾಮ್—ಎಲ್ಲ ಜೀವಿಗಳ, ವಿದ್ಧಿ—ಅರಿಯಲೆತ್ನಿಸು, ಪಾರ್ಥ—ಪೃಥಾ ಪುತ್ರನೇ, ಸನಾತನಮ್—ಮೂಲ, ಶಾಶ್ವತ, ಬುದ್ಧಿಃ—ಬುದ್ಧಿಯು, ಬುದ್ಧಿಮತಾಮ್—ಬುದ್ಧಿವಂತರ, ಅಸ್ಮಿ—ನಾನು ಆಗಿದ್ದೇನೆ, ತೇಜಃ—ಶೌರ್ಯ, ತೇಜಸ್ವಿನಾಮ್—ಬಲಿಷ್ಠರಲ್ಲಿ, ಅಹಮ್—ನಾನು.

**ಹೇ ಪೃಥಾ ಪುತ್ರನೇ, ನಾನು ಎಲ್ಲ ಅಸ್ತಿತ್ವಗಳ ಮೂಲ ಬೀಜವು, ಬುದ್ಧಿವಂತರ ಬುದ್ಧಿಯು, ಮತ್ತು ಶೌರ್ಯವಂತರೆಲ್ಲರ ಶೌರ್ಯವು ಆಗಿದ್ದೇನೆ ಎಂದು ತಿಳಿ.**

**ಭಾವಾರ್ಥ: ಬೀಜಮ್** ಎಂದರೆ ಬೀಜ; ಕೃಷ್ಣನು ಪ್ರತಿಯೊಂದರ ಬೀಜ. ಚರ ಮತ್ತು ಸ್ಥಿರ, ಹೀಗೆ ಅನೇಕ ಬಗೆಯ ಜೀವಿಗಳಿದ್ದಾರೆ. ಪಕ್ಷಿಗಳು, ಪ್ರಾಣಿಗಳು, ಮಾನವರು ಮತ್ತು ಅನೇಕ ಇತರ ಜೀವ ಜಂತುಗಳು ಚಲಿಸುವ ಜೀವಿಗಳು; ಮರಗಳು ಮತ್ತು ಗಿಡಗಳಾದರೋ ಜಡ—ಅವು ಚಲಿಸಲಾರವು, ಕೇವಲ ನಿಂತಿರಬಲ್ಲವು. ಪ್ರತಿಯೊಂದು ಜೀವಿಯು 8,400,000 ಜೀವಯೋನಿಗಳ ವ್ಯಾಪ್ತಿಯಲ್ಲಿ ಸೇರಿದ್ದಾನೆ; ಅವುಗಳಲ್ಲಿ ಕೆಲವು ಚಲಿಸುತ್ತವೆ ಮತ್ತು ಕೆಲವು ನಿಶ್ಚಲ. ಆದರೆ ಎಲ್ಲ ಸಂದರ್ಭಗಳಲ್ಲಿಯೂ

ಕೃಷ್ಣನು ಅವುಗಳ ಜೀವಬೀಜ. ವೇದಸಾಹಿತ್ಯದಲ್ಲಿ ಹೇಳಿದಂತೆ, **ಬ್ರಹ್ಮನ್** ಅಥವಾ ಪರಮ ಪರಸತ್ಯದಿಂದ ಪ್ರತಿಯೊಂದೂ ಉಗಮಿಸುತ್ತದೆ. ಕೃಷ್ಣನೇ ಪರಮಚೇತನನಾದ **ಪರಬ್ರಹ್ಮನ್. ಬ್ರಹ್ಮನ್** ನಿರಂತರ ಮತ್ತು ವ್ಯಕ್ತಿತ್ವರಹಿತ ಮತ್ತು **ಪರಬ್ರಹ್ಮನ್** ಸಾಕಾರ ಮತ್ತು ವ್ಯಕ್ತಿತ್ವವುಳ್ಳವನು. ವ್ಯಕ್ತಿಶೂನ್ಯ ಬ್ರಹ್ಮನ್ ಸಾಕಾರ ಅಂಶದಲ್ಲಿ ಸನ್ನಿವೇಶಿತವಾಗಿದೆ.—ಹೀಗೆಂದು ಭಗವದ್ಗೀತೆಯಲ್ಲಿ ಹೇಳಿದೆ. ಆದುದರಿಂದ ಮೂಲತಃ, ಕೃಷ್ಣನು ಪ್ರತಿಯೊಂದರ ಆಕರ. ಅವನು ಬೇರು. ಹೇಗೆ ಮರದ ಬೇರು **ಇಡೀ** ಮರವನ್ನೇ ಪೋಷಿಸುವುದೋ ಹಾಗೆ. ಎಲ್ಲ ವಸ್ತುಗಳ ಮೂಲ ಬೇರಾಗಿರುವ ಕೃಷ್ಣನು, ಈ ಭೌತಿಕ ಉದ್ಭೂತಿಯಲ್ಲಿನ ಪ್ರತಿಯೊಂದನ್ನೂ ಪೋಷಿಸುತ್ತಾನೆ. ಇದು ವೇದ ಸಾಹಿತ್ಯ ದಲ್ಲಿ (ಕಠಉಪನಿಷದ್—2. 2. 13) ಸಹ ದೃಢಪಟ್ಟಿದೆ:

ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮ್
ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್

ಅವನು ಎಲ್ಲ ನಿತ್ಯವಾದುವುಗಳಲ್ಲಿ ಪ್ರಧಾನ ನಿತ್ಯನು. ಅವನು ಸಕಲ ಜೀವಿಗಳಲ್ಲಿ ಪರಮನು, ಮತ್ತು ಅವನೊಬ್ಬನೇ ಎಲ್ಲ ಜೀವ ಪೋಷಕನು. ಬುದ್ಧಿ ಇಲ್ಲದೆ ಯಾರೂ ಏನೂ ಮಾಡಲಾರರು, ಮತ್ತು ತಾನು ಎಲ್ಲ ಬುದ್ಧಿಯ ಮೂಲ ಎಂದೂ ಕೃಷ್ಣನು ಹೇಳುತ್ತಾನೆ. ಒಬ್ಬನು ಬುದ್ಧಿವಂತನಾಗಿದ್ದ ಹೊರತು, ಅವನು ಪರಮದೇವೋತ್ತಮ ಪುರುಷ, ಕೃಷ್ಣನನ್ನು ಅರಿಯಲಾರನು.

**ಬಲಂ ಬಲವತಾಂ ಚಾಹಂ ಕಾಮರಾಗವಿವರ್ಜಿತಮ್ ।**
**ಧರ್ಮಾವಿರುದ್ಧೋ ಭೂತೇಷು ಕಾಮೋಸ್ಮಿ ಭರತರ್ಷಭ ॥ ೧೧ ॥**

ಬಲಮ್—ಬಲವು, ಬಲವತಾಂ—ಬಲವಂತರ, ಚ—ಮತ್ತು, ಅಹಮ್—ನಾನು ಕಾಮ—ಕಾಮ, ರಾಗ—ಮತ್ತು ಆಸಕ್ತಿ, ವಿವರ್ಜಿತಮ್—ರಹಿತವಾದ, ಧರ್ಮ ಅವಿರುದ್ಧಃ—ಧರ್ಮತತ್ವಗಳಿಗೆ ವಿರುದ್ಧವಲ್ಲದ, ಭೂತೇಷು—ಎಲ್ಲ ಜೀವರಲ್ಲಿ, ಕಾಮಃ—ಲೈಂಗಿಕ ಜೀವನ, ಅಸ್ಮಿ—ನಾನು ಆಗಿದ್ದೇನೆ, ಭರತ ಋಷಭ—ಹೇ ಭರತ ಶ್ರೇಷ್ಠನೇ.

**ರಾಗ ಮತ್ತು ಕಾಮ ವಿವರ್ಜಿತ ಬಲವಂತರ ಬಲವು ನಾನು. ಹೇ ಭರತ ಶ್ರೇಷ್ಠನೇ (ಅರ್ಜುನ), ನಾನು ಧರ್ಮ ತತ್ವಗಳಿಗೆ ವಿರುದ್ಧವಲ್ಲದ ಲೈಂಗಿಕ ಜೀವನವು ಆಗಿದ್ದೇನೆ.**

**ಭಾವಾರ್ಥ :** ಬಲವಂತನ ಬಲವು, ವೈಯಕ್ತಿಕ ಆಕ್ರಮಣಕ್ಕಾಗಿ ಪ್ರಯೋಗಿಸಲ್ಪಡದೆ ದುರ್ಬಲರನ್ನು ರಕ್ಷಿಸಲು ವಿನಿಯೋಗವಾಗಬೇಕು. ಅದೇ ಪ್ರಕಾರ, ಲೈಂಗಿಕ ಜೀವನವು ಧರ್ಮತತ್ವಾನುಸಾರ, ಸಂತಾನಾಭಿವೃದ್ಧಿಗಾಗಿ ಇರಬೇಕು, ಅನ್ಯಥಾ ಅಲ್ಲ. ತಮ್ಮ ಮಕ್ಕಳು ಕೃಷ್ಣಪ್ರಾಜ್ಞಿಗಳಾಗುವಂತೆ ಮಾಡುವುದು ಆಗ ತಂದೆ ತಾಯಿಗಳ ಜವಾಬ್ದಾರಿ.

**ಯೇ ಚೈವ ಸಾತ್ತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ ।**
**ಮತ್ತ ಏವೇತಿ ತಾನ್ ವಿದ್ಧಿ ನ ತ್ವಹಂ ತೇಷು ತೇ ಮಯಿ ॥ ೧೨ ॥**

ಯೇ—ಯಾವುದೆಲ್ಲ, ಚ—ಮತ್ತು, ಏವ—ಖಂಡಿತವಾಗಿ, ಸಾತ್ತ್ವಿಕಾಃ—ಸಾತ್ತ್ವಿಕತೆಯಲ್ಲಿ, ಭಾವಾಃ—ಭಾವಗಳಲ್ಲಿ, ರಾಜಸಾಃ—ರಜೋ ಗುಣದಲ್ಲಿ, ತಾಮಸಾಃ—ತಮೋ ಗುಣದಲ್ಲಿ, ಚ—ಕೂಡ, ಯೇ—ಯಾವುದೆಲ್ಲ, ಮತ್ತಃ—ನನ್ನಿಂದ, ಏವ—ಖಂಡಿತವಾಗಿ ಇತಿ—ಹೀಗೆ, ತಾನ್—ಅವು, ವಿದ್ಧಿ—ತಿಳಿಯಲೆತ್ನಿಸು. ನ—ಇಲ್ಲ, ತು—ಆದರೆ, ಅಹಮ್—ನಾನು, ತೇಷು—ಅವುಗಳಲ್ಲಿ, ತೇ—ಅವು, ಮಯಿ—ನನ್ನಲ್ಲಿ.

**ಸಾತ್ತ್ವಿಕ, ರಾಜಸ ಅಥವಾ ತಾಮಸದಲ್ಲಿ—ಇರುವ ಎಲ್ಲ ಅವಸ್ಥೆಗಳು ನನ್ನ ಶಕ್ತಿಯಿಂದ ಉದ್ಭೂತವೆಂದು ತಿಳಿ. ಒಂದು ಅರ್ಥದಲ್ಲಿ. ನಾನು ಪ್ರತಿಯೊಂದೂ ಆಗಿದ್ದೇನೆ, ಆದರೆ ನಾನು ಸ್ವತಂತ್ರ. ನಾನು ಭೌತಿಕ ಪ್ರಕೃತಿ ಗುಣಾಧೀನನಲ್ಲ ಏಕೆಂದರೆ ಪ್ರತಿಯಾಗಿ ಅವು ನನ್ನಲ್ಲಿವೆ.**

**ಭಾವಾರ್ಥ:** ಜಗತ್ತಿನಲ್ಲಿ ಎಲ್ಲ ಭೌತಿಕ ಚಟುವಟಿಕೆಗಳು ಭೌತಿಕ ಪ್ರಕೃತಿಯ ತ್ರಿಗುಣಗಳಿಗೆ ಒಳಪಟ್ಟು ನಡೆಯುತ್ತಿವೆ. ಈ ಭೌತಿಕ ಪ್ರಕೃತಿಯ ಗುಣಗಳು ಪರಮ ಪ್ರಭು, ಕೃಷ್ಣನಿಂದ ಉಗಮಗಳಾಗಿದ್ದರೂ, ಅವನು ಅವುಗಳಿಗೆ ಒಳಪಟ್ಟಿಲ್ಲ. ಉದಾಹರಣೆಗೆ, ರಾಜ್ಯಶಾಸನಾನುಸಾರ, ಒಬ್ಬನು ಶಿಕ್ಷಿಸಲ್ಪಡಬಹುದು, ಆದರೆ ಶಾಸನಕರ್ತನಾದ ರಾಜನು ಆ ಶಾಸನಕ್ಕೆ ಒಳಪಡುವುದಿಲ್ಲ. ಅದೇ ಪ್ರಕಾರ ಎಲ್ಲ ಭೌತಿಕ ಪ್ರಕೃತಿ ಗುಣಗಳು—ಸಾತ್ತ್ವಿಕ, ರಾಜಸ ಮತ್ತು ತಾಮಸ—ಪರಮಪ್ರಭು ಕೃಷ್ಣನಿಂದ ಉಗಮ; ಆದರೆ ಕೃಷ್ಣನು ಭೌತಿಕ ಪ್ರಕೃತಿಗಳಿಗೆ ವಶನಲ್ಲ. ಆದ್ದರಿಂದ ಅವನು **ನಿರ್ಗುಣ,** ಎಂದರೆ ಈ ಗುಣಗಳು ಅವನಿಂದ ಉಗಮಿಸುತ್ತಿದ್ದರೂ ಅವನನ್ನು ಬಾಧಿಸುವುದಿಲ್ಲ. ಅದು ಭಗವಾನ್, ಅಥವಾ ಪರಮದೇವೋತ್ತಮ ಪುರುಷನ ವಿಶೇಷ ಲಕ್ಷಣಗಳಲ್ಲಿ ಒಂದು.

**ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್ ।**
**ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಮ್ ॥ ೧೩ ॥**

ತ್ರಿಭಿಃ—ಮೂರು, ಗುಣಮಯೈಃ—ಗುಣಗಳಿಂದ ಕೂಡಿರುವ, ಭಾವೈಃ—ಇರುವ ಅವಸ್ಥೆಗಳಿಂದ, ಏಭಿಃ—ಈ ಎಲ್ಲ, ಸರ್ವಮ್—ಸರ್ವ, ಇದಮ್—ಈ, ಜಗತ್—ಜಗತ್ತು, ಮೋಹಿತಮ್—ಮೋಹಿತ, ನ ಅಭಿಜಾನಾತಿ—ತಿಳಿಯುವುದಿಲ್ಲ, ಮಾಮ್—ನನ್ನನ್ನು, ಏಭ್ಯಃ—ಇವೆಲ್ಲವುಗಳಿಗೆ ಮೇಲೆ, ಪರಮ್—ಪರಮ, ಅವ್ಯಯಮ್—ಅವ್ಯಯನಾದ.

**ಮೂರು ಗುಣಗಳಿಂದ (ಸಾತ್ತ್ವಿಕ, ರಾಜಸ ಮತ್ತು ತಾಮಸ) ಮೋಹಿತವಾಗಿ, ಗುಣಾತೀತನು ಮತ್ತು ಅವ್ಯಯನಾಗಿರುವ ನನ್ನನ್ನು ಇಡೀ ಜಗತ್ತು ತಿಳಿಯುವುದಿಲ್ಲ.**

**ಭಾವಾರ್ಥ :** ಇಡೀ ಜಗತ್ತು ಭೌತಿಕ ಪ್ರಕೃತಿಯ ತ್ರಿಗುಣಗಳಿಂದ ಮೋಹಿತವಾಗಿದೆ. ಈ ತ್ರಿಗುಣಗಳಿಂದ ದಿಗ್ಭ್ರಮಿತರು ಈ ಭೌತಿಕ ಪ್ರಕೃತಿಗೆ ಅತೀತನಾದ ಪರಮ ಪ್ರಭು, ಕೃಷ್ಣನಿದ್ದಾನೆ ಎಂಬುದನ್ನು ಅರಿಯಲಾರರು.

ಪ್ರತಿಯೊಂದು ಜೀವಿಯೂ ಭೌತಿಕ ಪ್ರಕೃತಿಯ ಪ್ರಭಾವಕ್ಕೆ ಒಳಪಟ್ಟು ಒಂದು ವಿಶಿಷ್ಟ ಮಾದರಿಯ ದೇಹ ಮತ್ತು ಅದಕ್ಕೆ ಅನುಸಾರವಾದ ವಿಶಿಷ್ಟ ಮಾದರಿಯ

ಮಾನಸಿಕ ಮತ್ತು ಶಾರೀರಿಕ ಚಟುವಟಿಕೆಗಳನ್ನು ಹೊಂದಿರುತ್ತಾನೆ. ಈ ಮೂರು ಭೌತಿಕ ಪ್ರಕೃತಿ ಗುಣಗಳಲ್ಲಿ ನಾಲ್ಕು ವರ್ಗಗಳ ಜನರು ಕಾರ್ಯಪ್ರವೃತ್ತರಾಗಿದ್ದಾರೆ. ಪೂರ್ಣವಾಗಿ ಸತ್ವಗುಣದಲ್ಲಿರುವವರು ಬ್ರಾಹ್ಮಣರು. ಪೂರ್ಣವಾಗಿ ರಜೋಗುಣದಲ್ಲಿರುವವರು ಕ್ಷತ್ರಿಯರು. ರಜೋಗುಣ ಮತ್ತು ತಮೋಗುಣಗಳು ಉಭಯದಲ್ಲಿಯೂ ಇರುವವರು ವೈಶ್ಯರು. ಸಂಪೂರ್ಣವಾಗಿ ತಮೋಗುಣದಲ್ಲಿರುವವರು ಶೂದ್ರರು. ಅದಕ್ಕಿಂತಲೂ ಕಡಿಮೆ ಇರುವವರು ಪಶುಗಳು ಅಥವಾ ಪಶು ಜೀವಿಗಳು. ಆದರೆ, ಈ ಉಪಾಧಿಗಳು ಶಾಶ್ವತವಲ್ಲ. ನಾನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಅಥವಾ ಏನೇ ಆಗಿರಬಹುದು—ಯಾವುದೇ ಸಂದರ್ಭದಲ್ಲಿಯೂ ಈ ಜೀವನ ತಾತ್ಕಾಲಿಕ. ಜೀವನವು ತಾತ್ಕಾಲಿಕವಾಗಿದ್ದರೂ ಮತ್ತು ಮುಂದಿನ ಜನ್ಮದಲ್ಲಿ ನಾವು ಏನಾಗುವೆವು ಎಂಬುದು ನಮಗೆ ಗೊತ್ತಿಲ್ಲದಿದ್ದರೂ, ಈ ಮಾಯಾ ಶಕ್ತಿಯ ಪ್ರಭಾವದಿಂದ ನಾವು ನಮ್ಮ ಬಗ್ಗೆ ಜೀವನದ ದೈಹಿಕ ಕಲ್ಪನೆಯನ್ನು ಹೊಂದಿದ್ದೇವೆ, ಮತ್ತು ಹೀಗೆ ನಾವು ಅಮೇರಿಕನ್ ಭಾರತೀಯ, ರಷ್ಯನ್, ಅಥವಾ ಬ್ರಾಹ್ಮಣ, ಹಿಂದೂ, ಮುಸ್ಲಿಮ್ ಇತ್ಯಾದಿಯಾಗಿ ಭಾವಿಸಿಕೊಳ್ಳುತ್ತೇವೆ. ಈ ಭೌತಿಕ ಪ್ರಕೃತಿಯ ಗುಣಗಳಲ್ಲಿ ಸಿಲುಕಿಕೊಂಡರೆ, ಆಗ ನಾವು ಈ ಎಲ್ಲ ಗುಣಗಳ ಹಿಂದಿರುವ ಪರಮದೇವೋತ್ತಮ ಪುರುಷನನ್ನು ಮರೆಯುತ್ತೇವೆ. ಆದ್ದರಿಂದ ಈ ಭೌತಿಕ ಪ್ರಕೃತಿಯ ತ್ರಿಗುಣಗಳಿಂದ ಮೋಹಿತರಾದ ಜೀವಿಗಳು ಈ ಭೌತಿಕ ಹಿನ್ನೆಲೆಯಲ್ಲಿ ಪರಮದೇವೋತ್ತಮ ಪುರುಷನಿದ್ದಾನೆ ಎಂಬುದನ್ನು ಅರಿತುಕೊಳ್ಳುವುದಿಲ್ಲ ಎಂದು ಭಗವಾನ್ ಕೃಷ್ಣನು ಹೇಳುತ್ತಾನೆ.

ನಾನಾ ಬಗೆಯ ಭಿನ್ನ ಭಿನ್ನ ಜೀವಿಗಳಿದ್ದಾರೆ—ಮಾನವರು, ದೇವತೆಗಳು, ಪ್ರಾಣಿಗಳು, ಇತ್ಯಾದಿ— ಮತ್ತು ಅವರಲ್ಲಿ ಪ್ರತಿಯೊಬ್ಬರೂ ಭೌತಿಕ ಪ್ರಕೃತಿಯ ಪ್ರಭಾವಕ್ಕೆ ಒಳಪಟ್ಟಿದ್ದಾರೆ ಮತ್ತು ಅವರೆಲ್ಲರು ದಿವ್ಯ ದೇವೋತ್ತಮ ಪುರುಷನನ್ನು ಮರೆತಿರುವರು. ರಜೋಗುಣ ಮತ್ತು ತಮೋಗುಣಗಳಲ್ಲಿರುವವರು ಮತ್ತು ಸತ್ವಗುಣದಲ್ಲಿರುವವರೂ ಸಹ, ಪರಮ ಸತ್ಯದ ವ್ಯಕ್ತಿಶೂನ್ಯ ಬ್ರಹ್ಮನ್ ಕಲ್ಪನೆಗಿಂತ ಆಚೆಗೆ ಹೋಗಲಾರರು. ಅವರು ಸಕಲ ಸೌಂದರ್ಯ, ಐಶ್ವರ್ಯ, ಜ್ಞಾನ, ಬಲ, ಯಶ ಮತ್ತು ವೈರಾಗ್ಯವುಳ್ಳ ಪರಮ ಪ್ರಭುವಿನ ವೈಯಕ್ತಿಕ ಲಕ್ಷಣದ ಮುಂದೆ ದಿಗ್ಭ್ರಮಿತರು. ಸತ್ವಗುಣದಲ್ಲಿರುವವರೂ ಸಹ ಅರಿತುಕೊಳ್ಳಲಾರರು ಎಂದ ಮೇಲೆ, ಇನ್ನು ರಜೋಗುಣ ಮತ್ತು ತಮೋಗುಣದಲ್ಲಿರುವವರ ಮಾತೇನು ? ಕೃಷ್ಣಪ್ರಜ್ಞೆಯು ಭೌತಿಕ ಪ್ರಕೃತಿಯ ಈ ತ್ರಿಗುಣಗಳಿಗೆ ಅತೀತ, ಮತ್ತು ನಿಜವಾಗಿ ಕೃಷ್ಣಪ್ರಜ್ಞಾ ಪ್ರತಿಷ್ಠಿತರು ವಾಸ್ತವಿಕವಾಗಿ ಮುಕ್ತರು.

**ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।**
**ಮಾಮೇವ ಯೇ ಪ್ರಪದ್ಯನ್ತೇ ಮಾಯಾಮೇತಾಂ ತರನ್ತಿ ತೇ ॥ ೧೪ ॥**

ದೈವೀ—ದಿವ್ಯ, ಹಿ—ಖಂಡಿತವಾಗಿ, ಏಷಾ—ಈ, ಗುಣಮಯೀ—ಭೌತಿಕ ಪ್ರಕೃತಿಯ ತ್ರಿಗುಣಗಳಿಂದ ಕೂಡಿರುವ, ಮಮ—ನನ್ನ, ಮಾಯಾ—ಶಕ್ತಿಯು, ದುರತ್ಯಯಾ—ಗೆಲ್ಲಲು ಬಹು ಕಷ್ಟ, **ಮಾಮ್—ನನಗೆ. ಏವ—ಖಂಡಿತವಾಗಿ,**

**ಯೇ**—ಯಾರು; ಪ್ರಪದ್ಯನ್ತೇ—ಶರಣಾಗತರಾಗುತ್ತಾರೋ, ಮಾಯಾಮ್ ಏತಾಮ್—ಈ ಮಾಯಾಶಕ್ತಿಯನ್ನು; ತರನ್ತಿ—ಗೆಲ್ಲುತ್ತಾರೆ, ತೇ—ಅವರು.

**ಭೌತಿಕ ಪ್ರಕೃತಿಯ ತ್ರಿಗುಣಗಳಿಂದ ಕೂಡಿದ ನನ್ನ ಈ ದೈವೀ ಶಕ್ತಿಯನ್ನು ಗೆಲ್ಲುವುದು ಕಷ್ಟ. ಆದರೆ ನನಗೆ ಶರಣಾದವರು ಸುಲಭವಾಗಿ ಅದನ್ನು ದಾಟಬಲ್ಲರು.**

**ಭಾವಾರ್ಥ** : ಪರಮ ದೇವೋತ್ತಮ ಪುರುಷನಿಗೆ ಅಸಂಖ್ಯಾತ ಶಕ್ತಿಗಳಿವೆ, ಮತ್ತು ಈ ಎಲ್ಲ ಶಕ್ತಿಗಳೂ ದೈವೀ ಶಕ್ತಿಗಳು. ಜೀವಿಗಳು ಅವನ ಶಕ್ತಿಗಳ ಭಾಗವಾಗಿರುವುದರಿಂದ ದೈವೀಕವಾಗಿದ್ದರೂ, ಭೌತಿಕ ಶಕ್ತಿ ಸಂಪರ್ಕದ ಕಾರಣ ಅವರ ಮೂಲ ಪರಾಶಕ್ತಿಯು ಆವೃತವಾಗಿದೆ. ಹೀಗೆ ಭೌತಿಕ ಶಕ್ತಿಯಿಂದ ಆವೃತನಾಗಿ, ಒಬ್ಬನು ಪ್ರಾಯಶಃ ಅದರ ಪ್ರಭಾವವನ್ನು ಗೆಲ್ಲಲಾರನು. ಹಿಂದೆ ಹೇಳಿರುವಂತೆ ಭೌತಿಕ ಮತ್ತು ಆಧ್ಯಾತ್ಮಿಕ ಪ್ರಕೃತಿಗಳು, ಎರಡೂ ಪರಮ ದೇವೋತ್ತಮ ಪುರುಷನ ಉಗಮಗಳಾಗಿದ್ದು ಶಾಶ್ವತವಾಗಿವೆ. ಜೀವಿಗಳು ಭಗವಂತನ ನಿತ್ಯ ಪರಾ ಪ್ರಕೃತಿಗೆ ಸೇರಿದವರು, ಆದರೆ ಅಪರಾ ಪ್ರಕೃತಿಯು, ಎಂದರೆ ಜಡದ, ಕಲುಷತೆಯಿಂದ ಅವರ ಭ್ರಮೆಯು ಕೂಡ ನಿತ್ಯ. ಆದ್ದರಿಂದ ಬದ್ಧ ಆತ್ಮನನ್ನು ನಿತ್ಯ ಬದ್ಧನು ಎಂದು ಕರೆದಿದೆ. ಭೌತಿಕ ಇತಿಹಾಸದಲ್ಲಿ ಯಾವ ನಿಶ್ಚಿತ ದಿನ ದಂದು ಅವನು ಬದ್ಧನಾದನು ಎಂಬ ಚರಿತ್ರೆಯನ್ನು ಯಾರೂ ಕಂಡುಹಿಡಿಯಲಾರರು. ಆದರ ಪರಿಣಾಮವಾಗಿ, ಅಂಥ ಭೌತಿಕ ಪ್ರಕೃತಿಯು ಅಪರಾ ಶಕ್ತಿಯಾಗಿದ್ದರೂ ಭೌತಿಕ ಪ್ರಕೃತಿಯ ಪಾಶದಿಂದ ಅವನ ವಿಮೋಚನೆಯು ಬಹು ಕಷ್ಟ, ಏಕೆಂದರೆ ಭೌತಿಕ ಶಕ್ತಿಯು ಅಂತಿಮವಾಗಿ ಪರಮನ ಇಚ್ಛೆಯಂತೆ ನಿರ್ವಹಿಸಲ್ಪಡುತ್ತದೆ ಮತ್ತು ಅದನ್ನು ಜೀವಿಯು ಗೆಲ್ಲಲಾರನು. ಅಪರಾ ಭೌತಿಕ ಪ್ರಕೃತಿಯನ್ನು, ಆದರ ದೈವೀಕ ಸಂಪರ್ಕದಿಂದ ಮತ್ತು ದೈವೀಕ ಇಚ್ಛೆಯಂತೆ ವರ್ತಿಸುವುದರಿಂದ ಇಲ್ಲಿ ದೈವೀ ಪ್ರಕೃತಿ ಎಂದು ಕರೆಯಲಾಗಿದೆ. ದೈವೀಕ ಇಚ್ಛೆಯಿಂದ ನಿರ್ವಹಿಸಲ್ಪಟ್ಟ ಭೌತಿಕ ಪ್ರಕೃತಿಯು ಅಪರಾ ಪ್ರಕೃತಿಯಾಗಿದ್ದರೂ, ಅಭಿವ್ಯಕ್ತ ವಿಶ್ವದ ಸೃಷ್ಟಿ ಮತ್ತು ನಾಶದಲ್ಲಿ ಅದ್ಭುತವಾಗಿ ಕಾರ್ಯ ಮಾಡುತ್ತದೆ. ವೇದಗಳು ಇದನ್ನು ಹೀಗೆ ದೃಢಪಡಿಸುತ್ತವೆ : **ಮಾಯಾಂ ತು ಪ್ರಕೃತಿಂ ವಿದ್ಯಾನ್ ಮಾಯಿನಂ ತು ಮಹೇಶ್ವರಮ್.** "ಮಾಯೆಯು (ಭ್ರಮೆ) ಮಿಥ್ಯೆ ಅಥವಾ ಅನಿತ್ಯವಾಗಿದ್ದರೂ, ಮಾಯೆಯ ಹಿನ್ನೆಲೆಯು ಪರಮ ಜಾದೂಗಾರನಾದ ದೇವೋತ್ತಮ ಪುರುಷನು, ಅವನು ಮಹೇಶ್ವರನು. ಪರಮ ನಿಯಂತ್ರಕನು." (ಶ್ವೇತಾಶ್ವತರ ಉಪನಿಷದ್ 4.10)

**ಗುಣ** ಎಂದರೆ ಹಗ್ಗ ಎಂಬುದು ಮತ್ತೊಂದು ಅರ್ಥ; ಬದ್ಧ ಆತ್ಮನು ಮಾಯೆಯ ಹಗ್ಗಗಳಿಂದ ಬಿಗಿಯಾಗಿ ಕಟ್ಟಲ್ಪಟ್ಟಿದ್ದಾನೆ ಎಂದು ತಿಳಿಯಬೇಕು. ಕೈಕಾಲು ಕಟ್ಟಲ್ಪಟ್ಟವನು ತಾನೇ ಬಿಡಿಸಿಕೊಳ್ಳಲಾರನು—ಹಾಗೆ ಕಟ್ಟಲ್ಪಡದ ವ್ಯಕ್ತಿಯಿಂದ ಅವನಿಗೆ ಸಹಾಯ ದೊರೆಯಬೇಕು. ಬದ್ಧನು ಮತ್ತೊಬ್ಬ ಬದ್ಧನಿಗೆ ಸಹಾಯ ಮಾಡಲಾಗದ ಕಾರಣ, ರಕ್ಷಕನು ಮುಕ್ತನಾಗಿರಬೇಕು. ಆದ್ದರಿಂದ ಭಗವಾನ್ ಕೃಷ್ಣನು ಮಾತ್ರವೇ, ಅಥವಾ ಅವನ ಪ್ರಾಮಾಣಿಕ ಪ್ರತಿನಿಧಿಯಾದ ಗುರುಗಳು ಬದ್ಧ ಆತ್ಮನನ್ನು

ವಿಮೋಚಿಸಬಲ್ಲರು. ಅಂಥ ಶ್ರೇಷ್ಠ ಸಹಾಯವಿಲ್ಲದೆ ಒಬ್ಬನು ಭೌತಿಕ, ಪ್ರಕೃತಿಯ ಬಂಧನದಿಂದ ಮುಕ್ತನಾಗಲಾರನು. ಭಕ್ತಿಯುತ ಸೇವೆ ಅಥವಾ ಕೃಷ್ಣಪ್ರಜ್ಞೆಯು ಅಂಥ ವಿಮೋಚನೆಗೆ ಸಹಾಯ ಮಾಡಬಲ್ಲದು. ಕೃಷ್ಣನು ಮಾಯಾ ಶಕ್ತಿಯ ಒಡೆಯನಾಗಿದ್ದು, ಈ ದುಸ್ತರವಾದ ಶಕ್ತಿಯನ್ನು ಬದ್ಧ ಆತ್ಮನನ್ನು ಮುಕ್ತಗೊಳಿಸುವಂತೆ ಆದೇಶಿಸಬಲ್ಲನು. ಅವನು ಶರಣಾಗತ ಆತ್ಮನ ಮೇಲಿನ ತನ್ನ ಅವ್ಯಾಜ ಕರುಣೆಯಿಂದ ಮತ್ತು ಮೂಲತಃ ಭಗವಂತನ ಪ್ರೀತಿಪಾತ್ರ ಪುತ್ರನಾದ ಜೀವಿಯ ಮೇಲಿನ ತನ್ನ ಪಿತೃವಾತ್ಸಲ್ಯದಿಂದ, ಅವನು ಈ ವಿಮೋಚನೆಯನ್ನು ಆದೇಶಿಸುತ್ತಾನೆ. ಆದ್ದರಿಂದ ಭಗವಂತನ ಪಾದ ಕಮಲಗಳಿಗೆ ಶರಣಾಗುವುದು ಮಾತ್ರವೇ ಕಠಿಣ ಭೌತಿಕ ಪ್ರಕೃತಿ-ಪಾಶಗಳಿಂದ ವಿಮೋಚಿಸಿಕೊಳ್ಳಲು ಏಕೈಕ ಸಾಧನ.

**ಮಾಮ್ ಏವ** ಎಂಬ ಪದಗಳು ಸಹ ಮಹತ್ವದ್ದು. **ಮಾಮ್** ಎಂದರೆ ಕೃಷ್ಣನಿಗೆ (ವಿಷ್ಣುವಿಗೆ) ಮಾತ್ರ, ಬ್ರಹ್ಮ ಅಥವಾ ಶಿವನಿಗೆ ಅಲ್ಲ. ಬ್ರಹ್ಮ ಮತ್ತು ಶಿವರು ಅತ್ಯುನ್ನತರು ಮತ್ತು ಸರಿಸುಮಾರು ವಿಷ್ಣುವಿನ ಮಟ್ಟದವರಾಗಿದ್ದರೂ, ಅಂಥ ರಜೋಗುಣ ಮತ್ತು ತಮೋಗುಣ ಅವತಾರಗಳು ಬದ್ಧ ಆತ್ಮನನ್ನು ಮಾಯೆಯ ಹಿಡಿತದಿಂದ ವಿಮೋಚಿಸಲು ಸಾಧ್ಯವಿಲ್ಲ. ಬೇರೆ ಪದಗಳಲ್ಲಿ ಹೇಳುವುದಾದರೆ, ಬ್ರಹ್ಮ ಮತ್ತು ಶಿವ ಉಭಯರೂ ಸಹ ಮಾಯೆಯ ಪ್ರಭಾವಕ್ಕೆ ಒಳಪಟ್ಟಿರುವವರು. ವಿಷ್ಣು ಮಾತ್ರ ಮಾಯೆಯ ಒಡೆಯನು; ಆದ್ದರಿಂದ ಅವನು ಮಾತ್ರವೇ ಬದ್ಧ ಆತ್ಮನಿಗೆ ವಿಮೋಚನೆಯನ್ನು ನೀಡಬಲ್ಲನು. ವೇದಗಳು (ಶ್ವೇತಾಶ್ವತರ ಉಪನಿಷದ್ 3.8), **ತಮ್ ಏವ ವಿದಿತ್ವಾ**—ಎಂದರೆ "ಕೃಷ್ಣನನ್ನು ಅರಿಯುವುದರಿಂದ ಮಾತ್ರವೇ ಮುಕ್ತಿಯು ಸಾಧ್ಯ"—ಎಂಬ ಮಾತುಗಳಲ್ಲಿ ಇದನ್ನು ದೃಢಪಡಿಸಿದೆ, ವಿಷ್ಣುವಿನ ಅನುಗ್ರಹದಿಂದ ಮಾತ್ರವೇ ಮುಕ್ತಿಯನ್ನು ಪಡೆಯಬಹುದೆಂದು ಭಗವಾನ್ ಶಿವನು ಸಹ ದೃಢೀಕರಿಸುತ್ತಾನೆ. **ಮುಕ್ತಿಪ್ರದಾತಾ ಸರ್ವೇಷಾಂ ವಿಷ್ಣುರ್ ಏವ ನ ಸಂಶಯಃ**—"ಪ್ರತಿಯೊಬ್ಬರಿಗೂ ವಿಷ್ಣುವೇ ಮೋಕ್ಷದಾಯಕನು ಎಂಬುದರಲ್ಲಿ ಸಂಶಯವಿಲ್ಲ," ಎಂದು ಭಗವಾನ್ ಶಿವನು ಹೇಳುತ್ತಾನೆ.

**ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯನ್ತೇ ನರಾಧಮಾಃ ।**
**ಮಾಯಯಾಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ॥ ೧೫ ॥**

ನ—ಇಲ್ಲ, ಮಾಮ್—ನನಗೆ, ದುಷ್ಕೃತಿನಃ—ದುಷ್ಟರು, ಮೂಢಾಃ—ಮೂಢರು. ಪ್ರಪದ್ಯನ್ತೇ—ಶರಣಾಗತರಾಗುವುದು, ನರ ಅಧಮಾಃ—ಮಾನವರಲ್ಲಿ ಅತಿ ನೀಚರು, ಮಾಯಯಾ—ಮಾಯಾ ಶಕ್ತಿಯಿಂದ, ಅಪಹೃತ—ಅಪಹೃತವಾದ, ಜ್ಞಾನಃ—ಯಾರ ಜ್ಞಾನವು, ಆಸುರಮ್—ಆಸುರೀ, ಭಾವಮ್—ಸ್ವಭಾವವನ್ನು, ಆಶ್ರಿತಾಃ—ಸ್ವೀಕರಿಸಿ.

**ಮೂಢರು, ಮಾನವರಲ್ಲಿ ಅತಿ ನೀಚರು, ಮಾಯೆಯಿಂದ ಅಪಹರಿಸಲ್ಪಟ್ಟ ಜ್ಞಾನವುಳ್ಳವರು ಮತ್ತು ಅಸುರರ ನಾಸ್ತಿಕ ಭಾವನೆಯನ್ನು ಸ್ವೀಕರಿಸಿರುವ ದುಷ್ಟರು ನನಗೆ ಶರಣಾಗತರಾಗುವುದಿಲ್ಲ.**

**ಭಾವಾರ್ಥ** : ಪರಮಪುರುಷ ಕೃಷ್ಣನ ಪಾದಾರವಿಂದಗಳಿಗೆ ಕೇವಲ ಶರಣಾಗುವುದರಿಂದಲೇ ಭೌತಿಕ ಪ್ರಕೃತಿಯ ಕಠಿಣ ನಿಯಮಗಳನ್ನು ಒಬ್ಬನು ದಾಟಬಲ್ಲನೆಂದು ಭಗವದ್

ಗೀತೆಯಲ್ಲಿ ಹೇಳಿದೆ. ಈ ಹಂತದಲ್ಲಿ ಒಂದು ಪ್ರಶ್ನೆ ಉದ್ಭವಿಸುತ್ತದೆ: ಸುಶಿಕ್ಷಿತ ತತ್ತ್ವಜ್ಞಾನಿಗಳು, ವಿಜ್ಞಾನಿಗಳು, ವ್ಯಾಪಾರಿಗಳು, ಆಡಳಿತಗಾರರು ಮತ್ತು ಜನಸಾಮಾನ್ಯರ ಎಲ್ಲ ನಾಯಕರು ಸರ್ವಶಕ್ತ ದೇವೋತ್ತಮ ಪುರುಷ ಶ್ರೀಕೃಷ್ಣನ ಪಾದಾರವಿಂದಗಳಿಗೆ ಶರಣಾಗದಿರುವುದು ಏಕೆ ? **ಮುಕ್ತಿ,** ಎಂದರೆ ಭೌತಿಕ ಪ್ರಕೃತಿ ನಿಯಮಗಳಿಂದ ವಿಮೋಚನೆಯು ಮಾನವ ಕುಲದ ನಾಯಕರಿಂದ ಭಿನ್ನ ಮಾರ್ಗಗಳಲ್ಲಿ ಮಹಾ ಯೋಜನೆಗಳಿಂದ ಮತ್ತು ಸತತ ಪ್ರಯತ್ನಗಳಿಂದ ಅನೇಕಾನೇಕ ವರ್ಷಗಳು ಮತ್ತು ಜನ್ಮಗಳಿಂದಲೂ ಅರಸಲಾಗುತ್ತಿದೆ. ಆದರೆ ಆ ಮುಕ್ತಿಯು ಪರಮದೇವೋತ್ತಮ ಪುರುಷನ ಪಾದಾರವಿಂದಗಳಿಗೆ ಕೇವಲ ಶರಣಾಗುವುದರಿಂದಲೇ ಸಾಧ್ಯವಾಗಿದ್ದಲ್ಲಿ, ಈ ಬುದ್ಧಿವಂತ ಮತ್ತು ಕಠಿಣವಾಗಿ ಶ್ರಮಿಸುವ ನಾಯಕರು ಈ ಸರಳ ವಿಧಾನವನ್ನು ಸ್ವೀಕರಿಸದಿರುವುದು ಏಕೆ ?

ಗೀತೆಯು ಈ ಪ್ರಶ್ನೆಗೆ ಬಹು ಸ್ಪಷ್ಟವಾಗಿ ಉತ್ತರಿಸುತ್ತದೆ. ಸಮಾಜದ ನಿಜವಾದ ವಿದ್ವತ್ಪೂರ್ಣ ನಾಯಕರಾದ ಬ್ರಹ್ಮ, ಶಿವ, ಕಪಿಲ, ಕುಮಾರರು, ಮನು, ವ್ಯಾಸ, ದೇವಲ, ಅಸಿತ, ಜನಕ, ಪ್ರಹ್ಲಾದ, ಬಲಿ ಮತ್ತು ನಂತರದಲ್ಲಿ ಮಧ್ವಾಚಾರ್ಯ, ರಾಮಾನುಜಾಚಾರ್ಯ, ಶ್ರೀ ಚೈತನ್ಯ ಮತ್ತು ಅನೇಕ ಇತರರು.—ಅವರು ಪ್ರಾಮಾಣಿಕ ತತ್ತ್ವಜ್ಞಾನಿಗಳು, ರಾಜಕಾರಣಿಗಳು, ಶಿಕ್ಷಕರು, ವಿಜ್ಞಾನಿಗಳು, ಇತ್ಯಾದಿ ಆಗಿದ್ದು—ಸರ್ವ ಶಕ್ತ ಅಧಿಕಾರಿಯಾದ ಪರಮ ಪುರುಷನ ಪಾದಾರವಿಂದಗಳಿಗೆ ಶರಣಾಗುತ್ತಾರೆ. ವಾಸ್ತವಿಕವಾಗಿ ತತ್ತ್ವಜ್ಞಾನಿಗಳು, ವಿಜ್ಞಾನಿಗಳು, ಶಿಕ್ಷಕರು, ಆಡಳಿತಗಾರರು, ಇತ್ಯಾದಿ ಆಗಿರದೆ, ಆದರೆ ಭೌತಿಕ ಲಾಭಕ್ಕಾಗಿ ತಾವು ಹಾಗೆಂದು ಸೋಗು ಹಾಕುವವರು, ಪರಮ ಪ್ರಭುವಿನ ಯೋಜನೆಯನ್ನು ಅಥವಾ ಮಾರ್ಗವನ್ನು ಅಂಗೀಕರಿಸುವುದಿಲ್ಲ. ಅವರಿಗೆ ದೇವರ ಕಲ್ಪನೆಯೇ ಇಲ್ಲ; ಅವರು ಸುಮ್ಮನೇ ತಮ್ಮದೇ ಸ್ವಂತ ಪ್ರಾಪಂಚಿಕ ಯೋಜನೆಗಳನ್ನು ತಯಾರಿಸುತ್ತಾರೆ, ಮತ್ತು ಅದರ ಪರಿಣಾಮವಾಗಿ ಭೌತಿಕ ಅಸ್ತಿತ್ವದ ಸಮಸ್ಯೆಗಳನ್ನು ಪರಿಹರಿಸುವ ಅವರ ವ್ಯರ್ಥ ಪ್ರಯತ್ನದಲ್ಲಿ ಅವುಗಳನ್ನು ಜಟಿಲಗೊಳಿಸುತ್ತಾರೆ. ಭೌತಿಕ ಶಕ್ತಿಯು (ಪ್ರಕೃತಿ) ಅದೆಷ್ಟು ಶಕ್ತಿಶಾಲಿಯೆಂದರೆ, ಅದು ನಾಸ್ತಿಕರ ಅನಧಿಕೃತ ಯೋಜನೆಗಳನ್ನೆಲ್ಲಾ ಅಡ್ಡಿಪಡಿಸಬಲ್ಲದು ಮತ್ತು "ಯೋಜನಾ ಆಯೋಗಗಳ" ಜ್ಞಾನವನ್ನು ದಿಗ್ಭ್ರಮೆಗೊಳಿಸಬಹುದು.

ನಾಸ್ತಿಕ ಯೋಜನಾಕರ್ತರನ್ನು ಇಲ್ಲಿ **ದುಷ್ಕೃತಿನಃ** ಎಂದರೆ ದುಷ್ಟರು ಎಂಬ ಶಬ್ದದಿಂದ ವರ್ಣಿಸಲಾಗಿದೆ. **ಕೃತಿ** ಎಂದರೆ ಶ್ಲಾಘ್ಯವಾದ ಕಾರ್ಯಮಾಡಿದವನು. ನಾಸ್ತಿಕ ಯೋಜನಾಕರ್ತನು ಕೆಲವು ವೇಳೆ ಬಹು ಬುದ್ಧಿವಂತನು ಮತ್ತು ಶ್ಲಾಘ್ಯನೂ ಸಹ ಆಗಿರುತ್ತಾನೆ, ಏಕೆಂದರೆ ಒಳ್ಳೆಯದಾಗಲಿ ಅಥವಾ ಕೆಟ್ಟದಾಗಲಿ ಒಂದು ಬೃಹತ್ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಬುದ್ಧಿಶಕ್ತಿಬೇಕು. ಆದರೆ ನಾಸ್ತಿಕನ ಮೆದುಳು ಪರಮ ಪ್ರಭುವಿನ ಯೋಜನೆಯನ್ನು ವಿರೋಧಿಸುವಲ್ಲಿ ಅನುಚಿತವಾಗಿ ಉಪಯೋಗಿಸಲ್ಪಡುವುದರಿಂದ ನಾಸ್ತಿಕ ಯೋಜನಾಕರ್ತನನ್ನು **ದುಷ್ಕೃತೀ** ಎಂದು ಕರೆದಿದೆ; ಅದು ಅವನ ಬುದ್ಧಿ ಮತ್ತು ಪ್ರಯತ್ನಗಳು ತಪ್ಪಾಗಿ ನಿರ್ದೇಶಿತವಾಗಿವೆ ಎಂದು ಸೂಚಿಸುತ್ತದೆ.

ಭೌತಿಕ ಶಕ್ತಿಯು ಪೂರ್ಣವಾಗಿ ಪರಮಪ್ರಭುವಿನ ನಿರ್ದೇಶನಕ್ಕೆ ಒಳಪಟ್ಟು ಕಾರ್ಯ ಮಾಡುವುದೆಂದು ಗೀತೆಯಲ್ಲಿ ಸ್ಪಷ್ಟವಾಗಿ ಹೇಳಿದೆ. ಅದಕ್ಕೆ ಸ್ವತಂತ್ರ ಅಧಿಕಾರವಿಲ್ಲ. ವಸ್ತುವಿನ ಚಲನೆಗಳಿಗೆ ಅನುಸಾರವಾಗಿ ನೆರಳು ಚಲಿಸುವಂತೆ ಅದು ಕಾರ್ಯಮಾಡುತ್ತದೆ. ಹಾಗಿದ್ದರೂ ಭೌತಿಕ ಶಕ್ತಿಯು ಬಹು ಬಲಯುತ, ಮತ್ತು ನಾಸ್ತಿಕನು, ತನ್ನ ದೈವಹೀನ ಮನೋಧರ್ಮನಿಮಿತ್ತ, ಅದು ಹೇಗೆ ಕೆಲಸ ಮಾಡುವುದು ಎಂಬುದಾಗಲಿ ಅಥವಾ ಪರಮ ಪ್ರಭುವಿನ ಯೋಜನೆಯನ್ನಾಗಲಿ ಅವನು ತಿಳಿಯಲಾರನು. ಹಿರಣ್ಯಕಶಿಪು ಮತ್ತು ರಾವಣರ ವಿಷಯದಲ್ಲಿ ಆದಂತೆ, ಮಾಯೆ, ಮತ್ತು ರಜೋಗುಣ ಮತ್ತು ತಮೋಗುಣ ಗಳ ಪ್ರಭಾವಕ್ಕೆ ಒಳಪಟ್ಟು ಅವನ ಎಲ್ಲ ಯೋಜನೆಗಳು ಭಗ್ನವಾಗುತ್ತವೆ. ಹಿರಣ್ಯಕಶಿಪು ಮತ್ತು ರಾವಣರಿಬ್ಬರೂ ವಿಜ್ಞಾನಿಗಳು, ತತ್ವಜ್ಞಾನಿಗಳು, ಆಡಳಿತಗಾರರು ಮತ್ತು ಶಿಕ್ಷಕರಾಗಿ ಭೌತಿಕವಾಗಿ ವಿದ್ವಾಂಸರಾಗಿದ್ದರೂ, ಅವರ ಯೋಜನೆಗಳು ನುಚ್ಚುನುರಿ ಮಣ್ಣಾದಂತೆ ಆಯಿತು. ಈ **ದುಷ್ಕೃತಿನರು** ಅಥವಾ ದುಷ್ಟರು ಕೆಳಗೆ ವಿವರಿಸಿರುವಂತೆ ನಾಲ್ಕು ಭಿನ್ನ ಬಗೆಯವರಾಗಿರುತ್ತಾರೆ.

(1) ಮೂಢರು ಹೊರೆ ಹೊರುವ ಪ್ರಾಣಿಗಳಂತೆ ತೀರಾ ಮೂರ್ಖರು. ಅವರು ತಮ್ಮ ಶ್ರಮದ ಫಲಗಳನ್ನು ತಾವೇ ಅನುಭೋಗಿಸಲು ಬಯಸುತ್ತಾರೆ, ಮತ್ತು ಅದನ್ನು ಪರಮನಿಗಾಗಿ ಕೊಡಬಯಸುವುದಿಲ್ಲ. ಹೊರೆ ಹೊರುವ ಪ್ರಾಣಿಗೆ ಆದರ್ಶ ಉದಾಹರಣೆಯು ಕತ್ತೆ. ತನ್ನ ಒಡೆಯನಿಂದ ಈ ಬಡಪ್ರಾಣಿಯು ಬಹು ಶ್ರಮಪಟ್ಟು ದುಡಿಯುವಂತೆ ಮಾಡಲ್ಪಡುತ್ತದೆ. ತಾನು ಹಗಲೂ ಇರುಳೂ ಯಾರಿಗಾಗಿ ಕಷ್ಟಪಟ್ಟು ದುಡಿಯುತ್ತೇನೆ ಎಂದು ಕತ್ತೆಗೆ ನಿಜವಾಗಿಯೂ ಗೊತ್ತಿಲ್ಲ. ತನ್ನ ಹೊಟ್ಟೆಗೆ ಒಂದು ಕಟ್ಟು ಹುಲ್ಲನ್ನು ತುಂಬಿಕೊಳ್ಳುವುದರಿಂದಲೂ, ಒಡೆಯನಿಂದ ಏಟು ತಿನ್ನುವ ಭಯದಲ್ಲಿ ಸ್ವಲ್ಪ ಹೊತ್ತು ನಿದ್ರಿಸುವುದರಿಂದಲೂ ಮತ್ತು ಹೆಣ್ಣು ಕತ್ತೆಯಿಂದ ಪದೇ ಪದೇ ಒದಿಸಿಕೊಳ್ಳುವ ಅಪಾಯದಿಂದ ತನ್ನ ಲೈಂಗಿಕ ಹಸಿವನ್ನು ತೀರಿಸಿಕೊಳ್ಳುವುದರಿಂದಲೂ ಅದು ತೃಪ್ತಿ ಗೊಳ್ಳುತ್ತದೆ. ಹಲವು ಸಮಯ ಕತ್ತೆಯು ಪದ್ಯ ಮತ್ತು ದರ್ಶನವನ್ನು ಹಾಡುತ್ತದೆ, ಆದರೆ ಕತ್ತೆಯ ಈ ಕಿರಿಚುವಿಕೆಯು ಇತರರಿಗೆ ತೊಂದರೆ ಮಾಡುವುದಷ್ಟೇ. ಇದುವೇ ತಾನು ಯಾರಿಗಾಗಿ ದುಡಿಯಬೇಕು ಎಂಬುದನ್ನು ಅರಿಯದ ಮೂರ್ಖ ಕಾಮ್ಯ ಕರ್ಮಿಯ ಸ್ಥಾನ. **ಕರ್ಮವು** (ಕ್ರಿಯೆ) **ಯಜ್ಞಕ್ಕಾಗಿ** ಉದ್ದೇಶಿತ ಎಂಬುದನ್ನು ಅವನು ತಿಳಿದಿಲ್ಲ.

ಅನೇಕ ಸಲ, ಸ್ವಯಂ ಸೃಷ್ಟಿತ ಕರ್ತವ್ಯಗಳ ಹೊರೆಯನ್ನು ಇಳಿಸಿಕೊಳ್ಳಲು ಹಗಲಿರುಳು ಬಹಳ ಕಷ್ಟಪಟ್ಟು ದುಡಿಯುವವರು, ಜೀವಿಯ ಅಮೃತತ್ವದ ಬಗ್ಗೆ ಶ್ರವಣ ಮಾಡಲು ತಮಗೆ ಸಮಯವಿಲ್ಲ ಎಂದು ಹೇಳುತ್ತಾರೆ. ಮೂಢರು ಶ್ರಮದ ಫಲದ ಅತ್ಯಲ್ಪ ಭಾಗವನ್ನು ಮಾತ್ರ ಅನುಭೋಗಿಸುತ್ತಾರೆ ಎಂಬುದು ಸತ್ಯವಾದರೂ—ಅಂಥ **ಮೂಢರಿಗೆ** ನಾಶಶೀಲವಾದ ಭೌತಿಕ ಲಾಭಗಳೇ ಜೀವನದ ಸರ್ವಸ್ವ. ಕೆಲವು ಸಮಯ ಗಳಲ್ಲಿ ಅವರು ಕಾಮ್ಯ ಲಾಭಕ್ಕಾಗಿ ನಿದ್ರೆಯಿಲ್ಲದೆ ಹಗಲಿರುಳು ಶ್ರಮಿಸುತ್ತಾರೆ, ಮತ್ತು ಅವರಿಗೆ ಹೊಟ್ಟೆಹುಣ್ಣು ಅಥವಾ ಅಜೀರ್ಣವಿದ್ದರೂ ಕೂಡ, ಪ್ರಾಯಶಃ ಆಹಾರವಿಲ್ಲ

ವಿಲ್ಲದೆಯೇ ತೃಪ್ತರಾಗಿರುತ್ತಾರೆ; ಅವರು ತಮ್ಮ ಮಾಯಾ ಯಜಮಾನನ ಲಾಭಕ್ಕಾಗಿ ಹಗಲಿರುಳು ಸುಮ್ಮನೆ ಕಷ್ಟಪಟ್ಟು ದುಡಿಯುವುದರಲ್ಲಿ ಮಗ್ನರು. ಅವರ ನಿಜ ಯಜಮಾನನ ಜ್ಞಾನವಿಲ್ಲದೆ, ಮೂಢ ಕರ್ಮಿಗಳು ತಮ್ಮ ಅಮೂಲ್ಯ ಸಮಯವನ್ನು ಧನ ಪಿಶಾಚಿಗಳನ್ನು ಸೇವಿಸುವುದರಲ್ಲಿ ವ್ಯರ್ಥಮಾಡುತ್ತಾರೆ. ದುರದೃಷ್ಟದಿಂದ, ಅವರು ಎಲ್ಲ ಒಡೆಯರ ಪರಮ ಒಡೆಯನಿಗೆ ಶರಣಾಗುವುದಿಲ್ಲ, ಅಥವಾ ಯೋಗ್ಯ ಮೂಲಗಳಿಂದ ಅವನ ಬಗ್ಗೆ ಶ್ರವಣ ಮಾಡಲು ಸಮಯ ನೀಡುವುದಿಲ್ಲ. ಮಲವನ್ನು ತಿನ್ನುವ ಹಂದಿಯು ಸಕ್ಕರೆ ಮತ್ತು ತುಪ್ಪದಿಂದ ಮಾಡಿದ ಮಿಠಾಯಿಗಳನ್ನು ತಿನ್ನಲು ಲಕ್ಷಿಸುವುದಿಲ್ಲ. ಅದೇ ಪ್ರಕಾರ ಮೂಢ ಕರ್ಮಿಯು ಕ್ಷಣಭಂಗುರವಾದ ಐಹಿಕ ಜಗತ್ತಿನ ಇಂದ್ರಿಯ ಭೋಗ್ಯ ವಾರ್ತೆಗಳ ಶ್ರವಣವನ್ನು ಅನಾಯಾಸವಾಗಿ ಮುಂದುವರಿಸುತ್ತಾನೆ, ಆದರೆ ಭೌತಿಕ ಜಗತ್ತನ್ನು ಚಲಿಸುವ ಶಾಶ್ವತ ಜೈವಿಕಶಕ್ತಿಯ ಬಗ್ಗೆ ಶ್ರವಣ ಮಾಡಲು ಅವನಿಗೆ ಸಮಯವಿಲ್ಲ.

(2) ಮತ್ತೊಂದು ವರ್ಗದ **ದುಷ್ಕೃತೀ** ಅಥವಾ ದುಷ್ಟರನ್ನು **ನರಾಧಮ**, ಅಥವಾ ಮನುಷ್ಯರಲ್ಲಿ ಅತಿ ನೀಚರು ಎಂದು ಕರೆದಿದೆ. **ನರ** ಎಂದರೆ ಮಾನವ, ಮತ್ತು **ಅಧಮ** ಎಂದರೆ ಅತ್ಯಂತ ನೀಚನು. 8,400,000 ವಿವಿಧ ಜೀವಿಗಳಲ್ಲಿ 400,000 ವಿವಿಧ ಮಾನವರು ಇದ್ದಾರೆ. ಇವುಗಳಲ್ಲಿ ಅನೇಕ ಕೆಳಮಟ್ಟದ ಮಾನವ ಜೀವಿಗಳು ಇದ್ದಾರೆ;ಅವುಗಳಲ್ಲಿ ಹೆಚ್ಚಾಗಿ ಅನಾಗರಿಕರು. ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ಜೀವನದ ನಿಯಂತ್ರಣ ತತ್ವಗಳನ್ನು ಹೊಂದಿರುವವರು ನಾಗರಿಕ ಮಾನವರು. ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ಅಭಿವೃದ್ಧಿ ಹೊಂದಿರುವವರನ್ನು, ಆದರೆ ಧಾರ್ಮಿಕ ತತ್ವಗಳು ಇಲ್ಲದವರನ್ನು **ನರಾಧಮ**ರೆಂದು ಪರಿಗಣಿಸಬೇಕು. ಅಲ್ಲದೆ ದೇವನಿಲ್ಲದ ಧರ್ಮವು ಧರ್ಮವೇ ಅಲ್ಲ, ಏಕೆಂದರೆ ಧಾರ್ಮಿಕ ತತ್ವಗಳನ್ನು ಅನುಸರಿಸುವ ಉದ್ದೇಶವೇ ಪರಮಸತ್ಯನನ್ನು ಮತ್ತು ಅವನೊಂದಿಗೆ ಮಾನವನ ಸಂಬಂಧವನ್ನು ಅರಿಯುವುದು. ಗೀತೆಯಲ್ಲಿ ದೇವೋತ್ತಮ ಪುರುಷನು, ತನಗಿಂತ ಮೇಲಿನ ಅಧಿಕಾರಿ ಇಲ್ಲ, ಮತ್ತು ತಾನೇ ಪರಮ ಸತ್ಯ ಎಂಬುದಾಗಿ ಸ್ಪಷ್ಟವಾಗಿ ಹೇಳುತ್ತಾನೆ. ಸರ್ವಶಕ್ತನು, ಪರಮ ಸತ್ಯನು, ದೇವೋತ್ತಮ ಪುರುಷನೂ ಆಗಿರುವ ಶ್ರೀಕೃಷ್ಣನೊಂದಿಗೆ ಇರುವ ತನ್ನ ನಿತ್ಯ ಸಂಬಂಧದ **ನಷ್ಟ ಪ್ರಜ್ಞೆಯನ್ನು ಮನುಷ್ಯನು ಪುನರುಜ್ಜೀವಿಸಿಕೊಳ್ಳುವುದೇ** ನಾಗರಿಕ ಮಾನವ ಜೀವನದ ಉದ್ದಿಷ್ಟವಾಗಿದೆ. ಈ ಅವಕಾಶವನ್ನು ಯಾರೇ ಕಳೆದುಕೊಂಡರೂ ಅವನು **ನರಾಧಮ** ಎಂಬುದಾಗಿ ವರ್ಗೀಕರಿಸಲ್ಪಡುತ್ತಾನೆ. ಶಿಶುವು ತಾಯಿಯ ಗರ್ಭದಲ್ಲಿರುವಾಗ (ಅತ್ಯಂತ ಅನಾನುಕೂಲ ಸನ್ನಿವೇಶದಲ್ಲಿ) ತನ್ನನ್ನು ಉದ್ಧರಿಸಬೇಕೆಂದು ಭಗವಂತನನ್ನು ಪ್ರಾರ್ಥಿಸುತ್ತದೆ, ಮತ್ತು ತಾನು ಹೊರಗೆ ಬಂದ ಕೂಡಲೇ ಅವನನ್ನು ಪೂಜಿಸುವುದಾಗಿ ವಚನ ಕೊಡುತ್ತದೆ. ತಾನು ಕಷ್ಟದಲ್ಲಿರುವಾಗ ಭಗವಂತನನ್ನು ಪ್ರಾರ್ಥಿಸುವುದು ಪ್ರತಿಯೊಬ್ಬ ಜೀವಿಯಲ್ಲಿನ ಸಹಜವಾದ ಹುಟ್ಟರಿವು. ಏಕೆಂದರೆ ಅವನು ಭಗವಂತನೊಂದಿಗೆ ನಿತ್ಯ ಸಂಬಂಧಿ. ಆದರೆ ಹೊರಬಂದ ಮೇಲೆ ಮಗು ತನ್ನ ಜನನದ ಕಷ್ಟಗಳನ್ನು ಮರೆಯುತ್ತದೆ. ಮತ್ತು **ಮಾಯಾ** ಪ್ರಭಾವದಿಂದ ತನ್ನ ಉದ್ಧಾರಕನನ್ನು ಮರೆಯುತ್ತದೆ.

ಮಕ್ಕಳಲ್ಲಿ ಸುಪ್ತವಾಗಿರುವ ದೈವಿ ಪ್ರಜ್ಞೆಯನ್ನು ಜಾಗೃತಗೊಳಿಸುವುದು ಮಕ್ಕಳ ಪೋಷಕರ ಕರ್ತವ್ಯ. ಧರ್ಮತತ್ವಗಳ ಮಾರ್ಗದರ್ಶಕವಾದ **ಮನುಸ್ಮೃತಿಯಲ್ಲಿ** ವಿಧಿಸಿರುವಂತೆ ಸುಧಾರಕ ಸಂಸ್ಕಾರಗಳ ಹತ್ತು ಪ್ರಕ್ರಿಯೆಗಳು, ವರ್ಣಾಶ್ರಮ ಪದ್ಧತಿಯಲ್ಲಿ ದೈವ ಪ್ರಜ್ಞೆಯನ್ನು ಪುನರುಜ್ಜೀವಗೊಳಿಸಲು ಉದ್ದಿಷ್ಟ. ಈಗಲಾದರೋ ಜಗತ್ತಿನ ಯಾವುದೇ ಭಾಗದಲ್ಲಿಯೂ ಯಾವ ಪ್ರಕ್ರಿಯೆಯು ಕಟ್ಟುನಿಟ್ಟಾಗಿ ಪಾಲಿಸಲ್ಪಡುತ್ತಿಲ್ಲ, ಆದ್ದರಿಂದ ನೂರಕ್ಕೆ 99.9 ರಷ್ಟು ಜನರು **ನರಾಧಮರು.**

ಜನರೆಲ್ಲರೂ ನರಾಧಮರಾದಾಗ ಸ್ವಾಭಾವಿಕವಾಗಿಯೇ ಅವರ ಶಿಕ್ಷಣವೆಂದು ಕರೆಯಲ್ಪಡುವ ಎಲ್ಲವೂ ಸರ್ವಶಕ್ತ ಭೌತ ಪ್ರಕೃತಿಯ ಶಕ್ತಿಯಿಂದ ಅನೂರ್ಜಿತ ಮತ್ತು ಶೂನ್ಯ ಮಾಡಲ್ಪಡುತ್ತದೆ. ಗೀತೆಯ ಮಾನಾನುಸಾರ, ವಿದ್ವಾಂಸ ಬ್ರಾಹ್ಮಣ, ನಾಯಿ, ಹಸು, ಆನೆ ಮತ್ತು ಶ್ವಪಚ— ಇವರನ್ನು ಸಮಾನವಾಗಿ ಕಾಣುವವನು ಪಂಡಿತನು. ಇದು ನಿಜ ಭಕ್ತನ ದೃಷ್ಟಿ. ಆಚಾರ್ಯರಂತೆ ಭಗವಂತನ ಅವತಾರವಾದ ಶ್ರೀನಿತ್ಯಾನಂದ ಪ್ರಭುಗಳು, ಆದರ್ಶ ನರಾಧಮರಾದ ಜಗಾಯ್ ಮತ್ತು ಮಾಧಾಯ್ ಸೋದರರನ್ನು ಉದ್ಧರಿಸಿದರು, ಮತ್ತು ನಿಜ ಭಕ್ತನ ದಯೆಯು ನರಾಧಮರ ಮೇಲೆ ಹೇಗೆ ಅನುಗ್ರಹಿಸಲ್ಪಡುತ್ತದೆ ಎಂಬುದನ್ನು ತೋರಿಸಿದರು. ಆದ್ದರಿಂದ ಭಗವಂತನಿಂದ ಖಂಡಿಸಲ್ಪಟ್ಟ ನರಾಧಮನು ಭಕ್ತನ ದಯೆಯಿಂದ **ಮಾತ್ರವೇ ತನ್ನ** ಅಧ್ಯಾತ್ಮ ಪ್ರಜ್ಞೆಯನ್ನು ಮತ್ತೆ ಪುನರುಜ್ಜೀವಿಸಿಕೊಳ್ಳಬಹುದು.

ಶ್ರೀ ಚೈತನ್ಯ ಮಹಾಪ್ರಭುಗಳು, ಭಾಗವತ ಧರ್ಮವನ್ನು— ಎಂದರೆ ಭಕ್ತರ ಚಟುವಟಿಕೆಗಳನ್ನು– ಪ್ರಚಾರ ಮಾಡುವುದರಲ್ಲಿ ಜನರು ಭಗವಂತನ ಸಂದೇಶವನ್ನು ವಿನೀತರಾಗಿ ಶ್ರವಣ ಮಾಡಬೇಕು ಎಂದು ಹೇಳಿದ್ದಾರೆ. ಈ ಸಂದೇಶದ ಸಾರವೇ ಭಗವದ್ ಗೀತೆ. ನರಾಧಮರು ಈ ವಿನೀತ ಶ್ರವಣ ಪ್ರಕ್ರಿಯೆಯಿಂದ ಮಾತ್ರವೇ ಉದ್ಧಾರವಾಗಬಲ್ಲರು, ಆದರೆ ದುರದೃಷ್ಟವಶಾತ್ ಅವರು ಈ ಸಂದೇಶಗಳಿಗೆ ಕಿವಿಗೊಡಲು ಕೂಡ ನಿರಾಕರಿಸುತ್ತಾರೆ, ಇನ್ನು ಭಗವಂತನ ಇಚ್ಛೆಗೆ ಶರಣಾಗುವುದರ ಬಗ್ಗೆ ಹೇಳುವುದೇನು ? ನರಾಧಮರು, ಮಾನವನ ಪ್ರಧಾನ ಕರ್ತವ್ಯವನ್ನು ಉದ್ದೇಶಪೂರ್ವಕವಾಗಿ ನಿರ್ಲಕ್ಷಿಸುತ್ತಾರೆ.

(3) ದುಷ್ಕೃತಿನರ ಮತ್ತೊಂದು ವರ್ಗವು **ಮಾಯಯಾಪಹೃತ ಜ್ಞಾನಾಃ** ಅಥವಾ ಭೌತಿಕ ಶಕ್ತಿಯ ಮಾಯಾ ಪ್ರಭಾವದಿಂದ ಅನೂರ್ಜಿತವಾದ ಪಾಂಡಿತ್ಯ ಜ್ಞಾನವುಳ್ಳವರು ಎಂದು ಕರೆಯಲ್ಪಟ್ಟಿದೆ. ಅವರು ಸಾಮಾನ್ಯವಾಗಿ ಬಹು ವಿದ್ವಾಂಸರು— ಮಹಾ ತತ್ವಜ್ಞಾನಿಗಳು, ಕವಿಗಳು, ಸಾಹಿತಿಗಳು, ವಿಜ್ಞಾನಿಗಳು, ಇತ್ಯಾದಿ– ಆದರೆ ಮಾಯಾಶಕ್ತಿಯು ಅವರನ್ನು ದಾರಿ ತಪ್ಪಿಸುತ್ತದೆ, ಆದ್ದರಿಂದ ಅವರು ಭಗವಂತನ ಆಜ್ಞೆಯನ್ನು ಉಲ್ಲಂಘಿಸುತ್ತಾರೆ.

ಈಗಿನ ಕಾಲದಲ್ಲಿ, ಭಗವದ್‌ಗೀತಾ ಪಂಡಿತರಲ್ಲಿಯೂ ಸಹ ಅನೇಕ **ಮಾಯಯಾಪಹೃತ ಜ್ಞಾನಾಃ** ಇದ್ದಾರೆ. ಗೀತೆಯಲ್ಲಿ, ಸ್ಪಷ್ಟ ಮತ್ತು ಸರಳ ಭಾಷೆಯಲ್ಲಿ ಶ್ರೀಕೃಷ್ಣನು

ಪರಮ ದೇವೋತ್ತಮ ಪುರುಷನು ಎಂದು ಹೇಳಿದೆ. ಅವನಿಗೆ ಸಮಾನರು ಅಥವಾ ಅಧಿಕರು ಇಲ್ಲ. ಅವನು, ಎಲ್ಲ ಮಾನವರ ಮೂಲ ಪಿತನಾದ ಬ್ರಹ್ಮನಿಗೆ ತಂದೆಯೆಂದು ಹೇಳಿದೆ. ವಾಸ್ತವಿಕವಾಗಿ, ಶ್ರೀಕೃಷ್ಣನು ಬ್ರಹ್ಮನ ತಂದೆಯು ಮಾತ್ರವಲ್ಲದೆ ಜೀವಿವರ್ಗಗಳೆಲ್ಲರ ತಂದೆಯೂ ಸಹ ಆಗಿರುವನು ಎಂದು ಹೇಳಿದೆ. ಅವನು ವ್ಯಕ್ತಿಶೂನ್ಯ ಬ್ರಹ್ಮನ್ ಮತ್ತು ಪರಮಾತ್ಮನ ಮೂಲ; ಪ್ರತಿಯೊಬ್ಬ ಜೀವಿಯಲ್ಲಿನ ಪರಮಾತ್ಮನು ಅವನ ಪೂರ್ಣ ಅಂಶ. ಅವನು ಪ್ರತಿಯೊಂದರ ಮೂಲ ಸ್ರೋತನು, ಮತ್ತು ಪ್ರತಿಯೊಬ್ಬರೂ ಅವನ ಚರಣ ಕಮಲಗಳಿಗೆ ಶರಣಾಗಬೇಕೆಂದು ಬೋಧಿಸಿದೆ. ಈ ಎಲ್ಲಾ ಸ್ಪಷ್ಟ ವಾಕ್ಯಗಳಿದ್ದರೂ, **ಮಾಯಯಾಪಹೃತ ಜ್ಞಾನಾಃ**, ಇವರು ಭಗವಂತನ ವ್ಯಕ್ತಿತ್ವವನ್ನು ಅಪಹಾಸ್ಯ ಮಾಡುವರು, ಮತ್ತು ಅವನನ್ನು ಕೇವಲ ಮತ್ತೊಬ್ಬ ಮಾನವನು ಎಂದು ಭಾವಿಸುವರು. ಅನುಗ್ರಹವಾಗಿರುವ ಈ ಮಾನವ ರೂಪವು ಭಗವಂತನ ಶಾಶ್ವತ ಮತ್ತು ದಿವ್ಯ ಲಕ್ಷಣಾನುಸಾರ ರೂಪಿತವಾಗಿದೆ ಎಂಬುದನ್ನು ಅವರು ತಿಳಿದಿಲ್ಲ.

ಪರಂಪರಾ ಪದ್ಧತಿಯ ವ್ಯಾಪ್ತಿಯ ಹೊರಗಿನ **ಮಾಯಯಾಪಹೃತ ಜ್ಞಾನಾಃ** ವರ್ಗದವರ ಗೀತೆಯ ಎಲ್ಲಾ ಅನಧಿಕೃತ ವ್ಯಾಖ್ಯಾನಗಳು, ಆಧ್ಯಾತ್ಮಿಕ ಅರಿವಿನ ಮಾರ್ಗದಲ್ಲಿ ಅನೇಕ ಅಡಚಣೆಗಳಾಗಿವೆ. ಭ್ರಮಿತ ವ್ಯಾಖ್ಯಾನಕಾರರು ಶ್ರೀಕೃಷ್ಣನ ಪಾದಾರವಿಂದಗಳಿಗೆ ಶರಣಾಗುವುದಿಲ್ಲ, ಮತ್ತು ಈ ತತ್ವವನ್ನು ಅನುಸರಿಸಲು ಅವರು ಇತರರಿಗೆ ಹೇಳಿಕೊಡುವುದೂ ಇಲ್ಲ.

(4) ದುಷ್ಕೃತಿನರ ಕೊನೆಯ ವರ್ಗವನ್ನು **ಆಸುರಂ ಭಾವಮ್ ಆಶ್ರಿತಾಃ** ಅಥವಾ ಆಸುರಿ ತತ್ವದವರು ಎಂದು ಕರೆದಿದೆ. ಈ ವರ್ಗದವರು ಬಹಿರಂಗವಾಗಿ ನಾಸ್ತಿಕರು. ಅವರಲ್ಲಿ ಕೆಲವರು ಭಗವಂತನು ಎಂದಿಗೂ ಭೌತಿಕ ಜಗತ್ತಿಗೆ ಇಳಿದು ಬರಲಾರನು ಎಂದು ವಾದಿಸುವರು, ಆದರೆ ಏಕೆ ಬರಲಾರನು ಎಂಬುದಕ್ಕೆ ಅವರು ಯುಕ್ತ ಕಾರಣಗಳನ್ನು ನೀಡಲು ಅಸಮರ್ಥರು. ಮತ್ತೆ ಕೆಲವರು ಗೀತೆಯಲ್ಲಿ ತದ್ವಿರುದ್ಧವಾಗಿ ಘೋಷಿಸಿದ್ದರೂ ಅವನನ್ನು ವ್ಯಕ್ತಿ ಶೂನ್ಯ ಲಕ್ಷಣಕ್ಕೆ ಅಧೀನನಾಗಿ ಮಾಡುತ್ತಾರೆ. ಪರಮ ದೇವೋತ್ತಮ ಪುರುಷನ ಬಗ್ಗೆ ಅಸೂಯಾಪರನಾಗಿ, ನಾಸ್ತಿಕನು ತನ್ನ ಮಿದುಳಿನ ಕಾರ್ಖಾನೆಯಲ್ಲಿ ತಯಾರಿಸಿದ ಅನೇಕ ನಿಷಿದ್ಧ ಅವತಾರಗಳನ್ನು ಮುಂದಿಡುತ್ತಾನೆ. ದೇವೋತ್ತಮ ಪುರುಷನನ್ನು ನಿಂದಿಸುವುದೇ ಜೀವನದ ತತ್ವವಾಗಿರುವ ಅಂಥ ವ್ಯಕ್ತಿಗಳು ಶ್ರೀಕೃಷ್ಣನ ಪಾದ ಕಮಲಗಳಿಗೆ ಶರಣಾಗುವುದಿಲ್ಲ.

"ಹೇ ನನ್ನ ಪ್ರಭುವೇ! ನೀನು ಅಸಾಧಾರಣ ಗುಣಗಳು, ಲಕ್ಷಣಗಳು ಮತ್ತು ಲೀಲೆಗಳಿಂದ ಕೂಡಿದ್ದರೂ, ನಿನ್ನ ವ್ಯಕ್ತಿತ್ವವು ಸಕಲ ಸಾತ್ವಿಕ ದೃಷ್ಟ ಶಾಸ್ತ್ರಗಳಿಂದ ದೃಢಪಟ್ಟಿದ್ದರೂ, ಮತ್ತು ದಿವ್ಯ ವಿಜ್ಞಾನದಲ್ಲಿ ಆಳವಾದ ಜ್ಞಾನದಲ್ಲಿ ವಿಖ್ಯಾತರಾದ ಮತ್ತು ದೈವೀಗುಣಗಳಲ್ಲಿ ಸನ್ನಿವೇಶಿತರಾದ ಅಧಿಕಾರಿಗಳಿಂದ ನೀನು ಅಂಗೀಕರಿಸಲ್ಪಟ್ಟಿದ್ದರೂ, ನಾಸ್ತಿಕ ತತ್ವಗಳೊಡನೆ ಸಿಲುಕಿಕೊಂಡವರಿಗೆ ನೀನು ಎಂದಿಗೂ ಅರಿಯಲಾಗದವನು", ಎಂದು ದಕ್ಷಿಣ ಭಾರತದ ಶ್ರೀ ಯಾಮುನಾಚಾರ್ಯ ಆಳವಂದಾರರು ಹೇಳಿದ್ದಾರೆ.

ಆದ್ದರಿಂದ, ಮೇಲೆ ಹೇಳಿರುವಂತೆ (1) ಮಹತ್ತರ ಮೂಢ ವ್ಯಕ್ತಿಗಳು, (2) ಮಾನವರಲ್ಲಿನ ಅತಿ ನೀಚರು, (3) ಭ್ರಮಿತ ಊಹಾಪೋಹಕರು ಮತ್ತು (4) ಬಹಿರಂಗ ನಾಸ್ತಿಕರು. ಎಲ್ಲ ಶಾಸ್ತ್ರೀಯ ಮತ್ತು ಅಧಿಕೃತ ಉಪದೇಶವಿದ್ದರೂ, ದೇವೋತ್ತಮ ಪುರುಷನ ಚರಣಾರವಿಂದಗಳಿಗೆ ಎಂದಿಗೂ ಶರಣಾಗುವುದಿಲ್ಲ.

**ಚತುರ್ವಿಧಾ ಭಜನ್ತೇ ಮಾಂ ಜನಾಃ ಸುಕೃತಿನೋಽರ್ಜುನ ।**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥ ೧೬ ॥**

ಚತುಃವಿಧಾಃ—ನಾಲ್ಕು ಬಗೆಯ, ಭಜನ್ತೇ—ಸೇವೆಗಳನ್ನು ಸಲ್ಲಿಸುತ್ತಾರೆ, ಮಾಮ್—ನನಗೆ, ಜನಾಃ—ಜನರು, ಸುಕೃತಿನಃ—ಪುಣ್ಯವಂತರು, ಅರ್ಜುನ—ಹೇ ಅರ್ಜುನ, ಆರ್ತಃ—ದುಃಖಿಗಳು, ಜಿಜ್ಞಾಸುಃ—ವಿಚಾರಶೀಲರು, ಅರ್ಥ ಅರ್ಥೀ—ಭೌತಿಕ ಲಾಭವನ್ನು ಬಯಸುವವನು, ಜ್ಞಾನೀ—ವಿಷಯಗಳನ್ನು ಯಥಾರೂಪವಾಗಿ ತಿಳಿದವನು, ಚ—ಮತ್ತು, ಭರತಋಷಭ— ಹೇ ಭರತ ವಂಶಜರಲ್ಲಿ ಶ್ರೇಷ್ಠನೇ.

**ಹೇ ಭಾರತರಲ್ಲಿ ಶ್ರೇಷ್ಠನೇ, ನಾಲ್ಕು ಬಗೆಯ ಪುಣ್ಯವಂತರು—ದುಃಖಿಗಳು, ಸಂಪತ್ತನ್ನು ಬಯಸುವವರು, ವಿಚಾರಶೀಲರು ಮತ್ತು ಪರತತ್ವ ಜ್ಞಾನವನ್ನು ಅರಸುತ್ತಿರುವವನು—ನನಗೆ ಭಕ್ತಿಯುತ ಸೇವೆಯನ್ನು ಸಲ್ಲಿಸಲು ಪ್ರಾರಂಭಿಸುತ್ತಾರೆ.**

**ಭಾವಾರ್ಥ :** ದುಷ್ಕೃತಿನರಂತಲ್ಲದೆ, ಇವರು ಶಾಸ್ತ್ರಗಳ ನಿಯಂತ್ರಣ ತತ್ವಗಳನ್ನು ಪಾಲಿಸುವವರು ಮತ್ತು ಅವರು **ಸುಕೃತಿನಃ** ಎಂದು ಕರೆಯಲ್ಪಡುವರು. **ಸುಕೃತಿನಃ** ಎಂದರೆ ಶಾಸ್ತ್ರಗಳ ನಿಯಮ ನಿಯಂತ್ರಣಗಳಿಗೆ, ನೈತಿಕ ಮತ್ತು ಸಾಮಾಜಿಕ ನಿಯಮಗಳಿಗೆ ವಿಧೇಯರು, ಮತ್ತು ಸರಿಸುಮಾರು ಪರಮ ಪ್ರಭುವಿಗೆ ಅರ್ಪಿತರು ಎಂದರ್ಥ. ಇವರಲ್ಲಿ ನಾಲ್ಕು ವರ್ಗದ ಜನರು ಇರುವರು— ಕೆಲವು ಸಮಯಗಳಲ್ಲಿ ಅತಿ ಕಷ್ಟಕ್ಕೊಳಗಾದವರು, ಧನದ ಆವಶ್ಯಕತೆ ಇರುವವರು, ಕೆಲವು ಸಮಯಗಳಲ್ಲಿ ಜಿಜ್ಞಾಸುಗಳು ಮತ್ತು ಕೆಲವು ಸಮಯಗಳಲ್ಲಿ ಪರಸತ್ಯದ ಜ್ಞಾನವನ್ನು ಹುಡುಕುವವರು. ಈ ಜನರು ಭಿನ್ನ ಭಿನ್ನ ಸ್ಥಿತಿಗಳಲ್ಲಿ ಭಗವಂತನ ಬಳಿ ಭಕ್ತಿಯುತ ಸೇವೆಗಾಗಿ ಬರುತ್ತಾರೆ. ಇವರು ಶುದ್ಧ ಭಕ್ತರಲ್ಲ ಏಕೆಂದರೆ ಭಕ್ತಿಯುತಸೇವೆಗೆ ಪ್ರತಿಯಾಗಿ ನೆರವೇರಿಸಲೆಂದು ಯಾವುದೋ ಆಸೆಯುಳ್ಳವರು. ಶುದ್ಧ ಭಕ್ತಿಯುತ ಸೇವೆಯು ಉತ್ಕಾಂಕ್ಷರಹಿತವಾಗಿರುವುದು ಮತ್ತು ಭೌತಿಕ ಲಾಭಕ್ಕಾಗಿ ಆಶಾರಹಿತವಾಗಿರುವುದು. ಭಕ್ತಿರಸಾಮೃತಸಿಂಧು (1. 1. 11) ಶುದ್ಧ ಭಕ್ತಿಯನ್ನು ಹೀಗೆ ನಿರೂಪಿಸುತ್ತದೆ :

ಅನ್ಯಾಭಿಲಾಷಿತಾ-ಶೂನ್ಯಂ ಜ್ಞಾನ-ಕರ್ಮಾದಿ ಅನಾವೃತಮ್।
ಅನುಕೂಲ್ಯೇನ ಕೃಷ್ಣಾನುಶೀಲನಂ ಭಕ್ತಿರುತ್ತಮಾ॥

"ಒಬ್ಬನು ಪರಮ ಪ್ರಭು ಕೃಷ್ಣನಿಗೆ ಅನುಕೂಲ್ಯವಾಗಿ ಮತ್ತು ಕಾಮ್ಯ ಕರ್ಮಗಳ ಅಥವಾ ತಾತ್ವಿಕ ಊಹಾಪೋಹದ ಮೂಲಕ ಭೌತಿಕ ಲಾಭ ಅಥವಾ ಪ್ರಯೋಜನದ ಇಚ್ಛೆ ಇಲ್ಲದೆ, ದಿವ್ಯ ಪ್ರೀತಿಯುತ ಸೇವೆಯನ್ನು ಸಲ್ಲಿಸಬೇಕು. ಅದನ್ನು ಶುದ್ಧ ಭಕ್ತಿಯುತ ಸೇವೆ ಎನ್ನುವರು".

ಈ ನಾಲ್ಕು ಬಗೆಯ ಜನರು ಭಕ್ತಿಯುತ ಸೇವೆಗಾಗಿ ಭಗವಂತನ ಬಳಿಗೆ ಬಂದಾಗ ಮತ್ತು ಶುದ್ಧ ಭಕ್ತನ ಸಂಗದಿಂದ ಸಂಪೂರ್ಣವಾಗಿ ಶುದ್ಧರಾಗಿ, ಅವರೂ ಸಹ ಶುದ್ಧ ಭಕ್ತರಾಗುತ್ತಾರೆ. ದುಷ್ಕೃತಿನರ ಮಟ್ಟಿಗಾದರೋ ಅವರಿಗೆ ಭಕ್ತಿಯುತ ಸೇವೆಯು ಬಹು ಕಷ್ಟ, ಏಕೆಂದರೆ ಅವರ ಜೀವನಗಳು ಸ್ವಾರ್ಥಪರ, ಅನಿಯಮಿತ ಮತ್ತು ಆಧ್ಯಾತ್ಮಿಕ ಧ್ಯೇಯಗಳು ಇಲ್ಲದವು. ಆದರೆ ಆಕಸ್ಮಾತ್ತಾಗಿ ಅವರಲ್ಲಿ ಕೆಲವರು ಶುದ್ಧ ಭಕ್ತನೊಡನೆ ಸಂಪರ್ಕ ಹೊಂದಿದಾಗ, ಅವರೂ ಕೂಡ ಶುದ್ಧ ಭಕ್ತರಾಗುತ್ತಾರೆ.

ಸದಾ ಕಾಮ್ಯ ಕರ್ಮಗಳಲ್ಲಿ ನಿರತರು, ಭೌತಿಕ ಕಷ್ಟದಲ್ಲಿರುವಾಗ ಭಗವಂತನ ಬಳಿಗೆ ಬರುವವರು ಮತ್ತು ಆಗ ಶುದ್ಧ ಭಕ್ತನೊಡನೆ ಸಹವಾಸ ಮಾಡಿ, ತಮ್ಮ ಸಂಕಷ್ಟದಲ್ಲಿ ಭಗವಂತನ ಭಕ್ತರಾಗುತ್ತಾರೆ. ಕೇವಲ ಹತಾಶರಾದವರೂ ಕೂಡ ಕೆಲವು ಸಮಯಗಳಲ್ಲಿ ಶುದ್ಧ ಭಕ್ತರ ಸಹವಾಸ ಮಾಡಲು ಬರುವವರು ಮತ್ತು ಭಗವಂತನ ಬಗ್ಗೆ ತಿಳಿಯಲು ಕುತೂಹಲಿಗಳಾಗುವವರು. ಅದೇ ಪ್ರಕಾರ, ಶುಷ್ಕ ತಾತ್ವಿಕರು ಜ್ಞಾನದ ಪ್ರತಿಯೊಂದು ಕ್ಷೇತ್ರದಲ್ಲಿಯೂ ಹತಾಶರಾದಾಗ, ಕೆಲವು ಸಮಯಗಳಲ್ಲಿ ಅವರು ಭಗವಂತನನ್ನು ತಿಳಿಯ ಬಯಸುವವರು, ಮತ್ತು ಭಕ್ತಿಯುತ ಸೇವೆಯನ್ನು ಸಲ್ಲಿಸಲು ಭಗವಂತನಲ್ಲಿಗೆ ಬರುವವರು ಮತ್ತು ಹೀಗೆ ವ್ಯಕ್ತಿಶೂನ್ಯ ಬ್ರಹ್ಮನ್ ಮತ್ತು ಸ್ಥಳೀಯನಾದ ಪರಮಾತ್ಮನ ಜ್ಞಾನವನ್ನು ದಾಟಿ, ಪರಮ ಪ್ರಭು ಅಥವಾ ಅವನ ಶುದ್ಧ ಭಕ್ತನ ಕೃಪೆಯಿಂದ ಭಗವಂತನ ವೈಯಕ್ತಿಕ ಕಲ್ಪನೆಗೆ ಬರುವವರು. ಒಟ್ಟಿನಲ್ಲಿ ದುಃಖಿಯು, ಜಿಜ್ಞಾಸು, ಜ್ಞಾನಾನ್ವೇಷಕನು, ಮತ್ತು ಧನಾಪೇಕ್ಷಿಗಳು ಎಲ್ಲ ಭೌತಿಕ ಇಚ್ಛೆಗಳಿಂದ ಮುಕ್ತರಾದಾಗ, ಮತ್ತು ಭೌತಿಕ ಪ್ರತಿ ಫಲಕ್ಕೆ ಆಧ್ಯಾತ್ಮಿಕ ಪ್ರಗತಿಯೊಡನೆ ಯಾವ ಸಂಬಂಧವೂ ಇಲ್ಲ ಎಂಬುದನ್ನು ಪೂರ್ಣವಾಗಿ ತಿಳಿದಾಗ, ಅವರು ಶುದ್ಧ ಭಕ್ತರಾಗುತ್ತಾರೆ. ಅಂಥ ಶುದ್ಧ ಹಂತವನ್ನು ತಲುಪದವರೆಗೆ, ಭಗವಂತನ ದಿವ್ಯ ಸೇವೆಯಲ್ಲಿನ ಭಕ್ತರು ಕಾಮ್ಯ ಕರ್ಮಗಳು, ಐಹಿಕ ಜ್ಞಾನದ ಅನ್ವೇಷಣೆ, ಇತ್ಯಾದಿಗಳಿಂದ ಕಳಂಕಿತರಾಗಿರುತ್ತಾರೆ. ಆದ್ದರಿಂದ ಒಬ್ಬನು ಶುದ್ಧ ಭಕ್ತಿಯುತ ಸೇವೆಯ ಹಂತಕ್ಕೆ ಬರುವ ಮುಂಚೆ ಇವುಗಳೆಲ್ಲವನ್ನು ದಾಟಬೇಕು.

**ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।**
**ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ॥ ೧೭ ॥**

ತೇಷಾಮ್—ಅವರಲ್ಲಿ, ಜ್ಞಾನೀ—ಪೂರ್ಣ ಜ್ಞಾನವುಳ್ಳ, ನಿತ್ಯಯುಕ್ತಃ—ಸದಾ ನಿರತ, ಏಕ—ಮಾತ್ರವೇ, ಭಕ್ತಿಃ—ಭಕ್ತಿಯುತ ಸೇವೆಯಲ್ಲಿ, ವಿಶಿಷ್ಯತೇ—ವಿಶಿಷ್ಟನು, ಪ್ರಿಯಃ—ಬಹು ಪ್ರಿಯನು, ಹಿ—ಖಂಡಿತವಾಗಿ, ಜ್ಞಾನಿನಃ—ಜ್ಞಾನಿಗೆ, ಅತ್ಯರ್ಥಮ್—ಹೆಚ್ಚಾಗಿ, ಅಹಮ್—ನಾನು ಆಗಿದ್ದೇನೆ, ಸಃ—ಅವನು, ಚ—ಕೂಡ, ಮಮ—ನನಗೆ, ಪ್ರಿಯಃ—ಪ್ರಿಯನು.

**ಇವರಲ್ಲಿ ಪೂರ್ಣ ಜ್ಞಾನವುಳ್ಳವನು ಮತ್ತು ಸದಾ ಶುದ್ಧ ಭಕ್ತಿಯುತ ಸೇವೆಯಲ್ಲಿ ನಿರತನು ಅತ್ಯುತ್ತಮನು. ಏಕೆಂದರೆ ನಾನು ಅವನಿಗೆ ಬಹು ಪ್ರಿಯನು, ಮತ್ತು ಅವನು ನನಗೆ ಪ್ರಿಯನು.**

**ಭಾವಾರ್ಥ :** ಭೌತಿಕ ಆಸೆಗಳ ಸಕಲ ಕಲುಷತೆಗಳಿಂದಲೂ ಮುಕ್ತರಾಗಿ ದುಃಖಿಯು, ಜಿಜ್ಞಾಸು, ನಿರ್ಗತಿಕನು ಮತ್ತು ಪರಮ ಜ್ಞಾನದ ಅನ್ವೇಷಕನು—ಇವರೆಲ್ಲರು ಶುದ್ಧ ಭಕ್ತರಾಗಬಹುದು. ಆದರೆ ಅವರಲ್ಲಿ ಪರಸತ್ಯ ಜ್ಞಾನವುಳ್ಳವನು ಮತ್ತು ಸಕಲ ಭೌತಿಕ ಆಸೆಗಳಿಂದ ಮುಕ್ತನಾದವನು ನಿಜವಾಗಿಯೂ ಭಗವಂತನ ಶುದ್ಧ ಭಕ್ತನಾಗುವವನು. ಮತ್ತು ಈ ನಾಲ್ಕು ವರ್ಗಗಳಲ್ಲಿ ಪೂರ್ಣಜ್ಞಾನದಲ್ಲಿರುವ ಭಕ್ತನು ಮತ್ತು ಅದೇ ಸಮಯದಲ್ಲಿ ಭಕ್ತಿಯುತ ಸೇವೆಯಲ್ಲಿ ನಿರತನಾಗಿರುವವನು ಅತ್ಯುತ್ತಮನೆಂದು ಭಗವಂತನು ಹೇಳುತ್ತಾನೆ. ಜ್ಞಾನಾನ್ವೇಷಣೆಯಿಂದ ತನ್ನ ಆತ್ಮವು ತನ್ನ ಭೌತಿಕ ದೇಹದಿಂದ ಭಿನ್ನ ಎಂದು ಅರಿತುಕೊಳ್ಳುತ್ತಾನೆ, ಮತ್ತು ಇನ್ನೂ ಪ್ರಗತಿಸಿದಾಗ ಅವನು ವ್ಯಕ್ತಿಶೂನ್ಯ ಬ್ರಹ್ಮನ್ ಮತ್ತು ಪರಮಾತ್ಮ ಜ್ಞಾನಕ್ಕೆ ಬರುತ್ತಾನೆ. ಒಬ್ಬನು ಪೂರ್ಣ ಶುದ್ಧನಾದಾಗ, ತಾನು ಭಗವಂತನ ನಿತ್ಯ ದಾಸನೆಂಬ ತನ್ನ ಸ್ವರೂಪ ಸ್ಥಿತಿಯನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ. ಹೀಗೆ ಶುದ್ಧ ಭಕ್ತರೊಡನೆ ಸಹವಾಸದಿಂದ ಜಿಜ್ಞಾಸು, ದುಃಖಿಯು, ಭೌತಿಕ ಒಳಿತನ್ನು ಅನ್ವೇಷಿಸುವವನು ಮತ್ತು ಜ್ಞಾನದಲ್ಲಿರುವವನು, ಎಲ್ಲರೂ ಸ್ವಯಂ ಶುದ್ಧರಾಗುತ್ತಾರೆ. ಆದರೆ ಸಿದ್ಧತೆಯ ಹಂತದಲ್ಲಿ ಪರಮಪ್ರಭುವಿನ ಪೂರ್ಣಜ್ಞಾನವುಳ್ಳವನು ಮತ್ತು ಅದೇ ಕಾಲದಲ್ಲಿ ಭಕ್ತಿಯುತ ಸೇವೆಯನ್ನು ನಿರ್ವಹಿಸುವವನು ಭಗವಂತನಿಗೆ ಬಹು ಪ್ರಿಯನು. ಪರಮದೇವೋತ್ತಮ ಪುರುಷನ ದಿವ್ಯತ್ವದ ಶುದ್ಧ ಜ್ಞಾನದಲ್ಲಿ ಸನ್ನಿವೇಶಿತನಾಗಿರುವವನು ಭಕ್ತಿಯುತ ಸೇವೆಯಲ್ಲಿ ಎಷ್ಟು ರಕ್ಷಿತನೆಂದರೆ, ಭೌತಿಕ ಕಲ್ಮಷವು ಅವನನ್ನು ಮುಟ್ಟಲಾರದು.

**ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಮ್ ।**
**ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್ ॥ ೧೮ ॥**

ಉದಾರಾಃ—ಉದಾರ ಹೃದಯದವರು, ಸರ್ವೇ—ಎಲ್ಲ, ಏವ—ಖಂಡಿತವಾಗಿ, ಏತೇ—ಇವರು, ಜ್ಞಾನೀ—ಜ್ಞಾನದಲ್ಲಿರುವವನು, ತು—ಆದರೆ, ಆತ್ಮಾಏವ—ನನ್ನಂತೆಯೇ, ಮೇ—ನನ್ನ, ಮತಮ್—ಅಭಿಪ್ರಾಯ, ಆಸ್ಥಿತಃ—ಸನ್ನಿವೇಶಿತನು, ಸಃ—ಅವನು, ಹಿ—ಖಂಡಿತವಾಗಿ, ಯುಕ್ತಆತ್ಮಾ—ಭಕ್ತಿಯುತ ಸೇವಾನಿರತನು, ಮಾಮ್ ನನ್ನಲ್ಲಿ, ಏವ—ಖಂಡಿತವಾಗಿ, ಅನುತ್ತಮಾಮ್—ಅತ್ಯುತ್ತಮ, ಗತಿಮ್—ಗತಿಯನ್ನು.

**ಈ ಭಕ್ತರೆಲ್ಲರೂ ನಿಸ್ಸಂದೇಹವಾಗಿ ಉದಾತ್ತ ಹೃದಯದವರು, ಆದರೆ ನನ್ನ ಜ್ಞಾನದಲ್ಲಿ ಸನ್ನಿವೇಶಿತನು ಸ್ವಯಂ ನನ್ನಂತೆಯೇ ಎಂದು ನಾನು ಭಾವಿಸುತ್ತೇನೆ. ನನ್ನ ದಿವ್ಯ ಸೇವೆಯಲ್ಲಿ ನಿರತನಾಗಿ, ಅತ್ಯುನ್ನತ ಮತ್ತು ಆತ್ಯಂತ ಪರಿಪೂರ್ಣ ಧ್ಯೇಯವಾದ ನನ್ನನ್ನು ಅವನು ಹೊಂದುವುದು ಖಂಡಿತ.**

**ಭಾವಾರ್ಥ :** ಜ್ಞಾನದಲ್ಲಿ ಸ್ವಲ್ಪ ಪೂರ್ಣರಲ್ಲದ ಭಕ್ತರು ಭಗವಂತನಿಗೆ ಪ್ರಿಯರಲ್ಲ ವೆಂದಲ್ಲ. ಎಲ್ಲರೂ ಉದಾತ್ತರೇ, ಏಕೆಂದರೆ ಯಾವುದೇ ಉದ್ದೇಶಕ್ಕಾಗಿ ಭಗವಂತನಲ್ಲಿಗೆ ಬರುವ ಯಾವನೇ ಆಗಲಿ ಮಹಾತ್ಮನೆಂದು ಭಗವಂತನು ಹೇಳುತ್ತಾನೆ. ಭಕ್ತಿಯುತ ಸೇವೆಯಿಂದ ಕಿಂಚಿತ್ ಲಾಭಬಯಸುವ ಭಕ್ತರನ್ನು ಭಗವಂತನು ಅಂಗೀಕರಿಸುತ್ತಾನೆ. ಏಕೆಂದರೆ ಅಲ್ಲಿ ಪ್ರೀತಿಯ ವಿನಿಮಯವಿದೆ. ಪ್ರೀತಿಯಿಂದ ಅವರು ಭಗವಂತನನ್ನು ಸ್ವಲ್ಪ ಭೌತಿಕ

ಲಾಭವನ್ನು ಕೇಳುತ್ತಾರೆ ಮತ್ತು ಅವರು ಅದನ್ನು ಪಡೆದಾಗ ಅದೆಷ್ಟು ತೃಪ್ತರಾಗುವ ರೆಂದರೆ ಅವರೂ ಕೂಡ ಭಕ್ತಿಯುತ ಸೇವೆಯಲ್ಲಿ ಮುಂದುವರಿಯುತ್ತಾರೆ. ಆದರೆ ಪೂರ್ಣ ಜ್ಞಾನದಲ್ಲಿರುವ ಭಕ್ತನು ಭಗವಂತನಿಗೆ ಬಹು ಪ್ರಿಯನೆಂದು ಎಣಿಸಲ್ಪಡುತ್ತಾನೆ, ಏಕೆಂದರೆ ಭಗವಂತನನ್ನು ಪ್ರೇಮ ಮತ್ತು ಭಕ್ತಿಯಿಂದ ಸೇವಿಸುವುದು ಮಾತ್ರ ಅವನ ಉದ್ದೇಶ. ಅಂಥ ಭಕ್ತನು ಭಗವತ್ ಸಂಪರ್ಕವಿಲ್ಲದೆ ಅಥವಾ ಭಗವತ್ ಸೇವೆ ಮಾಡದೆ ಕ್ಷಣಕಾಲವೂ ಜೀವಿಸಲಾರನು. ಅದೇ ಪ್ರಕಾರ, ಭಗವಂತನು ತನ್ನ ಭಕ್ತನನ್ನು ಅತಿಯಾಗಿ ಪ್ರೀತಿಸುವನು ಮತ್ತು ಅವನಿಂದ ಅಗಲಿರಲಾರನು.

ಶ್ರೀಮದ್ ಭಾಗವತದಲ್ಲಿ (9. 4. 68), ಭಗವಂತನು ಹೇಳುತ್ತಾನೆ—

ಸಾಧವೋ ಹೃದಯಂ ಮಹ್ಯಂ ಸಾಧೂನಾಂ ಹೃದಯಂ ತ್ವಹಮ್।
ಮದನ್ಯತ್ ತೇನ ಜಾನನ್ತಿ ನಾಹಂ ತೇಭ್ಯೋ ಮನಾಗ್ ಅಪಿ॥

"ಭಕ್ತರು ಸದಾ ನನ್ನ ಹೃದಯದಲ್ಲಿದ್ದಾರೆ, ಮತ್ತು ನಾನು ಸದಾ ನನ್ನ ಭಕ್ತರ ಹೃದಯ ದಲ್ಲಿದ್ದೇನೆ. ಭಕ್ತನು ನನ್ನನ್ನು ಹೊರತು ಏನನ್ನು ತಿಳಿದಿರುವುದಿಲ್ಲ, ಮತ್ತು ನಾನೂ ಸಹ ಭಕ್ತನನ್ನು ಮರೆಯಲಾರೆ. ನನ್ನ ಮತ್ತು ಶುದ್ಧ ಭಕ್ತರ ನಡುವೆ ಒಂದು ಬಹು ಆತ್ಮೀಯ ಸಂಬಂಧವಿದೆ. ಪೂರ್ಣಜ್ಞಾನದಲ್ಲಿರುವ ಶುದ್ಧ ಭಕ್ತರು ಎಂದೂ ಆಧ್ಯಾತ್ಮ ಸಂಪರ್ಕರಹಿತರಲ್ಲ, ಆದ್ದರಿಂದ ಅವರು ನನಗೆ ಬಹು ಪ್ರಿಯರು".

**ಬಹೂನಾಂ ಜನ್ಮನಾಮನ್ತೇ ಜ್ಞಾನವಾನ್ಮಾಂ ಪ್ರಪದ್ಯತೇ ।**
**ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ॥ ೧೯ ॥**

ಬಹೂನಾಮ್—ಅನೇಕ, ಜನ್ಮನಾಮ್—ಮತ್ತೆ ಮತ್ತೆ ಜನನ ಮರಣಗಳ, ಅನ್ತೇ—ತರುವಾಯ, ಜ್ಞಾನವಾನ್—ಪೂರ್ಣ ಜ್ಞಾನದಲ್ಲಿರುವವನು, ಮಾಮ್—ನನಗೆ, ಪ್ರಪದ್ಯತೇ—ಶರಣಾಗತನಾಗುತ್ತಾನೆ, ವಾಸುದೇವಃ—ದೇವೋತ್ತಮ ಪುರುಷ, ಕೃಷ್ಣನು, ಸರ್ವಮ್—ಪ್ರತಿಯೊಂದು, ಇತಿ—ಹೀಗೆ, ಸಃ—ಆ, ಮಹಾ ಆತ್ಮಾ—ಮಹಾತ್ಮನು, ಸುದುರ್ಲಭಃ—ಕಾಣಲು ಬಹು ವಿರಳ.

**ಅನೇಕ ಜನನ ಮರಣಗಳ ತರುವಾಯ, ವಾಸ್ತವಿಕವಾಗಿ ಜ್ಞಾನದಲ್ಲಿರುವವನು, ನನ್ನನ್ನು ಸರ್ವಕಾರಣಗಳ ಮತ್ತು ಇರುವುದೆಲ್ಲದರ ಕಾರಣನು ಎಂದು ತಿಳಿದು, ನನಗೆ ಶರಣಾಗತನಾಗುತ್ತಾನೆ. ಅಂಥ ಮಹಾತ್ಮನು ಬಹು ವಿರಳ.**

**ಭಾವಾರ್ಥ :** ಜೀವಿಯು, ಭಕ್ತಿಯುತ ಸೇವೆ ಅಥವಾ ದಿವ್ಯ ಕರ್ಮಾಚರಣೆಗಳನ್ನು ಆಚರಿಸುತ್ತಾ, ಅನೇಕಾನೇಕ ಜನ್ಮಗಳ ನಂತರ, ಪರಮ ದೇವೋತ್ತಮ ಪುರುಷನು ಆತ್ಮ ಸಾಕ್ಷಾತ್ಕಾರದ ಅಂತಿಮ ಗುರಿ ಎಂಬ ದಿವ್ಯ ಶುದ್ಧ ಜ್ಞಾನದಲ್ಲಿ ವಾಸ್ತವಿಕವಾಗಿ ಸನ್ನಿವೇಶಿತ ನಾಗಬಹುದು. ಆಧ್ಯಾತ್ಮ ಸಾಕ್ಷಾತ್ಕಾರದ ಪ್ರಾರಂಭದಲ್ಲಿ, ಒಬ್ಬನು ತನ್ನ ಭೌತಿಕ ಆಸಕ್ತಿ ಯನ್ನು ತ್ಯಜಿಸಲು ಯತ್ನಿಸುತ್ತಿರುವಾಗ, ವ್ಯಕ್ತಿಶೂನ್ಯತ್ವದ ಕಡೆಗೆ ಸ್ವಲ್ಪ ಒಲವು ಇರು ತ್ತದೆ, ಆದರೆ ಅವನು ಮತ್ತಷ್ಟು ಮುಂದುವರಿದಾಗ ಆಧ್ಯಾತ್ಮ ಜೀವನದಲ್ಲಿ ಚಟುವಟಿಕೆ

ಗಳಿವೆ ಮತ್ತು ಆ ಚಟುವಟಿಕೆಗಳು ಭಕ್ತಿಯುತ ಸೇವೆ ಎಂಬುದನ್ನು ಅವನು ಅರಿತುಕೊಳ್ಳ ಬಲ್ಲನು. ಇದನ್ನು ಸಾಕ್ಷಾತ್ಕರಿಸಿಕೊಂಡು, ಅವನು ಪರಮದೇವೋತ್ತಮ ಪುರುಷನಲ್ಲಿ ಆಸಕ್ತನಾಗುತ್ತಾನೆ ಮತ್ತು ಅವನಿಗೆ ಶರಣಾಗುತ್ತಾನೆ. ಅಂಥಹ ಕಾಲದಲ್ಲಿ ಶ್ರೀಕೃಷ್ಣನ ದಯೆಯೇ ಸರ್ವಸ್ವ ಮತ್ತು ಅವನೇ ಸರ್ವಕಾರಣಗಳ ಕಾರಣನು ಮತ್ತು ಈ ಭೌತಿಕ ಉದ್ಭೂತಿಯು ಅವನಿಂದ ಸ್ವತಂತ್ರವಲ್ಲ ಎಂದು ಅರಿತುಕೊಳ್ಳಬಲ್ಲನು. ಈ ಭೌತಿಕ ಜಗತ್ತು ಆಧ್ಯಾತ್ಮಿಕ ವೈವಿಧ್ಯತೆಯ ವಕ್ರ ಪ್ರತಿಬಿಂಬ ಎಂಬುದನ್ನು ಸಾಕ್ಷಾತ್ಕರಿಸಿಕೊಳ್ಳು ತ್ತಾನೆ. ಮತ್ತು ಪ್ರತಿಯೊಂದರಲ್ಲಿಯೂ ಪರಮಪ್ರಭು ಕೃಷ್ಣನೊಂದಿಗೆ ಸಂಬಂಧವಿದೆ ಎಂಬುದನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ. ಹೀಗೆ ಅವನು ಪ್ರತಿಯೊಂದನ್ನು ವಾಸುದೇವ ಅಥವಾ ಶ್ರೀಕೃಷ್ಣನ ಸಂಬಂಧದಲ್ಲಿ ಚಿಂತನೆಮಾಡುತ್ತಾನೆ. ಅಂಥ ವಾಸುದೇವ ವಿಶ್ವ ದೃಷ್ಟಿಯು, ಪರಮ ಪ್ರಭು ಶ್ರೀಕೃಷ್ಣನೇ ಅತ್ಯುನ್ನತ ಗುರಿ ಎಂದು, ಒಬ್ಬನ ಪೂರ್ಣ ಶರಣಾಗತಿಯನ್ನು ಪ್ರಕ್ಷೇಪಿಸುತ್ತದೆ. ಅಂಥ ಶರಣಾಗತ ಮಹಾತ್ಮರು ಬಹು ದುರ್ಲಭ.

ಈ ಶ್ಲೋಕವು ಶ್ವೇತಾಶ್ವತರ ಉಪನಿಷತ್ತಿನ ಮೂರನೆಯ ಅಧ್ಯಾಯದಲ್ಲಿ (14 ಮತ್ತು 15ನೆಯ ಶ್ಲೋಕಗಳು) ಬಹು ಸೊಗಸಾಗಿ ವಿವರಿಸಲ್ಪಟ್ಟಿದೆ :

ಸಹಸ್ರ ಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್।
ಸ ಭೂಮಿಂ ವಿಶ್ವತೋ ವೃತ್ವಾತ್ಯಾತಿಷ್ಠದ್ದಶಾಂಗುಲಮ್॥
ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮ್।
ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ॥

ಛಾಂದೋಗ್ಯ ಉಪನಿಷತ್ತಿನಲ್ಲಿ (5. 1. 15), **ನ ವೈ ವಾಚೋ ನ ಚಕ್ಷೂಂಷಿ ನ ಶ್ರೋತ್ರಾಣಿ ನ ಮನಾಂಸೀತಿ ಆಚಕ್ಷತೇ ಪ್ರಾಣ ಇತಿ ಏವಾಚಕ್ಷತೇ ಪ್ರಾಣೋ ಹಿ ಏವೈತಾನಿ ಸರ್ವಾಣಿ ಭವನ್ತಿ,** ಎಂದು ಹೇಳಿದೆ: "ಜೀವಿಯ ದೇಹದಲ್ಲಿ ಮಾತನಾಡುವ ಶಕ್ತಿಯಾಗಲಿ,ಅಥವಾ ನೋಡುವ ಶಕ್ತಿಯಾಗಲಿ, ಅಥವಾ ಕೇಳುವ ಶಕ್ತಿಯಾಗಲಿ,ಅಥವಾ ಚಿಂತಿಸುವ ಶಕ್ತಿಯಾಗಲಿ ಪ್ರಧಾನ ಅಂಶವಲ್ಲ; ಸಕಲ ಚಟುವಟಿಕೆಗಳಿಗೆ ಕೇಂದ್ರವಾದ ಪ್ರಾಣ ಪ್ರಧಾನವಾದುದ್ದು." ಅದೇ ಪ್ರಕಾರ ವಾಸುದೇವ, ಅಥವಾ ದೇವೋತ್ತಮ ಪುರುಷ ಶ್ರೀಕೃಷ್ಣ, ಪ್ರತಿಯೊಂದರಲ್ಲಿ ಪ್ರಧಾನ ಅಂಶ. ಈ ದೇಹದಲ್ಲಿ ಮಾತನಾಡುವ, ನೋಡುವ, ಕೇಳುವ,ಮಾನಸಿಕ ಚಟುವಟಿಕೆ, ಇತ್ಯಾದಿಗಳ ಶಕ್ತಿಗಳಿವೆ. ಆದರೆ ಅವು ಪರಮ ಪ್ರಭುವಿಗೆ ಸಂಬಂಧಿತವಲ್ಲದಿದ್ದರೆ ಅವು ಮಹತ್ವದವಲ್ಲ. ವಾಸುದೇವನು ಸರ್ವ ವ್ಯಾಪ್ತನು ಮತ್ತು ಪ್ರತಿಯೊಂದು ವಾಸುದೇವ ಆದ್ದರಿಂದ ಭಕ್ತನು ಪೂರ್ಣ ಜ್ಞಾನದಲ್ಲಿ ಶರಣಾಗು ತ್ತಾನೆ (ಭಗವದ್ಗೀತಾ 7.17 ಮತ್ತು 11.40 ಹೋಲಿಸಿ).

**ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯನ್ತೇಽನ್ಯದೇವತಾಃ ।**
**ತಂ ತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ ॥ ೨೦ ॥**

ಕಾಮೈಃ—ಆಸೆಗಳಿಂದ, ತೈಃ ತೈಃ—ವಿವಿಧ, ಹೃತ—ಇಲ್ಲದಂತೆ ಮಾಡಲ್ಪಟ್ಟ, ಜ್ಞಾನಾಃ—ಜ್ಞಾನ, ಪ್ರಪದ್ಯನ್ತೇ—ಶರಣಾಗುತ್ತಾರೆ, ಅನ್ಯ—ಇತರ, ದೇವತಾಃ—

ದೇವತೆಗಳಿಗೆ, ತಂ ತಂ—ಅನುಗುಣವಾಗಿ, ನಿಯಮಮ್—ನಿಯಮಗಳನ್ನು, ಆಸ್ಥಾಯ—ಅನುಸರಿಸಿ, ಪ್ರಕೃತ್ಯಾ—ಸ್ವಭಾವದಿಂದ, ನಿಯತಾಃ—ನಿಯಂತ್ರಿತರಾಗಿ, ಸ್ವಯಾ—ಅವರ ಸ್ವಂತ.

**ಭೌತಿಕ ಆಸೆಗಳಿಂದ ಬುದ್ಧಿಯು ಅಪಹರಿಸಲ್ಪಟ್ಟವರು ದೇವತೆಗಳಿಗೆ ಶರಣಾಗುತ್ತಾರೆ ಮತ್ತು ತಮ್ಮ ಸ್ವಭಾವಗಳಿಗೆ ಅನುಸಾರವಾಗಿ ಪೂಜೆಯ ವಿಶಿಷ್ಟ ನಿಯಮ ನಿಯಂತ್ರಣಗಳನ್ನು ಅನುಸರಿಸುತ್ತಾರೆ.**

**ಭಾವಾರ್ಥ :** ಎಲ್ಲ ಭೌತಿಕ ಕಲ್ಮಷಗಳಿಂದ ಮುಕ್ತರು ಪರಮ ಪ್ರಭುವಿಗೆ ಶರಣಾಗುತ್ತಾರೆ ಮತ್ತು ಅವನ ಭಕ್ತಿಯುತ ಸೇವೆಯಲ್ಲಿ ನಿರತರಾಗುತ್ತಾರೆ. ಭೌತಿಕ ಕಲ್ಮಷವು ಸಂಪೂರ್ಣವಾಗಿ ತೊಳೆದು ಹೋಗುವವರೆಗೆ, ಅವರು ಸ್ವಭಾವತಃ ಅಭಕ್ತರು. ಆದರೆ ಭೌತಿಕ ಇಚ್ಛೆಗಳಿದ್ದು ಮತ್ತು ಭಗವಂತನನ್ನು ಆಶ್ರಯಿಸುವವರೂ ಸಹ ಬಹಿರಂಗ ಪ್ರಕೃತಿಯಿಂದ ಅಷ್ಟು ಆಕರ್ಷಿತರಲ್ಲ; ಸರಿಯಾದ ಗುರಿಯನ್ನು ಸಮೀಪಿಸುತ್ತಿರುವುದರಿಂದ ಅವರು ಶೀಘ್ರವೇ ಎಲ್ಲ ಭೌತಿಕ ಕಾಮದಿಂದ ಮುಕ್ತರಾಗುತ್ತಾರೆ. ಒಬ್ಬನು ಶುದ್ಧ ಭಕ್ತನಾಗಿರಲಿ ಮತ್ತು ಸಕಲ ಭೌತಿಕ ಇಚ್ಛೆಗಳಿಂದ ಮುಕ್ತನಾಗಿರಲಿ, ಅಥವಾ ಭೌತಿಕ ಇಚ್ಛೆಗಳಿಂದ ತುಂಬಿರಲಿ, ಅಥವಾ ಭೌತಿಕ ಕಲ್ಮಷದಿಂದ ವಿಮೋಚನೆ ಬಯಸುತ್ತಿರಲಿ, ಎಲ್ಲ ಸಂದರ್ಭಗಳಲ್ಲಿಯೂ ಅವನು ವಾಸುದೇವನಿಗೆ ಶರಣಾಗಿ ಅವನನ್ನು ಪೂಜಿಸಬೇಕೆಂದು ಶ್ರೀಮದ್ ಭಾಗವತದಲ್ಲಿ ಹೇಳಿದೆ. ಭಾಗವತದಲ್ಲಿ ಹೇಳಿರುವಂತೆ (2.3.10) :

> ಅಕಾಮಃ ಸರ್ವಕಾಮೋ ವಾ ಮೋಕ್ಷಕಾಮ ಉದಾರಧೀಃ।
> ತೀವ್ರೇಣ ಭಕ್ತಿಯೋಗೇನ ಯಜೇತ ಪುರುಷಂ ಪರಮ್॥

ತಮ್ಮ ಆಧ್ಯಾತ್ಮ ಭಾವ ಕಳೆದುಕೊಂಡ ಅಲ್ಪಮತಿಗಳು ಭೌತಿಕ ಇಚ್ಛೆಗಳು ಶೀಘ್ರ ಪರಿಪೂರಲು, ದೇವತೆಗಳನ್ನು ಆಶ್ರಯಿಸುತ್ತಾರೆ. ಸಾಮಾನ್ಯವಾಗಿ, ಅಂಥ ಜನರು ಪರಮ ದೇವೋತ್ತಮ ಪುರುಷನ ಬಳಿಗೆ ಹೋಗುವುದಿಲ್ಲ, ಏಕೆಂದರೆ ಅವರು ಪ್ರಕೃತಿಯ ಕೀಳು ಗುಣಗಳಲ್ಲಿ (ತಾಮಸ ಮತ್ತು ರಾಜಸ) ಇದ್ದಾರೆ; ಆದ್ದರಿಂದ ಅವರು ವಿವಿಧ ದೇವತೆಗಳನ್ನು ಪೂಜಿಸುತ್ತಾರೆ. ಪೂಜೆಯ ನಿಯಮ ನಿಯಂತ್ರಣಗಳನ್ನು ಅನುಸರಿಸಿ ಅವರು ತೃಪ್ತರಾಗುವರು. ದೇವತಾರಾಧಕರು ಅಲ್ಪಾಸೆಗಳಿಂದ ಪ್ರೇರಿತರು, ಮತ್ತು ಪರಮ ಧ್ಯೇಯವನ್ನು ಹೇಗೆ ತಲುಪಬೇಕು ಎಂಬುದನ್ನು ತಿಳಿದಿರುವುದಿಲ್ಲ. ಆದರೆ ಪರಮ ಪ್ರಭುವಿನ ಭಕ್ತನು ತಪ್ಪು ಮಾರ್ಗವನ್ನು ಹಿಡಿಯುವುದಿಲ್ಲ. ವೇದ ಸಾಹಿತ್ಯದಲ್ಲಿ ವಿವಿಧ ಉದ್ದೇಶಗಳಿಗಾಗಿ ವಿವಿಧ ದೇವತೆಗಳನ್ನು ಆರಾಧಿಸಬೇಕೆಂದು ಹೇಳಿರುವುದರಿಂದ, (ಉದಾಹರಣೆಗೆ ರೋಗಿಯು ಸೂರ್ಯದೇವನ ಆರಾಧನೆ ಮಾಡಬೇಕೆಂದು ಹೇಳಿದೆ) ಭಗವಂತನ ಭಕ್ತನಲ್ಲದವರು ಕೆಲವೊಂದು ಉದ್ದೇಶಗಳಿಗಾಗಿ ಭಗವಂತನಿಗಿಂತ ದೇವತೆಗಳೇ ಮೇಲೆಂದು ತಿಳಿಯುತ್ತಾರೆ. ಆದರೆ, ಪರಮ ಪ್ರಭು ಕೃಷ್ಣನು ಸರ್ವರ ಸ್ವಾಮಿ ಎಂಬುದನ್ನು ಶುದ್ಧ ಭಕ್ತನು ತಿಳಿದಿರುತ್ತಾನೆ. **ಚೈತನ್ಯಚರಿತಾಮೃತ**ದಲ್ಲಿ (ಆದಿ 5.142) ಹೀಗೆ ಹೇಳಿದೆ, **ಏಕಲೇ ಈಶ್ವರ ಕೃಷ್ಣ, ಆರ ಸಬ ಭೃತ್ಯ**—ಪರಮ ದೇವೋತ್ತಮ

ಪುರುಷ, ಕೃಷ್ಣನು ಮಾತ್ರವೇ ಸ್ವಾಮಿ ಮತ್ತು ಎಲ್ಲ ಇತರರು ಭೃತ್ಯರು. ಆದ್ದರಿಂದ ಶುದ್ಧ ಭಕ್ತನು ತನ್ನ ಭೌತಿಕ ಅವಶ್ಯಕತೆಗಳ ಪೂರೈಕೆಗಾಗಿ ಎಂದಿಗೂ ದೇವತೆಗಳಲ್ಲಿಗೆ ಹೋಗುವುದಿಲ್ಲ. ಅವನು ಪರಮ ಪ್ರಭುವನ್ನು ಅವಲಂಬಿಸುತ್ತಾನೆ. ಮತ್ತು ಅವನು ಎಷ್ಟು ನೀಡುತ್ತಾನೋ ಅಷ್ಟರಿಂದ ಶುದ್ಧ ಭಕ್ತನು ತೃಪ್ತನಾಗುತ್ತಾನೆ.

**ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ ।**
**ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ ॥ ೨೧ ॥**

ಯಃ ಯಃ—ಯಾರು ಯಾರು, ಯಾಮ್ ಯಾಮ್—ಯಾವ ಯಾವ, ತನುಮ್—ದೇವತಾರೂಪವನ್ನು, ಭಕ್ತಃ—ಭಕ್ತನು, ಶ್ರದ್ಧಯಾ—ಶ್ರದ್ಧೆಯಿಂದ, ಅರ್ಚಿತುಮ್—ಪೂಜಿಸಲು, ಇಚ್ಛತಿ—ಆಶಿಸುವನು, ತಸ್ಯ ತಸ್ಯ—ಅವರವರ, ಅಚಲಾಮ್—ಸ್ಥಿರವಾದ, ಶ್ರದ್ಧಾಮ್—ಶ್ರದ್ಧೆಯನ್ನು, ತಾಮ್—ಅದನ್ನು, ಏವ—ಖಂಡಿತವಾಗಿ, ವಿದಧಾಮಿ—ಕೊಡುತ್ತೇನೆ, ಅಹಮ್—ನಾನು.

**ಪ್ರತಿಯೊಬ್ಬರ ಹೃದಯದಲ್ಲಿಯೂ ನಾನು ಪರಮಾತ್ಮನಾಗಿ ಇದ್ದೇನೆ. ಒಬ್ಬನು ಯಾವೊಬ್ಬ ದೇವತೆಯನ್ನು ಪೂಜಿಸಲು ಆಶಿಸಿದೊಡನೆಯೇ, ತನ್ನನ್ನು ಆ ದೇವತೆಗೆ ಅರ್ಪಿಸಿಕೊಳ್ಳಲು ನಾನು ಅವನ ಶ್ರದ್ಧೆಯನ್ನು ಸ್ಥಿರಗೊಳಿಸುತ್ತೇನೆ.**

**ಭಾವಾರ್ಥ :** ಭಗವಂತನು ಪ್ರತಿಯೊಬ್ಬನಿಗೆ ಸ್ವಾತಂತ್ರ್ಯ ನೀಡಿದ್ದಾನೆ; ಆದ್ದರಿಂದ, ಒಬ್ಬ ವ್ಯಕ್ತಿಯು ಭೌತಿಕ ಭೋಗ ಹೊಂದಲು ಆಶಿಸಿದರೆ ಮತ್ತು ಅಂಥ ಸೌಲಭ್ಯಗಳನ್ನು ಭೌತಿಕ ದೇವತೆಗಳಿಂದ ಬಹು ಪ್ರಾಮಾಣಿಕವಾಗಿ ಬಯಸಿದರೆ, ಪರಮಾತ್ಮನಾಗಿ ಪ್ರತಿಯೊಬ್ಬನ ಹೃದಯದಲ್ಲಿರುವ ಪರಮ ಪ್ರಭು ಅರಿತು, ಅಂಥ ವ್ಯಕ್ತಿಗಳಿಗೆ ಸೌಲಭ್ಯಗಳನ್ನು ನೀಡುತ್ತಾನೆ. ಸಕಲ ಜೀವಿಗಳ ಪರಮ ಪಿತನಾಗಿ, ಅವನು ಅವರ ಸ್ವಾತಂತ್ರ್ಯದಲ್ಲಿ ಅಡ್ಡ ಬರುವುದಿಲ್ಲ, ಆದರೆ ಅವರು ತಮ್ಮ ಭೌತಿಕ ಇಚ್ಛೆಗಳನ್ನು ಪೂರೈಸಿಕೊಳ್ಳಲು ಎಲ್ಲ ಸೌಲಭ್ಯಗಳನ್ನು ನೀಡುತ್ತಾನೆ. ಸರ್ವಶಕ್ತನಾದ ಭಗವಂತನು ಜೀವಿಗಳಿಗೆ ಈ ಭೌತಿಕ ಜಗತ್ತನ್ನು ಭೋಗಿಸಲು ಸೌಲಭ್ಯಗಳನ್ನು ನೀಡುವುದೇಕೆ, ಮತ್ತು ಹಾಗೆ ಅವರು ಮಾಯಾ ಶಕ್ತಿಯ ಬಲೆಗೆ ಬೀಳುವಂತೆ ಮಾಡುವುದೇಕೆ ಎಂದು ಕೆಲವರು ಕೇಳಬಹುದು ಇದಕ್ಕೆ ಉತ್ತರವೆಂದರೆ, ಪರಮಾತ್ಮನಾಗಿ ಭಗವಂತನು ಅಂಥ ಸೌಲಭ್ಯಗಳನ್ನು ನೀಡದಿದ್ದರೆ, ಆಗ ಸ್ವಾತಂತ್ರ್ಯವು ಅರ್ಥಹೀನ. ಆದ್ದರಿಂದ ಅವನು ಪ್ರತಿಯೊಬ್ಬನಿಗೆ ಪೂರ್ಣಸ್ವಾತಂತ್ರ್ಯವನ್ನು—ಒಬ್ಬನು ಬಯಸಿದ್ದನ್ನು—ನೀಡುತ್ತಾ, ಆದರೆ ಅವನ ಅಂತಿಮ ಉಪದೇಶವನ್ನು ಭಗವದ್‌ಗೀತೆಯಲ್ಲಿ ನಾವು ಕಾಣುತ್ತೇವೆ : ಒಬ್ಬನು ಎಲ್ಲ ಇತರ ತೊಡಗುವಿಕೆಗಳನ್ನು ತ್ಯಜಿಸಬೇಕು ಮತ್ತು ಪೂರ್ಣವಾಗಿ ಅವನಿಗೆ ಶರಣಾಗಬೇಕು. ಅದು ಮಾನವನನ್ನು ಸುಖಿಯಾಗಿಸುತ್ತದೆ.

ಜೀವಿ ಮತ್ತು ದೇವತೆಗಳು ಉಭಯರು, ಪರಮ ದೇವೋತ್ತಮ ಪುರುಷನ ಇಚ್ಛಾಧೀನರು; ಆದ್ದರಿಂದ ಜೀವಿಯು ಸ್ವ-ಇಚ್ಛೆಯಿಂದ ದೇವತೆಯನ್ನು ಅರ್ಚಿಸಲಾರನು, ಅಥವಾ ದೇವತೆಗೂ ಪರಮನ ಇಚ್ಛೆಯಿಲ್ಲದೆ ಯಾವ ವರವನ್ನೂ ನೀಡಲಾಗದು.

ಪರಮ ದೇವೋತ್ತಮ ಪುರುಷನ ಇಚ್ಛೆಯಿಲ್ಲದೆ ಒಂದು ತೃಣವೂ ಕೂಡ ಚಲಿಸಲಾರದು ಎಂದು ಹೇಳಿದೆ. ಸಾಮಾನ್ಯವಾಗಿ, ಭೌತಿಕ ಜಗತ್ತಿನಲ್ಲಿ ಆರ್ತರಾದವರು, ವೇದ ಸಾಹಿತ್ಯ ದಲ್ಲಿ ಸೂಚಿಸಿರುವಂತೆ, ದೇವತೆಗಳಲ್ಲಿಗೆ ಹೋಗುತ್ತಾರೆ. ನಿರ್ದಿಷ್ಟ ವಸ್ತುವನ್ನು ಆಶಿಸುವ ವ್ಯಕ್ತಿಯು, ಆಯಾ ದೇವತೆಯನ್ನು ಅರ್ಚಿಸಬಹುದು. ಉದಾಹರಣೆಗೆ, ರೋಗಿಯು ಸೂರ್ಯದೇವೋಪಾಸನೆ ಮಾಡುವಂತೆ ಹೇಳಿದೆ; ವಿದ್ಯಾಪೇಕ್ಷಿಯು ವಿದ್ಯಾ ದೇವತೆ ಸರಸ್ವತಿಯನ್ನು ಅರ್ಚಿಸುವಂತೆ ಹೇಳಿದೆ; ಮತ್ತು ಸುಂದರ ಹೆಂಡತಿಯನ್ನು ಬಯಸುವವನು ಶಿವನ ಪತ್ನಿಯಾದ ಉಮೆಯನ್ನು ಅರ್ಚಿಸುವಂತೆ ಹೇಳಿದೆ. ಹೀಗೆ ವಿವಿಧ ದೇವತೆಗಳ ವಿವಿಧ ಅರ್ಚನೆಯ ವಿಧಾನಗಳ ಬಗ್ಗೆ ವೇದ ಶಾಸ್ತ್ರಗಳಲ್ಲಿ ಹೇಳಲಾಗಿದೆ. ನಿರ್ದಿಷ್ಟ ಜೀವಿಯು ನಿರ್ದಿಷ್ಟ ಭೌತಿಕ ಸೌಲಭ್ಯಗಳನ್ನು ಭೋಗಿಸ ಬಯಸುವುದರಿಂದ, ನಿರ್ದಿಷ್ಟ ದೇವತೆಯಿಂದ ಆ ವರವನ್ನು ಪಡೆಯುವಂತೆ ಅವನಿಗೆ ಭಗವಂತನು ಬಲವಾದ ಇಚ್ಛೆಯನ್ನು ಪ್ರೇರೇಪಿಸುತ್ತಾನೆ ಮತ್ತು ಅವನು ಯಶಸ್ವಿಯಾಗಿ ಅಂಥ ವರವನ್ನು ಪಡೆ ಯುತ್ತಾನೆ. ವಿಶಿಷ್ಟ ಬಗೆಯ ದೇವತೆಯ ಬಗ್ಗೆ ಜೀವಿಯ ವಿಶಿಷ್ಟ ಭಕ್ತಿ ಭಾವನೆಯೂ ಕೂಡ ಭಗವಂತನಿಂದ ಏರ್ಪಡಿಸಲ್ಪಡುತ್ತದೆ. ದೇವತೆಗಳು ಜೀವಿಗಳಲ್ಲಿ ಅಂಥ ಆಕರ್ಷಣೆ ಯನ್ನು ಮೂಡಿಸಲಾರರು, ಆದರೆ ಅವನು ಪರಮ ಪ್ರಭು, ಅಥವಾ ಎಲ್ಲ ಜೀವಿಗಳ ಹೃದಯದಲ್ಲಿರುವ ಪರಮಾತ್ಮನಾಗಿರುವ ಕಾರಣ, ಕೃಷ್ಣನು ನಿರ್ದಿಷ್ಟ ದೇವತೆಗಳನ್ನು ಅರ್ಚಿಸಲು ಮನುಷ್ಯರಿಗೆ ಪ್ರಚೋದನೆಯನ್ನು ನೀಡುತ್ತಾನೆ. ದೇವತೆಗಳು ವಾಸ್ತವಿಕ ವಾಗಿ ಭಗವಂತನ ವಿರಾಟ್ ದೇಹದ ವಿವಿಧ ಭಾಗಗಳು; ಆದ್ದರಿಂದ ಅವರಿಗೆ ಸ್ವಾತಂತ್ರ್ಯ ವಿಲ್ಲ. ವೇದ ಸಾಹಿತ್ಯದಲ್ಲಿ ಹೀಗೆ ಹೇಳಿದೆ : "ಪರಮ ದೇವೋತ್ತಮ ಪುರುಷನು ಪರಮಾತ್ಮನಾಗಿ ದೇವತೆಯ ಹೃದಯದಲ್ಲಿಯೂ ಇದ್ದಾನೆ; ಆದ್ದರಿಂದ ದೇವತೆಯ ಮೂಲಕ ಜೀವಿಯ ಆಸೆಯನ್ನು ನೆರವೇರಿಸಲು ಭಗವಂತನು ಏರ್ಪಾಡು ಮಾಡುತ್ತಾನೆ. ಆದರೆ ದೇವತೆ ಮತ್ತು ಜೀವಿ ಉಭಯರೂ ಪರಮ ಇಚ್ಛೆಯನ್ನು ಅವಲಂಬಿಸಿದ್ದಾರೆ. ಅವರು ಸ್ವತಂತ್ರರಲ್ಲ."

**ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ ।**
**ಲಭತೇ ಚ ತತಃ ಕಾಮಾನ್ಮಯೈವ ವಿಹಿತಾನ್ ಹಿ ತಾನ್ ॥ ೨೨ ॥**

ಸಃ—ಅವನು, ತಯಾ—ಅದರಿಂದ, ಶ್ರದ್ಧಯಾ—ಪ್ರೇರಣೆಯಿಂದ, ಯುಕ್ತಃ— ಕೂಡಿದವನಾಗಿ, ತಸ್ಯ—ಆ ದೇವತೆಯ, ಆರಾಧನಮ್—ಪೂಜೆಗೆ, ಈಹತೇ—ಅವನು ಉತ್ಕಾಂಕ್ಷಿಸುತ್ತಾನೆ, ಲಭತೇ—ಹೊಂದುತ್ತಾನೆ, ಚ—ಮತ್ತು, ತತಃ—ಅದರಿಂದ, ಕಾಮಾನ್—ಅವನ ಇಚ್ಛೆಗಳು, ಮಯಾ—ನನ್ನಿಂದ, ಏವ—ಮಾತ್ರವೇ, ವಿಹಿತಾನ್— ಏರ್ಪಡುತ್ತವೆ, ಹಿ—ಖಂಡಿತವಾಗಿ, ತಾನ್—ಅವು.

**ಅಂಥ ಶ್ರದ್ಧಾಯುಕ್ತನಾಗಿ, ಅವನು ವಿಶಿಷ್ಟ ದೇವತೆಯನ್ನು ಆರಾಧಿಸಲು ಯತ್ನಿಸುತ್ತಾನೆ ಮತ್ತು ತನ್ನ ಇಚ್ಛೆಗಳನ್ನು ಪೂರೈಸಿಕೊಳ್ಳುತ್ತಾನೆ. ಆದರೆ ವಾಸ್ತವಿಕತೆಯಲ್ಲಿ ಈ ಲಾಭಗಳೆಲ್ಲವೂ ನನ್ನಿಂದಲೇ ನೀಡಲ್ಪಡುತ್ತವೆ.**

**ಭಾವಾರ್ಥ** :—ದೇವತೆಗಳು ಪರಮ ಪ್ರಭುವಿನ ಅನುಮತಿ ಇಲ್ಲದೆ, ಅವರ ಭಕ್ತರಿಗೆ ವರಗಳನ್ನು ನೀಡಲಾರರು. ಪ್ರತಿಯೊಂದೂ ಭಗವಂತನ ಸ್ವತ್ತು ಎಂಬುದನ್ನು ಜೀವಿಯು ಮರೆಯಬಹುದು, ಆದರೆ ದೇವತೆಗಳು ಮರೆಯುವುದಿಲ್ಲ. ಆದ್ದರಿಂದ ದೇವತಾರಾಧನೆ ಮತ್ತು ವಾಂಛಿತ ಫಲಗಳ ಪ್ರಾಪ್ತಿ ದೇವತೆಗಳಿಂದ ಆಗಿರದೆ, ಪರಮದೇವೋತ್ತಮ ಪುರುಷನ ಏರ್ಪಾಡಿನಿಂದಾಗಿರುವುದು. ಅಲ್ಪಮತಿಯಾದ ಜೀವಿಯು ಇದನ್ನು ತಿಳಿದಿರುವುದಿಲ್ಲ, ಆದ್ದರಿಂದಲೇ ಅವನು ಮೂಢನಾಗಿ ಯಾವುದೋ ಲಾಭಕ್ಕಾಗಿ ದೇವತೆಗಳ ಬಳಿಗೆ ಹೋಗುತ್ತಾನೆ. ಆದರೆ ಶುದ್ಧ ಭಕ್ತನು, ಯಾವುದಾದರೂ ಅವಶ್ಯಕತೆ ಇರುವಾಗ ಭಗವಂತನನ್ನು ಮಾತ್ರ ಪ್ರಾರ್ಥಿಸುತ್ತಾನೆ. ಆದರೆ ಭೌತಿಕ ಲಾಭಕ್ಕಾಗಿ ಕೇಳುವುದು, ಶುದ್ಧ ಭಕ್ತನ ಲಕ್ಷಣವಲ್ಲ. ಜೀವಿಯು ಸಾಮಾನ್ಯವಾಗಿ ದೇವತೆಗಳಲ್ಲಿಗೆ ಹೋಗುವುದು ಏಕೆಂದರೆ ಅವನು ತನ್ನ ಕಾಮವನ್ನು ನೆರವೇರಿಸಿಕೊಳ್ಳಲು ಹುಚ್ಚನಾಗಿರುವುದರಿಂದ. ಜೀವಿಯು ಯಾವುದೋ ಅನುಚಿತವಾದುದನ್ನು ಬಯಸಿದಾಗ ಮತ್ತು ಭಗವಂತನು ಸ್ವಯಂ ಅಂಥ ಇಚ್ಛೆಯನ್ನು ಪೂರೈಸದಿರುವಾಗ ಹೀಗಾಗುವುದು. ಪರಮ ಪ್ರಭುವನ್ನು ಆರಾಧಿಸುವವನು ಮತ್ತು ಅದೇ ಕಾಲದಲ್ಲಿ ಭೌತಿಕ ಭೋಗವನ್ನು ಬಯಸುವವನು ತನ್ನ ಆಸೆಗಳಲ್ಲಿ ವಿರೋಧಾತ್ಮಕವಾಗಿರುತ್ತಾನೆ ಎಂದು ಚೈತನ್ಯ ಚರಿತಾಮೃತದಲ್ಲಿ ಹೇಳಿದೆ. ಪರಮ ಪ್ರಭುವಿಗೆ ಭಕ್ತಿಯುತ ಸೇವೆಯು ಮತ್ತು ದೇವತಾ ಪೂಜೆಯು ಒಂದೇ ವೇದಿಕೆಯ ಮೇಲೆ ಇರಲಾಗದು, ಏಕೆಂದರೆ ದೇವತಾ ಪೂಜೆಯು ಭೌತಿಕ, ಮತ್ತು ಪರಮ ಪ್ರಭುವಿಗೆ ಭಕ್ತಿಯುತ ಸೇವೆಯು ಸಂಪೂರ್ಣವಾಗಿ ಆಧ್ಯಾತ್ಮಿಕ.

ಭಗವದ್ಧಾಮಕ್ಕೆ ಮರಳ ಬಯಸುವ ಜೀವಿಗೆ, ಭೌತಿಕ ಆಸೆಗಳು ಅಡಚಣೆಗಳಾಗಿರುತ್ತವೆ.ಅಲ್ಪಮತಿ ಜೀವಿಗಳು ಬಯಸುವ ಭೌತಿಕ ಲಾಭಗಳನ್ನುಶುದ್ಧ ಭಕ್ತನಿಗೆ ಕೊಡಲ್ಪಡುವುದಿಲ್ಲ. ಆದ್ದರಿಂದ ಈ ಅಲ್ಪಮತಿಗಳು ಪರಮ ಪ್ರಭುವಿನ ಭಕ್ತಿಯುತ ಸೇವೆಯಲ್ಲಿ ತೊಡಗುವುದಕ್ಕಿಂತ ಭೌತಿಕ ಜಗತ್ತಿನ ದೇವತೆಗಳನ್ನು ಪೂಜಿಸಲು ಹೆಚ್ಚು ಇಷ್ಟಪಡುವರು.

**ಅನ್ತವತ್ತು ಫಲಂ ತೇಷಾಂ ತದ್ ಭವತ್ಯಲ್ಪಮೇಧಸಾಮ್ ।**
**ದೇವಾನ್ ದೇವಯಜೋ ಯಾನ್ತಿ ಮದ್ಭಕ್ತಾ ಯಾನ್ತಿ ಮಾಮಪಿ ॥ ೨೩ ॥**

ಅನ್ತವತ್—ನಾಶಶೀಲ, ತು—ಆದರೆ, ಫಲಮ್—ಫಲವು, ತೇಷಾಮ್—ಅವರ, ತದ್—ಅದು, ಭವತಿ—ಆಗುತ್ತದೆ, ಅಲ್ಪಮೇಧಸಾಮ್—ಅಲ್ಪ ಬುದ್ಧಿಯುಳ್ಳವರ, ದೇವಾನ್—ದೇವತೆಗಳಿಗೆ, ದೇವಯಜಃ—ದೇವತೆಗಳ ಆರಾಧಕರು, ಯಾನ್ತಿ—ಹೋಗುತ್ತಾರೆ, ಮದ್—ನನ್ನ, ಭಕ್ತಾಃ—ಭಕ್ತರು, ಯಾನ್ತಿ—ಹೋಗುತ್ತಾರೆ, ಮಾಮ್—ನನ್ನಲ್ಲಿಗೆ, ಅಪಿ—ಕೂಡ.

**ಅಲ್ಪಬುದ್ಧಿಯುಳ್ಳ ಮಾನವರು ದೇವತೆಗಳನ್ನು ಆರಾಧಿಸುತ್ತಾರೆ, ಮತ್ತು ಅವರ ಫಲಗಳು ಪರಿಮಿತ ಮತ್ತು ತಾತ್ಕಾಲಿಕ. ದೇವತೆಗಳ ಆರಾಧಕರು ದೇವತೆಗಳ ಲೋಕಗಳಿಗೆ ಹೋಗುತ್ತಾರೆ, ಆದರೆ ನನ್ನ ಭಕ್ತರು ಅಂತಿಮವಾಗಿ ನನ್ನ ಪರಮ ಲೋಕವನ್ನು ಸೇರುತ್ತಾರೆ.**

**ಭಾವಾರ್ಥ :** ದೇವತಾರಾಧಕನು ಪರಮ ಪ್ರಭುವನ್ನು ಸೇರಬಹುದು ಎಂದು ಭಗವದ್ಗೀತೆಯ ಕೆಲವು ವ್ಯಾಖ್ಯಾನಕಾರರು ಹೇಳುತ್ತಾರೆ. ಆದರೆ ವಿವಿಧ ದೇವತೆಗಳು ಇರುವ ವಿವಿಧ ಲೋಕವ್ಯೂಹಗಳಿಗೆ ದೇವತಾರಾಧಕರು ಹೋಗುತ್ತಾರೆ ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಉದಾಹರಣೆಗೆ ಸೂರ್ಯನನ್ನು ಪೂಜಿಸುವವನು ಸೂರ್ಯನನ್ನು ಸೇರುವಂತೆ ಅಥವಾ ಚಂದ್ರನನ್ನು ಪೂಜಿಸುವವನು ಚಂದ್ರಲೋಕವನ್ನು ಸೇರುವಂತೆ. ಅದೇ ಪ್ರಕಾರ, ಇಂದ್ರನಂಥ ದೇವತೆಯನ್ನು ಆರಾಧಿಸಬಯಸುವ ಯಾರೊಬ್ಬನು, ಆ ವಿಶಿಷ್ಟ ದೇವತೆಯ ಲೋಕವನ್ನು ಸೇರಬಲ್ಲನು. ಯಾವುದೇ ದೇವತೆಯನ್ನು ಆರಾಧಿಸಿದರೂ, ಪ್ರತಿಯೊಬ್ಬನೂ ಪರಮ ದೇವೋತ್ತಮ ಪುರುಷನನ್ನು ಸೇರುವನು ಎಂದಲ್ಲ. ಅದು ಇಲ್ಲಿ ನಿರಾಕರಿಸಲ್ಪಟ್ಟಿದೆ, ಏಕೆಂದರೆ ದೇವತಾರಾಧಕರು ಭೌತಿಕ ಜಗತ್ತಿನ ವಿವಿಧ ಲೋಕಗಳಿಗೆ ಹೋಗುತ್ತಾರೆ, ಆದರೆ ಪರಮ ಪ್ರಭುವಿನ ಭಕ್ತನು ನೇರವಾಗಿ ದೇವೋತ್ತಮ ಪುರುಷನ ಪರಮ ಲೋಕಕ್ಕೆ ಹೋಗುತ್ತಾನೆ ಎಂದು ಸ್ಪಷ್ಟವಾಗಿ ಹೇಳಿದೆ.

ದೇವತೆಗಳು ಪರಮ ಪ್ರಭುವಿನ ದೇಹದ ವಿವಿಧ ಭಾಗಗಳಾಗಿದ್ದರೆ, ಆಗ ಅವರ ಆರಾಧನೆಯಿಂದ ಅದೇ ಫಲವು ದೊರೆಯಬೇಕು ಎಂದು ಇಲ್ಲಿ ಪ್ರಸ್ತಾಪಿಸಬಹುದು. ದೇವತೆಗಳ ಆರಾಧಕರಾದರೋ ಅಲ್ಪಮತಿಗಳು, ಏಕೆಂದರೆ ದೇಹದ ಯಾವ ಭಾಗಕ್ಕೆ ಆಹಾರ ಒದಗಿಸಬೇಕೆಂದು ಅವರಿಗೆ ತಿಳಿಯದು. ಅನೇಕ ಭಾಗಗಳಿವೆ ಮತ್ತು ಆಹಾರ ಪೂರೈಕೆಯಲ್ಲಿ ಅನೇಕ ರೀತಿಗಳಿವೆ ಎಂದು ಹೇಳುವಷ್ಟು ಮೂಢರು ಅವರಲ್ಲಿ ಕೆಲವರು. ಇದು ಅಷ್ಟು ಆಶಾದಾಯಕವಲ್ಲ. ಯಾರಾದರೂ ಕಿವಿಗಳ ಅಥವಾ ಕಣ್ಣುಗಳ ಮೂಲಕ ದೇಹಕ್ಕೆ ಆಹಾರವನ್ನು ಒದಗಿಸಲಾಗುವುದೇ ? ಈ ದೇವತೆಗಳು ಪರಮ ಪ್ರಭುವಿನ ವಿರಾಟ್ ದೇಹದ ವಿವಿಧ ಭಾಗಗಳು ಎಂಬುದು ಅವರಿಗೆ ತಿಳಿದಿಲ್ಲ, ಮತ್ತು ತಮ್ಮ ಈ ಅಜ್ಞಾನದಲ್ಲಿ ಪ್ರತಿಯೊಬ್ಬ ದೇವತೆಯೂ ಪ್ರತ್ಯೇಕ ದೇವರು ಮತ್ತು ಪರಮ ಪ್ರಭುವಿನ ಸ್ಪರ್ಧಿ ಎಂದು ನಂಬುತ್ತಾರೆ.

ದೇವತೆಗಳು ಮಾತ್ರವಲ್ಲದೆ ಸಾಮಾನ್ಯ ಜೀವಿಗಳೂ ಸಹ ಭಗವಂತನ ಅಂಶಗಳು. ಬ್ರಾಹ್ಮಣರು ಪರಮ ಪ್ರಭುವಿನ ಶಿರಸ್ಸು, ಕ್ಷತ್ರಿಯರು ಅವನ ಬಾಹುಗಳು, ವೈಶ್ಯರು ಅವನ ನಡು, ಶೂದ್ರರು ಅವನ ಕಾಲುಗಳು ಮತ್ತು ಎಲ್ಲರೂ ವಿವಿಧ ಕ್ರಿಯೆಗಳನ್ನು ಮಾಡುತ್ತಾರೆ ಎಂದು ಶ್ರೀಮದ್ ಭಾಗವತದಲ್ಲಿ ಹೇಳಿದೆ. ಸನ್ನಿವೇಶವು ಹೇಗಿದ್ದರೂ, ದೇವತೆಗಳು ಮತ್ತು ತಾನು ಪರಮ ಪ್ರಭುವಿನ ವಿಭಿನ್ನಾಂಶರೆಂದು ಒಬ್ಬನು ತಿಳಿದರೆ, ಅವನ ಜ್ಞಾನವು ಪರಿಪೂರ್ಣ. ಆದರೆ ಅವನು ಇದನ್ನು ಅರಿತುಕೊಳ್ಳದಿದ್ದರೆ, ಅವನು ದೇವತೆಗಳು ವಾಸಿಸುವ ವಿವಿಧ ಲೋಕಗಳನ್ನು ಸೇರುತ್ತಾನೆ. ಭಕ್ತನು ಸೇರುವ ಸ್ಥಾನವು ಇದಲ್ಲ.

ದೇವತೆಗಳ ಆಶೀರ್ವಾದಗಳಿಂದ ದೊರೆತ ಫಲಗಳು ನಾಶಶೀಲ, ಏಕೆಂದರೆ ಈ ಭೌತಿಕ ಜಗತ್ತಿನಲ್ಲಿ ಲೋಕಗಳು, ದೇವತೆಗಳು ಮತ್ತು ಅವರ ಆರಾಧಕರೂ ಎಲ್ಲರೂ ನಾಶಶೀಲ. ಆದ್ದರಿಂದ ದೇವತೆಗಳ ಆರಾಧನೆಯಿಂದ ದೊರೆಯುವ ಎಲ್ಲಾ ಫಲಗಳು ನಾಶಶೀಲ, ಮತ್ತು ಆದ್ದರಿಂದ ಅಂಥ ಆರಾಧನೆಯು ಅಲ್ಪಮತಿಯಾದ ಜೀವಿಯಿಂದ

ಆಚರಿಸಲ್ಪಡುತ್ತದೆ ಎಂದು ಈ ಶ್ಲೋಕದಲ್ಲಿ ಸ್ಪಷ್ಟವಾಗಿ ಹೇಳಿದೆ. ಶುದ್ಧ ಭಕ್ತನು ಕೃಷ್ಣಪ್ರಜ್ಞೆಯಲ್ಲಿ ಪರಮಪ್ರಭುವಿನ ಭಕ್ತಿಯುಕ್ತ ಸೇವೆಯಲ್ಲಿ ನಿರತನಾಗಿ ಶಾಶ್ವತ ಆನಂದ ಪೂರ್ಣ ಜ್ಞಾನಪೂರ್ಣ ಅಸ್ತಿತ್ವವನ್ನು ಹೊಂದುವುದರಿಂದ, ಅವನು ಸಾಧಿಸಿದ ಗುರಿಯು ದೇವತೆಗಳ ಸಾಮಾನ್ಯ ಆರಾಧಕನು ಸಾಧಿಸಿದ ಗುರಿಯೂ ಭಿನ್ನವಾಗಿರುತ್ತವೆ. ಪರಮ ಪ್ರಭು ಅಪರಿಮಿತನು; ಅವನ ಅನುಗ್ರಹವೂ ಅಪರಿಮಿತ; ಅವನ ಕೃಪೆಯೂ ಅಪರಿಮಿತ. ಆದ್ದರಿಂದ ತನ್ನ ಶುದ್ಧ ಭಕ್ತನ ಮೇಲೆ ಪರಮ ಪ್ರಭುವಿನ ಅನುಗ್ರಹವೂ ಅಪರಿಮಿತ.

**ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯನ್ತೇ ಮಾಮಬುದ್ಧಯಃ ।**
**ಪರಂ ಭಾವಮಜಾನನ್ತೋ ಮಮಾವ್ಯಯಮನುತ್ತಮಮ್ ॥ ೨೪ ॥**

ಅವ್ಯಕ್ತಮ್—ಅವ್ಯಕ್ತವಾದುದು, ವ್ಯಕ್ತಿಮ್—ವ್ಯಕ್ತಿತ್ವ, ಆಪನ್ನಮ್—ಹೊಂದಿದ, ಮನ್ಯನ್ತೇ—ತಿಳಿಯುತ್ತಾರೆ, ಮಾಮ್—ನನ್ನನ್ನು, ಅಬುದ್ಧಯಃ—ಬುದ್ಧಿಹೀನರು, ಪರಮ್—ಪರಮ, ಭಾವಮ್—ಅಸ್ತಿತ್ವವನ್ನು, ಅಜಾನತಃ—ತಿಳಿಯದೆ, ಮಮ—ನನ್ನ, ಅವ್ಯಯಮ್—ಅವಿನಾಶಿ, ಅನುತ್ತಮಮ್—ಅತ್ಯುತ್ಕೃಷ್ಟ.

**ನನ್ನನ್ನು ಪರಿಪೂರ್ಣವಾಗಿ ತಿಳಿಯದ ಬುದ್ಧಿಹೀನರು, ಪರಮ ದೇವೋತ್ತಮ ಪುರುಷ ಕೃಷ್ಣನಾದ ನಾನು, ಪೂರ್ವದಲ್ಲಿ ವ್ಯಕ್ತಿಶೂನ್ಯನಾಗಿದ್ದೆನು ಮತ್ತು ಈಗ ಈ ವ್ಯಕ್ತಿತ್ವವನ್ನು ತಾಳಿರುವೆನೆಂದು ತಿಳಿಯುತ್ತಾರೆ. ತಮ್ಮ ಅಲ್ಪ ಜ್ಞಾನದಿಂದಾಗಿ ಅವಿನಾಶಿಯೂ ಮತ್ತು ಪರಮವಾಗಿರುವ ನನ್ನ ಉತ್ಕೃಷ್ಟ ಸ್ವಭಾವವನ್ನು ಅವರು ತಿಳಿದಿಲ್ಲ.**

**ಭಾವಾರ್ಥ :** ದೇವತೆಗಳ ಆರಾಧಕರು ಅಲ್ಪಮತಿಗಳೆಂದು ವರ್ಣಿಸಲ್ಪಟ್ಟಿದ್ದಾರೆ, ಮತ್ತು ಇಲ್ಲಿ ವ್ಯಕ್ತಿಶೂನ್ಯವಾದಿಗಳು ಹಾಗೆಯೇ ವರ್ಣಿತರು. ಇಲ್ಲಿ ಭಗವಾನ್ ಕೃಷ್ಣನು ತನ್ನ ಸ್ವಯಂ ರೂಪದಲ್ಲಿ ಅರ್ಜುನನ ಮುಂದೆ ಮಾತನಾಡುತ್ತಿದ್ದಾನೆ. ಆದರೂ, ಅಜ್ಞಾನದ ಕಾರಣ ವ್ಯಕ್ತಿಶೂನ್ಯ ವಾದಿಗಳು ಪರಮ ಪ್ರಭುವಿಗೆ ಅಂತಿಮವಾಗಿ ರೂಪ ವಿಲ್ಲವೆಂದು ವಾದಿಸುತ್ತಾರೆ. ರಾಮಾನುಜಾಚಾರ್ಯರ ಗುರು ಪರಂಪರೆಯಲ್ಲಿನ ಮಹಾ ಭಗವದ್ಭಕ್ತರಾದ ಯಾಮುನಾಚಾರ್ಯರು ಈ ಸಂಬಂಧದಲ್ಲಿ ಬಹು ಉಚಿತವಾಗಿರುವ ಎರಡು ಶ್ಲೋಕಗಳನ್ನು ಬರೆದಿದ್ದಾರೆ. ಅವರು ಹೇಳುತ್ತಾರೆ:

ತ್ವಾಂ ಶೀಲರೂಪಚರಿತೈಃ ಪರಮಪ್ರಕೃಷ್ಟೈಃ।
ಸತ್ತ್ವೇನ ಸಾತ್ತ್ವಿಕತಯಾ ಪ್ರಬಲೈಶ್ಚ ಶಾಸ್ತ್ರೈಃ॥
ಪ್ರಖ್ಯಾತದೈವಪರಮಾರ್ಥವಿದಾಂ ಮತೈಶ್ಚ।
ನೈವಾಸುರ ಪ್ರಕೃತಯಃ ಪ್ರಭವನ್ತಿ ಬೋದ್ಧುಮ್॥

**"ನನ್ನ ಪ್ರಿಯ ಭಗವಂತನೇ, ವ್ಯಾಸ ಮತ್ತು ನಾರದರಂಥ ಭಕ್ತರು ನೀನು ದೇವೋತ್ತಮ ಪುರುಷನೆಂಬುದನ್ನು ಬಲ್ಲರು. ವಿವಿಧ ವೇದ ಸಾಹಿತ್ಯಗಳ ಅರಿವಿನಿಂದ, ಒಬ್ಬನು ನಿನ್ನ**

ವಿಶೇಷ ಲಕ್ಷಣಗಳನ್ನು, ನಿನ್ನ ರೂಪ ಮತ್ತು ನಿನ್ನ ಚಟುವಟಿಕೆಗಳನ್ನು ತಿಳಿಯಬಲ್ಲನು, ಮತ್ತು ಹೀಗೆ ನೀನು ಪರಮ ದೇವೋತ್ತಮ ಪುರುಷನೆಂದು ಅರಿತುಕೊಳ್ಳಬಲ್ಲನು. ಆದರೆ ರಜೋಗುಣ ಮತ್ತು ತಮೋಗುಣದಲ್ಲಿರುವವರು, ಅಸುರರು, ಅಭಕ್ತರು, ನಿನ್ನನ್ನು ಅರಿಯಲಾರರು. ಅವರು ನಿನ್ನನ್ನು ಅರಿಯಲು ಅಸಮರ್ಥರು. ವೇದಾಂತ, ಉಪನಿಷತ್ತುಗಳು ಮತ್ತು ಇತರ ವೈದಿಕ ಸಾಹಿತ್ಯಗಳನ್ನು ಚರ್ಚಿಸುವುದರಲ್ಲಿ ಅಂಥ ಅಭಕ್ತರು ಎಷ್ಟೇ ನಿಪುಣರಾಗಿದ್ದರೂ, ಅವರಿಗೆ ದೇವೋತ್ತಮ ಪುರುಷನನ್ನು ಅರಿತುಕೊಳ್ಳುವುದು ಸಾಧ್ಯವಿಲ್ಲ." (ಸ್ತೋತ್ರ-ರತ್ನ 12)

ಕೇವಲ ವೇದಾಂತ ಸಾಹಿತ್ಯ ಅಧ್ಯಯನದಿಂದ ದೇವೋತ್ತಮ ಪುರುಷನನ್ನು ಅರಿಯಲಾಗದು ಎಂದು ಬ್ರಹ್ಮ ಸಂಹಿತೆಯಲ್ಲಿ ಹೇಳಿದೆ. ಪರಮಪ್ರಭುವಿನ ದಯೆಯಿಂದ ಮಾತ್ರ ಪರಮನ ವ್ಯಕ್ತಿತ್ವವನ್ನು ತಿಳಿಯಬಹುದು. ಆದ್ದರಿಂದ ಈ ಶ್ಲೋಕದಲ್ಲಿ, ದೇವತಾರಾಧಕರು ಅಲ್ಪಮತಿಗಳಷ್ಟೇ ಅಲ್ಲದೆ, ನಿಜವಾದ ಕೃಷ್ಣಪ್ರಜ್ಞೆಯ ಲವಲೇಶವಿಲ್ಲದೆ ವೇದಾಂತ ಮತ್ತು ವೈದಿಕ ಸಾಹಿತ್ಯ ಕುರಿತು ಊಹಾಪೋಹೆಯಲ್ಲಿ ನಿರತರಾದ ಅಭಕ್ತರೂ ಸಹ ಅಲ್ಪಮತಿಗಳೆಂದು ಸ್ಪಷ್ಟವಾಗಿ ಹೇಳಿದೆ, ಮತ್ತು ಅವರಿಗೆ ಭಗವಂತನ ವೈಯಕ್ತಿಕ ಸ್ವಭಾವವನ್ನು ಅರಿಯುವುದು ಸಾಧ್ಯವಿಲ್ಲ. ಪರಮ ಸತ್ಯವು ವ್ಯಕ್ತಿಶೂನ್ಯ ಎಂಬ ಭಾವನೆಯುಳ್ಳವರನ್ನು **ಅಬುದ್ಧಯಃ** ಎಂದು ವರ್ಣಿಸಿದೆ, ಹಾಗೆಂದರೆ ಪರಮಸತ್ಯದ ಅಂತಿಮ ಲಕ್ಷಣವನ್ನು ಅರಿಯದವರು ಎಂದು ಅರ್ಥ. ಪರಮ ಸಾಕ್ಷಾತ್ಕಾರವು ವ್ಯಕ್ತಿಶೂನ್ಯ ಬ್ರಹ್ಮನ್‌ನಿಂದ ಪ್ರಾರಂಭವಾಗುತ್ತದೆ, ಮತ್ತು ನಂತರ ಸ್ಥಳೀಯ ಪರಮಾತ್ಮನಿಗೆ ಏರುತ್ತದೆ—ಆದರೆ ಪರಮ ಸತ್ಯದಲ್ಲಿ ಕೊನೆಯ ಮಾತು ದೇವೋತ್ತಮ ಪುರುಷನೆಂದು ಶ್ರೀಮದ್ ಭಾಗವತದಲ್ಲಿ ಹೇಳಿದೆ. ಆಧುನಿಕ ವ್ಯಕ್ತಿಶೂನ್ಯವಾದಿಗಳು ಮತ್ತಷ್ಟು ಅಲ್ಪಮತಿಗಳು, ಏಕೆಂದರೆ ಕೃಷ್ಣನು ಪರಮ ದೇವೋತ್ತಮ ಪುರುಷನೆಂದು ನಿರ್ದಿಷ್ಟವಾಗಿ ಹೇಳಿದ ತಮ್ಮ ಮಹಾಪೂರ್ವಜರಾದ ಶಂಕರಾಚಾರ್ಯರನ್ನು ಕೂಡ ಅವರು ಅನುಸರಿಸುವುದಿಲ್ಲ. ಆದ್ದರಿಂದ ವ್ಯಕ್ತಿಶೂನ್ಯವಾದಿಗಳು ಪರಮ ಸತ್ಯವನ್ನು ಅರಿಯದೆ, ಕೃಷ್ಣನು ದೇವಕಿ-ವಸುದೇವರ ಪುತ್ರನು ಮಾತ್ರ ಅಥವಾ ಒಬ್ಬ ರಾಜಕುಮಾರ ಅಥವಾ ಒಬ್ಬ ಬಲಿಷ್ಠ ಜೀವಿ ಎಂದು ಭಾವಿಸುತ್ತಾರೆ. ಇದನ್ನು ಕೂಡ ಭಗವದ್ಗೀತೆಯಲ್ಲಿ (9.11) ಖಂಡಿಸಲಾಗಿದೆ: **ಅವಜಾನನ್ತಿ ಮಾಂ ಮೂಢಾ ಮಾನುಷೀಂ ತನುಮ್ ಆಶ್ರಿತಮ್** "ಮೂಢರು ಮಾತ್ರವೇ ನನ್ನನ್ನು ಸಾಮಾನ್ಯ ವ್ಯಕ್ತಿ ಎಂದು ಭಾವಿಸುತ್ತಾರೆ."

ಭಕ್ತಿಯುತ ಸೇವೆಯನ್ನು ಸಲ್ಲಿಸದೆ ಮತ್ತು ಕೃಷ್ಣ ಪ್ರಜ್ಞಾಭಿವೃದ್ಧಿ ಮಾಡಿಕೊಳ್ಳದೆ ಯಾರೂ ಕೃಷ್ಣನನ್ನು ಅರಿಯಲಾರರು ಎಂಬುದು ಸತ್ಯಸಂಗತಿ. ಭಾಗವತವು (10.14.29) ಇದನ್ನು ದೃಢಪಡಿಸುತ್ತದೆ :

ಅಥಾಪಿ ತೇ ದೇವ ಪದಾಮ್ಬುಜದ್ವಯ-
ಪ್ರಸಾದಲೇಶಾನುಗೃಹೀತ ಏವ ಹಿ
ಜಾನಾತಿ ತತ್ತ್ವಂ ಭಗವನ್ ಮಹಿಮ್ನೋ
ನ ಚಾನ್ಯ ಏಕೋಽಪಿ ಚಿರಂ ವಿಚಿನ್ವನ್

"ನನ್ನ ಭಗವಂತನೇ,ಒಬ್ಬನಿಗೆ ನಿನ್ನ ಪಾದಾರವಿಂದಗಳ ಲೇಶಾನುಗ್ರಹವಾದರೂ ದೊರೆತರೆ, ಅವನು ನಿನ್ನ ವ್ಯಕ್ತಿತ್ವದ ಮಹತ್ವವನ್ನು ಅರಿಯಬಲ್ಲನು. ಆದರೆ ಪರಮದೇವೋತ್ತಮ ಪುರುಷನನ್ನು ಅರಿಯಲು ಊಹಾಪೋಹ ಮಾಡುವವರು ಅನೇಕ ವರ್ಷಗಳವರೆಗೆ ಅವರು ವೇದಾಧ್ಯಯನವನ್ನು ಮುಂದುವರಿಸಿದರೂ ಕೂಡ, ನಿನ್ನನ್ನು ಅರಿಯಲು ಅಸಮರ್ಥರು." ಕೇವಲ ಮಾನಸಿಕ ಊಹಾಪೋಹದಿಂದ ಅಥವಾ ವೇದ ಸಾಹಿತ್ಯವನ್ನು ಚರ್ಚಿಸುವುದರಿಂದ ಒಬ್ಬನು ಪರಮದೇವೋತ್ತಮ ಪುರುಷ ಕೃಷ್ಣನನ್ನು, ಅಥವಾ ಅವನ ರೂಪ, ಗುಣ ಅಥವಾ ನಾಮವನ್ನು ಅರಿಯಲಾಗದು. ಭಕ್ತಿಯುತ ಸೇವೆಯಿಂದ ಅವನನ್ನು ಅರಿಯ ಬೇಕು. ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ / ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ— ಮಹಾಮಂತ್ರವನ್ನು ಜಪಿಸುವುದರಿಂದ ಆರಂಭಿಸಿ, ಒಬ್ಬನು ಪೂರ್ಣ ಕೃಷ್ಣಪ್ರಜ್ಞೆಯಲ್ಲಿ ನಿರತನಾದಾಗ ಮಾತ್ರ ಪರಮ ದೇವೋತ್ತಮ ಪುರುಷನನ್ನು ಅರಿತುಕೊಳ್ಳಬಲ್ಲನು. ಅಭಕ್ತ ವ್ಯಕ್ತಿಶೂನ್ಯವಾದಿಗಳು ಕೃಷ್ಣನಿಗೆ ಈ ಭೌತಿಕ ಪ್ರಕೃತಿಯಿಂದ ನಿರ್ಮಿತವಾದ ದೇಹವಿದೆ ಮತ್ತು ಅವನ ಎಲ್ಲಾ ಲೀಲೆಗಳು, ಅವನ ರೂಪ ಮತ್ತು ಪ್ರತಿಯೊಂದೂ ಮಾಯೆ ಎಂದು ಭಾವಿಸು ತ್ತಾರೆ. ಈ ವ್ಯಕ್ತಿಶೂನ್ಯವಾದಿಗಳು ಮಾಯಾವಾದಿಗಳು. ಅವರು ಅಂತಿಮ ಸತ್ಯವನ್ನು ತಿಳಿದಿಲ್ಲ.

**ಕಾಮೈಸ್ತೈಸ್ತೈರ್ ಹೃತ-ಜ್ಞಾನಾಃ ಪ್ರಪದ್ಯನ್ತೇ ಅನ್ಯದೇವತಾಃ**— "ಅತಿ ಯಾದ ಕಾಮನೆಗಳಿಂದ ಕುರುಡಾದವರು ವಿವಿಧ ದೇವತೆಗಳಿಗೆ ಶರಣಾಗುತ್ತಾರೆ", ಎಂದು ಇಪ್ಪತ್ತನೆಯ ಶ್ಲೋಕವು ಸ್ಪಷ್ಟವಾಗಿ ಹೇಳುತ್ತದೆ. ಪರಮ ದೇವೋತ್ತಮ ಪುರುಷನಲ್ಲದೆ, ಅವರವರ ವಿವಿಧ ಲೋಕಗಳಿರುವ ದೇವತೆಗಳಿದ್ದಾರೆ, ಮತ್ತು ಭಗವಂತನಿಗೂ ಲೋಕವಿದೆ ಎಂಬುದು ಅಂಗೀಕೃತ. ಇಪ್ಪತ್ತಮೂರನೆಯ ಶ್ಲೋಕದಲ್ಲಿ ಹೇಳಿರುವಂತೆ, **ದೇವಾನ್ ದೇವಯಜೋ ಯಾನ್ತಿ ಮದ್-ಭಕ್ತಾ ಯಾನ್ತಿ ಮಾಮ್ ಅಪಿ**, ಎಂದರೆ ದೇವತಾರಾಧಕರು ದೇವತೆಗಳ ವಿವಿಧ ಲೋಕಗಳಿಗೆ ಹೋಗುತ್ತಾರೆ ಮತ್ತು ಕೃಷ್ಣನ ಭಕ್ತರು ಕೃಷ್ಣಲೋಕಕ್ಕೆ ಹೋಗುತ್ತಾರೆ. ಇದು ಸ್ಪಷ್ಟ ವಾಗಿ ಹೇಳಲ್ಪಟ್ಟಿದ್ದರೂ, ಮೂಢ ವ್ಯಕ್ತಿಶೂನ್ಯವಾದಿಗಳು ಭಗವಂತನಿಗೆ ರೂಪವಿಲ್ಲ ಮತ್ತು ಈ ರೂಪಗಳು ಆರೋಪಿತಗಳು ಎಂದು ಹೇಳುತ್ತಾರೆ. ಗೀತೆಯ ಅಧ್ಯಯನದಿಂದ ದೇವತೆಗಳು ಮತ್ತು ಅವರ ಲೋಕಗಳು ವ್ಯಕ್ತಿ ಸ್ವರೂಪರಹಿತರೆಂದು ಕಂಡುಬರುವುದೇ ? ಸ್ಪಷ್ಟವಾಗಿ, ದೇವತೆಗಳಾಗಲೀ ಅಥವಾ ಪರಮದೇವೋತ್ತಮ ಪುರುಷ ಕೃಷ್ಣನಾಗಲೀ ವ್ಯಕ್ತಿಸ್ವರೂಪರಹಿತರಲ್ಲ. ಅವರೆಲ್ಲರೂ ವ್ಯಕ್ತಿಗಳು ; ಕೃಷ್ಣನು ಪರಮ ದೇವೋತ್ತಮ ಪುರುಷನು, ಅವನಿಗೆ ತನ್ನದೇ ಆದ ಸ್ವಂತ ಲೋಕವಿದೆ ಮತ್ತು ದೇವತೆಗಳಿಗೆ ಅವರವರ ಲೋಕಗಳಿವೆ.

ಆದ್ದರಿಂದ ಪರಮ ಸತ್ಯವು ರೂಪರಹಿತ ಮತ್ತು ರೂಪವು ಆರೋಪಿತ ಎಂಬ ಅದ್ವೈತವಾದವು ಸತ್ಯವಲ್ಲ. ಅದು ಆರೋಪಿತವಲ್ಲವೆಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ದೇವತೆಗಳ ರೂಪಗಳು ಮತ್ತು ಪರಮ ಪ್ರಭುವಿನ ರೂಪವು ಏಕಕಾಲದಲ್ಲಿ ಅಸ್ತಿತ್ವದಲ್ಲಿವೆ

ಮತ್ತು ಕೃಷ್ಣನು **ಸಚ್ಚಿದಾನನ್ದ,** ಎಂದರೆ ನಿತ್ಯ ಜ್ಞಾನಾನಂದ ಸ್ವರೂಪನು ಎಂಬುದನ್ನು ಭಗವದ್ಗೀತೆಯಿಂದ ನಾವು ಸ್ಪಷ್ಟವಾಗಿ ಅರಿತುಕೊಳ್ಳಬಹುದು. ಪರಮ ಸತ್ಯವು **ಆನಂದ ಮಯೋಽಭ್ಯಾಸಾತ್** ಅಥವಾ ಸ್ವಭಾವತಃ ಪರಮಾನಂದ ಪೂರ್ಣನು ಮತ್ತು ಅವನು ಅಪರಿಮಿತ ಮಂಗಲಗುಣಗಳ ನಿಧಿ ಎಂದು ವೇದಗಳು ಕೂಡ ದೃಢಪಡಿಸುತ್ತವೆ. ಗೀತೆಯಲ್ಲಿ, ತಾನು **ಅಜ** (ಜನ್ಮರಹಿತ)ನಾಗಿದ್ದರೂ, ಕಾಣಿಸಿಕೊಳ್ಳುತ್ತೇನೆ ಎಂದು ಭಗವಂತನು ಹೇಳುತ್ತಾನೆ. ಈ ವಿಚಾರಗಳನ್ನು ಗೀತೆಯಿಂದ ನಾವು ಅರಿತುಕೊಳ್ಳಬೇಕು. ಪರಮ ದೇವೋತ್ತಮ ಪುರುಷನು ಹೇಗೆ ವ್ಯಕ್ತಿಶೂನ್ಯನೆಂದು ನಾವು ತಿಳಿಯಲಾರೆವು; ವ್ಯಕ್ತಿಶೂನ್ಯ ವಾದಿ ಅದ್ವೈತಿಯ ಆರೋಪಣವಾದವು ಗೀತೆಯ ಹೇಳಿಕೆಗಳ ಮಟ್ಟಿಗೆ ಸುಳ್ಳು. ಪರಮ ಸತ್ಯನಾದ ಭಗವಾನ್ ಕೃಷ್ಣನಿಗೆ ಉಭಯ ರೂಪ ಮತ್ತು ವ್ಯಕ್ತಿತ್ವಗಳಿವೆ ಎಂಬುದು ಇಲ್ಲಿ ಸ್ಪಷ್ಟ.

**ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ ।**
**ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಮ್ ॥ ೨೫॥**

ನ—ಇಲ್ಲ, ಅಹಮ್—ನಾನು, ಪ್ರಕಾಶಃ—ಪ್ರಕಟ, ಸರ್ವಸ್ಯ—ಪ್ರತಿಯೊಬ್ಬನಿಗೆ, ಯೋಗಮಾಯಾ—ಅಂತರಂಗ ಶಕ್ತಿಯಿಂದ, ಸಮಾವೃತಃ—ಆವೃತನು, ಮೂಢಃ—ಮೂಢನು, ಅಯಮ್—ಇವುಗಳು, ನ—ಇಲ್ಲ, ಅಭಿಜಾನಾತಿ—ತಿಳಿಯುವುದು, ಲೋಕಃ—ಜನರು, ಮಾಮ್—ನನ್ನನ್ನು, ಅಜಮ್—ಜನ್ಮರಹಿತ, ಅವ್ಯಯಮ್—ಅಕ್ಷಯನಾದ.

**ಮೂಢರಿಗೆ ಮತ್ತು ಬುದ್ಧಿಹೀನರಿಗೆ ನಾನು ಎಂದಿಗೂ ಗೋಚರನಲ್ಲ. ಅವರಿಗೆ ನಾನು ನನ್ನ ಅಂತರಂಗ ಶಕ್ತಿಯಿಂದ ಆವೃತನು. ಆದ್ದರಿಂದ ನಾನು ಜನ್ಮರಹಿತನು ಮತ್ತು ಅನೋಘನು ಎಂಬುದನ್ನು ಅವರು ತಿಳಿದಿಲ್ಲ.**

**ಭಾವಾರ್ಥ :** ಕೃಷ್ಣನು ಈ ಭೂಮಿಯ ಮೇಲೆ ಇದ್ದನು ಮತ್ತು ಪ್ರತಿಯೊಬ್ಬರಿಗೆ ಗೋಚರನಾಗಿದ್ದನು, ಹಾಗಿರಲು ಅವನು ಪ್ರತಿಯೊಬ್ಬರಿಗೂ ಈಗ ಏಕೆ ಗೋಚರಿಸುವುದಿಲ್ಲ ಎಂದು ವಾದಿಸಬಹುದು. ಆದರೆ ವಾಸ್ತವಿಕವಾಗಿ ಅವನು ಪ್ರತಿಯೊಬ್ಬರಿಗೂ ಪ್ರಕಟನಾಗಲಿಲ್ಲ. ಕೃಷ್ಣನು ಇದ್ದಾಗ, ಅವನು ಪರಮದೇವೋತ್ತಮ ಪುರುಷನೆಂದು ಅರಿಯಬಲ್ಲವರು ಕೇವಲ ಕೆಲವರು ಮಾತ್ರ ಇದ್ದರು. ಕುರುಗಳ ಸಭೆಯಲ್ಲಿ, ಕೃಷ್ಣನು ಸಭಾಧ್ಯಕ್ಷನಾಗಿ ಆಯ್ಕೆಯಾದುದರ ವಿರುದ್ಧ ಶಿಶುಪಾಲನು ಮಾತನಾಡಿದಾಗ, ಭೀಷ್ಮನು ಕೃಷ್ಣನನ್ನು ಸಮರ್ಥಿಸಿದನು ಮತ್ತು ಅವನನ್ನು ಪರಮದೇವನೆಂದು ಘೋಷಿಸಿದನು. ಅದೇ ಪ್ರಕಾರ, ಪಾಂಡವರು ಮತ್ತು ಕೆಲವೇ ಇತರರು ಅವನೇ ಪರಮನು ಎಂದು ತಿಳಿದಿದ್ದರು. ಪ್ರತಿಯೊಬ್ಬರೂ ಹಾಗೆ ತಿಳಿದಿರಲಿಲ್ಲ. ಅವನು ಅಭಕ್ತರಿಗೆ ಮತ್ತು ಜನಸಾಮಾನ್ಯರಿಗೆ ಪ್ರಕಟನಾಗಿರಲಿಲ್ಲ. ಆದ್ದರಿಂದ ತನ್ನ ಶುದ್ಧ ಭಕ್ತರನ್ನು ಬಿಟ್ಟು ಎಲ್ಲರೂ ಅವನನ್ನು ತಮ್ಮಂತೆಯೇ ತಿಳಿಯುತ್ತಾರೆ ಎಂದು ಭಗವದ್ಗೀತೆಯಲ್ಲಿ ಕೃಷ್ಣನು ಹೇಳುತ್ತಾನೆ. ಅವನು ತನ್ನ ಭಕ್ತರಿಗೆ ಮಾತ್ರ ಸಕಲ ಆನಂದದ ನಿಧಿಯಾಗಿ ಗೋಚರಿಸಿದನು.

ಆದರೆ ಇತರರಿಗೆ, ಬುದ್ಧಿಹೀನ ಅಭಕ್ತರಿಗೆ, ಅವನು ತನ್ನ ಅಂತರಂಗ ಶಕ್ತಿಯಿಂದ ಆವೃತನಾಗಿದ್ದನು.

ಶ್ರೀಮದ್ ಭಾಗವತದಲ್ಲಿ (1.8.19) ಕುಂತಿಯ ಪ್ರಾರ್ಥನೆಗಳಲ್ಲಿ ಭಗವಂತನು ಯೋಗ ಮಾಯೆಯ ಪರದೆಯಿಂದ ಆವೃತನಾಗಿದ್ದಾನೆ ಮತ್ತು ಇದರಿಂದ ಸಾಮಾನ್ಯ ಜನರು ಅವನನ್ನು ಅರಿಯಲಾರರು ಎಂದು ಹೇಳಿದೆ. ಈ ಯೋಗಮಾಯಾ ಪರದೆಯು ಈಶೋಪನಿಷತ್ತಿನಲ್ಲಿ (ಮಂತ್ರ 15) ಕೂಡ ದೃಢಪಟ್ಟಿದೆ, ಅಲ್ಲಿ ಭಕ್ತನು ಹೀಗೆ ಪ್ರಾರ್ಥಿಸುತ್ತಾನೆ :

ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಮ್।
ತತ್ ತ್ವಂ ಪೂಷನ್ ಅಪಾವೃಣು ಸತ್ಯಧರ್ಮಾಯ ದೃಷ್ಟಯೇ॥

"ಹೇ ನನ್ನ ಪ್ರಭುವೇ, ಇಡೀ ವಿಶ್ವದ ಪಾಲಕನು ನೀನು, ಮತ್ತು ನಿನ್ನ ಭಕ್ತಿಯುತ ಸೇವೆಯು ಅತ್ಯುನ್ನತ ಧರ್ಮ ತತ್ವ. ಆದ್ದರಿಂದ ನೀನು ನನ್ನನ್ನೂ ಪಾಲಿಸೆಂದು ನಾನು ಪ್ರಾರ್ಥಿಸುತ್ತೇನೆ. ನಿನ್ನ ದಿವ್ಯ ರೂಪವು ಯೊಗಮಾಯೆಯಿಂದ ಆವೃತವಾಗಿದೆ. **ಬ್ರಹ್ಮಜ್ಯೋತಿ**ಯು ಅಂತರಂಗ ಶಕ್ತಿಯ ಆವರಣ. ನಿನ್ನ **ಸಚ್ಚಿದಾನನ್ದ** ವಿಗ್ರಹವನ್ನು—ಎಂದರೆ ನಿತ್ಯ ಜ್ಞಾನಾನಂದ ಸ್ವರೂಪವನ್ನು—ನೋಡಲು ಅಡ್ಡಿಯಾಗಿರುವ ಈ ಪ್ರಜ್ವಲ ಪ್ರಕಾಶವನ್ನು ದಯವಿಟ್ಟು ನಿವಾರಿಸು." ತನ್ನ ಜ್ಞಾನಾನಂದ ದಿವ್ಯ ರೂಪದಲ್ಲಿ ಪರಮ ದೇವೋತ್ತಮ ಪುರುಷನು ಬ್ರಹ್ಮಜ್ಯೋತಿಯ ಅಂತರಂಗ ಶಕ್ತಿಯಿಂದ ಆವೃತನಾಗಿದ್ದಾನೆ, ಮತ್ತು ಈ ಕಾರಣದಿಂದ ಅಲ್ಪಮತಿಗಳಾದ ವ್ಯಕ್ತಿಶೂನ್ಯವಾದಿಗಳು ಪರಮನನ್ನು ಕಾಣಲಾರರು.

ಶ್ರೀಮದ್‌ಭಾಗವತದಲ್ಲಿ ಕೂಡ (10.14.7) ಬ್ರಹ್ಮನಿಂದ ಈ ಪ್ರಾರ್ಥನೆಯಿದೆ:"ಹೇ ಪರಮದೇವೋತ್ತಮ ಪುರುಷನೇ,ಹೇ ಪರಮಾತ್ಮನೇ,ಹೇ ಸಕಲ ರಹಸ್ಯಗಳ ಸ್ವಾಮಿಯೇ, ನಿನ್ನ ಶಕ್ತಿ ಮತ್ತು ಲೀಲೆಗಳನ್ನು ಈ ಜಗತ್ತಿನಲ್ಲಿ ಯಾರು ಎಣಿಸಬಲ್ಲರು ? ನೀನು ನಿನ್ನ ಅಂತರಂಗ ಶಕ್ತಿಯನ್ನು ಸದಾ ವಿಸ್ತರಿಸುತ್ತಿರುವೆ, ಆದ್ದರಿಂದ ಯಾರೂ ನಿನ್ನನ್ನು ಅರಿಯಲಾರರು. ವಿದ್ವಾಂಸರಾದ ವೈಜ್ಞಾನಿಕರು ಮತ್ತು ಘನ ವಿದ್ವತ್ಪೂರ್ಣ ಪಂಡಿತರು ಭೌತಿಕ ಜಗತ್ತಿನ ಪರಮಾಣು ರಚನೆಯನ್ನು ಅಥವಾ ಗ್ರಹಗಳನ್ನು ಪರೀಕ್ಷಿಸಬಲ್ಲವರಾಗಿದ್ದರೂ ಕೂಡ, ನೀನು ಅವರ ಮುಂದೆಯೇ ಇದ್ದರೂ, ಅವರು ನಿನ್ನ ಶಕ್ತಿ ಮತ್ತು ವಿಭೂತಿಯನ್ನು ಎಣಿಕೆಮಾಡಲು ಅಸಮರ್ಥರು." ಪರಮ ದೇವೋತ್ತಮ ಪುರುಷ, ಭಗವಾನ್ ಕೃಷ್ಣನು ಜನ್ಮರಹಿತನಷ್ಟೇ ಅಲ್ಲದೇ, ಅವ್ಯಯನೂ ಆಗಿದ್ದಾನೆ. ಅವನ ನಿತ್ಯ ರೂಪವು ಜ್ಞಾನಾನಂದ, ಮತ್ತು ಅವನ ಶಕ್ತಿಗಳೆಲ್ಲವೂ ಅವ್ಯಯ.

**ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।**
**ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ॥ ೨೬ ॥**

**ವೇದ—ತಿಳಿದಿರುವೆನು, ಅಹಮ್—ನಾನು, ಸಮತೀತಾನಿ—ಸಂಪೂರ್ಣವಾಗಿ ಗತಿಸಿದ, ವರ್ತಮಾನಾನಿ—ಈಗಿನ, ಚ—ಮತ್ತು, ಅರ್ಜುನ—ಹೇ ಅರ್ಜುನ, ಭವಿಷ್ಯಾಣಿ—**

ಭವಿಷ್ಯದ, ಚ—ಕೂಡ, ಭೂತಾನಿ—ಎಲ್ಲ ಜೀವಿಗಳು, ಮಾಮ್—ನನ್ನನ್ನು, ತು—ಆದರೆ, ವೇದ—ತಿಳಿಯುವುದು, ನ—ಇಲ್ಲ, ಕಶ್ಚನ—ಯಾರೂ.

**ಹೇ ಅರ್ಜುನ, ಪರಮದೇವೋತ್ತಮ ಪುರುಷನಾಗಿ, ನಾನು ಹಿಂದೆ ನಡೆದ ಪ್ರತಿಯೊಂದನ್ನು, ಈಗ ನಡೆಯುತ್ತಿರುವುದನ್ನು ಮತ್ತು ಮುಂದೆ ಬರಲಿರುವ ಎಲ್ಲವನ್ನೂ ತಿಳಿದಿದ್ದೇನೆ. ನಾನು ಎಲ್ಲ ಜೀವಿಗಳನ್ನು ಬಲ್ಲೆನು, ಆದರೆ ನನ್ನನ್ನು ಯಾರೂ ತಿಳಿದಿಲ್ಲ.**

**ಭಾವಾರ್ಥ :** ಇಲ್ಲಿ ವ್ಯಕ್ತಿತ್ವದ ಮತ್ತು ವ್ಯಕ್ತಿಶೂನ್ಯತ್ವದ ಪ್ರಶ್ನೆಯು ಸ್ಪಷ್ಟವಾಗಿ ಉಕ್ತವಾಗಿದೆ. ಪರಮದೇವೋತ್ತಮ ಪುರುಷನ ರೂಪವು, ಕೃಷ್ಣನು ವ್ಯಕ್ತಿಶೂನ್ಯವಾದಿಗಳು ಭಾವಿಸುವಂತೆ **ಮಾಯಾ,** ಎಂದರೆ ಭೌತಿಕವಾಗಿದ್ದರೆ, ಅವನು ಜೀವಿಯ ಹಾಗೆ ದೇಹಬದಲಾಯಿಸಿಕೊಳ್ಳುತ್ತಿದ್ದನು ಮತ್ತು ತನ್ನ ಪೂರ್ವ ಜನ್ಮದ ಬಗ್ಗೆ ಎಲ್ಲವನ್ನು ಮರೆಯುತ್ತಿದ್ದನು. ಭೌತಿಕ ದೇಹವುಳ್ಳ ಯಾವನೂ ತನ್ನ ಪೂರ್ವ ಜನ್ಮವನ್ನು ಸ್ಮರಿಸಿಕೊಳ್ಳಲಾರನು, ಅಥವಾ ತನ್ನ ಭವಿಷ್ಯ ಜನ್ಮವನ್ನು ಹೇಳಲಾರನು, ಅಥವಾ ತನ್ನ ವರ್ತಮಾನ ಜೀವನದ ಪರಿಣಾಮವನ್ನು ಹೇಳಲಾರನು ; ಆದ್ದರಿಂದ ಹಿಂದೆ, ಈಗ ಮತ್ತು ಮುಂದೆ ಏನೇನಾಗುತ್ತಿದೆ ಎಂಬುದನ್ನು ಅವನು ತಿಳಿಯಲಾರನು. ಭೌತಿಕ ಕಲ್ಮಷದಿಂದ ಒಬ್ಬನು ಮುಕ್ತನಾಗದ ಹೊರತು, ಅವನು ಭೂತ ಭವಿಷ್ಯದ್ವರ್ತಮಾನಗಳನ್ನು ತಿಳಿಯಲಾರನು.

ಸಾಮಾನ್ಯ ಮಾನವನಂತಲ್ಲದೆ, ಗತಕಾಲದಲ್ಲಿ ಏನಾಯಿತು, ವರ್ತಮಾನದಲ್ಲಿ ಏನಾಗುತ್ತಿದೆ ಮತ್ತು ಭವಿಷ್ಯದಲ್ಲಿ ಏನಾಗುವುದು ಎಂಬುದನ್ನು ತಾನು ಸಂಪೂರ್ಣವಾಗಿ ಬಲ್ಲೆನು ಎಂದು ಸ್ಪಷ್ಟವಾಗಿ ಕೃಷ್ಣನು ಹೇಳುತ್ತಾನೆ. ಲಕ್ಷೋಪಲಕ್ಷ ವರ್ಷಗಳ ಹಿಂದೆ ಸೂರ್ಯದೇವನಾದ ವಿವಸ್ವಾನನಿಗೆ ಉಪದೇಶಿಸಿದುದನ್ನು ಭಗವಾನ್ ಕೃಷ್ಣನು ಸ್ಮರಿಸುವುದನ್ನು ನಾಲ್ಕನೆಯ ಅಧ್ಯಾಯದಲ್ಲಿ ನಾವು ಕಂಡಿದ್ದೇವೆ. ಕೃಷ್ಣನು ಪ್ರತಿಯೊಬ್ಬ ಜೀವಿಯನ್ನೂ ಬಲ್ಲನು, ಏಕೆಂದರೆ ಅವನು ಪ್ರತಿಯೊಬ್ಬ ಜೀವಿಯ ಹೃದಯದಲ್ಲಿಯೂ ಪರಮಾತ್ಮನಾಗಿ ಸನ್ನಿವೇಶಿತನಾಗಿರುವವನು. ಪ್ರತಿಯೊಬ್ಬ ಜೀವಿಯಲ್ಲಿಯೂ ಪರಮಾತ್ಮನಾಗಿ ಅವನ ಇರುವಿಕೆಯು ಮತ್ತು ಪರಮದೇವೋತ್ತಮ ಪುರುಷನಾಗಿ ಅವನ ಇರುವಿಕೆಯು ಇದ್ದರೂ, ಅಲ್ಪಮತಿಗಳು, ವ್ಯಕ್ತಿಶೂನ್ಯ ಬ್ರಹ್ಮನ್‌ನನ್ನು ಸಾಕ್ಷಾತ್ಕರಿಸಿಕೊಳ್ಳಲು ಶಕ್ತರಾಗಿದ್ದರೂ, ಪರಮ ಪುರುಷನಾಗಿ ಶ್ರೀಕೃಷ್ಣನನ್ನು ಸಾಕ್ಷಾತ್ಕರಿಸಲಾರರು. ಖಂಡಿತವಾಗಿ ಶ್ರೀಕೃಷ್ಣನ ದಿವ್ಯ ದೇಹವು ನಾಶರಹಿತ. ಅವನು ಸೂರ್ಯನಂತೆ, ಮತ್ತು ಮಾಯೆ ಮೋಡದಂತೆ. ಭೌತಿಕ ಜಗತ್ತಿನಲ್ಲಿ ಸೂರ್ಯ, ಮೋಡಗಳು, ನಾನಾ ನಕ್ಷತ್ರಗಳು ಮತ್ತು ಗ್ರಹಗಳಿರುವುದನ್ನು ನಾವು ಕಾಣಬಹುದು. ಮೋಡಗಳು ಆಕಾಶದಲ್ಲಿ ಇವೆಲ್ಲವುಗಳನ್ನೂ ತಾತ್ಕಾಲಿಕವಾಗಿ ಆವರಿಸಬಹುದು, ಆದರೆ ಈ ಆಚ್ಛಾದನೆಯು ನಮ್ಮ ಪರಿಮಿತ ದೃಷ್ಟಿಗೆ ಮಾತ್ರ ಗೋಚರ. ಸೂರ್ಯ, ಚಂದ್ರ ಮತ್ತು ನಕ್ಷತ್ರಗಳು ವಾಸ್ತವಿಕವಾಗಿ ಆವೃತವಾಗಿಲ್ಲ. ಅದೇ ಪ್ರಕಾರ ಮಾಯೆಯು ಪರಮ ಪ್ರಭುವನ್ನು ಆವರಿಸಲಾರದು. ತನ್ನ ಅಂತರಂಗ ಶಕ್ತಿಯಿಂದ ಅವನು ಅಲ್ಪಮತಿ

ಗಳಿಗೆ ವ್ಯಕ್ತನಲ್ಲ. ಈ ಅಧ್ಯಾಯದ ಮೂರನೆಯ ಶ್ಲೋಕದಲ್ಲಿ ಹೇಳಿರುವಂತೆ, ಲಕ್ಷೋಪಲಕ್ಷ ಜನರಲ್ಲಿ, ಕೆಲವರು ಈ ಮಾನವ ಜನ್ಮದಲ್ಲಿ ಪರಿಪೂರ್ಣರಾಗಲು ಪ್ರಯತ್ನಿಸುತ್ತಾರೆ, ಮತ್ತು ಹಾಗೆ ಪರಿಪೂರ್ಣರಾದ ಸಾವಿರಾರು ಜನರಲ್ಲಿ, ಭಗವಾನ್ ಕೃಷ್ಣನು ಏನು ಎಂಬುದನ್ನು ಒಬ್ಬನು ಅರಿಯುವುದು ದುರ್ಲಭ. ಒಬ್ಬನು ವ್ಯಕ್ತಿಶೂನ್ಯ ಬ್ರಹ್ಮನ್ ಅಥವಾ ಸ್ಥಳೀಯ ಪರಮಾತ್ಮನ ಸಾಕ್ಷಾತ್ಕಾರದಿಂದ ಪರಿಪೂರ್ಣನಾಗಿದ್ದರೂ ಕೂಡ, ಕೃಷ್ಣ ಪ್ರಜ್ಞೆಯಲ್ಲಿಲ್ಲದೆ ಅವನು ಪರಮದೇವೋತ್ತಮ ಪುರುಷ, ಶ್ರೀಕೃಷ್ಣನನ್ನು ಅರಿತುಕೊಳ್ಳುವುದು ಅಸಂಭವ.

**ಇಚ್ಛಾದ್ವೇಷಸಮುತ್ಥೇನ ದ್ವನ್ದ್ವಮೋಹೇನ ಭಾರತ ।**
**ಸರ್ವಭೂತಾನಿ ಸಮ್ಮೋಹಂ ಸರ್ಗೇ ಯಾನ್ತಿ ಪರನ್ತಪ ॥ ೨೭ ॥**

ಇಚ್ಛಾ—ಇಚ್ಛೆ, ದ್ವೇಷ—ಮತ್ತು ದ್ವೇಷ, ಸಮುತ್ಥೇನ—ಜನಿತ, ದ್ವನ್ದ್ವ—ದ್ವಂದ್ವದ, ಮೋಹೇನ—ಮೋಹದಿಂದ, ಭಾರತ—ಓ ಭರತ ವಂಶಜನೇ, ಸರ್ವ—ಎಲ್ಲ, ಭೂತಾನಿ—ಜೀವಿಗಳು, ಸಮ್ಮೋಹಂ—ಭ್ರಮೆಯಲ್ಲಿ, ಸರ್ಗೇ—ಹುಟ್ಟುವಾಗ, ಯಾನ್ತಿ—ಹೋಗುತ್ತಾರೆ, ಪರನ್ತಪ—ಹೇ ವೈರಿವಿಕ್ರಮನೇ.

**ಹೇ ಭರತ ವಂಶಜನೇ, ಹೇ ವೈರಿವಿಕ್ರಮನೇ, ಇಚ್ಛೆ ಮತ್ತು ದ್ವೇಷದಿಂದ ಹುಟ್ಟಿದ ದ್ವಂದ್ವಗಳಿಂದ ದಿಗ್ಭ್ರಮಿತರಾಗಿ, ಎಲ್ಲ ಜೀವಿಗಳು ಭ್ರಮೆಯಲ್ಲಿ ಜನಿಸುತ್ತಾರೆ.**

**ಭಾವಾರ್ಥ :** ಜೀವಿಯ ನಿಜ ಸ್ವರೂಪಸ್ಥಿತಿಯು ಶುದ್ಧಜ್ಞಾನವಾದ ಪರಮ ಪ್ರಭುವಿಗೆ ಅಧೀನನಾಗಿರುವುದು. ಒಬ್ಬನು ಈ ಶುದ್ಧಜ್ಞಾನದಿಂದ ಪ್ರತ್ಯೇಕಿತನಾಗಿ ಭ್ರಮೆಯಲ್ಲಿದ್ದಾಗ, ಅವನು ಮಾಯಾ ಶಕ್ತಿಯಿಂದ ನಿಯಂತ್ರಿತನಾಗುತ್ತಾನೆ ಮತ್ತು ಪರಮ ದೇವೋತ್ತಮ ಪುರುಷನನ್ನು ಅರಿತುಕೊಳ್ಳಲಾರನು. ಮಾಯಾ ಶಕ್ತಿಯು ಇಚ್ಛೆ ಮತ್ತು ದ್ವೇಷದ ದ್ವಂದ್ವತೆಯಲ್ಲಿ ಪ್ರಕಟವಾಗುತ್ತದೆ. ಇಚ್ಛೆ ಮತ್ತು ದ್ವೇಷದ ನಿಮಿತ್ತ ಅಜ್ಞಾನಿಯು ಪರಮ ಪ್ರಭುವಿನೊಂದಿಗೆ ಒಂದಾಗ ಬಯಸುತ್ತಾನೆ ಮತ್ತು ಕೃಷ್ಣನು ಪರಮ ದೇವೋತ್ತಮ ಪುರುಷನೆಂದು ಅಸೂಯೆಪಡುತ್ತಾನೆ. ಇಚ್ಛೆ ಮತ್ತು ದ್ವೇಷದಿಂದ ಭ್ರಮಿತರಾಗದ ಅಥವಾ ಕಲುಷಿತರಾಗದ ಶುದ್ಧ ಭಕ್ತರು ಭಗವಾನ್ ಶ್ರೀಕೃಷ್ಣನು ತನ್ನ ಅಂತರಂಗ ಶಕ್ತಿಗಳಿಂದ ಆವಿರ್ಭವಿಸುತ್ತಾನೆ ಎಂದು ಅರಿತುಕೊಳ್ಳಬಲ್ಲರು ; ಆದರೆ ದ್ವಂದ್ವತೆ ಮತ್ತು ಅವಿದ್ಯೆಯಿಂದ ಭ್ರಮಿತರು ಪರಮದೇವೋತ್ತಮ ಪುರುಷನು ಭೌತಿಕ ಶಕ್ತಿಗಳಿಂದ ಸೃಷ್ಟನು ಎಂದು ಭಾವಿಸುತ್ತಾರೆ. ಇದು ಅವರ ದೌರ್ಭಾಗ್ಯ. ಇಂಥ ಭ್ರಮಿತರು, ಲಕ್ಷಣಗಳಿಂದ ತಿಳಿಯುವಂತೆ, ಮಾನಾಪಮಾನ, ಸುಖ ದುಃಖ, ಸ್ತ್ರೀ ಪುರುಷ, ಶುಭಾಶುಭ, ನಲಿವು ಮತ್ತು ನೋವು ಇತ್ಯಾದಿಗಳ ದ್ವಂದ್ವತೆಗಳಲ್ಲಿ ಇರುತ್ತಾರೆ ಮತ್ತು "ಇವಳು ನನ್ನ ಹೆಂಡತಿ; ಇದು ನನ್ನ ಮನೆ; ನಾನು ಈ ಮನೆಯ ಯಜಮಾನ; ನಾನು ಈ ಹೆಂಡತಿಯ ಗಂಡ", ಎಂದು ಯೋಚಿಸುತ್ತಾ ಇರುತ್ತಾರೆ. ಇವು ಭ್ರಮೆಯ ದ್ವಂದ್ವತೆಗಳು. ಹೀಗೆ ದ್ವಂದ್ವತೆಗಳಿಂದ ಭ್ರಮಿತರು ಸಂಪೂರ್ಣನಾಗಿ ಮೂಢರು, ಆದ್ದರಿಂದ ಪರಮದೇವೋತ್ತಮ ಪುರುಷನನ್ನು ಅರಿಯಲಾರರು.

**ಯೇಷಾಂ ತ್ವನ್ತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಮ್ ।**
**ತೇ ದ್ವನ್ದ್ವಮೋಹನಿರ್ಮುಕ್ತಾ ಭಜನ್ತೇ ಮಾಂ ದೃಢವ್ರತಾಃ ॥ ೨೮ ॥**

ಯೇಷಾಮ್—ಯಾರ, ತು—ಆದರೆ, ಅನ್ತಗತಮ್—ಸಂಪೂರ್ಣ ನಿರ್ಮೂಲಿತ, ಪಾಪಮ್—ಪಾಪ, ಜನಾನಾಂ—ಜನರ, ಪುಣ್ಯ—ಪುಣ್ಯ, ಕರ್ಮಣಾಮ್—ಯಾರ ಪೂರ್ವ ಕರ್ಮಗಳು, ತೇ—ಅವರು. ದ್ವನ್ದ್ವ—ದ್ವಂದ್ವತೆಯ, ಮೋಹ—ಭ್ರಮೆ, ನಿರ್ಮುಕ್ತಾಃ—ಮುಕ್ತರು, ಭಜನ್ತೇ—ಭಕ್ತಿಯುತ ಸೇವೆಯಲ್ಲಿ ತೊಡಗುವರು, ಮಾಮ್—ನನ್ನ, ದೃಢವ್ರತಾಃ—ನಿರ್ಧಾರದೊಡನೆ.

**ಯಾರು ಪೂರ್ವ ಜನ್ಮಗಳಲ್ಲಿ ಮತ್ತು ಈ ಜನ್ಮದಲ್ಲಿ ಪುಣ್ಯಕಾರ್ಯ ಮಾಡಿರುವರೋ, ಮತ್ತು ಯಾರ ಪಾಪಕರ್ಮಗಳು ಸಂಪೂರ್ಣವಾಗಿ ನಿರ್ಮೂಲಿತವೋ ಅವರು ಭ್ರಮೆಯ ದ್ವಂದ್ವತೆಗಳಿಂದ ಮುಕ್ತರು ಮತ್ತು ಅವರು ದೃಢ ನಿರ್ಧಾರದಿಂದ ನನ್ನ ಸೇವೆಯಲ್ಲಿ ತೊಡಗುವರು.**

**ಭಾವಾರ್ಥ :** ದಿವ್ಯ ಸ್ಥಾನಕ್ಕೆ ಉನ್ನತಿಸಲು ಅರ್ಹರಾದವರು ಈ ಶ್ಲೋಕದಲ್ಲಿ ಪ್ರಸ್ತಾಪಿತರು. ಪಾಪಿಷ್ಠರು, ನಾಸ್ತಿಕರು, ಮೂಢರು ಮತ್ತು ವಂಚಕರಿಗೆ ಇಚ್ಛಾ ದ್ವೇಷಗಳ ದ್ವಂದ್ವತೆಯನ್ನು ದಾಟುವುದು ಬಹಳ ಕಷ್ಟ. ಧರ್ಮದ ನಿಯಂತ್ರಣ ತತ್ವಗಳ ಆಚರಣೆಯಲ್ಲಿ ಜೀವನವನ್ನು ಕಳೆದವರು, ಪುಣ್ಯಕಾರ್ಯ ಮಾಡಿದವರು ಮತ್ತು ಪಾಪ ಪೂರ್ಣ ಪ್ರತಿಕ್ರಿಯೆಗಳನ್ನು ಗೆದ್ದವರು ಮಾತ್ರವೇ ಭಕ್ತಿಯುತ ಸೇವೆಯನ್ನು ಸ್ವೀಕರಿಸಬಹುದು ಮತ್ತು ಕ್ರಮೇಣ ಪರಮ ದೇವೋತ್ತಮ ಪುರುಷನ ಶುದ್ಧ ಜ್ಞಾನಕ್ಕೆ ಏರಬಹುದು. ನಂತರ, ಕ್ರಮೇಣ ಅವರು ಸಮಾಧಿಯಲ್ಲಿ ಪರಮ ದೇವೋತ್ತಮ ಪುರುಷನನ್ನು ಧ್ಯಾನಿಸಬಹುದು. ಅದುವೇ ಆಧ್ಯಾತ್ಮ ವೇದಿಕೆಯ ಮೇಲೆ ಸನ್ನಿವೇಶಿತವಾಗುವ ಪ್ರಕ್ರಿಯೆ. ಈ ಉನ್ನತಿಯು ಕೃಷ್ಣಪ್ರಜ್ಞೆಯಲ್ಲಿ ಶುದ್ಧ ಭಕ್ತರ ಸಂಗದಲ್ಲಿ ಸಾಧ್ಯ, ಏಕೆಂದರೆ ಮಹಾ ಭಕ್ತರ ಸಂಗದಲ್ಲಿ ಒಬ್ಬನು ಭ್ರಮೆಯಿಂದ ಉದ್ಧೃತನಾಗಬಲ್ಲನು.

ಒಬ್ಬನು ಮುಕ್ತನಾಗಲು ವಾಸ್ತವಿಕವಾಗಿ ಬಯಸಿದರೆ, ಭಕ್ತರಿಗೆ ಸೇವೆ ಸಲ್ಲಿಸಬೇಕು (**ಮಹತ್ಸೇವಾಂ ದ್ವಾರಮ್ ಆಹುರ್ ವಿಮುಕ್ತೇಃ**) ಎಂದು ಶ್ರೀಮದ್ ಭಾಗವತದಲ್ಲಿ (5.5.2) ಹೇಳಿದೆ ; ಆದರೆ ಐಹಿಕ ಭೋಗಾಸಕ್ತರ ಸಹವಾಸ ಮಾಡುವವನು, ಗಾಢಾಂಧಕಾರದ ಅಸ್ತಿತ್ವದ ಮಾರ್ಗಗಾಮಿ (**ತಮೋ–ದ್ವಾರಮ್ ಯೋಷಿತಾಂ ಸಂಗಿ-ಸಂಗಮ್**). ಎಲ್ಲಾ ಭಗವದ್‌ಭಕ್ತರು ಬದ್ಧ ಆತ್ಮರನ್ನು ಅವರ ಭ್ರಮೆಯಿಂದ ಮರಳಿ ಪಡೆಯಲು ಈ ಭೂಮಿಯಲ್ಲಿ ಸಂಚರಿಸುತ್ತಾರೆ. ಸ್ವರೂಪತಃ ಪರಮ ಪ್ರಭುವಿಗೆ ಅಧೀನರು ಎಂಬುದನ್ನು ಮರೆಯುವುದೇ ಭಗವಂತನ ನಿಯಮದ ಮಹಾ ಉಲ್ಲಂಘನೆ ಎಂಬುದನ್ನು ವ್ಯಕ್ತಿಶೂನ್ಯವಾದಿಗಳು ತಿಳಿದಿಲ್ಲ. ಒಬ್ಬನು ತನ್ನ ಸ್ವರೂಪ ಸ್ಥಿತಿಯಲ್ಲಿ ಪುನಃ ಸ್ಥಾಪಿತನಾಗದ ಹೊರತು, ಪರಮ ಪುರುಷನನ್ನು ಅರಿತುಕೊಳ್ಳುವುದು ಅಥವಾ ನಿರ್ಧಾರದೊಡನೆ ಅವನ ದಿವ್ಯ ಪ್ರೀತಿಯುತ ಸೇವೆಯಲ್ಲಿ ಪೂರ್ಣ ನಿರತನಾಗುವುದು ಸಾಧ್ಯವಿಲ್ಲ.

**ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತನ್ತಿ ಯೇ ।**
**ತೇ ಬ್ರಹ್ಮ ತದ್ ವಿದುಃ ಕೃತ್ಸ್ನಮಧ್ಯಾತ್ಮಂ ಕರ್ಮ ಚಾಖಿಲಮ್ ॥೨೯ ॥**

ಜರಾ—ಮುಪ್ಪಿನಿಂದ, ಮರಣ—ಮತ್ತು ಮರಣ, ಮೋಕ್ಷಾಯ—ಮೋಕ್ಷೋದ್ದೇಶಕ್ಕಾಗಿ, ಮಾಮ್—ನನ್ನನ್ನು, ಆಶ್ರಿತ್ಯ—ಆಶ್ರಯಿಸಿ, ಯತನ್ತಿ—ಯತ್ನಿಸುತ್ತಾರೆ, ಯೇ—ಅವರೆಲ್ಲರು, ತೇ—ಅಂಥ ವ್ಯಕ್ತಿಗಳು, ಬ್ರಹ್ಮ—ಬ್ರಹ್ಮನ್, ತತ್—ವಾಸ್ತವಿಕವಾಗಿ ಅದನ್ನು, ವಿದುಃ—ಅವರು ತಿಳಿಯುತ್ತಾರೆ, ಕೃತ್ಸ್ನಮ್—ಪ್ರತಿಯೊಂದು, ಅಧ್ಯಾತ್ಮಮ್—ದಿವ್ಯ, ಕರ್ಮ—ಚಟುವಟಿಕೆಗಳು, ಚ—ಕೂಡ, ಅಖಿಲಮ್—ಸಂಪೂರ್ಣವಾಗಿ.

**ಮುಪ್ಪು ಮತ್ತು ಮರಣದಿಂದ ಮುಕ್ತರಾಗಲು ಯತ್ನಿಸುತ್ತಿರುವ ಬುದ್ಧಿವಂತರು ಭಕ್ತಿಯುತ ಸೇವೆಯಲ್ಲಿ ನನ್ನನ್ನು ಆಶ್ರಯಿಸುತ್ತಾರೆ. ಅವರು ದಿವ್ಯ ಚಟುವಟಿಕೆಗಳ ಬಗ್ಗೆ ಪ್ರತಿಯೊಂದನ್ನು ಸಂಪೂರ್ಣವಾಗಿ ತಿಳಿದಿರುವುದರಿಂದ, ವಾಸ್ತವಿಕವಾಗಿ ಬ್ರಹ್ಮನ್ ಆಗಿರುತ್ತಾರೆ.**

**ಭಾವಾರ್ಥ :** ಜನನ, ಮರಣ, ಮುಪ್ಪು ಮತ್ತು ರೋಗಗಳು ಈ ಭೌತಿಕ ದೇಹವನ್ನು ಬಾಧಿಸುತ್ತವೆ, ಆದರೆ ಆಧ್ಯಾತ್ಮಿಕ ದೇಹವನ್ನಲ್ಲ. ಆಧ್ಯಾತ್ಮಿಕ ದೇಹಕ್ಕೆ ಜನನ, ಮರಣ, ಮುಪ್ಪು ಮತ್ತು ರೋಗ ಇಲ್ಲ; ಹೀಗೆ ಒಬ್ಬನು ಆಧ್ಯಾತ್ಮಿಕ ದೇಹ ಪಡೆದವನು, ಪರಮ ದೇವೋತ್ತಮ ಪುರುಷನ ಸಹಚರರಲ್ಲಿ ಒಬ್ಬನಾಗಿರುವವನು ಮತ್ತು ನಿತ್ಯ ಭಕ್ತಿಯುತ ಸೇವೆಯಲ್ಲಿ ತೊಡಗಿದವನು ನಿಜವಾಗಿ ಮುಕ್ತನು. **ಅಹಂ ಬ್ರಹ್ಮಾಸ್ಮಿ**—ನಾನು ಚೇತನ. ಒಬ್ಬನು ತಾನು **ಬ್ರಹ್ಮನ್**, ಎಂದರೆ ಚೇತನ ಆತ್ಮ ಎಂದು ಅರಿತುಕೊಳ್ಳಬೇಕೆಂದು ಹೇಳಿದೆ. ಈ ಶ್ಲೋಕದಲ್ಲಿ ವರ್ಣಿಸಿದಂತೆ, ಜೀವನದ ಈ ಬ್ರಹ್ಮನ್ ಕಲ್ಪನೆಯು ಭಕ್ತಿಯುತ ಸೇವೆಯಲ್ಲಿಯೂ ಇದೆ. ಶುದ್ಧ ಭಕ್ತರು ಬ್ರಹ್ಮನ್ ವೇದಿಕೆಯ ಮೇಲೆ ದಿವ್ಯವಾಗಿ ಸನ್ನಿವೇಶಿತರು, ಮತ್ತು ಅವರು ದಿವ್ಯ ಚಟುವಟಿಕೆಗಳ ಬಗ್ಗೆ ಪ್ರತಿಯೊಂದನ್ನೂ ತಿಳಿದವರು.

ಭಗವಂತನ ದಿವ್ಯ ಸೇವಾನಿರತರಾದ ನಾಲ್ಕು ಬಗೆಯ ಅಶುದ್ಧ ಭಕ್ತರು ಅವರವರ ಗುರಿಗಳನ್ನು ಸಾಧಿಸುತ್ತಾರೆ, ಮತ್ತು ಪರಮ ಪ್ರಭುವಿನ ಕೃಪೆಯಿಂದ ಅವರು ಪೂರ್ಣ ಕೃಷ್ಣಪ್ರಜ್ಞರಾದಾಗ, ಅವರು ವಾಸ್ತವಿಕವಾಗಿ ಪರಮ ಪ್ರಭುವಿನೊಂದಿಗೆ ಆಧ್ಯಾತ್ಮಿಕ ಸಂಗವನ್ನು ಆನಂದಿಸುತ್ತಾರೆ. ಆದರೆ ದೇವತೆಗಳ ಆರಾಧಕರು ಪರಮ ಪ್ರಭುವನ್ನು ಅವನ ಪರಮ ಲೋಕದಲ್ಲಿ ಎಂದಿಗೂ ಸೇರುವುದಿಲ್ಲ. ಬ್ರಹ್ಮನ್‌ಸಾಕ್ಷಾತ್ಕಾರಿಗಳಾದ ಮಂದಮತಿಗಳು ಕೂಡ ಕೃಷ್ಣನ ಪರಮ ಲೋಕವಾದ ಗೋಲೋಕ ವೃಂದಾವನವನ್ನು ತಲುಪಲಾರರು. ಕೃಷ್ಣಪ್ರಜ್ಞೆಯಲ್ಲಿ **(ಮಾಮ್ ಆಶ್ರಿತ್ಯ)** ಕಾರ್ಯಕಲಾಪಗಳನ್ನು ಆಚರಿಸುವವರು ಮಾತ್ರ **ಬ್ರಹ್ಮನ್** ಎಂದು ಕರೆಯಲ್ಪಡಲು ವಾಸ್ತವಿಕವಾಗಿ ಅರ್ಹರು, ಏಕೆಂದರೆ ಅವರು ಕೃಷ್ಣಲೋಕ ತಲುಪಲು ವಾಸ್ತವಿಕವಾಗಿ ಯತ್ನಿಸುತ್ತಿರುವರು. ಅಂಥವರಿಗೆ ಕೃಷ್ಣನ ಬಗ್ಗೆ ಸಂದೇಹಗಳು ಇರುವುದಿಲ್ಲ ಮತ್ತು ಹೀಗೆ ಅವರು ವಾಸ್ತವಿಕವಾಗಿ **ಬ್ರಹ್ಮನ್** ಆಗಿರುತ್ತಾರೆ.

ಭಗವಂತನ ರೂಪವನ್ನು ಅಥವಾ **ಅರ್ಚಾ** ಮೂರ್ತಿಯನ್ನು ಆರಾಧಿಸುತ್ತಿರುವವರು, ಅಥವಾ ಕೇವಲ ಭೌತಿಕ ಬಂಧ ವಿಮೋಚನೆಗಾಗಿ ಭಗವಂತನಲ್ಲಿ ಧ್ಯಾನ ನಿರತರಾಗಿರುವವರು ಕೂಡ, ಭಗವಂತನ ಕೃಪೆಯಿಂದ, ಮುಂದಿನ ಅಧ್ಯಾಯದಲ್ಲಿ ಭಗವಂತನಿಂದ ವಿವರಿಸಲ್ಪಡುವಂತೆ ಬ್ರಹ್ಮನ್, **ಅಧಿಭೂತ**, ಇತ್ಯಾದಿಗಳ ತಾತ್ಪರ್ಯಗಳನ್ನು ತಿಳಿದಿರುತ್ತಾರೆ.

**ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ ।**
**ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ॥ ೩೦ ॥**

ಸ ಅಧಿಭೂತ—ಮತ್ತು ಭೌತಿಕ ಉದ್ಭೂತಿಯ ಪ್ರಶಾಸನ ತತ್ತ್ವ, ಅಧಿದೈವಮ್—ಸಕಲ ದೇವತೆಗಳನ್ನು ಆಳುವ, ಮಾಮ್—ನನ್ನನ್ನು, ಸ ಅಧಿಯಜ್ಞಮ್—ಮತ್ತು ಸಕಲ ಯಜ್ಞಾಧಿಪತ್ಯ, ಚ—ಕೂಡ, ಯೇ—ಯಾರು, ವಿದುಃ—ತಿಳಿಯುತ್ತಾರೆ, ಪ್ರಯಾಣ—ಮರಣ, ಕಾಲೇ—ಕಾಲದಲ್ಲಿ, ಅಪಿ—ಕೂಡ, ಚ—ಮತ್ತು, ಮಾಮ್—ನನ್ನನ್ನು, ತೇ—ಅವರು, ವಿದುಃ—ತಿಳಿಯುತ್ತಾರೆ, ಯುಕ್ತಚೇತಸಃ—ಅವರ ಮನಸ್ಸುಗಳು ನನ್ನಲ್ಲಿ ನಿರತವಾಗಿ.

**ನನ್ನ ಪೂರ್ಣ ಪ್ರಜ್ಞೆಯಲ್ಲಿದ್ದು, ಪರಮ ಪ್ರಭುವಾದ ನನ್ನನ್ನು ಭೌತಿಕ ಉದ್ಭೂತಿಯ, ದೇವತೆಗಳ, ಮತ್ತು ಎಲ್ಲ ಯಜ್ಞ ವಿಧಾನಗಳ ಪ್ರಶಾಸನ ತತ್ತ್ವ ಎಂದು ತಿಳಿಯುವವರು, ಮರಣ ಕಾಲದಲ್ಲಿ ಕೂಡ ಪರಮ ದೇವೋತ್ತಮ ಪುರುಷನಾದ ನನ್ನನ್ನು ಅರಿತುಕೊಳ್ಳಬಲ್ಲರು ಮತ್ತು ತಿಳಿಯಬಲ್ಲರು.**

**ಭಾವಾರ್ಥ :** ಕೃಷ್ಣಪ್ರಜ್ಞೆಯಲ್ಲಿ ವರ್ತಿಸುತ್ತಿರುವ ವ್ಯಕ್ತಿಗಳು ಪರಮ ದೇವೋತ್ತಮ ಪುರುಷನನ್ನು ಸಂಪೂರ್ಣವಾಗಿ ಅರಿಯುವ ಮಾರ್ಗದಿಂದ ಎಂದಿಗೂ ವಿಚಲಿತರಾಗುವುದಿಲ್ಲ. ಕೃಷ್ಣಪ್ರಜ್ಞೆಯ ದಿವ್ಯ ಸಂಗದಲ್ಲಿ, ಪರಮ ಪ್ರಭುವು ಹೇಗೆ ಭೌತಿಕ ಉದ್ಭೂತಿಯ ಮತ್ತು ದೇವತೆಗಳ ಪ್ರಶಾಸನ ತತ್ತ್ವ ಎಂಬುದನ್ನು ಒಬ್ಬನು ಅರಿಯಬಲ್ಲನು. ಕ್ರಮೇಣ ಅಂಥ ದಿವ್ಯ ಸಂಗದಿಂದ, ಒಬ್ಬನು ಪರಮ ದೇವೋತ್ತಮ ಪುರುಷನ ಬಗ್ಗೆ ಮನಗಾಣಿಸಲ್ಪಡುತ್ತಾನೆ, ಮತ್ತು ಮರಣ ಕಾಲದಲ್ಲಿ ಅಂಥ ಕೃಷ್ಣಪ್ರಾಜ್ಞನು ಕೃಷ್ಣನನ್ನು ಎಂದಿಗೂ ಮರೆಯಲಾರನು. ಸಹಜವಾಗಿಯೇ ಅವನು ಹೀಗೆ ಪರಮ ಪ್ರಭುವಿನ ಧಾಮಕ್ಕೆ, ಗೋಲೋಕ ವೃಂದಾವನಕ್ಕೆ ಉನ್ನತಿಸಲ್ಪಡುವನು.

ಈ ಏಳನೆಯ ಅಧ್ಯಾಯವು ವಿಶೇಷವಾಗಿ ಒಬ್ಬನು ಹೇಗೆ ಪೂರ್ಣ ಕೃಷ್ಣಪ್ರಾಜ್ಞಿಯಾಗಬಹುದು ಎಂಬುದನ್ನು ವಿವರಿಸುತ್ತದೆ. ಕೃಷ್ಣಪ್ರಾಜ್ಞಿಗಳ ಸಂಗ ಮಾಡುವುದು ಕೃಷ್ಣಪ್ರಜ್ಞೆಯ ಆರಂಭ. ಅಂಥ ಸಂಗವು ಆಧ್ಯಾತ್ಮಿಕ, ಮತ್ತು ಒಬ್ಬನನ್ನು ನೇರವಾಗಿ ಪರಮ ಪ್ರಭುವಿನ ಸಂಪರ್ಕದಲ್ಲಿ ಇರಿಸುತ್ತದೆ, ಮತ್ತು ಅವನ ಕೃಪೆಯಿಂದ, ಕೃಷ್ಣನು ಪರಮ ದೇವೋತ್ತಮ ಪುರುಷನೆಂದು ಒಬ್ಬನು ಅರಿಯಬಹುದು. ಅದೇ ಕಾಲದಲ್ಲಿಯೇ ಜೀವಿಯ ಸ್ವರೂಪ ಸ್ಥಿತಿಯನ್ನು ಮತ್ತು ಹೇಗೆ ಜೀವಿಯು ಕೃಷ್ಣನನ್ನು ಮರೆಯುತ್ತಾನೆ

ಮತ್ತು ಭೌತಿಕ ಚಟುವಟಿಕೆಗಳಲ್ಲಿ ಸಿಲುಕುತ್ತಾನೆ ಎಂಬುದನ್ನು ಒಬ್ಬನು ನಿಜವಾಗಿ ಅರಿಯಬಲ್ಲನು. ಸತ್ಸಂಗದಲ್ಲಿ ಕೃಷ್ಣಪ್ರಜ್ಞೆಯ ಕ್ರಮೇಣ ಅಭಿವೃದ್ಧಿಯಿಂದ, ಕೃಷ್ಣನ ವಿಸ್ಮೃತಿಯಿಂದ ತಾನು ಭೌತಿಕ ಪ್ರಕೃತಿ ನಿಯಮಗಳಿಂದ ಬದ್ಧನಾಗಿದ್ದೇನೆ ಎಂಬುದನ್ನು ಜೀವಿಯು ಅರ್ಥಮಾಡಿಕೊಳ್ಳಬಲ್ಲನು. ಈ ಮಾನವ ಜನ್ಮವು ಕೃಷ್ಣಪ್ರಜ್ಞೆಯನ್ನು ಮತ್ತೆ ಗಳಿಸಲು ಒಂದು ಅವಕಾಶ ಮತ್ತು ಅದನ್ನು ಪರಮ ಪ್ರಭುವಿನ ನಿರ್ಹೇತುಕ ದಯೆಯನ್ನು ಹೊಂದಲು ಪೂರ್ಣವಾಗಿ ಉಪಯೋಗಿಸಿಕೊಳ್ಳಬೇಕು ಎಂಬುದನ್ನು ಕೂಡ ಅರಿಯಬಲ್ಲನು.

ಈ ಅಧ್ಯಾಯದಲ್ಲಿ ಅನೇಕ ವಿಷಯಗಳು ಚರ್ಚಿಸಲ್ಪಟ್ಟಿವೆ: ಆರ್ತನು, ಜಿಜ್ಞಾಸು, ಭೌತಿಕ ಅವಶ್ಯಕತೆಗಳ ಅಪೇಕ್ಷಿ, ಬ್ರಹ್ಮನ್ ಜ್ಞಾನ, ಪರಮಾತ್ಮ ಜ್ಞಾನ, ಜನನ, ಮರಣ ಮತ್ತು ರೋಗಗಳಿಂದ ವಿಮೋಚನೆ ಮತ್ತು ಭಗವದಾರಾಧನೆ. ಆದರೆ, ವಾಸ್ತವಿಕವಾಗಿ ಕೃಷ್ಣಪ್ರಜ್ಞೆಯಲ್ಲಿ ಉನ್ನತಿಸಿದವನು ಭಿನ್ನ ಭಿನ್ನ ಪ್ರಕ್ರಿಯೆಗಳಿಗೆ ಗಮನ ನೀಡುವುದಿಲ್ಲ. ಅವನು ಸುಮ್ಮನೆ ನೇರವಾಗಿ ಕೃಷ್ಣಪ್ರಜ್ಞಾ ಚಟುವಟಿಕೆಗಳಲ್ಲಿ ನಿರತನಾಗುತ್ತಾನೆ ಮತ್ತು ಅದರ ಮೂಲಕ ಭಗವಾನ್ ಕೃಷ್ಣನ ನಿತ್ಯದಾಸ್ಯತ್ವದ ತನ್ನ ಸ್ವರೂಪ ಸ್ಥಿತಿಯನ್ನು ವಾಸ್ತವಿಕವಾಗಿ ಹೊಂದುತ್ತಾನೆ. ಅಂಥ ಸನ್ನಿವೇಶದಲ್ಲಿ ಶುದ್ಧ ಭಕ್ತಿಯುತ ಸೇವೆಯಲ್ಲಿ ಪರಮ ಪ್ರಭುವಿನ ಶ್ರವಣ ಮತ್ತು ಕೀರ್ತನ ಮಾಡುವುದರಲ್ಲಿ ಅವನು ಆನಂದಿಸುತ್ತಾನೆ. ತಾನು ಹಾಗೆ ಮಾಡುವುದರಿಂದ ತನ್ನ ಎಲ್ಲ ಉದ್ದೇಶಗಳು ಈಡೇರುತ್ತವೆ ಎಂದು ಅವನು ಮನಗಾಣುತ್ತಾನೆ. ಈ ದೃಢ ಶ್ರದ್ಧೆಯನ್ನು **ದೃಢ-ವ್ರತ** ಎಂದು ಕರೆದಿದೆ, ಮತ್ತು ಅದು **ಭಕ್ತಿಯೋಗದ**, ಅಥವಾ ದಿವ್ಯ ಪ್ರೇಮಯುತ ಸೇವೆಯ ಆರಂಭ. ಅದೇ ಸಕಲ ಶಾಸ್ತ್ರಗಳ ನಿರ್ಣಯ. ಭಗವದ್ಗೀತೆಯ ಈ ಏಳನೆಯ ಅಧ್ಯಾಯವು ಆ ದೃಢ ನಿಶ್ಚಯದ ಸಾರ.

**ಇಲ್ಲಿಗೆ "ಶ್ರೀಮದ್ ಭಗವದ್ಗೀತೆಯಲ್ಲಿನ ಏಳನೆಯ ಅಧ್ಯಾಯವಾದ 'ಪರತತ್ವ ಜ್ಞಾನ' ಎಂಬುದರ ಭಕ್ತಿವೇದಾಂತ ತಾತ್ಪರ್ಯವು ಮುಗಿಯಿತು.**



## ಅಧ್ಯಾಯ ಎಂಟು



# ಭಗವತ್ ಪ್ರಾಪ್ತಿ

**ಅರ್ಜುನ ಉವಾಚ**

**ಕಿಂ ತದ್ ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ ।**
**ಅಧಿಭೂತಂ ಚ ಕಿಂ ಪ್ರೋಕ್ತಮಧಿದೈವಂ ಕಿಮುಚ್ಯತೇ ॥ ೧ ॥**

ಅರ್ಜುನಃ ಉವಾಚ—ಅರ್ಜುನನು ನುಡಿದನು, ಕಿಮ್—ಯಾವುದು, ತತ್—ಅದು, ಬ್ರಹ್ಮ—ಬ್ರಹ್ಮನ್, ಕಿಮ್—ಯಾವುದು, ಅಧ್ಯಾತ್ಮಮ್—ಆತ್ಮ, ಕಿಮ್—ಯಾವುದು, ಕರ್ಮ—ಕಾಮ್ಯ ಕರ್ಮಗಳು, ಪುರುಷ ಉತ್ತಮ—ಹೇ ಪರಮ ಪುರುಷನೇ, ಅಧಿ ಭೂತಮ್—ಭೌತಿಕ ಉದ್ಭೂತಿ, ಚ—ಮತ್ತು, ಕಿಮ್—ಯಾವುದು, ಪ್ರೋಕ್ತಮ್—ಕರೆಯಲ್ಪಡುತ್ತದೆ, ಅಧಿದೈವಮ್—ದೇವತೆಗಳು, ಕಿಮ್—ಯಾವುದು, ಉಚ್ಯತೇ—ಎಂದು ಕರೆದಿದೆ.

**ಅರ್ಜುನನು ಕೇಳಿದನು: ಹೇ ನನ್ನ ಪ್ರಭುವೇ, ಹೇ ಪರಮ ಪುರುಷನೇ, ಬ್ರಹ್ಮನ್ ಯಾವುದು ? ಆತ್ಮ ಯಾವುದು ? ಕಾಮ್ಯ ಕರ್ಮಗಳು ಯಾವುವು ? ಈ ಭೌತಿಕ ಉದ್ಭೂತಿ ಯಾವುದು ? ಮತ್ತು ದೇವತೆಗಳು ಯಾರು ? ದಯವಿಟ್ಟು ನನಗೆ ಇದನ್ನು ವಿವರಿಸು.**

**ಭಾವಾರ್ಥ :** ಈ ಅಧ್ಯಾಯದಲ್ಲಿ "ಯಾವುದು ಬ್ರಹ್ಮನ್ ?" ಎಂಬುದರಿಂದ ಆರಂಭವಾಗುವ ಅರ್ಜುನನ ಅನೇಕ ಪ್ರಶ್ನೆಗಳಿಗೆ ಭಗವಾನ್ ಕೃಷ್ಣನು ಉತ್ತರಿಸುತ್ತಾನೆ. **ಕರ್ಮ** (ಕಾಮ್ಯಕರ್ಮಗಳು), ಭಕ್ತಿಯುತ ಸೇವೆ ಮತ್ತು ಯೋಗ ತತ್ವಗಳು, ಮತ್ತು ಶುದ್ಧ ರೂಪದಲ್ಲಿ ಭಕ್ತಿಯುತ ಸೇವೆ ಇವುಗಳನ್ನು ಕೂಡ ಭಗವಂತನು ವಿವರಿಸುತ್ತಾನೆ. ಪರಮ

ಸತ್ಯವು ಬ್ರಹ್ಮನ್, ಪರಮಾತ್ಮ ಮತ್ತು ಭಗವಾನ್ ಎಂದು ತಿಳಿಯಲ್ಪಡುತ್ತದೆ ಎಂದು ಶ್ರೀಮದ್ ಭಾಗವತವು ವಿವರಿಸುತ್ತದೆ.ಅದಲ್ಲದೆ, ಜೀವಿಯನ್ನು, ವ್ಯಕ್ತಿಗತ ಆತ್ಮನನ್ನು, ಕೂಡ ಬ್ರಹ್ಮನ್ ಎಂದು ಕರೆದಿದೆ. ಅರ್ಜುನನು ದೇಹ, ಆತ್ಮ ಮತ್ತು ಮನಸ್ಸನ್ನು ಸೂಚಿಸುವ ಆತ್ಮನನ್ನು ಕುರಿತು ಕೂಡ ಪ್ರಶ್ನಿಸುತ್ತಾನೆ. ವೇದ ನಿರುಕ್ತಿಯ ಅನುಸಾರ, ಆತ್ಮ ಎಂಬುದು ಮನಸ್ಸು, ಆತ್ಮ, ದೇಹ ಮತ್ತು ಇಂದ್ರಿಯಗಳನ್ನು ಕೂಡ ಸೂಚಿಸುತ್ತದೆ.

ಅರ್ಜುನನು ಪರಮ ಪ್ರಭುವನ್ನು ಪುರುಷೋತ್ತಮ, ಎಂದು ಸಂಬೋಧಿಸುತ್ತಾನೆ, ಹಾಗೆಂದರೆ ಅವನು ಈ ಪ್ರಶ್ನೆಗಳನ್ನು ಸುಮ್ಮನೆ ಒಬ್ಬ ಮಿತ್ರನಿಗೆ ಹಾಕುತ್ತಿರದೆ, ನಿಶ್ಚಿತ ಉತ್ತರಗಳನ್ನು ಕೊಡಲು ಸಮರ್ಥನಾದ ಪರಮಾಧಿಕಾರಿಯೆಂದು ತಿಳಿದು ಪರಮ ಪುರುಷನಿಗೆ ಹಾಕುತ್ತಿದ್ದನು.

**ಅಧಿಯಜ್ಞಃ ಕಥಂ ಕೋಽತ್ರ ದೇಹೇಽಸ್ಮಿನ್ಮಧುಸೂದನ ।**
**ಪ್ರಯಾಣಕಾಲೇ ಚ ಕಥಂ ಜ್ಞೇಯೋಽಸಿ ನಿಯತಾತ್ಮಭಿಃ ॥ ೨ ॥**

ಅಧಿಯಜ್ಞಃ—ಯಜ್ಞಪತಿ. ಕಥಮ್—ಹೇಗೆ, ಕಃ—ಯಾರು, ಅತ್ರ—ಇಲ್ಲಿ, ದೇಹೇ—ದೇಹದಲ್ಲಿ, ಅಸ್ಮಿನ್—ಈ, ಮಧುಸೂದನ—ಹೇ ಮಧುಸೂದನ, ಪ್ರಯಾಣಕಾಲೇ—ಮರಣಕಾಲದಲ್ಲಿ, ಚ—ಮತ್ತು, ಕಥಮ್—ಹೇಗೆ, ಜ್ಞೇಯಃ ಅಸಿ—ನೀನು ತಿಳಿಯಲ್ಪಡುವೆ, ನಿಯತ ಆತ್ಮಭಿಃ—ಆತ್ಮಸಂಯಮಿಗಳಿಂದ.

**ಹೇ ಮಧುಸೂದನ, ಯಜ್ಞಪತಿ ಯಾರು, ಮತ್ತು ಅವನು ಹೇಗೆ ದೇಹದಲ್ಲಿರುತ್ತಾನೆ ಮತ್ತು ಭಕ್ತಿಯುತ ಸೇವಾನಿರತರು ಹೇಗೆ ಮರಣಕಾಲದಲ್ಲಿ ನಿನ್ನನ್ನು ತಿಳಿಯಬಹುದು ?**

**ಭಾವಾರ್ಥ :** "ಯಜ್ಞಪತಿ" ಎಂಬುದು ಇಂದ್ರನನ್ನು ಅಥವಾ ವಿಷ್ಣುವನ್ನು ಸೂಚಿಸಬಹುದು. ಬ್ರಹ್ಮ ಮತ್ತು ಶಿವನೂ ಸೇರಿದಂತೆ,ವಿಷ್ಣು ಪ್ರಧಾನ ದೇವತೆಗಳಲ್ಲಿ ಮುಖ್ಯನು, ಮತ್ತು, ಇಂದ್ರನು ಆಡಳಿತ ನಿರ್ವಾಹಕ ದೇವತೆಗಳಲ್ಲಿ ಮುಖ್ಯನು. ಇಂದ್ರ ಮತ್ತು ವಿಷ್ಣು ಯಜ್ಞಾಚರಣೆಗಳಿಂದ ಆರಾಧಿಸಲ್ಪಡುತ್ತಾರೆ. ಆದರೆ ಇಲ್ಲಿ ಅರ್ಜುನನು ವಾಸ್ತವಿಕವಾಗಿ ಯಜ್ಞಪತಿ ಯಾರು ಮತ್ತು ಹೇಗೆ ಭಗವಂತನು ಜೀವಿಯ ದೇಹದಲ್ಲಿ ಇರುತ್ತಾನೆ ಎಂದು ಕೇಳುವನು.

ಕೃಷ್ಣನು ಒಂದು ಕಾಲದಲ್ಲಿ ಮಧು ಎಂಬ ದೈತ್ಯನನ್ನು ಕೊಂದಿದ್ದರಿಂದ, ಅರ್ಜುನನು ಭಗವಂತನನ್ನು ಮಧುಸೂದನ ಎಂದು ಸಂಬೋಧಿಸುತ್ತಾನೆ. ವಾಸ್ತವಿಕವಾಗಿ ಸಂದೇಹ ಸ್ವಭಾವದ ಈ ಪ್ರಶ್ನೆಗಳು ಅರ್ಜುನನ ಮನಸ್ಸಿನಲ್ಲಿ ಏಳಬಾರದಾಗಿತ್ತು, ಏಕೆಂದರೆ ಅರ್ಜುನನು ಕೃಷ್ಣಪ್ರಜ್ಞಿ ಭಕ್ತ. ಆದ್ದರಿಂದ ಈ ಸಂದೇಹಗಳು ದೈತ್ಯರಿದ್ದಂತೆ. ಕೃಷ್ಣನು ದೈತ್ಯರನ್ನು ಕೊಲ್ಲುವುದರಲ್ಲಿ ನುರಿತವನಾದ್ದರಿಂದ, ಅರ್ಜುನನ ಮನಸ್ಸಿನಲ್ಲಿ ಏಳುವ ದೈತ್ಯ ಸಂದೇಹಗಳನ್ನು ಕೃಷ್ಣನು ಕೊಲ್ಲಲೆಂದು ಅರ್ಜುನನು ಅವನನ್ನು ಇಲ್ಲಿ **ಮಧುಸೂದನ** ಎಂದು ಸಂಬೋಧಿಸುತ್ತಾನೆ.

ಈಗ ಈ ಶ್ಲೋಕದಲ್ಲಿನ **ಪ್ರಯಾಣ–ಕಾಲೇ** ಪದವು ಬಹು ಮಹತ್ವದ್ದು, ಏಕೆಂದರೆ ನಾವು ಜೀವನದಲ್ಲಿ ಮಾಡುವುದೆಲ್ಲದರ ಪರೀಕ್ಷೆಯು ಮರಣ ಕಾಲದಲ್ಲಿ ನಡೆಯುತ್ತದೆ. ಸತತ ಕೃಷ್ಣ ಪ್ರಜ್ಞಾ ನಿರತರನ್ನು ಕುರಿತು ತಿಳಿದುಕೊಳ್ಳಲು ಅರ್ಜುನನು ಬಹು ಕಾತುರನಾಗಿದ್ದಾನೆ. ಕೊನೆಯ ಗಳಿಗೆಯಲ್ಲಿ ಅವರ ಸ್ಥಿತಿಯು ಏನಾಗಿರಬೇಕು? ಮರಣಕಾಲದಲ್ಲಿ ಎಲ್ಲ ದೈಹಿಕ ಕ್ರಿಯೆಗಳು ಅಸ್ತವ್ಯಸ್ತ, ಮತ್ತು ಮನಸ್ಸು ಸರಿಯಾದ ಸ್ಥಿತಿಯಲ್ಲಿರುವುದಿಲ್ಲ. ಹೀಗೆ ದೈಹಿಕ ಸ್ಥಿತಿಯಿಂದ ಕ್ಷೋಭೆಗೊಂಡು, ಒಬ್ಬನು ಪರಮ ಪ್ರಭುವನ್ನು ಸ್ಮರಿಸಲು ಶಕ್ತನಾಗದೆ ಇರಬಹುದು. ಮಹಾಭಕ್ತರಾದ ಕುಲಶೇಖರರು, "ನನ್ನ ಪ್ರಿಯ ಪ್ರಭುವೇ, ಈಗ ನಾನು ಪೂರ್ಣ ಆರೋಗ್ಯವಾಗಿದ್ದೇನೆ, ನಾನು ಕೂಡಲೇ ಸಾಯುವುದು ಮೇಲು, ಏಕೆಂದರೆ ನನ್ನ ಮನೋಹಂಸವು ನಿನ್ನ ಪಾದಕಮಲಗಳ ನಾಳವನ್ನು ಪ್ರವೇಶಿಸಲು ಅರಸಬಹುದು," ಎಂದು ಪ್ರಾರ್ಥಿಸುತ್ತಾರೆ. ನೀರಿನ ಹಕ್ಕಿಯಾದ ಹಂಸವು ತಾವರೆ ಹೂವನ್ನು ಅಗಿಯುವುದರಲ್ಲಿ ಆನಂದಿಸುವುದರಿಂದ, ಈ ರೂಪಕವನ್ನು ಉಪಯೋಗಿಸಿದೆ; ತಾವರೆ ಹೂವನ್ನು ಪ್ರವೇಶಿಸುವುದು ಅದರ ಕ್ರೀಡಾ ಒಲವು. "ಈಗ ನನ್ನ ಮನಸ್ಸು ಕ್ಷೋಭೆರಹಿತವಾಗಿದೆ, ಮತ್ತು ನಾನು ಪೂರ್ಣ ಆರೋಗ್ಯವಂತ. ನಿನ್ನ ಪಾದಕಮಲಗಳನ್ನು ಚಿಂತಿಸುತ್ತಾ ನಾನು ಕೂಡಲೇ ಸತ್ತರೆ ನನ್ನ ಭಕ್ತಿಯುತ ಸೇವೆಯು ಪರಿಪೂರ್ಣವಾಗುವುದೆಂದು ನನಗೆ ಖಚಿತ. ಆದರೆ ನಾನು ನನ್ನ ಸ್ವಾಭಾವಿಕ ಮರಣಕ್ಕೆ ಕಾಯಬೇಕಾದರೆ, ಆಗ ಏನಾಗುವುದೋ ನಾನು ತಿಳಿಯೆನು, ಏಕೆಂದರೆ ದೈಹಿಕ ಕ್ರಿಯೆಗಳು ಅಸ್ತವ್ಯಸ್ತವಾಗಿರುತ್ತವೆ, ಗಂಟಲು ಕಟ್ಟಿಕೊಂಡಿರುತ್ತದೆ ಮತ್ತು ನಿನ್ನ ನಾಮವನ್ನು ಉಚ್ಚರಿಸಲು ಶಕ್ತನಾಗುವೆನೋ ಇಲ್ಲವೋ ಎಂದು ನನಗೆ ತಿಳಿಯದು. ನಾನು ಈಗಲೇ ಸಾಯುವುದು ಮೇಲು, " ಎಂದು ಮಹಾರಾಜ ಕುಲಶೇಖರರು ಹೇಳುತ್ತಾರೆ. ಅಂಥ ಸಮಯದಲ್ಲಿ ಹೇಗೆ ಒಬ್ಬನು ತನ್ನ ಮನಸ್ಸನ್ನು ಕೃಷ್ಣನ ಪಾದಾರವಿಂದಗಳ ಮೇಲೆ ಸ್ಥಿತಗೊಳಿಸಬಲ್ಲನು ಎಂದು ಅರ್ಜುನನು ಪ್ರಶ್ನಿಸುತ್ತಾನೆ.

**ಶ್ರೀಭಗವಾನುವಾಚ**

**ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮಮುಚ್ಯತೇ ।**
**ಭೂತಭಾವೋದ್‌ಭವಕರೋ ವಿಸರ್ಗಃ ಕರ್ಮಸಂಜ್ಞಿತಃ ॥ ೩ ॥**

ಶ್ರೀಭಗವಾನ್ ಉವಾಚ—ಪರಮ ದೇವೋತ್ತಮ ಪುರುಷನು ನುಡಿದನು, ಅಕ್ಷರಮ್—ಅವಿನಾಶಿ, ಬ್ರಹ್ಮ—ಬ್ರಹ್ಮನ್, ಪರಮಮ್—ದಿವ್ಯ, ಸ್ವಭಾವಃ—ನಿತ್ಯ ಸ್ವಭಾವ, ಅಧ್ಯಾತ್ಮಮ್—ಆತ್ಮ, ಉಚ್ಯತೇ—ಎಂದು ಕರೆದಿದೆ, ಭೂತಭಾವ, ಉದ್ಭವ ಕರಃ—ಜೀವಿಗಳ ಭೌತಿಕ ದೇಹಗಳನ್ನು ಉತ್ಪತ್ತಿಸುವ, ವಿಸರ್ಗಃ—ಸೃಷ್ಟಿ, ಕರ್ಮ—ಕಾಮ್ಯ ಕರ್ಮಗಳು, ಸಂಜ್ಞಿತಃ—ಎಂದು ಕರೆದಿದೆ.

**ಪರಮ ದೇವೋತ್ತಮ ಪುರುಷನು ನುಡಿದನು: ಅವಿನಾಶಿ, ದಿವ್ಯ ಜೀವಿಯನ್ನು ಬ್ರಹ್ಮನ್ ಎಂದು ಕರೆದಿದೆ, ಮತ್ತು ಅವನ ನಿತ್ಯ ಸ್ವಭಾವವನ್ನು ಅಧ್ಯಾತ್ಮ, ಆತ್ಮ**

**ಎಂದು ಕರೆದಿದೆ. ಜೀವಿಗಳ ಭೌತಿಕ ದೇಹಗಳ ಬೆಳವಣಿಗೆಗೆ ಸಂಬಂಧಿಸಿದ ಕ್ರಿಯೆಯನ್ನು ಕರ್ಮ, ಅಥವಾ ಕಾಮ್ಯ ಕರ್ಮಗಳು ಎಂದು ಕರೆದಿದೆ.**

**ಭಾವಾರ್ಥ :** ಬ್ರಹ್ಮನ್ ಅವಿನಾಶಿ ಮತ್ತು ನಿತ್ಯವಾಗಿ ಇರುವುದು, ಮತ್ತು ಅದರ ರಚನೆಯು ಯಾವ ಕಾಲದಲ್ಲಿಯೂ ಬದಲಾಗುವುದಿಲ್ಲ. ಆದರೆ ಬ್ರಹ್ಮನ್ ಆಚೆಗೆ ಪರಬ್ರಹ್ಮನ್ ಇದೆ. ಬ್ರಹ್ಮನ್ ಜೀವಿಯನ್ನು ಸೂಚಿಸುತ್ತದೆ, ಮತ್ತು ಪರಬ್ರಹ್ಮನ್ ಪರಮ ದೇವೋತ್ತಮ ಪುರುಷನನ್ನು ಸೂಚಿಸುತ್ತದೆ. ಜೀವಿಯ ಸ್ವರೂಪ ಸ್ಥಿತಿಯು ಅವನು ಭೌತಿಕ ಜಗತ್ತಿನಲ್ಲಿ ಸ್ವೀಕರಿಸುವ ಸ್ಥಿತಿಯಿಂದ ಭಿನ್ನ. ಭೌತಿಕ ಪ್ರಜ್ಞೆಯಲ್ಲಿ ಪ್ರಕೃತಿಯ ಒಡೆಯನಾಗಲು ಪ್ರಯತ್ನಿಸುವುದು ಅವನ ಸ್ವಭಾವ. ಆದರೆ ಆಧ್ಯಾತ್ಮ ಪ್ರಜ್ಞೆ, ಕೃಷ್ಣಪ್ರಜ್ಞೆಯಲ್ಲಿ, ಅವನ ಸ್ಥಾನವು ಪರಮನ ಸೇವೆ ಮಾಡುವುದಾಗಿದೆ. ಜೀವಿಯು ಭೌತಿಕ ಪ್ರಜ್ಞೆಯಲ್ಲಿದ್ದಾಗ, ಅವನು ಭೌತಿಕ ಜಗತ್ತಿನಲ್ಲಿ ವಿವಿಧ ದೇಹಗಳನ್ನು ಸ್ವೀಕರಿಸಬೇಕಾಗುವುದು. ಅದನ್ನು **ಕರ್ಮ,** ಅಥವಾ ಭೌತಿಕ ಪ್ರಜ್ಞಾ ಕಾರಣದಿಂದ ವೈವಿಧ್ಯ ಸೃಷ್ಟಿ ಎಂದು ಕರೆದಿದೆ.

ವೇದ ಸಾಹಿತ್ಯದಲ್ಲಿ ಜೀವನನ್ನು **ಜೀವಾತ್ಮ** ಮತ್ತು **ಬ್ರಹ್ಮನ್** ಎಂದು ಕರೆದಿದೆ, ಆದರೆ ಅವನನ್ನು ಎಂದಿಗೂ **ಪರಬ್ರಹ್ಮನ್** ಎಂದು ಕರೆದಿಲ್ಲ. ಜೀವನು (ಜೀವಾತ್ಮ) ವಿವಿಧ ಸ್ಥಿತಿಗಳನ್ನು ಸ್ವೀಕರಿಸುತ್ತಾನೆ— ಕೆಲವು ಸಲ ಅವನು ಭೌತಿಕ ಪ್ರಕೃತಿಯ ಕತ್ತಲಿನಲ್ಲಿ ಲೀನನಾಗುತ್ತಾನೆ ಮತ್ತು ತನ್ನನ್ನು ಜಡದೊಂದಿಗೆ ಗುರುತಿಸಿಕೊಳ್ಳುತ್ತಾನೆ, ಮತ್ತು ಕೆಲವು ಸಲ ತನ್ನನ್ನು ಶ್ರೇಷ್ಠ ಪರಾ ಪ್ರಕೃತಿಯೊಂದಿಗೆ ಗುರುತಿಸಿಕೊಳ್ಳುತ್ತಾನೆ. ಆದ್ದರಿಂದ ಅವನನ್ನು ಭಗವಂತನ ತಟಸ್ಥ ಶಕ್ತಿ ಎಂದು ಕರೆದಿದೆ. ಭೌತಿಕ ಅಥವಾ ಆಧ್ಯಾತ್ಮಿಕ ಪ್ರಕೃತಿಯೊಂದಿಗೆ ಅವನ ಗುರುತಿಸುಕೊಳ್ಳುವಿಕೆಯ ಪ್ರಕಾರ, ಅವನು ಭೌತಿಕ ಅಥವಾ ಆಧ್ಯಾತ್ಮಿಕ ದೇಹವನ್ನು ಪಡೆಯುತ್ತಾನೆ. ಭೌತಿಕ ಪ್ರಕೃತಿಯಲ್ಲಿ ಅವನು 8,400,000 ಜೀವಯೋನಿಗಳಲ್ಲಿ ಯಾವುದಾದರೂ ಒಂದನ್ನು ಪಡೆಯಬಹುದು. ಆದರೆ ಆಧ್ಯಾತ್ಮಿಕ ಪ್ರಕೃತಿಯಲ್ಲಿ ಅವನಿಗೆ ಒಂದು ದೇಹವು ಮಾತ್ರ ಇರುವುದು. ಭೌತಿಕ ಪ್ರಕೃತಿಯಲ್ಲಿ ಅವನ ಕರ್ಮಾನುಸಾರ ಅವನು ಕೆಲವು ಸಲ ಮನುಷ್ಯ, ದೇವತೆ, ಪಶು, ಮೃಗ, ಪಕ್ಷಿ ಇತ್ಯಾದಿಯಾಗಿ ವ್ಯಕ್ತವಾಗುವನು. ಭೌತಿಕ ಸ್ವರ್ಗಲೋಕಗಳನ್ನು ಸೇರಲು ಮತ್ತು ಅವುಗಳ ಸೌಕರ್ಯಗಳನ್ನು ಭೋಗಿಸಲು, ಅವನು ಕೆಲವು ಸಲ ಯಜ್ಞಗಳನ್ನು ಆಚರಿಸುತ್ತಾನೆ, ಆದರೆ ಅವನ ಪುಣ್ಯವು ತೀರಿದಾಗ, ಮತ್ತೆ ಮಾನವ ರೂಪದಲ್ಲಿ ಭೂಮಿಗೆ ಮರಳುತ್ತಾನೆ. ಈ ಪ್ರಕ್ರಿಯೆಯನ್ನು **ಕರ್ಮ** ಎನ್ನುವರು.

ಛಾಂದೋಗ್ಯ ಉಪನಿಷತ್ತು ವೈದಿಕ ಯಜ್ಞ ಪ್ರಕ್ರಿಯೆಯನ್ನು ವಿವರಿಸುತ್ತದೆ. ಯಜ್ಞಕುಂಡದಲ್ಲಿ ಐದು ಬಗೆಯ ಆಹುತಿಗಳು ಐದು ಬಗೆಯ ಅಗ್ನಿಗಳಲ್ಲಿ ಅರ್ಪಿಸಲ್ಪಡುತ್ತವೆ. ಈ ಐದುವಿಧ ಅಗ್ನಿಗಳು ಸ್ವರ್ಗಲೋಕಗಳು, ಮೋಡಗಳು, ಭೂಮಿ, ಪುರುಷ ಮತ್ತು ಸ್ತ್ರೀ ಎಂದು ಭಾವಿಸಲಾಗಿದೆ, ಮತ್ತು ಐದು ವಿಧ ಆಹುತಿಗಳು **ಶ್ರದ್ಧೆ, ಚಂದ್ರಲೋಕದ ಭೋಕ್ತಾರ, ಮಳೆ, ಧಾನ್ಯಗಳು ಮತ್ತು ವೀರ್ಯ.**

ಯಜ್ಞ ಪ್ರಕ್ರಿಯೆಯಲ್ಲಿ, ಜೀವಿಯು ವಿಶಿಷ್ಟ ಸ್ವರ್ಗಲೋಕಗಳನ್ನು ಸೇರಲು ವಿಶಿಷ್ಟ ಯಜ್ಞಗಳನ್ನು ಮಾಡುತ್ತಾನೆ ಮತ್ತು ಪರಿಣಾಮವಾಗಿ, ಅವುಗಳನ್ನು ತಲಪುತ್ತಾನೆ. ಯಜ್ಞದ ಪುಣ್ಯ ಫಲವು ಮುಗಿದಾಗ ಜೀವಿಯು ಮಳೆಯ ರೂಪದಲ್ಲಿ ಭೂಮಿಗೆ ಇಳಿಯುತ್ತಾನೆ, ನಂತರ ಧಾನ್ಯಗಳ ರೂಪವನ್ನು ತೆಗೆದುಕೊಳ್ಳುತ್ತಾನೆ, ಮತ್ತು ಧಾನ್ಯಗಳು ಮನುಷ್ಯನಿಂದ ತಿನ್ನಲ್ಪಟ್ಟು ವೀರ್ಯವಾಗಿ ಪರಿವರ್ತಿತವಾಗುವುದು ಮತ್ತು ಅದು ಸ್ತ್ರೀಗೆ ಗರ್ಭ ನೀಡುತ್ತದೆ, ಮತ್ತು ಹೀಗೆ ಜೀವಿಯು ಮತ್ತೆ ಯಜ್ಞ ಮಾಡಲು ಮತ್ತು ಹೀಗೆ ಚಕ್ರವನ್ನು ಪುನರಾವರ್ತಿ ಮಾಡಲು ಮಾನವ ರೂಪವನ್ನು ತಾಳುತ್ತಾನೆ. ಈ ರೀತಿಯಲ್ಲಿ ಜೀವಿಯು ಭೌತಿಕ ಪಥದಲ್ಲಿ ನಿರಂತರವಾಗಿ ಬರುತ್ತಾನೆ ಮತ್ತು ಹೋಗುತ್ತಾನೆ. ಕೃಷ್ಣಪ್ರಾಜ್ಞಿಯಾದರೋ ಅಂಥ ಯಜ್ಞಗಳನ್ನು ಮಾಡುವುದಿಲ್ಲ. ಅವನು ನೇರವಾಗಿ ಕೃಷ್ಣ ಪ್ರಜ್ಞೆಯನ್ನು ಸ್ವೀಕರಿಸುತ್ತಾನೆ ಮತ್ತು ಆ ಮೂಲಕ ಭಗವದ್ಧಾಮಕ್ಕೆ ಮರಳಲು ಸಿದ್ಧನಾಗುತ್ತಾನೆ.

ಭಗವದ್ಗೀತೆಯ ವ್ಯಕ್ತಿಶೂನ್ಯವಾದಿ ವ್ಯಾಖ್ಯಾನಕಾರರು ವಿಚಾರಹೀನರಾಗಿ ಬ್ರಹ್ಮನ್ ಭೌತಿಕ ಜಗತ್ತಿನಲ್ಲಿ ಜೀವನ ರೂಪ ತಾಳುವುದು ಎಂದು ಸ್ವೀಕರಿಸುತ್ತಾರೆ, ಮತ್ತು ಇದನ್ನು ಸಮರ್ಥಿಸಲು ಅವರು ಗೀತೆಯ ಹದಿನೈದನೆಯ ಅಧ್ಯಾಯದ 7ನೆಯ ಶ್ಲೋಕವನ್ನು ಉಲ್ಲೇಖಿಸುತ್ತಾರೆ. ಆದರೆ ಈ ಶ್ಲೋಕದಲ್ಲಿ ಭಗವಂತನು ಕೂಡ ಜೀವಿಯನ್ನು "ನನ್ನ ನಿತ್ಯ ಅಂಶನು" ಎಂದು ಹೇಳುತ್ತಾನೆ. ಭಗವದ್ ಅಂಶನಾದ ಜೀವಿಯು, ಭೌತಿಕ ಜಗತ್ತಿಗೆ ಪತನ ಹೊಂದಬಹುದು, ಆದರೆ ಪರಮ ಪುರುಷನು (ಅಚ್ಯುತ) ಎಂದಿಗೂ ಪತನ ಹೊಂದುವುದಿಲ್ಲ. ಆದ್ದರಿಂದ ಪರಬ್ರಹ್ಮನ್ ಜೀವನ ರೂಪ ತಾಳುವನು ಎಂಬ ಭಾವನೆಯು ಅಂಗೀಕಾರಾರ್ಹವಲ್ಲ. ವೇದ ಸಾಹಿತ್ಯದಲ್ಲಿ ಬ್ರಹ್ಮನ್ (ಜೀವಿಯು) ಪರಬ್ರಹ್ಮನ್‌ನಿಂದ (ಪರಮ ಪ್ರಭು) ಪ್ರತ್ಯೇಕ ಗುರುತಿಸಲ್ಪಟ್ಟಿದ್ದಾನೆ ಎಂಬುದನ್ನು ನೆನಪಿಡುವುದು ಮಹತ್ವದ್ದು.

**ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಮ್ ।**
**ಅಧಿಯಜ್ಞೋಽಹಮೇವಾತ್ರ ದೇಹೇ ದೇಹಭೃತಾಂ ವರ ॥ ೪ ॥**

ಅಧಿಭೂತಮ್—ಭೌತ ಉದ್ಭೂತಿ, ಕ್ಷರಃ—ನಿರಂತರ ಬದಲಾಗುವ. ಭಾವಃ—ಸ್ವಭಾವವು, ಪುರುಷಃ—ಸೂರ್ಯ ಮತ್ತು ಚಂದ್ರರಂಥ ಎಲ್ಲ ದೇವತೆಗಳನ್ನು ಒಳಗೊಂಡ ವಿರಾಟ್ ರೂಪ, ಚ—ಮತ್ತು, ಅಧಿದೈವತಮ್—ಅಧಿದೈವ ಎಂದು ಕರೆಯುವ, ಅಧಿಯಜ್ಞಃ—ಪರಮಾತ್ಮ, ಅಹಮ್—ನಾನು (ಕೃಷ್ಣ), ಏವ—ಖಂಡಿತವಾಗಿ, ಅತ್ರ—ಇದರಲ್ಲಿ, ದೇಹೇ—ದೇಹದಲ್ಲಿ, ದೇಹಭೃತಾಮ್—ದೇಹಿಯು, ವರ—ಹೇ ಶ್ರೇಷ್ಠನೇ.

**ಹೇ ದೇಹಧಾರಿಗಳಲ್ಲಿ ಶ್ರೇಷ್ಠನೇ, ಸದಾ ಬದಲಾಗುತ್ತಿರುವ ಭೌತ ಪ್ರಕೃತಿಯನ್ನು ಅಧಿಭೂತ (ಭೌತಿಕ ಉದ್ಭೂತಿ) ಎಂದು ಕರೆದಿದೆ. ಸೂರ್ಯ ಮತ್ತು ಚಂದ್ರರಂಥ ಎಲ್ಲ ದೇವತೆಗಳನ್ನು ಒಳಗೊಂಡ ಭಗವಂತನ ವಿರಾಟ್ ರೂಪವನ್ನು ಅಧಿದೈವ ಎಂದು ಕರೆದಿದೆ ಮತ್ತು ಪ್ರತಿಯೊಬ್ಬ ದೇಹಧಾರಿಯ ಹೃದಯದಲ್ಲಿ ಪರಮಾತ್ಮನಾಗಿ ಪ್ರತಿ**

**ನಿರ್ಧಿಸಲ್ಪಟ್ಟ ಪರಮ ಪ್ರಭುವಾದ ನಾನು ಅಧಿಯಜ್ಞ (ಯಜ್ಞಪತಿ) ಎಂದು ಕರೆಯಲ್ಪಡುತ್ತೇನೆ.**

**ಭಾವಾರ್ಥ :** ಭೌತ ಪ್ರಕೃತಿಯು ನಿರಂತರ ಬದಲಾಗುತ್ತದೆ. ಭೌತಿಕ ದೇಹಗಳು ಸಾಮಾನ್ಯವಾಗಿ ಆರು ಹಂತಗಳಲ್ಲಿ ಸಾಗುತ್ತವೆ : ಅವು ಹುಟ್ಟುತ್ತವೆ, ಬೆಳೆಯುತ್ತವೆ, ಕೆಲವು ಕಾಲ ಇರುತ್ತವೆ, ಕೆಲವು ಉಪೋತ್ಪತ್ತಿಗಳನ್ನು ಉತ್ಪತ್ತಿ ಮಾಡುತ್ತವೆ, ಕೃಶವಾಗುತ್ತವೆ, ಮತ್ತು ನಂತರ ಅವು ಕಣ್ಮರೆಯಾಗುತ್ತವೆ. ಈ ಭೌತ ಪ್ರಕೃತಿಯನ್ನು **ಅಧಿಭೂತ** ಎನ್ನುವರು. ಅದು ಒಂದು ವಿಶಿಷ್ಟ ಹಂತದಲ್ಲಿ ಸೃಷ್ಟಿಸಲ್ಪಡುತ್ತದೆ ಮತ್ತು ಮತ್ತೊಂದು ವಿಶಿಷ್ಟ ಹಂತದಲ್ಲಿ ಲಯಗೊಳಿಸಲ್ಪಡುತ್ತದೆ. ಎಲ್ಲ ದೇವತೆಗಳನ್ನು ಮತ್ತು ಅವರ ವಿವಿಧ ಲೋಕಗಳನ್ನು ಒಳಗೊಂಡ ಪರಮ ಪ್ರಭುವಿನ ವಿರಾಟ್ ರೂಪ ಕಲ್ಪನೆಯನ್ನು **ಅಧಿದೈವತ** ಎಂದು ಕರೆದಿದೆ. ಮತ್ತು ದೇಹದಲ್ಲಿ ವ್ಯಕ್ತಿಗತ ಆತ್ಮನೊಂದಿಗೆ ಇರುವವನು ಕೃಷ್ಣನ ಸಮಗ್ರ ಪ್ರಾತಿನಿಧ್ಯವಾದ ಪರಮಾತ್ಮನು. ಪರಮಾತ್ಮನನ್ನು **ಅಧಿಯಜ್ಞ** ಎಂದು ಕರೆದಿದೆ ಮತ್ತು ಅವನು ಹೃದಯದಲ್ಲಿ ಸನ್ನಿವೇಶಿತನು. ಈ ಶ್ಲೋಕ ಪ್ರಕರಣದಲ್ಲಿ **ಏವ** ಎಂಬ ಪದವು ವಿಶೇಷವಾಗಿ ಮಹತ್ವದ್ದು, ಏಕೆಂದರೆ ಈ ಪದದಿಂದ ಪರಮಾತ್ಮನು ತನ್ನಿಂದ ಬೇರೆಯಲ್ಲ ಎಂಬುದನ್ನು ಭಗವಂತನು ಒತ್ತಿ ಹೇಳುತ್ತಾನೆ. ಪರಮಾತ್ಮ, ಪರಮ ದೇವೋತ್ತಮ ಪುರುಷನು ಆತ್ಮನ ಪಕ್ಕದಲ್ಲಿ ಕುಳಿತವನಾಗಿ, ವ್ಯಕ್ತಿಗತ ಆತ್ಮನ ಚಟುವಟಿಕೆಗಳ ಸಾಕ್ಷಿ ಮತ್ತು ಆತ್ಮನ ನಾನಾ ಬಗೆಯ ಪ್ರಜ್ಞೆಯ ಮೂಲನು. ಪರಮಾತ್ಮನು ವ್ಯಕ್ತಿಗತ ಆತ್ಮನಿಗೆ ಸ್ವತಂತ್ರವಾಗಿ ವರ್ತಿಸಲು ಅವಕಾಶ ಕೊಡುತ್ತಾನೆ ಮತ್ತು ಅವನ ಚಟುವಟಿಕೆಗಳಿಗೆ ಪ್ರೇಕ್ಷಕನಾಗಿರುತ್ತಾನೆ. ಪರಮ ಪ್ರಭುವಿನ ಈ ವಿವಿಧ ಉದ್ಭೂತಿಗಳೆಲ್ಲದರ ಕ್ರಿಯೆಗಳು ಭಗವಂತನ ದಿವ್ಯ ಸೇವಾನಿರತನಾದ ಶುದ್ಧ ಕೃಷ್ಣ ಪ್ರಾಜ್ಞಿ ಭಕ್ತನಿಗೆ ತಾವಾಗಿಯೇ ಸ್ಪಷ್ಟವಾಗುತ್ತವೆ. ಪರಮ ಪ್ರಭುವನ್ನು ಅವನ ಪರಮಾತ್ಮ ರೂಪದಲ್ಲಿ ಸಮೀಪಿಸಲಾಗದ ಪ್ರಾರಂಭಿಕನಿಂದ **ಅಧಿದೈವತ** ಎಂದು ಕರೆಯುವ ಭಗವಂತನ ಬೃಹತ್ ವಿರಾಟ್ ರೂಪವು ಚಿಂತಿಸಲ್ಪಡುವುದು. ಕಾಲುಗಳು ಅಧೋ ಲೋಕಗಳು, ಕಣ್ಣುಗಳು, ಸೂರ್ಯ-ಚಂದ್ರರು, ಮತ್ತು ತಲೆಯು ಊರ್ಧ್ವಲೋಕವ್ಯೂಹ ಎಂದು ಭಾವಿಸಿರುವ ಆ ವಿರಾಟ್ ರೂಪವನ್ನು ಅಥವಾ ವಿರಾಟ್ ಪುರುಷನನ್ನು, ಚಿಂತಿಸಲು ಪ್ರಾರಂಭಿಕನಿಗೆ ಉಪದೇಶಿಸಿದೆ.

**ಅನ್ತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇವರಮ್ ।**
**ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥ ೫ ॥**

ಅನ್ತಕಾಲೇ—ಜೀವನದ ಕೊನೆಯಲ್ಲಿ, ಚ—ಮತ್ತು, ಮಾಮ್—ನನ್ನನ್ನು, ಏವ—ಖಂಡಿತವಾಗಿ, ಸ್ಮರನ್—ಸ್ಮರಿಸುತ್ತಾ, ಮುಕ್ತ್ವಾ—ತ್ಯಜಿಸಿ, ಕಲೇವರಮ್—ದೇಹವನ್ನು, ಯಃ—ಯಾರು, ಪ್ರಯಾತಿ—ಹೋಗುತ್ತಾನೆ, ಸಃ—ಅವನು, ಮತ್ ಭಾವಮ್—ನನ್ನ ಭಾವವನ್ನು, ಯಾತಿ—ಹೊಂದುತ್ತಾನೆ, ನ—ಇಲ್ಲ, ಅಸ್ತಿ—ಇರುವುದು, ಅತ್ರ—ಇಲ್ಲಿ, ಸಂಶಯಃ—ಸಂಶಯವು.

**ಮತ್ತು ಯಾವನು ತನ್ನ ಜೀವನದ ಕೊನೆಯಲ್ಲಿ ನನ್ನನ್ನೇ ಸ್ಮರಿಸುತ್ತಾ ದೇಹ ತ್ಯಜಿಸುವನೋ, ಅವನು, ಕೂಡಲೇ ನನ್ನ ಭಾವವನ್ನು ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ.**

**ಭಾವಾರ್ಥ :** ಈ ಶ್ಲೋಕದಲ್ಲಿ ಕೃಷ್ಣ ಪ್ರಜ್ಞೆಯ ಮಹತ್ವವನ್ನು ಒತ್ತಿ ಹೇಳಿದೆ. ಕೃಷ್ಣ ಪ್ರಜ್ಞೆಯಲ್ಲಿ ತನ್ನ ದೇಹ ತ್ಯಜಿಸುವವನು ಕೂಡಲೇ ಪರಮ ಪ್ರಭುವಿನ ದಿವ್ಯ ಭಾವಕ್ಕೆ ವರ್ಗಾಯಿಸಲ್ಪಡುತ್ತಾನೆ. ಭಗವಂತನು ಪವಿತ್ರರಲ್ಲಿ ಪವಿತ್ರನು. ಆದ್ದರಿಂದ ಸತತ ಕೃಷ್ಣಪ್ರಾಜ್ಞೆಯುಳ್ಳವನೂ ಕೂಡ ಪವಿತ್ರರಲ್ಲಿ ಪವಿತ್ರನು. **ಸ್ಮರನ್** ("ಸ್ಮರಣೆ") ಪದವು ಮಹತ್ವದ್ದು. ಭಕ್ತಿಯುತ ಸೇವೆಯಲ್ಲಿ ಕೃಷ್ಣಪ್ರಜ್ಞೆಯನ್ನು ಆಚರಿಸದ ಅಪವಿತ್ರ ಆತ್ಮನಿಗೆ ಕೃಷ್ಣ ಸ್ಮರಣೆಯು ಅಸಂಭವ. ಆದ್ದರಿಂದ ಒಬ್ಬನು ಜೀವನದ ಪ್ರಾರಂಭದಿಂದಲೇ ಕೃಷ್ಣ ಪ್ರಜ್ಞೆಯನ್ನು ಆಚರಿಸಬೇಕು. ಒಬ್ಬನು ತನ್ನ ಜೀವನದ ಕೊನೆಯಲ್ಲಿ ಯಶಸ್ಸು ಗಳಿಸ ಬಯಸಿದರೆ, ಕೃಷ್ಣ ಸ್ಮರಣಾ ಪ್ರಕ್ರಿಯೆಯು ಅತ್ಯಗತ್ಯ. ಆದ್ದರಿಂದ ಒಬ್ಬನು ಸತತವಾಗಿ ಅವಿಚ್ಛಿನ್ನವಾಗಿ—ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ/ ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ—ಮಹಾ ಮಂತ್ರವನ್ನು ಜಪಿಸ ಬೇಕು. ಒಬ್ಬನು ಒಂದು ಮರದಷ್ಟು ಸಹನೆಯುಳ್ಳವನಾಗಿರಬೇಕೆಂದು ಭಗವಾನ್ ಚೈತನ್ಯರು ಸೂಚಿಸಿದ್ದಾರೆ (**ತರೋರ್ ಇವ ಸಹಿಷ್ಣುನಾ**) ಹರೇ ಕೃಷ್ಣ ಜಪಮಾಡು ವವನಿಗೆ ಅನೇಕ ಅಡಚಣೆಗಳಿರಬಹುದು. ಆದರೂ ಈ ಎಲ್ಲ ಅಡಚಣೆಗಳನ್ನು ಸಹಿಸಿ ಕೊಂಡು ಒಬ್ಬನು ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ/ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ—ಎಂದು ಜಪಿಸುವುದನ್ನು ಮುಂದುವರಿಸ ಬೇಕು, ಆಗ ಒಬ್ಬನು ಜೀವನದ ಅಂತ್ಯದಲ್ಲಿ ಕೃಷ್ಣ ಪ್ರಜ್ಞೆಯ ಪೂರ್ಣ ಲಾಭವನ್ನು ಹೊಂದಬಹುದು.

**ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯನ್ತೇ ಕಲೇವರಂ ।**
**ತಂ ತಮೇವೈತಿ ಕೌನ್ತೇಯ ಸದಾ ತದ್ಭಾವಭಾವಿತಃ ॥ ೬ ॥**

ಯಮ್ ಯಮ್—ಯಾವುದೇ, ವಾ ಅಪಿ—ಸರ್ವಥಾ, ಸ್ಮರನ್—ಸ್ಮರಿಸುತ್ತಾ, ಭಾವಮ್—ಭಾವವನ್ನು, ತ್ಯಜತಿ—ತ್ಯಜಿಸುತ್ತಾನೆ, ಅನ್ತೇ—ಕೊನೆಯಲ್ಲಿ, ಕಲೇವರಮ್—ಈ ದೇಹವನ್ನು, ತಮ್ ತಮ್—ಅಂಥಹುದೇ, ಏವ—ಖಂಡಿತವಾಗಿ, ಏತಿ—ಪಡೆಯುತ್ತಾನೆ, ಕೌನ್ತೇಯ—ಹೇ ಕುಂತೀ ಪುತ್ರನೇ, ಸದಾ—ಯಾವಾಗಲೂ, ತತ್—ಆ, ಭಾವ—ಇರುವಿಕೆಯನ್ನು, ಭಾವಿತಃ—ಸ್ಮರಿಸುತ್ತಾ.

**ಹೇ ಕುಂತೀ ಪುತ್ರನೇ, ಒಬ್ಬನು ಈ ದೇಹ ಬಿಡುವಾಗ ಯಾವ ಭಾವವನ್ನು (ಜೀವನ ಸ್ಥಿತಿಯನ್ನು) ಸ್ಮರಿಸುತ್ತಾನೋ, ಅವನು ಆ ಭಾವವನ್ನು (ಜೀವನ ಸ್ಥಿತಿಯನ್ನು) ತಪ್ಪದೇ ಹೊಂದುತ್ತಾನೆ.**

**ಭಾವಾರ್ಥ :** ಮರಣದ ವಿಷಮ ಗಳಿಗೆಯಲ್ಲಿ ಒಬ್ಬನ ಭಾವವನ್ನು ಬದಲಾಯಿಸಿ ಕೊಳ್ಳುವ ಪ್ರಕ್ರಿಯೆಯು ಇಲ್ಲಿ ವಿವರಿಸಲ್ಪಟ್ಟಿದೆ. ತನ್ನ ಜೀವನದ ಅಂತ್ಯದಲ್ಲಿ ಕೃಷ್ಣ ಚಿಂತನೆ ಮಾಡುತ್ತಾ ತನ್ನ ದೇಹವನ್ನು ತ್ಯಜಿಸುವವನು ಪರಮ ಪ್ರಭುವಿನ ದಿವ್ಯ ಭಾವವನ್ನು ಹೊಂದುತ್ತಾನೆ, ಆದರೆ ಕೃಷ್ಣನನ್ನು ಬಿಟ್ಟು ಇತರ ಏನನ್ನೋ ಚಿಂತಿಸುವವನು ಅದೇ ದಿವ್ಯ ಭಾವವನ್ನು ಸೇರುವನೆಂಬುದು ನಿಜವಲ್ಲ. ಈ ಅಂಶವನ್ನು ನಾವು ಬಹಳ ಜಾಗರೂಕತೆಯಿಂದ ಗಮನಿಸಬೇಕು. ಒಬ್ಬನು ಸರಿಯಾದ ಮನೋಭಾವದಲ್ಲಿ ಹೇಗೆ ಸಾಯಬಹುದು ? ಮಹಾರಾಜ ಭರತನು, ಒಬ್ಬ ಮಹಾವ್ಯಕ್ತಿಯಾಗಿದ್ದರೂ, ತನ್ನ ಜೀವನದ ಅಂತ್ಯದಲ್ಲಿ ಒಂದು ಜಿಂಕೆಯನ್ನು ಚಿಂತಿಸಿದನು. ಆದ್ದರಿಂದ ಅವನ ಮುಂದಿನ ಜನ್ಮದಲ್ಲಿ ಅವನು ಒಂದು ಜಿಂಕೆಯ ದೇಹಕ್ಕೆ ವರ್ಗಾಯಿಸಲ್ಪಟ್ಟನು. ಜಿಂಕೆಯಾಗಿ ಅವನು ತನ್ನ ಪೂರ್ವ ಚಟುವಟಿಕೆಗಳನ್ನು ನೆನಪಿಸಿಕೊಂಡನಾದರೂ, ಅವನು ಆ ಪ್ರಾಣಿದೇಹವನ್ನು ಸ್ವೀಕರಿಸಬೇಕಾಯಿತು. ಒಬ್ಬನ ಜೀವನ ಕ್ರಮದಲ್ಲಿ ಚಿಂತನಗಳು ಒಟ್ಟುಗೂಡಿ ಮರಣದ ಗಳಿಗೆಯಲ್ಲಿ ಅವನ ಚಿಂತನೆಗಳ ಮೇಲೆ ಪ್ರಭಾವ ಬೀರುತ್ತವೆ. ಹೀಗೆ ಈ ಜೀವನವು ಒಬ್ಬನ ಮುಂದಿನ ಜನ್ಮವನ್ನು ಸೃಷ್ಟಿಸುತ್ತದೆ. ಒಬ್ಬನು ಸದ್ಯದ ಜೀವನದಲ್ಲಿ ಸತ್ವಗುಣದಲ್ಲಿದ್ದರೆ ಮತ್ತು ಸದಾ ಕೃಷ್ಣ ಚಿಂತನೆಯಲ್ಲಿದ್ದರೆ, ಜೀವನದ ಕೊನೆಯಲ್ಲಿ ಅವನು ಕೃಷ್ಣ ಸ್ಮರಣೆಮಾಡುವುದು ಸಾಧ್ಯ. ಅದು ಒಬ್ಬನನ್ನು ಕೃಷ್ಣನ ದಿವ್ಯ ಭಾವಕ್ಕೆ (ಪ್ರಕೃತಿಗೆ) ವರ್ಗಾಯಿಸಲು ಸಹಾಯ ಮಾಡುವುದು. ಒಬ್ಬನು ದಿವ್ಯವಾಗಿ ಕೃಷ್ಣನ ಸೇವೆಯಲ್ಲಿ ಮಗ್ನನಾದರೆ. ಆಗ ಅವನ ಮುಂದಿನ ದೇಹವು ದಿವ್ಯ (ಆಧ್ಯಾತ್ಮಿಕ)ವಾಗಿರುವುದು, ಭೌತಿಕವಲ್ಲ. ಆದ್ದರಿಂದ ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ, ಹರೇ/ ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ —ಜಪವು ಒಬ್ಬನು ಜೀವನದ ಅಂತ್ಯದಲ್ಲಿ ತನ್ನ ಭಾವವನ್ನು (ಜೀವನದ ಸ್ಥಿತಿಯನ್ನು) ಯಶಸ್ವಿಯಾಗಿ ಬದಲಾಯಿಸಿಕೊಳ್ಳಲು ಅತ್ಯುತ್ತಮ ಪ್ರಕ್ರಿಯೆ.

**ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ ।**
**ಮಯ್ಯರ್ಪಿತಮನೋಬುದ್ಧಿರ್ಮಾಮೇವೈಷ್ಯಸ್ಯಸಂಶಯಃ ॥ ॥ ೭ ॥**

ತಸ್ಮಾತ್—ಆದ್ದರಿಂದ, ಸರ್ವೇಷು—ಎಲ್ಲ, ಕಾಲೇಷು—ಕಾಲಗಳಲ್ಲಿ, ಮಾಮ್—ನನ್ನನ್ನು, ಅನುಸ್ಮರ—ನೆನೆಯುತ್ತಿರು, ಯುಧ್ಯ—ಯುದ್ಧಮಾಡು, ಚ—ಹಾಗೂ ಮಯಿ—ನನ್ನಲ್ಲಿ, ಅರ್ಪಿತ—ಶರಣಾಗಿ, ಮನಃ—ಮನಸ್ಸು, ಬುದ್ಧಿಃ—ಬುದ್ಧಿ, ಮಾಮ್—ನನ್ನನ್ನು, ಏವ—ಖಂಡಿತವಾಗಿ, ಏಷ್ಯಸಿ—ನೀನು ಹೊಂದುವೆ, ಅಸಂಶಯಃ—ಸಂದೇಹವಿಲ್ಲದೆ.

**ಆದ್ದರಿಂದ ಅರ್ಜುನ, ನೀನು ಸದಾ ನನ್ನನ್ನು ಕೃಷ್ಣರೂಪದಲ್ಲಿ ಚಿಂತನ ಮಾಡಬೇಕು ಮತ್ತು ಅದೇ ಸಮಯದಲ್ಲಿ ನಿನ್ನ ವಿಧಿತ ಕರ್ತವ್ಯವಾದ ಯುದ್ಧವನ್ನು ಮಾಡಬೇಕು. ನಿನ್ನ ಚಟುವಟಿಕೆಗಳು ನನಗೆ ಅರ್ಪಿತವಾಗಿ ಮತ್ತು ನಿನ್ನ ಮನಸ್ಸು ಮತ್ತು ಬುದ್ಧಿ ನನ್ನ ಮೇಲೆ ಸ್ಥಿತವಾಗಿ, ನೀನು ನಿಸ್ಸಂದೇಹವಾಗಿ ನನ್ನನ್ನು ಹೊಂದುವೆ.**

**ಭಾವಾರ್ಥ :** ಅರ್ಜುನನಿಗಿತ್ತ ಈ ಉಪದೇಶವು ಭೌತಿಕ ಚಟುವಟಿಕೆಗಳಲ್ಲಿ ತೊಡಗಿರುವ ಎಲ್ಲ ಜನರಿಗೂ ಬಹು ಮಹತ್ವದ್ದು. ಒಬ್ಬನು ತನ್ನ ವಿಧಿತ ಕರ್ತವ್ಯಗಳನ್ನು ಅಥವಾ ತೊಡಗುವಿಕೆಗಳನ್ನು ಬಿಡಬೇಕೆಂದು ಭಗವಂತನು ಹೇಳುವುದಿಲ್ಲ. ಒಬ್ಬನು ಅವುಗಳನ್ನು ಮುಂದುವರಿಸಬಹುದು ಮತ್ತು ಅದೇ ಕಾಲದಲ್ಲಿ ಹರೇ ಕೃಷ್ಣ ಜಪಿಸುವುದರಿಂದ ಕೃಷ್ಣನನ್ನು ಚಿಂತಿಸಬಹುದು. ಇದು ಒಬ್ಬನನ್ನು ಭೌತಿಕ ಕಲುಷತೆಯಿಂದ ಮುಕ್ತಗೊಳಿಸುವುದು ಮತ್ತು ಮನಸ್ಸು ಮತ್ತು ಬುದ್ಧಿಯನ್ನು ಕೃಷ್ಣನಲ್ಲಿ ತೊಡಗಿಸುವುದು. ಕೃಷ್ಣನಾಮ ಜಪದಿಂದ, ಒಬ್ಬನು ನಿಸ್ಸಂದೇಹವಾಗಿ ಪರಮಲೋಕವಾದ ಕೃಷ್ಣಲೋಕಕ್ಕೆ ವರ್ಗಾಯಿಸಲ್ಪಡುತ್ತಾನೆ.

**ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ ।**
**ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿನ್ತಯನ್ ॥ ॥ ೮ ॥**

ಅಭ್ಯಾಸ ಯೋಗ—ಅಭ್ಯಾಸದಿಂದ, ಯುಕ್ತೇನ—ಧ್ಯಾನದಲ್ಲಿ ನಿರತನಾಗಿ, ಚೇತಸಾ—ಮನಸ್ಸು ಮತ್ತು ಬುದ್ಧಿಯಿಂದ, ನ ಅನ್ಯಗಾಮಿನಾ—ಅವು ವಿಚಲಿತವಾಗದೆ, ಪರಮಮ್—ಪರಮ, ಪುರುಷಮ್—ದೇವೋತ್ತಮ ಪುರುಷನನ್ನು. ದಿವ್ಯಮ್—ದಿವ್ಯ, ಯಾತಿ—ಒಬ್ಬನು ಹೊಂದುತ್ತಾನೆ, ಪಾರ್ಥ—ಹೇ ಪೃಥಾ ಪುತ್ರನೇ. ಅನುಚಿನ್ತಯನ್—ಸತತವಾಗಿ ಚಿಂತಿಸುತ್ತಾ.

**ನನ್ನನ್ನು ಪರಮ ದೇವೋತ್ತಮ ಪುರುಷನೆಂದು ಧ್ಯಾನಿಸುವವನು, ಪಥ ವಿಚಲಿತನಾಗದೆ ಇದ್ದು ಅವನ ಮನಸ್ಸು ಸತತವಾಗಿ ನನ್ನ ಸ್ಮರಣೆಯಲ್ಲಿ ನಿರತವಾಗಿದ್ದು, ಹೇ ಪಾರ್ಥನೇ, ಅವನು ಖಂಡಿತ ನನ್ನನ್ನು ಸೇರುತ್ತಾನೆ.**

**ಭಾವಾರ್ಥ :** ಈ ಶ್ಲೋಕದಲ್ಲಿ ಶ್ರೀಕೃಷ್ಣನು ತನ್ನ ಸ್ಮರಣೆಯ ಮಹತ್ವವನ್ನು ಒತ್ತಿ ಹೇಳುತ್ತಾನೆ. ಹರೇ ಕೃಷ್ಣ ಮಹಾಮಂತ್ರ ಜಪದಿಂದ ಒಬ್ಬನ ಕೃಷ್ಣ ಸ್ಮರಣೆಯು ಉಜ್ಜೀವಿತವಾಗುವುದು. ಪರಮ ಪ್ರಭುವಿನ ಶಬ್ದ ಕಂಪನದ ಕೀರ್ತನ ಮತ್ತು ಶ್ರವಣದ ಈ ಅಭ್ಯಾಸದಿಂದ, ಒಬ್ಬನ ಕಿವಿ, ನಾಲಿಗೆ ಮತ್ತು ಮನಸ್ಸು ನಿರತವಾಗುತ್ತವೆ. ಈ ದಿವ್ಯ ಧ್ಯಾನವು ಅಭ್ಯಾಸಮಾಡಲು ಬಹು ಸುಲಭ, ಮತ್ತು ಅದು ಒಬ್ಬನು ಪರಮ ಪ್ರಭುವನ್ನು ಸೇರಲು ಸಹಾಯಮಾಡುತ್ತದೆ. **ಪುರುಷಮ್** ಎಂದರೆ ಭೋಕ್ತಾರನು. ಜೀವಿಗಳು ಭಗವಂತನ ತಟಸ್ಥ ಶಕ್ತಿಗೆ ಸೇರಿದವರಾಗಿದ್ದರೂ, ಅವರು ಭೌತಿಕ ಕಲುಷತೆಯಲ್ಲಿ ಇದ್ದಾರೆ. ಅವರು ತಾವೇ ಭೋಕ್ತಾರರೆಂದು ತಿಳಿದಿದ್ದಾರೆ, ಆದರೆ ಅವರು ಪರಮ ಭೋಕ್ತಾರರಲ್ಲ. ಪರಮ ದೇವೋತ್ತಮ ಪುರುಷನು ತನ್ನ ವಿವಿಧ ವ್ಯಕ್ತತೆಗಳಲ್ಲಿ ಮತ್ತು ನಾರಾಯಣ, ವಾಸುದೇವ ಇತ್ಯಾದಿ ಸಮಗ್ರ ವಿಸ್ತರಣೆಗಳಲ್ಲಿ ಪರಮ ಭೋಕ್ತಾರನು ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ.

ಭಕ್ತನು ತನ್ನ ಆರಾಧ್ಯದೈವವಾದ ಪರಮಪ್ರಭುವನ್ನು ಅವನ ಯಾವುದೇ ರೂಪದಲ್ಲಿ—ನಾರಾಯಣ, ಕೃಷ್ಣ, ರಾಮ, ಇತ್ಯಾದಿ— ಹರೇ ಕೃಷ್ಣ ಜಪಿಸುವುದರಿಂದ ಸಂತತ

ವಾಗಿ ಚಿಂತಿಸಬಹುದು. ಈ ಅಭ್ಯಾಸವು ಅವನನ್ನು ಶುದ್ಧೀಕರಿಸುವುದು, ಮತ್ತು ಅವನ ಸಂತತ ಜಪಿಸುವಿಕೆಯು ಕಾರಣ, ಜೀವನದ ಅಂತ್ಯದಲ್ಲಿ ಅವನು ಭಗವದ್ ಧಾಮಕ್ಕೆ ವರ್ಗಾಯಿಸಲ್ಪಡುತ್ತಾನೆ. ಯೋಗಾಭ್ಯಾಸವು ಒಳಗಿರುವ ಪರಮಾತ್ಮನ ಮೇಲೆ ಧ್ಯಾನ; ಅದೇ ಪ್ರಕಾರ ಹರೇ ಕೃಷ್ಣ ಜಪದಿಂದ ಒಬ್ಬನು ತನ್ನ ಮನಸ್ಸನ್ನು ಸದಾ ಪರಮಪ್ರಭುವಿನ ಮೇಲೆ ಸ್ಥಿತಗೊಳಿಸುತ್ತಾನೆ. ಮನಸ್ಸು ಚಂಚಲ, ಆದ್ದರಿಂದ ಮನಸ್ಸನ್ನು ಬಲವಂತವಾಗಿ ಕೃಷ್ಣ ಚಿಂತನೆಯಲ್ಲಿ ತೊಡಗಿಸುವುದು ಅವಶ್ಯ. ಚಿಟ್ಟೆಯಾಗಲು ಚಿಂತಿಸುವ ಕಂಬಳಿ ಹುಳುವು ಹಾಗೆಯೇ ಇದೇ ಜೀವನದಲ್ಲಿಯೇ ಚಿಟ್ಟೆಯಾಗಿ ಮಾರ್ಪಡುವ ಉದಾಹರಣೆಯನ್ನು ಸಾಮಾನ್ಯವಾಗಿ ಹೇಳುತ್ತೇವೆ. ಅದೇ ಪ್ರಕಾರ, ನಾವು ಸತತವಾಗಿ ಕೃಷ್ಣನನ್ನು ಚಿಂತಿಸಿದರೆ, ನಮ್ಮ ಜೀವನದ ಅಂತ್ಯದಲ್ಲಿ ನಾವು ಕೃಷ್ಣನಂಥಹುದೇ ದೈಹಿಕ ರಚನೆಯನ್ನು ಹೊಂದುವುದು ನಿಶ್ಚಯ.

**ಕವಿಂ ಪುರಾಣಮನುಶಾಸಿತಾರಮ್**
**ಅಣೋರಣೀಯಾಂಸಮನುಸ್ಮರೇದ್ ಯಃ।**
**ಸರ್ವಸ್ಯ ಧಾತಾರಮಚಿನ್ತ್ಯರೂಪಮ್**
**ಆದಿತ್ಯವರ್ಣಂ ತಮಸಃ ಪರಸ್ತಾತ್ ॥ ೯ ॥**

ಕವಿಮ್—ಪ್ರತಿಯೊಂದನ್ನು ತಿಳಿದವನು, ಪುರಾಣಮ್—ಅತ್ಯಂತ ಪುರಾತನನು, ಅನುಶಾಸಿತಾರಮ್—ನಿಯಂತ್ರಕನು, ಅಣೋಃ—ಪರಮಾಣುವಿಗಿಂತ, ಅಣೀಯಾಂಸಮ್—ಚಿಕ್ಕವನು, ಅನುಸ್ಮರೇತ್—ಸದಾ ಚಿಂತಿಸುವನೋ, ಯಃ—ಯಾರು, ಸರ್ವಸ್ಯ—ಪ್ರತಿಯೊಂದರ, ಧಾತಾರಮ್—ಪಾಲಕನು, ಅಚಿನ್ತ್ಯ—ಅಚಿಂತ್ಯವಾದ, ರೂಪಮ್—ಯಾರ ರೂಪವು, ಆದಿತ್ಯವರ್ಣಮ್—ಸೂರ್ಯನಂತೆ ಪ್ರಕಾಶಮಾನ, ತಮಸಃ—ಕತ್ತಲೆಗೆ, ಪರಸ್ತಾತ್—ಅತೀತ.

**ಪರಮ ಪುರುಷನು ಪ್ರತಿಯೊಂದನ್ನೂ ತಿಳಿದವನು, ಅತ್ಯಂತ ಪುರಾತನನು, ನಿಯಂತ್ರಕನು, ಚಿಕ್ಕದಕ್ಕಿಂತ ಚಿಕ್ಕವನು, ಪ್ರತಿಯೊಂದರ ಪಾಲಕನು, ಎಲ್ಲ ಭೌತಿಕ ಕಲ್ಪನೆಗೆ ಅತೀತನು, ಅಚಿಂತ್ಯನು ಮತ್ತು ಸದಾ ಒಬ್ಬ ಪುರುಷನು ಎಂದು ಒಬ್ಬನು ಧ್ಯಾನ ಮಾಡಬೇಕು. ಅವನು ಸೂರ್ಯನಂತೆ ಪ್ರಕಾಶಮಾನ ಮತ್ತು ಅವನು ದಿವ್ಯನು, ಎಂದರೆ ಈ ಭೌತಿಕ ಪ್ರಕೃತಿಯ ಆಚೆಗಿರುವನು.**

**ಭಾವಾರ್ಥ :** ಪರಮನನ್ನು ಚಿಂತಿಸುವ ಪ್ರಕ್ರಿಯೆಯು ಈ ಶ್ಲೋಕದಲ್ಲಿ ಪ್ರಸ್ತಾಪಿತವಾಗಿದೆ. ಅವನು ವ್ಯಕ್ತಿಶೂನ್ಯ ಅಥವಾ ಶೂನ್ಯನಲ್ಲ ಎಂಬುದು ಪ್ರಧಾನ ಅಂಶ. ಒಬ್ಬನು ಯಾವುದೋ ವ್ಯಕ್ತಿ ಶೂನ್ಯವಾದುದನ್ನು ಅಥವಾ ಶೂನ್ಯವನ್ನು ಕುರಿತು ಧ್ಯಾನ ಮಾಡಲಾರನು. ಅದು ಬಹು ಕಷ್ಟ. ಆದರೆ ಕೃಷ್ಣನನ್ನು ಚಿಂತಿಸುವ ಪ್ರಕ್ರಿಯೆಯು, ಬಹು ಸುಲಭ ಮತ್ತು ಇಲ್ಲಿ ವಾಸ್ತವಿಕವಾಗಿ ಹೇಳಿದ. ಪ್ರಥಮತಃ ಭಗವಂತನು **ಪುರುಷ,** ಒಬ್ಬ ವ್ಯಕ್ತಿ—ನಾವು ರಾಮನೆಂಬ ವ್ಯಕ್ತಿ ಮತ್ತು ಕೃಷ್ಣನೆಂಬ ವ್ಯಕ್ತಿಯನ್ನು ಚಿಂತಿಸುತ್ತೇವೆ. ಮತ್ತು ಒಬ್ಬನು ರಾಮನನ್ನೇ ಚಿಂತಿಸಲಿ ಅಥವಾ ಕೃಷ್ಣನನ್ನೇ ಚಿಂತಿಸಲಿ

ಅವನು ಹೇಗಿರುವನು ಎಂದು ಭಗವದ್ಗೀತೆಯ ಈ ಶ್ಲೋಕದಲ್ಲಿ ವರ್ಣಿತವಾಗಿದೆ. ಭಗವಂತನು **ಕವಿ ;** ಹಾಗೆಂದರೆ, ಅವನಿಗೆ ಭೂತಭವಿಷ್ಯದ್ವರ್ತಮಾನಗಳು ಗೊತ್ತಿವೆಯಾದ್ದರಿಂದ ಪ್ರತಿಯೊಂದೂ ಗೊತ್ತಿರುತ್ತದೆ. ಅವನು ಪ್ರತಿಯೊಂದರ ಮೂಲನಾದ್ದರಿಂದ ಅವನು ಪುರಾಣ ಪುರುಷನು; ಪ್ರತಿಯೊಂದು ಅವನಿಂದ ಜನಿತ. ಅವನು ವಿಶ್ವದ ಪರಮ ನಿಯಂತ್ರಕನೂ ಆಗಿದ್ದಾನೆ, ಮತ್ತು ಅವನು ಮಾನವ ಕುಲದ ಪಾಲಕನೂ ಮತ್ತು ಉಪದೇಶಕನೂ ಆಗಿದ್ದಾನೆ. ಅವನು ಅತಿ ಚಿಕ್ಕದಕ್ಕಿಂತ ಚಿಕ್ಕವನು. ಜೀವನು ಕೂದಲು ತುದಿಯ ಹತ್ತು ಸಾವಿರ ಭಾಗದಲ್ಲೊಂದರಷ್ಟು ಇರುವನು, ಆದರೆ ಭಗವಂತನು ಅದೆಷ್ಟು ಅಚಿಂತ್ಯವಾಗಿ ಚಿಕ್ಕವನೆಂದರೆ ಈ ಚಿಕ್ಕ ಕಣದ ಅಂತರಂಗವನ್ನೂ ಪ್ರವೇಶಿಸುತ್ತಾನೆ. ಆದ್ದರಿಂದ ಅವನು ಅತಿ ಚಿಕ್ಕದಕ್ಕಿಂತ ಚಿಕ್ಕದಾಗಿರುವನು ಎಂದಿದೆ. ಪರಮನಾಗಿ, ಅವನು ಪರಮಾಣುವನ್ನು ಮತ್ತು ಅತ್ಯಂತ ಚಿಕ್ಕದರ ಹೃದಯವನ್ನು ಪ್ರವೇಶಿಸಬಲ್ಲನು ಮತ್ತು ಪರಮಾತ್ಮನಾಗಿ ಅವನನ್ನು ನಿಯಂತ್ರಿಸಬಲ್ಲನು. ಅಷ್ಟು ಚಿಕ್ಕದಾಗಿದ್ದರೂ, ಆಗಲೂ ಅವನು ಎಲ್ಲವನ್ನು ವ್ಯಾಪಿಸಿರುವನು ಮತ್ತು ಪ್ರತಿಯೊಂದನ್ನೂ ಪೋಷಿಸುತ್ತಿರುವನು. ಅವನಿಂದ ಈ ಎಲ್ಲ ಲೋಕ ವ್ಯೂಹಗಳು ಧರಿಸಲ್ಪಟ್ಟಿವೆ. ಈ ದೊಡ್ಡ ಗ್ರಹಗಳು ಗಾಳಿಯಲ್ಲಿ ಹೇಗೆ ತೇಲುತ್ತವೆ ಎಂದು ನಾವು ಅನೇಕ ಸಲ ಆಶ್ಚರ್ಯಪಡುತ್ತೇವೆ. ಪರಮ ಪ್ರಭುವು, ತನ್ನ ಅಚಿಂತ್ಯ ಶಕ್ತಿಯಿಂದ ಈ ಎಲ್ಲ ದೊಡ್ಡ ಗ್ರಹಗಳನ್ನು ಮತ್ತು ನಕ್ಷತ್ರ ಪುಂಜಗಳನ್ನೂ ಧರಿಸಿದ್ದಾನೆ ಎಂದು ಇಲ್ಲಿ ಹೇಳಿದೆ. **ಅಚಿನ್ತ್ಯ** ಎಂಬ ಪದವು ಈ ಸಂಬಂಧದಲ್ಲಿ ಬಹು ಮಹತ್ವದ್ದು. ಭಗವಂತನ ಶಕ್ತಿಯು ನಮ್ಮ ಕಲ್ಪನೆಗೆ ಮೀರಿರುವುದು, ಮತ್ತು ನಮ್ಮ ಯೋಜನಾ ವ್ಯಾಪ್ತಿಯ ಆಚೆಗಿರುವುದು, ಆದ್ದರಿಂದಲೇ **ಅಚಿನ್ತ್ಯ** ಎಂದು ಕರೆದಿದೆ. ಈ ಅಂಶವನ್ನು ವಾದಿಸಬಲ್ಲವರು ಯಾರು ? ಅವನು ಈ ಭೌತಿಕ ಜಗತ್ತನ್ನು ವ್ಯಾಪಿಸಿರುವನು, ಆದರೂ ಇದರಿಂದ ಅತೀತನು. ಅಧ್ಯಾತ್ಮ ಜಗತ್ತಿಗೆ ಹೋಲಿಸಿದರೆ, ಈ ಭೌತಿಕ ಜಗತ್ತು ಅತ್ಯಂತ ನಿಕೃಷ್ಟವಾದದ್ದು; ಈ ಭೌತಿಕ ಜಗತ್ತನ್ನು ನಾವು ಅರಿಯಲಾರೆವು—ಹಾಗಿರಲು ಅದರ ಆಚೆಗಿರುವುದನ್ನು ನಾವು ಅರಿಯುವುದು ಹೇಗೆ ? **ಅಚಿನ್ತ್ಯ** ಎಂದರೆ ಈ ಭೌತಿಕ ಜಗತ್ತಿಗೆ ಆಚೆಯದು, ನಮ್ಮ ವಾದ, ತರ್ಕ ಮತ್ತು ತಾತ್ವಿಕ ಊಹಾಪೋಹಗಳಿಂದ ಮುಟ್ಟಲಾಗದು, ಕಲ್ಪನಾತೀತವಾದದು ಎಂದರ್ಥ. ಆದ್ದರಿಂದ ಬುದ್ಧಿವಂತರು ವ್ಯರ್ಥ ವಾದ ಮತ್ತು ಊಹಾಪೋಹವನ್ನು ತ್ಯಜಿಸಿ, ವೇದಗಳು, ಭಗವದ್ಗೀತೆ ಮತ್ತು ಶ್ರೀಮದ್ ಭಾಗವತಗಳಂಥಹ ಶಾಸ್ತ್ರಗಳಲ್ಲಿ ಹೇಳಿರುವುದನ್ನು ಸ್ವೀಕರಿಸಬೇಕು ಮತ್ತು ಅಲ್ಲಿ ಹೇಳಿದ ತತ್ವಗಳನ್ನು ಅನುಸರಿಸಬೇಕು. ಇದು ಒಬ್ಬನನ್ನು ಅರಿವಿಗೆ ಕೊಂಡೊಯ್ಯುವುದು.

**ಪ್ರಯಾಣಕಾಲೇ ಮನಸಾಚಲೇನ**
**ಭಕ್ತ್ಯಾ ಯುಕ್ತೋ ಯೋಗಬಲೇನ ಚೈವ ।**
**ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್**
**ಸ ತಂ ಪರಂ ಪುರುಷಮುಪೈತಿ ದಿವ್ಯಮ್ ॥ ೧೦ ॥**

ಪ್ರಯಾಣ ಕಾಲೇ—ಮರಣಕಾಲದಲ್ಲಿ, ಮನಸಾ—ಮನಸ್ಸಿನಿಂದ, ಅಚಲೇನ—ಅದು ವಿಚಲಿತವಾಗದೇ, ಭಕ್ತ್ಯಾ—ಪೂರ್ಣ ಭಕ್ತಿಯಲ್ಲಿ, ಯುಕ್ತಃ—ನಿರತನಾಗಿ, ಯೋಗಬಲೇನ—ಯೋಗಬಲದಿಂದ, ಚ—ಸಹ, ಏವ—ಖಂಡಿತವಾಗಿ, ಭ್ರುವೋಃ—ಎರಡು ಕಣ್ಣು ಹುಬ್ಬುಗಳ, ಮಧ್ಯೇ—ನಡುವೆ, ಪ್ರಾಣಮ್—ಪ್ರಾಣವಾಯುವನ್ನು, ಆವೇಶ್ಯ—ಸ್ಥಾಪಿಸಿ, ಸಮ್ಯಕ್—ಸಂಪೂರ್ಣವಾಗಿ, ಸಃ—ಅವನು, ತಮ್—ಆ, ಪರಮ್—ದಿವ್ಯ, ಪುರುಷಮ್—ದೇವೋತ್ತಮ ಪುರುಷನನ್ನು, ಉಪೈತಿ—ಹೊಂದುತ್ತಾನೆ, ದಿವ್ಯಮ್—ಆಧ್ಯಾತ್ಮಿಕ ಧಾಮದಲ್ಲಿ.

**ಯಾರು ಮರಣಕಾಲದಲ್ಲಿ, ತನ್ನ ಪ್ರಾಣವಾಯುವನ್ನು ಎರಡು ಕಣ್ಣು ಹುಬ್ಬುಗಳ ನಡುವೆ ನಿಲ್ಲಿಸುವನೋ ಮತ್ತು, ಯೋಗ ಬಲದಿಂದ ಅವಿಚಲ ಮನಸ್ಸಿನಿಂದ, ಪೂರ್ಣಭಕ್ತಿಯಲ್ಲಿ ಪರಮ ಪ್ರಭುವಿನ ಸ್ಮರಣೆಯಲ್ಲಿ ನಿರತನಾಗುವನೋ ಅವನು ಖಂಡಿತವಾಗಿ ಪರಮ ದೇವೋತ್ತಮ ಪುರುಷನನ್ನು ಸೇರುತ್ತಾನೆ.**

**ಭಾವಾರ್ಥ :** ಮರಣ ಕಾಲದಲ್ಲಿ ಮನಸ್ಸು ಪರಮ ದೇವೋತ್ತಮ ಪುರುಷನಿಗೆ ಭಕ್ತಿಯಲ್ಲಿ ಸ್ಥಿತಗೊಳಿಸಿರಬೇಕೆಂದು ಈ ಶ್ಲೋಕದಲ್ಲಿ ಸ್ಪಷ್ಟವಾಗಿ ಹೇಳಿದೆ. ಯೋಗ ಅಭ್ಯಾಸಿತರಿಗೆ, ಅವರು ತಮ್ಮ ಜೀವ ಶಕ್ತಿಯನ್ನು ಕಣ್ಣು ಹುಬ್ಬುಗಳ ಮಧ್ಯೆ (**ಆಜ್ಞಾ ಚಕ್ರಕ್ಕೆ**) ಏರಿಸಬೇಕೆಂದು ಹೇಳಿದೆ. ಆರು ಚಕ್ರಗಳ ಮೇಲೆ ಧ್ಯಾನವನ್ನೊಳಗೊಂಡ **ಷಟ್ ಚಕ್ರಯೋಗಾಭ್ಯಾಸ** ವನ್ನು ಇಲ್ಲಿ ಸೂಚಿಸಿದೆ. ಶುದ್ಧ ಭಕ್ತನು ಅಂಥ ಯೋಗಾಭ್ಯಾಸ ಮಾಡುವುದಿಲ್ಲ, ಆದರೆ ಅವನು ಸದಾ ಕೃಷ್ಣಪ್ರಜ್ಞೆಯಲ್ಲಿ ನಿರತನಾಗಿರುವ ಕಾರಣ, ಮರಣ ಕಾಲದಲ್ಲಿ ಪರಮ ದೇವೋತ್ತಮ ಪುರುಷನನ್ನು, ಅವನ ಕೃಪೆಯಿಂದ ಸ್ಮರಿಸಬಲ್ಲನು. ಇದು ಹದಿನಾಲ್ಕನೆಯ ಶ್ಲೋಕದಲ್ಲಿ ವಿವರಿಸಲ್ಪಟ್ಟಿದೆ.

ಈ ಶ್ಲೋಕದಲ್ಲಿ **ಯೋಗ-ಬಲೇನ** ಪದದ ಪ್ರಯೋಗವು ಮಹತ್ವದ್ದಾಗಿದೆ. ಏಕೆಂದರೆ—**ಷಟ್ ಚಕ್ರಯೋಗ** ವೇ ಆಗಿರಲಿ ಅಥವಾ **ಭಕ್ತಿಯೋಗ** ವೇ ಆಗಿರಲಿ —ಯೋಗಾಚರಣೆ ಇಲ್ಲದೆ, ಒಬ್ಬನು ಮರಣ ಕಾಲದಲ್ಲಿ, ಜೀವನದ ಈ ದಿವ್ಯ ಸ್ಥಿತಿಗೆ ಬರಲಾರನು. ಒಬ್ಬನು ಇದ್ದಕ್ಕಿದ್ದಂತೆ ಮರಣ ಕಾಲದಲ್ಲಿ ಭಗವಂತನನ್ನು ಸ್ಮರಿಸಲಾರನು; ಒಬ್ಬನು ಯಾವುದೋ ಯೋಗ ಪದ್ಧತಿಯನ್ನು, ವಿಶೇಷವಾಗಿ ಭಕ್ತಿಯೋಗವನ್ನು ಅಭ್ಯಾಸ ಮಾಡಿರಬೇಕು. ಮರಣ ಕಾಲದಲ್ಲಿ ಒಬ್ಬನ ಮನಸ್ಸು ಬಹು ಕ್ಷೋಭೆಗೊಂಡಿರುವುದರಿಂದ, ಒಬ್ಬನು ತನ್ನ ಜೀವಿತ ಕಾಲದಲ್ಲಿ ಯೋಗದ ಮೂಲಕ ದಿವ್ಯತೆಯನ್ನು ಅಭ್ಯಾಸ ಮಾಡಿರಬೇಕು.

**ಯದಕ್ಷರಂ ವೇದವಿದೋ ವದನ್ತಿ**
**ವಿಶನ್ತಿ ಯದ್ ಯತಯೋ ವೀತರಾಗಾಃ ।**
**ಯದಿಚ್ಛನ್ತೋ ಬ್ರಹ್ಮಚರ್ಯಂ ಚರನ್ತಿ**
**ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ ॥ ೧೧ ॥**

ಯತ್—ಯಾವುದು, ಅಕ್ಷರಮ್—ಓಂ ಕಾರವು, ವೇದವಿದಃ—ವೇದಗಳನ್ನು ಬಲ್ಲವರು, ವದನ್ತಿ—ಹೇಳುತ್ತಾರೆ, ವಿಶನ್ತಿ—ಪ್ರವೇಶಿಸುತ್ತಾರೆ, ಯತ್—ಯಾವುದರಲ್ಲಿ, ಯತಯಃ—ಮಹಾನ್ ಋಷಿಗಳು, ವೀತರಾಗಾಃ—ಸನ್ಯಾಸಾಶ್ರಮದಲ್ಲಿ, ಯತ್—ಯಾವುದು, ಇಚ್ಛನ್ತಃ—ಆಶಿಸುತ್ತಾ, ಬ್ರಹ್ಮಚರ್ಯಮ್—ಬ್ರಹ್ಮಚರ್ಯವನ್ನು, ಚರನ್ತಿ—ಅಭ್ಯಾಸಿಸುತ್ತಾರೆ, ತತ್—ಅದನ್ನು, ತೇ—ನಿನಗೆ, ಪದಮ್—ಸನ್ನಿವೇಶವನ್ನು, ಸಂಗ್ರಹೇಣ—ಸಂಗ್ರಹವಾಗಿ, ಪ್ರವಕ್ಷ್ಯೇ—ನಾನು ವಿವರಿಸುತ್ತೇನೆ.

**ವೇದ ವಿದ್ವಾಂಸರು, ಓಂಕಾರವನ್ನು ಜಪಿಸುವವರು ಮತ್ತು ಸನ್ಯಾಸಾಶ್ರಮದ ಮಹಾನ್ ಋಷಿಗಳು ಬ್ರಹ್ಮನ್‌ನಲ್ಲಿ ಪ್ರವೇಶಿಸುತ್ತಾರೆ. ಅಂಥ ಪರಿಪೂರ್ಣತೆಯನ್ನು ಆಶಿಸಿ, ಒಬ್ಬನು ಬ್ರಹ್ಮಚರ್ಯೆಯನ್ನು ಆಚರಿಸುತ್ತಾನೆ. ಒಬ್ಬನು ಮೋಕ್ಷ ಹೊಂದಬಹುದಾದ ಈ ಪ್ರಕ್ರಿಯೆಯನ್ನು ನಾನು ಈಗ ಸಂಕ್ಷೇಪವಾಗಿ ನಿನಗೆ ವಿವರಿಸುತ್ತೇನೆ.**

**ಭಾವಾರ್ಥ :** ಒಬ್ಬನು ಪ್ರಾಣವಾಯುವನ್ನು ಹುಬ್ಬುಗಳ ಮಧ್ಯೆ ನಿಲ್ಲಿಸುವ **ಷಟ್‌ಚಕ್ರ ಯೋಗಾಭ್ಯಾಸವನ್ನು** ಶ್ರೀಕೃಷ್ಣನು ಅರ್ಜುನನಿಗೆ ಹೇಳಿದ್ದಾನೆ. **ಷಟ್‌ಚಕ್ರ ಯೋಗಾ**ಭ್ಯಾಸ ಮಾಡುವುದು ಹೇಗೆ ಎಂಬುದು ಅರ್ಜುನನಿಗೆ ತಿಳಿದಿಲ್ಲ ಎಂದು ಗ್ರಹಿಸಿ, ಭಗವಂತನು ಆ ಪ್ರಕ್ರಿಯೆಯನ್ನು ಕೆಳಗಿನ ಶ್ಲೋಕಗಳಲ್ಲಿ ವಿವರಿಸುತ್ತಾನೆ. **ಬ್ರಹ್ಮನ್,** ಅದ್ವಿತೀಯವಾಗಿದ್ದರೂ, ಅನೇಕ ಉದ್ಭೂತಿಗಳನ್ನು ಮತ್ತು ಲಕ್ಷಣಗಳನ್ನು ಹೊಂದಿರುವುದೆಂದು ಭಗವಂತನು ಹೇಳುತ್ತಾನೆ. ವಿಶೇಷವಾಗಿ ವ್ಯಕ್ತಿಶೂನ್ಯವಾದಿಗಳಿಗೆ, **ಅಕ್ಷರ,** ಅಥವಾ **ಓಂಕಾರವು,** ಬ್ರಹ್ಮನ್‌ನೊಂದಿಗೆ ಅನನ್ಯವಾಗಿರುತ್ತದೆ. ಸನ್ಯಾಸಾಶ್ರಮಿ**ಗಳು** ಪ್ರವೇಶಿಸುವ ವ್ಯಕ್ತಿಶೂನ್ಯ ಬ್ರಹ್ಮನ್ ಕುರಿತು ಕೃಷ್ಣನು ಇಲ್ಲಿ ವಿವರಿಸುತ್ತಾನೆ.

ವೈದಿಕ ಜ್ಞಾನ ಪದ್ಧತಿಯಲ್ಲಿ, ವಿದ್ಯಾರ್ಥಿಗಳು, ಪ್ರಾರಂಭದಿಂದಲೇ, ಸಂಪೂರ್ಣ ಬ್ರಹ್ಮಚರ್ಯದಿಂದ ಗುರುಗಳೊಡನೆ ಇದ್ದು, **ಓಂಕಾರವನ್ನು** ಉಚ್ಚರಿಸಲು ಕಲಿಯುವರು ಮತ್ತು ಅಂತಿಮ ವ್ಯಕ್ತಿಶೂನ್ಯ ಬ್ರಹ್ಮನ್‌ನನ್ನು ಅರಿತುಕೊಳ್ಳುವರು. ಈ ರೀತಿಯಲ್ಲಿ ಅವರು ಬ್ರಹ್ಮನ್‌ನ ಎರಡು ಲಕ್ಷಣಗಳನ್ನು ಸಾಕ್ಷಾತ್ಕರಿಸಿಕೊಳ್ಳುವರು. ಅಧ್ಯಾತ್ಮ ಜೀವನದಲ್ಲಿ ವಿದ್ಯಾರ್ಥಿಯ ಪ್ರಗತಿಗೆ ಈ ಅಭ್ಯಾಸವು ಬಹು ಅಗತ್ಯ, ಆದರೆ ಈಗ ಅಂಥ ಬ್ರಹ್ಮಚಾರಿ ಜೀವನವು (ಅವಿವಾಹಿತ ಬ್ರಹ್ಮಚಾರಿ) ಸಾಧ್ಯವೇ ಇಲ್ಲ. ಜಗತ್ತಿನ ಸಾಮಾಜಿಕ ರಚನೆಯು ಅದೆಷ್ಟು ಬದಲಾಗಿದೆ ಎಂದರೆ ವಿದ್ಯಾರ್ಥಿ ಜೀವನದ ಆರಂಭದಿಂದ, ಒಬ್ಬನ ಬ್ರಹ್ಮಚರ್ಯ ಆಚರಣೆಯ ಸಾಧ್ಯತೆ ಇಲ್ಲ. ಜಗತ್ತಿನಲ್ಲೆಲ್ಲಾ ಜ್ಞಾನದ ವಿವಿಧ ವಿಭಾಗಗಳಾಗಿ ಅನೇಕ ಸಂಸ್ಥೆಗಳಿವೆ, ಆದರೆ ವಿದ್ಯಾರ್ಥಿಗಳಿಗೆ **ಬ್ರಹ್ಮಚರ್ಯದ ತತ್ವಗಳಲ್ಲಿ** ಶಿಕ್ಷಣವನ್ನು ನೀಡುವ ಮಾನ್ಯತೆ ಪಡೆದ ಸಂಸ್ಥೆಗಳಿಲ್ಲ. ಒಬ್ಬನು ಬ್ರಹ್ಮಚರ್ಯ ಪಾಲಿಸದ ಹೊರತು ಅಧ್ಯಾತ್ಮ ಜೀವನದಲ್ಲಿ ಪ್ರಗತಿಯು ಬಹು ಕಷ್ಟ. ಆದ್ದರಿಂದ ಭಗವಾನ್ ಚೈತನ್ಯರು ಈ ಕಲಿಯುಗಕ್ಕೆ ಶಾಸ್ತ್ರೀಯ ವಿಧಿಗಳಿಗನುಸಾರವಾಗಿ ಘೋಷಿಸಿರು**ವುದೇನೆಂದರೆ, ಈ ಕಲಿಯುಗದಲ್ಲಿ ಭಗವಾನ್ ಕೃಷ್ಣನ ನಾಮಗಳ—ಹರೇ ಕೃಷ್ಣ, ಹರೇ**

**ಕೃಷ್ಣ**, ಕೃಷ್ಣ ಕೃಷ್ಣ, ಹರೇ ಹರೇ/ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ—ಕೀರ್ತನೆಯ ವಿನಹ ಪರಮನನ್ನು ಸಾಕ್ಷಾತ್ಕರಿಸಿಕೊಳ್ಳುವ ಬೇರೆ ಯಾವ ಪ್ರಕ್ರಿಯೆಯೂ ಸಾಧ್ಯವಿಲ್ಲ.

**ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುಧ್ಯ ಚ ।**
**ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗಧಾರಣಾಮ್ ॥೧೨॥**

ಸರ್ವದ್ವಾರಾಣಿ—ದೇಹದ ಎಲ್ಲ ದ್ವಾರಗಳನ್ನು, ಸಂಯಮ್ಯ—ನಿಯಂತ್ರಿಸಿ, ಮನಃ—ಮನಸ್ಸು, ಹೃದಿ—ಹೃದಯದ, ನಿರುಧ್ಯ—ಒಳಗಿರಿಸಿ, ಚ—ಸಹ. ಮೂರ್ಧ್ನಿ—ತಲೆಯಮೇಲೆ, ಆಧಾಯ—ಸ್ಥಿತಗೊಳಿಸಿ, ಆತ್ಮನಃ—ಆತ್ಮನ, ಪ್ರಾಣಮ್—ಪ್ರಾಣವಾಯುವನ್ನು, ಆಸ್ಥಿತಃ—ಸನ್ನಿವೇಶಿತವಾಗಿ, ಯೋಗಧಾರಣಾಮ್—ಯೋಗ ಸ್ಥಿತಿ.

**ಎಲ್ಲ ಇಂದ್ರಿಯ ನಿರತತೆಗಳಿಂದ ವಿರಕ್ತವಾಗುವುದೇ ಯೋಗ ಸ್ಥಿತಿ. ಇಂದ್ರಿಯ ದ್ವಾರಗಳನ್ನೆಲ್ಲಾ ಮುಚ್ಚಿ, ಮತ್ತು ಮನಸ್ಸನ್ನು ಹೃದಯದಲ್ಲಿಯೂ ಮತ್ತು ಪ್ರಾಣವಾಯುವನ್ನು ಶಿರಾಗ್ರದಲ್ಲಿಯೂ ಸ್ಥಿತಗೊಳಿಸಿ, ಒಬ್ಬನು ಯೋಗದಲ್ಲಿ ಸ್ಥಾಪಿತನಾಗುತ್ತಾನೆ.**

**ಭಾವಾರ್ಥ :** ಇಲ್ಲಿ ಸೂಚಿಸಿದಂತೆ ಯೋಗಾಭ್ಯಾಸ ಮಾಡಲು ಒಬ್ಬನು ಎಲ್ಲ ಇಂದ್ರಿಯ ಭೋಗದ್ವಾರಗಳನ್ನು ಮೊದಲು ಮುಚ್ಚಬೇಕಾಗುವುದು. ಈ ಅಭ್ಯಾಸವನ್ನು **ಪ್ರತ್ಯಾಹಾರ,** ಅಥವಾ ಇಂದ್ರಿಯಗಳನ್ನು ಇಂದ್ರಿಯ ವಿಷಯಗಳಿಂದ ಹಿಂತೆಗೆದುಕೊಳ್ಳುವುದು, ಎಂದು ಕರೆಯುತ್ತಾರೆ. ಜ್ಞಾನಾರ್ಜನೆಯ ಇಂದ್ರಿಯಗಳನ್ನು—ಎಂದರೆ ಕಣ್ಣು, ಕಿವಿ, ಮೂಗು, ನಾಲಿಗೆ ಮತ್ತು ಸ್ಪರ್ಶ— ಪೂರ್ಣವಾಗಿ ನಿಯಂತ್ರಿಸಬೇಕು ಮತ್ತು ಸ್ವತೋಷಣೆಯಲ್ಲಿ ನಿರತವಾಗಲು ಅವಕಾಶ ಕೊಡಕೂಡದು. ಈ ರೀತಿಯಲ್ಲಿ ಮನಸ್ಸು ಹೃದಯದಲ್ಲಿನ ಪರಮಾತ್ಮನ ಮೇಲೆ ಕೇಂದ್ರೀಕೃತವಾಗುತ್ತದೆ, ಮತ್ತು ಜೀವಶಕ್ತಿಯು ಶಿರಾಗ್ರಕ್ಕೆ ಏರಿಸಲ್ಪಡುತ್ತದೆ. ಆರನೆಯ ಅಧ್ಯಾಯದಲ್ಲಿ ಈ ಪ್ರಕ್ರಿಯೆಯು ವಿಶದವಾಗಿ ವರ್ಣಿತವಾಗಿದೆ. ಆದರೆ ಹಿಂದೆ ಹೇಳಿರುವಂತೆ ಈ ಅಭ್ಯಾಸವು ಈ ಯುಗದಲ್ಲಿ ಕಾರ್ಯತಃ ಸಾಧ್ಯವಿಲ್ಲ. ಕೃಷ್ಣಪ್ರಜ್ಞೆಯು ಅತ್ಯುತ್ತಮ ಪ್ರಕ್ರಿಯೆ. ಒಬ್ಬನು ಭಕ್ತಿಯುತ ಸೇವೆಯಲ್ಲಿ ಕೃಷ್ಣನ ಮೇಲೆ ಸದಾ ಮನಸ್ಸನ್ನು ಸ್ಥಿತಗೊಳಿಸಲು ಶಕ್ತನಾದರೆ, ಅವನು ಕ್ಷೋಭರಹಿತ ದಿವ್ಯ ಸಮಾಧಿಯಲ್ಲಿ ಉಳಿದುಕೊಳ್ಳುವುದು ಬಹು ಸುಲಭವಾಗುತ್ತದೆ.

**ಓಂ ಇತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ಮಾಮನುಸ್ಮರನ್ ।**
**ಯಃ ಪ್ರಯಾತಿ ತ್ಯಜನ್ ದೇಹಂ ಸ ಯಾತಿ ಪರಮಾಂ ಗತಿಮ್ ॥೧೩॥**

ಓಂ—ಓಂ ಅಕ್ಷರಗಳ ಸಂಯೋಜನೆ (ಓಂಕಾರ), ಇತಿ—ಹೀಗೆ, ಏಕಾಕ್ಷರಮ್—ಒಂದು ಅಕ್ಷರ, ಬ್ರಹ್ಮ—ಪರತತ್ವವನ್ನು, ವ್ಯಾಹರನ್—ಉಚ್ಚರಿಸುತ್ತಾ, ಮಾಮ್—

ನನ್ನನ್ನು (ಕೃಷ್ಣ), ಅನುಸ್ಮರನ್—ಚಿಂತಿಸುತ್ತಾ, ಯಃ—ಯಾರು, ಪ್ರಯಾತಿ—ಹೋಗುತ್ತಾನೆ, ತ್ಯಜನ್—ತ್ಯಜಿಸಿ, ದೇಹಮ್—ಈ ದೇಹವನ್ನು, ಸಃ—ಅವನು, ಯಾತಿ—ಹೊಂದುತ್ತಾನೆ, ಪರಮಾಮ್—ಪರಮ, ಗತಿಮ್—ಗತಿಯನ್ನು.

**ಈ ಯೋಗಾಭ್ಯಾಸದಲ್ಲಿ ಸನ್ನಿವೇಶಿತನಾಗಿ ಮತ್ತು ಅಕ್ಷರಗಳ ಪರಮ ಸಂಯೋಜನೆಯಾದ ಪವಿತ್ರ ಓಂಕಾರವನ್ನು ಉಚ್ಚರಿಸಿದ ನಂತರ, ಒಬ್ಬನು ಪರಮ ದೇವೋತ್ತಮ ಪುರುಷನನ್ನು ಸ್ಮರಿಸಿ ತನ್ನ ದೇಹವನ್ನು ತ್ಯಜಿಸಿದರೆ, ಅವನು ಖಂಡಿತವಾಗಿ ಅಧ್ಯಾತ್ಮ ಲೋಕಗಳನ್ನು ಸೇರುತ್ತಾನೆ.**

**ಭಾವಾರ್ಥ :** ಓಂ, ಬ್ರಹ್ಮನ್ ಮತ್ತು ಭಗವಾನ್ ಕೃಷ್ಣ ಬೇರೆಯಲ್ಲ ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಕೃಷ್ಣನ ವ್ಯಕ್ತಿಸ್ವರೂಪವಿಲ್ಲದ ಶಬ್ದವು ಓಂ, ಆದರೆ ಹರೇ ಕೃಷ್ಣ ಶಬ್ದವು ಓಂಕಾರವನ್ನು ಒಳಗೊಂಡಿದೆ. ಹರೇ ಕೃಷ್ಣ ಮಂತ್ರದ ಜಪವು ಈ ಯುಗಕ್ಕಾಗಿ ಸ್ಪಷ್ಟವಾಗಿ ಹೇಳಿದೆ. ಆದ್ದರಿಂದ ಒಬ್ಬನು ಜೀವನದ ಅಂತ್ಯದಲ್ಲಿ ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ/ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ ಎಂದು ಜಪಿಸುತ್ತಾ ತನ್ನ ದೇಹವನ್ನು ತ್ಯಜಿಸಿದರೆ, ಅವನ ಆಚರಣೆಯ ವಿಧಾನಾನುಸಾರವಾಗಿ, ಅವನು ಖಂಡಿತವಾಗಿ ಅಧ್ಯಾತ್ಮಲೋಕಗಳಲ್ಲಿ ಒಂದನ್ನು ಸೇರುತ್ತಾನೆ. ಕೃಷ್ಣನ ಭಕ್ತರು ಕೃಷ್ಣನ ಲೋಕವಾದ ಗೋಲೋಕ ವೃಂದಾವನವನ್ನು ಪ್ರವೇಶಿಸುತ್ತಾರೆ. ವ್ಯಕ್ತಿಸ್ವರೂಪವಾದಿಗಳಿಗೆ ಪರವ್ಯೋಮದಲ್ಲಿ ವೈಕುಂಠ ಲೋಕಗಳೆಂಬ ಅಸಂಖ್ಯಾತ ಇತರ ಲೋಕಗಳಿವೆ, ಆದರೆ ವ್ಯಕ್ತಿಶೂನ್ಯವಾದಿಗಳು ಬ್ರಹ್ಮಜ್ಯೋತಿಯಲ್ಲಿ ಉಳಿಯುತ್ತಾರೆ.

**ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ ।**
**ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ॥೧೪॥**

ಅನನ್ಯಚೇತಾಃ—ಮನಸ್ಸಿನ ವಿಚಲತೆ ಇಲ್ಲದೆ, ಸತತಮ್—ಯಾವಾಗಲೂ, ಯಃ—ಯಾರು, ಮಾಮ್—ನನ್ನನ್ನು (ಕೃಷ್ಣ), ಸ್ಮರತಿ—ಸ್ಮರಿಸುತ್ತಾನೆ, ನಿತ್ಯಶಃ—ತಪ್ಪದೆ, ತಸ್ಯ—ಅವನಿಗೆ, ಅಹಮ್—ನಾನು, ಸುಲಭಃ—ಹೊಂದಲು ಬಹು ಸುಲಭನು, ಪಾರ್ಥ—ಹೇ ಪೃಥಾ ಪುತ್ರನೇ, ನಿತ್ಯ—ತಪ್ಪದೇ, ಯುಕ್ತಸ್ಯ—ನಿರತನಾದ, ಯೋಗಿನಃ—ಭಕ್ತನಿಗೆ.

**ಹೇ ಪೃಥಾ ಪುತ್ರನೇ, ವಿಚಲತೆ ಇಲ್ಲದೆ ಸದಾ ನನ್ನನ್ನು ಸ್ಮರಿಸುವವನಿಗೆ, ಭಕ್ತಿಯುತ ಸೇವೆಯಲ್ಲಿ ಅವನ ಸತತ ನಿರತತೆಯ ಕಾರಣ, ನಾನು ಸುಲಭ ಲಭ್ಯನು.**

**ಭಾವಾರ್ಥ :** ಪರಮದೇವೋತ್ತಮ ಪುರುಷನನ್ನು ಭಕ್ತಿಯೋಗದಲ್ಲಿ ಸೇವಿಸುವ ಅಮಿಶ್ರ ಭಕ್ತರು ಹೊಂದುವ ಅಂತಿಮ ಗಮ್ಯಸ್ಥಾನವನ್ನು ಈ ಶ್ಲೋಕವು ವಿಶೇಷವಾಗಿ ವರ್ಣಿಸುತ್ತದೆ. ಹಿಂದಿನ ಶ್ಲೋಕಗಳು— ಆರ್ತರು, ಜಿಜ್ಞಾಸುಗಳು, ಭೌತಿಕ ಲಾಭಾರ್ಥಿಗಳು ಮತ್ತು ಊಹಾಪೋಹಾತ್ಮಕ ತಾತ್ವಿಕರು–ಹೀಗೆ ನಾಲ್ಕು ಭಿನ್ನ ಬಗೆಯ ಭಕ್ತರನ್ನು

ಪ್ರಸ್ತಾಪಿಸಿವೆ. **ಕರ್ಮ-ಯೋಗ, ಜ್ಞಾನ-ಯೋಗ** ಮತ್ತು **ಹಠ-ಯೋಗ** ಎಂಬ ಮೋಕ್ಷದ ಭಿನ್ನ ಪ್ರಕ್ರಿಯೆಗಳನ್ನು ಕೂಡ ವರ್ಣಿಸಿದೆ. ಈ ಯೋಗ ಪದ್ಧತಿಗಳ ತತ್ತ್ವಗಳಲ್ಲಿ ಸ್ವಲ್ಪ ಭಕ್ತಿ ಸೇರಿದೆ. ಆದರೆ ಈ ಶ್ಲೋಕವು, ಜ್ಞಾನ, ಕರ್ಮ ಅಥವಾ ಹಠ ಯಾವುದೇ ಮಿಶ್ರವಿಲ್ಲದೇ ಶುದ್ಧ ಭಕ್ತಿಯೋಗವನ್ನು ವಿಶೇಷವಾಗಿ ಪ್ರಸ್ತಾಪಿಸುತ್ತದೆ. **ಅನನ್ಯ-ಚೇತಾಃ** ಪದದಿಂದ ಸೂಚಿತವಾದಂತೆ, ಶುದ್ಧ ಭಕ್ತಿಯೋಗದಲ್ಲಿ ಭಕ್ತನು ಕೃಷ್ಣನನ್ನು ಬಿಟ್ಟು ಬೇರೆ ಏನನ್ನೂ ಇಚ್ಛಿಸುವುದಿಲ್ಲ. ಶುದ್ಧಭಕ್ತನು ಸ್ವರ್ಗಲೋಕಗಳಿಗೆ ಏರಿಸಲ್ಪಡಲು ಆಶಿಸುವುದಿಲ್ಲ, ಅಥವಾ ಬ್ರಹ್ಮಜ್ಯೋತಿಯೊಂದಿಗೆ ಒಂದಾಗುವುದನ್ನು ಅಥವಾ ಮೋಕ್ಷವನ್ನು ಅಥವಾ ಭೌತಿಕ ತೊಡಕಿನಿಂದ ವಿಮೋಚನೆಯನ್ನು ಅವನು ಬೇಡುವುದಿಲ್ಲ. ಶುದ್ಧ ಭಕ್ತನು ಏನನ್ನೂ ಆಶಿಸುವುದಿಲ್ಲ. ಚೈತನ್ಯ ಚರಿತಾಮೃತದಲ್ಲಿ ಶುದ್ಧ ಭಕ್ತನನ್ನು **ನಿಷ್ಕಾಮ** ಎಂದು ಕರೆದಿದೆ, ಎಂದರೆ ಅವನಿಗೆ ಸ್ವಾರ್ಥಕ್ಕಾಗಿ ಆಸೆ ಇರುವುದಿಲ್ಲ ಎಂದು ಅರ್ಥ. ಪರಿಪೂರ್ಣ ಶಾಂತಿ ಅವನಿಗೆ ಮಾತ್ರ ಸೇರಿರುತ್ತದೆ, ವೈಯಕ್ತಿಕ ಲಾಭಕ್ಕಾಗಿ ಯತ್ನಿಸುವವರಿಗಲ್ಲ. **ಜ್ಞಾನ-ಯೋಗಿ, ಕರ್ಮ-ಯೋಗಿ** ಅಥವಾ **ಹಠ-ಯೋಗಿ**ಯಾದರೋ ತನ್ನದೇ ಸ್ವಂತ ಆಸಕ್ತಿಗಳನ್ನು ಹೊಂದಿರುತ್ತಾನೆ. ಪರಿಪೂರ್ಣ ಭಕ್ತನಿಗೆ ಪರಮದೇವೋತ್ತಮ ಪುರುಷನನ್ನು ಪ್ರೀತನಾಗಿಸುವ ಹೊರತು ಬೇರೆ ಆಸೆಯು ಇರುವುದಿಲ್ಲ. ಆದ್ದರಿಂದ ನಿಶ್ಚಲನಾಗಿ ತನಗೆ ಅರ್ಪಿತನಾದವನಿಗೆ, ಅವನನ್ನು ಹೊಂದಲು ಸುಲಭ ಎಂದು ಭಗವಂತನು ಹೇಳುತ್ತಾನೆ.

ಶುದ್ಧ ಭಕ್ತನು ಕೃಷ್ಣನ ವಿವಿಧ ವೈಯಕ್ತಿಕ ರೂಪಗಳಲ್ಲೊಂದರ ಭಕ್ತಿಯುತ ಸೇವೆಯಲ್ಲಿ ಸದಾ ನಿರತನು. ಕೃಷ್ಣನಿಗೆ ರಾಮ ಮತ್ತು ನರಸಿಂಹರಂಥ ವಿವಿಧ ಸಮಗ್ರ ವಿಸ್ತರಣೆಗಳು ಮತ್ತು ಅವತಾರಗಳು ಇವೆ, ಮತ್ತು ಭಕ್ತನು ಪರಮಪ್ರಭುವಿನ ಯಾವುದೇ ಈ ದಿವ್ಯ ರೂಪಗಳಿಗೆ ಪ್ರೀತಿಯುತ ಸೇವೆಯಲ್ಲಿ ತನ್ನ ಮನಸ್ಸನ್ನು ಸ್ಥಿತಗೊಳಿಸಲು ಆಯ್ಕೆಮಾಡಬಹುದು. ಅಂಥ ಭಕ್ತನು ಇತರ ಯೋಗಾಭ್ಯಾಸಿಗಳಿಗೆ ಕಾಡುವ ಯಾವ ತೊಂದರೆಗಳನ್ನು ಸಂಧಿಸುವುದಿಲ್ಲ. ಭಕ್ತಿಯೋಗವು ಬಹು ಸರಳ ಮತ್ತು ಶುದ್ಧ ಮತ್ತು ಆಚರಿಸಲು ಸುಲಭ. ಒಬ್ಬನು ಸುಮ್ಮನೇ ಹರೇ ಕೃಷ್ಣ ಜಪಿಸುವುದರಿಂದ ಪ್ರಾರಂಭಿಸಬಹುದು. ಭಗವಂತನು ಎಲ್ಲರಿಗೂ ದಯಾಪೂರ್ಣನು, ಆದರೆ ಈಗಾಗಲೇ ನಾವು ವಿವರಿಸಿರುವಂತೆ, ವಿಚಲತೆ ಇಲ್ಲದೆ ಅವನನ್ನು ಸದಾ ಸೇವಿಸುವವರ ಕಡೆಗೆ ಅವನು ವಿಶೇಷವಾಗಿ ಒಲವು ಉಳ್ಳವನು. ಭಗವಂತನು ಅಂಥ ಭಕ್ತರಿಗೆ ನಾನಾ ರೀತಿಗಳಲ್ಲಿ ಸಹಾಯ ಮಾಡುತ್ತಾನೆ. ವೇದಗಳಲ್ಲಿ ಹೇಳಿರುವಂತೆ (ಕಠ ಉಪನಿಷತ್ತು 1.2.23), **ಯಮ್ ಏವೈಷ ವೃಣುತೇ ತೇನ ಲಭ್ಯಸ್/ತಸ್ಯೈಷ ಆತ್ಮಾ ವಿವೃಣುತೇ ತನುಂ ಸ್ವಾಮ್**— ಪೂರ್ಣ ಶರಣಾಗತನು ಮತ್ತು ಪರಮ ಪ್ರಭುವಿನ ಭಕ್ತಿಯುತ ಸೇವೆಯಲ್ಲಿ ನಿರತನಾದವನು, ಪರಮ ಪ್ರಭುವನ್ನು ಯಥಾರೂಪ ಅರಿತುಕೊಳ್ಳಬಹುದು. ಮತ್ತು ಭಗವದ್ಗೀತೆಯಲ್ಲಿ (10.10) ಹೇಳಿರುವಂತೆ, **ದದಾಮಿ ಬುದ್ಧಿ ಯೋಗಂ ತಮ್**— ಅಂಥ ಭಕ್ತನು ಅಂತಿಮವಾಗಿ ಅವನ ಪರಂಧಾಮದಲ್ಲಿ ಅವನನ್ನು ಸೇರುವಂತೆ ಸಾಕಷ್ಟು ಬುದ್ಧಿಯನ್ನು ಭಗವಂತನು ಭಕ್ತನಿಗೆ ನೀಡುತ್ತಾನೆ.

ಶುದ್ಧ ಭಕ್ತನ ವಿಶೇಷ ಅರ್ಹತೆ ಏನೆಂದರೆ, ವಿಚಲತೆ ಇಲ್ಲದೆ ಮತ್ತು ಕಾಲ ದೇಶ ವನ್ನು ಗಮನಿಸದೆ ಅವನು ಸದಾ ಕೃಷ್ಣನ ಚಿಂತನ ಮಾಡುತ್ತಾನೆ. ಅಡಚಣೆಗಳಿರಕೂಡದು. ಅವನು ಎಲ್ಲಿಯೇ ಆಗಲಿ ಮತ್ತು ಯಾವುದೇ ಸಮಯದಲ್ಲಾಗಲೀ ತನ್ನ ಸೇವೆಯನ್ನು ನಿರ್ವಹಿಸಲು ಶಕ್ತನಾಗಿರಬೇಕು. ಭಕ್ತನು ವೃಂದಾವನದಂಥ ಪುಣ್ಯ ಸ್ಥಳಗಳಲ್ಲಿ ಅಥವಾ ಭಗವಂತನು ಇದ್ದ ಕೆಲವು ಪುಣ್ಯ ನಗರಗಳಲ್ಲಿ ಇರಬೇಕೆಂದು ಕೆಲವರು ಹೇಳುತ್ತಾರೆ; ಆದರೆ ಶುದ್ಧ ಭಕ್ತನು ಎಲ್ಲಿಯಾದರೂ ಇರಬಹುದು ಮತ್ತು ತನ್ನ ಭಕ್ತಿಯುತ ಸೇವೆ ಯಿಂದ ವೃಂದಾವನದ ವಾತಾವರಣವನ್ನು ಸೃಷ್ಟಿಸಬಹುದು. "ಹೇ ಪ್ರಭುವೇ, ನೀವು ಎಲ್ಲಿಯೇ ಇರಲಿ, ಅದು ವೃಂದಾವನ," ಎಂದು ಶ್ರೀ ಅದ್ವೈತರು ಭಗವಾನ್ ಚೈತನ್ಯರಿಗೆ ಹೇಳಿದರು.

**ಸತತಮ್** ಮತ್ತು **ನಿತ್ಯಶಃ** ಎಂದರೆ "ಸದಾ", "ತಪ್ಪದೆ" ಅಥವಾ "ಪ್ರತಿದಿನ" ಎಂದು ಅರ್ಥ ; ಈ ಪದಗಳು ಸೂಚಿಸುವಂತೆ ಶುದ್ಧ ಭಕ್ತನು ಕೃಷ್ಣನನ್ನು ಸತತವಾಗಿ ಸ್ಮರಿಸುತ್ತಾನೆ, ಮತ್ತು ಅವನನ್ನು ಕುರಿತು ಧ್ಯಾನ ಮಾಡುತ್ತಾನೆ. ಭಗವಂತನು ಅತ್ಯಂತ ಸುಲಭವಾಗಿ ಲಭ್ಯನಾಗುವ ಶುದ್ಧ ಭಕ್ತನ ಅರ್ಹತೆಗಳು ಇವು. ಭಕ್ತಿ ಯೋಗವು ಎಲ್ಲ ಕ್ಕಿಂತ ಮಿಗಿಲಾಗಿ ಗೀತೆಯು ಹೇಳುವ ಪದ್ಧತಿ. ಸಾಮಾನ್ಯವಾಗಿ, ಭಕ್ತಿಯೋಗಿಗಳು ಐದು ವಿಧಗಳಲ್ಲಿ ನಿರತರು : (1)**ಶಾಂತ-ಭಕ್ತ,** ತಾಟಸ್ಥ್ಯವಾಗಿ ಭಕ್ತಿಯುತ ಸೇವೆಯಲ್ಲಿ ನಿರತನು, (2) **ದಾಸ್ಯ-ಭಕ್ತ,** ಸೇವಕನಂತೆ ಭಕ್ತಿಯುತ ಸೇವೆಯಲ್ಲಿ ನಿರತನು, (3) **ಸಖ್ಯ-ಭಕ್ತ,** ಮಿತ್ರನಂತೆ ನಿರತನು, (4) **ವಾತ್ಸಲ್ಯ-ಭಕ್ತ,** ತಂದೆ ತಾಯಿಯಂತೆ ನಿರತನು, ಮತ್ತು (5) **ಮಾಧುರ್ಯ-ಭಕ್ತ,** ಪರಮ ಪ್ರಭುವಿನ ಪ್ರಿಯತಮನಾಗಿ ನಿರತನು. ಈ ವಿಧಗಳಲ್ಲಿ ಯಾವುದರಲ್ಲಾದರೂ, ಶುದ್ಧ ಭಕ್ತನು ಪರಮ ಪ್ರಭುವಿನ ದಿವ್ಯ ಪ್ರೀತಿ ಯುತ ಸೇವೆಯಲ್ಲಿ ಸದಾ ನಿರತನು ಮತ್ತು ಪರಮ ಪ್ರಭುವನ್ನು ಮರೆಯಲಾರನು, ಮತ್ತು ಇದರಿಂದ ಅಂಥವನಿಗೆ ಭಗವಂತನು ಸುಲಭವಾಗಿ ಲಭ್ಯನು. ಶುದ್ಧ ಭಕ್ತನು ಕ್ಷಣ ಕಾಲವೂ ಕೂಡ ಪರಮ ಪ್ರಭುವನ್ನು ಮರೆಯಲಾರನು, ಮತ್ತು ಅದರಂತೆಯೇ ಪರಮ ಪ್ರಭುವೂ ಸಹ ತನ್ನ ಶುದ್ಧ ಭಕ್ತನನ್ನು ಕ್ಷಣಕಾಲವೂ ಮರೆಯಲಾರನು. ಇದುವೇ ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ/ ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ ಎಂದು ಮಹಾಮಂತ್ರವನ್ನು ಜಪಿಸುವ ಕೃಷ್ಣ ಪ್ರಜ್ಞಾ ಪ್ರಕ್ರಿಯೆಯ ಮಹಾ ಆಶೀರ್ವಾದವಾಗಿದೆ.

**ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಮ್ ।**
**ನಾಪ್ನುವನ್ತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ ॥೧೫॥**

ಮಾಮ್—ನನ್ನನ್ನು, ಉಪೇತ್ಯ—ಹೊಂದಿ, ಪುನಃ—ಮತ್ತೆ, ಜನ್ಮ—ಜನನ, ದುಃಖ ಆಲಯಮ್—ಕ್ಲೇಶಗಳ ಸ್ಥಳ, ಅಶಾಶ್ವತಮ್—ತಾತ್ಕಾಲಿಕ, ನ—ಎಂದಿಗೂ ಇಲ್ಲ, ಆಪ್ನುವನ್ತಿ—ಹೊಂದುವುದು, ಮಹಾ ಆತ್ಮಾನಃ—ಮಹಾತ್ಮರು, ಸಂಸಿದ್ಧಿಮ್—ಪರಿಪೂರ್ಣತೆಯನ್ನು, ಪರಮಾಮ್—ಚರಮ, ಗತಾಃ—ಹೊಂದಿದವರಾಗಿ.

**ನನ್ನನ್ನು ಸೇರಿದ ಬಳಿಕ, ಭಕ್ತಿಯಲ್ಲಿನ ಯೋಗಿಗಳಾದ ಮಹಾತ್ಮರು, ಕ್ಲೇಶಮಯವಾದ ಈ ಅಶಾಶ್ವತ ಜಗತ್ತಿಗೆ ಎಂದಿಗೂ ಹಿಂದಿರುಗುವುದಿಲ್ಲ, ಏಕೆಂದರೆ ಅವರು ಅತ್ಯುನ್ನತ ಪರಿಪೂರ್ಣತೆಯನ್ನು ಹೊಂದಿರುತ್ತಾರೆ.**

**ಭಾವಾರ್ಥ :** ಈ ಅಶಾಶ್ವತ ಜಗತ್ತು ಜನನ, ವೃದ್ಧಾಪ್ಯ, ವ್ಯಾಧಿ ಮತ್ತು ಮರಣ ಕ್ಲೇಶಗಳಿಂದ ತುಂಬಿರುವುದರಿಂದ, ಸ್ವಾಭಾವಿಕವಾಗಿ ಅತ್ಯುನ್ನತ ಪರಿಪೂರ್ಣತೆಯನ್ನು ಸಾಧಿಸಿದವನು ಮತ್ತು ಪರಮಲೋಕವಾದ ಕೃಷ್ಣಲೋಕ, ಗೋಲೋಕ ವೃಂದಾವನವನ್ನು ಸೇರಿದವನು ಹಿಂದಿರುಗಲು ಬಯಸುವುದಿಲ್ಲ. ಆ ಪರಮ ಲೋಕವು ವೈದಿಕ ಸಾಹಿತ್ಯದಲ್ಲಿ **ಅವ್ಯಕ್ತ** ಮತ್ತು **ಅಕ್ಷರ** ಮತ್ತು **ಪರಮಾ ಗತಿ** ಎಂದು ವರ್ಣಿತವಾಗಿದೆ. ಅರ್ಥಾತ್ ಆ ಲೋಕವು ನಮ್ಮ ಭೌತಿಕ ದೃಷ್ಟಿಯ ಆಚೆಗಿದೆ ಮತ್ತು ಅದು ಅನಿರ್ವಚನೀಯ ; ಆದರೆ ಅದು ಮಹಾತ್ಮರಿಗೆ ಅತ್ಯುನ್ನತ ಧ್ಯೇಯ, ಮತ್ತು ಗಮ್ಯಸ್ಥಾನ. ಮಹಾತ್ಮರು ಸಾಕ್ಷಾತ್ಕರಿಸಿಕೊಂಡ ಭಕ್ತರಿಂದ ದಿವ್ಯ ಸಂದೇಶಗಳನ್ನು ಪಡೆಯುತ್ತಾರೆ ಮತ್ತು ಹೀಗೆ ಕ್ರಮೇಣ ಕೃಷ್ಣ ಪ್ರಜ್ಞೆಯಲ್ಲಿ ಭಕ್ತಿಯುತ ಸೇವೆಯನ್ನು ವರ್ಧಿಸಿಕೊಳ್ಳುತ್ತಾರೆ ಮತ್ತು ದಿವ್ಯ ಸೇವೆಯಲ್ಲಿ ಅದೆಷ್ಟು ಮಗ್ನರಾಗುವರೆಂದರೆ, ಅವರು ಯಾವುದೇ ಭೌತಿಕ ಲೋಕಕ್ಕೆ ಏರಿಸಲ್ಪಡಲು ಇಚ್ಛಿಸುವುದಿಲ್ಲ, ಅಥವಾ ಯಾವುದೇ ಆಧ್ಯಾತ್ಮಿಕ ಲೋಕಕ್ಕೆ ಕೂಡ ವರ್ಗಾಯಿತರಾಗಲು ಬಯಸುವುದಿಲ್ಲ. ಅವರು ಕೃಷ್ಣ ಮತ್ತು ಕೃಷ್ಣನ ಸಂಗವನ್ನು ಮಾತ್ರ ಬಯಸುತ್ತಾರೆ, ಮತ್ತೇನನ್ನೂ ಅಲ್ಲ. ಅದುವೇ ಜೀವನದ ಅತ್ಯುನ್ನತ ಪರಿಪೂರ್ಣತೆ. ಈ ಶ್ಲೋಕವು ವಿಶೇಷವಾಗಿ ಪರಮ ಪ್ರಭು, ಕೃಷ್ಣನ ವ್ಯಕ್ತಿಸ್ವರೂಪವಾದಿ ಭಕ್ತರನ್ನು ಪ್ರಸ್ತಾಪಿಸುತ್ತದೆ. ಈ ಭಕ್ತರು ಕೃಷ್ಣ ಪ್ರಜ್ಞೆಯಲ್ಲಿ ಜೀವನದ ಅತ್ಯುನ್ನತ ಪರಿಪೂರ್ಣತೆಯನ್ನು ಸಾಧಿಸುತ್ತಾರೆ. ಅರ್ಥಾತ್ ಅವರು ಮಹಾನ್ ಆತ್ಮರು.

**ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ ||**
**ಮಾಮುಪೇತ್ಯ ತು ಕೌನ್ತೇಯ ಪುನರ್ಜನ್ಮ ನ ವಿದ್ಯತೇ || ೧೬ ||**

ಆಬ್ರಹ್ಮಭುವನಾತ್—ಬ್ರಹ್ಮಲೋಕದವರೆಗೆ, ಲೋಕಾಃ—ಲೋಕವ್ಯೂಹಗಳು, ಪುನಃ—ಮತ್ತೆ, ಆವರ್ತಿನಃ—ಹಿಂದಿರುಗುವಂಥಹವು,ಅರ್ಜುನ—ಹೇ ಅರ್ಜುನ,ಮಾಮ್—ನನ್ನನ್ನು, ಉಪೇತ್ಯ—ತಲುಪಿ, ತು—ಆದರೆ, ಕೌನ್ತೇಯ—ಹೇ ಕುಂತೀ ಪುತ್ರನೇ, ಪುನಃ ಜನ್ಮ—ಪುನರ್ಜನ್ಮವು, ನ—ಎಂದಿಗೂ ಇಲ್ಲ, ವಿದ್ಯತೇ—ಆಗುವುದು.

**ಭೌತಿಕ ಜಗತ್ತಿನಲ್ಲಿ ಅತ್ಯುನ್ನತ ಲೋಕದಿಂದ ಅತ್ಯಂತ ಅಧೋಲೋಕದವರೆಗೆ ಎಲ್ಲವೂ ಆವರ್ತಿತ ಹುಟ್ಟು ಮತ್ತು ಸಾವುಗಳಾಗುವ ಕ್ಲೇಶದ ನೆಲೆಗಳು. ಆದರೆ, ಹೇ ಕುಂತೀ ಪುತ್ರನೇ, ನನ್ನ ಧಾಮವನ್ನು ಸೇರಿದವನು ಎಂದಿಗೂ ಮತ್ತೆ ಜನಿಸುವುದಿಲ್ಲ.**

**ಭಾವಾರ್ಥ :** ಕರ್ಮ, ಜ್ಞಾನ, ಹಠ, ಇತ್ಯಾದಿ ಎಲ್ಲ ಬಗೆಯ ಯೋಗಿಗಳೂ ಕೃಷ್ಣನ ದಿವ್ಯ ಧಾಮವನ್ನು ಸೇರಿ ಎಂದಿಗೂ ಮರಳಿ ಬಾರದ ಮುಂಚೆ ಅಂತಿಮವಾಗಿ ಭಕ್ತಿಯೋಗ

ದಲ್ಲಿ ಭಕ್ತಿಯುತ ಪರಿಪೂರ್ಣತೆಯನ್ನು, ಅಥವಾ ಕೃಷ್ಣ ಪ್ರಜ್ಞೆಯನ್ನು ಹೊಂದಬೇಕಾಗುವುದು. ಅತ್ಯುನ್ನತ ಭೌತಿಕ ಲೋಕಗಳನ್ನು, ದೇವತೆಗಳ ಲೋಕಗಳನ್ನು ಸೇರುವವರು, ಮತ್ತೆ ಆವರ್ತಿತ ಜನನ ಮರಣಗಳಿಗೆ ಒಳಗಾಗುತ್ತಾರೆ. ಭೂಮಿಯ ಮೇಲಿನ ಜನರು ಊರ್ಧ್ವ ಲೋಕಗಳಿಗೆ ಉನ್ನತಿಸಲ್ಪಡುವಂತೆ, ಬ್ರಹ್ಮಲೋಕ, ಚಂದ್ರಲೋಕ ಮತ್ತು ಇಂದ್ರಲೋಕದಂಥ ಊರ್ಧ್ವ ಲೋಕಗಳಲ್ಲಿನ ಜನರು ಭೂಮಿಗೆ ಪತನ ಹೊಂದುವರು. ಛಾಂದೋಗ್ಯ ಉಪನಿಷತ್ತಿನಲ್ಲಿ ಹೇಳಿರುವ **ಪಂಚಾಗ್ನಿ–ವಿದ್ಯಾ** ಎಂಬ ಯಜ್ಞಾಚರಣೆಯು, ಒಬ್ಬನು ಬ್ರಹ್ಮಲೋಕವನ್ನು ಸಾಧಿಸಲು ಸಮರ್ಥವಾಗಿಸುತ್ತದೆ, ಆದರೆ, ಬ್ರಹ್ಮಲೋಕದಲ್ಲಿ, ಒಬ್ಬನು ಕೃಷ್ಣ ಪ್ರಜ್ಞೆಯನ್ನು ಅಭ್ಯಾಸ ಮಾಡದಿದ್ದರೆ, ಆಗ ಅವನು ಭೂಮಿಗೆ ಹಿಂದಿರುಗಲೇ ಬೇಕು. ಊರ್ಧ್ವ ಲೋಕಗಳಲ್ಲಿ ಕೃಷ್ಣ ಪ್ರಜ್ಞೆಯಲ್ಲಿ ಪ್ರಗತಿಸುವವರು ಕ್ರಮೇಣ ಮೇಲು ಮೇಲಿನ ಲೋಕಗಳಿಗೆ ಉನ್ನತಿಸಲ್ಪಡುವರು ಮತ್ತು ವಿಶ್ವದ ಪ್ರಳಯ ಕಾಲದಲ್ಲಿ ನಿತ್ಯ ಭಗವದ್ಧಾಮಕ್ಕೆ ವರ್ಗಾಯಿಸಲ್ಪಡುವರು. ಶ್ರೀಧರ ಸ್ವಾಮಿಗಳು, ತಮ್ಮ ಭಗವದ್‌ಗೀತಾ ವ್ಯಾಖ್ಯಾನದಲ್ಲಿ ಈ ಶ್ಲೋಕವನ್ನು ಉಲ್ಲೇಖಿಸುತ್ತಾರೆ :

ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿಸಂಚರೇ।
ಪರಸ್ಯಾನ್ತೇ ಕೃತಾತ್ಮಾನಃ ಪ್ರವಿಶನ್ತಿ ಪರಂ ಪದಮ್॥

"ಈ ಭೌತಿಕ ವಿಶ್ವದ ಪ್ರಳಯವಾದಾಗ, ಸತತವಾಗಿ ಕೃಷ್ಣ ಪ್ರಜ್ಞೆಯಲ್ಲಿ ನಿರತರಾದ ಬ್ರಹ್ಮ ಮತ್ತು ಅವನ ಭಕ್ತರೆಲ್ಲರೂ ಅವರವರ ಇಚ್ಛಾನುಸಾರ ಆಧ್ಯಾತ್ಮ ವಿಶ್ವಕ್ಕೆ ಮತ್ತು ವಿಶಿಷ್ಟ ಆಧ್ಯಾತ್ಮಿಕ ಲೋಕಗಳಿಗೆ ವರ್ಗಾಯಿಸಲ್ಪಡುತ್ತಾರೆ."

**ಸಹಸ್ರಯುಗಪರ್ಯನ್ತಮಹರ್ಯದ್ ಬ್ರಹ್ಮಣೋ ವಿದುಃ ।**
**ರಾತ್ರಿಂ ಯುಗಸಹಸ್ರಾನ್ತಾಂ ತೇಽಹೋರಾತ್ರವಿದೋ ಜನಾಃ ॥ ೧೭ ॥**

ಸಹಸ್ರ—ಒಂದು ಸಾವಿರ, ಯುಗ—ಯುಗಗಳು, ಪರ್ಯನ್ತಮ್—ಸೇರಿದಂತೆ, ಅಹಃ—ಹಗಲು, ಯತ್—ಯಾವುದು, ಬ್ರಹ್ಮಣಃ—ಬ್ರಹ್ಮನ, ವಿದುಃ—ಅವರು ತಿಳಿಯುತ್ತಾರೆ, ರಾತ್ರಿಮ್—ರಾತ್ರಿ, ಯುಗ—ಯುಗಗಳು, ಸಹಸ್ರಾನ್ತಾಮ್—ಅದೇ ಪ್ರಕಾರ ಒಂದು ಸಾವಿರದ ನಂತರ ಮುಗಿಯುವ, ತೇ—ಅವರು, ಅಹಃ ರಾತ್ರ—ಹಗಲು ಮತ್ತು ರಾತ್ರಿ, ವಿದುಃ—ತಿಳಿಯುವ, ಜನಾಃ—ಜನರು.

**ಮಾನವರ ಲೆಕ್ಕಾಚಾರದಂತೆ ಒಟ್ಟಾಗಿ ತೆಗೆದುಕೊಂಡ ಒಂದು ಸಾವಿರ ಯುಗಗಳು ಬ್ರಹ್ಮನ ಒಂದು ಹಗಲು. ಮತ್ತು ಅವನ ರಾತ್ರಿಯ ಅವಧಿಯೂ ಸಹ ಅಂಥಹುದೇ ಆಗಿದೆ.**

**ಭಾವಾರ್ಥ :** ಭೌತಿಕ ವಿಶ್ವದ ಅವಧಿಯು ಪರಿಮಿತ. ಅದು ಕಲ್ಪಾವಧಿಯ ಆವರ್ತಿತ ಚಕ್ರಗತಿಯಲ್ಲಿ ವ್ಯಕ್ತವಾಗುವುದು. ಕಲ್ಪ ಎಂದರೆ ಬ್ರಹ್ಮನ ಒಂದು ದಿನ, ಮತ್ತು ಬ್ರಹ್ಮನ ಒಂದು ದಿನವು ಚತುರ್ಯುಗಗಳ—ಎಂದರೆ ಸತ್ಯ, ತ್ರೇತಾ, ದ್ವಾಪರ ಮತ್ತು

ಮತ್ತು ಕಲಿ—ನಾಲ್ಕು ಯುಗಗಳ ಒಂದು ಸಾವಿರ ಆವರ್ತಗಳನ್ನು ಒಳಗೊಂಡಿರುತ್ತದೆ. ಸತ್ಯಯುಗವು ಪುಣ್ಯ, ಜ್ಞಾನ ಮತ್ತು ಧರ್ಮಗಳಿಂದ ಲಕ್ಷಣಯುಕ್ತ. ಬಹುತೇಕವಾಗಿ ಅಜ್ಞಾನ ಮತ್ತು ಪಾಪ ಇರುವುದಿಲ್ಲ ಮತ್ತು ಆ ಯುಗವು 1,728,000 ವರ್ಷಗಳಷ್ಟು ಇರುವುದು. ತ್ರೇತಾಯುಗದಲ್ಲಿ ಪಾಪವು ಪ್ರವೇಶಿಸುತ್ತದೆ, ಮತ್ತು ಈ ಯುಗವು 1,296,000 ವರ್ಷಗಳಷ್ಟು ಇರುವುದು. ದ್ವಾಪರ–ಯುಗದಲ್ಲಿ ಪುಣ್ಯ ಮತ್ತು ಧರ್ಮಗಳ ಇನ್ನೂ ಹೆಚ್ಚಿನ ಅವನತಿ ಇರುತ್ತದೆ, ಪಾಪ ಹೆಚ್ಚುತ್ತದೆ, ಮತ್ತು ಈ ಯುಗವು 864,000 ವರ್ಷಗಳಷ್ಟು ಇರುವುದು. ಕೊನೆಗೆ ಕಲಿಯುಗದಲ್ಲಿ (ನಾವು ಈಗ ಕಳೆದ 5,000 ವರ್ಷಗಳಿಂದ ಅನುಭವಿಸುತ್ತಿರುವ ಯುಗ) ಹೇರಳವಾದ ಕಲಹ, ಅಜ್ಞಾನ, ಅಧರ್ಮ ಮತ್ತು ಪಾಪ ಇವೆ, ನಿಜವಾದ ಪುಣ್ಯವು ಬಹುತೇಕವಾಗಿರುವುದಿಲ್ಲ, ಮತ್ತು ಈ ಯುಗವು 432,000 ವರ್ಷಗಳು ಇರುವುದು. ಕಲಿಯುಗದಲ್ಲಿ ಪಾಪವು ಯಾವ ಮಟ್ಟಕ್ಕೆ ಏರುವುದೆಂದರೆ ಯುಗಾಂತ್ಯದಲ್ಲಿ ಸ್ವಯಂ ಭಗವಂತನು ಕಲ್ಕಿ ಅವತಾರವಾಗಿ ಆವಿರ್ಭವಿಸುತ್ತಾನೆ, ಅಸುರರನ್ನು ಸಂಹಾರ ಮಾಡುತ್ತಾನೆ, ಮತ್ತು ತನ್ನ ಭಕ್ತರನ್ನು ರಕ್ಷಿಸುತ್ತಾನೆ, ಮತ್ತು ಮತ್ತೊಂದು ಸತ್ಯ ಯುಗವನ್ನು ಪ್ರಾರಂಭಿಸುತ್ತಾನೆ. ಮತ್ತೆ ಈ ಪ್ರತಿಕ್ರಿಯೆಯು ನಡೆಯಲು ಪ್ರಾರಂಭಿಸುತ್ತದೆ. ಈ ನಾಲ್ಕು ಯುಗಗಳು, ಒಂದು ಸಾವಿರ ಸಲ ಆವರ್ತವಾದರೆ ಅದು ಬ್ರಹ್ಮನ ಒಂದು ಹಗಲು, ಮತ್ತು ಅಷ್ಟೇ ಕಾಲವು ಅವನ ಒಂದು ರಾತ್ರಿ. ಬ್ರಹ್ಮನು ಅಂಥ ಒಂದು ನೂರು "ವರ್ಷಗಳು" ಜೀವಿಸಿ ಅನಂತರ ಸಾಯುತ್ತಾನೆ. ಭೂಮಿಯ ಲೆಕ್ಕಾಚಾರದಂತೆ ಈ "ನೂರು ವರ್ಷಗಳು" 311 ಟ್ರಿಲಿಯನ್ ಮತ್ತು 40 ಬಿಲಿಯನ್ ಭೂಮಿಯ ವರ್ಷಗಳಷ್ಟಾಗುತ್ತವೆ. ಈ ಲೆಕ್ಕಾಚಾರಗಳಿಂದ ಬ್ರಹ್ಮನ ಜೀವಮಾನವು ಅದ್ಭುತ ಮತ್ತು ಕೊನೆಯಿಲ್ಲದ್ದೆಂದು ತೋರುತ್ತದೆ, ಆದರೆ ಅನಂತತೆಯ ದೃಷ್ಟಿಯಿಂದ ಇದು ಕೇವಲ ಒಂದು ಮಿಂಚು ಮಿನುಗುವಷ್ಟು ಕಾಲ. ಅಟ್ಲಾಂಟಿಕ್‌ನಲ್ಲಿ ನೀರು ಗುಳ್ಳೆಗಳಂತೆ ಕಾರಣೋದಕದಲ್ಲಿ ಹುಟ್ಟುವ ಮತ್ತು ಮರೆಯಾಗುವ ಅಸಂಖ್ಯಾತ ಬ್ರಹ್ಮರಿದ್ದಾರೆ. ಬ್ರಹ್ಮ ಮತ್ತು ಅವನ ಸೃಷ್ಟಿ ಎಲ್ಲವೂ ಭೌತಿಕ ವಿಶ್ವದ ಭಾಗ, ಆದ್ದರಿಂದ ಅವು ನಿರಂತರ ವ್ಯತ್ಯಾಸದ ಪರಂಪರೆಯಲ್ಲಿರುತ್ತವೆ.

ಭೌತಿಕ ವಿಶ್ವದಲ್ಲಿ ಬ್ರಹ್ಮನು ಕೂಡ ಜನ್ಮ, ಮೃತ್ಯು, ಜರಾ ಮತ್ತು ವ್ಯಾಧಿ ಪ್ರಕ್ರಿಯೆಯಿಂದ ಮುಕ್ತನಲ್ಲ. ಬ್ರಹ್ಮನಾದರೋ ಈ ವಿಶ್ವದ ನಿರ್ವಹಣೆಯಲ್ಲಿ, ನೇರವಾಗಿ ಪರಮಪ್ರಭುವಿನ ಸೇವೆಯಲ್ಲಿ ನಿರತನಾಗಿರುವನು—ಆದ್ದರಿಂದ ಅವನು ಕೂಡಲೇ ಮೋಕ್ಷ ಪಡೆಯುತ್ತಾನೆ. ಉನ್ನತ ಸನ್ಯಾಸಿಗಳು ಬ್ರಹ್ಮನ ವಿಶಿಷ್ಟ ಲೋಕವೂ, ಭೌತಿಕ ವಿಶ್ವದಲ್ಲಿ ಅತ್ಯುನ್ನತ ಲೋಕವೂ ಮತ್ತು ಲೋಕವ್ಯೂಹಗಳ ಮೇಲುಸ್ತರದಲ್ಲಿನ ಎಲ್ಲ ಸ್ವರ್ಗ ಲೋಕಗಳ ನಂತರವೂ ಉಳಿದುಕೊಳ್ಳುವ ಬ್ರಹ್ಮಲೋಕಕ್ಕೆ ಉನ್ನತಿಸಲ್ಪಡುತ್ತಾರೆ. ಆದರೆ ಕಾಲಕ್ರಮದಲ್ಲಿ, ಭೌತಿಕ ಪ್ರಕೃತಿಯ ನಿಯಮಾನುಸಾರ, ಬ್ರಹ್ಮ ಮತ್ತು ಬ್ರಹ್ಮಲೋಕ ನಿವಾಸಿಗಳೆಲ್ಲರೂ ಮರಣಕ್ಕೆ ಒಳಪಡುತ್ತಾರೆ.

**ಅವ್ಯಕ್ತಾದ್ ವ್ಯಕ್ತಯಃ ಸರ್ವಾಃ ಪ್ರಭವನ್ತ್ಯಹರಾಗಮೇ ।
ರಾತ್ರ್ಯಾಗಮೇ ಪ್ರಲೀಯನ್ತೇ ತತ್ರೈವಾವ್ಯಕ್ತಸಂಜ್ಞಕೇ ॥ ೧೮ ॥**

ಅವ್ಯಕ್ತಾತ್—ಅವ್ಯಕ್ತದಿಂದ, ವ್ಯಕ್ತಯಃ—ಜೀವಿಗಳು, ಸರ್ವಾಃ—ಎಲ್ಲವೂ; ಪ್ರಭವನ್ತಿ—ವ್ಯಕ್ತವಾಗುತ್ತವೆ, ಅಹಃ-ಆಗಮೇ—ಹಗಲಿನ ಪ್ರಾರಂಭದಲ್ಲಿ, ರಾತ್ರಿ-ಆಗಮೇ—ರಾತ್ರಿಯಾಗುವಾಗ, ಪ್ರಲೀಯನ್ತೇ—ನಾಶವಾಗುತ್ತವೆ, ತತ್ರ—ಅದರೊಳಕ್ಕೆ; ಏವ—ಖಂಡಿತವಾಗಿ, ಅವ್ಯಕ್ತ—ಅವ್ಯಕ್ತತೆ, ಸಂಜ್ಞಕೇ—ಎಂದು ಕರೆದಿರುವ.

**ಬ್ರಹ್ಮನ ಹಗಲಿನ ಪ್ರಾರಂಭದಲ್ಲಿ ಎಲ್ಲ ಜೀವಿಗಳು ಅವ್ಯಕ್ತ ಸ್ಥಿತಿಯಿಂದ ವ್ಯಕ್ತವಾಗುತ್ತವೆ ಮತ್ತು ಆಮೇಲೆ ರಾತ್ರಿಯಾದಾಗ, ಮತ್ತೆ ಅವು ಅವ್ಯಕ್ತದಲ್ಲಿ ಲೀನವಾಗುತ್ತವೆ.**

**ಭೂತಗ್ರಾಮಃ ಸ ಏವಾಯಂ ಭೂತ್ವಾ ಭೂತ್ವಾ ಪ್ರಲೀಯತೇ ।
ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ ॥ ೧೯ ॥**

ಭೂತಗ್ರಾಮಃ—ಎಲ್ಲ ಜೀವಿಗಳ ಒಟ್ಟು, ಸಃ—ಇವು, ಏವ—ಖಂಡಿತವಾಗಿ; ಅಯಂ—ಇದನ್ನು, ಭೂತ್ವಾ ಭೂತ್ವಾ—ಮತ್ತೆ ಮತ್ತೆ ಜನಿಸಿ, ಪ್ರಲೀಯತೇ—ನಾಶವಾಗುತ್ತದೆ, ರಾತ್ರಿ—ರಾತ್ರಿಯ, ಆಗಮೇ—ಆಗಮದಲ್ಲಿ, ಅವಶಃ—ತಾವಾಗಿಯೇ, ಪಾರ್ಥ—ಹೇ ಪೃಥಾ ಪುತ್ರನೇ, ಪ್ರಭವತಿ—ವ್ಯಕ್ತವಾಗುತ್ತವೆ, ಅಹಃ—ಹಗಲಿನ ಕಾಲದ, ಆಗಮೇ—ಆಗಮದಲ್ಲಿ.

**ಮತ್ತೆ ಮತ್ತೆ ಬ್ರಹ್ಮನ ಹಗಲು ಬಂದಾಗ ಎಲ್ಲ ಜೀವಿಗಳು ಅಸ್ತಿತ್ವಕ್ಕೆ ಬರುತ್ತಾರೆ ಮತ್ತು ಬ್ರಹ್ಮನ ರಾತ್ರಿಯ ಆಗಮದೊಂದಿಗೆ ನಿಸ್ಸಹಾಯಕರಾಗಿ ನಾಶ ಮಾಡಲ್ಪಡುತ್ತಾರೆ.**

**ಭಾವಾರ್ಥ :** ಈ ಭೌತಿಕ ಜಗತ್ತಿನಲ್ಲಿ ಉಳಿಯಲು ಯತ್ನಿಸುವ ಅಲ್ಪಮತಿಗಳು ಊರ್ಧ್ವ ಲೋಕಗಳಿಗೆ ಉನ್ನತಿಸಲ್ಪಡಬಹುದು ಮತ್ತು ಈ ಭೂಲೋಕಕ್ಕೆ ಮತ್ತೆ ಇಳಿದು ಬರಬೇಕಾಗುವುದು. ಬ್ರಹ್ಮನ ಹಗಲಿನ ಕಾಲದಲ್ಲಿ ಅವರು ಈ ಭೌತಿಕ ಜಗತ್ತಿನೊಳಗೆ ಊರ್ಧ್ವ ಮತ್ತು ಅಧೋಲೋಕಗಳಲ್ಲಿ ತಮ್ಮ ಚಟುವಟಿಕೆಗಳನ್ನು ತೋರಬಹುದು, ಆದರೆ ಬ್ರಹ್ಮನ ರಾತ್ರಿಯು ಬಂದಾಗ ಅವರೆಲ್ಲರೂ ನಾಶವಾಗುವರು. ಹಗಲಿನಲ್ಲಿ ಭೌತಿಕ ಚಟುವಟಿಕೆಗಳಿಗಾಗಿ ಅವರು ವಿವಿಧ ದೇಹಗಳನ್ನು ಪಡೆಯುತ್ತಾರೆ, ಮತ್ತು ರಾತ್ರಿಯಲ್ಲಿ ಅವರಿಗೆ ದೇಹಗಳಿರುವುದಿಲ್ಲ, ಆದರೆ ವಿಷ್ಣುವಿನ ದೇಹದಲ್ಲಿ ಅಡಕವಾಗಿ ಉಳಿಯುತ್ತಾರೆ. ಬ್ರಹ್ಮನ ಹಗಲು ಬಂದಾಗ ಮತ್ತೆ ಅವರು ವ್ಯಕ್ತವಾಗುವರು, **ಭೂತ್ವಾ ಭೂತ್ವಾ ಪ್ರಲೀಯತೇ**—ಹಗಲಿನಲ್ಲಿ ಅವರು ವ್ಯಕ್ತರಾಗುವರು ಮತ್ತು ರಾತ್ರಿಯಲ್ಲಿ ಅವರು ಮತ್ತೆ ನಾಶಹೊಂದುವರು. ಅಂತಿಮವಾಗಿ ಬ್ರಹ್ಮನ ಆಯುಷ್ಯವು ಮುಗಿದಾಗ ಅವರೆಲ್ಲರೂ ನಾಶ ಹೊಂದುತ್ತಾರೆ ಮತ್ತು ಲಕ್ಷೋಪಲಕ್ಷ ವರ್ಷಗಳವರೆಗೆ ಅವ್ಯಕ್ತರಾಗಿ ಉಳಿಯುತ್ತಾರೆ. ಮತ್ತೆ ಇನ್ನೊಂದು ಯುಗದಲ್ಲಿ ಬ್ರಹ್ಮನು ಜನಿಸಿದಾಗ, ಅವರು ಮತ್ತೆ ವ್ಯಕ್ತರಾಗುವರು.

ಈ ರೀತಿಯಲ್ಲಿ ಅವರು ಭೌತಿಕ ಜಗತ್ತಿನ ಪ್ರಭಾವದಲ್ಲಿ ಸಿಲುಕಿರುತ್ತಾರೆ. ಆದರೆ, ಕೃಷ್ಣ ಪ್ರಜ್ಞೆಯನ್ನು ಅಂಗೀಕರಿಸುವ ಬುದ್ಧಿವಂತರು, ಹರೇ ಕೃಷ್ಣ, ಹರೇ ಕೃಷ್ಣ,ಕೃಷ್ಣ ಕೃಷ್ಣ, ಹರೇ ಹರೇ/ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ ಎಂದು ಜಪಿಸುತ್ತಾ ಭಗವಂತನ ಭಕ್ತಿಯುತ ಸೇವೆಯಲ್ಲಿ ಮಾನವ ಜನ್ಮವನ್ನು ಪೂರ್ತಿಯಾಗಿ ಉಪಯೋಗಿಸುತ್ತಾರೆ. ಹೀಗೆ ಅವರು ಈ ಜನ್ಮದಲ್ಲಿಯೇ ಕೃಷ್ಣನ ಅಧ್ಯಾತ್ಮ ಲೋಕಕ್ಕೆ ತಮ್ಮನ್ನು ವರ್ಗಾಯಿಸಿಕೊಳ್ಳುತ್ತಾರೆ ಮತ್ತು ಅಂಥ ಪುನರ್ಜನ್ಮಗಳಿಗೆ ಗುರಿಯಾಗದೆ ಅಲ್ಲಿ ಶಾಶ್ವತವಾಗಿ ಆನಂದ ಪೂರ್ಣರಾಗುತ್ತಾರೆ.

**ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ ।**
**ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥ ೨೦ ॥**

ಪರಃ—ದಿವ್ಯ, ತಸ್ಮಾತ್—ಅದಕ್ಕೆ, ತು—ಆದರೆ, ಭಾವಃ—ಪ್ರಕೃತಿ, ಅನ್ಯಃ—ಬೇರೆ, ಅವ್ಯಕ್ತಃ—ಅವ್ಯಕ್ತ, ಅವ್ಯಕ್ತಾತ್—ಅವ್ಯಕ್ತವಾದುದಕ್ಕಿಂತ, ಸನಾತನಃ—ಸನಾತನವಾದುದು. ಯಃ ಸಃ—ಯಾವುದೋ ಅದು, ಸರ್ವೇಷು—ಎಲ್ಲ, ಭೂತೇಷು—ವ್ಯಕ್ತತೆ, ನಶ್ಯತ್ಸು—ನಾಶವಾಗಿ, ನ—ಎಂದಿಗೂ ಇಲ್ಲ, ವಿನಶ್ಯತಿ—ನಾಶವಾಗುವುದು.

**ಈ ವ್ಯಕ್ತ ಮತ್ತು ಅವ್ಯಕ್ತ ಜಡಕ್ಕಿಂತ ಆಚೆಗೂ ಮತ್ತು ಸನಾತನವೂ ಆದ ಮತ್ತೊಂದು ಅನಭಿವ್ಯಕ್ತ ಪ್ರಕೃತಿ ಇದೆ. ಅದು ಪರಮ ಮತ್ತು ಎಂದಿಗೂ ಅವಿನಾಶಿ. ಈ ಜಗತ್ತಿನಲ್ಲಿನ ಎಲ್ಲವೂ ನಾಶವಾದಾಗ ಆ ಭಾಗವು ಇದ್ದಂತೆಯೇ ಇರುತ್ತದೆ.**

**ಭಾವಾರ್ಥ :** ಕೃಷ್ಣನ ಶ್ರೇಷ್ಠ ಅಧ್ಯಾತ್ಮ ಶಕ್ತಿಯು ದಿವ್ಯ ಮತ್ತು ಶಾಶ್ವತ. ಅದು ಬ್ರಹ್ಮನ ಹಗಲುಗಳು ಮತ್ತು ರಾತ್ರಿಗಳಲ್ಲಿ ವ್ಯಕ್ತವಾಗುವ ಮತ್ತು ಲಯವಾಗುವ ಭೌತಿಕ ಪ್ರಕೃತಿಯ ಎಲ್ಲ ಬದಲಾವಣೆಗಳಿಗೂ ಆಚೆಗೆ ಇರುತ್ತದೆ. ಕೃಷ್ಣನ ಪರಾ ಶಕ್ತಿಯು ಭೌತಿಕ ಪ್ರಕೃತಿಗೆ ಗುಣದಲ್ಲಿ ಪೂರ್ಣ ವಿರುದ್ಧವಾದುದು. ಪರಾ ಮತ್ತು ಅಪರಾ ಪ್ರಕೃತಿಗಳು ಏಳನೆಯ ಅಧ್ಯಾಯದಲ್ಲಿ ವಿವರಿಸಲ್ಪಟ್ಟಿವೆ.

**ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಮ್ ।**
**ಯಂ ಪ್ರಾಪ್ಯ ನ ನಿವರ್ತನ್ತೇ ತದ್ಧಾಮ ಪರಮಂ ಮಮ ॥ ೨೧ ॥**

ಅವ್ಯಕ್ತಃ—ಅವ್ಯಕ್ತ, ಅಕ್ಷರಃ—ಅಮೋಘ, ಇತಿ—ಹೀಗೆ, ಉಕ್ತಃ—ಹೇಳಿದ್ದ, ತಮ್—ಅದು, ಆಹುಃ—ತಿಳಿಯಲ್ಪಟ್ಟಿದೆ, ಪರಮಾಮ್—ಅಂತಿಮ, ಗತಿಮ್—ಗಮ್ಯಸ್ಥಾನ, ಯಮ್—ಯಾವುದನ್ನು, ಪ್ರಾಪ್ಯ—ಸೇರಿ, ನ—ಎಂದಿಗೂ ಇಲ್ಲ, ನಿವರ್ತನ್ತೇ—ಮರಳಿ ಬರುವುದು, ತತ್—ಅದು, ಧಾಮ—ವಾಸಸ್ಥಾನ, ಪರಮಂ—ಪರಮ, ಮಮ—ನನ್ನ.

**ವೇದಾಂತಿಗಳು ಯಾವುದನ್ನು ಅವ್ಯಕ್ತ ಮತ್ತು ಅಮೋಘ ಎಂದು ವರ್ಣಿಸುವರೋ, ಯಾವುದು ಪರಮಗಮ್ಯಸ್ಥಾನವೆಂದು ತಿಳಿಯಲ್ಪಡುವುದೋ, ಯಾವುದನ್ನು ಸೇರಿದವನಾಗಿ, ಒಬ್ಬನು ಎಂದಿಗೂ ಹಿಂದಿರುಗುವುದಿಲ್ಲವೋ—ಅದುವೇ ನನ್ನ ಪರಮ ಧಾಮ.**

**ಭಾವಾರ್ಥ :** ದೇವೋತ್ತಮ ಪುರುಷ, ಕೃಷ್ಣನ ಪರಮಧಾಮವು ಸಕಲ ಇಚ್ಛೆಗಳು ಪೂರೈಸಲ್ಪಡುವ ಸ್ಥಳವಾದ **ಚಿಂತಾಮಣಿ—ಧಾಮ** ಎಂದು ಬ್ರಹ್ಮ ಸಂಹಿತೆಯಲ್ಲಿ ವರ್ಣಿತವಾಗಿದೆ. ಗೋಲೋಕ ವೃಂದಾವನವೆಂಬ ಶ್ರೀ ಕೃಷ್ಣನ ಪರಮ ಧಾಮವು ಚಿಂತಾ ಮಣಿಯಿಂದ ನಿರ್ಮಿತ ಅರಮನೆಗಳಿಂದ ತುಂಬಿದೆ. ಅಪೇಕ್ಷಿತ ಯಾವುದೇ ವಿಧವಾದ ತಿಂಡಿ ತಿನಸನ್ನು ಒದಗಿಸುವ "ಕಲ್ಪವೃಕ್ಷಗಳು" ಎಂಬ ವೃಕ್ಷಗಳೂ ಅಲ್ಲಿವೆ, ಮತ್ತು ಅಪರಿ ಮಿತ ಹಾಲಿನ ಪೂರೈಕೆಯನ್ನು ಮಾಡುವ **ಸುರಭಿ** ಎಂಬ ಗೋವುಗಳೂ ಇವೆ. ಈ ಧಾಮ ದಲ್ಲಿ, ಭಗವಂತನು ಸಹಸ್ರಾರು ಲಕ್ಷ್ಮಿಯರಿಂದ ಸೇವಿತನು. ಅವನು ಆದಿಪುರುಷನು ಮತ್ತು ಸಕಲ ಕಾರಣಗಳ ಕಾರಣನೂ ಆದ ಗೋವಿಂದ ಎಂದು ಕರೆಯಲ್ಪಡುವನು. ಭಗವಂತನು ತನ್ನ ಕೊಳಲ ನುಡಿಸುವುದನ್ನು ವಾಡಿಕೆ ಮಾಡಿಕೊಂಡಿರುವನು (ವೇಣುಂ ಕ್ವಣಂತಮ್) ಅವನ ದಿವ್ಯರೂಪವು ಸಕಲ ಜಗತ್ತುಗಳಲ್ಲೆಲ್ಲಾ ಅತ್ಯಂತ ಆಕರ್ಷಣೀಯವು. ಅವನ ಕಣ್ಣುಗಳು ಕಮಲದಲಗಳಂತಿವೆ, ಮತ್ತು ಅವನ ದೇಹವರ್ಣವು ಮೇಘವರ್ಣ ದಂತಿದೆ. ಅವನು ಅದೆಷ್ಟು ಆಕರ್ಷಣೀಯನೆಂದರೆ ಅವನ ಸೌಂದರ್ಯವು ಸಹಸ್ರಾರು ಮನ್ಮಥರ ಸೌಂದರ್ಯವನ್ನು ಮೀರುತ್ತದೆ. ಅವನು ಕೇಸರವರ್ಣ ವಸ್ತ್ರವನ್ನು, ಕಂಠದಲ್ಲಿ ಹೂಮಾಲೆಯನ್ನು ಮತ್ತು ತನ್ನ ಕೇಶದಲ್ಲಿ ನವಿಲುಗರಿಯನ್ನು ಧರಿಸಿರುವನು. ಭಗವದ್ಗೀತೆಯಲ್ಲಿ ಭಗವಾನ್ ಕೃಷ್ಣನು, ಅಧ್ಯಾತ್ಮ ರಾಜ್ಯದಲ್ಲಿನ ಅತ್ಯಂತ ಶ್ರೇಷ್ಠವಾದ ಲೋಕವೂ, ತನ್ನ ಸ್ವಯಂ ಧಾಮವೂ, ಆದ ಗೋಲೋಕ ವೃಂದಾವನದ ಒಂದು ಚಿಕ್ಕ ಸೂಚನೆಯನ್ನು ಮಾತ್ರ ನೀಡುತ್ತಾನೆ. ಸ್ಪಷ್ಟ ವರ್ಣನೆಯನ್ನು ಬ್ರಹ್ಮ ಸಂಹಿತೆ ನೀಡಿದೆ. ಪರಮದೇವೋತ್ತಮನ ಧಾಮಕ್ಕಿಂತ ಶ್ರೇಷ್ಠವಾದುದು ಬೇರೊಂದಿಲ್ಲ, ಮತ್ತು ಆ ಧಾಮವು ಚರಮ ಗಮ್ಯಸ್ಥಾನವೆಂದು ವೈದಿಕ ಸಾಹಿತ್ಯಗಳಲ್ಲಿ (ಕಠ ಉಪನಿಷದ್ 1. 3. 11). **ಪುರುಷಾನ್ ನ ಪರಂ ಕಿಂಚಿತ್ ಸಾ ಕಾಷ್ಠಾ ಪರಮಾ ಗತಿಃ** ಎಂದು **ಹೇಳಿದೆ.** ಒಬ್ಬನು ಅದನ್ನು ಸೇರಿದ ಮೇಲೆ ಮತ್ತೆ ಭೌತಿಕ ಜಗತ್ತಿಗೆ ಎಂದಿಗೂ ಹಿಂದಿರುಗುವುದಿಲ್ಲ. ಕೃಷ್ಣನ ಪರಮ ಧಾಮವು ಮತ್ತು ಸ್ವಯಂ ಕೃಷ್ಣನು ಒಂದೇ ಗುಣವಾಗಿದ್ದು ಭಿನ್ನವಲ್ಲ. ಈ ಭೂಲೋಕದಲ್ಲಿ, ದೆಹಲಿಗೆ ಆಗ್ನೇಯದಲ್ಲಿ ತೊಂಭತ್ತು ಮೈಲಿಗಳಷ್ಟು ದೂರದಲ್ಲಿ, ಪರವ್ಯೋಮದಲ್ಲಿನ ಪರಮ ಗೋಲೋಕ ವೃಂದಾವನದ ಪ್ರತಿ ಕೃತಿಯಾದ ವೃಂದಾವನವಿದೆ. ಕೃಷ್ಣನು ಈ ಭೂಮಿಗೆ ಇಳಿದು ಬಂದಾಗ, ಭಾರತದ ಮಥುರಾ ಜಿಲ್ಲೆಯಲ್ಲಿನ ಎಂಭತ್ತು ನಾಲ್ಕು ಚದರ ಮೈಲಿಗಳಷ್ಟು ವಿಸ್ತಾರವುಳ್ಳ ವೃಂದಾವನವೆಂಬ ಆ ವಿಶಿಷ್ಟ ಭೂಭಾಗದಲ್ಲಿ ಅವನು ಕ್ರೀಡಿಸಿದನು.

**ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।**
**ಯಸ್ಯಾಂತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್ ॥ ೨೨ ॥**

ಪುರುಷಃ—ಪರಮ ಪುರುಷನು, ಸಃ—ಅವನು, ಪರಃ—ಅವನಿಗಿಂತ ದೊಡ್ಡವ ರಿಲ್ಲದ ಪರಮನು, ಪಾರ್ಥ—ಹೇ ಪೃಥಾ ಪುತ್ರನೇ, ಭಕ್ತ್ಯಾ—ಭಕ್ತಿಯುತ ಸೇವೆಯಿಂದ, **ಲಭ್ಯಃ—ಲಭಿಸುವನು, ತು—ಆದರೆ, ಅನನ್ಯಯಾ—ಅಮಿಶ್ರ, ಅವಿಚಲ, ಯಸ್ಯ—**

**ಯಾರ**, ಅಂತಃ ಸ್ಥಾನಿ—ಒಳಗೆ, ಭೂತಾನಿ—ಎಲ್ಲ ಈ ಭೌತಿಕ ಉದ್ಭೂತಿ, ಯೇನ—**ಯಾರಿಂದ**, ಸರ್ವಮ್—ಎಲ್ಲ, ಇದಮ್—ನಾವು ನೋಡುವುದಕ್ಕೆ ಆಗುವ ಯಾವುದೇ, **ತತಮ್**—ವ್ಯಾಪ್ತವು.

**ಎಲ್ಲರಿಗಿಂತಲೂ ದೊಡ್ಡವನಾದ ಪರಮ ದೇವೋತ್ತಮ ಪುರುಷನು ಶುದ್ಧ ಭಕ್ತಿಯಿಂದ ಲಭ್ಯನು. ಅವನು ತನ್ನ ಧಾಮದಲ್ಲಿ ಇದ್ದರೂ, ಅವನು ಸರ್ವವ್ಯಾಪಿ, ಮತ್ತು ಪ್ರತಿಯೊಂದೂ ಅವನಲ್ಲಿ ಸನ್ನಿವೇಶಿತ.**

**ಭಾವಾರ್ಥ** : ಯಾವುದರಿಂದ ಹಿಂದಿರುಗಿ ಬರುವುದಿಲ್ಲವೋ, ಆ ಪರಮ ಗಮ್ಯ ಸ್ಥಾನವು **ಪರಮ** ಪುರುಷನಾದ ಕೃಷ್ಣನ ಧಾಮ ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಬ್ರಹ್ಮ—**ಸಂಹಿತೆಯು** ಈ ಪರಮ ಧಾಮವನ್ನು **ಆನಂದ–ಚಿನ್ಮಯರಸ,** ಎಂದರೆ ಪ್ರತಿಯೊಂದೂ **ಆಧ್ಯಾತ್ಮಿಕ** ಆನಂದ ಪೂರ್ಣವಾಗಿರುವ ಸ್ಥಳ ಎಂದು ವರ್ಣಿಸುತ್ತದೆ. ಅಲ್ಲಿ ವ್ಯಕ್ತವಾದ ವೈವಿಧ್ಯತೆ ಎಲ್ಲವೂ ಆಧ್ಯಾತ್ಮಿಕ ಆನಂದ ಗುಣವುಳ್ಳದ್ದಾಗಿದೆ—ಅಲ್ಲಿ ಯಾವುದೂ ಭೌತಿಕ ವಲ್ಲ. ಆ ವೈವಿಧ್ಯತೆಯು ಸ್ವಯಂ ಪರಮ ದೇವೋತ್ತಮನ ಆಧ್ಯಾತ್ಮಿಕ ವಿಸ್ತರಣೆಯಾಗಿ ಹರಡಿದೆ, ಏಕೆಂದರೆ ಅಲ್ಲಿ ವ್ಯಕ್ತವಾಗಿರುವುದೆಲ್ಲವೂ, ಏಳನೆಯ ಅಧ್ಯಾಯದಲ್ಲಿ ವಿವರಿಸಿ ದಂತೆ ಪೂರ್ಣ ಆಧ್ಯಾತ್ಮಿಕ ಶಕ್ತಿಯದಾಗಿರುತ್ತದೆ. ಈ ಭೌತಿಕ ಜಗತ್ತಿನ ಮಟ್ಟಿಗಾದರೋ ಭಗವಂತನು ಸದಾ ತನ್ನ ಪರಮ ಧಾಮದಲ್ಲಿದ್ದರೂ, ಅವನು ತನ್ನ ಭೌತಿಕ ಶಕ್ತಿಯಿಂದ ಸರ್ವವ್ಯಾಪಿಯೂ ಆಗಿರುವನು. ಹೀಗೆ ತನ್ನ ಆಧ್ಯಾತ್ಮಿಕ ಮತ್ತು ಭೌತಿಕ ಶಕ್ತಿಗಳಿಂದ ಅವನು ಪ್ರತಿಯೊಂದು ಕಡೆಯಲ್ಲಿಯೂ—ಭೌತಿಕ ಮತ್ತು ಆಧ್ಯಾತ್ಮಿಕ ಉಭಯ ವಿಶ್ವ ಗಳಲ್ಲಿಯೂ ಇರುವನು. **ಯಸ್ಯಾನ್ತಃ–ಸ್ಥಾನಿ** ಎಂದರೆ ಪ್ರತಿಯೊಂದೂ ಅವನಲ್ಲಿ–ಅವನ ಆಧ್ಯಾತ್ಮಿಕ ಅಥವಾ ಭೌತಿಕ ಶಕ್ತಿಯಲ್ಲಿ—ಧರಿಸಲ್ಪಟ್ಟಿರುವುದು. ಭಗವಂತನು ಈ ಎರಡು ಶಕ್ತಿಗಳಿಂದ ಸರ್ವವ್ಯಾಪ್ತನು.

ಇಲ್ಲಿ **ಭಕ್ತ್ಯಾ** ಎಂಬ ಪದದಿಂದ ಸ್ಪಷ್ಟವಾಗಿ ಸೂಚಿಸಿರುವಂತೆ, ಕೃಷ್ಣನ ಪರಮ ಧಾಮವನ್ನು ಅಥವಾ ಅಸಂಖ್ಯಾತ ವೈಕುಂಠ ಲೋಕಗಳನ್ನು ಪ್ರವೇಶಿಸಲು ಭಕ್ತಿಯಿಂದ (**ಭಕ್ತಿ**ಯುತ ಸೇವೆಯಿಂದ) ಮಾತ್ರವೇ ಸಾಧ್ಯ. ಆ ಪರಮ ಧಾಮವನ್ನು ಸೇರಲು ಇತರ ಯಾವ ಪ್ರಕ್ರಿಯೆಯೂ ಸಹಾಯಕವಾಗಲಾರದು ವೇದಗಳು (ಗೋಪಾಲ–ತಾಪನೀ ಉಪನಿಷದ್ 3.2) ಕೂಡ ಪರಮ ಧಾಮವನ್ನು ಮತ್ತು ಪರಮ ದೇವೋತ್ತಮ ಪುರುಷನನ್ನು ವರ್ಣಿಸುತ್ತವೆ : **ಏಕೋ ವಶೀ ಸರ್ವಗಃ ಕೃಷ್ಣಃ.** ಆ ಧಾಮದಲ್ಲಿ ಏಕೈಕ ಪರಮ ದೇವೋತ್ತಮ ಪುರುಷನಿರುವನು, ಅವನ ಹೆಸರು ಕೃಷ್ಣ. ಅವನು ಪರಮ ದಯಾಪೂರ್ಣ ದೇವನು, ಮತ್ತು ಅಲ್ಲಿ ಒಬ್ಬನಾಗಿ ಸನ್ನಿವೇಶಿತನಾಗಿರುವವನಾದರೂ, ಅವನು ತನ್ನನ್ನೇ ಲಕ್ಷೋಪಲಕ್ಷ ಸಮಗ್ರ ವಿಸ್ತರಣೆಗಳಾಗಿ ವಿಸ್ತರಿಸಿಕೊಂಡಿರುವನು. ವೇದ ಗಳು ಭಗವಂತನನ್ನು ಅಲುಗಾಡದೆ ನಿಂತಿದ್ದೂ ನಾನಾ ಬಗೆಯ ಹಣ್ಣುಗಳು, ಹೂವುಗಳು ಮತ್ತು ಬದಲಾಗುತ್ತಿರುವ ಎಲೆಗಳನ್ನು ನೀಡುತ್ತಿರುವ ವೃಕ್ಷಕ್ಕೆ ಹೋಲಿಸುತ್ತವೆ.

ವೈಕುಂಠ ಲೋಕಗಳಲ್ಲಿ ಆಧಿಪತ್ಯ ನಡೆಸುವ ಭಗವಂತನ ಸಮಗ್ರ ವಿಸ್ತರಣೆಗಳು ಚತುರ್ಭುಜ ರೂಪವನ್ನು ಹೊಂದಿವೆ ಮತ್ತು—ಪುರುಷೋತ್ತಮ, ತ್ರಿವಿಕ್ರಮ, ಕೇಶವ, ಮಾಧವ, ಅನಿರುದ್ಧ, ಹೃಷೀಕೇಶ, ಸಂಕರ್ಷಣ, ಪ್ರದ್ಯುಮ್ನ, ಶ್ರೀಧರ, ವಾಸುದೇವ, ದಾಮೋದರ, ಜನಾರ್ದನ, ನಾರಾಯಣ, ವಾಮನ, ಪದ್ಮನಾಭ ಇತ್ಯಾದಿ—ನಾನಾ ನಾಮಗಳಿಂದ ತಿಳಿಯಲ್ಪಡುತ್ತವೆ.

ಭಗವಂತನು ಪರಮಧಾಮವಾದ ಗೋಲೋಕ ವೃಂದಾವನದಲ್ಲಿ ಸದಾ ಇದ್ದರೂ, ಪ್ರತಿಯೊಂದೂ ಸುಸೂತ್ರವಾಗಿ ಸಾಗಲೆಂದು ಅವನು ಸರ್ವವ್ಯಾಪಿ ಎಂದು ಬ್ರಹ್ಮ—ಸಂಹಿತೆಯು (5.37) ಕೂಡ ಧೃಡಪಡಿಸುತ್ತದೆ. **(ಗೋಲೋಕ ಏವ ನಿವಸತಿ ಅಖಿಲಾತ್ಮಭೂತಃ)** ವೇದಗಳಲ್ಲಿ (ಶ್ವೇತಾಶ್ವತರ ಉಪನಿಷದ್ 6.8) ಹೇಳಿರುವಂತೆ, **ಪರಾಸ್ಯ ಶಕ್ತಿರ್ ವಿವಿಧೈವ ಶ್ರೂಯತೇ/ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ**—ಅವನ ಶಕ್ತಿಗಳು ಅದೆಷ್ಟು ವಿಸ್ತೃತವೆಂದರೆ ಭಗವಂತನು ದೂರ, ಬಹು ದೂರ ವಿದ್ದರೂ, ಅವು ವಿಶ್ವ ಉದ್ಭೂತಿಯಲ್ಲಿನ ಪ್ರತಿಯೊಂದನ್ನೂ ವ್ಯವಸ್ಥಿತವಾಗಿ ದೋಷವೊಂದೂ ಇಲ್ಲದೆ ನಿರ್ವಹಿಸುತ್ತವೆ.

**ಯತ್ರ ಕಾಲೇ ತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ ।**
**ಪ್ರಯಾತಾ ಯಾನ್ತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ** ॥ ೨೩ ॥

ಯತ್ರ—ಯಾವುದರಲ್ಲಿ, ಕಾಲೇ—ಕಾಲ, ತು—ಮತ್ತು, ಅನಾವೃತ್ತಿಮ್—ಮರಳದಿರುವಿಕೆಯಲ್ಲಿ, ಆವೃತ್ತಿಮ್—ಮರಳುವಿಕೆ, ಚ—ಕೂಡ, ಏವ—ಖಂಡಿತವಾಗಿ, ಯೋಗಿನಃ—ನಾನಾ ಬಗೆಯ ಯೋಗಿಗಳು, ಪ್ರಯಾತಾಃ—ಹೊರಟು, ಯಾನ್ತಿ—ಹೊಂದುತ್ತಾರೆ, ತಂ—ಅದನ್ನು, ಕಾಲಮ್—ಕಾಲವನ್ನು, ವಕ್ಷ್ಯಾಮಿ—ವರ್ಣಿಸುತ್ತೇನೆ, ಭರತ ಋಷಭ—ಹೇ ಭರತ ಶ್ರೇಷ್ಠನೇ.

**ಹೇ ಭರತ ಶ್ರೇಷ್ಠನೇ, ಯಾವ ವಿವಿಧ ಕಾಲಗಳಲ್ಲಿ ಈ ಜಗತ್ತಿನಿಂದ ಗತಿಸುವ ಯೋಗಿಯು, ಮರಳಿ ಬರುವನು ಅಥವಾ ಬಾರದಿರುವನು ಎಂಬುದನ್ನು ನಾನು ನಿನಗೆ ವಿವರಿಸುವೆನು.**

**ಭಾವಾರ್ಥ :** ಸಂಪೂರ್ಣವಾಗಿ ಶರಣಾಗತಾತ್ಮರಾದ ಪರಮ ಪ್ರಭುವಿನ ಶುದ್ಧ ಭಕ್ತರು, ತಮ್ಮ ದೇಹತ್ಯಾಗವನ್ನು ಯಾವಾಗ ಮಾಡುತ್ತೇವೆ ಅಥವಾ ಯಾವ ವಿಧಾನದಿಂದ ಮಾಡುತ್ತೇವೆ ಎಂಬುದನ್ನು ಲಕ್ಷಿಸುವುದಿಲ್ಲ. ಅವರು ಪ್ರತಿಯೊಂದನ್ನೂ ಕೃಷ್ಣನಿಗೆ ಬಿಟ್ಟಿದ್ದಾರೆ, ಮತ್ತು ಹಾಗೆ ಸುಲಭವಾಗಿ ಮತ್ತು ಸಂತೋಷವಾಗಿ ಭಗವದ್ಧಾಮಕ್ಕೆ ಮರಳುತ್ತಾರೆ. ಆದರೆ ಶುದ್ಧ ಭಕ್ತರಲ್ಲದವರು ಮತ್ತು ಬದಲಾಗಿ ಕರ್ಮ—ಯೋಗ, ಜ್ಞಾನ—ಯೋಗ ಅಥವಾ ಹಠ—ಯೋಗದಂಥ ಅಧ್ಯಾತ್ಮ ಸಾಕ್ಷಾತ್ಕಾರ ವಿಧಾನಗಳನ್ನು ಅವಲಂಬಿಸಿರುವವರು ಸೂಕ್ತಕಾಲದಲ್ಲಿ ದೇಹ ತ್ಯಾಗವನ್ನು ಮಾಡಬೇಕು ಮತ್ತು ಆ

ಮೂಲಕ ಅವರು ಜನನ—ಮರಣಗಳ ಜಗತ್ತಿಗೆ ಮರಳುವರೋ ಅಥವಾ ಇಲ್ಲವೋ ಎಂದು ದೃಢಪಡಿಸಿಕೊಳ್ಳಬೇಕು.

ಯೋಗಿಯು ಪರಿಪೂರ್ಣನಾಗಿದ್ದರೆ, ಅವನು ಈ ಭೌತಿಕ ಜಗತ್ತನ್ನು ಬಿಡಲು ಕಾಲ ಮತ್ತು ಸನ್ನಿವೇಶವನ್ನು ಆಯ್ಕೆ ಮಾಡಿಕೊಳ್ಳಬಹುದು. ಆದರೆ ಅವನು ಅಷ್ಟು ನಿಪುಣನಲ್ಲದಿದ್ದರೆ ಅವನ ಯಶಸ್ಸು ನಿಶ್ಚಿತ ಸೂಕ್ತ ಕಾಲದಲ್ಲಿ ಆಕಸ್ಮಿಕವಾಗಿ ಮರಣಿಸುವುದನ್ನು ಅವಲಂಬಿಸಿರುತ್ತದೆ. ಒಬ್ಬನು ಮರಣಿಸುವ ಮತ್ತು ಹಿಂದಿರುಗದಿರುವ ಸೂಕ್ತ ಕಾಲಗಳು ಭಗವಂತನಿಂದ ಮುಂದಿನ ಶ್ಲೋಕದಲ್ಲಿ ವಿವರಿಸಲ್ಪಟ್ಟಿವೆ. ಆಚಾರ್ಯ ಬಲದೇವ ವಿದ್ಯಾಭೂಷಣರ ಪ್ರಕಾರ, ಇಲ್ಲಿ ಉಪಯೋಗಿಸಿರುವ **ಕಾಲ** ಎಂಬ ಸಂಸ್ಕೃತ ಪದವು ಕಾಲದ ಅಧಿದೇವತೆಯನ್ನು ಸೂಚಿಸುತ್ತದೆ.

**ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।**
**ತತ್ರ ಪ್ರಯಾತಾ ಗಚ್ಛನ್ತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥ ೨೪ ॥**

ಅಗ್ನಿಃ—ಅಗ್ನಿ, ಜ್ಯೋತಿಃ—ಜ್ಯೋತಿ, ಅಹಃ—ಹಗಲು, ಶುಕ್ಲಃ—ಶುಕ್ಲ ಪಕ್ಷ, ಷಟ್-ಮಾಸಾಃ—ಆರು ತಿಂಗಳುಗಳು, ಉತ್ತರ ಅಯನಮ್—ಸೂರ್ಯನು ಉತ್ತರದಲ್ಲಿ ಹೋಗುವಾಗ, ತತ್ರ—ಅಲ್ಲಿ, ಪ್ರಯಾತಾಃ—ಗತಿಸುವವರು, ಗಚ್ಛನ್ತಿ—ಹೋಗುತ್ತಾರೆ, ಬ್ರಹ್ಮ—ಪರಮನಲ್ಲಿಗೆ, ಬ್ರಹ್ಮವಿದಃ—ಪರಮನನ್ನು ತಿಳಿದ, ಜನಾಃ—ಜನರು.

**ಪರಬ್ರಹ್ಮನನ್ನು ತಿಳಿದವರು, ಅಗ್ನಿದೇವತೆಯ ಪ್ರಭಾವದಲ್ಲಿ, ಜ್ಯೋತಿ ಪ್ರಕಾಶದಲ್ಲಿ, ಹಗಲಿನ ಶುಭಗಳಿಗೆಯಲ್ಲಿ, ಶುಕ್ಲಪಕ್ಷದಲ್ಲಿ, ಅಥವಾ ಸೂರ್ಯನು ಉತ್ತರದಲ್ಲಿ ಪ್ರಯಾಣ ಮಾಡುವ ಆರು ತಿಂಗಳುಗಳಲ್ಲಿ ಜಗತ್ತಿನಿಂದ ಗತಿಸುವುದರಿಂದ ಆ ಪರಮನನ್ನು ಸೇರುವರು.**

**ಭಾವಾರ್ಥ :** ಅಗ್ನಿ, ಜ್ಯೋತಿ, ಹಗಲು ಮತ್ತು ಶುಕ್ಲಪಕ್ಷವು ಪ್ರಸ್ತಾಪಿತವಾದಾಗ, ಅವೆಲ್ಲವುಗಳ ಮೇಲೆ, ಆತ್ಮನ ಪ್ರಯಾಣಕ್ಕೆ ಏರ್ಪಾಡು ಮಾಡುವ ವಿವಿಧ ಅಧಿದೇವತೆಗಳು ಇದ್ದಾರೆಂದು ತಿಳಿಯಬೇಕು. ಮರಣಕಾಲದಲ್ಲಿ, ಮನಸ್ಸು ಒಬ್ಬನನ್ನು ಹೊಸ ಜೀವನಕ್ಕೆ ಹೊತ್ತು ಸಾಗುತ್ತದೆ. ಒಬ್ಬನು ಮೇಲೆ ನಿರ್ದೇಶಿತ ಕಾಲದಲ್ಲಿ, ಆಕಸ್ಮಾತ್ತಾಗಿ ಅಥವಾ ಏರ್ಪಾಡಿನಿಂದ ದೇಹತ್ಯಾಗವನ್ನು ಮಾಡಿದರೆ, ಅವನು ವ್ಯಕ್ತಿಶೂನ್ಯ **ಬ್ರಹ್ಮಜ್ಯೋತಿಯನ್ನು** ಸೇರುವುದು ಸಾಧ್ಯ. ಯೋಗ ಸಾಧನೆಯಲ್ಲಿ ಮುಂದುವರಿದ ಯೋಗಿಗಳು ದೇಹತ್ಯಾಗದ ಕಾಲ ಮತ್ತು ಸ್ಥಳವನ್ನು ಏರ್ಪಾಡು ಮಾಡಿಕೊಳ್ಳಬಲ್ಲರು. ಇತರರಿಗೆ ನಿಯಂತ್ರಣವಿರುವುದಿಲ್ಲ—ಆಕಸ್ಮಾತ್ತಾಗಿ ಅವರು ಶುಭಗಳಿಗೆಯಲ್ಲಿ ಮರಣಿಸಿದರೆ, ಆಗ ಅವರು ಜನನ ಮರಣದ ಚಕ್ರಕ್ಕೆ ಹಿಂದಿರುಗುವುದಿಲ್ಲ, ಆದರೆ ಬೇರೆಯಾಗಿದ್ದಲ್ಲಿ ಅವರು ಹಿಂದಿರುಗಲೇ ಬೇಕಾಗುವುದು. ಕೃಷ್ಣಪ್ರಜ್ಞೆಯಲ್ಲಿನ ಶುದ್ಧ ಭಕ್ತನಿಗಾದರೋ, ಅವನು ಶುಭಗಳಿಗೆಯಲ್ಲಾಗಲಿ ಅಥವಾ ಅಶುಭಗಳಿಗೆಯಲ್ಲಾಗಲಿ, ಆಕಸ್ಮಿಕವಾಗಿ ಅಥವಾ ಏರ್ಪಾಡಿನಿಂದ ದೇಹತ್ಯಾಗ ಮಾಡಿದರೂ ಅವನು ಹಿಂದಿರುಗಿ ಬರುವ ಭಯವೇ ಇರುವುದಿಲ್ಲ.

**ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।**
**ತತ್ರ ಚಾನ್ದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥ ೨೫ ॥**

ಧೂಮಃ—ಹೊಗೆ, ರಾತ್ರಿಃ—ರಾತ್ರಿ, ತಥಾ—ಕೂಡ, ಕೃಷ್ಣಃ—ಕೃಷ್ಣಪಕ್ಷ, ಷಟ್-ಮಾಸಾಃ—ಆರು ತಿಂಗಳುಗಳು, ದಕ್ಷಿಣ ಅಯನಮ್—ಸೂರ್ಯನು ದಕ್ಷಿಣದಿಕ್ಕಿನಲ್ಲಿ ಚಲಿಸುವಾಗ, ತತ್ರ—ಅಲ್ಲಿ, ಚಾನ್ದ್ರಮಸಂ—ಚಂದ್ರಲೋಕವನ್ನು, ಜ್ಯೋತಿಃ—ಬೆಳಕು, ಯೋಗೀ—ಯೋಗಿಯು, ಪ್ರಾಪ್ಯ—ಸೇರಿ, ನಿವರ್ತತೇ—ಹಿಂದಿರುಗಿ ಬರುತ್ತಾನೆ.

**ಹೊಗೆಯಲ್ಲಿ, ರಾತ್ರಿಯಲ್ಲಿ, ಕೃಷ್ಣಪಕ್ಷದಲ್ಲಿ, ಅಥವಾ ಸೂರ್ಯನು ದಕ್ಷಿಣ ದಿಕ್ಕಿನಲ್ಲಿ ಸಾಗುವಾಗ, ಈ ಜಗತ್ತಿನಿಂದ ಗತಿಸುವ ಯೋಗಿಯು ಚಂದ್ರ ಲೋಕವನ್ನು ತಲುಪುತ್ತಾನೆ, ಆದರೆ ಮತ್ತೆ ಮರಳಿ ಬರುತ್ತಾನೆ.**

**ಭಾವಾರ್ಥ :** ಭೂಲೋಕದಲ್ಲಿ, ಕಾಮ್ಯ ಕರ್ಮಗಳಲ್ಲಿ ಮತ್ತು ಯಜ್ಞ ವಿಧಾನಗಳಲ್ಲಿ ನುರಿತವರು ಮರಣಿಸಿದಾಗ, ಚಂದ್ರನನ್ನು ಸೇರುವರೆಂದು ಶ್ರೀಮದ್ ಭಾಗವತದ ಮೂರನೆಯ ಸ್ಕಂಧದಲ್ಲಿ ಕಪಿಲ ಮುನಿಗಳು ಪ್ರಸ್ತಾಪಿಸಿದ್ದಾರೆ. ಈ ಉನ್ನತಾತ್ಮರು ಸುಮಾರು 10,000 ವರ್ಷಗಳ (ದೇವತೆಗಳ ಲೆಕ್ಕಾಚಾರದಂತೆ) ಕಾಲ ಚಂದ್ರನಲ್ಲಿ ನಲ್ಲಿ ಇರುತ್ತಾರೆ ಮತ್ತು ಸೋಮರಸ ಪಾನ ಮಾಡುತ್ತಾ ಜೀವನವನ್ನು ಉಪಭೋಗಿಸುತ್ತಾರೆ. ಕೊನೆಯಲ್ಲಿ ಅವರು ಭೂಮಿಗೆ ಹಿಂದಿರುಗುತ್ತಾರೆ. ಹೀಗೆಂದರೆ ಸ್ಥೂಲ ಇಂದ್ರಿಯಗಳಿಗೆ ಅವರು ಗೋಚರಿಸದಿದ್ದರೂ ಚಂದ್ರನ ಮೇಲೆ ಉತ್ತಮ ವರ್ಗಗಳ ಜೀವಿಗಳಿದ್ದಾರೆ ಎಂದು ಅರ್ಥ.

**ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇ ಮತೇ ।**
**ಏಕಯಾ ಯಾತ್ಯನಾವೃತ್ತಿಮನ್ಯಯಾವರ್ತತೇ ಪುನಃ ॥ ೨೬ ॥**

ಶುಕ್ಲ—ಶುಕ್ಲಪಕ್ಷ, ಕೃಷ್ಣೇ—ಮತ್ತು ಕೃಷ್ಣಪಕ್ಷ, ಗತೀ—ಮರಣಿಸುವ ವಿಧಗಳು, ಹಿ—ಖಂಡಿತವಾಗಿ, ಏತೇ—ಈ ಎರಡು, ಜಗತಃ—ಭೌತಿಕ ಜಗತ್ತಿನ, ಶಾಶ್ವತೇ—ವೇದಗಳ, ಮತೇ—ಅಭಿಪ್ರಾಯದಲ್ಲಿ, ಏಕಯಾ—ಒಂದರಿಂದ, ಯಾತಿ—ಹೋಗುತ್ತಾನೆ, ಅನಾವೃತ್ತಿಮ್—ಮರಳದ, ಅನ್ಯಯಾ—ಮತ್ತೊಂದರಿಂದ, ಆವರ್ತತೇ—ಮರಳುತ್ತಾನೆ, ಪುನಃ—ಮತ್ತೆ.

**ವೇದ ಅಭಿಪ್ರಾಯಕ್ಕೆ ಅನುಸಾರವಾಗಿ, ಈ ಜಗತ್ತಿನಿಂದ ಗತಿಸುವ ಎರಡು ವಿಧಗಳು ಇವೆ-ಒಂದು ಶುಕ್ಲಪಕ್ಷದಲ್ಲಿ, ಮತ್ತೊಂದು ಕೃಷ್ಣಪಕ್ಷದಲ್ಲಿ. ಶುಕ್ಲಪಕ್ಷದಲ್ಲಿ ಗತಿಸುವವನು ಮರಳಿಬರುವುದಿಲ್ಲ; ಆದರೆ ಕೃಷ್ಣಪಕ್ಷದಲ್ಲಿ ಗತಿಸುವವನು ಮರಳಿ ಬರುತ್ತಾನೆ.**

**ಭಾವಾರ್ಥ :** ಹೊರಡುವ ಮತ್ತು ಹಿಂದಿರುಗುವುದರ ಇದೇ ವರ್ಣನೆಯನ್ನು ಆಚಾರ್ಯ ಬಲದೇವ ವಿದ್ಯಾಭೂಷಣರು ಛಾಂದೋಗ್ಯ ಉಪನಿಷತ್ತಿನಿಂದ (5.10.3-5) ಉದಾಹರಿಸುವರು. ಕಾಮ್ಯಕರ್ಮಿಗಳು ಮತ್ತು ತಾತ್ವಿಕ ಊಹಾಪೋಹಕರು ಅನಾದಿಕಾಲ

ದಿಂದಲೂ ಸತತವಾಗಿ ಹೋಗುತ್ತಿದ್ದಾರೆ ಮತ್ತು ಬರುತ್ತಿದ್ದಾರೆ. ಅವರು ಕೃಷ್ಣನಿಗೆ ಶರಣಾಗತರಾಗುವುದಿಲ್ಲವಾದ್ದರಿಂದ ವಾಸ್ತವಿಕವಾಗಿ ಅವರು ಅಂತಿಮ ಮೋಕ್ಷವನ್ನು ಹೊಂದುವುದಿಲ್ಲ.

**ನೈತೇ ಸೃತೀ ಪಾರ್ಥ ಜಾನನ್ ಯೋಗೀ ಮುಹ್ಯತಿ ಕಶ್ಚನ ।**
**ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ ॥೨೭॥**

ನ— ಎಂದಿಗೂ ಇಲ್ಲ, ಏತೇ—ಈ ಎರಡು, ಸೃತೀ—ಭಿನ್ನಮಾರ್ಗಗಳು, ಪಾರ್ಥ—ಹೇ ಪೃಥಾ ಪುತ್ರನೇ, ಜಾನನ್—ಅವನು ತಿಳಿದಿದ್ದರೂ ಕೂಡ, ಯೋಗೀ—ಭಗವದ್ಭಕ್ತನು, ಮುಹ್ಯತಿ—ದಿಗ್ಭ್ರಮಿತನು, ಕಶ್ಚನ—ಯಾವುದೇ, ತಸ್ಮಾತ್—ಆದ್ದರಿಂದ, ಸರ್ವೇಷು ಕಾಲೇಷು—ಯಾವಾಗಲೂ, ಯೋಗ ಯುಕ್ತಃ—ಕೃಷ್ಣ ಪ್ರಜ್ಞೆಯಲ್ಲಿ ನಿರತನು, ಭವ—ಆಗು, ಅರ್ಜುನ—ಹೇ ಅರ್ಜುನ.

**ಹೇ ಅರ್ಜುನ, ಭಕ್ತರು ಈ ಎರಡು ಮಾರ್ಗಗಳನ್ನು ತಿಳಿದಿದ್ದರೂ ಕೂಡ, ಅವರು ಎಂದಿಗೂ ದಿಗ್ಭ್ರಮಿತರಲ್ಲ. ಆದ್ದರಿಂದ ಭಕ್ತಿಯಲ್ಲಿ ಯಾವಾಗಲು ಸ್ಥಿತನಾಗಿರು.**

**ಭಾವಾರ್ಥ :** ಆತ್ಮನು ಭೌತಿಕ ಜಗತ್ತನ್ನು ಬಿಡುವಾಗ ತೆಗೆದುಕೊಳ್ಳಬಹುದಾದ ವಿವಿಧ ಮಾರ್ಗಗಳಿಂದ ಅವನು ಕ್ಷೋಭಿತನಾಗಬಾರದು ಎಂದು ಇಲ್ಲಿ ಕೃಷ್ಣನು ಅರ್ಜುನನಿಗೆ ಉಪದೇಶಿಸುತ್ತಿದ್ದಾನೆ. ಪರಮ ಪ್ರಭುವಿನ ಭಕ್ತನು ತಾನು ಏರ್ಪಾಡಿನಿಂದ ಅಥವಾ ಆಕಸ್ಮಿಕವಾಗಿ ದೇಹತ್ಯಾಗ ಮಾಡುವುದನ್ನು ಕುರಿತು ಯೋಚಿಸಬಾರದು. ಭಕ್ತನು ಕೃಷ್ಣ ಪ್ರಜ್ಞೆಯಲ್ಲಿ ದೃಢವಾಗಿ ಸ್ಥಾಪಿತನಾಗಿರಬೇಕು ಮತ್ತು ಹರೇ ಕೃಷ್ಣ ಜಪವನ್ನು ಮಾಡಬೇಕು. ಈ ಎರಡು ಮಾರ್ಗಗಳಲ್ಲಿ ಯಾವುದರಲ್ಲಾದರೂ ಆಸಕ್ತಿವಹಿಸುವುದು ಕ್ಲೇಶದಾಯಕವೆಂದು ಅವನು ತಿಳಿಯಬೇಕು. ಕೃಷ್ಣ ಪ್ರಜ್ಞೆಯಲ್ಲಿ ಮಗ್ನನಾಗಿರುವ ಅತ್ಯುತ್ತಮ ರೀತಿ ಎಂದರೆ ಅವನ ಸೇವೆಯಲ್ಲಿ ಸದಾ ಕೂಡಿಕೊಳ್ಳುವುದು, ಮತ್ತು ಇದು ಪರಂಧಾಮಕ್ಕೆ ಒಬ್ಬನ ಮಾರ್ಗವನ್ನು ಸುರಕ್ಷಿತ, ಸುನಿಶ್ಚಿತ ಮತ್ತು ನೇರವೂ ಆಗಿಸುವುದು. **ಯೋಗ ಯುಕ್ತ** ಎಂಬ ಪದವು ಈ ಶ್ಲೋಕದಲ್ಲಿ ವಿಶೇಷ ಮಹತ್ವದ್ದು. ಯೋಗದಲ್ಲಿ ದೃಢನಾದವನು ತನ್ನ ಎಲ್ಲಾ ಚಟುವಟಿಕೆಗಳಲ್ಲಿ ಸದಾ ಕೃಷ್ಣಪ್ರಜ್ಞೆಯಲ್ಲಿ ನಿರತನಾಗಿರುತ್ತಾನೆ. ಶ್ರೀ ರೂಪ ಗೋಸ್ವಾಮಿಯವರು, **ಅನಾಸಕ್ತಸ್ಯ ವಿಷಯಾನ್ ಯಥಾರ್ಹಮ್ ಉಪಯುಞ್ಜತಃ**— ಎಂದು ಉಪದೇಶಿಸುತ್ತಾರೆ : ಒಬ್ಬನು ಭೌತಿಕ ವ್ಯವಹಾರಗಳಲ್ಲಿ ಅನಾಸಕ್ತನಾಗಿರಬೇಕು ಮತ್ತು ಪ್ರತಿಯೊಂದನ್ನೂ ಕೃಷ್ಣ ಪ್ರಜ್ಞೆಯಲ್ಲಿ ಮಾಡಬೇಕು. **ಯುಕ್ತ-ವೈರಾಗ್ಯ** ಎಂಬ ಈ ಪದ್ಧತಿಯಿಂದ, ಒಬ್ಬನು ಪರಿಪೂರ್ಣತೆಯನ್ನು ಹೊಂದುತ್ತಾನೆ. ಆದ್ದರಿಂದ ಭಕ್ತನು ಈ ವರ್ಣನೆಗಳಿಂದ ಕ್ಷೋಭಿತನಾಗುವುದಿಲ್ಲ, ಏಕೆಂದರೆ ಪರಮಧಾಮಕ್ಕೆ ಅವನ ಪಯಣವು ಭಕ್ತಿಯುತ ಸೇವೆಯಿಂದ ಸುನಿಶ್ಚಿತವಾಗಿದೆ.

**ವೇದೇಷು ಯಜ್ಞೇಷು ತಪಃಸು ಚೈವ**
**ದಾನೇಷು ಯತ್ ಪುಣ್ಯಫಲಂ ಪ್ರದಿಷ್ಟಮ್ ।**
**ಅತ್ಯೇತಿ ತತ್ಸರ್ವಮಿದಂ ವಿದಿತ್ವಾ**
**ಯೋಗೀ ಪರಂ ಸ್ಥಾನಮುಪೈತಿ ಚಾದ್ಯಮ್ ॥೨೮॥**

ವೇದೇಷು—ವೇದಗಳ ಅಧ್ಯಯನದಲ್ಲಿ, ಯಜ್ಞೇಷು—ಯಜ್ಞಾಚರಣೆಗಳಲ್ಲಿ, ತಪಃಸು—ನಾನಾ ಬಗೆಯ ತಪಸ್ಸುಗಳನ್ನು ಮಾಡುವಲ್ಲಿ, ಚ—ಸಹ, ಏವ—ಖಂಡಿತವಾಗಿ, ದಾನೇಷು—ದಾನಗಳನ್ನು ಕೊಡುವುದರಲ್ಲಿ, ಯತ್—ಯಾವುದು, ಪುಣ್ಯ ಫಲಮ್—ಪುಣ್ಯ ಕರ್ಮ ಫಲವು, ಪ್ರದಿಷ್ಟಮ್—ಸೂಚಿತವು, ಅತ್ಯೇತಿ—ದಾಟುತ್ತಾನೆ, ತತ್ಸರ್ವಮ್—ಅವೆಲ್ಲವನ್ನು, ಇದಮ್—ಇದನ್ನು, ವಿದಿತ್ವಾ—ತಿಳಿದು, ಯೋಗೀ—ಭಕ್ತನು, ಪರಮ್—ಪರಮ, ಸ್ಥಾನಮ್—ಧಾಮವನ್ನು, ಉಪೈತಿ—ಸೇರುತ್ತಾನೆ, ಚ—ಕೂಡ, ಆದ್ಯಮ್—ಮೂಲ.

**ಭಕ್ತಿಯುತ ಸೇವಾ ಮಾರ್ಗವನ್ನು ಅಂಗೀಕರಿಸುವ ವ್ಯಕ್ತಿಗೆ, ವೇದಗಳ ಅಧ್ಯಯನದಿಂದ, ಕಠಿಣ ಯಾಗಗಳ ಆಚರಣೆಯಿಂದ, ದಾನ ಕೊಡುವುದರಿಂದ ಅಥವಾ ತಾತ್ವಿಕ ಮತ್ತು ಕಾಮ್ಯಕಾರ್ಯಗಳ ಅನುಸರಣೆಯಿಂದ ಪಡೆಯಬಹುದಾದ ಫಲಗಳು ದೊರೆಯದೆ ಇರುವುದಿಲ್ಲ. ಭಕ್ತಿಯುತ ಸೇವಾಚರಣೆಯ ಮಾತ್ರದಿಂದ, ಅವನು ಈ ಎಲ್ಲವನ್ನು ಪಡೆಯುತ್ತಾನೆ, ಮತ್ತು ಕೊನೆಯಲ್ಲಿ ಅವನು ಪರಮ ಶಾಶ್ವತ ಧಾಮವನ್ನು ಸೇರುತ್ತಾನೆ.**

**ಭಾವಾರ್ಥ :** ಈ ಶ್ಲೋಕವು, ವಿಶೇಷವಾಗಿ ಕೃಷ್ಣಪ್ರಜ್ಞೆ ಮತ್ತು ಭಕ್ತಿಯುತ ಸೇವೆಯನ್ನು ಕುರಿತು ವಿಚಾರ ಮಾಡುವ ಏಳನೆಯ ಮತ್ತು ಎಂಟನೆಯ ಅಧ್ಯಾಯಗಳ ಸಂಕಲನವಾಗಿರುತ್ತದೆ. ಒಬ್ಬನು ವೇದಗಳನ್ನು ಗುರುವಿನ ಮಾರ್ಗದರ್ಶನದಲ್ಲಿ ಅಧ್ಯಯನ ಮಾಡಬೇಕು ಮತ್ತು ಅವನ ರಕ್ಷಣೆಯಲ್ಲಿರುವಾಗ ಅನೇಕ ಕಠಿಣ ವ್ರತಗಳನ್ನು ಮತ್ತು ತಪಸ್ಸನ್ನು ಆಚರಿಸಬೇಕು. ಬ್ರಹ್ಮಚಾರಿಯು ಗುರುವಿನ ಮನೆಯಲ್ಲಿ ಸೇವಕನ ಹಾಗೆ ವಾಸಿಸಬೇಕು ಮತ್ತು ಮನೆಮನೆಗೆ ಹೋಗಿ ಭಿಕ್ಷೆಯನ್ನು ಬೇಡಬೇಕು ಮತ್ತು ಅದನ್ನು ಗುರುಗಳಿಗೆ ಅರ್ಪಿಸಬೇಕು. ಗುರುಗಳ ಆದೇಶಕ್ಕೆ ಒಳಪಟ್ಟು ಮಾತ್ರವೇ ಅವನು ಆಹಾರವನ್ನು ತೆಗೆದುಕೊಳ್ಳುತ್ತಾನೆ, ಮತ್ತು ಒಂದು ವೇಳೆ ಗುರುಗಳು ಶಿಷ್ಯನನ್ನು ಊಟಕ್ಕೆ ಕರೆಯಲು ಗಮನಿಸದಿದ್ದರೆ, ಶಿಷ್ಯನು ಆ ದಿನ ಉಪವಾಸವಿರುತ್ತಾನೆ. ಇವು **ಬ್ರಹ್ಮಚರ್ಯ** ಆಚರಣೆಯ ಕೆಲವು ವೈದಿಕ ತತ್ವಗಳಾಗಿವೆ.

ಶಿಷ್ಯನು ಗುರುಗಳ ನೇತೃತ್ವದಲ್ಲಿ ಐದರಿಂದ ಇಪ್ಪತ್ತು ವರ್ಷಗಳವರೆಗೆ ವೇದಾಧ್ಯಯನ ಮಾಡಿದ ಮೇಲೆ, ಅವನು ಪರಿಪೂರ್ಣ ಚಾರಿತ್ರ್ಯದ ಮನುಷ್ಯನಾಗಬಹುದು. ವೇದಾಧ್ಯಯನವು ಸುಖಾಸೀನ ಊಹಾಪೋಹಕರ ಮನೋರಂಜನಾರ್ಥಕ್ಕಾಗಿರದೆ, ಚಾರಿತ್ರ್ಯ ರೂಪಣೆಗಾಗಿ ಇರುತ್ತದೆ. ಈ ತರಬೇತಿಯ ನಂತರ **ಬ್ರಹ್ಮಚಾರಿಯು** ಗೃಹಸ್ಥಾಶ್ರಮವನ್ನು ಪ್ರವೇಶಿಸಿ ಮದುವೆಯಾಗಲು ಅನುಮತಿಸಲ್ಪಡುವನು. ಅವನು

ಗೃಹಸ್ಥಾಶ್ರಮಿಯಾಗಿರುವಾಗ ಮತ್ತಷ್ಟು ಜ್ಞಾನೋದಯವನ್ನು ಸಾಧಿಸಲು, ಅನೇಕ ಯಜ್ಞಗಳನ್ನು ಆಚರಿಸಬೇಕು. ದೇಶ, ಕಾಲ ಮತ್ತು ಪಾತ್ರಾನುಸಾರವಾಗಿ, ಭಗವದ್ಗೀತೆಯಲ್ಲಿ ವರ್ಣಿಸಿರುವಂತೆ ಸಾತ್ವಿಕ, ರಾಜಸ ಮತ್ತು ತಾಮಸ ದಾನಗಳನ್ನು ವಿವೇಚಿಸಿ ಅವನು ದಾನವನ್ನು ಕೊಡಬೇಕು. ಗೃಹಸ್ಥಾಶ್ರಮದಿಂದ ನಿವೃತ್ತನಾದ ತರುವಾಯ ಅವನು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ, ಅವನು ಕಾಡುಗಳಲ್ಲಿದ್ದು, ಮರದ ತೊಗಟೆಗಳನ್ನು ಧರಿಸಿಕೊಂಡು, ಕ್ಷೌರ ಇತ್ಯಾದಿಗಳು ಇಲ್ಲದೆ ಕಠೋರ ವ್ರತಗಳನ್ನು ಆಚರಿಸುವನು. ಬ್ರಹ್ಮಚರ್ಯ, ಗೃಹಸ್ಥಜೀವನ, ವಾನಪ್ರಸ್ಥ ಮತ್ತು ಕೊನೆಗೆ ಸಂನ್ಯಾಸ ಆಶ್ರಮಗಳನ್ನು ಪಾಲಿಸಿ, ಒಬ್ಬನು ಜೀವನದ ಪರಿಪೂರ್ಣತೆಯ ಹಂತಕ್ಕೆ ಉನ್ನತಿಸುತ್ತಾನೆ. ಆಗ ಕೆಲವರು ಸ್ವರ್ಗಲೋಕಗಳಿಗೆ ಉನ್ನತಿಸಲ್ಪಡುತ್ತಾರೆ, ಮತ್ತು ಅವರು ಇನ್ನೂ ಹೆಚ್ಚು ಪ್ರಗತಿಸಿದಾಗ, ಪರವ್ಯೋಮದಲ್ಲಿನ ವ್ಯಕ್ತಿಶೂನ್ಯ ಬ್ರಹ್ಮಜ್ಯೋತಿಯಲ್ಲಾಗಲೀ ಅಥವಾ ವೈಕುಂಠ ಲೋಕಗಳಲ್ಲಾಗಲೀ ಅಥವಾ ಕೃಷ್ಣಲೋಕದಲ್ಲಾಗಲೀ ಮುಕ್ತರಾಗುತ್ತಾರೆ. ಇದು ವೈದಿಕ ಸಾಹಿತ್ಯಗಳಲ್ಲಿ ರೂಪಿತವಾದ ಮಾರ್ಗ.

ಆದರೆ, ಕೃಷ್ಣಪ್ರಜ್ಞೆಯ ಸ್ವಾರಸ್ಯವೆಂದರೆ, ಭಕ್ತಿಯುತ ಸೇವೆಯಲ್ಲಿ ನಿರತನಾಗಿ ಒಂದೇ ಏಟಿನಿಂದ ಒಬ್ಬನು ಜೀವನದ ವಿವಿಧ ಆಶ್ರಮಗಳ ಎಲ್ಲ ಕರ್ಮ ಪದ್ಧತಿಗಳನ್ನು ದಾಟಬಲ್ಲನು.

**ಇದಂ ವಿದಿತ್ವಾ** ಎಂಬ ಪದಗಳು, ಭಗವದ್ಗೀತೆಯ ಈ ಅಧ್ಯಾಯದಲ್ಲಿ ಮತ್ತು ಏಳನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನಿಂದ ನೀಡಲ್ಪಟ್ಟ ಉಪದೇಶಗಳನ್ನು ಒಬ್ಬನು ಅರಿತುಕೊಳ್ಳಬೇಕು ಎಂಬುದನ್ನು ಸೂಚಿಸುತ್ತವೆ. ಒಬ್ಬನು ಈ ಅಧ್ಯಾಯಗಳನ್ನು ಪಾಂಡಿತ್ಯದಿಂದ ಅಥವಾ ಮಾನಸಿಕ ಊಹಾಪೋಹದಿಂದ ಅರಿಯಲು ಪ್ರಯತ್ನಿಸದೆ, ಭಕ್ತರ ಸಂಗದಲ್ಲಿ ಅವುಗಳನ್ನು ಶ್ರವಣದಿಂದ ಅರಿತುಕೊಳ್ಳಲು ಪ್ರಯತ್ನಿಸಬೇಕು. ಆರರಿಂದ ಹನ್ನೆರಡನೆಯ ಅಧ್ಯಾಯಗಳು ಭಗವದ್ಗೀತೆಯ ಸಾರವಾಗಿವೆ. ಮೊದಲನೆಯ ಆರು ಮತ್ತು ಕೊನೆಯ ಆರು ಅಧ್ಯಾಯಗಳು, ಭಗವಂತನಿಂದ ವಿಶೇಷವಾಗಿ ರಕ್ಷಿತವಾದ ಮಧ್ಯದ ಆರು ಅಧ್ಯಾಯಗಳಿಗೆ ರಕ್ಷಾವರಣಗಳಂತೆ ಇವೆ. ಒಬ್ಬನು ಭಗವದ್ಗೀತೆಯನ್ನು—ವಿಶೇಷವಾಗಿ ಈ ಮಧ್ಯದ ಆರು ಅಧ್ಯಾಯಗಳನ್ನು—ಭಕ್ತರ ಸಹವಾಸದಲ್ಲಿ ಅರಿತುಕೊಳ್ಳುವಷ್ಟು ಭಾಗ್ಯಶಾಲಿಯಾದರೆ, ಆಗ ಅವನ ಜೀವನವು ಕೂಡಲೇ ಎಲ್ಲ ತಪಸ್ಸುಗಳು, ಯಜ್ಞಗಳು, ದಾನಗಳು, ಊಹಾಪೋಹಗಳು, ಇತ್ಯಾದಿಗಳನ್ನು ಮೀರಿ ಶ್ಲಾಘನೀಯವಾಗುತ್ತದೆ, ಏಕೆಂದರೆ ಈ ಚಟುವಟಿಕೆಗಳ ಎಲ್ಲ ಫಲಗಳನ್ನು ಒಬ್ಬನು ಕೇವಲ ಕೃಷ್ಣಪ್ರಜ್ಞೆಯಿಂದಲೇ ಹೊಂದಬಹುದು.

ಭಗವದ್ಗೀತೆಯಲ್ಲಿ ಕಿಂಚಿತ್ ಶ್ರದ್ಧೆಯುಳ್ಳವನು ಭಗವದ್ಗೀತೆಯನ್ನು ಭಕ್ತನಿಂದ ಕಲಿಯಬೇಕು. ಏಕೆಂದರೆ ನಾಲ್ಕನೆಯ ಅಧ್ಯಾಯದ ಪ್ರಾರಂಭದಲ್ಲಿ ಭಗವದ್ಗೀತೆಯು ಭಕ್ತರಿಂದ ಮಾತ್ರ ಅರಿತುಕೊಳ್ಳಬಹುದಾಗಿದೆ ಎಂದು ಸ್ಪಷ್ಟವಾಗಿ ಹೇಳಿದೆ; ಬೇರೆ ಯಾರೂ ಭಗವದ್ಗೀತೆಯ ಉದ್ದೇಶವನ್ನು ಪರಿಪೂರ್ಣವಾಗಿ ಅರಿಯಲಾರರು. ಆದ್ದರಿಂದ

ಒಬ್ಬನು ಭಗವದ್ಗೀತೆಯನ್ನು ಕೃಷ್ಣಭಕ್ತನಿಂದ ಕಲಿಯಬೇಕು, ಮಾನಸಿಕ ಊಹಾಪೋಹಕ ರಿಂದಲ್ಲ. ಇದು ಶ್ರದ್ಧೆಯ ಸಂಕೇತ. ಒಬ್ಬನು ಭಕ್ತನಿಗಾಗಿ ಶೋಧಿಸಿ, ಮತ್ತು ಕೊನೆಗೆ ಭಕ್ತನ ಸಹವಾಸವನ್ನು ಪಡೆದಾಗ ವಾಸ್ತವಿಕವಾಗಿ ಒಬ್ಬನು ಭಗವದ್ಗೀತೆಯ ಅಧ್ಯಯನ ವನ್ನು ಮತ್ತು ಅರಿಯುವುದನ್ನೂ ಪ್ರಾರಂಭಿಸುತ್ತಾನೆ. ಭಕ್ತನ ಸಹವಾಸದಲ್ಲಿ ಪ್ರಗತಿ ಯಿಂದ, ಒಬ್ಬನು ಭಕ್ತಿಯುತ ಸೇವೆಯಲ್ಲಿ ಸ್ಥಿತನಾಗುತ್ತಾನೆ, ಮತ್ತು ಈ ಸೇವೆಯು, ಕೃಷ್ಣ ಅಥವಾ ದೇವರು ಮತ್ತು ಕೃಷ್ಣನ ಕಾರ್ಯಗಳು, ರೂಪ, ಲೀಲೆಗಳು, ನಾಮ ಮತ್ತು ಇತರ ಲಕ್ಷಣಗಳ ಬಗ್ಗೆ ಎಲ್ಲ ತಪ್ಪು ಕಲ್ಪನೆಗಳನ್ನು ತೊಲಗಿಸುತ್ತದೆ. ಈ ತಪ್ಪು ಕಲ್ಪನೆಗಳು ಪರಿಪೂರ್ಣವಾಗಿ ನಿವಾರಿತವಾದ ತರುವಾಯ, ಒಬ್ಬನು ತನ್ನ ಅಧ್ಯಯನದಲ್ಲಿ ಸ್ಥಿತನಾಗುತ್ತಾನೆ. ಆಗ ಒಬ್ಬನು ಭಗವದ್ಗೀತೆಯ ಅಧ್ಯಯನವನ್ನು ಆಸ್ವಾದಿಸುತ್ತಾನೆ. ಮತ್ತು ಸದಾ ಕೃಷ್ಣಪ್ರಜ್ಞೆಯ ಭಾವವನ್ನು ಹೊಂದುತ್ತಾನೆ. ಉತ್ಕೃಷ್ಟ ಹಂತದಲ್ಲಿ ಒಬ್ಬನು ಸಂಪೂರ್ಣವಾಗಿ ಕೃಷ್ಣ ಪ್ರೇಮಿಯಾಗುತ್ತಾನೆ. ಜೀವನದ ಈ ಅತ್ಯುನ್ನತ ಪರಿಪೂರ್ಣ ಹಂತವು, ಭಕ್ತನು ಶಾಶ್ವತ ಸುಖಿಯಾಗುವ ಪರವ್ಯೋಮ ದಲ್ಲಿನ ಕೃಷ್ಣ ಧಾಮಕ್ಕೆ, ಗೋಲೋಕ ವೃಂದಾವನಕ್ಕೆ ವರ್ಗಾಯಿತನಾಗಲು ಭಕ್ತನನ್ನು ಸಮರ್ಥಗೊಳಿಸುತ್ತದೆ.

**ಇಲ್ಲಿಗೆ "ಶ್ರೀಮದ್ ಭಗವದ್ಗೀತಾ"ದಲ್ಲಿನ ಎಂಟನೆಯ ಅಧ್ಯಾಯವಾದ "ಭಗವತ್ ಪ್ರಾಪ್ತಿ" ಎಂಬುದರ ಭಕ್ತಿವೇದಾಂತ ತಾತ್ಪರ್ಯವು ಮುಗಿಯಿತು.**



## ಅಧ್ಯಾಯ ಒಂಭತ್ತು



# ಗುಹ್ಯತಮ ಜ್ಞಾನ

**ಶ್ರೀಭಗವಾನ್ ಉವಾಚ**

**ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।**
**ಜ್ಞಾನಂ ವಿಜ್ಞಾನಸಹಿತಂ ಯಜ್‌ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥೧॥**

ಶ್ರೀ ಭಗವಾನ್ ಉವಾಚ—ಪರಮ ದೇವೋತ್ತಮ ಪುರುಷನು ನುಡಿದನು, ಇದಮ್—ಇದನ್ನು, ತು—ಆದರೆ, ತೇ—ನಿನಗೆ, ಗುಹ್ಯತಮಮ್—ಗುಹ್ಯತಮವಾದ, ಪ್ರವಕ್ಷ್ಯಾಮಿ—ನಾನು ಹೇಳುತ್ತಿದ್ದೇನೆ, ಅನಸೂಯವೇ—ಅಸೂಯಾರಹಿತನಿಗೆ, ಜ್ಞಾನಮ್—ಜ್ಞಾನವನ್ನು, ವಿಜ್ಞಾನ—ಸಾಕ್ಷಾತ್ಕೃತ ಜ್ಞಾನ, ಸಹಿತಮ್—ಸಹಿತ, ಯತ್—ಯಾವುದನ್ನು, ಜ್ಞಾತ್ವಾ—ತಿಳಿದು, ಮೋಕ್ಷ್ಯಸೇ—ನೀನು ಮುಕ್ತನಾಗುವೆ, ಅಶುಭಾತ್—ಈ ಕ್ಲೇಶಮಯ ಭೌತಿಕ ಅಸ್ತಿತ್ವದಿಂದ.

**ಪರಮ ದೇವೋತ್ತಮ ಪುರುಷನು ನುಡಿದನು— ನನ್ನ ಪ್ರಿಯ ಅರ್ಜುನನೇ, ನೀನು ನನ್ನ ಬಗ್ಗೆ ಎಂದೂ ಅಸೂಯೆಯುಳ್ಳವನಲ್ಲ. ಆದ್ದರಿಂದ ನಿನಗೆ ಈ ಗುಹ್ಯತಮ ಜ್ಞಾನ ಮತ್ತು ಸಾಕ್ಷಾತ್ಕಾರವನ್ನು ತಿಳಿಸುತ್ತೇನೆ, ಅದನ್ನು ತಿಳಿದು ನೀನು ಭೌತಿಕ ಅಸ್ತಿತ್ವದ ಕ್ಲೇಶಗಳಿಂದ ಮುಕ್ತನಾಗುವೆ.**

**ಭಾವಾರ್ಥ :** ಭಕ್ತನು ಪರಮ ಪ್ರಭುವಿನ ಬಗ್ಗೆ ಹೆಚ್ಚು ಹೆಚ್ಚು ಶ್ರವಣಮಾಡಿದಂತೆ ಅವನು ಜ್ಞಾನೋದಿತನಾಗುತ್ತಾನೆ. ಈ ಶ್ರವಣವಿಧಾನವು ಶ್ರೀಮದ್ ಭಾಗವತದಲ್ಲಿ ಹೇಳಲ್ಪಟ್ಟಿದೆ: "ಪರಮದೇವೋತ್ತಮ ಪುರುಷನ ಸಂದೇಶಗಳು ಶಕ್ತಿಗಳಿಂದ ತುಂಬಿವೆ,

ಮತ್ತು ಪರಮ ದೇವೋತ್ತಮನ ವಿಷಯಗಳನ್ನು ಭಕ್ತರೊಂದಿಗೆ ಚರ್ಚಿಸಿದರೆ, ಆ ಶಕ್ತಿಗಳನ್ನು ವಾಸ್ತವಿಕವಾಗಿ ಗ್ರಹಿಸಬಹುದು. ಇದು ಸಾಕ್ಷಾತ್ಕೃತ ಜ್ಞಾನವಾದುದರಿಂದ, ಮಾನಸಿಕ ಊಹಾಪೋಹಕರ ಅಥವಾ ಪ್ರೌಢ ಪಂಡಿತರ ಸಂಗದಿಂದ ದೊರೆಯಲಾರದು."

ಭಕ್ತರು ಪರಮ ಪ್ರಭುವಿನ ಸೇವೆಯಲ್ಲಿ ಸಂತತವಾಗಿ ನಿರತರು. ಕೃಷ್ಣಪ್ರಜ್ಞಾನಿರತ ವಿಶಿಷ್ಟ ಜೀವಿಯ ಮನೋಭಾವವನ್ನು ಮತ್ತು ಪ್ರಾಮಾಣಿಕತೆಯನ್ನು ಭಗವಂತನು ಅರಿತಿರುತ್ತಾನೆ. ಮತ್ತು ಅವನಿಗೆ ಭಕ್ತರ ಸಹವಾಸದಲ್ಲಿ ಕೃಷ್ಣ ವಿಜ್ಞಾನವನ್ನು ಅರಿತು ಕೊಳ್ಳುವ ಬುದ್ಧಿಯನ್ನು ನೀಡುತ್ತಾನೆ. ಕೃಷ್ಣನನ್ನು ಕುರಿತ ಚರ್ಚೆಯು ಬಹು ಶಕ್ತಿ ಯುತ, ಮತ್ತು ಒಬ್ಬ ಭಾಗ್ಯಶಾಲಿ ವ್ಯಕ್ತಿಯು ಅಂಥಹ ಸಹವಾಸವನ್ನು ಪಡೆದರೆ ಮತ್ತು ಜ್ಞಾನವನ್ನು ಆತ್ಮಗತಮಾಡಿಕೊಳ್ಳಲು ಯತ್ನಿಸಿದರೆ, ಆಗ ಅವನು ಖಂಡಿತವಾಗಿ ಆಧ್ಯಾತ್ಮಿಕ ಸಾಕ್ಷಾತ್ಕಾರದೆಡೆಗೆ ಮುಂದುವರಿಯುತ್ತಾನೆ. ಅರ್ಜುನನನ್ನು ಭಗವಂತನ ಸಮರ್ಥ ಸೇವೆಯಲ್ಲಿ ಹೆಚ್ಚು ಹೆಚ್ಚಿನ ಔನ್ನತ್ಯಕ್ಕೆ ಪ್ರೋತ್ಸಾಹಿಸುವ ಸಲುವಾಗಿ ಭಗವಾನ್ ಕೃಷ್ಣನು ಈ ಒಂಬತ್ತನೆಯ ಅಧ್ಯಾಯದಲ್ಲಿ ತಾನು ಈಗಾಗಲೇ ವ್ಯಕ್ತಪಡಿಸಿದ ಯಾವುದೇ ವಿಷಯಕ್ಕಿಂತಲೂ ಗುಹ್ಯತರವಾದ ವಿಷಯಗಳನ್ನು ವರ್ಣಿಸುತ್ತಾನೆ.

ಭಗವದ್ಗೀತೆಯ ಮೊದಲನೆಯ ಅಧ್ಯಾಯವು, ಉಳಿದ ಪುಸ್ತಕಕ್ಕೆ ಸರಿಸುಮಾರು ಪ್ರಸ್ತಾವನೆಯಂತೆ ಇದೆ; ಮತ್ತು ಎರಡನೆಯ ಮತ್ತು ಮೂರನೆಯ ಅಧ್ಯಾಯ ಗಳಲ್ಲಿ ವರ್ಣಿಸಲ್ಪಟ್ಟ ಅಧ್ಯಾತ್ಮ ಜ್ಞಾನವು ಗುಹ್ಯವಾದುದು. ಏಳನೆಯ ಮತ್ತು ಎಂಟನೆಯ ಅಧ್ಯಾಯಗಳಲ್ಲಿ ಚರ್ಚಿಸಲ್ಪಟ್ಟ ವಿಷಯಗಳು ನಿರ್ದಿಷ್ಟವಾಗಿ ಭಕ್ತಿಯುತ ಸೇವೆಗೆ ಸಂಬಂಧಿಸಿವೆ, ಮತ್ತು ಅವು ಕೃಷ್ಣಪ್ರಜ್ಞೆಯಲ್ಲಿ ಜ್ಞಾನೋದಯವನ್ನು ತರುವುದ ರಿಂದ, ಅವುಗಳನ್ನು ಗುಹ್ಯತರವೆಂದು ಕರೆದಿದೆ. ಆದರೆ ಒಂಬತ್ತನೆಯ ಅಧ್ಯಾಯದಲ್ಲಿ ವರ್ಣಿಸಲ್ಪಡುವ ವಿಷಯಗಳು ಅಮಿಶ್ರ, ಶುದ್ಧ ಭಕ್ತಿಗೆ ಸಂಬಂಧಿಸಿವೆ. ಆದ್ದರಿಂದ ಇದು ಗುಹ್ಯತಮವೆಂದು ಕರೆಯಲ್ಪಟ್ಟಿದೆ. ಕೃಷ್ಣನ ಗುಹ್ಯತಮ ಜ್ಞಾನದಲ್ಲಿ ಸನ್ನಿವೇಶಿತ ನಾದವನು ಸಹಜವಾಗಿ ದಿವ್ಯನು; ಆದ್ದರಿಂದ ಅವನು ಭೌತಿಕ ಜಗತ್ತಿನಲ್ಲಿದ್ದರೂ, ಅವನಿಗೆ ಭೌತಿಕ ದುಃಖಗಳಿಲ್ಲ. ಪರಮ ಪ್ರಭುವಿಗೆ ಪ್ರೀತಿಯುತ ಸೇವೆಯನ್ನು ಸಲ್ಲಿಸುವ ಪ್ರಾಮಾಣಿಕ ಇಚ್ಛೆಯನ್ನು ಹೊಂದಿರುವ ಒಬ್ಬನು, ಅವನು ಭೌತಿಕ ಅಸ್ತಿತ್ವದ ಬದ್ಧ ಸ್ಥಿತಿಯಲ್ಲಿ ಸನ್ನಿವೇಶಿತನಾಗಿದ್ದರೂ, ಅವನನ್ನು ಮುಕ್ತನೆಂದು ಪರಿಗಣಿಸಬೇಕು ಎಂದು ಭಕ್ತಿ-ರಸಾಮೃತ ಸಿಂಧುವಿನಲ್ಲಿ ಹೇಳಿದೆ. ಅದರಂತೆಯೇ, ಆ ರೀತಿಯಲ್ಲಿ ನಿರತನಾಗಿರು ವವನು ಮುಕ್ತನು ಎಂಬುದನ್ನು ಭಗವದ್ಗೀತೆಯ ಹತ್ತನೆಯ ಅಧ್ಯಾಯದಲ್ಲಿ ನಾವು ಕಾಣುತ್ತೇವೆ.

ಈಗ ಈ ಮೊದಲನೆಯ ಶ್ಲೋಕವು ನಿರ್ದಿಷ್ಟ ಮಹತ್ವವನ್ನು ಹೊಂದಿದೆ. **ಇದಂ ಜ್ಞಾನಮ್** ಎಂಬ ಪದಗಳು ("ಈ ಜ್ಞಾನವು"), ಶ್ರವಣ, ಕೀರ್ತನ, ಸ್ಮರಣ, ಸೇವೆ, ಅರ್ಚನ, ಸ್ತುತಿ, ದಾಸ್ಯ, ಸಖ್ಯ ಮತ್ತು ಸರ್ವ ಸಮರ್ಪಣ ಎಂಬ ಈ ನವವಿಧ ಚಟು ವಟಿಕೆಗಳನ್ನು ಒಳಗೊಂಡ ಶುದ್ಧ ಭಕ್ತಿಯುತ ಸೇವೆಯನ್ನು ನಿರ್ದೇಶಿಸುತ್ತವೆ. ಭಗವದ್

ಸೇವೆಯ ಈ ನವವಿಧಾನಗಳನ್ನು ಆಚರಿಸುವ ಮೂಲಕ ಒಬ್ಬನು ಆಧ್ಯಾತ್ಮಿಕ ಪ್ರಜ್ಞೆಗೆ, ಕೃಷ್ಣ ಪ್ರಜ್ಞೆಗೆ ಉನ್ನತಿಸಲ್ಪಡುತ್ತಾನೆ. ಹೀಗೆ ಒಬ್ಬನ ಹೃದಯವು ಭೌತಿಕ ಕಲುಷತೆಯಿಂದ ನಿರ್ಮಲವಾದಾಗ ಒಬ್ಬನು ಈ ಕೃಷ್ಣ ವಿಜ್ಞಾನವನ್ನು ತಿಳಿದುಕೊಳ್ಳಬಹುದು. ಜೀವನು ಭೌತಿಕವಲ್ಲ ಎಂದು ತಿಳಿದುಕೊಳ್ಳುವುದು ಮಾತ್ರವೇ ಸಾಲದು. ಅದು ಆಧ್ಯಾತ್ಮ ಸಾಕ್ಷಾತ್ಕಾರದ ಆರಂಭವಾಗಬಹುದು, ಆದರೆ ತಾನು ದೇಹವಲ್ಲ ಎಂದು ಅರಿತುಕೊಂಡವನ ದೈಹಿಕ ಚಟುವಟಿಕೆಗಳ ಮತ್ತು ಆಧ್ಯಾತ್ಮಿಕ ಚಟುವಟಿಕೆಗಳ ನಡುವೆ ಇರುವ ವ್ಯತ್ಯಾಸಗಳನ್ನು ಒಬ್ಬನು ಗುರುತಿಸಬೇಕು.

ಏಳನೆಯ ಅಧ್ಯಾಯದಲ್ಲಿ ನಾವು ಈಗಾಗಲೇ ಪರಮ ದೇವೋತ್ತಮ ಪುರುಷನ ಸಮೃದ್ಧ ಸಮರ್ಥತೆಯನ್ನು, ಅಪರಾ ಮತ್ತು ಪರಾ ಪ್ರಕೃತಿಗಳಾದ ಅವನ ವಿವಿಧ ಶಕ್ತಿಗಳನ್ನು, ಮತ್ತು ಎಲ್ಲ ಈ ಭೌತಿಕ ಉದ್ಭೂತಿಯನ್ನು ಕುರಿತು ಚರ್ಚಿಸಿದ್ದೇವೆ. ಈಗ ಒಂಭತ್ತನೆಯ ಅಧ್ಯಾಯದಲ್ಲಿ ಭಗವಂತನ ಮಹಿಮೆಗಳು ವಿವರಿಸಲ್ಪಡುವುವು.

ಈ ಶ್ಲೋಕದಲ್ಲಿ **ಅನಸೂಯವೇ** ಎಂಬ ಸಂಸ್ಕೃತ ಪದವು ಕೂಡ ಬಹು ಮಹತ್ವದ್ದು, ಸಾಮಾನ್ಯವಾಗಿ ವ್ಯಾಖ್ಯಾನಕಾರರು, ಅವರು ಉನ್ನತ ಪಾಂಡಿತ್ಯವುಳ್ಳವರಾಗಿದ್ದರೂ ಕೂಡ, ಎಲ್ಲರೂ ಪರಮ ದೇವೋತ್ತಮ ಪುರುಷ ಕೃಷ್ಣನ ಬಗ್ಗೆ ಅಸೂಯಾಪರರು. ಅತ್ಯಂತ ನುರಿತ ಪಂಡಿತರೂ ಕೂಡ ಭಗವದ್‌ಗೀತೆಯ ಬಗ್ಗೆ ಬಹಳ ತಪ್ಪಾಗಿ ಬರೆಯುತ್ತಾರೆ. ಅವರು ಕೃಷ್ಣನ ಬಗ್ಗೆ ಅಸೂಯಾಪರರಾದುದರಿಂದ, ಅವರ ವ್ಯಾಖ್ಯಾನಗಳು ನಿರುಪಯುಕ್ತ. ಭಗವಂತನ ಭಕ್ತರಿಂದ ನೀಡಲ್ಪಟ್ಟ ವ್ಯಾಖ್ಯಾನಗಳು ಪ್ರಾಮಾಣಿಕ. ಒಬ್ಬನು ಅಸೂಯಾಪರನಾಗಿದ್ದಲ್ಲಿ ಭಗವದ್ಗೀತೆಯನ್ನು ವಿವರಿಸಲಾರನು. ಅಥವಾ ಕೃಷ್ಣನ ಬಗ್ಗೆ ಪರಿಪೂರ್ಣ ಜ್ಞಾನವನ್ನು ನೀಡಲಾರನು. ಕೃಷ್ಣನನ್ನು ಅರಿಯದೆ ಅವನ ನಡತೆಯನ್ನು ಟೀಕಿಸುವವನು ಮೂರ್ಖ. ಆದ್ದರಿಂದ ಅಂಥ ವ್ಯಾಖ್ಯಾನಗಳನ್ನು ಬಹಳ ಎಚ್ಚರಿಕೆಯಿಂದ ತ್ಯಜಿಸಬೇಕು. ಕೃಷ್ಣನು ಪರಮ ದೇವೋತ್ತಮ ಪುರುಷನು, ಶುದ್ಧನು ಮತ್ತು ದಿವ್ಯ ಪುರುಷನು ಎಂದು ಅರಿಯುವವನಿಗೆ ಈ ಅಧ್ಯಾಯಗಳು ಬಹು ಪ್ರಯೋಜಕವಾಗುತ್ತವೆ.

**ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್ ।**
**ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್ ॥ ೨ ॥**

ರಾಜವಿದ್ಯಾ—ವಿದ್ಯೆಯಲ್ಲಿ ರಾಜ, ರಾಜಗುಹ್ಯಮ್—ಗುಹ್ಯ ಜ್ಞಾನದಲ್ಲಿ ರಾಜ, ಪವಿತ್ರಮ್—ಅತ್ಯಂತ ಪವಿತ್ರ, ಇದಮ್—ಇದು, ಉತ್ತಮಮ್—ದಿವ್ಯವಾದುದು, ಪ್ರತ್ಯಕ್ಷ—ನೇರ ಅನುಭವದಿಂದ, ಅವಗಮಮ್—ತಿಳಿಯಲ್ಪಡುವುದು, ಧರ್ಮ್ಯಮ್—ಧರ್ಮದ ತತ್ವ, ಸುಸುಖಮ್—ಬಹು ಆನಂದ, ಕರ್ತುಮ್—ಆಚರಿಸಲು, ಅವ್ಯಯಮ್—ಶಾಶ್ವತ.

**ಈ ಜ್ಞಾನವು ವಿದ್ಯೆಯ ರಾಜ, ಮತ್ತು ರಹಸ್ಯಗಳಲ್ಲೆಲ್ಲಾ ಅತ್ಯಂತ ರಹಸ್ಯ. ಅದು ಅತ್ಯಂತ ಶುದ್ಧ ಜ್ಞಾನ ಮತ್ತು ಸಾಕ್ಷಾತ್ಕಾರದಿಂದ ಆತ್ಮನ ನೇರ ಅನುಭವ**

**ವನ್ನು ನೀಡುವುದರಿಂದ, ಅದು ಧರ್ಮದ ಪರಿಪೂರ್ಣತೆ. ಅದು ಶಾಶ್ವತವು, ಮತ್ತು ಆನಂದವಾಗಿ ಆಚರಿಸಲ್ಪಡುವುದು.**

**ಭಾವಾರ್ಥ :** ಭಗವದ್ಗೀತೆಯ ಈ ಅಧ್ಯಾಯವು ರಾಜವಿದ್ಯಾ ಎನಿಸಿಕೊಂಡಿದೆ, ಏಕೆಂದರೆ ಇದು ಮುಂಚೆಯೇ ವಿವರಿಸಿದ ಎಲ್ಲ ತತ್ವಗಳ ಮತ್ತು ತತ್ವಜ್ಞಾನಗಳ ಸಾರ. ಭಾರತದಲ್ಲಿನ ಮುಖ್ಯ ದಾರ್ಶನಿಕರ ಪೈಕಿ ಗೌತಮ, ಕಣಾದ, ಕಪಿಲ, ಯಾಜ್ಞವಲ್ಕ್ಯ, ಶಾಂಡಿಲ್ಯ ಮತ್ತು ವೈಶ್ವಾನರ ಇದ್ದಾರೆ. ಮತ್ತು ಕೊನೆಗೆ ವೇದಾಂತ–ಸೂತ್ರದ ಕರ್ತೃವಾದ ವೇದವ್ಯಾಸರು ಇದ್ದಾರೆ. ಹೀಗೆ ತತ್ವಶಾಸ್ತ್ರ ಅಥವಾ ದಿವ್ಯಜ್ಞಾನದ ಕ್ಷೇತ್ರದಲ್ಲಿ ಜ್ಞಾನದ ಕೊರತೆಯಿಲ್ಲ. ಈಗ ಈ ಒಂಭತ್ತನೆಯ ಅಧ್ಯಾಯವು ಅಂಥ ಎಲ್ಲ ಜ್ಞಾನದ ರಾಜ, ಎಂದರೆ ವೇದಗಳ ಮತ್ತು ನಾನಾ ಬಗೆಯ ತತ್ವಜ್ಞಾನಗಳ ಅಧ್ಯಯನದಿಂದ ಪಡೆಯಬಹುದಾದ ಎಲ್ಲ ಜ್ಞಾನದ ಸಾರ ಎಂದು ಭಗವಂತನು ಹೇಳುತ್ತಾನೆ. ಇದು ಗುಹ್ಯತಮ ಏಕೆಂದರೆ ಗುಹ್ಯ ಅಥವಾ ದಿವ್ಯ ಜ್ಞಾನವು ಆತ್ಮ ಮತ್ತು ದೇಹದ ನಡುವಿನ ವ್ಯತ್ಯಾಸ ಅರಿಯುವುದನ್ನು ಒಳಗೊಂಡಿರುತ್ತದೆ. ಎಲ್ಲ ಗುಹ್ಯ ಜ್ಞಾನದ ರಾಜ ವಿದ್ಯೆಯು ಭಕ್ತಿಯುತ ಸೇವೆಯಲ್ಲಿ ಉಚ್ಛ್ರಾಯವಾಗುತ್ತದೆ.

ಸಾಮಾನ್ಯವಾಗಿ, ಜನರು ಈ ಗುಹ್ಯತಮ ಜ್ಞಾನದಲ್ಲಿ ಶಿಕ್ಷಿತರಲ್ಲ; ಅವರು ಬಾಹ್ಯ ಜ್ಞಾನದಲ್ಲಿ ಶಿಕ್ಷಿತರು. ಸಾಮಾನ್ಯ ಶಿಕ್ಷಣದ ಮಟ್ಟಿಗಾದರೋ ಜನರು ಅನೇಕ ವಿಭಾಗಗಳಲ್ಲಿ ಮಗ್ನರಾಗಿದ್ದಾರೆ : ರಾಜ್ಯಶಾಸ್ತ್ರ, ಸಮಾಜಶಾಸ್ತ್ರ, ಭೌತಶಾಸ್ತ್ರ, ರಸಾಯನಶಾಸ್ತ್ರ, ಗಣಿತ, ಖಗೋಳ ಶಾಸ್ತ್ರ, ತಾಂತ್ರಿಕ ವಿಜ್ಞಾನ, ಇತ್ಯಾದಿ. ಜಗತ್ತಿನಲ್ಲೆಲ್ಲಾ ಜ್ಞಾನದ ನಾನಾ ವಿಭಾಗಗಳು ಮತ್ತು ಅನೇಕ ಭಾರಿ ವಿಶ್ವವಿದ್ಯಾನಿಲಯಗಳಿವೆ, ಆದರೆ ದುರದೃಷ್ಟವಶಾತ್, ಚೇತನ ಆತ್ಮನ ವಿಜ್ಞಾನವನ್ನು ಬೋಧಿಸುವ ಯಾವುದೇ ವಿಶ್ವವಿದ್ಯಾನಿಲಯ ಅಥವಾ ವಿದ್ಯಾ ಸಂಸ್ಥೆಯು ಇಲ್ಲ. ಆದಾಗ್ಯೂ, ಆತ್ಮನು ದೇಹದ ಅತ್ಯಂತ ಮುಖ್ಯ ಭಾಗ; ಆತ್ಮನಿಲ್ಲದೆ ದೇಹಕ್ಕೆ ಯಾವ ಬೆಲೆಯೂ ಇಲ್ಲ. ಆದರೂ ಜನರು ಜೀವನಾಧಾರವಾದ ಆತ್ಮನನ್ನು ಗಮನಿಸದೆ, ದೈಹಿಕ ಅವಶ್ಯಕತೆಗಳಿಗೆ ಮಾತ್ರ ಭಾರಿ ಪ್ರಾಮುಖ್ಯತೆಯನ್ನು ಕೊಡುತ್ತಿದ್ದಾರೆ.

ಭಗವದ್ಗೀತೆಯು, ವಿಶೇಷವಾಗಿ ಎರಡನೆಯ ಅಧ್ಯಾಯದಿಂದ ಮುಂದಕ್ಕೆ ಆತ್ಮನ ಮಹತ್ವವನ್ನು ಒತ್ತಿ ಹೇಳುತ್ತದೆ. ಪ್ರಾರಂಭದಲ್ಲಿಯೇ, ಈ ದೇಹವು ವಿನಾಶಿ ಮತ್ತು ಆತ್ಮನು ಅವಿನಾಶಿ ಎಂದು ಭಗವಂತನು ಹೇಳುತ್ತಾನೆ (**ಅನ್ತವನ್ತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ**). ಚೇತನಾತ್ಮವು ದೇಹದಿಂದ ಭಿನ್ನ ಮತ್ತು ಅದರ ಸ್ವಭಾವವು ನಿರ್ವಿಕಲ್ಪ, ಅವಿನಾಶಿ ಮತ್ತು ಶಾಶ್ವತ ಎಂದು ಸುಮ್ಮನೆ ತಿಳಿಯುವುದು—ಇದು ಜ್ಞಾನದ ಗುಹ್ಯ ಭಾಗ. ಆದರೆ ಅದು ಆತ್ಮದ ಬಗ್ಗೆ ಯಾವ ಸ್ಪಷ್ಟ ಮಾಹಿತಿಯನ್ನು ನೀಡುವುದಿಲ್ಲ. ಕೆಲವು ಸಮಯ ಜನರು, ಆತ್ಮವು ದೇಹದಿಂದ ಭಿನ್ನ ಮತ್ತು ದೇಹವು ಅಂತ್ಯವಾದಾಗ ಅಥವಾ ಒಬ್ಬನು ದೇಹದಿಂದ ಮುಕ್ತನಾದಾಗ, ಆತ್ಮವು ಶೂನ್ಯದಲ್ಲಿ ಉಳಿಯುತ್ತದೆ ಮತ್ತು ವ್ಯಕ್ತಿಶೂನ್ಯವಾಗುತ್ತದೆ ಎಂಬ ಭಾವನೆಯಲ್ಲಿರುತ್ತಾರೆ. ಆದರೆ ವಾಸ್ತವಿಕ

ವಾಗಿ ಅದು ಸತ್ಯವಲ್ಲ. ಈ ದೇಹದಲ್ಲಿ ಅಷ್ಟೊಂದು ಕ್ರಿಯಾಶೀಲವಾಗಿರುವ ಆತ್ಮವು ದೇಹದಿಂದ ಮುಕ್ತವಾದ ಬಳಿಕ ಕಾರ್ಯರಹಿತವಾಗಿರುವುದು ಹೇಗೆ ? ಅದು ಸದಾ, ಕ್ರಿಯಾಶೀಲ. ಅದು ಶಾಶ್ವತವಾದರೆ, ಆಗ ಅದು ಶಾಶ್ವತವಾಗಿ ಕ್ರಿಯಾಶೀಲ, ಮತ್ತು ಅಧ್ಯಾತ್ಮ ಲೋಕದಲ್ಲಿ ಅದರ ಚಟುವಟಿಕೆಗಳು ಅಧ್ಯಾತ್ಮ ಜ್ಞಾನದ ಗುಹ್ಯತಮ ಭಾಗ. ಆದ್ದರಿಂದಲೇ ಚೇತನಾತ್ಮದ ಈ ಚಟುವಟಿಕೆಗಳು ರಾಜವಿದ್ಯೆಯೆಂದೂ, ಸಕಲ ಜ್ಞಾನದ ಗುಹ್ಯತಮ ಭಾಗವೆಂದೂ ಸೂಚಿಸಲಾಗಿದೆ.

ವೈದಿಕ ಸಾಹಿತ್ಯದಲ್ಲಿ ವಿವರಿಸಿರುವಂತೆ, ಈ ಜ್ಞಾನವು ಸಕಲ ಚಟುವಟಿಕೆಗಳ ಶುದ್ಧ ರೂಪ. ಪದ್ಮ-ಪುರಾಣದಲ್ಲಿ ಮನುಷ್ಯನ ಪಾಪ ಕಾರ್ಯಗಳು ವಿಶ್ಲೇಷಿಸಲ್ಪಟ್ಟಿವೆ ಮತ್ತು ಒಂದರನಂತರ ಮತ್ತೊಂದು ಪಾಪದ ಫಲಗಳೆಂದು ತೋರಿಸಲ್ಪಟ್ಟಿವೆ. ಕಾಮ್ಯ ಕರ್ಮಗಳಲ್ಲಿ ತೊಡಗಿದವರು ಪಾಪ ಪ್ರಕ್ರಿಯೆಗಳ ಭಿನ್ನ ಭಿನ್ನ ಹಂತಗಳಲ್ಲಿ ಮತ್ತು ರೂಪಗಳಲ್ಲಿ ಸಿಲುಕಿಕೊಂಡಿದ್ದಾರೆ. ಉದಾಹರಣೆಗೆ, ಒಂದು ವಿಶಿಷ್ಟ ಮರದ ಬೀಜವನ್ನು ಬಿತ್ತಿದಾಗ, ಆ ಮರವು ಬೆಳೆದಂತೆ ಕೂಡಲೇ ಕಾಣುವುದಿಲ್ಲ; ಅದು ಸ್ವಲ್ಪ ಕಾಲ ತೆಗೆದುಕೊಳ್ಳುತ್ತದೆ. ಅದು ಮೊದಲು, ಚಿಗುರುತ್ತಿರುವ ಸಣ್ಣ ಸಸ್ಯ. ನಂತರ ಅದು ಮರದ ರೂಪವನ್ನು ತಾಳುತ್ತದೆ, ನಂತರ ಅದು ಹೂ-ಹಣ್ಣುಗಳನ್ನು ಕೊಡುತ್ತದೆ, ಮತ್ತು ಅದು ಪೂರ್ಣವಾದಾಗ ಆ ಮರದ ಬೀಜವನ್ನು ಬಿತ್ತಿದವರಿಂದ ಅದರ ಹೂಗಳು ಮತ್ತು ಹಣ್ಣುಗಳು ಉಪಭೋಗಿಸಲ್ಪಡುತ್ತವೆ. ಅದೇ ಪ್ರಕಾರ, ಒಬ್ಬ ಮನುಷ್ಯನು ಪಾಪ ಕಾರ್ಯ ಒಂದನ್ನು ಮಾಡುತ್ತಾನೆ ಮತ್ತು ಅದು ಫಲಿಸಲು ಬೀಜದಂತೆ ಕಾಲ ತೆಗೆದುಕೊಳ್ಳುತ್ತದೆ. ವಿವಿಧ ಹಂತಗಳಿವೆ. ಪಾಪ ಕಾರ್ಯವು ವ್ಯಕ್ತಿಯಲ್ಲಿ ಆಗಲೇ ನಿಂತುಹೋಗಿರಬಹುದು ಆದರೆ ಆ ಪಾಪಕಾರ್ಯದ ಫಲಿತಾಂಶಗಳು ಅಥವಾ ಫಲವು ಇನ್ನೂ ಉಪಭೋಗಿಸಲ್ಪಡಬೇಕಾಗಿರುತ್ತದೆ. ಇನ್ನೂ ಬೀಜರೂಪದಲ್ಲಿರುವ ಪಾಪಗಳು ಇವೆ, ಮತ್ತೆ ಕೆಲವು ಈಗಾಗಲೇ ಫಲೋತ್ಪಾದನಗಳಾಗಿವೆ ಮತ್ತು ನಾವು ಸುಖ ದುಃಖಗಳೆಂದು ಅನುಭವಿಸುತ್ತಿರುವ ಫಲವನ್ನು ನಮಗೆ ನೀಡುತ್ತಿವೆ.

ಏಳನೆಯ ಅಧ್ಯಾಯದ ಇಪ್ಪತ್ತೆಂಟನೆಯ ಶ್ಲೋಕದಲ್ಲಿ ವಿವರಿಸಿದಂತೆ, ಎಲ್ಲ ಪಾಪ ಕಾರ್ಯಗಳ ಪ್ರತಿಫಲಗಳನ್ನು ಸಂಪೂರ್ಣವಾಗಿ ಮುಗಿಸಿ ಮತ್ತು ಪುಣ್ಯ ಕಾರ್ಯಗಳಲ್ಲಿ ಪೂರ್ಣ ನಿರತನಾಗಿರುವವನು, ಭೌತಿಕ ಜಗತ್ತಿನ ದ್ವಂದ್ವತೆಯಿಂದ ಮುಕ್ತನಾಗಿ, ಪರಮ ದೇವೋತ್ತಮ ಪುರುಷ ಕೃಷ್ಣನ ಭಕ್ತಿಯುತ ಸೇವೆಯಲ್ಲಿ ತೊಡಗುತ್ತಾನೆ. ಅರ್ಥಾತ್, ಪರಮ ಪ್ರಭುವಿನ ಭಕ್ತಿಯುತ ಸೇವೆಯಲ್ಲಿ ವಾಸ್ತವಿಕವಾಗಿ ತೊಡಗಿರುವವರು ಎಲ್ಲ ಪ್ರತಿಕ್ರಿಯೆಗಳಿಂದ ಈಗಾಗಲೇ ಮುಕ್ತರಾಗಿರುತ್ತಾರೆ. ಇದು ಪದ್ಮ ಪುರಾಣದಲ್ಲಿ ದೃಢೀಕೃತವಾಗಿದೆ :

ಅಪ್ರಾರಬ್ಧಫಲಂ ಪಾಪಂ ಕೂಟಂ ಬೀಜಂ ಫಲೋನ್ಮುಖಮ್।
ಕ್ರಮೇಣೈವ ಪ್ರಲೀಯೇತ ವಿಷ್ಣುಭಕ್ತಿರತಾತ್ಮನಾಮ್॥

ಪರಮ ದೇವೋತ್ತಮ ಪುರುಷನ ಭಕ್ತಿಯುತ ಸೇವಾನಿರತರಿಗೆ, ಎಲ್ಲಾ ಪಾಪ ಪ್ರತಿಕ್ರಿಯೆಗಳು—ಫಲಿಸಿರುವುದಾಗಲೀ, ಸಂಗ್ರಹದಲ್ಲಿರುವುದಾಗಲೀ ಅಥವಾ ಬೀಜರೂಪದಲ್ಲಿರುವುದಾಗಲೀ—ಎಲ್ಲವೂ ಕ್ರಮೇಣ ಮಾಯವಾಗುತ್ತವೆ. ಆದ್ದರಿಂದ ಭಕ್ತಿಯುತ ಸೇವೆಯ ಶುದ್ಧೀಕರಣ ಶಕ್ತಿಯು ಬಹಳ ಬಲಯುತ, ಮತ್ತು ಅದು **ಪವಿತ್ರಮ್ ಉತ್ತಮಮ್**, ಶುದ್ಧತಮವೆಂದು ಕರೆಯಲ್ಪಟ್ಟಿದೆ. **ಉತ್ತಮ** ಎಂದರೆ ದಿವ್ಯ. **ತಮಸ್** ಎಂದರೆ ಈ ಭೌತಿಕ ಜಗತ್ತು ಅಥವಾ ಕತ್ತಲೆ ಮತ್ತು **ಉತ್ತಮ** ಎಂದರೆ ಭೌತಿಕ ಚಟುವಟಿಕೆಗಳಿಗೆ ಅತೀತವಾದುದು ಎಂದು ಅರ್ಥ. ಕೆಲವು ಸಮಯಗಳಲ್ಲಿ ಭಕ್ತರು ಸಾಮಾನ್ಯ ಜನರಂತೆ ತೊಡಗಿರುವಂತೆ ಕಂಡರೂ ಕೂಡ, ಭಕ್ತಿಯುತ ಚಟುವಟಿಕೆಗಳನ್ನು ಎಂದಿಗೂ ಭೌತಿಕವೆಂದು ತಿಳಿಯಕೂಡದು. ಭಕ್ತಿಯುತ ಸೇವೆಯನ್ನು ನೋಡಬಲ್ಲವನು ಮತ್ತು ಚೆನ್ನಾಗಿ ತಿಳಿದವನು, ಅವುಗಳು ಭೌತಿಕ ಚಟುವಟಿಕೆಗಳಲ್ಲವೆಂದು ತಿಳಿಯುವನು. ಅವುಗಳೆಲ್ಲವೂ ಆಧ್ಯಾತ್ಮಿಕ ಮತ್ತು ಭಕ್ತಿಯುತ, ಮತ್ತು ಪ್ರಕೃತಿಯ ಭೌತಿಕ ಗುಣಗಳಿಂದ ಕಲುಷರಹಿತ.

ಭಕ್ತಿಯುತ ಸೇವಾಚರಣೆಯು ಅದೆಷ್ಟು ಪರಿಪೂರ್ಣವೆಂದರೆ ಒಬ್ಬನು ಫಲಗಳನ್ನು ಪ್ರತ್ಯಕ್ಷವಾಗಿ ಕಾಣಬಹುದು. ಈ ಪ್ರತ್ಯಕ್ಷ ಫಲವನ್ನು ವಾಸ್ತವಿಕವಾಗಿ ಕಾಣಬಹುದು, ಮತ್ತು ಕೃಷ್ಣನ ಪವಿತ್ರ ನಾಮಗಳನ್ನು (ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ/ ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ) ಜಪಿಸುತ್ತಿರುವವನು, ಅಪರಾಧರಹಿತವಾಗಿ ಜಪಿಸುವಾಗ ದಿವ್ಯಾನಂದವನ್ನು ಅನುಭವಿಸುವನು ಮತ್ತು ಬಹು ಶೀಘ್ರವಾಗಿ ಸಕಲ ಭೌತಿಕ ಕಲ್ಮಷಗಳಿಂದಲೂ ಶುದ್ಧನಾಗುವನು ಎಂಬ ಅನುಭವವು ನಮಗಿದೆ. ಇದು ವಾಸ್ತವಿಕವಾಗಿ ಕಂಡುಬಂದಿದೆ. ಇಷ್ಟೇ ಅಲ್ಲದೆ, ಒಬ್ಬನು ಭಕ್ತಿಯುತ ಚಟುವಟಿಕೆಗಳ ಸಂದೇಶದ ಶ್ರವಣದಲ್ಲಿ ನಿರತನಾಗುವುದು ಮಾತ್ರವಲ್ಲದೆ, ಅದರ ಪ್ರಸಾರದಲ್ಲಿ ಯತ್ನಿಸುತ್ತಿದ್ದರೂ, ಅಥವಾ ಕೃಷ್ಣಪ್ರಜ್ಞೆಯ ಧರ್ಮಪ್ರಚಾರ ಚಟುವಟಿಕೆಯಲ್ಲಿ ಸಹಾಯಮಾಡುವಲ್ಲಿ ತೊಡಗಿದ್ದರೂ, ಅವನು ಕ್ರಮೇಣ ಅಧ್ಯಾತ್ಮ ಪ್ರಗತಿಯನ್ನು ಅನುಭವಿಸುತ್ತಾನೆ. ಈ ಆಧ್ಯಾತ್ಮಿಕ ಜೀವನದಲ್ಲಿನ ಪ್ರಗತಿಯು ಯಾವುದೇ ಬಗೆಯ ಪೂರ್ವ ಶಿಕ್ಷಣ ಅಥವಾ ಅರ್ಹತೆಯನ್ನು ಅವಲಂಬಿಸಿರುವುದಿಲ್ಲ. ವಿಧಾನವು ಅದೆಷ್ಟು ಶುದ್ಧವೆಂದರೆ ಅದರಲ್ಲಿ ತೊಡಗುವ ಮಾತ್ರದಿಂದಲೇ ಒಬ್ಬನು ಶುದ್ಧನಾಗುತ್ತಾನೆ

ವೇದಾಂತಸೂತ್ರಗಳಲ್ಲಿ (3. 2. 26) ಇದನ್ನು ಕೂಡ ಹೀಗೆ ವರ್ಣಿಸಿದೆ: **ಪ್ರಕಾಶಶ್ಚ ಕರ್ಮಣಿ ಅಭ್ಯಾಸಾತ್.** "ಭಕ್ತಿಯುತ ಸೇವೆಯು ಅದೆಷ್ಟು ಶಕ್ತಿಯುತವೆಂದರೆ, ಭಕ್ತಿಯುತ ಸೇವಾ ಚಟುವಟಿಕೆಗಳಲ್ಲಿ ತೊಡಗುವ ಮಾತ್ರದಿಂದಲೇ ಒಬ್ಬನು ನಿಸ್ಸಂದೇಹವಾಗಿ ಜ್ಞಾನೋದಿತನಾಗುತ್ತಾನೆ." ಇದರ ನಿಜ ಉದಾಹರಣೆಯನ್ನು ನಾರದರ ಪೂರ್ವ ಜೀವನದಲ್ಲಿ ಕಾಣಬಹುದು; ಅವರು ಪೂರ್ವಜನ್ಮದಲ್ಲಿ ದಾಸೀಪುತ್ರರಾಗಿದ್ದರು. ಅವರಿಗೆ ಯಾವ ಶಿಕ್ಷಣವೂ ಇರಲಿಲ್ಲ, ಅಥವಾ ಅವರು ಉತ್ತಮ ಕುಟುಂಬದಲ್ಲಿ ಜನಿಸಿರಲಿಲ್ಲ. ಆದರೆ ಅವರ ತಾಯಿಯು ಮಹಾ ಭಕ್ತರ ಸೇವೆಯಲ್ಲಿ ನಿರತಳಾಗಿದ್ದಾಗ

ನಾರದರೂ ಸಹ ನಿರತರಾದರು, ಮತ್ತು ಕೆಲವು ಸಮಯಗಳಲ್ಲಿ, ತಮ್ಮ ತಾಯಿ ಇಲ್ಲದಿದ್ದಾಗ ತಾವೇ ಆ ಮಹಾ ಭಕ್ತರನ್ನು ಸೇವಿಸುತ್ತಿದ್ದರು. ಸ್ವಯಂ ನಾರದರು ಹೇಳುತ್ತಾರೆ,

ಉಚ್ಛಿಷ್ಟಲೇಪಾನ್ ಅನುಮೋದಿತೋ ದ್ವಿಜೈಃ
ಸಕೃತ್ ಸ್ಮ ಭುಂಜೇ ತದಪಾಸ್ತಕಿಲ್ಬಿಷಃ।
ಏವಂ ಪ್ರವೃತ್ತಸ್ಯ ವಿಶುದ್ಧ ಚೇತಸಸ್
ತದ್ಧರ್ಮ ಏವಾತ್ಮರುಚಿಃ ಪ್ರಜಾಯತೇ॥

ಶ್ರೀಮದ್ಭಾಗವತದ ಈ ಶ್ಲೋಕದಲ್ಲಿ (1. 5. 25) ನಾರದರು ತಮ್ಮ ಶಿಷ್ಯ ವೇದವ್ಯಾಸರಿಗೆ ತಮ್ಮ ಪೂರ್ವ ಜೀವನವನ್ನು ವಿವರಿಸುತ್ತಾರೆ. ಆ ಶುದ್ಧ ಭಕ್ತರ ಬಾಲಸೇವಕನಾಗಿ ನಿರತನಾಗಿದ್ದಾಗ, ಅವರು ತಂಗಿದ್ದ ನಾಲ್ಕು ತಿಂಗಳುಗಳು ತಾನು ಅವರೊಡನೆ ನಿಕಟವಾಗಿ ಸಾಹಚರ್ಯ ಮಾಡುತ್ತಿದ್ದೆನೆಂದು ಅವರು ಹೇಳುತ್ತಾರೆ. ಕೆಲವು ಸಮಯಗಳಲ್ಲಿ ಆ ಋಷಿಗಳು ತಮ್ಮ ತಟ್ಟೆಗಳಲ್ಲಿ ಆಹಾರದ ಶೇಷವನ್ನು ಬಿಟ್ಟಿರುತ್ತಿದ್ದರು, ಮತ್ತು ಅವರ ತಟ್ಟೆಗಳನ್ನು ತೊಳೆಯುವ ಹುಡುಗನಾಗಿ ಆ ಶೇಷವನ್ನು ರುಚಿನೋಡಲು ನಾರದರು ಬಯಸಿದರು. ಹಾಗೆ ಅವರು ಆ ಮಹಾ ಭಕ್ತರ ಅನುಮತಿ ಕೇಳಿದರು, ಮತ್ತು ಅವರು ಅನುಮತಿಸಿದಾಗ, ನಾರದರು ಆ ಶೇಷವನ್ನು ತಿಂದರು ಮತ್ತು ಅದರ ಪರಿಣಾಮವಾಗಿ ಸಕಲ ಪಾಪ ಪ್ರತಿಕ್ರಿಯೆಗಳಿಂದ ಮುಕ್ತರಾದರು. ಅವರು ತಿನ್ನುತ್ತಾ ಹೋದಂತೆ, ಅವರು ಋಷಿಗಳಂತೆ ಕ್ರಮೇಣ ಶುದ್ಧ ಹೃದಯನಾದರು. ಆ ಮಹಾಭಕ್ತರು ಭಗವಂತನನ್ನು ಕುರಿತು ಶ್ರವಣ ಮತ್ತು ಕೀರ್ತನದ ನಿರಂತರ ಭಗವತ್ಸೇವೆಯ ರುಚಿಯನ್ನು ಆಸ್ವಾದಿಸಿದರು, ಮತ್ತು ನಾರದರು ಕ್ರಮೇಣ ಅದೇ ರುಚಿಯನ್ನು ಬೆಳೆಸಿಕೊಂಡರು. ನಾರದರು ಮತ್ತೆ ಹೇಳುತ್ತಾರೆ,

ತತ್ರಾನ್ವಹಂ ಕೃಷ್ಣಕಥಾಃ ಪ್ರಗಾಯತಾಮ್
ಅನುಗ್ರಹೇಣಾಶೃಣವಂ ಮನೋಹರಾಃ।
ತಾಃ ಶ್ರದ್ಧಯಾ ಮೇಽನುಪದಂ ವಿಶೃಣ್ವತಃ
ಪ್ರಿಯಶ್ರವಸ್ಯಙ್ಗ ಮಮಾಭವದ್ ರುಚಿಃ॥

ಋಷಿಗಳೊಡನೆ ಸಹವಾಸಮಾಡಿ ನಾರದರು ಭಗವಂತನ ಮಹಿಮೆಗಳ ಶ್ರವಣ ಕೀರ್ತನದ ರುಚಿಯನ್ನು ಪಡೆದರು, ಮತ್ತು ಭಕ್ತಿಯುತ ಸೇವೆಗಾಗಿ ಮಹದಾಸೆಯನ್ನು ಬೆಳೆಸಿಕೊಂಡರು. ಆದ್ದರಿಂದ **ಪ್ರಕಾಶಶ್ಚ ಕರ್ಮಣಿ ಅಭ್ಯಾಸಾತ್** ಎಂದು ವೇದಾಂತ ಸೂತ್ರದಲ್ಲಿ ವರ್ಣಿಸಿದಂತೆ, ಒಬ್ಬನು ಭಕ್ತಿಯುತ ಸೇವಾಕಾರ್ಯಗಳಲ್ಲಿ ಸುಮ್ಮನೆ ನಿರತನಾಗುವುದರಿಂದಲೇ ಪ್ರತಿಯೊಂದೂ ಅವನಿಗೆ ತನ್ನಷ್ಟಕ್ಕೆ ತಾನೇ ಪ್ರಕಾಶಿತವಾಗುವುದು ಮತ್ತು ಅವನು ಅರಿತುಕೊಳ್ಳಬಲ್ಲನು. ಇದನ್ನು **ಪ್ರತ್ಯಕ್ಷ,** ನೇರವಾಗಿ ಅರಿಯುವುದು ಎಂದು ಕರೆದಿದೆ.

**ಧರ್ಮ್ಯಮ್** ಎಂದರೆ "ಧರ್ಮಮಾರ್ಗ" ಎಂದು ಅರ್ಥ. ನಾರದರು ವಾಸ್ತವಿಕವಾಗಿ ದಾಸೀಪುತ್ರ. ಅವರಿಗೆ ಶಾಲೆಗೆ ಹೋಗುವ ಅವಕಾಶವಿರಲಿಲ್ಲ. ಅವರು ಸುಮ್ಮನೆ

ತಾಯಿಗೆ ಸಹಾಯಮಾಡುತ್ತಿದ್ದರು, ಮತ್ತು ಸುದೈವದಿಂದ ಅವರ ತಾಯಿಯು ಭಕ್ತರಿಗೆ ಕಿಂಚಿತ್ ಸೇವೆ ಮಾಡುತ್ತಿದ್ದಳು. ಮಗುವಾಗಿದ್ದ ನಾರದರೂ ಕೂಡ ಅವಕಾಶ ಪಡೆದರು ಮತ್ತು ಸಹವಾಸ ಮಾತ್ರದಿಂದಲೇ ಸರ್ವಧರ್ಮಗಳ ಅತ್ಯುನ್ನತ ಗುರಿಯನ್ನು ಸಾಧಿಸಿದರು ಸಕಲ ಧರ್ಮಗಳ ಅತ್ಯುನ್ನತ ಗುರಿಯು, ಶ್ರೀಮದ್ಭಾಗವತದಲ್ಲಿ ಹೇಳಿರುವಂತೆ ಭಕ್ತಿ ಯುತ ಸೇವೆ. (**ಸ ವೈ ಪುಂಸಾಂ ಪರೋ ಧರ್ಮೋ ಯತೋ ಭಕ್ತಿರ್ ಅಧೋಕ್ಷಜೇ**). ಧಾರ್ಮಿಕ ಜನರಿಗೆ ಸಾಮಾನ್ಯವಾಗಿ ಭಕ್ತಿಯುತ ಸೇವಾ ಪ್ರಾಪ್ತಿಯು ಧರ್ಮದ ಅತ್ಯುನ್ನತ ಪರಿಪೂರ್ಣತೆ ಎಂಬುದು ತಿಳಿದಿರುವುದಿಲ್ಲ. ನಾವು ಈಗಾಗಲೇ ಎಂಟನೆಯ ಅಧ್ಯಾಯದ ಕೊನೆಯ ಶ್ಲೋಕವನ್ನು ಕುರಿತು ಚರ್ಚಿಸಿದಂತೆ (**ವೇದೇಷು ಯಜ್ಞೇಷು ತಪಃಸು ಚೈವ**), ಸಾಮಾನ್ಯವಾಗಿ ಆತ್ಮ ಸಾಕ್ಷಾತ್ಕಾರಕ್ಕೆ ವೇದಜ್ಞಾನವು ಅಗತ್ಯ. ಆದರೆ ಇಲ್ಲಿ ನಾರದರು, ಗುರುಕುಲಕ್ಕೆ ಎಂದೂ ಹೋಗಿರದಿದ್ದರೂ ಮತ್ತು ವೇದತತ್ವಗಳಲ್ಲಿ ಶಿಕ್ಷಿತರಲ್ಲದಿದ್ದರೂ, ಅವರು ವೇದಾಧ್ಯಯನದ ಅತ್ಯುನ್ನತ ಫಲಗಳನ್ನು ಆರ್ಜಿಸಿದರು. ಈ ಪ್ರಕ್ರಿಯೆಯು ಅದೆಷ್ಟು ಶಕ್ತಿಯುತವೆಂದರೆ, ತಪ್ಪದೇ ಧಾರ್ಮಿಕ ಪ್ರಕ್ರಿಯೆಗಳನ್ನು ಆಚರಿಸದಿದ್ದರೂ, ಒಬ್ಬನು ಅತ್ಯುನ್ನತ ಪರಿಪೂರ್ಣತೆಗೆ ಏರಿಸಲ್ಪಡುವವನು. ಇದು ಹೇಗೆ ಸಾಧ್ಯ ? ಇದೂ ಕೂಡ ವೇದ ಸಾಹಿತ್ಯದಲ್ಲಿ **ಆಚಾರ್ಯವಾನ್ ಪುರುಷೋ ವೇದ** ಎಂದು ದೃಢಪಟ್ಟಿದೆ. ಮಹಾ ಆಚಾರ್ಯರ ಸಹವಾಸದಲ್ಲಿದ್ದವನು, ಅವನು ಶಿಕ್ಷಿತನಲ್ಲದಿದ್ದರೂ ಅಥವಾ ಎಂದಿಗೂ ವೇದಾಧ್ಯಯನವನ್ನು ಮಾಡಿರದಿದ್ದರೂ, ಸಾಕ್ಷಾತ್ಕಾರಕ್ಕೆ ಅವಶ್ಯವಾದ ಸಕಲ ಜ್ಞಾನದೊಡನೆ ಪರಿಚಿತನಾಗಬಲ್ಲನು.

ಭಕ್ತಿಯುತ ಸೇವಾ ಪ್ರಕ್ರಿಯೆಯು ಬಹುಸುಖಕರವಾದದು (**ಸುಸುಖವ್**). ಏಕೆ? ಭಕ್ತಿಯುತ ಸೇವೆಯು **ಶ್ರವಣಂ ಕೀರ್ತನಂ ವಿಷ್ಣೋಃ** ಒಳಗೊಂಡಿದೆ, ಹಾಗೆ ಒಬ್ಬನು ಸುಮ್ಮನೆ ಭಗವಂತನ ಮಹಿಮೆಗಳ ಕೀರ್ತನೆಯನ್ನು ಶ್ರವಣಮಾಡಬಹುದು ಅಥವಾ ಅಧಿಕೃತ ಆಚಾರ್ಯರಿಂದ ನೀಡಲ್ಪಡುವ ದಿವ್ಯ ಜ್ಞಾನವನ್ನು ಕುರಿತು ತಾತ್ವಿಕ ಉಪನ್ಯಾಸ ಗಳಿಗೆ ಹೋಗಬಹುದು. ಸುಮ್ಮನೆ ಕುಳಿತುಕೊಂಡೇ, ಒಬ್ಬನು ಕಲಿಯಬಹುದು; ಆ ಮೇಲೆ ಭಗವದರ್ಪಿತ ರುಚಿಕರ ಪ್ರಸಾದ ಶೇಷವನ್ನು ತಿನ್ನಬಹುದು. ಪ್ರತಿಯೊಂದು ಸ್ಥಿತಿಯಲ್ಲಿಯೂ ಭಕ್ತಿಯುತ ಸೇವೆಯು ಆಹ್ಲಾದಕರ. ಒಬ್ಬನು ಕಡುಬಡತನದ ಸ್ಥಿತಿ ಯಲ್ಲಿಯೂ ಕೂಡ ಭಕ್ತಿಯುತ ಸೇವೆಯನ್ನು ಆಚರಿಸಬಹುದು. ಭಗವಂತನು **ಪತ್ರಂ ಪುಷ್ಪಂ ಫಲಂ ತೋಯಮ್**, ಎನ್ನುತ್ತಾನೆ : ಭಕ್ತನಿಂದ, ಯಾವುದೇ ಬಗೆಯ ಅರ್ಪಣೆಯನ್ನು, ಅದೇನೇ ಇರಲಿ, ಸ್ವೀಕರಿಸಲು ಅವನು ಸಿದ್ಧ. ಒಂದು ಎಲೆ, ಒಂದು ಹೂವು, ಹಣ್ಣಿನ ಒಂದು ಚೂರು, ಅಥವಾ ಸ್ವಲ್ಪ ನೀರು, ಇವು ಜಗತ್ತಿನ ಎಲ್ಲ ಭಾಗ ಗಳಲ್ಲಿ ಲಭ್ಯವಾಗಿದ್ದು, ಸಾಮಾಜಿಕ ಸ್ಥಾನಮಾನದ ಭೇದವಿಲ್ಲದೆ ಯಾವ ವ್ಯಕ್ತಿಯಿಂದ ಲಾದರೂ ಅರ್ಪಿಸಲ್ಪಡಬಹುದು, ಮತ್ತು ಪ್ರೀತಿಯಿಂದ ಕೊಟ್ಟರೆ ಸ್ವೀಕರಿಸಲ್ಪಡು ವುದು. ಇತಿಹಾಸದಲ್ಲಿ ಇಂಥ ಅನೇಕ ಉದಾಹರಣೆಗಳಿವೆ. ಭಗವಂತನ ಚರಣಾರವಿಂದ ಗಳಿಗೆ ಅರ್ಪಿತ ತುಲಸೀ ಪತ್ರಗಳ ಆಸ್ವಾದನೆಯಿಂದಲೇ ಸನತ್ಕುಮಾರರಂಥ ಮಹರ್ಷಿ ಗಳು ಮಹಾಭಕ್ತರಾದರು. ಆದ್ದರಿಂದ ಭಕ್ತಿಯುತ ಪ್ರಕ್ರಿಯೆಯು ಬಹು ಸೊಗಸು,

ಮತ್ತು ಅದನ್ನು ಆನಂದ ಭಾವದಲ್ಲಿ ಆಚರಿಸಬಹುದು. ಭಗವಂತನು, ಅವನಿಗೆ ಅರ್ಪಿಸಿದ ವಸ್ತುಗಳೊಂದಿಗೆ ಇರುವ ಪ್ರೀತಿಯನ್ನು ಮಾತ್ರ ಸ್ವೀಕರಿಸುತ್ತಾನೆ.

ಈ ಭಕ್ತಿಯುತ ಸೇವೆಯು ಶಾಶ್ವತವಾಗಿ ಇರುವುದೆಂದು ಇಲ್ಲಿ ಹೇಳಿದೆ. ಅದು ಮಾಯಾವಾದಿ ತತ್ವಜ್ಞಾನಿಗಳು ಹೇಳುವಂತೆ ಅಲ್ಲ. ಕೆಲವು ಸಮಯಗಳಲ್ಲಿ ಅವರೂ ಭಕ್ತಿಯುತ ಸೇವೆ ಎನಿಸಿರುವುದನ್ನು ಕೈಗೆತ್ತಿಕೊಳ್ಳುತ್ತಾರೆ ; ಅವರ ಅಭಿಪ್ರಾಯವು ಅವರು ಮುಕ್ತರಾಗದವರೆಗೆ ಅವರು ತಮ್ಮ ಭಕ್ತಿಯುತ ಸೇವೆ ಮುಂದುವರಿಸುವುದು, ಆದರೆ ಕೊನೆಯಲ್ಲಿ, ಅವರು ಮುಕ್ತರಾದಾಗ, "ಅವರು ದೇವರೊಂದಿಗೆ ಒಂದಾಗುತ್ತಾರೆ". ಇಂಥ ತಾತ್ಕಾಲಿಕ ಸಮಯಾನುವರ್ತಿ ಭಕ್ತಿಯುತ ಸೇವೆಯು ಶುದ್ಧ ಭಕ್ತಿಯುತ ಸೇವೆಯಾಗಿ ಸ್ವೀಕರಿಸಲ್ಪಡುವುದಿಲ್ಲ. ವಾಸ್ತವಿಕ ಭಕ್ತಿಯುತ ಸೇವೆಯು ಮೋಕ್ಷಾನಂತರವೂ ಮುಂದುವರಿಯುತ್ತದೆ. ಭಕ್ತನು ಭಗವಂತನ ಅಧ್ಯಾತ್ಮಲೋಕದಲ್ಲಿ ಧಾಮಕ್ಕೆ ಹೋದಾಗ, ಅವನು ಅಲ್ಲಿಯೂ ಕೂಡ ಪರಮ ಪ್ರಭುವಿನ ಸೇವಾನಿರತನಾಗುತ್ತಾನೆ. ಅವನು ಪರಮ ಪ್ರಭುವಿನೊಂದಿಗೆ ಒಂದಾಗಲು ಯತ್ನಿಸುವುದಿಲ್ಲ.

ಭಗವದ್ಗೀತೆಯಲ್ಲಿ ಕಾಣುವಂತೆ, ವಾಸ್ತವಿಕ ಭಕ್ತಿಯುತ ಸೇವೆಯು ಮೋಕ್ಷಾನಂತರ ಪ್ರಾರಂಭವಾಗುತ್ತದೆ. ಒಬ್ಬನು ಮುಕ್ತನಾದ ತರುವಾಯ, ಬ್ರಹ್ಮನ್ ಸ್ಥಿತಿಯಲ್ಲಿ ಸನ್ನಿವೇಶಿತನಾದಾಗ (**ಬ್ರಹ್ಮಭೂತ**), ಒಬ್ಬನ ಭಕ್ತಿಯುತ ಸೇವೆಯು ಪ್ರಾರಂಭವಾಗುತ್ತದೆ(**ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್**).ಯಾವನೂ ಸ್ವತಂತ್ರವಾಗಿ **ಕರ್ಮಯೋಗ, ಜ್ಞಾನಯೋಗ, ಅಷ್ಟಾಂಗಯೋಗ** ಅಥವಾ ಯಾವುದೇ ಇತರ ಯೋಗವನ್ನಾಚರಿಸಿ ಪರಮ ದೇವೋತ್ತಮ ಪುರುಷನನ್ನು ಅರಿತುಕೊಳ್ಳಲಾರನು. ಈ ಯೋಗ ವಿಧಾನಗಳಿಂದ ಒಬ್ಬನು ಭಕ್ತಿಯೋಗದ ಕಡೆಗೆ ಕಿಂಚಿತ್ ಪ್ರಗತಿ ಸಾಧಿಸಬಹುದು, ಆದರೆ ಭಕ್ತಿಯುತ ಸೇವಾ ಮಟ್ಟಕ್ಕೆ ಬಾರದೆ, ಒಬ್ಬನು ದೇವೋತ್ತಮ ಪುರುಷನು ಏನೆಂಬುದನ್ನು ಅರಿತುಕೊಳ್ಳಲಾರನು. ಒಬ್ಬನು ಭಕ್ತಿಯೋಗ ಪ್ರಕ್ರಿಯೆಯ ಆಚರಣೆಯಿಂದ, ವಿಶೇಷವಾಗಿ ಸಾಕ್ಷಾತ್ಕಾರಿಗಳಿಂದ ಶ್ರೀಮದ್ಭಾಗವತ ಅಥವಾ ಭಗವದ್ಗೀತೆಯ ಶ್ರವಣದಿಂದ ಶುದ್ಧನಾದಾಗ, ಅವನು ಕೃಷ್ಣ ವಿಜ್ಞಾನವನ್ನು ಅಥವಾ ಭಗವದ್ವಿಜ್ಞಾನವನ್ನು ಅರಿತುಕೊಳ್ಳಬಲ್ಲನು ಎಂದು ಶ್ರೀಮದ್ಭಾಗವತದಲ್ಲಿಯೂ ದೃಢಪಟ್ಟಿದೆ. **ಏವಂ ಪ್ರಸನ್ನ-ಮನಸೋ ಭಗವದ್ಭಕ್ತಿಯೋಗತಃ.** ಒಬ್ಬನ ಹೃದಯದಲ್ಲಿನ ಎಲ್ಲ ಅನರ್ಥಗಳು ತೊಲಗಿದಾಗ, ದೇವರು ಏನೆಂಬುದನ್ನು ಒಬ್ಬನು ಅರಿತುಕೊಳ್ಳಬಲ್ಲನು. ಹೀಗೆ ಕೃಷ್ಣ ಪ್ರಜ್ಞಾ ವಿಧಾನವು ಅಥವಾ ಭಕ್ತಿಯುತ ಸೇವಾ ಪ್ರಕ್ರಿಯೆಯು, ಸಕಲ ಶಿಕ್ಷಣದ ರಾಜ ಮತ್ತು ಎಲ್ಲ ಗುಹ್ಯತಮ ಜ್ಞಾನದ ರಾಜ. ಅದು ಧರ್ಮದ ಅತ್ಯಂತ ಶುದ್ಧ ರೂಪ, ಮತ್ತು ಅದನ್ನು ತೊಂದರೆಯಿಲ್ಲದೆ ಆನಂದದಿಂದ ನಿರ್ವಹಿಸಬಹುದು. ಆದ್ದರಿಂದ ಒಬ್ಬನು ಅದನ್ನು ಅಂಗೀಕರಿಸಬೇಕು.

**ಅಶ್ರದ್ಧಧಾನಾಃ ಪುರುಷಾ ಧರ್ಮಸ್ಯಾಸ್ಯ ಪರನ್ತಪ ।**
**ಅಪ್ರಾಪ್ಯ ಮಾಂ ನಿವರ್ತನ್ತೇ ಮೃತ್ಯುಸಂಸಾರವರ್ತ್ಮನಿ ॥೩॥**

ಅಶ್ರದ್ದಧಾನಾಃ—ಶ್ರದ್ಧಾಹೀನರು, ಪುರುಷಾಃ—ಅಂಥ ವ್ಯಕ್ತಿಗಳು, ಧರ್ಮಸ್ಯ—ಧರ್ಮ ಪ್ರಕ್ರಿಯೆಯ ಕಡೆಗೆ, ಅಸ್ಯ—ಈ, ಪರನ್ತಪ—ಹೇ ಶತ್ರುಸೂದನನೇ, ಅಪ್ರಾಪ್ಯ—ಪಡೆಯದೆ, ಮಾಮ್—ನನ್ನನ್ನು, ನಿವರ್ತನ್ತೇ—ಹಿಂದಿರುಗುತ್ತಾರೆ, ಮೃತ್ಯು—ಸಾವಿನ, ಸಂಸಾರ—ಭೌತಿಕ ಅಸ್ತಿತ್ವದಲ್ಲಿ, ವರ್ತ್ಮನಿ—ಪಥದಲ್ಲಿ.

**ಈ ಭಕ್ತಿಯುತ ಸೇವೆಯಲ್ಲಿ ಶ್ರದ್ಧೆಯಿಲ್ಲದವರು ನನ್ನನ್ನು ಹೊಂದಲಾರರು. ಹೇ ಶತ್ರುಸೂದನನೇ, ಆದ್ದರಿಂದ ಅವರು ಈ ಭೌತಿಕ ಜಗತ್ತಿನಲ್ಲಿ ಜನನ ಮರಣಗಳ ಪಥಕ್ಕೆ ಹಿಂದಿರುಗುತ್ತಾರೆ.**

**ಭಾವಾರ್ಥ :** ಶ್ರದ್ಧಾಹೀನರು ಈ ಭಕ್ತಿಯುತ ಸೇವಾ ಪ್ರಕ್ರಿಯೆಯನ್ನು ಸಾಧಿಸಲಾರರು; ಅದು ಈ ಶ್ಲೋಕದ ತಾತ್ಪರ್ಯ. ಶ್ರದ್ಧೆಯು ಭಕ್ತರ ಸಹವಾಸದಿಂದ ಹುಟ್ಟುತ್ತದೆ. ಭಾಗ್ಯಹೀನರು ಮಹಾತ್ಮರಿಂದ ವೇದಸಾಹಿತ್ಯದ ಪ್ರಮಾಣವನ್ನೆಲ್ಲಾ ಶ್ರವಣ ಮಾಡಿದ ಮೇಲೆಯೂ ದೇವರಲ್ಲಿ ಶ್ರದ್ಧೆ ಹೊಂದಿರುವುದಿಲ್ಲ. ಅವರು ಅನಿಶ್ಚಿತರು ಮತ್ತು ಭಗವಂತನ ಭಕ್ತಿಯುತ ಸೇವೆಯಲ್ಲಿ ಸ್ಥಿತರಾಗಿರಲಾರರು. ಹೀಗೆ ಕೃಷ್ಣ ಪ್ರಜ್ಞಾ ಪ್ರಗತಿಗೆ ಶ್ರದ್ಧೆಯು ಅತಿ ಮುಖ್ಯ. ಪರಮ ಪ್ರಭು, ಶ್ರೀಕೃಷ್ಣನನ್ನು ಸೇವಿಸುವ ಮಾತ್ರದಿಂದಲೇ ಒಬ್ಬನು ಎಲ್ಲ ಪರಿಪೂರ್ಣತೆಯನ್ನು ಹೊಂದಬಲ್ಲನೆಂಬ ಸಂಪೂರ್ಣ ವಿಶ್ವಾಸವೇ ಶ್ರದ್ಧೆ ಎಂದು ಚೈತನ್ಯ ಚರಿತಾಮೃತದಲ್ಲಿ ಹೇಳಿದೆ. ಅದು ನಿಜವಾದ ಶ್ರದ್ಧೆ ಎಂದು ಕರೆಯಲ್ಪಡುವುದು. ಶ್ರೀಮದ್ ಭಾಗವತದಲ್ಲಿ (4. 31. 14) ಹೇಳಿರುವಂತೆ :

ಯಥಾ ತರೋರ್ ಮೂಲನಿಷೇಚನೇನ
ತೃಪ್ಯನ್ತಿ ತತ್ಸ್ಕಂಧಭುಜೋಪಶಾಖಾಃ।
ಪ್ರಾಣೋಪಹಾರಾಚ್ಚ ಯಥೇನ್ದ್ರಿಯಾಣಾಂ
ತಥೈವ ಸರ್ವಾರ್ಹಣಮ್ ಅಚ್ಯುತೇಜ್ಯಾ॥

"ಮರದ ಬೇರಿಗೆ ನೀರೆರೆದು ಒಬ್ಬನು ಅದರ ಶಾಖೆಗಳು, ಚಿಗುರು ಮತ್ತು ಎಲೆಗಳನ್ನು ತೃಪ್ತಿಪಡಿಸುತ್ತಾನೆ, ಮತ್ತು ಹೊಟ್ಟೆಗೆ ಆಹಾರ ಒದಗಿಸಿ ಒಬ್ಬನು ದೇಹದ ಎಲ್ಲ ಇಂದ್ರಿಯಗಳನ್ನು ತೃಪ್ತಿಪಡಿಸುತ್ತಾನೆ. ಅದೇ ಪ್ರಕಾರ, ಪರಮ ಪ್ರಭುವಿನ ದಿವ್ಯ ಸೇವೆಯಲ್ಲಿ ನಿರತನಾಗಿ ಒಬ್ಬನು ತಾನಾಗಿಯೇ ಎಲ್ಲ ದೇವತೆಗಳನ್ನು ಮತ್ತು ಎಲ್ಲ ಇತರ ಜೀವಿಗಳನ್ನು ತೃಪ್ತಿಪಡಿಸುತ್ತಾನೆ." ಆದ್ದರಿಂದ, ಭಗವದ್ಗೀತೆಯನ್ನು ಓದಿದ ಬಳಿಕ ಒಬ್ಬನು ಕೂಡಲೇ ಭಗವದ್ಗೀತೆಯ ನಿರ್ಣಯಕ್ಕೆ ಬರಬೇಕು : ಒಬ್ಬನು ಎಲ್ಲ ಇತರ ತೊಡಗುವಿಕೆಗಳನ್ನು ತ್ಯಜಿಸಬೇಕು ಮತ್ತು ಪರಮ ಪ್ರಭು ದೇವೋತ್ತಮ ಪುರುಷ ಕೃಷ್ಣನ ಸೇವೆಯನ್ನು ಅಂಗೀಕರಿಸಬೇಕು. ಒಬ್ಬನು ಜೀವನದ ಈ ತತ್ತ್ವವನ್ನು ಮನಗಂಡರೆ, ಅದು ಶ್ರದ್ಧೆ.

ಈಗ, ಆ ಶ್ರದ್ಧೆಯ ವರ್ಧನೆಯು ಕೃಷ್ಣ ಪ್ರಜ್ಞಾ ಪ್ರಕ್ರಿಯೆ. ಕೃಷ್ಣ ಪ್ರಜ್ಞಾವಂತರಲ್ಲಿ ಮೂರು ವಿಭಾಗಗಳಿವೆ. ಶ್ರದ್ಧಾರಹಿತರು ಮೂರನೆಯ ವರ್ಗದಲ್ಲಿರುವರು. ಅವರು **ಬಾಹ್ಯವಾಗಿ ಭಕ್ತಿಯುತ ಸೇವೆಯಲ್ಲಿ ನಿರತರಾಗಿದ್ದರೂ, ಅವರು ಅತ್ಯುನ್ನತ ಪರಿ**

ಪೂರ್ಣತೆಯ ಮಟ್ಟವನ್ನು ಸಾಧಿಸಲಾರರು. ಬಹುಮಟ್ಟಿಗೆ ಅವರು ಕೆಲಸಮಯಾನಂತರ ಬಿಟ್ಟು ಹೋಗುತ್ತಾರೆ. ಅವರು ನಿರತರಾಗಬಹುದಾದರೂ ಅವರು ಸಂಪೂರ್ಣ ನಿಶ್ಚಿತ ಅಭಿಪ್ರಾಯ ಮತ್ತು ಶ್ರದ್ಧೆ ಹೊಂದಿರುವುದಿಲ್ಲವಾದ್ದರಿಂದ, ಕೃಷ್ಣ ಪ್ರಜ್ಞೆಯಲ್ಲಿ ಮುಂದುವರಿಯುವುದು ಅವರಿಗೆ ಬಹಳ ಕಷ್ಟ. ನಮ್ಮ ಧಾರ್ಮಿಕ ಕಾರ್ಯಕಲಾಪಗಳನ್ನು ನಿರ್ವಹಿಸುವುದರಲ್ಲಿ ನಮಗೆ ಇದರ ವ್ಯಾವಹಾರಿಕ ಅನುಭವವಿದೆ. ಕೆಲವು ಜನರು ಏನೋ ಅಂತರ್ಗತ ಉದ್ದೇಶದಿಂದ ಕೃಷ್ಣ ಪ್ರಜ್ಞೆಗೆ ಬರುತ್ತಾರೆ ಮತ್ತು ಅದಕ್ಕೆ ತಮ್ಮನ್ನು ಅನ್ವಯಿಸಿಕೊಳ್ಳುತ್ತಾರೆ, ಮತ್ತು ಅವರು ಆರ್ಥಿಕವಾಗಿ ಸ್ವಲ್ಪ ಸುಸನ್ನಿವೇಶಿತರಾದೊಡನೆಯೇ ಅವರು ಈ ಪ್ರಕ್ರಿಯೆಯನ್ನು ತ್ಯಜಿಸುತ್ತಾರೆ ಮತ್ತು ತಮ್ಮ ಹಳೆಯ ದಾರಿಗೆ ಮತ್ತೆ ಹೋಗುತ್ತಾರೆ. ಶ್ರದ್ಧೆಯಿಂದ ಮಾತ್ರವೇ ಒಬ್ಬನು ಕೃಷ್ಣ ಪ್ರಜ್ಞೆಯಲ್ಲಿ ಪ್ರಗತಿ ಸಾಧಿಸಬಲ್ಲನು. ಶ್ರದ್ಧಾ ಬೆಳವಣಿಗೆಯ ವಿಷಯದಲ್ಲಿ, ಭಕ್ತಿಯುತ ಸೇವಾ ಸಾಹಿತ್ಯದಲ್ಲಿ ಚೆನ್ನಾಗಿ ಪರಿಶ್ರಮವಿರುವ ಮತ್ತು ಧೃಡ ಶ್ರದ್ಧೆಯ ಹಂತವನ್ನು ತಲುಪಿರುವವನನ್ನು ಕೃಷ್ಣ ಪ್ರಜ್ಞೆಯ ಪ್ರಥಮ ಶ್ರೇಣಿಯ ವ್ಯಕ್ತಿ ಎಂದು ಕರೆದಿದೆ. ಭಕ್ತಿ ಶಾಸ್ತ್ರಗಳನ್ನು ಅರಿತುಕೊಳ್ಳುವಲ್ಲಿ ಹೆಚ್ಚು ಮುಂದುವರಿಯದ, ಆದರೆ ತಾನಾಗಿಯೇ ಕೃಷ್ಣ ಭಕ್ತಿ ಅಥವಾ ಕೃಷ್ಣ ಸೇವೆಯೇ ಶ್ರೇಷ್ಠ ಮಾರ್ಗ ಎಂಬ ದೃಢ ಶ್ರದ್ಧೆಯುಳ್ಳ, ಮತ್ತು ಹಾಗೆ ಒಳ್ಳೆಯ ಶ್ರದ್ಧೆಯಲ್ಲಿ ಅದನ್ನು ಅಂಗೀಕರಿಸಿದವರು ಎರಡನೆಯ ಶ್ರೇಣಿಯಲ್ಲಿರುವವರು. ಹೀಗೆ ಅವರು, ಶಾಸ್ತ್ರಗಳ ಪರಿಪೂರ್ಣಜ್ಞಾನವೂ ಇಲ್ಲದೆ ಅಥವಾ ಒಳ್ಳೆಯ ಶ್ರದ್ಧೆಯೂ ಇಲ್ಲದೆ, ಆದರೆ ಸಹವಾಸದಿಂದ ಮತ್ತು ಸರಳತೆಯಿಂದ ಅನುಸರಿಸಲು ಯತ್ನಿಸುತ್ತಿರುವ ಮೂರನೆಯ ಶ್ರೇಣಿಯವರಿಗಿಂತ ಉತ್ತಮರು. ಕೃಷ್ಣ ಪ್ರಜ್ಞೆಯ ಮೂರನೆಯ ಶ್ರೇಣಿಯವನು ಪತನ ಹೊಂದಬಹುದು, ಆದರೆ ಒಬ್ಬನು ಎರಡನೆಯ ಶ್ರೇಣಿಯಲ್ಲಿದ್ದಾಗ, ಪತನ ಹೊಂದುವುದಿಲ್ಲ, ಮತ್ತು ಕೃಷ್ಣ ಪ್ರಜ್ಞೆಯಲ್ಲಿ ಪ್ರಥಮ ಶ್ರೇಣಿಯಲ್ಲಿರುವವನಿಗೆ ಪತನ ಹೊಂದುವ ಅವಕಾಶವೇ ಇಲ್ಲ. ಪ್ರಥಮ ಶ್ರೇಣಿಯವನು ಖಂಡಿತ ಪ್ರಗತಿ ಹೊಂದುತ್ತಾನೆ ಮತ್ತು ಕೊನೆಗೆ ಫಲವನ್ನೂ ಹೊಂದುತ್ತಾನೆ. ಕೃಷ್ಣ ಪ್ರಜ್ಞೆಯಲ್ಲಿ ಮೂರನೆಯ ಶ್ರೇಣಿಯವನ ಮಟ್ಟಿಗಾದರೋ, ಕೃಷ್ಣನ ಭಕ್ತಿಯುತ ಸೇವೆಯು ಬಹಳ ಒಳ್ಳೆಯದೆಂಬ ನಂಬಿಕೆಯಲ್ಲಿ ಶ್ರದ್ಧೆಯಿದ್ದರೂ, ಅವನು ಶ್ರೀಮದ್ಭಾಗವತ ಮತ್ತು ಭಗವದ್ಗೀತೆಯಂಥ ಶಾಸ್ತ್ರಗಳ ಮೂಲಕ ಇನ್ನೂ ಸಾಕಷ್ಟು ಜ್ಞಾನವನ್ನು ಹೊಂದಿರುವುದಿಲ್ಲ. ಕೃಷ್ಣ ಪ್ರಜ್ಞೆಯ ಈ ಮೂರನೆಯ ಶ್ರೇಣಿಯ ವ್ಯಕ್ತಿಗಳು ಕೆಲವು ಸಮಯಗಳಲ್ಲಿ, ಕರ್ಮ-ಯೋಗ ಮತ್ತು ಜ್ಞಾನ-ಯೋಗದ ಕಡೆ ಸ್ವಲ್ಪ ಪ್ರವೃತ್ತಿ ಹೊಂದಿರುವರು, ಮತ್ತೆ ಕೆಲವು ಸಮಯಗಳಲ್ಲಿ ಅವರು ಕ್ಷೋಭಿತರಾಗುವರು. ಆದರೆ ಕರ್ಮಯೋಗ ಮತ್ತು ಜ್ಞಾನ-ಯೋಗದ ಸೋಂಕು ಮಾಯವಾದೊಡನೆಯೇ ಅವರು ಕೃಷ್ಣ ಪ್ರಜ್ಞೆಯಲ್ಲಿ ಎರಡನೆಯ ಅಥವಾ ಮೊದಲನೆಯ ಶ್ರೇಣಿಯವರಾಗುತ್ತಾರೆ. ಕೃಷ್ಣನಲ್ಲಿನ ಶ್ರದ್ಧೆಯು ಕೂಡ ಮೂರು ಹಂತಗಳಲ್ಲಿ ವಿಭಜಿತವಾಗಿದೆ, ಮತ್ತು ಶ್ರೀಮದ್ಭಾಗವತದಲ್ಲಿ ವರ್ಣಿತವಾಗಿದೆ. ಮೊದಲನೆಯ ವರ್ಗದ ಆಸಕ್ತಿ, ಎರಡನೆಯ ವರ್ಗದ ಆಸಕ್ತಿ ಮತ್ತು ಮೂರನೆಯ ವರ್ಗದ ಆಸಕ್ತಿಗಳು ಕೂಡ ಶ್ರೀಮದ್ಭಾಗವತದ ಹನ್ನೊಂದನೆಯ ಸ್ಕಂಧದಲ್ಲಿ ವರ್ಣಿಸ

ಲ್ಪಟ್ಟಿವೆ. ಕೃಷ್ಣನ ಮತ್ತು ಭಕ್ತಿಯುತ ಸೇವೆಯ ಉತ್ಕೃಷ್ಟತೆಯ ಬಗ್ಗೆ ಶ್ರವಣ ಮಾಡಿದ ಬಳಿಕವೂ ಶ್ರದ್ಧೆಯಿಲ್ಲದವರು, ಮತ್ತು ಅದು ಸ್ತೋತ್ರಪಾಠ ಎಂದು ಭಾವಿಸುವವರು, ಅವರು ಭಕ್ತಿಯುತ ಸೇವೆಯಲ್ಲಿ ತೊಡಗಿದ್ದಾರೆಂದು ಎನಿಸಿಕೊಂಡರೂ ಕೂಡ, ಮಾರ್ಗವು ಬಹು ಕಷ್ಟವೆಂದು ಕಾಣುತ್ತಾರೆ. ಅವರಿಗೆ ಪರಿಪೂರ್ಣತೆಯ ಪ್ರಾಪ್ತಿಯ ನಿರೀಕ್ಷೆಯು ಅತ್ಯಲ್ಪ. ಹೀಗೆ ಭಕ್ತಿಯುತ ಸೇವಾ ನಿರ್ವಹಣೆಗೆ ಶ್ರದ್ಧೆಯು ಬಹಳ ಮುಖ್ಯ.

**ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ।**
**ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥೪॥**

ಮಯಾ—ನನ್ನಿಂದ, ತತಮ್—ವ್ಯಾಪ್ತವು, ಇದಮ್—ಈ, ಸರ್ವಮ್—ಎಲ್ಲ, ಜಗತ್—ವಿಶ್ವ ಉದ್ಭೂತಿಯು, ಅವ್ಯಕ್ತ ಮೂರ್ತಿನಾ—ಅವ್ಯಕ್ತ ರೂಪದಿಂದ, ಮತ್ ಸ್ಥಾನಿ—ನನ್ನಲ್ಲಿ, ಸರ್ವಭೂತಾನಿ—ಎಲ್ಲ ಜೀವಿಗಳು, ನ—ಇಲ್ಲ, ಚ—ಹಾಗೂ, ಅಹಮ್—ನಾನು, ತೇಷು— ಅವುಗಳಲ್ಲಿ, ಅವಸ್ಥಿತಃ—ಸನ್ನಿವೇಶಿತನು.

**ನನ್ನಿಂದ, ನನ್ನ ಅವ್ಯಕ್ತರೂಪದಲ್ಲಿ ಈ ಸಮಗ್ರ ವಿಶ್ವವು ವ್ಯಾಪ್ತವಾಗಿದೆ. ಎಲ್ಲ ಜೀವಿಗಳು ನನ್ನಲ್ಲಿರುವರು, ಆದರೆ ನಾನು ಅವರಲ್ಲಿಲ್ಲ.**

**ಭಾವಾರ್ಥ :** ಪರಮ ದೇವೋತ್ತಮ ಪುರುಷನು ನಮ್ಮ ಸ್ಥೂಲ ಭೌತಿಕ ಇಂದ್ರಿಯಗಳ ಮೂಲಕ ಗೋಚರನಲ್ಲ. ಹೀಗೆ ಹೇಳಿದೆ,

ಅತಃ ಶ್ರೀಕೃಷ್ಣನಾಮಾದಿ ನ ಭವೇದ್ ಗ್ರಾಹ್ಯಂ ಇನ್ದ್ರಿಯೈಃ।
ಸೇವೋನ್ಮುಖೇ ಹಿ ಜಿಹ್ವಾದೌ ಸ್ವಯಮೇವ ಸ್ಫುರತ್ಯದಃ॥

(ಭಕ್ತಿರಸಾಮೃತ–ಸಿಂಧು 1. 2. 234)

ಶ್ರೀಕೃಷ್ಣನ ನಾಮ, ಯಶ, ಲೀಲೆಗಳು, ಇತ್ಯಾದಿಗಳು ಭೌತಿಕ ಇಂದ್ರಿಯಗಳಿಂದ ಅರಿಯಲಾಗದು. ಯೋಗ್ಯ ಮಾರ್ಗದರ್ಶನದಲ್ಲಿ ಶುದ್ಧ ಭಕ್ತಿಯುತ ಸೇವಾ ನಿರತನಿಗೆ ಮಾತ್ರವೇ ಅವನು ಗೋಚರನು. ಬ್ರಹ್ಮ ಸಂಹಿತೆಯಲ್ಲಿ (5. 38) ಹೀಗೆ ಹೇಳಿದೆ : **ಪ್ರೇಮಾಞ್ಜನಚ್ಛುರಿತ ಭಕ್ತಿ ವಿಲೋಚನೇನ ಸನ್ತಃ ಸದೈವ ಹೃದಯೇಷು ವಿಲೋಕಯನ್ತಿ.** ಒಬ್ಬನು ಪರಮದೇವೋತ್ತಮ ಪುರುಷ ಗೋವಿಂದನನ್ನು, ಅವನ ಬಗ್ಗೆ ದಿವ್ಯ ಪ್ರೇಮಭಾವವನ್ನು ಬೆಳೆಸಿಕೊಂಡಿದ್ದರೆ ಸದಾ, ತನ್ನ ಒಳಗೂ ಮತ್ತು ಹೊರಗೂ ಕಾಣಬಹುದು. ಹೀಗೆ ಜನಸಾಮಾನ್ಯರಿಗೆ ಅವನು ಗೋಚರನಲ್ಲ. ಅವನು ಸರ್ವವ್ಯಾಪಿಯಾದರೂ, ಎಲ್ಲೆಲ್ಲೂ ಇದ್ದರೂ ಅವನು ಭೌತಿಕ ಇಂದ್ರಿಯಗಳಿಂದ ಗ್ರಾಹ್ಯನಲ್ಲ ಎಂದು ಇಲ್ಲಿ ಹೇಳಿದೆ. ಇದು ಇಲ್ಲಿ **ಅವ್ಯಕ್ತ-ಮೂರ್ತಿನಾ** ಎಂಬ ಪದದಿಂದ ಸೂಚಿತ. ಆದರೆ ವಾಸ್ತವಿಕವಾಗಿ, ನಾವು ಅವನನ್ನು ಕಾಣಲಾಗದಿದ್ದರೂ, ಪ್ರತಿಯೊಂದು ಅವನಲ್ಲಿ ಆಧರಿಸಿರುತ್ತದೆ. ನಾವು ಏಳನೆಯ ಅಧ್ಯಾಯದಲ್ಲಿ ಚರ್ಚಿಸಿರುವಂತೆ, ಇಡೀ ಭೌತಿಕ ವಿಶ್ವ ಉದ್ಭೂತಿಯು ಅವನ ಎರಡು ಬಗೆಯ ಶಕ್ತಿಗಳಾದ— ಪರಾ, ಅಧ್ಯಾತ್ಮ ಶಕ್ತಿಯ

ಮತ್ತು ಅಪರಾ, ಭೌತಿಕ ಶಕ್ತಿಯ— ಸಂಯೋಜನೆ ಮಾತ್ರ ಆಗಿರುತ್ತದೆ. ಸೂರ್ಯ ಪ್ರಕಾಶವು ವಿಶ್ವದಲ್ಲೆಲ್ಲಾ ಹರಡಿರುವಂತೆ, ಭಗವಂತನ ಶಕ್ತಿಯು ಸೃಷ್ಟಿಯಲ್ಲೆಲ್ಲಾ ಹರಡಿದೆ, ಮತ್ತು ಪ್ರತಿಯೊಂದೂ ಆ ಶಕ್ತಿಯಲ್ಲಿ ಆಧರಿಸಿರುತ್ತದೆ.

ಆದರೂ, ಅವನು ಎಲ್ಲ ಕಡೆಯಲ್ಲಿ ಹರಡಿರುವ ಕಾರಣ, ಅವನು ತನ್ನ ವೈಯಕ್ತಿಕ ಅಸ್ತಿತ್ವವನ್ನು ಕಳೆದುಕೊಂಡಿದ್ದಾನೆಂದು ತೀರ್ಮಾನಿಸಕೂಡದು. ಅಂಥ ವಾದವನ್ನು ನಿರಾಕರಿಸಲು ಭಗವಂತನು, "ನಾನು ಎಲ್ಲೆಲ್ಲೂ ಇದ್ದೇನೆ, ಮತ್ತು ಪ್ರತಿಯೊಂದೂ ನನ್ನಲ್ಲಿದೆ, ಆದರೂ ನಾನು ಪ್ರತ್ಯೇಕವಾಗಿರುವೆನು" ಎಂದು ಹೇಳುತ್ತಾನೆ. ಉದಾಹರಣೆಗೆ, ರಾಜನು, ರಾಜನ ಶಕ್ತಿಯ ಉದ್ಭೂತಿಯಾದ ಸರಕಾರದ ಅಧಿಪತಿ; ಸರಕಾರದ ನಾನಾ ಇಲಾಖೆಗಳು ರಾಜನ ಶಕ್ತಿಗಳಲ್ಲದೆ ಬೇರೆ ಏನೂ ಅಲ್ಲ, ಮತ್ತು ಪ್ರತಿಯೊಂದು ಇಲಾಖೆಯೂ ರಾಜನ ಶಕ್ತಿಯನ್ನು ಆಶ್ರಯಿಸಿದೆ. ಆದರೂ ರಾಜನು ಪ್ರತಿಯೊಂದು ಇಲಾಖೆಯಲ್ಲಿ ವೈಯಕ್ತಿಕವಾಗಿ ಇರುವನು ಎಂದು ಒಬ್ಬನು ನಿರೀಕ್ಷಿಸಲಾಗದು. ಇದು ಒಂದು ಒಡ್ಡಾದ ಉದಾಹರಣೆ. ಅದೇ ಪ್ರಕಾರ, ಉಭಯ ಈ ಭೌತಿಕ ಜಗತ್ತಿನಲ್ಲಿಯೂ ಮತ್ತು ಅಧ್ಯಾತ್ಮ ಜಗತ್ತಿನಲ್ಲಿಯೂ ನಾವು ನೋಡುವ ಎಲ್ಲ ಉದ್ಭೂತಿಗಳು ಮತ್ತು ಅಸ್ತಿತ್ವದಲ್ಲಿರುವ ಪ್ರತಿಯೊಂದೂ ಪರಮದೇವೋತ್ತಮ ಪುರುಷನ ಶಕ್ತಿಯನ್ನು ಆಧರಿಸಿ ಇರುತ್ತವೆ. ಅವನ ವಿವಿಧ ಶಕ್ತಿಗಳ ವ್ಯಾಪಕತ್ವದಿಂದ ಸೃಷ್ಟಿಯು ಆಗುತ್ತದೆ, ಮತ್ತು, ಭಗವದ್ಗೀತೆಯಲ್ಲಿ **ವಿಷ್ಟಭ್ಯಾಹಮ್ ಇದಂ ಕೃತ್ಸ್ನಮ್** ಎಂದು ಹೇಳಿರುವಂತೆ: ತನ್ನ ಸ್ವಯಂ ಪ್ರಾತಿನಿಧ್ಯವಾಗಿರುವ, ಅವನ ವಿವಿಧ ಶಕ್ತಿಗಳ ವ್ಯಾಪಕತ್ವದಿಂದ ಅವನು ಎಲ್ಲೆಲ್ಲಿಯೂ ಇದ್ದಾನೆ.

**ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಮ್ ।**
**ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ॥ ೫ ॥**

ನ—ಎಂದಿಗೂ ಇಲ್ಲ, ಚ—ಸಹ, ಮತ್‌ಸ್ಥಾನಿ—ನನ್ನಲ್ಲಿ ಸನ್ನಿವೇಶಿತ, ಭೂತಾನಿ—ಎಲ್ಲ ಸೃಷ್ಟಿ, ಪಶ್ಯ—ನೋಡು, ಮೇ—ನನ್ನ, ಯೋಗಮ್‌ಐಶ್ವರಮ್—ಅಚಿಂತ್ಯಯೋಗ ಶಕ್ತಿ, ಭೂತಭೃತ್—ಸಕಲ ಜೀವಿಗಳ ಪಾಲಕ, ನ—ಎಂದಿಗೂ ಇಲ್ಲ, ಚ—ಕೂಡ, ಭೂತಸ್ಥಃ—ವಿಶ್ವ ಉದ್ಭೂತಿಯಲ್ಲಿ, ಮಮ—ನನ್ನ, ಆತ್ಮಾ—ಆತ್ಮ, ಭೂತಭಾವನಃ—ಸಕಲ ಉದ್ಭೂತಿಗಳ ಮೂಲ.

**ಮತ್ತು ಆದರೂ ಸೃಷ್ಟಿತ ಪ್ರತಿಯೊಂದೂ ನನ್ನನ್ನು ಆಧರಿಸಿರುವುದಿಲ್ಲ. ನನ್ನ ಯೋಗ ಐಶ್ವರ್ಯವನ್ನು ನೋಡು! ನಾನು ಸಕಲ ಜೀವಿಗಳ ಪಾಲಕನಾಗಿದ್ದರೂ ಮತ್ತು ನಾನು ಎಲ್ಲ ಕಡೆಯಲ್ಲಿ ಇದ್ದರೂ, ಸ್ವಯಂ ನಾನೇ ಸೃಷ್ಟಿಯ ಮೂಲನೇ ಆಗಿರುವುದರಿಂದ, ನಾನು ವಿಶ್ವ ಉದ್ಭೂತಿಯ ಭಾಗವಲ್ಲ.**

**ಭಾವಾರ್ಥ :** ಪ್ರತಿಯೊಂದೂ ಅವನನ್ನು ಆಶ್ರಯಿಸಿದೆ ಎಂದು ಭಗವಂತನು ಹೇಳುತ್ತಾನೆ (**ಮತ್—ಸ್ಥಾನಿ ಸರ್ವ—ಭೂತಾನಿ**). ಇದನ್ನು ತಪ್ಪಾಗಿ ತಿಳಿಯ

**ಕೂಡದು.** ಭಗವಂತನು ಈ ಭೌತಿಕ ಉದ್ಭೂತಿಯ **ಪಾಲನೆ ಮತ್ತು ಪೋಷಣೆಯಲ್ಲಿ** ನೇರವಾಗಿ ಸಂಬಂಧಿತನಲ್ಲ. ಕೆಲವು ಸಮಯಗಳಲ್ಲಿ ನಾವು ಆಟ್ಲಾಸನು ಭೂಗೋಳವನ್ನು ತನ್ನ ಹೆಗಲಿನ ಮೇಲೆ ಹೊತ್ತಿರುವುದನ್ನು ಚಿತ್ರದಲ್ಲಿ ಕಾಣುತ್ತೇವೆ; ಮಹಾ ಭೂಲೋಕ ವನ್ನು ಹೊತ್ತುಕೊಂಡು ಬಹಳ ದಣಿದವನಂತೆ ತೋರುತ್ತಾನೆ. ಈ ಸೃಷ್ಟ ವಿಶ್ವವನ್ನು ಕೃಷ್ಣನು ಎತ್ತಿಹಿಡಿಯುವುದಕ್ಕೆ ಸಂಬಂಧಿಸಿದಂತೆ ಅಂಥ ಚಿತ್ರವೊಂದನ್ನು ಇಟ್ಟುಕೊಳ್ಳ ಕೂಡದು. ಪ್ರತಿಯೊಂದು ತನ್ನನ್ನು ಆಧರಿಸಿ ಇರುತ್ತಿದ್ದರೂ, ತಾನು ದೂರವಾಗಿರುವೆನು ಎಂದು ಅವನು ಹೇಳುತ್ತಾನೆ. ಲೋಕವ್ಯೂಹಗಳು ಆಕಾಶದಲ್ಲಿ ತೇಲುತ್ತಿವೆ, ಮತ್ತು ಈ ಆಕಾಶವು ಪರಮ ಪ್ರಭುವಿನ ಶಕ್ತಿ. ಆದರೆ ಅವನು ಆಕಾಶದಿಂದ ಭಿನ್ನನು. ಅವನು ಭಿನ್ನವಾಗಿ ಸನ್ನಿವೇಶಿತನು. ಆದ್ದರಿಂದ ಭಗವಂತನು ಹೇಳುತ್ತಾನೆ, "ಅವುಗಳು ನನ್ನ ಅಚಿಂತ್ಯ ಶಕ್ತಿಯಲ್ಲಿ ಸನ್ನಿವೇಶಿತವಾಗಿದ್ದರೂ, ಪರಮದೇವೋತ್ತಮ ಪುರುಷನಾಗಿ ನಾನು ಅವುಗಳಿಂದ ದೂರವಾಗಿರುವೆನು." ಇದು ಭಗವಂತನ ಅಚಿಂತ್ಯ ಐಶ್ವರ್ಯ.

ವೈದಿಕ ನಿಘಂಟು **ನಿರುಕ್ತಿ**ಯಲ್ಲಿ, **ಯುಜ್ಯತೇऽನೇನ ದುರ್ಘಟೇಷು ಕಾರ್ಯೇಷು** ಎಂದು ಹೇಳಿದೆ. "ಪರಮ ಪ್ರಭುವು ತನ್ನ ಶಕ್ತಿ ಪ್ರದರ್ಶಿಸುತ್ತಾ, ಅಚಿಂತ್ಯ ಅದ್ಭುತ ಲೀಲೆಗಳನ್ನು ನಡೆಸುತ್ತಿರುವನು." ಅವನ ದೇಹವು ವಿವಿಧ ವಿಪುಲ ಶಕ್ತಿಗಳಿಂದ ಪೂರ್ಣ ವಾಗಿದೆ, ಮತ್ತು ಅವನ ನಿರ್ಧಾರವೇ ವಾಸ್ತವಿಕ ಸಂಗತಿ. ಈ ರೀತಿಯಲ್ಲಿ ದೇವೋತ್ತಮ ಪುರುಷನನ್ನು ಅರಿತುಕೊಳ್ಳಬೇಕು. ನಾವು ಯಾವುದನ್ನೋ ಮಾಡಲು ಯೋಚಿಸ ಬಹುದು, ಆದರೆ ಅಲ್ಲಿ ಎಷ್ಟೊಂದು ವಿಘ್ನಗಳಿರುತ್ತವೆ, ಮತ್ತು ಕೆಲವು ಸಮಯಗಳಲ್ಲಿ ನಾವು ಇಷ್ಟಪಟ್ಟಂತೆ ಮಾಡಲು ಸಾಧ್ಯವಾಗುವುದಿಲ್ಲ. ಆದರೆ ಕೃಷ್ಣನು ಏನಾದರೂ ಮಾಡಬಯಸಿದರೆ, ಕೇವಲ ಅವನ ಇಚ್ಛೆಯಿಂದಲೇ, ಪ್ರತಿಯೊಂದು ಎಷ್ಟು ಪರಿಪೂರ್ಣ ವಾಗಿ ನಡೆಯುವುದೆಂದರೆ ಅದು ಹೇಗೆ ನಡೆಯುತ್ತಲಿದೆ ಎಂಬುದನ್ನು ಯಾರೂ ಯೋಚಿಸಲಾಗದು. ಭಗವಂತನು ಈ ಸಂಗತಿಯನ್ನು ವಿವರಿಸುತ್ತಾನೆ : ಅವನು ಇದೀ ಭೌತಿಕ ಉದ್ಭೂತಿಯ ರಕ್ಷಕನು ಮತ್ತು ಪೋಷಕನು ಆಗಿದ್ದರೂ ಕೂಡ, ಅವನು ಈ ಭೌತಿಕ ಉದ್ಭೂತಿಯನ್ನು ಸ್ಪರ್ಶಿಸುವುದಿಲ್ಲ. ಕೇವಲ ಅವನ ಪರಮ ಇಚ್ಛೆಯಿಂದಲೇ, ಪ್ರತಿಯೊಂದೂ ಸೃಷ್ಟ. ಪ್ರತಿಯೊಂದು ಪೋಷಿತ, ಪ್ರತಿಯೊಂದು ರಕ್ಷಿತ, ಮತ್ತು ಪ್ರತಿಯೊಂದೂ ನಾಶಿತ. ಭಗವಂತನ ಮತ್ತು ಅವನ ಮನಸ್ಸಿನ ನಡುವೆ (ನಾವು ಮತ್ತು ನಮ್ಮ ವರ್ತಮಾನ ಭೌತಿಕ ಮನಸ್ಸಿನ ನಡುವೆ ವ್ಯತ್ಯಾಸವಿರುವಂತೆ) ಯಾವ ವ್ಯತ್ಯಾಸವೂ ಇಲ್ಲ, ಏಕೆಂದರೆ ಅವನು ಪರಮ ಚೇತನ. ಏಕಕಾಲದಲ್ಲಿ ಭಗವಂತನು ಪ್ರತಿಯೊಂದ ರಲ್ಲಿಯೂ ಇರುವನು; ಆದರೂ ಸಾಮಾನ್ಯ ಮಾನವನು ಅವನು ವೈಯಕ್ತಿಕವಾಗಿಯೂ ಹೇಗೆ ಇರುವನು ಎಂಬುದನ್ನು ಅರಿಯಲಾರನು. ಅವನು ಈ ಭೌತಿಕ ಉದ್ಭೂತಿಯಿಂದ ಭಿನ್ನನು, ಆದರೂ ಪ್ರತಿಯೊಂದೂ ಅವನನ್ನು ಆಶ್ರಯಿಸಿದೆ. ಇದು ಇಲ್ಲಿ **ಯೋಗವಮ್ ಐಶ್ವರವಮ್**, ಪರಮದೇವೋತ್ತಮ ಪುರುಷನ ಅಚಿಂತ್ಯ ಯೋಗ ಶಕ್ತಿ ಎಂದು ವಿವರಿಸಲ್ಪಟ್ಟಿದೆ.

**ಯಥಾಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋ ಮಹಾನ್ ।**
**ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥ ೬ ॥**

ಯಥಾ—ಹೇಗೆ, ಆಕಾಶ ಸ್ಥಿತಃ—ಆಕಾಶದಲ್ಲಿ ಸನ್ನಿವೇಶಿತ, ನಿತ್ಯಮ್—ಸದಾ, ವಾಯುಃ—ಗಾಳಿಯು, ಸರ್ವತ್ರಗಃ—ಎಲ್ಲೆಡೆಯೂ ಬೀಸುವ, ಮಹಾನ್—ಮಹಾ, ತಥಾ—ಹಾಗೆ, ಸರ್ವಾಣಿ ಭೂತಾನಿ—ಎಲ್ಲ ಸೃಷ್ಟಿತ ಜೀವಿಗಳು, ಮತ್‌ಸ್ಥಾನಿ—ನನ್ನಲ್ಲಿ ಸನ್ನಿವೇಶಿತ, ಇತಿ—ಹೀಗೆ, ಉಪಧಾರಯ—ಅರಿಯಲು ಯತ್ನಿಸು.

**ಎಲ್ಲೆಡೆಯೂ ಬೀಸುವ ಪ್ರಬಲವಾದ ಗಾಳಿಯು ಸದಾ ಆಕಾಶದಲ್ಲಿ ಆಧರಿಸಿರುವಂತೆ, ಸೃಷ್ಟಿತ ಎಲ್ಲ ಜೀವಿಗಳು ನನ್ನಲ್ಲಿ ಆಶ್ರಯಿಸಿರುವವರು ಎಂದು ತಿಳಿ.**

**ಭಾವಾರ್ಥ :** ಅಗಾಧ ಭೌತಿಕ ಸೃಷ್ಟಿಯು ಹೇಗೆ ಅವನಲ್ಲಿ ಆಶ್ರಯಿಸಿದೆ ಎಂಬುದು ಸಾಮಾನ್ಯ ಮನುಷ್ಯನಿಗೆ ಬಹುಮಟ್ಟಿಗೆ ಅಚಿಂತ್ಯ. ಆದರೆ ಅರಿತುಕೊಳ್ಳಲು ನಮಗೆ ಸಹಾಯಕವಾಗುವ ಉದಾಹರಣೆಯನ್ನು ಭಗವಂತನು ನೀಡುತ್ತಿದ್ದಾನೆ. ಆಕಾಶವು ನಾವು ಗ್ರಹಿಸಬಹುದಾದ ಅತಿ ದೊಡ್ಡ ಉದ್ಭೂತಿಯಾಗಿರಬಹುದು. ಮತ್ತು ಆ ಆಕಾಶದಲ್ಲಿ ವಾಯು ಅಥವಾ ಗಾಳಿಯು ಅಗಾಧ ವಿಶ್ವದಲ್ಲಿನ ಅತಿ ದೊಡ್ಡ ಉದ್ಭೂತಿ. ಗಾಳಿಯ ಚಲನೆಯು ಪ್ರತಿಯೊಂದರ ಚಲನವಲನಗಳ ಮೇಲೆ ಪ್ರಭಾವ ಬೀರುತ್ತದೆ. ಆದರೆ ಗಾಳಿಯು ಮಹತ್ ಆಗಿದ್ದರೂ ಸಹ, ಅದು ಆಕಾಶದೊಳಗೆಯೇ ನೆಲೆಸಿರುತ್ತದೆ; ಗಾಳಿಯು ಆಕಾಶದ ಆಚೆಗೆ ಇಲ್ಲ. ಅದೇ ಪ್ರಕಾರ, ಎಲ್ಲ ಅದ್ಭುತ ವಿಶ್ವ ಉದ್ಭೂತಿಗಳು, ದೇವನ ಪರಮ ಇಚ್ಛೆಯಿಂದ ಅಸ್ತಿತ್ವದಲ್ಲಿವೆ, ಮತ್ತು ಅವೆಲ್ಲವೂ ಆ ಪರಮ ಇಚ್ಛೆಗೆ ಅಧೀನವಾಗಿವೆ. ನಾವು ಸಾಮಾನ್ಯವಾಗಿ ಹೇಳುವಂತೆ, ಪರಮದೇವೋತ್ತಮ ಪುರುಷನ ಇಚ್ಛೆ ಇಲ್ಲದೆ ಒಂದು ತೃಣವೂ ಕೂಡ ಚಲಿಸದು. ಹೀಗೆ ಪ್ರತಿಯೊಂದು ಅವನ ಇಚ್ಛೆಗೆ ಒಳಪಟ್ಟು ಚಲಿಸುತ್ತಿದೆ : ಅವನ ಇಚ್ಛೆಯಿಂದಲೇ ಪ್ರತಿಯೊಂದೂ ಸೃಷ್ಟಿಸಲ್ಪಡುತ್ತಿದೆ, ಪ್ರತಿಯೊಂದೂ ರಕ್ಷಿಸಲ್ಪಡುತ್ತಿದೆ ಮತ್ತು ಪ್ರತಿಯೊಂದೂ ಲಯವಾಗುತ್ತಿದೆ. ಆದರೂ, ಆಕಾಶವು ವಾಯುವಿನ ಚಟುವಟಿಕೆಗಳಿಂದ ಸದಾ ದೂರವಿರುವಂತೆ, ಅವನು ಪ್ರತಿಯೊಂದರಿಂದಲೂ ದೂರ ಇರುವವನು,

**ಯದ್—ಭೀಷಾ ವಾತಃ ಪವತೇ** ಎಂದು ಉಪನಿಷತ್ತಿನಲ್ಲಿ ಹೇಳಿದೆ : "ಪರಮ ಪ್ರಭುವಿಗೆ ಭಯಪಟ್ಟು ಗಾಳಿ ಬೀಸುತ್ತಿದೆ." (ತೈತ್ತಿರೀಯ ಉಪನಿಷದ್ 2.8.1) ಬೃಹದ್—ಆರಣ್ಯಕ ಉಪನಿಷತ್ತಿನಲ್ಲಿ (3.8.9) ಹೀಗೆ ಹೇಳಿದೆ : **ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯ—ಚಂದ್ರಮಸೌ ವಿಧೃತೌ ತಿಷ್ಠತ ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾಪೃಥಿವ್ಯೌ ವಿಧೃತೌ ತಿಷ್ಠತಃ.** "ಪರಮ ಆದೇಶದಿಂದ, ಪರಮ ದೇವೋತ್ತಮ ಪುರುಷನ ಅಧೀಕ್ಷಣೆಯಲ್ಲಿ. ಚಂದ್ರ, ಸೂರ್ಯ ಮತ್ತು ಇತರ ಮಹಾಗ್ರಹಗಳು ಚಲಿಸುತ್ತಿವೆ." ಬ್ರಹ್ಮ-ಸಂಹಿತೆಯಲ್ಲಿ ಕೂಡ (5.52) ಹೀಗೆ ಹೇಳಿದೆ:

ಯಚ್ಚಕ್ಷುರ್ ಏಷ ಸವಿತಾ ಸಕಲಗ್ರಹಾಣಾಂ
ರಾಜಾ ಸಮಸ್ತಸುರಮೂರ್ತಿರಶೇಷತೇಜಾಃ।
ಯಸ್ಯಾಜ್ಞಯಾ ಭ್ರಮತಿ ಸಮ್ಭೃತಕಾಲಚಕ್ರೋ
ಗೋವಿನ್ದಮ್ ಆದಿಪುರುಷಂ ತಮ್ ಅಹಂ ಭಜಾಮಿ॥

ಇದು ಸೂರ್ಯನ ಚಲನೆಯ ವರ್ಣನೆ. ಸೂರ್ಯನು ಪರಮ ಪ್ರಭುವಿನ ಕಣ್ಣುಗಳಲ್ಲಿ ಒಂದು ಎಂದು ಪರಿಗಣಿಸಲಾಗಿದೆ ಮತ್ತು ಅದಕ್ಕೆ ಶಾಖ ಮತ್ತು ಬೆಳಕನ್ನು ಪ್ರಸರಿಸಲು ಅಪಾರ ಶಕ್ತಿ ಇದೆ ಎಂದು ಹೇಳಿದೆ. ಈಗಲೂ ಅದು ವಿಧಿತ ಪಥದಲ್ಲಿ ಗೋವಿಂದನ ಆದೇಶ ಮತ್ತು ಪರಮ ಇಚ್ಛೆಯಿಂದ ಚಲಿಸುತ್ತಿದೆ. ಹೀಗೆ, ವೈದಿಕ ಸಾಹಿತ್ಯದಿಂದ, ನಮಗೆ ಬಹು ಅದ್ಭುತವೂ ಮತ್ತು ಮಹತ್ತಾಗಿಯೂ ತೋರುವ ಈ ಭೌತಿಕ ಉದ್ಭೂತಿಯು, ಪರಮದೇವೋತ್ತಮ ಪುರುಷನ ಸಂಪೂರ್ಣ ನಿಯಂತ್ರಣಕ್ಕೆ ಒಳಪಟ್ಟಿದೆ ಎಂಬ ಪ್ರಮಾಣವನ್ನು ನಾವು ಕಾಣುತ್ತೇವೆ. ಇದು ಈ ಅಧ್ಯಾಯದ ಮುಂದಿನ ಶ್ಲೋಕಗಳಲ್ಲಿ ಇನ್ನಷ್ಟು ವಿವರಿಸಲ್ಪಟ್ಟಿದೆ.

**ಸರ್ವಭೂತಾನಿ ಕೌನ್ತೇಯ ಪ್ರಕೃತಿಂ ಯಾನ್ತಿ ಮಾಮಿಕಾಮ್ ।**
**ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್ ॥ ೭ ॥**

ಸರ್ವಭೂತಾನಿ—ಎಲ್ಲ ಸೃಷ್ಟಿತ ಜೀವಿಗಳು, ಕೌನ್ತೇಯ—ಹೇ ಕುಂತಿ ಪುತ್ರನೇ, ಪ್ರಕೃತಿಮ್—ಪ್ರಕೃತಿ, ಯಾನ್ತಿ—ಪ್ರವೇಶಿಸುತ್ತವೆ, ಮಾಮಿಕಾಮ್—ನನ್ನ, ಕಲ್ಪಕ್ಷಯೇ—ಕಲ್ಪಾಂತ್ಯದಲ್ಲಿ, ಪುನಃ—ಮತ್ತೆ, ತಾನಿ—ಅವೆಲ್ಲವೂ, ಕಲ್ಪಆದೌ—ಕಲ್ಪದ ಆದಿಯಲ್ಲಿ, ವಿಸೃಜಾಮಿ—ಸೃಷ್ಟಿಸುತ್ತೇನೆ, ಅಹಮ್—ನಾನು.

**ಹೇ ಕುಂತೀ ಪುತ್ರನೇ, ಕಲ್ಪಾಂತ್ಯದಲ್ಲಿ ಎಲ್ಲ ಭೌತಿಕ ಉದ್ಭೂತಿಗಳು ನನ್ನ ಪ್ರಕೃತಿಯೊಳಕ್ಕೆ ಪ್ರವೇಶಿಸುತ್ತವೆ, ಮತ್ತು ಮತ್ತೊಂದು ಕಲ್ಪದ ಆರಂಭದಲ್ಲಿ, ನನ್ನ ಶಕ್ತಿಯಿಂದ ಮತ್ತೆ ಅವುಗಳನ್ನು ನಾನು ಸೃಷ್ಟಿಸುತ್ತೇನೆ.**

**ಭಾವಾರ್ಥ :** ಈ ಭೌತಿಕ ವಿಶ್ವ ಉದ್ಭೂತಿಯ ಸೃಷ್ಟಿ, ಸ್ಥಿತಿ ಮತ್ತು ಲಯವು ಸಂಪೂರ್ಣವಾಗಿ ದೇವೋತ್ತಮ ಪುರುಷನ ಪರಮ ಇಚ್ಛೆಯನ್ನು ಅವಲಂಬಿಸಿವೆ. "ಕಲ್ಪಾಂತ್ಯದಲ್ಲಿ" ಎಂದರೆ ಬ್ರಹ್ಮನ ಮರಣವಾದಾಗ ಎಂದು ಅರ್ಥ. ಬ್ರಹ್ಮನು ಒಂದು ನೂರು ವರ್ಷ ಜೀವಿಸಿರುತ್ತಾನೆ, ಮತ್ತು ಅವನ ಒಂದು ಹಗಲು ನಮ್ಮ 4,300,000,000 ಭೂಮಿಯ ವರ್ಷಗಳು ಎಂದು ಎಣಿಸಿದೆ. ಅವನ ರಾತ್ರಿಯು ಅದೇ ಅವಧಿಯುಳ್ಳದ್ದು. ಅವನ ಒಂದು ತಿಂಗಳು ಅಂಥ ಮುವ್ವತ್ತು ಹಗಲುಗಳು ಮತ್ತು ರಾತ್ರಿಗಳನ್ನು, ಮತ್ತು ಅವನ ಒಂದು ವರ್ಷವು ಅಂಥ ಹನ್ನೆರಡು ತಿಂಗಳುಗಳನ್ನು ಒಳಗೊಂಡಿರುತ್ತದೆ. ಅಂಥ ನೂರು ವರ್ಷಗಳ ತರುವಾಯ ಬ್ರಹ್ಮನು ಮರಣಿಸಿದಾಗ, ನಾಶವು ಅಥವಾ ಪ್ರಳಯವು ನಡೆಯುತ್ತದೆ; ಹೀಗೆಂದರೆ ಪರಮಪ್ರಭುವಿನಿಂದ ಅಭಿವ್ಯಕ್ತ ಶಕ್ತಿಯು ಮತ್ತೆ ಅವನಲ್ಲಿಯೇ ಕೊನೆಗಾಣುತ್ತದೆ. ಮತ್ತೆ ವಿಶ್ವವನ್ನು ಅಭಿವ್ಯಕ್ತಿಸುವ

ಅವಶ್ಯಕತೆ ಇದ್ದಾಗ, ಅದು ಅವನ ಇಚ್ಛೆಯಿಂದ ಮಾಡಲ್ಪಡುತ್ತದೆ. **ಬಹು ಸ್ಯಾಮ್** "ನಾನು ಒಬ್ಬನೇ ಆಗಿದ್ದರೂ, ನಾನು ಅನೇಕವಾಗುತ್ತೇನೆ." ಇದು ವೇದ ಸೂಕ್ತಿ (ಛಾಂದೋಗ್ಯ ಉಪನಿಷದ್ 6.2.3). ಅವನು ತನ್ನನ್ನೇ ಈ ಭೌತಿಕ ಶಕ್ತಿಯಲ್ಲಿ ವಿಸ್ತರಿಸಿ ಕೊಳ್ಳುತ್ತಾನೆ, ಮತ್ತು ಇಡೀ ವಿಶ್ವ ಉದ್ಭೂತಿಯು ಮತ್ತೆ ಉಂಟಾಗುತ್ತದೆ.

**ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ ।**
**ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ ॥೮॥**

ಪ್ರಕೃತಿಮ್—ಭೌತಿಕ ಪ್ರಕೃತಿಯು, ಸ್ವಾಮ್—ಸ್ವಯಂ ನನ್ನ, ಅವಷ್ಟಭ್ಯ—ಒಳಗೆ ಪ್ರವೇಶಿಸಿ, ವಿಸೃಜಾಮಿ—ನಾನು ಸೃಷ್ಟಿಸುತ್ತೇನೆ, ಪುನಃ ಪುನಃ—ಮತ್ತೆ ಮತ್ತೆ, ಭೂತಗ್ರಾಮಮ್—ಎಲ್ಲ ವಿಶ್ವ ಉದ್ಭೂತಿಗಳನ್ನು, ಇಮಮ್—ಇವು, ಕೃತ್ಸ್ನಮ್—ಒಟ್ಟಿನಲ್ಲಿ, ಅವಶಮ್—ತಾನಾಗಿಯೇ, ಪ್ರಕೃತೇಃ—ಪ್ರಕೃತಿಯ ಬಲದ, ವಶಾತ್—ಆಭಾರಿಯಾಗಿ.

**ಇಡೀ ವಿಶ್ವ ವ್ಯವಸ್ಥೆಯು ನನ್ನ ಅಧೀನ. ನನ್ನ ಇಚ್ಛೆಗೆ ಒಳಪಟ್ಟು ಅದು ತಾನಾಗಿಯೆ ಮತ್ತೆ ಮತ್ತೆ ಅಭಿವ್ಯಕ್ತಿಸಲ್ಪಡುವುದು, ಮತ್ತು ನನ್ನ ಇಚ್ಛೆಗೆ ಒಳಪಟ್ಟು ಅದು ಕೊನೆಯಲ್ಲಿ ಲಯಗೊಳಿಸಲ್ಪಡುವುದು.**

**ಭಾವಾರ್ಥ :** ಈ ಭೌತಿಕ ಜಗತ್ತು ಪರಮ ದೇವೋತ್ತಮ ಪುರುಷನ ಅಪರಾ ಶಕ್ತಿಯ ಉದ್ಭೂತಿ. ಇದು ಈಗಾಗಲೇ ಹಲವು ಸಲ ವಿವರಿಸಲ್ಪಟ್ಟಿದೆ. ಸೃಷ್ಟಿ ಕಾಲದಲ್ಲಿ, ಭೌತಿಕ ಶಕ್ತಿಯು **ಮಹತ್—ತತ್ವ** ಆಗಿ ಬಿಡುಗಡೆ ಹೊಂದುತ್ತದೆ. ಅದರೊಳಕ್ಕೆ ಭಗವಂತನು ಪ್ರಥಮ ಪುರುಷಾವತಾರವಾದ ಮಹಾ-ವಿಷ್ಣುವಾಗಿ ಪ್ರವೇಶಿಸುತ್ತಾನೆ. ಅವನು ಕಾರಣ ಸಾಗರದಲ್ಲಿ ಪವಡಿಸುತ್ತಾನೆ ಮತ್ತು ಅಸಂಖ್ಯಾತ ಬ್ರಹ್ಮಾಂಡ ಗಳನ್ನು ನಿಶ್ವಸಿಸುತ್ತಾನೆ, ಮತ್ತು ಪ್ರತಿಯೊಂದು ಬ್ರಹ್ಮಾಂಡದೊಳಕ್ಕೂ ಭಗವಂತನು ಮತ್ತೆ ಗರ್ಭೋದಕಶಾಯಿ ವಿಷ್ಣುವಾಗಿ ಪ್ರವೇಶಿಸುತ್ತಾನೆ. ಹೀಗೆ ಪ್ರತಿಯೊಂದು ಬ್ರಹ್ಮಾಂಡವೂ ಸೃಷ್ಟಿಸಲ್ಪಡುತ್ತದೆ. ಅವನು ಮತ್ತೆ ತನ್ನನ್ನೇ ಕ್ಷೀರೋದಕಶಾಯಿ ವಿಷ್ಣುವಾಗಿ ಅಭಿವ್ಯಕ್ತಿಸಿಕೊಳ್ಳುತ್ತಾನೆ, ಮತ್ತು ಆ ವಿಷ್ಣುವು ಪ್ರತಿಯೊಂದರೊಳಕ್ಕೂ — ಸೂಕ್ಷ್ಮ ಪರಮಾಣುವಿನ ಒಳಕ್ಕೂ ಸಹ—ಪ್ರವೇಶಿಸುತ್ತಾನೆ. ಈ ಸಂಗತಿಯು ಇಲ್ಲಿ ವಿವರಿಸಲ್ಪಟ್ಟಿದೆ. ಅವನು ಪ್ರತಿಯೊಂದರೊಳಕ್ಕೂ ಪ್ರವೇಶಿಸುತ್ತಾನೆ.

ಈಗ ಜೀವಿಗಳ ಮಟ್ಟಿಗಾದರೋ, ಅವರು ಈ ಭೌತಿಕ ಪ್ರಕೃತಿಯ ಒಳಕ್ಕೆ ಗರ್ಭೀಕರಿಸಲ್ಪಡುತ್ತಾರೆ, ಮತ್ತು ಅವರ ಪೂರ್ವಕರ್ಮಗಳ ಫಲಾನುಸಾರ ವಿವಿಧ ಸ್ಥಾನಗಳನ್ನು ಸ್ವೀಕರಿಸುತ್ತಾರೆ. ಹೀಗೆ ಈ ಭೌತಿಕ ಜಗತ್ತಿನ ಚಟುವಟಿಕೆಗಳು ಪ್ರಾರಂಭ ವಾಗುತ್ತವೆ. ಭಿನ್ನ ಭಿನ್ನ ಜೀವಿವರ್ಗಗಳ ಚಟುವಟಿಕೆಗಳು ಸೃಷ್ಟಿಯ ಕ್ಷಣದಿಂದಲೇ ಪ್ರಾರಂಭವಾಗುತ್ತವೆ. ಎಲ್ಲವೂ ವಿಕಾಸಿತ ಎಂದಲ್ಲ. ಭಿನ್ನ ಭಿನ್ನ ಜೀವವರ್ಗಗಳು ವಿಶ್ವದೊಂದಿಗೆ ಸೃಷ್ಟಿಸಲ್ಪಡುತ್ತವೆ. ಹಿಂದಿನ ಪ್ರಳಯ ಕಾಲದಲ್ಲಿ ಜೀವಿಗಳು ಹೊಂದಿದ್ದ

ಇಚ್ಛೆಗಳು ಮತ್ತೆ ವ್ಯಕ್ತವಾಗುವುದರಿಂದ, ಮನುಷ್ಯರು, ಪ್ರಾಣಿಗಳು, ಮೃಗಗಳು, ಪಕ್ಷಿಗಳು—ಪ್ರತಿಯೊಂದೂ ಏಕಕಾಲದಲ್ಲಿ ಸೃಷ್ಟಿಸಲ್ಪಡುತ್ತದೆ. **ಅವಶಮ್** ಪದದಿಂದ, ಇಲ್ಲಿ ಸ್ಪಷ್ಟವಾಗಿ ಸೂಚಿಸಿರುವುದೇನೆಂದರೆ, ಜೀವಿಗಳು ಈ ಪ್ರಕ್ರಿಯೆಯೊಡನೆ ಮಾಡ ಬೇಕಾದುದೇನೂ ಇಲ್ಲ ಎಂದು. ಪೂರ್ವ ಸೃಷ್ಟಿಯಲ್ಲಿನ ಅವರ ಪೂರ್ವ ಜೀವನ ಸ್ಥಿತಿಯು ಮಾತ್ರವೇ ಮತ್ತೆ ವ್ಯಕ್ತವಾಗುತ್ತದೆ, ಮತ್ತು ಇವೆಲ್ಲವೂ ಅವನ ಇಚ್ಛಾ ಮಾತ್ರದಿಂದಲೇ ಆಗುತ್ತದೆ. ಇದು ಪರಮ ದೇವೋತ್ತಮ ಪುರುಷನ ಅಚಿಂತ್ಯ ಶಕ್ತಿ. ವಿವಿಧ ಜೀವಿ ವರ್ಗಗಳ ಸೃಷ್ಟಿಯ ತರುವಾಯ, ಅವುಗಳೊಂದಿಗೆ ಅವನಿಗೆ ಸಂಬಂಧವಿಲ್ಲ. ವಿವಿಧ ಜೀವಿಗಳ ಪ್ರವೃತ್ತಿಗಳನ್ನು ಅಳವಡಿಸಲು ಸೃಷ್ಟಿಯು ನಡೆಯುತ್ತದೆ, ಮತ್ತು ಹೀಗೆ ಭಗವಂತನು ಅದರೊಡನೆ ಸಿಲುಕಿಕೊಳ್ಳುವುದಿಲ್ಲ.

**ನ ಚ ಮಾಂ ತಾನಿ ಕರ್ಮಾಣಿ ನಿಬಧ್ನನ್ತಿ ಧನಞ್ಜಯ ।**
**ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ॥೯॥**

ನ—ಎಂದಿಗೂ ಇಲ್ಲ, ಚ—ಸಹ, ಮಾಮ್—ನನ್ನನ್ನು, ತಾನಿ—ಆ ಎಲ್ಲ, ಕರ್ಮಾಣಿ—ಚಟುವಟಿಕೆಗಳು, ನಿಬಧ್ನನ್ತಿ—ಬಂಧಿಸುವುದು, ಧನಞ್ಜಯ—ಹೇ ಧನಂ ಜಯನೇ, ಉದಾಸೀನವತ್—ತಟಸ್ಥನಾಗಿ, ಆಸೀನಮ್—ಸನ್ನಿವೇಶಿತನಾಗಿ, ಅಸಕ್ತಮ್—ಆಕರ್ಷಣೆ ಇಲ್ಲದೆ, ತೇಷು—ಅವುಗಳಿಗೆ, ಕರ್ಮಸು—ಚಟುವಟಿಕೆಗಳಲ್ಲಿ.

**ಹೇ ಧನಂಜಯ, ಈ ಎಲ್ಲ ಕಾರ್ಯವು ನನ್ನನ್ನು ಬಂಧಿಸಲಾರದು. ತಟಸ್ಥನೋ ಎಂಬಂತೆ ಕುಳಿತಿದ್ದು ನಾನು ಈ ಎಲ್ಲ ಭೌತಿಕ ಚಟುವಟಿಕೆಗಳಿಂದ ಎಂದಿಗೂ ಅಸಕ್ತನು.**

**ಭಾವಾರ್ಥ :** ಪರಮ ದೇವೋತ್ತಮ ಪುರುಷನಿಗೆ ಯಾವ ಕೆಲಸವೂ ಇಲ್ಲ ಎಂದು ಈ ಸಂಬಂಧದಲ್ಲಿ ಒಬ್ಬನು ಭಾವಿಸಕೂಡದು. ತನ್ನ ಆಧ್ಯಾತ್ಮ ಜಗತ್ತಿನಲ್ಲಿ ಅವನು ಸದಾ ನಿರತನು. ಬ್ರಹ್ಮ—ಸಂಹಿತೆಯಲ್ಲಿ (5.6) ಹೀಗೆ ಹೇಳಿದೆ, **ಆತ್ಮಾರಾಮಸ್ಯ ತಸ್ಯಾಸ್ತಿ ಪ್ರಕೃತ್ಯಾ ನ ಸಮಾಗಮಃ**—"ಅವನು ಸದಾ ತನ್ನ ಶಾಶ್ವತ ಆನಂದಮಯ ಆಧ್ಯಾತ್ಮ ಚಟುವಟಿಕೆಗಳಲ್ಲಿ ಒಳಗೊಂಡಿರುತ್ತಾನೆ, ಆದರೆ ಅವನು ಈ ಭೌತಿಕ ಚಟುವಟಿಕೆಗಳೊಡನೆ ಮಾಡಬೇಕಾದುದು ಏನೂ ಇರುವುದಿಲ್ಲ." ಭೌತಿಕ ಚಟುವಟಿಕೆಗಳು ಅವನ ಭಿನ್ನ ಭಿನ್ನ ಶಕ್ತಿಗಳಿಂದ ನಡೆಯುತ್ತವೆ. ಸೃಷ್ಟಿತ ಜಗತ್ತಿನ ಭೌತಿಕ ಚಟುವಟಿಕೆಗಳಲ್ಲಿ ಭಗವಂತನು ಸದಾ ತಟಸ್ಥನು. ಈ ತಾಟಸ್ಥ್ಯವು ಇಲ್ಲಿ **ಉದಾಸೀನವತ್** ಪದದಿಂದ ಪ್ರಸ್ತಾಪಿತ ವಾಗಿದೆ. ಭೌತಿಕ ಚಟುವಟಿಕೆಗಳ ಪ್ರತಿಯೊಂದು ಸೂಕ್ಷ್ಮವಿವರದ ಮೇಲೆ ಅವನು ನಿಯಂತ್ರಣವನ್ನು ಹೊಂದಿದ್ದರೂ, ಅವನು ತಟಸ್ಥನೋ ಎಂಬಂತೆ ಕುಳಿತಿದ್ದಾನೆ. ಉಚ್ಚನ್ಯಾಯಾಲಯದ ನ್ಯಾಯಾಧೀಶನು ತನ್ನ ಪೀಠದ ಮೇಲೆ ಕುಳಿತಿರುವ ಉದಾಹರಣೆ ಯನ್ನು ಕೊಡಬಹುದು. ಅವನ ಆಜ್ಞೆಯಿಂದ ಅನೇಕ ಕಾರ್ಯಗಳು ನಡೆಯುತ್ತಿವೆ—ಒಬ್ಬನನ್ನು ನೇಣು ಹಾಕಲಾಗುತ್ತಿದೆ, ಮತ್ತೊಬ್ಬನನ್ನು ಕಾರಾಗೃಹದಲ್ಲಿ ಇರಿಸಲಾಗು

ತ್ತಿದೆ, ಮತ್ತೊಬ್ಬನಿಗೆ ಅಪಾರ ಧನವನ್ನು ನೀಡಲಾಗುತ್ತಿದೆ—ಆದರೂ ಅವನು ತಟಸ್ಥ. ಆ ಎಲ್ಲ ಲಾಭನಷ್ಟಗಳಿಗೂ ಅವನಿಗೂ ಯಾವ ಸಂಬಂಧವೂ ಇಲ್ಲ. ಅದೇ ಪ್ರಕಾರ, ಪ್ರತಿಯೊಂದು ಚಟುವಟಿಕೆಯ ಕ್ಷೇತ್ರದಲ್ಲಿ ಅವನ ಅಧಿಕಾರ ಇದ್ದರೂ, ಭಗವಂತನು ಸದಾ ತಟಸ್ಥನು. ವೇದಾಂತ ಸೂತ್ರದಲ್ಲಿ (2.1.34) ಹೀಗೆ ಹೇಳಿದೆ, **ವೈಷಮ್ಯ ನೈರ್ಘೃಣ್ಯೇ ನ**—ಅವನು ಈ ಭೌತಿಕ ಜಗತ್ತಿನ ದ್ವಂದ್ವತೆಗಳಲ್ಲಿ ಸನ್ನಿವೇಶಿತನಲ್ಲ. ಅವನು ಈ ದ್ವಂದ್ವತೆಗಳಿಗೆ ಅತೀತನು. ಅಥವಾ ಅವನು ಈ ಭೌತಿಕ ಜಗತ್ತಿನ ಸೃಷ್ಟಿ ಮತ್ತು ಲಯದಲ್ಲಿ ಆಸಕ್ತನೂ ಅಲ್ಲ. ಜೀವಿಗಳು ತಮ್ಮ ಪೂರ್ವ ಕರ್ಮಾನುಸಾರ ವಿವಿಧ ಜೀವ ವರ್ಗಗಳಲ್ಲಿ ತಮ್ಮ ವಿವಿಧ ರೂಪ ತಾಳುತ್ತಾರೆ, ಮತ್ತು ಭಗವಂತನು ಅದರಲ್ಲಿ ಅಡ್ಡ ಬರುವುದಿಲ್ಲ.

**ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ ।**
**ಹೇತುನಾನೇನ ಕೌನ್ತೇಯ ಜಗದ್ ವಿಪರಿವರ್ತತೇ ॥೧೦॥**

ಮಯಾ—ನನ್ನಿಂದ, ಅಧ್ಯಕ್ಷೇಣ—ಅಧೀಕ್ಷಣೆಯಿಂದ, ಪ್ರಕೃತಿಃ—ಭೌತಿಕ ಪ್ರಕೃತಿಯು, ಸೂಯತೇ—ವ್ಯಕ್ತವಾಗುತ್ತದೆ, ಸ—ಉಭಯ, ಚರ ಅಚರಮ್—ಚಲಿಸುವ ಮತ್ತು ಚಲಿಸದ, ಹೇತುನಾ—ಕಾರಣಕ್ಕಾಗಿ, ಅನೇನ—ಈ, ಕೌನ್ತೇಯ—ಹೇ ಕುಂತಿಪುತ್ರನೇ, ಜಗತ್—ಅಭಿವ್ಯಕ್ತ ವಿಶ್ವ, ವಿಪರಿವರ್ತತೇ—ಕೆಲಸ ಮಾಡುತ್ತಲಿದೆ.

**ಹೇ ಕುಂತಿ ಪುತ್ರನೇ, ನನ್ನ ಶಕ್ತಿಗಳಲ್ಲಿ ಒಂದಾದ ಈ ಭೌತಿಕ ಪ್ರಕೃತಿಯು, ಎಲ್ಲ ಚಲಿಸುವ ಮತ್ತು ಚಲಿಸದ ಜೀವಿಗಳನ್ನು ಉತ್ಪತ್ತಿಸುತ್ತಾ ನನ್ನ ನಿರ್ದೇಶನದಲ್ಲಿ ಕೆಲಸ ಮಾಡುತ್ತಲಿದೆ. ಅದರ ನಿಯಮಕ್ಕೆ ಒಳಪಟ್ಟು ಈ ಉದ್ಭೂತಿಯು ಮತ್ತೆ ಮತ್ತೆ ಸೃಷ್ಟಿಸಲ್ಪಡುತ್ತಿದೆ ಮತ್ತು ಲಯಗೊಳಿಸಲ್ಪಡುತ್ತಿದೆ.**

**ಭಾವಾರ್ಥ :** ಪರಮ ಪ್ರಭುವು ಭೌತಿಕ ಜಗತ್ತಿನ ಸಕಲ ಚಟುವಟಿಕೆಗಳಿಂದ ದೂರ ನಾಗಿದ್ದರೂ, ಪರಮ ನಿರ್ದೇಶಕನಾಗಿ ಇರುತ್ತಾನೆ ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಪರಮ ಪ್ರಭುವು ಈ ಭೌತಿಕ ಉದ್ಭೂತಿಯ ಪರಮ ಇಚ್ಛೆ ಮತ್ತು ಹಿನ್ನೆಲೆಯಾಗಿದ್ದಾನೆ, ಆದರೆ ನಿರ್ವಹಣೆಯು ಭೌತಿಕ ಪ್ರಕೃತಿಯಿಂದ ನಡೆಯುತ್ತಲಿದೆ. ಎಲ್ಲ ಭಿನ್ನ ಭಿನ್ನ ರೂಪಗಳಲ್ಲಿನ ಮತ್ತು ಯೋನಿಗಳಲ್ಲಿನ ಜೀವಿಗಳಿಗೆ, "ನಾನು ತಂದೆಯಾಗಿದ್ದೇನೆ", ಎಂದು ಭಗವದ್ಗೀತೆಯಲ್ಲಿ ಕೃಷ್ಣನು ಹೇಳುತ್ತಾನೆ. ಮಗುವಿಗಾಗಿ ತಂದೆಯು ತಾಯಿಯ ಗರ್ಭಕ್ಕೆ ಬೀಜಗಳನ್ನು ಕೊಡುತ್ತಾನೆ, ಮತ್ತು ಅದೇ ಪ್ರಕಾರ ಪರಮ ಪ್ರಭುವು ತನ್ನ ದೃಷ್ಟಿ ಬೀಳಿಸುವ ಮಾತ್ರದಿಂದಲೇ ಭೌತಿಕ ಪ್ರಕೃತಿಯ ಗರ್ಭದೊಳಕ್ಕೆ ಜೀವಿಗಳನ್ನು ಒಳ ಹೋಗಿಸುತ್ತಾನೆ, ಮತ್ತು ಅವು ತಮ್ಮ ಪೂರ್ವ ಇಚ್ಛೆಗಳ ಮತ್ತು ಕರ್ಮಗಳ ಅನುಸಾರ ಭಿನ್ನ ಭಿನ್ನ ರೂಪಗಳಲ್ಲಿ ಮತ್ತು ಯೋನಿಗಳಲ್ಲಿ ಹೊರಬರುತ್ತವೆ. ಈ ಎಲ್ಲ ಜೀವಿಗಳು, ಪರಮ ಪ್ರಭುವಿನ ದೃಷ್ಟಿಗೆ ಒಳಪಟ್ಟು ಹುಟ್ಟಿದವರಾಗಿದ್ದರೂ, ತಮ್ಮ ಪೂರ್ವ ಕರ್ಮಗಳ ಮತ್ತು ಇಚ್ಛೆಗಳ ಅನುಸಾರ ಭಿನ್ನ ಭಿನ್ನ ದೇಹಗಳನ್ನು ಸ್ವೀಕರಿಸುತ್ತಾರೆ. ಹೀಗೆ ಭಗವಂತನು

ಈ ಭೌತಿಕ ಸೃಷ್ಟಿಯೊಂದಿಗೆ ನೇರವಾಗಿ ಸಂಬಂಧಿತನಲ್ಲ. ಅವನು ಭೌತಿಕ ಪ್ರಕೃತಿಯ ಮೇಲೆ ಕೇವಲ ದೃಷ್ಟಿ ಬೀರುತ್ತಾನೆ; ಹೀಗೆ ಭೌತಿಕ ಪ್ರಕೃತಿಯು ಚುರುಕುಗೊಳಿಸಲ್ಪಡುತ್ತದೆ, ಮತ್ತು ಕೂಡಲೇ ಪ್ರತಿಯೊಂದು ಸೃಷ್ಟಿಸಲ್ಪಡುತ್ತದೆ. ಅವನು ಭೌತಿಕ ಪ್ರಕೃತಿಯ ಮೇಲೆ ದೃಷ್ಟಿ ಬೀರುವ ಕಾರಣ, ನಿಸ್ಸಂದೇಹವಾಗಿ ಪರಮ ಪ್ರಭುವಿನ ಕ್ರಿಯೆ ಇದೆ, ಆದರೆ ಅವನು ಭೌತಿಕ ಜಗತ್ತಿನ ಅಭಿವ್ಯಕ್ತತೆಯೊಡನೆ ನೇರವಾಗಿ ಮಾಡಬೇಕಾದುದೇನೂ ಇರುವುದಿಲ್ಲ. ಸ್ಮೃತಿಯಲ್ಲಿ ಈ ಉದಾಹರಣೆ ನೀಡಿದೆ : ಒಬ್ಬನ ಮುಂದೆ ಸುಗಂಧ ಹೂವಿದ್ದಾಗ, ವ್ಯಕ್ತಿಯ ಘ್ರಾಣಶಕ್ತಿಯಿಂದ ಆ ಸುವಾಸನೆಯು ಸ್ಪರ್ಶಿಸಲ್ಪಡುತ್ತದೆ, ಆದಾಗ್ಯೂ ಘ್ರಾಣವೂ ಮತ್ತು ಹೂವು ಪರಸ್ಪರ ದೂರ, ಭೌತಿಕ ಜಗತ್ತು ಮತ್ತು ಪರಮ ದೇವೋತ್ತಮ ಪುರುಷನ ನಡುವೆ ಇದೇ ಬಗೆಯ ಸಂಬಂಧವಿದೆ; ವಾಸ್ತವಿಕವಾಗಿ ಅವನು ಈ ಭೌತಿಕ ಜಗತ್ತಿನೊಡನೆ ಮಾಡಬೇಕಾದುದೇನೂ ಇಲ್ಲ, ಆದರೆ ಅವನು ತನ್ನ ದೃಷ್ಟಿ ಬೀರುವುದರಿಂದ ಸೃಷ್ಟಿಸುತ್ತಾನೆ ಮತ್ತು ಅಧಿಕಾರ ಪೂರ್ವಕವಾಗಿ ನಿಯಮಿಸುತ್ತಾನೆ. ಸಾರಾಂಶದಲ್ಲಿ, ಭೌತಿಕ ಪ್ರಕೃತಿಯು ಪರಮ ದೇವೋತ್ತಮ ಪುರುಷನ ಅಧೀಕ್ಷಣೆ ಇಲ್ಲದೆ ಏನೂ ಮಾಡಲಾರದು. ಆದರೂ ಪರಮ ಪುರುಷನು ಎಲ್ಲ ಭೌತಿಕ ಚಟುವಟಿಕೆಗಳಿಂದ ಅಸಂಗನು.

**ಅವಜಾನನ್ತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ।**
**ಪರಂ ಭಾವಮಜಾನನ್ತೋ ಮಮ ಭೂತಮಹೇಶ್ವರಮ್** ॥ ೧೧ ॥

ಅವಜಾನನ್ತಿ—ಅಪಹಾಸ್ಯ ಮಾಡುತ್ತಾರೆ, ಮಾಮ್—ನನ್ನನ್ನು, ಮೂಢಾಃ—ಮೂಢಜನರು, ಮಾನುಷೀಮ್—ಮಾನವ ರೂಪದಲ್ಲಿನ, ತನುಮ್—ದೇಹವೊಂದು, ಆಶ್ರಿತಮ್—ಧರಿಸಿದ, ಪರಮ್—ದಿವ್ಯ, ಭಾವಮ್—ಭಾವ, ಅಜಾನನ್ತಃ—ತಿಳಿಯದೆ, ಮಮ—ನನ್ನ, ಭೂತ—ಇರುವುದೆಲ್ಲದರ, ಮಹ ಈಶ್ವರಮ್—ಪರಮ ಯಜಮಾನ.

**ನಾನು ಮಾನವ ರೂಪದಲ್ಲಿ ಇಳಿದು ಬಂದಾಗ ಮೂಢರು ನನ್ನನ್ನು ತುಚ್ಛವಾಗೆಣಿಸಿ ಅಪಹಾಸ್ಯ ಮಾಡುತ್ತಾರೆ. ಇರುವುದೆಲ್ಲದರ ಪರಮ ಪ್ರಭುವೆಂಬ ನನ್ನ ದಿವ್ಯ ಭಾವವನ್ನು ಅವರು ತಿಳಿದಿರುವುದಿಲ್ಲ.**

**ಭಾವಾರ್ಥ :** ಈ ಅಧ್ಯಾಯದ ಹಿಂದಿನ ಶ್ಲೋಕಗಳ ಇತರ ವಿವರಣೆಗಳಿಂದ, ಪರಮ ದೇವೋತ್ತಮ ಪುರುಷನು, ಮಾನವನಾಗಿ ತೋರುತ್ತಿದ್ದರೂ, ಸಾಮಾನ್ಯ ಮಾನವನಲ್ಲ ಎಂಬುದು ಸ್ಪಷ್ಟ. ಸಂಪೂರ್ಣ ವಿಶ್ವ ಉದ್ಭೂತಿಯ ಸೃಷ್ಟಿ, ಸ್ಥಿತಿ ಮತ್ತು ಲಯಗಳನ್ನು ನಡೆಸುವ ದೇವೋತ್ತಮ ಪುರುಷನು ಮಾನವನಾಗಲಾರನು. ಆದರೂ ಕೃಷ್ಣನು ಬಲಿಷ್ಠ ಮಾನವನಷ್ಟೇ, ಅದಕ್ಕಿಂತ ಹೆಚ್ಚೇನೂ ಅಲ್ಲ, ಎಂದು ಭಾವಿಸುವ ಅನೇಕ ಮೂಢರಿದ್ದಾರೆ. ಬ್ರಹ್ಮ-ಸಂಹಿತೆಯಲ್ಲಿ ದೃಢಪಡಿಸಿರುವಂತೆ ವಾಸ್ತವಿಕವಾಗಿ ಆದಿ ಪರಮ ಪುರುಷನು ಅವನು (**ಈಶ್ವರಃ ಪರಮಃ ಕೃಷ್ಣಃ**); ಅವನು ಪರಮ ಪ್ರಭು.

ಅನೇಕ **ಈಶ್ವರರು**, ನಿಯಂತ್ರಕರು ಇದ್ದಾರೆ, ಮತ್ತು ಒಬ್ಬರ ಮತ್ತೊಬ್ಬರಿಗಿಂತ ದೊಡ್ಡವರೆಂದು ಕಾಣುತ್ತಾರೆ. ಭೌತಿಕ ಜಗತ್ತಿನ ವ್ಯವಹಾರಗಳ ಸಾಮಾನ್ಯ ನಿರ್ವಹಣೆ

ಯಲ್ಲಿ, ನಾವು ಒಬ್ಬ ಅಧಿಕಾರಿ ಅಥವಾ ನಿರ್ದೇಶಕನನ್ನು ಕಾಣುತ್ತೇವೆ, ಮತ್ತು ಅವನ ಮೇಲೆ ಒಬ್ಬ ಕಾರ್ಯದರ್ಶಿ ಇರುತ್ತಾನೆ, ಮತ್ತು ಅವನ ಮೇಲೆ ಒಬ್ಬ ಮಂತ್ರಿ ಮತ್ತು ಅವನ ಮೇಲೆ ರಾಷ್ಟ್ರಪತಿ ಇರುತ್ತಾನೆ. ಅವರಲ್ಲಿ ಪ್ರತಿಯೊಬ್ಬನೂ ನಿಯಂತ್ರಕನು, ಆದರೆ ಒಬ್ಬನು ಮತ್ತೊಬ್ಬನಿಂದ ನಿಯಂತ್ರಿತನು. ಬ್ರಹ್ಮಸಂಹಿತೆಯಲ್ಲಿ ಕೃಷ್ಣನು ಪರಮ ನಿಯಂತ್ರಕನೆಂದು ಹೇಳಿದೆ; ಭೌತಿಕ ಮತ್ತು ಆಧ್ಯಾತ್ಮಿಕ ಉಭಯ ಜಗತ್ತುಗಳಲ್ಲಿ ನಿಸ್ಸಂದೇಹವಾಗಿ ಅನೇಕ ನಿಯಂತ್ರಕರಿದ್ದಾರೆ, ಆದರೆ ಕೃಷ್ಣನು ಪರಮ ನಿಯಂತ್ರಕನು (**ಈಶ್ವರಃ ಪರಮಃ ಕೃಷ್ಣಃ**) ಮತ್ತು ಅವನ ದೇಹ **ಸಚ್ಚಿದಾನನ್ದ**, ಅಭೌತಿಕ.

ಹಿಂದಿನ ಶ್ಲೋಕಗಳಲ್ಲಿ ವರ್ಣಿಸಿದ ಅದ್ಭುತ ಕಾರ್ಯಗಳನ್ನು .ಭೌತಿಕ ದೇಹಗಳು ಮಾಡಲಾರವು. ಅವನ ದೇಹವು ಶಾಶ್ವತ, ಆನಂದಮಯ ಮತ್ತು ಜ್ಞಾನಪೂರ್ಣ. ಅವನು ಸಾಧಾರಣ ಮಾನವನಲ್ಲದಿದ್ದರೂ, ಮೂಢರು ಅವನನ್ನು ಅಪಹಾಸ್ಯ ಮಾಡುತ್ತಾರೆ ಮತ್ತು ಅವನನ್ನು ಮಾನವನೆಂದು ಭಾವಿಸುತ್ತಾರೆ. ಅವನ ದೇಹವು ಇಲ್ಲಿ **ಮಾನುಷೀಮ್** ಎಂದು ಕರೆಯಲ್ಪಟ್ಟಿದೆ, ಏಕೆಂದರೆ ಅವನು ಒಬ್ಬ ಮಾನವನಂತೆ, ಅರ್ಜುನನ ಸಖನಂತೆ, ಕುರುಕ್ಷೇತ್ರ ಯುದ್ಧದಲ್ಲಿ ಒಳಗೊಂಡ ರಾಜಕಾರಣಿಯಂತೆ ವರ್ತಿಸುತ್ತಿದ್ದಾನೆ. ಅನೇಕ ರೀತಿಗಳಲ್ಲಿ ಅವನು ಒಬ್ಬ ಸಾಮಾನ್ಯ ಮಾನವನಂತೆ ವರ್ತಿಸುತ್ತಿದ್ದಾನೆ, ಆದರೆ ವಾಸ್ತವಿಕವಾಗಿ ಅವನ ದೇಹವು **ಸಚ್ಚಿದಾನನ್ದ ವಿಗ್ರಹ**—ಶಾಶ್ವತ ಆನಂದ ಮತ್ತು ಜ್ಞಾನ ಪೂರ್ಣ. ಇದು ವೈದಿಕ ಭಾಷೆಯಲ್ಲಿಯೂ ದೃಢಪಟ್ಟಿದೆ. **ಸಚ್ಚಿದಾನನ್ದರೂಪಾಯ ಕೃಷ್ಣಾಯ**—"ಜ್ಞಾನದ ಶಾಶ್ವತ ಆನಂದಮಯ ರೂಪನಾದ ಪರಮ ದೇವೋತ್ತಮ ಪುರುಷ ಕೃಷ್ಣನಿಗೆ ನನ್ನ ಪ್ರಣಾಮಗಳನ್ನು ನಾನು ಸಮರ್ಪಿಸುತ್ತೇನೆ." (ಗೋಪಾಲತಾಪನೀ ಉಪನಿಷದ್ 1.1) ವೈದಿಕ ಭಾಷೆಯಲ್ಲಿ ಇತರ ವರ್ಣನೆಗಳೂ ಇವೆ. **ತಮ್ ಏಕಂ ಗೋವಿನ್ದಮ್**—"ಇಂದ್ರಿಯಗಳ ಮತ್ತು ಗೋವುಗಳ ಆನಂದವಾದ ಗೋವಿಂದನು ನೀನು." **ಸಚ್ಚಿದಾನನ್ದ ವಿಗ್ರಹಮ್**—"ನಿನ್ನ ರೂಪವು ದಿವ್ಯ, ಶಾಶ್ವತ ಜ್ಞಾನಾನಂದ ಪೂರ್ಣ." (ಗೋಪಾಲತಾಪನೀ ಉಪನಿಷದ್ 1.35)

ಭಗವಾನ್ ಕೃಷ್ಣನ ದೇಹದ ದಿವ್ಯ ಗುಣಗಳು, ಅದರ ಜ್ಞಾನಾನಂದ ಪೂರ್ಣತೆ ಇದ್ದರೂ, ಕೃಷ್ಣನನ್ನು ಸಾಮಾನ್ಯ ಮಾನವನೆಂದು ಅಪಹಾಸ್ಯ ಮಾಡುವ ಅನೇಕ ಭಗವದ್ಗೀತೆಯ ಪಂಡಿತರು ಮತ್ತು ವ್ಯಾಖ್ಯಾನಕಾರರು ಎಂದು ಎನಿಸಿಕೊಂಡಿರುವವರು ಇದ್ದಾರೆ. ತನ್ನ ಪೂರ್ವ ಪುಣ್ಯ ಕರ್ಮಾನುಸಾರ ಪಂಡಿತನು ಅಸಾಧಾರಣ ಮಾನವನಾಗಿ ಹುಟ್ಟಿರಬಹುದು, ಆದರೆ ಶ್ರೀಕೃಷ್ಣನ ಈ ಕಲ್ಪನೆಗೆ ಅಲ್ಪ ಜ್ಞಾನವೇ ಕಾರಣ. ಆದ್ದರಿಂದ ಅವನು **ಮೂಢ** ಎಂದು ಕರೆಯಲ್ಪಟ್ಟಿದ್ದಾನೆ, ಏಕೆಂದರೆ ಮೂಢರು ಮಾತ್ರವೇ ಕೃಷ್ಣನನ್ನು ಸಾಮಾನ್ಯಮಾನವನೆಂದು ಭಾವಿಸುತ್ತಾರೆ. ಮೂಢರು ಕೃಷ್ಣನನ್ನು ಸಾಮಾನ್ಯ ಮಾನವನೆಂದು ಭಾವಿಸುತ್ತಾರೆ ಏಕೆಂದರೆ ಅವರು ಪರಮ ಪ್ರಭುವಿನ ಮತ್ತು ಅವನ ಭಿನ್ನ ಭಿನ್ನ ಶಕ್ತಿಗಳ ಗುಹ್ಯತಮ ಚಟುವಟಿಕೆಗಳನ್ನು ತಿಳಿಯರು. ಕೃಷ್ಣನ ದೇಹವು ಸಂಪೂರ್ಣ ಜ್ಞಾನ ಮತ್ತು ಆನಂದದ ಸಂಕೇತ, ಮತ್ತು ಅವನು ಇರುವ ಪ್ರತಿಯೊಂದರ ಒಡೆಯ, ಮತ್ತು ಅವನು ಯಾರಿಗಾದರೂ ಮೋಕ್ಷ ನೀಡಬಲ್ಲನು ಎಂಬುದನ್ನು ಅವರು

ತಿಳಿಯರು. ಕೃಷ್ಣನಿಗೆ ಅಷ್ಟೊಂದು ದಿವ್ಯ ಗುಣಗಳಿವೆ ಎಂಬುದನ್ನು ಅವರು ತಿಳಿದಿಲ್ಲದಿರುವ ಕಾರಣ, ಅವರು ಅವನನ್ನು ಅಪಹಾಸ್ಯ ಮಾಡುತ್ತಾರೆ.

ಈ ಭೌತಿಕ ಜಗತ್ತಿನಲ್ಲಿ ಪರಮ ದೇವೋತ್ತಮ ಪುರುಷನ ಕಾಣಿಸಿಕೊಳ್ಳುವಿಕೆಯು ಅವನ ಅಂತರಂಗ ಶಕ್ತಿಯ ಅಭಿವ್ಯಕ್ತತೆ ಎಂಬುದನ್ನಾಗಲೀ ಅವರು ತಿಳಿದಿಲ್ಲ. ಅವನು ಭೌತಿಕ ಶಕ್ತಿಯ ಸ್ವಾಮಿ. ಅನೇಕ ಸ್ಥಳಗಳಲ್ಲಿ ವಿವರಿಸಿರುವಂತೆ (**ಮಮ ಮಾಯಾ ದುರತ್ಯಯಾ**), ಭೌತಿಕ ಶಕ್ತಿಯು ಬಹು ಬಲಯುತವಾಗಿದ್ದರೂ, ಅವನ ನಿಯಂತ್ರಣಕ್ಕೆ ಒಳಪಟ್ಟಿದೆ, ಮತ್ತು ಅವನಿಗೆ ಶರಣಾಗತನಾದವನು ಈ ಭೌತಿಕ ಶಕ್ತಿಯ ನಿಯಂತ್ರಣದಿಂದ ಪಾರಾಗಬಲ್ಲನು ಎಂದು ಅವನು ಹೇಳುತ್ತಾನೆ. ಕೃಷ್ಣನಿಗೆ ಶರಣಾಗತನಾದ ಆತ್ಮನು ಭೌತಿಕ ಶಕ್ತಿಯ ಪ್ರಭಾವದಿಂದ ಪಾರಾಗಬಲ್ಲನೆಂದ ಮೇಲೆ, ಸಮಗ್ರ ವಿಶ್ವ ಪ್ರಕೃತಿಯ ಸೃಷ್ಟಿ, ಸ್ಥಿತಿ ಮತ್ತು ಲಯಗಳನ್ನು ನಡೆಸುವ ಪರಮ ಪ್ರಭುವು ನಮ್ಮಂಥ ಭೌತಿಕ ದೇಹವನ್ನು ಹೊಂದಿರುವುದು ಹೇಗೆ ? ಆದ್ದರಿಂದ ಕೃಷ್ಣನ ಈ ಕಲ್ಪನೆಯು ಸಂಪೂರ್ಣ ಮೌಢ್ಯ. ಮೂಢರಾದರೋ, ಸಾಮಾನ್ಯ ಮಾನವನಂತೆ ತೋರುವ ದೇವೋತ್ತಮ ಪುರುಷ ಕೃಷ್ಣನು, ಎಲ್ಲ ಪರಮಾಣುಗಳು ಮತ್ತು ವಿಶ್ವರೂಪದ ಅದ್ಭುತ ಅಭಿವ್ಯಕ್ತತೆಯ ನಿಯಂತ್ರಕನಾಗಬಹುದೆಂಬುದನ್ನು ಗ್ರಹಿಸಲಾರರು. ಮಹತ್ತಮವಾದುದು ಮತ್ತು ಅಣುತ್ತಮವಾದುದು ಅವರ ಕಲ್ಪನೆಗೆ ಅತೀತ, ಆದ್ದರಿಂದ ಮಾನವನಂಥ ಒಂದು ರೂಪವು ಏಕಕಾಲದಲ್ಲಿ ಅನಂತವನ್ನು ಮತ್ತು ಬಲು ಸಣ್ಣದನ್ನು ನಿಯಂತ್ರಿಸಬಲ್ಲದು ಎಂಬುದನ್ನು ಅವರು ಊಹಿಸಲಾರರು. ವಾಸ್ತವಿಕವಾಗಿ ಅವನು ಅನಂತವನ್ನು ಮತ್ತು ಪರಿಮಿತವನ್ನು ನಿಯಂತ್ರಿಸುತ್ತಿದ್ದರೂ, ಅವನು ಈ ಎಲ್ಲ ಊದ್ಭೂತಿಯಿಂದ ಪ್ರತ್ಯೇಕವಾಗಿರುವನು. ಅವನ **ಯೋಗಮ್ ಐಶ್ವರಮ್** ಎಂದರೆ ಅವನ ಅಚಿಂತ್ಯ ದಿವ್ಯ ಶಕ್ತಿಯ ಬಗ್ಗೆ, ಅವನು ಅನಂತವನ್ನು ಮತ್ತು ಪರಿಮಿತವನ್ನು ಏಕಕಾಲದಲ್ಲಿ ನಿಯಂತ್ರಿಸಬಲ್ಲನು ಮತ್ತು ಅವನು ಅವುಗಳಿಂದ ದೂರ ಉಳಿದುಕೊಳ್ಳಬಲ್ಲನು ಎಂದು ಸ್ಪಷ್ಟವಾಗಿ ಹೇಳಿದೆ. ಸಾಮಾನ್ಯ ಮಾನವನಂತೆ ತೋರುವ ಕೃಷ್ಣನು, ಅನಂತವನ್ನು ಮತ್ತು ಪರಿಮಿತವನ್ನು ಹೇಗೆ ನಿಯಂತ್ರಿಸಬಲ್ಲನು ಎಂಬುದನ್ನು ಮೂಢರು ಊಹಿಸಲಾರರಾದರೂ, ಶುದ್ಧ ಭಕ್ತರು,ಕೃಷ್ಣನು ಪರಮ ದೇವೋತ್ತಮ ಪುರುಷನೆಂಬುದನ್ನು ತಿಳಿದಿರುವುದರಿಂದ ಇದನ್ನು ಒಪ್ಪುತ್ತಾರೆ. ಆದ್ದರಿಂದ ಅವರು ಅವನಿಗೆ ಸಂಪೂರ್ಣವಾಗಿ ಶರಣಾಗತರಾಗುತ್ತಾರೆ ಮತ್ತು ಕೃಷ್ಣ ಪ್ರಜ್ಞೆಯಲ್ಲಿ, ಭಗವಂತನ ಭಕ್ತಿಯುತ ಸೇವೆಯಲ್ಲಿ ನಿರತರಾಗುತ್ತಾರೆ.

ಮಾನವನಂತೆ ಭಗವಂತನ ಕಾಣಿಸಿಕೊಳ್ಳುವುದರ ಬಗ್ಗೆ ನಿರಾಕಾರವಾದಿಗಳ ಮತ್ತು ಸಾಕಾರವಾದಿಗಳ ನಡುವೆ ಅನೇಕ ವಿವಾದಗಳಿವೆ. ಆದರೆ, ಕೃಷ್ಣ ವಿಜ್ಞಾನವನ್ನು ಅರಿತುಕೊಳ್ಳುವ ಪ್ರಮಾಣ ಶಾಸ್ತ್ರಗಳಾದ ಭಗವದ್ಗೀತೆ ಮತ್ತು ಶ್ರೀಮದ್‌ಭಾಗವತವನ್ನು ನೋಡಿದರೆ, ಆಗ ಕೃಷ್ಣನು ಪರಮ ದೇವೋತ್ತಮ ಪುರುಷನೆಂಬುದನ್ನು ನಾವು ಅರಿತುಕೊಳ್ಳಬಹುದು. ಅವನು ಈ ಭೂಮಿಯ ಮೇಲೆ ಸಾಮಾನ್ಯ ಮನುಷ್ಯನಂತೆ ಕಾಣಿಸಿಕೊಂಡಿದ್ದರೂ, ಅವನು ಸಾಮಾನ್ಯ ಮಾನವನಲ್ಲ. ಶ್ರೀಮದ್ ಭಾಗವತದ ಪ್ರಥಮ

ಸ್ಕಂಧದ, ಪ್ರಥಮ ಅಧ್ಯಾಯದಲ್ಲಿ, ಶೌನಕರ ನಾಯಕತ್ವದಲ್ಲಿನ ಋಷಿಗಳು ಕೃಷ್ಣನ ಕಾರ್ಯಕಲಾಪಗಳ ಬಗ್ಗೆ ಕುರಿತು ಪ್ರಶ್ನೆ ಮಾಡಿದಾಗ, ಅವರು ನುಡಿದರು :

ಕೃತವಾನ್ ಕಿಲ ಕರ್ಮಾಣಿ ಸಹ ರಾಮೇಣ ಕೇಶವಃ।
ಅತಿಮರ್ತ್ಯಾನಿ ಭಗವಾನ್ ಗೂಢಃ ಕಪಟಮಾನುಷಃ॥

"ಪರಮ ದೇವೋತ್ತಮ ಪುರುಷನಾದ, ಭಗವಾನ್ ಶ್ರೀಕೃಷ್ಣನು, ಬಲರಾಮ ನೊಂದಿಗೆ, ಮಾನವನಂತೆ ಕ್ರೀಡೆ ಮಾಡಿದನು, ಮತ್ತು ಹಾಗೆ ಗೂಢವಾಗಿ ಅನೇಕ ಅತಿ ಮಾನುಷ ಕಾರ್ಯಗಳನ್ನು ಮಾಡಿದನು." (ಭಾಗವತ 1. 1. 20.) ಮಾನವನಂತೆ ಭಗವಂತನ ಕಾಣಿಸಿಕೊಳ್ಳುವಿಕೆಯು ಮೂಢರನ್ನು ದಿಗ್ಭ್ರಮೆಗೊಳಿಸುತ್ತದೆ. ಯಾವ ಮಾನವನೂ ಕೂಡಾ ಕೃಷ್ಣನು ಈ ಭೂಮಿಯ ಮೇಲಿದ್ದಾಗ ಆಚರಿಸಿದ ಅದ್ಭುತ ಕಾರ್ಯ ಗಳನ್ನು ಆಚರಿಸಲಾರನು. ಕೃಷ್ಣನು ತನ್ನ ತಂದೆತಾಯಿಗಳಾದ ವಸುದೇವ ಮತ್ತು ದೇವಕಿಯರ ಮುಂದೆ ಕಾಣಿಸಿಕೊಂಡಾಗ, ಅವನು ಚತುರ್ಭುಜಗಳೊಡನೆ ಕಾಣಿಸಿಕೊಂಡನು, ಆದರೆ ಮಾತಾಪಿತೃಗಳ ಸ್ತುತಿಸಮರ್ಪಣೆಯ ನಂತರ ಅವನು ತನ್ನನ್ನು ಸಾಮಾನ್ಯ ಮಗು ವಾಗಿ ಪರಿವರ್ತಿಸಿಕೊಂಡನು. ಭಾಗವತದಲ್ಲಿ (10. 3. 46) ಹೇಳಿರುವಂತೆ, **ಬಭೂವ ಪ್ರಾಕೃತಃ ಶಿಶುಃ**— ಅವನು ಒಂದು ಸಾಮಾನ್ಯ ಮಗುವಿನಂತೆ, ಅಥವಾ ಒಬ್ಬ ಸಾಮಾನ್ಯ ಮಾನವನಂತೆ ಆದನು. ಈಗ ಇಲ್ಲಿ ಮಾನವನಂತೆ ಭಗವಂತನ ಕಾಣಿಸಿಕೊಳ್ಳುವಿಕೆಯು ಅವನ ದಿವ್ಯ ದೇಹದ ಲಕ್ಷಣಗಳಲ್ಲಿ ಒಂದು ಎಂದು ಮತ್ತೆ ಸೂಚಿತವಾಗಿದೆ. ಭಗವ ದ್ಗೀತೆಯ ಹನ್ನೊಂದನೆಯ ಅಧ್ಯಾಯದಲ್ಲಿ ಕೂಡ ಅರ್ಜುನನು ಶ್ರೀಕೃಷ್ಣನ ಚತುರ್ಭುಜ ರೂಪ ನೋಡಲು ಪ್ರಾರ್ಥಿಸಿದನೆಂದು ಹೇಳಿದೆ (**ತೇನೈವ ರೂಪೇಣ ಚತುರ್ಭುಜೇನ**). ಈ ರೂಪವನ್ನು ತೋರಿದ ಬಳಿಕ, ಕೃಷ್ಣನು ಅರ್ಜುನನಿಂದ ನಿವೇದಿಸಲ್ಪಟ್ಟಾಗ, ಮತ್ತೆ ತನ್ನ ಮೂಲ ಮಾನವನಂಥ ರೂಪವನ್ನು ತಾಳಿದನು (**ಮಾನುಷಂ ರೂಪಮ್**). ಪರಮ ಪ್ರಭುವಿನ ಈ ವಿವಿಧ ಲಕ್ಷಣಗಳು ಖಂಡಿತವಾಗಿ ಸಾಮಾನ್ಯ ಮಾನವನದಲ್ಲ.

ಕೃಷ್ಣನನ್ನು ಅಪಹಾಸ್ಯ ಮಾಡುವ ಮತ್ತು ಮಾಯಾವಾದಿ ದರ್ಶನದಿಂದ ಕಲುಷಿತ ರಾದ ಕೆಲವರು ಕೃಷ್ಣನು ಕೇವಲ ಸಾಮಾನ್ಯ ಮಾನವನು ಎಂಬುದನ್ನು ಸಾಧಿಸಲು ಶ್ರೀಮದ್‌ಭಾಗವತದಿಂದ (3. 29. 21) ಕೆಳಗಿನ ಶ್ಲೋಕವನ್ನು ಉಲ್ಲೇಖಿಸುತ್ತಾರೆ. **ಅಹಂ ಸರ್ವೇಷು ಭೂತೇಷು ಭೂತಾತ್ಮಾವಸ್ಥಿತಃ ಸದಾ**— "ಪರಮನು ಪ್ರತಿಯೊಬ್ಬ ಜೀವಿಯಲ್ಲಿಯೂ ಇರುವನು". ಕೃಷ್ಣನನ್ನು ಅಪಹಾಸ್ಯ ಮಾಡುವ ಅನಧಿಕೃತ ವ್ಯಕ್ತಿಗಳ ವ್ಯಾಖ್ಯಾನವನ್ನು ಅನುಸರಿಸುವ ಬದಲು ಜೀವ ಗೋಸ್ವಾಮಿ ಮತ್ತು ವಿಶ್ವನಾಥ ಚಕ್ರವರ್ತಿ ಠಾಕೂರರಂಥ ವೈಷ್ಣವ ಆಚಾರ್ಯರ ಈ ವಿಶಿಷ್ಟ ಶ್ಲೋಕವನ್ನು ಗಮನಿಸು ವುದು ಮೇಲು. ಜೀವ ಗೋಸ್ವಾಮಿಯವರು, ಈ ಶ್ಲೋಕವನ್ನು ವ್ಯಾಖ್ಯಾನಿಸುತ್ತಾ ಹೇಳುತ್ತಾರೆ, ಕೃಷ್ಣನು, ತನ್ನ ಪೂರ್ಣ ವಿಸ್ತರಣೆಯಾದ ಪರಮಾತ್ಮನಾಗಿ ಚರಾಚರ ಜೀವಿ ಗಳಲ್ಲಿ ಸನ್ನಿವೇಶಿತನು ; ಆದ್ದರಿಂದ ದೇವಾಲಯದಲ್ಲಿನ ಪರಮ ಪ್ರಭುವಿನ ರೂಪವಾದ **ಅರ್ಚಾಮೂರ್ತಿಗೆ** ಕೇವಲ ತನ್ನ ಗಮನವನ್ನು ನೀಡುವ, ಮತ್ತು ಇತರ ಜೀವಿಗಳನ್ನು

ಗೌರವಿಸದ ಆರಂಭ ಭಕ್ತನು ಮಂದಿರದಲ್ಲಿ ಭಗವಂತನ ರೂಪವನ್ನು ನಿರರ್ಥಕವಾಗಿ ಅರ್ಚಿಸುತ್ತಾನೆ. ಭಗವದ್ಭಕ್ತರಲ್ಲಿ ಮೂರು ಪ್ರಕಾರ, ಮತ್ತು ಆರಂಭ ಭಕ್ತನು ಅತ್ಯಂತ ಕೆಳಮಟ್ಟದಲ್ಲಿದ್ದಾನೆ. ಆರಂಭ ಭಕ್ತನು ಇತರ ಭಕ್ತರಿಗೆ ಗಮನ ನೀಡುವುದಕ್ಕಿಂತಲೂ ದೇವಾಲಯದಲ್ಲಿನ ಮೂರ್ತಿಗೆ ಹೆಚ್ಚು ಗಮನ ನೀಡುತ್ತಾನೆ ; ಆದ್ದರಿಂದ ಇಂಥ ಮನೋ ಭಾವವನ್ನು ತಿದ್ದಿಕೊಳ್ಳಬೇಕೆಂದು ವಿಶ್ವನಾಥ ಚಕ್ರವರ್ತಿ ಠಾಕೂರರು ಎಚ್ಚರಿಕೆ ನೀಡು ತ್ತಾರೆ. ಕೃಷ್ಣನು ಪರಮಾತ್ಮನಾಗಿ ಪ್ರತಿಯೊಬ್ಬನ ಹೃದಯದಲ್ಲಿಯೂ ಸನ್ನಿಹಿತನಾಗಿರು ವುದರಿಂದ ಪ್ರತಿಯೊಂದು ದೇಹವೂ ಭಗವಂತನು ನೆಲೆಸಿರುವ ದೇಹ ಅಥವಾ ಮಂದಿರ ವೆಂದು ಭಕ್ತನು ಕಾಣಬೇಕು ; ಹೀಗಾಗಿ ಭಗವಂತನ ಮಂದಿರಕ್ಕೆ ಗೌರವ ಸಲ್ಲಿಸುವಂತೆ, ಒಬ್ಬನು ಪರಮಾತ್ಮನು ವಾಸಿಸುವ ಪ್ರತಿಯೊಂದು ದೇಹಕ್ಕೂ ಉಚಿತವಾಗಿ ಗೌರವಿಸ ಬೇಕು. ಆದ್ದರಿಂದ ಪ್ರತಿಯೊಬ್ಬನು ಉಚಿತವಾಗಿ ಗೌರವಿಸಲ್ಪಡಬೇಕು, ಮತ್ತು ಅಲಕ್ಷಿಸಲ್ಪಡಬಾರದು.

ದೇವಾಲಯ ಪೂಜೆಯನ್ನು ನಿಂದಿಸುವ ಅನೇಕ ವ್ಯಕ್ತಿಶೂನ್ಯವಾದಿಗಳಿದ್ದಾರೆ. ಭಗ ವಂತನು ಎಲ್ಲ ಕಡೆಯೂ ಇರುವುದರಿಂದ, ಒಬ್ಬನು ತನ್ನನ್ನು ಮಂದಿರ ಪೂಜೆಗೆ ಏಕೆ ಸೀಮಿತಗೊಳಿಸಿಕೊಳ್ಳಬೇಕು ಎಂದು ಕೇಳುತ್ತಾರೆ. ಭಗವಂತನು ಎಲ್ಲ ಕಡೆಯಲ್ಲಿಯೂ ಇರುವುದಾದರೆ, ಅವನು ಮಂದಿರದಲ್ಲಿ ಅಥವಾ ಮೂರ್ತಿಯಲ್ಲಿ ಇಲ್ಲವೆ ? ವ್ಯಕ್ತಿವಾದಿ ಮತ್ತು ವ್ಯಕ್ತಿಶೂನ್ಯವಾದಿಯು ನಿರಂತರವಾಗಿ ಪರಸ್ಪರ ಕಾದಾಡುತ್ತಿದ್ದರೂ, ಕೃಷ್ಣನು ಪರಮ ಪುರುಷನಾಗಿದ್ದರೂ, ಬ್ರಹ್ಮ-ಸಂಹಿತೆಯಲ್ಲಿ ದೃಢೀಕರಿಸಿರುವಂತೆ, ಅವನು ಸರ್ವತ್ರ ವ್ಯಾಪ್ತನು ಎಂದು ಕೃಷ್ಣ ಪ್ರಜ್ಞೆಯಲ್ಲಿನ ಪರಿಪೂರ್ಣ ಭಕ್ತನು ತಿಳಿದಿರುತ್ತಾನೆ. ಅವನ ಸ್ವಯಂ ಧಾಮವು ಗೋಲೋಕ ವೃಂದಾವನವಾಗಿದ್ದರೂ ಮತ್ತು ಅವನು ಸದಾ ಅಲ್ಲಿ ಇರುತ್ತಿದ್ದರೂ, ಅವನ ಶಕ್ತಿಯ ವಿವಿಧ ಅಭಿವ್ಯಕ್ತತೆಗಳಿಂದ ಮತ್ತು ಅವನ ಸಮಗ್ರ ವಿಸ್ತರಣೆಯಿಂದ, ಭೌತಿಕ ಮತ್ತು ಆಧ್ಯಾತ್ಮಿಕ ಸೃಷ್ಟಿಯ ಎಲ್ಲ ಭಾಗಗಳಲ್ಲಿಯೂ, ಎಲ್ಲೆಡೆಗಳಲ್ಲಿಯೂ ಅವನು ಇರುವನು.

**ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ।**
**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥೧೨॥**

ಮೋಘ ಆಶಾಃ—ತಮ್ಮ ಆಸೆಗಳಲ್ಲಿ ದಿಗ್ಭ್ರಮಿತರು, ಮೋಘಕರ್ಮಾಣಃ—ಕಾಮ್ಯ ಕರ್ಮಗಳಲ್ಲಿ ದಿಗ್ಭ್ರಮಿತರು, ಮೋಘಜ್ಞಾನಾಃ—ಜ್ಞಾನದಲ್ಲಿ ದಿಗ್ಭ್ರಮಿತರು, ವಿಚೇತಸಃ—ದಿಗ್ಭ್ರಮಿತರು, ರಾಕ್ಷಸೀಮ್—ರಾಕ್ಷಸೀಯ, ಆಸುರೀಮ್—ನಾಸ್ತಿಕ, ಚ—ಮತ್ತು, ಏವ—ಖಂಡಿತವಾಗಿ, ಪ್ರಕೃತಿಮ್—ಪ್ರಕೃತಿಯನ್ನು, ಮೋಹಿನೀಮ್—ದಿಗ್ಭ್ರಮೆಗೊಳಿಸುವ, ಶ್ರಿತಾಃ—ಆಶ್ರಯಿಸಿ.

**ಹೀಗೆ ದಿಗ್ಭ್ರಮಿತರಾದವರು ರಾಕ್ಷಸೀಯ ಮತ್ತು ನಾಸ್ತಿಕ ಅಭಿಪ್ರಾಯಗಳಿಂದ ಆಕರ್ಷಿತರಾಗುತ್ತಾರೆ. ಆ ಭ್ರಮಿತ ಸ್ಥಿತಿಯಲ್ಲಿ, ಮೋಕ್ಷಕ್ಕಾಗಿ ಅವರ ನಿರೀಕ್ಷೆಗಳು, ಅವರ ಕಾಮ್ಯ ಕರ್ಮಗಳು ಮತ್ತು ಅವರ ಜ್ಞಾನಾಭಿವೃದ್ಧಿ ಎಲ್ಲವೂ ವಿಫಲ ವಾಗುತ್ತವೆ.**

**ಭಾವಾರ್ಥ :** ತಾವು ಕೃಷ್ಣಪ್ರಜ್ಞೆಯಲ್ಲಿ ಮತ್ತು ಭಕ್ತಿಯುತ ಸೇವೆಯಲ್ಲಿ ಇರುವದಾಗಿ ಭಾವಿಸುವ, ಆದರೆ ಹೃದಯದಲ್ಲಿ ಪರಮ ದೇವೋತ್ತಮ ಪುರುಷ ಕೃಷ್ಣನನ್ನು ಪರಸತ್ಯನೆಂದು ಅಂಗೀಕರಿಸದ ಅನೇಕ ಭಕ್ತರಿದ್ದಾರೆ. ಅವರಿಗೆ, ಭಕ್ತಿಯುತ ಸೇವಾ ಫಲವು— ಪರಂಧಾಮಕ್ಕೆ ಮರಳುವುದು— ಎಂದಿಗೂ ರುಚಿಸಲು ಸಿಗದು. ಅದೇ ಪ್ರಕಾರ, ಪುಣ್ಯ ಕಾಮ್ಯ ಕರ್ಮಗಳಲ್ಲಿ ನಿರತರಾಗಿರುವ ಮತ್ತು ಅಂತಿಮವಾಗಿ ಈ ಭೌತಿಕ ಬಂಧನದಿಂದ ಮುಕ್ತರಾಗುವ ವಿಶ್ವಾಸವುಳ್ಳವರಾಗಲೀ ಎಂದಿಗೂ ಯಶಸ್ವಿಯಾಗುವುದಿಲ್ಲ, ಏಕೆಂದರೆ ಅವರು ಪರಮ ದೇವೋತ್ತಮ ಪುರುಷ ಕೃಷ್ಣನನ್ನು ಅಪಹಾಸ್ಯ ಮಾಡುತ್ತಾರೆ. ಅರ್ಥಾತ್, ಕೃಷ್ಣನನ್ನು ಅಪಹಾಸ್ಯಮಾಡುವವರನ್ನು ಅಸುರರು ಅಥವಾ ನಾಸ್ತಿಕರೆಂದು ತಿಳಿಯಬೇಕು. ಭಗವದ್ಗೀತೆಯ ಏಳನೆಯ ಅಧ್ಯಾಯದಲ್ಲಿ ವರ್ಣಿಸಿದಂತೆ, ಅಂಥ ಆಸುರೀ ದುಷ್ಟರು ಕೃಷ್ಣನಿಗೆ ಎಂದೂ ಶರಣಾಗತರಾಗುವುದಿಲ್ಲ. ಆದ್ದರಿಂದ ಪರಮ ಸತ್ಯಕ್ಕೆ ತಲಪುವಲ್ಲಿ ಅವರ ಮಾನಸಿಕ ಊಹಾಪೋಹಗಳು, ಸಾಮಾನ್ಯ ಜೀವಿಯು ಮತ್ತು ಕೃಷ್ಣನು ಒಂದೇ ಎಂಬ ಮಿಥ್ಯಾ ನಿರ್ಣಯಕ್ಕೆ ಅವರನ್ನು ಕೊಂಡೊಯ್ಯುತ್ತವೆ. ಅಂಥ ಮಿಥ್ಯಾ ನಂಬಿಕೆಯಿಂದ, ಯಾವುದೇ ಮಾನವನ ದೇಹವು ಭೌತಿಕ ಪ್ರಕೃತಿಯಿಂದ ಈಗ ಸುಮ್ಮನೇ ಆವೃತವಾಗಿದೆ, ಮತ್ತು ಒಬ್ಬನು ಈ ಭೌತಿಕ ದೇಹದಿಂದ ಮುಕ್ತನಾದೊಡನೆಯೇ ಭಗವಂತ ಮತ್ತು ತನ್ನ ನಡುವೆ ಯಾವ ವ್ಯತ್ಯಾಸವೂ ಇಲ್ಲ ಎಂದು ಅವರು ಭಾವಿಸುತ್ತಾರೆ. ಕೃಷ್ಣನೊಂದಿಗೆ ಒಂದಾಗುವ ಈ ಪ್ರಯತ್ನವು ಭ್ರಮನಿಮಿತ್ತ ಕಂಗೆಡಿಸಲ್ಪಡುತ್ತದೆ. ಅಂಥ ನಾಸ್ತಿಕ ಮತ್ತು ಆಸುರೀ ಅಧ್ಯಾತ್ಮ ಜ್ಞಾನದ ಅಭಿವೃದ್ಧಿಯು ಸದಾ ನಿರರ್ಥಕ. ಅದು ಈ ಶ್ಲೋಕದ ಸೂಚನೆ. ಅಂಥ ವ್ಯಕ್ತಿಗಳಿಗೆ, ವೇದಾಂತ-ಸೂತ್ರ ಮತ್ತು ಉಪನಿಷತ್ತುಗಳಂಥ ವೈದಿಕ ಸಾಹಿತ್ಯದಲ್ಲಿನ ಜ್ಞಾನದ ಅಭಿವೃದ್ಧಿಯು ಸದಾ ದಿಗ್ಭ್ರಮೆಗೊಳ್ಳುತ್ತದೆ.

ಆದ್ದರಿಂದ, ಪರಮ ದೇವೋತ್ತಮ ಪುರುಷ, ಕೃಷ್ಣನನ್ನು ಸಾಮಾನ್ಯ ಮಾನವನೆಂದು ಭಾವಿಸುವುದು ಮಹಾಪರಾಧ. ಹಾಗೆ ಮಾಡುವವರು, ಕೃಷ್ಣನ ಶಾಶ್ವತ ರೂಪವನ್ನು ಅರ್ಥಮಾಡಿಕೊಳ್ಳಲಾಗದ ಕಾರಣ, ಖಂಡಿತವಾಗಿ ಭ್ರಮಿತರು. ಬೃಹದ್ ವಿಷ್ಣು ಸ್ಮೃತಿಯು ಸ್ಪಷ್ಟವಾಗಿ ಹೇಳುತ್ತದೆ :

ಯೋ ವೇತ್ತಿ ಭೌತಿಕಂ ದೇಹಂ ಕೃಷ್ಣಸ್ಯ ಪರಮಾತ್ಮನಃ
ಸ ಸರ್ವಸ್ಮಾದ್ ಬಹಿಷ್ಕಾರ್ಯಃ ಶ್ರೌತಸ್ಮಾರ್ತವಿಧಾನತಃ
ಮುಖಂ ತಸ್ಯಾವಲೋಕ್ಯಾಪಿ ಸಚೇಲಂ ಸ್ನಾನಮಾಚರೇತ್

"ಕೃಷ್ಣನ ದೇಹವು ಭೌತಿಕವೆಂದು ಭಾವಿಸುವವನನ್ನು ಶ್ರುತಿ ಮತ್ತು ಸ್ಮೃತಿಗಳ ಎಲ್ಲ ಸಂಸ್ಕಾರಗಳು ಮತ್ತು ಕಾರ್ಯಕಲಾಪಗಳಿಂದ ಹೊರಗಟ್ಟಬೇಕು. ಒಬ್ಬನು ಅಕಸ್ಮಾತ್ತಾಗಿ ಅವನ ಮುಖವನ್ನು ನೋಡಿದರೆ, ಆ ಸೋಂಕಿನಿಂದ ತನ್ನನ್ನು ತೊಲಗಿಸಿಕೊಳ್ಳಲು ಕೂಡಲೇ ಗಂಗಾಸ್ನಾನಮಾಡಬೇಕು. ಪರಮದೇವೋತ್ತಮ ಪುರುಷನ ಒಗ್ಗೆ ಅಸೂಯಾಪರರಾಗಿರುವ ಕಾರಣ ಅವರು ಕೃಷ್ಣನನ್ನು ಅಪಹಾಸ್ಯ ಮಾಡುತ್ತಾರೆ. ನಾಸ್ತಿಕ

ಮತ್ತು ಆಸುರೀ ಜೀವನದ ಯೋನಿಗಳಲ್ಲಿ ಪದೇ ಪದೇ ಜನ್ಮವೆತ್ತುವುದು ಅವರ ನಿಶ್ಚಿತ ಹಣೆಯಬರಹ. ನಿರಂತರವಾಗಿ, ಅವರ ನಿಜ ಜ್ಞಾನವು ಭ್ರಮೆಗೆ ಒಳಪಟ್ಟಿರುತ್ತದೆ, ಮತ್ತು ಕ್ರಮೇಣ ಅವರು ಸೃಷ್ಟಿಯ ಅತ್ಯಂತ ಅಂಧಕಾರ ಪ್ರದೇಶಕ್ಕೆ ಹಿಮ್ಮರಳುತ್ತಾರೆ."

**ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।**
**ಭಜನ್ತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ॥೧೩॥**

ಮಹಾ ಆತ್ಮಾನಃ—ಮಹಾತ್ಮರು, ತು—ಆದರೆ, ಮಾಮ್—ನನ್ನನ್ನು, ಪಾರ್ಥ—ಹೇ ಪೃಥಾ ಪುತ್ರನೇ, ದೈವೀಮ್—ದೈವಿಕ, ಪ್ರಕೃತಿಮ್—ಪ್ರಕೃತಿಯನ್ನು, ಆಶ್ರಿತಾಃ—ಆಶ್ರಯಿಸಿದವರಾಗಿ, ಭಜನ್ತಿ—ಸೇವೆಯನ್ನು ಸಲ್ಲಿಸುತ್ತಾರೆ, ಅನನ್ಯಮನಸಃ—ಮನಸ್ಸಿನ ವಿಚಲತೆ ಇಲ್ಲದೆ, ಜ್ಞಾತ್ವಾ—ತಿಳಿದು, ಭೂತ—ಸೃಷ್ಟಿಯ, ಆದಿಮ್—ಮೂಲವನ್ನು, ಅವ್ಯಯಮ್—ಅವ್ಯಯ.

**ಹೇ ಪೃಥಾ ಪುತ್ರನೇ, ಭ್ರಮಿತರಲ್ಲದವರು, ಮಹಾತ್ಮರು, ದೈವೀ ಪ್ರಕೃತಿಯ ರಕ್ಷಣೆಗೆ ಒಳಪಟ್ಟಿರುವವರು. ಅವರು ನನ್ನನ್ನು ಆದಿ ಅವ್ಯಯ ಪರಮ ದೇವೋತ್ತಮ ಪುರುಷನೆಂದು ತಿಳಿದಿರುವುದರಿಂದ, ಭಕ್ತಿಯುತ ಸೇವೆಯಲ್ಲಿ ಪೂರ್ಣವಾಗಿ ನಿರತ ರಾಗಿರುವರು.**

**ಭಾವಾರ್ಥ :** ಈ ಶ್ಲೋಕದಲ್ಲಿ **ಮಹಾತ್ಮರ** ವರ್ಣನೆಯು ಸ್ಪಷ್ಟವಾಗಿ ನೀಡಿದೆ. ಮಹಾತ್ಮನು ಈಗಾಗಲೇ ದೈವೀ ಪ್ರಕೃತಿಯಲ್ಲಿ ಸನ್ನಿವೇಶಿತನಾಗಿರುವುದು ಅವನ ಮೊದಲ ನೆಯ ಗುರುತು. ಅವನು ಭೌತಿಕ ಪ್ರಕೃತಿಯ ನಿಯಂತ್ರಣಕ್ಕೆ ಒಳಪಟ್ಟಿರುವುದಿಲ್ಲ. ಇದು ಹೇಗೆ ಪರಿಣಮಿಸುತ್ತದೆ ? ಅದನ್ನು ಏಳನೆಯ ಅಧ್ಯಾಯದಲ್ಲಿ ವಿವರಿಸಿದೆ : ಪರಮ ದೇವೋತ್ತಮ ಪುರುಷ ಶ್ರೀಕೃಷ್ಣನಿಗೆ ಶರಣಾಗತನಾಗುವವನು, ಭೌತಿಕ ಪ್ರಕೃತಿ ನಿಯಂತ್ರಣದಿಂದ ಕೂಡಲೇ ಮುಕ್ತನಾಗುತ್ತಾನೆ. ಅದುವೇ ಅರ್ಹತೆ. ಒಬ್ಬನು ತನ್ನ ಆತ್ಮವನ್ನು ಪರಮ ದೇವೋತ್ತಮ ಪುರುಷನಿಗೆ ಶರಣಾಗತಗೊಳಿಸಿದ ಕೂಡಲೇ, ಅವನು ಭೌತಿಕ ಪ್ರಕೃತಿಯ ನಿಯಂತ್ರಣದಿಂದ ಮುಕ್ತನಾಗಬಲ್ಲನು. ಅದು ಪ್ರಾರಂಭಿಕ ಸೂತ್ರ. ತಟಸ್ಥ ಶಕ್ತಿಯಾಗಿರುವುದರಿಂದ, ಜೀವಿಯು ಭೌತಿಕ ಪ್ರಕೃತಿಯ ನಿಯಂತ್ರಣದಿಂದ ಮುಕ್ತ ನಾದೊಡನೆಯೇ, ಅವನು ಆಧ್ಯಾತ್ಮ ಪ್ರಕೃತಿಯ ಮಾರ್ಗದರ್ಶನದಲ್ಲಿ ಇರಿಸಲ್ಪಡುತ್ತಾನೆ. ಆಧ್ಯಾತ್ಮಿಕ ಪ್ರಕೃತಿಯ ಮಾರ್ಗದರ್ಶನವು **ದೈವೀಪ್ರಕೃತಿ** ಎಂದು ಕರೆಯಲ್ಪಟ್ಟಿದೆ. ಒಬ್ಬನು ಹಾಗೆ— ಪರಮ ದೇವೋತ್ತಮ ಪುರುಷನಿಗೆ ಶರಣಾಗತನಾಗಿ— ಉನ್ನತಿಸಲ್ಪಟ್ಟಾಗ, ಅವನು **ಮಹಾತ್ಮಾ** ಹಂತವನ್ನು ತಲುಪುತ್ತಾನೆ.

ಕೃಷ್ಣನು ಆದಿ ಪರಮ ಪುರುಷನು, ಸರ್ವಕಾರಣಗಳ ಕಾರಣನು, ಎಂದು ಮಹಾತ್ಮನು ಪರಿಪೂರ್ಣವಾಗಿ ಚೆನ್ನಾಗಿ ತಿಳಿದಿರುವುದರಿಂದ, ಅವನು ತನ್ನ ಗಮನವನ್ನು ಕೃಷ್ಣನಿಂದ ಬಾಹ್ಯವಾದ ಯಾವ ವಿಷಯದ ಕಡೆಗೂ ತಿರುಗಿಸುವುದಿಲ್ಲ. ಅದರ ಬಗ್ಗೆ ಸಂದೇಹವೇ ಇಲ್ಲ. ಅಂಥ ಮಹಾತ್ಮನು, ಇತರ ಮಹಾತ್ಮರ, ಎಂದರೆ ಶುದ್ಧ ಭಕ್ತ

ರೊಂದಿಗೆ ಸಹವಾಸದ ಮೂಲಕ ವರ್ಧಿಸುತ್ತಾನೆ. ಶುದ್ಧ ಭಕ್ತರು ಚತುರ್ಭುಜ ಮಹಾ ವಿಷ್ಣುವಿನಂಥ ಕೃಷ್ಣನ ಇತರ ರೂಪಗಳಿಂದಲೂ ಕೂಡ ಆಕರ್ಷಿತರಲ್ಲ. ಅವರು ಕೃಷ್ಣನ ದ್ವಿಭುಜ ರೂಪದಿಂದ ಮಾತ್ರ ಆಕರ್ಷಿತರು. ಅವರು ಕೃಷ್ಣನ ಇತರ ರೂಪಗಳಿಂದಲೂ ಆಕರ್ಷಿತರಲ್ಲ, ಅಥವಾ ಅವರು ದೇವತೆಯ ಅಥವಾ ಮಾನವನ ಯಾವುದೇ ರೂಪದೊಡನೆ ಆಸಕ್ತರಲ್ಲ. ಅವರು ಕೃಷ್ಣಪ್ರಜ್ಞೆಯಲ್ಲಿ ಕೃಷ್ಣನನ್ನು ಮಾತ್ರ ಧ್ಯಾನಿಸುತ್ತಾರೆ. ಅವರು ಕೃಷ್ಣಪ್ರಜ್ಞೆಯಲ್ಲಿ ಭಗವಂತನ ಅವಿಚಲಿತ ಸೇವೆಯಲ್ಲಿ ಸದಾ ನಿರತರು.

**ಸತತಂ ಕೀರ್ತಯನ್ತೋ ಮಾಂ ಯತನ್ತಶ್ಚ ದೃಢವ್ರತಾಃ ।**
**ನಮಸ್ಯನ್ತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥೧೪॥**

ಸತತಮ್—ಸದಾ, ಕೀರ್ತಯನ್ತಃ—ಕೀರ್ತಿಸುತ್ತಾ, ಮಾಮ್—ನನ್ನ ಬಗ್ಗೆ, ಯತನ್ತಃ—ಪೂರ್ಣವಾಗಿ ಪ್ರಯತ್ನಿಸುತ್ತ, ಚ—ಕೂಡ, ದೃಢ ವ್ರತಾಃ—ನಿರ್ಧಾರದೊಡನೆ, ನಮಸ್ಯನ್ತಃ—ನಮಸ್ಕರಿಸುತ್ತ, ಚ—ಮತ್ತು, ಮಾಮ್—ನನ್ನನ್ನು, ಭಕ್ತ್ಯಾ—ಭಕ್ತಿಯಲ್ಲಿ, ನಿತ್ಯಯುಕ್ತಾಃ—ನಿರಂತರ ನಿರತರಾಗಿ, ಉಪಾಸತೇ—ಆರಾಧಿಸುವರು.

**ಸದಾ ನನ್ನ ಮಹಿಮೆಗಳನ್ನು ಕೀರ್ತಿಸುತ್ತಾ, ಮಹಾ ನಿರ್ಧಾರದೊಡನೆ ಪ್ರಯತ್ನಿಸುತ್ತಾ, ನನ್ನ ಮುಂದೆ ನಮಸ್ಕರಿಸುತ್ತ, ಈ ಮಹಾ ಆತ್ಮರು ನಿರಂತರವಾಗಿ ಭಕ್ತಿಯೊಡನೆ ನನ್ನನ್ನು ಆರಾಧಿಸುತ್ತಾರೆ.**

**ಭಾವಾರ್ಥ :** ಸಾಮಾನ್ಯ ಮನುಷ್ಯನಿಗೆ ರಬ್ಬರ್ ಮುದ್ರೆಯೊತ್ತಿ ಮಹಾತ್ಮನನ್ನು ತಯಾರಿಸಲಾಗದು. ಅವನ ಸಂಕೇತಗಳು ಇಲ್ಲಿ ವರ್ಣಿಸಲಾಗಿದೆ : ಮಹಾತ್ಮನು ದೇವೋತ್ತಮ ಪುರುಷ ಪರಮ ಪ್ರಭು ಕೃಷ್ಣನ ಮಹಿಮೆಗಳನ್ನು ಕೀರ್ತಿಸುವುದರಲ್ಲಿ ಸದಾ ನಿರತನು. ಅವನಿಗೆ ಬೇರೆ ಕೆಲಸವಿಲ್ಲ. ಅವನು ಸದಾ ಭಗವಂತನ ಕೀರ್ತನೆಯಲ್ಲಿ ನಿರತನು. ಅರ್ಥಾತ್, ಅವನು ವ್ಯಕ್ತಿಶೂನ್ಯವಾದಿಯಲ್ಲ. ಕೀರ್ತಿಸುವ ಪ್ರಶ್ನೆ ಇರುವಾಗ ಒಬ್ಬನು ಪರಮ ಪ್ರಭುವಿನ ಪವಿತ್ರ ನಾಮ, ಅವನ ನಿತ್ಯರೂಪ, ಅವನ ದಿವ್ಯಗುಣಗಳು ಮತ್ತು ಅವನ ಅಸಾಧಾರಣ ಲೀಲೆಗಳನ್ನು ಸ್ತುತಿಸುತ್ತಾ ಭಗವಂತನನ್ನು ಕೀರ್ತಿಸಬೇಕಾಗುತ್ತದೆ. ಒಬ್ಬನು ಇವುಗಳೆಲ್ಲವನ್ನೂ ಕೊಂಡಾಡಬೇಕಾಗುವುದು; ಆದ್ದರಿಂದ ಮಹಾತ್ಮನು ಪರಮ ದೇವೋತ್ತಮ ಪುರುಷನಲ್ಲಿ ಆಸಕ್ತನು.

ಭಗವಂತನ ವ್ಯಕ್ತಿಶೂನ್ಯ ಲಕ್ಷಣವಾದ **ಬ್ರಹ್ಮಜ್ಯೋತಿಯಲ್ಲಿ** ಆಸಕ್ತನು, ಭಗವದ್ಗೀತೆಯಲ್ಲಿ ಮಹಾತ್ಮನೆಂದು ವರ್ಣಿತನಲ್ಲ. ಅವನು ಮುಂದಿನ ಶ್ಲೋಕದಲ್ಲಿ ಬೇರೆ ರೀತಿಯಲ್ಲಿ ವರ್ಣಿತನು. ಶ್ರೀಮದ್ ಭಾಗವತದಲ್ಲಿ ವರ್ಣಿಸಿರುವಂತೆ, ವಿಷ್ಣುವನ್ನು ಕುರಿತ (ದೇವತೆ ಅಥವಾ ಮಾನವನನ್ನು ಕುರಿತಲ್ಲದೆ) ಶ್ರವಣ ಮತ್ತು ಕೀರ್ತನೆಯಂಥ ವಿವಿಧ ಭಕ್ತಿಯುತ ಸೇವೆಯಲ್ಲಿ ಮಹಾತ್ಮನು ಸದಾ ನಿರತನು. ಅದೇ ಭಕ್ತಿ: **ಶ್ರವಣಂ ಕೀರ್ತನಂ ವಿಷ್ಣೋಃ** ಮತ್ತು **ಸ್ಮರಣಮ್**, ಎಂದರೆ ಅವನ ಸ್ಮರಣೆ. ಅಂಥ ಮಹಾತ್ಮನು ಅಂತಿಮ ಮುಕ್ತಾಯದಲ್ಲಿ ಪರಮ ಪ್ರಭುವಿನೊಂದಿಗೆ ಐದು ದಿವ್ಯ ರಸಗಳಲ್ಲಿ ಯಾವುದಾದರೊಂದರಲ್ಲಿ, ಸಾಹಚರ್ಯವನ್ನು ಸಾಧಿಸುವ ದೃಢ ನಿರ್ಧಾರವನ್ನು ಹೊಂದಿರು

ತ್ತಾನೆ. ಅಂಥ ಯಶಸ್ಸನ್ನು ಗಳಿಸಲು, ಎಲ್ಲ ಚಟುವಟಿಕೆಗಳನ್ನು—ಕಾಯಾ ವಾಚಾ ಮತ್ತು ಮನಸಾ, ಪ್ರತಿಯೊಂದನ್ನೂ—ಪರಮ ಪ್ರಭು ಶ್ರೀಕೃಷ್ಣನ ಸೇವೆಯಲ್ಲಿ ತೊಡಗಿಸುತ್ತಾನೆ. ಅದನ್ನು ಪೂರ್ಣ ಕೃಷ್ಣಪ್ರಜ್ಞೆ ಎಂದು ಕರೆದಿದೆ.

ಭಕ್ತಿಯುತ ಸೇವೆಯಲ್ಲಿ, **ಏಕಾದಶಿ,** ಮತ್ತು ಭಗವಂತನ ಜನ್ಮದಿನದಂಥ ನಿಶ್ಚಿತ ದಿನಗಳಲ್ಲಿ ಉಪವಾಸ ಮಾಡುವಂಥ, ನಿರ್ಧಾರಿತವೆಂದು ಕರೆಯಲ್ಪಡುವ, ನಿಶ್ಚಿತ ಕಾರ್ಯ ಕಲಾಪಗಳಿರುತ್ತವೆ. ದಿವ್ಯ ಲೋಕದಲ್ಲಿ ಪರಮ ದೇವೋತ್ತಮ ಪುರುಷನ ಸಹವಾಸಕ್ಕೆ ಪ್ರವೇಶ ಪಡೆಯಲು ವಾಸ್ತವಿಕ ಆಸಕ್ತಿಯುಳ್ಳವರಿಗಾಗಿ ಮಹಾ ಆಚಾರ್ಯರುಗಳಿಂದ ಈ ಎಲ್ಲ ನಿಯಮಗಳು ಮತ್ತು ನಿಯಂತ್ರಣಗಳು ನೀಡಲ್ಪಟ್ಟಿವೆ. ಮಹಾತ್ಮರು ಈ ಎಲ್ಲ ನಿಯಮಗಳು ಮತ್ತು ನಿಯಂತ್ರಣಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ, ಆದ್ದರಿಂದ ಅವರು ಆಶಿಸಿದ ಫಲವನ್ನು ಸಾಧಿಸುವುದು ಖಂಡಿತ.

ಈ ಅಧ್ಯಾಯದ ಎರಡನೆಯ ಶ್ಲೋಕದಲ್ಲಿ ವರ್ಣಿಸಿದಂತೆ, ಈ ಭಕ್ತಿಯುತ ಸೇವೆಯು ಸುಲಭವಷ್ಟೇ ಅಲ್ಲದೆ, ಅದನ್ನು ಆನಂದ ಭಾವದಲ್ಲಿ ಆಚರಿಸಬಹುದು. ಒಬ್ಬನು ಯಾವುದೇ ಕಠೋರ ತಪಸ್ಯೆಯನ್ನು ಮತ್ತು ವ್ರತವನ್ನು ಆಚರಿಸಬೇಕಾಗಿಲ್ಲ. ಯಾವುದೇ ಸ್ಥಿತಿಯಲ್ಲಿ—ಗೃಹಸ್ಥನಾಗಿ ಅಥವಾ ಸನ್ಯಾಸಿಯಾಗಿ ಅಥವಾ ಬ್ರಹ್ಮಚಾರಿ ಯಾಗಿ—ತಜ್ಞ ಗುರುವಿನ ಮಾರ್ಗದರ್ಶನದಲ್ಲಿ ಅವನು ತನ್ನ ಜೀವನವನ್ನು ಭಕ್ತಿಯುತ ಸೇವೆಯಲ್ಲಿ ನಡೆಸಬಹುದು; ಯಾವುದೇ ಸ್ಥಿತಿಯಲ್ಲಿ ಮತ್ತು ಪ್ರಪಂಚದಲ್ಲಿ ಎಲ್ಲಿಯೋ ಇರಲಿ, ಅವನು ಪರಮ ದೇವೋತ್ತಮ ಪುರುಷನಿಗೆ ಭಕ್ತಿಯುತ ಸೇವೆಯನ್ನು ಆಚರಿಸ ಬಹುದು ಮತ್ತು ಹೀಗೆ ವಾಸ್ತವಿಕವಾಗಿ ಮಹಾತ್ಮನಾಗಬಹುದು.

**ಜ್ಞಾನಯಜ್ಞೇನ ಚಾಪ್ಯನ್ಯೇ ಯಜನ್ತೋ ಮಾಮುಪಾಸತೇ ।**
**ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಮ್ ॥ ೧೫ ॥**

ಜ್ಞಾನ ಯಜ್ಞೇನ—ಜ್ಞಾನದ ಅಭಿವೃದ್ಧಿಯಿಂದ, ಚ—ಕೂಡ, ಅಪಿ—ಖಂಡಿತ ವಾಗಿ, ಅನ್ಯೇ—ಇತರರು, ಯಜನ್ತಃ—ಯಜ್ಞ ಮಾಡುತ್ತಾ, ಮಾಮ್—ನನ್ನನ್ನು, ಉಪಾಸತೇ—ಆರಾಧಿಸುತ್ತಾರೆ, ಏಕತ್ವೇನ—ಏಕತೆಯಲ್ಲಿ, ಪೃಥಕ್ತ್ವೇನ—ದ್ವಂದ್ವತೆ ಯಲ್ಲಿ, ಬಹುಧಾ—ವಿವಿಧತೆಯಲ್ಲಿ, ವಿಶ್ವತಃ ಮುಖಮ್—ಮತ್ತು ವಿಶ್ವರೂಪದಲ್ಲಿ.

**ಜ್ಞಾನದ ಅಭಿವೃದ್ಧಿಯಿಂದ ಯಾಗದಲ್ಲಿ ನಿರತರಾದ ಇತರರು, ಪರಮ ಪ್ರಭು ವನ್ನು ಅದ್ವಿತೀಯನೆಂದು, ಅನೇಕವುಗಳಲ್ಲಿ ಭಿನ್ನನೆಂದು ಮತ್ತು ವಿಶ್ವರೂಪದಲ್ಲಿಯೂ ಆರಾಧಿಸುತ್ತಾರೆ.**

**ಭಾವಾರ್ಥ :** ಈ ಶ್ಲೋಕವು ಹಿಂದಿನ ಶ್ಲೋಕಗಳ ಸಾರಾಂಶವಾಗಿದೆ. ಶುದ್ಧ ಕೃಷ್ಣ ಪ್ರಾಜ್ಞಗಳು ಮತ್ತು ಕೃಷ್ಣನನ್ನುಳಿದು ಬೇರೆ ಏನನ್ನೂ ತಿಳಿಯದವರು **ಮಹಾತ್ಮರು** ಎಂದು ಕರೆಯಲ್ಪಡುವರು ಎಂದು ಭಗವಂತನು ಅರ್ಜುನನಿಗೆ ಹೇಳುತ್ತಾನೆ; ಆದರೂ **ಮಹಾತ್ಮರ** ಸ್ಥಾನದಲ್ಲಿ ಸರಿಯಾಗಿ ಇರದ, ಆದರೆ ಬೇರೆ ರೀತಿಗಳಲ್ಲಿ ಕೃಷ್ಣನನ್ನು

ಆರಾಧಿಸುವ ಇತರ ವ್ಯಕ್ತಿಗಳೂ ಇದ್ದಾರೆ. ಅವರಲ್ಲಿ ಕೆಲವರು ಈಗಾಗಲೇ ಆರ್ತರು, ಆರ್ಥಿಕವಾಗಿ ನಿರ್ಗತಿಕರು, ಜಿಜ್ಞಾಸುಗಳು ಮತ್ತು ಜ್ಞಾನದ ಅಭಿವೃದ್ಧಿಯಲ್ಲಿ ನಿರತರೆಂದು ವರ್ಣಿಸಲಾಗಿದೆ. ಆದರೆ ಇನ್ನೂ ಕೆಳಮಟ್ಟದ ಕೆಲವರಿದ್ದಾರೆ, ಮತ್ತು ಇವರನ್ನು ಮೂರು ಬಗೆಯಾಗಿ ವಿಂಗಡಿಸಿದೆ: (1) ತಾನು ಪರಮ ಪ್ರಭುವಿನೊಂದಿಗೆ ಏಕನೆಂದು ತನ್ನನ್ನೇ ಆರಾಧಿಸಿಕೊಳ್ಳುವವನು, (2) ಪರಮ ಪ್ರಭುವಿನ ಯಾವುದೇ ರೂಪವನ್ನು ಸೃಷ್ಟಿಸಿಕೊಂಡು ಅದನ್ನು ಆರಾಧಿಸುವವನು, (3) ಪರಮದೇವೋತ್ತಮ ಪುರುಷನ ವಿಶ್ವರೂಪವನ್ನು ಅಂಗೀಕರಿಸಿ ಅದನ್ನು ಆರಾಧಿಸುವವನು. ಮೇಲಿನ ಮೂವರಲ್ಲಿ, ಅತ್ಯಂತ ಕೆಳಗಿನವರು, ತಾವೇ ಪರಮ ಪ್ರಭುವೆಂದು ಆರಾಧಿಸಿಕೊಂಡು, ತಾವೇ ಅದ್ವೈತಿಗಳೆಂದು ಚಿಂತನೆ ಮಾಡುವವರು ಅತ್ಯಧಿಕರು. ಅಂಥ ಜನರು ತಮ್ಮನ್ನೇ ಪರಮಪ್ರಭುವೆಂದು ಭಾವಿಸುವರು, ಮತ್ತು ಈ ಮನೋಭಾವದಲ್ಲಿ ತಮ್ಮನ್ನು ತಾವೇ ಆರಾಧಿಸಿಕೊಳ್ಳುವರು. ಇದೂ ಒಂದು ಬಗೆಯ ದೇವನ ಆರಾಧನೆ, ಏಕೆಂದರೆ ತಾವು ಭೌತಿಕ ದೇಹವಾಗಿರದೆ, ವಾಸ್ತವಿಕವಾಗಿ ಚೇತನಾತ್ಮ ಎಂದು ಅವರು ಅರಿತುಕೊಳ್ಳಬಹುದು; ಕನಿಷ್ಠಪಕ್ಷ ಅಂಥ ಭಾವನೆಯು ಪ್ರಮುಖ. ಸಾಮಾನ್ಯವಾಗಿ ವ್ಯಕ್ತಿಶೂನ್ಯವಾದಿಗಳು ಈ ರೀತಿಯಲ್ಲಿ ಪರಮ ಪ್ರಭುವನ್ನು ಆರಾಧಿಸುತ್ತಾರೆ. ದೇವತೆಗಳ ಆರಾಧಕರು ಎರಡನೆಯ ವರ್ಗದವರು, ಅವರು ಕಲ್ಪನೆಯಿಂದ ಯಾವುದೇ ರೂಪವನ್ನು ಭಗವದ್‌ರೂಪವೆಂದು ಭಾವಿಸುತ್ತಾರೆ. ಮೂರನೆಯ ವರ್ಗವು ಈ ಭೌತಿಕ ವಿಶ್ವದ ಉದ್ಭೂತಿಯ ಆಚೆಗೆ ಏನನ್ನೂ ಕಲ್ಪಿಸಿಕೊಳ್ಳಲಾಗದವರು, ಅವರು ವಿಶ್ವವನ್ನು ಪರಮ ವ್ಯವಸ್ಥಿತ ದೇಹ ಅಥವಾ ಅಸ್ತಿತ್ವ ಎಂದು ಭಾವಿಸುತ್ತಾರೆ ಮತ್ತು ಅದನ್ನು ಆರಾಧಿಸುತ್ತಾರೆ. ವಿಶ್ವವು ಕೂಡ ಭಗವಂತನ ಒಂದು ರೂಪ.

**ಅಹಂ ಕ್ರತುರಹಂ ಯಜ್ಞಃ ಸ್ವಧಾಹಮಹಮೌಷಧಮ್ ।**
**ಮನ್ತ್ರೋऽಹಮಹಮೇವಾಜ್ಯಮಹಮಗ್ನಿರಹಂ ಹುತಮ್ ॥ ೧೬ ॥**

ಅಹಮ್—ನಾನು, ಕ್ರತುಃ—ವೈದಿಕ ಪ್ರಕ್ರಿಯೆ, ಅಹಮ್—ನಾನು, ಯಜ್ಞಃ—ಸ್ಮೃತಿಯಜ್ಞ, ಸ್ವಧಾ—ಆಹುತಿ, ಅಹಮ್—ನಾನು, ಅಹಮ್—ನಾನು, ಔಷಧಮ್—ವಾಸಿಮಾಡುವ ಮೂಲಿಕೆ, ಮನ್ತ್ರಃ—ದಿವ್ಯ ಮಂತ್ರ, ಅಹಮ್—ನಾನು, ಅಹಮ್—ನಾನು, ಏವ—ಖಂಡಿತವಾಗಿ, ಆಜ್ಯಮ್—ತುಪ್ಪ, ಅಹಮ್—ನಾನು, ಅಗ್ನಿಃ—ಅಗ್ನಿಯು, ಅಹಮ್—ನಾನು, ಹುತಮ್—ಅರ್ಪಣೆ.

**ಆದರೆ ನಾನು ವೈದಿಕ ಪ್ರಕ್ರಿಯೆ, ನಾನು ಯಜ್ಞ, ಮತ್ತು ನಾನು ಪೂರ್ವಜರಿಗೆ ಸಮರ್ಪಣೆ, ವಾಸಿಗೊಳಿಸುವ ಮೂಲಿಕೆ, ದಿವ್ಯ ಮಂತ್ರವೂ ಆಗಿದ್ದೇನೆ. ನಾನು ಬೆಣ್ಣೆ ಮತ್ತು ಅಗ್ನಿ ಮತ್ತು ಅರ್ಪಿತ ಆಹುತಿಯೂ ಆಗಿದ್ದೇನೆ.**

**ಭಾವಾರ್ಥ :** **ಜ್ಯೋತಿಷ್ಟೋಮ** ಎಂಬ ವೈದಿಕ ಯಜ್ಞವೂ ಕೂಡ ಕೃಷ್ಣನೇ, ಮತ್ತು ಸ್ಮೃತಿಯಲ್ಲಿ ಪ್ರಸ್ತಾಪಿತ **ಮಹಾ—ಯಜ್ಞ** ವೂಕೂಡ ಅವನೇ. ಪಿತೃಲೋಕಕ್ಕೆ ಅರ್ಪಿತ ಆಹುತಿಗಳು ಅಥವಾ ಪಿತೃಲೋಕವನ್ನು ಪ್ರೀತಗೊಳಿಸಲು ಆಚರಿಸಿದ ಯಜ್ಞವು,

ತುಪ್ಪದ ರೂಪದಲ್ಲಿ ಒಂದು ಬಗೆಯ ಔಷಧವೆಂದು ಭಾವಿಸಲ್ಪಡುವುದೂ ಸಹ ಕೃಷ್ಣನೇ. ಈ ಸಂಬಂಧದಲ್ಲಿ ಉಚ್ಚರಿಸಲ್ಪಡುವ ಮಂತ್ರಗಳೂ ಸಹ ಕೃಷ್ಣನೇ. ಯಜ್ಞಗಳಲ್ಲಿ ಸಮರ್ಪಣೆಗಾಗಿ ಕ್ಷೀರೋತ್ಪನ್ನಗಳೊಡನೆ ಮಾಡಿದ ಇತರ ಅನೇಕ ಪದಾರ್ಥಗಳು ಕೂಡ ಕೃಷ್ಣನೇ. ಅಗ್ನಿಯೂ ಸಹ ಕೃಷ್ಣನೇ, ಏಕೆಂದರೆ ಅಗ್ನಿಯು ಪಂಚ ಮಹಾಭೂತಗಳಲ್ಲಿ ಒಂದು, ಮತ್ತು ಇದರಿಂದ ಕೃಷ್ಣನ ಪ್ರತ್ಯೇಕಿತ ಶಕ್ತಿಯೆಂದು ಹೇಳಿದೆ. ಅರ್ಥಾತ್ ವೇದಗಳ **ಕರ್ಮ—ಕಾಂಡ** ಭಾಗದಲ್ಲಿ ಹೇಳಿದ ವೈದಿಕ ಯಜ್ಞಗಳೂ ಸಹ ಒಟ್ಟಿನಲ್ಲಿ ಕೃಷ್ಣನೇ. ಅಥವಾ, ಬೇರೆ ಮಾತುಗಳಲ್ಲಿ, ಕೃಷ್ಣನಿಗೆ ಭಕ್ತಿಯುತ ಸೇವೆಸಲ್ಲಿಸುವಲ್ಲಿ ನಿರತರಾದವರು ವೇದಗಳಲ್ಲಿ ಹೇಳಿರುವ ಸಕಲ ಯಜ್ಞಗಳನ್ನೂ ಆಚರಿಸಿದವರೆಂದು ಅರಿತುಕೊಳ್ಳಬೇಕು.

**ಪಿತಾಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ ।**
**ವೇದ್ಯಂ ಪವಿತ್ರಮ್ ಓಂಕಾರ ಋಕ್ ಸಾಮ ಯಜುರೇವ ಚ ॥೧೭॥**

ಪಿತಾ—ತಂದೆ, ಅಹಮ್—ನಾನು, ಅಸ್ಯ—ಈ, ಜಗತಃ—ವಿಶ್ವದ, ಮಾತಾ—ತಾಯಿ, ಧಾತಾ—ಪೋಷಕ, ಪಿತಾಮಹಃ—ತಾತ,. ವೇದ್ಯಮ್—ತಿಳಿಯಬೇಕಾದ, ಪವಿತ್ರಮ್—ಪವಿತ್ರಗೊಳಿಸುವ,ಓಂಕಾರ—ಓಂಕಾರವು, ಋಕ್—ಋಗ್ವೇದ, ಸಾಮ—ಸಾಮವೇದ, ಯಜುಃ—ಯಜುರ್ವೇದ, ಏವ—ಖಂಡಿತವಾಗಿ, ಚ—ಮತ್ತು.

**ನಾನು ಈ ವಿಶ್ವದ ತಂದೆ, ತಾಯಿ, ಪೋಷಕ ಮತ್ತು ಪಿತಾಮಹ. ನಾನು ಜ್ಞಾನದ ಉದ್ದೇಶ, ಪವಿತ್ರಕಾರಕ ಮತ್ತು ಓಂಕಾರ. ನಾನು ಋಗ್—ಸಾಮ ಮತ್ತು ಯಜುರ್ವೇದಗಳೂ ಕೂಡ ಆಗಿರುವೆನು.**

**ಭಾವಾರ್ಥ :** ಸಮಗ್ರ ವಿಶ್ವ ಉದ್ಭೂತಿಗಳು. ಚರಾಚರಗಳೂ,ಕೃಷ್ಣನ ಶಕ್ತಿಯ ವಿವಿಧ ಕ್ರಿಯೆಗಳಿಂದ ಅಭಿವ್ಯಕ್ತವಾಗುತ್ತವೆ. ಭೌತಿಕ ಅಸ್ತಿತ್ವದಲ್ಲಿ, ಕೃಷ್ಣನ ತಟಸ್ಥ ಶಕ್ತಿಯಲ್ಲದೆ ಬೇರೆ ಏನೂ ಅಲ್ಲದ ವಿವಿಧ ಜೀವಿಗಳೊಂದಿಗೆ ನಾವು ವಿವಿಧ ಸಂಬಂಧಗಳನ್ನು ಸೃಷ್ಟಿಸುತ್ತೇವೆ; ಪ್ರಕೃತಿಯ ಸೃಷ್ಟಿಗೆ ಒಳಪಟ್ಟು ಅವರಲ್ಲಿ ಕೆಲವರು ನಮ್ಮ ತಂದೆ, ತಾಯಿ, ತಾತ, ಸೃಷ್ಟಿಕರ್ತ, ಇತ್ಯಾದಿಯಾಗಿ ಕಾಣುತ್ತಾರೆ, ಆದರೆ ವಾಸ್ತವಿಕವಾಗಿ ಅವರು ಕೃಷ್ಣನ ವಿಭಿನ್ನಾಂಶರು. ಹಾಗಿರಲು ನಮ್ಮ ತಂದೆ, ತಾಯಿ, ಇತ್ಯಾದಿಯಾಗಿ ಕಾಣಿಸಿಕೊಳ್ಳುವ ಈ ಜೀವಿಗಳು ಕೃಷ್ಣನಲ್ಲದೆ ಬೇರೆ ಏನೂ ಅಲ್ಲ. ಈ ಶ್ಲೋಕದಲ್ಲಿ **ಧಾತಾ** ಎಂದರೆ "ಸೃಷ್ಟಿಕರ್ತ" ಎಂದು ಅರ್ಥ. ನಮ್ಮ ತಂದೆ ತಾಯಿಗಳು ಮಾತ್ರ ಕೃಷ್ಣನ ವಿಭಿನ್ನಾಂಶರಲ್ಲದೆ ಸೃಷ್ಟಿಕರ್ತನು, ಪಿತಾಮಹಿ ಮತ್ತು ಪಿತಾಮಹ ಮುಂತಾದವರೂ ಕೂಡ ಕೃಷ್ಣನೇ. ವಾಸ್ತವಿಕವಾಗಿ ಕೃಷ್ಣನ ವಿಭಿನ್ನಾಂಶವಾಗಿದ್ದು ಯಾವುದೇ ಜೀವಿಯೂ ಕೃಷ್ಣನೇ. ಆದ್ದರಿಂದ ಎಲ್ಲ ವೇದಗಳು ಕೃಷ್ಣನನ್ನೇ ಉದ್ದೇಶಿಸುತ್ತವೆ. ನಾವು ವೇದಗಳಿಂದ ತಿಳಿಯಬಯಸುವುದೆಲ್ಲವು ಕೃಷ್ಣನನ್ನು ಅರಿತುಕೊಳ್ಳುವಲ್ಲಿ ಪ್ರಗತಿಪರ ಹೆಜ್ಜೆ. ನಮ್ಮ ಸ್ವರೂಪ ಸ್ಥಿತಿಯನ್ನು ಶುದ್ಧಗೊಳಿಸುವಲ್ಲಿ ನಮಗೆ ಸಹಾಯಮಾಡುವ ವಿಷಯ ವಸ್ತುವು ವಿಶೇಷವಾಗಿ ಕೃಷ್ಣನೇ. ಅದೇ ಪ್ರಕಾರ, ಸಕಲ ವೇದ ತತ್ವಗಳನ್ನು

ಅರಿತುಕೊಳ್ಳುವಲ್ಲಿ ಜಿಜ್ಞಾಸುವಾಗಿರುವ ಜೀವಿಯೂ ಕೂಡ ಕೃಷ್ಣನ ವಿಭಿನ್ನಾಂಶನಾಗಿರಲು, ಅವನೂ ಸಹ ಕೃಷ್ಣನೇ. ಸಕಲ ವೇದ ಮಂತ್ರಗಳಲ್ಲಿ **ಪ್ರಣವ** ಎಂದು ಕರೆಯಲ್ಪಡುವ ಓಂಕಾರವು ದಿವ್ಯ ಶಬ್ದನಾದವೂ ಸಹ ಕೃಷ್ಣನೇ. ಸಾಮ, ಯಜುರ್, ಋಗ್ ಮತ್ತು ಅಥರ್ವ—ನಾಲ್ಕು ವೇದಗಳಲ್ಲಿನ ಎಲ್ಲ ವೇದ ಮಂತ್ರಗಳಲ್ಲಿ **ಪ್ರಣವ,** ಅಥವಾ **ಓಂಕಾರ**ವು ಬಹು ಪ್ರಮುಖವಾದುದರಿಂದ,ಅದು ಕೃಷ್ಣನೆಂದು ತಿಳಿಯಲ್ಪಟ್ಟಿದೆ.

**ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ ।**
**ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಮ್ ॥೧೮॥**

ಗತಿಃ—ಗುರಿಯು, ಭರ್ತಾ—ಆಧಾರನು, ಪ್ರಭುಃ—ಪ್ರಭುವು, ಸಾಕ್ಷೀ—ಸಾಕ್ಷಿಯು, ನಿವಾಸಃ—ನಿವಾಸನು, ಶರಣಮ್—ಆಶ್ರಯನು,ಸುಹೃತ್—ಅತ್ಯಂತ ನಿಕಟ ಮಿತ್ರನು, ಪ್ರಭವಃ—ಸೃಷ್ಟಿ, ಪ್ರಲಯಃ—ಪ್ರಳಯ, ಸ್ಥಾನಮ್—ತಳಹದಿ, ನಿಧಾನಮ್—ವಿರಮಿಸುವ ತಾಣವು, ಬೀಜಮ್—ಬೀಜ, ಅವ್ಯಯಮ್—ಅವಿನಾಶಿ.

**ನಾನು ಗುರಿ, ಆಧಾರ, ಪ್ರಭು, ಸಾಕ್ಷಿ, ನಿವಾಸ, ಆಶ್ರಯ ಮತ್ತು ಅತ್ಯಂತ ಪ್ರಿಯ ಮಿತ್ರ. ನಾನು ಸೃಷ್ಟಿ ಮತ್ತು ಲಯ, ಪ್ರತಿಯೊಂದರ ಆಧಾರ, ವಿಶ್ರಾಂತಿ ಸ್ಥಳ ಮತ್ತು ಶಾಶ್ವತ ಬೀಜ ಆಗಿರುವೆನು.**

**ಭಾವಾರ್ಥ : ಗತಿ** ಎಂದರೆ ನಾವು ಹೋಗ ಬಯಸುವ ಗಮ್ಯಸ್ಥಾನ. ಜನರು ಅದನ್ನು ತಿಳಿದಿರದಿದ್ದರೂ ಅಂತಿಮ ಗುರಿಯು ಕೃಷ್ಣನೇ. ಕೃಷ್ಣನನ್ನು ತಿಳಿಯದವನು ದಾರಿತಪ್ಪಿಸಲ್ಪಡುವನು, ಮತ್ತು ಅವನ ಪ್ರಗತಿಪರ ಮುನ್ನಡೆ ಎನಿಸಿರುವುದು ಆಂಶಿಕ ಅಥವಾ ಮನೋಭ್ರಾಂತಿ. ವಿವಿಧ ದೇವತೆಗಳನ್ನು ತಮ್ಮ ಗುರಿಯಾಗಿಟ್ಟುಕೊಳ್ಳುವ ಅನೇಕರಿದ್ದಾರೆ, ಮತ್ತು ಆಯಾ ವಿಧಾನಗಳ ಕಠೋರ ಆಚರಣೆಯಿಂದ ಚಂದ್ರಲೋಕ, ಸೂರ್ಯಲೋಕ, ಇಂದ್ರಲೋಕ, ಮಹರ್‌ಲೋಕ, ಇತ್ಯಾದಿ ವಿವಿಧ ಲೋಕಗಳನ್ನು ಅವರು ಸೇರುತ್ತಾರೆ. ಆದರೆ ಅಂಥ ಲೋಕಗಳೆಲ್ಲವೂ, ಕೃಷ್ಣನ ಸೃಷ್ಟಿಗಳಾಗಿದ್ದು, ಏಕ ಕಾಲದಲ್ಲಿ ಅವು ಕೃಷ್ಣನು ಮತ್ತು ಕೃಷ್ಣೇತರವು ಆಗಿರುತ್ತವೆ. ಅಂಥ ಲೋಕಗಳು ಕೃಷ್ಣನ ಶಕ್ತಿಯ ಉದ್ಭೂತಿಗಳಾಗಿದ್ದು ಅವುಗಳು ಕೂಡ ಕೃಷ್ಣನೇ. ಆದರೆ ವಾಸ್ತವಿಕವಾಗಿ ಅವು ಕೃಷ್ಣನ ಸಾಕ್ಷಾತ್ಕಾರದ ಕಡೆಗೆ ಒಂದು ಮುಂದಿನ ಹೆಜ್ಜೆಯಾಗಿ ಮಾತ್ರ ಉಪಯುಕ್ತ. ಕೃಷ್ಣನ ವಿವಿಧ ಶಕ್ತಿಗಳನ್ನು ಸಮೀಪಿಸುವುದು ಎಂದರೆ ಪರೋಕ್ಷವಾಗಿ ಕೃಷ್ಣನನ್ನು ಸಮೀಪಿಸಿದಂತೆ. ಒಬ್ಬನು ನೇರವಾಗಿ ಕೃಷ್ಣನನ್ನು ಸಮೀಪಿಸಬೇಕು, ಏಕೆಂದರೆ ಅದು ಕಾಲ ಮತ್ತು ಶಕ್ತಿಯನ್ನು ಉಳಿಸುವುದು. ಉದಾಹರಣೆಗೆ, ಒಂದು ಕಟ್ಟಡದ ತುದಿಗೆ ಮೇಲೆತ್ತಿಗೆಯ ಸಹಾಯದಿಂದ ಹೋಗುವ ಸಾಧ್ಯತೆ ಇದ್ದರೆ, ಒಬ್ಬನು ಹೆಜ್ಜೆ ಹೆಜ್ಜೆಯಾಗಿ ಮೆಟ್ಟಿಲುಗಳ ಮೂಲಕ ಏಕೆ ಹೋಗಬೇಕು ? ಪ್ರತಿಯೊಂದೂ ಕೃಷ್ಣನ ಶಕ್ತಿಯ ಮೇಲೆ ಆಧಾರಿತ; ಆದ್ದರಿಂದ ಕೃಷ್ಣನ ಆಶ್ರಯವಿಲ್ಲದೆ ಯಾವುದೂ ಅಸ್ತಿತ್ವದಲ್ಲಿರಲಾರದು. ಕೃಷ್ಣನು ಪರಮ ಪ್ರಶಾಸಕನು ಏಕೆಂದರೆ ಪ್ರತಿಯೊಂದೂ ಅವನಿಗೆ ಸೇರಿದೆ ಮತ್ತು ಪ್ರತಿಯೊಂದು ಅವನ ಶಕ್ತಿಯ ಮೇಲೆ ಇದೆ. ಕೃಷ್ಣನು, ಪ್ರತಿಯೊಬ್ಬನ

ಹೃದಯ ಸನ್ನಿವೇಶಿತನಾಗಿ ಪರಮಸಾಕ್ಷಿಯಾಗಿದ್ದಾನೆ. ನಾವು ವಾಸಿಸುವ ನಿವಾಸಗಳು, ದೇಶಗಳು ಅಥವಾ ಲೋಕಗಳು ಕೂಡ ಕೃಷ್ಣನೇ. ಕೃಷ್ಣನು ಆಶ್ರಯದ ಅಂತಿಮ ಗುರಿ, ಆದ್ದರಿಂದ ಒಬ್ಬನು ರಕ್ಷಣೆಗಾಗಿ ಅಥವಾ ತನ್ನ ದುಃಖದ ನಾಶಕ್ಕಾಗಿ ಕೃಷ್ಣನನ್ನು ಆಶ್ರಯಿಸಬೇಕು. ನಾವು ರಕ್ಷಣೆ ತೆಗೆದುಕೊಳ್ಳಬೇಕಾದಾಗಲ್ಲೆಲ್ಲಾ, ನಮ್ಮ ರಕ್ಷಣೆಯು ಒಂದು ಜೈವಿಕ ಶಕ್ತಿಯಾಗಿರಬೇಕು ಎಂಬುದನ್ನು ನಾವು ತಿಳಿದಿರಬೇಕು. ಕೃಷ್ಣನು ಪರಮ ಜೀವಿ. ಕೃಷ್ಣನು ನಮ್ಮ ಪೀಳಿಗೆಯ ಆಕರನು ಅಥವಾ ಪರಮ ಪಿತನು ಆಗಿರುವುದರಿಂದ, ಕೃಷ್ಣನಿಗಿಂತ ಮೇಲಾದ ಮಿತ್ರನಾಗಲೀ ಅಥವಾ ಹಿತೈಷಿಯಾಗಲೀ ಮತ್ತೊಬ್ಬನು ಆಗಲಾರನು. ಕೃಷ್ಣನು ಸೃಷ್ಟಿಯ ಆದಿ ಮೂಲ ಮತ್ತು ಪ್ರಳಯಾನಂತರದ ಅಂತಿಮ ವಿಶ್ರಾಂತಿಯ ಸ್ಥಾನ. ಆದ್ದರಿಂದ ಕೃಷ್ಣನು ಸರ್ವಕಾರಣಗಳ ನಿತ್ಯ ಕಾರಣನು.

**ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।**
**ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ॥೧೯॥**

ತಪಾಮಿ—ಶಾಖ ನೀಡುತ್ತೇನೆ, ಅಹಮ್—ನಾನು, ಅಹಮ್—ನಾನು, ವರ್ಷಮ್—ಮಳೆ, ನಿಗೃಹ್ಣಾಮಿ—ತಡೆ ಹಿಡಿಯುತ್ತೇನೆ, ಉತ್ಸೃಜಾಮಿ—ಕಳುಹಿಸುತ್ತೇನೆ, ಚ—ಮತ್ತು, ಅಮೃತಮ್—ಅಮೃತತ್ವ, ಚ—ಮತ್ತು, ಏವ—ಖಂಡಿತವಾಗಿ, ಮೃತ್ಯುಃ—ಸಾವು, ಚ—ಮತ್ತು, ಸತ್—ಚೇತನ, ಅಸತ್—ಜಡ, ಚ—ಮತ್ತು, ಅಹಮ್—ನಾನು, ಅರ್ಜುನ—ಹೇ ಅರ್ಜುನ.

**ಹೇ ಅರ್ಜುನ, ನಾನು ಶಾಖ ನೀಡುತ್ತೇನೆ, ಮತ್ತು ನಾನು ಮಳೆಯನ್ನು ತಡೆಹಿಡಿಯುತ್ತೇನೆ ಮತ್ತು ಕಳುಹಿಸುತ್ತೇನೆ. ನಾನು ಅಮೃತತ್ವ ಮತ್ತು ನಾನು ಮೃತ್ಯು ಸ್ವರೂಪಿ ಕೂಡ ಆಗಿರುವೆನು. ಚೇತನ ಮತ್ತು ಜಡ, ಉಭಯವೂ ನನ್ನಲ್ಲಿವೆ.**

**ಭಾವಾರ್ಥ :** ಕೃಷ್ಣನು ತನ್ನ ವಿವಿಧ ಶಕ್ತಿಗಳಿಂದ, ವಿದ್ಯುಚ್ಛಕ್ತಿ ಮತ್ತು ಸೂರ್ಯನ ಅಭಿಕರಣದ ಮೂಲಕ ಶಾಖ ಮತ್ತು ಬೆಳಕನ್ನು ಪ್ರಸರಿಸುತ್ತಾನೆ. ಬೇಸಿಗೆಯಲ್ಲಿ ಆಕಾಶದಿಂದ ಮಳೆ ಸುರಿಯದಂತೆ ತಡೆಯುವವನು ಕೃಷ್ಣನೇ, ಮತ್ತು ಮಳೆಗಾಲದಲ್ಲಿ ಅವಿರತ ಧಾರಾಕಾರದ ಮಳೆಯನ್ನು ಅವನು ಕೊಡುತ್ತಾನೆ. ನಮ್ಮ ಆಯುರ್ಮಾನವನ್ನು ದೀರ್ಘಗೊಳಿಸಿ ನಮ್ಮನ್ನು ಪೋಷಿಸುವ ಶಕ್ತಿಯೂ ಕೃಷ್ಣನೇ, ಮತ್ತು ಕೊನೆಗೆ ಕೃಷ್ಣನು ಮೃತ್ಯುವಾಗಿ ನಮ್ಮನ್ನು ಸಂಧಿಸುತ್ತಾನೆ. ಕೃಷ್ಣನ ಈ ಎಲ್ಲ ವಿವಿಧ ಶಕ್ತಿಗಳನ್ನು ವಿಶ್ಲೇಷಿಸುವುದರಿಂದ, ಕೃಷ್ಣನಿಗೆ ಜಡ ಮತ್ತು ಚೇತನವೆಂಬ ವ್ಯತ್ಯಾಸವಿಲ್ಲ ಎಂದು ಗೊತ್ತುಮಾಡಬಹುದು, ಅಥವಾ ಅರ್ಥಾತ್ ಅವನು ಜಡ ಮತ್ತು ಚೇತನ ಎರಡೂ ಆಗಿದ್ದಾನೆ. ಆದ್ದರಿಂದ ಕೃಷ್ಣಪ್ರಜ್ಞೆಯ ಮುಂದುವರಿದ ಹಂತದಲ್ಲಿ, ಒಬ್ಬನು ಅಂಥ ಭೇದಗಣನೆಯನ್ನು ಮಾಡುವುದಿಲ್ಲ. ಅವನು ಪ್ರತಿಯೊಂದರಲ್ಲಿಯೂ ಕೃಷ್ಣನನ್ನು ಮಾತ್ರ ಕಾಣುತ್ತಾನೆ.

ಕೃಷ್ಣನು ಜಡ ಮತ್ತು ಚೇತನ, ಉಭಯವೂ ಆಗಿರುವುದರಿಂದ, ಸಕಲ ಭೌತಿಕ ಉದ್ಭೂತಿಗಳನ್ನೊಳಗೊಂಡ ಅದ್ಭುತ ವಿಶ್ವರೂಪವೂ ಕೂಡ ಕೃಷ್ಣನೇ, ಮತ್ತು ಕೊಳಲೂದುವ ದ್ವಿಭುಜಧಾರಿ ಶ್ಯಾಮಸುಂದರನ ವೃಂದಾವನದಲ್ಲಿನ ಅವನ ಲೀಲೆಗಳು ಪರಮ ದೇವೋತ್ತಮ ಪುರುಷನದು.

**ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ**
**ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯನ್ತೇ ।**
**ತೇ ಪುಣ್ಯಮಾಸಾದ್ಯ ಸುರೇನ್ದ್ರಲೋಕಮ್**
**ಅಶ್ನನ್ತಿ ದಿವ್ಯಾನ್ ದಿವಿ ದೇವಭೋಗಾನ್ ॥೨೦॥**

ತ್ರೈವಿದ್ಯಾಃ—ಮೂರು ವೇದಗಳನ್ನು ತಿಳಿದವರು, ಮಾಮ್—ನನ್ನನ್ನು, ಸೋಮಪಾಃ—ಸೋಮರಸಪಾನಿಗಳು, ಪೂತ—ಶುದ್ಧರಾದ, ಪಾಪಾಃ—ಪಾಪಗಳ, ಯಜ್ಞೈಃ—ಯಜ್ಞಗಳಿಂದ, ಇಷ್ಟ್ವಾ—ಪೂಜಿಸಿ, ಸ್ವಃಗತಿಮ್—ಸ್ವರ್ಗಕ್ಕೆ ಮಾರ್ಗ, ಪ್ರಾರ್ಥಯನ್ತೇ—ಪ್ರಾರ್ಥಿಸುತ್ತಾರೆ, ತೇ—ಅವರು, ಪುಣ್ಯಮ್—ಪುಣ್ಯ, ಆಸಾದ್ಯ—ಹೊಂದಿ, ಸುರಃಇಂದ್ರ—ಇಂದ್ರನ, ಲೋಕಮ್—ಲೋಕವನ್ನು, ಅಶ್ನನ್ತಿ—ಉಪಭೋಗಿಸುತ್ತಾರೆ, ದಿವ್ಯಾನ್—ಸ್ವರ್ಗೀಯ, ದಿವಿ—ಸ್ವರ್ಗದಲ್ಲಿ, ದೇವಭೋಗಾನ್—ದೇವತೆಗಳ ಸುಖಗಳನ್ನು.

**ಸ್ವರ್ಗಲೋಕಗಳನ್ನು ಅರಸಿ, ವೇದಾಧ್ಯಯನ ಮಾಡುವವರು ಮತ್ತು ಸೋಮರಸ ಪಾನಮಾಡುವವರು, ನನ್ನನ್ನು ಪರೋಕ್ಷವಾಗಿ ಆರಾಧಿಸುತ್ತಾರೆ. ಪಾಪ ಪ್ರತಿಕ್ರಿಯೆಗಳಿಂದ ಶುದ್ಧರಾಗಿ, ಇಂದ್ರನ ಪುಣ್ಯಕರ ಸ್ವರ್ಗಲೋಕದಲ್ಲಿ ಅವರು ಜನ್ಮವೆತ್ತುತ್ತಾರೆ. ಅಲ್ಲಿ ಅವರು ದೇವತಾ ಸುಖಗಳನ್ನು ಉಪಭೋಗಿಸುತ್ತಾರೆ.**

**ಭಾವಾರ್ಥ :** **ತ್ರೈವಿದ್ಯಾಃ** ಎಂಬ ಪದವು—ಸಾಮ, ಯಜುರ್ ಮತ್ತು ಋಗ್—ಮೂರು ವೇದಗಳನ್ನು ಸೂಚಿಸುತ್ತದೆ. ಈ ಮೂರು ವೇದಗಳನ್ನು ಅಧ್ಯಯನ ಮಾಡಿದ ಬ್ರಾಹ್ಮಣನನ್ನು **ತ್ರಿವೇದಿ** ಎಂದು ಕರೆಯುತ್ತಾರೆ. ಈ ಮೂರು ವೇದಗಳಿಂದ ಲಬ್ಧ ಜ್ಞಾನಕ್ಕೆ ಬಹಳ ಆಸಕ್ತನಾದವನು ಸಮಾಜದಲ್ಲಿ ಗೌರವಿತನು. ದುರದೃಷ್ಟದಿಂದ, ವೇದಗಳ ಅಧ್ಯಯನದ ಅಂತಿಮ ತಾತ್ಪರ್ಯವನ್ನು ತಿಳಿಯದ ಅನೇಕ ಮಹಾ ವೇದ ವಿದ್ವಾಂಸರಿದ್ದಾರೆ. ಆದ್ದರಿಂದ ಕೃಷ್ಣನು ಇಲ್ಲಿ ತಾನೇ ತ್ರಿವೇದಿಗಳ ಅಂತಿಮ ಧ್ಯೇಯನೆಂದು ಘೋಷಿಸುತ್ತಾನೆ. ವಾಸ್ತವಿಕ ತ್ರಿವೇದಿಗಳು ಕೃಷ್ಣನ ಪಾದಕಮಲಗಳ ಆಶ್ರಯವನ್ನು ತೆಗೆದುಕೊಳ್ಳುತ್ತಾರೆ ಮತ್ತು ಭಗವಂತನನ್ನು ತೃಪ್ತಿಪಡಿಸಲು ಶುದ್ಧ ಭಕ್ತಿಯುತ ಸೇವೆಯಲ್ಲಿ ನಿರತರಾಗುತ್ತಾರೆ. ಭಕ್ತಿಯುತ ಸೇವೆಯು ಹರೇ ಕೃಷ್ಣ ಮಂತ್ರ ಜಪದೊಡನೆ ಮತ್ತು ಪಾರಸ್ಪರ್ಯವಾಗಿ ಸತ್ಯದಲ್ಲಿ ಕೃಷ್ಣನನ್ನು ಅರಿಯುವ ಪ್ರಯತ್ನದೊಡನೆ ಪ್ರಾರಂಭವಾಗುತ್ತದೆ. ದುರದೃಷ್ಟದಿಂದ, ಸುಮ್ಮನೇ ಔಪಚಾರಿಕ ವೇದಾಧ್ಯಾಯಿಗಳು ಇಂದ್ರ ಮತ್ತು ಚಂದ್ರರಂಥ ವಿವಿಧ ದೇವತೆಗಳಿಗೆ ಯಜ್ಞಗಳನ್ನು ಅರ್ಪಿಸುವುದರಲ್ಲಿ ಹೆಚ್ಚು ಆಸಕ್ತರಾಗುತ್ತಾರೆ. ಅಂಥ ಪ್ರಯತ್ನದಿಂದ, ವಿವಿಧ ದೇವತೆಗಳ ಆರಾಧಕರು

ಪ್ರಕೃತಿಯ ಕೀಳು ಗುಣಗಳ ಕಲುಷತೆಯಿಂದ ಖಂಡಿತವಾಗಿ ಶುದ್ಧರಾಗುತ್ತಾರೆ ಮತ್ತು ಅದರ ಮೂಲಕ ಊರ್ಧ್ವಲೋಕವ್ಯೂಹಗಳಿಗೆ ಅಥವಾ ಮಹರ್ಲೋಕ, ಜನೋಲೋಕ, ತಪೋಲೋಕ, ಇತ್ಯಾದಿ ಸ್ವರ್ಗೀಯಲೋಕಗಳಿಗೆ ಉನ್ನತಿಸಲ್ಪಡುತ್ತಾರೆ. ಆ ಊರ್ಧ್ವಲೋಕವ್ಯೂಹಗಳಲ್ಲಿ ಸನ್ನಿವೇಶಿತನಾದ ಮೇಲೆ, ಒಬ್ಬನು ಈ ಲೋಕಕ್ಕಿಂತಲೂ ಸಾವಿರಾರು ಪಟ್ಟು ಮಿಗಿಲಾಗಿ ತನ್ನ ಇಂದ್ರಿಯಗಳನ್ನು ತೃಪ್ತಿಗೊಳಿಸಬಹುದು.

**ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ**
**ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶನ್ತಿ ।**
**ಏವಂ ತ್ರಯೀಧರ್ಮಮನುಪ್ರಪನ್ನಾ**
**ಗತಾಗತಂ ಕಾಮಕಾಮಾ ಲಭನ್ತೇ ॥ ೨೧ ॥**

ತೇ—ಅವರು, ತಮ್—ಅದನ್ನು, ಭುಕ್ತ್ವಾ—ಭೋಗಿಸಿ, ಸ್ವರ್ಗಲೋಕಮ್—ಸ್ವರ್ಗಲೋಕವನ್ನು, ವಿಶಾಲಮ್—ಅಪಾರವಾದ, ಕ್ಷೀಣೇ—ಮುಗಿದವರಾಗಿ, ಪುಣ್ಯೇ—ಪುಣ್ಯ ಕರ್ಮಗಳ ಫಲಗಳು, ಮರ್ತ್ಯಲೋಕಮ್—ಸಾವಿನ ಭೂಲೋಕಕ್ಕೆ, ವಿಶನ್ತಿ—ಪತನ ಹೊಂದುವರು, ಏವಮ್—ಹೀಗೆ, ತ್ರಯೀ—ಮೂರು ವೇದಗಳ, ಧರ್ಮಮ್—ತತ್ವಗಳನ್ನು, ಅನುಪ್ರಪನ್ನಾ—ಅನುಸರಿಸುತ್ತಾ, ಗತಆಗತಮ್—ಮರಣ ಮತ್ತು ಜನನ, ಕಾಮಕಾಮಾಃ—ಇಂದ್ರಿಯ ಭೋಗಗಳನ್ನು ಆಶಿಸುತ್ತ, ಲಭನ್ತೇ—ಹೊಂದುವರು.

**ಅವರು ಹೀಗೆ ಅಪಾರವಾದ ಸ್ವರ್ಗೀಯ ಇಂದ್ರಿಯ ಸುಖವನ್ನು ಭೋಗಿಸಿ ಮತ್ತು ಅವರ ಪುಣ್ಯ ಕರ್ಮಗಳ ಫಲಗಳು ಮುಗಿದು, ಅವರು ಈ ಮರ್ತ್ಯಲೋಕಕ್ಕೆ ಮತ್ತೆ ಹಿಂದಿರುಗುತ್ತಾರೆ. ಹೀಗೆ ಮೂರು ವೇದಗಳ ತತ್ವಾನುಸರಣೆಯಿಂದ ಇಂದ್ರಿಯ ಭೋಗವನ್ನು ಅರಸುವವರು ಆವರ್ತಿತ ಹುಟ್ಟು ಮತ್ತು ಸಾವನ್ನು ಮಾತ್ರ ಸಾಧಿಸುತ್ತಾರೆ.**

**ಭಾವಾರ್ಥ :** ಊರ್ಧ್ವಲೋಕವ್ಯೂಹಗಳಿಗೆ ಉನ್ನತಿಸಲ್ಪಟ್ಟವನು ದೀರ್ಘ ಆಯುಸ್ಸನ್ನು ಮತ್ತು ಇಂದ್ರಿಯ ಭೋಗಕ್ಕಾಗಿ ಉತ್ತಮ ಸೌಲಭ್ಯಗಳನ್ನು ಉಪಭೋಗಿಸುತ್ತಾನೆ. ಆದರೂ ಅವನು ಅಲ್ಲಿಯೇ ಶಾಶ್ವತವಾಗಿ ಉಳಿದುಕೊಳ್ಳಲು ಅನುಮತಿಸಲ್ಪಡುವುದಿಲ್ಲ. ಅವನ ಪುಣ್ಯ ಕರ್ಮಗಳ ಫಲಗಳು ಮುಗಿದಾಗ ಅವನು ಮತ್ತೆ ಈ ಭೂಮಿಗೆ ಕಳುಹಿಸಲ್ಪಡುತ್ತಾನೆ. ವೇದಾಂತ ಸೂತ್ರಗಳಲ್ಲಿ ಸೂಚಿಸಿದಂತೆ **(ಜನ್ಮಾದ್ಯಸ್ಯ ಯತಃ)** ಜ್ಞಾನದ ಪರಿಪೂರ್ಣತೆಯನ್ನು ಹೊಂದದವನು, ಅಥವಾ ಸರ್ವಕಾರಣಗಳ ಕಾರಣನಾದ ಕೃಷ್ಣನನ್ನು ಅರಿಯಲು ವಿಫಲನಾದವನು, ಜೀವನದ ಅಂತಿಮ ಧ್ಯೇಯವನ್ನು ಸಾಧಿಸುವ ವಿಷಯದಲ್ಲಿ ಕಂಗೆಡುತ್ತಾನೆ ಮತ್ತು, ಕೆಲವು ಸಮಯಗಳಲ್ಲಿ ಮೇಲಕ್ಕೆ ಹೋಗುವ ಮತ್ತು ಕೆಲವು ಸಮಯಗಳಲ್ಲಿ ಕೆಳಕ್ಕೆ ಬರುವ ಫೆರಿಸ್ ಚಕ್ರದ ಮೇಲೆ ಸನ್ನಿವೇಶಿತನಾದಂತೆ, ಊರ್ಧ್ವಲೋಕಗಳಿಗೆ ಉನ್ನತಿಸಲ್ಪಡುವ ಮತ್ತು ನಂತರ ಮತ್ತೆ ಕೆಳಗೆ ಬರುವ ನಿಯತಕ್ರಮಕ್ಕೆ ಹೀಗೆ ಗುರಿಯಾಗುತ್ತಾನೆ. ತಾತ್ಪರ್ಯ

ವೆಂದರೆ, ಮತ್ತೆ ಕೆಳಗೆ ಬರುವ ಸಾಧ್ಯತೆಯಿಲ್ಲದ ಅಧ್ಯಾತ್ಮ ಲೋಕಕ್ಕೆ ಉನ್ನತಿಸಲ್ಪಡುವ ಬದಲು, ಊರ್ಧ್ವ ಮತ್ತು ಅಧೋಲೋಕವ್ಯೂಹಗಳಲ್ಲಿ ಒಬ್ಬನು ಜನನ ಮರಣಗಳ ಚಕ್ರದಲ್ಲಿ ಸುಮ್ಮನೇ ಸುತ್ತುತ್ತಾನೆ. ಎಂದಿಗೂ ಈ ಕ್ಲೇಶಮಯ ಭೌತಿಕ ಅಸ್ತಿತ್ವಕ್ಕೆ ಹಿಂದಿರುಗದೇ ಒಬ್ಬನು ಜ್ಞಾನಾನಂದಭರಿತವಾದ ನಿತ್ಯ ಜೀವನವನ್ನು ಉಪಭೋಗಿಸಲು ಅಧ್ಯಾತ್ಮ ಲೋಕಕ್ಕೆ ಹೋಗುವುದು ಉತ್ತಮ.

**ಅನನ್ಯಾಶ್ಚಿನ್ತಯನ್ತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥ ೨೨ ॥**

ಅನನ್ಯಾಃ—ಬೇರೆ ಗುರಿ ಇಲ್ಲದೆ, ಚಿನ್ತಯನ್ತಃ—ಕೇಂದ್ರೀಕರಿಸಿ, ಮಾಮ್—ನನ್ನ ಮೇಲೆ, ಯೇ—ಯಾರು, ಜನಾಃ—ವ್ಯಕ್ತಿಗಳು, ಪರ್ಯುಪಾಸತೇ—ಉಚಿತವಾಗಿ-ಆರಾಧಿಸುವರೋ, ತೇಷಾಮ್—ಅವರ, ನಿತ್ಯ—ಸದಾ, ಅಭಿಯುಕ್ತಾನಾಮ್—ಭಕ್ತಿಯಲ್ಲಿ ಸ್ಥಿತರಾದ, ಯೋಗ—ಅವಶ್ಯಕತೆಗಳನ್ನು, ಕ್ಷೇಮಮ್—ರಕ್ಷಣೆಯನ್ನು, ವಹಾಮಿ— ವಹಿಸಿಕೊಳ್ಳುತ್ತೇನೆ, ಅಹಮ್—ನಾನು.

**ನನ್ನ ದಿವ್ಯ ರೂಪವನ್ನು ಧ್ಯಾನಿಸುತ್ತಾ, ಅನನ್ಯ ಭಕ್ತಿಯೊಡನೆ ಯಾರು ಸದಾ ನನ್ನನ್ನು ಅರ್ಚಿಸುವರೋ—ಅವರಿಗೆ ಇಲ್ಲದುದನ್ನು ನಾನು ಒದಗಿಸುವೆನು, ಮತ್ತು ಅವರಲ್ಲಿ ಇರುವುದನ್ನು ನಾನು ರಕ್ಷಿಸುವೆನು.**

**ಭಾವಾರ್ಥ :** ಕೃಷ್ಣ ಪ್ರಜ್ಞೆ ಇಲ್ಲದೆ ಕ್ಷಣಕಾಲವೂ ಜೀವಿಸಲಾಗದವನು ದಿನದ ಇಪ್ಪತ್ತನಾಲ್ಕು ಗಂಟೆಗಳೂ ಕೃಷ್ಣನನ್ನೇ ಚಿಂತಿಸುವನು. ಅವನು ಶ್ರವಣ, ಕೀರ್ತನೆ, ಸ್ಮರಣೆ, ಸ್ತುತಿಸಮರ್ಪಣೆ, ಅರ್ಚನೆ, ಭಗವಂತನ ಪಾದ ಪದ್ಮಗಳ ಸೇವೆ ಮತ್ತು ಇತರ ಸೇವೆಗಳ ಸಮರ್ಪಣೆ, ಸಖ್ಯ ಮತ್ತು ಭಗವಂತನಿಗೆ ಪೂರ್ಣವಾಗಿ ಶರಣಾಗತನಾಗುತ್ತಾ—ಹೀಗೆ ಭಕ್ತಿಯುತ ಸೇವೆಯಲ್ಲಿ ನಿರತನಾಗಿರುವನು. ಅಂಥ ಚಟುವಟಿಕೆಗಳು ಸಕಲಶುಭಕರ ಮತ್ತು ಅಧ್ಯಾತ್ಮ ಶಕ್ತಿಸಂಪನ್ನವಾಗಿದ್ದು, ಪರಮದೇವೋತ್ತಮ ಪುರುಷನ ಸಹವಾಸವನ್ನು ಸಾಧಿಸುವುದು ಮಾತ್ರವೇ ಅವನ ಇಚ್ಛೆಯಾಗುವಂತೆ, ಭಕ್ತನನ್ನು ಆತ್ಮ ಸಾಕ್ಷಾತ್ಕಾರದಲ್ಲಿ ಪರಿಪೂರ್ಣಗೊಳಿಸುತ್ತವೆ. ಅಂಥ ಭಕ್ತನು ಕಷ್ಟವಿಲ್ಲದೆ ನಿಸ್ಸಂದೇಹವಾಗಿ ಭಗವಂತನನ್ನು ಸೇರುತ್ತಾನೆ. ಇದನ್ನು **ಯೋಗ** ಎನ್ನುವರು. ಭಗವದನುಗ್ರಹದಿಂದ, ಅಂಥ ಭಕ್ತನು ಭೌತಿಕ ಬದ್ಧ ಜೀವನಕ್ಕೆ ಎಂದಿಗೂ ಹಿಂದಿರುಗುವುದಿಲ್ಲ. **ಕ್ಷೇಮ** ಎಂಬುದು ಭಗವಂತನ ದಯಾಪೂರ್ಣ ರಕ್ಷಣೆಯನ್ನು ಸೂಚಿಸುತ್ತದೆ. **ಯೋಗದಿಂದ ಕೃಷ್ಣ** ಪ್ರಜ್ಞೆಯನ್ನು ಸಾಧಿಸಲು ಭಗವಂತನು ಭಕ್ತನಿಗೆ ಸಹಾಯ ಮಾಡುತ್ತಾನೆ, ಮತ್ತು ಅವನು ಪೂರ್ಣ ಕೃಷ್ಣ ಪ್ರಜ್ಞೆಯಾದಾಗ, ಭಗವಂತನು ಅವನನ್ನು ಕ್ಲೇಶಮಯ ಬದ್ಧ ಜೀವನಕ್ಕೆ ಬೀಳದಂತೆ ರಕ್ಷಿಸುತ್ತಾನೆ.

**ಯೇಽಪ್ಯನ್ಯದೇವತಾಭಕ್ತಾ ಯಜನ್ತೇ ಶ್ರದ್ಧಯಾನ್ವಿತಾಃ ।**
**ತೇಽಪಿ ಮಾಮೇವ ಕೌನ್ತೇಯ ಯಜನ್ತ್ಯವಿಧಿಪೂರ್ವಕಮ್ ॥ ೨೩ ॥**

ಯೇ—ಯಾರು, ಅಪಿ—ಸಹ, ಅನ್ಯ—ಇತರ, ದೇವತಾ—ದೇವತೆಗಳ, ಭಕ್ತಾಃ—ಭಕ್ತರು, ಯಜನ್ತೇ—ಅರ್ಚಿಸುವರು, ಶ್ರದ್ಧಯಾ ಅನ್ವಿತಾಃ—ಶ್ರದ್ಧೆ-ಯೊಡನೆ, ತೇ—ಅವರು, ಅಪಿ—ಸಹ, ಮಾಮ್—ನನ್ನನ್ನು, ಏವ—ಮಾತ್ರವೇ, ಕೌನ್ತೇಯ—ಹೇ ಕುಂತಿ ಪುತ್ರನೇ, ಯಜನ್ತಿ—ಅವರು ಆರ್ಚಿಸುವರು, ಅವಿಧಿ-ಪೂರ್ವಕಮ್—ತಪ್ಪಾದ ರೀತಿಯಲ್ಲಿ.

**ಬೇರೆ ದೇವತೆಗಳ ಭಕ್ತರಾದವರು ಮತ್ತು ಶ್ರದ್ಧೆಯಿಂದ ಅವರನ್ನು ಅರ್ಚಿಸುವವರು ವಾಸ್ತವಿಕವಾಗಿ ನನ್ನನ್ನು ಮಾತ್ರವೇ ಅರ್ಚಿಸುವರು. ಹೇ ಕುಂತೀ ಪುತ್ರನೇ, ಆದರೆ ಅವರು ತಪ್ಪಾದ ರೀತಿಯಲ್ಲಿ ಹಾಗೆ ಮಾಡುವರು.**

**ಭಾವಾರ್ಥ :** ಕೃಷ್ಣನು ಹೇಳುತ್ತಾನೆ, "ದೇವತೆಗಳ ಆರಾಧನೆಯು ಪರೋಕ್ಷವಾಗಿ ನನಗೆ ಅರ್ಪಿತವಾದರೂ, ದೇವತೆಗಳ ಆರಾಧನೆಯಲ್ಲಿ ನಿರತರಾದ ವ್ಯಕ್ತಿಗಳು ಬಹಳ ಬುದ್ಧಿವಂತರಲ್ಲ". ಉದಾಹರಣೆಗೆ, ಒಬ್ಬನು ಬೇರಿನ ಮೇಲೆ ನೀರೆರೆಯದೆ ಮರದ ಎಲೆಗಳ ಮತ್ತು ಶಾಖೆಗಳ ಮೇಲೆ ನೀರೆರೆದಾಗ ಅವನು ಸಾಕಷ್ಟು ಜ್ಞಾನವಿಲ್ಲದೆ ಅಥವಾ ನಿಯಂತ್ರಣ ತತ್ವಗಳನ್ನು ಪಾಲಿಸದೆ ಹಾಗೆ ಮಾಡುತ್ತಾನೆ. ಅದೇ ಪ್ರಕಾರ ದೇಹದ ವಿವಿಧ ಭಾಗಗಳಿಗೆ ಸೇವೆ ಸಲ್ಲಿಸುವ ಪ್ರಕ್ರಿಯೆ ಎಂದರೆ ಹೊಟ್ಟೆಗೆ ಆಹಾರವನ್ನು ಒದಗಿಸುವುದು. ಹಾಗೆ ಹೇಳುವುದಾದರೆ, ದೇವತೆಗಳು ಪರಮ ಪ್ರಭುವಿನ ಸರಕಾರದಲ್ಲಿ ವಿವಿಧ ಅಧಿಕಾರಿಗಳು ಮತ್ತು ನಿರ್ದೇಶಕರು. ಒಬ್ಬನು ಸರಕಾರ ಮಾಡಿದ ಕಾನೂನುಗಳನ್ನು ಅನುಸರಿಸಬೇಕೇ ಹೊರತು, ಅಧಿಕಾರಿಗಳು ಅಥವಾ ನಿರ್ದೇಶಕರು ಮಾಡುವ ಕಾನೂನುಗಳನ್ನಲ್ಲ. ಅದೇ ಪ್ರಕಾರ, ಪ್ರತಿಯೊಬ್ಬನು ಪರಮ ಪ್ರಭುವಿಗೆ ಮಾತ್ರ ತಾನು ಆರಾಧನೆಯನ್ನು ಸಲ್ಲಿಸಬೇಕು. ಅದು ಸ್ವಾಭಾವಿಕವಾಗಿಯೇ ಭಗವಂತನ ವಿವಿಧ ಅಧಿಕಾರಿಗಳು ಮತ್ತು ನಿರ್ದೇಶಕರನ್ನು ತೃಪ್ತಿಪಡಿಸುತ್ತದೆ. ಅಧಿಕಾರಿಗಳು ಮತ್ತು ನಿರ್ದೇಶಕರು ಸರಕಾರದ ಪ್ರತಿನಿಧಿಗಳಾಗಿ ನಿರತರು, ಮತ್ತು ಅಧಿಕಾರಿಗಳು ಮತ್ತು ನಿರ್ದೇಶಕರಿಗೆ ಸ್ವಲ್ಪ ಲಂಚ ಕೊಡುವುದು ನ್ಯಾಯ ಬಾಹಿರ. ಇದನ್ನು ಇಲ್ಲಿ **ಅವಿಧಿ—ಪೂರ್ವಕಮ್** ಎಂದು ಹೇಳಿದೆ. ಅರ್ಥಾತ್ ದೇವತೆಗಳ ಅನವಶ್ಯಕ ಆರಾಧನೆಯನ್ನು ಕೃಷ್ಣನು ಅನುಮೋದಿಸುವುದಿಲ್ಲ.

**ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।**
**ನ ತು ಮಾಮಭಿಜಾನನ್ತಿ ತತ್ತ್ವೇನಾತಶ್ಚ್ಯವನ್ತಿ ತೇ ॥ ೨೪ ॥**

ಅಹಮ್—ನಾನು, ಹಿ—ಖಂಡಿತವಾಗಿ, ಸರ್ವ—ಎಲ್ಲ, ಯಜ್ಞಾನಾಮ್—ಯಜ್ಞಗಳ, ಭೋಕ್ತಾ—ಭೋಕ್ತಾರನು, ಚ—ಮತ್ತು, ಪ್ರಭುಃ—ಪ್ರಭು, ಏವ—ಸಹ, ಚ—ಮತ್ತು, ನ—ಇಲ್ಲ, ತು—ಆದರೆ, ಮಾಮ್—ನನ್ನನ್ನು, ಅಭಿಜಾನನ್ತಿ—ಅವರು ತಿಳಿದಿರುವುದು, ತತ್ತ್ವೇನ—ನಿಜವಾಗಿ, ಅತಃ—ಆದ್ದರಿಂದ, ಚ್ಯವನ್ತಿ—ಪತನ ಹೊಂದುವರು, ತೇ—ಅವರು.

**ನಾನೊಬ್ಬನೇ ಸಕಲ ಯಜ್ಞಗಳ ಭೋಕ್ತಾರ ಮತ್ತು ಪತಿ. ಆದ್ದರಿಂದ, ನನ್ನ ನಿಜ ದಿವ್ಯ ಭಾವವನ್ನು ಗುರುತಿಸದವರು ಪತನ ಹೊಂದುವರು.**

**ಭಾವಾರ್ಥ :** ವೇದ ಸಾಹಿತ್ಯಗಳಲ್ಲಿ ಅನೇಕ ಬಗೆಯ ಯಜ್ಞಾಚರಣೆಗಳು ಹೇಳಲ್ಪಟ್ಟಿವೆ ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ, ಆದರೆ ವಾಸ್ತವಿಕವಾಗಿ ಅವೆಲ್ಲವೂ ಪರಮ ಪ್ರಭುವಿನ ತೃಪ್ತಿಗಾಗಿ ಉದ್ದೇಶಿತ. **ಯಜ್ಞ** ಎಂದರೆ ವಿಷ್ಣು. ಒಬ್ಬನು ಯಜ್ಞ ಅಥವಾ ವಿಷ್ಣುವನ್ನು ತೃಪ್ತಿಗೊಳಿಸಲು ಮಾತ್ರವೇ ಕೆಲಸ ಮಾಡಬೇಕೆಂದು ಭಗವದ್ಗೀತೆಯ ಎರಡನೆಯ ಅಧ್ಯಾಯದಲ್ಲಿ ಸ್ಪಷ್ಟವಾಗಿ ಹೇಳಿದೆ. **ವರ್ಣಾಶ್ರಮಧರ್ಮ**ವೆಂಬ ಮಾನವ ನಾಗರಿಕತೆಯ ಪರಿಪೂರ್ಣ ರೂಪವು ವಿಶೇಷವಾಗಿ ವಿಷ್ಣುವನ್ನು ತೃಪ್ತಿಗೊಳಿಸಲು ಉದ್ದೇಶಿತ. ಆದ್ದರಿಂದ, ಈ ಶ್ಲೋಕದಲ್ಲಿ ಕೃಷ್ಣನು ಹೇಳುತ್ತಾನೆ, "ನಾನು ಪರಮೋನ್ನತ ಒಡೆಯನಾಗಿರುವ ಕಾರಣ, ನಾನು ಸಕಲ ಯಜ್ಞಗಳ ಭೋಕ್ತಾರನು ಆಗಿರುತ್ತೇನೆ." ಕಡಿಮೆ ಬುದ್ಧಿವಂತರಾದರೋ, ಈ ಸಂಗತಿಯನ್ನು ಅರಿಯದೆ, ಯಾವುದೋ ತಾತ್ಕಾಲಿಕ ಲಾಭಕ್ಕಾಗಿ ದೇವತೆಗಳನ್ನು ಆರಾಧಿಸುತ್ತಾರೆ. ಆದ್ದರಿಂದ ಅವರು ಭೌತಿಕ ಅಸ್ತಿತ್ವಕ್ಕೆ ಪತನ ಹೊಂದುತ್ತಾರೆ ಮತ್ತು ಜೀವನದ ಅಪೇಕ್ಷಿತ ಧ್ಯೇಯವನ್ನು ಸಾಧಿಸುವುದಿಲ್ಲ. ಯಾರಿಗಾದರೂ ನೆರವೇರಿಸಲ್ಪಡಬೇಕಾದ ಯಾವುದೋ ಭೌತಿಕ ಆಸೆ ಇದ್ದಲ್ಲಿ, ಅದಕ್ಕಾಗಿ ಅವನು ಪರಮ ಪ್ರಭುವನ್ನು (ಇದು ಶುದ್ಧ ಭಕ್ತಿಯಲ್ಲದಿದ್ದರೂ) ಪ್ರಾರ್ಥಿಸುವುದು ಉತ್ತಮ. ಮತ್ತು ಅವನು ಹೀಗೆ ಆಶಿಸಿದ ಫಲವನ್ನು ಪಡೆಯುತ್ತಾನೆ.

**ಯಾನ್ತಿ ದೇವವ್ರತಾ ದೇವಾನ್ ಪಿತೄನ್ ಯಾನ್ತಿ ಪಿತೃವ್ರತಾಃ ।**
**ಭೂತಾನಿ ಯಾನ್ತಿ ಭೂತೇಜ್ಯಾ ಯಾನ್ತಿ ಮದ್ಯಾಜಿನೋಽಪಿ ಮಾಮ್ ॥೨೫॥**

ಯಾನ್ತಿ—ಹೋಗುವವರು, ದೇವವ್ರತಾಃ—ದೇವತೆಗಳ ಆರಾಧಕರು, ದೇವಾನ್—ದೇವತೆಗಳಲ್ಲಿಗೆ, ಪಿತೄನ್—ಪೂರ್ವಜರಲ್ಲಿಗೆ, ಯಾನ್ತಿ—ಹೋಗುವವರು, ಪಿತೃ ವ್ರತಾಃ—ಪೂರ್ವಜರ ಆರಾಧಕರು. ಭೂತಾನಿ—ಭೂತಗಳು ಮತ್ತು ಪಿಶಾಚಿಗಳಲ್ಲಿಗೆ, ಯಾನ್ತಿ—ಹೋಗುವವರು, ಭೂತ ಇಜ್ಯಾಃ—ಭೂತಗಳ ಮತ್ತು ಪಿಶಾಚಿಗಳ ಆರಾಧಕರು, ಯಾನ್ತಿ ಹೋಗುವವರು, ಮತ್—ನನ್ನ, ಯಾಜಿನಃ—ಭಕ್ತರು, ಅಪಿ—ಆದರೆ, ಮಾಮ್—ನನ್ನಲ್ಲಿಗೆ.

**ದೇವತಾರಾಧಕರು ದೇವತೆಗಳಲ್ಲಿ ಜನ್ಮವೆತ್ತುವರು ; ಪೂರ್ವಜರ ಆರಾಧಕರು ಪೂರ್ವಜರಲ್ಲಿಗೆ ಹೋಗುವವರು ; ಭೂತಗಳು ಮತ್ತು ಪಿಶಾಚಿಗಳ ಆರಾಧಕರು ಅಂಥ ಜೀವಿಗಳಲ್ಲಿ ಜನ್ಮವೆತ್ತುವರು ; ಮತ್ತು ನನ್ನ ಆರಾಧಕರು ನನ್ನೊಂದಿಗೆ ವಾಸಿಸುವರು.**

**ಭಾವಾರ್ಥ :** ಒಬ್ಬನಿಗೆ ಚಂದ್ರ, ಸೂರ್ಯ ಅಥವಾ ಇತರ ಯಾವುದೇ ಲೋಕಕ್ಕೆ ಹೋಗುವ ಯಾವುದೇ ಆಸೆ ಇದ್ದಲ್ಲಿ, ಆ ಉದ್ದೇಶಕ್ಕಾಗಿ ಹೇಳಿರುವ ವಿಶಿಷ್ಟ ವೈದಿಕ ತತ್ವಗಳನ್ನು ಅನುಸರಿಸಿ ಒಬ್ಬನು ಆಶಿಸಿದ ಗಮ್ಯಸ್ಥಾನವನ್ನು ಸೇರಬಹುದು. ಶಾಸ್ತ್ರೀಯ ನಿರೂಪಣೆಯಲ್ಲಿ **ದರ್ಶಪೌರ್ಣಮಾಸೀ** ಎಂದು ಕರೆಯುವುದು ಅಂಥ ಒಂದು ಪ್ರಕ್ರಿಯೆ.

ವಿವಿಧ ಸ್ವರ್ಗೀಯ ಲೋಕಗಳಲ್ಲಿ ಸನ್ನಿವೇಶಿತರಾದ ದೇವತೆಗಳ ವಿಶಿಷ್ಟ ಆರಾಧನೆಯನ್ನು ಹೇಳುವ ವೇದಗಳ ಕರ್ಮಕಾಂಡ ಭಾಗದಲ್ಲಿ ಇವುಗಳು ಸ್ಪಷ್ಟವಾಗಿ ವರ್ಣಿತ. ಅದೇ ಪ್ರಕಾರ, ಒಬ್ಬನು ವಿಶಿಷ್ಟ ಯಜ್ಞವನ್ನಾಚರಿಸಿ ಪಿತೃಲೋಕಗಳನ್ನು ಸೇರಬಹುದು. ಅದೇ ಪ್ರಕಾರ, ಒಬ್ಬನು ಅನೇಕ ಭೂತ ಲೋಕಗಳಿಗೆ ಹೋಗಬಹುದು ಮತ್ತು ಯಕ್ಷ, ರಕ್ಷ ಅಥವಾ ಪಿಶಾಚಿ ಆಗಬಹುದು. ಪಿಶಾಚಿ ಆರಾಧನೆಯನ್ನು "ಅಭಿಚಾರ" ಅಥವಾ "ಮಾಟ" ಎಂದು ಕರೆಯುತ್ತಾರೆ. ಇಂಥ ಅಭಿಚಾರವನ್ನು ಆಚರಿಸುವ ಅನೇಕ ಜನರಿದ್ದಾರೆ, ಮತ್ತು ಅವರು ಅದನ್ನು ಆಧ್ಯಾತ್ಮಿಕತೆ ಎಂದು ಭಾವಿಸುತ್ತಾರೆ. ಆದರೆ ಅಂಥ ಚಟುವಟಿಕೆಗಳು ಸಂಪೂರ್ಣವಾಗಿ ಭೌತಿಕ. ಅದೇ ಪ್ರಕಾರ ಪರಮ ದೇವೋತ್ತಮ ಪುರುಷನನ್ನು ಮಾತ್ರ ಆರಾಧಿಸುವ ಶುದ್ಧ ಭಕ್ತನು, ನಿಸ್ಸಂದೇಹವಾಗಿ ವೈಕುಂಠ ಲೋಕಗಳನ್ನು ಅಥವಾ ಕೃಷ್ಣಲೋಕವನ್ನು ಸೇರುತ್ತಾನೆ. ದೇವತೆಗಳನ್ನು ಕೇವಲ ಆರಾಧಿಸುವುದರಿಂದ ಒಬ್ಬನು ಸ್ವರ್ಗೀಯ ಲೋಕಗಳನ್ನು ಹೊಂದಬಲ್ಲನು, ಅಥವಾ ಪಿತೃಗಳನ್ನು ಆರಾಧಿಸುವುದರಿಂದ ಪಿತೃಲೋಕಗಳನ್ನು ಹೊಂದಬಲ್ಲನು, ಅಥವಾ, ಅಭಿಚಾರಗಳನ್ನು ಆಚರಿಸುವುದರಿಂದ ಪೈಶಾಚಿಕ ಲೋಕಗಳನ್ನು ಹೊಂದಬಲ್ಲನು ಎಂದ ಮೇಲೆ, ಶುದ್ಧ ಭಕ್ತನು ಕೃಷ್ಣ ಅಥವಾ ವಿಷ್ಣು ಲೋಕವನ್ನು ಏಕೆ ಹೊಂದಲಾರನು ಎಂಬುದನ್ನು ಈ ಮುಖ್ಯವಾದ ಶ್ಲೋಕದಿಂದ ಅರಿತುಕೊಳ್ಳುವುದು ಬಹು ಸುಲಭ. ದುರದೃಷ್ಟವಶಾತ್ ಅನೇಕರಿಗೆ ಕೃಷ್ಣ ಮತ್ತು ವಿಷ್ಣು ಇರುವ ಈ ಮಹೋನ್ನತ ಲೋಕಗಳ ಬಗ್ಗೆ ತಿಳುವಳಿಕೆ ಇರುವುದಿಲ್ಲ. ಅವರು ತಿಳಿದಿಲ್ಲವಾದ್ದರಿಂದ ಅವರು ಪತನ ಹೊಂದುತ್ತಾರೆ. ವ್ಯಕ್ತಿಶೂನ್ಯವಾದಿಗಳು ಕೂಡ ಬ್ರಹ್ಮಜ್ಯೋತಿಯಿಂದ ಪತನ ಹೊಂದುತ್ತಾರೆ. ಆದ್ದರಿಂದ ಹರೇ ಕೃಷ್ಣ ಮಂತ್ರವನ್ನು ಕೇವಲ ಜಪಿಸುವುದರಿಂದ ಒಬ್ಬನು ಈ ಜೀವಿತದಲ್ಲಿ ಪರಿಪೂರ್ಣನಾಗಿ ಮತ್ತೆ ಮರಳಿ ಪರಂಧಾಮಕ್ಕೆ ಹೋಗಬಹುದು ಎಂಬ ಮಹೋನ್ನತ ತಿಳುವಳಿಕೆಯನ್ನು ಇಡೀ ಮಾನವ ಸಮಾಜಕ್ಕೆ ಕೃಷ್ಣ ಪ್ರಜ್ಞಾ ಆಂದೋಲನವು ವಿತರಣೆ ಮಾಡುತ್ತಿದೆ.

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥೨೬॥**

ಪತ್ರಮ್—ಒಂದು ದಳ, ಪುಷ್ಪಮ್—ಒಂದು ಹೂವು, ಫಲಮ್—ಒಂದು ಹಣ್ಣು, ತೋಯಮ್—ನೀರು, ಯಃ—ಯಾರೇ ಆಗಲಿ, ಮೇ—ನನಗೆ, ಭಕ್ತ್ಯಾ—ಭಕ್ತಿಯಿಂದ, ಪ್ರಯಚ್ಛತಿ—ಅರ್ಪಿಸುವನು, ತತ್—ಅದನ್ನು, ಅಹಮ್—ನಾನು, ಭಕ್ತಿ-ಉಪಹೃತಮ್—ಭಕ್ತಿಯಿಂದ ಅರ್ಪಿಸಿದ್ದನ್ನು, ಅಶ್ನಾಮಿ—ಸ್ವೀಕರಿಸುವೆನು, ಪ್ರಯತ-ಆತ್ಮನಃ—ಶುದ್ಧ ಪ್ರಜ್ಞೆಯಲ್ಲಿ ಇರುವವನಿಂದ.

**ನನಗೆ ಒಬ್ಬನು ಪ್ರೀತಿ ಮತ್ತು ಭಕ್ತಿಯಿಂದ ದಳ, ಹೂವು, ಹಣ್ಣು ಅಥವಾ ನೀರನ್ನು ಅರ್ಪಿಸಿದರೆ, ನಾನು ಅದನ್ನು ಸ್ವೀಕರಿಸುತ್ತೇನೆ.**

**ಭಾವಾರ್ಥ :** ಶಾಶ್ವತ ಸುಖಕ್ಕಾಗಿ ಶಾಶ್ವತ ಆನಂದಮಯ ಧಾಮವನ್ನು ಹೊಂದುವ ಸಲುವಾಗಿ, ಬುದ್ಧಿವಂತನಿಗೆ ಕೃಷ್ಣ ಪ್ರಜ್ಞೆಯಲ್ಲಿ ಭಗವಂತನ ದಿವ್ಯ ಪ್ರೀತಿಯುತ ಸೇವೆ

ಯಲ್ಲಿ ನಿರತನಾಗಿರುವುದು ಅಗತ್ಯ. ಅಂಥ ಅದ್ಭುತವಾದ ಫಲವನ್ನು ಹೊಂದುವ ಪ್ರಕ್ರಿಯೆಯು ಬಹು ಸುಲಭ ಮತ್ತು ಯಾವುದೇ ಬಗೆಯ ಅರ್ಹತೆಯಿಲ್ಲದೆ ಬಡವರಲ್ಲಿ ಅತ್ಯಂತ ಬಡವನಿಂದಲೂ ಕೂಡ ಅದು ಪ್ರಯತ್ನಿಸಲ್ಪಡಬಹುದು. ಈ ಸಂಬಂಧದಲ್ಲಿ ಅಗತ್ಯವಾದ ಏಕೈಕ ಅರ್ಹತೆ ಎಂದರೆ ಭಗವಂತನ ಶುದ್ಧ ಭಕ್ತನಾಗಿರುವುದು. ಒಬ್ಬನು ಏನಾಗಿರುವನು ಅಥವಾ ಒಬ್ಬನು ಎಲ್ಲಿ ಸನ್ನಿವೇಶಿತನಾಗಿರುವನು ಎಂಬುದು ಬಾಧಕವಿಲ್ಲ. ಪ್ರಕ್ರಿಯೆಯು ಎಷ್ಟು ಸುಲಭವೆಂದರೆ, ನಿಷ್ಕಪಟ ಪ್ರೀತಿಯಿಂದ ಪರಮ ಪ್ರಭುವಿಗೆ ಒಂದು ದಳ ಅಥವಾ ಸ್ವಲ್ಪ ನೀರು ಅಥವಾ ಹಣ್ಣನ್ನು ಅರ್ಪಿಸಬಹುದು ಮತ್ತು ಅದನ್ನು ಸ್ವೀಕರಿಸಲು ಭಗವಂತನು ಪ್ರೀತನಾಗುವನು. ಆದ್ದರಿಂದ ಯಾರೂ ಕೃಷ್ಣ ಪ್ರಜ್ಞೆಯಿಂದ ನಿಷೇಧಿಸಲ್ಪಡಲಾಗದು, ಏಕೆಂದರೆ ಅದು ಅಷ್ಟೊಂದು ಸುಲಭ ಮತ್ತು ಸಾರ್ವತ್ರಿಕ. ಈ ಸರಳ ವಿಧಾನದಿಂದ ಕೃಷ್ಣಪ್ರಾಜ್ಞಿಯಾಗಲು ಮತ್ತು ಹೀಗೆ ಶಾಶ್ವತ ಜ್ಞಾನಾನಂದದ ಅತ್ಯುನ್ನತ ಪರಿಪೂರ್ಣ ಜೀವನವನ್ನು ಹೊಂದಲು ಬಯಸದಂಥ ಮೂಢನು ಯಾರು? ಕೃಷ್ಣನು ಪ್ರೀತಿಯುತ ಸೇವೆಯನ್ನು ಮಾತ್ರ ಬಯಸುತ್ತಾನೆ, ಮತ್ತು ಹೆಚ್ಚಿನದೇನನ್ನೂ ಅಲ್ಲ. ಕೃಷ್ಣನು ತನ್ನ ಶುದ್ಧ ಭಕ್ತನಿಂದ ಒಂದು ಚಿಕ್ಕ ಹೂವನ್ನು ಕೂಡ ಸ್ವೀಕರಿಸು ತ್ತಾನೆ. ಅಭಕ್ತನಿಂದ ಯಾವುದೇ ಬಗೆಯ ಸಮರ್ಪಣೆಯನ್ನು ಅವನು ಬಯಸುವುದಿಲ್ಲ. ಅವನು ಸ್ವಯಂ ಪೂರ್ಣನಾದ ಕಾರಣ ಅವನಿಗೆ ಯಾರಿಂದಲೂ ಯಾವುದರ ಅಗತ್ಯವೂ ಇಲ್ಲ. ಆದರೂ ಪ್ರೇಮ ಮತ್ತು ಪ್ರೀತಿಯ ವಿನಿಮಯದಲ್ಲಿ ಅವನು ತನ್ನ ಭಕ್ತನಿಂದ ಅರ್ಪಣೆಯನ್ನು ಸ್ವೀಕರಿಸುತ್ತಾನೆ. ಕೃಷ್ಣ ಪ್ರಜ್ಞೆಯನ್ನು ವರ್ಧಿಸಿಕೊಳ್ಳುವುದು ಜೀವನದ ಅತ್ಯುನ್ನತ ಪರಿಪೂರ್ಣತೆ. ಕೃಷ್ಣನನ್ನು ಸಮೀಪಿಸಲು **ಭಕ್ತಿ** ಅಥವಾ ಭಕ್ತಿಯುತ ಸೇವೆಯೇ ಏಕೈಕ ಸಾಧನ ಎಂಬುದನ್ನು ಒತ್ತಿಹೇಳಲು **ಭಕ್ತಿ**ಯು ಈ ಶ್ಲೋಕದಲ್ಲಿ ಎರಡು ಸಲ ಪ್ರಸ್ತಾಪಿತವಾಗಿದೆ. ಬ್ರಾಹ್ಮಣನಾಗುವುದು, ವಿದ್ವತ್ಪೂರ್ಣ ಪಂಡಿತನಾಗುವುದು, ಬಹಳ ಶ್ರೀಮಂತನಾಗುವುದು ಅಥವಾ ಮಹಾ ತತ್ತ್ವಜ್ಞಾನಿಯಾಗುವುದು— ಇಂಥ ಯಾವುದೇ ಇತರ ಸ್ಥಿತಿಯು ಅರ್ಪಿಸಿದುದನ್ನು ಸ್ವೀಕರಿಸಲು ಕೃಷ್ಣನನ್ನು ಪ್ರೇರೇಪಿಸದು. ಮೂಲ ತತ್ತ್ವವಾದ **ಭಕ್ತಿ** ಇಲ್ಲದೆ ಯಾರಿಂದಲೂ ಯಾವುದನ್ನಾದರೂ ಸ್ವೀಕರಿಸಲು ಭಗ ವಂತನು ಒಪ್ಪಿಕೊಳ್ಳಲು ಪ್ರೇರೇಪಿಸದು. ಭಕ್ತಿಯು ಎಂದಿಗೂ ಕಾರಣಾತ್ಮಕವಲ್ಲ. ಆ ಪ್ರಕ್ರಿಯೆಯು ನಿತ್ಯವಾದುದು. ಪರಮ ಸಮಗ್ರತೆಯ ಸೇವೆಯಲ್ಲಿ ಅದು ನೇರ ಕ್ರಿಯೆ.

ಇಲ್ಲಿ ಭಗವಾನ್ ಕೃಷ್ಣನು, ತಾನು ಏಕೈಕ ಭೋಕ್ತಾರನು, ಆದಿ ಪ್ರಭು ಮತ್ತು ಸಕಲಯಜ್ಞಾರ್ಪಣೆಗಳ ನಿಜ ಧ್ಯೇಯ ಎಂಬುದನ್ನು ಸ್ಥಾಪಿಸಿ, ಯಾವ ಬಗೆಯ ಯಜ್ಞಗಳ ಸಮರ್ಪಣೆಯನ್ನು ಅವನು ಆಶಿಸುವನು ಎಂಬುದನ್ನು ಪ್ರಕಾಶಪಡಿಸುತ್ತಾನೆ. ಒಬ್ಬನು ಶುದ್ಧನಾಗಲು ಮತ್ತು ಜೀವನದ ಗುರಿಯನ್ನು— ಎಂದರೆ ಭಗವಂತನ ದಿವ್ಯ ಪ್ರೇಮ ಯುತ ಸೇವೆಯನ್ನು— ಸೇರಲು ಪರಮನ ಭಕ್ತಿಯುತ ಸೇವೆಯಲ್ಲಿ ನಿರತನಾಗಲು ಆಶಿಸಿ ದರೆ, ಆಗ ಅವನು ತನ್ನಿಂದ ಭಗವಂತನು ಏನು ಇಚ್ಛಿಸುತ್ತಾನೆ ಎಂಬುದನ್ನು ಕಂಡುಕೊಳ್ಳ ಬೇಕು. ಕೃಷ್ಣನನ್ನು ಪ್ರೀತಿಸುವವನು ಕೃಷ್ಣನು ಆಶಿಸಿದ ಯಾವುದನ್ನಾದರೂ ಕೃಷ್ಣನಿಗೆ ನೀಡುತ್ತಾನೆ, ಮತ್ತು ಅನಪೇಕ್ಷಣೀಯವಾದ ಅಥವಾ ಕೇಳದಿರುವ ಯಾವುದೇ ಸಮರ್ಪಣೆ

ಯನ್ನು ಅವನು ತೊರೆದು ಬಿಡುತ್ತಾನೆ. ಹೀಗೆ ಮಾಂಸ, ಮೀನು ಮತ್ತು ಮೊಟ್ಟೆಗಳನ್ನು ಕೃಷ್ಣನಿಗೆ ಸಮರ್ಪಿಸಕೂಡದು. ಅಂಥ ವಸ್ತುಗಳನ್ನು ಅರ್ಪಣೆಗೆಂದು ಆಶಿಸಿದ್ದರೆ, ಅವನು ಹಾಗೆ ಹೇಳಿರುತ್ತಿದ್ದನು. ಬದಲಾಗಿ ತನಗೆ ಪತ್ರ, ಫಲ, ಹೂವುಗಳು ಮತ್ತು ನೀರು ನೀಡಲ್ಪಡಬೇಕೆಂದು ಅವನು ಸ್ಪಷ್ಟವಾಗಿ ಕೇಳುತ್ತಾನೆ, ಮತ್ತು ಇಂಥ ಅರ್ಪಣೆಯ ಬಗ್ಗೆ, "ನಾನು ಅದನ್ನು ಸ್ವೀಕರಿಸುತ್ತೇನೆ" ಎಂದು ಹೇಳುತ್ತಾನೆ. ಆದ್ದರಿಂದ ಅವನು ಎಂದಿಗೂ ಮಾಂಸ, ಮೀನು ಮತ್ತು ಮೊಟ್ಟೆಗಳನ್ನು ಸ್ವೀಕರಿಸುವುದಿಲ್ಲ ಎಂದು ನಾವು ತಿಳಿದುಕೊಳ್ಳಬೇಕು. ತರಕಾರಿಗಳು, ಧಾನ್ಯಗಳು, ಹಣ್ಣುಗಳು, ಹಾಲು ಮತ್ತು ನೀರು ಮಾನವರಿಗೆ ಉಚಿತವಾದ ಆಹಾರ ಮತ್ತು ಸ್ವಯಂ ಭಗವಾನ್ ಶ್ರೀಕೃಷ್ಣನಿಂದಲೇ ವಿಧಿಸಲ್ಪಟ್ಟಿವೆ. ನಾವು ತಿನ್ನುವ ಇತರ ಯಾವುದನ್ನೂ ಅವನು ಸ್ವೀಕರಿಸುವುದಿಲ್ಲವಾದ್ದರಿಂದ, ಅವನಿಗೆ ಸಮರ್ಪಿಸಲಾಗದು. ಹೀಗೆ, ನಾವು ಅಂಥ ಆಹಾರಗಳನ್ನು ಸಮರ್ಪಿಸಿದರೆ, ಪ್ರೀತಿಯುತ ಭಕ್ತಿಯ ಮಟ್ಟದಲ್ಲಿ ನಾವು ವರ್ತಿಸುತ್ತಿರಲಾರೆವು.

ಮೂರನೆಯ ಅಧ್ಯಾಯದ ಹದಿಮೂರನೆಯ ಶ್ಲೋಕದಲ್ಲಿ, ಯಜ್ಞಶೇಷಗಳು ಮಾತ್ರ ಶುದ್ಧ ಮತ್ತು ಜೀವನದಲ್ಲಿ ಪ್ರಗತಿಯನ್ನು ಅರಸುತ್ತಿರುವವರಿಂದ ಮತ್ತು ಭೌತಿಕ ತೊಡಕಿನ ಬಿಗಿಹಿಡಿತಗಳಿಂದ ಬಿಡುಗಡೆಯನ್ನು ಬಯಸುತ್ತಿರುವವರಿಂದ ಅನುಭೋಗಕ್ಕೆ ಅರ್ಹವಾಗಿವೆ ಎಂದು ಶ್ರೀಕೃಷ್ಣನು ವಿವರಿಸುತ್ತಾನೆ. ತಮ್ಮ ಆಹಾರವನ್ನು ನಿವೇದಿಸದವರು, ಪಾಪವನ್ನೇ ತಿನ್ನುತ್ತಿದ್ದಾರೆ ಎಂದು ಅದೇ ಶ್ಲೋಕದಲ್ಲಿ ಅವನು ಹೇಳುತ್ತಾನೆ. ಅರ್ಥಾತ್, ಅವರ ಬಾಯನ್ನು ತುಂಬುವ ಪ್ರತಿಯೊಂದು ತುತ್ತೂ ಭೌತಿಕ ಪ್ರಕೃತಿಯ ಜಟಿಲತೆಗಳಲ್ಲಿ ಅವರನ್ನು ಸುಮ್ಮನೆ ಆಳವಾಗಿ ಸಿಕ್ಕಿಸುತ್ತದೆ. ಆದರೆ ಸೊಗಸಾದ ಸರಳ ತರಕಾರಿಯ ತಿನಿಸುಗಳನ್ನು ತಯಾರಿಸಿ, ಶ್ರೀಕೃಷ್ಣನ ಚಿತ್ರ ಅಥವಾ ಮೂರ್ತಿಯ ಮುಂದೆ ಅವುಗಳನ್ನು ಅರ್ಪಿಸಿ, ಮತ್ತು ನಮಸ್ಕರಿಸಿ ಮತ್ತು ಅಂಥ ವಿನೀತ ಸಮರ್ಪಣೆಯನ್ನು ಸ್ವೀಕರಿಸಬೇಕೆಂದು ಅವನನ್ನು ಪ್ರಾರ್ಥಿಸುವುದು, ಒಬ್ಬನು ಜೀವನದಲ್ಲಿ ಏಕಪ್ರಕಾರವಾಗಿ ಪ್ರಗತಿಸಲು, ದೇಹವನ್ನು ಶುದ್ಧಿಕರಿಸಲು ಮತ್ತು ಸ್ಪಷ್ಟ ಚಿಂತನೆಗೆ ಕರೆದೊಯ್ಯುವ ಉತ್ಕೃಷ್ಟ ಮೆದುಳಿನ ಅಂಗಾಂಶಗಳನ್ನು ಸೃಷ್ಟಿಸಲು ಸಮರ್ಥವಾಗಿಸುತ್ತದೆ. ಎಲ್ಲಕ್ಕಿಂತ ಮಿಗಿಲಾಗಿ, ಅರ್ಪಣೆಯನ್ನು ಪ್ರೇಮಭಾವದಿಂದ ಮಾಡಬೇಕು. ಕೃಷ್ಣನಿಗೆ ಆಹಾರದ ಅಗತ್ಯವಿಲ್ಲ, ಏಕೆಂದರೆ ಅಸ್ತಿತ್ವದಲ್ಲಿರುವ ಪ್ರತಿಯೊಂದರ ಒಡೆತನವನ್ನು ಅವನು ಈಗಾಗಲೇ ಪಡೆದಿದ್ದಾನೆ. ಆದರೂ ಆ ರೀತಿಯಲ್ಲಿ ಅವನನ್ನು ತೃಪ್ತಿಪಡಿಸಲು ಆಶಿಸುವವನ ಸಮರ್ಪಣೆಯನ್ನು ಅವನು ಸ್ವೀಕರಿಸುತ್ತಾನೆ. ತಯಾರಿಕೆಯಲ್ಲಿ, ಸೇವೆಮಾಡುವುದರಲ್ಲಿ ಮತ್ತು ಸಮರ್ಪಿಸುವಲ್ಲಿ, ಕೃಷ್ಣನಿಗಾಗಿ ಪ್ರೀತಿಯಿಂದ ವರ್ತಿಸುವುದು ಮುಖ್ಯಾಂಶವಾಗಿರುತ್ತದೆ.

ಪರಮ ಸತ್ಯವು ಇಂದ್ರಿಯರಹಿತವೆಂದು ಸಮರ್ಥಿಸಲು ಇಚ್ಛಿಸುವ ವ್ಯಕ್ತಿಶೂನ್ಯವಾದಿ ತತ್ವಜ್ಞಾನಿಗಳು, ಭಗವದ್ಗೀತೆಯ ಈ ಶ್ಲೋಕವನ್ನು ಅರ್ಥಮಾಡಿಕೊಳ್ಳಲಾರರು. ಅವರಿಗೆ ಇದು ಒಂದು ರೂಪಕ ಅಥವಾ ಭಗವದ್ಗೀತಾ ಪ್ರೋಕ್ತನಾದ ಕೃಷ್ಣನ ಲೌಕಿಕ ಸ್ವಭಾವದ ರುಜುವಾತು. ಆದರೆ, ವಾಸ್ತವಿಕತೆಯಲ್ಲಿ, ಪರಮ ದೇವೋತ್ತಮ ಕೃಷ್ಣನಿಗೆ

ಇಂದ್ರಿಯಗಳಿವೆ ಮತ್ತು ಅವನ ಇಂದ್ರಿಯಗಳು ಪರಸ್ಪರ ವಿನಿಮಯನೀಯ ಎಂದ ಹೇಳಿದೆ ; ಅರ್ಥಾತ್, ಒಂದು ಇಂದ್ರಿಯವು ಯಾವುದೇ ಮತ್ತೊಂದರ ಕ್ರಿಯೆಯನ್ನು ಮಾಡಬಲ್ಲದು. ಇದುವೇ ಕೃಷ್ಣನು ಪೂರ್ಣನೆಂದು, ಪರತತ್ವನೆಂದು ಹೇಳುವುದರ ಅರ್ಥ. ಇಂದ್ರಿಯಗಳಿಲ್ಲದೆ, ಅವನು ಸಕಲೈಶ್ವರ್ಯಪೂರ್ಣನೆಂದು ಭಾವಿಸುವುದು ಕಷ್ಟ. ಏಳನೆಯ ಅಧ್ಯಾಯದಲ್ಲಿ, ಭೌತಿಕ ಪ್ರಕೃತಿಯೊಳಕ್ಕೆ ತಾನು ಜೀವಿಗಳನ್ನು ಗರ್ಭೀಕರಿಸುತ್ತೇನೆ ಎಂದು ಕೃಷ್ಣನು ವಿವರಿಸಿದ್ದಾನೆ. ಇದು ಭೌತಿಕ ಪ್ರಕೃತಿಯ ಮೇಲೆ ಅವನ ನೋಡುವಿಕೆಯಿಂದ ನಡೆಯುತ್ತದೆ. ಮತ್ತು ಹಾಗೆ ಈ ಸಂದರ್ಭದಲ್ಲಿ, ಆಹಾರ ಪದಾರ್ಥಗಳ ಸಮರ್ಪಣೆಯಲ್ಲಿ ಭಕ್ತನ ಪ್ರೀತಿಯ ಮಾತುಗಳ ಕೃಷ್ಣನ ಶ್ರವಣವು ಕೃಷ್ಣನ ತಿನ್ನುವಿಕೆ ಮತ್ತು ವಾಸ್ತವಿಕ ರುಚಿನೋಡುವಿಕೆಯೊಡನೆ ಸಮಗ್ರವಾಗಿ ಅನನ್ಯವಾಗಿರುತ್ತವೆ. ಅವನ ಪರಮ ಸ್ಥಾನದ ಕಾರಣ, ಅವನ ಶ್ರವಣವು ಅವನ ತಿನ್ನುವಿಕೆ ಮತ್ತು ರುಚಿನೋಡುವಿಕೆಯೊಡನೆ ಸಮಗ್ರ ವಾಗಿ ಅನನ್ಯವಾಗಿದೆ ಎಂಬ ಈ ಅಂಶವನ್ನು ಸ್ಪಷ್ಟಪಡಿಸಬೇಕು. ವ್ಯಾಖ್ಯಾನರಹಿತವಾಗಿ, ಕೃಷ್ಣನು ತನ್ನನ್ನು ತಾನೇ ವಿವರಿಸುವುದನ್ನು ಅಂಗೀಕರಿಸುವ ಭಕ್ತನು ಮಾತ್ರವೇ ಪರಮೋನ್ನತ ಪರಮ ಸತ್ಯನು ಆಹಾರವನ್ನು ತಿನ್ನಬಲ್ಲನು ಮತ್ತು ಅದನ್ನು ಭೋಗಿಸ ಬಲ್ಲನು ಎಂಬುದನ್ನು ಅರಿಯಬಹುದು.

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌನ್ತೇಯ ತತ್ಕುರುಷ್ವ ಮದರ್ಪಣಮ್ ॥ ೨೭ ॥**

ಯತ್—ಏನೇನು, ಕರೋಷಿ—ನೀನು ಮಾಡುವೆ, ಯತ್—ಏನೇನು, ಅಶ್ನಾಸಿ—ತಿನ್ನುವೆ, ಯತ್—ಏನೇನು, ಜುಹೋಷಿ—ನೀನು ಅರ್ಪಿಸುವೆ, ದದಾಸಿ—ಕೊಡುವೆ, ಯತ್—ಏನೇನು, ಯತ್—ಏನೇನು, ತಪಸ್ಯಸಿ—ವ್ರತಗಳನ್ನು ನೀನು ಆಚರಿಸುವೆ, ಕೌನ್ತೇಯ—ಹೇ ಕುಂತಿ ಪುತ್ರನೇ, ತತ್—ಅದನ್ನು, ಕುರುಷ್ವ—ಮಾಡು, ಮತ್—ನನಗೆ, ಅರ್ಪಣಮ್—ಅರ್ಪಣವಾಗಿ.

**ನೀನು ಮಾಡುವುದು ಏನೇ ಆದರೂ, ನೀನು ತಿನ್ನುವುದು ಏನೇ ಆದರೂ, ನೀನು ಅರ್ಪಿಸುವುದು ಅಥವಾ ಕೊಟ್ಟು ಬಿಡುವುದು ಏನೇ ಆದರೂ ಮತ್ತು ನೀನು ಆಚರಿಸುವ ವ್ರತಗಳು ಏನೇ ಆದರೂ, ಹೇ ಕುಂತೀಪುತ್ರನೇ, ಅದನ್ನು ನನಗೆ ಅರ್ಪಣವಾಗಿ ಮಾಡು.**

**ಭಾವಾರ್ಥ :** ಹೀಗೆ ಯಾವುದೇ ಸಂದರ್ಭದಲ್ಲಿಯೂ ತಾನು ಕೃಷ್ಣನನ್ನು ಮರೆಯ ದಂಥ ರೀತಿಯಲ್ಲಿ ತನ್ನ ಜೀವನವನ್ನು ರೂಪಿಸಿಕೊಳ್ಳುವುದು ಪ್ರತಿಯೊಬ್ಬನ ಕರ್ತವ್ಯ. ಪ್ರತಿಯೊಬ್ಬನೂ ತನ್ನ ದೇಹ ಮತ್ತು ಆತ್ಮದ ಜಂಟೀ ಪೋಷಣೆಗಾಗಿ ಕೆಲಸ ಮಾಡಲೇ ಬೇಕು, ಮತ್ತು ಇಲ್ಲಿ ಕೃಷ್ಣನು ಅವನಿಗಾಗಿ ಕೆಲಸ ಮಾಡಬೇಕೆಂದು ಹೇಳುತ್ತಾನೆ. ಬದುಕಲು ಪ್ರತಿಯೊಬ್ಬನೂ ಏನನ್ನಾದರೂ ತಿನ್ನಬೇಕು; ಆದ್ದರಿಂದ ಕೃಷ್ಣನಿಗೆ ಸಮರ್ಪಿಸಿದ ಆಹಾರಗಳ ಶೇಷಗಳನ್ನು ಅವನು ಸ್ವೀಕರಿಸಬೇಕು. ಯಾವ ನಾಗರಿಕ

ಮನುಷ್ಯನಾದರೂ ಯಾವುದಾದರೂ ಧಾರ್ಮಿಕ ಕ್ರಿಯಾ ವಿಧಿ **ಆಚರಣೆಗಳನ್ನು** ಮಾಡ ಬೇಕು; ಆದ್ದರಿಂದ ,"ಅದನ್ನು ನನಗಾಗಿ ಮಾಡು," ಎಂದು ಕೃಷ್ಣನು ಹೇಳುತ್ತಾನೆ, ಮತ್ತು ಇದು **ಅರ್ಚನೆ** ಎಂದು ಕರೆಯಲ್ಪಡುತ್ತದೆ. ಪ್ರತಿಯೊಬ್ಬನೂ ದಾನದಲ್ಲಿ ಏನನ್ನಾದರೂ ಕೊಡುವ ಪ್ರವೃತ್ತಿ ಹೊಂದಿರುತ್ತಾನೆ; ಕೃಷ್ಣನು ಹೇಳುತ್ತಾನೆ, "ಅದನ್ನು ನನಗೆ ಕೊಡು," ಮತ್ತು ಹೀಗೆಂದರೆ ಸಂಚಿತ ಹೆಚ್ಚಿನ ಹಣವನ್ನೆಲ್ಲಾ ಕೃಷ್ಣಪ್ರಜ್ಞಾ ಆಂದೋಲನದ ಪುರೋಭಿವೃದ್ಧಿಗೆ ವಿನಿಯೋಗಿಸಬೇಕು ಎಂದು ಅರ್ಥ. ಈಗಿನ ದಿನಗಳಲ್ಲಿ ಜನರು, ಈ ಯುಗದಲ್ಲಿ ಕಾರ್ಯಸಾಧ್ಯವಲ್ಲದ ಧ್ಯಾನ ಪ್ರಕ್ರಿಯೆಗೆ ಬಹಳಷ್ಟು ಮನಸ್ಸಿರುವವರಾಗಿದ್ದಾರೆ, ಆದರೆ ಒಬ್ಬನು ತನ್ನ ಜಪಮಣಿಗಳ ಮೇಲೆ ಹರೇ ಕೃಷ್ಣ ಮಂತ್ರವನ್ನು ದಿನದ ಇಪ್ಪತ್ತನಾಲ್ಕು ಗಂಟೆಗಳು ಜಪಿಸುತ್ತಾ ಕೃಷ್ಣನನ್ನು ಧ್ಯಾನಿಸುವು ದನ್ನು ಆಚರಿಸಿದರೆ, ಭಗವದ್ಗೀತೆಯ ಆರನೆಯ ಅಧ್ಯಾಯದಿಂದ ಪ್ರತಿಪಾದಿತವಾದಂತೆ, ಅವನು ಖಂಡಿತವಾಗಿ ಮಹತ್ತಮ ಧ್ಯಾನಿ ಮತ್ತು ಮಹತ್ತಮ ಯೋಗಿ.

**ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬನ್ಧನೈಃ ।**
**ಸನ್ನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ॥ ೨೮ ॥**

ಶುಭ—ಶುಭಕರ, ಅಶುಭ—ಮತ್ತು ಅಶುಭಕರ, ಫಲೈಃ—ಫಲಗಳಿಂದ, ಏವಮ್—ಹೀಗೆ, ಮೋಕ್ಷ್ಯಸೇ—ನೀನು ಮುಕ್ತನಾಗುವೆ, ಕರ್ಮ—ಕರ್ಮದ, ಬನ್ಧನೈಃ—ಬಂಧನದಿಂದ, ಸಂನ್ಯಾಸ—ಪರಿತ್ಯಾಗದ, ಯೋಗ—ಯೋಗ, ಯುಕ್ತ—ಆತ್ಮಾ—ಮನಸ್ಸನ್ನು ದೃಢವಾಗಿ ಸ್ಥಿರಗೊಳಿಸಿ, ವಿಮುಕ್ತಃ—ಮುಕ್ತನು, ಮಾಮ್—ನನಗೆ, ಉಪೈಷ್ಯಸಿ—ನೀನು ಸೇರುವೆ.

**ಈ ರೀತಿಯಲ್ಲಿ ನೀನು ಕರ್ಮ ಬಂಧನ ಮತ್ತು ಅದರ ಶುಭಾಶುಭ ಫಲಗಳಿಂದ ಮುಕ್ತನಾಗುವೆ. ನಿನ್ನ ಮನಸ್ಸು ನನ್ನ ಮೇಲೆ ಈ ಪರಿತ್ಯಾಗದ ತತ್ವದಲ್ಲಿ ಸ್ಥಿತವಾಗಿ, ನೀನು ಮುಕ್ತನಾಗುವೆ ಮತ್ತು ನನ್ನಲ್ಲಿಗೆ ಬರುವೆ.**

**ಭಾವಾರ್ಥ :** ಶ್ರೇಷ್ಠ ನಿರ್ದೇಶನಕ್ಕೆ ಒಳಪಟ್ಟು ಕೃಷ್ಣ ಪ್ರಜ್ಞೆಯಲ್ಲಿ ವರ್ತಿಸುವವ ನನ್ನುಯುಕ್ತ ಎಂದು ಕರೆದಿದೆ. **ಯುಕ್ತ ವೈರಾಗ್ಯ** ಎಂಬುದು ಶಾಸ್ತ್ರೀಯ ನಿರೂಪಣೆಯ ಪದ. ಇದು ರೂಪ ಗೋಸ್ವಾಮಿಯವರಿಂದ ಈ ಕೆಳಕಂಡಂತೆ ಮತ್ತಷ್ಟು ವರ್ಣಿತ ವಾಗಿದೆ :

ಅನಾಸಕ್ತಸ್ಯ ವಿಷಯಾನ್ ಯಥಾರ್ಹಮುಪಯುಞ್ಜತಃ।
ನಿರ್ಬನ್ಧಃ ಕೃಷ್ಣಸಮ್ಬನ್ಧೇ ಯುಕ್ತಂ ವೈರಾಗ್ಯಮುಚ್ಯತೇ॥

(ಭಕ್ತಿರಸಾಮೃತ-ಸಿಂಧು 2.255)

ರೂಪಗೋಸ್ವಾಮಿಯವರು ಹೇಳುತ್ತಾರೆ: ನಾವು ಈ ಭೌತಿಕ ಜಗತ್ತಿನಲ್ಲಿ ಇರುವ ವರೆಗೆ ಕೆಲಸ ಮಾಡಲೇಬೇಕು; ನಾವು ಕೆಲಸ ಮಾಡುವುದನ್ನು ನಿಲ್ಲಿಸಲಾಗದು. ಆದ್ದರಿಂದ ಕೆಲಸವನ್ನು ಆಚರಿಸಿದರೆ ಮತ್ತು ಫಲಗಳನ್ನು ಕೃಷ್ಣನಿಗೆ ನೀಡಿದರೆ, ಆಗ ಅದು **ಯುಕ್ತ-**

**ವೈರಾಗ್ಯ** ಎಂದು ಕರೆಯಲ್ಪಡುತ್ತದೆ. ವಾಸ್ತವಿಕವಾಗಿ ವೈರಾಗ್ಯದಲ್ಲಿ ಸನ್ನಿವೇಶಿತನಾಗಿ, ಅಂಥ ಚಟುವಟಿಕೆಗಳು ಮನಸ್ಸಿನ ಕನ್ನಡಿಯನ್ನು ಸ್ವಚ್ಛಗೊಳಿಸುತ್ತವೆ, ಮತ್ತು ಕರ್ತನು ಆಧ್ಯಾತ್ಮಿಕ ಸಾಕ್ಷಾತ್ಕಾರದಲ್ಲಿ ಕ್ರಮೇಣ ಪ್ರಗತಿಹೊಂದುತ್ತಿರುವಂತೆ ಅವನು ಪರಮ ದೇವೋತ್ತಮ ಪುರುಷನಿಗೆ ಸಂಪೂರ್ಣವಾಗಿ ಶರಣಾಗತನಾಗುತ್ತಾನೆ. ಆದ್ದರಿಂದ ಕೊನೆಯಲ್ಲಿ ಅವನು ಮುಕ್ತನಾಗುತ್ತಾನೆ, ಮತ್ತು ಈ ಮೋಕ್ಷವು ಕೂಡ ನಿರ್ದಿಷ್ಟ. ಈ ಮೋಕ್ಷದಿಂದ ಅವನು **ಬ್ರಹ್ಮಜ್ಯೋತಿ**ಯೊಡನೆ ಒಂದಾಗದೆ, ಪರಮ ಪ್ರಭುವಿನ ಲೋಕ ವನ್ನು ಪ್ರವೇಶಿಸುತ್ತಾನೆ. **ಮಾಮ್ ಉಪೈಷ್ಯಸಿ,** ಮರಳಿ ಮನೆಗೆ, ಮರಳಿ ಪರಂಧಾಮಕ್ಕೆ, "ಅವನು ನನ್ನಲ್ಲಿಗೆ ಬರುತ್ತಾನೆ," ಎಂದು ಇಲ್ಲಿ ಸ್ಪಷ್ಟವಾಗಿ ಪ್ರಸ್ತಾಪಿತ ವಾಗಿದೆ. ಮೋಕ್ಷದ ಐದು ಭಿನ್ನ ಹಂತಗಳಿವೆ, ಮತ್ತು ಜೀವಮಾನವನ್ನು ಪರಮ ಪ್ರಭು ವಿನ ನಿರ್ದೇಶನಕ್ಕೆ ಒಳಪಟ್ಟು ಸದಾ ಜೀವಿಸಿದ ಭಕ್ತನು, ಈ ದೇಹ ಬಿಟ್ಟತರುವಾಯ ಪರಂಧಾಮಕ್ಕೆ ಮರಳಿ, ಪರಮ ಪ್ರಭುವಿನ ಸಹವಾಸದಲ್ಲಿ ನೇರವಾಗಿ ನಿರತನಾಗುವ ಸ್ಥಾನದವರೆಗೆ ವಿಕಾಸ ಹೊಂದಿರುತ್ತಾನೆ ಎಂಬುದು ಇಲ್ಲಿ ನಿರ್ದಿಷ್ಟವಾಗಿ ಹೇಳಿದೆ.

ಭಗವಂತನ ಸೇವೆಗೆ ತನ್ನ ಜೀವನವನ್ನು ವಿಧಿವತ್ತಾಗಿ ಸಮರ್ಪಿಸುವ ವಿನಾ ಬೇರೆ ಇಚ್ಛೆಯಿಲ್ಲದವನು ವಾಸ್ತವಿಕವಾಗಿ **ಸಂನ್ಯಾಸಿ.** ಅಂಥವನು ತನ್ನನ್ನು ಸದಾ, ಭಗ ವಂತನ ಪರಮ ಇಚ್ಛಾವಲಂಬಿಯಾದ ನಿತ್ಯದಾಸನು ಎಂದು ಭಾವಿಸುತ್ತಾನೆ. ಹಾಗಿರಲು ಅವನು ಮಾಡುವುದೆಲ್ಲವನ್ನು ಭಗವಂತನ ಪ್ರಯೋಜನಕ್ಕಾಗಿ ಮಾಡುತ್ತಾನೆ. ಅವನು ಆಚರಿಸುವ ಯಾವುದೇ ಕಾರ್ಯವನ್ನು ಭಗವಂತನಿಗೆ ಸೇವೆಯಾಗಿ ಅದನ್ನು ಆಚರಿಸು ತ್ತಾನೆ. ಅವನು ಕಾಮ್ಯ ಕರ್ಮಗಳಿಗೆ ಅಥವಾ ವೇದೋಕ್ತ ವಿಧಿತ ಕರ್ತವ್ಯಗಳಿಗೆ ತೀವ್ರ ಗಮನ ನೀಡುವುದಿಲ್ಲ. ಸಾಮಾನ್ಯ ವ್ಯಕ್ತಿಗಳಿಗೆ ವೇದೋಕ್ತ ವಿಧಿತ ಕರ್ತವ್ಯಗಳನ್ನು ಆಚರಿಸುವುದು ಕಡ್ಡಾಯ, ಆದರೆ ಭಗವಂತನ ಸೇವೆಯಲ್ಲಿ ಪೂರ್ಣವಾಗಿ ನಿರತನಾದ ಶುದ್ಧ ಭಕ್ತನೊಬ್ಬನು ಕೆಲವು ಸಮಯಗಳಲ್ಲಿ ವೈದಿಕ ವಿಧಿತ ಕರ್ತವ್ಯಗಳಿಗೆ ವಿರುದ್ಧವಾಗಿ ಹೋಗುವಂತೆ ತೋರಬಹುದಾದರೂ, ವಾಸ್ತವಿಕವಾಗಿ ಅದು ಹಾಗಿರುವುದಿಲ್ಲ.

ಆದ್ದರಿಂದ ಅತ್ಯಂತ ಬುದ್ಧಿವಂತನು ಕೂಡ ಶುದ್ಧ ಭಕ್ತನ ಯೋಜನೆಗಳನ್ನು ಮತ್ತು ಚಟುವಟಿಕೆಗಳನ್ನು ಅರಿತುಕೊಳ್ಳಲಾರನೆಂದು ವೈಷ್ಣವ ಪ್ರಮಾಣಗಳಿಂದ ಹೇಳಲ್ಪಟ್ಟಿವೆ. ನಿಷ್ಕೃಷ್ಟ ಪದಗಳು ಹೀಗಿವೆ : **ತಾನ್ರ ವಾಕ್ಯ, ಕ್ರಿಯಾ, ಮುದ್ರಾ ವಿಜ್ಞೇಹ ನಾ ಬುಝಯ** (ಚೈತನ್ಯ—ಚರಿತಾಮೃತ, ಮಧ್ಯ 23.39). ಹೀಗೆ ಭಗವಂತನ ಸೇವೆಯಲ್ಲಿ ಸದಾ ನಿರತನಾದ ವ್ಯಕ್ತಿಯು ಅಥವಾ ಭಗವಂತನಿಗೆ ಹೇಗೆ ಸೇವೆ ಮಾಡಬೇಕು ಎಂದು ಸದಾ ಯೋಚಿಸುತ್ತಿರುವ ಮತ್ತು ಯೋಜಿಸುತ್ತಿರುವವನನ್ನು ವರ್ತ ಮಾನದಲ್ಲಿ ಸಂಪೂರ್ಣವಾಗಿ ವಿಮೋಚಿತನೆಂದು ಭಾವಿಸಬೇಕು ಮತ್ತು ಭವಿಷ್ಯದಲ್ಲಿ ಪರಂಧಾಮಕ್ಕೆ ಅವನ ಮರಳುವಿಕೆಯು ನಿಶ್ಚಿತ. ಕೃಷ್ಣನು ಎಲ್ಲ ಟೀಕೆಗಳಿಗೂ ಅತೀತ ನಾಗಿರುವಂತೆ, ಅವನು ಎಲ್ಲ ಭೌತಿಕ ಟೀಕೆಗಳಿಗೂ ಅತೀತನಾಗಿರುತ್ತಾನೆ.

**ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।**
**ಯೇ ಭಜನ್ತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಮ್ ॥ ೨೯ ॥**

**ಸಮಃ**—ಸಮ ಮನೋಭಾವವುಳ್ಳವನಾಗಿ, **ಅಹಮ್**—ನಾನು, **ಸರ್ವ ಭೂತೇಷು**—ಎಲ್ಲ ಜೀವಿಗಳಿಗೆ, **ನ**—ಯಾರೊಬ್ಬನೂ ಇಲ್ಲ, **ಮೇ**—ನನಗೆ, **ದ್ವೇಷ್ಯಃ**—ದ್ವೇಷವುಳ್ಳ, **ಅಸ್ತಿ**—ಇರುವುದು, **ನ**—ಇಲ್ಲ, **ಪ್ರಿಯಃ**—ಪ್ರಿಯನು, **ಯೇ**—ಯಾರು **ಭಜನ್ತಿ**—ದಿವ್ಯ ಸೇವೆಯನ್ನು ಸಲ್ಲಿಸುವರು, **ತು**—ಆದರೆ, **ಮಾಮ್**—ನನಗೆ, **ಭಕ್ತ್ಯಾ**—ಭಕ್ತಿಯಲ್ಲಿ, **ಮಯಿ**—ನನ್ನಲ್ಲಿ ಇರುವವರು, **ತೇ**—ಅಂಥ ವ್ಯಕ್ತಿಗಳು, **ತೇಷು**—ಅವರಲ್ಲಿ, **ಚ**—ಸಹ, **ಅಪಿ**—ಖಂಡಿತವಾಗಿ, **ಅಹಮ್**—ನಾನು.

**ನಾನು ಯಾರನ್ನೂ ದ್ವೇಷಿಸುವುದಿಲ್ಲ ಅಥವಾ ಯಾರಿಗೂ ನಾನು ಪಕ್ಷಪಾತಿಯೂ ಅಲ್ಲ. ನಾನು ಸರ್ವರಿಗೂ ಸಮನು. ಆದರೆ ಯಾರೊಬ್ಬನು ಭಕ್ತಿಯಲ್ಲಿ ನನಗೆ ಸೇವೆ ಸಲ್ಲಿಸುವನೋ ಅವನು ನನ್ನ ಮಿತ್ರ, ನನ್ನಲ್ಲಿರುವನು, ಮತ್ತು ನಾನೂ ಸಹ ಅವನಿಗೆ ಮಿತ್ರನು.**

**ಭಾವಾರ್ಥ** : ಕೃಷ್ಣನು ಸರ್ವರಿಗೂ ಸಮಾನನಾಗಿದ್ದರೆ ಮತ್ತು ಯಾರೂ ಅವನ ವಿಶೇಷ ಮಿತ್ರನಲ್ಲದಿದ್ದರೆ, ಅವನ ದಿವ್ಯ ಸೇವೆಯಲ್ಲಿ ನಿರತನಾಗಿರುವ ಭಕ್ತರಲ್ಲಿ ಅವನು ವಿಶೇಷ ಆಸಕ್ತಿ ತೆಗೆದುಕೊಳ್ಳುವುದು ಏಕೆ ಎಂದು ಇಲ್ಲಿ ಯಾರಾದರೂ ಪ್ರಶ್ನಿಸಬಹುದು. ಆದರೆ ಇದು ಪಕ್ಷಪಾತವಲ್ಲ; ಇದು ಸ್ವಾಭಾವಿಕ. ಈ ಭೌತಿಕ ಜಗತ್ತಿನಲ್ಲಿ ಯಾವ ಮನುಷ್ಯನಾದರೂ ಬಹು ಉದಾರ ಮನಸ್ವಿಯಾಗಿರಬಹುದಾದರೂ, ಅವನು ತನ್ನ ಸ್ವಂತ ಮಕ್ಕಳಲ್ಲಿ ವಿಶೇಷ ಆಸಕ್ತಿ ಹೊಂದಿರುವನು. ಪ್ರತಿಯೊಬ್ಬ ಜೀವಿಯು—ಯಾವುದೇ ರೂಪದಲ್ಲಿರಲಿ—ತನ್ನ ಪುತ್ರನು ಎಂದು ಭಗವಂತನು ಹೇಳುತ್ತಾನೆ, ಮತ್ತು ಹಾಗೆ ಪ್ರತಿಯೊಬ್ಬರಿಗೂ ಜೀವನಾವಶ್ಯಕತೆಗಳನ್ನು ಅವನು ಧಾರಾಳವಾಗಿ ಒದಗಿಸುತ್ತಾನೆ. ಬಂಡೆ ಅಥವಾ ನೆಲ ಅಥವಾ ನೀರಿನ ಮೇಲೆ ಬೀಳುತ್ತಿದೆಯೋ ಎಂದು ಲಕ್ಷಿಸದೆ ಎಲ್ಲೆಡೆಯೂ ಮಳೆಗರೆಯುವ ಮೇಘದಂತೆ ಅವನು. ಆದರೆ ತನ್ನ ಭಕ್ತರಿಗೆ, ಅವನು ನಿರ್ದಿಷ್ಟ ಗಮನ ನೀಡುತ್ತಾನೆ. ಅಂಥ ಭಕ್ತರು ಇಲ್ಲಿ ಪ್ರಸ್ತಾಪಿತ: ಅವರು ಸದಾ ಕೃಷ್ಣಪ್ರಾಜ್ಞಿಗಳು, ಆದ್ದರಿಂದ ಅವರು ಸದಾ ದಿವ್ಯವಾಗಿ ಕೃಷ್ಣನಲ್ಲಿ ಸನ್ನಿವೇಶಿತರು. "ಕೃಷ್ಣಪ್ರಜ್ಞೆ" ಎಂಬ ಪದಗಳು ಸೂಚಿಸುವುದೇನೆಂದರೆ, ಅಂಥ ಪ್ರಜ್ಞೆಯಲ್ಲಿರುವವರು ಅವನಲ್ಲಿ ಸನ್ನಿವೇಶಿತರು, ಜೀವಂತ ದಿವ್ಯವಾದಿಗಳು ಎಂದು. ಭಗವಂತನು ಇಲ್ಲಿ ಸ್ಪಷ್ಟವಾಗಿ **ಮಯಿ ತೇ,** "ಅವರು ನನ್ನಲ್ಲಿದ್ದಾರೆ," ಎಂದು ಹೇಳುತ್ತಾನೆ. ಪರಿಣಾಮವಾಗಿ, ಸಹಜವಾಗಿಯೇ ಭಗವಂತನೂ ಅವರಲ್ಲಿದ್ದಾನೆ. ಇದು ಅನ್ಯೋನ್ಯ. ಇದು ಈ ಪದಗಳನ್ನೂ ವಿವರಿಸುತ್ತದೆ : **ಯೇ ಯಥಾ ಮಾಂ ಪ್ರಪದ್ಯನ್ತೇ ತಾಂಸ್ತಥೈವ ಭಜಾಮಿ ಅಹಮ್**—"ನನಗೆ ಶರಣಾಗತರಾದವರು ಯಾರೇ ಆದರೂ, ಅನುಪಾತೀಯವಾಗಿ ನಾನು ಅವನ ರಕ್ಷಣೆಯನ್ನು ವಹಿಸಿಕೊಳ್ಳುತ್ತೇನೆ." ಭಗವಂತನು ಮತ್ತು ಭಕ್ತನು ಪ್ರಾಜ್ಞರಾಗಿರುವ ಕಾರಣ, ಈ ದಿವ್ಯ ಅನ್ಯೋನ್ಯತೆಯು ಇರುತ್ತದೆ. ವಜ್ರವನ್ನು ಚಿನ್ನದ ಉಂಗುರದಲ್ಲಿ ಅಳವಡಿಸಿದಾಗ ಅದು ಬಹು ಸೊಗಸಾಗಿ ಕಾಣುತ್ತದೆ. ಚಿನ್ನವು ಶ್ಲಾಘನೀಯವಾಗಿರುವುದು ಮತ್ತು ಅದೇ ಕಾಲದಲ್ಲಿ ವಜ್ರವೂ ಶ್ಲಾಘನೀಯವಾಗಿರುವುದು. ಭಗವಂತನು

ಮತ್ತು ಜೀವಿಯು ಶಾಶ್ವತವಾಗಿ ಮಿರುಗುವವರು. ಮತ್ತು ಜೀವಿಯು ಪರಮ ಪ್ರಭುವಿಗೆ ಸೇವೆಮಾಡಲು ಒಲವು ಹೊಂದಿದಾಗ ಅವನು ಚಿನ್ನದಂತೆ ಕಾಣುತ್ತಾನೆ. ಭಗವಂತನು ವಜ್ರ, ಆದ್ದರಿಂದ ಈ ಸಂಯೋಗವು ಅತಿ ಸುಂದರ. ಶುದ್ಧ ಸ್ಥಿತಿಯಲ್ಲಿ ಜೀವಿಗಳು ಭಕ್ತರೆಂದು ಕರೆಯಲ್ಪಡುವರು. ಪರಮ ಪ್ರಭು ತನ್ನ ಭಕ್ತರ ಭಕ್ತನಾಗುವನು. ಭಕ್ತ ಮತ್ತು ಭಗವಂತನ ನಡುವೆ ಅನ್ಯೋನ್ಯ ಸಂಬಂಧ ಇಲ್ಲದಿದ್ದರೆ, ಆಗ ವ್ಯಕ್ತಿವಾದಿ ದರ್ಶನವೇ ಇಲ್ಲ. ವ್ಯಕ್ತಿಶೂನ್ಯ ದರ್ಶನದಲ್ಲಿ ಪರಮನ ಮತ್ತು ಜೀವಿಯ ನಡುವೆ ಪಾರಸ್ಪರ್ಯ ವಿಲ್ಲ, ಆದರೆ ವ್ಯಕ್ತಿವಾದಿ ದರ್ಶನದಲ್ಲಿ ಅದು ಇರುತ್ತದೆ.

ಭಗವಂತನು ಕಲ್ಪವೃಕ್ಷದಂತೆ, ಮತ್ತು ಈ ಕಲ್ಪವೃಕ್ಷದಿಂದ ಒಬ್ಬನು ಬಯಸಿದ್ದನ್ನೆಲ್ಲ ಭಗವಂತನು ಒದಗಿಸುತ್ತಾನೆ ಎಂಬ ಉದಾಹರಣೆಯನ್ನು ಅನೇಕ ಸಲ ನೀಡುವುದುಂಟು. ಆದರೆ ಇಲ್ಲಿ ವಿವರಣೆಯು ಹೆಚ್ಚು ಪೂರ್ಣ. ಭಗವಂತನು ಭಕ್ತರಿಗೆ ಪಕ್ಷಪಾತಿ ಎಂದು ಇಲ್ಲಿ ಹೇಳಿದೆ. ಇದು ಭಕ್ತರಿಗೆ ಭಗವಂತನ ವಿಶೇಷ ದಯೆಯ ಅಭಿವ್ಯಕ್ತಿ. ಭಗವಂತನ ಪಾರಸ್ಪರ್ಯವು **ಕರ್ಮದ** ನಿಯಮಾಧೀನ ಎಂದು ಭಾವಿಸಕೂಡದು. ಅದು ಭಗವಂತನು ಮತ್ತು ಭಕ್ತರು ಕ್ರಿಯಾಶೀಲರಾಗುವ ದಿವ್ಯಸನ್ನಿವೇಶಕ್ಕೆ ಸೇರಿರುವುದು. ಭಗವಂತನ ಭಕ್ತಿಯುತ ಸೇವೆಯು ಈ ಭೌತಿಕ ಜಗತ್ತಿನ ಒಂದು ಚಟುವಟಿಕೆಯಲ್ಲ; ಅದು ನಿತ್ಯತೆ, ಜ್ಞಾನ ಮತ್ತು ಆನಂದವು ಪ್ರಧಾನವಾಗಿರುವ ಆಧ್ಯಾತ್ಮ ಜಗತ್ತಿನದು.

**ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।**
**ಸಾಧುರೇವ ಸ ಮನ್ತವ್ಯಃ ಸಮ್ಯಗ್ ವ್ಯವಸಿತೋ ಹಿ ಸಃ ॥ ೩೦ ॥**

ಅಪಿ—ಕೂಡ, ಚೇತ್—ಆಗಿದ್ದರೆ, ಸುದುರಾಚಾರಃ—ಅತ್ಯಂತ ಅಸಹ್ಯ ಕಾರ್ಯ ಗಳನ್ನು ಮಾಡುವ ಒಬ್ಬನು, ಭಜತೇ—ಭಕ್ತಿಯುತ ಸೇವೆಯಲ್ಲಿ ನಿರತನು, ಮಾಮ್—ನನಗೆ, ಅನನ್ಯ ಭಾಕ್—ವಿಚಲತೆ ಇಲ್ಲದೆ, ಸಾಧುಃ—ಒಬ್ಬ ಸಾಧು, ಏವ—ಖಂಡಿತವಾಗಿ, ಸಃ—ಅವನು, ಮನ್ತವ್ಯಃ—ಎಂದು ತಿಳಿಯಬೇಕು, ಸಮ್ಯಕ್—ಸಂಪೂರ್ಣವಾಗಿ, ವ್ಯವಸಿತಃ—ನಿರ್ಧಾರದಲ್ಲಿ ಸನ್ನಿವೇಶಿತನು, ಹಿ—ಖಂಡಿತವಾಗಿ, ಸಃ—ಅವನು.

**ಒಬ್ಬನು ಅತ್ಯಂತ ಅಸಹ್ಯಕರ ಕಾರ್ಯಮಾಡಿದರೂ ಕೂಡ, ಅವನು ಭಕ್ತಿಯುತ ಸೇವೆಯಲ್ಲಿ ನಿರತನಾಗಿದ್ದರೆ, ಅವನು ಸಾಧು ಎಂದು ಪರಿಗಣಿಸಬೇಕು, ಏಕೆಂದರೆ ಅವನು ತನ್ನ ನಿರ್ಧಾರದಲ್ಲಿ ಉಚಿತವಾಗಿ ಸನ್ನಿವೇಶಿತನಾಗಿರುವನು.**

**ಭಾವಾರ್ಥ :** ಈ ಶ್ಲೋಕದಲ್ಲಿ ಉಪಯೋಗಿಸಿರುವ **ಸುದುರಾಚಾರಃ** ಪದವು ಬಹು ಮಹತ್ವದ್ದು, ಮತ್ತು ನಾವು ಅದನ್ನು ಸರಿಯಾಗಿ ಅರಿತುಕೊಳ್ಳಬೇಕು. ಜೀವಿಯು ಬದ್ಧನಾಗಿರುವಾಗ ಅವನಿಗೆ ಎರಡು ಬಗೆಯ ಚಟುವಟಿಕೆಗಳು ಇರುತ್ತವೆ; ಒಂದು ಬದ್ಧ, ಮತ್ತೊಂದು ಸ್ವರೂಪಗತ. ದೇಹರಕ್ಷಣೆಗಾಗಿ ಅಥವಾ ಸಮಾಜ ಮತ್ತು ರಾಜ್ಯ ನಿಯಮಗಳಿಗೆ ಬದ್ಧರಾಗಿರಲು, ಭಕ್ತರಿಗೂ ಕೂಡ, ಬದ್ಧ ಜೀವನಕ್ಕೆ ಸಂಬಂಧಿಸಿದಂತೆ ನಿಶ್ಚಿತವಾಗಿ ವಿವಿಧ ಚಟುವಟಿಕೆಗಳಿವೆ, ಮತ್ತು ಅಂಥ ಚಟುವಟಿಕೆಗಳು ಬದ್ಧ ಎಂದು ಕರೆಯಲ್ಪಡುತ್ತವೆ. ಇವಲ್ಲದೆ, ತನ್ನ ಆಧ್ಯಾತ್ಮಿಕ ಪ್ರಕೃತಿಯ ಪೂರ್ಣ ಪ್ರಜ್ಞೆಯುಳ್ಳ,

ಕೃಷ್ಣಪ್ರಜ್ಞೆಯಲ್ಲಿ ಅಥವಾ ಭಗವಂತನ ಭಕ್ತಿಯುತ ಸೇವೆಯಲ್ಲಿ ನಿರತನಾಗಿರುವ, ಜೀವಿಗೆ ದಿವ್ಯವೆಂದು ಕರೆಯಲ್ಪಡುವ ಚಟುವಟಿಕೆಗಳು ಇರುತ್ತವೆ. ಅಂಥ ಚಟುವಟಿಕೆಗಳು ಅವನ ಸ್ವರೂಪಸ್ಥಿತಿಯಲ್ಲಿ ಆಚರಿಸಲ್ಪಡುತ್ತವೆ ಮತ್ತು ಅವು ಪಾರಿಭಾಷಿಕ ನಿರೂಪಣೆಯಲ್ಲಿ ಭಕ್ತಿಯುತ ಸೇವೆ ಎಂದು ಕರೆಯಲ್ಪಡುತ್ತವೆ. ಈಗ, ಬದ್ಧ ಸ್ಥಿತಿಯಲ್ಲಿ, ಕೆಲವು ಸಮಯಗಳಲ್ಲಿ ಭಕ್ತಿಯುತ ಸೇವೆ ಮತ್ತು ದೇಹಕ್ಕೆ ಸಂಬಂಧಿಸಿದಂತೆ ಬದ್ಧ ಸೇವೆ, ಒಂದಕ್ಕೊಂದು ಸಮಾನಾಂತರವಾಗಿರುತ್ತವೆ. ಮತ್ತೆ ಕೆಲವು ಸಮಯಗಳಲ್ಲಿ ಈ ಚಟುವಟಿಕೆಗಳು ಒಂದಕ್ಕೊಂದು ವಿರುದ್ಧವಾಗಿರುತ್ತವೆ. ಸಾಧ್ಯವಾದಷ್ಟೂ, ಭಕ್ತನು ತನ್ನ ಸುಸ್ಥಿತಿಯನ್ನು ಕದಡುವಂಥ ಏನನ್ನೂ ಮಾಡದಷ್ಟು ಬಹು ಜಾಗೃತನು. ಅವನ ಚಟುವಟಿಕೆಗಳಲ್ಲಿನ ಪರಿಪೂರ್ಣತೆಯು ತನ್ನ ಕೃಷ್ಣಪ್ರಜ್ಞೆಯ ಪ್ರಗತಿಪರ ಸಾಕ್ಷಾತ್ಕಾರವನ್ನು ಅವಲಂಬಿಸಿದೆ ಎಂಬುದನ್ನು ಅವನು ತಿಳಿದಿರುತ್ತಾನೆ. ಕೆಲವು ಸಮಯಗಳಲ್ಲಾದರೋ, ಕೃಷ್ಣಪ್ರಜ್ಞೆಯು ಸಾಮಾಜಿಕವಾಗಿ ಅಥವಾ ರಾಜಕೀಯವಾಗಿ ಅತ್ಯಂತ ಅಸಹ್ಯಕರವೆನಿಸ ಬಹುದಾದ ಯಾವುದಾದರೂ ಕಾರ್ಯವನ್ನು ಮಾಡಿದಂತೆ ಕಂಡುಬರಬಹುದು. ಆದರೆ ಅಂಥ ತಾತ್ಕಾಲಿಕ ಪತನವು ಅವನನ್ನು ಅನರ್ಹಗೊಳಿಸುವುದಿಲ್ಲ. ಒಬ್ಬ ವ್ಯಕ್ತಿಯು ಪತನ ಹೊಂದಿದರೆ, ಆದರೆ ಹೃತ್ಪೂರ್ವಕವಾಗಿ ಪರಮ ಪ್ರಭುವಿನ ದಿವ್ಯ ಸೇವೆಯಲ್ಲಿ ನಿರತನಾಗಿದ್ದರೆ, ಭಗವಂತನು, ಅವನ ಹೃದಯಸನ್ನಿವೇಶಿತನಾಗಿದ್ದು, ಅವನನ್ನು ಶುದ್ಧಗೊಳಿಸುತ್ತಾನೆ, ಮತ್ತು ಆ ದುಷ್ಕಾರ್ಯಕ್ಕಾಗಿ ಅವನನ್ನು ಕ್ಷಮಿಸುತ್ತಾನೆ ಎಂದು ಶ್ರೀಮದ್ ಭಾಗವತದಲ್ಲಿ ಹೇಳಿದೆ. ಭೌತಿಕ ಕಲುಷತೆಯು ಅದೆಷ್ಟು ಬಲಯುತವೆಂದರೆ, ಭಗವಂತನ ಸೇವೆಯಲ್ಲಿ ಪೂರ್ಣ ನಿರತನಾದ ಯೋಗಿಯು ಕೂಡ ಕೆಲವು ಸಮಯಗಳಲ್ಲಿ ಬಲೆಗೆ ಬೀಳುತ್ತಾನೆ; ಆದರೆ ಕೃಷ್ಣಪ್ರಜ್ಞೆಯು ಅಂಥ ಆಕಸ್ಮಿಕ ಪತನವನ್ನು ಕೂಡಲೇ ಸರಿಪಡಿಸುವಷ್ಟು ಬಲಯುತವಾಗಿರುತ್ತದೆ. ಆದ್ದರಿಂದ ಭಕ್ತಿಯುತ ಸೇವಾ ಪ್ರಕ್ರಿಯೆಯು ಸದಾ ಜಯಶಾಲಿ. ಆದರ್ಶ ಪಥದಿಂದ ಭಕ್ತನ ಯಾವುದೋ ಆಕಸ್ಮಿಕ ಪತನಕ್ಕಾಗಿ ಯಾರೂ ಅವನನ್ನು ನಿಂದಿಸಕೂಡದು, ಏಕೆಂದರೆ, ಮುಂದಿನ ಶ್ಲೋಕದಲ್ಲಿ ವಿವರಿಸಿದಂತೆ, ಭಕ್ತನು ಸಂಪೂರ್ಣವಾಗಿ ಕೃಷ್ಣಪ್ರಜ್ಞಾ ಸನ್ನಿವೇಶಿತನಾದೊಡನೆಯೇ, ಅಂಥ ಆಕಸ್ಮಿಕ ಪತನಗಳು ಕಾಲಕ್ರಮದಲ್ಲಿ ನಿಲ್ಲುತ್ತವೆ.

ಆದ್ದರಿಂದ ಕೃಷ್ಣಪ್ರಜ್ಞಾ ಸನ್ನಿವೇಶಿತನಾದ ಮತ್ತು ನಿರ್ಧಾರದೊಡನೆ ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ/ ಹರೇ ರಾಮ, ಹರೇ ರಾಮ, ರಾಮ ರಾಮ ಹರೇ ಹರೇ ಜಪ ಪ್ರಕ್ರಿಯೆಯಲ್ಲಿ ನಿರತನಾಗಿರುವ ವ್ಯಕ್ತಿಯು ಆಕಸ್ಮಿಕ ಅಥವಾ ಅನುದ್ದಿಷ್ಟವಾಗಿ ಅವನು ಪತಿತನಾದಂತೆ ಕಂಡುಬಂದರೂ ಕೂಡ ದಿವ್ಯಸ್ಥಿತನೆಂದು ಭಾವಿಸಲ್ಪಡಬೇಕು. ಸಾಧುರ್ ಏವ "ಅವನು ಸಾಧು," ಎಂಬ ಪದಗಳು ಒತ್ತಿ ಹೇಳುತ್ತವೆ. ಆಕಸ್ಮಿಕ ಪತನಕ್ಕಾಗಿ ಭಕ್ತನನ್ನು ನಿಂದಿಸಕೂಡದು ಎನ್ನುವುದಕ್ಕೆ ಅವು ಭಕ್ತರಿಗೆ ಒಂದು ಎಚ್ಚರಿಕೆ; ಅವನು ಆಕಸ್ಮಿಕವಾಗಿ ಪತನ ಹೊಂದಿದ್ದರೂ, ಆಗಲೂ ಸಹ ಅವನು ಸಾಧು ಎಂದು ಭಾವಿಸಲ್ಪಡಬೇಕು. ಮನ್ತವ್ಯಃ ಎಂಬ ಪದವು ಇನ್ನೂ ಹೆಚ್ಚು ಪ್ರಧಾನವಾದದ್ದು. ಒಬ್ಬನು ಈ ನಿಯಮವನ್ನು ಪಾಲಿಸದಿದ್ದರೆ, ಮತ್ತು ಆಕಸ್ಮಿಕ ಪತನಕ್ಕಾಗಿ

ಭಕ್ತನನ್ನು ನಿಂದಿಸಿದರೆ, ಆಗ ಅವನು ಪರಮ ಪ್ರಭುವಿನ ಆಜ್ಞೆಯನ್ನು ಉಲ್ಲಂಘಿಸುತ್ತಿದ್ದಾನೆ. ನಿಶ್ಚಲವಾಗಿ ಮತ್ತು ಅನನ್ಯವಾಗಿ ಭಕ್ತಿಯುತ ಸೇವೆಯಲ್ಲಿ ನಿರತನಾಗಿರುವುದೇ ಭಕ್ತನ ಏಕೈಕ ಅರ್ಹತೆ.

ನೃಸಿಂಹ ಪುರಾಣದಲ್ಲಿ ಈ ಕೆಳಗಿನ ನಿರೂಪಣೆ ಇದೆ :

ಭಗವತಿ ಚ ಹರಾವನನ್ಯಚೇತಾ
ಭೃಶಮಲಿನೋಽಪಿ ವಿರಾಜತೇ ಮನುಷ್ಯಃ।
ನ ಹಿ ಶಶಕಲುಷಚ್ಛಬಿಃ ಕದಾಚಿತ್
ತಿಮಿರಪರಾಭವತಾಮ್ ಉಪೈತಿ ಚನ್ದ್ರಃ॥

ಇದರ ಅರ್ಥವೆಂದರೆ ; ಒಬ್ಬನು ಭಗವಂತನ ಭಕ್ತಿಯುತ ಸೇವೆಯಲ್ಲಿ ಪೂರ್ಣ ನಿರತವಾಗಿದ್ದರೂ, ಕೆಲವು ಸಮಯಗಳಲ್ಲಿ ಅಸಹ್ಯಕರ ಚಟುವಟಿಕೆಗಳಲ್ಲಿ ನಿರತನಾಗಿರುವುದು ಕಂಡುಬರಬಹುದಾದರೂ, ಈ ಚಟುವಟಿಕೆಗಳು ಚಂದ್ರನ ಮೇಲೆ ಮೊಲದ ಗುರುತನ್ನು ಹೋಲುವ ಕಲೆಗಳು ಎಂಬಂತೆ ಭಾವಿಸಲ್ಪಡಬೇಕು. ಬೆಳದಿಂಗಳ ಪ್ರಸರಣಕ್ಕೆ ಅಂಥ ಕಲೆಗಳು ವಿಘ್ನಕರವಾಗುವುದಿಲ್ಲ. ಅದೇ ಪ್ರಕಾರ, ಸಾಧು ಲಕ್ಷಣದ ಪಥದಿಂದ ಭಕ್ತನ ಆಕಸ್ಮಿಕ ಪತನವು ಅವನನ್ನು ಅಸಹ್ಯಕರವಾಗಿ ಮಾಡುವುದಿಲ್ಲ.

ಅತ್ತಲಾಗಿ, ದಿವ್ಯ ಭಕ್ತಿಯುತ ಸೇವೆಯಲ್ಲಿ ನಿರತನಾದ ಭಕ್ತನು ಎಲ್ಲ ಬಗೆಯ ಅಸಹ್ಯಕರ ರೀತಿಗಳಲ್ಲಿಯೂ ವರ್ತಿಸಬಹುದೆಂದು ತಪ್ಪಾಗಿ ತಿಳಿದುಕೊಳ್ಳಬಾರದು ; ಈ ಶ್ಲೋಕವು ಭೌತಿಕ ಸಂಪರ್ಕಗಳ ಬಲವಾದ ಶಕ್ತಿಯ ನಿಮಿತ್ತವಾದ ಆಕಸ್ಮಿಕ ಘಟನೆಯನ್ನು ಮಾತ್ರ ಸೂಚಿಸುತ್ತದೆ. ಭಕ್ತಿಯುತ ಸೇವೆಯು ಹೆಚ್ಚು ಕಡಿಮೆ ಮಾಯಾ ಶಕ್ತಿಯ ವಿರುದ್ಧ ಯುದ್ಧ ಘೋಷಣೆ. ಒಬ್ಬನು ಮಾಯಾ ಶಕ್ತಿಯ ವಿರುದ್ಧ ಕಾದಾಡುವಷ್ಟು ಬಲಿಷ್ಠನಾಗದಿರುವವರೆಗೆ, ಆಕಸ್ಮಿಕ ಪತನಗಳು ಇರಬಹುದು. ಆದರೆ ಒಬ್ಬನು ಸಾಕಷ್ಟು ಬಲಯುತನಾದಾಗ ಹಿಂದೆ ವಿವರಿಸಿದಂತೆ, ಅವನು ಅಂಥ ಪತನಗಳಿಗೆ ಗುರಿಯಾಗುವುದಿಲ್ಲ. ಯಾರೂ ಕೂಡ ಈ ಶ್ಲೋಕದ ಸೌಕರ್ಯವನ್ನು ಪಡೆದುಕೊಂಡು ಅಪರಾಧ ಮಾಡಕೂಡದು ಮತ್ತು ತಾನು ಇನ್ನೂ ಒಬ್ಬ ಭಕ್ತನೆಂದು ಭಾವಿಸಕೂಡದು. ಭಕ್ತಿಯುತ ಸೇವೆಯಿಂದ ಒಬ್ಬನು ತನ್ನ ವರ್ತನೆಯನ್ನು ಸುಧಾರಿಸಿಕೊಳ್ಳದಿದ್ದರೆ, ಆಗ ಅವನು ಉನ್ನತ ಭಕ್ತನಲ್ಲವೆಂದು ತಿಳಿಯಬೇಕು.

**ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾನ್ತಿಂ ನಿಗಚ್ಛತಿ ।**
**ಕೌನ್ತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ॥೩೧॥**

ಕ್ಷಿಪ್ರಮ್—ಬಹುಬೇಗ, ಭವತಿ—ಆಗುತ್ತಾನೆ, ಧರ್ಮ-ಆತ್ಮಾ—ಧರ್ಮಾತ್ಮನು, ಶಶ್ವತ್ ಶಾನ್ತಿಮ್—ಶಾಶ್ವತ ಶಾಂತಿಯನ್ನು, ನಿಗಚ್ಛತಿ—ಹೊಂದುತ್ತಾನೆ, ಕೌನ್ತೇಯ—ಹೇ ಕುಂತಿ ಪುತ್ರನೇ, ಪ್ರತಿಜಾನೀಹಿ—ಘೋಷಿಸು, ನ—ಎಂದಿಗೂ ಇಲ್ಲ, ಮೇ—ನನ್ನ, ಭಕ್ತಃ—ಭಕ್ತನು, ಪ್ರಣಶ್ಯತಿ—ನಾಶವಾಗುವುದು,

**ಅವನು ಬೇಗನೇ ಧರ್ಮಾತ್ಮನಾಗುತ್ತಾನೆ ಮತ್ತು ಶಾಶ್ವತ ಶಾಂತಿಯನ್ನು ಹೊಂದುತ್ತಾನೆ. ಹೇ ಕುಂತಿ ಪುತ್ರನೇ, ನನ್ನ ಭಕ್ತನು ಎಂದಿಗೂ ನಾಶವಾಗುವುದಿಲ್ಲ ಎಂದು ಧೈರ್ಯವಾಗಿ ಘೋಷಿಸು.**

**ಭಾವಾರ್ಥ :** ಇದನ್ನು ತಪ್ಪಾಗಿ ತಿಳಿದುಕೊಳ್ಳಬಾರದು. ದುಷ್ಕಾರ್ಯದಲ್ಲಿ ತೊಡಗಿದವನು ಭಗವಂತನ ಭಕ್ತನಾಗಲಾರನು ಎಂದು ಭಗವಂತನು ಏಳನೆಯ ಅಧ್ಯಾಯದಲ್ಲಿ ಹೇಳುತ್ತಾನೆ. ಭಗವಂತನ ಭಕ್ತನಲ್ಲದವನಿಗೆ ಯಾವ ಒಳ್ಳೆಯ ಅರ್ಹತೆಗಳೂ ಇರುವುದಿಲ್ಲ. ಹಾಗಾದರೆ, ಆಕಸ್ಮಿಕವಾಗಿ ಅಥವಾ ಉದ್ದೇಶಪೂರ್ವಕವಾಗಿ—ಅಸಹ್ಯ ಕಾರ್ಯಗಳಲ್ಲಿ ನಿರತನಾದವನು ಹೇಗೆ ಶುದ್ಧ ಭಕ್ತನಾಗಬಲ್ಲನು ಎಂಬ ಪ್ರಶ್ನೆ ಉಳಿಯುತ್ತದೆ. ಈ ಪ್ರಶ್ನೆಯನ್ನು ಸಹಜವಾಗಿ ಎತ್ತಬಹುದು. ಏಳನೆಯ ಅಧ್ಯಾಯದಲ್ಲಿ ಹೇಳಿರುವಂತೆ, ಭಗವಂತನ ಭಕ್ತಿಯುತ ಸೇವೆಗೆ ಎಂದಿಗೂ ಬಾರದ ದುಷ್ಕರು, ಶ್ರೀಮದ್ ಭಾಗವತದಲ್ಲಿ ಹೇಳಿರುವಂತೆ ಒಳ್ಳೆಯ ಅರ್ಹತೆಗಳನ್ನು ಹೊಂದಿರುವುದಿಲ್ಲ. ಸಾಮಾನ್ಯವಾಗಿ, ನವವಿಧ ಭಕ್ತಿಯುತ ಕ್ರಿಯೆಗಳಲ್ಲಿ ನಿರತನಾಗಿರುವ ಭಕ್ತನು ಹೃದಯದಿಂದ ಎಲ್ಲ ಭೌತಿಕ ಕಲುಷತೆಯನ್ನು ಶುದ್ಧಗೊಳಿಸುವ ಪ್ರಕ್ರಿಯೆಯಲ್ಲಿ ನಿರತನಾಗಿರುತ್ತಾನೆ. ಅವನು ಪರಮ ದೇವೋತ್ತಮ ಪುರುಷನನ್ನು ತನ್ನ ಹೃದಯದಲ್ಲಿ ಇಟ್ಟುಕೊಳ್ಳುತ್ತಾನೆ ಮತ್ತು ಎಲ್ಲ ಪಾಪಪೂರ್ಣ ಕಲುಷತೆಗಳು ಸಹಜವಾಗಿಯೇ ತೊಳೆದು ಹಾಕಲ್ಪಡುತ್ತವೆ. ಪರಮ ಪ್ರಭುವಿನ ಸಂತತ ಚಿಂತನೆಯು ಅವನನ್ನು ಶುದ್ಧ ಸ್ವಭಾವದವನಾಗಿ ಮಾಡುತ್ತದೆ. ಒಬ್ಬನು ತನ್ನ ಉನ್ನತ ಸ್ಥಾನದಿಂದ ಪತನ ಹೊಂದಿದರೆ, ತನ್ನನ್ನು ಶುದ್ಧಗೊಳಿಸಿಕೊಳ್ಳಲು ಕೆಲವೊಂದು ಪ್ರಕ್ರಿಯೆಗಳಿಗೆ ಒಳಪಡಬೇಕಾಗುತ್ತದೆ ಎಂಬ ವಿಶಿಷ್ಟ ನಿಯಮವು ವೇದಗಳ ಪ್ರಕಾರ ಇರುತ್ತದೆ. ಆದರೆ ಇಲ್ಲಿ ಅಂಥ ಯಾವ ನಿಂಬಂಧನೆಯೂ ಇರುವುದಿಲ್ಲ. ಏಕೆಂದರೆ ಪರಮದೇವೋತ್ತಮ ಪುರುಷನ ಸತತ ಸ್ಮರಣೆಯ ನಿಮಿತ್ತ, ಶುದ್ಧೀಕರಣ ಪ್ರಕ್ರಿಯೆಯು ಆಗಲೇ ಭಕ್ತನ ಹೃದಯದಲ್ಲಿರುತ್ತದೆ. ಆದ್ದರಿಂದ, ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ/ ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ ಜಪವನ್ನು ನಿಲುಗಡೆ ಇಲ್ಲದೆ ಮುಂದುವರಿಸಬೇಕು. ಇದು ಭಕ್ತನನ್ನು ಎಲ್ಲ ಆಕಸ್ಮಿಕ ಪತನಗಳಿಂದ ರಕ್ಷಿಸುವುದು. ಅವನು ಹೀಗೆ ಸಕಲ ಭೌತಿಕ ಕಲುಷತೆಗಳಿಂದಲೂ ನಿರಂತರ ಮುಕ್ತನಾಗಿ ಉಳಿದುಕೊಳ್ಳುವನು.

**ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।**
**ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾನ್ತಿ ಪರಾಂ ಗತಿಮ್ ॥೩೨॥**

**ಮಾಮ್**—ನನ್ನ, **ಹಿ**—ಖಂಡಿತವಾಗಿ, **ಪಾರ್ಥ**—ಹೇ ಪೃಥಾ ಪುತ್ರನೇ, **ವ್ಯಪಾಶ್ರಿತ್ಯ**—ವಿಶೇಷವಾಗಿ ಆಶ್ರಯ ತೆಗೆದುಕೊಂಡು, **ಯೇ**—ಯಾರು, **ಅಪಿ**—ಕೂಡ, **ಸ್ಯುಃ**—ಇದ್ದಾರೆ, **ಪಾಪಯೋನಯಃ**—ನೀಚ ಕುಟುಂಬಗಳಲ್ಲಿ ಜನಿಸಿದ, **ಸ್ತ್ರಿಯಃ**—ಸ್ತ್ರೀಯರು, **ವೈಶ್ಯಾಃ**—ವಣಿಕ್ ಜನರು, **ತಥಾ**—ಕೂಡ, **ಶೂದ್ರಾಃ**—ಕೆಳವರ್ಗದ

ಜನರು, ತೇ ಅಪಿ—ಅವರು ಕೂಡ, ಯಾನ್ತಿ—ಹೋಗುತ್ತಾರೆ, ಪರಾಮ್—ಪರಮ, ಗತಿಮ್—ಗಮ್ಯಸ್ಥಾನಕ್ಕೆ.

**ಹೇ ಪೃಥಾ ಪುತ್ರನೇ, ನನ್ನಲ್ಲಿ ಆಶ್ರಯವನ್ನು ತೆಗೆದುಕೊಳ್ಳುವವರು, ನೀಚ ಜನಿತರು—ಸ್ತ್ರೀಯರು, ವೈಶ್ಯರು ಮತ್ತು ಶೂದ್ರರೇ (ಕೆಲಸಗಾರರು) ಆಗಿದ್ದರೂ—ಪರಮ ಗಮ್ಯಸ್ಥಾನವನ್ನು ಸೇರಬಲ್ಲರು.**

**ಭಾವಾರ್ಥ :** ಭಕ್ತಿಯುತ ಸೇವೆಯಲ್ಲಿ ಜನರ ಉಚ್ಚ ಮತ್ತು ನೀಚ ವರ್ಗಗಳ ವ್ಯತ್ಯಾಸ ಇಲ್ಲ ಎಂದು ಭಗವಂತನು ಇಲ್ಲಿ ಸ್ಪಷ್ಟವಾಗಿ ಘೋಷಿಸಿದ್ದಾನೆ ಜೀವನದ ಭೌತಿಕ ಕಲ್ಪನೆಯಲ್ಲಿ ಅಂಥ ವಿಭಾಗಗಳಿವೆ, ಆದರೆ ಭಗವಂತನಿಗೆ ದಿವ್ಯ ಭಕ್ತಿಯುತ ಸೇವೆಯಲ್ಲಿ ನಿರತನಾದವನಿಗೆ ಅಂಥ ವಿಭಾಗಗಳಿಲ್ಲ. ಪ್ರತಿಯೊಬ್ಬನೂ ಪರಮ ಗಮ್ಯಸ್ಥಾನಕ್ಕೆ ಅರ್ಹನು. ಚಂಡಾಲರೆಂಬ (ನಾಯಿ ತಿನ್ನುವವರು) ಅತ್ಯಂತ ಹೀನರೂ ಕೂಡ, ಶುದ್ಧ ಭಕ್ತನ ಸಹವಾಸದಿಂದ ಶುದ್ಧರಾಗಬಲ್ಲರೆಂದು ಶ್ರೀಮದ್ ಭಾಗವತದಲ್ಲಿ (2.4.18) ಹೇಳಿದೆ. ಆದ್ದರಿಂದ ಭಕ್ತಿಯುತ ಸೇವೆ ಮತ್ತು ಶುದ್ಧ ಭಕ್ತನ ಮಾರ್ಗ ದರ್ಶನವು ಅದೆಷ್ಟು ಶಕ್ತಿಯುತ ಎಂದರೆ ಉಚ್ಚ ಮತ್ತು ನೀಚ ವರ್ಗಗಳ ಜನಗಳ ನಡುವೆ ಯಾವ ಭೇದವೂ ಇರುವುದಿಲ್ಲ;ಯಾರು ಬೇಕಾದರೂ ಅದರಲ್ಲಿ ನಿರತನಾಗಬಹುದು. ಶುದ್ಧ ಭಕ್ತನ ಆಶ್ರಯವನ್ನು ತೆಗೆದುಕೊಳ್ಳುವ ಅತ್ಯಂತ ಸರಳ ಮನುಷ್ಯನು ಕೂಡ ಉಚಿತ ಮಾರ್ಗ ದರ್ಶನದಿಂದ ಶುದ್ಧನಾಗಬಲ್ಲನು. ಭೌತಿಕ ಪ್ರಕೃತಿಯ ವಿವಿಧ ಗುಣಾನುಸಾರ ಜನರು, ಸತ್ವಗುಣದಲ್ಲಿ (ಬ್ರಾಹ್ಮಣರು), ರಜೋಗುಣದಲ್ಲಿ (ಕ್ಷತ್ರಿಯರು ಅಥವಾ ಆಡಳಿತ ಗಾರರು), ಮಿಶ್ರಿತ ರಜೋಗುಣ ಮತ್ತು ತಮೋಗುಣಗಳಲ್ಲಿ (ವೈಶ್ಯರು ಅಥವಾ ವರ್ತಕರು), ಮತ್ತು ತಮೋಗುಣದಲ್ಲಿ (ಶೂದ್ರರು ಅಥವಾ ಕಾರ್ಮಿಕರು) ವರ್ಗೀಕೃತರು. ಅವರಿಗಿಂತಲೂ ಕೆಳಗಿನವರನ್ನು ಚಂಡಾಲರೆಂದು ಕರೆಯುತ್ತಾರೆ ಮತ್ತು ಅವರು ಪಾಪಿಷ್ಠ ಕುಟುಂಬಗಳಲ್ಲಿ ಜನಿಸಿರುತ್ತಾರೆ. ಪಾಪಿಷ್ಠ ಕುಟುಂಬಗಳಲ್ಲಿ ಜನಿಸಿದವರ ಸಹವಾಸವನ್ನು ಸಾಮಾನ್ಯವಾಗಿ ಉಚ್ಚ ವರ್ಗದವರು ಸ್ವೀಕರಿಸುವುದಿಲ್ಲ. ಆದರೆ ಭಕ್ತಿಯುತ ಸೇವಾ ಪ್ರಕ್ರಿಯೆಯು ಅದೆಷ್ಟು ಶಕ್ತಿಯುತವೆಂದರೆ ಪರಮ ಪ್ರಭುವಿನ ಶುದ್ಧ ಭಕ್ತನು ಎಲ್ಲ ಕೆಳ ವರ್ಗಗಳ ಜನರನ್ನು ಜೀವನದ ಅತ್ಯುನ್ನತ ಪರಿಪೂರ್ಣತೆಯನ್ನು ಹೊಂದುವಂತೆ ಸಮರ್ಥವಾಗಿಸಬಲ್ಲನು. ಒಬ್ಬನು ಕೃಷ್ಣನ ಆಶ್ರಯವನ್ನು ತೆಗೆದುಕೊಂಡಾಗ ಮಾತ್ರ ಇದು ಸಾಧ್ಯ. ಇಲ್ಲಿ **ವ್ಯಪಾಶ್ರಿತ್ಯ** ಎಂಬ ಪದದಿಂದ ಸೂಚಿಸಿರುವಂತೆ, ಒಬ್ಬನು ಪೂರ್ಣವಾಗಿ ಕೃಷ್ಣನ ಆಶ್ರಯವನ್ನು ತೆಗೆದುಕೊಳ್ಳಬೇಕು. ಆಗ ಒಬ್ಬನು ಮಹಾ ಜ್ಞಾನಿಗಳಿಗಿಂತ ಮತ್ತು ಯೋಗಿಗಳಿಗಿಂತ ಹೆಚ್ಚು ದೊಡ್ಡವನಾಗಬಲ್ಲನು.

**ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ।**
**ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಮ್ ॥ ೩೩ ॥**

**ಕಿಮ್**—ಎಷ್ಟು, **ಪುನಃ**—ಮತ್ತೆ, **ಬ್ರಾಹ್ಮಣಾಃ**—ಬ್ರಾಹ್ಮಣರು, **ಪುಣ್ಯಾಃ**—ಧರ್ಮಿಷ್ಠ, **ಭಕ್ತಾಃ**—ಭಕ್ತರು, **ರಾಜಋಷಯಃ**—ರಾಜರ್ಷಿಗಳು, **ತಥಾ**—ಕೂಡ,

**ಅನಿತ್ಯಮ್**—ತಾತ್ಕಾಲಿಕ, **ಅಸುಖಮ್**—ಕ್ಲೇಶಮಯ, **ಲೋಕಮ್**—ಲೋಕ **ಇಮಮ್**—ಇದನ್ನು, **ಪ್ರಾಪ್ಯ**—ಪಡೆದು, **ಭಜಸ್ವ**—ಪ್ರೀತಿಯುತ ಸೇವೆಯಲ್ಲಿ ನಿರತನಾಗಿ, **ಮಾಮ್**—ನನಗೆ.

**ಧರ್ಮಿಷ್ಠ ಬ್ರಾಹ್ಮಣರ. ಭಕ್ತರ ಮತ್ತು ರಾಜರ್ಷಿಗಳ ವಿಷಯದಲ್ಲಿ ಇದು ಇನ್ನೆಷ್ಟು ಪರಿಣಾಮಕಾರಿ. ಆದ್ದರಿಂದ ಈ ತಾತ್ಕಾಲಿಕ ಮತ್ತು ಕ್ಲೇಶಮಯ ಜಗತ್ತಿಗೆ ಬಂದಿದ್ದು, ನನ್ನ ಪ್ರೀತಿಯುತ ಸೇವೆಯಲ್ಲಿ ನಿರತನಾಗು.**

**ಭಾವಾರ್ಥ :** ಈ ಭೌತಿಕ ಜಗತ್ತಿನಲ್ಲಿ ಜನರ ವರ್ಗೀಕರಣವಿದೆ, ಆದರೆ ಈ ಜಗತ್ತು ಯಾರಿಗೂ ಸುಖ ಸ್ಥಳವಲ್ಲ. ಅದನ್ನು ಸ್ಪಷ್ಟವಾಗಿ ಇಲ್ಲಿ ಹೇಳಿದೆ: **ಅನಿತ್ಯಮ್ ಅಸುಖಂ ಲೋಕಮ್**—ಈ ಜಗತ್ತು ತಾತ್ಕಾಲಿಕ ಮತ್ತು ಕ್ಲೇಶಮಯ, ಯಾವುದೇ ವಿವೇಕಯುಕ್ತ ಸಂಭಾವಿತನಿಗೆ ನಿವಾಸ ಯೋಗ್ಯವಲ್ಲ. ಈ ಜಗತ್ತು ತಾತ್ಕಾಲಿಕ ಮತ್ತು ಕ್ಲೇಶಮಯ ಎಂದು ಪರಮ ದೇವೋತ್ತಮ ಪುರುಷನಿಂದ ಘೋಷಿಸಲ್ಪಟ್ಟಿದೆ. ಕೆಲವು ತಾತ್ವಿಕರು, ವಿಶೇಷವಾಗಿ ಮಾಯಾವಾದಿ ತಾತ್ವಿಕರು, ಈ ಜಗತ್ತು ಮಿಥ್ಯಾ ಎಂದು ಹೇಳುತ್ತಾರೆ, ಆದರೆ ಜಗತ್ತು ಮಿಥ್ಯೆಯಲ್ಲ, ಅದು ತಾತ್ಕಾಲಿಕ ಎಂದು ನಾವು ಭಗವದ್ಗೀತೆಯಿಂದ ಅರಿಯಬಹುದು. ತಾತ್ಕಾಲಿಕ ಮತ್ತು ಮಿಥ್ಯೆಯ ನಡುವೆ ವ್ಯತ್ಯಾಸವಿದೆ. ಈ ಜಗತ್ತು ತಾತ್ಕಾಲಿಕ, ಆದರೆ ಶಾಶ್ವತವಾದ ಮತ್ತೊಂದು ಜಗತ್ತು ಇದೆ. ಈ ಜಗತ್ತು ಕ್ಲೇಶಮಯ ಆದರೆ ಆ ಬೇರೊಂದು ಜಗತ್ತು ಶಾಶ್ವತ ಮತ್ತು ಆನಂದಮಯ.

ಅರ್ಜುನನು ರಾಜರ್ಷಿಗಳ ಕುಟುಂಬದಲ್ಲಿ ಹುಟ್ಟಿದ್ದನು. ಅವನಿಗೂ ಕೂಡ ಭಗವಂತನು, "ನನ್ನ ಭಕ್ತಿಯುತ ಸೇವೆಯಲ್ಲಿ ನಿರತನಾಗು, ಮತ್ತು ಶೀಘ್ರವಾಗಿ ಮರಳಿ ಪರಂಧಾಮಕ್ಕೆ ಹಿಂದಿರುಗು," ಎಂದು ಹೇಳುತ್ತಾನೆ. ಕ್ಲೇಶಗಳಿಂದ ತುಂಬಿರುವುದರಿಂದ ಯಾರೂ ಈ ತಾತ್ಕಾಲಿಕ ಜಗತ್ತಿನಲ್ಲಿ ಉಳಿದುಕೊಳ್ಳಕೂಡದು. ತಾನು ಶಾಶ್ವತವಾಗಿ ಸುಖವಾಗಿರಲು ಪ್ರತಿಯೊಬ್ಬನೂ ಪರಮ ದೇವೋತ್ತಮ ಪುರುಷನ ಮಡಿಲಿಗೆ ಆಸಕ್ತನಾಗಬೇಕು. ಎಲ್ಲ ವರ್ಗದ ಜನರ ಎಲ್ಲ ಸಮಸ್ಯೆಗಳು ಪರಿಹಾರವಾಗಲು ಪರಮ ಪ್ರಭುವಿನ ಭಕ್ತಿಯುತ ಸೇವೆ ಒಂದೇ ಮಾರ್ಗ. ಆದ್ದರಿಂದ ಪ್ರತಿಯೊಬ್ಬನೂ ಕೃಷ್ಣ ಪ್ರಜ್ಞೆಯಲ್ಲಿ ನಿರತನಾಗಬೇಕು ಮತ್ತು ತನ್ನ ಜೀವನವನ್ನು ಪರಿಪೂರ್ಣಗೊಳಿಸಿಕೊಳ್ಳಬೇಕು.

**ಮನ್ಮನಾ ಭವ ಮದ್ ಭಕ್ತೋ ಮದ್ ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥ ೩೪ ॥**

ಮತ್ ಮನಾಃ—ಸದಾ ನನ್ನ ಚಿಂತನೆ ಮಾಡುತ್ತಾ, ಭವ—ಆಗು, ಮತ್—ನನ್ನ, **ಭಕ್ತಃ**—ಭಕ್ತನು, **ಮತ್**—ನನ್ನ. **ಯಾಜೀ**—ಆರಾಧಕನು, **ಮಾಮ್**—ನನಗೆ, **ನಮಸ್ಕುರು**—ನಮಸ್ಕಾರಗಳನ್ನು ಸಮರ್ಪಿಸು, **ಮಾಮ್**—ನನಗೆ, **ಏವ**—ಸಂಪೂರ್ಣವಾಗಿ, **ಏಷ್ಯಸಿ**—ನೀನು ಬರುವೆ, **ಯುಕ್ತ್ವಾ**—ತಲ್ಲೀನನಾಗಿ, **ಏವಮ್**—ಹೀಗೆ, **ಆತ್ಮಾನಮ್**—ನಿನ್ನ ಆತ್ಮವು, **ಮತ್ ಪರಾಯಣಃ**—ನನಗೆ ಭಕ್ತಿಯುಳ್ಳವನಾಗಿ.

**ನಿನ್ನ ಮನಸ್ಸನ್ನು ಸದಾ ನನ್ನ ಚಿಂತನದಲ್ಲಿ ತೊಡಗಿಸು, ನನ್ನ ಭಕ್ತನಾಗು, ನನಗೆ ನಮಸ್ಕಾರಗಳನ್ನು ಸಮರ್ಪಿಸು ಮತ್ತು ನನ್ನನ್ನು ಆರಾಧಿಸು. ನನ್ನಲ್ಲಿ ಸಂಪೂರ್ಣವಾಗಿ ತಲ್ಲೀನನಾಗಿದ್ದು, ಖಂಡಿತವಾಗಿ ನೀನು ನನ್ನಲ್ಲಿಗೆ ಬರುವೆ.**

**ಭಾವಾರ್ಥ :** ಈ ಕಲುಷಿತ ಭೌತಿಕ ಜಗತ್ತಿನ ಬಿಗಿಯಾದ ಹಿಡಿತಗಳಿಂದ ಬಿಡುಗಡೆ ಹೊಂದಲು ಕೃಷ್ಣ ಪ್ರಜ್ಞೆಯೊಂದೇ ಸಾಧನ ಎಂದು ಈ ಶ್ಲೋಕದಲ್ಲಿ ಸ್ಪಷ್ಟವಾಗಿ ಹೇಳಿದೆ. ಎಲ್ಲ ಭಕ್ತಿಯುತ ಸೇವೆಯನ್ನು ಪರಮ ದೇವೋತ್ತಮ ಪುರುಷ ಕೃಷ್ಣನಿಗೆ ಅರ್ಪಿಸಬೇಕು ಎಂದು ಸ್ಪಷ್ಟವಾಗಿ ಇಲ್ಲಿ ಹೇಳಿರುವುದರ ಅರ್ಥವನ್ನು ಅಪ್ರಾಮಾಣಿಕ ವ್ಯಾಖ್ಯಾನಕಾರರು ಕೆಲವು ಸಮಯಗಳಲ್ಲಿ ಅಪಾರ್ಥ ಮಾಡುತ್ತಾರೆ. ದುರದೃಷ್ಟವಶಾತ್, ಅಪ್ರಾಮಾಣಿಕ ವ್ಯಾಖ್ಯಾನಕಾರರು ಓದುಗನ ಮನಸ್ಸನ್ನು ಅಸಾಧ್ಯವಾದುದರ ಕಡೆಗೆ ತಿರುಗಿಸುತ್ತಾರೆ. ಕೃಷ್ಣನ ಮನಸ್ಸು ಮತ್ತು ಕೃಷ್ಣನ ನಡುವೆ ವ್ಯತ್ಯಾಸವಿಲ್ಲ ಎಂಬುದು ಅಂಥ ವ್ಯಾಖ್ಯಾನಕಾರರು ತಿಳಿದಿಲ್ಲ. ಕೃಷ್ಣನು ಸಾಮಾನ್ಯ ಮಾನವನಲ್ಲ; ಅವನು ಪರಮ ಸತ್ಯನು. ಅವನ ದೇಹ, ಅವನ ಮನಸ್ಸು ಮತ್ತು ಸ್ವಯಂ ಅವನು ಒಂದೇ ಮತ್ತು ಪರಾತ್ಪರ. ಚೈತನ್ಯ—ಚರಿತಾಮೃತದ (ಐದನೆಯ ಅಧ್ಯಾಯ ಆದಿ-ಲೀಲಾ, ಶ್ಲೋಕಗಳು 41–48) ತಮ್ಮ **ಅನುಭಾಷ್ಯ** ಟೀಕೆಗಳಲ್ಲಿ ಭಕ್ತಿಸಿದ್ಧಾಂತ ಸರಸ್ವತಿ ಗೋಸ್ವಾಮಿಯವರು ಉಲ್ಲೇಖಿಸಿರುವಂತೆ ಕೂರ್ಮ ಪುರಾಣದಲ್ಲಿ, **ದೇಹದೇಹಿವಿಭೇದೋಽಯಂ ನೇಶ್ವರೇ ವಿದ್ಯತೇ ಕ್ವಚಿತ್,** ಎಂದು ಹೇಳಿದೆ. ಪರಮ ಪ್ರಭು ಕೃಷ್ಣನಲ್ಲಿ, ತಾನು ಮತ್ತು ತನ್ನ ದೇಹದ ನಡುವೆ ವ್ಯತ್ಯಾಸವಿಲ್ಲ ಎಂಬುದು ಇದರ ಅರ್ಥ. ಆದರೆ ವ್ಯಾಖ್ಯಾನಕಾರರು ಕೃಷ್ಣ ವಿಜ್ಞಾನವನ್ನು ತಿಳಿದಿಲ್ಲದ ಕಾರಣ ಅವರು ಕೃಷ್ಣನನ್ನು ಮರೆ ಮಾಡುತ್ತಾರೆ ಮತ್ತು ಅವನ ವ್ಯಕ್ತಿತ್ವವನ್ನು ಅವನ ಮನಸ್ಸು ಅಥವಾ ಅವನ ದೇಹದಿಂದ ವಿಭಾಗಿಸುತ್ತಾರೆ. ಇದು ಕೃಷ್ಣ ವಿಜ್ಞಾನದ ಶುದ್ಧ ಅಜ್ಞಾನವಾಗಿದ್ದರೂ ಕೆಲವರು ಜನರನ್ನು ದಾರಿ ತಪ್ಪಿಸುವುದರಿಂದ ಲಾಭ ಪಡೆಯುತ್ತಾರೆ.

ಆಸುರೀ ಸ್ವಭಾವದ ಕೆಲವರು ಇದ್ದಾರೆ; ಅವರೂ ಸಹ ಕೃಷ್ಣನನ್ನು ಚಿಂತಿಸುತ್ತಾರೆ. ಆದರೆ ಅಸೂಯಾಪರರಾಗಿ—ಕೃಷ್ಣನ ಸೋದರಮಾವನಾದ ದೊರೆ ಕಂಸನಂತೆ. ಅವನೂ ಸಹ ಸದಾ ಕೃಷ್ಣನನ್ನು ಚಿಂತಿಸುತ್ತಿದ್ದನು, ಆದರೆ ಅವನು ಕೃಷ್ಣನನ್ನು ತನ್ನ ವೈರಿ ಎಂದು ಚಿಂತಿಸುತ್ತಿದ್ದನು. ಕೃಷ್ಣನು ಯಾವಾಗ ಬಂದು ತನ್ನನ್ನು ಕೊಲ್ಲುವನೋ ಎಂದು ಬೆರಗಾಗಿ ಅವನು ಸದಾ ಆತಂಕದಲ್ಲಿದ್ದನು. ಈ ಬಗೆಯ ಚಿಂತನೆಯು ನಮಗೆ ಸಹಾಯಕವಾಗಲಾರದು. ಒಬ್ಬನು ಕೃಷ್ಣನನ್ನು ಭಕ್ತಿಯುತ ಪ್ರೇಮದಲ್ಲಿ ಚಿಂತಿಸಬೇಕು. ಅದುವೇ ಭಕ್ತಿ. ಒಬ್ಬನು ಕೃಷ್ಣನ ಜ್ಞಾನವನ್ನು ಸತತವಾಗಿ ಬೆಳಸಬೇಕು. ಆ ಅನುಕೂಲಕರ ಬೆಳವಣಿಗೆ ಯಾವುದು ? ಅದು ಅಧಿಕೃತ ಗುರುವಿನಿಂದ ಕಲಿಯುವುದು. ಕೃಷ್ಣನು ಪರಮ ದೇವೋತ್ತಮ ಪುರುಷನು, ಮತ್ತು ಅವನ ದೇಹವು ಭೌತಿಕವಾಗಿರದೆ, ಅದು ನಿತ್ಯ ಜ್ಞಾನಾನಂದ ಪೂರ್ಣ ಎಂದು ನಾವು ಅನೇಕ ಸಲ ವಿವರಿಸಿದ್ದೇವೆ. ಕೃಷ್ಣನ ಬಗ್ಗೆ ಇಂಥ ಚರ್ಚೆಯು ಒಬ್ಬನು ಭಕ್ತನಾಗಲು ಸಹಾಯಕ. ದೋಷಯುಕ್ತ ಮೂಲದಿಂದ ಕೃಷ್ಣನನ್ನು ಅನ್ಯಥಾ ಅರಿಯುವುದು ನಿರರ್ಥಕ.

ಆದ್ದರಿಂದ ಒಬ್ಬನು ಕೃಷ್ಣನ ಆದಿ ರೂಪದಲ್ಲಿ, ಶಾಶ್ವತ ರೂಪದಲ್ಲಿ ತನ್ನ ಮನಸ್ಸನ್ನು ತೊಡಗಿಸಬೇಕು; ಕೃಷ್ಣನು ಪರಮನು ಎಂಬ ದೃಢ ವಿಶ್ವಾಸವನ್ನು ಹೃದಯದಲ್ಲಿ ಹೊಂದಿ ಅವನ ಆರಾಧನೆಯಲ್ಲಿ ನಿರತನಾಗಬೇಕು. ಕೃಷ್ಣನ ಆರಾಧನೆಗಾಗಿ ಭಾರತದಲ್ಲಿ ಸಾವಿರಾರು ದೇವಾಲಯಗಳಿವೆ, ಮತ್ತು ಅಲ್ಲಿ ಭಕ್ತಿಯುತ ಸೇವೆಯು ಆಚರಿಸಲ್ಪಡುತ್ತದೆ. ಅಂಥ ಆಚರಣೆಯನ್ನು ಮಾಡಿದಾಗ ಒಬ್ಬನು ಕೃಷ್ಣನಿಗೆ ನಮಸ್ಕಾರಗಳನ್ನು ಸಮರ್ಪಿಸಬೇಕು. ಒಬ್ಬನು ವಿಗ್ರಹದ ಮುಂದೆ ತನ್ನ ಶಿರವನ್ನು ಬಾಗಬೇಕು ಮತ್ತು ತನ್ನ ಮನಸ್ಸು, ದೇಹ, ಚಟುವಟಿಕೆಗಳು—ಪ್ರತಿಯೊಂದನ್ನೂ ತೊಡಗಿಸಬೇಕು. ಅದು ವಿಚಲತೆ ಇಲ್ಲದೆ ಒಬ್ಬನನ್ನು ಕೃಷ್ಣನಲ್ಲಿ ಪೂರ್ಣವಾಗಿ ತಲ್ಲೀನವಾಗುವಂತೆ ಮಾಡುತ್ತದೆ. ಇದು ಒಬ್ಬನನ್ನು ಕೃಷ್ಣಲೋಕಕ್ಕೆ ವರ್ಗಾಯಿಸಲು ಸಹಾಯಕ. ಒಬ್ಬನು ಅಪ್ರಾಮಾಣಿಕ ವ್ಯಾಖ್ಯಾನಕಾರರಿಂದ ವಿಚಲಿತನಾಗಬಾರದು. ಕೃಷ್ಣನ ಬಗ್ಗೆ ಶ್ರವಣ ಮತ್ತು ಕೀರ್ತನದಿಂದ ಆರಂಭವಾಗುವ ನವ ವಿಧ ಭಕ್ತಿಯುತ ಸೇವಾ ಪ್ರಕ್ರಿಯೆಗಳಲ್ಲಿ ಒಬ್ಬನು ನಿರತನಾಗಬೇಕು. ಶುದ್ಧ ಭಕ್ತಿಯುತ ಸೇವೆಯು ಮಾನವ ಕುಲದ ಅತ್ಯುನ್ನತ ಸಾಧನೆ.

ಭಗವದ್ಗೀತೆಯ ಏಳನೆಯ ಮತ್ತು ಎಂಟನೆಯ ಅಧ್ಯಾಯಗಳು ಊಹಾಪೋಹಕ ಜ್ಞಾನ, ಯೋಗ ಸಿದ್ಧಿ ಮತ್ತು ಕಾಮ್ಯ ಕರ್ಮರಹಿತವಾದ ಭಗವಂತನ ಶುದ್ಧ ಭಕ್ತಿಯುತ ಸೇವೆಯನ್ನು ವಿವರಿಸಿವೆ. ಶುದ್ಧವಾಗಿ ಪವಿತ್ರರಾಗದವರು ವ್ಯಕ್ತಿಶೂನ್ಯ ಬ್ರಹ್ಮಜ್ಯೋತಿ ಮತ್ತು ಸ್ಥಳೀಯ ಪರಮಾತ್ಮ— ಇಂಥ ಭಗವಂತನ ವಿವಿಧ ಲಕ್ಷಣಗಳಿಂದ ಆಕರ್ಷಿತರಾಗಬಹುದು, ಆದರೆ ಶುದ್ಧ ಭಕ್ತನು ನೇರವಾಗಿ ಪರಮ ಪ್ರಭುವಿನ ಸೇವೆಗೆ ತೊಡಗುತ್ತಾನೆ.

ಕೃಷ್ಣನನ್ನು ಕುರಿತ ಒಂದು ಸುಂದರವಾದ ಪದ್ಯವಿದೆ ಮತ್ತು ಅಲ್ಲಿ ದೇವತೆಗಳ ಆರಾಧನೆಯಲ್ಲಿ ತೊಡಗಿರುವ ಯಾವುದೇ ವ್ಯಕ್ತಿಯು ಅತ್ಯಂತ ಬುದ್ಧಿಹೀನನು ಮತ್ತು ಕೃಷ್ಣನ ಪರಮ ಅನುಗ್ರಹವನ್ನು ಎಂದಿಗೂ ಪಡೆಯಲಾರನು ಎಂದು ಸ್ಪಷ್ಟವಾಗಿ ಹೇಳಿದೆ. ಭಕ್ತನು, ಪ್ರಾರಂಭದಲ್ಲಿ ಕೆಲವು ಸಮಯಗಳಲ್ಲಿ ಆದರ್ಶ ಮಟ್ಟದಿಂದ ಪತನ ಹೊಂದಬಹುದು, ಆದರೂ ಅವನು ಇತರ ಎಲ್ಲ ತಾತ್ವಿಕರು ಮತ್ತು ಯೋಗಿಗಳಿಗಿಂತ ಶ್ರೇಷ್ಠನೆಂದು ತಿಳಿಯಲ್ಪಡಬೇಕು. ಸದಾ ಕೃಷ್ಣ ಪ್ರಜ್ಞೆಯಲ್ಲಿ ನಿರತನಾಗುವವನು ಪರಿಪೂರ್ಣವಾಗಿ ಸಾಧುಪುರುಷನೆಂದು ತಿಳಿಯಲ್ಪಡಬೇಕು. ಅವನ ಆಕಸ್ಮಿಕ ಅಭಕ್ತ ಚಟುವಟಿಕೆಗಳು ಕಡಿಮೆಯಾಗುತ್ತವೆ ಮತ್ತು ಅವನು ಶೀಘ್ರವೇ ನಿಸ್ಸಂದೇಹವಾಗಿ ಸಂಪೂರ್ಣ ಪರಿಪೂರ್ಣತೆಯಲ್ಲಿ ಸನ್ನಿವೇಶಿತನಾಗುವನು. ಶುದ್ಧ ಭಕ್ತನು ಪತನ ಹೊಂದುವ ವಾಸ್ತವಿಕ ಅವಕಾಶವೇ ಇಲ್ಲ, ಏಕೆಂದರೆ ಪರಮ ದೇವೋತ್ತಮನು ತನ್ನ ಶುದ್ಧಭಕ್ತರ ರಕ್ಷಣೆಯನ್ನು ವೈಯಕ್ತಿಕವಾಗಿ ವಹಿಸಿಕೊಳ್ಳುತ್ತಾನೆ. ಆದ್ದರಿಂದ, ಬುದ್ಧಿವಂತನು ನೇರವಾಗಿ ಕೃಷ್ಣಪ್ರಜ್ಞಾ ಪ್ರಕ್ರಿಯೆಯಲ್ಲಿ ನಿರತನಾಗಬೇಕು ಮತ್ತು ಈ ಭೌತಿಕ ಜಗತ್ತಿನಲ್ಲಿ ಸುಖಿಯಾಗಿ ಜೀವಿಸಬೇಕು. ಅವನು ಕೊನೆಗೆ ಕೃಷ್ಣನ ಪರಮ ಅನುಗ್ರಹವನ್ನು ಪಡೆಯುವನು.

**ಇಲ್ಲಿಗೆ "ಶ್ರೀಮದ್ ಭಗವದ್ಗೀತಾ"ದಲ್ಲಿನ ಒಂಬತ್ತನೆಯ ಅಧ್ಯಾಯವಾದ 'ಗುಹ್ಯತಮ ಜ್ಞಾನ' ಎಂಬುದರ ಭಕ್ತಿವೇದಾಂತ ತಾತ್ಪರ್ಯವು ಮುಗಿಯಿತು.**

## ಅಧ್ಯಾಯ ಹತ್ತು



# ಪರಮನ ವಿಭೂತಿ

ಶ್ರೀಭಗವಾನುವಾಚ

**ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ ।**
**ಯತ್ತೇಽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ ॥೧॥**

ಶ್ರೀಭಗವಾನ್ ಉವಾಚ—ಪರಮದೇವೋತ್ತಮ ಪುರುಷನು ನುಡಿದನು, ಭೂಯಃ—ಮತ್ತೆ, ಏವ—ಖಂಡಿತವಾಗಿ, ಮಹಾಬಾಹೋ—ಹೇ ಮಹಾಬಾಹುವೇ, ಶೃಣು—ಕೇಳು, ಮೇ—ನನ್ನ, ಪರಮಮ್—ಪರಮ, ವಚಃ—ಉಪದೇಶ, ಯತ್—ಯಾವುದು, ತೇ—ನಿನಗೆ, ಅಹಮ್—ನಾನು, ಪ್ರೀಯಮಾಣಾಯ—ನೀನು ನನಗೆ ಪ್ರಿಯನೆಂದು ತಿಳಿದು, ವಕ್ಷ್ಯಾಮಿ—ಹೇಳುತ್ತೇನೆ, ಹಿತಕಾಮ್ಯಯಾ—ನಿನ್ನ ಹಿತಕ್ಕಾಗಿ.

**ಪರಮ ದೇವೋತ್ತಮ ಪುರುಷನು ನುಡಿದನು : ಮತ್ತೆ ಕೇಳು, ಹೇ ಮಹಾಬಾಹು ಅರ್ಜುನನೇ, ನೀನು ನನ್ನ ಪ್ರಿಯ ಮಿತ್ರನಾದ್ದರಿಂದ ನಿನ್ನ ಹಿತಕ್ಕಾಗಿ, ನಾನು ಈಗಾಗಲೇ ವಿವರಿಸಿರುವುದಕ್ಕಿಂತಲೂ ಉತ್ತಮವಾದ ಜ್ಞಾನವನ್ನು ನೀಡುತ್ತಾ, ನಿನಗೆ ಮತ್ತಷ್ಟು ಹೇಳುತ್ತೇನೆ.**

**ಭಾವಾರ್ಥ :** ಭಗವಾನ್ ಪದವು ಪರಾಶರ ಮುನಿಗಳಿಂದ ಹೀಗೆ ವಿವರಿಸಲ್ಪಟ್ಟಿದೆ: ಯಾರೊಬ್ಬನು ಷಡ್ಗುಣೈಶ್ವರ್ಯ ಸಂಪನ್ನನು, ಪೂರ್ಣ ಬಲ, ಪೂರ್ಣ ಕೀರ್ತಿ, ಐಶ್ವರ್ಯ, ಜ್ಞಾನ, ಸೌಂದರ್ಯ ಮತ್ತು ವೈರಾಗ್ಯ ಇವುಗಳನ್ನು ಹೊಂದಿದವನು ಭಗವಾನ್ ಅಥವಾ ಪರಮ ದೇವೋತ್ತಮ ಪುರುಷನು. ಕೃಷ್ಣನು ಭೂಮಿಯ ಮೇಲಿದ್ದಾಗ ಈ ಷಡೈಶ್ವರ್ಯ

ಗಳನ್ನು ಪ್ರದರ್ಶಿಸಿದನು. ಆದ್ದರಿಂದ ಪರಾಶರ ಮುನಿಗಳಂಥ ಮಹರ್ಷಿಗಳೆಲ್ಲರೂ ಕೃಷ್ಣನನ್ನು ಪರಮ ದೇವೋತ್ತಮ ಪುರುಷನೆಂದು ಒಪ್ಪಿದ್ದಾರೆ. ಈಗ ಕೃಷ್ಣನು ತನ್ನ ವಿಭೂತಿಗಳು ಮತ್ತು ತನ್ನ ಕಾರ್ಯದ ಹೆಚ್ಚು ಗುಹ್ಯತರ ಜ್ಞಾನದಲ್ಲಿ ಅರ್ಜುನನಿಗೆ ಉಪದೇಶಿಸುತ್ತಿದ್ದಾನೆ. ಹಿಂದೆ, ಏಳನೆಯ ಅಧ್ಯಾಯದಿಂದ ಆರಂಭಿಸಿ ಭಗವಂತನು ತನ್ನ ವಿವಿಧ ಶಕ್ತಿಗಳು ಮತ್ತು ಅವುಗಳು ಹೇಗೆ ವರ್ತಿಸುತ್ತಿವೆ ಎಂದು ಈಗಾಗಲೇ ವಿವರಿಸಿದ್ದಾನೆ. ಈಗ ಈ ಅಧ್ಯಾಯದಲ್ಲಿ ಅವನು ತನ್ನ ವಿಶಿಷ್ಟ ವಿಭೂತಿಗಳನ್ನು ಅರ್ಜುನನಿಗೆ ವಿವರಿಸುತ್ತಾನೆ. ಭಕ್ತಿಯನ್ನು ದೃಢವಾದ ನಂಬಿಕೆಯಲ್ಲಿ ಸ್ಥಾಪಿಸಲು ಅವನು ತನ್ನ ವಿವಿಧ ಶಕ್ತಿಗಳನ್ನು ಹಿಂದಿನ ಅಧ್ಯಾಯದಲ್ಲಿ ಸ್ಪಷ್ಟವಾಗಿ ವಿವರಿಸಿದ್ದಾನೆ. ಮತ್ತೆ ಈ ಅಧ್ಯಾಯದಲ್ಲಿ ಅವನು ಅರ್ಜುನನಿಗೆ ತನ್ನ ಅಭಿವ್ಯಕ್ತತೆಗಳ ಮತ್ತು ವಿವಿಧ ವಿಭೂತಿಗಳ ಬಗ್ಗೆ ಹೇಳುತ್ತಾನೆ.

ಪರಮ ಪ್ರಭುವಿನ ಬಗ್ಗೆ ಒಬ್ಬನು ಹೆಚ್ಚು ಶ್ರವಣ ಮಾಡಿದಂತೆ, ಅವನು ಭಕ್ತಿಯುತ ಸೇವೆಯಲ್ಲಿ ಹೆಚ್ಚಾಗಿ ಸ್ಥಿತನಾಗುತ್ತಾನೆ. ಒಬ್ಬನು ಸದಾ ಭಕ್ತರ ಸಹವಾಸದಲ್ಲಿ ಭಗವಂತನ ಬಗ್ಗೆ ಶ್ರವಣ ಮಾಡಬೇಕು ; ಅದು ಒಬ್ಬನ ಭಕ್ತಿಯುತ ಸೇವೆಯನ್ನು ಹೆಚ್ಚಿಸುವುದು. ಕೃಷ್ಣ ಪ್ರಜ್ಞೆಯಲ್ಲಿರಲು ನಿಜವಾಗಿ ಕುತೂಹಲಿಗಳಾದವರ ಮಧ್ಯೆ ಮಾತ್ರ ಭಕ್ತರ ಸಂಘದಲ್ಲಿ ಸಂವಾದಗಳು ಆಗುತ್ತವೆ. ಅಂಥ ಸಂವಾದಗಳಲ್ಲಿ ಇತರರು ಭಾಗವಹಿಸಲಾರರು. ಅರ್ಜುನನು ತನಗೆ ಬಹು ಪ್ರಿಯನಾದ ನಿಮಿತ್ತ ಅವನ ಪ್ರಯೋಜನಕ್ಕಾಗಿ ಅಂಥ ಸಂವಾದಗಳು ಆಗುತ್ತಿವೆ ಎಂದು ಭಗವಂತನು ಅರ್ಜುನನಿಗೆ ಸ್ಪಷ್ಟವಾಗಿ ಹೇಳುತ್ತಾನೆ.

**ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ ।**
**ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ ॥೨॥**

ನ—ಎಂದಿಗೂ ಇಲ್ಲ, ಮೇ—ನನ್ನ, ವಿದುಃ—ತಿಳಿಯುವುದು, ಸುರಗಣಾಃ—ದೇವತೆಗಳು, ಪ್ರಭವಮ್—ಮೂಲ, ಐಶ್ವರ್ಯಗಳು, ನ—ಎಂದಿಗೂ ಇಲ್ಲ, ಮಹಾ ಋಷಯಃ—ಮಹರ್ಷಿಗಳು, ಅಹಮ್—ನಾನು ಆಗಿದ್ದೇನೆ, ಆದಿಃ—ಮೂಲನು, ಹಿ—ಖಂಡಿತವಾಗಿ, ದೇವಾನಾಮ್—ದೇವತೆಗಳ, ಮಹಾ ಋಷೀಣಾಮ್—ಮಹರ್ಷಿಗಳ, ಚ—ಕೂಡ, ಸರ್ವಶಃ—ಎಲ್ಲ ವಿಧಗಳಲ್ಲಿ.

**ದೇವತೆಗಳ ಸಮೂಹವಾಗಲೀ ಅಥವಾ ಮಹರ್ಷಿಗಳಾಗಲೀ ನನ್ನ ಮೂಲ ಅಥವಾ ವಿಭೂತಿಗಳನ್ನು ತಿಳಿಯರು, ಏಕೆಂದರೆ, ಪ್ರತಿಯೊಂದು ವಿಧದಲ್ಲಿಯೂ, ನಾನು ದೇವತೆಗಳ ಮತ್ತು ಋಷಿಗಳ ಮೂಲವಾಗಿರುವೆನು.**

**ಭಾವಾರ್ಥ :** ಬ್ರಹ್ಮ ಸಂಹಿತೆಯಲ್ಲಿ ಹೇಳಿರುವಂತೆ ಶ್ರೀಕೃಷ್ಣನು ಪರಮ ಪ್ರಭು. ಅವನಿಗಿಂತ ದೊಡ್ಡವರಿಲ್ಲ ; ಅವನು ಸರ್ವಕಾರಣಗಳ ಕಾರಣನು. ಇಲ್ಲಿ ಕೂಡ ವೈಯಕ್ತಿಕವಾಗಿ ಭಗವಂತನಿಂದ ತಾನು ಸಕಲ ದೇವತೆಗಳ ಮತ್ತು ಋಷಿಗಳ ಮೂಲನೆಂದು ಹೇಳಲ್ಪಟ್ಟಿದೆ. ದೇವತೆಗಳು ಮತ್ತು ಮಹರ್ಷಿಗಳು ಕೂಡ ಕೃಷ್ಣನನ್ನು ಅರಿಯಲಾರರು ; ಅವರು ಅವನ ನಾಮವನ್ನಾಗಲಿ, ಅವನ ವ್ಯಕ್ತಿತ್ವವನ್ನಾಗಲಿ ಅರಿತುಕೊಳ್ಳಲಾರರು,

ಹೀಗಿರುವಾಗ ಈ ಪುಟ್ಟ ಲೋಕದ ವಿದ್ವಾಂಸರೆನಿಸಿಕೊಂಡಿರುವವರ ಸ್ಥಿತಿಯೇನು ? ಈ ಪರಮ ದೇವನು ಸಾಮಾನ್ಯ ಮಾನವನಂತೆ ಏಕೆ ಈ ಭೂಮಿಗೆ ಬರುತ್ತಾನೆ ಮತ್ತು ಅಂಥ ಅದ್ಭುತ ಹಾಗೂ ಅಸಾಧಾರಣ ಚಟುವಟಿಕೆಗಳನ್ನು ಮಾಡುತ್ತಾನೆ ಎಂಬುದನ್ನು ಯಾರೂ ಅರಿಯಲಾರರು. ಆದ್ದರಿಂದ ಕೃಷ್ಣನನ್ನು ಅರಿತುಕೊಳ್ಳಲು ಪಾಂಡಿತ್ಯವು ಅವಶ್ಯ ಅರ್ಹತೆ ಅಲ್ಲ ಎಂದು ಒಬ್ಬನು ತಿಳಿದುಕೊಳ್ಳಬೇಕು. ದೇವತೆಗಳು ಮತ್ತು ಮಹರ್ಷಿಗಳು ಕೂಡ ತಮ್ಮ ಮಾನಸಿಕ ಊಹಾಪೋಹದಿಂದ ಕೃಷ್ಣನನ್ನು ಅರಿಯಲು ಪ್ರಯತ್ನಿಸಿದ್ದಾರೆ, ಮತ್ತು ಅವರು ವಿಫಲರಾಗಿದ್ದಾರೆ. ಮಹಾನ್ ದೇವತೆಗಳು ಕೂಡ ಪರಮ ದೇವೋತ್ತಮ ಪುರುಷನನ್ನು ಅರಿಯಲು ಶಕ್ತರಲ್ಲ ಎಂದು ಸ್ಪಷ್ಟವಾಗಿ ಶ್ರೀಮದ್ ಭಾಗವತದಲ್ಲಿ ಹೇಳಿದೆ. ಅವರು ತಮ್ಮ ದೋಷಯುಕ್ತ ಇಂದ್ರಿಯಗಳ ಪರಿಮಿತಿಗಳವರೆಗೆ ಊಹೆ ಮಾಡಬಹುದು ಮತ್ತು ವ್ಯಕ್ತಿಶೂನ್ಯತ್ವದ ಅಥವಾ ಭೌತಿಕ ಪ್ರಕೃತಿಯ ತ್ರಿಗುಣಗಳಿಂದ ಅಭಿವ್ಯಕ್ತವಾಗದ ಯಾವುದಾದರೊಂದರ ವಿರುದ್ಧ ತೀರ್ಮಾನವನ್ನು ತಲುಪಬಹುದು, ಅಥವಾ ಅವರು ಮಾನಸಿಕ ಊಹಾಪೋಹದಿಂದ ಯಾವುದನ್ನೋ ಊಹಿಸಬಹುದು, ಆದರೆ ಅಂಥ ಮೌಢ್ಯ ಊಹಾಪೋಹದಿಂದ ಕೃಷ್ಣನನ್ನು ಅರಿತುಕೊಳ್ಳುವುದು ಸಾಧ್ಯವಿಲ್ಲ.

ಇಲ್ಲಿ ಭಗವಂತನು ಪರೋಕ್ಷವಾಗಿ ಹೇಳುತ್ತಾನೆ, ಪರತತ್ವವನ್ನು ಯಾರಾದರೂ ತಿಳಿಯಬಯಸಿದರೆ, "ಪರಮ ದೇವೋತ್ತಮ ಪುರುಷನಾಗಿ ನಾನು ಇಲ್ಲಿ ಇದ್ದೇನೆ. ನಾನು ಪರಮನು." ಒಬ್ಬನು ಇದನ್ನು ತಿಳಿಯಬೇಕು. ವೈಯಕ್ತಿಕವಾಗಿ ಇರುವ ಅಚಿಂತ್ಯ ಭಗವಂತನನ್ನು ಒಬ್ಬನು ಅರಿತುಕೊಳ್ಳಲಾಗದಿದ್ದರೂ, ಅವನು ಖಂಡಿತ ಇದ್ದೇ ಇದ್ದಾನೆ. ಶಾಶ್ವತನು, ಜ್ಞಾನಾನಂದ ಪೂರ್ಣನು ಆದ ಕೃಷ್ಣನನ್ನು ಭಗವದ್ಗೀತೆ ಮತ್ತು ಶ್ರೀಮದ್ ಭಾಗವತದಲ್ಲಿನ ಅವನ ಮಾತುಗಳ ಅಧ್ಯಯನದಿಂದ ನಾವು ವಾಸ್ತವಿಕವಾಗಿ ಅರಿತುಕೊಳ್ಳಬಹುದು. ಭಗವಂತನ ಅಪರಾಶಕ್ತಿಯಲ್ಲಿರುವವರಿಂದ ಭಗವಂತನೆಂದರೆ ಆಧಿಪತ್ಯ ನಡೆಸುವ ಯಾವುದೋ ಒಂದು ಶಕ್ತಿ ಅಥವಾ ವ್ಯಕ್ತಿಶೂನ್ಯ ಬ್ರಹ್ಮನ್ ಎಂಬ ಕಲ್ಪನೆಯನ್ನು ತಲುಪಬಹುದು, ಆದರೆ ಒಬ್ಬನು ದಿವ್ಯ ಸ್ಥಿತಿಯಲ್ಲಿ ಇದ್ದಹೊರತು ದೇವೋತ್ತಮ ಪುರುಷನ ಕಲ್ಪನೆಯನ್ನು ಹೊಂದಲಾರನು.

ಬಹು ಜನರು ಕೃಷ್ಣನನ್ನು ಅವನ ವಾಸ್ತವಿಕ ಸ್ಥಿತಿಯಲ್ಲಿ ಅರಿಯಲಾಗದ ಕಾರಣ, ತನ್ನ ನಿರ್ಹೇತುಕ ದಯೆಯಿಂದ ಅಂಥ ಊಹಾಪೋಹಕರಿಗೆ ಕೃಪೆ ತೋರಲು ಅವನು ಇಳಿದು ಬರುತ್ತಾನೆ. ಪರಮ ಪ್ರಭುವಿನ ಅಸಾಧಾರಣ ಚಟುವಟಿಕೆಗಳು ಆದಾಗ್ಯೂ, ಇನ್ನೂ ಈ ಊಹಾಪೋಹಕರು, ಭೌತಿಕ ಶಕ್ತಿಯ ಕಲುಷತೆಯ ನಿಮಿತ್ತ, ವ್ಯಕ್ತಿಶೂನ್ಯ ಬ್ರಹ್ಮನ್ ಪರಮೋನ್ನತವೆಂದು ತಿಳಿಯುತ್ತಾರೆ. ಪರಮ ಪ್ರಭುವಿಗೆ ಪೂರ್ಣ ಶರಣಾಗತರಾದ ಭಕ್ತರು ಮಾತ್ರವೇ, ಪರಮ ಪುರುಷನ ಕೃಪೆಯಿಂದ ಅವನು ಕೃಷ್ಣನೆಂದು ಅರಿತುಕೊಳ್ಳಬಲ್ಲರು. ಭಗವಂತನ ಭಕ್ತರು ದೇವನ ವ್ಯಕ್ತಿಶೂನ್ಯ ಬ್ರಹ್ಮನ್ ಕಲ್ಪನೆಯ ಬಗ್ಗೆ ತೊಂದರೆ ತೆಗೆದುಕೊಳ್ಳುವುದಿಲ್ಲ. ಅವರ ಶ್ರದ್ಧೆ ಮತ್ತು ಭಕ್ತಿ ಅವರನ್ನು ಪರಮ ಪ್ರಭುವಿಗೆ ಕೂಡಲೇ ಶರಣಾಗತರಾಗುವಂತೆ ಮಾಡುತ್ತವೆ, ಮತ್ತು ಕೃಷ್ಣನ ನಿರ್ಹೇತುಕ ದಯೆಯಿಂದ ಅವರು ಕೃಷ್ಣನನ್ನು ಅರಿಯಬಲ್ಲರು. ಇತರರು ಯಾರೂ ಅವನನ್ನು ಅರಿಯ

ಲಾರರು. ಆದ್ದರಿಂದ ಮಹರ್ಷಿಗಳು ಕೂಡ ಒಪ್ಪುತ್ತಾರೆ : ಆತ್ಮ ಎಂದರೇನು? ಪರಮ ಎಂದರೇನು ? ನಾವು ಆರಾಧಿಸಬೇಕಾದುದು ಅವನನ್ನೇ.

**ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಮ್ ।**
**ಅಸಮ್ಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ॥೩॥**

ಯಃ—ಯಾವೊಬ್ಬನು, ಮಾಮ್—ನನ್ನನ್ನು, ಅಜಮ್—ಜನನರಹಿತ, ಅನಾದಿಮ್—ಆದಿರಹಿತನು, ಚ—ಮತ್ತು, ವೇತ್ತಿ—ತಿಳಿದಿರುವವನು, ಲೋಕ—ಲೋಕಗಳ, ಮಹಾ-ಈಶ್ವರಮ್—ಪರಮ ಒಡೆಯ, ಅಸಮ್ಮೂಢಃ—ಭ್ರಾಂತನಾಗದೆ, ಸಃ—ಅವನು, ಮರ್ತ್ಯೇಷು—ಮರಣಕ್ಕೆ ಒಳಪಟ್ಟವರಲ್ಲಿ, ಸರ್ವಪಾಪೈಃ—ಸಕಲ ಪಾಪ ಪ್ರಕ್ರಿಯೆಗಳಿಂದ, ಪ್ರಮುಚ್ಯತೇ—ಬಿಡುಗಡೆ ಹೊಂದುತ್ತಾನೆ.

**ನನ್ನನ್ನು ಜನನರಹಿತನೆಂದು, ಆದಿರಹಿತನೆಂದು, ಸಕಲ ಲೋಕಗಳ ಪರಮ ಪ್ರಭು ಎಂದು ತಿಳಿದವನು—ಮಾನವರಲ್ಲಿ ಭ್ರಾಂತನಾಗದ ಅವನು ಮಾತ್ರ ಸಕಲ ಪಾಪಗಳಿಂದ ಮುಕ್ತನು.**

**ಭಾವಾರ್ಥ** : ಏಳನೆಯ ಅಧ್ಯಾಯದಲ್ಲಿ (7.3) ಹೇಳಿದಂತೆ, **ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ ಯತತಿ ಸಿದ್ಧಯೇ**—ಅಧ್ಯಾತ್ಮ ಸಾಕ್ಷಾತ್ಕಾರ ವೇದಿಕೆಗೆ ತಮ್ಮನ್ನು ಉನ್ನತಿಸಿಕೊಳ್ಳಲು ಯತ್ನಿಸುತ್ತಿರುವವರು ಸಾಮಾನ್ಯ ಮಾನವರಲ್ಲ; ಅವರು, ಅಧ್ಯಾತ್ಮ ಸಾಕ್ಷಾತ್ಕಾರದ ಜ್ಞಾನವಿಲ್ಲದ ಲಕ್ಷೋಪಲಕ್ಷ ಸಾಮಾನ್ಯ ಮಾನವರಿಗಿಂತ ಉತ್ತಮರು. ಆದರೆ ತಮ್ಮ ಅಧ್ಯಾತ್ಮ ಸ್ಥಿತಿಯನ್ನು ಅರಿತುಕೊಳ್ಳಲು ವಾಸ್ತವಿಕವಾಗಿ ಯತ್ನಿಸುವ ಇವರಲ್ಲಿ, ಕೃಷ್ಣನು ಪರಮ ದೇವೋತ್ತಮ ಪುರುಷನು, ಪ್ರತಿಯೊಂದರ ಒಡೆಯನು, ಅಜನು ಎಂದು ಅರಿತುಕೊಳ್ಳುವವನು, ಅತ್ಯಂತ ಯಶಸ್ವೀ ಅಧ್ಯಾತ್ಮ ಸಾಕ್ಷಾತ್ಕೃತ ವ್ಯಕ್ತಿ. ಆ ಹಂತದಲ್ಲಿ ಮಾತ್ರವೇ, ಎಂದರೆ ಒಬ್ಬನು ಪೂರ್ಣವಾಗಿ ಕೃಷ್ಣನ ಪರಮ ಉನ್ನತ ಸ್ಥಾನವನ್ನು ಅರಿತುಕೊಂಡಾಗ, ಸಕಲ ಪಾಪ ಪ್ರತಿಕ್ರಿಯೆಗಳಿಂದ ಸಂಪೂರ್ಣವಾಗಿ ಮುಕ್ತನಾಗಬಲ್ಲನು.

ಇಲ್ಲಿ ಭಗವಂತನನ್ನು **ಅಜ**, ಎಂದರೆ "ಜನನರಹಿತನು," ಎಂದು ವರ್ಣಿಸಿದೆ, ಆದರೆ ಎರಡನೆಯ ಅಧ್ಯಾಯದಲ್ಲಿ **ಅಜ** ಎಂದು ವರ್ಣಿಸಲ್ಪಟ್ಟ ಜೀವಿಗಳಿಂದ ಅವನು ಭಿನ್ನನು. ಭೌತಿಕ ಆಸಕ್ತಿಯ ನಿಮಿತ್ತ ಹುಟ್ಟುತ್ತಿರುವ ಮತ್ತು ಸಾಯುತ್ತಿರುವ ಜೀವಿಗಳಿಂದ ಭಗವಂತನು ಭಿನ್ನನು. ಬದ್ಧ ಆತ್ಮರು ತಮ್ಮ ದೇಹಗಳನ್ನು ಬದಲಾಯಿಸಿಕೊಳ್ಳುತ್ತಿದ್ದಾರೆ, ಆದರೆ ಅವನ ದೇಹವು ಬದಲಾಯಿಸಲಾಗುವುದಿಲ್ಲ. ಅವನು ಈ ಭೌತಿಕ ಲೋಕಕ್ಕೆ ಬಂದಾಗಲೂ ಕೂಡ, ಅವನು ಅದೇ ಅಜನಾಗಿಯೇ ಬರುತ್ತಾನೆ; ಆದ್ದರಿಂದ ಭಗವಂತನು ತನ್ನ ಅಂತರಂಗ ಶಕ್ತಿಯಿಂದ, ಅಪರಾ ಭೌತಿಕ ಶಕ್ತಿಗೆ ಒಳಪಡದೆ, ಅವನು ಸದಾ ಪರಾಶಕ್ತಿಯಲ್ಲಿ ಇರುವನೆಂದು ನಾಲ್ಕನೆಯ ಅಧ್ಯಾಯದಲ್ಲಿ ಹೇಳಿದೆ.

ಈ ಶ್ಲೋಕದಲ್ಲಿನ **ವೇತ್ತಿ ಲೋಕಮಹೇಶ್ವರಮ್** ಪದಗಳು ಭಗವಾನ್ ಕೃಷ್ಣನು ವಿಶ್ವದ ಲೋಕವ್ಯೂಹಗಳ ಪರಮೋನ್ನತ ಒಡೆಯನೆಂದು ಒಬ್ಬನು ತಿಳಿದುಕೊಳ್ಳಬೇಕು ಎಂಬುದನ್ನು ಸೂಚಿಸುತ್ತವೆ. ಅವನು ಸೃಷ್ಟಿಗೆ ಪೂರ್ವದಲ್ಲೂ ಇದ್ದನು, ಮತ್ತು ಅವನು ತನ್ನ ಸೃಷ್ಟಿಯಿಂದ ಭಿನ್ನನು. ಎಲ್ಲ ದೇವತೆಗಳು ಈ ಭೌತಿಕ ಜಗತ್ತಿನಲ್ಲಿ ಸೃಷ್ಟರಾದವರು, ಆದರೆ ಕೃಷ್ಣನ ಹುಟ್ಟಿಗಾದರೋ ಅವನು ಸೃಷ್ಟಿಸಲ್ಪಡಲಿಲ್ಲವೆಂದು ಹೇಳಿದೆ; ಆದ್ದರಿಂದ ಕೃಷ್ಣನು ಮಹಾದೇವತೆಗಳಾದ ಬ್ರಹ್ಮ ಮತ್ತು ಶಿವರಿಂದ ಕೂಡ ಭಿನ್ನನು. ಅವನು ಬ್ರಹ್ಮ, ಶಿವ ಮತ್ತು ಎಲ್ಲ ಇತರ ದೇವತೆಗಳ ಸೃಷ್ಟಿಕರ್ತನಾಗಿರುವುದರಿಂದ, ಅವನು ಸಕಲ ಲೋಕಗಳ ಪರಮ ಪುರುಷನು.

ಆದ್ದರಿಂದ ಶ್ರೀಕೃಷ್ಣನು ಸೃಷ್ಟವಾದ ಪ್ರತಿಯೊಂದರಿಂದಲೂ ಭಿನ್ನನು, ಮತ್ತು ಅವನನ್ನು ಹಾಗೆಂದು ತಿಳಿಯುವವನು ಸಕಲ ಪಾಪ ಪ್ರತಿಕ್ರಿಯೆಗಳಿಂದ ಕೂಡಲೇ ಮುಕ್ತನಾಗುವನು. ಪರಮ ಪ್ರಭುವಿನ ಜ್ಞಾನದಲ್ಲಿರಲು ಒಬ್ಬನು ಸಕಲ ಪಾಪ ಕರ್ಮಗಳಿಂದ ಮುಕ್ತನಾಗಿರಬೇಕು. ಭಗವದ್ಗೀತೆಯಲ್ಲಿ ಹೇಳಿರುವಂತೆ, ಭಕ್ತಿಯುತ ಸೇವೆಯಿಂದ ಮಾತ್ರವೇ ಅವನು ತಿಳಿಯಲ್ಪಡುವನು ಮತ್ತು ಇತರ ಯಾವುದೇ ಸಾಧನಗಳಿಂದ ಅಲ್ಲ.

ಒಬ್ಬನು ಕೃಷ್ಣನನ್ನು ಮಾನವನೆಂದು ತಿಳಿಯಲು ಯತ್ನಿಸಕೂಡದು. ಹಿಂದೆ ಹೇಳಿರುವಂತೆ, ಮೂಢನು ಮಾತ್ರವೇ ಅವನನ್ನು ಮಾನವನೆಂದು ತಿಳಿಯುತ್ತಾನೆ. ಇದನ್ನು ಮತ್ತೆ ಇಲ್ಲಿ ಬೇರೊಂದು ರೀತಿಯಲ್ಲಿ ವ್ಯಕ್ತಪಡಿಸಿದೆ. ಮೂಢನಲ್ಲದವನು, ಮತ್ತು ದೇವೋತ್ತಮನ ಸ್ವರೂಪ ಸ್ಥಿತಿಯನ್ನು ಅರಿಯಲು ಸಾಕಷ್ಟು ಬುದ್ಧಿಯುಳ್ಳವನು, ಸದಾ ಪಾಪ ಪ್ರತಿಕ್ರಿಯೆಗಳಿಂದ ಮುಕ್ತನು.

ಕೃಷ್ಣನು ದೇವಕಿಯ ಮಗನೆಂದು ವಿದಿತನಾಗಿದ್ದರೆ, ಅವನು ಅಜನು ಆಗುವುದು ಹೇಗೆ ? ಅದನ್ನು ಕೂಡ ಶ್ರೀಮದ್ ಭಾಗವತದಲ್ಲಿ ವಿವರಿಸಿದೆ : ಅವನು ದೇವಕೀ ಮತ್ತು ವಸುದೇವರ ಮುಂದೆ ಕಾಣಿಸಿಕೊಂಡಾಗ, ಅವನು ಸಾಮಾನ್ಯ ಶಿಶುವಿನಂತೆ ಜನಿಸಿರಲಿಲ್ಲ. ಅವನು ತನ್ನ ಮೂಲ ರೂಪದಲ್ಲಿ ಕಾಣಿಸಿಕೊಂಡನು, ಮತ್ತು ನಂತರ ತನ್ನನ್ನು ಸಾಮಾನ್ಯ ಶಿಶುವಾಗಿ ರೂಪಾಂತರಿಸಿಕೊಂಡನು.

ಕೃಷ್ಣನ ನಿರ್ದೇಶನದ ಮೇರೆಗೆ ಮಾಡಿದ ಯಾವುದೇ ಕಾರ್ಯವು ದಿವ್ಯವಾಗಿರುತ್ತದೆ. ಅದು ಶುಭಾಶುಭಕರವಾದ ಯಾವುದೇ ಭೌತಿಕ ಪ್ರತಿಕ್ರಿಯೆಗಳಿಂದ ಕಲುಷಿತವಾಗದು. ಭೌತಿಕ ಜಗತ್ತಿನಲ್ಲಿ ಮಂಗಲಕರ ಮತ್ತು ಅಮಂಗಲಕರವಾದುವು ಇವೆ ಎಂಬ ಕಲ್ಪನೆಯು ಸರಿಸುಮಾರು ಮಾನಸಿಕ ಸೃಷ್ಟನೆ, ಏಕೆಂದರೆ ಭೌತಿಕ ಜಗತ್ತಿನಲ್ಲಿ ಮಂಗಲಕರವಾದುದು ಯಾವುದೂ ಇಲ್ಲ. ಪ್ರತಿಯೊಂದೂ ಅಮಂಗಲಕರ ಏಕೆಂದರೆ ಭೌತಿಕ ಪ್ರಕೃತಿಯೇ ಅಮಂಗಲಕರ. ಅದು ಮಂಗಲಕರವೆಂದು ನಾವು ಸುಮ್ಮನೆ ಕಲ್ಪಿಸಿಕೊಳ್ಳುತ್ತೇವೆ. ನಿಜವಾದ ಮಂಗಲವು ಪೂರ್ಣ ಭಕ್ತಿ ಮತ್ತು ಸೇವೆಯಲ್ಲಿನ ಕೃಷ್ಣ ಪ್ರಜ್ಞಾ ಚಟುವಟಿಕೆಗಳನ್ನು ಅವಲಂಬಿಸಿದೆ. ಆದ್ದರಿಂದ ನಾವು ನಮ್ಮ ಚಟುವಟಿಕೆಗಳು ಮಂಗಲಕರ ಆಗಿರಲೇಬೇಕೆಂದು ಬಯಸುವುದಾದರೆ, ಆಗ ಪರಮ ಪ್ರಭುವಿನ ನಿರ್ದೇಶನಗಳಿಗೆ ಒಳಪಟ್ಟು ನಾವು ಕಾರ್ಯ ಮಾಡಬೇಕು. ಅಂಥ

ನಿರ್ದೇಶನಗಳು ಪ್ರಮಾಣ ಶಾಸ್ತ್ರಗಳಾದ ಶ್ರೀಮದ್ ಭಾಗವತಮ್ ಮತ್ತು ಭಗವದ್ಗೀತೆಯಲ್ಲಿ ನೀಡಲ್ಪಟ್ಟಿವೆ, ಅಥವಾ ಅಧಿಕೃತ ಗುರುವಿನಿಂದ ನೀಡಲ್ಪಟ್ಟಿವೆ. ಗುರುವು ಪರಮ ಪ್ರಭುವಿನ ಪ್ರತಿನಿಧಿಯಾದ ಕಾರಣ, ಅವರ ನಿರ್ದೇಶನವು ನೇರವಾಗಿ ಪರಮ ಪ್ರಭುವಿನ ನಿರ್ದೇಶನವೇ ಆಗಿರುತ್ತದೆ. ಗುರು, ಸಾಧುಪುರುಷರು ಮತ್ತು ಶಾಸ್ತ್ರಗಳು ಒಂದೇ ರೀತಿಯಲ್ಲಿ ನಿರ್ದೇಶಿಸುತ್ತವೆ. ಈ ಮೂರು ಮೂಲಗಳಲ್ಲಿ ಪರಸ್ಪರ ವಿರೋಧವಿಲ್ಲ. ಅಂಥ ನಿರ್ದೇಶನಕ್ಕೆ ಒಳಪಟ್ಟು ಮಾಡಿದ ಎಲ್ಲ ಕಾರ್ಯಗಳೂ ಈ ಭೌತಿಕ ಜಗತ್ತಿನ ಪುಣ್ಯ ಅಥವಾ ಪಾಪ ಕರ್ಮಗಳ ಪ್ರತಿಕ್ರಿಯೆಗಳಿಂದ ಮುಕ್ತವಾಗಿರುತ್ತವೆ. ಚಟುವಟಿಕೆಗಳ ಆಚರಣೆಯಲ್ಲಿನ ಭಕ್ತನ ದಿವ್ಯ ಭಾವವು ವಾಸ್ತವಿಕವಾಗಿ ಪರಿತ್ಯಾಗದ್ದಾಗಿರುತ್ತದೆ, ಮತ್ತು ಅದನ್ನು **ಸನ್ಯಾಸ**ವೆಂದು ಕರೆದಿದೆ. ಭಗವದ್ಗೀತೆಯ ಆರನೆಯ ಅಧ್ಯಾಯದ ಮೊದಲನೆಯ ಶ್ಲೋಕದಲ್ಲಿ ಹೇಳಿರುವಂತೆ, ತಾನು ಪರಮ ಪ್ರಭುವಿನಿಂದ ಹಾಗೆ ಮಾಡಲು ಆದೇಶಿತನಾಗಿರುವ ಕಾರಣ ಕರ್ತವ್ಯವೆಂದು ವರ್ತಿಸುವವನು, ಮತ್ತು ತನ್ನ ಚಟುವಟಿಕೆಗಳ ಫಲಗಳಲ್ಲಿ ಆಶ್ರಯವನ್ನು ಅರಸದವನು **(ಅನಾಶ್ರಿತಃ ಕರ್ಮ—ಫಲಮ್)** ನಿಜವಾದ ತ್ಯಾಗಿ. ಪರಮ ಪ್ರಭುವಿನ ನಿರ್ದೇಶನಕ್ಕೆ ಒಳಪಟ್ಟು ವರ್ತಿಸುತ್ತಿರುವವನು ವಾಸ್ತವಿಕವಾಗಿ **ಸನ್ಯಾಸಿ** ಮತ್ತು **ಯೋಗಿ;** ಸುಮ್ಮನೆ ಸನ್ಯಾಸಿಯ ಅಥವಾ ಮಿಥ್ಯಾ ಯೋಗಿಯ ಉಡುಪನ್ನು ಸ್ವೀಕರಿಸಿದ ವ್ಯಕ್ತಿಯಲ್ಲ.

**ಬುದ್ಧಿರ್ಜ್ಞಾನಮಸಮ್ಮೋಹಃ ಕ್ಷಮಾ ಸತ್ಯಂ ದಮಃ ಶಮಃ ।**
**ಸುಖಂ ದುಃಖಂ ಭವೋಽಭಾವೋ ಭಯಂ ಚಾಭಯಮೇವ ಚ ॥೪॥**
**ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ ।**
**ಭವನ್ತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥ ೫ ॥**

ಬುದ್ಧಿಃ—ಬುದ್ಧಿ, ಜ್ಞಾನಮ್—ಜ್ಞಾನ, ಅಸಮ್ಮೋಹಃ—ಸಂಶಯದಿಂದ ಮುಕ್ತಿ, ಕ್ಷಮಾ—ಕ್ಷಮಾಗುಣ, ಸತ್ಯಮ್—ಸತ್ಯ, ದಮಃ—ಇಂದ್ರಿಯಗಳ ನಿಗ್ರಹ, ಶಮಃ—ಮನಸ್ಸಿನ ನಿಗ್ರಹ, ಸುಖಮ್—ಸುಖ, ದುಃಖಮ್—ದುಃಖ, ಭವಃ—ಹುಟ್ಟು, ಅಭಾವಃ—ಸಾವು, ಭಯಮ್—ಭಯ, ಚ—ಸಹ, ಅಭಯಮ್—ಅಭಯ, ಏವ—ಕೂಡ, ಚ—ಮತ್ತು, ಅಹಿಂಸಾ—ಅಹಿಂಸೆ, ಸಮತಾ—ಸಮತೆ, ತುಷ್ಟಿಃ—ತೃಪ್ತಿ, ತಪಃ ತಪಸ್ಸು, ದಾನಮ್—ದಾನ, ಯಶಃ—ಕೀರ್ತಿ, ಅಯಶಃ—ಅಪಕೀರ್ತಿ, ಭವನ್ತಿ—ಆಗುತ್ತವೆ, ಭಾವಾಃ—ಸ್ವಭಾವಗಳು, ಭೂತಾನಾಮ್—ಜೀವಿಗಳ, ಮತ್ತಃ—ನನ್ನಿಂದ ಏವ—ಖಂಡಿತವಾಗಿ, ಪೃಥಕ್ ವಿಧಾಃ—ವಿವಿಧವಾಗಿ ಏರ್ಪಟ್ಟು.

**ಬುದ್ಧಿ, ಜ್ಞಾನ, ಸಂಶಯ ಮತ್ತು ಭ್ರಾಂತಿಯಿಂದ ಮುಕ್ತಿ, ಕ್ಷಮೆ, ಸತ್ಯ, ಇಂದ್ರಿಯಗಳ ನಿಗ್ರಹ, ಮನಸ್ಸಿನ ನಿಗ್ರಹ, ಸುಖ ಮತ್ತು ದುಃಖ, ಹುಟ್ಟು, ಸಾವು, ಭಯ, ಭಯವಿಲ್ಲದಿರುವಿಕೆ, ಅಹಿಂಸೆ, ಸಮತೆ, ತೃಪ್ತಿ, ವ್ರತ, ದಾನ, ಕೀರ್ತಿ ಮತ್ತು ಅಪಕೀರ್ತಿ—ಜೀವಿಗಳ ಎಲ್ಲ ಈ ವಿವಿಧ ಗುಣಗಳು ನನ್ನಿಂದಲೇ ಸೃಷ್ಟಿತ.**

**ಭಾವಾರ್ಥ :** ಜೀವಿಗಳ ಭಿನ್ನ ಭಿನ್ನಗುಣಗಳು, ಒಳ್ಳೆಯದು ಅಥವಾ ಕೆಟ್ಟದ್ದಾಗಲಿ, ಎಲ್ಲವೂ ಕೃಷ್ಣನಿಂದ ಸೃಷ್ಟಿತ, ಮತ್ತು ಅವು ಇಲ್ಲಿ ವರ್ಣಿತವಾಗಿವೆ.

ಬುದ್ಧಿ ಎಂಬುದು ವಿಷಯಗಳನ್ನು ಅವುಗಳ ಉಚಿತ ಯಥಾದೃಷ್ಟ ರೂಪಣದಲ್ಲಿ ವಿಶ್ಲೇಷಿಸುವ ಶಕ್ತಿಯನ್ನು ಸೂಚಿಸುತ್ತದೆ, ಮತ್ತು ಜ್ಞಾನ ಎಂಬುದು ಯಾವುದು ಚೇತನ ಯಾವುದು ಜಡ ಎಂದು ಅರಿತುಕೊಳ್ಳುವುದನ್ನು ಸೂಚಿಸುತ್ತದೆ. ವಿಶ್ವವಿದ್ಯಾನಿಲಯದ ಶಿಕ್ಷಣ ದಿಂದಪಡೆದ ಸಾಮಾನ್ಯ ಜ್ಞಾನವು ಜಡಕ್ಕೆ ಮಾತ್ರ ಸಂಬಂಧಿಸಿರುತ್ತದೆ,ಮತ್ತು ಅದು ಇಲ್ಲಿ ಜ್ಞಾನವೆಂದು ಅಂಗೀಕೃತವಲ್ಲ.ಜ್ಞಾನ ಎಂದರೆ ಚೇತನ ಮತ್ತು ಜಡದ ನಡುವಿನ ಭೇದ ವನ್ನು ತಿಳಿಯುವುದು. ಆಧುನಿಕ ಶಿಕ್ಷಣದಲ್ಲಿ ಚೇತನದ ಬಗ್ಗೆ ಜ್ಞಾನವಿಲ್ಲ; ಅವರು ಕೇವಲ ಭೌತಿಕ ಮೂಲಾಂಶಗಳಿಗೆ ಮತ್ತು ದೈಹಿಕ ಅವಶ್ಯಕತೆಗಳಿಗೆ ಗಮನ ಕೊಡು ತ್ತಿದ್ದಾರೆ. ಆದ್ದರಿಂದ ಶೈಕ್ಷಣಿಕ ಜ್ಞಾನವು ಸಂಪೂರ್ಣವಲ್ಲ.

**ಅಸಮ್ಮೋಹ,** ಸಂಶಯ ಮತ್ತು ಭ್ರಮೆಯಿಂದ ವಿಮೋಚನೆಯನ್ನು, ಒಬ್ಬನು ಶಂಕಿಸದಿರುವಾಗ,ಮತ್ತು ಒಬ್ಬನು ದಿವ್ಯ ತತ್ವಜ್ಞಾನವನ್ನು ಅರಿತುಕೊಂಡಾಗ ಸಾಧಿಸಬಹು ದಾಗಿದೆ. ನಿಧಾನವಾಗಿ, ಆದರೆ ಖಂಡಿತವಾಗಿ ಅವನು ದಿಗ್ಭ್ರಮೆಯಿಂದ ಮುಕ್ತನಾಗು ತ್ತಾನೆ. ಯಾವುದನ್ನೂ ಕುರುಡಾಗಿ ಅಂಗೀಕರಿಸಕೂಡದು; ಪ್ರತಿಯೊಂದನ್ನೂ ಅವಧಾನ ಮತ್ತು ಎಚ್ಚರಿಕೆಯೊಡನೆ ಗ್ರಹಿಸಬೇಕು. **ಕ್ಷಮಾ,** ತಾಳ್ಮೆ ಮತ್ತು ಕ್ಷಮೆಯನ್ನು ಆಚರಿಸ ಬೇಕು. ಒಬ್ಬನು ತಾಳ್ಮೆಯುಳ್ಳವನಾಗಿರಬೇಕು ಮತ್ತು ಮತ್ತೊಬ್ಬರ ಸಣ್ಣಪುಟ್ಟ ಅಪರಾಧಗಳನ್ನು ಕ್ಷಮಿಸಬೇಕು. **ಸತ್ಯಂ,** ಸತ್ಯವಂತಿಕೆ ಎಂದರೆ ಸತ್ಯಸಂಗತಿಗಳನ್ನು ಇತರರ ಹಿತಕ್ಕಾಗಿ ಅವು ಇರುವಂತೆಯೇ ಮುಂದಿರಿಸಬೇಕು.ಸತ್ಯ ಸಂಗತಿಗಳನ್ನು ತಪ್ಪಾಗಿ ನಿರೂಪಿ ಸಕೂಡದು. ಸಾಮಾಜಿಕ ನಡವಳಿಕೆಯ ಪ್ರಕಾರ ಇತರರಿಗೆ ಹಿತಕರವಾಗಿರುವಾಗ ಮಾತ್ರ ಒಬ್ಬನು ಸತ್ಯವನ್ನು ನುಡಿಯಬೇಕೆಂದು ಹೇಳಿದೆ. ಆದರೆ ಅದು ಸತ್ಯವಂತಿಕೆಯಲ್ಲ. ಸತ್ಯಸಂಗತಿಗಳು ಏನೆಂದು ಇತರರು ವಾಸ್ತವಿಕವಾಗಿ ಅರಿತುಕೊಳ್ಳುವಂತೆ ಸತ್ಯವನ್ನು ಮುಚ್ಚುಮರೆಯಿಲ್ಲದ ರೀತಿಯಲ್ಲಿ ನುಡಿಯಬೇಕು. ಒಬ್ಬನು ಕಳ್ಳನಾಗಿದ್ದರೆ ಮತ್ತು ಅವನು ಕಳ್ಳನೆಂದು ಜನರಿಗೆ ಎಚ್ಚರಿಕೆಯನ್ನು ಕೊಟ್ಟರೆ, ಅದು ಸತ್ಯ. ಕೆಲವು ಸಮಯ ಗಳಲ್ಲಿ ಸತ್ಯವು ಅಹಿತಕರವಾಗಿರಬಹುದಾದರೂ, ಅದನ್ನು ಹೇಳಲು ಒಬ್ಬನು ಹಿಂಜರಿಯ ಕೂಡದು. ಸತ್ಯವಂತಿಕೆಯು ಇತರರ ಹಿತಕ್ಕಾಗಿ ಸತ್ಯಸಂಗತಿಗಳನ್ನು ಇದ್ದಂತೆ ಹೇಳ ಬೇಕೆಂದು ಅಪೇಕ್ಷಿಸುತ್ತದೆ. ಅದು ಸತ್ಯದ ನಿರೂಪಣೆ.

ಇಂದ್ರಿಯ ನಿಗ್ರಹ ಎಂದರೆ ಇಂದ್ರಿಯಗಳನ್ನು ಅನವಶ್ಯಕವಾಗಿ ವೈಯಕ್ತಿಕ ಭೋಗಕ್ಕಾಗಿ ಉಪಯೋಗಿಸಕೂಡದು ಎಂದು ಅರ್ಥ. ಇಂದ್ರಿಯಗಳ ಉಚಿತ ಅವಶ್ಯಕತೆ ಗಳ ಪೂರೈಕೆಯ ವಿರುದ್ಧ ನಿಷೇಧವಿಲ್ಲ.ಆದರೆ ಅನವಶ್ಯಕ ಇಂದ್ರಿಯ ಭೋಗವು ಆಧ್ಯಾತ್ಮ ಪ್ರಗತಿಗೆ ಹಾನಿಕರ.ಆದ್ದರಿಂದ ಇಂದ್ರಿಯಗಳನ್ನು ಅನವಶ್ಯಕ ಉಪಯೋಗದಿಂದ ನಿಗ್ರಹಿಸ ಬೇಕು. ಅದೇ ಪ್ರಕಾರ, ಒಬ್ಬನು ಮನಸ್ಸನ್ನು ಅನವಶ್ಯಕ ವಿಚಾರಗಳಿಂದ ನಿಗ್ರಹಿಸಬೇಕು. ಅದನ್ನು ಶಮ ಎಂದು ಕರೆದಿದೆ. ಒಬ್ಬನು ತನ್ನ ಕಾಲವನ್ನು ಹಣಗಳಿಸುವ ವಿಚಾರ ವಿಮರ್ಶೆಯಲ್ಲಿ ಕಳೆಯಕೂಡದು. ಅದು ವಿಚಾರ ಶಕ್ತಿಯ ದುರುಪಯೋಗ. ಮನಸ್ಸನ್ನು

**ಮಾ**ನವರ ಪ್ರಧಾನ ಅವಶ್ಯಕತೆಯನ್ನು ಅರಿಯಲು ಉಪಯೋಗಿಸಬೇಕು, ಮತ್ತು ಅದನ್ನು ಪ್ರಮಾಣಬದ್ಧವಾಗಿ ವರ್ಣಿಸಬೇಕು. ಶಾಸ್ತ್ರಾಧಿಕಾರಿಗಳಾದ ಜನರ, ಸಾಧು ಪುರುಷರ ಮತ್ತು ಗುರುಗಳ ಮತ್ತು ವಿಚಾರಶಕ್ತಿಯು ಉನ್ನತವಾಗಿ ವರ್ಧಿಸಿರುವವರ ಸಹ ವಾಸದಲ್ಲಿ ವಿಚಾರಶಕ್ತಿಯನ್ನು ಬೆಳಸಿಕೊಳ್ಳಬೇಕು. **ಸುಖಮ್,** ಸುಖ ಅಥವಾ ಸಂತೋಷವು ಯಾವಾಗಲೂ ಕೃಷ್ಣಪ್ರಜ್ಞೆಯ ಅಧ್ಯಾತ್ಮಜ್ಞಾನದ ಅಭಿವೃದ್ಧಿಗೆ ಹಿತಕರವಾದುದಲ್ಲಿ ಇರಬೇಕು. ಮತ್ತು ಅದೇ ಪ್ರಕಾರ, ನೋವು ಅಥವಾ ದುಃಖಕರವಾದುದು ಕೃಷ್ಣ ಪ್ರಜ್ಞಾ ಅಭಿವೃದ್ಧಿಗೆ ಅಹಿತಕರವಾದುದು. ಕೃಷ್ಣಪ್ರಜ್ಞೆಯ ಅಭಿವೃದ್ಧಿಗೆ ಅನುಕೂಲ ವಾಗಿರುವುದನ್ನು ಅಂಗೀಕರಿಸಬೇಕು, ಮತ್ತು ಅದಕ್ಕೆ ಅನಾನುಕೂಲವಾಗಿರುವುದನ್ನು ತಿರಸ್ಕರಿಸಬೇಕು.

**ಭವ,** ಜನನವೆಂಬುದು ದೇಹಕ್ಕೆ ಸಂಬಂಧಿಸಿರುವುದೆಂದು ತಿಳಿಯಬೇಕು. ಆತ್ಮದ ಮಟ್ಟಿಗಾದರೋ, ಜನನವೂ ಇಲ್ಲ ಮರಣವೂ ಇಲ್ಲ; ಅದನ್ನು ನಾವು ಭಗವದ್ಗೀತೆಯ ಪ್ರಾರಂಭದಲ್ಲಿ ಚರ್ಚಿಸಿದ್ದೇವೆ. ಜನನ ಮತ್ತು ಮರಣ ಭೌತಿಕ ಜಗತ್ತಿನಲ್ಲಿ ಒಬ್ಬನ ದೇಹಧಾರಣಕ್ಕೆ ಅನ್ವಯಿಸುತ್ತವೆ. ಭವಿಷ್ಯತ್ತಿನ ಬಗ್ಗೆ ಆತಂಕಗೊಳ್ಳುವ ಕಾರಣದಿಂದಲೇ ಭಯ ಉಂಟಾಗುತ್ತದೆ. ಕೃಷ್ಣ ಪ್ರಜ್ಞಿಗೆ ಭಯವಿಲ್ಲ, ಏಕೆಂದರೆ ಅವನು ತನ್ನ ಚಟು ವಟಿಕೆಗಳಿಂದ ಪರವ್ಯೋಮಕ್ಕೆ, ಧಾಮಕ್ಕೆ, ಪರಂಧಾಮಕ್ಕೆ ಹಿಂದಿರುಗುವುದು ನಿಶ್ಚಿತ. ಆದ್ದರಿಂದ ಅವನ ಭವಿಷ್ಯವು ಉಜ್ವಲ. ಇತರರಿಗಾದರೋ ಅವರ ಭವಿಷ್ಯವು ಏನನ್ನು ಕಾದಿರಿಸಿದೆ ಎಂದು ತಿಳಿದಿರುವುದಿಲ್ಲ; ಮುಂದಿನ ಜನ್ಮವು ಏನನ್ನು ಕಾದಿರಿಸಿದೆ ಎಂಬುದರ ಜ್ಞಾನವು ಅವರಿಗಿಲ್ಲ. ಆದ್ದರಿಂದ ಅವರು ಸದಾ ಆತಂಕದಲ್ಲಿದ್ದಾರೆ. ನಾವು ಆತಂಕ ದಿಂದ ವಿಮೋಚಿತರಾಗ ಬಯಸಿದರೆ, ಆಗ ಅತ್ಯುತ್ತಮ ಮಾರ್ಗವು ಕೃಷ್ಣನನ್ನು ಅರಿತುಕೊಳ್ಳುವುದು ಮತ್ತು ಸದಾ ಕೃಷ್ಣಪ್ರಜ್ಞೆಯಲ್ಲಿ ಸನ್ನಿವೇಶಿತರಾಗಿರುವುದು. ಆ ರೀತಿಯಲ್ಲಿ ನಾವು ಎಲ್ಲ ಭಯದಿಂದ ಮುಕ್ತರಾಗುತ್ತೇವೆ. ಶ್ರೀಮದ್‌ಭಾಗವತದಲ್ಲಿ (11.2.37), ಹೀಗೆ ಹೇಳಿದೆ, **ಭಯಂ ದ್ವಿತೀಯಾಭಿ ನಿವೇಶತಃ ಸ್ಯಾತ್—ಮಾಯಾ ಶಕ್ತಿಯಲ್ಲಿ ನಮ್ಮ ಮಗ್ನತೆಯಿಂದ ಭಯ ಉಂಟಾಗುತ್ತದೆ.** ಆದರೆ ಮಾಯಾಶಕ್ತಿಯಿಂದ ಮುಕ್ತರಾದವರು, ಮತ್ತು ನಾವು ಈ ಭೌತಿಕ ದೇಹವಲ್ಲ, ಮತ್ತು ನಾವು ಪರಮ ದೇವೋತ್ತಮ ಪುರುಷನ ಆಧ್ಯಾತ್ಮ ಅಂಶಗಳು ಎಂಬ ನೆಚ್ಚಿಕೆಯುಳ್ಳವರು, ಮತ್ತು ಆ ಕಾರಣ ದಿಂದ ಪರಮ ದೇವೋತ್ತಮನ ದಿವ್ಯ ಸೇವೆಯಲ್ಲಿ ನಿರತರಾದವರು, ಭಯಪಡಬೇಕಾದುದು ಏನೂ ಇಲ್ಲ. ಅವರ ಭವಿಷ್ಯವು ಬಹಳ ಉಜ್ವಲವಾಗಿದೆ. ಈ ಭಯ ಎಂಬುದು ಕೃಷ್ಣ ಪ್ರಜ್ಞೆಯಲ್ಲಿ ಇಲ್ಲದ ವ್ಯಕ್ತಿಗಳ ಸ್ಥಿತಿ. **ಅಭಯಮ್,** ನಿರ್ಭಯವು ಕೃಷ್ಣಪ್ರಜ್ಞೆ ಯಲ್ಲಿರುವವನಿಗೆ ಮಾತ್ರ ಸಾಧ್ಯ.

**ಅಹಿಂಸಾ,** ಎಂದರೆ ಒಬ್ಬನು ಮತ್ತೊಬ್ಬರಿಗೆ ಕ್ಲೇಶ ಅಥವಾ ಗೊಂದಲವನ್ನು ಉಂಟುಮಾಡುವಂಥ ಯಾವುದನ್ನೂ ಮಾಡಕೂಡದೆಂದು ಅರ್ಥ. ಅನೇಕ ರಾಜ ಕಾರಣಿಗಳು, ಸಮಾಜ ಶಾಸ್ತ್ರಜ್ಞರು, ಲೋಕೋಪಕಾರಿಗಳು ಮುಂತಾದವರಿಂದ ಭರವಸೆ ನೀಡಲ್ಪಡುವ ಭೌತಿಕ ಚಟುವಟಿಕೆಗಳು ಬಹು ಒಳ್ಳೆಯ ಫಲಿತಾಂಶಗಳನ್ನು ನೀಡುವುದಿಲ್ಲ. ಏಕೆಂದರೆ ರಾಜಕಾರಣಿಗಳಿಗೆ ಮತ್ತು ಲೋಕೋಪಕಾರಿಗಳಿಗೆ ದಿವ್ಯ ದೃಷ್ಟಿ ಇರುವುದಿಲ್ಲ;

ಮಾನವ ಸಮಾಜಕ್ಕೆ ಯಾವುದು ವಾಸ್ತವಿಕವಾಗಿ ಹಿತಕಾರಿ ಎಂಬುದು ಅವರಿಗೆ ತಿಳಿದಿರುವುದಿಲ್ಲ. **ಅಹಿಂಸಾ** ಎಂದರೆ ಮಾನವ ದೇಹದ ಸಂಪೂರ್ಣ ಬಳಕೆಯು ಸಾಧ್ಯವಾಗುವಂಥ ರೀತಿಯಲ್ಲಿ ಜನರಿಗೆ ತರಬೇತಿ ನೀಡಬೇಕು. ಮಾನವ ದೇಹವು ಅಧ್ಯಾತ್ಮ ಸಾಕ್ಷಾತ್ಕಾರಕ್ಕೆ ಉದ್ದಿಷ್ಟ. ಹಾಗಿರಲು ಆ ಉದ್ದೇಶವನ್ನು ಮುಂದುವರಿಸದ ಯಾವುದೇ ಚಳುವಳಿಗಳು ಅಥವಾ ಯಾವುದೇ ಆಯೋಗಗಳು ಮಾನವ ದೇಹದ ಮೇಲೆ ಹಿಂಸೆಯನ್ನು ಎಸಗುತ್ತವೆ. ಯಾವುದು ಜನಸಾಮಾನ್ಯರ ಭಾವೀ ಅಧ್ಯಾತ್ಮ ಸುಖವನ್ನು ಅಭಿವೃದ್ಧಿಗೊಳಿಸುವುದೋ, ಅದನ್ನು ಅಹಿಂಸೆ ಎಂದು ಕರೆದಿದೆ.

**ಸಮತಾ,** ಸಮ ಚಿತ್ತತೆ ಎಂಬುದು ರಾಗದ್ವೇಷಗಳಿಂದ ಮುಕ್ತವಾಗಿರುವುದನ್ನು ಸೂಚಿಸುತ್ತದೆ. ಅತ್ಯಾಸಕ್ತಿ ಅಥವಾ ಅತಿ ಅನಾಸಕ್ತಿ ಎರಡೂ ಉತ್ತಮವಲ್ಲ. ಈ ಭೌತಿಕ ಜಗತ್ತನ್ನು ರಾಗದ್ವೇಷರಹಿತವಾಗಿ ಅಂಗೀಕರಿಸಬೇಕು. ಕೃಷ್ಣ ಪ್ರಜ್ಞೆಯ ಸಾಧನೆಗೆ ಅನುಕೂಲವಾಗುವುದನ್ನು ಅಂಗೀಕರಿಸಬೇಕು; ಅನಾನುಕೂಲವಾದುದನ್ನು ತಿರಸ್ಕರಿಸಬೇಕು. ಅದನ್ನು **ಸಮತಾ,** ಸಮ ಚಿತ್ತತೆ ಎಂದು ಕರೆದಿದೆ. ಕೃಷ್ಣಪ್ರಜ್ಞೆಯಾದವನಿಗೆ, ಕೃಷ್ಣಪ್ರಜ್ಞಾ ಸಾಧನಕ್ಕೆ ಅದರ ಉಪಯುಕ್ತತೆಯ ವಿಷಯವನ್ನು ಬಿಟ್ಟು ತಿರಸ್ಕರಿಸಬೇಕಾದುದು ಏನೂ ಇಲ್ಲ, ಮತ್ತು ಅಂಗೀಕರಿಸಬೇಕಾದುದು ಏನೂ ಇಲ್ಲ.

**ತುಷ್ಟಿ,** ತೃಪ್ತಿ ಎಂದರೆ, ಒಬ್ಬನು ಅನವಶ್ಯಕ ಚಟುವಟಿಕೆಯಿಂದ ಹೆಚ್ಚು ಹೆಚ್ಚು ಭೌತಿಕ ವಸ್ತುಗಳನ್ನು ಸಂಗ್ರಹಿಸಲು ಕಾತುರನಾಗಿರಕೂಡದು ಎಂದು ಅರ್ಥ. ಪರಮ ಪ್ರಭುವಿನ ಕೃಪೆಯಿಂದ ಲಭಿಸಿದ ಯಾವುದರಿಂದಲಾದರೂ ಒಬ್ಬನು ತೃಪ್ತನಾಗಿರಬೇಕು; ಅದನ್ನು **ತುಷ್ಟಿ** ಎಂದು ಕರೆದಿದೆ. **ತಪಸ್** ಎಂದರೆ ವ್ರತ ಅಥವಾ ತಪಸ್ಯ. ಮುಂಜಾವಿನಲ್ಲಿ ಏಳುವುದು ಮತ್ತು ಸ್ನಾನ ಮಾಡುವುದು, ವೇದಗಳ ಇಂಥ ಅನೇಕ ನಿಯಮ ನಿಯಂತ್ರಣಗಳು ಇಲ್ಲಿ ಅನ್ವಯಿಸುತ್ತವೆ. ಕೆಲವು ಸಮಯಗಳಲ್ಲಿ ಮುಂಜಾವಿನಲ್ಲಿ ಏಳುವುದು ಬಹು ಕಷ್ಟಕರ, ಆದರೆ ಈ ರೀತಿಯಲ್ಲಿ ಒಬ್ಬನು ಸ್ವಇಚ್ಛೆಯಿಂದ ಕಷ್ಟ ಅನುಭವಿಸುವುದನ್ನು ತಪಸ್ಸು ಎಂದು ಕರೆದಿದೆ. ಅದೇ ಪ್ರಕಾರ, ತಿಂಗಳ ನಿಶ್ಚಿತ ದಿನಗಳಲ್ಲಿ ಉಪವಾಸ ಮಾಡಬೇಕೆಂಬ ನಿಯಮಗಳಿವೆ. ಒಬ್ಬನಿಗೆ ಅಂಥ ಉಪವಾಸವನ್ನು ಆಚರಿಸಲು ಇಚ್ಛೆ ಇಲ್ಲದಿರಬಹುದು, ಆದರೆ ಕೃಷ್ಣಪ್ರಜ್ಞಾ ವಿಜ್ಞಾನದಲ್ಲಿ ಪ್ರಗತಿಗಳಿಸುವ ಅವನ ನಿರ್ಧಾರದ ಕಾರಣ ಅಂಥ ದೈಹಿಕ ತೊಂದರೆಗಳನ್ನು ಅವನು ಅಂಗೀಕರಿಸಬೇಕು. ಆದರೆ, ಒಬ್ಬನು ಅನವಶ್ಯಕವಾಗಿ ಅಥವಾ ವೈದಿಕ ಆದೇಶಗಳಿಗೆ ವಿರುದ್ಧವಾಗಿ ಉಪವಾಸ ಮಾಡಕೂಡದು. ಯಾವುದಾದರೂ ರಾಜಕೀಯ ಉದ್ದೇಶಕ್ಕಾ ಒಬ್ಬನು ಉಪವಾಸ ಮಾಡಕೂಡದು; ಭಗವದ್ಗೀತೆಯಲ್ಲಿ ಅದನ್ನು ತಾಮಸ ಉಪವಾಸ ಎಂದು ಕರೆದಿದೆ, ಮತ್ತು ತಾಮಸ ಮತ್ತು ರಾಜಸ ಗುಣದಲ್ಲಿ ಮಾಡಿದ ಯಾವುದೇ ಕಾರ್ಯವು ಆಧ್ಯಾತ್ಮಿಕ ಉತ್ಕೃಷ್ಟತೆಗೆ ಕರೆದೊಯ್ಯದು. ಸತ್ವಗುಣದಲ್ಲಿ ಮಾಡಿದ ಪ್ರತಿಯೊಂದೂ ಒಬ್ಬನನ್ನು ಉತ್ಕೃಷ್ಟತೆಯ ಕಡೆಗೆ ಕರೆದೊಯ್ಯುವುದು ಮತ್ತು ವೈದಿಕ ವಿಧಿಗಳ ಅನುಸಾರ ಮಾಡಿದ ಉಪವಾಸವು ಒಬ್ಬನನ್ನು ಆಧ್ಯಾತ್ಮಿಕ ಜ್ಞಾನದಲ್ಲಿ ಬಲಪಡಿಸುತ್ತದೆ.

ದಾನದ ಮಟ್ಟಿಗಾದರೋ. ಒಬ್ಬನು ತನ್ನ ಆದಾಯದ ಶೇಕಡ ಐವತ್ತನ್ನು ಒಳ್ಳೆಯ ಉದ್ದೇಶಕ್ಕಾಗಿ ದಾನ ಕೊಡಬೇಕು. ಒಳ್ಳೆಯ ಉದ್ದೇಶ ಎಂದರೆ ಯಾವುದು?

ಕೃಷ್ಣಪ್ರಜ್ಞೆಗೆ ಸಂಬಂಧಿಸಿದ ಕಾರ್ಯವೇ ಒಳ್ಳೆಯ ಕಾರ್ಯ. ಅದು ಒಳ್ಳೆಯ ಉದ್ದೇಶವಷ್ಟೇ ಅಲ್ಲದೆ ಅದು ಅತ್ಯುತ್ತಮ ಉದ್ದೇಶವಾಗಿರುತ್ತದೆ. ಕೃಷ್ಣನು ಒಳ್ಳೆಯವನಾದ ಕಾರಣ ಅವನ ಉದ್ದೇಶವೂ ಕೂಡ ಒಳ್ಳೆಯದು. ಹೀಗೆ ದಾನವನ್ನು ಕೃಷ್ಣಪ್ರಜ್ಞೆಯಲ್ಲಿ ನಿರತನಾಗಿರುವವನಿಗೇ ಕೊಡಬೇಕು. ವೈದಿಕ ಸಾಹಿತ್ಯಾನುಸಾರ ಬ್ರಾಹ್ಮಣರಿಗೆ ದಾನ ಕೊಡಬೇಕೆಂದು ವಿಧಿತವಾಗಿದೆ. ಈ ಪದ್ಧತಿಯು, ವೈದಿಕ ಆದೇಶಾನುಸಾರ ಸರಿಯಾಗಿ ಇಲ್ಲವಾದರೂ, ಈಗಲೂ ಅನುಸರಿಸಲ್ಪಡುತ್ತಲಿದೆ. ಆದರೂ ಕೂಡ, ಬ್ರಾಹ್ಮಣರಿಗೆ ದಾನ ಕೊಡಬೇಕು ಎಂಬುದು ವಿಧಿ. ಏಕೆ ? ಏಕೆಂದರೆ ಅವರು ಅಧ್ಯಾತ್ಮ ಜ್ಞಾನದ ಅಭಿವೃದ್ಧಿಯಲ್ಲಿ ನಿರತರು. ಒಬ್ಬ ಬ್ರಾಹ್ಮಣನು ತನ್ನ ಇಡೀ ಜೀವನವನ್ನು ಬ್ರಹ್ಮನ್‌ನನ್ನು ಅರಿಯಲು ಮೀಸಲಿಡಬೇಕೆಂದು ಹೇಳಿದೆ. **ಬ್ರಹ್ಮ ಜಾನಾತೀತಿ ಬ್ರಾಹ್ಮಣಃ**–ಬ್ರಹ್ಮನ್‌ನನ್ನು ತಿಳಿದವನು ಬ್ರಾಹ್ಮಣ ಎಂದು ಕರೆದಿದೆ. ಹೀಗೆ ಬ್ರಾಹ್ಮಣರು ಸದಾ ಉನ್ನತ ಅಧ್ಯಾತ್ಮ ಸೇವೆಯಲ್ಲಿ ನಿರತರಾಗಿರುವರು ಮತ್ತು ತಮ್ಮ ಜೀವನೋಪಾಯಕ್ಕೆ ಸಂಪಾದಿಸಿಕೊಳ್ಳಲು ಅವರಿಗೆ ಸಮಯವಿಲ್ಲದಿರುವ ಕಾರಣ, ಅವರಿಗೆ ದಾನವನ್ನು ನೀಡಲಾಗುತ್ತದೆ. ವೈದಿಕ ಸಾಹಿತ್ಯದಲ್ಲಿ, ಸನ್ಯಾಸಿಗೂ ಸಹ ದಾನವನ್ನು ನೀಡಲಾಗುತ್ತದೆ ಎಂದು ಹೇಳಿದೆ. ಸನ್ಯಾಸಿಗಳು ಬಾಗಿಲಿಂದ ಬಾಗಿಲಿಗೆ ಭಿಕ್ಷೆಯನ್ನು ಬೇಡುತ್ತಾರೆ, ಹಣಕ್ಕಾಗಿ ಅಲ್ಲ, ಆದರೆ ಧರ್ಮ ಪ್ರಚಾರದ ಉದ್ದೇಶಗಳಿಗಾಗಿ. ಅವರು ಬಾಗಿಲಿಂದ ಬಾಗಿಲಿಗೆ ಹೋಗಿ ಜನರನ್ನು ಅಜ್ಞಾನದ ನಿದ್ರೆಯಿಂದ ಎಬ್ಬಿಸುವುದು ಪದ್ಧತಿ. ಗೃಹಸ್ಥರು ಕುಟುಂಬ ವ್ಯವಹಾರಗಳಲ್ಲಿ ನಿರತರಾಗಿರುವರು ಮತ್ತು ಜೀವನದಲ್ಲಿನ ತಮ್ಮ ವಾಸ್ತವಿಕ ಉದ್ದೇಶವನ್ನು—ಎಂದರೆ ತಮ್ಮ ಕೃಷ್ಣಪ್ರಜ್ಞಾ ಜಾಗೃತಿಯನ್ನು—ಮರೆತಿರುವ ಕಾರಣ, ಭಿಕ್ಷುಕರಂತೆ ಗೃಹಸ್ಥರಲ್ಲಿಗೆ ಹೋಗಿ ಕೃಷ್ಣಪ್ರಜ್ಞರಾಗಲು ಅವರನ್ನು ಪ್ರೋತ್ಸಾಹಿಸುವುದು ಸನ್ಯಾಸಿಗಳ ಕಾರ್ಯವಾಗಿದೆ. ವೇದಗಳಲ್ಲಿ ಹೇಳಿರುವಂತೆ ಒಬ್ಬನು, ಈ ಮಾನವ ರೂಪೀ ಜೀವನದಲ್ಲಿ ತನಗೆ ಸಲ್ಲತಕ್ಕದ್ದನ್ನು ಜಾಗೃತಗೊಳಿಸಬೇಕು ಮತ್ತು ಸಾಧಿಸಬೇಕು. ಈ ಜ್ಞಾನ ಮತ್ತು ವಿಧಾನವು ಸನ್ಯಾಸಿಗಳಿಂದ ವಿತರಣೆ ಮಾಡಲ್ಪಡುತ್ತದೆ; ಆದ್ದರಿಂದ ದಾನವನ್ನು ಸನ್ಯಾಸಿಗಳಿಗೆ, ಬ್ರಾಹ್ಮಣರಿಗೆ, ಮತ್ತು ಅದೇ ಬಗೆಯ ಒಳ್ಳೆಯ ಉದ್ದೇಶಗಳಿಗೆ ಕೊಡಬೇಕೇ ಹೊರತು ಯಾವುದೇ ಮನ ಬಂದ ಉದ್ದೇಶಕ್ಕಲ್ಲ.

**ಯಶಸ್**, ಕೀರ್ತಿ, ಭಗವಾನ್ ಚೈತನ್ಯರ ಪ್ರಕಾರ ಇರಬೇಕು; ಒಬ್ಬನು ಮಹಾಭಕ್ತನೆಂದು ಪ್ರಸಿದ್ಧನಾದಾಗ ಅವನು ಕೀರ್ತಿವಂತನು ಎಂದು ಅವರು ಹೇಳಿದ್ದಾರೆ. ಅದು ನಿಜವಾದ ಯಶಸ್ಸು. ಒಬ್ಬನು ಕೃಷ್ಣಪ್ರಜ್ಞೆಯಲ್ಲಿ ಮಹಾಪುರುಷನಾಗಿದ್ದರೆ, ಮತ್ತು ಇದು ಎಲ್ಲರಿಗೂ ತಿಳಿಯಲ್ಪಟ್ಟರೆ, ಆಗ ಅವನು ನಿಜವಾಗಿ ಕೀರ್ತಿಶಾಲಿ. ಅಂಥ ಕೀರ್ತಿ ಇಲ್ಲದವನು ಅಪಕೀರ್ತಿಯುಳ್ಳವನು.

ಈ ಎಲ್ಲ ಗುಣಗಳು ವಿಶ್ವದಲ್ಲೆಲ್ಲಾ ಮಾನವ ಸಮಾಜದಲ್ಲಿ ಮತ್ತು ದೇವತೆಗಳ ಸಮಾಜದಲ್ಲಿ ಪ್ರಕಟವಾಗಿವೆ. ಇತರ ಲೋಕಗಳಲ್ಲಿಯೂ ಮಾನವರ ಬಹುತೇಕ ರೂಪಗಳಿವೆ, ಮತ್ತು ಈ ಗುಣಗಳೆಲ್ಲವೂ ಅಲ್ಲಿವೆ. ಈಗ, ಕೃಷ್ಣಪ್ರಜ್ಞೆಯಲ್ಲಿ ಪ್ರಗತಿಸಲು

ಬಯಸುವವನಿಗೆ, ಕೃಷ್ಣನು ಈ ಎಲ್ಲ ಗುಣಗಳನ್ನು ಸೃಷ್ಟಿಸುತ್ತಾನೆ. ಆದರೆ ವ್ಯಕ್ತಿಯು ತನ್ನಲ್ಲಿ ಒಳಗಿನಿಂದಲೇ ಅವುಗಳನ್ನು ಬೆಳೆಸಿಕೊಳ್ಳುತ್ತಾನೆ. ಪರಮ ಪ್ರಭುವಿನ ಭಕ್ತಿಯುತ ಸೇವೆಯಲ್ಲಿ ನಿರತನಾದವನು, ಪರಮ ಪ್ರಭುವಿನಿಂದ ವ್ಯವಸ್ಥಿತವಾದಂತೆ ಸಕಲ ಸದ್ಗುಣಗಳನ್ನು ಬೆಳೆಸಿಕೊಳ್ಳುತ್ತಾನೆ.

ನಾವು ಕಾಣುವ ಯಾವುದೇ, ಒಳ್ಳೆಯದು ಅಥವಾ ಕೆಟ್ಟದರ ಮೂಲವು ಕೃಷ್ಣ. ಕೃಷ್ಣನಲ್ಲಿ ಇಲ್ಲದ್ದು ಯಾವುದೂ ಈ ಭೌತಿಕ ಜಗತ್ತಿನಲ್ಲಿ ವ್ಯಕ್ತವಾಗಲಾರದು. ಅದೇ ಜ್ಞಾನ; ವಸ್ತುಗಳು ಭಿನ್ನವಾಗಿ ಸನ್ನಿವೇಶಿತ ಎಂದು ನಾವು ತಿಳಿದಿದ್ದರೂ ಪ್ರತಿಯೊಂದೂ ಕೃಷ್ಣನಿಂದ ಪ್ರವಹಿಸುವುದೆಂದು ನಾವು ಅರಿಯಬೇಕು.

**ಮಹರ್ಷಯಃ ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ ।**
**ಮದ್ ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ ॥೬॥**

ಮಹಾಋಷಯಃ—ಮಹರ್ಷಿಗಳು, ಸಪ್ತ—ಏಳು, ಪೂರ್ವೇ—ಮುಂಚೆ, ಚತ್ವಾರಃ—ನಾಲ್ಕು, ಮನವಃ—ಮನುಗಳು, ತಥಾ—ಹಾಗೂ, ಮತ್‌ಭಾವಾಃ—ನನ್ನಿಂದ ಜನಿಸಿದ, ಮಾನಸಾಃ—ಮನಸ್ಸಿನಿಂದ, ಜಾತಾ—ಹುಟ್ಟಿದರು, ಯೇಷಾಮ್—ಅವರ, ಲೋಕೇ—ಜಗತ್ತಿನಲ್ಲಿ, ಇಮಾಃ—ಇದು ಎಲ್ಲಾ, ಪ್ರಜಾಃ—ಪ್ರಜೆಗಳು.

**ಸಪ್ತ ಮಹರ್ಷಿಗಳು ಮತ್ತು ಅವರಿಗಿಂತ ಮುಂಚಿನ ನಾಲ್ಕು ಇತರ ಮಹರ್ಷಿಗಳು ಮತ್ತು ಮನುಗಳು (ಮಾನವ ಕುಲದ ಪ್ರಜನಕರು) ನನ್ನ ಮನಸ್ಸಿನಿಂದ ಜನಿಸಿ, ನನ್ನಿಂದ ಬರುವರು, ಮತ್ತು ವಿವಿಧ ಗ್ರಹಗಳಲ್ಲಿರುವ ಸಕಲ ಜೀವಿಗಳು ಅವರಿಂದ ಇಳಿದು ಬರುವರು.**

**ಭಾವಾರ್ಥ :** ಭಗವಂತನು ವಿಶ್ವ ಜನಸ್ತೋಮದ ವಂಶಪರಂಪರೆಯ ಸಂಕ್ಷಿಪ್ತ ನೋಟವನ್ನು ನೀಡುತ್ತಿದ್ದಾನೆ. ಹಿರಣ್ಯಗರ್ಭ ಎನಿಸಿರುವ ಪರಮ ಪ್ರಭುವಿನ ಶಕ್ತಿಯಿಂದ ಹುಟ್ಟಿದ ಮೂಲ ಜೀವಿಯು ಬ್ರಹ್ಮನು. ಮತ್ತು ಬ್ರಹ್ಮನಿಂದ ಸಪ್ತ ಮಹರ್ಷಿಗಳು, ಮತ್ತು ಅವರಿಗೆ ಪೂರ್ವದಲ್ಲಿ ಸನಕ, ಸನಂದ, ಸನಾತನ ಮತ್ತು ಸನತ್ಕುಮಾರ ಎಂಬ ಇತರ ನಾಲ್ಕು ಮಹರ್ಷಿಗಳು ಮತ್ತು ಮನುಗಳು ಉದ್ಭೂತರಾದರು. ಈ ಇಪ್ಪತ್ತೈದು ಮಹರ್ಷಿಗಳು ಇಡೀ ವಿಶ್ವದಲ್ಲಿನ ಸಕಲ ಜೀವಿಗಳ ಪ್ರಜಾಪತಿಗಳೆಂದು ತಿಳಿಯಲ್ಪಟ್ಟಿದ್ದಾರೆ. ಅಸಂಖ್ಯಾತ ವಿಶ್ವಗಳಿವೆ ಮತ್ತು ಪ್ರತಿಯೊಂದು ವಿಶ್ವದಲ್ಲಿ ಅಸಂಖ್ಯಾತ ಗ್ರಹಗಳು ಇವೆ, ಮತ್ತು ಪ್ರತಿಯೊಂದು ಗ್ರಹವು ನಾನಾ ಬಗೆಯ ಪ್ರಜೆಗಳಿಂದ ತುಂಬಿದೆ. ಅವರೆಲ್ಲರೂ ಈ ಇಪ್ಪತ್ತೈದು ಪ್ರಜಾಪತಿಗಳಿಂದ ಹುಟ್ಟಿದವರು. ಸೃಷ್ಟಿಸುವುದು ಹೇಗೆ ಎಂದು ಕೃಷ್ಣನ ಕೃಪೆಯಿಂದ ತಿಳಿಯುವ ಪೂರ್ವದಲ್ಲಿ, ಬ್ರಹ್ಮನು ದೇವಮಾನದಂತೆ ಒಂದು ಸಾವಿರ ವರ್ಷಗಳು ತಪಸ್ಸು ಮಾಡಿದನು. ಆಗ ಬ್ರಹ್ಮನಿಂದ ಸನಕ, ಸನಂದ, ಸನಾತನ ಮತ್ತು ಸನತ್ಕುಮಾರರು, ನಂತರ ರುದ್ರನು ಮತ್ತು ನಂತರದಲ್ಲಿ ಸಪ್ತಋಷಿಗಳು ಬಂದರು ಮತ್ತು ಈ ರೀತಿಯಲ್ಲಿ ಎಲ್ಲ ಬ್ರಾಹ್ಮಣರು ಮತ್ತು ಕ್ಷತ್ರಿಯರು ಪರಮ ದೇವೋತ್ತಮ ಪುರುಷನ ಶಕ್ತಿಯಿಂದ ಜನಿಸಿರುವರು. ಬ್ರಹ್ಮನು ಪಿತಾಮಹ,

ಎಂದರೆ ತಾತನೆಂದು, ಮತ್ತು ಕೃಷ್ಣನು ಪ್ರಪಿತಾಮಹ, ಎಂದರೆ ತಾತನ ತಂದೆಯೆಂದು ಹೇಳಿದೆ. ಅದನ್ನು ಭಗವದ್ಗೀತೆಯ ಹನ್ನೊಂದನೆಯ (11.39) ಅಧ್ಯಾಯದಲ್ಲಿ ಹೇಳಿದೆ.

**ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ ।**
**ಸೋऽವಿಕಲ್ಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥ ೭ ॥**

ಏತಾಮ್—ಈ ಎಲ್ಲ, ವಿಭೂತಿಮ್—ಐಶ್ವರ್ಯ, ಯೋಗಮ್—ಯೋಗ ಶಕ್ತಿ, ಚ—ಸಹ, ಮಮ—ನನ್ನ, ಯಃ—ಯಾವನೇ ಒಬ್ಬನು, ವೇತ್ತಿ—ತಿಳಿದಿರುವನು, ತತ್ತ್ವತಃ—ವಾಸ್ತವಿಕವಾಗಿ, ಸಃ—ಅವನು, ಅವಿಕಲ್ಪೇನ—ಅನನ್ಯ, ಯೋಗೇನ—ಭಕ್ತಿಯುತ ಸೇವೆಯಲ್ಲಿ, ಯುಜ್ಯತೇ—ನಿರತನು, ನ—ಎಂದಿಗೂ ಇಲ್ಲ, ಅತ್ರ—ಇಲ್ಲಿ, ಸಂಶಯಃ—ಸಂಶಯ.

**ನನ್ನ ಈ ಐಶ್ವರ್ಯ ಮತ್ತು ಯೋಗ ಶಕ್ತಿಯನ್ನು ವಾಸ್ತವಿಕವಾಗಿ ದೃಢವಾಗಿ ಅರಿತವನು, ಅಮಿಶ್ರ ಭಕ್ತಿಯುತ ಸೇವಾನಿರತನಾಗುವನು, ಇದರ ಬಗ್ಗೆ ಸಂಶಯವಿಲ್ಲ.**

**ಭಾವಾರ್ಥ :** "ಅಧ್ಯಾತ್ಮ ಪರಿಪೂರ್ಣತೆಯ ಅತ್ಯುಚ್ಚ ಶೃಂಗವೆಂದರೆ ಪರಮ ದೇವೋತ್ತಮ ಪುರುಷನ ಜ್ಞಾನ. ಒಬ್ಬನಿಗೆ ಪರಮ ಪ್ರಭುವಿನ ವಿವಿಧ ಐಶ್ವರ್ಯಗಳ ಬಗ್ಗೆ ದೃಢವಾಗಿ ಮನವರಿಕೆಯಾದ ಹೊರತು, ಅವನು ಭಕ್ತಿಯುತ ಸೇವೆಯಲ್ಲಿ ನಿರತ ನಾಗಲಾರನು. ಸಾಮಾನ್ಯವಾಗಿ ದೇವರು ದೊಡ್ಡವನು ಎಂದು ಜನ ತಿಳಿದಿದ್ದಾರೆ. ಆದರೆ ದೇವರು ಹೇಗೆ ದೊಡ್ಡವನು ಎಂದು ವಿವರವಾಗಿ ಅವರು ತಿಳಿದಿಲ್ಲ. ಇಲ್ಲಿ ಆ ವಿವರಗಳಿವೆ. ದೇವರು ಹೇಗೆ ದೊಡ್ಡವನು ಎಂಬುದನ್ನು ಒಬ್ಬನು ವಾಸ್ತವಿಕವಾಗಿ ತಿಳಿದರೆ ಸ್ವಾಭಾವಿಕವಾಗಿಯೇ ಅವನು ಶರಣಾಗತ ಆತ್ಮನಾಗುತ್ತಾನ ಮತ್ತು ಭಗವಂತನ ಭಕ್ತಿಯುತ ಸೇವೆಯಲ್ಲಿ ತೊಡಗುತ್ತಾನೆ. ಒಬ್ಬನು ಭಗವಂತನ ಐಶ್ವರ್ಯಗಳನ್ನು ವಾಸ್ತವಿಕವಾಗಿ ತಿಳಿದಾಗ, ಆವನಿಗೆ ಶರಣಾಗತನಾಗದೆ ಬೇರೆ ಗತಿಯೇ ಇಲ್ಲ. ಈ ವಾಸ್ತವಿಕ ಜ್ಞಾನವನ್ನು ಶ್ರೀಮದ್ ಭಾಗವತಮ್ ಮತ್ತು ಭಗವದ್ಗೀತೆಯ ಮತ್ತು ಅಂಥ ಸಾಹಿತ್ಯಗಳ ವರ್ಣನೆಗಳಿಂದ ತಿಳಿದುಕೊಳ್ಳಬಹುದು.

ಈ ವಿಶ್ವದ ಪ್ರಶಾಸನದಲ್ಲಿ ಲೋಕವ್ಯೂಹದಲ್ಲೆಲ್ಲಾ ಅನೇಕ ದೇವತೆಗಳು ಸ್ಥಾಪಿಸಲ್ಪಟ್ಟಿದ್ದಾರೆ, ಮತ್ತು ಅವರಲ್ಲಿ ಬ್ರಹ್ಮ, ಭಗವಾನ್ ಶಿವ ಮತ್ತು ನಾಲ್ಕು ಮಹಾ ಕುಮಾರರು ಮತ್ತು ಇತರ ಪ್ರಜಾಪತಿಗಳು ಮುಖ್ಯವಾದವರು. ವಿಶ್ವದ ಪ್ರಜಾ ಸ್ತೋಮದ ಅನೇಕ ಪೂರ್ವಜರಿದ್ದಾರೆ, ಮತ್ತು ಅವರೆಲ್ಲರೂ ಪರಮ ಪ್ರಭು ಕೃಷ್ಣನಿಂದ ಜನಿಸಿದವರು. ಪರಮ ದೇವೋತ್ತಮ ಪುರುಷ, ಕೃಷ್ಣನು ಎಲ್ಲ ಪೂರ್ವಜರ ಮೂಲ ಪಿತ.

ಇವು ಪರಮ ಪ್ರಭುವಿನ ಐಶ್ವರ್ಯಗಳಲ್ಲಿ ಕೆಲವು. ಒಬ್ಬನಿಗೆ ಅವುಗಳ ಬಗ್ಗೆ ದೃಢವಾಗಿ ಮನವರಿಕೆಯಾದರೆ, ಅವನು ಕೃಷ್ಣನನ್ನು ಮಹಾ ಶ್ರದ್ಧೆಯೊಡನೆ ಮತ್ತು ನಿಸ್ಸಂದೇಹವಾಗಿ ಅಂಗೀಕರಿಸುತ್ತಾನೆ, ಮತ್ತು ಅವನು ಭಕ್ತಿಯುತ ಸೇವೆಯಲ್ಲಿ ತೊಡಗುತ್ತಾನೆ. ಭಗವಂತನ ಪ್ರೀತಿಪೂರ್ವಕ ಭಕ್ತಿಯುತ ಸೇವೆಯಲ್ಲಿ ಒಬ್ಬನ ಆಸಕ್ತಿ

ಯನ್ನು ಹೆಚ್ಚಿಸಲು ಈ ಎಲ್ಲ ವಿಶಿಷ್ಟ ಜ್ಞಾನವು ಅಗತ್ಯ. ಕೃಷ್ಣನು ಅದೆಷ್ಟು ದೊಡ್ಡವನು ಎಂದು ಪೂರ್ಣವಾಗಿ ಅರಿಯಲು ಒಬ್ಬನು ಉಪೇಕ್ಷಿಸಕೂಡದು, ಏಕೆಂದರೆ ಕೃಷ್ಣನ ಮಹತ್ವವನ್ನು ತಿಳಿಯುವ ಮೂಲಕ ಒಬ್ಬನು ಪ್ರಾಮಾಣಿಕ ಭಕ್ತಿಯುತ ಸೇವೆಯಲ್ಲಿ ಸ್ಥಿತನಾಗಲು ಶಕ್ತನಾಗುವನು.

**ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ।**
**ಇತಿ ಮತ್ವಾ ಭಜನ್ತೇ ಮಾಂ ಬುಧಾ ಭಾವಸಮನ್ವಿತಾಃ ॥ ೮ ॥**

ಅಹಮ್—ನಾನು, ಸರ್ವಸ್ಯ—ಎಲ್ಲದರ, ಪ್ರಭವಃ—ಉತ್ಪತ್ತಿಯಮೂಲ, ಮತ್ತಃ—ನನ್ನಿಂದ, ಸರ್ವಮ್—ಪ್ರತಿಯೊಂದೂ, ಪ್ರವರ್ತತೇ—ಉದ್ಗಮಿಸುತ್ತದೆ, ಇತಿ—ಹೀಗೆ, ಮತ್ವಾ—ತಿಳಿದು, ಭಜನ್ತೇ—ಭಕ್ತಿಯುತನಾಗು, ಮಾಮ್—ನನ್ನಲ್ಲಿ, ಬುಧಾಃ—ವಿದ್ವಾಂಸರು, ಭಾವಸಮನ್ವಿತಾಃ—ಮಹಾಗಮನದೊಡನೆ.

**ನಾನು ಸಕಲ ಅಧ್ಯಾತ್ಮ ಮತ್ತು ಭೌತಿಕ ಜಗತ್ತುಗಳ ಮೂಲನು. ಪ್ರತಿಯೊಂದೂ ನನ್ನಿಂದ ಉದ್ಗಮಿಸುತ್ತದೆ. ಇದನ್ನು ಪರಿಪೂರ್ಣವಾಗಿ ತಿಳಿದ ವಿವೇಕವುಳ್ಳವರು ನನ್ನ ಭಕ್ತಿಯುತ ಸೇವೆಯಲ್ಲಿ ನಿರತರಾಗುತ್ತಾರೆ ಮತ್ತು ಹೃತ್ಪೂರ್ವಕವಾಗಿ ನನ್ನನ್ನು ಆರಾಧಿಸುತ್ತಾರೆ.**

**ಭಾವಾರ್ಥ :** "ವೇದಗಳನ್ನು ಪರಿಪೂರ್ಣವಾಗಿ ಅಧ್ಯಯನ ಮಾಡಿರುವ ಮತ್ತು ಭಗವಾನ್ ಚೈತನ್ಯರಂಥ ಅಧಿಕಾರಿಗಳಿಂದ ವಿಚಾರವನ್ನು ಪಡೆದಿರುವ ಮತ್ತು ಈ ಉಪದೇಶಗಳನ್ನು ಹೇಗೆ ಅನ್ವಯಿಸಬೇಕು ಎಂಬುದನ್ನು ತಿಳಿದಿರುವ ಮಹಾ ಪಂಡಿತನು, ಭೌತಿಕ ಮತ್ತು ಆಧ್ಯಾತ್ಮಿಕ ಉಭಯ ಜಗತ್ತುಗಳಲ್ಲಿನ ಪ್ರತಿಯೊಂದರ ಮೂಲನು ಕೃಷ್ಣ ಎಂಬುದನ್ನು ಅರಿತುಕೊಳ್ಳಬಲ್ಲನು, ಮತ್ತು ಅವನು ಇದನ್ನು ಪರಿಪೂರ್ಣವಾಗಿ ತಿಳಿದಿರುವುದರಿಂದ, ಅವನು ಪರಮ ಪ್ರಭುವಿನ ಭಕ್ತಿಯುತ ಸೇವೆಯಲ್ಲಿ ದೃಢವಾಗಿ ಸ್ಥಿತನಾಗುವನು. ಅವನು ಎಷ್ಟೇ ಅರ್ಥಹೀನ ವ್ಯಾಖ್ಯಾನಗಳಿಂದಲೂ ಅಥವಾ ಮೂಢರಿಂದಲೂ ಎಂದಿಗೂ ವಿಚಲಿತನಾಗುವುದಿಲ್ಲ. ಬ್ರಹ್ಮ, ಶಿವ ಮತ್ತು ಎಲ್ಲ ಇತರ ದೇವತೆಗಳ ಮೂಲನು ಕೃಷ್ಣ ಎಂದು ಎಲ್ಲ ವೈದಿಕ ಸಾಹಿತ್ಯವು ಒಪ್ಪುತ್ತದೆ. ಅಥರ್ವವೇದದಲ್ಲಿ (ಗೋಪಾಲ ತಾಪನೀ ಉಪನಿಷದ್ 1.24) ಹೀಗೆ ಹೇಳಿದೆ : **ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಗಾಪಯತಿಸ್ಮ ಕೃಷ್ಣಃ**— "ಪ್ರಾರಂಭದಲ್ಲಿ ಬ್ರಹ್ಮನಿಗೆ ವೇದ ಜ್ಞಾನದಲ್ಲಿ ಉಪದೇಶಿಸಿದವನು ಮತ್ತು ಗತಕಾಲದಲ್ಲಿ ವೇದಜ್ಞಾನವನ್ನು ಪ್ರಸಾರ ಮಾಡಿದವನು ಕೃಷ್ಣನೇ. ಮತ್ತೆ ನಾರಾಯಣ ಉಪನಿಷತ್ (1) ಹೇಳುತ್ತದೆ, **ಅಥ ಪುರುಷೋ ಹ ವೈ ನಾರಾಯಣೋಽಕಾಮಯತ ಪ್ರಜಾಃ ಸೃಜೇಯೇತಿ** "ಆಗ ಪರಮ ಪುರುಷ ನಾರಾಯಣನು ಜೀವಿಗಳನ್ನು ಸೃಷ್ಟಿಸಲು ಬಯಸಿದನು." ಉಪನಿಷತ್ತು ಹೀಗೆ ಮುಂದುವರಿಸುತ್ತದೆ, **ನಾರಾಯಣಾದ್ ಬ್ರಹ್ಮಾ ಜಾಯತೇ, ನಾರಾಯಣಾದ್ ಪ್ರಜಾಪತಿಃ ಪ್ರಜಾಯತೇ, ನಾರಾಯಣಾದ್ ಇನ್ದ್ರೋ ಜಾಯತೇ, ನಾರಾಯಣಾದ್ ಅಷ್ಟಾ ವಸವೋ ಜಾಯನ್ತೇ,**

**ನಾರಾಯಣಾದ್ ಏಕಾದಶ ರುದ್ರಾ ಜಾಯನ್ತೇ, ನಾರಾಯಣಾದ್ ದ್ವಾದಶಾದಿತ್ಯಾಃ** —"ನಾರಾಯಣನಿಂದ ಬ್ರಹ್ಮನು ಹುಟ್ಟಿದನು ಮತ್ತು ನಾರಾಯಣನಿಂದ ಪ್ರಜಾಪತಿಗಳು ಕೂಡ ಹುಟ್ಟಿದರು. ನಾರಾಯಣನಿಂದ ಇಂದ್ರನು ಹುಟ್ಟಿದನು. ನಾರಾಯಣನಿಂದ ಅಷ್ಟ ವಸುಗಳು ಹುಟ್ಟಿದರು, ನಾರಾಯಣನಿಂದ ಏಕಾದಶ ರುದ್ರರು ಹುಟ್ಟಿದರು, ನಾರಾಯಣನಿಂದ ದ್ವಾದಶ ಆದಿತ್ಯರು ಹುಟ್ಟಿದರು." ಈ ನಾರಾಯಣನು ಕೃಷ್ಣನ ಒಂದು ವಿಸ್ತರಣೆ.

ಅದೇ ವೇದಗಳಲ್ಲಿ ಹೀಗೆ ಹೇಳಿದೆ, **ಬ್ರಹ್ಮಣ್ಯೋ ದೇವಕೀ ಪುತ್ರಃ**—"ದೇವಕಿ ಪುತ್ರನಾದ ಕೃಷ್ಣನು, ಪರಮ ಪುರುಷನು." (ನಾರಾಯಣ ಉಪನಿಷದ್) ಮತ್ತೆ ಹೀಗೆ ಹೇಳಿದೆ, **ಏಕೋ ವೈ ನಾರಾಯಣ ಆಸೀನ್ ನ ಬ್ರಹ್ಮಾ ನ ಈಶಾನೋ ನಾಪೋ ನಾಗ್ನಿ ಸಮೌ ನೇಮೇ ದ್ಯಾವಾಪೃಥಿವೀ ನ ನಕ್ಷತ್ರಾಣಿ ನ ಸೂರ್ಯಃ**—ಸೃಷ್ಟಿಯ ಪ್ರಾರಂಭದಲ್ಲಿ ಪರಮ ಪುರುಷ ನಾರಾಯಣನು ಮಾತ್ರ ಇದ್ದನು. ಆಗ ಬ್ರಹ್ಮ, ಶಿವ, ಅಗ್ನಿ, ಚಂದ್ರ, ಆಕಾಶದಲ್ಲಿ ನಕ್ಷತ್ರಗಳು, ಸೂರ್ಯನು ಇರಲಿಲ್ಲ," (ಮಹಾ ಉಪನಿಷದ್ 1) ಭಗವಾನ್ ಶಿವನು ಪರಮ ಪ್ರಭುವಿನ ಹಣೆಯಿಂದ ಹುಟ್ಟಿದನೆಂದು ಕೂಡಾ ಮಹಾ ಉಪನಿಷತ್ತಿನಲ್ಲಿ ಹೇಳಿದೆ. ಹೀಗೆ ಬ್ರಹ್ಮ ಮತ್ತು ಶಿವನ ಸೃಷ್ಟಿಕರ್ತನಾದ ಪರಮ ಪ್ರಭುವನ್ನು ಆರಾಧಿಸಬೇಕೆಂದು ವೇದಗಳು ಹೇಳುತ್ತವೆ.

ಮೋಕ್ಷಧರ್ಮದಲ್ಲಿ ಕೃಷ್ಣನು ಕೂಡ ಹೇಳುತ್ತಾನೆ.

ಪ್ರಜಾಪತಿಂ ಚ ರುದ್ರಂ ಚಾಪ್ಯಹಮೇವ ಸೃಜಾಮಿ ವೈ।
ತೌ ಹಿ ಮಾಂ ನ ವಿಜಾನೀತೋ ಮಮ ಮಾಯಾವಿಮೋಹಿತೌ॥

"ಪ್ರಜಾಪತಿಗಳು, ಶಿವ ಮತ್ತು ಇತರರು ನನ್ನಿಂದ ಸೃಷ್ಟರು, ಆದರೆ ಅವರು ನನ್ನಿಂದ ಸೃಷ್ಟರೆಂಬುದು ಅವರಿಗೆ ಗೊತ್ತಿಲ್ಲ ಏಕೆಂದರೆ ಅವರು ನನ್ನ ಮಾಯಾಶಕ್ತಿಯಿಂದ ಭ್ರಮಿತರು." ವರಾಹ ಪುರಾಣದಲ್ಲಿ ಹೀಗೆ ಹೇಳಿದೆ,

ನಾರಾಯಣಃ ಪರೋ ದೇವಸ್ತಸ್ಮಾಜ್ಜಾತಶ್ಚತುರ್ಮುಖಃ
ತಸ್ಮಾದ್ ರುದ್ರೋಽಭವದ್ ದೇವಃ ಸ ಚ ಸರ್ವಜ್ಞತಾಂ ಗತಃ

"ನಾರಾಯಣನು ಪರಮ ದೇವೋತ್ತಮ ಪುರುಷನು, ಮತ್ತು ಅವನಿಂದ ಬ್ರಹ್ಮನು ಹುಟ್ಟಿದನು, ಮತ್ತು ಅವನಿಂದ ಶಿವನು ಹುಟ್ಟಿದನು."

ಶ್ರೀ ಕೃಷ್ಣನು ಸಕಲ ಪೀಳಿಗೆಗಳ ಮೂಲನು, ಮತ್ತು ಅವನು ಪ್ರತಿಯೊಂದರ ಅತ್ಯಂತ ಕಾರ್ಯಸಾಧಕ ಕಾರಣನೆಂದು ಕರೆಯಲ್ಪಟ್ಟಿರುವನು. ಅವನು ಹೇಳುತ್ತಾನೆ, "ಪ್ರತಿಯೊಂದೂ ನನ್ನಿಂದ ಜನಿಸಿರುವ ಕಾರಣ, ನಾನು ಎಲ್ಲದರ ಮೂಲ ಆಕರನು. ಪ್ರತಿಯೊಂದೂ ನನ್ನ ಅಧೀನ; ನನ್ನ ಮೇಲಿನವರು ಯಾರೂ ಇಲ್ಲ." ಕೃಷ್ಣನಲ್ಲದೆ ಪರಮ ನಿಯಂತ್ರಕನು ಇಲ್ಲ. ಈ ರೀತಿಯಲ್ಲಿ ಅಧಿಕೃತ ಗುರುವಿನಿಂದ, ವೇದಸಾಹಿತ್ಯ ಉಲ್ಲೇಖಗಳೊಡನೆ, ಕೃಷ್ಣನನ್ನು ಅರಿತುಕೊಳ್ಳುವವನು, ತನ್ನ ಎಲ್ಲ ಶಕ್ತಿಯನ್ನು ಕೃಷ್ಣಪ್ರಜ್ಞೆಯಲ್ಲಿ ತೊಡಗಿಸುತ್ತಾನೆ ಮತ್ತು ನಿಜವಾದ ವಿದ್ವಾಂಸನಾಗುತ್ತಾನೆ. ಅವನಿಗೆ ಹೋಲಿಸಲಾಗಿ, ಕೃಷ್ಣನನ್ನು ಸರಿಯಾಗಿ ತಿಳಿಯದ ಎಲ್ಲ ಇತರರು ಮೂಢರಲ್ಲದೆ ಮತ್ತೇನೂ ಅಲ್ಲ.

ಮೂಢನು ಮಾತ್ರವೇ ಕೃಷ್ಣನನ್ನು ಸಾಮಾನ್ಯ ಮಾನವನೆಂದು ತಿಳಿಯುತ್ತಾನೆ. ಕೃಷ್ಣ ಪ್ರಜ್ಞೆಯು ಮೂಢರಿಂದ ದಿಗ್ಭ್ರಮಿತನಾಗಕೂಡದು. ಅವನು ಭಗವದ್ಗೀತೆಯ ಎಲ್ಲ ಅನಧಿಕೃತ ವ್ಯಾಖ್ಯಾನಗಳನ್ನು ಮತ್ತು ಅರ್ಥವಿವರಣೆಗಳನ್ನು ತೊರೆಯಬೇಕು ಮತ್ತು ನಿರ್ಧಾರ ಮತ್ತು ದೃಢತೆಯೊಡನೆ ಕೃಷ್ಣಪ್ರಜ್ಞೆಯಲ್ಲಿ ಮುಂದುವರಿಯಬೇಕು.

**ಮಚ್ಚಿತ್ತಾ ಮದ್‌ಗತಪ್ರಾಣಾ ಬೋಧಯನ್ತಃ ಪರಸ್ಪರಮ್ ।**
**ಕಥಯನ್ತಶ್ಚ ಮಾಂ ನಿತ್ಯಂ ತುಷ್ಯನ್ತಿ ಚ ರಮನ್ತಿ ಚ ॥ ೯ ॥**

ಮತ್‌ಚಿತ್ತಾಃ—ಅವರ ಮನಸ್ಸುಗಳು ನನ್ನಲ್ಲಿ ಪೂರ್ಣನಿರತವಾಗಿ, ಮತ್‌ಗತ ಪ್ರಾಣಾಃ—ಅವರ ಜೀವನಗಳು ನನಗೆ ಅರ್ಪಿತವಾಗಿ, ಬೋಧಯನ್ತಃ—ಬೋಧಿಸುತ್ತ, ಪರಸ್ಪರಮ್—ಅವರವರಲ್ಲಿ, ಕಥಯನ್ತಃ—ಮಾತನಾಡುತ್ತ, ಚ—ಸಹ, ಮಾಮ್—ನನ್ನ ಬಗ್ಗೆ, ನಿತ್ಯಮ್—ನಿರಂತರವಾಗಿ, ತುಷ್ಯನ್ತಿ—ತೃಪ್ತರಾಗುವರು, ಚ—ಸಹ, ರಮನ್ತಿ—ದಿವ್ಯಾನಂದವನ್ನು ಉಪಭೋಗಿಸುವರು, ಚ—ಸಹ.

**ನನ್ನ ಶುದ್ಧ ಭಕ್ತರ ಚಿಂತನಗಳು ನನ್ನಲ್ಲಿ ನೆಲಸಿರುತ್ತವೆ, ಅವರ ಜೀವನಗಳು ನನ್ನ ಸೇವೆಗೆ ಪೂರ್ಣ ಅರ್ಪಿತ, ಮತ್ತು ನನ್ನ ಬಗ್ಗೆ ಸದಾ ಪರಸ್ಪರ ಬೋಧಿಸುತ್ತ ಮತ್ತು ಸಂಭಾಷಿಸುತ್ತಾ ಅವರು ಮಹಾ ತೃಪ್ತಿಯನ್ನು ಮತ್ತು ಆನಂದವನ್ನು ಪಡೆಯುವರು.**

**ಭಾವಾರ್ಥ :** "ಇಲ್ಲಿ ಶುದ್ಧ ಭಕ್ತರ ವೈಲಕ್ಷಣಗಳನ್ನು ಉಲ್ಲೇಖಿಸಿದೆ; ಅವರು ಭಗವಂತನ ದಿವ್ಯ ಪ್ರೀತಿಯುತ ಸೇವೆಯಲ್ಲಿ ಪೂರ್ಣವಾಗಿ ನಿರತರಾಗುತ್ತಾರೆ. ಅವರ ಮನಸ್ಸುಗಳನ್ನು ಕೃಷ್ಣನ ಪಾದಕಮಲಗಳಿಂದ ವಿಚಲಿತಗೊಳಿಸಲಾಗದು. ಅವರ ಸಂಭಾಷಣೆಗಳು ದಿವ್ಯ ವಿಷಯಗಳನ್ನು ಕುರಿತು ಮಾತ್ರವೇ. ಶುದ್ಧ ಭಕ್ತರ ಲಕ್ಷಣಗಳನ್ನು ವಿಶೇಷವಾಗಿ ಈ ಶ್ಲೋಕದಲ್ಲಿ ವರ್ಣಿಸಿದೆ. ಪರಮ ಪ್ರಭುವಿನ ಭಕ್ತರು ದಿನದ ಇಪ್ಪತ್ತನಾಲ್ಕು ಗಂಟೆಗಳೂ ಪರಮ ಪ್ರಭುವಿನ ಗುಣಗಳನ್ನು ಮತ್ತು ಲೀಲೆಗಳನ್ನು ಕೀರ್ತಿಸುವುದರಲ್ಲಿ ನಿರತರು. ಅವರ ಮನಸ್ಸುಗಳು ಮತ್ತು ಆತ್ಮಗಳು ಸತತವಾಗಿ ಕೃಷ್ಣನಲ್ಲಿ ಮುಳುಗಿರುತ್ತವೆ ಮತ್ತು ಇತರ ಭಕ್ತರೊಂದಿಗೆ ಅವನನ್ನು ಕುರಿತು ಚರ್ಚಿಸುವುದರಲ್ಲಿ ಅವರು ಆನಂದಿಸುತ್ತಾರೆ.

ಭಕ್ತಿಯುತ ಸೇವೆಯ ಪ್ರಾರಂಭದ ಹಂತದಲ್ಲಿ ಅವರು ಸೇವೆಯಿಂದಲೇ ದಿವ್ಯಾನಂದ ವನ್ನು ಆಸ್ವಾದಿಸುತ್ತಾರೆ, ಮತ್ತು ಪಕ್ವ ದೆಸೆಯಲ್ಲಿ ಅವರು ವಾಸ್ತವಿಕವಾಗಿ ಭಗವತ್ ಪ್ರೇಮದಲ್ಲಿ ಸನ್ನಿವೇಶಿತರಾಗಿರುತ್ತಾರೆ. ಆ ದಿವ್ಯ ಸ್ಥಿತಿಯಲ್ಲಿ ಒಮ್ಮೆ ಸನ್ನಿವೇಶಿತರಾದ ಮೇಲೆ, ಭಗವಂತನು ತನ್ನ ಧಾಮದಲ್ಲಿ ಪ್ರದರ್ಶಿಸುವ ಅತ್ಯುನ್ನತ ಪರಿಪೂರ್ಣತೆಯನ್ನು ಅವರು ಆಸ್ವಾದಿಸಬಲ್ಲರು. ಭಗವಾನ್ ಚೈತನ್ಯರು ದಿವ್ಯ ಭಕ್ತಿಯುತ ಸೇವೆಯನ್ನು ಜೀವಿಯ ಹೃದಯದಲ್ಲಿ ಬೀಜ ಬಿತ್ತುವಿಕೆಗೆ ಹೋಲಿಸುತ್ತಾರೆ. ವಿಶ್ವದ ನಾನಾ ಲೋಕ ಗಳಲ್ಲೆಲ್ಲಾ ಸಂಚರಿಸುತ್ತಿರುವ ಅಸಂಖ್ಯಾತ ಜೀವಿಗಳಿದ್ದಾರೆ, ಮತ್ತು ಅವರ ಪೈಕಿ ಶುದ್ಧ ಭಕ್ತನನ್ನು ಸಂಧಿಸಿ ಮತ್ತು ಭಕ್ತಿಯುತ ಸೇವೆಯನ್ನು ಅರಿತುಕೊಳ್ಳುವ ಅವಕಾಶ ಪಡೆಯುವ ಭಾಗ್ಯಶಾಲಿಗಳು ಅತ್ಯಲ್ಪ ಸಂಖ್ಯಾತರು. ಈ ಭಕ್ತಿಯುತ ಸೇವೆಯು ಬೀಜ

ವಿದ್ದಂತೆ ಮತ್ತು ಅದನ್ನು ಜೀವಿಯು ಹೃದಯದಲ್ಲಿ ಬಿತ್ತಿದರೆ, ಮತ್ತು ಅವನು ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ/ ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ, ಎಂದು ಕೇಳುತ್ತಾ ಮತ್ತು ಜಪಿಸುತ್ತಾ ಹೋದರೆ, ತಪ್ಪದೆ ನೀರೆರೆದರೆ ಮರದ ಬೀಜವು ಹೇಗೆ ಫಲಿಸುವುದೋ ಹಾಗೆ, ಆ ಬೀಜವು ಫಲಿಸುತ್ತದೆ. ಭಕ್ತಿಯುತ ಸೇವೆಯ ಅಧ್ಯಾತ್ಮ ಗಿಡವು ಕ್ರಮೇಣ ಬೆಳೆಯುತ್ತದೆ ಮತ್ತು ಭೌತಿಕ ವಿಶ್ವದ ಆವರಣವನ್ನು ಭೇದಿಸಿಕೊಂಡು ಹೋಗುವವರೆಗೆ ಬೆಳೆಯುತ್ತದೆ ಮತ್ತು ಪರವ್ಯೋಮದಲ್ಲಿನ ಬ್ರಹ್ಮಜ್ಯೋತಿ ಪ್ರಕಾಶವನ್ನು ಪ್ರವೇಶಿಸುತ್ತದೆ. ಪರವ್ಯೋಮದಲ್ಲಿಯೂ ಕೂಡ ಗೋಲೋಕ ವೃಂದಾವನವೆಂದು ಕರೆಯಲ್ಪಡುವ ಕೃಷ್ಣನ ಪರಮ ಲೋಕವಾದ ಅತ್ಯುನ್ನತ ಲೋಕವನ್ನು ಸೇರುವವರೆಗೆ ಆ ಗಿಡವು ಹೆಚ್ಚು ಹೆಚ್ಚು ಬೆಳೆಯುತ್ತಾ ಹೋಗುತ್ತದೆ. ಅಂತಿಮವಾಗಿ, ಆ ಗಿಡವು ಕೃಷ್ಣನ ಪಾದಕಮಲದಲ್ಲಿ ಆಶ್ರಯವನ್ನು ತೆಗೆದುಕೊಳ್ಳುತ್ತದೆ ಮತ್ತು ಅಲ್ಲಿ ವಿರಮಿಸುತ್ತದೆ. ಕ್ರಮೇಣ ಗಿಡದಲ್ಲಿ ಹಣ್ಣುಗಳು ಮತ್ತು ಹೂವುಗಳು ಬೆಳೆಯುವಂತೆ, ಆ ಭಕ್ತಿಯುತ ಸೇವೆಯ ಗಿಡವೂ ಕೂಡ ಫಲಗಳನ್ನು ನೀಡುತ್ತದೆ, ಮತ್ತು ಶ್ರವಣ ಮತ್ತು ಕೀರ್ತನ ರೂಪದಲ್ಲಿನ ನೀರೆರೆಯುವ ಪ್ರಕ್ರಿಯೆಯು ಮುಂದುವರಿಯುತ್ತದೆ. ಭಕ್ತಿಯುತ ಸೇವೆಯ ಈ ಗಿಡವನ್ನು ಚೈತನ್ಯ ಚರಿತಾಮೃತದಲ್ಲಿ (ಮಧ್ಯ-ಲೀಲಾ ಅಧ್ಯಾಯ 19) ಸಂಪೂರ್ಣವಾಗಿ ವಿವರಿಸಿದೆ. ಪೂರ್ಣ ಗಿಡವು ಪರಮ ಪ್ರಭುವಿನ ಚರಣಾರವಿಂದಗಳಲ್ಲಿ ಆಶ್ರಯವನ್ನು ತೆಗೆದುಕೊಂಡಾಗ, ಒಬ್ಬನು ಭಗವಂತನ ಪ್ರೇಮದಲ್ಲಿ ತಲ್ಲೀನನಾಗುತ್ತಾನೆ ಎಂದು ಇಲ್ಲಿ ವಿವರಿಸಿದೆ; ನಂತರ ನೀರಿಲ್ಲದೆ ಮೀನು ಜೀವಿಸಲಾಗದಂತೆ, ಪರಮ ಪ್ರಭುವಿನ ಸಂಪರ್ಕವಿಲ್ಲದೆ ಅವನು ಕ್ಷಣಕಾಲವೂ ಕೂಡ ಜೀವಿಸಲಾರನು. ಅಂಥ ಸ್ಥಿತಿಯಲ್ಲಿ, ಪರಮಪ್ರಭುವಿನೊಡನೆ ಸಂಪರ್ಕದಲ್ಲಿ ಭಕ್ತನು ವಾಸ್ತವಿಕವಾಗಿ ದಿವ್ಯ ಗುಣಗಳನ್ನು ಪಡೆಯುತ್ತಾನೆ.

ಶ್ರೀಮದ್ ಭಾಗವತವು ಸಹ ಪರಮ ಪ್ರಭು ಮತ್ತು ಅವನ ಭಕ್ತರ ನಡುವಿನ ಸಂಬಂಧವನ್ನು ಕುರಿತು ಅಂಥ ನಿರೂಪಣೆಗಳಿಂದ ತುಂಬಿದೆ; ಆದ್ದರಿಂದ ಭಾಗವತದಲ್ಲಿಯೇ ಹೇಳಿರುವಂತೆ (12.13.18), ಭಕ್ತರಿಗೆ ಶ್ರೀಮದ್ ಭಾಗವತವು ಬಹು ಪ್ರಿಯವಾಗಿದೆ. **ಶ್ರೀಮದ್ ಭಾಗವತಂ ಪುರಾಣಮ್ ಅಮಲಂ ಯದ್ ವೈಷ್ಣವಾನಾಂ ಪ್ರಿಯಮ್.** ಈ ನಿರೂಪಣೆಯಲ್ಲಿ ಭೌತಿಕ ಚಟುವಟಿಕೆಗಳು, ಆರ್ಥಿಕ ಅಭಿವೃದ್ಧಿ, ಇಂದ್ರಿಯಗಳ ತೃಪ್ತಿಪಡಿಸುವಿಕೆ ಅಥವಾ ಮುಕ್ತಿಯನ್ನು ಕುರಿತು ಏನೂ ಇರುವುದಿಲ್ಲ. ಪರಮ ಪ್ರಭುವಿನ ಮತ್ತು ಅವನ ಭಕ್ತರ ದಿವ್ಯಸ್ವಭಾವವನ್ನು ಪೂರ್ಣವಾಗಿ ವರ್ಣಿಸಿರುವ ನಿರೂಪಣೆ ಎಂದರೆ ಶ್ರೀಮದ್ ಭಾಗವತವು ಮಾತ್ರವೇ. ಪ್ರಾಯದ ಹುಡುಗನು ಮತ್ತು ಹುಡುಗಿಯು ಸಹವಾಸದಲ್ಲಿ ಆನಂದಿಸುವಂತೆ, ಕೃಷ್ಣಪ್ರಜ್ಞೆಯಲ್ಲಿನ ಸಾಕ್ಷಾತ್ಕೃತ ಆತ್ಮರು ಅಂಥ ದಿವ್ಯ ಸಾಹಿತ್ಯ ಶ್ರವಣದಲ್ಲಿ ನಿರಂತರ ಆನಂದವನ್ನು ಪಡೆಯುತ್ತಾರೆ.

**ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ ।**
**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾನ್ತಿ ತೇ ॥ ೧೦ ॥**

ತೇಷಾಮ್—ಅವರಿಗೆ, ಸತತಯುಕ್ತಾನಾಮ್—ಸತತ ನಿರತರಾಗಿ, ಭಜತಾಮ್—ಭಕ್ತಿಯುತ ಸೇವೆಯನ್ನು ಸಲ್ಲಿಸುವುದರಲ್ಲಿ, ಪ್ರೀತಿಪೂರ್ವಕಮ್—ಪ್ರೇಮ ಭಾವೋದ್ರೇಕದಲ್ಲಿ, ದದಾಮಿ—ನಾನು ನೀಡುತ್ತೇನೆ, ಬುದ್ಧಿಯೋಗಮ್—ನಿಜ ಬುದ್ಧಿ, ತಮ್—ಆ, ಯೇನ—ಯಾವುದರಿಂದ, ಮಾಮ್—ನನ್ನಲ್ಲಿಗೆ, ಯಾನ್ತಿ—ಬರುವರು, ತೇ—ಅವರು.

**ನನ್ನನ್ನು ಪ್ರೀತಿಯಿಂದ ಸೇವಿಸಲು ಸತತವಾಗಿ ಅರ್ಪಿತರಾದವರಿಗೆ; ಅವರು ನನ್ನಲ್ಲಿಗೆ ಬರುವಂಥ ಅರಿವನ್ನು ನಾನು ನೀಡುತ್ತೇನೆ.**

**ಭಾವಾರ್ಥ :** "ಈ ಶ್ಲೋಕದಲ್ಲಿ **ಬುದ್ಧಿಯೋಗಮ್** ಬಹು ಮಹತ್ವದ ಪದ. ಎರಡನೆಯ ಅಧ್ಯಾಯದಲ್ಲಿ ಭಗವಂತನು ಅರ್ಜುನನಿಗೆ ಉಪದೇಶಿಸುತ್ತಾ, ತಾನು ಅವನಿಗೆ ಅನೇಕ ವಿಷಯಗಳನ್ನು ಹೇಳಿರುವುದಾಗಿಯೂ ಮತ್ತು ತಾನು ಅವನಿಗೆ **ಬುದ್ಧಿಯೋಗದ** ಮಾರ್ಗದಲ್ಲಿ ಉಪದೇಶಿಸುವೆನೆಂದೂ ಹೇಳಿದುದನ್ನು ನಾವು ಜ್ಞಾಪಿಸಿಕೊಳ್ಳಬಹುದು. ಈಗ **ಬುದ್ಧಿಯೋಗವು** ವಿವರಿಸಲ್ಪಡುತ್ತದೆ. ಕೃಷ್ಣಪ್ರಜ್ಞೆಯಲ್ಲಿನ ಕಾರ್ಯವೇ **ಬುದ್ಧಿಯೋಗ;** ಅದು ಅತ್ಯುನ್ನತ ಬುದ್ಧಿವಂತಿಕೆ. **ಬುದ್ಧಿ** ಎಂದರೆ ಬುದ್ಧಿವಂತಿಕೆ, ಮತ್ತು **ಯೋಗ** ಎಂದರೆ ಆಧ್ಯಾತ್ಮಿಕ ಚಟುವಟಿಕೆಗಳು ಅಥವಾ ಆಧ್ಯಾತ್ಮಿಕ ಔನ್ನತ್ಯ. ಒಬ್ಬನು ಪರಂಧಾಮಕ್ಕೆ ಹಿಂದಿರುಗಲು ಯತ್ನಿಸುವಾಗ, ಮತ್ತು ಭಕ್ತಿಯುತ ಸೇವೆಯಲ್ಲಿ ಪೂರ್ಣನಾಗಿ ಕೃಷ್ಣಪ್ರಜ್ಞೆಯನ್ನು ಸ್ವೀಕರಿಸಿದಾಗ, ಅವನ ಕಾರ್ಯವು **ಬುದ್ಧಿಯೋಗ** ಎಂದು ಕರೆಯಲ್ಪಡುತ್ತದೆ. ಅರ್ಥಾತ್, ಈ ಭೌತಿಕ ಜಗತ್ತಿನ ತೊಡಕಿನಿಂದ ಒಬ್ಬನು ಪಾರಾಗುವ ಪ್ರಕ್ರಿಯೆಯೇ **ಬುದ್ಧಿಯೋಗ.** ಪ್ರಗತಿಯ ಅಂತಿಮ ಗುರಿಯು ಕೃಷ್ಣ. ಜನರಿಗೆ ಇದು ಗೊತ್ತಿಲ್ಲ; ಆದ್ದರಿಂದ ಭಕ್ತರ ಮತ್ತು ಅಧಿಕೃತ ಗುರುವಿನ ಸಹವಾಸವು ಬಹು ಮುಖ್ಯ. ಕೃಷ್ಣನು ಧ್ಯೇಯ ಎಂಬುದನ್ನು ಒಬ್ಬನು ತಿಳಿಯಬೇಕು ಮತ್ತು ಧ್ಯೇಯವು ನಿಶ್ಚಯವಾದ ಮೇಲೆ ಪಥವು ನಿಧಾನವಾಗಿ ಆದರೆ ಪ್ರಗತಿಶೀಲವಾಗಿ ಕ್ರಮಿಸಲ್ಪಡುತ್ತದೆ ಮತ್ತು ಅಂತಿಮ ಗುರಿಯು ಸಾಧಿಸಲ್ಪಡುತ್ತದೆ.

ಒಬ್ಬ ವ್ಯಕ್ತಿಯು ಜೀವನದ ಗುರಿ ಏನೆಂದು ತಿಳಿದಿದ್ದು, ಆದರೆ ಅವನು ಕರ್ಮಫಲಗಳಿಗೆ ಆಸಕ್ತನಾಗಿದ್ದಲ್ಲಿ, ಅವನು **ಕರ್ಮಯೋಗ**ದಲ್ಲಿ ವರ್ತಿಸುತ್ತಿರುತ್ತಾನೆ. ಗುರಿಯು ಕೃಷ್ಣನೆಂದು ತಿಳಿದು, ಆದರೆ ಕೃಷ್ಣನನ್ನು ಅರಿತುಕೊಳ್ಳಲು ಮಾನಸಿಕ ಊಹಾಪೋಹಗಳಲ್ಲಿ ಆನಂದಿಸುತ್ತಿದ್ದರೆ, ಅವನು **ಜ್ಞಾನಯೋಗ**ದಲ್ಲಿ ವರ್ತಿಸುತ್ತಿರುತ್ತಾನೆ. ಅವನಿಗೆ ಗುರಿಯು ಗೊತ್ತಿದ್ದು, ಸಂಪೂರ್ಣವಾಗಿ ಕೃಷ್ಣಪ್ರಜ್ಞೆಯಲ್ಲಿ ಮತ್ತು ಭಕ್ತಿಯುತ ಸೇವೆಯಲ್ಲಿ ಕೃಷ್ಣನನ್ನೇ ಅರಸುತ್ತಿದ್ದರೆ ಅವನು ಸಂಪೂರ್ಣ ಯೋಗವಾದ, **ಭಕ್ತಿಯೋಗ** ಅಥವಾ **ಬುದ್ಧಿಯೋಗ**ದಲ್ಲಿ ವರ್ತಿಸುತ್ತಿರುತ್ತಾನೆ. ಈ ಸಂಪೂರ್ಣ ಯೋಗವು ಜೀವನದ ಅತ್ಯುನ್ನತ ಪರಿಪೂರ್ಣತೆಯ ಹಂತ.

ಒಬ್ಬ ವ್ಯಕ್ತಿಗೆ ಅಧಿಕೃತ ಗುರುಗಳಿರಬಹುದು ಮತ್ತು ಒಂದು ಅಧ್ಯಾತ್ಮ ಸಂಸ್ಥೆಗೆ ಅವನು ಸೇರಿರಬಹುದು. ಆದರೂ, ಪ್ರಗತಿ ಸಾಧಿಸುವಲ್ಲಿ ಅವನು ಸಾಕಷ್ಟು ಬುದ್ಧಿವಂತನಲ್ಲದಿದ್ದರೆ, ತೊಂದರೆ ಇಲ್ಲದೆ ಅವನು ಅಂತಿಮವಾಗಿ ಕೃಷ್ಣನಲ್ಲಿಗೆ ಬರುವಂತೆ ಕೃಷ್ಣನು

ಒಳಗಿನಿಂದಲೇ ಅವನಿಗೆ ಉಪದೇಶ ನೀಡುತ್ತಾನೆ. ಇರಬೇಕಾದ ಅರ್ಹತೆ ಎಂದರೆ, ಒಬ್ಬನು ಸದಾ ಕೃಷ್ಣಪ್ರಜ್ಞೆಯಲ್ಲಿ ನಿರತನಾಗಿರಬೇಕು ಮತ್ತು ಪ್ರೇಮ ಮತ್ತು ಭಕ್ತಿಯಿಂದ ಎಲ್ಲ ಬಗೆಯ ಸೇವೆಗಳನ್ನು ಸಲ್ಲಿಸುತ್ತಿರಬೇಕು. ಅವನು ಕೃಷ್ಣನಿಗಾಗಿ ಯಾವುದಾದರೊಂದು ಬಗೆಯ ಕಾರ್ಯಮಾಡಬೇಕು ಮತ್ತು ಆ ಕಾರ್ಯವನ್ನು ಪ್ರೇಮದಿಂದ ಮಾಡಬೇಕು. ಒಬ್ಬ ಭಕ್ತನು ಆತ್ಮ ಸಾಕ್ಷಾತ್ಕಾರ ಪಥದಲ್ಲಿ ಪ್ರಗತಿ ಸಾಧಿಸಲು ಸಾಕಷ್ಟು ಬುದ್ಧಿವಂತನಲ್ಲ ದಿದ್ದಲ್ಲಿ, ಆದರೆ ಭಕ್ತಿಯುತ ಸೇವಾ ಚಟುವಟಿಕೆಗಳ ಪ್ರಾಮಾಣಿಕನು ಮತ್ತು ಅರ್ಪಿತನೂ ಆಗಿದ್ದರೆ, ಅವನು ಪ್ರಗತಿಸಲು ಮತ್ತು ಅಂತಿಮವಾಗಿ ಕೃಷ್ಣನನ್ನು ತಲುಪಲು ಭಗ ವಂತನು ಅವನಿಗೆ ಅವಕಾಶನೀಡುತ್ತಾನೆ.

**ತೇಷಾಮೇವಾನುಕಮ್ಪಾರ್ಥಮಹಮಜ್ಞಾನಜಂ ತಮಃ ।**
**ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥ ೧೧ ॥**

ತೇಷಾಮ್—ಅವರಿಗಾಗಿ, ಏವ—ಖಂಡಿತವಾಗಿ, ಅನುಕಮ್ಪಾರ್ಥಮ್—ವಿಶೇಷ ದಯೆ ತೋರಲು, ಅಹಮ್—ನಾನು, ಅಜ್ಞಾನ-ಜಮ್—ಅಜ್ಞಾನ ನಿಮಿತ್ತ, ತಮಃ— ಕತ್ತಲೆ, ನಾಶಯಾಮಿ—ಹೋಗಲಾಡಿಸುತ್ತೇನೆ, ಆತ್ಮಭಾವ—ಅವರ ಹೃದಯಗಳಲ್ಲಿ, ಸ್ಥಃ—ಸನ್ನಿವೇಶಿತನಾಗಿ, ಜ್ಞಾನ—ಜ್ಞಾನದ, ದೀಪೇನ—ದೀಪದಿಂದ, ಭಾಸ್ವತಾ— ಪ್ರಕಾಶಿಸುತ್ತಾ,

**ಅವರಿಗೆ ವಿಶೇಷ ಅನುಗ್ರಹ ತೋರಲು, ನಾನು, ಅವರ ಹೃದಯಗಳಲ್ಲಿ ಇದ್ದು, ಪ್ರಕಾಶಿಸುವ ಜ್ಞಾನ ದೀಪದಿಂದ ಅಜ್ಞಾನ ಜನ್ಯ ಕತ್ತಲೆಯನ್ನು ನಾಶ ಮಾಡುತ್ತೇನೆ.**

**ಭಾವಾರ್ಥ:** ಭಗವಾನ್ ಚೈತನ್ಯರು ವಾರಣಾಸಿಯಲ್ಲಿ ಹರೇ ಕೃಷ್ಣ, ಹರೇ ಕೃಷ್ಣ. ಕೃಷ್ಣ ಕೃಷ , ಹರೇ ಹರೇ/ ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ ಎಂಬ ಕೀರ್ತನೆಯನ್ನು ಪ್ರಚಾರ ಮಾಡುತ್ತಿದ್ದಾಗ, ಸಾವಿರಾರು ಜನ ಅವರನ್ನು ಹಿಂಬಾಲಿಸು ತ್ತಿದ್ದರು. ಆ ಕಾಲದಲ್ಲಿ, ವಾರಣಾಸಿಯಲ್ಲಿ ಬಹು ಪ್ರಭಾವಿ ಮತ್ತು ಪಾಂಡಿತ್ಯವುಳ್ಳ ವಿದ್ವಾಂಸರಾಗಿದ್ದ ಪ್ರಕಾಶಾನಂದ ಸರಸ್ವತಿಯವರು ಚೈತನ್ಯರನ್ನು ಭಾವುಕರೆಂದು ಅಪ ಹಾಸ್ಯ ಮಾಡಿದರು. ಕೆಲವು ಸಲ ತತ್ವಜ್ಞಾನಿಗಳು ಭಕ್ತರನ್ನು ಟೀಕಿಸುತ್ತಾರೆ, ಏಕೆಂದರೆ ಬಹುತೇಕ ಭಕ್ತರು ಅಜ್ಞಾನದ ಅಂಧಕಾರದಲ್ಲಿರುತ್ತಾರೆ, ಮತ್ತು ಅವರು ತಾತ್ವಿಕವಾಗಿ ನಿಷ್ಕಪಟ ಭಾವುಕರಾಗಿರುತ್ತಾರೆ ಎಂದು ಅವರು ಭಾವಿಸುತ್ತಾರೆ. ಅದು ಸತ್ಯವಲ್ಲ. ಭಕ್ತಿ ತತ್ವವನ್ನು ಪ್ರತಿಪಾದಿಸಿದ ಬಹು ಪಾಂಡಿತ್ಯವುಳ್ಳ ಪಂಡಿತರಿದ್ದಾರೆ. ಆದರೆ ಒಬ್ಬ ಭಕ್ತನು ಅವರ ಸಾಹಿತ್ಯಗಳ ಅಥವಾ ತನ್ನ ಗುರುಗಳ ಪ್ರಯೋಜನ ಪಡೆದುಕೊಳ್ಳದಿದ್ದರೂ ಕೂಡ, ಅವನು ತನ್ನ ಭಕ್ತಿಯುತ ಸೇವೆಯಲ್ಲಿ ಪ್ರಾಮಾಣಿಕನಾಗಿದ್ದಲ್ಲಿ, ಅವನು ತನ್ನ ಹೃದಯದ ಒಳಗಿನಿಂದ ಕೃಷ್ಣನಿಂದಲೇ ಸಹಾಯ ಮಾಡಲ್ಪಡುತ್ತಾನೆ. ಹಾಗೆ ಕೃಷ್ಣ ಪ್ರಜ್ಞೆಯಲ್ಲಿ ನಿರತನಾದ ಪ್ರಾಮಾಣಿಕ ಭಕ್ತನು ಜ್ಞಾನರಹಿತನಾಗುವುದಿಲ್ಲ. ಇರಬೇಕಾದ ಏಕೈಕ ಅರ್ಹತೆಯು ಒಬ್ಬನು ಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಭಕ್ತಿಯುತ ಸೇವೆಯನ್ನು ನಿರ್ವಹಿಸುವುದಾಗಿರುತ್ತದೆ.

ವಿವೇಚನೆ ಮಾಡದೆ ಒಬ್ಬನು ಶುದ್ಧ ಜ್ಞಾನವನ್ನು ಹೊಂದಲಾರನು ಎಂದು ಆಧುನಿಕ ತಾತ್ತ್ವಿಕರು ತಿಳಿಯುತ್ತಾರೆ, ಅವರಿಗಾಗಿ ಈ ಉತ್ತರವು ಪರಮ ಪ್ರಭುವಿನಿಂದ ನೀಡಲ್ಪಟ್ಟಿದೆ. ಶುದ್ಧ ಭಕ್ತಿಯುತ ಸೇವೆಯಲ್ಲಿ ನಿರತರಾದವರು, ಸಾಕಷ್ಟು ಶಿಕ್ಷಣ ಹೊಂದದೇ ಇದ್ದರೂ ಮತ್ತು ವೈದಿಕ ತತ್ತ್ವಗಳಲ್ಲಿ ಸಾಕಷ್ಟು ಜ್ಞಾನರಹಿತರಾಗಿದ್ದರೂ ಕೂಡ, ಈ ಶ್ಲೋಕದಲ್ಲಿ ಹೇಳಿರುವಂತೆ ಪರಮ ದೇವನಿಂದ ಸಹಾಯ ಮಾಡಲ್ಪಡುತ್ತಾರೆ. ಕೇವಲ ಊಹಾಪೋಹಗಳಿಂದಲೇ ಪರಮ,ಪರಮೋನ್ನತ, ಪರತಮ ತತ್ತ್ವವನ್ನು, ಪರಮ ದೇವೋತ್ತಮ ಪುರುಷನನ್ನು ಅರಿಯುವ ಸಾಧ್ಯತೆಯು ಮೂಲತಃ ಇಲ್ಲ. ಏಕೆಂದರೆ ಪರಮೋನ್ನತ ತತ್ತ್ವವು ಅದೆಷ್ಟು ಮಹತ್ತಾಗಿರುವುದೆಂದರೆ, ಅವನನ್ನು ಅರಿಯಲು ಅಥವಾ ಅವನನ್ನು ಸೇರಲು ಕೇವಲ ಮಾನಸಿಕ ಪ್ರಯತ್ನ ಮಾಡುವುದರಿಂದ ಸಾಧ್ಯವಿಲ್ಲ ಎಂದು ಭಗವಂತನು ಅರ್ಜುನನಿಗೆ ಹೇಳುತ್ತಾನೆ. ಮನುಷ್ಯನು ಲಕ್ಷಾಂತರ ವರ್ಷಗಳವರೆಗೆ ಊಹಾಪೋಹ ಮಾಡುತ್ತ ಹೋಗಬಹುದು. ಅವನು ಭಕ್ತನಲ್ಲದಿದ್ದಲ್ಲಿ, ಅವನು ಪರಮೋನ್ನತ ತತ್ತ್ವದ ಪ್ರೇಮಿಯಲ್ಲದಿದ್ದಲ್ಲಿ, ಎಂದಿಗೂ ಪರಮೋನ್ನತ ತತ್ತ್ವವನ್ನು ಅರಿತುಕೊಳ್ಳಲಾರನು. ಭಕ್ತಿಯುತ ಸೇವೆಯಿಂದ ಮಾತ್ರವೇ ಪರಮೋನ್ನತ ತತ್ತ್ವವಾದ ಕೃಷ್ಣನು ಪ್ರೀತನಾಗುವನು ಮತ್ತು ಅವನ ಅಚಿಂತ್ಯ ಶಕ್ತಿಯಿಂದ ತನ್ನನ್ನು ಶುದ್ಧ ಭಕ್ತನ ಹೃದಯದಲ್ಲಿ ಪ್ರಕಾಶಪಡಿಸಿಕೊಳ್ಳುತ್ತಾನೆ. ಶುದ್ಧ ಭಕ್ತನು ತನ್ನ ಹೃದಯದಲ್ಲಿ ಕೃಷ್ಣನನ್ನು ಸದಾ ಹೊಂದಿರುತ್ತಾನೆ ಮತ್ತು ಸೂರ್ಯ ಸದೃಶನಾದ ಕೃಷ್ಣನ ಸಾನ್ನಿಧ್ಯ ದಿಂದ, ಅಜ್ಞಾನದ ಅಂಧಕಾರವು ಕೂಡಲೇ ನಾಶವಾಗುತ್ತದೆ. ಇದು ಶುದ್ಧ ಭಕ್ತನಿಗೆ ಕೃಷ್ಣನು ತೋರುವ ವಿಶೇಷ ಅನುಗ್ರಹ.

ಅನೇಕ ಲಕ್ಷೋಪಲಕ್ಷ ಜನ್ಮಗಳ ಮೂಲಕದ ಭೌತಿಕ ಸಂಗ ಕಲುಷತೆಯ ನಿಮಿತ್ತ ಒಬ್ಬನ ಹೃದಯವು ಭೌತಿಕತೆಯ ಧೂಳಿನಿಂದ ಸದಾ ಆವೃತವಾಗಿರುತ್ತದೆ, ಆದರೆ ಒಬ್ಬನು ಭಕ್ತಿಯುತ ಸೇವೆಯಲ್ಲಿ ನಿರತನಾದಾಗ ಮತ್ತು ಸತತವಾಗಿ ಹರೇ ಕೃಷ್ಣ ಜಪ ಮಾಡಿದಾಗ ಆ ಧೂಳು ಶೀಘ್ರವೇ ನಿವಾರಿತವಾಗುತ್ತದೆ, ಮತ್ತು ಒಬ್ಬನು ಶುದ್ಧ ಜ್ಞಾನದ ವೇದಿಕೆಗೆ ಉನ್ನತಿಸಲ್ಪಡುತ್ತಾನೆ. ಅಂತಿಮ ಗುರಿಯಾದ ವಿಷ್ಣುವನ್ನು, ಈ ಜಪ ಮತ್ತು ಭಕ್ತಿಯುತ ಸೇವೆಯಿಂದ ಮಾತ್ರ ಹೊಂದಬಹುದು, ಮಾನಸಿಕ ಊಹಾ ಪೋಹ ಅಥವಾ ತರ್ಕದಿಂದ ಅಲ್ಲ. ಶುದ್ಧ ಭಕ್ತನು ಜೀವನದ ಭೌತಿಕ ಅವಶ್ಯಕತೆಗಳಿಗಾಗಿ ಚಿಂತಿಸಬೇಕಾಗಿಲ್ಲ; ಅವನು ಕಾತರಪಡಬೇಕಾಗಿಲ್ಲ. ಏಕೆಂದರೆ ಅವನು ತನ್ನ ಹೃದಯದಿಂದ ಕತ್ತಲೆಯನ್ನು ನಿವಾರಿಸಿಕೊಂಡಾಗ, ಭಕ್ತನ ಪ್ರೀತಿಪೂರ್ವಕ ಭಕ್ತಿಯುತ ಸೇವೆಯಿಂದ ಪ್ರೀತನಾದ ಪರಮ ಪ್ರಭುವಿನಿಂದ ಪ್ರತಿಯೊಂದೂ ತಾನಾಗಿಯೇ ಒದಗಿಸಲ್ಪಡುತ್ತದೆ. ಇದು ಭಗವದ್ಗೀತಾ ಬೋಧನೆಗಳ ಸಾರಾಂಶ. ಭಗವದ್ಗೀತೆಯ ಅಧ್ಯಯನದಿಂದ, ಒಬ್ಬನು ಭಗವಂತನಿಗೆ ಸಂಪೂರ್ಣವಾಗಿ ಶರಣಾಗತನಾದ ಆತ್ಮನಾಗಬಹುದು ಮತ್ತು ತನ್ನನ್ನು ಶುದ್ಧ ಭಕ್ತಿಯುತ ಸೇವೆಯಲ್ಲಿ ತೊಡಗಿಸಿಕೊಳ್ಳಬಹುದು. ಭಗವಂತನು ಹೊಣೆವಹಿಸಿಕೊಂಡಾಗ, ಒಬ್ಬನು ಎಲ್ಲ ವಿಧವಾದ ಭೌತಿಕ ಪ್ರಯತ್ನಗಳಿಂದ ಸಂಪೂರ್ಣ ವಾಗಿ ಮುಕ್ತನಾಗುತ್ತಾನೆ.

**ಅರ್ಜುನ ಉವಾಚ**

**ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್ ।**
**ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂ ವಿಭುಮ್ ॥ ೧೨ ॥**
**ಆಹುಸ್ತ್ವಾಮೃಷಯಃ ಸರ್ವೇ ದೇವರ್ಷಿರ್ನಾರದಸ್ತಥಾ ।**
**ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ ॥ ೧೩ ॥**

ಅರ್ಜುನಃ ಉವಾಚ—ಅರ್ಜುನನು ನುಡಿದನು, ಪರಮ್—ಪರಮ, ಬ್ರಹ್ಮ—ತತ್ವ, ಪರಮ್—ಪರಮ, ಧಾಮ—ಧಾರಕ, ಪವಿತ್ರಮ್—ಶುದ್ಧ, ಪರಮಮ್—ಪರಮೋನ್ನತನು, ಭವಾನ್—ನೀನು, ಪುರುಷಮ್—ಪುರುಷ, ಶಾಶ್ವತಮ್—ಮೂಲ, ದಿವ್ಯಮ್—ದಿವ್ಯ, ಆದಿ-ದೇವಮ್—ಆದಿ ಪ್ರಭು, ಅಜಮ್—ಜನ್ಮರಹಿತನು, ವಿಭುಮ್—ಮಹತ್ತಮನು, ಆಹುಃ—ಹೇಳುವರು, ತ್ವಾಮ್—ನಿನ್ನನ್ನು, ಋಷಯಃ—ಋಷಿಗಳು, ಸರ್ವೇ—ಎಲ್ಲ, ದೇವ-ಋಷಿಃ—ದೇವ ಋಷಿ, ನಾರದಃ—ನಾರದ, ತಥಾ—ಕೂಡ, ಅಸಿತಃ—ಅಸಿತ, ದೇವಲಃ—ದೇವಲ, ವ್ಯಾಸಃ—ವ್ಯಾಸ, ಸ್ವಯಮ್—ಸ್ವತಃ, ಚ—ಸಹ, ಏವ—ಖಂಡಿತವಾಗಿ, ಬ್ರವೀಷಿ—ನೀನು ವಿವರಿಸುತ್ತಿರುವೆ, ಮೇ—ನನಗೆ.

**ಅರ್ಜುನನು ನುಡಿದನು : ನೀನು ಪರಮ ದೇವೋತ್ತಮ ಪುರುಷನು, ಅಂತಿಮ ಧಾಮನು, ಶುದ್ಧತಮನು, ಪರತತ್ವನು. ನೀನು ಶಾಶ್ವತನು, ದಿವ್ಯನು, ಆದಿ ಪುರುಷನು, ಜನ್ಮರಹಿತನು, ಮಹತ್ತಮನು. ನಾರದ, ಅಸಿತ, ದೇವಲ ಮತ್ತು ವ್ಯಾಸರಂಥ ಮಹರ್ಷಿಗಳು ನಿನ್ನ ಬಗ್ಗೆ ಈ ಸತ್ಯವನ್ನು ದೃಢಪಡಿಸಿರುವರು, ಮತ್ತು ಈಗ ಸ್ವಯಂ ನೀನೇ ಅದನ್ನು ನನಗೆ ತಿಳಿಯಪಡಿಸುತ್ತಿರುವೆ.**

**ಭಾವಾರ್ಥ :** ಈ ಎರಡು ಶ್ಲೋಕಗಳಲ್ಲಿ ಪರಮ ಪ್ರಭು ಆಧುನಿಕ ತತ್ವಜ್ಞಾನಿಗೆ ಒಂದು ಅವಕಾಶ ನೀಡುತ್ತಾನೆ, ಏಕೆಂದರೆ ಇಲ್ಲಿ ಪರಮನು ವ್ಯಕ್ತಿಗತ ಆತ್ಮನಿಂದ ಭಿನ್ನನು ಎಂದು ಸ್ಪಷ್ಟವಾಗಿದೆ. ಭಗವದ್ಗೀತೆಯ ಈ ಅಧ್ಯಾಯದಲ್ಲಿ ಭಗವದ್ಗೀತೆಯ ಸಾರಭೂತವಾದ ನಾಲ್ಕು ಶ್ಲೋಕಗಳನ್ನು ಶ್ರವಣ ಮಾಡಿದ ತರುವಾಯ, ಅರ್ಜುನನು ಸಕಲ ಸಂದೇಹಗಳಿಂದ ಸಂಪೂರ್ಣವಾಗಿ ಮುಕ್ತನಾದನು ಮತ್ತು ಕೃಷ್ಣನನ್ನು ಪರಮ ದೇವೋತ್ತಮ ಪುರುಷನೆಂದು ಅಂಗೀಕರಿಸಿದನು: ಅವನು ಕೂಡಲೇ, "ನೀನು ಪರಂ ಬ್ರಹ್ಮ, ಪರಮ ದೇವೋತ್ತಮ ಪುರುಷ", ಎಂದು ಧೈರ್ಯವಾಗಿ ಘೋಷಿಸುತ್ತಾನೆ. ತಾನು ಪ್ರತಿಯೊಂದರ ಮತ್ತು ಪ್ರತಿಯೊಬ್ಬರ ಮೂಲನೆಂದು ಕೃಷ್ಣನು ಹಿಂದೆ ಹೇಳಿದ್ದಾನೆ. ಪ್ರತಿಯೊಬ್ಬ ದೇವತೆಯು ಮತ್ತು ಪ್ರತಿಯೊಬ್ಬ ಮಾನವನು ಅವನನ್ನು ಅವಲಂಬಿಸಿರುವನು. ಮಾನವರು ಮತ್ತು ದೇವತೆಗಳು, ಅಜ್ಞಾನದಿಂದ, ತಾವು ಪರತರರು ಮತ್ತು ಪರಮ ದೇವೋತ್ತಮ ಪುರುಷನಿಂದ ಸ್ವತಂತ್ರರು ಎಂದು ಭಾವಿಸುತ್ತಾರೆ. ಆ ಅಜ್ಞಾನವು ಭಕ್ತಿಯುತ ಸೇವೆಯ ಸಲ್ಲಿಸುವಿಕೆಯಿಂದ ಪರಿಪೂರ್ಣವಾಗಿ ನಿವಾರಿಸಲ್ಪಡುತ್ತದೆ. ಇದು ಈಗಾಗಲೇ ಭಗವಂತನಿಂದ ಹಿಂದಿನ ಶ್ಲೋಕದಲ್ಲಿ ವಿವರಿಸಲ್ಪಟ್ಟಿದೆ. ಈಗ, ಅವನ ಕೃಪೆಯಿಂದ ವೇದಜ್ಞಾನಾನುಸಾರ ಅವನನ್ನು ಪರಮ ತತ್ವವೆಂದು ಅರ್ಜುನನು ಅಂಗೀಕರಿಸು

ತ್ತಿದ್ದಾನೆ. ಕೃಷ್ಣನು ಅರ್ಜುನನ ಆಪ್ತ ಮಿತ್ರನಾಗಿರುವ ಕಾರಣ ಅರ್ಜುನನು ಅವನನ್ನು ಪರಮ ದೇವೋತ್ತಮ ಪುರುಷ, ಪರತತ್ತ್ವ, ಎಂದು ಕರೆಯುತ್ತಾ ಅವನನ್ನು ಹೊಗಳು ತ್ತಿದ್ದಾನೆ ಎಂದಲ್ಲ. ಈ ಎರಡು ಶ್ಲೋಕಗಳಲ್ಲಿ ಅರ್ಜುನನು ಹೇಳುವುದೆಲ್ಲವೂ ವೇದತತ್ತ್ವ ದಿಂದ ದೃಢೀಕೃತ. ಪರಮ ಪ್ರಭುವಿಗೆ ಭಕ್ತಿಯುತ ಸೇವೆಯನ್ನು ಕೈಗೊಳ್ಳುವವನು ಮಾತ್ರ ಅವನನ್ನು ಅರಿತುಕೊಳ್ಳಬಲ್ಲನು, ಇತರರಿಗೆ ಸಾಧ್ಯವಿಲ್ಲ ಎಂಬುದನ್ನು ವೇದಾಜ್ಞೆ ಗಳು ಒತ್ತಿಹೇಳುತ್ತವೆ. ಅರ್ಜುನನು ನುಡಿದ ಈ ಶ್ಲೋಕದ ಪ್ರತಿಯೊಂದು ಪದವೂ ವೇದಾಜ್ಞೆಯಿಂದ ದೃಢೀಕೃತವಾಗಿದೆ.

ಕೇನೋಪನಿಷತ್ತಿನಲ್ಲಿ ಪರಬ್ರಹ್ಮನು ಪ್ರತಿಯೊಂದರ ಆಶ್ರಯನು ಎಂದು ಹೇಳಿದೆ, ಮತ್ತು ಪ್ರತಿಯೊಂದೂ ತನ್ನನ್ನು ಆಶ್ರಯಿಸಿದೆ ಎಂದು ಕೃಷ್ಣನು ಈಗಾಗಲೇ ವಿವರಿಸಿ ದ್ದಾನೆ. ಪ್ರತಿಯೊಂದೂ ಅವನನ್ನು ಆಶ್ರಯಿಸಿರುವ ಪರಮ ಪ್ರಭುವು, ಅವನ ಸಂತತ ಚಿಂತನೆಯಲ್ಲಿ ತೊಡಗಿರುವವರಿಂದ ಮಾತ್ರ ಸಾಕ್ಷಾತ್ಕರಿಸಿಕೊಳ್ಳಲ್ಪಡುವನು ಎಂದು ಮುಂಡಕ ಉಪನಿಷತ್ತು ದೃಢಪಡಿಸುತ್ತದೆ. ಕೃಷ್ಣನ ಬಗ್ಗೆ ಈ ಸಂತತ ಚಿಂತನೆಯು, ಭಕ್ತಿಯುತ ಸೇವೆಯ ವಿಧಾನಗಳಲ್ಲಿ ಒಂದಾದ **ಸ್ಮರಣಮ್** ಆಗಿದೆ. ಕೃಷ್ಣನ ಭಕ್ತಿಯುತ ಸೇವೆಯಿಂದ ಮಾತ್ರ ಒಬ್ಬನು ತನ್ನ ಸ್ಥಾನವನ್ನು ಅರಿತುಕೊಳ್ಳಬಲ್ಲನು ಮತ್ತು ಈ ಭೌತಿಕ ದೇಹದಿಂದ ಬಿಡುಗಡೆ ಹೊಂದಬಲ್ಲನು.

ವೇದಗಳಲ್ಲಿ ಪರಮ ಪ್ರಭುವನ್ನು ಶುದ್ಧಾತಿಶುದ್ಧನು ಎಂದು ಅಂಗೀಕರಿಸಲಾಗಿದೆ. ಕೃಷ್ಣನನ್ನು ಶುದ್ಧಾತಿಶುದ್ಧನೆಂದು ಅರಿತುಕೊಂಡವನು ಸಕಲ ಪಾಪಕ್ರಿಯೆಗಳಿಂದ ಶುದ್ಧ ನಾಗುತ್ತಾನೆ. ಒಬ್ಬನು ಪರಮ ಪ್ರಭುವಿಗೆ ಶರಣಾಗತನಾಗದ ಹೊರತು ಪಾಪಕ್ರಿಯೆ ಗಳಿಂದ ಸೋಂಕುರಹಿತನಾಗಲಾರನು. ಕೃಷ್ಣನು ಪರಮ ಪವಿತ್ರನೆಂಬ ಅರ್ಜುನನ ಅಂಗೀಕಾರವು ವೇದಸಾಹಿತ್ಯ ಆಜ್ಞೆಗಳಿಗೆ ಅನುಸಾರವಾಗಿದೆ. ಇದು ಮಹಾನ್ ವ್ಯಕ್ತಿಗಳಲ್ಲಿ ಮುಖ್ಯರಾದ ನಾರದರಿಂದ ಕೂಡ ದೃಢೀಕೃತ.

ಕೃಷ್ಣನು ಪರಮ ದೇವೋತ್ತಮ ಪುರುಷನು ಮತ್ತು ಒಬ್ಬನು ಅವನನ್ನು ಸದಾ ಧ್ಯಾನಿಸಬೇಕು ಮತ್ತು ಅವನೊಡನೆ ತನ್ನ ದಿವ್ಯ ಸಂಬಂಧವನ್ನು ಅನುಭವಿಸಬೇಕು. ಅವನು ಪರಮ ಅಸ್ತಿತ್ವ. ಅವನು ದೈಹಿಕ ಅಗತ್ಯತೆಗಳು. ಜನನ ಮತ್ತು ಮರಣದಿಂದ ಮುಕ್ತನು. ಅರ್ಜುನನು ಮಾತ್ರವೇ ಇದನ್ನು ದೃಢಪಡಿಸುವುದಲ್ಲದೆ, ಎಲ್ಲ ವೇದ ಸಾಹಿತ್ಯಗಳು, ಪುರಾಣಗಳು, ಮತ್ತು ಇತಿಹಾಸಗಳು ದೃಢಪಡಿಸುತ್ತವೆ. ಎಲ್ಲ ವೇದ ಸಾಹಿತ್ಯಗಳಲ್ಲಿ ಕೃಷ್ಣನು ಹೀಗೆ ವರ್ಣಿತ, ಮತ್ತು ಸ್ವಯಂ ಪರಮ ಪ್ರಭುವು ಕೂಡ. ನಾಲ್ಕನೆಯ ಅಧ್ಯಾಯದಲ್ಲಿ "ನಾನು ಜನ್ಮರಹಿತನಾಗಿದ್ದರೂ ಧರ್ಮ ಸಂಸ್ಥಾಪನೆಗಾಗಿ ಈ ಭೂಮಿಯಲ್ಲಿ ಆವಿರ್ಭವಿಸುತ್ತೇನೆ", ಎಂದೂ ಹೇಳುತ್ತಾನೆ. ಅವನು ಪರಮ ಮೂಲನು; ಅವನಿಗೆ ಕಾರಣವಿಲ್ಲ, ಏಕೆಂದರೆ ಅವನು ಸರ್ವ ಕಾರಣಗಳ ಕಾರಣನು ಮತ್ತು ಪ್ರತಿ ಯೊಂದು ಅವನಿಂದ ಉಗಮಿಸುತ್ತಲಿದೆ. ಈ ಪರಿಪೂರ್ಣ ಜ್ಞಾನವನ್ನು ಭಗವದನುಗ್ರಹ ದಿಂದ ಹೊಂದಬಹುದು.

**ಅರ್ಜುನ ಉವಾಚ**

**ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್ ।**
**ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂ ವಿಭುಮ್ ॥ ೧೨ ॥**
**ಆಹುಸ್ತ್ವಾಮೃಷಯಃ ಸರ್ವೇ ದೇವರ್ಷಿರ್ನಾರದಸ್ತಥಾ ।**
**ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ ॥ ೧೩ ॥**

ಅರ್ಜುನಃ ಉವಾಚ—ಅರ್ಜುನನು ನುಡಿದನು, ಪರಮ್—ಪರಮ, ಬ್ರಹ್ಮ—ತತ್ವ, ಪರಮ್—ಪರಮ, ಧಾಮ—ಧಾರಕ, ಪವಿತ್ರಮ್—ಶುದ್ಧ, ಪರಮಮ್—ಪರಮೋನ್ನತನು, ಭವಾನ್—ನೀನು, ಪುರುಷಮ್—ಪುರುಷ, ಶಾಶ್ವತಮ್—ಮೂಲ, ದಿವ್ಯಮ್—ದಿವ್ಯ, ಆದಿ-ದೇವಮ್—ಆದಿ ಪ್ರಭು, ಅಜಮ್—ಜನ್ಮರಹಿತನು, ವಿಭುಮ್—ಮಹತ್ತಮನು, ಆಹುಃ—ಹೇಳುವರು, ತ್ವಾಮ್—ನಿನ್ನನ್ನು, ಋಷಯಃ—ಋಷಿಗಳು, ಸರ್ವೇ—ಎಲ್ಲ, ದೇವ-ಋಷಿಃ—ದೇವ ಋಷಿ, ನಾರದಃ—ನಾರದ, ತಥಾ—ಕೂಡ, ಅಸಿತಃ—ಅಸಿತ, ದೇವಲಃ—ದೇವಲ, ವ್ಯಾಸಃ—ವ್ಯಾಸ, ಸ್ವಯಮ್—ಸ್ವತಃ, ಚ—ಸಹ, ಏವ—ಖಂಡಿತವಾಗಿ, ಬ್ರವೀಷಿ—ನೀನು ವಿವರಿಸುತ್ತಿರುವೆ, ಮೇ—ನನಗೆ.

**ಅರ್ಜುನನು ನುಡಿದನು : ನೀನು ಪರಮ ದೇವೋತ್ತಮ ಪುರುಷನು, ಅಂತಿಮ ಧಾಮನು, ಶುದ್ಧತಮನು, ಪರತತ್ವನು. ನೀನು ಶಾಶ್ವತನು, ದಿವ್ಯನು, ಆದಿ ಪುರುಷನು, ಜನ್ಮರಹಿತನು, ಮಹತ್ತಮನು. ನಾರದ, ಅಸಿತ, ದೇವಲ ಮತ್ತು ವ್ಯಾಸರಂಥ ಮಹರ್ಷಿಗಳು ನಿನ್ನ ಬಗ್ಗೆ ಈ ಸತ್ಯವನ್ನು ದೃಢಪಡಿಸಿರುವರು, ಮತ್ತು ಈಗ ಸ್ವಯಂ ನೀನೇ ಅದನ್ನು ನನಗೆ ತಿಳಿಯಪಡಿಸುತ್ತಿರುವೆ.**

**ಭಾವಾರ್ಥ :** ಈ ಎರಡು ಶ್ಲೋಕಗಳಲ್ಲಿ ಪರಮ ಪ್ರಭು ಆಧುನಿಕ ತತ್ವಜ್ಞಾನಿಗೆ ಒಂದು ಅವಕಾಶ ನೀಡುತ್ತಾನೆ, ಏಕೆಂದರೆ ಇಲ್ಲಿ ಪರಮನು ವ್ಯಕ್ತಿಗತ ಆತ್ಮನಿಂದ ಭಿನ್ನನು ಎಂದು ಸ್ಪಷ್ಟವಾಗಿದೆ. ಭಗವದ್ಗೀತೆಯ ಈ ಅಧ್ಯಾಯದಲ್ಲಿ ಭಗವದ್ಗೀತೆಯ ಸಾರಭೂತವಾದ ನಾಲ್ಕು ಶ್ಲೋಕಗಳನ್ನು ಶ್ರವಣ ಮಾಡಿದ ತರುವಾಯ, ಅರ್ಜುನನು ಸಕಲ ಸಂದೇಹ ಗಳಿಂದ ಸಂಪೂರ್ಣವಾಗಿ ಮುಕ್ತನಾದನು ಮತ್ತು ಕೃಷ್ಣನನ್ನು ಪರಮ ದೇವೋತ್ತಮ ಪುರುಷನೆಂದು ಅಂಗೀಕರಿಸಿದನು: ಅವನು ಕೂಡಲೇ, "ನೀನು ಪರಂ ಬ್ರಹ್ಮ, ಪರಮ ದೇವೋತ್ತಮ ಪುರುಷ", ಎಂದು ಧೈರ್ಯವಾಗಿ ಘೋಷಿಸುತ್ತಾನೆ. ತಾನು ಪ್ರತಿಯೊಂದರ ಮತ್ತು ಪ್ರತಿಯೊಬ್ಬರ ಮೂಲನೆಂದು ಕೃಷ್ಣನು ಹಿಂದೆ ಹೇಳಿದ್ದಾನೆ. ಪ್ರತಿಯೊಬ್ಬ ದೇವತೆಯು ಮತ್ತು ಪ್ರತಿಯೊಬ್ಬ ಮಾನವನು ಅವನನ್ನು ಅವಲಂಬಿಸಿರುವನು. ಮಾನವರು ಮತ್ತು ದೇವತೆಗಳು, ಅಜ್ಞಾನದಿಂದ, ತಾವು ಪರತರರು ಮತ್ತು ಪರಮ ದೇವೋತ್ತಮ ಪುರುಷನಿಂದ ಸ್ವತಂತ್ರರು ಎಂದು ಭಾವಿಸುತ್ತಾರೆ. ಆ ಅಜ್ಞಾನವು ಭಕ್ತಿ ಯುತ ಸೇವೆಯ ಸಲ್ಲಿಸುವಿಕೆಯಿಂದ ಪರಿಪೂರ್ಣವಾಗಿ ನಿವಾರಿಸಲ್ಪಡುತ್ತದೆ. ಇದು ಈಗಾಗಲೇ ಭಗವಂತನಿಂದ ಹಿಂದಿನ ಶ್ಲೋಕದಲ್ಲಿ ವಿವರಿಸಲ್ಪಟ್ಟಿದೆ. ಈಗ, ಅವನ ಕೃಪೆ ಯಿಂದ ವೇದಜ್ಞಾನಾನುಸಾರ ಅವನನ್ನು ಪರಮ ತತ್ವವೆಂದು ಅರ್ಜುನನು ಅಂಗೀಕರಿಸು

ಮೇಲ್ಪಂಕ್ತಿಯಂತೆ ಅನುಸರಿಸಬೇಕು ; ನಾವು ಭಗವದ್ಗೀತೆಯ ಸಾರವನ್ನು ಅರಿತುಕೊಳ್ಳ ಬಲ್ಲೆವು, ಮತ್ತು ಆಗ ಮಾತ್ರ ನಾವು ಕೃಷ್ಣನನ್ನು ಪರಮ ದೇವೋತ್ತಮ ಪುರುಷನೆಂದು ಅರಿತುಕೊಳ್ಳಬಲ್ಲೆವು.

**ಸ್ವಯಮೇವಾತ್ಮನಾತ್ಮಾನಂ ವೇತ್ಥ ತ್ವಂ ಪುರುಷೋತ್ತಮ ।**
**ಭೂತಭಾವನ ಭೂತೇಶ ದೇವದೇವ ಜಗತ್ಪತೇ ॥ ೧೫ ॥**

ಸ್ವಯಮ್—ವೈಯಕ್ತಿಕವಾಗಿ, ಏವ—ಖಂಡಿತವಾಗಿ, ಆತ್ಮನಾ—ನಿನ್ನಿಂದ, ಆತ್ಮಾನಮ್—ನಿನ್ನನ್ನು, ವೇತ್ಥ—ತಿಳಿದಿರುವೆ, ತ್ವಮ್—ನೀನು, ಪುರುಷ-ಉತ್ತಮ—ಹೇ ಸಕಲ ವ್ಯಕ್ತಿಗಳ ಮಹತ್ತಮನೇ, ಭೂತ-ಭಾವನ—ಹೇ ಪ್ರತಿಯೊಂದರ ಮೂಲನೇ, ಭೂತ-ಈಶ—ಹೇ ಪ್ರತಿಯೊಂದರ ಪ್ರಭುವೇ, ದೇವ-ದೇವ—ಹೇ ದೇವಾಧಿದೇವನೇ, ಜಗತ್-ಪತೇ—ಹೇ ಸಕಲ ವಿಶ್ವಾಧಿಪತಿಯೇ.

**ಹೇ ಪರಮ ಪುರುಷನೇ, ಸರ್ವ ಮೂಲನೇ, ಸರ್ವ ಜೀವಿಗಳ ಪ್ರಭುವೇ, ದೇವಾಧಿದೇವನೇ, ವಿಶ್ವಾಧಿಪತಿಯೇ, ದಿಟವಾಗಿ, ನೀನು ಮಾತ್ರವೇ ನಿನ್ನನ್ನು ನಿನ್ನ ಅಂತರಂಗಶಕ್ತಿಯಿಂದ ತಿಳಿದಿರುವೆ !**

**ಭಾವಾರ್ಥ :**—ಪರಮ ಪ್ರಭು ಕೃಷ್ಣನು, ಭಕ್ತಿಯುತ ಸೇವಾಚರಣೆಯ ಮೂಲಕ ಅವ ನೊಂದಿಗೆ ಒಂದು ಸಂಬಂಧದಲ್ಲಿರುವವರಿಂದ ಎಂದರೆ, ಅರ್ಜುನ ಮತ್ತು ಅವನ ಅನು ಯಾಯಿಗಳಂಥವರಿಂದ ಅರಿಯಲ್ಪಡಬಹುದು. ಆಸುರೀ ಅಥವಾ ನಾಸ್ತಿಕ ಮನೋಭಾವ ದವರು ಕೃಷ್ಣನನ್ನು ತಿಳಿದುಕೊಳ್ಳಲಾರರು. ಪರಮ ಪ್ರಭುವಿನಿಂದ ದೂರಕ್ಕೆ ಕರೆ ದೊಯ್ಯುವ ಮಾನಸಿಕ ಊಹಾಪೋಹವು ಗಂಭೀರ ಪಾಪ, ಮತ್ತು ಕೃಷ್ಣನನ್ನು ತಿಳಿಯ ದವನು ಭಗವದ್ಗೀತೆಯನ್ನು ವ್ಯಾಖ್ಯಾನಿಸಲು ಯತ್ನಿಸಕೂಡದು. ಭಗವದ್ಗೀತೆಯು ಕೃಷ್ಣನ ವಚನ, ಮತ್ತು ಅದು ಕೃಷ್ಣ ವಿಜ್ಞಾನವಾಗಿರುವುದರಿಂದ, ಅರ್ಜುನನು ಅದನ್ನು ಅರಿತುಕೊಂಡಂತೆ ಕೃಷ್ಣನಿಂದ ಅದನ್ನು ಅರಿತುಕೊಳ್ಳಬೇಕು. ನಾಸ್ತಿಕರಿಂದ ಅದನ್ನು ಸ್ವೀಕರಿಸಿಕೂಡದು.

ಶ್ರೀಮದ್ ಭಾಗವತದಲ್ಲಿ ಹೇಳಿರುವಂತೆ (1.2.11):

ವದನ್ತಿ ತತ್ ತತ್ತ್ವ—ವಿದಸ್
ತತ್ತ್ವಂ ಯಜ್ ಜ್ಞಾನಮ್ ಅದ್ವಯಮ್।
ಬ್ರಹ್ಮೇತಿ ಪರಮಾತ್ಮೇತಿ
ಭಗವಾನ್ ಇತಿ ಶಬ್ದ್ಯತೇ॥

ಪರಮ ತತ್ತ್ವವು ಮೂರು ದೃಷ್ಟಿಗಳಲ್ಲಿ ಸಾಕ್ಷಾತ್ಕೃತ : ಶೂನ್ಯ ಬ್ರಹ್ಮನ್ ಎಂದು, ಸ್ಥಳೀಯ ಪರಮಾತ್ಮ ಎಂದು ಮತ್ತು ಕೊನೆಗೆ ಪರಮ ದೇವೋತ್ತಮ ಪುರುಷ ಎಂದು. ಆದ್ದರಿಂದ ಪರತತ್ತ್ವವನ್ನು ಅರಿತುಕೊಳ್ಳುವ ಕೊನೆಯ ಹಂತದಲ್ಲಿ ಒಬ್ಬನು ಪರಮ ದೇವೋತ್ತಮ ಪುರುಷನಲ್ಲಿಗೆ ಬರುತ್ತಾನೆ. ಸಾಮಾನ್ಯ ಮಾನವನಾಗಲಿ ಅಥವಾ ವ್ಯಕ್ತಿ

ಶೂನ್ಯ ಬ್ರಹ್ಮನ್ ಅಥವಾ ಸ್ಥಳೀಯ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡಿರುವ ಮುಕ್ತನಾಗಲಿ ಭಗವಂತನ ವ್ಯಕ್ತಿತ್ವವನ್ನು ಅರಿಯದೇ ಇರಬಹುದು. ಆದ್ದರಿಂದ, ಅಂಥವರು ಪರಮ ಪುರುಷನನ್ನು ಈ ವ್ಯಕ್ತಿ' ಕೃಷ್ಣನಿಂದ ಹೇಳಲ್ಪಟ್ಟ ಭಗವದ್ಗೀತಾ ಶ್ಲೋಕಗಳಿಂದ ಅರಿತುಕೊಳ್ಳಲೆತ್ನಿಸಬಹುದು. ಕೆಲವು ಸಮಯಗಳಲ್ಲಿ ವ್ಯಕ್ತಿಶೂನ್ಯವಾದಿಗಳು ಕೃಷ್ಣನನ್ನು ಭಗವಾನ್ ಎಂದು ಒಪ್ಪಿಕೊಳ್ಳುತ್ತಾರೆ, ಅಥವಾ ಅವನ ಅಧಿಕಾರವನ್ನು ಒಪ್ಪಿಕೊಳ್ಳುತ್ತಾರೆ. ಆದರೂ ಅನೇಕ ಮುಕ್ತರು ಕೃಷ್ಣನನ್ನು ಪುರುಷೋತ್ತಮ, ಪರಮ ಪುರುಷ, ಎಂದು ಅರಿಯಲಾರರು. ಆದ್ದರಿಂದ, ಅರ್ಜುನನು ಅವನನ್ನು ಪುರುಷೋತ್ತಮನೆಂದು ಸಂಬೋಧಿಸುತ್ತಾನೆ. ಆದರೂ ಕೂಡಾ ಒಬ್ಬನು ಕೃಷ್ಣನನ್ನು ಸಕಲ ಜೀವಿಗಳ ತಂದೆ ಎಂದು ಅರಿಯದೇ ಇರಬಹುದು. ಆದ್ದರಿಂದ ಅರ್ಜುನನು ಅವನನ್ನು ಭೂತ-ಭಾವನ ಎಂದು ಸಂಬೋಧಿಸುತ್ತಾನೆ, ಮತ್ತು ಒಬ್ಬನು ಅವನನ್ನು ಸಕಲ ಜೀವಿಗಳ ತಂದೆ ಎಂದು ತಿಳಿದುಕೊಂಡರೆ, ಆಗಲೂ ಕೂಡ ಅವನನ್ನು ಪರಮ ನಿಯಂತ್ರಕನೆಂದು ತಿಳಿಯದೇ ಇರಬಹುದು. ಅವನು ಪ್ರತಿಯೊಬ್ಬನ ಪರಮ ನಿಯಂತ್ರಕ, ಭೂತೇಶ ಎಂದು ಇಲ್ಲಿ ಸಂಬೋಧಿತ. ಮತ್ತು ಒಬ್ಬನು ಕೃಷ್ಣನನ್ನು ಸಕಲ ಜೀವಿಗಳ ಪರಮ ನಿಯಂತ್ರಕನೆಂದು ತಿಳಿದುಕೊಂಡರೂ, ಅವನನ್ನು ಸಕಲ ದೇವತೆಗಳ ಮೂಲನೆಂದು ತಿಳಿಯದೇ ಇರಬಹುದು; ಆದ್ದರಿಂದ ಅವನನ್ನು ಇಲ್ಲಿ ಸಕಲ ದೇವತೆಗಳ ಆರಾಧ್ಯ ದೇವ— ದೇವಾಧಿದೇವ ಎಂದು ಸಂಬೋಧಿಸಿದೆ. ಮತ್ತು ಒಬ್ಬನು ಅವನನ್ನು ಸಕಲ ದೇವತೆಗಳ ಆರಾಧ್ಯ ದೇವನೆಂದು ತಿಳಿದರೂ ಕೂಡ, ಅವನು ಪ್ರತಿಯೊಂದರ ಪರಮೋನ್ನತ ಒಡೆಯ ಎಂದು ತಿಳಿಯದೇ ಇರಬಹುದು; ಆದ್ದರಿಂದ ಅವನನ್ನು ಜಗತ್ಪತಿ ಎಂದು ಸಂಬೋಧಿಸಿದೆ, ಹೀಗೆ ಅರ್ಜುನನಿಂದ ಸಾಕ್ಷಾತ್ಕರಿಸಲ್ಪಟ್ಟ ಕೃಷ್ಣನನ್ನು ಕುರಿತ ಸತ್ಯವು ಈ ಶ್ಲೋಕದಲ್ಲಿ ಸ್ಥಾಪಿತ, ಮತ್ತು ಯಥಾವತ್ತಾಗಿ ಕೃಷ್ಣನನ್ನು ಅರಿತುಕೊಳ್ಳಲು ನಾವು ಅರ್ಜುನನ ಮಾರ್ಗವನ್ನು ಅನುಸರಿಸಬೇಕು.

**ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ ।**
**ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ॥ ೧೬ ॥**

ವಕ್ತುಮ್—ಹೇಳಲು, ಅರ್ಹಸಿ—ನೀನು ಅರ್ಹನು, ಅಶೇಷೇಣ—ವಿವರವಾಗಿ, ದಿವ್ಯಾಃ—ದೈವೀಕ, ಹಿ—ಖಂಡಿತವಾಗಿ, ಆತ್ಮ—ಸ್ವಯಂ ನಿನ್ನ, ವಿಭೂತಯಃ—ವಿಭೂತಿಗಳು, ಯಾಭಿಃ—ಯಾವುದರಿಂದ, ವಿಭೂತಿಭಿಃ—ವಿಭೂತಿಗಳಿಂದ, ಲೋಕಾನ್—ಸಕಲ ಲೋಕಗಳು, ಇಮಾನ್—ಇವು, ತ್ವಮ್—ನೀನು, ವ್ಯಾಪ್ಯ—ವ್ಯಾಪಿಸಿ, ತಿಷ್ಠಸಿ—ಇರುವೆ.

**ನೀನು ಈ ಎಲ್ಲ ಲೋಕಗಳನ್ನು ವ್ಯಾಪಿಸಿರುವ ನಿನ್ನ ದಿವ್ಯ ವಿಭೂತಿಗಳ ಬಗ್ಗೆ ದಯವಿಟ್ಟು ನನಗೆ ವಿವರವಾಗಿ ತಿಳಿಸು.**

**ಭಾವಾರ್ಥ :** ಈ ಶ್ಲೋಕದಲ್ಲಿ ಅರ್ಜುನನು ಪರಮ ದೇವೋತ್ತಮ ಪುರುಷ ಕೃಷ್ಣನ ಅರಿವಿನಿಂದ ಈಗಾಗಲೇ ತೃಪ್ತನಾಗಿದ್ದಾನೆ ಎಂದು ತೋರುತ್ತದೆ. ಅರ್ಜುನನು,

ವೈಯಕ್ತಿಕ ಅನುಭವ, ಬುದ್ಧಿ ಮತ್ತು ಜ್ಞಾನ ಮತ್ತು ಇವುಗಳ ಮೂಲಕ ಹೊಂದಬಹುದಾದ ಇತರ ಎಲ್ಲವನ್ನು ಕೃಷ್ಣಾನುಗ್ರಹದಿಂದ ಹೊಂದಿದ್ದಾನೆ, ಮತ್ತು ಅವನು ಕೃಷ್ಣನನ್ನು ಪರಮ ದೇವೋತ್ತಮ ಪುರುಷನೆಂದು ಅರಿತುಕೊಂಡಿದ್ದಾನೆ. ಅವನ ಮಟ್ಟಿಗೆ ಯಾವ ಸಂದೇಹವೂ ಇಲ್ಲ, ಆದರೂ ಅವನು ಕೃಷ್ಣನನ್ನು ಅವನ ಸರ್ವವ್ಯಾಪಿ ಸ್ವಭಾವವನ್ನು ವಿವರಿಸಲು ಕೇಳುತ್ತಿದ್ದಾನೆ, ಸಾಮಾನ್ಯವಾಗಿ ಜನರು ಮತ್ತು ವಿಶೇಷವಾಗಿ ವ್ಯಕ್ತಿಶೂನ್ಯವಾದಿಗಳು ಮುಖ್ಯವಾಗಿ ಪರಮನ ಸರ್ವವ್ಯಾಪಿ ಸ್ವಭಾವ ತಿಳಿಯುವಲ್ಲಿ ಆಸಕ್ತರು. ಆದ್ದರಿಂದ, ಅವನ ವಿವಿಧ ಶಕ್ತಿಗಳ ಮೂಲಕ, ಕೃಷ್ಣನು ಸರ್ವವ್ಯಾಪಕ ಸ್ಥಿತಿಯಲ್ಲಿ ಹೇಗೆ ಇದ್ದಾನೆ ಎಂದು ಅರ್ಜುನನು ಕೇಳುತ್ತಿದ್ದಾನೆ. ಇದು ಸಾಮಾನ್ಯ ಜನರ ಪರವಾಗಿ ಅರ್ಜುನನಿಂದ ಕೇಳಲ್ಪಡುತ್ತಿದೆ ಎಂದು ತಿಳಿಯಬೇಕು.

**ಕಥಂ ವಿದ್ಯಾಮಹಂ ಯೋಗಿಂಸ್ತ್ವಾಂ ಸದಾ ಪರಿಚಿನ್ತಯನ್ ।**
**ಕೇಷು ಕೇಷು ಚ ಭಾವೇಷು ಚಿನ್ತ್ಯೋऽಸಿ ಭಗವನ್ಮಯಾ ॥ ೧೭ ॥**

ಕಥಮ್—ಹೇಗೆ, ವಿದ್ಯಾಮ್–ಅಹಮ್—ನಾನು ತಿಳಿಯಲಿ, ಯೋಗಿನ್—ಹೇ ಪರಮ ಯೋಗಿಯೇ, ತ್ವಮ್—ನೀನು, ಸದಾ—ಯಾವಾಗಲೂ, ಪರಿಚಿನ್ತಯನ್—ಚಿಂತಿಸುತ್ತ, ಕೇಷು—ಯಾವುದರಲ್ಲಿ, ಕೇಷು—ಯಾವುದರಲ್ಲಿ, ಚ—ಕೂಡ, ಭಾವೇಷು—ಭಾವಗಳಲ್ಲಿ, ಚಿನ್ತ್ಯಃಅಸಿ—ನೀನು ಸ್ಮರಿಸಲ್ಪಡಬೇಕು, ಭಗವಾನ್—ಹೇ ಪರಮನೇ, ಮಯಾ—ನನ್ನಿಂದ.

**ಹೇ ಕೃಷ್ಣನೇ, ಹೇ ಪರಮ ಯೋಗಿಯೇ, ನಾನು ನಿನ್ನನ್ನು ಹೇಗೆ ಸದಾ ಚಿಂತಿಸಲಿ ಮತ್ತು ನಾನು ನಿನ್ನನ್ನು ಹೇಗೆ ತಿಳಿಯಲಿ ? ಹೇ ಪರಮ ದೇವೋತ್ತಮ ಪುರುಷನೇ, ನಿನ್ನನ್ನು ಯಾವ ವಿವಿಧ ರೂಪಗಳಲ್ಲಿ ಸ್ಮರಿಸಬೇಕು ?**

**ಭಾವಾರ್ಥ :** ಹಿಂದಿನ ಅಧ್ಯಾಯದಲ್ಲಿ ಹೇಳಿರುವಂತೆ, ಪರಮ ದೇವೋತ್ತಮ ಪುರುಷನು ತನ್ನ ಯೋಗ ಮಾಯೆಯಿಂದ ಆವೃತನು. ಶರಣಾಗತ ಆತ್ಮರು ಮತ್ತು ಭಕ್ತರು ಮಾತ್ರ ಅವನನ್ನು ಕಾಣಬಹುದು. ತನ್ನ ಮಿತ್ರ ಕೃಷ್ಣನು ಪರಮ ದೇವೋತ್ತಮನು ಎಂಬುದು ಈಗ ಅರ್ಜುನನಿಗೆ ಮನದಟ್ಟಾಗಿದೆ, ಆದರೆ ಸರ್ವವ್ಯಾಪಿ ಭಗವಂತನು ಸಾಮಾನ್ಯ ಮನುಷ್ಯನಿಂದ ಅರಿಯಬಹುದಾದ ಸಾಮಾನ್ಯ ಪ್ರಕ್ರಿಯೆಯನ್ನು ಅವನು ತಿಳಿಯಬಯಸುತ್ತಾನೆ. ಅಸುರರು, ಮತ್ತು ನಾಸ್ತಿಕರೂ ಸೇರಿ, ಸಾಮಾನ್ಯರು ಕೃಷ್ಣನನ್ನು ಅರಿತುಕೊಳ್ಳಲಾರರು, ಏಕೆಂದರೆ ಅವನು ತನ್ನ ಯೋಗಮಾಯಾ ಶಕ್ತಿಯಿಂದ ಆವೃತನು, ಮತ್ತೆ ಈ ಪ್ರಶ್ನೆಗಳು ಅವರ ಪ್ರಯೋಜನಕ್ಕಾಗಿ ಅರ್ಜುನನಿಂದ ಕೇಳಲ್ಪಡುತ್ತಿವೆ. ಉತ್ತಮ ಭಕ್ತನು ಕೇವಲ ತನ್ನ ಅರಿವಿಗಾಗಿ ಮಾತ್ರ ಆಸಕ್ತನಲ್ಲದೆ, ಸಕಲರ ಅರಿವಿಗಾಗಿ ಆಸಕ್ತನು. ಆದ್ದರಿಂದ, ಅರ್ಜುನನು, ಒಬ್ಬ ಭಕ್ತನು—ವೈಷ್ಣವನಾಗಿರುವುದರಿಂದ, ತನ್ನ ದಯದಿಂದ, ಪರಮ ಪ್ರಭುವಿನ ಸರ್ವವ್ಯಾಪ್ತತೆಯ ಅರಿವನ್ನು ಸಾಮಾನ್ಯರಿಗಾಗಿ ತೆರೆಯುತ್ತಿದ್ದಾನೆ. ಶ್ರೀಕೃಷ್ಣನು, ಸಾಮಾನ್ಯರಿಗೆ ಆವೃತ ಮತ್ತು ಅನಾವೃತನಾದ ಯೋಗಮಾಯಾ ಶಕ್ತಿಯ ಒಡೆಯನಾಗಿರುವುದರಿಂದ, ಅವನು

ಕೃಷ್ಣನನ್ನು ವಿಶೇಷವಾಗಿ ಯೋಗಿನ್ ಎಂದು ಸಂಬೋಧಿಸುತ್ತಿದ್ದಾನೆ, ಕೃಷ್ಣನಿಗಾಗಿ ಪ್ರೇಮವಿಲ್ಲದ ಸಾಮಾನ್ಯನು ಸದಾ ಕೃಷ್ಣ ಚಿಂತನ ಮಾಡಲಾರನು; ಆದ್ದರಿಂದ ಅವನು ಭೌತಿಕವಾಗಿ ಚಿಂತಿಸಬೇಕು. ಅರ್ಜುನನು ಈ ಜಗತ್ತಿನ ಪ್ರಾಪಂಚಿಕ ಜನರ ಚಿಂತನ ವಿಧಾನವನ್ನು ಪರ್ಯಾಲೋಚಿಸುತ್ತಿದ್ದಾನೆ. **ಕೇಷು ಕೇಷು ಚ ಭಾವೇಷು** ಎಂಬ ಪದ ಗಳು ಭೌತಿಕ ಪ್ರಕೃತಿಯನ್ನು ಉಲ್ಲೇಖಿಸುತ್ತವೆ (ಭಾವ ಎಂದರೆ "ಭೌತಿಕ ವಸ್ತುಗಳು" ಎಂದು ಅರ್ಥ). ಐಹಿಕರು ಕೃಷ್ಣನನ್ನು ಆಧ್ಯಾತ್ಮಿಕವಾಗಿ ಅರಿತುಕೊಳ್ಳಲಾರದ್ದರಿಂದ, ಅವರು ಭೌತಿಕ ವಸ್ತುಗಳ ಮೇಲೆ ಕೇಂದ್ರೀಕರಿಸಿ ಮತ್ತು ಕೃಷ್ಣನು ಭೌತಿಕ ವಸ್ತುರೂಪ ದಲ್ಲಿ ಹೇಗೆ ವ್ಯಕ್ತನಾಗಿದ್ದಾನೆ ಎಂದು ನೋಡಲು ಯತ್ನಿಸಬೇಕು ಎಂದು ಅವರಿಗೆ ಸಲಹೆ ನೀಡಲಾಗಿದೆ.

**ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ ।**
**ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಮ್ ॥ ೧೮ ॥**

ವಿಸ್ತರೇಣ—ವಿವರವಾಗಿ, ಆತ್ಮನಃ—ನಿನ್ನ, ಯೋಗಮ್—ಅಚಿಂತ್ಯ ಶಕ್ತಿ, ವಿಭೂತಿಮ್—ವಿಭೂತಿಗಳು, ಚ—ಕೂಡ, ಜನ-ಅರ್ದನ—ಹೇ ನಾಸ್ತಿಕರ ಸಂಹಾರಕನೇ, ಭೂಯಃ—ಮತ್ತೆ, ಕಥಯ—ವರ್ಣಿಸು, ತೃಪ್ತಿಃ—ತೃಪ್ತಿ, ಹಿ—ಖಂಡಿತವಾಗಿ, ಶೃಣ್ವತಃ—ಕೇಳುವುದು, ನ ಅಸ್ತಿ—ಇಲ್ಲ, ಮೇ—ನನ್ನ, ಅಮೃತಮ್—ಅಮೃತ.

**ಹೇ ಜನಾರ್ದನ, ನಿನ್ನ ವಿಭೂತಿಗಳ ಅಚಿಂತ್ಯ ಶಕ್ತಿಯನ್ನು ದಯವಿಟ್ಟು ಮತ್ತೆ ವಿವರವಾಗಿ ವರ್ಣಿಸು. ನಿನ್ನ ಬಗ್ಗೆ ಶ್ರವಣಮಾಡಿ ನನಗೆ ಎಂದಿಗೂ ತೃಪ್ತಿ ಯಾಗಲಿಲ್ಲ, ಏಕೆಂದರೆ ನಾನು ಹೆಚ್ಚು ಕೇಳಿದಷ್ಟೂ ನಿನ್ನ ಮಧುರ ವಚನಾಮೃತ ವನ್ನು ಮತ್ತಷ್ಟು ಸವಿಯಬಯಸುತ್ತೇನೆ.**

**ಭಾವಾರ್ಥ :** ನೈಮಿಷಾರಣ್ಯದ ಋಷಿಗಳು ಶೌನಕರ ನಾಯಕತ್ವದಲ್ಲಿ ಸೂತಮುನಿಗಳಲ್ಲಿ ಇದೇ ಬಗೆಯ ನಿವೇದನೆ ಮಾಡಿಕೊಂಡಿದ್ದರು. ಆ ನಿವೇದನೆ ಹೀಗಿದೆ :

ವಯಂ ತು ನ ವಿತೃಪ್ಯಾಮ
ಉತ್ತಮಶ್ಲೋಕವಿಕ್ರಮೇ।
ಯಚ್ಛೃಣ್ವತಾಂ ರಸಜ್ಞಾನಾಂ
ಸ್ವಾದು ಸ್ವಾದು ಪದೇ ಪದೇ॥

"ಅತ್ಯುತ್ತಮವಾದ ಶ್ಲೋಕಗಳಿಂದ ಕೊಂಡಾಡಲ್ಪಡುವ ಕೃಷ್ಣನ ದಿವ್ಯ ಲೀಲೆ ಗಳನ್ನು ನಿರಂತರ ಶ್ರವಣ ಮಾಡಿದರೂ ಕೂಡ ಒಬ್ಬನಿಗೆ ಎಂದೂ ತೃಪ್ತಿಯಾಗುವುದಿಲ್ಲ. ಕೃಷ್ಣನೊಡನೆ ದಿವ್ಯ ಸಂಬಂಧ ಪ್ರವಿಷ್ಟರು ಭಗವಂತನ ಲೀಲೆಗಳ ವರ್ಣನೆಗಳನ್ನು ಹೆಜ್ಜೆ ಹೆಜ್ಜೆಗೂ ಸವಿಯುತ್ತಾರೆ." (ಶ್ರೀಮದ್ ಭಾಗವತಮ್ 1.1.19) ಹೀಗೆ ಅರ್ಜುನನು

ಕೃಷ್ಣನ ಬಗ್ಗೆ ಮತ್ತು ಅವನು ಸರ್ವವ್ಯಾಪ್ತ ಪರಮ ಪ್ರಭುವಾಗಿ ಹೇಗೆ ಇರುತ್ತಾನೆ ಎಂಬ ಬಗ್ಗೆ ಶ್ರವಣ ಮಾಡಲು ಆಸಕ್ತನು.

ಈಗ **ಅಮೃತಮ್** ಇದರ ಮಟ್ಟಿಗೆ ಕೃಷ್ಣನ ಕುರಿತ ಯಾವುದೇ ಕಥನ ಅಥವಾ ನಿರೂಪಣೆಯು ಅಮೃತವಿದ್ದಂತೆಯೇ, ಮತ್ತು ಅಮೃತವನ್ನು ಸ್ವಾನುಭವದಿಂದ ಕಂಡು ಕೊಳ್ಳಬಹುದು. ಆಧುನಿಕ ಕಥೆಗಳು, ಕಾದಂಬರಿಗಳು ಮತ್ತು ಇತಿಹಾಸಗಳು ಭಗವಂತನ ದಿವ್ಯಲೀಲೆಗಳಿಂದ ಭಿನ್ನ; ಎಂದರೆ, ಒಬ್ಬನು ಈ ಲೌಕಿಕ ಕಥೆಗಳನ್ನು ಕೇಳಿ ದಣಿಯು ತ್ತಾನೆ, ಆದರೆ ಕೃಷ್ಣನನ್ನು ಕುರಿತು ಕೇಳಲು ಎಂದೂ ದಣಿಯುವುದಿಲ್ಲ. ಈ ಕಾರಣ ದಿಂದಲೇ ಇಡೀ ವಿಶ್ವದ ಇತಿಹಾಸಗಳು ಭಗವಂತನ ಅವತಾರಗಳ ಲೀಲೆಗಳ ಉಲ್ಲೇಖ ಗಳಿಂದ ತುಂಬಿವೆ. ಪುರಾಣಗಳು, ಭಗವಂತನ ವಿವಿಧ ಅವತಾರಗಳ ಲೀಲೆಗಳಿಗೆ ಸಂಬಂಧಿಸಿದ ಗತಯುಗಗಳ ಇತಿಹಾಸಗಳು. ಹೀಗೆ ಆವರ್ತಿತ ಪಠನಗಳಿಂದಲೂ ಕೂಡ, ಪಠನ ವಿಷಯವು ಎಂದೆಂದಿಗೂ ಹೊಸದಾಗಿಯೇ ಇರುತ್ತದೆ.

**ಶ್ರೀ ಭಗವಾನುವಾಚ**

**ಹನ್ತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮವಿಭೂತಯಃ ।**
**ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯನ್ತೋ ವಿಸ್ತರಸ್ಯ ಮೇ ॥ ೧೯ ॥**

ಶ್ರೀಭಗವಾನ್-ಉವಾಚ—ಪರಮ ದೇವೋತ್ತಮ ಪುರುಷನು ನುಡಿದನು, ಹನ್ತ—ಆಗಲಿ, ತೇ— ನಿನಗೆ, ಕಥಯಿಷ್ಯಾಮಿ—ಹೇಳುತ್ತೇನೆ, ದಿವ್ಯಾಃ—ದೈವೀಕ, ಹಿ— ಖಂಡಿತವಾಗಿ, ಆತ್ಮ-ವಿಭೂತಯಃ—ವೈಯಕ್ತಿಕ ವಿಭೂತಿಗಳು, ಪ್ರಾಧಾನ್ಯತಃ—ಪ್ರಧಾನ ವಾಗಿರುವ. ಕುರುಶ್ರೇಷ್ಠ—ಹೇ ಕುರುಶ್ರೇಷ್ಠನೇ. ನ-ಅಸ್ತಿ—ಇಲ್ಲ, ಅನ್ತಃ—ಮಿತಿ, ವಿಸ್ತರಸ್ಯ—ವೈಶಾಲ್ಯಕ್ಕೆ, ಮೇ—ನನ್ನ.

**ಪರಮ ದೇವೋತ್ತಮ ಪುರುಷನು ನುಡಿದನು : ಆಗಲಿ, ಹೇ ಅರ್ಜುನ, ನಾನು ನಿನಗೆ ನನ್ನ ಅದ್ಭುತ ಉದ್ಭೂತಿಗಳ ಬಗ್ಗೆ ಹೇಳುತ್ತೇನೆ, ಆದರೆ ನನ್ನ ವಿಭೂತಿಗೆ ಮಿತಿಯಿಲ್ಲವಾದ್ದರಿಂದ, ಮುಖ್ಯವಾದವುಗಳನ್ನು ಮಾತ್ರ ಹೇಳುತ್ತೇನೆ.**

**ಭಾವಾರ್ಥ :** ಕೃಷ್ಣನ ಮಹತ್ವವನ್ನು ಮತ್ತು ಅವನ ವಿಭೂತಿಗಳನ್ನು ಗ್ರಹಿಸುವುದು ಅಸಂಭವ. ವ್ಯಕ್ತಿಗತ ಆತ್ಮನ ಇಂದ್ರಿಯಗಳು ಪರಿಮಿತ ಮತ್ತು ಕೃಷ್ಣನ ವ್ಯವಹಾರಗಳ ಸಮಗ್ರತೆಯನ್ನು ಅರಿತುಕೊಳ್ಳಲು ಅವನಿಗೆ ಅವಕಾಶ ನೀಡುವುದಿಲ್ಲ. ಆದರೂ ಭಕ್ತರು ಕೃಷ್ಣನನ್ನು ಅರಿಯಲು ಪ್ರಯತ್ನಿಸುತ್ತಾರೆ, ಆದರೆ ಯಾವುದೇ ನಿರ್ದಿಷ್ಟ ಕಾಲದಲ್ಲಿ ಅಥವಾ ಯಾವುದೇ ಜೀವನದ ಸ್ಥಿತಿಯಲ್ಲಿ ಪೂರ್ಣವಾಗಿ ಕೃಷ್ಣನನ್ನು ಅರಿತುಕೊಳ್ಳ ಬಲ್ಲರು ಎಂಬ ತತ್ವಾಧಾರದ ಮೇಲೆ ಅಲ್ಲ. ಪ್ರಾಯಃ ಕೃಷ್ಣನ ವಿಷಯಗಳು ಎಷ್ಟು ಆಸ್ವಾದನೀಯವೆಂದರೆ ಅವು ಭಕ್ತರಿಗೆ ಅಮೃತದಂತೆ ತೋರುತ್ತವೆ. ಹೀಗೆ ಭಕ್ತರು ಅವುಗಳನ್ನು ಆಸ್ವಾದಿಸುತ್ತಾರೆ. ಕೃಷ್ಣನ ಐಶ್ವರ್ಯಗಳನ್ನು ಮತ್ತು ಅವನ ವಿವಿಧ ಶಕ್ತಿ ಗಳನ್ನು ಕುರಿತು ಚರ್ಚಿಸುವುದರಲ್ಲಿ ಶುದ್ಧ ಭಕ್ತರು ದಿವ್ಯಾನಂದವನ್ನು ಅನುಭವಿಸುತ್ತಾರೆ. ಆದ್ದರಿಂದ ಅವರು ಅವುಗಳನ್ನು ಕುರಿತು ಶ್ರವಣ ಮಾಡಲು ಮತ್ತು ಚರ್ಚಿಸಲು ಬಯಸು

ತ್ತಾರೆ. ಜೀವಿಗಳು ತನ್ನ ವಿಭೂತಿಗಳ ವ್ಯಾಪ್ತಿಯನ್ನು ಅರಿಯಲಾರರೆಂದು ಕೃಷ್ಣನಿಗೆ ಗೊತ್ತು; ಆದ್ದರಿಂದ ಅವನು ತನ್ನ ವಿವಿಧ ಶಕ್ತಿಗಳ ಪ್ರಧಾನ ಉದ್ಭೂತಿಗಳನ್ನು ಮಾತ್ರ ಹೇಳಲು ಒಪ್ಪುತ್ತಾನೆ. **ಪ್ರಾಧಾನ್ಯತಃ,** ಪದವು ಬಹು ಮುಖ್ಯವಾದುದು, ಏಕೆಂದರೆ, ಅವನ ಲಕ್ಷಣಗಳು ಅಪರಿಮಿತವಾದ್ದರಿಂದ, ಪರಮ ಪ್ರಭುವಿನ ಮುಖ್ಯವಿವರಗಳಲ್ಲಿ ಕೆಲ ವನ್ನು ಮಾತ್ರ ನಾವು ಅರಿತುಕೊಳ್ಳಬಲ್ಲೆವು. ಅವೆಲ್ಲವನ್ನು ಅರಿಯುವುದು ಸಾಧ್ಯವಿಲ್ಲ, ಮತ್ತು ಈ ಶ್ಲೋಕದಲ್ಲಿ ಉಪಯೋಗಿಸಿರುವಂತೆ ವಿಭೂತಿ ಎಂಬುದು ಅವನು ಸಮಗ್ರ ಉದ್ಭೂತಿಯನ್ನು ನಿಯಂತ್ರಿಸುವ ಅವನ ಐಶ್ವರ್ಯಗಳನ್ನು ಸೂಚಿಸುತ್ತದೆ. ವಿಭೂತಿ ಎಂಬುದು ಒಂದು ಅಸಾಧಾರಣ ಐಶ್ವರ್ಯ ಸೂಚಕ ಎಂದು ಅಮರಕೋಶದಲ್ಲಿ ಹೇಳಿದೆ.

ವ್ಯಕ್ತಿಶೂನ್ಯವಾದಿಯಾಗಲೀ ಅಥವಾ ಬಹುದೇವತಾವಾದಿಯಾಗಲೀ ಭಗವಂತನ ಅಸಾಧಾರಣ ಐಶ್ವರ್ಯಗಳನ್ನು ಅಥವಾ ಅವನ ದೈವೀ ಶಕ್ತಿಗಳ ಉದ್ಭೂತಿಗಳನ್ನು ಅರಿತು ಕೊಳ್ಳಲಾರನು. ಭೌತಿಕ ಜಗತ್ತು ಮತ್ತು ಆಧ್ಯಾತ್ಮಿಕ ಜಗತ್ತು, ಎರಡರಲ್ಲಿಯೂ ಅವನ ಶಕ್ತಿಗಳು ಉದ್ಭೂತಿಯ ಪ್ರತಿಯೊಂದು ವೈವಿಧ್ಯದಲ್ಲ ಪ್ರಸರಿತವಾಗಿವೆ. ಈಗ ಕೃಷನು ಸಾಮಾನ್ಯನಿಗೆ ನೇರವಾಗಿ ತಿಳಿದುಕೊಳ್ಳಬಹುದಾದುದನ್ನು ವರ್ಣಿಸುತ್ತಿದ್ದಾನೆ; ಹೀಗೆ ಅವನ ವೈವಿಧ್ಯಮಯ ಶಕ್ತಿಯ ಭಾವವು ಈ ರೀತಿಯಲ್ಲಿ ವರ್ಣಿತ :

**ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।**
**ಅಹಮಾದಿಶ್ಚ ಮಧ್ಯಂ ಚ ಭೂತಾನಾಮನ್ತ ಏವ ಚ ॥ ೨೦ ॥**

ಅಹಮ್—ನಾನು, ಆತ್ಮಾ—ಆತ್ಮ, ಗುಡಾಕೇಶ—ಹೇ ಅರ್ಜುನ, ಸರ್ವಭೂತ—ಜೀವಿಗಳೆಲ್ಲರ, ಆಶಯಃ-ಸ್ಥಿತಃ—ಹೃದಯದಲ್ಲಿ ಸನ್ನಿವೇಶಿತ, ಅಹಮ್—ನಾನು, ಆದಿಃ—ಮೂಲ, ಚ—ಮತ್ತು, ಮಧ್ಯಮ್—ಮಧ್ಯ, ಚ—ಮತ್ತು ಭೂತಾನಾಮ್—ಜೀವಿಗಳೆಲ್ಲರ, ಅನ್ತಃ—ಕೊನೆ, ಏವ—ಖಂಡಿತವಾಗಿ, ಚ—ಮತ್ತು.

**ಹೇ ಅರ್ಜುನ, ಜೀವಿಗಳೆಲ್ಲರ ಹೃದಯನಿವಿಷ್ಟ ಪರಮಾತ್ಮನು ನಾನು, ಜೀವಿಗಳೆಲ್ಲರ ಆದಿ, ಮಧ್ಯ ಮತ್ತು ಅಂತ್ಯ ಆಗಿರುವೆನು.**

**ಭಾವಾರ್ಥ :** ಈ ಶ್ಲೋಕದಲ್ಲಿ ಅರ್ಜುನನನ್ನು ಗುಡಾಕೇಶ ಎಂದು ಸಂಬೋಧಿಸಿದೆ. ಹಾಗೆಂದರೆ "ನಿದ್ರೆಯ ಅಂಧಕಾರವನ್ನು ಗೆದ್ದವನು" ಎಂದು ಅರ್ಥ; ಅಜ್ಞಾನದ ಅಂಧ ಕಾರದಲ್ಲಿ ನಿದ್ರಿಸುತ್ತಿರುವವರಿಗೆ, ಪರಮ ದೇವೋತ್ತಮ ಪುರುಷನು ಭೌತಿಕ ಮತ್ತು ಅಧ್ಯಾತ್ಮಿಕ ಜಗತ್ತುಗಳಲ್ಲಿ ಹೇಗೆ ತನ್ನನ್ನು ನಾನಾ ರೀತಿಗಳಲ್ಲಿ ಅಭಿವ್ಯಕ್ತಿಸಿಕೊಳ್ಳುವನು ಎಂದು ಅರಿತುಕೊಳ್ಳುವುದು ಸಾಧ್ಯವಿಲ್ಲ. ಹೀಗೆ ಕೃಷ್ಣನಿಂದ ಅರ್ಜುನನಿಗೆ ಈ ಸಂಬೋಧ ನೆಯು ಅರ್ಥಯುಕ್ತವಾಗಿದೆ. ಅರ್ಜುನನು ಅಂಥ ಅಂಧಕಾರಕ್ಕೆ ಅತೀತನಾದ್ದರಿಂದ, ದೇವೋತ್ತಮ ಪುರುಷನು ತನ್ನ ವಿವಿಧ ಐಶ್ವರ್ಯಗಳನ್ನು ವರ್ಣಿಸಲು ಒಪ್ಪುತ್ತಾನೆ.

ತನ್ನ ಪ್ರಾಥಮಿಕ ವಿಸ್ತರಣೆಯ ಮೂಲಕ ತಾನು ಇಡೀ ವಿಶ್ವ ಉದ್ಭೂತಿಯ ಆತ್ಮ ನಾಗಿರುವೆನೆಂದು ಕೃಷ್ಣನು ಮೊದಲು ಅರ್ಜುನನಿಗೆ ತಿಳಿಸುತ್ತಾನೆ. ಭೌತಿಕ ಸೃಷ್ಟಿಗೆ

ಪೂರ್ವದಲ್ಲಿ, ಪರಮ ಪ್ರಭುವು, ತನ್ನ ಸಮಗ್ರ ವಿಸ್ತರಣೆಯಿಂದ, ಪುರುಷಾವತಾರಗಳನ್ನು ಧರಿಸುತ್ತಾನೆ, ಮತ್ತು ಅವನಿಂದ ಪ್ರತಿಯೊಂದೂ ಪ್ರಾರಂಭವಾಗುತ್ತದೆ. ಆದ್ದರಿಂದ ಅವನು ಆತ್ಮ, ವಿಶ್ವದ ಮಹಾ ಭೂತಗಳಾದ ಮಹತ್ ತತ್ವದ ಆತ್ಮ. ಸಮಗ್ರ ಭೌತಿಕ ಶಕ್ತಿಯು ಸೃಷ್ಟಿಯ ಕಾರಣವಲ್ಲ; ವಾಸ್ತವಿಕವಾಗಿ ಮಹಾವಿಷ್ಣುವು ಸಮಗ್ರ ಭೌತಿಕ ಶಕ್ತಿಯಾದ, ಮಹತ್‌ತತ್ವದಲ್ಲಿ ಪ್ರವೇಶಿಸುತ್ತಾನೆ. ಅವನೇ ಆತ್ಮ. ಮಹಾ ವಿಷ್ಣುವು ಉದ್ಭೂತ ವಿಶ್ವಗಳೊಳಗೆ ಪ್ರವೇಶಿಸಿದಾಗ, ಅವನು ಪ್ರತಿಯೊಂದು ಜೀವಿಯಲ್ಲಿಯೂ ಮತ್ತೆ ಪರಮಾತ್ಮನಾಗಿ ಪ್ರಕಟವಾಗುತ್ತಾನೆ. ಆಧ್ಯಾತ್ಮ ಕಿಡಿಯ ಸಾನಿಧ್ಯದಿಂದ ಜೀವಿಯ ದೇಹವು ಅಸ್ತಿತ್ವದಲ್ಲಿರುವುದು ನಮಗೆ ಅನುಭವವಿದೆ. ಆಧ್ಯಾತ್ಮ ಕಿಡಿಯ ಅಸ್ತಿತ್ವವಿಲ್ಲದೆ, ದೇಹವು ಬೆಳೆಯಲಾರದು. ಅದೇ ಪ್ರಕಾರ, ಪರಮಾತ್ಮ, ಕೃಷ್ಣನು ಪ್ರವೇಶಿಸದ ಹೊರತು ಭೌತಿಕ ಉದ್ಭೂತಿಯು ಬೆಳೆಯಲಾರದು. **ಸುಬಲ ಉಪನಿಷತ್ತಿ**ನಲ್ಲಿ ಹೇಳಿರುವಂತೆ, **ಪ್ರಕೃತಿ-ಆದಿ-ಸರ್ವಭೂತಾಂತರ್-ಯಾಮೀ ಸರ್ವ ಶೇಷೀ ಚ ನಾರಾಯಣಃ:** 'ಪರಮ ದೇವೋತ್ತಮ ಪುರುಷನು ಎಲ್ಲ ಉದ್ಭೂತಿ ವಿಶ್ವಗಳಲ್ಲಿಯೂ ಪರಮಾತ್ಮನಾಗಿ ಇದ್ದಾನೆ.'

ಶ್ರೀಮದ್ ಭಾಗವತದಲ್ಲಿ ಮೂರು ಪುರುಷ-ಅವತಾರಗಳು ವರ್ಣಿತ. ಅವು **ಸಾತ್ವತ ತಂತ್ರ**ದಲ್ಲಿಯೂ ವರ್ಣಿತ. **ವಿಷ್ಣೋಸ್ತು ತ್ರೀಣಿ ರೂಪಾಣಿ ಪುರುಷಾಖ್ಯಾನಿ ಅಥೋ ವಿದುಃ :** ಪರಮ ದೇವೋತ್ತಮ ಪುರುಷನು ಮೂರು ಲಕ್ಷಣಗಳಲ್ಲಿ— ಕಾರಣೋದಕಶಾಯೀ ವಿಷ್ಣು, ಗರ್ಭೋದಕಶಾಯೀ ವಿಷ್ಣು ಮತ್ತು ಕ್ಷೀರೋದಕಶಾಯೀ ವಿಷ್ಣುವಾಗಿ ಈ ಭೌತಿಕ ಉದ್ಭೂತಿಯಲ್ಲಿ ಪ್ರಕಟವಾಗುತ್ತಾನೆ. ಮಹಾವಿಷ್ಣು ಅಥವಾ ಕಾರಣೋದಕಶಾಯಿ ವಿಷ್ಣುವು, ಬ್ರಹ್ಮ ಸಂಹಿತೆಯಲ್ಲಿ ವರ್ಣಿತ (5.47). **ಯಃ ಕಾರಣಾರ್ಣವ ಜಲೇ ಭಜತಿಸ್ಮ ಯೋಗ ನಿದ್ರಾಮ್:** ಪರಮ ಪ್ರಭು, ಸರ್ವಕಾರಣ ಕಾರಣನಾದ ಕೃಷ್ಣನು ಮಹಾವಿಷ್ಣುವಾಗಿ ವಿಶ್ವಜಲಧಿಯಲ್ಲಿ ಪವಡಿಸಿರುತ್ತಾನೆ. ಆದ್ದರಿಂದ, ಪರಮ ದೇವೋತ್ತಮ ಪುರುಷನು ಈ ವಿಶ್ವದ ಆದಿ, ವಿಶ್ವ ಉದ್ಭೂತಿಗಳ ಪಾಲಕ ಮತ್ತು ಸಕಲ ಶಕ್ತಿಯ ಅಂತ್ಯನಾಗಿದ್ದಾನೆ.

**ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್ ।**
**ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ ॥ ೨೧ ॥**

ಆದಿತ್ಯಾನಾಮ್—ಆದಿತ್ಯರಲ್ಲಿ, ಅಹಮ್—ನಾನು, ವಿಷ್ಣುಃ—ಪರಮ ಪ್ರಭು, ಜ್ಯೋತಿಷಾಮ್—ಜ್ಯೋತಿಗಳೆಲ್ಲದರಲ್ಲಿ, ರವಿಃ—ಸೂರ್ಯ, ಅಂಶು-ಮಾನ್—ಪ್ರಕಾಶ ಬೀರುವವನು, ಮರೀಚಿಃ—ಮರೀಚಿ, ಮರುತಾಮ್—ಮರುತ್ತುಗಳಲ್ಲಿ, ಅಸ್ಮಿ—ಆಗಿದ್ದೇನೆ, ನಕ್ಷತ್ರಾಣಾಮ್—ನಕ್ಷತ್ರಗಳಲ್ಲಿ, ಅಹಮ್—ನಾನು, ಶಶೀ—ಚಂದ್ರ.

**ಆದಿತ್ಯರಲ್ಲಿ ನಾನು ವಿಷ್ಣು, ಪ್ರಕಾಶವಸ್ತುಗಳಲ್ಲಿ ನಾನು ಪ್ರಕಾಶ ಬೀರುವ ಸೂರ್ಯ, ಮರುತ್ತುಗಳಲ್ಲಿ ನಾನು ಮರೀಚಿ ಮತ್ತು ನಕ್ಷತ್ರಗಳಲ್ಲಿ ನಾನು ಚಂದ್ರ.**

**ಭಾವಾರ್ಥ :** ದ್ವಾದಶ ಆದಿತ್ಯರಲ್ಲಿ ಕೃಷ್ಣನು ಪ್ರಧಾನ; ಆಕಾಶದಲ್ಲಿ ಮಿನುಗುವ ಎಲ್ಲ ಪ್ರಕಾಶಗಳಲ್ಲಿ ಸೂರ್ಯನು ಪ್ರಧಾನ, ಮತ್ತು ಬ್ರಹ್ಮ-ಸಂಹಿತೆಯಲ್ಲಿ ಸೂರ್ಯನನ್ನು

ಪರಮ ಪ್ರಭುವಿನ ತೇಜೋಮಯ ಕಣ್ಣು ಎಂದು ಅಂಗೀಕರಿಸಿದೆ. ಅಂತರಿಕ್ಷದಲ್ಲಿ ಐವತ್ತು ಬಗೆಯ ಮಾರುತಗಳು ಬೀಸುತ್ತವೆ ಮತ್ತು ಇವುಗಳ ನಿಯಂತ್ರಕ ದೇವತೆ ಮರೀಚಿಯು ಕೃಷ್ಣನನ್ನು ಪ್ರತಿನಿಧಿಸುತ್ತಾನೆ.

ನಕ್ಷತ್ರಗಳಲ್ಲಿ, ರಾತ್ರಿಯಲ್ಲಿ ಅತ್ಯಂತ ಎದ್ದು ಕಾಣುವವನು ಚಂದ್ರ, ಆದ್ದರಿಂದ ಚಂದ್ರನು ಕೃಷ್ಣನ ಪ್ರತಿನಿಧಿ. ನಕ್ಷತ್ರಗಳಲ್ಲಿ ಚಂದ್ರನು ಒಬ್ಬನೆಂದು ಈ ಶ್ಲೋಕದಿಂದ ಕಂಡುಬರುತ್ತದೆ; ಆದ್ದರಿಂದ ಆಕಾಶದಲ್ಲಿ ಮಿನುಗುವ ನಕ್ಷತ್ರಗಳು ಕೂಡ ಸೂರ್ಯ ಪ್ರಕಾಶವನ್ನು ಪ್ರತಿಬಿಂಬಿಸುತ್ತವೆ. ವಿಶ್ವದಲ್ಲಿ ಅನೇಕ ಸೂರ್ಯರಿದ್ದಾರೆ ಎಂಬ ತತ್ತ್ವವು ವೈದಿಕ ಸಾಹಿತ್ಯದಲ್ಲಿ ಅಂಗೀಕೃತವಲ್ಲ. ಸೂರ್ಯನು ಒಬ್ಬನೇ, ಮತ್ತು ಸೂರ್ಯನ ಪ್ರತಿಬಿಂಬದಿಂದ ಚಂದ್ರನು ಪ್ರಕಾಶಬೀರುವಂತೆ, ನಕ್ಷತ್ರಗಳೂ ಕೂಡ ಪ್ರತಿಬಿಂಬಿಸುತ್ತವೆ. ಭಗವದ್ಗೀತೆಯಲ್ಲಿ ಚಂದ್ರನು ನಕ್ಷತ್ರಗಳಲ್ಲಿ ಒಂದು ಎಂದು ಸೂಚಿಸಿರುವುದರಿಂದ, ಮಿನುಗುವ ತಾರೆಗಳು ಸೂರ್ಯರಲ್ಲ, ಅವು ಚಂದ್ರನಂತೆಯೇ.

**ವೇದಾನಾಂ ಸಾಮ-ವೇದೋಽಸ್ಮಿ ದೇವಾನಾಮಸ್ಮಿ ವಾಸವಃ ।**
**ಇನ್ದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ॥ ೨೨ ॥**

ವೇದಾನಾಮ್—ಎಲ್ಲ ವೇದಗಳಲ್ಲಿ, ಸಾಮ-ವೇದಃ—ಸಾಮ ವೇದ, ಅಸ್ಮಿ—ಆಗಿದ್ದೇನೆ, ದೇವಾನಾಮ್—ಎಲ್ಲ ದೇವತೆಗಳಲ್ಲಿ, ಅಸ್ಮಿ—ಆಗಿದ್ದೇನೆ, ವಾಸವಃ—ಸ್ವರ್ಗಾಧಿಪತಿ, ಇನ್ದ್ರಿಯಾಣಾಮ್—ಎಲ್ಲ ಇಂದ್ರಿಯಗಳಲ್ಲಿ, ಮನಃ—ಮನಸ್ಸು, ಚ—ಕೂಡ, ಅಸ್ಮಿ—ಆಗಿದ್ದೇನೆ, ಭೂತಾನಾಮ್—ಎಲ್ಲ ಜೀವಿಗಳಲ್ಲಿ, ಅಸ್ಮಿ—ಆಗಿದ್ದೇನೆ, ಚೇತನಾ—ಚೇತನ ಬಲ.

**ವೇದಗಳಲ್ಲಿ ನಾನು ಸಾಮವೇದ; ದೇವತೆಗಳಲ್ಲಿ ನಾನು ಸ್ವರ್ಗಾಧಿಪತಿಯಾದ ಇಂದ್ರ; ಇಂದ್ರಿಯಗಳಲ್ಲಿ ನಾನು ಮನಸ್ಸು; ಮತ್ತು ಜೀವಿಗಳಲ್ಲಿ ನಾನು ಚೇತನ ಬಲ (ಪ್ರಜ್ಞೆ).**

**ಭಾವಾರ್ಥ :** ಜಡ ಮತ್ತು ಚೇತನಗಳಲ್ಲಿ ವ್ಯತ್ಯಾಸವೆಂದರೆ ಜಡಕ್ಕೆ ಜೀವಿಯ ಹಾಗೆ ಪ್ರಜ್ಞೆಯಿಲ್ಲ; ಆದ್ದರಿಂದ ಈ ಪ್ರಜ್ಞೆಯು ಪರಮ ಮತ್ತು ನಿತ್ಯ. ಪ್ರಜ್ಞೆಯನ್ನು ಯಾವುದಾದರೂ ಜಡ ಸಂಯೋಜನೆಯಿಂದ ಉತ್ಪತ್ತಿಮಾಡಲಾಗದು.

**ರುದ್ರಾಣಾಂ ಶಂಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಮ್ ।**
**ವಸೂನಾಂ ಪಾವಕಶ್ಚಾಸ್ಮಿ ಮೇರುಃ ಶಿಖರಿಣಾಮಹಮ್ ॥ ೨೩ ॥**

ರುದ್ರಾಣಾಮ್—ಎಲ್ಲ ರುದ್ರರಲ್ಲಿ, ಶಂಕರಃ—ಭಗವಾನ್ ಶಿವನು, ಚ—ಕೂಡ, ಅಸ್ಮಿ—ಆಗಿದ್ದೇನೆ. ವಿತ್ತೇಶಃ—ದೇವತೆಗಳ ಕೋಶಾಧಿಪತಿ. ಯಕ್ಷರಕ್ಷಸಾಮ್—ಯಕ್ಷ ರಾಕ್ಷಸರಲ್ಲಿ, ವಸೂನಾಮ್—ವಸುಗಳಲ್ಲಿ, ಪಾವಕಃ—ಅಗ್ನಿ, ಚ—ಕೂಡ, ಅಸ್ಮಿ—ಆಗಿದ್ದೇನೆ, ಮೇರುಃ—ಮೇರು, ಶಿಖರಿಣಾಮ್—ಎಲ್ಲ ಪರ್ವತಗಳಲ್ಲಿ, ಅಹಮ್—ನಾನು.

**ರುದ್ರರೆಲ್ಲರಲ್ಲಿ ನಾನು ಶಿವನು, ಯಕ್ಷರಾಕ್ಷಸರಲ್ಲಿ ನಾನು ಧನಾಧಿಪತಿ (ಕುಬೇರ), ವಸುಗಳಲ್ಲಿ ನಾನು ಅಗ್ನಿ ಮತ್ತು ಪರ್ವತಗಳಲ್ಲಿ ನಾನು ಮೇರು.**

**ಭಾವಾರ್ಥ :** ಏಕಾದಶ ರುದ್ರರಿದ್ದಾರೆ ಅವರಲ್ಲಿ ಶಂಕರನು, ಭಗವಾನ್ ಶಿವನು ಪ್ರಮುಖನು. ಅವನು ವಿಶ್ವದಲ್ಲಿ ತಮೋಗುಣ ಪ್ರಭಾರಿಯಾಗಿ, ಪರಮ ಪ್ರಭುವಿನ ಅವತಾರ. ಯಕ್ಷರಾಕ್ಷಸರ ನಾಯಕನು ದೇವತೆಗಳ ಕೋಶಾಧಿಪತಿ ಕುಬೇರ, ಮತ್ತು ಅವನು ಪರಮ ಪ್ರಭುವಿನ ಪ್ರತಿನಿಧಿ. ನೈಸರ್ಗಿಕ ಸಂಪನ್ಮೂಲಗಳಿಗೆ ಮೇರು ಹೆಸರಾದ ಪರ್ವತ.

**ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಮ್ ।**
**ಸೇನಾನೀನಾಮಹಂ ಸ್ಕನ್ದಃ ಸರಸಾಮಸ್ಮಿ ಸಾಗರಃ ॥ ೨೪ ॥**

ಪುರೋಧಸಾಂ—ಎಲ್ಲ ಪುರೋಹಿತರಲ್ಲಿ, ಚ—ಕೂಡ, ಮುಖ್ಯಮ್—ಮುಖ್ಯನು, ಮಾಮ್—ನಾನು, ವಿದ್ಧಿ—ತಿಳಿದುಕೋ, ಪಾರ್ಥ—ಹೇ ಪೃಥಾ ಪುತ್ರನೇ, ಬೃಹಸ್ಪತಿಮ್—ಬೃಹಸ್ಪತಿ, ಸೇನಾನೀನಾಮ್—ಎಲ್ಲ ಸೇನಾಪತಿಗಳಲ್ಲಿ, ಅಹಮ್—ನಾನು, ಸ್ಕನ್ದಃ—ಕಾರ್ತಿಕೇಯ. ಸರಸಾಮ್—ಎಲ್ಲ ಜಲಾಶಯಗಳಲ್ಲಿ, ಅಸ್ಮಿ—ಆಗಿದ್ದೇನೆ, ಸಾಗರ—ಸಾಗರ.

**ಹೇ ಅರ್ಜುನ, ಪುರೋಹಿತರಲ್ಲಿ ನಾನು ಮುಖ್ಯನಾದ ಬೃಹಸ್ಪತಿ ಎಂದು ತಿಳಿದುಕೋ. ಸೇನಾಧಿಪತಿಗಳಲ್ಲಿ ನಾನು ಕಾರ್ತಿಕೇಯ, ಮತ್ತು ಜಲರಾಶಿಗಳಲ್ಲಿ ನಾನು ಸಾಗರ.**

**ಭಾವಾರ್ಥ :** ಇಂದ್ರನು ಸ್ವರ್ಗಲೋಕಗಳ ದೇವತಾ ಮುಖ್ಯನು ಮತ್ತು ಸ್ವರ್ಗಗಳ ರಾಜನೆಂದು ತಿಳಿಯಲ್ಪಟ್ಟಿರುವನು. ಅವನು ಆಳುವ ಲೋಕವನ್ನು ಇಂದ್ರಲೋಕ ಎಂದು ಕರೆದಿದೆ. ಬೃಹಸ್ಪತಿಯು ಇಂದ್ರನ ಪುರೋಹಿತನು, ಇಂದ್ರನು ಎಲ್ಲ ರಾಜರ ಮುಖ್ಯನಾಗಿರುವುದರಿಂದ, ಬೃಹಸ್ಪತಿಯು ಎಲ್ಲ ಪುರೋಹಿತರಲ್ಲಿ ಮುಖ್ಯನು, ಮತ್ತು ಇಂದ್ರನು ಸಕಲ ರಾಜರ ಮುಖ್ಯನಾಗಿರುವಂತೆ, ಪಾರ್ವತಿ ಮತ್ತು ಭಗವಾನ್ ಶಿವರ ಪುತ್ರನಾದ ಸ್ಕಂದ ಅಥವಾ ಕಾರ್ತಿಕೇಯನು ಎಲ್ಲ ಸೇನಾಪತಿಗಳಲ್ಲಿ ಮುಖ್ಯನು. ಜಲರಾಶಿಗಳಲ್ಲಿ ಸಾಗರವು ಅತ್ಯಂತ ದೊಡ್ಡದು. ಕೃಷ್ಣನ ಈ ಪ್ರಾತಿನಿಧ್ಯಗಳು ಅವನ ಮಹತ್ವವನ್ನು ಮಾತ್ರ ಸೂಚಿಸುತ್ತವೆ.

**ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಮ್ ।**
**ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ ಹಿಮಾಲಯಃ ॥ ೨೫ ॥**

ಮಹಾಋಷೀಣಾಮ್—ಮಹರ್ಷಿಗಳಲ್ಲಿ, ಭೃಗುಃ—ಭೃಗು, ಅಹಮ್—ನಾನು, ಗಿರಾಮ್—ಶಬ್ದಗಳಲ್ಲಿ, ಅಸ್ಮಿ—ಆಗಿದ್ದೇನೆ, ಏಕಮಕ್ಷರಮ್—ಪ್ರಣವ, ಯಜ್ಞಾನಾಮ್—ಯಜ್ಞಗಳಲ್ಲಿ, ಜಪ-ಯಜ್ಞಃ—ಜಪ, ಅಸ್ಮಿ—ಆಗಿದ್ದೇನೆ, ಸ್ಥಾವರಾಣಾಮ್—ಸ್ಥಿರವಸ್ತುಗಳಲ್ಲಿ, ಹಿಮಾಲಯಃ—ಹಿಮಾಲಯ ಪರ್ವತಗಳು.

**ಮಹರ್ಷಿಗಳಲ್ಲಿ ನಾನು ಭೃಗು; ಶಬ್ದಗಳಲ್ಲಿ ನಾನು ದಿವ್ಯ ಓಂಕಾರ, ಯಜ್ಞಗಳಲ್ಲಿ ನಾನು ಪುಣ್ಯನಾಮಗಳ ಜಪ, ಮತ್ತು ಸ್ಥಿರ ವಸ್ತುಗಳಲ್ಲಿ ನಾನು ಹಿಮಾಲಯವಾಗಿದ್ದೇನೆ.**

**ಭಾವಾರ್ಥ :** ವಿಶ್ವದಲ್ಲಿ ಪ್ರಥಮ ಜೀವಿಯಾದ ಬ್ರಹ್ಮನು ನಾನಾ ಬಗೆಯ ಯೋನಿಗಳ ಪ್ರಾಚಾರ್ಯಕ್ಕಾಗಿ ಅನೇಕ ಪುತ್ರರನ್ನು ಸೃಷ್ಟಿಸಿದನು. ಈ ಪುತ್ರರಲ್ಲಿ ಭೃಗು ಅತ್ಯಂತ ಬಲಿಷ್ಠ ಋಷಿ. ಎಲ್ಲ ದಿವ್ಯ ಶಬ್ದಗಳಲ್ಲಿ ಓಂಕಾರವು ಕೃಷ್ಣನನ್ನು ಪ್ರತಿನಿಧಿಸುತ್ತದೆ. ಎಲ್ಲ ಯಜ್ಞಗಳಲ್ಲಿ, ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ ಕೃಷ್ಣನ ಅತ್ಯಂತ ಶುದ್ಧ ಪ್ರಾತಿನಿಧ್ಯ. ಕೆಲವು ಸಲ ಪಶು ಬಲಿ ಕೊಡುವಂತೆ ಹೇಳಿದೆ, ಆದರೆ ಹರೇ ಕೃಷ್ಣ, ಹರೇ ಕೃಷ್ಣ, ಈ ಯಜ್ಞದಲ್ಲಿ ಹಿಂಸೆಯೇ ಇಲ್ಲ. ಅದು ಅತ್ಯಂತ ಸರಳ ಮತ್ತು ಅತ್ಯಂತ ಶುದ್ಧ. ಜಗತ್ತಿನಲ್ಲಿ ಮಹೋನ್ನತವಾದುದೆಲ್ಲ ಕೃಷ್ಣ ಪ್ರಾತಿನಿಧ್ಯ. ಆದ್ದರಿಂದ ಜಗತ್ತಿನಲ್ಲಿ ಅತಿ ದೊಡ್ಡ ಪರ್ವತವಾದ ಹಿಮಾಲಯವು ಕೂಡ ಅವನನ್ನು ಪ್ರತಿನಿಧಿಸುತ್ತದೆ. ಹಿಂದಿನ ಶ್ಲೋಕದಲ್ಲಿ ಮೇರು ಪರ್ವತವು ಪ್ರಸ್ತಾಪಿತವಾಯಿತು, ಆದರೆ ಮೇರು ಪರ್ವತವು ಕೆಲವು ಸಲ ಚಲನಶೀಲ, ಆದರೆ ಹಿಮಾಲಯವು ಎಂದೂ ಚಲಿಸದು. ಆದ್ದರಿಂದ ಹಿಮಾಲಯವು ಮೇರುವಿಗಿಂತ ದೊಡ್ಡದು.

**ಅಶ್ವತ್ಥಃ ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ ।**
**ಗನ್ಧರ್ವಾಣಾಂ ಚಿತ್ರರಥಃ ಸಿದ್ಧಾನಾಂ ಕಪಿಲೋ ಮುನಿಃ ॥೨೬॥**

ಅಶ್ವತ್ಥಃ—ಅಶ್ವತ್ಥ ಮರ, ಸರ್ವವೃಕ್ಷಾಣಾಮ್—ಎಲ್ಲ ವೃಕ್ಷಗಳಲ್ಲಿ, ದೇವಋಷೀ-ಣಾಮ್—ಎಲ್ಲ ದೇವ ಋಷಿಗಳಲ್ಲಿ, ಚ—ಮತ್ತು, ನಾರದಃ—ನಾರದ, ಗನ್ಧರ್ವಾ-ಣಾಮ್—ಗಂಧರ್ವಲೋಕದ ಪ್ರಜೆಗಳಲ್ಲಿ, ಚಿತ್ರರಥಃ—ಚಿತ್ರರಥ, ಸಿದ್ಧಾನಾಮ್—ಸಿದ್ಧರಲ್ಲಿ, ಕಪಿಲಃ-ಮುನಿಃ—ಕಪಿಲಮುನಿ.

**ಎಲ್ಲ ವೃಕ್ಷಗಳಲ್ಲಿ ನಾನು ಅಶ್ವತ್ಥಮರ, ಮತ್ತು ಎಲ್ಲ ದೇವಋಷಿಗಳಲ್ಲಿ ನಾನು ನಾರದ. ಗಂಧರ್ವರಲ್ಲಿ ನಾನು ಚಿತ್ರರಥ, ಮತ್ತು ಸಿದ್ಧರಲ್ಲಿ ನಾನು ಕಪಿಲ ಮುನಿ.**

**ಭಾವಾರ್ಥ :** ಅಶ್ವತ್ಥ ವೃಕ್ಷವು ವೃಕ್ಷಗಳಲ್ಲಿ ಅತ್ಯಂತ ಎತ್ತರ ಮತ್ತು ಅತ್ಯಂತ ಸುಂದರವಾದ ವೃಕ್ಷ, ಮತ್ತು ಭಾರತದಲ್ಲಿ ಜನರು ಅದನ್ನು ತಮ್ಮ ಪ್ರಾತಃಕ್ರಿಯೆಗಳಲ್ಲಿ ಒಂದಾಗಿ ಪೂಜಿಸುತ್ತಾರೆ. ದೇವಋಷಿಗಳಲ್ಲಿ ವಿಶ್ವದಲ್ಲಿ ಮಹಾನ್ ಭಕ್ತನೆನಿಸಿದ ನಾರದರನ್ನು ಪೂಜಿಸುತ್ತಾರೆ. ಆದ್ದರಿಂದ ಅವರು ಕೃಷ್ಣನ ಪ್ರತಿನಿಧಿಯಾದ ಭಕ್ತರು. ಗಂಧರ್ವಲೋಕವು ಸುಂದರ ಗಾಯಕರಿಂದ ತುಂಬಿದೆ, ಮತ್ತು ಅವರಲ್ಲಿ ಅತ್ಯುತ್ತಮ ಗಾಯಕನು ಚಿತ್ರರಥ. ದೇವಹೂತಿಯ ಪುತ್ರನಾದ ಕಪಿಲನು ಸಿದ್ಧರಲ್ಲಿ ಕೃಷ್ಣನ ಒಬ್ಬ ಪ್ರತಿನಿಧಿ. ಅವನನ್ನು ಕೃಷ್ಣನ ಅವತಾರವೆಂದು ಭಾವಿಸಿದೆ, ಮತ್ತು ಅವನ ತತ್ತ್ವ ದರ್ಶನವು ಶ್ರೀಮದ್ ಭಾಗವತದಲ್ಲಿ ಪ್ರಸ್ತಾಪಿತವಾಗಿದೆ. ಮತ್ತೊಬ್ಬ ಕಪಿಲನು ಅನಂತರ ಪ್ರಸಿದ್ಧನಾದನು, ಆದರೆ ಅವನ ತತ್ತ್ವದರ್ಶನವು ನಾಸ್ತಿಕವಾದುದು. ಅವರಲ್ಲಿ ಅತ್ಯಂತ ಅಂತರವಿದೆ.

**ಉಚ್ಚೈಃ ಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಮ್ ।**
**ಐರಾವತಂ ಗಜೇನ್ದ್ರಾಣಾಂ ನರಾಣಾಂ ಚ ನರಾಧಿಪಮ್ ॥೨೭॥**

ಉಚ್ಚೈಃ-ಶ್ರವಸಮ್—ಉಚ್ಚೈಃಶ್ರವಾ, ಅಶ್ವಾನಾಮ್—ಕುದುರೆಗಳಲ್ಲಿ, ವಿದ್ಧಿ—ತಿಳಿದುಕೊ, ಮಾಮ್—ನನ್ನನ್ನು, ಅಮೃತ ಉದ್ಭವಮ್—ಸಾಗರ ಮಥನದಿಂದ ಉತ್ಪನ್ನ, ಐರಾವತಮ್—ಐರಾವತ, ಗಜ-ಇನ್ದ್ರಾಣಾಮ್—ಗಜೇಂದ್ರಗಳ, ನರಾಣಾಮ್—ಮಾನವರಲ್ಲಿ, ಚ—ಮತ್ತು, ನರಾಧಿಪಮ್—ರಾಜ.

**ಸಮುದ್ರ ಮಥನದಲ್ಲಿ ಉತ್ಪತ್ತಿಯಾದ ಅಶ್ವಗಳಲ್ಲಿ ನಾನು ಉಚ್ಚೈಃಶ್ರವ ಎಂದು ತಿಳಿದುಕೊ; ಗಜೇಂದ್ರಗಳಲ್ಲಿ ನಾನು ಐರಾವತ, ಮತ್ತು ಮಾನವರಲ್ಲಿ ನಾನು ರಾಜನು.**

**ಭಾವಾರ್ಥ :** ಭಕ್ತರಾದ ದೇವತೆಗಳು ಮತ್ತು ಅಸುರರು ಒಂದು ಸಲ ಸಮುದ್ರ ಮಥನದಲ್ಲಿ ಭಾಗವಹಿಸಿದರು. ಈ ಮಥನದಿಂದ ಅಮೃತ ಮತ್ತು ವಿಷ ಉತ್ಪನ್ನವಾದವು, ಮತ್ತು ಭಗವಾನ್ ಶಿವನು ವಿಷವನ್ನು ಪಾನ ಮಾಡಿದನು. ಅಮೃತದಿಂದ ಉತ್ಪನ್ನವಾದ ಅನೇಕ ಜೀವಿಗಳಲ್ಲಿ ಉಚ್ಚೈಃಶ್ರವ ಎಂಬ ಕುದುರೆಯು ಒಂದು, ಅಮೃತದಿಂದ ಉತ್ಪನ್ನವಾದ ಮತ್ತೊಂದು ಪ್ರಾಣಿಯು ಐರಾವತವೆಂಬ ಗಜ. ಈ ಎರಡು ಪ್ರಾಣಿಗಳು ಅಮೃತದಿಂದ ಉತ್ಪನ್ನವಾದ್ದರಿಂದ, ಅವುಗಳಿಗೆ ವಿಶೇಷ ಮಹತ್ವವಿದೆ, ಮತ್ತು ಅವು ಕೃಷ್ಣನ ಪ್ರತಿನಿಧಿ

ಮಾನವರಲ್ಲಿ ರಾಜನು ಕೃಷ್ಣನ ಪ್ರತಿನಿಧಿ, ಏಕೆಂದರೆ ಕೃಷ್ಣನು ವಿಶ್ವದ ಪಾಲಕನು, ಮತ್ತು ರಾಜರು ತಮ್ಮ ದೈವೀ ಅರ್ಹತೆಗಳ ನಿಮಿತ್ತ ನಿಯುಕ್ತರಾಗಿ, ತಮ್ಮ ರಾಜ್ಯಗಳ ಪಾಲಕರು, ಯುಧಿಷ್ಠಿರ ಮಹಾರಾಜ, ಪರೀಕ್ಷಿತ ಮಹಾರಾಜ ಮತ್ತು ಶ್ರೀರಾಮ, ಅವರೆಲ್ಲರೂ ತಮ್ಮ ಪ್ರಜೆಗಳ ಯೋಗಕ್ಷೇಮವನ್ನು ಸದಾ ಚಿಂತಿಸಿದ ಅತ್ಯಂತ ಧರ್ಮಿಷ್ಠ ರಾಜರಾಗಿದ್ದರು. ವೇದ ಸಾಹಿತ್ಯದಲ್ಲಿ, ರಾಜನು ಭಗವಂತನ ಪ್ರತಿನಿದಿ ಎಂದು ಭಾವಿಸಿದೆ. ಆದರೆ ಈ ಯುಗದಲ್ಲಿ ಧರ್ಮತತ್ವಗಳ ಭ್ರಷ್ಟಾಚರಣೆಯಿಂದ ರಾಜ ಪದ್ಧತಿಯು ಕ್ಷೀಣಿಸಿತು ಮತ್ತು ಈಗ ಕೊನೆಯದಾಗಿ ವಿಸರ್ಜಿತವಾಗಿದೆ. ಆದರೆ ಹಿಂದೆ ಜನರು ಧರ್ಮಿಷ್ಠ ರಾಜರ ಆಳಿಕೆಯಲ್ಲಿ ಹೆಚ್ಚು ಸುಖಿಯಾಗಿದ್ದರೆಂಬುದನ್ನು ತಿಳಿಯಬೇಕು.

**ಆಯುಧಾನಾಮಹಂ ವಜ್ರಂ ಧೇನೂನಾಮಸ್ಮಿ ಕಾಮಧುಕ್ ।**
**ಪ್ರಜನಾಶ್ಚಾಸ್ಮಿ ಕನ್ದರ್ಪಃ ಸರ್ಪಾಣಾಮಸ್ಮಿ ವಾಸುಕಿಃ ॥ ೨೮ ॥**

ಆಯುಧಾನಾಮ್—ಆಯುಧಗಳೆಲ್ಲದರಲ್ಲಿ, ಅಹಮ್—ನಾನು, ವಜ್ರಮ್—ವಜ್ರಾಯುಧ, ಧೇನೂನಾಮ್—ಹಸುಗಳಲ್ಲಿ, ಅಸ್ಮಿ—ಆಗಿದ್ದೇನೆ, ಕಾಮ-ಧುಕ್—ಸುರಭಿ ಹಸು, ಪ್ರಜನಃ—ಮಕ್ಕಳನ್ನು ಪಡೆಯಲು ಕಾರಣ, ಚ—ಮತ್ತು, ಅಸ್ಮಿ—ಆಗಿದ್ದೇನೆ, ಕನ್ದರ್ಪಃ—ಮನ್ಮಥ, ಸರ್ಪಾಣಾಮ್—ಸರ್ಪಗಳಲ್ಲಿ, ಅಸ್ಮಿ—ಆಗಿದ್ದೇನೆ, ವಾಸುಕಿಃ—ವಾಸುಕಿ.

**ಆಯುಧಗಳಲ್ಲಿ ನಾನು ವಜ್ರಾಯುಧ, ಹಸುಗಳಲ್ಲಿ ನಾನು ಸುರಭಿ. ಸಂತಾನೋತ್ಪತ್ತಿ ಕಾರಣಗಳಲ್ಲಿ ಕಾಮದೇವನಾದ ನಾನು ಕಂದರ್ಪನು ಮತ್ತು ಸರ್ಪಗಳಲ್ಲಿ ನಾನು ವಾಸುಕಿ.**

**ಭಾವಾರ್ಥ :** ನಿಜವಾಗಿಯೂ ಬಲವಾದ ವಜ್ರಾಯುಧವು ಕೃಷ್ಣನ ಶಕ್ತಿಯನ್ನು ಪ್ರತಿನಿಧಿಸುತ್ತದೆ. ಪರವ್ಯೋಮದ ಕೃಷ್ಣಲೋಕದಲ್ಲಿ ಯಾವಾಗಲೂ ಹಾಲು ಕರೆಯಬಹುದಾದ ಹಸುಗಳಿವೆ ಮತ್ತು ಅವು ಒಬ್ಬನು ಬಯಸಿದಷ್ಟು ಹಾಲು ನೀಡುತ್ತವೆ. ಅಂಥ ಹಸುಗಳು ಈ ಭೌತಿಕ ಜಗತ್ತಿನಲ್ಲಿ ಇಲ್ಲ. ಆದರೆ ಅವು ಕೃಷ್ಣಲೋಕದಲ್ಲಿರುವುದು ಪ್ರಸ್ತಾಪಿತ. ಭಗವಂತನು, ಸುರಭಿ ಎಂದು ಕರೆಯುವ ಅನೇಕ ಹಸುಗಳನ್ನು ಇಟ್ಟುಕೊಂಡಿದ್ದಾನೆ. ಭಗವಂತನು ಸುರಭಿ ಹಸುಗಳನ್ನು ಮೇಯಿಸುವುದರಲ್ಲಿ ನಿರತನೆಂದು ಹೇಳಿದೆ. ಸತ್ಪುತ್ರ ಪ್ರಾಪ್ತಿಗೆ ಕಂದರ್ಪನು ಕಾಮೇಚ್ಛೆ; ಆದ್ದರಿಂದ ಕಂದರ್ಪನು ಕೃಷ್ಣನ ಪ್ರತಿನಿಧಿ. ಕೆಲವು ಸಲ ಕೇವಲ ಇಂದ್ರಿಯ ತೋಷಣೆಗಾಗಿ ಲೈಂಗಿಕ ಕ್ರಿಯೆ ನಡೆಯುತ್ತದೆ, ಅಂಥ ಲೈಂಗಿಕ ಕ್ರಿಯೆಯು ಕೃಷ್ಣನನ್ನು ಪ್ರತಿನಿಧಿಸುವುದಿಲ್ಲ. ಆದರೆ ಒಳ್ಳೆಯ ಮಕ್ಕಳ ಉತ್ಪತ್ತಿಗಾಗಿ ಲೈಂಗಿಕ ಕ್ರಿಯೆಯನ್ನು ಕಂದರ್ಪ ಎಂದು ಕರೆದಿದೆ ಮತ್ತು ಅದು ಕೃಷ್ಣನನ್ನು ಪ್ರತಿನಿಧಿಸುತ್ತದೆ.

**ಅನನ್ತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಮ್ ।**
**ಪಿತೃಣಾಮರ್ಯಮಾ ಚಾಸ್ಮಿ ಯಮಃ ಸಂಯಮತಾಮಹಮ್ ॥ ೨೯ ॥**

ಅನನ್ತಃ—ಅನಂತ, ಚ—ಕೂಡ, ಅಸ್ಮಿ—ಆಗಿದ್ದೇನೆ, ನಾಗಾನಾಮ್—ಅನೇಕ ಹೆಡೆಗಳುಳ್ಳ ಸರ್ಪಗಳಲ್ಲಿ, ವರುಣಃ—ಜಲನಿಯಂತ್ರಣ ದೇವತೆ. ಯಾದಸಾಮ್—ಜಲಚರಗಳೆಲ್ಲದರಲ್ಲಿ, ಅಹಮ್—ನಾನು, ಪಿತೃಣಾಮ್—ಪಿತೃಗಳಲ್ಲಿ, ಅರ್ಯಮಾ—ಅರ್ಯಮಾ, ಚ—ಕೂಡ, ಅಸ್ಮಿ—ಆಗಿದ್ದೇನೆ, ಯಮಃ—ಮೃತ್ಯುನಿಯಾಮಕ, ಸಂಯಮತಾಮ್—ಎಲ್ಲ ನಿಯಾಮಕರಲ್ಲಿ, ಅಹಮ್—ನಾನು.

**ಅನೇಕ ಹೆಡೆಗಳುಳ್ಳ ನಾಗಗಳಲ್ಲಿ ನಾನು ಅನಂತ ಮತ್ತು ಜಲಚರಗಳಲ್ಲಿ ನಾನು ವರುಣದೇವನು. ಅಗಲಿದ ಪಿತೃಗಳಲ್ಲಿ ನಾನು ಅರ್ಯಮಾ, ಮತ್ತು ನ್ಯಾಯದಾನಿಗಳಲ್ಲಿ ನಾನು ಮೃತ್ಯುದೇವತೆಯಾದ ಯಮನಾಗಿದ್ದೇನೆ.**

**ಭಾವಾರ್ಥ :** ಜಲಚರಗಳಲ್ಲಿ ವರುಣ ದೇವನಿದ್ದಂತೆ, ಅನೇಕ ಹೆಡೆಗಳುಳ್ಳ ನಾಗ ಸರ್ಪಗಳಲ್ಲಿ ಅನಂತನು ಅತ್ಯಂತ ದೊಡ್ಡವನು. ಇಬ್ಬರೂ ಕೃಷ್ಣನನ್ನು ಪ್ರತಿನಿಧಿಸುತ್ತಾರೆ. ಕೃಷ್ಣ ಪ್ರತಿನಿಧಿ ಅರ್ಯಮನು ಅಧಿಪತಿಯಾಗಿರುವ ಪಿತೃಲೋಕವೂ ಇದೆ. ದುಷ್ಟರನ್ನು ದಂಡಿಸುವ ಅನೇಕ ಜೀವಿಗಳಿದ್ದಾರೆ, ಅವರಲ್ಲಿ ಯಮನು ಮುಖ್ಯನು. ಯಮನು ಭೂಲೋಕಕ್ಕೆ ಹತ್ತಿರದ ಲೋಕದಲ್ಲಿದ್ದಾನೆ. ಬಹಳ ಪಾಪಿಗಳಾದವರನ್ನು ಮರಣಾನಂತರ ಅಲ್ಲಿಗೆ ಕರೆದೊಯ್ಯಲಾಗುತ್ತದೆ, ಮತ್ತು ಯಮನು ಅವರಿಗೆ ವಿವಿಧ ಪ್ರಕಾರದ ದಂಡನೆಗಳನ್ನು ವಿಧಿಸುತ್ತಾನೆ.

**ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾಮಹಮ್ ।**
**ಮೃಗಾಣಾಂ ಚ ಮೃಗೇನ್ದ್ರೋಽಹಂ ವೈನತೇಯಶ್ಚ ಪಕ್ಷಿಣಾಮ್ ॥ ೩೦ ॥**

ಪ್ರಹ್ಲಾದಃ—ಪ್ರಹ್ಲಾದ, ಚ—ಮತ್ತು, ಅಸ್ಮಿ—ಆಗಿದ್ದೇನೆ, ದೈತ್ಯಾನಾಮ್—ದೈತ್ಯರಲ್ಲಿ, ಕಾಲಃ—ಕಾಲ, ಕಲಯತಾಮ್—ಕ್ಷಯಕಾರಕರಲ್ಲಿ, ಅಹಮ್—ನಾನು, ಮೃಗಾಣಾಮ್—ಮೃಗಗಳಲ್ಲಿ, ಚ—ಮತ್ತು, ಮೃಗ-ಇನ್ದ್ರ—ಸಿಂಹ, ಅಹಮ್—ನಾನು, ವೈನತೇಯಃ—ಗರುಡ, ಚ—ಕೂಡ, ಪಕ್ಷಿಣಾಮ್—ಪಕ್ಷಿಗಳಲ್ಲಿ.

**ದೈತ್ಯರಲ್ಲಿ ನಾನು ಭಕ್ತ ಪ್ರಹ್ಲಾದ, ಕ್ಷಯಕಾರಕರಲ್ಲಿ ನಾನು ಕಾಲ, ಮೃಗಗಳಲ್ಲಿ ನಾನು ಸಿಂಹ, ಮತ್ತು ಪಕ್ಷಿಗಳಲ್ಲಿ ನಾನು ಗರುಡ.**

**ಭಾವಾರ್ಥ :** ದಿತಿ ಮತ್ತು ಅದಿತಿ ಇಬ್ಬರು ಸೋದರಿಯರು. ಅದಿತಿಯ ಪುತ್ರರು ಆದಿತ್ಯರು, ದಿತಿಯ ಪುತ್ರರು ದೈತ್ಯರು. ಆದಿತ್ಯರೆಲ್ಲರೂ ಭಗವದ್ಭಕ್ತರು, ಮತ್ತು ದೈತ್ಯರೆಲ್ಲರೂ ನಾಸ್ತಿಕರು. ಪ್ರಹ್ಲಾದನು ದೈತ್ಯ ಕುಲದಲ್ಲಿ ಹುಟ್ಟಿದ್ದರೂ, ಅವನು ಬಾಲ್ಯದಿಂದಲೇ ಮಹಾ ಭಕ್ತನಾಗಿದ್ದನು, ಅವನ ಭಕ್ತಿಯುತ ಸೇವೆ ಮತ್ತು ದೈವೀ ಸ್ವಭಾವದ ನಿಮಿತ್ತ ಅವನು ಕೃಷ್ಣನ ಪ್ರತಿನಿಧಿ ಎಂದು ಭಾವಿಸಿದೆ.

ಅನೇಕ ಕ್ಷಯಕಾರಕ ತತ್ವಗಳಿವೆ, ಆದರೆ ಭೌತಿಕ ವಿಶ್ವದಲ್ಲಿ ಕಾಲವು ಎಲ್ಲವನ್ನೂ ಕ್ಷೀಣಿಸುವುದು, ಆದ್ದರಿಂದ ಅದು ಕೃಷ್ಣನನ್ನು ಪ್ರತಿನಿಧಿಸುತ್ತದೆ. ಅನೇಕ ಪ್ರಾಣಿಗಳಲ್ಲಿ ಸಿಂಹವು ಅತ್ಯಂತ ಬಲಿಷ್ಠ ಮತ್ತು ಹಿಂಸ್ರಕ ಮತ್ತು ಲಕ್ಷೋಪಲಕ್ಷ ಪಕ್ಷಿ ವೈವಿಧ್ಯಗಳಲ್ಲಿ ಶ್ರೀವಿಷ್ಣುವಿನ ವಾಹನನಾದ ಗರುಡನು ಎಲ್ಲಕ್ಕಿಂತ ದೊಡ್ಡ ಪಕ್ಷಿ.

**ಪವನಃ ಪವತಾಮಸ್ಮಿ ರಾಮಃ ಶಸ್ತ್ರಭೃತಾಮಹಮ್ ।**
**ಝಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ ॥ ೩೧ ॥**

ಪವನಃ—ಮಾರುತ, ಪವತಾಮ್—ಶುದ್ಧಗೊಳಿಸುವೆಲ್ಲದರಲ್ಲಿ, ಅಸ್ಮಿ—ಆಗಿದ್ದೇನೆ. ರಾಮಃ—ರಾಮ, ಶಸ್ತ್ರ-ಭೃತಾಮ್—ಶಸ್ತ್ರಪಾಣಿಗಳಲ್ಲಿ, ಅಹಮ್—ನಾನು, ಝಷಾಣಾಮ್—ಎಲ್ಲ ಮೀನುಗಳಲ್ಲಿ, ಮಕರಃ—ತಿಮಿಂಗಿಲ, ಚ—ಕೂಡ, ಅಸ್ಮಿ—ಆಗಿದ್ದೇನೆ, ಸ್ರೋತಸಾಮ್—ಹರಿಯುವ ನದಿಗಳಲ್ಲಿ, ಅಸ್ಮಿ—ಆಗಿದ್ದೇನೆ, ಜಾಹ್ನವೀ—ಗಂಗಾನದಿ.

**ಶುದ್ಧಿಗೊಳಿಸುವವರಲ್ಲಿ ನಾನು ಮಾರುತ, ಶಸ್ತ್ರಧಾರಿಗಳಲ್ಲಿ ನಾನು ರಾಮ, ಮೀನುಗಳಲ್ಲಿ ನಾನು ತಿಮಿಂಗಿಲ, ಮತ್ತು ಹರಿಯುವ ನದಿಗಳಲ್ಲಿ ನಾನು ಗಂಗೆ.**

**ಭಾವಾರ್ಥ :** ಜಲಚರಗಳೆಲ್ಲದರಲ್ಲಿ ತಿಮಿಂಗಿಲವು ಅತ್ಯಂತ ದೊಡ್ಡದು ಮತ್ತು ಖಂಡಿತವಾಗಿ ಮನುಷ್ಯನಿಗೆ ಅದು ಅತ್ಯಂತ ಅಪಾಯಕಾರಿ. ಆದ್ದರಿಂದ ತಿಮಿಂಗಿಲವು ಕೃಷ್ಣನನ್ನು ಪ್ರತಿನಿಧಿಸುತ್ತದೆ.

**ಸರ್ಗಾಣಾಮಾದಿರನ್ತಶ್ಚ ಮಧ್ಯಂ ಚೈವಾಹಮರ್ಜುನ ।**
**ಅಧ್ಯಾತ್ಮವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಮ್ ॥ ೩೨ ॥**

ಸರ್ಗಾಣಾಮ್—ಸೃಷ್ಟಿಗಳೆಲ್ಲದರಲ್ಲಿ, ಆದಿಃ—ಪ್ರಾರಂಭ, ಅನ್ತಃ—ಕೊನೆ, ಚ—ಮತ್ತು, ಮಧ್ಯಮ್—ಮಧ್ಯವು, ಚ—ಕೂಡ, ಏವ—ಖಂಡಿತವಾಗಿ, ಅಹಮ್—ನಾನು, ಅರ್ಜುನ—ಹೇ ಅರ್ಜುನ, ಅಧ್ಯಾತ್ಮ-ವಿದ್ಯಾ—ಅಧ್ಯಾತ್ಮಜ್ಞಾನ, ವಿದ್ಯಾನಾಮ್—ವಿದ್ಯಾಭ್ಯಾಸಗಳೆಲ್ಲದರಲ್ಲಿ, ವಾದಃ—ಸ್ವಾಭಾವಿಕ ಸಿದ್ಧಾಂತ, ಪ್ರವದತಾಮ್—ವಾದಗಳಲ್ಲಿ, ಅಹಮ್—ನಾನು.

**ಹೇ ಅರ್ಜುನ, ಸೃಷ್ಟಿಗಳೆಲ್ಲದರಲ್ಲಿ ನಾನು ಪ್ರಾರಂಭ, ಕೊನೆ, ಮತ್ತು ಮಧ್ಯ. ನೈಯ್ಯಾಯಿಕರಲ್ಲಿ ನಾನು ನಿರ್ಣಾಯಕ ಸತ್ಯನು.**

**ಭಾವಾರ್ಥ :** ಸೃಷ್ಟ ಉದ್ಭೂತಿಗಳಲ್ಲಿ ಮೊದಲನೆಯದು ಮಹಾಭೂತಗಳ ಸೃಷ್ಟಿ. ಹಿಂದೆ ವಿವರಿಸಿದಂತೆ ವಿಶ್ವ ಉದ್ಭೂತಿಯು ಮಹಾವಿಷ್ಣು, ಗರ್ಭೋದಕ ಶಾಯೀ ವಿಷ್ಣು ಮತ್ತು ಕ್ಷೀರೋದಕಶಾಯೀ ವಿಷ್ಣುವಿನಿಂದ ಸೃಷ್ಟ ಮತ್ತು ಪಾಲಿತ, ಮತ್ತೆ ಅದು ಭಗವಾನ್ ಶಿವನಿಂದ ಲಯಕೃತ.ಬ್ರಹ್ಮನು ಗೌಣ ಸೃಷ್ಟಿಕರ್ತ. ಸೃಷ್ಟಿಸ್ಥಿತಿ ಮತ್ತು ಲಯಕರ್ತೃಗಳೆಲ್ಲರೂ ಪರಮ ಪ್ರಭುವಿನ ಭೌತಿಕ ಗುಣಗಳ ಅವತಾರಗಳು. ಆದ್ದರಿಂದ ಅವನು ಸಕಲ ಸೃಷ್ಟಿಯ ಆದಿ, ಮಧ್ಯ ಮತ್ತು ಅಂತ್ಯನು.

ಉನ್ನತವ್ಯಾಸಂಗಕ್ಕಾಗಿ ನಾಲ್ಕು ವೇದಗಳು, ಅವುಗಳ ಆರು ವೇದಾಂಗಗಳು, ವೇದಾಂತ ಸೂತ್ರಗಳು, ನ್ಯಾಯಶಾಸ್ತ್ರ ಗ್ರಂಥಗಳು, ಧರ್ಮಗ್ರಂಥಗಳು ಮತ್ತು ಪುರಾಣಗಳಂಥ ನಾನಾ ಬಗೆಯ ಜ್ಞಾನ ಗ್ರಂಥಗಳಿವೆ. ಹೀಗೆ ಎಲ್ಲ ಒಟ್ಟು ಸೇರಿ ಶಿಕ್ಷಣ ಗ್ರಂಥಗಳಲ್ಲಿ ಹದಿನಾಲ್ಕು ವಿಭಾಗಗಳಿವೆ. ಇವುಗಳಲ್ಲಿ ವಿಶೇಷವಾಗಿ ಅಧ್ಯಾತ್ಮ ವಿದ್ಯೆಯನ್ನು ಮಂಡಿಸುವ ವೇದಾಂತ ಸೂತ್ರವು ಕೃಷ್ಣನನ್ನು ಪ್ರತಿನಿಧಿಸುತ್ತದೆ.

ನೈಯಾಯಿಕರಲ್ಲಿ ನಾನಾ ಬಗೆಯ ವಾದಗಳಿವೆ. ಪ್ರಮಾಣದಿಂದ ಒಬ್ಬನ ವಾದಕ್ಕೆ ಬೆಂಬಲ ನೀಡುವುದು ಮತ್ತು ಪ್ರತಿವಾದಿಗೂ ಬೆಂಬಲ ನೀಡಿದರೆ ಅದನ್ನು ಜಲ್ಪ ಎಂದು ಕರೆದಿದೆ. ಕೇವಲ ಪ್ರತಿವಾದಿಯನ್ನು ಸೋಲಿಸುವ ಯತ್ನವನ್ನು ವಿತಂಡ ಎಂದು ಕರೆದಿದೆ. ಆದರೆ ವಾಸ್ತವಿಕ ಸಿದ್ಧಾಂತವನ್ನು ವಾದ ಎಂದು ಕರೆದಿದೆ. ಈ ನಿರ್ಣಾಯಕ ಸತ್ಯವು ಕೃಷ್ಣನ ಪ್ರತಿನಿಧಿ.

**ಅಕ್ಷರಾಣಾಮಕಾರೋಽಸ್ಮಿ ದ್ವನ್ದ್ವಃ ಸಾಮಾಸಿಕಸ್ಯ ಚ ।**
**ಅಹಮೇವಾಕ್ಷಯಃ ಕಾಲೋ ಧಾತಾಹಂ ವಿಶ್ವತೋಮುಖಃ ॥ ೩೩ ॥**

ಅಕ್ಷರಾಣಾಮ್—ಅಕ್ಷರಗಳಲ್ಲಿ, ಅ-ಕಾರಃ—ಮೊದಲನೆಯ ಅಕ್ಷರ, ಅಸ್ಮಿ—ಆಗಿದ್ದೇನೆ, ದ್ವನ್ದ್ವಃ—ದ್ವಂದ್ವ, ಸಾಮಾಸಿಕಸ್ಯ—ಸಮಾಸಗಳಲ್ಲಿ, ಚ—ಮತ್ತು, ಅಹಮ್—ನಾನು, ಏವ—ಖಂಡಿತವಾಗಿ, ಅಕ್ಷಯಃ—ಶಾಶ್ವತ, ಕಾಲಃ—ಕಾಲ, ಧಾತಾ—ಸೃಷ್ಟಿಕರ್ತ, ಅಹಮ್—ನಾನು, ವಿಶ್ವತಃ ಮುಖಃ—ಬ್ರಹ್ಮ.

**ಅಕ್ಷರಗಳಲ್ಲಿ ನಾನು ಅ ಅಕ್ಷರ, ಮತ್ತು ಸಮಾಸ ಪದಗಳಲ್ಲಿ ನಾನು ದ್ವಂದ್ವ ಸಮಾಸ. ಅಕ್ಷಯವಾದ ಕಾಲವೂ ನಾನು, ಮತ್ತು ಸೃಷ್ಟಿಕರ್ತರಲ್ಲಿ ನಾನು ಬ್ರಹ್ಮ.**

**ಭಾವಾರ್ಥ :** ಸಂಸ್ಕೃತ ಅಕ್ಷರ ಮಾಲೆಯ ಮೊದಲನೆಯ ಅಕ್ಷರವಾದ **ಅ**-ಕಾರವು ವೇದ ಸಾಹಿತ್ಯದಿಂದ ಪ್ರಾರಂಭ. ಅಕಾರವಿಲ್ಲದೆ ಯಾವುದನ್ನೂ ಶಬ್ದಿಸಲಾಗದು; ಆದ್ದರಿಂದ ಅದು ಶಬ್ದದ ಪ್ರಾರಂಭ. ಸಂಸ್ಕೃತದಲ್ಲಿ ಅನೇಕ ಸಮಾಸ ಪದಗಳೂ ಇವೆ, ಅವುಗಳಲ್ಲಿ ರಾಮ—ಕೃಷ್ಣ ಅಂಥ ದ್ವನ್ದ್ವ ಪದವನ್ನು ದ್ವನ್ದ್ವ ಎಂದು ಕರೆದಿದೆ. ಈ ಸಮಾಸದಲ್ಲಿ ರಾಮ—ಕೃಷ್ಣ ಎಂಬ ಪದಗಳಿಗೆ ಒಂದೇ ರೂಪವಿದೆ, ಆದ್ದರಿಂದ ಅದನ್ನು ದ್ವಂದ್ವ ಸಮಾಸ ಎಂದು ಕರೆದಿದೆ.

ಎಲ್ಲ ಬಗೆಯ ಸಂಹಾರಕರಲ್ಲಿ ಕಾಲವೇ ಅಂತಿಮ,ಏಕೆಂದರೆ ಕಾಲವು ಪ್ರತಿಯೊಂದನ್ನು ಸಂಹರಿಸುತ್ತದೆ. ಕಾಲಾಂತರದಲ್ಲಿ ಉಂಟಾಗುವ ಪ್ರಳಯಾಗ್ನಿಯಲ್ಲಿ ಪ್ರತಿಯೊಂದೂ ನಾಶವಾಗುವುದರಿಂದ ಕಾಲವು ಕೃಷ್ಣನ ಪ್ರತಿನಿಧಿ.

ಸೃಷ್ಟಿಕರ್ತರಾದ ಜೀವಿಗಳಲ್ಲಿ, ಚತುರ್ಮುಖ ಬ್ರಹ್ಮನೇ ಮುಖ್ಯನು. ಆದ್ದರಿಂದ ಅವನು ಪರಮ ಪ್ರಭು ಕೃಷ್ಣನ ಪ್ರತಿನಿಧಿ.

**ಮೃತ್ಯುಃ ಸರ್ವಹರಶ್ಚಾಹಮುದ್ಭವಶ್ಚ ಭವಿಷ್ಯತಾಮ್ ।**
**ಕೀರ್ತಿಃ ಶ್ರೀರ್ವಾಕ್ ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ ಕ್ಷಮಾ ॥೩೪॥**

ಮೃತ್ಯುಃ—ಸಾವು, ಸರ್ವ—ಹರಃ—ಸರ್ವಭಕ್ಷಕವಾದ, ಚ—ಕೂಡ, ಅಹಮ್—ನಾನು, ಉದ್ಭವಃ—ಉದ್ಭವ, ಚ—ಕೂಡ, ಭವಿಷ್ಯತಾಮ್—ಭವಿಷ್ಯ ಉದ್ಭೂತಿಗಳಲ್ಲಿ ಕೀರ್ತಿಃ—ಕೀರ್ತಿ, ಶ್ರೀಃ—ಐಶ್ವರ್ಯ ಅಥವಾ ಸೌಂದರ್ಯ, ವಾಕ್—ಒಳ್ಳೆಯ ಮಾತು, ಚ—ಕೂಡ, ನಾರೀಣಾಮ್—ನಾರಿಯರ, ಸ್ಮೃತಿ—ನೆನಪು, ಮೇಧಾ—ಬುದ್ಧಿ, ಧೃತಿಃ ಧೃಢತೆ, ಕ್ಷಮಾ—ತಾಳ್ಮೆ.

**ನಾನು ಸರ್ವಭಕ್ಷಕವಾದ ಮೃತ್ಯುವಾಗಿದ್ದೇನೆ ; ಮತ್ತು ಮುಂದೆ ಬರುವುದೆಲ್ಲದರ ಉದ್ಭವ ತತ್ವನು. ಸ್ತ್ರೀಯರಲ್ಲಿ ನಾನು ಕೀರ್ತಿ, ಭಾಗ್ಯ, ಒಳ್ಳೆಯ ಮಾತು, ನೆನಪು, ಬುದ್ಧಿ, ದೃಢತೆ ಮತ್ತು ತಾಳ್ಮೆ.**

**ಭಾವಾರ್ಥ :** ಮನುಷ್ಯನು ಹುಟ್ಟಿದೊಡನೆಯೇ ಪ್ರತಿಕ್ಷಣದಲ್ಲಿ ಸಾಯುತ್ತಾನೆ. ಆದ್ದರಿಂದ ಪ್ರತಿಕ್ಷಣವೂ ಪ್ರತಿಯೊಬ್ಬ ಜೀವಿಯನ್ನು ಮೃತ್ಯುವು ಭಕ್ಷಿಸುತ್ತಿದೆ, ಕೊನೆಯ ಪ್ರಹಾರವು ಮೃತ್ಯುವೇ ಆಗಿದೆ, ಆ ಮೃತ್ಯುವೇ ಕೃಷ್ಣ. ಭವಿಷ್ಯ ಅಭಿವೃದ್ಧಿಯ ಮಟ್ಟಿಗೆ ಎಲ್ಲ ಜೀವಿಗಳು, ಆರು ಬಗೆಯ ಮೂಲ ಬದಲಾವಣೆಗಳನ್ನು ಹೊಂದುತ್ತಾರೆ. ಅವರು ಜನಿಸುತ್ತಾರೆ, ಬೆಳೆಯುತ್ತಾರೆ, ಕೆಲವು ಕಾಲ ಉಳಿಯುತ್ತಾರೆ, ಉತ್ಪತ್ತಿಮಾಡುತ್ತಾರೆ, ಕೃಶವಾಗುತ್ತಾರೆ, ಕೊನೆಗೆ ಮಾಯವಾಗುತ್ತಾರೆ. ಇವುಗಳಲ್ಲಿ ಮೊದಲನೆಯದು ಗರ್ಭದಿಂದ ಬಿಡುಗಡೆ, ಮತ್ತು ಅದೇ ಕೃಷ್ಣ. ಮೊದಲನೆಯ ಹುಟ್ಟೇ ಮುಂದಿನ ಎಲ್ಲ ಚಟುವಟಿಕೆಗಳ ಪ್ರಾರಂಭ.

ಇಲ್ಲಿ ನಮೂದಿಸಿರುವ ಏಳು ಐಶ್ವರ್ಯಗಳು— **ಯಶ, ಭಾಗ್ಯ, ಸುವಾಕ್, ಸ್ಮೃತಿ, ಬುದ್ಧಿ, ದೃಢತೆ ಮತ್ತು ತಾಳ್ಮೆ— ಇವುಗಳನ್ನು ಸ್ತ್ರೀ ಸ್ವಭಾವ ಎಂದು ಪರಿಗಣಿಸಿದೆ.**

ಒಬ್ಬನು ಅವೆಲ್ಲವುಗಳನ್ನು ಅಥವಾ ಅವುಗಳಲ್ಲಿ ಕೆಲವನ್ನು ಹೊಂದಿದ್ದರೆ ಅವನು ಪ್ರಖ್ಯಾತನಾಗುತ್ತಾನೆ. ಒಬ್ಬನು ಧರ್ಮಿಷ್ಠನೆಂದು ಖ್ಯಾತನಾದರೆ ಅದು ಅವನನ್ನು ಭವ್ಯನನ್ನಾಗಿ ಮಾಡುತ್ತದೆ. ಸಂಸ್ಕೃತವು ಪರಿಪೂರ್ಣ ಭಾಷೆ. ಆದ್ದರಿಂದ ಅದು ಬಹಳ ಪ್ರಖ್ಯಾತ. ಅಧ್ಯಯನಾನಂತರ, ಒಬ್ಬನು ಒಂದು ವಿಷಯವನ್ನು ನೆನೆಯಬಲ್ಲವನಾದರೆ ಅವನು ಸ್ಮೃತಿ ಲಬ್ಧನೆಂದು ಅರ್ಥ. ಭಿನ್ನ ಭಿನ್ನ ವಿಷಯಗಳನ್ನು ಕುರಿತ ಅನೇಕ ಗ್ರಂಥಗಳನ್ನು ಓದುವುದಷ್ಟೇ ಅಲ್ಲದೆ ಅವುಗಳನ್ನು ಅರಿತುಕೊಂಡು ಅವಶ್ಯವಾದಾಗ ಅನ್ವಯಿಸುವುದು ಬುದ್ಧಿ (ಮೇಧಾ) ಮತ್ತೊಂದು ಐಶ್ವರ್ಯ. ಅಸ್ಥಿರತೆಯನ್ನು ಗೆಲ್ಲುವ ದೃಢತೆ (ಧೃತಿ) ಎಂದು ಕರೆದಿದೆ. ಒಬ್ಬನು ಪೂರ್ಣವಾಗಿ ಅರ್ಹನಾಗಿ, ವಿನೀತನೂ ಮತ್ತು ಸೌಮ್ಯನೂ ಆಗಿದ್ದರೆ ಮತ್ತು ಸುಖ ದುಃಖಗಳಲ್ಲಿ ಸಮತೋಲ ಹೊಂದಿರಲು ಶಕ್ತನಾಗಿದ್ದರೆ, ಅವನು ತಾಳ್ಮೆ (ಕ್ಷಮಾ) ಎಂಬ ಐಶ್ವರ್ಯವನ್ನು ಹೊಂದಿರುತ್ತಾನೆ.

**ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀ ಛನ್ದಸಾಮಹಮ್ ।**
**ಮಾಸಾನಾಂ ಮಾರ್ಗಶೀರ್ಷೋಽಹಮೃತೂನಾಂ ಕುಸುಮಾಕರಃ ॥೩೫॥**

ಬೃಹತ್-ಸಾಮ—ಬೃಹತ್-ಸಾಮ, ತಥಾ—ಕೂಡ, ಸಾಮ್ನಾಮ್—ಸಾಮವೇದ ಮಂತ್ರಗಳಲ್ಲಿ, ಗಾಯತ್ರೀ—ಗಾಯತ್ರೀಮಂತ್ರಗಳು, ಛನ್ದಸಾಮ್—ಎಲ್ಲ ಛಂದಸ್ಸುಗಳಲ್ಲಿ, ಅಹಮ್—ನಾನು, ಮಾಸಾನಾಂ—ತಿಂಗಳುಗಳಲ್ಲಿ, ಮಾರ್ಗಶೀರ್ಷಃ—ನವೆಂಬರ-ಡಿಸೆಂಬರ ತಿಂಗಳು, ಅಹಮ್—ನಾನು, ಋತೂನಾಮ್—ಎಲ್ಲ ಋತುಗಳಲ್ಲಿ, ಕುಸುಮ-ಆಕರಃ—ವಸಂತ.

**ಸಾಮವೇದಗಳಲ್ಲಿ ನಾನು ಬೃಹತ್-ಸಾಮ. ಮತ್ತು ಛಂಧಸ್ಸಿನಲ್ಲಿ ನಾನು ಗಾಯತ್ರಿ. ತಿಂಗಳುಗಳಲ್ಲಿ ನಾನು ಮಾರ್ಗಶೀರ್ಷ, ಮತ್ತು ಋತುಗಳಲ್ಲಿ ನಾನು ವಸಂತ.**

**ಭಾವಾರ್ಥ :** ವೇದಗಳೆಲ್ಲದರಲ್ಲಿ ಅವನು ಸಾಮವೇದ ಎಂದು ಈಗಾಗಲೇ ಭಗವಂತನಿಂದ ವಿವರಿಸಲ್ಪಟ್ಟಿದೆ. ಸಾಮವೇದವು ನಾನಾ ದೇವತೆಗಳಿಂದ ಗಾನ ಮಾಡಲ್ಪಟ್ಟ ಸುಂದರಗಾನಗಳಿಂದ ತುಂಬಿದೆ. ಈ ಗಾನಗಳಲ್ಲಿ ಅತಿ ಮಂಜುಳನಾದದ ಬೃಹತ್-ಸಾಮವು ಒಂದು, ಮತ್ತು ಇದು ಮಧ್ಯರಾತ್ರಿಯಲ್ಲಿ ಹಾಡಲ್ಪಡುತ್ತದೆ.

ಸಂಸ್ಕೃತದಲ್ಲಿ ಛಂದಸ್ಸನ್ನು ವಿನಿಮಯನಗೊಳಿಸುವ ನಿರ್ದಿಷ್ಟ ನಿಯಮಗಳಿವೆ ; ಬಹಳಷ್ಟು ಆಧುನಿಕ ಕಾವ್ಯಗಳಲ್ಲಿ ಇರುವಂತೆ ಪ್ರಾಸ ಮತ್ತು ವೃತ್ತಗಳನ್ನು ಇಷ್ಟಬಂದ ಹಾಗೆ ಬರೆಯುವುದಿಲ್ಲ. ಛಂದೋಬದ್ಧವಾದ ಕಾವ್ಯದಲ್ಲಿ ಯೋಗ್ಯ ಅರ್ಹ ಬ್ರಾಹ್ಮಣರಿಂದ ಜಪಿಸಲ್ಪಡುವ ಗಾಯತ್ರೀ ಮಂತ್ರವು ಅತ್ಯಂತ ಮುಖ್ಯಮಂತ್ರ. ಗಾಯತ್ರೀ ಮಂತ್ರವು ಶ್ರೀಮದ್‌ಭಾಗವತದಲ್ಲಿ ಪ್ರಸ್ತಾಪಿತ. ಅದು ಪರಮ ಪ್ರಭುವನ್ನು ಪ್ರತಿನಿಧಿಸುತ್ತದೆ. ಈ ಮಂತ್ರವು ಆಧ್ಯಾತ್ಮಿಕವಾಗಿ ಉತ್ಕೃಷ್ಟರಿಗೆ ಉದ್ದಿಷ್ಟ, ಮತ್ತು ಅದರ ಜಪದಲ್ಲಿ ಒಬ್ಬನು ಯಶಸ್ವಿಯಾದಾಗ ಅವನು ಭಗವಂತನ ದಿವ್ಯ ಸ್ಥಾನವನ್ನು ಪ್ರವೇಶಿಸಬಹುದು. ಒಬ್ಬನು ಗಾಯತ್ರೀ ಮಂತ್ರವನ್ನು ಜಪಿಸಲು, ಭೌತಿಕ ಪ್ರಕೃತಿ ನಿಯಮಾನು

**ಸಾರ,** ಸತ್ವಗುಣಗಳಿರುವ ಪರಿಪೂರ್ಣ ಸನ್ನಿವೇಶಿತ ವ್ಯಕ್ತಿಯ ಗುಣಗಳನ್ನು ಮೊದಲು ಆರ್ಜಿಸಬೇಕು. ಗಾಯತ್ರೀ ಮಂತ್ರವು ವೈದಿಕ ನಾಗರಿಕತೆಯಲ್ಲಿ ಬಹುಮುಖ್ಯವಾದುದು ಮತ್ತು ಅದು ಬ್ರಹ್ಮನ್ ಶಬ್ದಾವತಾರವೆಂದು ಪರಿಗಣಿತ. ಬ್ರಹ್ಮನು ಅದರ ಉಪಕ್ರಮಿ ಮತ್ತು ಅದು ಅವನಿಂದ ಗುರುಪರಂಪರೆಯಲ್ಲಿ ಸಾಗಿ ಬಂದಿದೆ.

ನವೆಂಬರ್-ಡಿಸೆಂಬರ್, ತಿಂಗಳುಗಳಲ್ಲೆಲ್ಲ ಅತ್ಯುತ್ತಮವೆಂದು ಪರಿಗಣಿತ. ಏಕೆಂದರೆ ಈ ಸಮಯದಲ್ಲಿ ಭಾರತದಲ್ಲಿ ಹೊಲಗದ್ದೆಗಳಿಂದ ಧಾನ್ಯಗಳು ಶೇಖರಿಸಲ್ಪಡುತ್ತವೆ ಮತ್ತು ಜನರು ಬಹಳ ಸಂತೋಷಪಡುತ್ತಾರೆ. ವಸಂತಕಾಲವು ವಿಶ್ವದಲ್ಲಿ ಎಲ್ಲರೂ ಬಯಸುವ ಋತು, ಏಕೆಂದರೆ ಅದು ಅತಿ ಉಷ್ಣವಾಗಲಿ ಅಥವಾ ಅತಿ ಶೀತವಾಗಲಿ ಆಗಿರುವುದಿಲ್ಲ. ಪುಷ್ಪಗಳು ಮತ್ತು ವೃಕ್ಷಗಳು ಪ್ರವರ್ಧಿಸುತ್ತವೆ. ವಸಂತ ಋತುವಿನಲ್ಲಿ ಕೃಷ್ಣ ಲೀಲೆಗಳನ್ನು ನೆನಪುಮಾಡಿಕೊಡುವ ಅನೇಕ ವೈಭವೋತ್ಸವಗಳು ಕೂಡ ಇವೆ; ಆದ್ದರಿಂದ ಇದನ್ನು ಋತುಗಳೆಲ್ಲದರಲ್ಲಿ ಅತ್ಯಂತ ಹರ್ಷದಾಯಕವೆಂದು ಪರಿಗಣಿಸಿದೆ, ಮತ್ತು ಅದು ಪರಮ ಪ್ರಭು ಶ್ರೀಕೃಷ್ಣನ ಪ್ರತಿನಿಧಿ.

**ದ್ಯೂತಂ ಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ।**
**ಜಯೋಽಸ್ಮಿ ವ್ಯವಸಾಯೋಽಸ್ಮಿ ಸತ್ತ್ವಂ ಸತ್ತ್ವವತಾಮಹಮ್ ॥೩೬॥**

ದ್ಯೂತಮ್—ಜೂಜಾಟ, ಛಲಯತಾಮ್—ವಂಚಕರೆಲ್ಲರಲ್ಲಿ, ಅಸ್ಮಿ—ಆಗಿದ್ದೇನೆ, ತೇಜಃ—ತೇಜಸ್ಸು, ತೇಜಸ್ವಿನಾಮ್—ತೇಜಸ್ವಿಗಳೆಲ್ಲರಲ್ಲಿ, ಅಹಮ್—ನಾನು, ಜಯ ಜಯ, ಅಸ್ಮಿ—ಆಗಿದ್ದೇನೆ, ವ್ಯವಸಾಯಃ—ಉದ್ಯಮ ಅಥವಾ ಸಾಹಸ, ಅಸ್ಮಿ—ಆಗಿದ್ದೇನೆ, ಸತ್ತ್ವಮ್—ಬಲ, ಸತ್ತ್ವ-ವತಾಮ್—ಬಲಿಷ್ಠರಲ್ಲಿ, ಅಹಮ್—ನಾನು.

**ನಾನು ವಂಚಕರ ಜೂಜಾಟವೂ ಕೂಡ ಆಗಿದ್ದೇನೆ, ಮತ್ತು ತೇಜಸ್ವಿಗಳಲ್ಲಿ ನಾನು ತೇಜಸ್ಸು. ನಾನು ಜಯ, ಸಾಹಸ ಮತ್ತು ಬಲಿಷ್ಠನ ಬಲವೂ ಆಗಿದ್ದೇನೆ.**

**ಭಾವಾರ್ಥ :** ವಿಶ್ವದಲ್ಲೆಲ್ಲಾ ಅನೇಕ ಬಗೆಯ ವಂಚಕರಿದ್ದಾರೆ. ವಂಚಕ ಪ್ರಕ್ರಿಯೆಗಳೆಲ್ಲೆಲ್ಲಾ ಜೂಜು ಬಹು ದೊಡ್ಡದು, ಆದ್ದರಿಂದ ಅದು ಕೃಷ್ಣನನ್ನು ಪ್ರತಿನಿಧಿಸುತ್ತದೆ. ಪರಮನಾಗಿ ಕೃಷ್ಣನು ಸಾಮಾನ್ಯನಿಗಿಂತ ಅಧಿಕ ವಂಚಕನಾಗಿರಬಹುದು. ಕೃಷ್ಣನು ಒಬ್ಬನನ್ನು ವಂಚಿಸಬಯಸಿದರೆ, ಅವನನ್ನು ಯಾರೂ ಮೀರಿಸಲಾರರು. ಅವನ ಮಹಾತ್ಮ್ಯವು ಕೇವಲ ಏಕ ಮುಖವಲ್ಲ— ಅದು ಬಹುಮುಖ.

ಜಯಶೀಲರಲ್ಲಿ ಅವನು ಜಯ. ತೇಜಸ್ವಿಗಳಲ್ಲಿ ಅವನು ತೇಜಸ್ಸು. ಉದ್ಯಮಿಗಳಲ್ಲಿ ಮತ್ತು ಉದ್ಯೋಗಶೀಲರಲ್ಲಿ ಅವನು ಅತ್ಯಂತ ಉದ್ಯಮಿ ಮತ್ತು ಅತ್ಯಂತ ಉದ್ಯೋಗಶೀಲ. ಸಾಹಸಿಗಳಲ್ಲಿ ಅವನು ಅತ್ಯಂತ ಸಾಹಸಿ, ಮತ್ತು ಬಲಿಷ್ಠರಲ್ಲಿ ಅವನು ಅತ್ಯಂತ ಬಲಿಷ್ಠನು. ಕೃಷ್ಣನು ಭೂಮಿಯ ಮೇಲಿದ್ದಾಗ, ಯಾರೂ ಅವನನ್ನು ಬಲದಲ್ಲಿ ಮೀರಿಸಲಾಗಲಿಲ್ಲ. ಅವನು ತನ್ನ ಬಾಲ್ಯದಲ್ಲಿ ಕೂಡ ಗೋವರ್ಧನ ಗಿರಿಯನ್ನು ಎತ್ತಿದನು. ಯಾರೂ ಅವನನ್ನು ವಂಚಕತನದಲ್ಲಿ ಮೀರಿಸಲಾರರು, ತೇಜಸ್ಸಿನಲ್ಲಿ ಯಾರೂ

ಅವನನ್ನು ಮೀರಿಸಲಾರರು, ಜಯದಲ್ಲಿ ಯಾರೂ ಅವನನ್ನು ಮೀರಿಸಲಾರರು, ಉದ್ಯಮದಲ್ಲಿ ಯಾರೂ ಅವನನ್ನು ಮೀರಿಸಲಾರರು, ಮತ್ತು ಯಾರೂ ಅವನನ್ನು ಬಲದಲ್ಲಿ ಮೀರಿಸಲಾರರು.

**ವೃಷ್ಣೀನಾಂ ವಾಸುದೇವೋಽಸ್ಮಿ ಪಾಣ್ಡವಾನಾಂ ಧನಞ್ಜಯಃ ।**
**ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾ ಕವಿಃ ॥೩೭॥**

ವೃಷ್ಣೀನಾಮ್—ವೃಷ್ಣಿ ವಂಶಜರಲ್ಲಿ, ವಾಸುದೇವಃ—ದ್ವಾರಕೆಯಲ್ಲಿನ ಕೃಷ್ಣ, ಅಸ್ಮಿ—ಆಗಿದ್ದೇನೆ, ಪಾಣ್ಡವಾನಾಮ್—ಪಾಂಡವರಲ್ಲಿ, ಧನಞ್ಜಯಃ—ಅರ್ಜುನ, ಮುನೀನಾಮ್—ಮುನಿಗಳಲ್ಲಿ, ಅಪಿ—ಕೂಡ, ಅಹಮ್—ನಾನು, ವ್ಯಾಸಃ—ವ್ಯಾಸ, ಸಕಲ ವೇದ ಸಾಹಿತ್ಯ ಕರ್ತೃ, ಕವೀನಾಮ್—ಎಲ್ಲ ಮಹಾವಿಚಾರಪರರಲ್ಲಿ, ಉಶನಾ—ಉಶನಾ, ಕವಿಃ—ವಿಚಾರವಂತನು.

**ವೃಷ್ಣಿವಂಶಜರಲ್ಲಿ ನಾನು ವಾಸುದೇವ, ಮತ್ತು ಪಾಂಡವರಲ್ಲಿ ನಾನು ಅರ್ಜುನ, ಮುನಿಗಳಲ್ಲಿ ನಾನು ವ್ಯಾಸ, ಮತ್ತು ಮಹಾ ವಿಚಾರವಂತರಲ್ಲಿ ನಾನು ಉಶನಾ ಆಗಿದ್ದೇನೆ.**

**ಭಾವಾರ್ಥ :** ಕೃಷ್ಣನು ಮೂಲ ಪರಮ ದೇವೋತ್ತಮ ಪುರುಷನು, ಮತ್ತು ಬಲರಾಮನು ಕೃಷ್ಣನ ನಿಕಟ ವಿಸ್ತರಣೆ. ಶ್ರೀ ಶ್ರೀಕೃಷ್ಣ ಬಲರಾಮರು ವಸುದೇವ ಪುತ್ರರಾಗಿ ಆವಿರ್ಭವಿಸಿದರು, ಆದ್ದರಿಂದ ಅವರಿಬ್ಬರನ್ನು ವಾಸುದೇವ ಎಂದು ಕರೆಯಬಹುದು. ಮತ್ತೊಂದು ದೃಷ್ಟಿಯಿಂದ, ಕೃಷ್ಣನು ಎಂದೂ ವೃಂದಾವನವನ್ನು ಬಿಟ್ಟು ಹೋಗುವುದಿಲ್ಲವಾದ್ದರಿಂದ, ಬೇರೆಡೆಗೆ ಕಾಣುವ ಕೃಷ್ಣನ ರೂಪಗಳೆಲ್ಲ ಅವನ ವಿಸ್ತರಣೆಗಳು. ವಾಸುದೇವನು ಕೃಷ್ಣನ ನಿಕಟವಿಸ್ತರಣೆ ಆದ್ದರಿಂದ ವಾಸುದೇವನು ಕೃಷ್ಣನಿಂದ ಭಿನ್ನನಲ್ಲ. ಭಗವದ್ಗೀತೆಯ ಈ ಶ್ಲೋಕದಲ್ಲಿ ಉಲ್ಲೇಖಿತ ವಾಸುದೇವನು ಬಲರಾಮ ಎಂದು ತಿಳಿಯಬೇಕು, ಏಕೆಂದರೆ ಅವನು ಎಲ್ಲ ಅವತಾರಗಳ ಮೂಲ ಆಕರನು. ಆದ್ದರಿಂದ ವಾಸುದೇವನ ಏಕೈಕ ಆಕರ. ಭಗವಂತನ ನಿಕಟ ವಿಸ್ತರಣೆಗಳನ್ನು **ಸ್ವಾಂಶ** ಎಂದು ಕರೆದಿದೆ, ಮತ್ತು ವಿಭಿನ್ನಾಂಶ ವಿಸ್ತರಣೆಗಳು ಕೂಡ ಇವೆ.

ಪಾಂಡು ಪುತ್ರರಲ್ಲಿ ಅರ್ಜುನನು ಧನಂಜಯನೆಂದು ಪ್ರಸಿದ್ಧ. ಅವನು ಮನುಷ್ಯರಲ್ಲಿ ಅತ್ಯಂತ ಶ್ರೇಷ್ಠನು, ಆದ್ದರಿಂದ ಕೃಷ್ಣನನ್ನು ಪ್ರತಿನಿಧಿಸುತ್ತಾನೆ. ಮುನಿಗಳು ಅಥವಾ ವೇದಜ್ಞಾನದಲ್ಲಿ ಪಾಂಡಿತ್ಯ ಪರಿಶ್ರಮವುಳ್ಳವರಲ್ಲಿ, ವ್ಯಾಸರು ಅತ್ಯಂತ ದೊಡ್ಡವರು, ಏಕೆಂದರೆ, ಕಲಿಯುಗದಲ್ಲಿ ಸಾಮಾನ್ಯರ ತಿಳಿವಳಿಕೆಗಾಗಿ, ಅವರು ವೇದಜ್ಞಾನವನ್ನು ಅನೇಕ ರೀತಿಗಳಲ್ಲಿ ವಿವರಿಸಿದರು. ಮತ್ತು ವ್ಯಾಸರು ಕೃಷ್ಣನ ಅವತಾರವೆಂದು ಕೂಡ ವಿದಿತರು : ಆದ್ದರಿಂದ ವ್ಯಾಸರೂ ಕೃಷ್ಣನನ್ನು ಪ್ರತಿನಿಧಿಸುತ್ತಾರೆ. ಯಾವುದೇ ವಿಷಯವನ್ನು ಕುರಿತು ಚೆನ್ನಾಗಿ ವಿಚಾರ ಮಾಡಬಲ್ಲವರು ಕವಿಗಳು. ಕವಿಗಳಲ್ಲಿ ಉಶನಾ, ದೈತ್ಯಗುರು ಶುಕ್ರಾಚಾರ್ಯರು ಅತಿ ಬುದ್ಧಿವಂತರು ಮತ್ತು ದೂರದೃಷ್ಟಿಯುಳ್ಳ ರಾಜಕಾರಣಿಗಳು. ಆದ್ದರಿಂದ ಶುಕ್ರಾಚಾರ್ಯರು ಕೃಷ್ಣನ ಐಶ್ವರ್ಯದ ಮತ್ತೊಂದು ಪ್ರತಿನಿಧಿ.

**ದಣ್ಡೋ ದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಮ್ ।**
**ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಮ್ ॥೩೮॥**

ದಂಡ—ದಣ್ಡ, ದಮಯತಾಮ್—ದಂಡನೆಯ ಎಲ್ಲ ಮಾರ್ಗಗಳಲ್ಲಿ, ಅಸ್ಮಿ—ಆಗಿದ್ದೇನೆ, ನೀತಿಃ—ನೀತಿ, ಅಸ್ಮಿ—ಆಗಿದ್ದೇನೆ. ಜಿಗೀಷತಾಮ್—ವಿಜಯ ಬಯಸುವವರಲ್ಲಿ, ಮೌನಮ್—ಮೌನ, ಚ—ಮತ್ತು, ಏವ—ಕೂಡ, ಅಸ್ಮಿ—ಆಗಿದ್ದೇನೆ, ಗುಹ್ಯಾನಾಮ್—ಗುಟ್ಟುಗಳಲ್ಲಿ, ಜ್ಞಾನಮ್—ಜ್ಞಾನ, ಜ್ಞಾನ-ವತಾಮ್—ಜ್ಞಾನಿಗಳಲ್ಲಿ, ಅಹಮ್—ನಾನು.

**ಅವ್ಯವಸ್ಥೆಯನ್ನು ಹತ್ತಿಕ್ಕುವ ಎಲ್ಲ ರೀತಿಗಳಲ್ಲಿ ನಾನು ದಂಡನೆ, ಮತ್ತು ವಿಜಯ ಬಯಸುವವರಲ್ಲಿ ನಾನು ನೀತಿ. ಗುಹ್ಯವಸ್ತುಗಳಲ್ಲಿ ನಾನು ಮೌನ, ಜ್ಞಾನಿಗಳಲ್ಲಿ ನಾನು ಜ್ಞಾನ.**

**ಭಾವಾರ್ಥ :** ಅವ್ಯವಸ್ಥೆಯನ್ನು ಹತ್ತಿಕ್ಕುವ ಅನೇಕ ಅಭಿಕರಣಗಳಿವೆ, ಅವುಗಳಲ್ಲಿ ದುಷ್ಟಮರ್ದಕವಾದುದು ಅತ್ಯಂತ ಮುಖ್ಯ. ದುಷ್ಟರನ್ನು ಮರ್ದಿಸಿದಾಗ, ದಂಡನ ಅಭಿಕರಣವು ಕೃಷ್ಣನನ್ನು ಪ್ರತಿನಿಧಿಸುತ್ತದೆ. ಯಾವುದೇ ಕಾರ್ಯಕ್ಷೇತ್ರದಲ್ಲಿ ಜಯಶೀಲರಾಗಲು ಅತ್ಯಂತ ಜಯಶೀಲ ಅಂಶವು ನೀತಿ. ಶ್ರವಣ, ಮನನ ಮತ್ತು ಧ್ಯಾನದಲ್ಲಿ, ಮೌನವು ಅತ್ಯಂತ ಮುಖ್ಯ, ಏಕೆಂದರೆ ಮೌನದಿಂದ ಒಬ್ಬನು ಬಹು ಶೀಘ್ರ ಪ್ರಗತಿ ಸಾಧಿಸಬಹುದು. ಜಡ ಮತ್ತು ಚೇತನಗಳ ನಡುವೆ ಮತ್ತು ಭಗವಂತನ ಪರಾ ಮತ್ತು ಅಪರಾ ಪ್ರಕೃತಿಗಳ ನಡುವೆ ವ್ಯತ್ಯಾಸ ತಿಳಿಯಬಲ್ಲವನು, ಜ್ಞಾನಿಯ ಅಂಥ ಜ್ಞಾನವು ಸ್ವಯಂ ಕೃಷ್ಣನೇ.

**ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ ।**
**ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಮ್ ॥೩೯॥**

ಯತ್—ಯಾವುದೇ, ಚ—ಕೂಡ, ಅಪಿ—ಆಗಿರಬಹುದು, ಸರ್ವ-ಭೂತಾನಾಮ್—ಸೃಷ್ಟಿಗಳೆಲ್ಲದರಲ್ಲಿ, ಬೀಜಮ್—ಬೀಜ, ತತ್—ಅದು, ಅಹಮ್—ನಾನು, ಅರ್ಜುನ—ಹೇ ಅರ್ಜುನ, ನ—ಇಲ್ಲ, ತತ್—ಅದು, ಅಸ್ತಿ—ಇರುವುದು, ವಿನಾ—ಇಲ್ಲದೆ, ಯತ್—ಯಾವುದು, ಸ್ಯಾತ್—ಇರುವುದು, ಮಯಾ—ನನ್ನಿಂದ, ಭೂತಮ್—ಸೃಷ್ಟ ಜೀವಿ, ಚರ-ಅಚರಮ್—ಚಲಿಸುವ ಮತ್ತು ಚಲಿಸದ.

**ಇದಕ್ಕೂ ಹೆಚ್ಚಾಗಿ ಹೇ ಅರ್ಜುನ, ನಾನು ಎಲ್ಲ ಅಸ್ತಿತ್ವಗಳ ಉತ್ಪತ್ತಿ ಬೀಜ. ಚಲವಾಗಲಿ ಅಚಲವಾಗಲಿ ನನ್ನ ವಿನಾ ಅಸ್ತಿತ್ವದಲ್ಲಿರುವ ಯಾವ ವಸ್ತುವೂ ಇಲ್ಲ.**

**ಭಾವಾರ್ಥ :** ಪ್ರತಿಯೊಂದಕ್ಕೂ ಕಾರಣವಿದೆ ಮತ್ತು ಆ ಕಾರಣ ಅಥವಾ ಉದ್ಭೂತಿಯ ಬೀಜವು ಕೃಷ್ಣ. ಕೃಷ್ಣಶಕ್ತಿಯಿಲ್ಲದೆ ಯಾವುದೂ ಅಸ್ತಿತ್ವದಲ್ಲಿರಲಾರದು ; ಆದ್ದರಿಂದ ಅವನನ್ನು ಸರ್ವಶಕ್ತ ಎಂದು ಕರೆದಿದೆ. ಅವನ ಶಕ್ತಿರಹಿತವಾಗಿ ಚಲವಾಗಲೀ ಅಚಲವಾಗಲಿ ಅಸ್ತಿತ್ವದಲ್ಲಿರಲಾರದು. ಕೃಷ್ಣಶಕ್ತಿಯನ್ನು ಆಧರಿಸದ ಅಸ್ತಿತ್ವವು ಯಾವುದೇ ಇರಲಿ ಅದನ್ನು ಮಾಯಾ—ಇಲ್ಲದಿರುವುದು ಯಾವುದೋ— ಎಂದು ಕರೆದಿದೆ.

**ನಾನ್ತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರನ್ತಪ ।**
**ಏಷ ತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ ॥೪೦॥**

ನ—ಇಲ್ಲ, ಅನ್ತಃ—ಪರಿಮಿತಿ, ಅಸ್ತಿ—ಇರುವುದು, ಮಮ—ನನ್ನ, ದಿವ್ಯಾನಾಮ್—ದಿವ್ಯತ್ವದ, ವಿಭೂತೀನಾಮ್—ವಿಭೂತಿಗಳಿಗೆ, ಪರನ್ತಪ—ಹೇ ವೈರಿ ವಿಜೇತನೇ, ಏಷಃ—ಎಲ್ಲ, ತು—ಆದರೆ, ಉದ್ದೇಶಃ—ಉದಾಹರಣೆಗಳಾಗಿ, ಪ್ರೋಕ್ತಃ—ಹೇಳಲ್ಪಟ್ಟಿವೆ, ವಿಭೂತೇಃ—ವಿಭೂತಿಗಳ, ವಿಸ್ತರಃ—ವೈಶಾಲ್ಯವು, ಮಯಾ—ನನ್ನಿಂದ.

**ಹೇ ಪರಂತಪನೇ, ನನ್ನ ದೈವೀ ಉದ್ಭೂತಿಗಳಿಗೆ ಅಂತ್ಯವೇ ಇಲ್ಲ. ನಿನಗೆ ಹೇಳಿರುವುದು ನನ್ನ ಅನಂತ ಐಶ್ವರ್ಯಗಳಲ್ಲಿ ಕೇವಲ ಒಂದು ಸೂಚಕ ಮಾತ್ರ.**

**ಭಾವಾರ್ಥ :** ವೇದ ಸಾಹಿತ್ಯದಲ್ಲಿ ಹೇಳಿರುವಂತೆ ವಿಭೂತಿಗಳು ಮತ್ತು ಶಕ್ತಿಗಳು ವಿವಿಧ ರೀತಿಗಳಲ್ಲಿ ತಿಳಿಯಲ್ಪಟ್ಟಿದ್ದರೂ, ಅಂಥ ವಿಭೂತಿಗಳಿಗೆ ಮಿತಿ ಇಲ್ಲ. ಆದ್ದರಿಂದ ಎಲ್ಲ ವಿಭೂತಿಗಳನ್ನು ವಿವರಿಸಲಾಗದು. ಅರ್ಜುನನ ಕುತೂಹಲವನ್ನು ಸಮಾಧಾನ ಪಡಿಸಲು, ಕೇವಲ ಕೆಲವು ಉದಾಹರಣೆಗಳು ಮಾತ್ರ ವರ್ಣಿಸಲ್ಪಟ್ಟಿವೆ.

**ಯದ್ಯದ್ವಿಭೂತಿಮತ್ ಸತ್ತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಮ್ಭವಮ್ ॥೪೧॥**

ಯತ್ ಯತ್—ಯಾವುದೇ, ವಿಭೂತಿಗಳು, ಮತ್.—ಉಳ್ಳ, ಸತ್ವಂ—ಅಸ್ತಿತ್ವ, ಶ್ರೀಮತ್—ಸೌಂದರ್ಯ, ಊರ್ಜಿತಮ್—ಭವ್ಯವಾದ, ಏವ—ಖಂಡಿತವಾಗಿ, ಅವಗಚ್ಛ—ತಿಳಿದುಕೋ, ತ್ವಮ್—ನೀನು, ಮಮ—ನನ್ನ, ತೇಜಃ—ತೇಜಸ್ಸಿನ, ಅಂಶ—ಒಂದು ಭಾಗ, ಸಮ್ಭವಮ್—ಜನಿತಗಳಲ್ಲಿ.

**ಸಂಪದ್ಭರಿತ, ಸುಂದರ ಮತ್ತು ಭವ್ಯಸೃಷ್ಟಿಗಳೆಲ್ಲವೂ ನನ್ನ ತೇಜಸ್ಸಿನ ಕೇವಲ ಒಂದು ಕಿಡಿಯಿಂದ ಜನಿತ ಎಂದು ತಿಳಿದುಕೋ.**

**ಭಾವಾರ್ಥ :** ಯಾವುದೇ ಭವ್ಯ ಅಥವಾ ಸುಂದರ ಅಸ್ತಿತ್ವವು, ಅದು ಅಧ್ಯಾತ್ಮ ಅಥವಾ ಭೌತಿಕ ಜಗತ್ತಿನಲ್ಲಿರಲಿ, ಅದನ್ನು ಕೃಷ್ಣನ ಐಶ್ವರ್ಯ ಉದ್ಭೂತಿಯ ಒಂದು ಅಂಶ ಮಾತ್ರ ಎಂದು ತಿಳಿಯಬೇಕು. ಯಾವುದೇ ಅಸಾಧಾರಣ ವಿಭೂತಿಯು ಕೃಷ್ಣನ ವಿಭೂತಿಯನ್ನು ಪ್ರತಿನಿಧಿಸುವುದೆಂದು ಪರಿಗಣಿಸಬೇಕು.

**ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ ।**
**ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ॥೪೨॥**

ಅಥ-ವಾ—ಅಥವಾ, ಬಹುನಾ—ಅನೇಕ, ಏತೇನ—ಈ ಬಗೆಯಿಂದ, ಕಿಂ—ಏನು, ಜ್ಞಾತೇನ—ತಿಳಿಯುವುದರಿಂದ, ತವ—ನಿನ್ನ, ಅರ್ಜುನ—ಹೇ ಅರ್ಜುನ, ವಿಷ್ಟಭ್ಯ—ವ್ಯಾಪಿಸಿರುವ, ಅಹಮ್—ನಾನು, ಇದಮ್—ಇದನ್ನು, ಕೃತ್ಸ್ನಮ್—ಸಮಗ್ರ, ಏಕ—ಒಂದರಿಂದ, ಅಂಶೇನ—ಅಂಶ, ಸ್ಥಿತಃ—ಸನ್ನಿವೇಶಿತನು, ಜಗತ್—ವಿಶ್ವ.

**ಆದರೆ, ಅರ್ಜುನ, ಈ ಎಲ್ಲ ವಿವರಜ್ಞಾನದ ಅವಶ್ಯಕತೆ ಏನು ? ನನ್ನ ಏಕಾಂಶದಿಂದ ನಾನು ಈ ಇಡೀ ವಿಶ್ವವನ್ನು ವ್ಯಾಪಿಸಿ ಧರಿಸಿದ್ದೇನೆ.**

**ಭಾವಾರ್ಥ :** ಪರಮ ಪ್ರಭುವು ಎಲ್ಲ ವಸ್ತುಗಳಲ್ಲಿ ಪರಮಾತ್ಮನಾಗಿ ಪ್ರವೇಶಿಸಿ ಇಡೀ ಭೌತಿಕ ವಿಶ್ವಗಳಲ್ಲಿ ಪ್ರತಿನಿಧಿತನಾಗಿದ್ದಾನೆ. ವಸ್ತುಗಳು ತಮ್ಮ ಪ್ರತ್ಯೇಕ ವಿಭೂತಿಯಲ್ಲಿ ಮತ್ತು ಭವ್ಯತೆಯಲ್ಲಿ ಹೇಗೆ ಅಸ್ತಿತ್ವದಲ್ಲಿರುತ್ತವೆ ಎಂದು ಅರಿತುಕೊಳ್ಳುವುದರಲ್ಲಿ ಅರ್ಥವಿಲ್ಲ ಎಂದು ಕೃಷ್ಣನು ಇಲ್ಲಿ ಅರ್ಜುನನಿಗೆ ಹೇಳುತ್ತಾನೆ. ಕೃಷ್ಣನು ಅವುಗಳಲ್ಲಿ ಪರಮಾತ್ಮನಾಗಿ ಪ್ರವೇಶಿಸಿದ್ದರಿಂದ ಎಲ್ಲ ವಸ್ತುಗಳು ಅಸ್ತಿತ್ವದಲ್ಲಿರುತ್ತವೆ ಎಂದು ಅವನು ತಿಳಿಯಬೇಕು. ಅತ್ಯದ್ಭುತ ಜೀವಿಯಾದ ಬ್ರಹ್ಮನಿಂದ ಅತ್ಯಂತ ಚಿಕ್ಕ ಪ್ರಾಣಿಯಾದ ಇರುವೆಯವರೆಗೆ ಭಗವಂತನು ಪ್ರತಿಯೊಂದರಲ್ಲಿ ಪ್ರವೇಶಮಾಡಿ ಧಾರಣಮಾಡಿದ್ದರಿಂದ ಅಸ್ತಿತ್ವದಲ್ಲಿವೆ.

ಯಾವುದೇ ದೇವತೆಯನ್ನು ಅರ್ಚಿಸಿದರೆ, ಅದು ಒಬ್ಬನನ್ನು ಪರಮ ದೇವೋತ್ತಮ ಪುರುಷನಲ್ಲಿಗೆ ಅಥವಾ ಪರಮ ಗುರಿಗೆ ಕೊಂಡೊಯ್ಯುತ್ತದೆ ಎಂದು ಕ್ರಮಬದ್ಧವಾಗಿ ಪ್ರತಿಪಾದಿಸುವ ಪ್ರಚಾರ ಒಂದಿದೆ. ಆದರೆ, ದೇವತಾರ್ಚನೆಯನ್ನು ಇಲ್ಲಿ ಏನೂ ಪ್ರೋತ್ಸಾಹಿಸಿಲ್ಲ. ದೇವತೆಗಳಾದ ಬ್ರಹ್ಮ ಮತ್ತು ಶಿವ ಕೂಡ ಪರಮ ಪ್ರಭುವಿನ ಐಶ್ವರ್ಯದ ಅಂಶ ಮಾತ್ರ ಪ್ರತಿನಿಧಿಸುವರು. ಅವನು ಹುಟ್ಟಿದ ಪ್ರತಿಯೊಬ್ಬರ ಮೂಲನು, ಮತ್ತು ಅವನಿಗಿಂತ ದೊಡ್ಡವನಿಲ್ಲ. ಅವನು **ಅಸಮೌರ್ಧ್ವ** ಎಂದರೆ ಅವನಿಗಿಂತ ಮಿಗಿಲಾದವರು ಮತ್ತು ಅವನಿಗೆ ಸಮಾನರೂ ಯಾರೂ ಇಲ್ಲ ಎಂದು ಅರ್ಥ. ಒಬ್ಬನು ಪರಮ ಪ್ರಭುವಾದ ಕೃಷ್ಣನನ್ನು—ಅವರು ಬ್ರಹ್ಮ ಅಥವಾ ಶಿವನೇ ಆಗಿದ್ದರೂ—ದೇವತೆಗಳೊಡನೆ ಸಮಶ್ರೇಣಿಕರಿಸಿದರೆ, ಕೂಡಲೇ ನಾಸ್ತಿಕನಾಗುತ್ತಾನೆ ಎಂದು ಪದ್ಮಪುರಾಣದಲ್ಲಿ ಹೇಳಿದೆ. ಆಗರೆ ಒಬ್ಬನು ಕೃಷ್ಣನ ವಿಭೂತಿಗಳ ಮತ್ತು ಶಕ್ತಿ ವಿಸ್ತರಣೆಗಳ ನಾನಾ ವರ್ಣನೆಗಳನ್ನು ಚೆನ್ನಾಗಿ ಅಧ್ಯಯನ ಮಾಡಿದರೆ, ಆಗ ಅವನು ನಿಸ್ಸಂದೇಹವಾಗಿ, ಶ್ರೀಕೃಷ್ಣನ ಸ್ಥಾನವನ್ನು ಅರಿತುಕೊಳ್ಳಬಲ್ಲನು ಮತ್ತು ವಿಚಲತೆಯಿಲ್ಲದೆ ತನ್ನ ಮನಸ್ಸನ್ನು ಕೃಷ್ಣನ ಆರಾಧನೆಯಲ್ಲಿ ಸ್ಥಿರಗೊಳಿಸಬಹುದು. ಭಗವಂತನು ಇರುವ ಪ್ರತಿಯೊಂದರಲ್ಲಿ ಪ್ರವೇಶಿಸಿ ತನ್ನ ಪಾರ್ಶ್ವ ಪ್ರಾತಿನಿಧ್ಯದ ವಿಸ್ತರಣೆಯಾದ ಪರಮಾತ್ಮನಾಗಿ ಸರ್ವವ್ಯಾಪ್ತನು. ಆದ್ದರಿಂದ ಶುದ್ಧ ಭಕ್ತರು ಪೂರ್ಣ ಭಕ್ತಿಯುತ ಸೇವೆಯಲ್ಲಿ ತಮ್ಮ ಮನಸ್ಸುಗಳನ್ನು ಕೃಷ್ಣಪ್ರಜ್ಞೆಯಲ್ಲಿ ಕೇಂದ್ರೀಕರಿಸುತ್ತಾರೆ. ಆದ್ದರಿಂದ ಅವರು ಸದಾ ದಿವ್ಯಸ್ಥಿತಿ ಸನ್ನಿವೇಶಿತರು. ಭಕ್ತಿಯುತ ಸೇವೆ ಮತ್ತು ಕೃಷ್ಣಾರಾಧನೆಯು ಈ ಅಧ್ಯಾಯದಲ್ಲಿ ಎಂಟರಿಂದ ಹನ್ನೊಂದರವರೆಗಿನ ಶ್ಲೋಕಗಳಲ್ಲಿ ಸ್ಪಷ್ಟವಾಗಿ ಸೂಚಿತ. ಅದು ಶುದ್ಧ ಭಕ್ತಿಯುತ ಸೇವೆಯ ಮಾರ್ಗ. ಒಬ್ಬನು ಹೇಗೆ ಪರಮ ದೇವೋತ್ತಮ ಪುರುಷನ ಸಂಗದ ಶ್ರೇಷ್ಠತಮ ಭಕ್ತಿಯುತ ಪರಿಪೂರ್ಣತೆಯನ್ನು ಪಡೆಯಬಹುದು ಎಂಬುದು ಈ ಅಧ್ಯಾಯದಲ್ಲಿ ಚೆನ್ನಾಗಿ ವಿವರಿಸಲ್ಪಟ್ಟಿದೆ. ಕೃಷ್ಣನ ಗುರುಪರಂಪರೆಯಲ್ಲಿ ಬಂದ ಮಹಾಚಾರ್ಯ ಶ್ರೀಲ ಬಲದೇವ ವಿದ್ಯಾಭೂಷಣರು ಈ ಅಧ್ಯಾಯದ ತಮ್ಮ ವ್ಯಾಖ್ಯಾನವನ್ನು ಹೀಗೆ ಸಮಾಪನಗೊಳಿಸುತ್ತಾರೆ.

ಯಚ್ಛಕ್ತಿಲೇಶಾತ್ ಸುರ್ಯಾದ್ಯಾ ಭವನ್ತ್ಯತ್ಯುಗ್ರತೇಜಸಃ।
ಯದಂಶೇನ ಧೃತಂ ವಿಶ್ವಂ ಸ ಕೃಷ್ಣೋ ದಶಮೋಽರ್ಚ್ಯತೇ॥

**ಶಕ್ತಿಶಾಲಿಯಾದ ಶ್ರೀಕೃಷ್ಣನ ಬಲಶಕ್ತಿಯಿಂದ ಸೂರ್ಯನು ಕೂಡ ತನ್ನ ಶಕ್ತಿಯನ್ನು ಪಡೆಯುತ್ತಾನೆ, ಮತ್ತು ಕೃಷ್ಣನ ಪಾರ್ಶ್ವಿಕ ವಿಸ್ತರಣೆಯಿಂದ ಇಡೀ ಜಗತ್ತು ಸ್ಥಿತವಾಗಿದೆ ಆದ್ದರಿಂದ ಶ್ರೀಕೃಷ್ಣನು ಪೂಜಾರ್ಹನು.**

**ಇಲ್ಲಿಗೆ ಭಗವದ್ವಿಭೂತಿಯ ವಿಷಯದಲ್ಲಿ ಶ್ರೀಮದ್ ಭಗವದ್ಗೀತೆಯ ಹತ್ತನೆಯ ಅಧ್ಯಾಯದ ಭಕ್ತಿವೇದಾಂತ ತಾತ್ಪರ್ಯವು ಮುಗಿಯಿತು.**



## ಅಧ್ಯಾಯ ಹನ್ನೊಂದು



# ವಿಶ್ವರೂಪ

**ಅರ್ಜುನ ಉವಾಚ**

**ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮಸಂಜ್ಞಿತಮ್ ।**
**ಯತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ ॥ ೧ ॥**

ಅರ್ಜುನಃ ಉವಾಚ—ಅರ್ಜುನನು ನುಡಿದನು, ಮತ್—ಅನುಗ್ರಹಾಯ—ನನಗೆ ಅನುಗ್ರಹ ತೋರುವುದಕ್ಕಾಗಿಯೇ, ಪರಮಮ್—ಪರಮ, ಗುಹ್ಯಮ್—ಗುಹ್ಯ ವಿಷಯ, ಅಧ್ಯಾತ್ಮ—ಅಧ್ಯಾತ್ಮ, ಸಂಜ್ಞಿತಮ್—ವಿಷಯದಲ್ಲಿ, ಯತ್—ಯಾವುದು, ತ್ವಯಾ—ನಿನ್ನಿಂದ, ಉಕ್ತಮ್—ಹೇಳಲ್ಪಟ್ಟಿದೆ, ವಚಃ—ವಚನಗಳು, ತೇನ—ಅವುಗಳಿಂದ, ಮೋಹಃ—ಮಾಯೆಯು, ಅಯಮ್—ಈ, ವಿಗತಃ—ದೂರವಾಗಿದೆ, ಮಮ—ನನ್ನ.

**ಅರ್ಜುನನು ನುಡಿದನು : ನೀನು ನನಗೆ ದಯೆತೋರಿ ಈ ಅತ್ಯಂತ ಗುಹ್ಯತಮ ಅಧ್ಯಾತ್ಮ ವಿಷಯ ಕುರಿತು ನೀಡಿದ ಉಪದೇಶಗಳ ಶ್ರವಣದಿಂದ ಈಗ ನನ್ನ ಮಾಯೆಯು ದೂರವಾಗಿದೆ.**

**ಭಾವಾರ್ಥ :** ಈ ಅಧ್ಯಾಯವು ಕೃಷ್ಣನನ್ನು ಸರ್ವ ಕಾರಣಗಳ ಕಾರಣನೆಂಬುದನ್ನು ತೋರಿಸುತ್ತದೆ.ಅವನು ಭೌತಿಕ ವಿಶ್ವಗಳು ಯಾರಿಂದ ಉದ್ಭೂತವೋ ಆ ಮಹಾವಿಷ್ಣುವಿನ ಕಾರಣನೂ ಆಗಿದ್ದಾನೆ. ಕೃಷ್ಣನು ಅವತಾರವಲ್ಲ; ಅವನು ಸಕಲಾವತಾರಗಳ ಮೂಲನು. ಇದು ಹಿಂದಿನ ಅಧ್ಯಾಯದಲ್ಲಿ ಸಂಪೂರ್ಣವಾಗಿ ವಿವರಿಸಲ್ಪಟ್ಟಿದೆ.

ಈಗ ಮಾಯೆಯು ದೂರವಾಗಿದೆ ಎಂದು ಅರ್ಜುನನು ಹೇಳುತ್ತಾನೆ. ಎಂದರೆ ಕೃಷ್ಣನು ತನ್ನ ಸಖನಾಗಿ ಮಾನವ ಮಾತ್ರನಲ್ಲ ಎಂದು ಅರ್ಜುನನು ಆ ತರುವಾಯ ಭಾವಿಸುತ್ತಿಲ್ಲ. ಆದರೆ, ಪ್ರತಿಯೊಂದರ ಮೂಲನೆಂದು ಭಾವಿಸುತ್ತಾನೆ. ಅರ್ಜುನನು ಹೆಚ್ಚು ಜ್ಞಾನೋದಿತನು ಮತ್ತು ಕೃಷ್ಣನಂಥ ಮಹಾಸಖನನ್ನು ಹೊಂದಿದ್ದಕ್ಕೆ ಅವನು ಬಹು ಸಂತುಷ್ಟನು, ಆದರೆ ತಾನು ಕೃಷ್ಣನನ್ನು ಪ್ರತಿಯೊಂದರ ಮೂಲನೆಂದು ಅಂಗೀಕರಿಸಬಹುದಾಗಿದ್ದರೂ, ಇತರರು ಹಾಗೆ ಮಾಡದಿರಬಹುದು ಎಂದು ಈಗ ಅವನು ಯೋಚಿಸುತ್ತಿದ್ದಾನೆ. ಆದ್ದರಿಂದ ಕೃಷ್ಣನ ದಿವ್ಯತ್ವವನ್ನು ಸಕಲರಿಗೆ ವೇದ್ಯವಾಗುವಂತೆ ಸ್ಥಾಪಿಸಲೋಸುಗ ಈ ಅಧ್ಯಾಯದಲ್ಲಿ ತನ್ನ ವಿಶ್ವರೂಪ ತೋರಿಸುವಂತೆ ಕೃಷ್ಣನನ್ನು ಅರ್ಜುನನು ಪ್ರಾರ್ಥಿಸುತ್ತಾನೆ. ವಾಸ್ತವಿಕವಾಗಿ ಒಬ್ಬನು ಕೃಷ್ಣನ ವಿಶ್ವರೂಪವನ್ನು ಕಂಡಾಗ ಅರ್ಜುನನಂತೆ ಭಯಗೊಳ್ಳುತ್ತಾನೆ, ಆದರೆ ಕೃಷ್ಣನು ಅದೆಷ್ಟು ದಯಾಮಯನೆಂದರೆ ವಿಶ್ವರೂಪದರ್ಶನ ನೀಡಿದ ತರುವಾಯ ಅವನು ತನ್ನನ್ನು ಮತ್ತೆ ತನ್ನ ಮೂಲ ರೂಪಕ್ಕೆ ಪರಿವರ್ತಿಸಿಕೊಳ್ಳುತ್ತಾನೆ. ಕೃಷ್ಣನು ಅನೇಕ ಸಲ ಹೇಳಿದ್ದನ್ನು ಎಂದರೆ ಅವನ ಪ್ರಯೋಜನಾರ್ಥವಾಗಿ ಕೃಷ್ಣನು ಅವನಿಗೆ ಹೇಳುತ್ತಿದ್ದಾನೆ ಎಂಬುದನ್ನು ಅರ್ಜುನನು ಒಪ್ಪಿಕೊಳ್ಳುತ್ತಾನೆ. ಆದ್ದರಿಂದ ಇದೆಲ್ಲವೂ ಕೃಷ್ಣಾನುಗ್ರಹದಿಂದ ತನಗೆ ಲಭ್ಯ ಎಂದು ಅರ್ಜುನನು ಒಪ್ಪಿಕೊಳ್ಳುತ್ತಾನೆ. ಕೃಷ್ಣನು ಸರ್ವ ಕಾರಣಗಳ ಕಾರಣನು ಮತ್ತು ಪರಮಾತ್ಮನಾಗಿ ಪ್ರತಿಯೊಬ್ಬರ ಹೃದಯಸ್ಥಿತನು ಎಂಬುದು ಈಗ ಅವನಿಗೆ ಮನದಟ್ಟಾಗಿದೆ.

**ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ ।**
**ತ್ವತ್ತಃ ಕಮಲಪತ್ರಾಕ್ಷ ಮಾಹಾತ್ಮ್ಯಮಪಿ ಚಾವ್ಯಯಮ್ ॥ ೨ ॥**

ಭವ—ಆವಿರ್ಭಾವ, ಅಪ್ಯಯೌ—ಅದೃಶ್ಯತ್ವ, ಹಿ—ಖಂಡಿತವಾಗಿ, ಭೂತಾನಾಮ್—ಸಕಲ ಜೀವಿಗಳ, ಶ್ರುತೌ—ಎಂದು ಕೇಳಿದ, ವಿಸ್ತರಶಃ—ವಿಸ್ತಾರವಾಗಿ, ಮಯಾ—ನನ್ನಿಂದ, ತ್ವತ್ತಃ—ನಿನ್ನಿಂದ, ಕಮಲ-ಪತ್ರ-ಅಕ್ಷ—ಹೇ ಕಮಲಪತ್ರಾಕ್ಷನೇ, ಮಾಹಾತ್ಮ್ಯಮ್—ಮಹಿಮೆಗಳು, ಅಪಿ—ಕೂಡ, ಚ—ಮತ್ತು, ಅವ್ಯಯಮ್—ಅವ್ಯಯ.

**ಹೇ ಕಮಲಪತ್ರಾಕ್ಷನೇ, ಪ್ರತಿಯೊಬ್ಬ ಜೀವಿಯ ದೃಶ್ಯಾದೃಶ್ಯತೆಯ ಬಗ್ಗೆ ನಿನ್ನಿಂದ ಸವಿಸ್ತಾರವಾಗಿ ಕೇಳಿದ್ದೇನೆ, ಮತ್ತು ನಿನ್ನ ಅವ್ಯಯ ಮಹಿಮೆಗಳನ್ನು ಸಾಕ್ಷಾತ್ಕರಿಸಿಕೊಂಡಿದ್ದೇನೆ.**

**ಭಾವಾರ್ಥ:** ಅರ್ಜುನನು, ಸಂತೋಷಭರಿತನಾಗಿ ಕೃಷ್ಣನನ್ನು "ಕಮಲಪತ್ರಾಕ್ಷ" ನೆಂದು ಸಂಬೋಧಿಸುತ್ತಾನೆ. (ಕೃಷ್ಣನ ಕಣ್ಣುಗಳು ಕಮಲ ಪುಷ್ಪ ಪಟಲಗಳಂತೆಯೇ ಕಾಣುತ್ತವೆ) ಏಕೆಂದರೆ ಹಿಂದಿನ ಅಧ್ಯಾಯದಲ್ಲಿ ಕೃಷ್ಣನು **ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ** "ನಾನು ಈ ಇಡೀ ಭೌತಿಕ ಉದ್ಭೂತಿಯ ದೃಶ್ಯಾದೃಶ್ಯಗಳ ಮೂಲನು" ಎಂದು ಅರ್ಜುನನಿಗೆ ಆಶ್ವಾಸನೆ ನೀಡಿದ್ದಾನೆ. ಅರ್ಜುನನು ಇದನ್ನು ಭಗವಂತನಿಂದ ಸವಿಸ್ತಾರವಾಗಿ ಶ್ರವಣಮಾಡಿದ್ದಾನೆ.ಅವನು 'ಸಕಲ ದೃಶ್ಯಾದೃಶ್ಯಗಳ ಮೂಲನಾಗಿದ್ದರೂ ಕೂಡ

ಅವನು ಅವೆಲ್ಲವುಗಳಿಂದ ವಿದೂರನೆಂಬುದನ್ನೂ ಅರ್ಜುನನು ತಿಳಿದಿದ್ದಾನೆ. ಒಂಭತ್ತನೆಯ ಅಧ್ಯಾಯದಲ್ಲಿ ಕೃಷ್ಣನು ಹೇಳಿದಂತೆ, ಅವನು ಸರ್ವವ್ಯಾಪ್ತನು, ಆದರೂ ಪ್ರತಿಯೊಂದು ಕಡೆಯಲ್ಲಿ ಅವನು ಸ್ವಯಂ ಇರುವುದಿಲ್ಲ. ಅದೇ ಕೃಷ್ಣನ ಅಚಿಂತ್ಯ ಐಶ್ವರ್ಯ. ಅದನ್ನು ತಾನು ಚೆನ್ನಾಗಿ ಅರಿತುಕೊಂಡಿರುವುದಾಗಿ ಅರ್ಜುನನು ಒಪ್ಪಿಕೊಳ್ಳುತ್ತಾನೆ.

**ಏವಮೇತದ್ ಯಥಾತ್ಥ ತ್ವಮಾತ್ಮಾನಂ ಪರಮೇಶ್ವರ ।**
**ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ ॥ ೩ ॥**

ಏವಮ್—ಹೀಗೆ, ಏತತ್—ಇದನ್ನು, ಯಥಾ—ಇದ್ದಂತೆ, ಆತ್ಥ—ಹೇಳಿರುವೆ, ತ್ವಮ್—ನೀನು, ಆತ್ಮಾನಮ್—ನಿನ್ನನ್ನು, ಪರಮ—ಈಶ್ವರ-ಹೇ ಪರಮ ಪ್ರಭುವೇ, ದ್ರಷ್ಟುಮ್—ನೋಡಲು, ಇಚ್ಛಾಮಿ—ಇಚ್ಛಿಸುತ್ತೇನೆ, ತೇ—ನಿನ್ನ, ರೂಪಮ್—ರೂಪವನ್ನು, ಐಶ್ವರಮ್—ದಿವ್ಯ, ಪುರುಷ—ಉತ್ತಮ—ಹೇ ಪುರುಷೋತ್ತಮನೇ.

**ಹೇ ಪುರುಷೋತ್ತಮನೇ, ದಿವ್ಯ ರೂಪನೇ, ಈಗ ನಾನು, ನೀನು ವರ್ಣಿಸಿದಂತೆ ನಿನ್ನನ್ನು ವಾಸ್ತವಿಕವಾಗಿ ನನ್ನ ಮುಂದೆ ಕಾಣುತ್ತಿದ್ದರೂ ಕೂಡ, ನೀನು ಹೇಗೆ ಈ ವಿಶ್ವ ಉದ್ಭೂತಿಯನ್ನು ಪ್ರವೇಶಿಸಿರುವೆ ಎಂಬುದನ್ನು ನೋಡಬಯಸುತ್ತೇನೆ. ನಾನು ನಿನ್ನ ಆ ರೂಪವನ್ನು ನೋಡಲಿಚ್ಛಿಸುತ್ತೇನೆ.**

**ಭಾವಾರ್ಥ :** ತಾನು ತನ್ನ ಸ್ವಯಂ ಅಂಶದಿಂದ ಭೌತಿಕ ವಿಶ್ವವನ್ನು ಪ್ರವೇಶಿಸಿದ್ದರಿಂದ, ವಿಶ್ವ ಉದ್ಭೂತಿಯು ಸಂಭವವಾಗಿದೆ ಮತ್ತು ಸಾಗುತ್ತಿದೆ ಎಂದು ಕೃಷ್ಣನು ಹೇಳಿದನು. ಈಗ ಅರ್ಜುನನ ಮಟ್ಟಿಗೆ ಅವನು ಕೃಷ್ಣನ ಮಾತುಗಳಿಂದ ಸ್ಫೂರ್ತಿ ಹೊಂದಿದನು, ಆದರೆ ಮುಂದೆ ಕೃಷ್ಣನನ್ನು ಸಾಮಾನ್ಯ ಮನುಷ್ಯನೆಂದು ಭಾವಿಸಬಹುದಾದ ಇತರರಿಗೆ ಮನದಟ್ಟು ಮಾಡಿಕೊಡಲು, ಕೃಷ್ಣನು ವಿಶ್ವದಿಂದ ದೂರವಿದ್ದರೂ ವಿಶ್ವದೊಳಗಿದ್ದೇ ಹೇಗೆ ಕಾರ್ಯ ಮಾಡುತ್ತಿದ್ದಾನೆ ಎಂಬುದನ್ನು ನೋಡುವುದಕ್ಕಾಗಿ ವಾಸ್ತವಿಕವಾಗಿ ಅವನ ವಿಶ್ವರೂಪದಲ್ಲಿ ಭಗವಂತನನ್ನು ಕಾಣಲು ಅರ್ಜುನನು ಆಶಿಸುತ್ತಿದ್ದಾನೆ. **ಪುರುಷೋತ್ತಮ** ಎಂದು ಅರ್ಜುನನು ಸಂಬೋಧಿಸುವುದು ಕೂಡ ಮಹತ್ವದ್ದಾಗಿದೆ. ಕೃಷ್ಣನು ಪರಮದೇವೋತ್ತಮ ಪುರುಷನಾಗಿರುವುದರಿಂದ, ಅವನು ಸ್ವಯಂ ಅರ್ಜುನನಲ್ಲಿಯೂ ಸನ್ನಿಹಿತನು, ಆದ್ದರಿಂದ ಅವನು ಅರ್ಜುನನ ಇಚ್ಛೆಯನ್ನು ಬಲ್ಲನು ಮತ್ತು ಅರ್ಜುನನು ತನ್ನನ್ನು ತನ್ನ ವಿಶ್ವರೂಪ ದಲ್ಲಿ ನೋಡುವ ವಿಶೇಷ ಇಚ್ಛೆ ಹೊಂದಿಲ್ಲ ಎಂಬುದನ್ನು ಕೂಡ ಕೃಷ್ಣನು ಅರಿತುಕೊಳ್ಳಬಲ್ಲನು. ಏಕೆಂದರೆ ಅರ್ಜುನನು ಕೃಷ್ಣನನ್ನು ಸ್ವಯಂರೂಪದಲ್ಲಿ ಕಂಡು ಸಂಪೂರ್ಣವಾಗಿ ತುಷ್ಟನಾಗಿದ್ದಾನೆ. ಆದರೆ ಇತರರಿಗೆ ಮನದಟ್ಟು ಮಾಡಿಕೊಡಲು ಅರ್ಜುನನು ವಿಶ್ವರೂಪ ನೋಡಬಯಸುತ್ತಾನೆ, ಎಂಬುದನ್ನು ಕೂಡ ಕೃಷ್ಣನು ಅರಿತುಕೊಳ್ಳಬಲ್ಲನು. ದಾರಢ್ಯಕ್ಕೆ ಅರ್ಜುನನು ಯಾವ ವ್ಯಕ್ತಿಗತ ಇಚ್ಛೆ ಹೊಂದಿರಲಿಲ್ಲ. ಒಂದು ತತ್ವ ಸ್ಥಾಪನೆಗಾಗಿ ಅರ್ಜುನನು ವಿಶ್ವರೂಪ ನೋಡಬಯಸುತ್ತಾನೆ ಎಂಬುದನ್ನೂ ಕೃಷ್ಣನು ಅರಿತುಕೊಳ್ಳಬಲ್ಲನು, ಏಕೆಂದರೆ ಮುಂದೆ ತಾವೇ ಭಗವಂತನ ಅವತಾರವೆಂದು ಸೋಗುಹಾಕುವ ಅನೇಕ ಮೋಸಗಾರ

ರಿರುತ್ತಾರೆ. ಆದ್ದರಿಂದ ಜನರು ಎಚ್ಚರವಾಗಿರಬೇಕು; ತಾನು ಕೃಷ್ಣನೆಂದು ಹೇಳಿಕೊಳ್ಳುವವನು ತನ್ನ ಹೇಳಿಕೆಯನ್ನು ಜನರಿಗೆ ದೃಢಪಡಿಸಲು ತನ್ನ ವಿಶ್ವರೂಪವನ್ನು ತೋರಿಸಲು ಸಿದ್ಧನಾಗಬೇಕು.

**ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ ।**
**ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಮ್ ॥ ೪ ॥**

ಮನ್ಯಸೇ—ನೀನು ತಿಳಿದದ್ದು, ಯದಿ—ಆದರೆ, ತತ್—ಅದು, ಶಕ್ಯಮ್—ಶಕ್ಯ, ಮಯಾ—ನನ್ನಿಂದ, ದ್ರಷ್ಟುಮ್—ನೋಡಬೇಕಾದದ್ದು, ಇತಿ—ಹೀಗೆ, ಪ್ರಭೋ-ಹೇ ಪ್ರಭುವೇ, ಯೋಗ-ಈಶ್ವರ—ಹೇ ಯೋಗೇಶ್ವರನೇ, ತತಃ—ಆಗ, ಮೇ—ನನಗೆ, ತ್ವಮ್—ನೀನು, ದರ್ಶಯ—ತೋರಿಸು, ಆತ್ಮಾನಾಮ್—ನಿನ್ನನ್ನು, ಅವ್ಯಯಮ್—ಶಾಶ್ವತ.

**ಹೇ ಪ್ರಭುವೇ, ನಿನ್ನ ವಿಶ್ವರೂಪವನ್ನು ನೋಡಲು ನನಗೆ ಶಕ್ಯವೆಂದು ನೀನು ಭಾವಿಸುವುದಾದರೆ, ಹೇ ಯೋಗೇಶ್ವರನೇ, ಆ ಅಪರಿಮಿತ ವಿಶ್ವಾತ್ಮನನ್ನು ನನಗೆ ದಯವಿಟ್ಟು ತೋರಿಸು.**

**ಭಾವಾರ್ಥ :** ಒಬ್ಬನು ಭೌತಿಕ ಇಂದ್ರಿಯಗಳಿಂದ ಪರಮ ಪ್ರಭು ಕೃಷ್ಣನನ್ನು ಕಾಣಲಾರನು, ಶ್ರವಣ ಮಾಡಲಾರನು, ಅರಿತುಕೊಳ್ಳಲಾರನು ಅಥವಾ ತಿಳಿಯಲಾರನು ಎಂದು ಹೇಳಿದೆ. ಆದರೆ ಪ್ರಾರಂಭದಿಂದ ಒಬ್ಬನು ಭಗವಂತನ ಪ್ರೀತಿಯುತ ದಿವ್ಯ ಸೇವೆಯಲ್ಲಿ ನಿರತನಾಗಿದ್ದರೆ, ಆಗ ಅವನು ದೃಷ್ಟತೆಯಿಂದ ಭಗವಂತನನ್ನು ಕಾಣಬಲ್ಲನು. ಪ್ರತಿಯೊಬ್ಬ ಜೀವಿಯೂ ಒಂದು ಆಧ್ಯಾತ್ಮ ಕಿಡಿ ಮಾತ್ರ; ಆದ್ದರಿಂದ ಪರಮ ಪ್ರಭುವನ್ನು ಕಾಣುವುದು ಅಥವಾ ಅರಿತುಕೊಳ್ಳುವುದು ಅಸಂಭವ. ಅರ್ಜುನನು, ಭಕ್ತನಾಗಿ ತನ್ನ ಊಹಾಬಲವನ್ನು ಅವಲಂಬಿಸುವುದಿಲ್ಲ. ಪ್ರತಿಯಾಗಿ, ಜೀವಿಯಾಗಿ ಅವನು ತನ್ನ ಪರಿಮಿತಿಗಳನ್ನು ಒಪ್ಪಿಕೊಳ್ಳುತ್ತಾನೆ ಮತ್ತು ಕೃಷ್ಣನ ಅಳೆಯಲಾಗದ ಸ್ವರೂಪವನ್ನು ಅಂಗೀಕರಿಸುತ್ತಾನೆ. ಅಪರಿಮಿತವಾದ ಅನಂತವನ್ನು ಅರಿತುಕೊಳ್ಳುವುದು ಜೀವಿಗೆ ಅಸಂಭವ ಎಂಬುದನ್ನು ಅರ್ಜುನನು ಬಲ್ಲನು. ಅನಂತವು ಸ್ವಯಂ ಗೋಚರವಾದರೆ, ಆಗ ಅನಂತನ ಅನುಗ್ರಹದಿಂದ ಅನಂತದ ಸ್ವರೂಪವನ್ನು ಅರಿತುಕೊಳ್ಳುವುದು ಸಂಭವ. ಇಲ್ಲಿ **ಯೋಗೇಶ್ವರ** ಎಂಬ ಪದವೂ ಕೂಡ ಬಹು ಮಹತ್ವದ್ದು, ಏಕೆಂದರೆ ಭಗವಂತನು ಅಚಿಂತ್ಯ ಶಕ್ತಿಸಂಪನ್ನನು. ಅವನ ಇಚ್ಛೆಗೆ ಬಂದರೆ, ಅವನು ಅಪರಿಮಿತನಾದರೂ ಕೂಡ ಅನುಗ್ರಹಮಾಡಿ ತನ್ನನ್ನು ಪ್ರಕಟಗೊಳಿಸಬಲ್ಲನು. ಆದ್ದರಿಂದ ಕೃಷ್ಣನ ಅಚಿಂತ್ಯ ಅನುಗ್ರಹಕ್ಕಾಗಿ ಅರ್ಜುನನು ಪ್ರಾರ್ಥಿಸಿಕೊಳ್ಳುತ್ತಾನೆ. ಅವನು ಕೃಷ್ಣನಿಗೆ ಆದೇಶ ಮಾಡುತ್ತಿಲ್ಲ. ಒಬ್ಬನು ಕೃಷ್ಣಪ್ರಜ್ಞೆಯಲ್ಲಿ ಪೂರ್ಣವಾಗಿ ಅವನಿಗೆ ಶರಣಾಗತನಾಗಿ ಭಕ್ತಿಯುತ ಸೇವೆಯಲ್ಲಿ ತೊಡಗಿದ ಹೊರತು ಕೃಷ್ಣನು ಸ್ವಯಂ ಗೋಚರನಾಗಲು ಆಭಾರಿಯಲ್ಲ. ಆದ್ದರಿಂದ ಕೃಷ್ಣನನ್ನು ಕಾಣಲು ತಮ್ಮ ಮಾನಸಿಕ ಊಹಾಪೋಹಗಳ ಬಲವನ್ನು ಅವಲಂಬಿಸುವವರಿಗೆ ಅದು ಅಸಂಭವ.

ಶ್ರೀಭಗವಾನುವಾಚ

**ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ ।**
**ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ॥ ೫ ॥**

ಶ್ರೀಭಗವಾನ್ ಉವಾಚ—ಪರಮ ದೇವೋತ್ತಮ ಪುರುಷನು ನುಡಿದನು, ಪಶ್ಯ—ನೋಡು, ಮೇ—ನನ್ನ, ಪಾರ್ಥ—ಹೇ ಪೃಥಾಪುತ್ರನೇ, ರೂಪಾಣಿ—ರೂಪಗಳನ್ನು, ಶತಶಃ—ನೂರಾರು, ಅಥ—ಮತ್ತು, ಸಹಸ್ರಶಃ—ಸಾವಿರಾರು, ನಾನಾ-ವಿಧಾನಿ—ವಿವಿಧ, ದಿವ್ಯಾನಿ—ದಿವ್ಯ, ನಾನಾ—ವಿವಿಧ, ವರ್ಣ—ವರ್ಣಗಳು, ಆಕೃತೀನಿ—ಆಕೃತಿಗಳನ್ನು, ಚ—ಕೂಡ.

**ಪರಮ ದೇವೋತ್ತಮ ಪುರುಷನು ನುಡಿದನು: ನನ್ನ ಪ್ರಿಯ ಅರ್ಜುನನೇ, ಹೇ ಪೃಥಾಪುತ್ರನೇ, ಈಗ ನನ್ನ ಐಶ್ವರ್ಯಗಳನ್ನು ನೂರಾರು ಸಾವಿರಾರು ಬಗೆಯ ದಿವ್ಯ ಮತ್ತು ಬಹುವರ್ಣರಂಜಿತ ರೂಪಗಳನ್ನು ನೋಡು.**

**ಭಾವಾರ್ಥ :** ಅರ್ಜುನನು ಕೃಷ್ಣನನ್ನು ಅವನ ವಿಶ್ವರೂಪದಲ್ಲಿ ನೋಡಬಯಸಿದ್ದನು. ಅದು, ದಿವ್ಯರೂಪವಾಗಿದ್ದರೂ ಕೂಡ, ವಿಶ್ವ ಉದ್ಭೂತಿಗಾಗಿ ಮಾತ್ರ ಪ್ರಕಟಿತ, ಆದ್ದರಿಂದ ಅದು ಭೌತಿಕ ಪ್ರಕೃತಿಯ ಅನಿತ್ಯ ಕಾಲಕ್ಕೆ ಒಳಪಟ್ಟಿದ್ದು. ಭೌತಿಕ ಪ್ರಕೃತಿಯು ವ್ಯಕ್ತಾವ್ಯಕ್ತವಾಗಿರುವಂತೆ, ಕೃಷ್ಣನ ಈ ವಿಶ್ವರೂಪವು ಕೂಡ ವ್ಯಕ್ತಾವ್ಯಕ್ತ. ಅದು ಶಾಶ್ವತವಾಗಿ ಕೃಷ್ಣನ ಇತರ ರೂಪಗಳಂತೆ ಪರವ್ಯೋಮದಲ್ಲಿ ನಿತ್ಯ ಸನ್ನಿವೇಶಿತವಲ್ಲ. ಭಕ್ತನ ಮಟ್ಟಿಗೆ ಅವನು ವಿಶ್ವರೂಪ ದರ್ಶನಾಕಾಂಕ್ಷಿಯಲ್ಲ. ಆದರೆ ಅರ್ಜುನನು ಕೃಷ್ಣನನ್ನು ಈ ರೀತಿ ಕಾಣಬಯಸಿದ್ದರಿಂದ, ಕೃಷ್ಣನು ಈ ರೂಪವನ್ನು ಪ್ರಕಟಿಸುತ್ತಾನೆ. ಈ ವಿಶ್ವರೂಪವನ್ನು ಯಾವೊಬ್ಬ ಸಾಮಾನ್ಯ ಮಾನವನು ನೋಡುವುದು ಅಸಂಭವ. ಅದನ್ನು ಕಾಣಲು ಕೃಷ್ಣನು ಒಬ್ಬನಿಗೆ ಶಕ್ತಿ ನೀಡಬೇಕು.

**ಪಶ್ಯಾದಿತ್ಯಾನ್ ವಸೂನ್ ರುದ್ರಾನಶ್ವಿನೌ ಮರುತಸ್ತಥಾ ।**
**ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ ॥ ೬ ॥**

ಪಶ್ಯ—ನೋಡು, ಅದಿತ್ಯಾನ್—ಅದಿತಿಯ ದ್ವಾದಶ ಪುತ್ರರನ್ನು, ವಸೂನ್—ಅಷ್ಟವಸುಗಳನ್ನು, ರುದ್ರಾನ್—ರುದ್ರನ ಏಕಾದಶ ರೂಪಗಳನ್ನು, ಅಶ್ವಿನೌ—ಅಶ್ವಿನಿಕುಮಾರದ್ವಯರನ್ನು, ಮರುತಃ—ನಲವತ್ತೊಂಭತ್ತು ಮರುತ್ತುಗಳು (ವಾಯು ದೇವತೆಗಳು), ತಥಾ—ಮತ್ತು, ಬಹೂನಿ—ಅನೇಕ, ಅದೃಷ್ಟ—ನೀನು ಇನ್ನೂ ನೋಡದ, ಪೂರ್ವಾಣಿ—ಹಿಂದೆ, ಪಶ್ಯ—ನೋಡು, ಆಶ್ಚರ್ಯಾಣಿ—ಸಕಲ ಅದ್ಭುತಗಳನ್ನು, ಭಾರತ—ಹೇ ಭರತ ಶ್ರೇಷ್ಠನೇ.

**ಹೇ ಭರತ ಶ್ರೇಷ್ಠನೇ, ಇಲ್ಲಿ ಆದಿತ್ಯರ, ವಸುಗಳ, ರುದ್ರರ, ಅಶ್ವಿನೀ ಕುಮಾರರ ಮತ್ತು ಸಕಲ ಇತರ ದೇವತೆಗಳ ನಾನಾ ಉದ್ಭೂತಿಗಳನ್ನು ನೋಡು. ಹಿಂದೆ ಯಾರೂ ಕಾಣದ ಮತ್ತು ಕೇಳದ ಅನೇಕ ಆಶ್ಚರ್ಯಕರ ವಸ್ತುಗಳನ್ನು ನೋಡು.**

**ಭಾವಾರ್ಥ :** ಅರ್ಜುನನು ಕೃಷ್ಣನ ಆಪ್ತ ಸಖನು ಮತ್ತು ವಿದ್ವಾಂಸರಲ್ಲಿ ಅತ್ಯಂತ ಉತ್ಕೃಷ್ಟನಾಗಿದ್ದರೂ ಕೂಡ ಆಗಲೂ ಕೃಷ್ಣನನ್ನು ಕುರಿತು ಎಲ್ಲವನ್ನು ತಿಳಿಯಲು ಅವನಿಗೆ ಸಾಧ್ಯವಾಗಿರಲಿಲ್ಲ. ಮಾನವರು ಈ ಎಲ್ಲ ರೂಪಗಳನ್ನು ಮತ್ತು ಉದ್ಭೂತಿಗಳನ್ನು ಎಂದೂ ಕೇಳಿಲ್ಲ ಅಥವಾ ಅರಿತಿಲ್ಲ ಎಂದು ಇಲ್ಲಿ ಹೇಳಿದೆ. ಈಗ ಕೃಷ್ಣನು ಈ ಅದ್ಭುತ ರೂಪಗಳನ್ನು ಪ್ರಕಟಿಸುತ್ತಿದ್ದಾನೆ.

**ಇಹೈಕಸ್ಥಂ ಜಗತ್ ಕೃತ್ಸ್ನಂ ಪಶ್ಯಾದ್ಯ ಸಚರಾಚರವ್ ।**
**ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ ದ್ರಷ್ಟುಮಿಚ್ಛಸಿ ॥ ೭ ॥**

ಇಹ—ಇಲ್ಲಿ, ಏಕಸ್ಥಮ್—ಒಂದು ಸ್ಥಳದಲ್ಲಿ, ಜಗತ್—ವಿಶ್ವ, ಕೃತ್ಸ್ನಮ್—ಸಂಪೂರ್ಣವಾಗಿ, ಪಶ್ಯ—ನೋಡು, ಅದ್ಯ—ಕೂಡಲೇ, ಸ—ಒಟ್ಟಿಗೆ, ಚರ—ಚರ, ಅಚರಮ್—ಅಚರ, ಮಮ—ನನ್ನ, ದೇಹೇ—ಈ ದೇಹದಲ್ಲಿ, ಗುಡಾಕೇಶ—ಹೇ ಅರ್ಜುನ, ಯತ್—ಯಾವುದನ್ನು, ಚ—ಮತ್ತು, ಅನ್ಯತ್—ಇತರ, ದ್ರಷ್ಟುಮ್—ನೋಡಲು, ಇಚ್ಛಸಿ—ನೀನು ಬಯಸುವೆ.

**ಹೇ ಅರ್ಜುನ, ನೀನು ನೋಡಲಿಚ್ಛಿಸುವುದನ್ನೆಲ್ಲಾ ಕೂಡಲೇ ಈ ನನ್ನ ದೇಹದಲ್ಲಿ ನೋಡು ! ನೀನು ಈಗ ನೋಡಬಯಸುವುದನ್ನೆಲ್ಲಾ ಮತ್ತು ಮುಂದೆ ನೋಡಬಯಸುವುದನ್ನೆಲ್ಲಾ ಈ ವಿಶ್ವರೂಪವು ನಿನಗೆ ತೋರಿಸಬಲ್ಲದು. ಪ್ರತಿಯೊಂದು ಚರಾಚರವು—ಇಲ್ಲಿ ಸಂಪೂರ್ಣವಾಗಿ ಒಂದೇ ಸ್ಥಳದಲ್ಲಿದೆ.**

**ಭಾವಾರ್ಥ :** ಒಬ್ಬನು ಒಂದೆಡೆ ಕುಳಿತು ಇಡೀ ವಿಶ್ವವನ್ನು ಕಾಣಲಾರನು. ಅತ್ಯಂತ ಮುಂದುವರಿದ ವಿಜ್ಞಾನಿಯು ಕೂಡ ವಿಶ್ವದ ಇತರ ಭಾಗಗಳಲ್ಲಿ ಏನು ನಡೆಯುತ್ತಿದೆ ಎಂಬುದನ್ನು ಕಾಣಲಾರನು. ಆದರೆ ಅರ್ಜುನನಂಥ ಭಕ್ತನು ವಿಶ್ವದ ಯಾವುದೇ ಭಾಗದಲ್ಲಿರುವ ಪ್ರತಿಯೊಂದನ್ನೂ ಕಾಣಬಲ್ಲನು. ಅವನು ನೋಡಬಯಸುವ ಹಿಂದಿನ, ಇಂದಿನ ಮತ್ತು ಮುಂದಿನ ಯಾವುದನ್ನಾದರೂ ನೋಡಲು ಕೃಷ್ಣನು ಅವನಿಗೆ ಶಕ್ತಿ ನೀಡುವನು. ಹೀಗೆ ಕೃಷ್ಣಾನುಗ್ರಹದಿಂದ ಅರ್ಜುನನು ಪ್ರತಿಯೊಂದನ್ನೂ ನೋಡಲು ಶಕ್ತನಾದನು.

**ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ ।**
**ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯಮೇ ಯೋಗಮೈಶ್ವರಮ್ ॥ ೮ ॥**

ನ—ಎಂದಿಗೂ ಇಲ್ಲ, ತು—ಆದರೆ, ಮಾಮ್—ನನ್ನನ್ನು, ಶಕ್ಯಸೇ—ಶಕ್ಯನು, ದ್ರಷ್ಟುಮ್—ನೋಡಲು, ಅನೇನ—ಇವುಗಳಿಂದ, ಏವ—ಖಂಡಿತವಾಗಿ, ಸ್ವ-ಚಕ್ಷುಷಾ—ನಿನ್ನ ಸ್ವಂತ ಕಣ್ಣುಗಳಿಂದ, ದಿವ್ಯಮ್—ದಿವ್ಯ, ದದಾಮಿ—ನೀಡುತ್ತೇನೆ, ತೇ—ನಿನಗೆ, ಚಕ್ಷುಃ—ಕಣ್ಣುಗಳನ್ನು, ಪಶ್ಯ—ನೋಡು, ಮೇ—ನನ್ನ, ಯೋಗಮ್-ಐಶ್ವರಮ್—ಅಚಿಂತ್ಯ ಯೋಗೈಶ್ವರ್ಯವನ್ನು.

**ಆದರೆ ನೀನು ನಿನ್ನ ಈ ಕಣ್ಣುಗಳಿಂದ ನನ್ನನ್ನು ನೋಡಲಾಗದು. ಅದ್ದರಿಂದ ನಿನಗೆ ದಿವ್ಯ ಚಕ್ಷುಗಳನ್ನು ನೀಡುತ್ತೇನೆ. ಅಗೋ ನನ್ನ ಯೋಗೈಶ್ವರ್ಯವನ್ನು ನೋಡು !**

**ಭಾವಾರ್ಥ :** ಶುದ್ಧ ಭಕ್ತನು, ಕೃಷ್ಣನನ್ನು ಅವನ ದ್ವಿಭುಜರೂಪದಲ್ಲಿ ಅಲ್ಲದೆ ಬೇರೆ ಯಾವ ರೂಪದಲ್ಲಿಯೂ ನೋಡಬಯಸುವುದಿಲ್ಲ; ಭಕ್ತನು ಅವನ ಅನುಗ್ರಹದಿಂದ ಅವನ ವಿಶ್ವರೂಪವನ್ನು ನೋಡಬೇಕು, ಮನಸ್ಸಿನಿಂದಲ್ಲ, ಆಧ್ಯಾತ್ಮ ಕಣ್ಣುಗಳಿಂದ. ಕೃಷ್ಣನ ವಿಶ್ವರೂಪ ನೋಡಲು, ಅರ್ಜುನನು ತನ್ನ ಮನಸ್ಸನ್ನು ಬದಲಾಯಿಸಬೇಕಾಗಿಲ್ಲ; ಆದರೆ ದೃಷ್ಟಿಯನ್ನು ಬದಲಾಯಿಸಿಕೊಳ್ಳಬೇಕು ಎಂದು ಹೇಳಲಾಯಿತು. ಕೃಷ್ಣನ ವಿಶ್ವ ರೂಪವು ಬಹು ಮಹತ್ವದ್ದಲ್ಲ; ಅದು ಮುಂದಿನ ಶ್ಲೋಕಗಳಲ್ಲಿ ಸ್ಪಷ್ಟವಾಗುವುದು. ಆದರೂ ಅರ್ಜುನನು ಅದನ್ನು ನೋಡಬಯಸಿದ್ದರಿಂದ, ಆ ವಿಶ್ವರೂಪವನ್ನು ನೋಡಲು ಅಗತ್ಯವಾದ ವಿಶಿಷ್ಟ ದೃಷ್ಟಿಯನ್ನು ಕೃಷ್ಣನು ಅವನಿಗೆ ನೀಡುತ್ತಾನೆ.

ಕೃಷ್ಣನೊಂದಿಗೆ ದಿವ್ಯ ಸಂಬಂಧದಲ್ಲಿ ಸರಿಯಾಗಿ ಸನ್ನಿವೇಶಿತರಾದ ಭಕ್ತರು ಪ್ರೀತಿ ಯುತ ಲಕ್ಷಣಗಳಿಂದ ಆಕರ್ಷಿತರಾಗುವರೇ ಹೊರತು ದೈವಹೀನ ಐಶ್ವರ್ಯ ಪ್ರದರ್ಶನ ದಿಂದಲ್ಲ. ಕೃಷ್ಣನ ಒಡನಾಡಿಗಳು, ಕೃಷ್ಣನ ಸಖರು ಮತ್ತು ಕೃಷ್ಣನ ತಂದೆತಾಯಿಗಳು ಕೃಷ್ಣನನ್ನು ತನ್ನ ಐಶ್ವರ್ಯ ತೋರಿಸಬೇಕೆಂದು ಎಂದೂ ಇಚ್ಛಿಸುವುದಿಲ್ಲ. ಅವರು ಶುದ್ಧ ಪ್ರೇಮದಲ್ಲಿ ಅದೆಷ್ಟು ಮಗ್ನರೆಂದರೆ ಕೃಷ್ಣನು ಪರಮ ದೇವೋತ್ತಮ ಪುರುಷನೆಂಬುದು ಕೂಡ ಅವರಿಗೆ ತಿಳಿದಿರಲಿಲ್ಲ. ತಮ್ಮ ಪ್ರೇಮ ವಿನಿಮಯದಲ್ಲಿ ಅವರು ಕೃಷ್ಣನು ಪರಮ ಪ್ರಭು ಎಂಬುದನ್ನು ಮರೆಯುತ್ತಾರೆ. ಕೃಷ್ಣನೊಂದಿಗೆ ಕ್ರೀಡಿಸುವ ಬಾಲಕರೆಲ್ಲ ಅತ್ಯಂತ ಪುಣ್ಯಾತ್ಮರು ಮತ್ತು ಅನೇಕಾನೇಕ ಜನ್ಮಗಳ ತರುವಾಯ ಅವರು ಕೃಷ್ಣನೊಂದಿಗೆ ಕ್ರೀಡಿ ಸಲು ಶಕ್ತರು ಎಂದು ಶ್ರೀಮದ್ ಭಾಗವತದಲ್ಲಿ ಹೇಳಿದೆ. ಕೃಷ್ಣನು ಪರಮ ದೇವೋತ್ತಮ ಪುರುಷನೆಂಬುದು ಅಂಥ ಬಾಲಕರಿಗೆ ತಿಳಿಯದು. ಅವರು ಅವನನ್ನು ತಮ್ಮ ಆತ್ಮ ಸಖ ನೆಂದು ಗ್ರಹಿಸುತ್ತಾರೆ. ಆದ್ದರಿಂದ ಶುಕಾಚಾರ್ಯರು ಈ ಶ್ಲೋಕವನ್ನು ಪಠಿಸುತ್ತಾರೆ :

ಇತ್ಥಂ ಸತಾಂ ಬ್ರಹ್ಮಸುಖಾನುಭೂತ್ಯಾ
ದಾಸ್ಯಂ ಗತಾನಾಂ ಪರದೈವತೇನ
ಮಾಯಾಶ್ರಿತಾನಾಂ ನರದಾರಕೇಣ
ಸಾಕಂ ವಿಜಹ್ರುಃ ಕೃತಪುಣ್ಯಪುಂಜಾಃ

"ಮಹರ್ಷಿಗಳಿಂದ ವ್ಯಕ್ತಿಶೂನ್ಯ ಬ್ರಹ್ಮನ್, ಭಕ್ತರಿಂದ ಪರಮ ದೇವೋತ್ತಮ ಪುರುಷ, ಮತ್ತು ಸಾಮಾನ್ಯ ಮಾನವರಿಂದ ಭೌತಿಕ ಪ್ರಕೃತಿ ಉತ್ಪನ್ನ ವಸ್ತು ವೆಂದು ತಿಳಿಯಲ್ಪಟ್ಟ ಪರಮ ಪುರುಷನು ಇಲ್ಲಿ ಇದ್ದಾನೆ. ಈಗ ತಮ್ಮ ಪೂರ್ವ ಜನ್ಮಗಳಲ್ಲಿ ಅನೇಕಾನೇಕ ಪುಣ್ಯ ಕಾರ್ಯಗಳನ್ನು ಆಚರಿಸಿದ ಈ ಬಾಲಕರು ಆ ಪರಮ ದೇವೋತ್ತಮ ಪುರುಷನೊಂದಿಗೆ ಕ್ರೀಡಿಸುತ್ತಿದ್ದಾರೆ." (ಶ್ರೀಮದ್ ಭಾಗವತಮ್ 10.12.11)

ಭಕ್ತನು ವಿಶ್ವರೂಪವನ್ನು ನೋಡಲು ಆಸಕ್ತನಲ್ಲ. ಆದರೆ ಕೃಷ್ಣನು ಕೇವಲ ತಾತ್ವಿಕವಾಗಿ ಅಥವಾ ದಾರ್ಶನಿಕವಾಗಿ ಮಾತ್ರ ತನ್ನನ್ನು ಪರಮನೆಂದು ತೋರಿಸಿ ಕೊಳ್ಳದೆ ವಾಸ್ತವಿಕವಾಗಿ ಅರ್ಜುನನಿಗೆ ಹಾಗೆ ತನ್ನನ್ನು ಪ್ರಕಟಿಸಿದನು ಎಂದು ಮುಂದೆ

ಜನರು ಅರಿತುಕೊಳ್ಳಲಾಗುವಂತೆ ಕೃಷ್ಣನ ನಿರೂಪಣೆಗಳನ್ನು ಸಮರ್ಥಿಸಲು ಅರ್ಜುನನು ಆ ರೂಪವನ್ನು ನೋಡಬಯಸಿದನು. ಅರ್ಜುನನು ಪರಂಪರಾ ಪದ್ಧತಿಯ ಪ್ರಾರಂಭಿಕನಾದ್ದರಿಂದ ಅವನು ಅದನ್ನು ದೃಢಪಡಿಸಲೇಬೇಕು. ಪರಮ ದೇವೋತ್ತಮ ಪುರುಷ ಕೃಷ್ಣನನ್ನು ಅರಿತುಕೊಳ್ಳಲು ವಾಸ್ತವಿಕವಾಗಿ ಆಸಕ್ತರಾದವರು ಮತ್ತು ಅರ್ಜುನನ ಮಾರ್ಗವನ್ನು ಅನುಸರಿಸುವವರು ಕೃಷ್ಣನು ತಾತ್ವಿಕವಾಗಿ ಮಾತ್ರ ತನ್ನನ್ನು ಪರಮನೆಂದು ತೋರಿಸಿದ್ದಷ್ಟೇ ಅಲ್ಲದೆ, ಸ್ವಯಂ ಪರಮನೆಂಬುದನ್ನು ವಾಸ್ತವಿಕವಾಗಿ ಪ್ರಕಟಿಸಿದನು ಎಂಬುದನ್ನು ಅರಿತುಕೊಳ್ಳಬೇಕು.

ನಾವು ಈಗಾಗಲೇ ವಿವರಿಸಿರುವಂತೆ, ಅರ್ಜುನನು ವಿಶಿಷ್ಟವಾಗಿ ಅದನ್ನು ನೋಡ ಬಯಸಿರಲಿಲ್ಲವಾದ್ದರಿಂದ ಕೃಷ್ಣನು ತನ್ನ ವಿಶ್ವರೂಪ ನೋಡಲು ಅಗತ್ಯವಾದ ಶಕ್ತಿಯನ್ನು ಅರ್ಜುನನಿಗೆ ನೀಡಿದನು.

**ಸಂಜಯ ಉವಾಚ**

**ಏವಮುಕ್ತ್ವಾ ತತೋ ರಾಜನ್ ಮಹಾಯೋಗೇಶ್ವರೋ ಹರಿಃ ।**
**ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಮ್ ॥ ೯ ॥**

ಸಂಜಯಃ ಉವಾಚ—ಸಂಜಯನು ನುಡಿದನು, ಏವಮ್—ಹೀಗೆ, ಉಕ್ತ್ವಾ—ಹೇಳುತ್ತಾ, ತತಃ—ಆಮೇಲೆ, ರಾಜನ್—ಹೇ ರಾಜನೇ. ಮಹಾ-ಯೋಗ-ಈಶ್ವರಃ—ಮಹಾಯೋಗೇಶ್ವರನು, ಹರಿಃ—ಪರಮ ದೇವೋತ್ತಮ ಪುರುಷ ಕೃಷ್ಣನು, ದರ್ಶಯಾಮ್ ಆಸ—ತೋರಿದನು, ಪಾರ್ಥಾಯ—ಅರ್ಜುನನಿಗೆ, ಪರಮಮ್—ದಿವ್ಯ, ರೂಪಮ್-ಐಶ್ವರ್ಯಮ್—ವಿಶ್ವರೂಪವನ್ನು.

**ಸಂಜಯನು ನುಡಿದನು: ಹೇ ರಾಜನ್, ಹೀಗೆ ಹೇಳಿ, ಸಕಲ ಯೋಗ ಶಕ್ತಿಯ ಪರಮ ಪ್ರಭು, ದೇವೋತ್ತಮ ಪುರುಷನು ಅರ್ಜುನನಿಗೆ ತನ್ನ ವಿಶ್ವರೂಪ ವನ್ನು ತೋರಿದನು.**

**ಅನೇಕವಕ್ತ್ರನಯನಮನೇಕಾದ್ಭುತದರ್ಶನಮ್ ।**
**ಅನೇಕದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಮ್ ॥ ೧೦ ॥**
**ದಿವ್ಯಮಾಲ್ಯಾಂಬರಧರಂ ದಿವ್ಯಗನ್ಧಾನುಲೇಪನಮ್ ।**
**ಸರ್ವಾಶ್ಚರ್ಯಮಯಂ ದೇವಮನನ್ತಂ ವಿಶ್ವತೋಮುಖಮ್ ॥ ೧೧ ॥**

ಅನೇಕ—ಅನೇಕ, ವಕ್ತ್ರ—ಮುಖಗಳು, ನಯನಮ್—ಕಣ್ಣುಗಳು, ಅನೇಕ—ಅನೇಕ ಅದ್ಭುತ—ಅದ್ಭುತ, ದರ್ಶನಮ್—ದೃಶ್ಯಗಳು, ಅನೇಕ—ಅನೇಕ, ದಿವ್ಯ—ದಿವ್ಯ ಆಭರಣಮ್—ಆಭರಣಗಳು, ದಿವ್ಯ—ದಿವ್ಯ, ಅನೇಕ—ಅನೇಕ, ಉದ್ಯತ್—ಎತ್ತಿ ಹಿಡಿದ, ಆಯುಧಮ್—ಆಯುಧಗಳು, ದಿವ್ಯ—ದಿವ್ಯ, ಮಾಲ್ಯ—ಹಾರಗಳು, ಅಂಬರ—ವಸ್ತ್ರಗಳು, ಧರಮ್—ಧರಿಸಿದ, ದಿವ್ಯ—ದಿವ್ಯ, ಗನ್ಧ—ಸುಗಂಧಗಳು, ಅನುಲೇಪನಮ್—ಅನುಲೇಪಿತ, ಸರ್ವ—ಸಕಲ, ಆಶ್ಚರ್ಯಮಯಮ್—ಆಶ್ಚರ್ಯ

ಮಯ, ದೇವಮ್—ಕಾಂತಿಯುತ, ಅನಂತಮ್—ಅಪರಿಮಿತ, ವಿಶ್ವತಃ ಮುಖಮ್—ಸರ್ವವ್ಯಾಪ್ತ.

**ಅರ್ಜುನನು ಈ ವಿಶ್ವರೂಪದಲ್ಲಿ ಅಪರಿಮಿತ ಮುಖಗಳು, ಅಪರಿಮಿತ ಕಣ್ಣುಗಳು, ಅಪರಿಮಿತ ಅದ್ಭುತ ದೃಶ್ಯಗಳನ್ನು ಕಂಡನು. ಆ ರೂಪವು ದಿವ್ಯಾಭರಣಗಳಿಂದ ಅಲಂಕೃತವಾಗಿತ್ತು ಮತ್ತು ಅನೇಕ ಉದ್ಯತ ದಿವ್ಯಾಯುಧಗಳನ್ನು ಧರಿಸಿತ್ತು. ಅವನು ದಿವ್ಯ ಮಾಲ್ಯಾಂಬರಗಳನ್ನು ಧರಿಸಿದ್ದನು ಮತ್ತು ಅವನ ದೇಹವೆಲ್ಲ ಅನೇಕ ದಿವ್ಯ ಗಂಧಗಳಿಂದ ಅನುಲೇಪಿತವಾಗಿತ್ತು. ಎಲ್ಲವೂ ಆಶ್ಚರ್ಯಮಯ, ಪ್ರಕಾಶಮಯ, ಅಪರಿಮಿತ ಸರ್ವವ್ಯಾಪ್ತವಾಗಿತ್ತು.**

**ಭಾವಾರ್ಥ :** ಈ ಎರಡು ಶ್ಲೋಕಗಳಲ್ಲಿ ಪದೇ ಪದೇ ಉಪಯೋಗಿಸಿದ **ಅನೇಕ** ಎಂಬ ಪದವು ಅರ್ಜುನನು ನೋಡುತ್ತಿರುವ ಕೈಗಳು, ಮುಖಗಳು, ಕಾಲುಗಳು ಮತ್ತು ಇತರ ಉದ್ಘಾಟಿಗಳಿಗೆ ಮಿತಿಯೇ ಇರಲಿಲ್ಲವೆಂಬುದನ್ನು ಸೂಚಿಸುತ್ತದೆ. ಈ ಉದ್ಘಾಟಿಗಳು ಇಡೀ ವಿಶ್ವದಲ್ಲಿ ಹರಡಿದ್ದವು, ಆದರೆ ಭಗವದನುಗ್ರಹದಿಂದ, ಒಂದೇ ಕಡೆಯಲ್ಲಿ ಕುಳಿತು ಅರ್ಜುನನು ಅವುಗಳನ್ನು ಕಾಣಬಲ್ಲವನಾಗಿದ್ದನು. ಅದು ಕೃಷ್ಣನ ಅಚಿಂತ್ಯ ಶಕ್ತಿ ನಿಮಿತ್ತ.

**ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।**
**ಯದಿ ಭಾಃ ಸದೃಶೀ ಸಾ ಸ್ಯಾದ್ ಭಾಸಸ್ತಸ್ಯ ಮಹಾತ್ಮನಃ ॥ ೧೨ ॥**

ದಿವಿ—ಆಕಾಶದಲ್ಲಿ, ಸೂರ್ಯ—ಸೂರ್ಯರ, ಸಹಸ್ರಸ್ಯ—ಸಹಸ್ರಾರು, ಭವೇತ್—ಇದ್ದರು, ಯುಗಪತ್—ಏಕಕಾಲದಲ್ಲಿ, ಉತ್ಥಿತಾ—ಸನ್ನಿಹಿತರು, ಯದಿ—ಆದರೆ, ಭಾಃ—ಪ್ರಕಾಶ, ಸದೃಶೀ—ಅಂಥ, ಸಾ—ಆ, ಸ್ಯಾತ್—ಇರಬಹುದು, ಭಾಸಃ—ಜ್ಯೋತಿಯು, ತಸ್ಯ—ಅವನ, ಮಹಾ-ಆತ್ಮನಃ—ಮಹಾ ಪ್ರಭುವಿನ.

**ಆಕಾಶದಲ್ಲಿ ನೂರಾರು ಸಾವಿರಾರು ಸೂರ್ಯಗಳು ಏಕಕಾಲದಲ್ಲಿ ಉದಯಿಸಿದರೆ ಅದರ ಪ್ರಕಾಶವು ಆ ವಿಶ್ವರೂಪದಲ್ಲಿನ ಪುರುಷೋತ್ತಮನ ಜ್ಯೋತಿಪ್ರಕಾಶವನ್ನು ಹೋಲಬಹುದು.**

**ಭಾವಾರ್ಥ :** ಅರ್ಜುನನು ಕಂಡದ್ದು ಅವರ್ಣನೀಯ. ಆದರೂ ಸಂಜಯನು ಧೃತರಾಷ್ಟ್ರನಿಗೆ ಆ ಮಹಾ ದೃಶ್ಯದ ಮಾನಸಿಕ ಚಿತ್ರಣವನ್ನು ನೀಡಲೆತ್ನಿಸುತ್ತಿದ್ದಾನೆ. ಅಲ್ಲಿ ಸಂಜಯನು ಅಥವಾ ಧೃತರಾಷ್ಟ್ರನು ಇರಲಿಲ್ಲ. ಆದರೆ ವ್ಯಾಸಾನುಗ್ರಹದಿಂದ, ಸಂಜಯನು, ನಡೆದದ್ದೆಲ್ಲವನ್ನು ನೋಡಬಲ್ಲವನಾಗಿದ್ದನು. ಹೀಗೆ ಅವನು ಅರಿಯಲು ಸಾಧ್ಯವಾದ ಮಟ್ಟಿಗೆ ಒಂದು ಊಹ್ಯ ಅದ್ಭುತಕ್ಕೆ ಎಂದರೆ ಸಹಸ್ರಾರು ಸೂರ್ಯರಿಗೆ ಆ ಸನ್ನಿವೇಶವನ್ನು ಹೋಲಿಸುತ್ತಿದ್ದಾನೆ.

**ತತ್ರೈಕಸ್ಥಂ ಜಗತ್ ಕೃತ್ಸ್ನಂ ಪ್ರವಿಭಕ್ತಮನೇಕಧಾ ।**
**ಅಪಶ್ಯದ್ದೇವದೇವಸ್ಯ ಶರೀರೇ ಪಾಣ್ಡವಸ್ತದಾ ॥ ೧೩ ॥**

ತತ್ರ—ಅಲ್ಲಿ, ಏಕ-ಸ್ಥಮ್—ಒಂದೇ ಸ್ಥಳದಲ್ಲಿ, ಜಗತ್—ವಿಶ್ವ, ಕೃತ್ಸ್ನಮ್—ಸಂಪೂರ್ಣ, ಪ್ರವಿಭಕ್ತಮ್—ವಿಭಾಗಿಸಲ್ಪಟ್ಟ, ಅನೇಕಧಾ—ಅನೇಕವಾಗಿ, ಅಪಶ್ಯತ್—

ನೋಡಬಲ್ಲವನಾದನು, ಶರೀರೇ—ವಿಶ್ವರೂಪದಲ್ಲಿ, ಪಾಣ್ಡವ—ಅರ್ಜುನನು, ತದಾ—ಆ ಕಾಲದಲ್ಲಿ.

**ಆ ಕಾಲದಲ್ಲಿ ಅರ್ಜುನನು ಭಗವಂತನ ವಿಶ್ವರೂಪದಲ್ಲಿ ಅನೇಕಾನೇಕ ಸಹಸ್ರ ವಿಭಾಗವಾಗಿದ್ದರೂ ಒಂದೇ ಕಡೆಯಲ್ಲಿ ಸನ್ನಿವೇಶಿತ ಅಪರಿಮಿತ ವಿಶ್ವ ವಿಸ್ತರಣೆಗಳನ್ನು ಕಾಣಬಲ್ಲವನಾದನು.**

**ಭಾವಾರ್ಥ :** ತತ್ರ ಪದವು ಬಹಳ ಮಹತ್ವದ್ದು. ಅರ್ಜುನನು ವಿಶ್ವರೂಪವನ್ನು ಕಂಡಾಗ ಅವನು ಮತ್ತು ಕೃಷ್ಣ ಇಬ್ಬರೂ ರಥದಲ್ಲಿ ಕುಳಿತಿದ್ದರೆಂಬುದನ್ನು ಅದು ಸೂಚಿಸುತ್ತದೆ. ಯುದ್ಧರಂಗದಲ್ಲಿರುವ ಇತರರು ಈ ರೂಪವನ್ನು ಕಾಣಲಾಗಲಿಲ್ಲ, ಏಕೆಂದರೆ, ಕೃಷ್ಣನು ಅರ್ಜುನನಿಗೆ ಮಾತ್ರ ಆ ದಿವ್ಯದೃಷ್ಟಿಯನ್ನು ನೀಡಿದ್ದನು. ಅರ್ಜುನನು ಕೃಷ್ಣನ ದೇಹದಲ್ಲಿ ಅನೇಕ ಸಹಸ್ರ ಗ್ರಹಗಳನ್ನು ನೋಡಬಲ್ಲವನಾದನು. ನಾವು ವೇದ ಶಾಸ್ತ್ರಗಳಿಂದ ತಿಳಿದುಕೊಳ್ಳುವಂತೆ ಅನೇಕ ವಿಶ್ವಗಳು ಮತ್ತು ಅನೇಕ ಲೋಕಗಳು ಇವೆ. ಕೆಲವು ಮಣ್ಣಿನಿಂದ ನಿರ್ಮಿತ, ಕೆಲವು ಸುವರ್ಣ ನಿರ್ಮಿತ, ಮತ್ತೆ ಕೆಲವು ರತ್ನ ನಿರ್ಮಿತ, ಕೆಲವು ಬಹು ದೊಡ್ಡವು, ಇನ್ನು ಕೆಲವು ಅಷ್ಟು ದೊಡ್ಡವಲ್ಲ ಇತ್ಯಾದಿ. ತನ್ನ ರಥದಲ್ಲಿ ಕುಳಿತು ಅರ್ಜುನನು ಇವುಗಳೆಲ್ಲವನ್ನು ನೋಡಬಲ್ಲವನಾದನು. ಆದರೆ ಅರ್ಜುನ ಮತ್ತು ಕೃಷ್ಣರ ನಡುವೆ ಏನು ನಡೆಯುತ್ತಿದೆ ಎಂಬುದನ್ನು ಬೇರೆ ಯಾರೂ ಅರಿತುಕೊಳ್ಳಲಾಗಲಿಲ್ಲ.

**ತತಃ ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಂಜಯಃ ।**
**ಪ್ರಣಮ್ಯ ಶಿರಸಾ ದೇವಂ ಕೃತಾಂಜಲಿರಭಾಷತ ॥ ೧೪ ॥**

ತತಃ—ಆಮೇಲೆ, ಸಃ—ಅವನು, ವಿಸ್ಮಯ-ಆವಿಷ್ಟಃ—ಆಶ್ಚರ್ಯಚಕಿತನಾಗಿ, ಹೃಷ್ಟಃ-ರೋಮಾ—ಮಹೋತ್ಕರ್ಷದಿಂದ ಅವನಿಗೆ ರೋಮಾಂಚನವಾಗಿ, ಧನಂಜಯಃ—ಅರ್ಜುನನು, ಪ್ರಣಮ್ಯ—ಪ್ರಣಾಮಮಾಡಿ, ಶಿರಸಾ—ತಲೆಬಾಗಿ, ದೇವಮ್—ಪರಮ ದೇವೋತ್ತಮ ಪುರುಷನಿಗೆ, ಕೃತ-ಅಂಜಲಿಃ—ಕೈಜೋಡಿಸಿ, ಅಭಾಷತ—ನುಡಿಯಲಾರಂಭಿಸಿದನು.

**ಆಗ ದಿಗ್ಭ್ರಮಿತನಾಗಿ ಮತ್ತು ಆಶ್ಚರ್ಯಚಕಿತನಾಗಿ, ರೋಮಾಂಚಿತನಾಗಿ, ಅರ್ಜುನನು ಪ್ರಣಾಮ ಸಲ್ಲಿಸಲು ತಲೆಬಾಗಿದನು ಮತ್ತು ಕೈಜೋಡಿಸಿ ಪರಮ ಪ್ರಭುವನ್ನು ಸ್ತುತಿಸತೊಡಗಿದನು.**

**ಭಾವಾರ್ಥ :** ಒಂದು ಸಲ ದೈವೀದೃಶ್ಯವು ಗೋಚರವಾದೊಡನೆಯೇ, ಕೃಷ್ಣಾರ್ಜುನರ ಸಂಬಂಧವು ತಕ್ಷಣ ಬದಲಾಗುತ್ತದೆ. ಮುಂಚೆ, ಕೃಷ್ಣಾರ್ಜುನರು ಸಖ್ಯ ಸಂಬಂಧ ಹೊಂದಿದ್ದರು. ಆದರೆ ಇಲ್ಲಿ ದಿವ್ಯ ದರ್ಶನದ ತರುವಾಯ, ಅರ್ಜುನನು ಮಹಾಗೌರವದಿಂದ ನಮಸ್ಕರಿಸುತ್ತಿದ್ದಾನೆ ಮತ್ತು ಕೈಜೋಡಿಸಿ ಕೃಷ್ಣನಿಗೆ ಪ್ರಾರ್ಥಿಸುತ್ತಿದ್ದಾನೆ. ಅವನು ವಿಶ್ವರೂಪವನ್ನು ಸ್ತುತಿಸುತ್ತಿದ್ದಾನೆ. ಹೀಗೆ ಅರ್ಜುನನ ಸಂಬಂಧವು ಸಖ್ಯ ಮೂಲವಾಗುವ ಬದಲು ಆಶ್ಚರ್ಯಮೂಲವಾಗುತ್ತದೆ. ಮಹಾ ಭಕ್ತರು ಕೃಷ್ಣನನ್ನು ಸಕಲ ಸಂಬಂಧಗಳ ನಿಧಿಯಾಗಿ ಕಾಣುತ್ತಾರೆ. ಶಾಸ್ತ್ರಗಳಲ್ಲಿ ಹನ್ನೆರಡು ಮೂಲಪ್ರಕಾರದ

ಸಂಬಂಧಗಳು ಪ್ರಸ್ತಾಪಿತ, ಮತ್ತು ಅವೆಲ್ಲವು ಕೃಷ್ಣನಲ್ಲಿ ಸನ್ನಿಹಿತ. ಅವನು ಇಬ್ಬರು ಜೀವಿಗಳ ನಡುವೆ, ದೇವತೆಗಳ ನಡುವೆ, ಅಥವಾ ಪರಮ ಪ್ರಭು ಮತ್ತು ಅವನ ಭಕ್ತರ ನಡುವೆ ವಿನಿಮಯವಾಗುವ ಸಕಲ ಸಂಬಂಧಗಳ ಸಾಗರನು ಎಂದು ಹೇಳಿದೆ.

ಇಲ್ಲಿ ಅರ್ಜುನನು ಅದ್ಭುತ ಸಂಬಂಧದಿಂದ ಸ್ಫೂರ್ತಿಗೊಂಡನು, ಮತ್ತು ಆ ಆಶ್ಚರ್ಯದಲ್ಲಿ ಅವನು ಸ್ವಭಾವತಃ ಬಹು ಸಾತ್ವಿಕ, ಶಾಂತ ಮತ್ತು ಮೌನಿಯಾಗಿದ್ದರೂ, ಅವನು ಉತ್ಕರ್ಷಿತನಾದನು. ಅವನಿಗೆ ರೋಮಾಂಚನವಾಯಿತು, ಮತ್ತು ಅವನು ಕೈಗಳನ್ನು ಜೋಡಿಸಿ ಪರಮ ಪ್ರಭುವಿಗೆ ಪ್ರಣಾಮ ಸಲ್ಲಿಸಲಾರಂಭಿಸಿದನು. ಅವನೇನೂ ಭಯ ಪಡಲಿಲ್ಲ. ಆದರೆ, ಅವನು ಪರಮ ಪ್ರಭುವಿನ ಆಶ್ಚರ್ಯಗಳಿಂದ ಪ್ರಭಾವಿತನಾಗಿದ್ದನು. ಆಶ್ಚರ್ಯವು ನಿಕಟ ಸಂದರ್ಭ; ಅವನ ಸ್ವಾಭಾವಿಕ ಪ್ರೀತಿಯುತ ಸಖ್ಯವು ಆಶ್ಚರ್ಯಚಕಿತವಾಗಿತ್ತು ಮತ್ತು ಅವನು ಈ ಪ್ರಕಾರ ಪ್ರತಿಕ್ರಿಯಿಸಿದನು.

**ಅರ್ಜುನ ಉವಾಚ**

**ಪಶ್ಯಾಮಿ ದೇವಾಂಸ್ತವ ದೇವ ದೇಹೇ**
**ಸರ್ವಾಂಸ್ತಥಾ ಭೂತವಿಶೇಷಸಂಘಾನ್**
**ಬ್ರಹ್ಮಾಣಮೀಶಂ ಕಮಲಾಸನಸ್ಥಮ್**
**ಋಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥ ೧೫ ॥**

ಅರ್ಜುನಃ ಉವಾಚ—ಅರ್ಜುನನು ನುಡಿದನು, ಪಶ್ಯಾಮಿ—ನೋಡುತ್ತೇನೆ. ದೇವಾನ್—ಸಕಲ ದೇವತೆಗಳನ್ನು, ತವ—ನಿನ್ನ, ದೇವ—ಹೇ ಪ್ರಭೋ, ದೇಹೇ—ದೇಹದಲ್ಲಿ, ಸರ್ವಾನ್—ಎಲ್ಲ, ತಥಾ—ಮತ್ತು, ಭೂತ—ಜೀವಿಗಳನ್ನು, ವಿಶೇಷ ಸಂಘಾನ್—ವಿಶಿಷ್ಟವಾಗಿ ಸೇರಿದ, ಬ್ರಹ್ಮಾಣಮ್—ಬ್ರಹ್ಮ, ಈಶಮ್—ಶಿವ, ಕಮಲಾಸನಸ್ಥಮ್—ಕಮಲ ಪುಷ್ಪ ಮಂಡಿತ, ಋಷೀನ್—ಮಹರ್ಷಿಗಳನ್ನು, ಚ—ಕೂಡ, ಸರ್ವಾನ್—ಎಲ್ಲ, ಉರಗಾನ್—ಸರ್ಪಗಳನ್ನು, ಚ—ಕೂಡ, ದಿವ್ಯಾನ್—ದಿವ್ಯ.

**ಅರ್ಜುನನು ನುಡಿದನು: ನನ್ನ ಪ್ರಿಯ ಶ್ರೀಕೃಷ್ಣನೇ, ನಿನ್ನ ದೇಹದಲ್ಲಿ ಸೇರಿದ ದೇವತೆಗಳನ್ನು ಮತ್ತು ಅನೇಕ ಇತರ ಜೀವಿಗಳನ್ನು ನಾನು ನೋಡುತ್ತಿದ್ದೇನೆ. ಕಮಲಾಸನಸ್ಥ ಬ್ರಹ್ಮನನ್ನು ಮತ್ತು ಶಿವ ಮತ್ತು ಎಲ್ಲ ಋಷಿಗಳನ್ನು ಮತ್ತು ದಿವ್ಯ ಉರಗಗಳನ್ನು ನೋಡುತ್ತಿದ್ದೇನೆ.**

**ಭಾವಾರ್ಥ** : ಅರ್ಜುನನು ವಿಶ್ವದಲ್ಲಿರುವ ಪ್ರತಿಯೊಂದನ್ನೂ ಕಾಣುತ್ತಿದ್ದಾನೆ; ಆದ್ದರಿಂದ ಅವನು ವಿಶ್ವದಲ್ಲಿ ಪ್ರಥಮ ಜೀವಿಯಾದ ಬ್ರಹ್ಮನನ್ನು ಮತ್ತು ವಿಶ್ವದ ಅಧೋಪ್ರದೇಶದಲ್ಲಿ ಅದರ ಮೇಲೆ ಗರ್ಭೋದಕಶಾಯಿ ವಿಷ್ಣು ಮಲಗಿರುವ ದಿವ್ಯ ಉರಗವನ್ನು ಕಾಣುತ್ತಾನೆ. ಈ ಸರ್ಪಶಯ್ಯೆಯು ವಾಸುಕಿ. ವಾಸುಕಿ ಎಂಬ ಇತರ ಸರ್ಪಗಳು ಉಂಟು. ಅರ್ಜುನನು ಗರ್ಭೋದಕಶಾಯಿ ವಿಷ್ಣುವಿನಿಂದ ವಿಶ್ವದ ಪ್ರಥಮ ಜೀವಿ ಬ್ರಹ್ಮನು ಇರುವ ಕಮಲ ಗ್ರಹದ ಮೇಲೆ ಇರುವ ವಿಶ್ವದ ಅತ್ಯಗ್ರ ಭಾಗದವರೆಗೆ ಕಾಣು

ತ್ತಿದ್ದಾನೆ. ಎಂದರೆ, ಒಂದೆಡೆ ತನ್ನ ರಥದಲ್ಲಿ ಕುಳಿತಿದ್ದ ಅರ್ಜುನನಿಂದ ಆದಿಯಿಂದ ಅಂತ್ಯದವರೆಗೆ ಪ್ರತಿಯೊಂದು ಕಾಣಲ್ಪಟ್ಟಿತು. ಇದು ಪರಮ ಪ್ರಭು ಕೃಷ್ಣಾನುಗ್ರಹ ದಿಂದ ಸಾಧ್ಯವಾಯಿತು.

**ಅನೇಕಬಾಹೂದರವಕ್ತ್ರನೇತ್ರಂ**
**ಪಶ್ಯಾಮಿ ತ್ವಾಂ ಸರ್ವತೋಽನನ್ತರೂಪಮ್ ।**
**ನಾನ್ತಂ ನ ಮಧ್ಯಂ ನ ಪುನಸ್ತವಾದಿಂ**
**ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ॥ ೧೬ ॥**

ಅನೇಕ—ಅನೇಕ, ಬಾಹು—ಬಾಹುಗಳು, ಉದರ—ಉದರಗಳು, ವಕ್ತ್ರ—ಮುಖ ಗಳು, ನೇತ್ರಮ್—ಕಣ್ಣುಗಳು, ಪಶ್ಯಾಮಿ—ನೋಡುತ್ತೇನೆ, ತ್ವಾಮ್—ನೀನು, ಸರ್ವತಃ —ಎಲ್ಲ ಕಡೆಯಲ್ಲಿ, ಅನನ್ತ ರೂಪಮ್—ಅಪರಿಮಿತ ರೂಪನು, ನ ಅನ್ತಮ್—ಕೊನೆ ಯಿಲ್ಲ, ನ ಮಧ್ಯಮ್—ಮಧ್ಯವಿಲ್ಲದ, ನ ಪುನಃ—ಅಥವಾ ಮತ್ತೆ, ತವ–ನಿನ್ನ, ಆದಿಮ್ —ಆದಿಯನ್ನು, ಪಶ್ಯಾಮಿ—ನೋಡುತ್ತೇನೆ, ವಿಶ್ವ-ಈಶ್ವರ—ಹೇ ವಿಶ್ವೇಶ್ವರನೇ' ವಿಶ್ವ-ರೂಪ—ವಿಶ್ವರೂಪದಲ್ಲಿ.

**ಹೇ ವಿಶ್ವೇಶ್ವರನೇ, ಹೇ ವಿಶ್ವರೂಪಿಯೇ, ನಿನ್ನ ದೇಹದಲ್ಲಿ ಅನೇಕಾನೇಕ ಬಾಹುಗಳು, ಉದರಗಳು, ಮುಖಗಳು ಮತ್ತು ಕಣ್ಣುಗಳನ್ನು ಮಿತಿಯಿಲ್ಲದೆ ಸರ್ವತ್ರ ವಿಸ್ತರಿಸಿರುವುದನ್ನು ಕಾಣುತ್ತಿದ್ದೇನೆ ನಿನ್ನಲ್ಲಿ ಅಂತ್ಯ, ಮಧ್ಯ, ಮತ್ತು ಆದಿಯನ್ನು ನಾನು ಕಾಣುತ್ತಿಲ್ಲ.**

**ಭಾವಾರ್ಥ :** ಕೃಷ್ಣನು ಪರಮ ದೇವೋತ್ತಮ ಪುರುಷನು ಮತ್ತು ಅಪರಿಮಿತನು, ಹೀಗೆ ಅವನ ಮೂಲಕ ಪ್ರತಿಯೊಂದನ್ನು ಕಾಣಬಹುದು.

**ಕಿರೀಟಿನಂ ಗದಿನಂ ಚಕ್ರಿಣಂ ಚ ।**
**ತೇಜೋರಾಶಿಂ ಸರ್ವತೋ ದೀಪ್ತಿಮನ್ತಮ್ ॥**
**ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮನ್ತಾದ್ ।**
**ದೀಪ್ತಾನಲಾರ್ಕದ್ಯುತಿಮಪ್ರಮೇಯಮ್ ॥ ೧೭ ॥**

ಕಿರೀಟಿನಮ್—ಕಿರೀಟಗಳ ಸಹಿತ, ಗದಿನಮ್—ಗದಾಧಾರಿ, ಚಕ್ರಿಣಮ್—ಚಕ್ರ ಧರನನ್ನು, ಚ—ಮತ್ತು, ತೇಜಃರಾಶಿಮ್—ತೇಜೋರಾಶಿಯನ್ನು, ಸರ್ವತಃ— ಎಲ್ಲ ಕಡೆಯಲ್ಲಿ, ದೀಪ್ತಿ-ಮನ್ತಮ್—ದೀಪ್ತಿಮಂತ, ಪಶ್ಯಾಮಿ—ಕಾಣುತ್ತೇನೆ.ತ್ವಾಮ್— ನೀನು, ದುರ್ನಿರೀಕ್ಷ್ಯಮ್—ಕಾಣುವುದು ಕಷ್ಟಸಾಧ್ಯವಾದ, ಸಮನ್ತಾತ್—ಸರ್ವತ್ರದಲ್ಲಿ, ದೀಪ್ತ-ಅನಲ—ಜ್ವಲಿಸುವ ಅಗ್ನಿ, ಅರ್ಕ—ಸೂರ್ಯನ, ದ್ಯುತಿಮ್—ಪ್ರಕಾಶವನ್ನು, ಅಪ್ರಮೇಯಮ್—ಪ್ರಮಿತಿ ಇಲ್ಲದ.

**ಎಲ್ಲ ಕಡೆಯೂ ಜ್ವಲಿಸುವ ಅಗ್ನಿಯಂತೆ ಅಥವಾ ಅಳತೆಗೆ ನಿಲುಕದ ಸೂರ್ಯ ಪ್ರಕಾಶದಂತೆ ಎಲ್ಲ ಕಡೆಯಲ್ಲಿಯೂ ಹರಡಿರುವ ಕಣ್ಣು ಕುಕ್ಕುವ ಪ್ರಕಾಶ ನಿಮಿತ್ತ**

ನಿನ್ನ ರೂಪವನ್ನು ನೋಡುವುದು ಕಷ್ಟಸಾಧ್ಯ. ಆದರೂ ಅನೇಕ ಕಿರೀಟಗಳು, ಗದೆಗಳು ಮತ್ತು ಚಕ್ರಗಳಿಂದ ಭೂಷಿತ ನಿನ್ನ ಪ್ರಜ್ವಲಿಸುವ ರೂಪವನ್ನು ಎಲ್ಲ ಕಡೆಯಲ್ಲಿಯೂ ಕಾಣುತ್ತಿದ್ದೇನೆ.

> ತ್ವಮಕ್ಷರಂ ಪರಮಂ ವೇದಿತವ್ಯಂ
> ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।
> ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ
> ಸನಾತನಸ್ತ್ವಂ ಪುರುಷೋ ಮತೋ ಮೇ ॥ ೧೮ ॥

ತ್ವಮ್—ನೀನು, ಅಕ್ಷರಮ್—ಚ್ಯುತಿರಹಿತನು, ಪರಮಮ್—ಪರಮನು, ವೇದಿತವ್ಯಮ್—ತಿಳಿಯಲ್ಪಡಬೇಕಾದವನು, ತ್ವಮ್—ನೀನು, ಅಸ್ಯ—ಇದರ, ವಿಶ್ವಸ್ಯ—ವಿಶ್ವದ, ಪರಮ್—ಪರಮ, ನಿಧಾನಮ್—ಆಧಾರನು, ತ್ವಮ್—ನೀನು, ಅವ್ಯಯಃ—ಅವ್ಯಯನು, ಶಾಶ್ವತ-ಧರ್ಮ-ಗೋಪ್ತಾ—ಶಾಶ್ವತ ಧರ್ಮರಕ್ಷಕನು, ಸನಾತನಃ—ಸನಾತನನು, ತ್ವಮ್—ನೀನು, ಪುರುಷಃ—ಪರಮ ಪುರುಷನು, ಮತಃ ಮೇ—ಇದು ನನ್ನ ಅಭಿಪ್ರಾಯ.

ನೀನು ಪರಮಾದಿ ಉದ್ದೇಶಿತನು. ನೀನು ಸಕಲ ವಿಶ್ವದ ಅಂತಿಮ ಆಶ್ರಯ ಸ್ಥಾನ. ನೀನು ಅವ್ಯಯ ಮತ್ತು ನೀನು ಪ್ರಾಚೀನತಮನು. ನೀನು ಸನಾತವ ಧರ್ಮ ರಕ್ಷಕನಾದ ದೇವೋತ್ತಮ, ಪುರುಷನು. ಇದು ನನ್ನ ಮತ.

> ಅನಾದಿಮಧ್ಯಾನ್ತಮನನ್ತವೀರ್ಯಮ್
> ಅನನ್ತಬಾಹುಂ ಶಶಿಸೂರ್ಯನೇತ್ರಮ್ ।
> ಪಶ್ಯಾಮಿ ತ್ವಾಂ ದೀಪ್ತಹುತಾಶವಕ್ತ್ರಂ
> ಸ್ವತೇಜಸಾ ವಿಶ್ವಮಿದಂ ತಪನ್ತಮ್ ॥ ೧೯ ॥

ಅನಾದಿ—ಆದಿಯುಲ್ಲದ, ಮಧ್ಯ—ಮಧ್ಯ, ಅನ್ತಮ್—ಅಥವಾ ಅಂತ್ಯವಿಲ್ಲದ, ಅನನ್ತ—ಅಪರಿಮಿತ, ವೀರ್ಯಮ್—ವೈಭವಗಳು, ಅನನ್ತ—ಅಪರಿಮಿತ, ಬಾಹುಮ್—ಬಾಹುಗಳು, ಶಶಿ—ಚಂದ್ರ, ಸೂರ್ಯ—ಸೂರ್ಯ, ನೇತ್ರಮ್—ಕಣ್ಣುಗಳು, ಪಶ್ಯಾಮಿ—ನೋಡುತ್ತೇನೆ, ತ್ವಾಮ್—ನೀನು, ದೀಪ್ತ—ಜ್ವಲಂತ, ಹುತಾಶ-ವಕ್ತ್ರಮ್—ನಿನ್ನ ಮುಖದಿಂದ ಅಗ್ನಿ ಸೂಸುವ, ಸ್ವ-ತೇಜಸಾ—ನಿನ್ನ ತೇಜಸ್ಸಿನಿಂದ, ವಿಶ್ವಂ—ವಿಶ್ವವನ್ನು, ಇದಮ್—ಈ, ತಪನ್ತಮ್—ತಪ್ತಗೊಳಿಸುತ್ತಿರುವ.

ನಿನಗೆ ಆದಿ, ಮಧ್ಯ, ಅಂತ್ಯ ಎಂಬುದಿಲ್ಲ. ನಿನ್ನ ವೈಭವ ಅಪರಿಮಿತ. ನೀನು ಅಸಂಖ್ಯ ಬಾಹುಗಳನ್ನು ಹೊಂದಿರುವೆ, ಮತ್ತು ಸೂರ್ಯ ಚಂದ್ರರು ನಿನ್ನ ಕಣ್ಣುಗಳು. ನಿನ್ನ ಮುಖದಿಂದ ಹೊರಸೂಸುತ್ತಿರುವ ನಿನ್ನ ಸ್ವತೇಜಸ್ಸಿನಿಂದ ಇಡೀ ವಿಶ್ವವನ್ನು ಸುಡುತ್ತಿರುವ ಜ್ವಾಲಾಗ್ನಿಯನ್ನು ಕಾಣುತ್ತಿದ್ದೇನೆ.

**ಭಾವಾರ್ಥ :** ಪರಮ ದೇವೋತ್ತಮ ಪುರುಷನ ಷಡೈಶ್ವರ್ಯಗಳ ವ್ಯಾಪ್ತಿಗೆ ಪರಿಮಿತಿ ಇಲ್ಲ. ಇಲ್ಲಿ ಮತ್ತು ಅನೇಕ ಕಡೆಗಳಲ್ಲಿ ಪುನರಾವೃತ್ತಿ ಇದೆ, ಆದರೆ ಶಾಸ್ತ್ರಾನುಸಾರ, ಕೃಷ್ಣನ ವೈಭವಗಳ ವರ್ಣನೆಯ ಪುನರಾವೃತ್ತಿಯು ಸಾಹಿತ್ಯ ದೌರ್ಬಲ್ಯವಲ್ಲ. ದಿಗ್ಭ್ರಮೆಯಾದಾಗ ಅಥವಾ ಮಹೋತ್ಕರ್ಷವಾದಾಗ ಅದೇ ಮಾತುಗಳು ಮತ್ತೆ ಮತ್ತೆ ಹೊರಡುತ್ತವೆ ಎಂದು ಹೇಳಿದೆ. ಅದು ದೋಷವಲ್ಲ.

**ದ್ಯಾವಾಪೃಥಿವ್ಯೋರಿದಮನ್ತರಂ ಹಿ**
**ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ।**
**ದೃಷ್ಟ್ವಾದ್ಭುತಂ ರೂಪಮುಗ್ರಂ ತವೇದಂ**
**ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ॥ ೨೦ ॥**

ದ್ಯೌ-ಅಂತರಿಕ್ಷದಿಂದ, ಆ—ಪೃಥಿವ್ಯೋಃ—ಪೃಥ್ವಿಯವರೆಗೆ, ಇದಮ್—ಈ, ಅನ್ತರಮ್—ನಡುವೆ, ಹಿ—ಖಂಡಿತವಾಗಿ, ವ್ಯಾಪ್ತಮ್—ವ್ಯಾಪಿಸಿದೆ, ತ್ವಯಾ—ನಿನ್ನಿಂದ, ಏಕೇನ—ಒಬ್ಬನಿಂದಲೇ, ದಿಶಃ—ದಿಕ್ಕುಗಳು, ಚ—ಮತ್ತು, ಸರ್ವಾಃ—ಎಲ್ಲ, ದೃಷ್ಟ್ವಾ—ನೋಡಿ, ಅದ್ಭುತಮ್—ಅದ್ಭುತ, ರೂಪಮ್—ರೂಪವನ್ನು, ಉಗ್ರಮ್—ಭಯಂಕರ, ತವ—ನಿನ್ನ, ಇದಮ್—ಈ, ಲೋಕ—ಲೋಕವ್ಯೂಹಗಳು, ತ್ರಯಮ್—ಮೂರು, ಪ್ರವ್ಯಥಿತಮ್—ಕ್ಷೋಭೆಗೊಂಡಿವೆ, ಮಹಾ—ಆತ್ಮನ್—ಹೇ ಮಹಾತ್ಮನೇ.

**ನೀನು ಏಕೈಕನಾಗಿದ್ದರೂ ನೀನು ಆಕಾಶದಲ್ಲೆಲ್ಲಾ ಮತ್ತು ಲೋಕಗಳಲ್ಲಿ ಮತ್ತು ಸಕಲ ಅಂತರಿಕ್ಷದಲ್ಲೆಲ್ಲಾ ವ್ಯಾಪಿಸಿರುವೆ. ಹೇ ಮಹಾತ್ಮನೇ, ಈ ಅದ್ಭುತ ಮತ್ತು ಉಗ್ರರೂಪವನ್ನು ಕಂಡು ಸಕಲ ಲೋಕ ವ್ಯೂಹಗಳು ಕ್ಷೋಭಿತವಾಗಿವೆ.**

**ಭಾವಾರ್ಥ :** **ದ್ಯಾವಾಪೃಥಿವ್ಯೋಃ** ("ಸ್ವರ್ಗ ಮತ್ತು ಪೃಥ್ವಿಯ ನಡುವಿನ ಅಂತರಿಕ್ಷ") ಮತ್ತು **ಲೋಕತ್ರಯಮ್** ("ಮೂರು ಲೋಕಗಳು") ಈ ಶ್ಲೋಕದಲ್ಲಿ ಮಹತ್ವದ ಪದಗಳು, ಏಕೆಂದರೆ ಅರ್ಜುನನು ಮಾತ್ರ ಭಗವಂತನ ಈ ವಿಶ್ವರೂಪವನ್ನು ನೋಡಿದನಷ್ಟೇ ಅಲ್ಲದೆ, ಇತರ ಲೋಕವ್ಯೂಹಗಳಲ್ಲಿರುವ ಇತರರು ಕೂಡ ಅದನ್ನು ಕಂಡರು. ಅರ್ಜುನನು ಕಂಡ ವಿಶ್ವರೂಪ ದರ್ಶನವು ಒಂದು ಕನಸಲ್ಲ. ಭಗವಂತನು **ದಿವ್ಯ** ದೃಷ್ಟಿಯನ್ನು ನೀಡಿದ ಎಲ್ಲರೂ ರಣರಂಗದಲ್ಲಿ ಆ ವಿಶ್ವರೂಪವನ್ನು ಕಂಡರು.

**ಅಮೀ ಹಿ ತ್ವಾಂ ಸುರಸಂಘಾ ವಿಶನ್ತಿ**
**ಕೇಚಿದ್ ಭೀತಾಃ ಪ್ರಾಂಜಲಯೋ ಗೃಣನ್ತಿ ।**
**ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಂಘಾಃ**
**ಸ್ತುವನ್ತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ॥ ೨೧ ॥**

ಅಮೀ—ಆ ಎಲ್ಲ, ಹಿ—ಖಂಡಿತವಾಗಿ, ತ್ವಾಮ್—ನಿನ್ನನ್ನು, ಸುರಸಙ್ಘಾಃ—ದೇವತಾ ಸಮೂಹಗಳು, ವಿಶನ್ತಿ—ಪ್ರವೇಶಿಸುತ್ತಿದ್ದಾರೆ, ಕೇಚಿತ್—ಅವರಲ್ಲಿ ಕೆಲವರು ಭೀತಾಃ—ಭಯದಿಂದ, ಪ್ರಾಂಜಲಯಃ—ಕೈಜೋಡಿಸಿ, ಗೃಣನ್ತಿ—ಪ್ರಾರ್ಥಿಸುತ್ತಿದ್ದಾರೆ

ಸ್ವಸ್ತಿ—ಶಾಂತಿ, ಇತಿ—ಹೀಗೆ, ಉಕ್ತ್ವಾ—ನುಡಿಯುತ್ತಾ, ಮಹಾಋಷಿ—ಮಹರ್ಷಿಗಳು, ಸಿದ್ಧ—ಸಂಘಾಃ—ಸಿದ್ಧಪುರುಷರು, ಸ್ತುವನ್ತಿ-ಮಂತ್ರ ಪಠನ ಮಾಡುತ್ತಿದ್ದಾರೆ, ತ್ವಾಮ್—ನಿನ್ನನ್ನು ಕುರಿತು, ಸ್ತುತಿಭಿಃ—ಸ್ತೋತ್ರಗಳಿಂದ ಪುಷ್ಕಲಾಭಿಃ—ವೇದ ಮಂತ್ರಗಳಿಂದ.

**ಸಕಲ ದೇವತಾಸಮೂಹಗಳು ನಿನಗೆ ಶರಣಾಗತರಾಗಿ ನಿನ್ನಲ್ಲಿ ಪ್ರವೇಶಿಸುತ್ತಿದ್ದಾರೆ. ಅವರಲ್ಲಿ ಕೆಲವರು, ಬಹು ಭೀತರಾಗಿ ಕೈಜೋಡಿಸಿ ಪ್ರಾರ್ಥನೆ ಸಲ್ಲಿಸುತ್ತಿದ್ದಾರೆ. ಅನೇಕ ಮಹಾಋಷಿಗಳು ಮತ್ತು ಸಿದ್ಧಪುರುಷರು "ಸರ್ವಶಾಂತಿ" ! ಎಂದು ಘೋಷಿಸುತ್ತ ವೇದ ಮಂತ್ರಗಳಿಂದ ನಿನ್ನನ್ನು ಪ್ರಾರ್ಥಿಸುತ್ತಿದ್ದಾರೆ.**

**ಭಾವಾರ್ಥ :** ವಿಶ್ವರೂಪದ ಉಗ್ರ ಉದ್ಭೂತಿಯಿಂದ ಮತ್ತು ಅದರ ಕೋರೈಸುವ ಪ್ರಭೆಯಿಂದ ಎಲ್ಲ ಲೋಕವ್ಯೂಹಗಳ ದೇವತೆಗಳು ಭಯಗೊಂಡರು ಮತ್ತು ರಕ್ಷಣೆಗಾಗಿ ಪ್ರಾರ್ಥಿಸಿದರು.

**ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾ**
**ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ**
**ಗನ್ಧರ್ವಯಕ್ಷಾಸುರ ಸಿದ್ಧಸಂಘಾ**
**ವೀಕ್ಷನ್ತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ ॥೨೨॥**

ರುದ್ರ—ಶ್ರೀಶಿವನ ಉದ್ಭೂತಿಗಳು, ಆದಿತ್ಯಾಃ—ಆದಿತ್ಯರು, ವಸವಃ—ವಸುಗಳು ಯೇ—ಆ ಎಲ್ಲರು, ಚ—ಮತ್ತು, ಸಾಧ್ಯಾಃ—ಸಾಧ್ಯರು, ವಿಶ್ವೇ—ವಿಶ್ವೇ ದೇವತೆಗಳು, ಅಶ್ವಿನೌ—ಅಶ್ವಿನೀ ಕುಮಾರರು, ಮರುತಃ—ಮರುತ್ತುಗಳು, ಚ—ಮತ್ತು, ಉಷ್ಮ-ಪಾಃ—ಪಿತೃಗಳು, ಚ—ಮತ್ತು, ಗನ್ಧರ್ವ—ಗಂಧರ್ವರ, ಯಕ್ಷ—ಯಕ್ಷರ, ಅಸುರ—ಅಸುರರ, ಸಿದ್ಧ—ಸಿದ್ಧ ದೇವತೆಗಳ, ಸಂಘಾಃ—ಸಮೂಹಗಳು, ವೀಕ್ಷನ್ತೇ—ನೋಡುತ್ತಿದ್ದಾರೆ, ತ್ವಾಮ್—ನಿನ್ನನ್ನು, ವಿಸ್ಮಿತಾಃ—ವಿಸ್ಮಿತರಾಗಿ, ಚ—ಕೂಡ, ಏವ—ಖಂಡಿತವಾಗಿ, ಸರ್ವೇ—ಎಲ್ಲರೂ.

**ಶಿವನ ಎಲ್ಲ ಅನೇಕ ಉದ್ಭೂತಿಗಳು, ಆದಿತ್ಯರು, ವಸುಗಳು, ಸಾಧ್ಯರು, ವಿಶ್ವೇ ದೇವತೆಗಳು, ಅಶ್ವಿನೀಕುಮಾರರು, ಮರುತ್ತುಗಳು, ಪಿತೃಗಳು, ಗಂಧರ್ವರು, ಅಸುರರು ಮತ್ತು ಸಿದ್ಧದೇವತೆಗಳು ವಿಸ್ಮಿತರಾಗಿ ನಿನ್ನನ್ನು ನೋಡುತ್ತಿದ್ದಾರೆ.**

**ರೂಪಂ ಮಹತ್ತೇ ಬಹುವಕ್ತ್ರನೇತ್ರಂ**
**ಮಹಾಬಾಹೋ ಬಹುಬಾಹೂರುಪಾದವ್ ।**
**ಬಹೂದರಂ ಬಹುದಂಷ್ಟ್ರಾಕರಾಲಂ**
**ದೃಷ್ಟ್ವಾ ಲೋಕಾಃ ಪ್ರವ್ಯಥಿತಾಸ್ತಥಾಹಮ್ ॥೨೩॥**

ರೂಪಮ್—ರೂಪವು, ಮಹತ್—ಬಹು ದೊಡ್ಡ, ತೇ—ನಿನ್ನ, ಬಹು—ಅನೇಕ, ವಕ್ತ್ರ—ಮುಖಗಳು, ನೇತ್ರಮ್—ಕಣ್ಣುಗಳು, ಮಹಾ-ಬಾಹೋ—ಹೇ ಮಹಾಬಾಹುವೇ,

ಬಹು—ಅನೇಕ, ಬಾಹು—ಬಾಹುಗಳು, ಊರು—ತೊಡೆಗಳು, ಪಾದಮ್—ಮತ್ತು ಪಾದಗಳು, ಬಹುಉದರಮ್—ಅನೇಕ ಉದರಗಳು, ಬಹು-ದಂಷ್ಟ್ರಾ—ಅನೇಕ ದಂತಗಳು, ಕರಾಲಮ್—ಕರಾಳವಾದ, ದೃಷ್ಟ್ವಾ—ನೋಡಿ, ಲೋಕಾಃ—ಎಲ್ಲ ಲೋಕಗಳು, ಪ್ರವ್ಯಥಿತಾಃ—ಕ್ಷೋಭೆಗೊಂಡಿವೆ, ತಥಾ—ಅದೇ ಪ್ರಕಾರ, ಅಹಮ್—ನಾನು.

**ಹೇ ಮಹಾಬಾಹುವೇ, ಅನೇಕ ಮುಖಗಳು, ಕಣ್ಣುಗಳು, ಬಾಹುಗಳು, ತೊಡೆಗಳು, ಕಾಲುಗಳು ಮತ್ತು ಉದರಗಳಿಂದ ಮತ್ತು ಅನೇಕ ಕರಾಳ ದಂತಗಳಿಂದ ಕೂಡಿದ ನಿನ್ನ ಮಹಾರೂಪವನ್ನು ಕಂಡು ಸಕಲ ಲೋಕಗಳು ತಮ್ಮ ದೇವತೆಗಳೊಂದಿಗೆ ಪ್ರಕ್ಷುಬ್ಧರಾಗಿದ್ದಾರೆ; ಅವರು ಪ್ರಕ್ಷುಬ್ಧರಾದಂತೆ ನಾನೂ ಕೂಡ.**

**ನಭಃಸ್ಪೃಶಂ ದೀಪ್ತಮನೇಕವರ್ಣಂ**
**ವ್ಯಾತ್ತಾನನಂ ದೀಪ್ತವಿಶಾಲನೇತ್ರಮ್ ।**
**ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾನ್ತರಾತ್ಮಾ**
**ಧೃತಿಂ ನ ವಿನ್ದಾಮಿ ಶಮಂ ಚ ವಿಷ್ಣೋ ॥೨೪॥**

ನಭಃ-ಸ್ಪೃಶಮ್—ಆಕಾಶವನ್ನು ಸ್ಪರ್ಶಿಸುತ್ತ, ದೀಪ್ತಮ್—ಹೊಳೆಯುತ್ತ, ಅನೇಕ—ಅನೇಕ, ವರ್ಣಮ್—ಬಣ್ಣಗಳು, ವ್ಯಾತ್ತ—ತೆರೆದ, ಆನನಮ್—ಮುಖಗಳು, ದೀಪ್ತ ಹೊಳೆಯುವ, ವಿಶಾಲ—ಬಹು ದೊಡ್ಡ, ನೇತ್ರಮ್—ಕಣ್ಣುಗಳು, ದೃಷ್ಟ್ವಾ—ನೋಡಿ, ಹಿ—ಖಂಡಿತವಾಗಿ, ತ್ವಾಮ್—ನಿನ್ನನ್ನು, ಪ್ರವ್ಯಥಿತ—ಪ್ರಕ್ಷುಬ್ಧ, ಅನ್ತಃ—ಒಳಗೆ, ಆತ್ಮಾ—ಆತ್ಮವು, ಧೃತಿಮ್—ಸ್ಥಿಮಿತವನ್ನು, ನ—ಇಲ್ಲ, ವಿನ್ದಾಮಿ—ನಾನು ಹೊಂದುವುದು, ಶಮಮ್—ಮಾನಸಿಕ ಸ್ಥಿಮಿತವನ್ನು, ಚ—ಕೂಡ, ವಿಷ್ಣೋ—ಹೇ ವಿಷ್ಣುವೇ.

**ಹೇ ಸರ್ವ ವ್ಯಾಪ್ತ ವಿಷ್ಣುವೇ, ಆಕಾಶವನ್ನು ಸ್ಪರ್ಶಿಸುವ ನಿನ್ನ ನಾನಾ ಪ್ರಖರ ವರ್ಣಗಳನ್ನೂ, ನಿನ್ನ ತೆರೆದ ಬಾಯಿಗಳನ್ನೂ, ನಿನ್ನ ಹೊಳೆಯುವ ಕಣ್ಣುಗಳನ್ನೂ ಕಂಡು ನನ್ನ ಮನಸ್ಸು ಭಯದಿಂದ ಕ್ಷೋಭೆಗೊಂಡಿದೆ. ನನಗೆ ನನ್ನ ಮನಸ್ಸಿನ ಸ್ಥಿರತೆ ಅಥವಾ ಸ್ಥಿಮಿತತೆಯನ್ನು ಕಾಯ್ದುಕೊಳ್ಳಲು ಆಗುತ್ತಿಲ್ಲ.**

**ದಂಷ್ಟ್ರಾಕರಾಲಾನಿ ಚ ತೇ ಮುಖಾನಿ**
**ದೃಷ್ಟ್ವೈವ ಕಾಲಾನಲ ಸನ್ನಿಭಾನಿ ।**
**ದಿಶೋ ನ ಜಾನೇ ನ ಲಭೇ ಚ ಶರ್ಮ**
**ಪ್ರಸೀದ ದೇವೇಶ ಜಗನ್ನಿವಾಸ ॥೨೫॥**

ದಂಷ್ಟ್ರಾ—ಹಲ್ಲುಗಳು, ಕರಾಲಾನಿ—ಭಯಂಕರ, ಚ—ಸಹ, ತೇ—ನಿನ್ನ ಮುಖಾನಿ—ಮುಖಗಳು, ದೃಷ್ಟ್ವಾ—ನೋಡಿ, ಏವ—ಹೀಗೆ, ಕಾಲ-ಅನಲ—ಮಾರಣಾಗ್ನಿ, ಸನ್ನಿಭಾನಿ—ಎಂಬಂತೆ, ದಿಶಃ—ದಿಕ್ಕುಗಳು, ನ ಜಾನೇ—ನನಗೆ ತೋಚುತ್ತಿಲ್ಲ, ನ ಲಭೇ—ನನಗೆ ಸಿಕ್ಕುತ್ತಿಲ್ಲ, ಚ—ಮತ್ತು, ಶರ್ಮ—ಅನುಗ್ರಹ, ಪ್ರಸೀದ—ಪ್ರಸನ್ನನಾಗು, ದೇವ-ಈಶ—ಹೇ ದೇವದೇವನೇ, ಜಗತ್-ನಿವಾಸ—ಹೇ ಜಗದಾಶ್ರಯನೇ.

**ಹೇ ದೇವದೇವನೇ, ಹೇ ಜಗದಾಶ್ರಯನೇ, ದಯವಿಟ್ಟು ನನ್ನ ಮೇಲೆ ಅನುಗ್ರಹ ಮಾಡು. ನಿನ್ನ ಕಾಲಮೃತ್ಯುವಿನಂಥ ಧಗಧಗಿಸುವ ಮುಖಗಳನ್ನು ಮತ್ತು ಕರಾಳ ದಂತಗಳನ್ನು ನೋಡಿ ನನ್ನ ಸಮತೋಲ ತಪ್ಪುತ್ತಿದೆ. ಎಲ್ಲ ದಿಕ್ಕು ಗಳಲ್ಲಿಯೂ ನಾನು ದಿಗ್ಭ್ರಮಿತನು.**

**ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ**
**ಸರ್ವೇ ಸಹೈವಾವನಿಪಾಲಸಂಘೈಃ ।**
**ಭೀಷ್ಮೋ ದ್ರೋಣಃ ಸೂತಪುತ್ರಸ್ತಥಾಸೌ**
**ಸಹಾಸ್ಮದೀಯೈರಪಿ ಯೋಧಮುಖ್ಯೈಃ ॥೨೬॥**
**ವಕ್ತ್ರಾಣಿ ತೇ ತ್ವರಮಾಣಾ ವಿಶನ್ತಿ**
**ದಂಷ್ಟ್ರಾಕರಾಲಾನಿ ಭಯಾನಕಾನಿ ।**
**ಕೇಚಿದ್ ವಿಲಗ್ನಾ ದಶನಾನ್ತರೇಷು**
**ಸಂದೃಶ್ಯನ್ತೇ ಚೂರ್ಣಿತೈರುತ್ತಮಾಂಗೈಃ ॥೨೭॥**

ಅಮೀ—ಈ, ಚ—ಮತ್ತು, ತ್ವಾಮ್—ನಿನ್ನನ್ನು, ಧೃತರಾಷ್ಟ್ರಸ್ಯ—ಧೃತರಾಷ್ಟ್ರನ, ಪುತ್ರಾಃ—ಪುತ್ರರು, ಸರ್ವೇ—ಎಲ್ಲ, ಸಹ—ಒಟ್ಟಿಗೆ, ಏವ—ನಿಜವಾಗಿ, ಅವನಿ-ಪಾಲ—ಕ್ಷತ್ರಿಯ ರಾಜರು, ಸಂಘೈಃ—ಗುಂಪುಗಳು, ಭೀಷ್ಮಃ—ಭೀಷ್ಮದೇವ, ದ್ರೋಣಃ—ದ್ರೋಣಾಚಾರ್ಯ, ಸೂತ-ಪುತ್ರಃ—ಕರ್ಣ, ತಥಾ—ಕೂಡ, ಅಸೌ—ಅವರು, ಸಹ—ಒಡನೆ, ಅಸ್ಮದೀಯೈಃ—ನಮ್ಮವರು, ಅಪಿ—ಕೂಡ, ಯೋಧಮುಖ್ಯೈಃ—ಯೋಧರ ಮುಖಂಡರು, ವಕ್ತ್ರಾಣಿ—ಮುಖಗಳಲ್ಲಿ, ತೇ—ನಿನ್ನ, ತ್ವರಮಾಣಾಃ—ಧಾವಿಸುತ್ತ, ವಿಶನ್ತಿ—ಪ್ರವೇಶಿಸುತ್ತಿದ್ದಾರೆ, ದಂಷ್ಟ್ರಾ—ದಂತಗಳು, ಕರಾಲಾನಿ—ಕರಾಳ, ಭಯಾನಕಾನಿ—ಬಹು ಭಯಾನಕ, ಕೇಚಿತ್—ಅವರಲ್ಲಿ ಕೆಲವರು, ವಿಲಗ್ನಾಃ—ಸಿಕ್ಕಿ ಕೊಂಡು, ದಶನ-ಅಂತರೇಷು—ಹಲ್ಲುಗಳ ನಡುವೆ, ಸಂದೃಶ್ಯನ್ತೇ—ಕಾಣುತ್ತಿದ್ದಾರೆ, ಚೂರ್ಣಿತೈಃ—ನುಚ್ಚುನೂರಾಗಿ, ಉತ್ತಮ-ಅಂಗೈಃ—ತಲೆಗಳು.

**ಧೃತರಾಷ್ಟ್ರನ ಎಲ್ಲ ಪುತ್ರರು ಅವರ ಮಿತ್ರರಾಜರೊಂದಿಗೆ ಮತ್ತು ಭೀಷ್ಮ, ದ್ರೋಣ, ಕರ್ಣ—ಮತ್ತು ನಮ್ಮ ಸೇನಾಪತಿಗಳು ಕೂಡ ನಿನ್ನ ಭಯಾನಕ ಮುಖ ಗಳಲ್ಲಿ ಧಾವಿಸುತ್ತಿದ್ದಾರೆ, ಮತ್ತೆ ಕೆಲವರು ನಿನ್ನ ದಂತಗಳ ಮಧ್ಯದಲ್ಲಿ ಸಿಕ್ಕಿಕೊಂಡು ತಲೆಗಳು ಚೂರುಚೂರಾದುದನ್ನು ಕಾಣುತ್ತಿದ್ದೇನೆ.**

**ಭಾವಾರ್ಥ :** ನೋಡಲು ಬಹು ಕಾತುರನಾಗಿದ್ದ ಅರ್ಜುನನಿಗೆ ಅವನಿಗೆ ಕುತೂಹಲಕರ ವಾದ ವಸ್ತುಗಳನ್ನು ತೋರಿಸುವುದಾಗಿ ಹಿಂದಿನ ಶ್ಲೋಕದಲ್ಲಿ ಭಗವಂತನು ಹೇಳಿದ್ದನು. ಈಗ ಪ್ರತಿಪಕ್ಷದ ನಾಯಕರು (ಭೀಷ್ಮ, ದ್ರೋಣ, ಕರ್ಣ ಮತ್ತು ಧೃತರಾಷ್ಟ್ರನ ಎಲ್ಲ ಪುತ್ರರು) ಮತ್ತು ಅವರ ಸೈನಿಕರು ಮತ್ತು ಸ್ವಯಂ ಅರ್ಜುನನ ಸೈನಿಕರು ಎಲ್ಲರೂ ನಾಶವಾಗುತ್ತಿರುವುದನ್ನು ಈಗ ಅರ್ಜುನನು ಕಾಣುತ್ತಿದ್ದಾನೆ. ಕುರುಕ್ಷೇತ್ರದಲ್ಲಿ ಸೇರಿದ ಸರಿಸುಮಾರು ಎಲ್ಲರ ಮರಣಾ ನಂತರ ಅರ್ಜುನನು ವಿಜಯಿಯಾಗುವನು ಎಂಬುದಕ್ಕೆ

ಇದು ಸೂಚಕವಾಗಿದೆ. ಅಜಯ್ಯನೆಂದು ಭಾವಿಸಲಾದ ಭೀಷ್ಮನೂ ಕೂಡ ನುಚ್ಚು ನೂರಾಗುವನು ಎಂದು ಇಲ್ಲಿ ಪ್ರಸ್ತಾಪಿತ, ಕರ್ಣನು ಕೂಡ ಹಾಗೆಯೇ. ಪ್ರತಿಪಕ್ಷದ ಭೀಷ್ಮನಂಥ ಮಹಾಯೋಧರು ಮಾತ್ರವಲ್ಲದೆ, ಅರ್ಜುನನ ಕಡೆಯ ಕೆಲವು ಮಹಾ ಯೋಧರೂ ಕೂಡ ನುಚ್ಚುನೂರಾಗುವರು.

**ಯಥಾ ನದೀನಾಂ ಬಹವೋऽಮ್ಬುವೇಗಾಃ**
**ಸಮುದ್ರಮೇವಾಭಿಮುಖಾ ದ್ರವನ್ತಿ ।**
**ತಥಾ ತವಾಮೀ ನರಲೋಕವೀರಾ**
**ವಿಶನ್ತಿ ವಕ್ತ್ರಾಣ್ಯಭಿವಿಜ್ವಲನ್ತಿ ॥೨೮॥**

ಯಥಾ—ಹೇಗೆ, ನದೀನಾಮ್—ನದಿಗಳ, ಬಹವಃ—ಅನೇಕ, ಅಮ್ಬುವೇಗಾಃ—ನೀರಿನ ತೆರೆಗಳು, ಸಮುದ್ರಮ್—ಸಮುದ್ರದ, ಏವ—ಖಂಡಿತವಾಗಿ, ಅಭಿಮುಖಾಃ—ಕಡೆಗೆ, ದ್ರವನ್ತಿ—ಹರಿಯುತ್ತವೆ, ತಥಾ—ಅದೇ ಪ್ರಕಾರ, ತವ—ನಿನ್ನ, ಅಮೀ—ಈ ಎಲ್ಲ, ನರ-ಲೋಕ-ವೀರಾಃ—ಮಾನವ ರಾಜರು, ವಿಶನ್ತಿ—ಪ್ರವೇಶಿಸುತ್ತಿದ್ದಾರೆ, ವಕ್ತ್ರಾಣಿ—ಮುಖಗಳನ್ನು ಅಭಿವಿ-ಜ್ವಲನ್ತಿ—ಮತ್ತು ಉರಿಯುತ್ತಿದ್ದಾರೆ.

**ನದಿಗಳ ಅನೇಕ ಅಲೆಗಳು ಸಮುದ್ರದಲ್ಲಿ ಪ್ರವಹಿಸುವಂತೆ, ಈ ಎಲ್ಲ ಮಹಾ ಯೋಧರು ಉರಿಯುತ್ತ ನಿನ್ನ ಮುಖಗಳಲ್ಲಿ ಪ್ರವೇಶಿಸುತ್ತಾರೆ.**

**ಯಥಾ ಪ್ರದೀಪ್ತಂ ಜ್ವಲನಂ ಪತಂಗಾ**
**ವಿಶನ್ತಿ ನಾಶಾಯ ಸಮೃದ್ಧ ವೇಗಾಃ ।**
**ತಥೈವ ನಾಶಾಯ ವಿಶನ್ತಿ ಲೋಕಾಸ್**
**ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ ॥೨೯॥**

ಯಥಾ—ಹೇಗೆ, ಪ್ರದೀಪ್ತಮ್—ಉರಿಯುತ್ತ, ಜ್ವಲನಮ್—ಅಗ್ನಿಯಲ್ಲಿ, ಪತಂಗಾಃ—ಪತಂಗಗಳು, ವಿಶನ್ತಿ—ಪ್ರವೇಶಿಸುತ್ತವೆ, ನಾಶಾಯ—ನಾಶಹೊಂದಲು, ಸಮೃದ್ಧ—ಪೂರ್ಣ, ವೇಗಾಃ—ವೇಗದಿಂದ, ತಥಾಏವ—ಅದೇಪ್ರಕಾರ, ನಾಶಾಯ—ನಾಶಹೊಂದಲು, ವಿಶನ್ತಿ—ಪ್ರವೇಶಿಸುತ್ತಿದ್ದಾರೆ, ಲೋಕಾಃ—ಸಮಸ್ತ ಜನರು, ತವ—ನಿನ್ನ, ಅಪಿ—ಕೂಡ, ವಕ್ತ್ರಾಣಿ—ಮುಖಗಳಲ್ಲಿ, ಸಮೃದ್ಧ-ವೇಗಾಃ—ಪೂರ್ಣ ವೇಗದಿಂದ.

**ಪತಂಗಗಳು ಉರಿಯುತ್ತಿರುವ ಬೆಂಕಿಯಲ್ಲಿ ನಾಶಹೊಂದಲು ಧಾವಿಸುವಂತೆ ಎಲ್ಲರೂ ಬಹುವೇಗದಿಂದ ನಿನ್ನ ಮುಖಗಳಲ್ಲಿ ನುಗ್ಗುತ್ತಿರುವುದನ್ನು ನಾನು ಕಾಣುತ್ತಿದ್ದೇನೆ.**

**ಲೇಲಿಹ್ಯಸೇ ಗ್ರಸಮಾನಃ ಸಮನ್ತಾಲ್**
**ಲೋಕಾನ್ ಸಮಗ್ರಾನ್ ವದನೈರ್ಜ್ವಲದ್ಭಿಃ ।**
**ತೇಜೋಭಿರಾಪೂರ್ಯ ಜಗತ್ಸಮಗ್ರಂ**
**ಭಾಸಸ್ತವೋಗ್ರಾಃ ಪ್ರತಪನ್ತಿ ವಿಷ್ಣೋ ॥ ೩೦ ॥**

ಲೇಲಿಹ್ಯಸೇ—ನೀನು ನೆಕ್ಕುತ್ತಿರುವಿ, ಗ್ರಸಮಾನಃ—ನುಂಗುತ್ತಾ, ಸಮನ್ತಾತ್—ಎಲ್ಲ ದಿಕ್ಕುಗಳಿಂದ, ಲೋಕಾನ್—ಜನರನ್ನು, ಸಮಗ್ರಾನ್—ಎಲ್ಲ, ವದನೈಃ—ಬಾಯಿಗಳಿಂದ, ಜ್ವಲದ್ಭಿಃ—ಉರಿಯುತ್ತಿರುವ, ತೇಜೋಭಿಃ—ತೇಜದಿಂದ, ಆಪೂರ್ಯ—ತುಂಬಿ, ಜಗತ್—ವಿಶ್ವ, ಸಮಗ್ರಮ್—ಸಮಗ್ರ, ಭಾಸಃ—ರಶ್ಮಿಗಳು, ವಿಷ್ಣೋಃ—ಹೇ ಸರ್ವವ್ಯಾಪ್ತ ಭಗವಂತನೇ.

**ಹೇ ವಿಷ್ಣುವೇ, ನೀನು ನಿನ್ನ ಉರಿಯುತ್ತಿರುವ ಮುಖಗಳಿಂದ ಎಲ್ಲ ಕಡೆಯಿಂದಲೂ ಎಲ್ಲರನ್ನು ನುಂಗುತ್ತಿರುವುದನ್ನು ಕಾಣುತ್ತೇನೆ. ನಿನ್ನ ತೇಜೋರಾಶಿಯಿಂದ ಇಡೀ ವಿಶ್ವವನ್ನು ಆವರಿಸಿ ನೀನು ಭಯಾನಕ ಸುಡುಸುಡುವ ಕಿರಣಗಳಿಂದ ವ್ಯಕ್ತವಾಗಿರುವೆ.**

**ಆಖ್ಯಾಹಿ ಮೇ ಕೋ ಭವಾನುಗ್ರರೂಪೋ**
**ನಮೋಽಸ್ತು ತೇ ದೇವವರ ಪ್ರಸೀದ ।**
**ವಿಜ್ಞಾತುಮಿಚ್ಛಾಮಿ ಭವನ್ತಮಾದ್ಯಂ**
**ನ ಹಿ ಪ್ರಜಾನಾಮಿ ತವ ಪ್ರವೃತ್ತಿಮ್ ॥ ೩೧ ॥**

ಆಖ್ಯಾಹಿ—ದಯವಿಟ್ಟು ವಿವರಿಸು, ಮೇ—ನನಗೆ, ಕಃ—ಯಾರು, ಭವಾನ್—ನೀನು, ಉಗ್ರ-ರೂಪಃ—ಭಯಂಕರ ರೂಪನು, ನಮಃ ಅಸ್ತು—ನಮಸ್ಕಾರಗಳು, ತೇ—ನಿನಗೆ, ದೇವ-ವರ—ಹೇ ದೇವತಾ ಶ್ರೇಷ್ಠನೇ, ಪ್ರಸೀದ—ಅನುಗ್ರಹ ಮಾಡು, ವಿಜ್ಞಾತುಮ್—ತಿಳಿಯಲು, ಇಚ್ಛಾಮಿ—ನಾನು ಬಯಸುತ್ತೇನೆ, ಭವನ್ತಮ್—ನೀನು ಆದ್ಯಮ್—ಆದ್ಯನು, ಹಿ—ಖಂಡಿತವಾಗಿ, ನ ಪ್ರಜಾನಾಮಿ—ನಾನು ತಿಳಿದಿಲ್ಲ, ತವ—ನಿನ್ನ, ಪ್ರವೃತ್ತಿಮ್—ಉದ್ದೇಶವನ್ನು.

**ಹೇ ದೇವದೇವನೇ, ಭಯಂಕರ ರೂಪನೇ, ದಯವಿಟ್ಟು ನೀನಾರು ಎಂಬುದನ್ನು ಹೇಳು. ನಿನಗೆ ನನ್ನ ನಮಸ್ಕಾರಗಳನ್ನು ಅರ್ಪಿಸುತ್ತಿದ್ದೇನೆ, ದಯವಿಟ್ಟು ನನ್ನ ಮೇಲೆ ಅನುಗ್ರಹ ತೋರು. ನೀನು ಆದಿ ಪ್ರಭು, ನಿನ್ನ ಉದ್ದೇಶ ಏನೆಂಬುದನ್ನು ನಾನು ತಿಳಿದಿಲ್ಲವಾದ್ದರಿಂದ, ನಿನ್ನ ಬಗ್ಗೆ ನಾನು ತಿಳಿಯಬಯಸುತ್ತೇನೆ.**

**ಶ್ರೀಭಗವಾನುವಾಚ**

**ಕಾಲೋಽಸ್ಮಿ ಲೋಕಕ್ಷಯಕೃತ್ ಪ್ರವೃದ್ಧೋ**
**ಲೋಕಾನ್ ಸಮಾಹರ್ತುಮಿಹ ಪ್ರವೃತ್ತಃ ।**
**ಋತೇಽಪಿ ತ್ವಾಂ ನ ಭವಿಷ್ಯನ್ತಿ ಸರ್ವೇ**
**ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ ॥ ೩೨ ॥**

ಶ್ರೀಭಗವಾನುವಾಚ—ದೇವೋತ್ತಮ ಪುರುಷನು ನುಡಿದನು, ಕಾಲಃ—ಕಾಲನು, ಅಸ್ಮಿ—ಆಗಿದ್ದೇನೆ, ಲೋಕ—ಲೋಕಗಳ, ಕ್ಷಯ-ಕೃತ್—ಕ್ಷಯಕಾರಕನು, ಪ್ರವೃದ್ಧಃ—ಮಹಾ, ಲೋಕಾನ್—ಸಕಲರ, ಸಮಾಹರ್ತುಮ್—ನಾಶಗೊಳಿಸುವಲ್ಲಿ, ಇಹ—ಈ

ಜಗತ್ತಿನಲ್ಲಿ, ಪ್ರವೃತ್ತಃ—ನಿರತನು, ಋತೇ—ವಿನಾ, ಅಪಿ—ಕೂಡ, ತ್ವಾಮ್—ನೀನು, ನ—ಎಂದಿಗೂ ಇಲ್ಲ, ಭವಿಷ್ಯನ್ತಿ—ಇರುವುದು, ಸರ್ವೇ—ಎಲ್ಲರು, ಯೇ—ಯಾರು, ಅವಸ್ಥಿತಾಃ—ಸನ್ನಿವೇಶಿತರು, ಪ್ರತಿ-ಅನೀಕೇಷು—ಉಭಯ ಪಕ್ಷಗಳಲ್ಲಿ, ಯೋಧಾಃ—ಯೋಧರು.

**ಪರಮ ದೇವೋತ್ತಮ ಪುರುಷನು ನುಡಿದನು : ನಾನು, ಜಗತ್ತಿನ ಮಹಾ ವಿನಾಶಕಾರಕ ಕಾಲನು. ನಾನು ಎಲ್ಲರನ್ನು ನಾಶ ಮಾಡಲು ಈಗ ಇಲ್ಲಿ ಬಂದಿದ್ದೇನೆ. ನಿನ್ನನ್ನು ಬಿಟ್ಟು, (ಪಾಂಡವರನ್ನು) ಇಲ್ಲಿ ಉಭಯ ಸೈನಿಕರೆಲ್ಲರೂ ಮರಣ ಹೊಂದುವರು.**

**ಭಾವಾರ್ಥ :** ಕೃಷ್ಣನು ತನ್ನ ಮಿತ್ರನು ಮತ್ತು ಪರಮ ದೇವೋತ್ತಮ ಪುರುಷ ನೆಂಬುದನ್ನು ಅರ್ಜುನನು ತಿಳಿದಿದ್ದರೂ ಕೂಡ, ಕೃಷ್ಣನು ತೋರಿದ ಅನೇಕ ರೂಪಗಳಿಂದ ಅವನು ಭ್ರಮಿತನಾದನು. ಆದ್ದರಿಂದ ಈ ವಿನಾಶಕ ಶಕ್ತಿಯ ವಾಸ್ತವಿಕ ಉದ್ದೇಶವನ್ನು ಕುರಿತು ಅದನು ಮತ್ತಷ್ಟು ವಿಚಾರಿಸುವನು. ಪರಮ ತತ್ತ್ವವು ಪ್ರತಿಯೊಂದನ್ನು, ಬ್ರಾಹ್ಮಣರನ್ನು ಕೂಡ ನಾಶಮಾಡುವುದೆಂದು ವೇದಗಳಲ್ಲಿ ಬರೆದಿದೆ. ಕಠ ಉಪನಿಷತ್ತಿನಲ್ಲಿ ಹೇಳಿದಂತೆ (1.2.25)

ಯಸ್ಯ ಬ್ರಹ್ಮ ಚ ಕ್ಷತ್ರಂ ಚ
ಉಭೇ ಭವತ ಓದನಃ
ಮೃತ್ಯುರ್ ಯಸ್ಯೋಪಸೇಚನಂ
ಕ ಇತ್ಥಾ ವೇದ ಯತ್ರ ಸಃ

ಕೊನೆಯದಾಗಿ ಎಲ್ಲ ಬ್ರಾಹ್ಮಣರು, ಕ್ಷತ್ರಿಯರು ಮತ್ತು ಇತರ ಪ್ರತಿಯೊಂದೂ ಪರಮನಿಂದ ಆಹಾರವೆಂಬಂತೆ ನುಂಗಲ್ಪಡುವರು. ಪರಮ ಪ್ರಭುವಿನ ಈ ರೂಪವು ಸರ್ವಭಕ್ಷಕ ಅದ್ಭುತರೂಪ, ಮತ್ತು ಇಲ್ಲಿ ಕೃಷ್ಣನು ಸರ್ವಭಕ್ಷಕ ಕಾಲರೂಪದಲ್ಲಿ ತನ್ನನ್ನು ಪ್ರಕಟಿಸಿಕೊಳ್ಳುತ್ತಾನೆ, ಕೆಲವು ಪಾಂಡವರನ್ನುಳಿದು, ರಣಾಂಗಣದಲ್ಲಿದ್ದ ಪ್ರತಿಯೊಬ್ಬನೂ ಕೂಡ ಅವನಿಂದ ನುಂಗಲ್ಪಡುತ್ತಾನೆ.

ಅರ್ಜುನನು ಯುದ್ಧಪರನಾಗಿರಲಿಲ್ಲ, ಮತ್ತು ಯುದ್ಧಮಾಡದೆ ಇರುವುದು ಉತ್ತಮ ಎಂದು ಭಾವಿಸಿದ್ದನು; ಹಾಗೆ ನಿರಾಶೆಗೆ ಅವಕಾಶವಿರುವುದಿಲ್ಲ. ಉತ್ತರವಾಗಿ, ಅವನು ಯುದ್ಧ ಮಾಡದಿದ್ದರೂ ಕೂಡ, ಅವರಲ್ಲಿ ಪ್ರತಿಯೊಬ್ಬನು ನಾಶಮಾಡಲ್ಪಡುವನು, ಎಂದು ಭಗವಂತನು ಹೇಳುತ್ತಿದ್ದಾನೆ. ಏಕೆಂದರೆ ಅದು ಅವನ ಯೋಜನೆ, ಅರ್ಜುನನು ಯುದ್ಧ ಮಾಡುವುದನ್ನು ನಿಲ್ಲಿಸಿದರೆ, ಅವರು ಮತ್ತೊಂದು ವಿಧದಲ್ಲಿ ಸಾಯುವರು. ಅವನು ಯುದ್ಧ ಮಾಡದಿದ್ದರೂ ಸಹ ಮರಣವನ್ನು ತಡೆಯುವಂತಿರಲಿಲ್ಲ, ವಾಸ್ತವಿಕವಾಗಿ, ಅವರು ಆಗಲೇ ಸತ್ತುಹೋಗಿದ್ದರು. ಕಾಲವೇ ನಾಶ, ಮತ್ತು ಪರಮ ಪ್ರಭುವಿನ ಇಚ್ಛಾನುಸಾರ ಎಲ್ಲ ಉದ್ಭೂತಿಗಳು ನಾಶ ಹೊಂದಬೇಕಾಗುವುದು. ಅದೇ ಪ್ರಕೃತಿ ನಿಯಮ.

**ತಸ್ಮಾತ್ತ್ವಮುತ್ತಿಷ್ಠ ಯಶೋ ಲಭಸ್ವ**
**ಜಿತ್ವಾ ಶತ್ರೂನ್ ಭುಂಕ್ಷ್ವ ರಾಜ್ಯಂ ಸಮೃದ್ಧಮ್ ।**
**ಮಯೈವೈತೇ ನಿಹತಾಃ ಪೂರ್ವಮೇವ**
**ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥ ೩೩ ॥**

ತಸ್ಮಾತ್—ಆದ್ದರಿಂದ, ತ್ವಮ್—ನೀನು, ಉತ್ತಿಷ್ಠ—ಏಳು, ಯಶಃ—ಕೀರ್ತಿ, ಲಭಸ್ವ—ಪಡೆದುಕೋ, ಜಿತ್ವಾ—ಗೆದ್ದು, ಶತ್ರೂನ್—ಶತ್ರುಗಳನ್ನು, ಭುಂಕ್ಷ್ವ—ಭೋಗಿಸು, ರಾಜ್ಯಮ್—ರಾಜ್ಯವನ್ನು, ಸಮೃದ್ಧಮ್—ಸಮೃದ್ಧವಾದ, ಮಯಾ—ನನ್ನಿಂದ, ಏವ—ಖಂಡಿತವಾಗಿ, ಏತೇ—ಈ ಎಲ್ಲ, ನಿಹತಾಃ—ಸಂಹೃತರು, ಪೂರ್ವಮ್ ಏವ—ಮುಂಚಿನ ಏರ್ಪಾಡಿನಿಂದಲೇ, ನಿಮಿತ್ತ ಮಾತ್ರಮ್—ನಿಮಿತ್ತ ಮಾತ್ರ, ಭವ—ಆಗು, ಸವ್ಯಸಾಚಿನ್—ಹೇ ಸವ್ಯಸಾಚಿಯೇ.

**ಆದ್ದರಿಂದ ಏಳು, ಯುದ್ಧಕ್ಕೆ ಸಿದ್ಧನಾಗು ಮತ್ತು ಜಯಶಾಲಿಯಾಗು. ವೈರಿಗಳನ್ನು ಗೆಲ್ಲು ಮತ್ತು ಸಮೃದ್ಧ ರಾಜ್ಯವನ್ನು ಭೋಗಿಸು. ನನ್ನ ಏರ್ಪಾಡಿನಿಂದ ಅವರಾಗಲೇ ಮೃತರು, ಹೇ ಸವ್ಯಸಾಚಿಯೇ, ಮತ್ತು ನೀನು ಯುದ್ಧದಲ್ಲಿ ನಿಮಿತ್ತ ಮಾತ್ರನಾಗುವೆ.**

**ಭಾವಾರ್ಥ :** ರಣಾಂಗಣದಲ್ಲಿ ಬಹು ನಿಪುಣತೆಯಿಂದ ಬಾಣ ಪ್ರಯೋಗ ಮಾಡಬಲ್ಲವನನ್ನು ಸವ್ಯ-ಸಾಚಿನ್ ಎಂಬ ಪದವು ಸೂಚಿಸುತ್ತದೆ. ಆದ್ದರಿಂದ ಅರ್ಜುನನನ್ನು ವೈರಿನಾಶಕ ಬಾಣ ಪ್ರಯೋಗದಲ್ಲಿ ಸಮರ್ಥ ಪರಿಣಿತನೆಂದು ಸಂಬೋಧಿಸಿದೆ. "ನಿಮಿತ್ತ ಮಾತ್ರನಾಗು" : **ನಿಮಿತ್ತ-ಮಾತ್ರಮ್** ಈ ಪದವು ಕೂಡ ಬಹಳ ಮಹತ್ವದ್ದು. ಇಡೀ ಜಗತ್ತು ಪರಮ ದೇವೋತ್ತಮ ಪುರುಷನ ಯೋಜನಾನುಸಾರ ಚಲಿಸುತ್ತಿದೆ. ಸಾಕಷ್ಟು ಜ್ಞಾನವಿಲ್ಲದ ಮೂಢರು ಪ್ರಕೃತಿಯು ಯೋಜನಾರಹಿತವಾಗಿ ಚಲಿಸುತ್ತಿದೆ ಮತ್ತು ಎಲ್ಲ ಉದ್ಭೂತಿಗಳು ಆಕಸ್ಮಿಕ ರಚನೆಗಳು ಎಂದು ತಿಳಿಯುತ್ತಾರೆ. ಪ್ರಾಯಶಃ ಇದು ಹೀಗಿರಬಹುದು ಅಥವಾ ಹಾಗಿರಬಹುದು ಎಂದು ಹೇಳುವ ಅನೇಕ ಹಾಗೆಂಬ ವಿಜ್ಞಾನಿಗಳಿದ್ದಾರೆ. ಆದರೆ, "ಪ್ರಾಯಶಃ" ಮತ್ತು "ಇರಬಹುದು", ಎಂಬ ಪ್ರಶ್ನೆಯೇ ಇಲ್ಲ. ಈ ಭೌತಿಕ ಜಗತ್ತಿನಲ್ಲಿ ವಿಶಿಷ್ಟ ಯೋಜನೆಯು ಕಾರ್ಯಗತವಾಗಿದೆ. ಈ ಯೋಜನೆ ಯಾವುದು ? ಬದ್ಧ ಆತ್ಮರು ದೇವತ್ವಕ್ಕೆ ಮರಳಿ ಧಾಮಕ್ಕೆ ಹಿಂದಿರುಗಲು ಈ ವಿಶ್ವ ಉದ್ಭೂತಿಯು ಒಂದು ಅವಕಾಶ. ಅವರು ಭೌತಿಕ ಪ್ರಕೃತಿಯ ಮೇಲೆ ಒಡೆತನ ನಡೆಸಲು ಯತ್ನಿಸುವ ಸ್ವಾಮಿತ್ವಭಾವ ಹೊಂದಿರುವವರೆಗೆ, ಅವರು ಬದ್ಧರು. ಆದರೆ ಪರಮ ಪ್ರಭುವಿನ ಯೋಜನೆಯನ್ನು ಅರಿತುಕೊಳ್ಳಬಲ್ಲ ಮತ್ತು ಕೃಷ್ಣಪ್ರಜ್ಞೆ ಬೆಳೆಸಿಕೊಳ್ಳುವ ಯಾವನೊಬ್ಬನು ಅತ್ಯಂತ ಬುದ್ಧಿವಂತನು. ವಿಶ್ವ ಉದ್ಭೂತಿಯು ಸೃಷ್ಟಿ ಮತ್ತು ಲಯಗಳು ಭಗವಂತನ ಶ್ರೇಷ್ಠ ಮಾರ್ಗದರ್ಶನದಲ್ಲಿ ನಡೆಯುತ್ತವೆ. ಹೀಗೆ ಕುರುಕ್ಷೇತ್ರ ಯುದ್ಧವು ಕೂಡ ಭಗವಂತನ ಯೋಜನಾನುಸಾರ ನಡೆಯಿತು. ಅರ್ಜುನನು ಯುದ್ಧಕ್ಕೆ ನಿರಾಕರಿಸುತ್ತಿದ್ದನು, ಆದರೆ ಅವನು ಪರಮ ಪ್ರಭುವಿನ ಇಚ್ಛಾನುಸಾರ ಯುದ್ಧ ಮಾಡಬೇಕೆಂದು ಹೇಳ

ಲ್ಪಟ್ಟನು. ಆಗ ಮಾತ್ರ ಅವನು ಸುಖಿಯಾಗಬಹುದು. ಒಬ್ಬನು ಪೂರ್ಣ ಕೃಷ್ಣ ಪ್ರಾಜ್ಞಿಯಾಗಿದ್ದರೆ ಮತ್ತು ಅವನ ಜೀವನವು ಭಗವಂತನ ದಿವ್ಯ ಸೇವೆಗೆ ಮುಡಿಪಾಗಿದ್ದರೆ, ಅವನು ಪರಿಪೂರ್ಣ.

**ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ**
**ಕರ್ಣಂ ತಥಾನ್ಯಾನಪಿ ಯೋಧವೀರಾನ್ ।**
**ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ**
**ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್ ॥ ೩೪ ॥**

ದ್ರೋಣಮ್-ಚ—ದ್ರೋಣರೂ ಕೂಡ, ಭೀಷ್ಮಮ್-ಚ—ಭೀಷ್ಮರೂ ಕೂಡ, ಜಯದ್ರಥಮ್-ಚ—ಜಯದ್ರಥನು ಸಹ, ಕರ್ಣಮ್—ಕರ್ಣನು, ತಥಾ—ಹಾಗೂ, ಅನ್ಯಾನ್—ಇತರರು, ಅಪಿ—ಖಂಡಿತವಾಗಿ, ಯೋಧ-ವೀರಾನ್—ಮಹಾಯೋಧರು, ಮಯಾ—ನನ್ನಿಂದ, ಹತಾನ್—ಈಗಾಗಲೇ ವಧಿಸಲ್ಪಟ್ಟಿರುವರು, ತ್ವಮ್—ನೀನು, ಜಹಿ—ನಾಶ ಮಾಡು, ಮಾ—ಆಗಬೇಡ, ವ್ಯಥಿಷ್ಠಾಃ—ಕ್ಷೋಭಿತನು, ಯುಧ್ಯಸ್ವ—ಯುದ್ಧ ಮಾಡು ಅಷ್ಟೇ, ಜೇತಾ ಅಸಿ—ಗೆಲ್ಲುವೆ, ರಣೇ—ಯುದ್ಧದಲ್ಲಿ, ಸಪತ್ನಾನ್—ವೈರಿಗಳನ್ನು.

**ದ್ರೋಣ, ಭೀಷ್ಮ, ಜಯದ್ರಥ, ಕರ್ಣ ಮತ್ತು ಇತರ ಮಹಾ ಯೋಧರು ಈಗಾಗಲೇ ನನ್ನಿಂದ ನಾಶ ಹೊಂದಿದ್ದಾರೆ. ಆದ್ದರಿಂದ, ಅವರನ್ನು ಸಂಹರಿಸು, ಕ್ಷೋಭಿತನಾಗಬೇಡ. ಸುಮ್ಮನೇ ಯುದ್ಧ ಮಾಡು, ನೀನು ಯುದ್ಧದಲ್ಲಿ ವೈರಿಗಳನ್ನು ನಿರ್ನಾಮ ಮಾಡುವೆ.**

**ಭಾವಾರ್ಥ :** ಪ್ರತಿಯೊಂದು ಯೋಜನೆಯೂ ಪರಮ ದೇವೋತ್ತಮ ಪುರುಷನಿಂದ ರಚಿತ, ಆದರೆ ಅವನು ತನ್ನ ಭಕ್ತರಲ್ಲಿ ಎಷ್ಟು ದಯಾಮಯನು ಮತ್ತು ಅನುಗ್ರಹಪೂರ್ಣನೆಂದರೆ, ತನ್ನ ಇಚ್ಛಾನುಸಾರ ತನ್ನ ಯೋಜನೆಯನ್ನು ಈಡೇರಿಸುವ ತನ್ನ ಭಕ್ತರಿಗೆ ಕೀರ್ತಿ ಕೊಡಬಯಸುತ್ತಾನೆ. ಆದ್ದರಿಂದ, ಪ್ರತಿಯೊಬ್ಬನೂ ಕೃಷ್ಣಪ್ರಜ್ಞೆಯಲ್ಲಿ ಕಾರ್ಯ ಮಾಡುವಂತೆ ಮತ್ತು ಗುರುಗಳ ಮೂಲಕ ಪರಮ ದೇವೋತ್ತಮ ಪುರುಷನನ್ನು ಅರಿತುಕೊಳ್ಳುವಂತೆ ಜೀವನವು ಸಾಗಬೇಕು. ಪರಮ ದೇವೋತ್ತಮ ಪುರುಷನ ಯೋಜನೆಗಳು ಅವನ ಅನುಗ್ರಹದಿಂದ ಮಾತ್ರ ಅರಿಯಲ್ಪಡುವುವು, ಮತ್ತು ಭಕ್ತರ ಯೋಜನೆಗಳು ಕೂಡ ಭಗವದ್ ಯೋಜನೆಗಳಿದ್ದಂತೆ. ಒಬ್ಬನು ಅಂಥ ಯೋಜನೆಗಳನ್ನು ಅನುಸರಿಸಬೇಕು ಮತ್ತು ಅಸ್ತಿತ್ವದ ಹೋರಾಟದಲ್ಲಿ ವಿಜಯಿಯಾಗಬೇಕು.

**ಸಂಜಯ ಉವಾಚ**

**ಏತಚ್ಛ್ರುತ್ವಾ ವಚನಂ ಕೇಶವಸ್ಯ**
**ಕೃತಾಂಜಲಿರ್ವೇಪಮಾನಃ ಕಿರೀಟೀ**

**ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ**
**ಸಗದ್ಗದಂ ಭೀತಭೀತಃ ಪ್ರಣಮ್ಯ ॥ ೩೫ ॥**

ಸಂಜಯ ಉವಾಚ—ಸಂಜಯನು ನುಡಿದನು, ಏತತ್—ಹೀಗೆ, ಶ್ರುತ್ವಾ—ಕೇಳಿ, ವಚನಮ್—ವಚನವನ್ನು, ಕೇಶವಸ್ಯ—ಕೃಷ್ಣನ, ಕೃತ-ಅಂಜಲಿಃ—ಕೈ ಜೋಡಿಸಿ, ವೇಪಮಾನಃ—ಕಂಪಿಸುತ್ತಾ, ಕಿರೀಟೀ—ಅರ್ಜುನನು, ನಮಸ್ಕೃತ್ವಾ—ನಮಸ್ಕಾರಗಳನ್ನು ಅರ್ಪಿಸುತ್ತ, ಭೂಯಃ—ಮತ್ತೆ, ಏವ—ಕೂಡ, ಆಹ—ನುಡಿದನು, ಕೃಷ್ಣಮ್—ಕೃಷ್ಣನಿಗೆ, ಸ-ಗದ್ಗದಮ್—ಗದ್ಗದಿತನಾಗಿ, ಭೀತ-ಭೀತಃ—ಭೀತನಾಗಿ, ಪ್ರಣಮ್ಯ—ಪ್ರಣಾಮ ಮಾಡುತ್ತ.

**ಧೃತರಾಷ್ಟ್ರನಿಗೆ ಸಂಜಯನು ಹೇಳಿದನು : ಹೇ ರಾಜನೇ, ಪರಮ ದೇವೋತ್ತಮ ಪುರುಷನಿಂದ ಈ ವಚನಗಳನ್ನು ಕೇಳಿದ ಮೇಲೆ, ನಡುಗುತ್ತ ಅರ್ಜುನನು, ಕೈ ಜೋಡಿಸಿ ಮತ್ತೆ ಮತ್ತೆ ನಮಸ್ಕರಿಸಿದನು. ಅವನು ಭಯಗ್ರಸ್ತನಾಗಿ, ಗದ್ಗದಿಸುತ್ತ ಶ್ರೀಕೃಷ್ಣನಿಗೆ ಹೀಗೆ ನುಡಿದನು.**

**ಭಾವಾರ್ಥ :** ನಾವು ಈಗಾಗಲೇ ವಿವರಿಸಿರುವಂತೆ, ಪರಮ ದೇವೋತ್ತಮ ಪುರುಷನ ವಿಶ್ವರೂಪದಿಂದ ಸೃಷ್ಟಿಯಾದ ಸನ್ನಿವೇಶ ನಿಮಿತ್ತ, ಅರ್ಜುನನು, ಆಶ್ಚರ್ಯದಿಂದ ದಿಗ್ಭ್ರಮಿತನಾದನು; ಹೀಗೆ ಅವನು ಮತ್ತೆಮತ್ತೆ ಕೃಷ್ಣನಿಗೆ ಗೌರವಪೂರ್ವಕ ನಮಸ್ಕರಿಸತೊಡಗಿದನು, ಮತ್ತು ಗದ್ಗದಿತ ಸ್ವರದಲ್ಲಿ ಸಖನಾಗಿ, ಅಲ್ಲ, ಆಶ್ಚರ್ಯಚಕಿತ ಭಕ್ತನಾಗಿ, ಸ್ತೋತ್ರ ಮಾಡತೊಡಗಿದನು.

**ಅರ್ಜುನ ಉವಾಚ**

**ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ**
**ಜಗತ್ ಪ್ರಹೃಷ್ಯತ್ಯನುರಜ್ಯತೇ ಚ ।**
**ರಕ್ಷಾಂಸಿ ಭೀತಾನಿ ದಿಶೋ ದ್ರವನ್ತಿ**
**ಸರ್ವೇ ನಮಸ್ಯನ್ತಿ ಚ ಸಿದ್ಧಸಂಘಾಃ ॥ ೩೬ ॥**

ಅರ್ಜುನ ಉವಾಚ—ಅರ್ಜುನನು ನುಡಿದನು, ಸ್ಥಾನೇ—ಸರಿಯಾಗಿ, ಹೃಷೀಕ-ಈಶ—ಹೇ ಸಕಲೇಂದ್ರಿಯಗಳ ಸ್ವಾಮಿಯೇ, ತವ—ನಿನ್ನ, ಪ್ರಕೀರ್ತ್ಯಾ—ವೈಭವಗಳಿಂದ, ಜಗತ್—ಇಡೀ ಜಗತ್ತು, ಪ್ರಹೃಷ್ಯತಿ—ಹರ್ಷಿಸುತ್ತಿದೆ, ಅನುರಜ್ಯತೇ—ಅನುರಕ್ತವಾಗುತ್ತಿದೆ, ಚ—ಮತ್ತು, ರಕ್ಷಾಂಸಿ—ದೈತ್ಯರು, ಭೀತಾನಿ—ಭಯದಿಂದ, ದಿಶಃ—ಎಲ್ಲ ದಿಕ್ಕುಗಳಲ್ಲಿ, ದ್ರವನ್ತಿ—ಓಡುತ್ತಿದ್ದಾರೆ, ಸರ್ವೇ—ಎಲ್ಲರೂ, ನಮಸ್ಯನ್ತಿ—ಗೌರವ ಸಲ್ಲಿಸುತ್ತಿದ್ದಾರೆ, ಚ—ಕೂಡ, ಸಿದ್ಧ-ಸಂಘಾಃ—ಸಿದ್ಧಿಪಡೆದ ಮಾನವರು.

**ಅರ್ಜುನನು ನುಡಿದನು : ಹೇ ಹೃಷಿಕೇಶನೇ, ನಿನ್ನ ನಾಮ ಸ್ಮರಣೆಯಿಂದ ಜಗತ್ತು ಪರಿತೋಷಿಸುತ್ತದೆ. ಹೀಗೆ ನಿನ್ನಲ್ಲಿ ಪ್ರತಿಯೊಬ್ಬನೂ ಆಸಕ್ತ**

**ನಾಗುತ್ತಾನೆ. ಸಿದ್ಧಮಾನವರು ನಿನಗೆ ಗೌರವ ಸಲ್ಲಿಸುತ್ತಿದ್ದರೂ, ಭೀತರಾದ ದೈತ್ಯರು ಸಿಕ್ಕೆಡೆಗೆ ಓಡುತ್ತಿದ್ದಾರೆ. ಇದೆಲ್ಲವೂ ಸರಿಯಾಗಿ ನಡೆದಿದೆ.**

**ಭಾವಾರ್ಥ :** ಕುರುಕ್ಷೇತ್ರ ಯುದ್ಧದ ಫಲಿತಾಂಶವನ್ನು ಕುರಿತು ಅರ್ಜುನನು ಕೃಷ್ಣನಿಂದ ಶ್ರವಣ ಮಾಡಿದ ಮೇಲೆ ಜ್ಞಾನೋದಯ ಹೊಂದಿದನು, ಮತ್ತು ಪರಮ ದೇವೋತ್ತಮ ಪುರುಷನ ಮಹಾ ಭಕ್ತನು ಮತ್ತು ಸಖನಾಗಿ ಕೃಷ್ಣನಿಂದ ನಡೆದ ಪ್ರತಿಯೊಂದೂ ಸರಿಯಾಗಿದೆ ಎಂದು ನುಡಿದನು. ಕೃಷ್ಣನು ಪಾಲಕನು ಮತ್ತು ಭಕ್ತರಿಂದ ಪೂಜಾರ್ಹನು ಮತ್ತು ಅನಪೇಕ್ಷಿತರ ಸಂಹಾರಕನು ಎಂಬುದನ್ನು ಅರ್ಜುನನು ದೃಢಪಡಿಸಿದನು. ಅವನ ಕಾರ್ಯಗಳು ಸಕಲರಿಗೂ ಸಮಾನವಾಗಿ ಶುಭಕರ ಕುರುಕ್ಷೇತ್ರ ಯುದ್ಧವು ಮುಗಿಯುತ್ತಿದ್ದಂತೆಯೇ ಅಂತರಿಕ್ಷದಲ್ಲಿ ಅನೇಕ ದೇವತೆಗಳು, ಸಿದ್ಧರು ಮತ್ತು ಊರ್ಧ್ವಲೋಕದ ಬುದ್ಧಿಜೀವಿಗಳು ನೆರೆದಿದ್ದರು, ಮತ್ತು ಕೃಷ್ಣನು ಅಲ್ಲಿ ಇದ್ದದ್ದರಿಂದ ಅವರು ಯುದ್ಧವನ್ನು ವೀಕ್ಷಿಸುತ್ತಿದ್ದಾರೆ ಎಂಬುದನ್ನು ಇಲ್ಲಿ ಅರ್ಜುನನು ಅರಿತುಕೊಂಡನು. ಅರ್ಜುನನು ಭಗವಂತನ ವಿಶ್ವರೂಪವನ್ನು ಕಂಡಾಗ, ದೇವತೆಗಳು ಅದರಿಂದ ಸಂತುಷ್ಟರಾದರು. ಆದರೆ ದೈತ್ಯರು ಮತ್ತು ನಾಸ್ತಿಕರಾದ ಇತರರಿಗೆ ಭಗವಂತನನ್ನು ಸ್ತುತಿಸಿದಾಗ ಸಹಿಸಿಕೊಳ್ಳಲಾಗಲಿಲ್ಲ. ಪರಮ ದೇವೋತ್ತಮ ಪುರುಷನ ವಿನಾಶಕ ರೂಪದಿಂದ ಸ್ವಾಭಾವಿಕವಾಗಿ ಭೀತರಾಗಿ ಅವರು ಓಡಿಹೋದರು. ಭಕ್ತರು ಮತ್ತು ನಾಸ್ತಿಕರ ಬಗ್ಗೆ ಕೃಷ್ಣನ ನಡತೆಯು ಅರ್ಜುನನಿಂದ ಸ್ತುತಿಸಲ್ಪಟ್ಟಿತು. ಭಕ್ತನು ಎಲ್ಲ ಸಂದರ್ಭಗಳಲ್ಲಿ ಭಗವಂತನ ಗುಣಗಾನ ಮಾಡುತ್ತಾನೆ, ಏಕೆಂದರೆ ಅವನು ಮಾಡುವುದೆಲ್ಲ ಸರ್ವಕಲ್ಯಾಣಕ್ಕಾಗಿ ಎಂಬುದು ಅವನಿಗೆ ತಿಳಿದಿದೆ.

**ಕಸ್ಮಾಚ್ಚ ತೇ ನ ನಮೇರನ್ಮಹಾತ್ಮನ್**
**ಗರೀಯಸೇ ಬ್ರಹ್ಮಣೋಽಪ್ಯಾದಿಕರ್ತ್ರೇ ।**
**ಅನನ್ತ ದೇವೇಶ ಜಗನ್ನಿವಾಸ**
**ತ್ವಮಕ್ಷರಂ ಸದಸತ್ತತ್ಪರಂ ಯತ್ ॥ ೩೭ ॥**

ಕಸ್ಮಾತ್—ಏಕೆ, ಚ—ಕೂಡ, ತೇ—ನಿನಗೆ, ನ—ಇಲ್ಲ, ನಮೇರನ್—ಅವರು ಸರಿಯಾಗಿ ನಮಸ್ಕರಿಸುವುದು, ಮಹಾ ಆತ್ಮನ್—ಹೇ ಮಹಾತ್ಮನೇ, ಗರೀಯಸೇ—ಯಾರು ಉತ್ತಮರು, ಬ್ರಾಹ್ಮಣಃ—ಬ್ರಾಹ್ಮಣರಿಗಿಂತ, ಅಪಿ—ಆದರೂ, ಆದಿ-ಕರ್ತ್ರೇ—ಪರಮ ಸೃಷ್ಟಿಕರ್ತನಿಗೆ, ಅನನ್ತ—ಹೇ ಅಪರಿಮಿತನೇ, ದೇವ-ಈಶ—ಹೇ ದೇವದೇವನೇ, ಜಗತ್-ನಿವಾಸ—ಹೇ ಜಗದಾಶ್ರಯನೇ, ತ್ವಮ್—ಆಗಿರುವೆ, ಅಕ್ಷರಮ್—ಅವಿನಾಶಿ, ಸತ್-ಅಸತ್—ಕಾರಣ ಕಾರ್ಯಗಳಿಗೆ, ತತ್-ಪರಮ್—ದಿವ್ಯ, ಯತ್—ಆದ್ದರಿಂದ.

**ಹೇ ಮಹಾತ್ಮನೇ, ನೀನು ಬ್ರಹ್ಮನಿಗಿಂತಲೂ ಉತ್ತಮನಾದ ಮೂಲ ಸೃಷ್ಟಿಕರ್ತನು. ಅದೇಕೆ ನಿನಗೆ ಅವರು ಗೌರವಪೂರ್ವಕವಾಗಿ ನಮಸ್ಕಾರಗಳನ್ನು ಅರ್ಪಿಸಬಾರದು ? ಹೇ ಅಪರಿಮಿತನೇ, ದೇವದೇವನೇ, ವಿಶ್ವಾಶ್ರಯನೇ ! ನೀನು**

**ಅಜಯ್ಯನೂ, ಮೂಲನೂ, ಸರ್ವಕಾರಣಗಳ ಕಾರಣನೂ, ಈ ಭೌತಿಕ ಉದ್ಭೂತಿಗೆ ಅತೀತನು.**

**ಭಾವಾರ್ಥ :** ಹೀಗೆ ನಮಸ್ಕಾರಗಳ ಅರ್ಪಣೆಗಳಿಂದ, ಕೃಷ್ಣನು ಪ್ರತಿಯೊಬ್ಬರಿಂದ ಪೂಜಾರ್ಹನು ಎಂಬುದನ್ನು ಅರ್ಜುನನು ಸೂಚಿಸುತ್ತಿದ್ದಾನೆ. ಅವನು ಸರ್ವವ್ಯಾಪ್ತ, ಮತ್ತು ಅವನು ಪ್ರತಿಯೊಬ್ಬ ಆತ್ಮನ ಆತ್ಮನು. ಅರ್ಜುನನು ಕೃಷ್ಣನನ್ನು ಮಹಾತ್ಮ ಎಂದು ಸಂಬೋಧಿಸುತ್ತಿದ್ದಾನೆ, ಎಂದರೆ ಅವನು ಅತ್ಯಂತ ಉದಾರಿ ಮತ್ತು ಅಪರಿಮಿತನು ಎಂದು ಅರ್ಥ. ಅನಂತ ಎಂಬುದು ಪರಮ ಪ್ರಭುವಿನ ಪ್ರಭಾವ ಮತ್ತು ಶಕ್ತಿಯಿಂದ ಆವೃತವಾಗದಿರುವುದು ಯಾವುದೂ ಇಲ್ಲ ಎಂಬುದನ್ನು ಸೂಚಿಸುತ್ತದೆ, ಮತ್ತು ದೇವೇಶ ಎಂದರೆ ಅವನು ಸಕಲ ದೇವತೆಗಳ ನಿಯಂತ್ರಕನು ಮತ್ತು ಅವರೆಲ್ಲರ ಮೇಲಿರುವವನು ಎಂದು ಅರ್ಥ. ಅವನು ಇಡೀ ವಿಶ್ವಕ್ಕೆ ಆಶ್ರಯನು. ಅವನಿಗಿಂತ ದೊಡ್ಡವನಿಲ್ಲವಾದ್ದರಿಂದ ಸಕಲ ಸಿದ್ಧ ಜೀವಿಗಳು ಮತ್ತು ಶಕ್ತಿಶೀಲ ದೇವತೆಗಳು ಗೌರವ ಪೂರ್ವಕ ಅವನಿಗೆ ನಮಸ್ಕರಿಸುತ್ತಿರುವುದು ಯೋಗ್ಯವೆಂದು ಕೂಡ ಅರ್ಜುನನು ಯೋಚಿಸಿದನು. ಬ್ರಹ್ಮನು ಅವನಿಂದ ಸೃಷ್ಟನಾದ್ದರಿಂದ, ಕೃಷ್ಣನು ಬ್ರಹ್ಮನಿಗಿಂತ ದೊಡ್ಡವನು ಎಂಬುದಾಗಿ ಅರ್ಜುನನು ವಿಶೇಷವಾಗಿ ಪ್ರಸ್ತಾಪಿಸುತ್ತಾನೆ. ಕೃಷ್ಣನ ಸಮಗ್ರ ವಿಸ್ತರಣೆಯಾದ ಗರ್ಭೋದಕಶಾಯೀ ವಿಷ್ಣುವಿನ ನಾಭಿ ಕಮಲ ನಾಳದಲ್ಲಿ ಬ್ರಹ್ಮನು ಹುಟ್ಟಿದ್ದಾನೆ. ಆದ್ದರಿಂದ ಬ್ರಹ್ಮ ಮತ್ತು ಬ್ರಹ್ಮನಿಂದ ಹುಟ್ಟಿದ ಶ್ರೀ ಶಿವ ಮತ್ತು ಇತರ ದೇವತೆಗಳೆಲ್ಲರೂ ತಮ್ಮ ಗೌರವ ನಮಸ್ಕಾರಗಳನ್ನು ಅವನಿಗೆ ಸಲ್ಲಿಸಬೇಕು. ಭಗವಂತನು ಶ್ರೀ ಶಿವ ಮತ್ತು ಬ್ರಹ್ಮ ಹಾಗೂ ಅಂಥ ಇತರ ದೇವತೆಗಳಿಂದ ಗೌರವಿಸಲ್ಪಟ್ಟಿರುವವನು ಎಂದು ಶ್ರೀಮದ್ ಭಾಗವತದಲ್ಲಿ ಹೇಳಿದೆ. ಅಕ್ಷರಮ್ ಎಂಬ ಪದವೂ ಬಹು ಮಹತ್ವದ್ದು, ಏಕೆಂದರೆ, ಈ ಭೌತಿಕ ಸೃಷ್ಟಿಯು ನಾಶಕ್ಕೆ ಒಳಪಟ್ಟಿದೆ, ಆದರೆ ಭಗವಂತನು ಅದಕ್ಕೆ ಅತೀತನು. ಅವನು ಸಕಲ ಕಾರಣಗಳಿಗೆ ಕಾರಣನು. ಹೀಗಿದ್ದು, ಅವನು ಈ ಭೌತಿಕ ಪ್ರಕೃತಿಯಲ್ಲಿರುವ ಬದ್ಧಾತ್ಮರು ಹಾಗೂ ವಿಶ್ವೋದ್ಭೂತಿಗಿಂತಲೂ ಉತ್ತಮನು. ಆದ್ದರಿಂದ ಅವನು ಸರ್ವೋತ್ತಮ ಪರಮನು.

**ತ್ವಮಾದಿದೇವಃ ಪುರುಷಃ ಪುರಾಣಸ್**
**ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।**
**ವೇತ್ತಾಸಿ ವೇದ್ಯಂ ಚ ಪರಂ ಚ ಧಾಮ**
**ತ್ವಯಾ ತತಂ ವಿಶ್ವಮನನ್ತರೂಪ ॥ ೩೮ ॥**

ತ್ವಮ್—ನೀನು, ಆದಿ—ದೇವಃ—ಮೂಲ ಪರಮ ದೇವನು, ಪುರುಷಃ—ಪುರುಷನು, ಪುರಾಣಃ—ಪುರಾಣನು, ತ್ವಮ್—ನೀನು, ಅಸ್ಯ—ಇದರ, ವಿಶ್ವಸ್ಯ—ವಿಶ್ವದ, ಪರಮ್—ದಿವ್ಯ, ನಿಧಾನಮ್—ಆಶ್ರಯನು, ವೇತ್ತಾ—ತಿಳಿಯುವವನು, ಅಸಿ—ಆಗಿರುವಿ, ವೇದ್ಯಮ್—ತಿಳಿಯಬೇಕಾದುದು, ಚ—ಕೂಡ, ಪರಮ್—ದಿವ್ಯ, ಚ—

ಮತ್ತು, ಧಾಮ—ಆಶ್ರಯ, ತ್ವಯಾ—ನಿನ್ನಿಂದ, ತತಮ್—ವ್ಯಾಪಿತ, ವಿಶ್ವಮ್—ವಿಶ್ವವು, ಅನನ್ತರೂಪ—ಹೇ ಅಪರಿಮಿತ ರೂಪನೇ.

**ನೀನು ಮೂಲ ದೇವೋತ್ತಮ ಪುರುಷನು, ಪುರಾಣನು, ಈ ಉದ್ಭೂತ ವಿಶ್ವದ ಅಂತಿಮ ಆಶ್ರಯನು. ನೀನು ಪ್ರತಿಯೊಂದನ್ನೂ ತಿಳಿಯುವವನು ಮತ್ತು ತಿಳಿಯಲ್ಪಡಬೇಕಾದ ಎಲ್ಲವೂ ನೀನು. ನೀನು ಭೌತಿಕ ಗುಣಾತೀತ ಪರಮಾಶ್ರಯನು. ಹೇ ಅಪರಿಮಿತ ರೂಪನೇ ! ಈ ಸಕಲ ವಿಶ್ವ ಉದ್ಭೂತಿಯು ನಿನ್ನಿಂದ ವ್ಯಾಪ್ತವಾಗಿದೆ.**

**ಭಾವಾರ್ಥ :** ಪ್ರತಿಯೊಂದೂ ಪರಮ ದೇವೋತ್ತಮ ಪುರುಷನನ್ನು ಆಶ್ರಯಿಸಿದೆ. ಆದ್ದರಿಂದ ಅವನು ಅಂತಿಮ ಆಶ್ರಯನು. **ನಿಧಾನಮ್** ಎಂದರೆ ಪ್ರತಿಯೊಂದೂ, ಬ್ರಹ್ಮಜ್ಯೋತಿಯು ಕೂಡ ಪರಮ ದೇವೋತ್ತಮ ಪುರುಷ ಶ್ರೀ ಕೃಷ್ಣನನ್ನು ಆಶ್ರಯಿಸಿದೆ ಎಂದು ಅರ್ಥ. ಈ ಜಗತ್ತಿನಲ್ಲಿ ಆಗುತ್ತಿರುವುದನ್ನೆಲ್ಲಾ ತಿಳಿಯುವವನು ಮತ್ತು ಜ್ಞಾನಕ್ಕೆ ಕೊನೆ ಇರುವುದಾದರೆ ಅವನೇ ಸಕಲ ಜ್ಞಾನದ ಅಂತ್ಯ; ಆದ್ದರಿಂದ ಅವನು ತಿಳಿದವನು ಮತ್ತು ತಿಳಿಯಲ್ಪಡಬೇಕಾದವನು ಅವನು ಜ್ಞಾನ ವಿಷಯನು ಏಕೆಂದರೆ ಅವನು ಸರ್ವವ್ಯಾಪಕನು. ಆಧ್ಯಾತ್ಮ ಜಗತ್ತಿನಲ್ಲಿ ಅವನು ಕಾರಣನಾದ್ದರಿಂದ ಅವನು ದಿವ್ಯನು. ದಿವ್ಯ ಜಗತ್ತಿನಲ್ಲಿ ಮುಖ್ಯ ವ್ಯಕ್ತಿಯೂ ಕೂಡ ಅಗಿರುವನು.

**ವಾಯುರ್ಯಮೋಽಗ್ನಿರ್ವರುಣಃ ಶಶಾಂಕಃ**
**ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ।**
**ನಮೋ ನಮಸ್ತೇಽಸ್ತು ಸಹಸ್ರಕೃತ್ವಃ**
**ಪುನಶ್ಚ ಭೂಯೋಽಪಿ ನಮೋ ನಮಸ್ತೇ ॥ ೩೯ ॥**

ವಾಯುಃ—ವಾಯು, ಯಮಃ—ಯಮ, ಅಗ್ನಿ—ಬೆಂಕಿ, ವರುಣಃ—ಜಲ, ಶಶ-ಅಂಕಃ—ಚಂದ್ರ, ಪ್ರಜಾಪತಿಃ—ಬ್ರಹ್ಮ, ತ್ವಮ್—ನೀನು, ಪ್ರಪಿತಾ-ಮಹಃ—ಪ್ರಪಿತಾಮಹನು, ಚ—ಕೂಡ, ನಮಃ—ನನ್ನ ಗೌರವಗಳು, ನಮಃ—ಮತ್ತೆ ನನ್ನ ಗೌರವಗಳು, ತೇ—ನಿನಗೆ, ಅಸ್ತು—ಇರಲಿ, ಸಹಸ್ರಕೃತ್ವಃ—ಸಾವಿರ ಸಲ, ಪುನಃಚ—ಮತ್ತೆ ಮತ್ತೆ, ಭೂಯಃ—ಪುನಃ, ಅಪಿ—ಕೂಡ, ನಮಃ—ನನ್ನ ಗೌರವಗಳನ್ನು ಅರ್ಪಣೆ, ನಮಃ ತೇ—ನಿನಗೆ ನನ್ನ ನಮಸ್ಕಾರಗಳು.

**ನೀನು ವಾಯು, ಮತ್ತು ನೀನು ಪರಮ ನಿಯಂತ್ರಕನು ! ನೀನು ಅಗ್ನಿ, ನೀನು ವರುಣ, ಮತ್ತು ನೀನು ಚಂದ್ರ ! ಪ್ರಥಮ ಜೀವಿಯಾದ ಬ್ರಹ್ಮನು ನೀನು ಮತ್ತು ನೀನು ಪ್ರಪಿತಾಮಹನು. ಆದ್ದರಿಂದ ನಾನು ನಿನಗೆ ಸಾವಿರಾರುಸಲ ಮತ್ತೆ ಮತ್ತೆ ಗೌರವಪೂರ್ವಕವಾಗಿ ನಮಸ್ಕರಿಸುತ್ತೇನೆ !**

**ಭಾವಾರ್ಥ :** ಇಲ್ಲಿ ಭಗವಂತನನ್ನು ವಾಯು ಎಂದು ಸಂಭೋಧಿಸಲಾಗಿದೆ, ಏಕೆಂದರೆ ಸರ್ವವ್ಯಾಪ್ತವಾಗಿ ವಾಯುವು ಸಕಲ ದೇವತೆಗಳ ಅತಿ ಮುಖ್ಯ ಪ್ರತಿನಿಧಿ. ಕೃಷ್ಣನು

ವಿಶ್ವದ ಪ್ರಥಮ ಜೀವಿಯಾದ ಬ್ರಹ್ಮನ ತಂದೆಯಾದ್ದರಿಂದ, ಅರ್ಜುನನು ಕೃಷ್ಣನನ್ನು ಪ್ರಪಿತಾಮಹ ಎಂದೂ ಕೂಡ ಸಂಬೋಧಿಸುತ್ತಾನೆ.

**ನಮಃ ಪುರಸ್ತಾದಥ ಪೃಷ್ಠತಸ್ತೇ ।**
**ನಮೋಽಸ್ತು ತೇ ಸರ್ವತ ಏವ ಸರ್ವ ।**
**ಅನನ್ತವೀರ್ಯಾಮಿತವಿಕ್ರಮಸ್ತ್ವಂ**
**ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ॥ ೪೦ ॥**

ನಮಃ—ನಮಸ್ಕಾರಗಳ ಅರ್ಪಣೆ, ಪುರಸ್ತಾತ್—ಮುಂದಿನಿಂದ, ಅಥ—ಕೂಡ, ಪೃಷ್ಠತಃ—ಹಿಂದಿನಿಂದ, ತೇ—ನಿನಗೆ, ನಮಃ ಅಸ್ತು—ನಾನು ನಿನಗೆ ಗೌರವಗಳನ್ನು ಅರ್ಪಿಸುತ್ತೇನೆ, ತೇ—ನಿನಗೆ, ಸರ್ವತಃ—ಎಲ್ಲ ಕಡೆಗಳಿಂದಲೂ, ಏವ—ನಿಜವಾಗಿ, ಸರ್ವ—ನೀನು ಪ್ರತಿಯೊಂದು ಆಗಿರುವುದರಿಂದ, ಅನನ್ತವೀರ್ಯ—ಅಪರಿಮಿತಶಕ್ತಿ, ಅಮಿತ—ವಿಕ್ರಮಃ—ಮತ್ತು ಅಪರಿಮಿತ ಬಲ, ತ್ವಮ್—ನೀನು, ಸರ್ವಮ್—ಪ್ರತಿಯೊಂದನ್ನೂ, ಸಮಾಪ್ನೋಷಿ—ಆವರಿಸಿರುವೆ, ತತಃ—ಆದ್ದರಿಂದ, ಅಸಿ—ಆಗಿರುವೆ, ಸರ್ವಃ—ಪ್ರತಿಯೊಂದು.

**ಮುಂದೆ, ಹಿಂದೆ, ಮತ್ತು ಎಲ್ಲ ಕಡೆಗಳಿಂದ ನಿನಗೆ ನಮಸ್ಕಾರಗಳು ! ಹೇ ಅನಂತ ಶಕ್ತನೇ, ನೀನು ಅಮಿತ ವಿಕ್ರಮದ ಒಡೆಯ! ನೀನು ಸರ್ವವ್ಯಾಪ್ತ, ಹೀಗೆ ನೀನು ಪ್ರತಿಯೊಂದು ಆಗಿರುವೆ !**

**ಭಾವಾರ್ಥ :** ಕೃಷ್ಣನಿಗಾಗಿ ಪ್ರೇಮೋತ್ಕರ್ಷದಲ್ಲಿ ಅವನ ಸಖ ಅರ್ಜುನನು, ಎಲ್ಲ ಕಡೆಗಳಿಂದ ಗೌರವಗಳನ್ನು ಅರ್ಪಿಸುತ್ತಿದ್ದಾನೆ. ಕೃಷ್ಣನು ಸಕಲಶಕ್ತಿ ಮತ್ತು ಸಕಲ ತೇಜಸ್ಸುಗಳ ಸ್ವಾಮಿ ಮತ್ತು ರಣರಂಗದಲ್ಲಿ ಸೇರಿದ ಎಲ್ಲ ಮಹಾ ಯೋಧರಿಗಿಂತ ಅಪಾರ ಶ್ರೇಷ್ಠನು ಎಂಬುದನ್ನು ಅರ್ಜುನನು ಅಂಗೀಕರಿಸುತ್ತಾನೆ. ವಿಷ್ಣು ಪುರಾಣದಲ್ಲಿ ಹೀಗೆ ಹೇಳಿದೆ. (1. 9. 69) :

ಯೋಽಯಂ ತವಾಗತೋ ದೇವ ಸಮೀಪಂ ದೇವತಾಗಣಃ।
ಸ ತ್ವಂ ಏವ ಜಗತ್-ಸ್ರಷ್ಟಾ ಯತಃ ಸರ್ವ-ಗತೋ ಭವಾನ್॥

"ಹೇ ಪರಮ ದೇವೋತ್ತಮ ಪುರುಷನೇ ನಿನ್ನ ಮುಂದೆ ಬರುವವರು ಯಾರೇ ಆಗಿರಲಿ, ಅವನು ದೇವತೆಯಾದರೂ ಕೂಡ, ನಿನ್ನಿಂದ ಸೃಷ್ಟನು,"

**ಸಖೇತಿ ಮತ್ವಾ ಪ್ರಸಭಂ ಯದುಕ್ತಂ**
**ಹೇ ಕೃಷ್ಣ ಹೇ ಯಾದವ ಹೇ ಸಖೇತಿ ।**
**ಅಜಾನತಾ ಮಹಿಮಾನಂ ತವೇದಂ**
**ಮಯಾ ಪ್ರಮಾದಾತ್ ಪ್ರಣಯೇನ ವಾಪಿ ॥ ೪೧ ॥**

**ಯಚ್ಚಾವಹಾಸಾರ್ಥಮಸತ್ಕೃತೋಽಸಿ**
**ವಿಹಾರಶಯ್ಯಾಸನಭೋಜನೇಷು ।**
**ಏಕೋಽಥವಾಪ್ಯಚ್ಯುತ ತತ್ಸಮಕ್ಷಂ**
**ತತ್ ಕ್ಷಾಮಯೇ ತ್ವಾಮಹಮಪ್ರಮೇಯಮ್ ॥ ೪೨ ॥**

ಸಖಾ—ಮಿತ್ರನು, ಇತಿ—ಹೀಗೆ, ಮತ್ವಾ—ತಿಳಿಯುತ್ತ, ಪ್ರಸಭಮ್—ಪೂರ್ವ ಭಾವನೆಯಾಗಿ, ಯತ್—ಯಾವುದೇ, ಉಕ್ತಮ್—ಹೇಳಲಾಗಿದೆಯೋ, ಹೇ ಕೃಷ್ಣ—ಹೇ ಕೃಷ್ಣ, ಹೇ ಯಾದವ—ಹೇ ಯಾದವ, ಹೇ ಸಖೇ—ಹೇ ನನ್ನ ಪ್ರಿಯ ಸಖನೇ, ಇತಿ—ಹೀಗೆ, ಅಜಾನತಾ—ತಿಳಿಯದೆ, ಮಹಿಮಾನಮ್—ಮಹಿಮೆಗಳನ್ನು, ತವ—ನಿನ್ನ, ಇದಮ್—ಈ, ಮಯಾ—ನನ್ನಿಂದ, ಪ್ರಮಾದಾತ್—ಮೌಢ್ಯದಿಂದ, ಪ್ರಣಯೇನ—ಪ್ರೇಮದಿಂದ, ವಾಪಿ—ಅಥವಾ, ಯತ್—ಯಾವುದೆಲ್ಲ, ಚ—ಕೂಡ, ಅವಹಾಸ—ಅರ್ಥಮ್—ಹಾಸ್ಯಕ್ಕಾಗಿ, ಅಸತ್—ಕೃತಃ—ಅವಮಾನಿತನು, ಅಸಿ—ಆಗಿರುವೆ ವಿಹಾರ—ವಿರಾಮದಲ್ಲಿ ಶಯ್ಯಾ—ಮಲಗುವುದರಲ್ಲಿ, ಆಸನ—ಕುಳಿತಿರುವಲ್ಲಿ, ಭೋಜ, ನೇಷು—ಅಥವಾ ಜೊತೆಯಲ್ಲಿ ಊಟ ಮಾಡುವಾಗ, ಏಕಃ—ಒಬ್ಬನೇ, ಅಥವಾ—ಅಥವಾ, ಅಪಿ—ಕೂಡ, ಅಚ್ಯುತ—ಹೇ ಚ್ಯುತಿ ಇಲ್ಲದವನೇ, ತತ್-ಸಮಕ್ಷಮ್—ಒಡನಾಡಿಗಳ ನಡುವೆ,ತತ್—ಆ ಎಲ್ಲವನ್ನೂ, ಕ್ಷಾಮಯೇ—ಕ್ಷಮೆ ಬೇಡುತ್ತೇನೆ, ತ್ವಾಮ್—ನಿನ್ನಿಂದ, ಅಹಮ್—ನಾನು, ಅಪ್ರಮೇಯಮ್—ಅಪ್ರಮೇಯನನ್ನು.

**ನಿನ್ನ ಮಹಿಮೆಗಳನ್ನು ತಿಳಿಯದೆ, ನನ್ನ ಸಖನೆಂದು ಭಾವಿಸಿ ನಿನ್ನನ್ನು "ಹೇ ಕೃಷ್ಣ" "ಹೇ ಯಾದವ" "ಹೇ ನನ್ನ ಸಖನೇ", ಎಂದು ಅಸಡ್ಡೆಯಾಗಿ ಸಂಬೋಧಿಸಿದೆ. ಹುಚ್ಚುತನದಿಂದ ಅಥವಾ ಪ್ರೇಮದಿಂದ ನಾನು ಏನೇ ಮಾಡಿದ್ದರೂ ದಯವಿಟ್ಟು ಕ್ಷಮಿಸು. ಒಂದೇ ಹಾಸಿಗೆಯಲ್ಲಿ ಮಲಗಿ, ಅಥವಾ ಕುಳಿತು ಅಥವಾ ಒಟ್ಟಿಗೆ ಭೋಜನ ಮಾಡುವಾಗ ಕೆಲವು ಸಲ ಒಬ್ಬನೇ ಇರುವಾಗ, ಮತ್ತೆ ಕೆಲವು ಸಲ ಅನೇಕ ಮಿತ್ರರಿರುವಾಗ ನಾನು ಪರಿಹಾಸ್ಯ ಮಾಡುತ್ತ ನಿನ್ನನ್ನು ಅನೇಕ ಸಲ ಅವಮಾನಿಸಿದ್ದೇನೆ. ಹೇ ಅಚ್ಯುತನೇ, ಆ ಎಲ್ಲ ಅಪರಾಧಗಳಿಗಾಗಿ ನನ್ನನ್ನು ದಯವಿಟ್ಟು ಕ್ಷಮಿಸು.**

**ಭಾವಾರ್ಥ :** ಕೃಷ್ಣನು ಅರ್ಜುನನ ಮುಂದೆ ತನ್ನ ವಿಶ್ವರೂಪದಿಂದ ಅಭಿವ್ಯಕ್ತನಾಗಿದ್ದರೂ ಕೂಡ, ಅರ್ಜುನನು ಕೃಷ್ಣನೊಂದಿಗೆ ತನ್ನ ಸಖ್ಯ ಸಂಬಂಧವನ್ನು ಜ್ಞಾಪಿಸಿಕೊಳ್ಳುತ್ತಾನೆ. ಆದ್ದರಿಂದ ಕ್ಷಮೆ ಕೇಳುತ್ತಿದ್ದಾನೆ ಮತ್ತು ಮಿತ್ರತ್ವದಲ್ಲಿ ನಡೆಯುವ ಅನೇಕ ಅನೌಪಚಾರಿಕ ಮಾತುಗಳ ಬಗ್ಗೆ ಕ್ಷಮಿಸುವಂತೆ ಕೃಷ್ಣನನ್ನು ಕೇಳಿಕೊಳ್ಳುತ್ತಿದ್ದಾನೆ. ಅವನ ಆತ್ಮಸಖನಾಗಿ ಕೃಷ್ಣನು ವಿವರಿಸಿದರೂ ಕೂಡ ಕೃಷ್ಣನು ಅಂಥಹ ವಿಶ್ವರೂಪಧಾರಣ ಮಾಡಬಹುದೆಂದು ತಾನು ಮುಂಚೆ ತಿಳಿದಿರಲಿಲ್ಲವೆಂದು ಅರ್ಜುನನು ಒಪ್ಪಿಕೊಳ್ಳುತ್ತಾನೆ. "ಹೇ ಕೃಷ್ಣ", "ಹೇ ಸಖನೇ", "ಹೇ ಯಾದವ", ಇತ್ಯಾದಿಯಾಗಿ ಅವನ ಐಶ್ವರ್ಯವನ್ನು ಅರಿಯದೆ ಅದೆಷ್ಟು ಸಲ ಕೃಷ್ಣನನ್ನು ಅವಮಾನಿಸಿರ

ಬಹುದೆಂದು ಅರ್ಜುನನಿಗೆ ತಿಳಿದಿರಲಿಲ್ಲ. ಕೃಷ್ಣನು ಅದೆಷ್ಟು ಕರುಣೆ ಮತ್ತು ಅನುಗ್ರಹಪೂರ್ಣನೆಂದರೆ ಅಂಥ ಐಶ್ವರ್ಯ ಇದ್ದರೂ ಕೂಡ ಅವನು ಅರ್ಜುನನೊಂದಿಗೆ ಸಖನಾಗಿ ಕ್ರೀಡಿಸಿದನು, ಭಕ್ತ ಮತ್ತು ಭಗವಂತನ ನಡುವೆ ದಿವ್ಯ ಪ್ರೇಮಯುತ ಪ್ರತಿಕ್ರಿಯೆಗಳು ಹೀಗಿರುತ್ತವೆ. ಜೀವಿ ಮತ್ತು ಕೃಷ್ಣನ ನಡುವಿನ ಸಂಬಂಧವು ಶಾಶ್ವತವಾಗಿ ಸ್ಥಿರವಾಗುವುದು; ಅರ್ಜುನನ ವರ್ತನೆಯಿಂದ ನಾವು ಕಾಣುವಂತೆ ಅವನನ್ನು ಮರೆಯಲಾಗದು. ಅರ್ಜುನನು ವಿಶ್ವರೂಪದಲ್ಲಿ ಕೃಷ್ಣನ ಐಶ್ವರ್ಯವನ್ನು ಕಂಡಿದ್ದರೂ ಕೂಡ, ಅವನು ಕೃಷ್ಣನೊಡನೆ ತನ್ನ ಸಖ್ಯ ಸಂಬಂಧವನ್ನು ಮರೆಯಲಾರನು.

**ಪಿತಾಸಿ ಲೋಕಸ್ಯ ಚರಾಚರಸ್ಯ**
**ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ।**
**ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ**
**ಲೋಕತ್ರಯೇಽಪ್ಯಪ್ರತಿಮಪ್ರಭಾವ ॥ ೪೩ ॥**

ಪಿತಾ— ತಂದೆ, ಅಸಿ—ಆಗಿರುವೆ, ಲೋಕಸ್ಯ—ಸಕಲ ಲೋಕದ, ಚರ—ಚಲಿಸುವ, ಅಚರಸ್ಯ—ಮತ್ತು ಚಲಿಸದ, ತ್ವಮ್—ನೀನು ಆಗಿರುವೆ, ಅಸ್ಯ—ಇದರ, ಪೂಜ್ಯಃ—ಪೂಜನೀಯ, ಚ—ಕೂಡ, ಗುರುಃ—ಗುರು, ಗರೀಯಾನ್—ಮಹಿಮನು, ನ—ಎಂದಿಗೂ ಇಲ್ಲ, ತ್ವತ್-ಸಮಃ—ನಿನಗೆ ಸಮಾನ, ಅಸ್ತಿ—ಇರುವುದು, ಅಭ್ಯಧಿಕ—ಅಧಿಕನು, ಕುತಃ—ಹೇಗೆ ಸಾಧ್ಯ, ಅನ್ಯಃ—ಅನ್ಯನು, ಲೋಕ-ತ್ರಯೇ—ಮೂರು ಲೋಕ ವ್ಯೂಹಗಳಲ್ಲಿ, ಅಪಿ—ಕೂಡ, ಅಪ್ರತಿಮ-ಪ್ರಭಾವ—ಹೇ ಅಪ್ರತಿಮ ಶಕ್ತನೇ.

**ನೀನು ಸಂಪೂರ್ಣ ವಿಶ್ವ ಉದ್ಭೂತಿಯ ಚರ ಮತ್ತು ಅಚರದ ತಂದೆಯಾಗಿರುವೆ. ನೀನು ಅದರ ಮುಖ್ಯ ಆರಾಧ್ಯನು, ಪರಮ ಗುರು. ನಿನಗೆ ಯಾರೂ ಸಮಾನರಿಲ್ಲ, ಅಥವಾ ಯಾರೂ ನಿನ್ನೊಡನೆ ಒಂದಾಗಲಾರರು. ಹೀಗಿರುವಾಗ ಹೇ ಅಪ್ರತಿಮ ಶಕ್ತಿಸಂಪನ್ನನೇ, ಈ ಮೂರು ಲೋಕಗಳಲ್ಲಿ ಹೇಗೆ ಬೇರೊಬ್ಬನು ನಿನಗಿಂತ ದೊಡ್ಡವನಿರಬಹುದು ?**

**ಭಾವಾರ್ಥ :** ಹೇಗೆ ತಂದೆಯು ಮಗನಿಗೆ ಪೂಜ್ಯನೋ ಹಾಗೆಯೇ ಪರಮ ದೇವೋತ್ತಮ ಪುರುಷ, ಕೃಷ್ಣನು ಪೂಜಾರ್ಹನು. ಅವನು ಮೂಲತಃ ಬ್ರಹ್ಮನಿಗೆ ವೇದೋಪದೇಶಗಳನ್ನು ನೀಡಿದ್ದರಿಂದ ಅವನು ಆಧ್ಯಾತ್ಮಗುರು ಮತ್ತು ಈಗ ಅವನು ಅರ್ಜುನನಿಗೆ ಕೂಡ ಭಗವದ್ ಗೀತೋಪದೇಶ ಮಾಡುತ್ತಿದ್ದಾನೆ; ಆದ್ದರಿಂದ ಅವನು ಮೂಲಗುರು. ಮತ್ತು ವರ್ತಮಾನದಲ್ಲಿ ನಿಜಗುರುವಾದವನು ಯಾರೇ ಆಗಿರಲಿ ಕೃಷ್ಣನಿಂದ ಸಾಗಿ ಬಂದ ಗುರು ಪರಂಪರೆಗೆ ಸೇರಿದವನಾಗಿರಬೇಕು. ಕೃಷ್ಣನ ಪ್ರತಿನಿಧಿಯಾಗಿರದೆ, ಒಬ್ಬನು ದಿವ್ಯ ವಿಷಯದ ಬೋಧಕನು ಅಥವಾ ಗುರು ಆಗಲಾರನು.

ಎಲ್ಲ ವಿಷಯಗಳಲ್ಲಿ ಭಗವಂತನಿಗೆ ನಮಸ್ಕಾರ ಸಲ್ಲುತ್ತವೆ. ಅವನ ಘನತೆ ಅಳತೆಗೆ ನಿಲುಕದ್ದು. ಆಧ್ಯಾತ್ಮಿಕವಾಗಲೀ ಅಥವಾ ಭೌತಿಕವಾಗಲೀ ಯಾವುದೇ ಉದ್ಭೂತಿಯಲ್ಲಿ

ಕೃಷ್ಣನಿಗೆ ಸಮಾನ ಅಥವಾ ಅಧಿಕರಾದವರು ಯಾರೂ ಇಲ್ಲದ್ದರಿಂದ, ಪರಮದೇವೋತ್ತಮ ಪುರುಷ, ಕೃಷ್ಣನಿಗಿಂತ ದೊಡ್ಡವರು ಯಾರೂ ಇಲ್ಲ. ಪ್ರತಿಯೊಬ್ಬರೂ ಅವನಿಗಿಂತ ಕೆಳಗೆ. ಅವನನ್ನು ಯಾರೂ ಮೀರಿಸಲಾರರು. ಇದು ಶ್ವೇತಾಶ್ವತರ ಉಪನಿಷತ್ತಿನಲ್ಲಿ ಹೇಳಿದೆ (6.8);

ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ
ನ ತತ್-ಸಮಶ್ಚಾಭ್ಯಧಿಕಶ್ಚ ದೃಶ್ಯತೇ

ಪರಮಪ್ರಭು ಕೃಷ್ಣನು ಸಾಮಾನ್ಯ ಮಾನವರಂತೆ ಇಂದ್ರಿಯಗಳನ್ನು ಮತ್ತು ದೇಹವನ್ನು ಹೊಂದಿದ್ದಾನೆ. ಆದರೆ ಅವನಿಗೆ ತನ್ನ ಇಂದ್ರಿಯಗಳು, ತನ್ನ ದೇಹ, ಅವನ ಮನಸ್ಸು ಮತ್ತು ಅವನಲ್ಲಿ ಯಾವುದೇ ಭಿನ್ನತ್ವವಿಲ್ಲ. ಅವನನ್ನು ಪರಿಪೂರ್ಣವಾಗಿ ತಿಳಿಯದ ಮೂಢರು ಕೃಷ್ಣನು ಅವನ ಆತ್ಮ, ಮನಸ್ಸು, ಹೃದಯ ಮತ್ತು ಇತರ ಪ್ರತಿಯೊಂದರಿಂದ ಭಿನ್ನನೆಂದು ಹೇಳುತ್ತಾರೆ. ಕೃಷ್ಣನು ಪರತಮನು, ಆದ್ದರಿಂದ ಅವನ ಕ್ರಿಯೆಗಳು ಮತ್ತು ಶಕ್ತಿಗಳು ಪರಮ. ಅವನು ನಮ್ಮ ಹಾಗೆ ಇಂದ್ರಿಯಗಳನ್ನು ಹೊಂದಿಲ್ಲದಿದ್ದರೂ, ಅವನು ಎಲ್ಲ ಇಂದ್ರಿಯ ಕ್ರಿಯೆಗಳನ್ನು ಮಾಡಬಲ್ಲನು; ಆದ್ದರಿಂದ ಅವನ ಇಂದ್ರಿಯಗಳು ಅಪರಿಪೂರ್ಣವೂ ಅಲ್ಲ, ಪರಿಮಿತವೂ ಅಲ್ಲ ಎಂದೂ ಕೂಡ ಹೇಳಿದೆ. ಅವನಿಗಿಂತ ಅಧಿಕರು ಇಲ್ಲ, ಅವನಿಗೆ ಸಮಾನರೂ ಇಲ್ಲ, ಮತ್ತು ಪ್ರತಿಯೊಬ್ಬರು ಅವನಿಗೆ ಕೆಳಗಿನವರು ಪರಮ ಪುರುಷನ ಜ್ಞಾನ ಬಲ ಮತ್ತು ಕ್ರಿಯೆಗಳು ಎಲ್ಲವೂ ದಿವ್ಯ. ಭಗವದ್ಗೀತೆಯಲ್ಲಿ ಹೇಳಿದಂತೆ (4.9)

ಜನ್ಮ ಕರ್ಮ ಚ ಮೇ ದಿವ್ಯಮ್
ಏವಂ ಯೋ ವೇತ್ತಿ ತತ್ತ್ವತಃ
ತ್ಯಕ್ತ್ವಾ ದೇಹಂ ಪುನರ್ ಜನ್ಮ
ನೈತಿ ಮಾಮ್ ಏತಿ ಸೋऽರ್ಜುನ

ಕೃಷ್ಣನ ದಿವ್ಯ ದೇಹ, ಕ್ರಿಯೆಗಳು ಮತ್ತು ಪರಿಪೂರ್ಣತೆಯನ್ನು ತಿಳಿದವನು, ಈ ದೇಹ ಬಿಟ್ಟಮೇಲೆ, ಅವನಲ್ಲಿಗೆ ಮರಳುತ್ತಾನೆ. ಮತ್ತು, ಮತ್ತೆ ಈ ಕ್ಲೇಶಮಯ ಜಗತ್ತಿಗೆ ಹಿಂದಿರುಗುವುದಿಲ್ಲ. ಆದ್ದರಿಂದ ಕೃಷ್ಣನ ಕ್ರಿಯೆಗಳು ಇತರರಿಂದ ಭಿನ್ನ ಎಂದು ತಿಳಿದುಕೊಳ್ಳಬೇಕು. ಕೃಷ್ಣನ ತತ್ವಗಳನ್ನು ಅನುಸರಿಸುವುದು ಉತ್ತಮ ವರ್ತನೆ; ಅದು ಒಬ್ಬನನ್ನು ಪರಿಪೂರ್ಣಗೊಳಿಸುವುದು, ಕೃಷ್ಣನಿಗೆ ಸ್ವಾಮಿಯಾದವನು ಯಾರೂ ಇಲ್ಲ ಎಂದೂ ಕೂಡ ಹೇಳಿದೆ. ಪ್ರತಿಯೊಬ್ಬನು ಅವನ ದಾಸನು. ಚೈತನ್ಯ ಚರಿತಾಮೃತವು (ಆದಿ 5-142) ಏಕಲೇ ಈಶ್ವರ ಕೃಷ್ಣ, ಆರ ಸಬ ಭೃತ್ಯ ಕೃಷ್ಣನು ಮಾತ್ರ ದೇವರು ಮತ್ತು ಇತರ ಪ್ರತಿಯೊಬ್ಬನು ಅವನ ದಾಸ ಎಂದು ದೃಢಪಡಿಸುತ್ತದೆ. ಪ್ರತಿಯೊಬ್ಬನು ಅವನ ಆಜ್ಞಾಧಾರಕ, ಅವನ ಆಜ್ಞೆಯನ್ನು ನಿರಾಕರಿಸಬಲ್ಲವನು ಯಾರೂ ಇಲ್ಲ. ಪ್ರತಿಯೊಂದು ಅವನ ಅಧೀಕ್ಷತೆಯಲ್ಲಿದ್ದು ಅವನ

ನಿರ್ದೇಶಾನುಸಾರ ವರ್ತಿಸುತ್ತದೆ. ಬ್ರಹ್ಮಸಂಹಿತೆಯಲ್ಲಿ ಹೇಳಿದಂತೆ ಅವನು ಸರ್ವ ಕಾರಣಗಳಿಗೆ ಕಾರಣನು.

**ತಸ್ಮಾತ್ ಪ್ರಣಮ್ಯ ಪ್ರಣಿಧಾಯ ಕಾಯಂ**
**ಪ್ರಸಾದಯೇ ತ್ವಾಮಹಮೀಶಮೀಡ್ಯಮ್ ।**
**ಪಿತೇವ ಪುತ್ರಸ್ಯ ಸಖೇವ ಸಖ್ಯುಃ**
**ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್ ॥ ೪೪ ॥**

ತಸ್ಮಾತ್—ಆದ್ದರಿಂದ, ಪ್ರಣಮ್ಯ—ನಮಸ್ಕರಿಸುತ್ತ, ಪ್ರಣಿಧಾಯ—ಎರಗಿ, ಕಾಯಮ್—ದೇಹವನ್ನು, ಪ್ರಸಾದಯೇ—ಅನುಗ್ರಹ ಯಾಚಿಸಲು, ತ್ವಾಮ್—ನಿನಗೆ, ಅಹಮ್—ನಾನು, ಈಶಮ್—ಪರಮಪ್ರಭುವಿಗೆ, ಈಡ್ಯಮ್—ಪೂಜನೀಯ, ಪಿತಾ—ಇವ—ತಂದೆಯಂತೆ, ಪುತ್ರಸ್ಯ—ಪುತ್ರನೊಂದಿಗೆ, ಸಖಾಇವ—ಮಿತ್ರನಂತೆ, ಸಖ್ಯುಃ—ಮಿತ್ರನೊಂದಿಗೆ, ಪ್ರಿಯಃ—ಪ್ರಿಯನು, ಪ್ರಿಯಾಯಾಃ—ಅತ್ಯಂತ ಪ್ರಿಯನೊಂದಿಗೆ, ಅರ್ಹಸಿ—ನೀನು, ದೇವ—ನನ್ನ ದೇವನೇ, ಸೋಢುಮ್—ಸಹಿಸಬೇಕು.

**ನೀನು ಪ್ರತಿಯೊಬ್ಬ ಜೀವಿಯಿಂದ ಆರಾಧ್ಯ ಪರಮಪ್ರಭು. ಆದ್ದರಿಂದ ನಾನು ನಿನಗೆ ಗೌರವಪೂರ್ವಕ ನಮಸ್ಕಾರಗಳನ್ನು ಅರ್ಪಿಸಲು ಮತ್ತು ನಿನ್ನ ಅನುಗ್ರಹ ಯಾಚಿಸಲು ಪ್ರಣಮಿಸುತ್ತಿದ್ದೇನೆ. ತಂದೆಯು ತನ್ನ ಮಗನ ಅವಿಧೇಯತೆಯನ್ನು ಸಹಿಸುವಂತೆ ಅಥವಾ ಮಿತ್ರನು ಅವಿನಯವನ್ನು ಸಹಿಸುವಂತೆ, ಅಥವಾ ಹೆಂಡತಿಯು ತನ್ನ ಜೀವನ ಸಂಗಾತಿಯ ಅಪಾರ ಆತ್ಮೀಯತೆಯನ್ನು ಸಹಿಸುವಂತೆ, ನಾನು ನಿನಗೆ ಮಾಡಿರಬಹುದಾಗಿದ್ದ ತಪ್ಪುಗಳನ್ನು ದಯವಿಟ್ಟು ಸಹಿಸು.**

**ಭಾವಾರ್ಥ :** ಕೃಷ್ಣನ ಭಕ್ತರು ಕೃಷ್ಣನೊಂದಿಗೆ ನಾನಾ ರೀತಿಯಲ್ಲಿ ಸಂಬಂಧಿಸುತ್ತಾರೆ; ಒಬ್ಬನು ಕೃಷ್ಣನನ್ನು ಮಗನೆಂದು ತಿಳಿಯಬಹುದು, ಅಥವಾ ಗಂಡನೆಂದು, ಸಖನೆಂದು, ಅಥವಾ ಸ್ವಾಮಿಯೆಂದು ತಿಳಿಯಬಹುದು. ಕೃಷ್ಣ ಮತ್ತು ಅರ್ಜುನರು ಸಖ್ಯ ಸಂಬಂಧಿಗಳು. ತಂದೆಯು ಸಹಿಸುವಂತೆ ಅಥವಾ ಪತಿ ಅಥವಾ ಸ್ವಾಮಿಯು ಸಹಿಸುವಂತೆ ಕೃಷ್ಣನೂ ಸಹಿಸಿಕೊಳ್ಳುತ್ತಾನೆ.

**ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ**
**ಭಯೇನ ಚ ಪ್ರವ್ಯಥಿತಂ ಮನೋ ಮೇ ।**
**ತದೇವ ಮೇ ದರ್ಶಯ ದೇವ ರೂಪಂ**
**ಪ್ರಸೀದ ದೇವೇಶ ಜಗನ್ನಿವಾಸ ॥ ೪೫ ॥**

ಅದೃಷ್ಟ-ಪೂರ್ವಮ್—ಹಿಂದೆಂದೂ ಕಾಣದ, ಹೃಷಿತಃ—ಹರ್ಷಿತನು, ಅಸ್ಮಿ—ಆಗಿದ್ದೇನೆ, ದೃಷ್ಟ್ವಾ—ನೋಡಿ, ಭಯೇನ—ಭಯದಿಂದ, ಚ—ಕೂಡ, ಪ್ರವ್ಯಥಿತಮ್—ಕ್ಷೋಭೆಗೊಂಡು, ಮನಃ—ಮನಸ್ಸು, ಮೇ—ನನ್ನ. ತತ್—ಅದು, ಏವ—ಖಂಡಿತವಾಗಿ, ಮೇ—ನನಗೆ, ದರ್ಶಯ—ತೋರು, ದೇವ—ಹೇ ದೇವನೇ,

ರೂಪಮ್—ರೂಪವನ್ನು, ಪ್ರಸೀದ—ಅನುಗ್ರಹಿಸು ಅಷ್ಟೆ, ದೇವ-ಈಶ—ಹೇ ದೇವಾಧಿ ದೇವನೇ, ಜಗತ್-ನಿವಾಸ—ಹೇ ವಿಶ್ವಾಶ್ರಯನೇ.

**ನಾನು ಹಿಂದೆ ಎಂದೂ ಕಾಣದ ಈ ವಿಶ್ವರೂಪವನ್ನು ಕಂಡು, ಹರ್ಷಿತ ನಾಗಿದ್ದೇನೆ, ಆದರೆ ಅದೇ ಕಾಲದಲ್ಲಿ ನನ್ನ ಮನಸ್ಸು ಭಯದಿಂದ ಉದ್ವಿಗ್ನವಾಗಿದೆ. ಆದ್ದರಿಂದ ದಯವಿಟ್ಟು ನನ್ನ ಮೇಲೆ ಅನುಗ್ರಹ ತೋರು ಮತ್ತು ಹೇ ದೇವಾಧಿ ದೇವನೇ, ವಿಶ್ವಾಶ್ರಯನೇ. ದೇವೋತ್ತಮ ಪುರುಷನಾಗಿ ನಿನ್ನ ರೂಪವನ್ನು ಮತ್ತೆ ಪ್ರಕಟಿಸು.**

**ಭಾವಾರ್ಥ :** ಅರ್ಜುನನು ಬಹು ಪ್ರಿಯ ಸಖನಾದುದರಿಂದ, ಕೃಷ್ಣನೊಂದಿಗೆ ಸದಾ ವಿಶ್ವಾಸಪಾತ್ರನು ಮತ್ತು ಪ್ರಿಯ ಸಖನಾಗಿ ತನ್ನ ಸಖನ ವೈಭವದಿಂದ ಹರ್ಷಿತನು. ಕೃಷ್ಣನು ಪರಮ ದೇವೋತ್ತಮ ಪುರುಷನು ಮತ್ತು ಅಂಥ ಅದ್ಭುತ ವಿಶ್ವರೂಪ ತೋರ ಬಲ್ಲವನೆಂದು ಕಂಡು ಅರ್ಜುನನು ಬಹಳ ಸಂತುಷ್ಟನು. ಆದರೆ, ಅದೇ ಸಮಯದಲ್ಲಿ, ಆ ವಿಶ್ವರೂಪವನ್ನು ಕಂಡು, ತನ್ನ ಏಕಾಂತ ಸಖ್ಯದಲ್ಲಿ ತಾನು ಕೃಷ್ಣನಿಗೆ ಅನೇಕ ಅಪರಾಧ ಗಳನ್ನು ಎಸಗಿದ್ದರಿಂದ ಭೀತನು. ಹೀಗೆ ಭಯಕ್ಕೆ ಅವನಿಗೆ ಕಾರಣವಿಲ್ಲದಿದ್ದರೂ ಅವನು ಭಯದಿಂದ ಉದ್ವಿಗ್ನ. ಅವನು, ಯಾವುದೇ ರೂಪವನ್ನು ಧರಿಸಬಲ್ಲವನಾದ್ದರಿಂದ, ಕೃಷ್ಣನು ತನ್ನ ನಾರಾಯಣ ರೂಪ ತೋರಬೇಕೆಂದು ಅರ್ಜುನನು ಕೇಳುತ್ತಿದ್ದಾನೆ. ಭೌತಿಕ ಜಗತ್ತು ತಾತ್ಕಾಲಿಕವಾಗಿರುವಂತೆ ಈ ವಿಶ್ವರೂಪವು ಭೌತಿಕ ಮತ್ತು ತಾತ್ಕಾಲಿಕ. ಆದರೆ, ವೈಕುಂಠ ಲೋಕಗಳಲ್ಲಿ ಅವನ ದಿವ್ಯರೂಪವು ಚತುರ್ಭುಜ ನಾರಾಯಣ ರೂಪ ವಾಗಿರುತ್ತದೆ. ಪರವ್ಯೋಮದಲ್ಲಿ ಅಸಂಖ್ಯ ಗ್ರಹಗಳಿವೆ, ಮತ್ತು ಆ ಪ್ರತಿಯೊಂದರಲ್ಲಿ ಕೃಷ್ಣನು ವಿವಿಧ ನಾಮಗಳಿಂದ ತನ್ನ ಸಮಗ್ರ ಉದ್ಭೂತಿಗಳಲ್ಲಿ ಸನ್ನಿಹಿತನು. ಹೀಗೆ ಅರ್ಜುನನು ವೈಕುಂಠ ಲೋಕಗಳಲ್ಲಿ ಅಭಿವ್ಯಕ್ತ ರೂಪಗಳಲ್ಲಿ ಒಂದನ್ನು ನೋಡ ಬಯಸಿದನು. ಪ್ರತಿಯೊಂದು ವೈಕುಂಠಲೋಕದಲ್ಲಿ ಚತುರ್ಭುಜ ನಾರಾಯಣ ರೂಪವು ಇರುವುದು ನಿಜ. ಆದರೆ ಆ ಚತುರ್ಭುಜಗಳು-ಶಂಖ, ಗದೆ, ಪದ್ಮ ಮತ್ತು ಚಕ್ರ-ಭಿನ್ನ ಸಂಕೇತಗಳನ್ನು ಧಾರಣ ಮಾಡಿರುತ್ತವೆ. ಕರ ವೈವಿಧ್ಯಾನುಸಾರ ಈ ನಾಲ್ಕು ವಸ್ತುಗಳು ಧರಿಸಲ್ಪಟ್ಟು ನಾರಾಯಣನು ನಾನಾ ವಿಧ ನಾಮವುಳ್ಳವನು. ಈ ಎಲ್ಲ ರೂಪಗಳು ಕೃಷ್ಣನೊಂದಿಗೆ ಏಕ; ಆದ್ದರಿಂದ ಅರ್ಜುನನು ಅವನ ಚತುರ್ಭುಜ ರೂಪವನ್ನು ನೋಡಲು ನಿವೇದಿಸಿಕೊಂಡನು.

**ಕಿರೀಟಿನಂ ಗದಿನಂ ಚಕ್ರಹಸ್ತಮ್**
**ಇಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ ।**
**ತೇನೈವ ರೂಪೇಣ ಚತುರ್ಭುಜೇನ**
**ಸಹಸ್ರಬಾಹೋ ಭವ ವಿಶ್ವಮೂರ್ತೇ ॥ ೪೬ ॥**

ಕಿರೀಟಿನಂ—ಕಿರೀಟ ಸಹಿತ, ಗದಿನಮ್—ಗದೆಯೊಡನೆ, ಚಕ್ರಹಸ್ತಮ್—ಚಕ್ರ ಪಾಣಿಯಾಗಿ, ಇಚ್ಛಾಮಿ—ಬಯಸುತ್ತೇನೆ, ತ್ವಾಮ್—ನಿನ್ನನ್ನು, ದ್ರಷ್ಟುಮ್—

ನೋಡಲು, ಅಹಮ್—ನಾನು, ತಥಾಏವ—ಆ ಸ್ಥಿತಿಯಲ್ಲಿ, ತೇನಏವ—ಅದರಲ್ಲಿ, ರೂಪೇಣ—ರೂಪದಿಂದ, ಚತುಃ-ಭುಜೇನ—ಚತುರ್ಭುಜ, ಸಹಸ್ರ-ಬಾಹೋ—ಹೇ ಸಹಸ್ರ ಬಾಹುವೇ, ಭವ—ಆಗು, ವಿಶ್ವ-ಮೂರ್ತೇ—ಹೇ ವಿಶ್ವರೂಪಿಯೇ.

**ಹೇ ವಿಶ್ವರೂಪಿಯೇ, ಹೇ ಸಹಸ್ರಬಾಹುವೇ, ನಾನು ನಿನ್ನನ್ನು ಕಿರೀಟಧಾರಿ, ಗದೆ, ಚಕ್ರ, ಶಂಖ ಮತ್ತು ಪದ್ಮಪಾಣಿಯಾಗಿ ಚತುರ್ಭುಜ ರೂಪದಲ್ಲಿ ನೋಡ ಬಯಸುತ್ತೇನೆ. ಆ ರೂಪದಲ್ಲಿ ನಿನ್ನನ್ನು ನೋಡಬೇಕೆಂದು ನನ್ನ ಇಚ್ಛೆ.**

**ಭಾವಾರ್ಥ :** ಬ್ರಹ್ಮ ಸಂಹಿತೆಯಲ್ಲಿ (5.39) **ರಾಮಾದಿ-ಮೂರ್ತಿಷು ಕಲಾನಿಯ ಮೇನ ತಿಷ್ಠನ್** ಎಂದು ಹೇಳಿದೆ. ಭಗವಂತನು ನೂರಾರು, ಸಹಸ್ರಾರು ರೂಪಗಳಲ್ಲಿ ಶಾಶ್ವತವಾಗಿ ಸನ್ನಿವೇಶಿತನು, ಮತ್ತು ರಾಮ, ನೃಸಿಂಹ, ನಾರಾಯಣ ಮೊದಲಾದಂಥ ರೂಪಗಳು ಪ್ರಧಾನ ರೂಪಗಳು. ಅಸಂಖ್ಯರೂಪಗಳಿವೆ, ಆದರೆ ಅರ್ಜುನನು, ತಾತ್ಕಾಲಿಕ ವಿಶ್ವರೂಪವನ್ನು ಧರಿಸಿರುವ ಮೂಲ ದೇವೋತ್ತಮ ಪುರುಷನು ಕೃಷ್ಣ ನೆಂಬುದನ್ನು ತಿಳಿದಿದ್ದನು. ಈಗ ಅವನು ಆಧ್ಯಾತ್ಮರೂಪವಾದ ನಾರಾಯಣ ರೂಪ ವನ್ನು ನೋಡಲು ಕೇಳುತ್ತಿದ್ದಾನೆ. ಕೃಷ್ಣನು ಮೂಲ ದೇವೋತ್ತಮ ಪುರುಷನು ಮತ್ತು ಇತರ ರೂಪಗಳು ಅವನಿಂದ ಉತ್ಪನ್ನ ಎಂಬ ಶ್ರೀಮದ್ ಭಾಗವತದ ನಿರೂಪಣೆಯನ್ನು ಈ ಶ್ಲೋಕವು ನಿಸ್ಸಂದೇಹವಾಗಿ ಸ್ಥಾಪಿಸುತ್ತದೆ. ಅವನು ತನ್ನ ಸಮಗ್ರ ವಿಸ್ತರಣೆಗಳಿಂದ ಭಿನ್ನನಲ್ಲ, ಮತ್ತು ಅವನು ತನ್ನ ಅಸಂಖ್ಯ ರೂಪಗಳಿಲ್ಲದರಲ್ಲಿ, ಭಗವಂತನು ಈ ಎಲ್ಲ ರೂಪಗಳಲ್ಲಿ ಅವನು ಯುವಕನಂತೆ ನೂತನನು. ಅದೇ ಪರಮ ದೇವೋತ್ತಮ ಪುರುಷನ ನಿತ್ಯ ಲಕ್ಷಣ. ಕೃಷ್ಣನನ್ನು ತಿಳಿದವನು ಭೌತಿಕ ಜಗತ್ತಿನ ಸಕಲ ಕಲ್ಮಷಗಳಿಂದ ತಕ್ಷಣ ಮುಕ್ತನಾಗುತ್ತಾನೆ.

**ಶ್ರೀಭಗವಾನುವಾಚ**

**ಮಯಾ ಪ್ರಸನ್ನೇನ ತವಾರ್ಜುನೇದಂ**
**ರೂಪಂ ಪರಂ ದರ್ಶಿತಮಾತ್ಮಯೋಗಾತ್ ।**
**ತೇಜೋಮಯಂ ವಿಶ್ವಮನನ್ತಮಾದ್ಯಂ**
**ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಮ್ ॥ ೪೭ ॥**

ಶ್ರೀ ಭಗವಾನ್‌ಉವಾಚ—ಪರಮ ದೇವೋತ್ತಮ ಪುರುಷನು ನುಡಿದನು, ಮಯಾ—ನನ್ನಿಂದ, ಪ್ರಸನ್ನೇನ—ಪ್ರಸನ್ನನಾಗಿ, ತವ—ನಿನಗೆ, ಅರ್ಜುನ—ಹೇ ಅರ್ಜುನ, ಇದಮ್—ಈ, ರೂಪಮ್—ರೂಪವನ್ನು, ಪರಮ್-ದಿವ್ಯ, ದರ್ಶಿತಮ್—ತೋರಿಸಿದ, ಆತ್ಮ-ಯೋಗಾತ್—ನನ್ನ ಅಂತರಂಗ ಶಕ್ತಿಯಿಂದ, ತೇಜಃ ಮಯಮ್—ತೇಜೋಮಯ, ವಿಶ್ವಮ್—ಇಡೀ ವಿಶ್ವ, ಅನನ್ತಮ್—ಅಪರಿಮಿತ, ಆದ್ಯಮ್—ಮೂಲ, ಯತ್—ಯಾವುದು, ಮೇ—ನನ್ನ, ತ್ವತ್-ಅನ್ಯೇನ—ನಿನ್ನನ್ನುಳಿದು, ನ ದೃಷ್ಟ-ಪೂರ್ವಮ್—ಬೇರೆ ಯಾರೂ ಹಿಂದೆ ಕಂಡಿಲ್ಲ.

**ಪರಮ ದೇವೋತ್ತಮ ಪುರುಷನು ನುಡಿದನು : ನನ್ನ ಪ್ರಿಯ ಅರ್ಜುನನೇ, ನನ್ನ ಅಂತರಂಗ ಶಕ್ತಿಯಿಂದ ಭೌತಿಕ ಜಗತ್ತಿನಲ್ಲಿ ಈ ಪರಮ ವಿಶ್ವರೂಪವನ್ನು ಪ್ರಸನ್ನನಾಗಿ ನಿನಗೆ ತೋರಿಸಿದ್ದೇನೆ. ನಿನಗಿಂತ ಮುಂಚೆ, ಯಾರೂ, ಅಪರಿಮಿತ ಮತ್ತು ಪೂರ್ಣ ತೇಜೋಮಯ ಈ ಮೂಲ ರೂಪವನ್ನು ಎಂದೂ ಕಂಡಿಲ್ಲ.**

**ಭಾವಾರ್ಥ :** ಅರ್ಜುನನು ಪರಮ ಪ್ರಭುವಿನ ವಿಶ್ವರೂಪವನ್ನು ನೋಡಬಯಸಿದನು, ಆದ್ದರಿಂದ ಶ್ರೀಕೃಷ್ಣನು ತನ್ನ ಭಕ್ತ ಅರ್ಜುನನ ಮೇಲೆ ಅನುಗ್ರಹಿಸಿ ಪೂರ್ಣ ತೇಜೋಮಯ ಮತ್ತು ಐಶ್ವರ್ಯಯುಕ್ತ ತನ್ನ ವಿಶ್ವರೂಪವನ್ನು ತೋರಿದನು. ಈ ರೂಪವು ಸೂರ್ಯನಂತೆ ಪ್ರಕಾಶಮಯವಾಗಿತ್ತು, ಮತ್ತು ಅದರ ಅನೇಕ ಮುಖಗಳು ಒಡನೆಯೇ ಬದಲಾಗುತ್ತಿದ್ದವು. ತನ್ನ ಸಖ ಅರ್ಜುನನ ಇಚ್ಛಾಪೂರ್ತಿಗಾಗಿ ಕೃಷ್ಣನು ಈ ರೂಪವನ್ನು ತೋರಿದನು. ಮಾನವನ ಊಹಾಪೋಹಕ್ಕೆ ಅಚಿಂತ್ಯವಾದ ಈ ರೂಪವು ಅವನ ಅಂತರಂಗ ಶಕ್ತಿಯ ಮೂಲಕ ಕೃಷ್ಣನಿಂದ ವ್ಯಕ್ತಮಾಡಲ್ಪಟ್ಟಿತು. ಅರ್ಜುನನಿಗಿಂತ ಮುಂಚೆ ಯಾರೂ ಭಗವಂತನ ಈ ವಿಶ್ವರೂಪವನ್ನು ಕಂಡಿರಲಿಲ್ಲ. ಆದರೆ ಆ ರೂಪವನ್ನು ಅರ್ಜುನನಿಗೆ ತೋರಿಸಿದ್ದರಿಂದ ಸ್ವರ್ಗಲೋಕಗಳಲ್ಲಿಯ ಮತ್ತು ಅಂತರಿಕ್ಷದ ಇತರ ಲೋಕಗಳಲ್ಲಿಯ ಇತರ ಭಕ್ತರು ಕೂಡ ಅದನ್ನು ಕಾಣಬಲ್ಲವರಾದರು. ಅವರು ಮುಂಚೆ ಅದನ್ನು ಕಂಡಿರಲಿಲ್ಲ, ಆದರೆ ಅರ್ಜುನನ ನಿಮಿತ್ತವಾಗಿ ಅವರು ಕೂಡ ಅದನ್ನು ಕಾಣಲು ಶಕ್ತರಾದರು. ಅರ್ಥಾತ್, ಕೃಷ್ಣಾನುಗ್ರಹದಿಂದ ಅರ್ಜುನನಿಗೆ ತೋರಿದ ವಿಶ್ವರೂಪವನ್ನು ಪರಂಪರೆಯ ಎಲ್ಲ ಭಗವದ್ಭಕ್ತರು ನೋಡಲು ಸಾಧ್ಯವಾಯಿತು. ಕೃಷ್ಣನು ಶಾಂತಿ ಸಂಧಾನಕ್ಕಾಗಿ ದುರ್ಯೋಧನನಲ್ಲಿಗೆ ಹೋದಾಗ ದುರ್ಯೋಧನನಿಗೂ ಕೂಡ ಈ ರೂಪ ತೋರಿದ್ದನೆಂದು ಕೆಲವರು ವ್ಯಾಖ್ಯಾನ ಮಾಡಿದ್ದಾರೆ. ದುರ್ದೈವದಿಂದ, ದುರ್ಯೋಧನನು ಶಾಂತಿ ಸಂಧಾನವನ್ನು ಒಪ್ಪಿಕೊಳ್ಳಲಿಲ್ಲ, ಆದರೆ ಆ ಕಾಲದಲ್ಲಿ ಕೃಷ್ಣನು ತನ್ನ ಕೆಲವು ವಿಶ್ವರೂಪಗಳನ್ನು ತೋರಿದನು. ಆ ರೂಪಗಳು ಅರ್ಜುನನಿಗೆ ತೋರಿದ ರೂಪಗಳಿಂದ ಭಿನ್ನ. ಆದರೆ ಈ ರೂಪವನ್ನು ಯಾರೂ ಎಂದೂ ಮುಂಚೆ ನೋಡಿರಲಿಲ್ಲ ಎಂದು ಸ್ಪಷ್ಟವಾಗಿ ಹೇಳಿದೆ.

**ನ ವೇದಯಜ್ಞಾಧ್ಯಯನೈರ್ನ ದಾನೈರ್**
**ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ ।**
**ಏವಂರೂಪಃ ಶಕ್ಯ ಅಹಂ ನೃಲೋಕೇ**
**ದ್ರಷ್ಟುಂ ತ್ವದನ್ಯೇನ ಕುರುಪ್ರವೀರ ॥ ೪೮ ॥**

ನ—ಎಂದಿಗೂ ಇಲ್ಲ, ವೇದ-ಯಜ್ಞ—ಯಜ್ಞದಿಂದ, ಅಧ್ಯಯನೈಃ—ಅಥವಾ ವೇದಾಧ್ಯಯನದಿಂದ, ನ—ಎಂದಿಗೂ ಇಲ್ಲ, ದಾನೈಃ—ದಾನದಿಂದ, ನ—ಎಂದಿಗೂ ಇಲ್ಲ, ಚ—ಕೂಡ, ಕ್ರಿಯಾಭಿಃ—ಪುಣ್ಯ ಕರ್ಮಗಳಿಂದ, ನ—ಎಂದೂ ಇಲ್ಲ, ತಪೋಭಿಃ—ಕಠೋರ ತಪಸ್ಸುಗಳಿಂದ, ಉಗ್ರೈಃ—ಉಗ್ರ, ಏವಮ್-ರೂಪಃ—ಈ ರೂಪದಲ್ಲಿ, ಶಕ್ಯಃ—ಸಾಧ್ಯ, ಅಹಮ್—ನಾನು, ನೃಲೋಕೇ—ಈ ಭೌತಿಕ

ಜಗತ್ತಿನಲ್ಲಿ, ದ್ರಷ್ಟುಮ್—ನೋಡಲು, ತ್ವತ್—ನೀನಲ್ಲದೆ, ಅನ್ಯೇನ—ಅನ್ಯರಿಂದ, ಕುರು-ಪ್ರವೀರ—ಕುರು ವೀರರಲ್ಲಿ ಶ್ರೇಷ್ಠನೇ.

**ಹೇ ಶ್ರೇಷ್ಠ ಕುರುವೀರನೇ, ನಿನಗಿಂತ ಮುಂಚೆ ಯಾರೂ ಎಂದೂ ಈ ನನ್ನ ವಿಶ್ವರೂಪವನ್ನು ಕಂಡಿಲ್ಲ, ಏಕೆಂದರೆ ವೇದಾಧ್ಯಯನದಿಂದಾಗಲಿ, ಅಥವಾ ಯಜ್ಞಾಚರಣೆಯಿಂದಾಗಲಿ, ಅಥವಾ ದಾನದಿಂದಾಗಲಿ, ಅಥವಾ ಪುಣ್ಯಕರ್ಮಗಳಿಂದಾಗಲಿ, ಅಥವಾ ಕಠೋರ ತಪಸ್ಸಿನಿಂದಾಗಲಿ ಈ ಭೌತಿಕ ಜಗತ್ತಿನಲ್ಲಿ ಈ ರೂಪದಲ್ಲಿ ನನ್ನನ್ನು ಕಾಣಲಾಗದು.**

**ಭಾವಾರ್ಥ :** ಈ ಸಂಬಂಧದಲ್ಲಿ ದಿವ್ಯ ದೃಷ್ಟಿಯನ್ನು ಸ್ಪಷ್ಟವಾಗಿ ಅರಿತುಕೊಳ್ಳಬೇಕು. ದಿವ್ಯ ದೃಷ್ಟಿಯನ್ನು ಯಾರು ಹೊಂದಬಹುದು ? ದೈವೀ ಎಂದರೆ ದೈವೀಕ. ಒಬ್ಬನು ದೇವತೆಯಂಥ ದಿವ್ಯ ಸ್ಥಾನವನ್ನು ಹೊಂದಿದ ಹೊರತು, ಅವನು ದಿವ್ಯ ದೃಷ್ಟಿಯನ್ನು ಹೊಂದಲಾರನು. ಮತ್ತು ದೇವತೆ ಎಂದರೇನು ? ಶ್ರೀವಿಷ್ಣುವಿನ ಭಕ್ತರಾದವರು ದೇವತೆಗಳೆಂದು ವೇದಶಾಸ್ತ್ರಗಳಲ್ಲಿ ಹೇಳಿದೆ. **(ವಿಷ್ಣು-ಭಕ್ತಾಃ ಸ್ಮೃತಾ ದೇವಾಃ)** ನಾಸ್ತಿಕರಾದವರು, ಎಂದರೆ, ವಿಷ್ಣುವಿನಲ್ಲಿ ನಂಬಿಕೆ ಇಲ್ಲದವರು, ಅಥವಾ ಕೃಷ್ಣನ ವ್ಯಕ್ತಿಶೂನ್ಯ ಭಾಗವನ್ನು ಮಾತ್ರ ಪರಮವೆಂದು ತಿಳಿಯುವವರು, ದಿವ್ಯದೃಷ್ಟಿಯನ್ನು ಹೊಂದಲಾಗದು. ಏಕಕಾಲದಲ್ಲಿ ಕೃಷ್ಣನನ್ನು ನಿಂದಿಸಿ ಮತ್ತು ದೈವದೃಷ್ಟಿಯನ್ನು ಹೊಂದುವುದು ಅಸಂಭವ. ದಿವ್ಯನಾಗದೆ ಒಬ್ಬನು ದಿವ್ಯ ದೃಷ್ಟಿಯನ್ನು ಹೊಂದಲಾರನು. ಅರ್ಥಾತ್ ದಿವ್ಯ ದೃಷ್ಟಿಯುಳ್ಳವರು ಕೂಡ ಅರ್ಜುನನಂತೆ ನೋಡಬಹುದು.

ಭಗವದ್ಗೀತೆಯು ವಿಶ್ವರೂಪದ ವರ್ಣನೆ ನೀಡುತ್ತದೆ. ಅರ್ಜುನನಿಗಿಂತ ಮುಂಚೆ ಯಾರಿಗೂ ಈ ವರ್ಣನೆ ತಿಳಿದಿರಲಿಲ್ಲವಾದರೂ, ಈ ಪ್ರಸಂಗದ ತರುವಾಯ ಈಗ ಒಬ್ಬನು ವಿಶ್ವರೂಪದ ಒಂದು ಕಲ್ಪನೆಯನ್ನಾದರೂ ಹೊಂದಬಹುದು. ವಾಸ್ತವಿಕವಾಗಿ ದೈವೀಕರಾದವರು ಭಗವಂತನ ವಿಶ್ವರೂಪವನ್ನು ನೋಡಬಹುದು. ಆದರೆ ಕೃಷ್ಣನ ಶುದ್ಧ ಭಕ್ತನಾಗದೆ ಯಾರು ಕೂಡ ದೈವೀಕರಾಗಲಾರರು. ವಾಸ್ತವಿಕವಾಗಿ ದೇವ ಸ್ವಭಾವದ ಭಕ್ತರು ಮತ್ತು ದಿವ್ಯದೃಷ್ಟಿಯುಳ್ಳವರು ಭಗವಂತನ ವಿಶ್ವರೂಪ ದರ್ಶನದಲ್ಲಿ ಬಹಳಷ್ಟು ಆಸಕ್ತರಲ್ಲ. ಹಿಂದಿನ ಶ್ಲೋಕದಲ್ಲಿ ವರ್ಣಿಸಿದಂತೆ, ಅರ್ಜುನನು ಶ್ರೀಕೃಷ್ಣನನ್ನು ವಿಷ್ಣುವಾಗಿ ಚತುರ್ಭುಜರೂಪವನ್ನು ನೋಡಲಿಚ್ಛಿಸಿದನು, ಮತ್ತು ಅವನು ವಸ್ತುತಃ ವಿಶ್ವರೂಪದಿಂದ ಭೀತನಾದನು.

ಈ ಶ್ಲೋಕದಲ್ಲಿ **ವೇದಯಜ್ಞಾಧ್ಯಯನೈಃ** ಎಂಬ ಕೆಲವು ಮಹತ್ವದ ಪದಗಳಿವೆ. ಅವು ವೇದ ಸಾಹಿತ್ಯಾಧ್ಯಯನ ಮತ್ತು ಯಜ್ಞನಿಯಮಗಳ ವಿಷಯವನ್ನು ಉಲ್ಲೇಖಿಸುತ್ತವೆ. ವೇದ (ಋಗ್, ಯಜುರ್, ಸಾಮ ಮತ್ತು ಅಥರ್ವ)ದಂಥ ನಾಲ್ಕು ವೇದಗಳನ್ನು, ಮತ್ತು ಹದಿನೆಂಟು ಪುರಾಣಗಳನ್ನು, ಉಪನಿಷತ್ತುಗಳನ್ನು ಮತ್ತು ವೇದಾಂತ ಸೂತ್ರಗಳಂಥ ಎಲ್ಲ ಬಗೆಯ ವೇದ ಸಾಹಿತ್ಯವನ್ನು ಸೂಚಿಸುತ್ತದೆ. ಒಬ್ಬನು ಇವುಗಳನ್ನು ಮನೆಯಲ್ಲಿ ಅಥವಾ ಬೇರೆಡೆ ಅಧ್ಯಯನ ಮಾಡಬಹುದು. ಅದೇ ಪ್ರಕಾರ, ಯಜ್ಞ

ವಿಧಾನಗಳ ಅಧ್ಯಯನಕ್ಕಾಗಿ—ಕಲ್ಪ-ಸೂತ್ರಗಳು ಮತ್ತು ಮೀಮಾಂಸಾ ಸೂತ್ರಗಳು—ಎಂಬ ಸೂತ್ರಗಳಿವೆ. **ದಾನೈಃ** ಎಂಬುದು ಭಗವಂತನ ದಿವ್ಯ ಪ್ರೀತಿಯುತ ಸೇವಾನಿರತರಾದಂಥ—ಬ್ರಾಹ್ಮಣರು ಮತ್ತು ವೈಷ್ಣವರು—ಯೋಗ್ಯರಿಗೆ ಕೊಡುವ ದಾನವನ್ನು ಸೂಚಿಸುತ್ತದೆ. ಅದೇ ಪ್ರಕಾರ, 'ಪುಣ್ಯಕರ್ಮಗಳು' ಎಂಬುದು ಅಗ್ನಿ-ಹೋತ್ರ ಮತ್ತು ಭಿನ್ನ ಭಿನ್ನ ವರ್ಣಗಳ ವಿಧಿತ ಕರ್ಮಗಳನ್ನು ಸೂಚಿಸುತ್ತದೆ. ಸ್ವಇಚ್ಛೆಯಿಂದ ಯಾವುದೋ ದೈಹಿಕ ತೊಂದರೆಯನ್ನು ಅಂಗೀಕರಿಸುವುದನ್ನು ತಪಸ್ಯ ಎಂದು ಕರೆದಿದೆ. ಹೀಗೆ ಒಬ್ಬನು ಈ—ದೈಹಿಕ ತಪಸ್ಸುಗಳನ್ನು, ದಾನ ಕೊಡುವುದನ್ನು, ವೇದಾಧ್ಯಯನ, ಇತ್ಯಾದಿ ಈ ಎಲ್ಲವುಗಳನ್ನು ಆಚರಿಸಬಹುದು, ಆದರೆ, ಅರ್ಜುನನಂಥ ಭಕ್ತನಾದ ಹೊರತು, ಆ ವಿಶ್ವ ರೂಪವನ್ನು ನೋಡುವುದು ಅಸಂಭವ. ವ್ಯಕ್ತಿಶೂನ್ಯವಾದಿಗಳು ತಾವು ಭಗವಂತನ ವಿಶ್ವ ರೂಪ ನೋಡುತ್ತಿರುವುದಾಗಿ ಊಹಿಸಿಕೊಳ್ಳುತ್ತಾರೆ, ಆದರೆ ವ್ಯಕ್ತಿಶೂನ್ಯವಾದಿಗಳು ಭಕ್ತರಲ್ಲ ಎಂಬುದನ್ನು ಭಗವದ್ಗೀತೆಯಿಂದ ನಾವು ಅರಿತುಕೊಳ್ಳುತ್ತೇವೆ. ಆದ್ದರಿಂದ ಅವರು ಭಗವಂತನ ವಿಶ್ವರೂಪ ನೋಡಲು ಶಕ್ತರಲ್ಲ.

ಅವತಾರಗಳನ್ನು ಸೃಷ್ಟಿಸುವ ಅನೇಕರಿದ್ದಾರೆ. ಅವರು ತಪ್ಪಾಗಿ ಸಾಮಾನ್ಯ ಮಾನವನೊಬ್ಬನನ್ನು ಅವತಾರವೆಂದು ಹೇಳುತ್ತಾರೆ, ಆದರೆ ಇದೆಲ್ಲವೂ ಮೂರ್ಖತನ. ನಾವು ಭಗವದ್ಗೀತಾ ತತ್ವಗಳನ್ನು ಅನುಸರಿಸಬೇಕು, ಇಲ್ಲದಿದ್ದರೆ ಪರಿಪೂರ್ಣ ಆಧ್ಯಾತ್ಮ ಜ್ಞಾನ ಪ್ರಾಪ್ತಿ ಅಸಂಭವ. ಭಗವದ್ಗೀತೆಯು ಭಗವದ್ ವಿಜ್ಞಾನದ ಪ್ರಾಥಮಿಕ ಅಧ್ಯಯನ ಎಂದು ಪರಿಗಣಿಸಲ್ಪಟ್ಟಿದ್ದರೂ, ಅದು ಎಷ್ಟು ಪರಿಪೂರ್ಣವೆಂದರೆ ಯಾವುದು ಏನು ಎಂಬ ವ್ಯತ್ಯಾಸವನ್ನು ತಿಳಿದುಕೊಳ್ಳಲು ಅದು ಒಬ್ಬನನ್ನು ಸಮರ್ಥಗೊಳಿಸುತ್ತದೆ. ಮಿಥ್ಯಾ ಅವತಾರ ಅನುಯಾಯಿಗಳು ತಾವೂ ಕೂಡ ಭಗವಂತನ ದಿವ್ಯಾವತಾರ ವಿಶ್ವರೂಪವನ್ನು ಕಂಡಿದ್ದೇವೆ ಎಂದು ಹೇಳಬಹುದು. ಆದರೆ ಒಬ್ಬನು ಕೃಷ್ಣಭಕ್ತನಾಗದ ಹೊರತು, ಭಗವಂತನ ವಿಶ್ವರೂಪವನ್ನು ಕಾಣಲಾರನು ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿರುವುದರಿಂದ, ಅದು ಅಂಗೀಕಾರಕ್ಕೆ ಅನರ್ಹ. ಆದ್ದರಿಂದ ಒಬ್ಬನು ಮೊಟ್ಟಮೊದಲು ಕೃಷ್ಣನ ಶುದ್ಧ ಭಕ್ತನಾಗಬೇಕು; ಆಗ ಅವನು ತಾನು ಕಂಡ ವಿಶ್ವರೂಪವನ್ನು ತೋರಿಸಬಲ್ಲೆನೆಂದು ಹೇಳಿಕೊಳ್ಳಬಹುದು. ಕೃಷ್ಣಭಕ್ತನಾದವನು ಮಿಥ್ಯಾ ಅವತಾರಗಳನ್ನು ಅಥವಾ ಮಿಥ್ಯಾ ಅವತಾರಗಳ ಅನುಯಾಯಿಗಳನ್ನು ಅಂಗೀಕರಿಸಲಾರನು.

**ಮಾ ತೇ ವ್ಯಥಾ ಮಾ ಚ ವಿಮೂಢಭಾವೋ**
**ದೃಷ್ಟ್ವಾ ರೂಪಂ ಘೋರ ಮೀದೃಙ್ ಮಮೇದಮ್ ।**
**ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ**
**ತದೇವ ಮೇ ರೂಪಮಿದಂ ಪ್ರಪಶ್ಯ ॥ ೪೯ ॥**

ಮಾ—ಆಗದಿರಲಿ, ತೇ—ನಿನಗೆ, ವ್ಯಥಾ—ವ್ಯಥೆ, ಮಾ—ಆಗದಿರಲಿ, ಚ—ಕೂಡ, ವಿಮೂಢ-ಭಾವಃ—ದಿಗ್ಭ್ರಮೆ, ದೃಷ್ಟ್ವಾ—ನೋಡಿ, ರೂಪಮ್—ರೂಪವನ್ನು, ಘೋರಮ್—ಘೋರವಾದ, ಈದೃಕ್—ಯಥಾರೂಪ, ಮಮ—ನನ್ನ, ಇದಮ್—

ಈ, ವ್ಯಪೇತ-ಭೀಃ—ಸಕಲ ಭಯ ಮುಕ್ತನಾಗಿ, ಪ್ರೀತ-ಮನಾಃ—ಪ್ರೀತ ಮನಸ್ಕನಾಗಿ, ಪುನಃ—ಮತ್ತೆ, ತ್ವಮ್—ನೀನು, ತತ್—ಆ, ಏವ—ಹೀಗೆ, ಮೇ—ನನ್ನ, ರೂಪಮ್—ರೂಪವನ್ನು, ಇದಮ್—ಇದು, ಪ್ರಪಶ್ಯ—ನೋಡು.

**ನನ್ನ ಈ ಭಯಾನಕ ರೂಪವನ್ನು ಕಂಡು ನೀನು ಉದ್ವಿಗ್ನ ಮತ್ತು ದಿಗ್ಭ್ರಮಿತನಾಗಿರುವೆ. ಈಗ ಅದು ಮುಗಿಯಲಿ. ನನ್ನ ಭಕ್ತನೇ, ಎಲ್ಲ ಉದ್ವಿಗ್ನಗಳಿಂದ ಮುಕ್ತನಾಗು. ಶಾಂತ ಮನಸ್ಸಿನಿಂದ ಈಗ ನೀನು ಬಯಸಿದ ರೂಪವನ್ನು ನೋಡಬಹುದು.**

**ಭಾವಾರ್ಥ :** ಭಗವದ್ಗೀತಾರಂಭದಲ್ಲಿ ಪೂಜ್ಯ ತಾತ ಮತ್ತು ಗುರುಗಳಾದ ಭೀಷ್ಮ ಮತ್ತು ದ್ರೋಣರನ್ನು ಕೊಲ್ಲಲು ಅರ್ಜುನನು ಚಿಂತೆಗೀಡಾಗಿದ್ದನು. ಆದರೆ ಅವನು ತನ್ನ ತಾತನನ್ನು ಕೊಲ್ಲುವ ಬಗ್ಗೆ ಭೀತನಾಗಬೇಕಿಲ್ಲ ಎಂದು ಕೃಷ್ಣನು ಹೇಳಿದನು. ಧೃತರಾಷ್ಟ್ರನ ಪುತ್ರರು ಕೌರವರ ಸಭೆಯಲ್ಲಿ ದ್ರೌಪದಿಯ ವಸ್ತ್ರಾಪಹರಣಕ್ಕೆ ಯತ್ನಿಸಿದಾಗ, ಭೀಷ್ಮ ದ್ರೋಣರು ಮೌನವಾಗಿದ್ದರು, ಮತ್ತು ಅಂಥ ಕರ್ತವ್ಯ ನಿರ್ಲಕ್ಷತೆಗಾಗಿ ಅವರು ಕೊಲ್ಲಲ್ಪಡಬೇಕು. ಇವರೆಲ್ಲರೂ ತಮ್ಮ ನ್ಯಾಯಬಾಹಿರ ಕಾರ್ಯಕ್ಕಾಗಿ ಆಗಲೇ ಕೊಲ್ಲಲ್ಪಟ್ಟಿದ್ದಾರೆ ಎಂಬುದನ್ನು ಅವರಿಗೆ ತೋರಿಸಲೋಸುಗವೇ ಕೃಷ್ಣನು ಅರ್ಜುನನಿಗೆ ತನ್ನ ವಿಶ್ವರೂಪ ತೋರಿಸಿದನು. ಆ ದೃಶ್ಯವು ಅರ್ಜುನನಿಗೆ ತೋರಿಸಲ್ಪಟ್ಟಿತು, ಏಕೆಂದರೆ ಭಕ್ತರು ಸದಾ ಶಾಂತರು ಮತ್ತು ಅವರು ಅಂಥ ಭಯಾನಕ ಕಾರ್ಯಗಳನ್ನು ಮಾಡಲಾರರು. ವಿಶ್ವರೂಪ ಪ್ರಕಟನೆಯ ಉದ್ದೇಶವನ್ನು ತೋರಿಸಲಾಯಿತು; ಈಗ ಅರ್ಜುನನು ಚತುರ್ಭುಜರೂಪ ನೋಡ ಬಯಸಿದನು ಮತ್ತು ಕೃಷ್ಣನು ಅದನ್ನು ತೋರಿದನು. ಭಕ್ತನು ವಿಶ್ವರೂಪದಲ್ಲಿ ಅಷ್ಟೊಂದು ಆಸಕ್ತನಿರುವುದಿಲ್ಲ, ಏಕೆಂದರೆ ಒಬ್ಬನನ್ನು ಪ್ರೇಮಭಾವನೆಗಳ ವಿನಿಮಯಗಳಿಗೆ ಅದು ಶಕ್ತಗೊಳಿಸುವುದಿಲ್ಲ. ಭಕ್ತನು ಗೌರವಯುತ ಪೂಜ್ಯಭಾವನೆಗಳನ್ನು ಅರ್ಪಿಸಬಯಸುತ್ತಾನೆ, ಅಥವಾ ಪರಮ ದೇವೋತ್ತಮ ಪುರುಷನೊಂದಿಗೆ ಪ್ರೀತಿಯುತ ಸೇವಾ ವಿನಿಮಯ ಮಾಡಿಕೊಳ್ಳಬಹುದಾದ್ದರಿಂದ, ಅವನು ದ್ವಿಭುಜ ಕೃಷ್ಣ ರೂಪ ನೋಡಬಯಸುತ್ತಾನೆ.

**ಸಂಜಯ ಉವಾಚ—**

**ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ**
**ಸ್ವಕಂ ರೂಪಂ ದರ್ಶಯಾಮಾಸ ಭೂಯಃ ।**
**ಆಶ್ವಾಸಯಾಮಾಸ ಚ ಭೀತಮೇನಂ**
**ಭೂತ್ವಾ ಪುನಃ ಸೌಮ್ಯವಪುರ್ಮಹಾತ್ಮಾ ॥೫೦॥**

ಸಂಜಯಃ ಉವಾಚ—ಸಂಜಯನು ನುಡಿದನು, ಇತಿ—ಹೀಗೆ, ಅರ್ಜುನಮ್—ಅರ್ಜುನನಿಗೆ, ವಾಸುದೇವಃ—ಕೃಷ್ಣನು, ತಥಾ—ಆ ರೀತಿಯಲ್ಲಿ, ಉಕ್ತ್ವಾ—ಹೇಳುತ್ತ, ಸ್ವಕಮ್—ತನ್ನ ಸ್ವಂತ, ರೂಪಮ್—ರೂಪವನ್ನು, ದರ್ಶಯಾ-ಮಾಸ—ತೋರಿದನು, ಭೂಯಃ—ಮತ್ತೆ, ಆಶ್ವಾಸಯಾಮಾಸ—ಪ್ರೋತ್ಸಾಹಿಸಿದನು, ಚ—ಕೂಡ,

ಭೀತಮ್—ಭಯಂಕರ, ಏನಮ್—ಅವನ, ಭೂತ್ವಾ—ಆಗಿ, ಪುನಃ—ಮತ್ತೆ, ಸೌಮ್ಯ-ವಪುಃ—ಸುಂದರರೂಪನು, ಮಹಾ-ಆತ್ಮ—ಮಹಾತ್ಮನು.

**ಧೃತರಾಷ್ಟ್ರನಿಗೆ ಸಂಜಯನು ನುಡಿದನು; ಪರಮ ದೇವೋತ್ತಮ ಪುರುಷ ಕೃಷ್ಣನು, ಅರ್ಜುನನಿಗೆ ಹೀಗೆ ಹೇಳಿ, ಭೀತ ಅರ್ಜುನನನ್ನು ಪ್ರೋತ್ಸಾಹಿಸುತ್ತ ತನ್ನ ನಿಜ ಚತುರ್ಭುಜ ರೂಪವನ್ನು ಪ್ರದರ್ಶಿಸಿದನು ಮತ್ತು ಕೊನೆಗೆ ತನ್ನ ದ್ವಿಭುಜರೂಪವನ್ನು ತೋರಿಸಿದನು.**

**ಭಾವಾರ್ಥ :** ಕೃಷ್ಣನು ವಸುದೇವ ದೇವಕಿಯರ ಪುತ್ರನಾಗಿ ಕಾಣಿಸಿಕೊಂಡಾಗ ಅವನು ಮೊದಲು ಚತುರ್ಭುಜ ನಾರಾಯಣರೂಪನಾಗಿ ಆವಿರ್ಭೂತನಾದನು. ಆದರೆ ಅವನ ತಂದೆತಾಯಿಗಳು ಕೇಳಿಕೊಂಡಾಗ, ಅವನು ಸಾಮಾನ್ಯ ಮಗುವಾಗಿ ಕಾಣುವಂತೆ ತನ್ನನ್ನು ರೂಪಾಂತರಿಸಿಕೊಂಡನು. ಅದೇಪ್ರಕಾರ, ಅರ್ಜುನನು ಚತುರ್ಭುಜರೂಪ ದರ್ಶನದಲ್ಲಿ ಆಸಕ್ತನಿರಲಿಲ್ಲ ಎಂಬುದು ಕೃಷ್ಣನಿಗೆ ಗೊತ್ತಿತ್ತು. ಆದರೆ ಅರ್ಜುನನು ಈ ಚತುರ್ಭುಜ ರೂಪವನ್ನು ನೋಡಬಯಸಿದ್ದರಿಂದ, ಕೃಷ್ಣನು ಈ ರೂಪವನ್ನು ಕೂಡ ಮತ್ತೆ ಅವನಿಗೆ ತೋರಿಸಿ ಆಮೇಲೆ ತನ್ನ ದ್ವಿಭುಜರೂಪವನ್ನು ತೋರಿದನು. **ಸೌಮ್ಯವಪುಃ** ಪದವು ಬಹು ಮಹತ್ವದ್ದು. ಸೌಮ್ಯವಪುಃ ಬಹು ಸುಂದರರೂಪ, ಅದು ಅತ್ಯಂತ ಸುಂದರ ರೂಪವೆಂದು ತಿಳಿಯಲ್ಪಟ್ಟಿದೆ. ಇಲ್ಲಿ ಅವನು ಇದ್ದಾಗ, ಪ್ರತಿಯೊಬ್ಬನು ಕೃಷ್ಣನ ರೂಪದಿಂದಲೇ ಆಕರ್ಷಿತನಾಗಿದ್ದನು, ಮತ್ತು ಕೃಷ್ಣನು ವಿಶ್ವನಿರ್ದೇಶಕನಾದ್ದರಿಂದ ಅವನು ತನ್ನ ಭಕ್ತ ಅರ್ಜುನನ ಭಯ ನಿವಾರಣೆ ಮಾಡಿದನು, ಮತ್ತು ಅವನಿಗೆ ಮತ್ತೆ ತನ್ನಸುಂದರ ಕೃಷ್ಣ ರೂಪ ತೋರಿದನು. ಬ್ರಹ್ಮಸಂಹಿತೆಯಲ್ಲಿ(5. 38), **ಪ್ರೇಮಾಂಜನಚ್ಛುರಿತ ಭಕ್ತಿ ವಿಲೋಚನೇನ** ಎಂದು ಹೇಳಿದೆ, ಪ್ರೇಮಾಂಜನದಿಂದ ಲಿಪ್ತ ಕಣ್ಣುಗಳುಳ್ಳವನು ಮಾತ್ರ ಶ್ರೀಕೃಷ್ಣನ ಸುಂದರ ರೂಪವನ್ನು ನೋಡಬಹುದು.

**ಅರ್ಜುನ ಉವಾಚ**
**ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ ।**
**ಇದಾನೀಮಸ್ಮಿ ಸಂವೃತ್ತಃ ಸಚೇತಾಃ ಪ್ರಕೃತಿಂ ಗತಃ ॥ ೫೧ ॥**

ಅರ್ಜುನಃ-ಉವಾಚ—ಅರ್ಜುನನು ನುಡಿದನು, ದೃಷ್ಟ್ವಾ—ನೋಡಿ, ಇದಮ್—ಈ, ಮಾನುಷಮ್—ಮಾನವ, ರೂಪಮ್—ರೂಪವನ್ನು, ತವ—ನಿನ್ನ, ಸೌಮ್ಯಮ್—ಬಹು ಸುಂದರ, ಜನಾರ್ದನ—ಹೇ ವೈರಿಮರ್ದನನೇ, ಇದಾನೀಮ್—ಈಗ, ಅಸ್ಮಿ—ಆಗಿದ್ದೇನೆ, ಸಂವೃತ್ತಃ—ಸ್ತಿಮಿತಕ್ಕೆ ಬಂದ, ಸ-ಚೇತಾಃ—ನನ್ನ ಪ್ರಜ್ಞೆಯಲ್ಲಿ, ಪ್ರಕೃತಿಮ್—ನನ್ನ ಸ್ವಯಂ ಸ್ವಭಾವಕ್ಕೆ, ಗತಃ—ಹಿಂದಿರುಗಿ.

**ಅರ್ಜುನನು ಕೃಷ್ಣನನ್ನು ಅವನ ಮೂಲರೂಪದಲ್ಲಿ, ಹೀಗೆ ನೋಡಿದಾಗ ಅವನು ನುಡಿದನು : ಹೇ ಜನಾರ್ದನ, ಈ ಮಾನವ ಸದೃಶ ಬಹು ಸುಂದರವಾದ ರೂಪವನ್ನು ಕಂಡು, ನಾನೀಗ ಮನಸ್ಸಿನಲ್ಲಿ ಸ್ತಿಮಿತನಾಗಿದ್ದೇನೆ, ಮತ್ತು ನಾನು ನನ್ನ ಮೂಲ ಸ್ವಭಾವಕ್ಕೆ ಹಿಂದಿರುಗಿದ್ದೇನೆ.**

**ಭಾವಾರ್ಥ :** ಇಲ್ಲಿ **ಮಾನುಷಮ್ ರೂಪಮ್** ಪದವು ಪರಮ ದೇವೋತ್ತಮ ಪುರುಷನು ಮೂಲತಃ ದ್ವಿಭುಜನು ಎಂಬುದನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಕೃಷ್ಣನನ್ನು ಸಾಮಾನ್ಯ ವ್ಯಕ್ತಿಯೆಂಬಂತೆ ನಿಂದಿಸುವವರು ಅವನ ದೈವೀ ಸ್ವರೂಪವನ್ನು ತಿಳಿದವರಲ್ಲವೆಂದು ಇಲ್ಲಿ ತೋರಿಸಿಕೊಟ್ಟಿದೆ, ಕೃಷ್ಣನು ಸಾಮಾನ್ಯ ಮಾನವನಂತೆ ಆಗಿದ್ದರೆ, ವಿಶ್ವರೂಪವನ್ನು ತೋರಲು, ಆಮೇಲೆ ಮತ್ತೆ ಚತುರ್ಭುಜ ನಾರಾಯಣ ರೂಪವನ್ನು ತೋರಲು ಅವನಿಗೆ ಹೇಗೆ ಸಾಧ್ಯ? ಆದ್ದರಿಂದ ಕೃಷ್ಣನನ್ನು ಸಾಮಾನ್ಯ ವ್ಯಕ್ತಿ ಎಂದು ಭಾವಿಸುವವನು ಮತ್ತು ಕೃಷ್ಣನಲ್ಲಿರುವ ವ್ಯಕ್ತಿಶೂನ್ಯ ಬ್ರಹ್ಮನ್ ಮಾತನಾಡುತ್ತಿದೆ ಎಂದು ಹೇಳಿ ವಾಚಕರನ್ನು ತಪ್ಪುದಾರಿ ಹಿಡಿಸುತ್ತಿರುವವನು ಮಹತ್ತಮ ಅನ್ಯಾಯ ಮಾಡುತ್ತಿದ್ದಾನೆ ಎಂದು ಭಗವದ್ಗೀತೆಯಲ್ಲಿ ಸ್ಪಷ್ಟವಾಗಿ ಹೇಳಿದೆ. ಕೃಷ್ಣನು ವಾಸ್ತವಿಕವಾಗಿ ತನ್ನ ವಿಶ್ವರೂಪವನ್ನು ಮತ್ತು ತನ್ನ ಚತುರ್ಭುಜ ವಿಷ್ಣುರೂಪವನ್ನು ತೋರಿದ್ದಾನೆ. ಹೀಗಿರುವಾಗ ಅವನು ಹೇಗೆ ಸಾಮಾನ್ಯ ಮಾನವನಾಗುವನು ? ಶುದ್ಧ ಭಕ್ತನು ಯಾವುದು ಏನು ಎಂಬುದನ್ನು ತಿಳಿದಿರುವುದರಿಂದ, ಭಗವದ್ಗೀತೆಯನ್ನು ತಪ್ಪಾಗಿ ನಿರ್ದೇಶಿಸುವ ವ್ಯಾಖ್ಯಾನಗಳಿಂದ ಗೊಂದಲಕ್ಕೀಡಾಗುವುದಿಲ್ಲ. ಭಗವದ್ಗೀತೆಯ ಮೂಲ ಶ್ಲೋಕಗಳು ಸೂರ್ಯನಷ್ಟು ಸ್ಪಷ್ಟ, ಅವುಗಳಿಗೆ ಮೂರ್ಖ ವ್ಯಾಖ್ಯಾನಕಾರರ ದೀಪದ ಪ್ರಕಾಶ ಬೇಕಾಗಿಲ್ಲ.

**ಶ್ರೀಭಗವಾನುವಾಚ**
**ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ ।**
**ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಂಕ್ಷಿಣಃ ॥೫೨॥**

ಶ್ರೀಭಗವಾನುವಾಚ—ಪರಮ ದೇವೋತ್ತಮ ಪುರುಷನು ನುಡಿದನು, ಸುದುರ್ದರ್ಶಮ್—ಕಾಣುವುದು ಬಹು ಕಷ್ಟ; ಇದಮ್—ಈ, ರೂಪಮ್—ರೂಪವನ್ನು, ದೃಷ್ಟವಾನ್-ಅಸಿ—ನೀನು ನೋಡಿರುವಂತೆ, ಯತ್—ಯಾವುದು, ಮಮ—ನನ್ನ, ದೇವಾಃ—ದೇವತೆಗಳು, ಅಪಿ—ಕೂಡ, ಅಸ್ಯ—ಈ, ರೂಪಸ್ಯ—ರೂಪದ, ನಿತ್ಯಮ್—ನಿತ್ಯವೂ, ದರ್ಶನ—ಕಾಂಕ್ಷಿಣಃ—ನೋಡಬಯಸುವ.

**ಪರಮ ದೇವೋತ್ತಮ ಪುರುಷನು ನುಡಿದನು : ನನ್ನ ಪ್ರಿಯ ಅರ್ಜುನನೇ, ಈಗ ನೀನು ನೋಡುತ್ತಿರುವ ಈ ನನ್ನ ರೂಪವನ್ನು ಗಮನಿಸುವುದು ಬಹು ಕಷ್ಟ. ಅತ್ಯಂತ ಪ್ರಿಯವಾದ ಈ ರೂಪವನ್ನು ನೋಡುವ ಅವಕಾಶಕ್ಕಾಗಿ ದೇವತೆಗಳೂ ಕೂಡ ಸದಾ ಕಾಯುತ್ತಿರುತ್ತಾರೆ.**

**ಭಾವಾರ್ಥ :** ಈ ಅಧ್ಯಾಯದ ನಲವತ್ತೆಂಟನೆಯ ಶ್ಲೋಕದಲ್ಲಿ ಶ್ರೀಕೃಷ್ಣನು ತನ್ನ ವಿಶ್ವರೂಪ ದರ್ಶನವನ್ನು ಮುಗಿಸಿದನು, ಮತ್ತು ಈ ರೂಪವು ಅನೇಕ ಪುಣ್ಯ—ಕರ್ಮಗಳಿಂದ ಯಜ್ಞಾದಿಗಳಿಂದ ಕೂಡ ನೋಡುವುದು ಅಸಂಭವ ಎಂದು ಅರ್ಜುನನಿಗೆ ತಿಳಿಸಿ ಹೇಳುತ್ತಾನೆ.ಈಗ ಇಲ್ಲಿ **ಸು-ದುರ್ದರ್ಶಮ್** ಪದವುಉಪಯೋಗಿಸಲಾಗಿದೆ.ಅದು ಕೃಷ್ಣನ ದ್ವಿಭುಜ ರೂಪವು ಇನ್ನೂ ಹೆಚ್ಚು ರಹಸ್ಯವಾದುದು ಎಂಬುದನ್ನು ಸೂಚಿಸುತ್ತದೆ. ತಪಸ್ಸು

ವೇದಾಧ್ಯಯನ ಮತ್ತು ತಾತ್ವಿಕ ಊಹಾಪೋಹಗಳ ಜೊತೆಗೆ ಕಿಂಚಿತ್ ಭಕ್ತಿಯುಕ್ತ ಸೇವೆಯನ್ನು ಸೇರಿಸಿಕೊಂಡರೆ ಒಬ್ಬನು ಕೃಷ್ಣನ ವಿಶ್ವರೂಪವನ್ನು ನೋಡಬಹುದು. ಅದು ಸಾಧ್ಯವಾಗಬಹುದು, ಆದರೆ ಭಕ್ತಿಯ ಲೇಪವಿಲ್ಲದೆ ಒಬ್ಬನು ನೋಡಲಾಗುವುದಿಲ್ಲ, ಅದು ಈಗಾಗಲೇ ವಿವರಿಸಲ್ಪಟ್ಟಿದೆ. ಆದರೂ ಆ ವಿಶ್ವರೂಪಕ್ಕೆ ಅತೀತವಾದ ಕೃಷ್ಣನ ದ್ವಿಭುಜ ರೂಪವು ಬ್ರಹ್ಮ ಮತ್ತು ಭಗವಾನ್ ಶಿವನಂಥ ದೇವತೆಗಳಿಗೂ ಕೂಡ ನೋಡಲು ಇನ್ನೂ ಕಷ್ಟಕರವಾದುದು. ಅವರು ಅದನ್ನು ನೋಡಬಯಸುತ್ತಾರೆ, ಮತ್ತು ಅವನು ತನ್ನ ತಾಯಿ ದೇವಕಿಯ ಗರ್ಭದಲ್ಲಿರುವನೆಂದು ತಿಳಿದಾಗ ಸ್ವರ್ಗಲೋಕಗಳಿಂದ ಎಲ್ಲ ದೇವತೆಗಳು ಕೃಷ್ಣನ ಅದ್ಭುತವನ್ನು ನೋಡಲು ಬಂದರು. ಮತ್ತು ಅವನು ಆಗ ಅವರಿಗೆ ಕಾಣದಿದ್ದರೂ ಅವರು ಭಗವಂತನಿಗೆ ಸೊಗಸಾದ ಪ್ರಾರ್ಥನೆಗಳನ್ನು ಅರ್ಪಿಸಿದರು. ಅವರೆಲ್ಲ ಅವನನ್ನು ನೋಡಲು ಕಾಯುತ್ತಿದ್ದರು. ಮೂರ್ಖನು ಅವನನ್ನು ಸಾಮಾನ್ಯ ವ್ಯಕ್ತಿಯೆಂದು ಭಾವಿಸಿ ನಿಂದಿಸಬಹುದು, ಮತ್ತು ಅವನಿಗಲ್ಲದೆ ಅವನೊಳಗಿರುವ 'ಯಾವುದೋ' ವ್ಯಕ್ತಿಶೂನ್ಯತ್ವಕ್ಕೆ ಗೌರವ ಸಲ್ಲಿಸಬಹುದು, ಆದರೆ ಇವೆಲ್ಲ ಅರ್ಥಹೀನ ಲಕ್ಷಣಗಳು. ದ್ವಿಭುಜರೂಪದಲ್ಲಿ ಕೃಷ್ಣನು ವಾಸ್ತವಿಕವಾಗಿ ಬ್ರಹ್ಮ ಮತ್ತು ಶಿವರಂತಹ ದೇವತೆಗಳಿಂದ ನೋಡಲಿಚ್ಛಿಸಲ್ಪಡುತ್ತಾನೆ.

ಭಗವದ್ಗೀತೆಯಲ್ಲಿಯೂ ಕೂಡ (9.11) ದೃಢಪಟ್ಟಿದೆ, **ಅವಜಾನನ್ತಿ ಮಾಂ ಮೂಢಾ ಮಾನುಷೀಂ ತನುಮ್ ಆಶ್ರಿತಃ :** ಅವನನ್ನು ನಿಂದಿಸುವ ಮೂಢರಿಗೆ ಅವನು ಕಾಣುವುದಿಲ್ಲ. ಕೃಷ್ಣನ ದೇಹವು, ಬ್ರಹ್ಮಸಂಹಿತೆಯಲ್ಲಿ ದೃಢಪಟ್ಟಂತೆ ಮತ್ತು ಭಗವದ್ಗೀತೆಯಲ್ಲಿ ಸ್ವಯಂ ಕೃಷ್ಣನಿಂದ ದೃಢಪಟ್ಟಂತೆ, ಸಂಪೂರ್ಣವಾಗಿ ಆಧ್ಯಾತ್ಮವಾದುದು ಮತ್ತು ನಿತ್ಯ ಆನಂದಪೂರ್ಣವಾದುದು. ಅವನ ದೇಹವು ಎಂದೂ ಭೌತಿಕ ದೇಹದಂತಿಲ್ಲ. ಆದರೆ ಭಗವದ್ಗೀತೆ ಅಥವಾ ಅದೇ ಬಗೆಯ ವೇದ ಶಾಸ್ತ್ರಗಳ ಪಠನದಿಂದ ಕೃಷ್ಣನನ್ನು ಕುರಿತು ಅಧ್ಯಯನ ಮಾಡುವ ಕೆಲವರಿಗೆ, ಕೃಷ್ಣನು ಒಂದು ಸಮಸ್ಯೆ. ಭೌತಿಕ ಪ್ರಕ್ರಿಯೆಯನ್ನು ಉಪಯೋಗಿಸುವವರಿಗೆ, ಕೃಷ್ಣನು ಒಬ್ಬ ಮಹಾ ಐತಿಹಾಸಿಕ ವ್ಯಕ್ತಿ, ಮತ್ತು ಮಹಾನ್ ವಿದ್ವಾಂಸ ತಾತ್ವಿಕನು. ಆದರೆ ಅವನೊಬ್ಬ ಸಾಮಾನ್ಯ ಮಾನವ, ಮತ್ತು ಅವನು ಅಷ್ಟು ಶಕ್ತಿಸಂಪನ್ನನಾಗಿದ್ದರೂ ಕೂಡ ಅವನು ಭೌತಿಕ ದೇಹ ಅಂಗೀಕರಿಸಬೇಕಾಯಿತು ಎಂದು ಪರಿಗಣಿತ. ಕೊನೆಗೆ ಪರಮ ಸತ್ಯವು ವ್ಯಕ್ತಿಶೂನ್ಯವೆಂದು ತಿಳಿಯುತ್ತಾರೆ, ಆದ್ದರಿಂದ ಅವನ ವ್ಯಕ್ತಿಶೂನ್ಯ ಲಕ್ಷಣದಿಂದ ಅವನು ಭೌತಿಕ ಪ್ರಕೃತಿಗೆ ಸೇರಿದ ಒಂದು ವ್ಯಕ್ತಿ ಲಕ್ಷಣವನ್ನು ಅವನು ಧಾರಣ ಮಾಡಿದನು ಎಂದು ಭಾವಿಸುತ್ತಾರೆ. ಇದು ಪರಮ ಪ್ರಭುವಿನ ಭೌತಿಕ ಪರಿಗಣಿಸುವಿಕೆ. ಮತ್ತೊಂದು ಲೆಕ್ಕಾಚಾರವು ಊಹಾತ್ಮಕವಾದುದು. ಜ್ಞಾನ ಶೋಧನೆಯಲ್ಲಿರುವವರು ಕೂಡ ಕೃಷ್ಣನನ್ನು ಕುರಿತು ಊಹಾಪೋಹ ಮಾಡುತ್ತಾರೆ ಮತ್ತು ಪರಮನ ವಿಶ್ವರೂಪಕ್ಕಿಂತ ಅವನನ್ನು ಮಹತ್ವದಲ್ಲಿ ಕಡಿಮೆ ಎಂದು ಭಾವಿಸುತ್ತಾರೆ. ಅರ್ಜುನನಿಗೆ ತೋರಿಸಲಾದ ಕೃಷ್ಣನ ವಿಶ್ವರೂಪವು ಅವನ ವ್ಯಕ್ತಿಗತ ರೂಪಕ್ಕಿಂತ ಬಹಳ ಮಹತ್ವದ್ದು ಎಂದು ಭಾವಿಸುತ್ತಾರೆ. ಅವರ ಪ್ರಕಾರ, ಪರಮನ ವ್ಯಕ್ತಿಗತ

ರೂಪವು ಏನೋ ಕಾಲ್ಪನಿಕ. ಕೊನೆಯಲ್ಲಿ ಪರತತ್ತ್ವವು ವ್ಯಕ್ತಿಗತವಲ್ಲ ಎಂದು ಅವರು ನಂಬುತ್ತಾರೆ. ಆದರೆ ಭಗವದ್ಗೀತೆಯ ನಾಲ್ಕನೆಯ ಅಧ್ಯಾಯದಲ್ಲಿ ಪ್ರಮಾಣಗಳಿಂದ ಕೃಷ್ಣನ ಶ್ರವಣ ಮಾಡುವ ದಿವ್ಯ ಪ್ರಕ್ರಿಯೆಯು ವರ್ಣಿತ. ಅದು ವಾಸ್ತವಿಕ ವೈದಿಕ ಪ್ರಕ್ರಿಯೆ ಮತ್ತು ವಾಸ್ತವಿಕವಾಗಿ ವೈದಿಕ ಸಂಪ್ರದಾಯದಲ್ಲಿರುವವರು ಕೃಷ್ಣನನ್ನು ಕುರಿತು ಅಧಿಕಾರಿಗಳಿಂದ ಶ್ರವಣಮಾಡುವುದರಿಂದ ಕೃಷ್ಣನು ಪ್ರಿಯನಾಗುತ್ತಾನೆ. ನಾವು ಅನೇಕ ಸಲ ಚರ್ಚಿಸಿದಂತೆ ಕೃಷ್ಣನು ತನ್ನ ಯೋಗಮಾಯಾ ಶಕ್ತಿಯಿಂದ ಆವೃತನು. ಅವನು ಯಾರೊಬ್ಬರಿಗೂ ಮತ್ತು ಪ್ರತಿಯೊಬ್ಬರಿಗೂ ಕಾಣುವವನಲ್ಲ. ಅವನು ಯಾರಿಗೆ ಸ್ವಯಂದರ್ಶನ ನೀಡುವನೋ ಅವರಿಗೆ ಮಾತ್ರ ಕಾಣಬಲ್ಲನು. ಇದು ವೇದ ಸಾಹಿತ್ಯದಲ್ಲಿ ದೃಢಪಟ್ಟಿದೆ. ಶರಣಾಗತ ಆತ್ಮನು ವಾಸ್ತವಿಕವಾಗಿ ಪರತತ್ತ್ವವನ್ನು ಅರಿತುಕೊಳ್ಳ ಬಲ್ಲನು. ದಿವ್ಯವಾದಿಯು, ನಿರಂತರ ಕೃಷ್ಣಪ್ರಜ್ಞೆಯಿಂದ ಮತ್ತು ಕೃಷ್ಣನ ಭಕ್ತಿಯುತ ಸೇವೆಯಿಂದ ತನ್ನ ಆಧ್ಯಾತ್ಮ ದೃಷ್ಟಿಯನ್ನು ಹೊಂದಬಹುದು. ಮತ್ತು ಆ ದೃಷ್ಟಿಯಿಂದ ಕೃಷ್ಣನನ್ನು ಕಾಣಬಹುದು. ಅಂಥ ದರ್ಶನವು ದೇವತೆಗಳಿಗೂ ಅಸಂಭವ ; ಆದ್ದರಿಂದ ಕೃಷ್ಣನನ್ನು ಅರಿತುಕೊಳ್ಳುವುದು ದೇವತೆಗಳಿಗೂ ಕೂಡ ಕಷ್ಟಕರ, ಮತ್ತು ಉತ್ಕೃಷ್ಟ ದೇವತೆಗಳು ಕೃಷ್ಣನನ್ನು ಅವನ ದ್ವಿಭುಜ ರೂಪದಲ್ಲಿ ಕಾಣಲು ಸದಾ ತವಕಿಸುತ್ತಾರೆ. ತಾತ್ಪರ್ಯವೆಂದರೆ, ಕೃಷ್ಣನ ವಿಶ್ವರೂಪ ನೋಡುವುದು ಬಹು ಕಷ್ಟಸಾಧ್ಯ ಮತ್ತು ಪ್ರತಿ ಯೊಬ್ಬರಿಗೂ ಅಸಂಭವ, ಆದರೆ ಅವನ ಶ್ಯಾಮಸುಂದರ ವ್ಯಕ್ತಿರೂಪವನ್ನು ಅರಿತು ಕೊಳ್ಳುವುದು ಇನ್ನೂ ಕಷ್ಟಕರ.

**ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।**
**ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥೫೩॥**

ನ—ಎಂದಿಗೂ ಇಲ್ಲ, ಅಹಮ್—ನಾನು, ವೇದೈಃ—ವೇದಾಧ್ಯಯನದಿಂದ, ನ—ಎಂದಿಗೂ ಇಲ್ಲ, ತಪಸಾ—ಕಠೋರ ತಪಸ್ಸುಗಳಿಂದ, ನ—ಎಂದಿಗೂ ಇಲ್ಲ, ದಾನೇನ—ದಾನದಿಂದ, ನ—ಎಂದಿಗೂ ಇಲ್ಲ, ಚ—ಮತ್ತು, ಇಜ್ಯಯಾ—ಅರ್ಚನೆಯಿಂದ, ಶಕ್ಯಃ—ಸಾಧ್ಯವು, ಏವಮ್-ವಿಧಃ—ಈ ರೀತಿಯಲ್ಲಿ, ದ್ರಷ್ಟುಮ್—ನೋಡಲು, ದೃಷ್ಟ ವಾನ್—ನೋಡುವವನು, ಅಸಿ—ಆಗಿರುವೆ, ಮಾಮ್—ನನ್ನನ್ನು, ಯಥಾ—ಹಾಗೆ.

**ನೀನು ನಿನ್ನ ದಿವ್ಯ ಕಣ್ಣುಗಳಿಂದ ನೋಡುತ್ತಿರುವ ರೂಪವನ್ನು ವೇದಾಧ್ಯಯನ ಮಾತ್ರದಿಂದ, ಅಥವಾ ಕಠೋರ ತಪಸ್ಸುಗಳಿಂದ, ಅಥವಾ ದಾನದಿಂದ, ಅಥವಾ ಅರ್ಚನೆಯಿಂದ ಅರಿತುಕೊಳ್ಳುವುದು ಅಸಾಧ್ಯ. ಈ ವಿಧಾನಗಳಿಂದ ಒಬ್ಬನು ನಾನಿರುವಂತೆ ನನ್ನನ್ನು ಕಾಣಲಾರನು.**

**ಭಾವಾರ್ಥ :** ಕೃಷ್ಣನು ಮೊದಲು ತನ್ನ ತಂದೆತಾಯಿ ದೇವಕಿ ಮತ್ತು ವಸುದೇವರ ಮುಂದೆ ಚತುರ್ಭುಜರೂಪದಲ್ಲಿ ಕಾಣಿಸಿಕೊಂಡನು, ನಂತರ ಅವನು ತನ್ನನ್ನು ದ್ವಿಭುಜ ರೂಪಕ್ಕೆ ರೂಪಾಂತರಿಸಿಕೊಂಡನು. ನಾಸ್ತಿಕರಿಗೆ ಅಥವಾ ಭಕ್ತಿಯುತ ಸೇವಾರಹಿತರಿಗೆ ಇದು ಅರಿತುಕೊಳ್ಳಲು ಬಹು ಕಷ್ಟಸಾಧ್ಯವಾದ ರಹಸ್ಯ. ವ್ಯಾಕರಣ ಜ್ಞಾನ ಸಹಾಯ

ದಿಂದ ವೇದಸಾಹಿತ್ಯ ಅಧ್ಯಯನ ಮಾತ್ರದ ವಿದ್ವಾಂಸರಿಗೆ ಅಥವಾ ವಿದ್ಯಾರ್ಹತೆ ಉಳ್ಳವರಿಗೆ ಕೃಷ್ಣನನ್ನು ಅರಿತುಕೊಳ್ಳುವುದು ಅಸಾಧ್ಯ. ಅಥವಾ ಅರ್ಚನೆ ಸಲ್ಲಿಸಲು ದೇವಾಲಯಕ್ಕೆ ಹೋಗುವವರಿಗೂ ಅವನು ತಿಳಿಯಲ್ಪಡುವುದಿಲ್ಲ. ಅವರು ದೇವಾಲಯಕ್ಕೆ ಹೋಗುತ್ತಾರೆ, ನಿಜ. ಆದರೆ ಕೃಷ್ಣನಿರುವಂತೆ ಅವರು ಅವನನ್ನು ಅರಿತುಕೊಳ್ಳಲಾರರು. ಮುಂದಿನ ಶ್ಲೋಕದಲ್ಲಿ ಸ್ವಯಂ ಕೃಷ್ಣನೇ ವಿವರಿಸುವಂತೆ, ಕೃಷ್ಣನನ್ನು ಭಕ್ತಿಯುತ ಸೇವಾ ಮಾರ್ಗದ ಮೂಲಕ ಅರಿತುಕೊಳ್ಳಬಹುದು.

**ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋऽರ್ಜುನ ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರನ್ತಪ ॥೫೪॥**

ಭಕ್ತ್ಯಾ—ಭಕ್ತಿಯುತ ಸೇವೆಯಿಂದ, ತು—ಆದರೆ, ಅನನ್ಯಯಾ—ಕಾಮ್ಯಕರ್ಮಗಳಿಂದ ಅಥವಾ ಊಹಾತ್ಮಕ ಜ್ಞಾನದಿಂದ ಮಿಶ್ರವಾಗದೆ, ಶಕ್ಯಃ—ಸಾಧ್ಯ, ಅಹಮ್—ನಾನು, ಏವಮ್-ವಿಧಃ—ಈ ರೀತಿಯಲ್ಲಿ, ಅರ್ಜುನ—ಹೇ ಅರ್ಜುನ, ಜ್ಞಾತುಮ್—ತಿಳಿಯಲು, ದ್ರಷ್ಟುಮ್—ನೋಡಲು, ಚ—ಮತ್ತು, ತತ್ತ್ವೇನ—ವಾಸ್ತವ್ಯದಲ್ಲಿ, ಪ್ರವೇಷ್ಟುಮ್—ಪ್ರವೇಶಿಸಲು, ಚ—ಮತ್ತು, ಪರನ್ತಪ—ಹೇ ಮಹಾಬಾಹುವೇ.

**ನನ್ನ ಪ್ರಿಯ ಅರ್ಜುನನೇ, ಅನನ್ಯ ಭಕ್ತಿಯುತ ಸೇವೆಯಿಂದ ಮಾತ್ರ, ನಿನ್ನ ಮುಂದೆ ನಿಂತಿರುವಂತೆ, ನನ್ನನ್ನು ನಾನಿರುವಂತೆಯೇ ಅರಿತುಕೊಳ್ಳಬಹುದು, ಮತ್ತು ಹೀಗೆ ನೇರವಾಗಿ ನೋಡಬಹುದು. ಈ ರೀತಿಯಲ್ಲಿ ಮಾತ್ರ ನೀನು ನನ್ನ ಅರಿವಿನ ರಹಸ್ಯಗಳನ್ನು ಪ್ರವೇಶಿಸಬಲ್ಲೆ.**

**ಭಾವಾರ್ಥ :** ಕೃಷ್ಣನನ್ನು ಅನನ್ಯ ಭಕ್ತಿಯುತ ಸೇವಾ ಪ್ರಕ್ರಿಯೆಯಿಂದ **ಮಾತ್ರ** ಅರಿತುಕೊಳ್ಳಬಹುದು. ಅವನು ಇದನ್ನು ಈ ಶ್ಲೋಕದಲ್ಲಿ ಸ್ಪಷ್ಟವಾಗಿ ವಿವರಿಸುತ್ತಾನೆ. ಏಕೆಂದರೆ ಭಗವದ್ಗೀತೆಯನ್ನು ಊಹಾತ್ಮಕ ಪ್ರಕ್ರಿಯೆಯಿಂದ ಅರಿತುಕೊಳ್ಳಲೆತ್ನಿಸುವ ಅನಧಿಕೃತ ವ್ಯಾಖ್ಯಾನಕಾರರು ತಮ್ಮ ಸಮಯವನ್ನು ವ್ಯರ್ಥಮಾಡುತ್ತಿದ್ದಾರೆ ಎಂಬುದನ್ನು ತಿಳಿದುಕೊಳ್ಳಬೇಕೆಂಬುದೇ ಉದ್ದೇಶ. ಕೃಷ್ಣನನ್ನು ಅಥವಾ ಅವನು ತನ್ನ ತಂದೆತಾಯಿಗಳಿಂದ ಹೇಗೆ ಚತುರ್ಭುಜರೂಪದಲ್ಲಿ ಬಂದನು ಮತ್ತು ಹೇಗೆ ಕೂಡಲೇ ತನ್ನನ್ನು ದ್ವಿಭುಜರೂಪಕ್ಕೆ ಬದಲಾಯಿಸಿಕೊಂಡನು ಎಂಬುದನ್ನು ಯಾರೂ ಅರಿತುಕೊಳ್ಳಲಾರರು. ಈ ವಿಷಯಗಳನ್ನು ವೇದಾಧ್ಯಯನದಿಂದ ಅಥವಾ ತಾತ್ವಿಕ ಊಹಾಪೋಹಗಳಿಂದ ಅರಿತುಕೊಳ್ಳುವುದು ಕಷ್ಟಕರವಾದುದು. ಆದ್ದರಿಂದ ಯಾರೂ ಕೂಡ ಅವನನ್ನು ಕಾಣಲಾರರು ಅಥವಾ ಈ ವಿಷಯಗಳ ಅರಿವಿನಲ್ಲಿ ಪ್ರವೇಶಿಸಲಾರರು ಎಂದು ಸ್ಪಷ್ಟವಾಗಿ ಹೇಳಿದೆ. ಆದರೆ ವೇದಸಾಹಿತ್ಯದ ಬಹು ಅನುಭವಿಗಳಾದವರೂ ಅನೇಕ ರೀತಿಯಲ್ಲಿ ವೇದಸಾಹಿತ್ಯದಿಂದ ಅವನನ್ನು ಕುರಿತು ತಿಳಿದುಕೊಳ್ಳಬಲ್ಲರು. ಅನೇಕ ನಿಯಮ ನಿಯಂತ್ರಣಗಳಿವೆ, ಮತ್ತು ಒಬ್ಬನು ಕೃಷ್ಣನನ್ನು ಅರಿಯ ಬಯಸಿದ್ದೇ ಆದರೆ, ಅವನು ಅಧಿಕೃತ ಸಾಹಿತ್ಯದಲ್ಲಿ ವರ್ಣಿಸಿದ ನಿಯಂತ್ರಣ ತತ್ವಗಳನ್ನು ಅನುಸರಿಸಲೇಬೇಕು, ಒಬ್ಬನು ಆ ತತ್ವಾನುಸಾರವಾಗಿ ತಪಸ್ಸನ್ನು ಆಚರಿಸಬಹುದು. ಉದಾಹರಣೆಗೆ, ಕಠೋರ

ತಪಸ್ಸನ್ನಾಚರಿಸಲು ಒಬ್ಬನು, ಕೃಷ್ಣನು ಕಾಣಿಸಿಕೊಂಡ ದಿನವಾದ ಜನ್ಮಾಷ್ಟಮಿಯ ದಿನದಂದು, ಮತ್ತು ಎರಡು ಏಕಾದಶಿಗಳಂದು ಉಪವಾಸ ಮಾಡಬೇಕು. (ಶುಕ್ಲಪಕ್ಷದ ಹನ್ನೊಂದನೆಯ ದಿನದಂದು ಮತ್ತು ಕೃಷ್ಣಪಕ್ಷದ ಹನ್ನೊಂದನೆಯ ದಿನದಂದು) ದಾನದ ವಿಷಯದಲ್ಲಿ ದಾನವನ್ನು ಕೃಷ್ಣತತ್ತ್ವವನ್ನು ಪ್ರಚಾರ ಮಾಡುವ, ಅಥವಾ ಜಗತ್ತಿನಲ್ಲೆಲ್ಲಾ ಕೃಷ್ಣಪ್ರಜ್ಞೆಯನ್ನು ಪ್ರಚಾರ ಮಾಡುವ ಕೃಷ್ಣನ ಭಕ್ತಿಯುತ ಸೇವಾ ನಿರತ ಕೃಷ್ಣನ ಭಕ್ತರಿಗೆ ಕೊಡಬೇಕೆಂಬುದು ಸ್ಪಷ್ಟ. ಕೃಷ್ಣಪ್ರಜ್ಞೆಯು ಮಾನವ ಕುಲಕ್ಕೆ ಒಂದು ವರ. ಬಹು ಕಷ್ಟಸಾಧ್ಯವಾದ ಕೃಷ್ಣ ಪ್ರೀತಿಯು ಅವರಿಂದ ಮುಕ್ತವಾಗಿ ಹಂಚಲ್ಪಟ್ಟದ್ದರಿಂದ ಭಗವಾನ್ ಚೈತನ್ಯರನ್ನು ಮಹಾ ಉದಾರ ದಾನಿಗಳೆಂದು ರೂಪ ಗೋಸ್ವಾಮಿಗಳು ಪ್ರಶಂಸಿಸಿ ಹೇಳಿದ್ದಾರೆ. ಆದ್ದರಿಂದ ಕೃಷ್ಣಪ್ರಜ್ಞಾ ವಿತರಣೆಯಲ್ಲಿ ತೊಡಗಿದವರಿಗೆ ಒಬ್ಬನು ಕಿಂಚಿತ್ ಹಣ ನೀಡಿದರೆ, ಕೃಷ್ಣಪ್ರಜ್ಞಾ ಪ್ರಚಾರಕ್ಕೆ ನೀಡಿದ ಆ ದಾನವು ಜಗತ್ತಿನಲ್ಲಿ ಎಲ್ಲಕ್ಕಿಂತ ದೊಡ್ಡ ದಾನ ಮತ್ತು ವಿಧಿಸಿರುವಂತೆ ದೇವಾಲಯದಲ್ಲಿ ಅರ್ಚಿಸುವವನು (ಭಾರತದ ಮಂದಿರಗಳಲ್ಲಿ ಸಾಮಾನ್ಯವಾಗಿ ವಿಷ್ಣು ಅಥವಾ ಕೃಷ್ಣನ ಮೂರ್ತಿ ಸದಾ ಇದ್ದೇ ಇರುತ್ತದೆ.) ಮತ್ತು ಪರಮ ದೇವೋತ್ತಮ ಪುರುಷನಿಗೆ ವಂದನೆ ಸಲ್ಲಿಸುವುದರ ಮೂಲಕ ಪ್ರಗತಿ ಹೊಂದುವ ಅವಕಾಶ ಪಡೆಯುತ್ತಾನೆ. ಭಗವಂತನ ಭಕ್ತಿಯುತ ಸೇವೆಯನ್ನು ಪ್ರಾರಂಭಿಸುವವರಿಗೆ, ಮಂದಿರದಲ್ಲಿ ಅರ್ಚನೆ ಅವಶ್ಯಕ ಮತ್ತು ಇದು ವೇದ ಸಾಹಿತ್ಯದಲ್ಲಿ ದೃಢಪಟ್ಟಿದೆ. (ಶ್ವೇತಾಶ್ವತರ ಉಪನಿಷದ್ 6.23)

ಯಸ್ಯ ದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ।
ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶನ್ತೇ ಮಹಾತ್ಮನಃ॥

ಪರಮ ಪ್ರಭುವಿನ ಬಗ್ಗೆ ಅಚಲ ಭಕ್ತಿಯುಳ್ಳವನು ಮತ್ತು ಗುರುವಿನಿಂದ ನಿರ್ದೇಶಿತನು, ಗುರುಗಳಲ್ಲಿಯೂ ಅದೇ ಬಗೆಯ ನಿಶ್ಚಲ ದೃಢಭಕ್ತಿಯುಳ್ಳವನು ಪರಮ ದೇವೋತ್ತಮ ಪುರುಷನನ್ನು ದಿವ್ಯ ದರ್ಶನದಿಂದ ಕಾಣಬಲ್ಲನು. ಒಬ್ಬನು ಕೃಷ್ಣನನ್ನು ಮಾನಸಿಕ ಊಹಾಪೋಹದಿಂದ ಅರಿತುಕೊಳ್ಳಲಾರನು. ಏಕೆಂದರೆ ನಿಜ ಗುರುಗಳ ಮಾರ್ಗ ದರ್ಶನದಲ್ಲಿ ವ್ಯಕ್ತಿಗತ ಪರಿಶ್ರಮ ಹೊಂದಿದವನಿಗೆ ಕೃಷ್ಣನನ್ನು ಅರಿತುಕೊಳ್ಳಲು ಆರಂಭಿಸುವುದು ಕೂಡ ಅಸಂಭವ. ಕೃಷ್ಣನನ್ನು ಅರಿತುಕೊಳ್ಳುವಲ್ಲಿ ಬೇರೆ ಯಾವ ಪ್ರಕ್ರಿಯೆಯನ್ನೂ ಉಪಯೋಗಿಸಲಾಗದು, ಹೇಳಲಾಗದು ಅಥವಾ ಯಶಸ್ವಿಯಾಗಲಾರದು ಎಂಬುದನ್ನು ವಿಶೇಷವಾಗಿ ಇಲ್ಲಿ ಬಳಸಿದ **ತು** ಪದವು ಸೂಚಿಸುತ್ತದೆ.

ಕೃಷ್ಣನ ವ್ಯಕ್ತಿಗತರೂಪಗಳಾದ ದ್ವಿಭುಜರೂಪ ಮತ್ತು ಚತುರ್ಭುಜರೂಪಗಳು ಅರ್ಜುನನಿಗೆ ತೋರಿದ ತಾತ್ಕಾಲಿಕ ವಿಶ್ವರೂಪದಿಂದ ತೀರಾ ಭಿನ್ನ. ನಾರಾಯಣನ ಚತುರ್ಭುಜ ರೂಪ ಮತ್ತು ಕೃಷ್ಣನ ದ್ವಿಭುಜರೂಪವು ನಿತ್ಯ ಮತ್ತು ದಿವ್ಯ. ಆದರೆ ಅರ್ಜುನನಿಗೆ ತೋರಿದ ವಿಶ್ವರೂಪವು ತಾತ್ಕಾಲಿಕ. "ನೋಡುವುದು ಕಷ್ಟಕರ" ಎಂಬ

ಅರ್ಥ ಕೊಡುವ **ಸು-ದುರ್ದರ್ಶಮ್** ಎಂಬ ಪದವೇ ಆ ವಿಶ್ವರೂಪವನ್ನು ಯಾರೂ ನೋಡಿರಲಿಲ್ಲವೆಂಬುದನ್ನು ಸೂಚಿಸುತ್ತದೆ. ಭಕ್ತರಲ್ಲಿ ಅದನ್ನು ತೋರಿಸುವ ಅವಶ್ಯಕತೆ ಇರಲಿಲ್ಲ ಎಂಬುದನ್ನೂ ಅದು ಸೂಚಿಸುತ್ತದೆ. ಅರ್ಜುನನ ಕೋರಿಕೆಯಿಂದ ಆ ರೂಪ ತೋರಿಸಬೇಕಾಯಿತು. ಏಕೆಂದರೆ ಮುಂದೆ ಒಬ್ಬನು ತಾನು ಭಗವಂತನ ಅವತಾರವೆಂದು ಹೇಳಿದರೆ ತನ್ನ ವಿಶ್ವರೂಪ ತೋರಿಸಬೇಕೆಂದು ಜನರು ಅವನನ್ನು ಕೇಳಬಹುದು.

ಹಿಂದಿನ ಶ್ಲೋಕದಲ್ಲಿ ಪದೇ ಪದೇ ಉಪಯೋಗಿಸಿದ ನ ಎಂಬ ಪದವು ವೇದ ಸಾಹಿತ್ಯದಲ್ಲಿ ಪಾಂಡಿತ್ಯದಿಂದ ಒಬ್ಬನು ಬಹು ಹೆಮ್ಮೆಪಡಕೂಡದು ಎಂಬುದನ್ನು ಸೂಚಿಸುತ್ತದೆ. ಒಬ್ಬನು ಕೃಷ್ಣನ ಭಕ್ತಿಯುತ ಸೇವೆಯನ್ನು ಅಂಗೀಕರಿಸಬೇಕು. ಆಗ ಮಾತ್ರವೇ ಒಬ್ಬನು ಭಗವದ್ಗೀತೆಗೆ ವ್ಯಾಖ್ಯಾನ ಬರೆಯಲು ಯತ್ನಿಸಬಹುದು.

ಕೃಷ್ಣನು ವಿಶ್ವರೂಪದಿಂದ ಚತುರ್ಭುಜ ನಾರಾಯಣ ರೂಪಕ್ಕೆ ಬದಲಾಯಿಸಿ ಕೊಳ್ಳುತ್ತಾನೆ, ಇದಾದನಂತರ ತನ್ನ ದ್ವಿಭುಜದ ಸ್ವಯಂ ಸ್ವಾಭಾವಿಕ ರೂಪಕ್ಕೆ ಬದಲಾಯಿಸಿಕೊಳ್ಳುತ್ತಾನೆ, ಇದು, ಚತುರ್ಭುಜರೂಪಗಳು ಮತ್ತು ವೇದಸಾಹಿತ್ಯದಲ್ಲಿ ಪ್ರಸ್ತಾಪಿತ. ಇತರ ರೂಪಗಳು ಎಲ್ಲವೂ ಮೂಲ ದ್ವಿಭುಜರೂಪದ ವಿಸ್ತರಣೆಗಳು ಎಂಬು ದನ್ನು ಸೂಚಿಸುತ್ತದೆ. ಅವನು ಸಕಲ ಉದ್ಭೂತಿಗಳ ಮೂಲನು, ವ್ಯಕ್ತಿಶೂನ್ಯ ಕಲ್ಪನೆ ಯಂತೂ ಇರಲಿ, ಕೃಷ್ಣನು ಈ ರೂಪಗಳಿಂದ ಕೂಡ ಭಿನ್ನನು. ಕೃಷ್ಣನ ಚತುರ್ಭುಜ ರೂಪ ವಿಷಯದಲ್ಲಿ ಸ್ಪಷ್ಟವಾಗಿ ಹೇಳಿರುವುದೇನೆಂದರೆ ಕೃಷ್ಣನ ಅತ್ಯಂತ ಸದೃಶ ಚತುರ್ಭುಜ ರೂಪವು ಕೂಡ (ವಿಶ್ವೋದಕದ ಮೇಲೆ ಪವಡಿಸಿರುವ ಮತ್ತು ಅವನ ಶ್ವಾಸೋಚ್ಛ್ವಾಸ ದಿಂದ ಅಸಂಖ್ಯ ವಿಶ್ವಗಳು ಹೊರಬರುವ ಮತ್ತು ಒಳ ಸೇರುವ ಮಹಾವಿಷ್ಣು ಎಂಬ ರೂಪವು) ಪರಮ ಪ್ರಭುವಿನ ವಿಸ್ತರಣೆಯೇ ಆಗಿದೆ. ಬ್ರಹ್ಮ ಸಂಹಿತೆಯಲ್ಲಿ ಹೇಳಿದಂತೆ (5.48),

ಯಸ್ಯೈಕ-ನಿಶ್ವಸಿತ–ಕಾಲಮ್ ಅಥಾವಲಮ್ಬ್ಯ
ಜೀವನ್ತಿ ಲೋಮವಿಲಜಾ ಜಗದಣ್ಡ-ನಾಥಾಃ
ವಿಷ್ಣುರ್ ಮಹಾನ್ ಸ ಇಹ ಯಸ್ಯ ಕಲಾ-ವಿಶೇಷೋ
ಗೋವಿನ್ದಮ್ ಆದಿಪುರುಷಂ ತಂ ಅಹಂ ಭಜಾಮಿ

"ಯಾವನ ಶ್ವಾಸೋಚ್ಛ್ವಾಸದಿಂದ ಅಸಂಖ್ಯ ಬ್ರಹ್ಮಾಂಡಗಳು ಹೊರಬರುವುವೋ, ಮತ್ತೆ ಒಳಗೆ ಪ್ರವೇಶಿಸುವುವೋ ಆ ಮಹಾವಿಷ್ಣುವು ಕೃಷ್ಣನ ಸಮಗ್ರ ವಿಸ್ತರಣೆ. ಆದ್ದರಿಂದ ನಾನು ಸರ್ವಕಾರಣಗಳ ಕಾರಣನಾದ ಗೋವಿಂದನನ್ನು, ಕೃಷ್ಣನನ್ನು ಆರಾಧಿಸುತ್ತೇನೆ." ಆದ್ದರಿಂದ ಸಚ್ಚಿದಾನಂದರೂಪಿಯಾದ ಪರಮ ದೇವೋತ್ತಮ ಪುರುಷ ಶ್ರೀ ಕೃಷ್ಣನ ವ್ಯಕ್ತಿತ್ವರೂಪವನ್ನು ಒಬ್ಬನು ನಿಶ್ಚಯವಾಗಿ ಆರಾಧಿಸಬೇಕು. ಅವನು ಸಕಲ ವಿಷ್ಣುರೂಪಗಳ ಮೂಲನು, ಸಕಲ ಅವತಾರ ರೂಪಗಳ ಮೂಲನು, ಮತ್ತು ಭಗವದ್ಗೀತೆಯಲ್ಲಿ ದೃಢಪಟ್ಟಂತೆ ಅವನು ಮೂಲ ಪರಮ ಪುರುಷನು.

ವೇದಸಾಹಿತ್ಯದಲ್ಲಿ (ಗೋಪಾಲತಾಪನೀ ಉಪನಿಷದ್ 1.1) ಹೀಗೆ **ಹೇಳಿದೆ.**

ಸಚ್ಚಿದಾನಂದರೂಪಾಯ
ಕೃಷ್ಣಾಯಾಕ್ಲಿಷ್ಟ ಕಾರಿಣೇ
ನಮೋ ವೇದಾನ್ತ–ವೇದ್ಯಾಯ
ಗುರವೇ ಬುದ್ಧಿ–ಸಾಕ್ಷಿಣೇ

"ದಿವ್ಯ ಸಚ್ಚಿದಾನಂದ ಸ್ವರೂಪನಾದ ಕೃಷ್ಣನಿಗೆ ನನ್ನ ಗೌರವಯುತ ನಮಸ್ಕಾರಗಳನ್ನು ಸಲ್ಲಿಸುತ್ತೇನೆ, ಏಕೆಂದರ ಅವನನ್ನು ಅರಿತುಕೊಳ್ಳುವುದೆಂದರೆ ವೇದಗಳನ್ನೇ ಅರಿತುಕೊಂಡಂತೆ, ಆದ್ದರಿಂದ ಅವನು ಪರಮಗುರು." ನಂತರ, **ಕೃಷ್ಣೋ ವೈ ಪರಮಂ ದೈವತಮ್** ಎಂದು ಹೇಳಿದೆ. "ಕೃಷ್ಣನು ಪರಮ ದೇವೋತ್ತಮ ಪುರುಷನು" ಎಂದು ಅರ್ಥ.(ಗೋಪಾಲತಾಪನೀ 1.3) **ಏಕೋ ವಶೀ ಸರ್ವಗಃ ಕೃಷ್ಣ ಈಡ್ಯಃ** ಅಂದರೆ, "ಆ ಕೃಷ್ಣನೊಬ್ಬನೇ ಪರಮ ದೇವೋತ್ತಮ ಪುರುಷನು ಮತ್ತು ಅವನು ಅರ್ಚನಾರ್ಹನು." **ಏಕೋಽಪಿ ಸನ್ ಬಹುಧಾ ಯೋಽವಭಾತಿ:** "ಕೃಷ್ಣನು ಏಕೈಕನು, ಆದರೆ ಅವನು ಅಪರಿಮಿತ ರೂಪಗಳು ಮತ್ತು ಅವತಾರ ವಿಸ್ತರಣೆಗಳಲ್ಲಿ ವ್ಯಕ್ತನು." (ಗೋಪಾಲ— ತಾಪನೀ 1-21)

ಬ್ರಹ್ಮ-ಸಂಹಿತೆಯು (5.1) ಹೇಳುತ್ತದೆ;

**ಈ**ಶ್ವರಃ ಪರಮಃ ಕೃಷ್ಣಃ
ಸಚ್ಚಿದಾನಂದ ವಿಗ್ರಹಃ
ಅನಾದಿರ್ ಆದಿರ್ ಗೋವಿನ್ದಃ
ಸರ್ವ-ಕಾರಣ-ಕಾರಣಮ್

"ನಿತ್ಯಾನಂದಮಯ ದೇಹವುಳ್ಳ ಕೃಷ್ಣನು ಪರಮ ದೇವೋತ್ತಮ ಪುರುಷನು ಅವನು ಪ್ರತಿಯೊಂದರ ಪ್ರಾರಂಭವಾದ್ದರಿಂದ ಅವನಿಗೆ ಆದಿ ಇಲ್ಲ, ಅವನು ಸರ್ವ ಕಾರಣಗಳ ಕಾರಣನು."

ಬೇರೆಡೆ ಹೀಗೆ ಹೇಳಿದೆ, **ಯತ್ರಾವತೀರ್ಣಂ ಕೃಷ್ಣಾಖ್ಯಂ ಪರಂಬ್ರಹ್ಮ ನರಾಕೃತಿಃ** ಪರಮ ಸತ್ಯವು ವ್ಯಕ್ತಿ, ಅವನ ಹೆಸರು ಕೃಷ್ಣ ಮತ್ತು ಅವನು ಕೆಲವು ಸಲ ಈ ಭೂಮಿಯಲ್ಲಿ ಅವತರಿಸುತ್ತಾನೆ"

ಅದೇ ಪ್ರಕಾರ ಶ್ರೀಮದ್ ಭಾಗವತದಲ್ಲಿ ನಾವು ಪರಮ ದೇವೋತ್ತಮ ಪುರುಷ ನಾನಾ ಬಗೆಯ ಅವತಾರಗಳ ವರ್ಣನೆಯನ್ನು ಕಾಣುತ್ತೇವೆ, ಮತ್ತು ಈ ಪಟ್ಟಿಯಲ್ಲಿ ಕೃಷ್ಣನ ಹೆಸರೂ ಕಾಣಬರುತ್ತದೆ. ಆದರೆ ಈ ಕೃಷ್ಣನು ಭಗವಂತನ ಅವತಾರವಲ್ಲ ಆದರೆ ಸ್ವಯಂ ಮೂಲ ಪರಮ ದೇವೋತ್ತಮ ಪುರುಷನು ಎಂದು ಹೇಳಿದೆ. **(ಏತೇ ಚಾಂಶ–ಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಂ)**

"ಅದೇ ಪ್ರಕಾರ ಭಗವದ್ಗೀತೆಯಲ್ಲಿ ಕೃಷ್ಣನು ಹೇಳುತ್ತಾನೆ, **ಮತ್ತಃ ಪರತರಂ ನಾನ್ಯತ್** "ದೇವೋತ್ತಮ ಪುರುಷ ಕೃಷ್ಣನಾದ ನನ್ನ ರೂಪಕ್ಕಿಂತ ಉತ್ತಮವಾದದ್ದು ಇಲ್ಲ." ಭಗವದ್ಗೀತೆಯಲ್ಲಿ ಇನ್ನೊಂದೆಡೆ ಕೂಡ, **ಅಹಮ್ ಆದಿರ್ ಹಿ ದೇವಾನಾಮ್**: ಎಂದೂ ಅವನು ಹೇಳುತ್ತಾನೆ. "ನಾನೇ ಸಕಲ ದೇವತೆಗಳ ಮೂಲನು". ಕೃಷ್ಣನಿಂದ ಭಗವದ್ಗೀತೆಯನ್ನು ಅರಿತುಕೊಂಡ ಬಳಿಕ ಅರ್ಜುನನು ಕೂಡ ಇದನ್ನೇ ಈ ಶಬ್ದಗಳಲ್ಲಿ ದೃಢಪಡಿಸುತ್ತಾನೆ : **ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಮ್ ಭವಾನ್** "ನೀನು ಪರಮ ದೇವೋತ್ತಮ ಪುರುಷನು, ಪರಮ ಸತ್ಯನು, ಎಂಬುದನ್ನು ಮತ್ತು ನೀನು ಪ್ರತಿಯೊಂದಕ್ಕೆ ಆಶ್ರಯನು ಎಂಬುದನ್ನು ನಾನು ಈಗ ಪೂರ್ಣವಾಗಿ ಅರಿತಿದ್ದೇನೆ." ಆದ್ದರಿಂದ ಅರ್ಜುನನಿಗೆ ಕೃಷ್ಣನು ತೋರಿದ ವಿಶ್ವರೂಪವು ಭಗವಂತನ ಮೂಲರೂಪವಲ್ಲ. ಮೂಲವು ಕೃಷ್ಣರೂಪ. ಸಹಸ್ರಾರು ಶಿರಸ್ಸುಗಳು, ಕೈಗಳು, ಇರುವ ವಿಶ್ವರೂಪವು ಭಗವತ್ ಪ್ರೀತಿ ಇಲ್ಲದವರ ಗಮನ ಸೆಳೆಯಲು ಪ್ರಕಟಿತ. ಅದು ಭಗವಂತನ ಮೂಲರೂಪವಲ್ಲ.

ನಾನಾ ಬಗೆಯ ದಿವ್ಯಯುತ ಸಂಬಂಧಗಳಲ್ಲಿರುವ ಭಗವಂತನೊಂದಿಗೆ ಪ್ರೇಮದಲ್ಲಿರುವ ಶುದ್ಧ ಭಕ್ತರಿಗೆ ವಿಶ್ವರೂಪವು ಆಕರ್ಷಕವಲ್ಲ. ಪರಮ ದೇವೋತ್ತಮನು ತನ್ನ ಮೂಲ ಕೃಷ್ಣರೂಪದಲ್ಲಿ ದಿವ್ಯ ಪ್ರೇಮ ವಿನಿಮಯ ಮಾಡಿಕೊಳ್ಳುತ್ತಾನೆ. ಆದ್ದರಿಂದ ಕೃಷ್ಣನೊಂದಿಗೆ ಸಖ್ಯದ ನಿಕಟ ಸಂಬಂಧದಲ್ಲಿ ಇರುವ ಅರ್ಜುನನಿಗೆ ಈ ವಿಶ್ವರೂಪ ಉದ್ಭೂತಿಯು ಸಂತೋಷಕರವೆನಿಸಲಿಲ್ಲ. ಬದಲಾಗಿ, ಅದು ಭಯಾನಕವೆನಿಸಿತು. ಕೃಷ್ಣನ ನಿತ್ಯಸಖನಾಗಿದ್ದ ಅರ್ಜುನನಿಗೆ ದಿವ್ಯ ಕಣ್ಣುಗಳು ಇದ್ದಿರಬೇಕು ; ಅವನು ಸಾಮಾನ್ಯ ಮಾನವನಾಗಿರಲಿಲ್ಲ. ಆದ್ದರಿಂದ ಅವನು ವಿಶ್ವರೂಪದಿಂದ ಆಕರ್ಷಿತನಾಗಲಿಲ್ಲ. ಕಾಮ್ಯ ಕರ್ಮಗಳಿಂದ ತಮ್ಮನ್ನು ಉನ್ನತಿಸಿಕೊಳ್ಳಬಯಸುವವರಿಗೆ ಈ ರೂಪವು ಅದ್ಭುತವೆನಿಸಬಹುದು. ಆದರೆ ಭಕ್ತಿಯುತ ಸೇವಾನಿರತರಿಗೆ ಕೃಷ್ಣನ ದ್ವಿಭುಜರೂಪವು ಅತ್ಯಂತ ಪ್ರಿಯವಾದುದು.

**ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ ।**
**ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಣ್ಡವ ॥೫೫॥**

ಮತ್-ಕರ್ಮ-ಕೃತ್—ನನ್ನ ಕಾರ್ಯ ಮಾಡುವುದರಲ್ಲಿ ನಿರತ, ಮತ್-ಪರಮಃ—ನನ್ನನ್ನು ಪರಮನೆಂದು ಭಾವಿಸುತ್ತಾ, ಮತ್-ಭಕ್ತಃ—ನನ್ನ ಭಕ್ತಿಯುತ ಸೇವಾನಿರತನು, ಸಂಗ-ವರ್ಜಿತಃ—ಕಾಮ್ಯ ಕರ್ಮಗಳ ಮತ್ತು ಮಾನಸಿಕ ಊಹಾಪೋಹದ ಕಲ್ಮಷದಿಂದ ಮುಕ್ತನು, ನಿರ್ವೈರಃ—ವೈರಿರಹಿತನು, ಸರ್ವಭೂತೇಷು—ಸಕಲ ಜೀವಿಗಳಲ್ಲಿ, ಯಃ—ಯಾರೋ ಅವನು, ಸಃ—ಅವನು, ಮಾಮ್—ನನ್ನಲ್ಲಿಗೆ, ಏತಿ—ಬರುತ್ತಾನೆ, ಪಾಣ್ಡವ—ಹೇ ಪಾಂಡು ಪುತ್ರನೇ.

**ನನ್ನ ಪ್ರಿಯ ಅರ್ಜುನನೇ, ಕಾಮ್ಯಕರ್ಮ ಮತ್ತು ಮಾನಸಿಕ ಊಹಾಪೋಹಗಳ ಕಲ್ಮಷಗಳಿಂದ ಮುಕ್ತನಾಗಿ ನನ್ನ ಶುದ್ಧ ಭಕ್ತಿಯುತ ಸೇವಾ ನಿರತನು ನನಗಾಗಿ**

**ಕಾರ್ಯಗಳನ್ನು ಮಾಡುವವನು, ನನ್ನನ್ನು ತನ್ನ ಜೀವನದ ಪರಮೋದ್ದೇಶವೆಂದು ಮಾಡಿಕೊಳ್ಳುವವನು, ಮತ್ತು ಸಕಲ ಜೀವರಿಗೆ ಸಖನಾಗಿರುವವನು— ಅವನು ಖಂಡಿತ ನನ್ನಲ್ಲಿಗೆ ಬರುತ್ತಾನೆ.**

**ಭಾವಾರ್ಥ :** ಪರವ್ಯೋಮದಲ್ಲಿರುವ ಕೃಷ್ಣಲೋಕದ ಸಕಲ ದೇವೋತ್ತಮ ಪುರುಷ ಪರಮನಲ್ಲಿಗೆ ಹೋಗಬಯಸುವವನು ಮತ್ತು ಪರಮ ಪುರುಷ ಕೃಷ್ಣನೊಂದಿಗೆ ನಿಕಟ ಸಂಬಂಧ ಇಟ್ಟಿಸುವವನು ಸ್ವಯಂ ಪರಮನೇ ಹೇಳಿದ ಈ ಸೂತ್ರವನ್ನು ಅಂಗೀಕರಿಸ ಬೇಕು. ಆದ್ದರಿಂದ ಈ ಶ್ಲೋಕವು ಭಗವದ್ಗೀತೆಯ ಸಾರವೆಂದು ಪರಿಗಣಿಸಲ್ಪಟ್ಟಿದೆ. ಭಗವದ್ಗೀತೆಯು, ನಿಜ ಅಧ್ಯಾತ್ಮ ಜೀವನವನ್ನು ಅರಿಯದ,ಪ್ರಕೃತಿಯ ಮೇಲೆ ಆಧಿಪತ್ಯ ನಡೆಸುವ ಉದ್ದೇಶದಿಂದ ಭೌತಿಕ ಜಗತ್ತಿನಲ್ಲಿ ನಿರತರಾದ ಬದ್ಧಾತ್ಮರಿಗೆ ನಿರ್ದೇಶಿತ ಗ್ರಂಥ. ಒಬ್ಬನು ತನ್ನ ಅಧ್ಯಾತ್ಮ ಅಸ್ತಿತ್ವವನ್ನು ಮತ್ತು ಪರಮ ಅಧ್ಯಾತ್ಮ ಪುರುಷನೊಂದಿಗೆ ತನ್ನ ನಿತ್ಯ ಸಂಬಂಧವನ್ನು ಹೇಗೆ ಅರಿತುಕೊಳ್ಳಬೇಕು ಎಂಬುದನ್ನು ಮತ್ತು ಹೇಗೆ ದೇವ ತ್ವಕ್ಕೆ ಮರಳಿ ಧಾಮಕ್ಕೆ ಹಿಂದಿರುಗಬೇಕು ಎಂಬುದನ್ನು ಬೋಧಿಸಲು ಭಗವದ್ಗೀತೆಯು ಉದ್ದಿಷ್ಟ. ಈಗ, ಈ ಶ್ಲೋಕವು ಒಬ್ಬನು ತನ್ನ ಆಧ್ಯಾತ್ಮ ಚಟುವಟಿಯಲ್ಲಿ ಯಶಸ್ವಿಯಾಗುವ ಪ್ರಕ್ರಿಯೆಯನ್ನು ಸ್ಪಷ್ಟವಾಗಿ ವಿವರಿಸುತ್ತದೆ-ಅದೇ ಭಕ್ತಿಯುತ ಸೇವೆ.

ಕರ್ಮದ ವಿಷಯದಲ್ಲಿ, ಒಬ್ಬನು ತನ್ನ ಶಕ್ತಿಯನ್ನು ಪೂರ್ಣವಾಗಿ ಕೃಷ್ಣಪ್ರಜ್ಞಾ ಚಟುವಟಿಕೆಗಳಿಗೆ ವರ್ಗಾಯಿಸಬೇಕು.ಭಕ್ತಿ–ರಸಾಮೃತ ಸಿಂಧುವಿನಲ್ಲಿ ಹೇಳಿದಂತೆ(2.255),

ಅನಾಸಕ್ತಸ್ಯ ವಿಷಯಾನ್ ಯಥಾರ್ಹಮ್ ಉಪಯುಂಜತಃ।
ನಿರ್ಬನ್ಧಃ ಕೃಷ್ಣಸಂಬನ್ಧೇ ಯುಕ್ತಂ ವೈರಾಗ್ಯಮ್ ಉಚ್ಯತೇ

ಕೃಷ್ಣ ಸಂಬಂಧದಲ್ಲಿ ವಿನಾ ಯಾರೂ ಕೂಡ ಯಾವ ಕರ್ಮವನ್ನು ಮಾಡಕೂಡದು. ಇದನ್ನು **ಕೃಷ್ಣ–ಕರ್ಮ** ಎಂದು ಕರೆದಿದೆ. ಒಬ್ಬನು ಅನೇಕ ಚಟುವಟಿಕೆಗಳಲ್ಲಿ ನಿರತ ನಾಗಿರಬಹುದು, ಆದರೆ ಒಬ್ಬನು ತನ್ನ ಕರ್ಮಫಲದಲ್ಲಿ ಆಸಕ್ತನಾಗಿರಕೂಡದು ; ಫಲ ವನ್ನು ಅವನಿಗೆ ಮಾತ್ರ ಅರ್ಪಿಸಬೇಕು, ಉದಾಹರಣೆಗೆ, ಒಬ್ಬನು ವ್ಯಾಪಾರದಲ್ಲಿ ತೊಡ ಗಿರಬಹುದು, ಆದರೆ ಆ ಚಟುವಟಿಕೆಯನ್ನು ಕೃಷ್ಣಪ್ರಜ್ಞೆಗೆ ವರ್ಗಾಯಿಸಲು ಕೃಷ್ಣನಿಗಾಗಿ ಉದ್ಯೋಗ ಮಾಡಬೇಕು. ಕೃಷ್ಣನು ಆ ಉದ್ಯೋಗ್ಯದ ಒಡೆಯನಾದರೆ, ಆ ಉದ್ಯೋಗದ ಲಾಭವನ್ನು ಕೃಷ್ಣನು ಭೋಗಿಸಬೇಕು. ಉದ್ಯಮಿಯು ಸಹಸ್ರಾರು ರೂಪಾಯಿ ಗಳನ್ನು ಹೊಂದಿದ್ದರೆ ಮತ್ತು ಅದನ್ನೆಲ್ಲಾ ಕೃಷ್ಣನಿಗೆ ಅರ್ಪಿಸಬಯಸಿದರೆ, ಅವನು ಹಾಗೆ ಮಾಡಬಹುದು. ಇದು ಕೃಷ್ಣನಿಗಾಗಿ ಕರ್ಮ. ತನ್ನ ಇಂದ್ರಿಯ ತೋಷಣೆಗಾಗಿ ದೊಡ್ಡ ಕಟ್ಟಡವನ್ನು ನಿರ್ಮಿಸುವ ಬದಲು, ಅವನು ಕೃಷ್ಣನಿಗಾಗಿ ಒಂದು ಸುಂದರ ಮಂದಿರವನ್ನು ನಿರ್ಮಿಸಬಹುದು, ಮತ್ತು ಅಲ್ಲಿ ಕೃಷ್ಣ ವಿಗ್ರಹವನ್ನು ಪ್ರತಿಷ್ಠಾಪಿಸಿ ಭಕ್ತಿ ಸೇವಾ ಅಧಿಕೃತ ಗ್ರಂಥಗಳಲ್ಲಿ ಹೇಳಿರುವಂತೆ ಅಲ್ಲಿ ಮೂರ್ತಿಯ ಸೇವಾ ವ್ಯವಸ್ಥೆ ಮಾಡ ಬಹುದು. ಇದೆಲ್ಲವು ಕೃಷ್ಣಕರ್ಮ. ಒಬ್ಬನು ತನ್ನ ಕರ್ಮಫಲದಲ್ಲಿ ಆಸಕ್ತನಾಗಿರ ಕೂಡದು, ಆದರೆ ಫಲವನ್ನು ಕೃಷ್ಣನಿಗಾಗಿ ಅರ್ಪಿಸಬೇಕು, ಮತ್ತು ಒಬ್ಬನು ಕೃಷ್ಣನ

ನೈವೇದ್ಯ ಶೇಷಗಳನ್ನು ಪ್ರಸಾದವೆಂದು ಸ್ವೀಕರಿಸಬೇಕು. ಒಬ್ಬನು ಕೃಷ್ಣನಿಗಾಗಿ ಬಹು ದೊಡ್ಡ ಕಟ್ಟಡವನ್ನು ನಿರ್ಮಿಸಿದರೆ ಮತ್ತು ಅಲ್ಲಿ ಕೃಷ್ಣವಿಗ್ರಹ ಪ್ರತಿಷ್ಠಾಪಿಸಿದರೆ, ಅವನು ಅಲ್ಲಿರುವುದನ್ನು ನಿಷೇಧಿಸಿಲ್ಲ, ಆದರೆ ಆ ಕಟ್ಟಡದ ಒಡೆಯನು ಕೃಷ್ಣ ಎಂದು ತಿಳಿದಿದೆ. ಇದನ್ನು ಕೃಷ್ಣಪ್ರಜ್ಞೆ ಎಂದು ಕರೆದಿದೆ. ಆದರೆ ಒಬ್ಬನಿಗೆ ಕೃಷ್ಣನಿಗಾಗಿ ಮಂದಿರ ನಿರ್ಮಿಸಲು ಸಾಧ್ಯವಿಲ್ಲದೆ ಹೋದರೆ, ಅವನು ಕೃಷ್ಣಮಂದಿರ ಮಾರ್ಜನದಲ್ಲಿ ತನ್ನನ್ನು ತೊಡಗಿಸಿಕೊಳ್ಳಬಹುದು, ಅದು ಕೂಡ ಕೃಷ್ಣಕರ್ಮವೇ. ಒಬ್ಬನು ತೋಟ ಬೆಳೆಸಬಹುದು. ಭೂಮಿ ಇರುವವನು— ಭಾರತದಲ್ಲಿ ಕನಿಷ್ಠ ಒಬ್ಬ ದರಿದ್ರನಿಗೂ ಕಿಂಚಿತ್ ಜಮೀನು ಇರುವುದು— ಕೃಷ್ಣನಿಗೆ ಅರ್ಪಿಸಲು ಹೂವುಗಳನ್ನು ಆ ಭೂಮಿಯಲ್ಲಿ ಬೆಳಸ ಬಹುದು. ಒಬ್ಬನು ತುಳಸಿ ಗಿಡಗಳನ್ನು ಬೆಳಸಬಹುದು, ಏಕೆಂದರೆ ತುಳಸಿ ಪತ್ರಗಳು ಬಹು ಮಹತ್ವ ಮತ್ತು ಕೃಷ್ಣನು ಭಗವದ್ಗೀತೆಯಲ್ಲಿ ಅದನ್ನು ಹೇಳಿದ್ದಾನೆ. **ಪತ್ರಂ ಪುಷ್ಪಂ ಫಲಂ ತೋಯಮ್** ಒಬ್ಬನು, ತನಗೆ ಪತ್ರ, ಪುಷ್ಪ, ಫಲ ಅಥವಾ ಸ್ವಲ್ಪ ಜಲವನ್ನು ಅರ್ಪಿಸಬೇಕೆಂದು ಕೃಷ್ಣನು ಬಯಸುತ್ತಾನೆ ಮತ್ತು ಅಂಥ ಅರ್ಪಣೆ ಯಿಂದ ಅವನು ಸಂತುಷ್ಟನು. ಪತ್ರ ಎಂಬುದು ವಿಶೇಷವಾಗಿ ತುಲಸಿಯನ್ನು ಸೂಚಿಸು ತ್ತದೆ. ಆದ್ದರಿಂದ ಒಬ್ಬನು ತುಲಸಿ ಸಸಿಯನ್ನು ನೆಟ್ಟು ಅದಕ್ಕೆ ನೀರೆರೆಯಬಹುದು. ಹೀಗೆ ಕಡು ಬಡವನು ಕೂಡ ಕೃಷ್ಣಸೇವೆಯಲ್ಲಿ ನಿರತನಾಗಬಹುದು. ಒಬ್ಬನು ಹೇಗೆ ಕೃಷ್ಣಕರ್ಮದಲ್ಲಿ ನಿರತನಾಗಬಹುದು ಎಂಬುದಕ್ಕೆ ಇವು ಕೆಲವು ಉದಾಹರಣೆಗಳು.

**ಮತ್-ಪರಮಃ** ಪದವು ಕೃಷ್ಣನ ಪರಮಧಾಮದಲ್ಲಿ ಕೃಷ್ಣನ ಸಂಗವನ್ನು ಜೀವನದ ಅತ್ಯುನ್ನತ ಪರಿಪೂರ್ಣತೆ ಎಂದು ಭಾವಿಸುವುದನ್ನು ಸೂಚಿಸುತ್ತದೆ. ಅಂಥ ವ್ಯಕ್ತಿಯು ಚಂದ್ರ ಅಥವಾ ಸೂರ್ಯ ಅಥವಾ ಸ್ವರ್ಗಲೋಕಗಳಂಥ ಊರ್ಧ್ವಲೋಕಗಳಿಗೆ ಅಥವಾ ಈ ವಿಶ್ವದ ಅತ್ಯುನ್ನತ ಲೋಕವಾದ ಬ್ರಹ್ಮಲೋಕಕ್ಕೆ ಕೂಡ ಉನ್ನತಿಸಲ್ಪಡಲು ಬಯಸುವುದಿಲ್ಲ. ಅವನಿಗೆ ಅದರ ಆಕರ್ಷಣೆ ಇಲ್ಲ. ಅವನು ಪರವ್ಯೋಮಕ್ಕೆ ವರ್ಗಾಯಿತ ವಾಗಲು ಮಾತ್ರ ಆಕರ್ಷಿತನು, ಪರವ್ಯೋಮದಲ್ಲಿಯೂ ಕೂಡ ಬ್ರಹ್ಮಜ್ಯೋತಿಯಲ್ಲಿ ಐಕ್ಯವಾಗುವುದರಿಂದ ಅವನು ತುಷ್ಟನಾಗುವುದಿಲ್ಲ, ಏಕೆಂದರೆ ಅವನು ಅತ್ಯುನ್ನತ ಅಧ್ಯಾತ್ಮ ಲೋಕ ಎಂದರೆ ಕೃಷ್ಣಲೋಕ, ಗೋಲೋಕವೃಂದಾವನವನ್ನು ಪ್ರವೇಶಿಸಬಯಸುತ್ತಾನೆ. ಅವನಿಗೆ ಆ ಲೋಕದ ಪೂರ್ಣಜ್ಞಾನವಿದೆ, ಆದುದರಿಂದ ಅವನು ಬೇರೆ ಯಾವುದರಲ್ಲಿಯೂ ಆಸಕ್ತನಲ್ಲ. **ಮದ್-ಭಕ್ತಃ** ಪದದಿಂದ ಸೂಚಿತವಾದಂತೆ ಅವನು ಭಕ್ತಿಯುತ ಸೇವೆಯಲ್ಲಿ ವಿಶೇಷವಾಗಿ, ಶ್ರವಣ, ಕೀರ್ತನ, ಸ್ಮರಣ, ಅರ್ಚನ, ಭಗವಂತನ ಚರಣಾರವಿಂದ ಸೇವೆ, ವಂದನಾರ್ಪಣೆ, ಭಗವದಾದೇಶಪಾಲನೆ, ಅವನೊಂದಿಗೆ ಸಖ್ಯ ಮತ್ತು ಸರ್ವ ಸಮರ್ಪಣ ವೆಂಬ ನವವಿಧ ಭಕ್ತಿಪ್ರಕ್ರಿಯೆಯಲ್ಲಿ ಪೂರ್ಣವಾಗಿ ತೊಡಗುತ್ತಾನೆ. ಒಬ್ಬನು ಎಲ್ಲ ನವ ವಿಧ ಭಕ್ತಿಪ್ರಕ್ರಿಯೆಗಳಲ್ಲಿ, ಅಥವಾ ಎಂಟು, ಅಥವಾ ಏಳು ಅಥವಾ ಕನಿಷ್ಠ ಒಂದರಲ್ಲಿ ಯಾದರೂ ನಿರತನಾಗಬಹುದು, ಮತ್ತು ಅದು ಒಬ್ಬನನ್ನು ಖಂಡಿತವಾಗಿ ಪರಿಪೂರ್ಣ ಗೊಳಿಸುತ್ತದೆ.

**ಸಂಗ ವರ್ಜಿತಃ** ಪದವು ಬಹು ಮಹತ್ವದ್ದು. ಒಬ್ಬನು ಕೃಷ್ಣ ವಿರೋಧಿಗಳೊಂದಿಗೆ ಸಂಗ ವರ್ಜಿಸಬೇಕು. ನಾಸ್ತಿಕರಷ್ಟೇ ಅಲ್ಲದೇ, ಕಾಮ್ಯ ಕರ್ಮಗಳು ಮತ್ತು ಮಾನಸಿಕ ಊಹಾಪೋಹಗಳಿಗೆ ಆಕರ್ಷಿತರಾದವರೂ ಕೂಡ ಕೃಷ್ಣ ವಿರೋಧಿಗಳು. ಆದ್ದರಿಂದ ಶುದ್ಧ ಭಕ್ತಿಯುತ ಸೇವಾ ಪ್ರಕಾರವನ್ನು ಭಕ್ತಿ-ರಸಾಮೃತಸಿಂಧುವಿನಲ್ಲಿ ಹೀಗೆ ವರ್ಣಿಸಿದೆ.

ಅನ್ಯಾಭಿಲಾಷಿತಾ–ಶೂನ್ಯಂ ಜ್ಞಾನ–ಕರ್ಮಾದಿ ಅನಾವೃತಮ್।
ಅನುಕೂಲ್ಯೇನ ಕೃಷ್ಣಾನುಶೀಲನಂ ಭಕ್ತಿರುತ್ತಮಾ॥

ಯಾವೊಬ್ಬನು ಅಮಿಶ್ರ ಭಕ್ತಿಯುತ ಸೇವೆಯನ್ನು ಆಚರಿಸಬಯಸಿದರೆ, ಅವನು ಎಲ್ಲ ಬಗೆಯ ಭೌತಿಕ ಕಲ್ಮಷದಿಂದ ಮುಕ್ತನಾಗಬೇಕೆಂದು ಈ ಶ್ಲೋಕದಲ್ಲಿ ಶ್ರೀಲ ರೂಪ ಗೋಸ್ವಾಮಿಯವರು ಸ್ಪಷ್ಟವಾಗಿ ಹೇಳುತ್ತಾರೆ. ಅವನು ಕಾಮ್ಯ ಕರ್ಮಗಳು ಮತ್ತು ಮಾನಸಿಕ ಊಹಾಪೋಹಗಳ ಅಭ್ಯಾಸಿಗಳಾದಂಥ ವ್ಯಕ್ತಿಗಳಿಂದ ಸಂಗ ಮುಕ್ತನಾಗಬೇಕು. ಅಂಥ ಅನಪೇಕ್ಷಿತ ಸಂಗದಿಂದ, ಮತ್ತು ಭೌತಿಕ ಕಾಮ ಕಲ್ಮಷದಿಂದ ಒಬ್ಬನು ಮುಕ್ತನಾದಾಗ, ಅವನು ಕೃಷ್ಣಜ್ಞಾನವನ್ನು ಅನುಕೂಲವಾಗಿ ಬೆಳೆಸಿಕೊಳ್ಳುತ್ತಾನೆ. ಅದು ಶುದ್ಧ ಭಕ್ತಿಯುತ ಸೇವೆ. **ಆನುಕೂಲ್ಯಸ್ಯ ಸಂಕಲ್ಪಃ ಪ್ರಾತಿಕೂಲ್ಯಸ್ಯ ವರ್ಜನಮ್** (ಹರಿ ಭಕ್ತಿ-ವಿಲಾಸ-11.676). ಒಬ್ಬನು ಕೃಷ್ಣ ಚಿಂತನ ಮಾಡಬೇಕು ಮತ್ತು ಕೃಷ್ಣನಿಗಾಗಿ ಅನುಕೂಲ ಕರ್ಮ ಮಾಡಬೇಕು.ಅವನಿಗೆ ಅನಾನುಕೂಲವಾಗಿ ಅಲ್ಲ. ಕಂಸನು ಕೃಷ್ಣನ ವೈರಿಯಾಗಿದ್ದನು. ಕೃಷ್ಣನ ಜನನ ಪ್ರಾರಂಭದಿಂದಲೇ, ಕಂಸನು ಅನೇಕ ರೀತಿಯಲ್ಲಿ ಅವನನ್ನು ಕೊಲ್ಲಲು ಯೋಜಿಸಿದನು, ಮತ್ತು ಅವನು ಸದಾ ಕೃಷ್ಣವಿಚಾರದಲ್ಲಿಯೇ ಇರುತ್ತಿದ್ದನು. ಹೀಗೆ ಕೆಲಸ ಮಾಡುವಾಗ, ಊಟ ಮಾಡುವಾಗ, ಮತ್ತು ನಿದ್ರಿಸುವಾಗ, ಪ್ರತಿಯೊಂದು ವಿಷಯದಲ್ಲಿ ಅವನು ಕೃಷ್ಣಪ್ರಾಜ್ಞೆಯಳಾಗಿದ್ದನು, ಆದರೆ ಆ ಕೃಷ್ಣ ಪ್ರಜ್ಞೆಯು ಅನುಕೂಲಕರವಾಗಿರಲಿಲ್ಲ, ಆದ್ದರಿಂದ ಅವನು ದಿನದ ಇಪ್ಪತ್ತನಾಲ್ಕು ಗಂಟೆಗಳೂ ಸದಾ ಕೃಷ್ಣನ ವಿಚಾರದಲ್ಲಿದ್ದರೂ ಅವನನ್ನು ದೈತ್ಯನೆಂದು ಪರಿಗಣಿಸಲಾಯಿತು, ಮತ್ತು ಕೊನೆಗೆ ಕೃಷ್ಣನು ಅವನನ್ನು ಸಂಹಾರ ಮಾಡಿದನು. ಕೃಷ್ಣನಿಂದ ಸಂಹೃತನಾದವನು ಕೂಡಲೇ ಮೋಕ್ಷವನ್ನು ಹೊಂದುತ್ತಾನೆ,ಎಂಬುದೇನೋ ನಿಜ, ಆದರೆ ಅದು ಶುದ್ಧ ಭಕ್ತನ ಗುರಿಯಲ್ಲ. ಶುದ್ಧ ಭಕ್ತನು ಮೋಕ್ಷಾಪೇಕ್ಷಿಯೂ ಅಲ್ಲ. ಅವನು ಅತ್ಯುನ್ನತ ಲೋಕವಾದ ಗೋಲೋಕ ವೃಂದಾವನಕ್ಕೆ ವರ್ಗಾಯಿಸಲ್ಪಡಲು ಬಯಸುವುದಿಲ್ಲ. ಅವನು ಎಲ್ಲಿಯೇ ಇರಲಿ, ಕೃಷ್ಣಸೇವೆ ಮಾತ್ರವೇ ಅವನ ಧ್ಯೇಯವಾಗಿರುತ್ತದೆ.

ಕೃಷ್ಣಭಕ್ತನು ಪ್ರತಿಯೊಬ್ಬರ ಸಖನು. ಆದ್ದರಿಂದ ಅವನಿಗೆ ವೈರಿಗಳಿಲ್ಲವೆಂದು ಇಲ್ಲಿ ಹೇಳಿದೆ,(**ನಿರ್ವೈರಃ**). ಇದು ಹೇಗೆ ? ಕೃಷ್ಣಪ್ರಾಜ್ಞ ಭಕ್ತನು, ಕೃಷ್ಣನಿಗೆ ಭಕ್ತಿಯುತ ಸೇವೆಯು ಮಾತ್ರವೇ ಜೀವನದ ಎಲ್ಲ ಸಮಸ್ಯೆಗಳಿಂದಲೂ ಒಬ್ಬನನ್ನು ಬಿಡುಗಡೆ ಮಾಡಬಲ್ಲದು ಎಂಬುದನ್ನೂ ತಿಳಿದಿರುತ್ತಾನೆ. ಅವನಿಗೆ ಇದರ ವೈಯಕ್ತಿಕ ಅನುಭವ ಇರುತ್ತದೆ, ಆದ್ದರಿಂದ ಅವನು ಈ ಪದ್ಧತಿಯನ್ನು, ಕೃಷ್ಣಪ್ರಜ್ಞೆಯನ್ನು ಮಾನವ ಸಮಾಜದಲ್ಲಿ

ಬೆಳೆಸಬಯಸುತ್ತಾನೆ. ದೈವಪ್ರಜ್ಞೆಯನ್ನು ಪ್ರಚಾರ ಮಾಡುವಲ್ಲಿ ತಮ್ಮ ಪ್ರಾಣವನ್ನು ಅಪಾಯಕ್ಕೀಡು ಮಾಡಿದ ಭಗವದ್ಭಕ್ತರ ಅನೇಕ ದೃಷ್ಟಾಂತಗಳು ಇತಿಹಾಸದಲ್ಲಿ ಸಿಗುತ್ತವೆ. ಲಾರ್ಡ್ ಜೀಸಸ್ ಕ್ರಿಸ್ತನು ಒಂದು ಒಳ್ಳೆಯ ದೃಷ್ಟಾಂತ. ಅವನು ಭಕ್ತರಿಂದ ಶಿಲುಬೆಗೇರಿಸಲ್ಪಟ್ಟನು, ಆದರೆ ಅವನು ಭಗವತ್ಪ್ರಜ್ಞಾ ಪ್ರಚಾರಕ್ಕಾಗಿ ತನ್ನ ಪ್ರಾಣ ತೆತ್ತನು. ಅವನು ಕೊಲ್ಲಲ್ಪಟ್ಟನೆಂದು ತಿಳಿಯುವುದು ಲೋಕದೃಷ್ಟಿ ಅಷ್ಟೆ. ಅದೇ ಪ್ರಕಾರ ಭಾರತದಲ್ಲಿಯೂ ಕೂಡ, ಠಾಕೂರ ಹರಿದಾಸ ಮತ್ತು ಪ್ರಹ್ಲಾದ ಮಹಾರಾಜ ರಂಥ ಅನೇಕ ಉದಾಹರಣೆಗಳಿವೆ. ಏಕೆ ಈ ಅಪಾಯ ? ಏಕೆಂದರೆ, ಅವರು ಕೃಷ್ಣಪ್ರಜ್ಞಾ ಪ್ರಚಾರ ಮಾಡಬಯಸಿದರು, ಮತ್ತು ಅದು ಕಷ್ಟ ಸಾಧ್ಯ. ಒಬ್ಬನು ದುಃಖವನ್ನು ಅನುಭವಿಸುತ್ತಿದ್ದರೆ, ಅದು ಕೃಷ್ಣನೊಂದಿಗೆ ತನ್ನ ನಿತ್ಯಸಂಬಂಧದ ವಿಸ್ಮೃತಿಯ ನಿಮಿತ್ತ ವಾದುದು ಎಂಬುದನ್ನು ಕೃಷ್ಣಪ್ರಜ್ಞೆಯು ತಿಳಿದಿರುತ್ತಾನೆ. ಆದ್ದರಿಂದ ತನ್ನ ನೆರೆ ಹೊರೆಯವನನ್ನು ಸಕಲ ಭೌತಿಕ ಸಮಸ್ಯೆಗಳಿಂದ ಪಾರುಮಾಡುವುದು ಮಾನವ ಸಮಾಜಕ್ಕೆ ಒಬ್ಬನು ಸಲ್ಲಿಸಬಹುದಾದ ಅತ್ಯುನ್ನತ ಪ್ರಯೋಜನ. ಈ ರೀತಿಯಲ್ಲಿ ಒಬ್ಬ ಶುದ್ಧ ಭಕ್ತನು ಭಗವಂತನ ಸೇವಾ ನಿರತನು. ಈಗ ಅವನಿಗಾಗಿ, ಸಕಲ ಪರಿತ್ಯಾಗಕ್ಕೆ ಸಿದ್ಧರಾಗಿ ಅವನ ಸೇವಾ ನಿರತರಾದವರಿಗೆ ಕೃಷ್ಣನು ಅದೆಷ್ಟು ಅನುಗ್ರಹಪೂರ್ಣನು ಎಂಬುದನ್ನು ನಾವು ಊಹಿಸಿಕೊಳ್ಳಬಹುದು. ಆದ್ದರಿಂದ ಅಂಥ ವ್ಯಕ್ತಿಗಳು ದೇಹ ಬಿಟ್ಟ ಬಳಿಕ ಆ ಪರಮಲೋಕವನ್ನು ತಲುಪುವುದು ಖಂಡಿತ.

ಒಟ್ಟಿನಲ್ಲಿ ತಾತ್ಕಾಲಿಕ ಊದ್ಭೂತಿಯಾದ ಕೃಷ್ಣನ ವಿಶ್ವರೂಪವು ಮತ್ತು ಪ್ರತಿ ಯೊಂದನ್ನು ನುಂಗಿಹಾಕುವ ಕಾಲರೂಪವು, ಮತ್ತು ಚತುರ್ಭುಜ ವಿಷ್ಣುರೂಪವು ಎಲ್ಲವೂ ಕೃಷ್ಣನಿಂದ ಪ್ರದರ್ಶಿತ. ಆದ್ದರಿಂದ ಕೃಷ್ಣನು ಈ ಎಲ್ಲ ಊದ್ಭೂತಿಗಳಿಗೆ ಮೂಲನು. ಅದು ಕೃಷ್ಣನು ಅಥವಾ ವಿಷ್ಣು, ಮೂಲ ವಿಶ್ವರೂಪದ ಉದ್ಭೂತಿ ಎಂದಲ್ಲ. ಕೃಷ್ಣನು ಸಕಲರೂಪಗಳ ಮೂಲನು. ನೂರಾರು ಸಾವಿರಾರು ವಿಷ್ಣು ರೂಪಗಳಿವೆ, ಆದರೆ ಭಕ್ತನಿಗೆ, ಮೂಲ ದ್ವಿಭುಜ ಶ್ಯಾಮಸುಂದರ ರೂಪ ವಿನಾ ಕೃಷ್ಣನ ಯಾವ ರೂಪವೂ ಮಹತ್ವದ್ದಲ್ಲ, ಪ್ರೇಮ ಮತ್ತು ಭಕ್ತಿಯಲ್ಲಿ ಕೃಷ್ಣನ ಶ್ಯಾಮಸುಂದರ ರೂಪಕ್ಕೆ ಆಕರ್ಷಿತರು. ಅವನನ್ನು ಸದಾ ಹೃದಯದಲ್ಲಿ ಕಾಣಬಲ್ಲರು, ಬೇರೆ ಏನನ್ನೂ ಅಲ್ಲ ಎಂದು ಬ್ರಹ್ಮ-ಸಂಹಿತೆಯಲ್ಲಿ ಹೇಳಿದೆ. ಆದ್ದರಿಂದ ಈ ಹನ್ನೊಂದನೆಯ ಅಧ್ಯಾಯದ ತಾತ್ಪರ್ಯ ವೆಂದರೆ ಕೃಷ್ಣನ ರೂಪವು ಅವಶ್ಯ ಮತ್ತು ಪರಮ ಎಂದು ಒಬ್ಬನು ಅರಿತುಕೊಳ್ಳಬೇಕು.

ಇಲ್ಲಿಗೆ ವಿಶ್ವರೂಪದ ವಿಷಯದಲ್ಲಿ ಶ್ರೀಮದ್ ಭಗವದ್ಗೀತೆಯ ಹನ್ನೊಂದನೆಯ ಅಧ್ಯಾಯದ ಭಕ್ತಿವೇದಾಂತ ತಾತ್ಪರ್ಯವು ಮುಗಿಯಿತು.



## ಅಧ್ಯಾಯ ಹನ್ನೆರಡು



# ಭಕ್ತಿ ಯೋಗ

**ಅರ್ಜುನ ಉವಾಚ :**

**ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।**
**ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ॥ ೧ ॥**

ಅರ್ಜುನಃ ಉವಾಚ—ಅರ್ಜುನನು ಹೇಳಿದನು, ಏವಮ್—ಹೀಗೆ, ಸತತ—ಸದಾ, ಯುಕ್ತಾಃ—ನಿರತರು, ಯೇ—ಯಾರು, ಭಕ್ತಾಃ—ಭಕ್ತರು. ತ್ವಾಮ್—ನಿನ್ನನ್ನು, ಪರ್ಯುಪಾಸತೇ—ಯುಕ್ತವಾಗಿ ಆರಾಧಿಸುವವರು, ಯೇ—ಯಾರು, ಚ—ಕೂಡ. ಅಪಿ—ಮತ್ತೆ, ಅಕ್ಷರಮ್—ಇಂದ್ರಿಯಾತೀತ, ಅವ್ಯಕ್ತಮ್—ಅವ್ಯಕ್ತವಾದ, ತೇಷಾಮ್—ಅವರಲ್ಲಿ, ಕೇ—ಯಾರು, ಯೋಗ-ವಿತ್-ತಮಾಃ—ಯೋಗ ಜ್ಞಾನದಲ್ಲಿ ಅತ್ಯಂತ ಪರಿಪೂರ್ಣರು.

**ಅರ್ಜುನನು ಪ್ರಶ್ನಿಸಿದನು : ಯಾರು ಪರಿಪೂರ್ಣರೆಂದು ಪರಿಗಣಿತರು, ಸದಾ ನಿನ್ನ ಭಕ್ತಿಯುತ ಸೇವೆಯಲ್ಲಿ ಯೋಗ್ಯವಾಗಿ ನಿರತರಾದವರೋ ಅಥವಾ ವ್ಯಕ್ತಿಶೂನ್ಯ ಅವ್ಯಕ್ತ ಬ್ರಹ್ಮನ್‌ನನ್ನು ಆರಾಧಿಸುವರೋ ?**

**ಭಾವಾರ್ಥ :** ಈಗ ಕೃಷ್ಣನು ವೈಯಕ್ತಿಕ, ವ್ಯಕ್ತಿಶೂನ್ಯ ಮತ್ತು ವಿರಾಟಗಳನ್ನು ಕುರಿತು ವಿವರಿಸಿದ್ದಾನೆ ಮತ್ತು ಎಲ್ಲ ಬಗೆಯ ಭಕ್ತರು ಮತ್ತು ಯೋಗಿಗಳ ಬಗ್ಗೆ ವರ್ಣಿಸಿದ್ದಾನೆ. ಸಾಮಾನ್ಯವಾಗಿ ದಿವ್ಯವಾದಿಗಳನ್ನು ಎರಡು ವರ್ಗಗಳಲ್ಲಿ ವಿಂಗಡಿಸಬಹುದು. ಒಂದು ವ್ಯಕ್ತಿ ಶೂನ್ಯವಾದಿ ವರ್ಗ, ಮತ್ತೊಂದು ವ್ಯಕ್ತಿವಾದಿ ವರ್ಗ. ವ್ಯಕ್ತಿಪೂಜಕ ವರ್ಗದ ಭಕ್ತರು ಸರ್ವಶಕ್ತಿಯಿಂದ ಪರಮಪ್ರಭುವಿನ ಸೇವಾ ನಿರತರು. ವ್ಯಕ್ತಿಶೂನ್ಯವಾದಿಯು ಕೂಡ ತನ್ನನ್ನು ತೊಡಗಿಸಿಕೊಳ್ಳುತ್ತಾನೆ, ನೇರವಾಗಿ ಕೃಷ್ಣಸೇವೆಯಲ್ಲಿ ಅಲ್ಲ, ಆದರೆ ಅವ್ಯಕ್ತ ವ್ಯಕ್ತಿಶೂನ್ಯ ಬ್ರಹ್ಮನ್ ಧ್ಯಾನದಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತಾನೆ.

ನಾವು ಈ ಅಧ್ಯಾಯದಲ್ಲಿ ಪರತತ್ತ್ವ ಸಾಕ್ಷಾತ್ಕಾರದ ವಿವಿಧ ಪ್ರಕ್ರಿಯೆಗಳಲ್ಲಿ ಭಕ್ತಿಯೋಗವು ಅತ್ಯುನ್ನತವಾದುದೆಂದು ಕಾಣುತ್ತೇವೆ. ಒಬ್ಬನು ಪರಮ ದೇವೋತ್ತಮ ಪುರುಷನ ಸಂಗ ಹೊಂದಬಯಸುವುದಾದರೆ ಅವನು ಭಕ್ತಿಯೋಗವನ್ನುಆಶ್ರಯಿಸಲೇ ಬೇಕು.

ಪರಮಪ್ರಭುವನ್ನು ನೇರವಾಗಿ ಭಕ್ತಿಯೋಗದಿಂದ ಆರಾಧಿಸುವವರನ್ನು ವ್ಯಕ್ತಿ ವಾದಿಗಳೆಂದು ಕರೆದಿದೆ. ವ್ಯಕ್ತಿಶೂನ್ಯ ಬ್ರಹ್ಮನ್ ಧ್ಯಾನದಲ್ಲಿ ತೊಡಗಿರುವವರು ವ್ಯಕ್ತಿ ಶೂನ್ಯವಾದಿಗಳೆಂದು ಕರೆದಿದೆ. ಇವುಗಳಲ್ಲಿ ಯಾವ ಸ್ಥಿತಿ ಒಳ್ಳೆಯದೆಂದು ಅರ್ಜುನನು ಇಲ್ಲಿ ಪ್ರಶ್ನಿಸುತ್ತಿದ್ದಾನೆ. ಪರತತ್ತ್ವವನ್ನು ಸಾಕ್ಷಾತ್ಕರಿಸಲು ಭಿನ್ನ ವಿಧಗಳಿವೆ, ಆದರೆ ಎಲ್ಲದಕ್ಕೂ ಅತ್ಯುನ್ನವಾದುದು ಅವನಿಗೆ ಭಕ್ತಿಯುತ ಸೇವೆ ಎಂದು ಈ ಅಧ್ಯಾಯದಲ್ಲಿ ಕೃಷ್ಣನು ಸೂಚಿಸುತ್ತಿದ್ದಾನೆ. ಅದು ನೇರವಾದುದು, ಮತ್ತು ದೇವತ್ವದೊಂದಿಗೆ ಸಂಗ ಮಾಡಲು ಬಹಳ ಸುಲಭ ಮಾರ್ಗವು.

ಜೀವಿಯು ಭೌತಿಕ ದೇಹವಲ್ಲ ಎಂದು ಭಗವದ್ಗೀತೆಯ ಎರಡನೆಯ ಅಧ್ಯಾಯದಲ್ಲಿ ಪರಮ ಪ್ರಭು ವಿವರಿಸಿದನು ; ಅವನು ಆಧ್ಯಾತ್ಮ ಕಿಡಿ. ಪರತತ್ತ್ವವು ಆಧ್ಯಾತ್ಮ ಪೂರ್ಣವು. ಏಳನೆಯ ಅಧ್ಯಾಯದಲ್ಲಿ ಜೀವಿಯು ಪರಮಪೂರ್ಣದ ವಿಭಿನ್ನಾಂಶವೆಂದು ಕೃಷ್ಣನು ಹೇಳುತ್ತಾ,ಮತ್ತು ಜೀವಿಯು ತನ್ನ ಗಮನವನ್ನು ಪೂರ್ಣವಾಗಿ ಪೂರ್ಣದಕಡೆಗೆ ತಿರುಗಿಸಬೇಕೆಂದು ಹೇಳುತ್ತಾನೆ. ಮತ್ತೆ ಎಂಟನೆಯ ಅಧ್ಯಾಯದಲ್ಲಿ ದೇಹ ಬಿಡುವಾಗ ಕೃಷ್ಣ ಚಿಂತನ ಮಾಡುವವನು ಪರವ್ಯೋಮಕ್ಕೆ, ಕೃಷ್ಣಧಾಮಕ್ಕೆ, ಕೂಡಲೇ ವರ್ಗಾಯಿಸ ಲ್ಪಡುವನೆಂದು ಹೇಳಿದೆ. ಆರನೆಯ ಅಧ್ಯಾಯದ ಕೊನೆಯಲ್ಲಿ ಎಲ್ಲ ಯೋಗಿಗಳಲ್ಲಿ, ತನ್ನ ಅಂತರಂಗದಲ್ಲಿ ಸದಾ ಕೃಷ್ಣಚಿಂತನ ಮಾಡುವವನು ಅತ್ಯಂತ ಪರಿಪೂರ್ಣಯೋಗಿ ಎಂದು ಭಾವಿಸಲ್ಪಟ್ಟಿದ್ದಾನೆ ಎಂಬುದಾಗಿ ಭಗವಂತನು ಸ್ಪಷ್ಟವಾಗಿ ಹೇಳಿದ್ದಾನೆ. ಹೀಗೆ ಪ್ರಾಯಃ ಪ್ರತಿಯೊಂದು ಅಧ್ಯಾಯದಲ್ಲಿ ಸಿದ್ಧಾಂತವೆಂದರೆ ಒಬ್ಬನು ಕೃಷ್ಣನ ವ್ಯಕ್ತಿರೂಪದಲ್ಲಿ ಆಸಕ್ತನಾಗಿರಬೇಕು, ಏಕೆಂದರೆ ಅದೇ ಅತ್ಯುನ್ನತ ಆಧ್ಯಾತ್ಮ ಸಾಕ್ಷಾತ್ಕಾರ.

ಆದಾಗ್ಯೂ, ಕೃಷ್ಣನ ವ್ಯಕ್ತಿಗತ ರೂಪದಲ್ಲಿ ಅನಾಸಕ್ತರಾದವರೂ ಇದ್ದಾರೆ. ಅವರು ಅದೆಷ್ಟು ದೃಢ ಅನಾಸಕ್ತರೆಂದರೆ ಭಗವದ್ಗೀತೆಯ ವ್ಯಾಖ್ಯಾನಗಳನ್ನು

ತಯಾರಿಸುವಾಗ ಕೂಡ, ಅವರು ಜನರನ್ನು ಕೃಷ್ಣನಿಂದ ಬೇರೆಡೆಗೆ ವಿಚಲಿತಗೊಳಿಸಿ ಎಲ್ಲ ಭಕ್ತಿಯನ್ನು ವ್ಯಕ್ತಿಶೂನ್ಯ ಬ್ರಹ್ಮಜ್ಯೋತಿಯ ಕಡೆಗೆ ತಿರುಗಿಸಬಯಸುತ್ತಾರೆ. ಅವರು ಇಂದ್ರಿಯಾತೀತವಾದ ಮತ್ತು ಅವ್ಯಕ್ತವಾದ ಪರತತ್ತ್ವದ ವ್ಯಕ್ತಿಶೂನ್ಯ ರೂಪದ ಧ್ಯಾನಕ್ಕೆ ಪ್ರಾಶಸ್ತ್ಯ ನೀಡುತ್ತಾರೆ.

ಆದ್ದರಿಂದ, ವಾಸ್ತವಿಕವಾಗಿ ದಿವ್ಯವಾದಿಗಳಲ್ಲಿ ಎರಡು ವರ್ಗಗಳು. ಈಗ ಯಾವ ಪ್ರಕ್ರಿಯೆಯು ಸುಲಭ ಮತ್ತು ಯಾವ ವರ್ಗವು ಅತ್ಯಂತ ಪರಿಪೂರ್ಣ ಎಂಬ ಪ್ರಶ್ನೆಯನ್ನು ಇತ್ಯರ್ಥಗೊಳಿಸಲು ಅರ್ಜುನನು ಯತ್ನಿಸುತ್ತಿದ್ದಾನೆ. ಅರ್ಥಾತ್ ಅವನು ಸ್ವಯಂ ಕೃಷ್ಣನ ವ್ಯಕ್ತಿಗತ ರೂಪಾನುಸಕ್ತನಾಗಿರುವುದರಿಂದ, ಅವನು ತನ್ನ ಸ್ವಂತ ನಿಲುವನ್ನೇ ಸ್ಪಷ್ಟೀಕರಿಸುತ್ತಿದ್ದಾನೆ. ಅವನು ವ್ಯಕ್ತಿಶೂನ್ಯ ಬ್ರಹ್ಮನ್‌ನಲ್ಲಿ ಅನಾಸಕ್ತನು. ಈ ನಿಲುವು ಭದ್ರವೇ ಎಂಬುದನ್ನು ಅವನು ತಿಳಿಯಬಯಸುತ್ತಾನೆ. ಈ ಭೌತಿಕ ಜಗತ್ತಿನಲ್ಲಾಗಲಿ ಅಥವಾ ಅಧ್ಯಾತ್ಮ ಜಗತ್ತಿನಲ್ಲಾಗಲಿ ಪರಮಪ್ರಭುವಿನ ವ್ಯಕ್ತಿಶೂನ್ಯ ವ್ಯಕ್ತತೆಯು ಧ್ಯಾನಿಸಲು ಸಮಸ್ಯೆ. ವಾಸ್ತವಿಕವಾಗಿ, ಒಬ್ಬನು ಪರತತ್ತ್ವದ ವ್ಯಕ್ತಿಶೂನ್ಯ ಲಕ್ಷಣವನ್ನು ಪರಿಪೂರ್ಣವಾಗಿ ಚಿಂತಿಸಲಾರನು. ಆದ್ದರಿಂದ "ಅಂಥ ಕಾಲಹರಣದಿಂದ ಪ್ರಯೋಜನವೇನು ?" ಎಂದು ಅರ್ಜುನನು ಹೇಳಬಯಸುತ್ತಾನೆ. ಕೃಷ್ಣನ ವ್ಯಕ್ತಿಗತ ರೂಪ ಅನುರಕ್ತಿಯು ಅತ್ಯುತ್ತಮ ಎಂದು ಅರ್ಜುನನು ಹನ್ನೊಂದನೆಯ ಅಧ್ಯಾಯದಲ್ಲಿ ಅನುಭವ ಹೊಂದಿದ್ದಾನೆ, ಏಕೆಂದರೆ ಅವನು ಏಕಕಾಲದಲ್ಲಿ ಎಲ್ಲ ಇತರೆ ರೂಪಗಳನ್ನು ಅರಿತುಕೊಳ್ಳಬಲ್ಲವನಾದನು ಮತ್ತು ಅವನ ಕೃಷ್ಣಪ್ರೇಮಕ್ಕೆ ಯಾವ ತೊಂದರೆ ಉಂಟಾಗಲಿಲ್ಲ. ಅರ್ಜುನನು ಕೃಷ್ಣನಲ್ಲಿ ಕೇಳಿದ ಈ ಮಹತ್ವದ ಪ್ರಶ್ನೆಯು ಪರತತ್ತ್ವದ ವ್ಯಕ್ತಿಶೂನ್ಯ ಮತ್ತು ವ್ಯಕ್ತಿಗತ ಕಲ್ಪನೆಗಳಲ್ಲಿರುವ ವ್ಯತ್ಯಾಸವನ್ನು ಸ್ಪಷ್ಟಪಡಿಸುತ್ತದೆ.

**ಶ್ರೀಭಗವಾನುವಾಚ:**

**ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।**
**ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ ॥ ೨ ॥**

ಶ್ರೀಭಗವಾನುವಾಚ—ಪರಮ ದೇವೋತ್ತಮ ಪುರುಷನು ನುಡಿದನು, ಮಯಿ—ನನ್ನಲ್ಲಿ, ಆವೇಶ್ಯ—ಸ್ಥಿತಗೊಳಿಸಿ, ಮನಃ—ಮನಸ್ಸು, ಯೇ—ಯಾರು, ಮಾಮ್—ನನ್ನನ್ನು, ನಿತ್ಯ—ಸದಾ, ಯುಕ್ತಾಃ—ನಿರತರಾಗಿ, ಉಪಾಸತೇ—ಆರಾಧಿಸುತ್ತಾರೋ ಶ್ರದ್ಧಯಾ—ಶ್ರದ್ಧೆಯಿಂದ, ಪರಯಾ—ದಿವ್ಯತೆಯೊಡನೆ, ಉಪೇತಾಃ—ಕೂಡಿ, ತೇ—ಅವರು, ಮೇ—ನನ್ನಿಂದ, ಯುಕ್ತ-ತಮಾಃ—ಯೋಗದಲ್ಲಿ ಅತ್ಯಂತ ಪರಿಪೂರ್ಣರೆಂದು, ಮತಾಃ—ಪರಿಗಣಿಸಲ್ಪಡುತ್ತಾರೆ.

**ಪರಮ ದೇವೋತ್ತಮ ಪುರುಷನು ನುಡಿದನು : ನನ್ನ ವ್ಯಕ್ತಿಗತ ರೂಪದಲ್ಲಿ ತಮ್ಮ ಮನಸ್ಸನ್ನು ಸ್ಥಿತಗೊಳಿಸುವವರು ಮತ್ತು ಸದಾ ಮಹಾ ದಿವ್ಯ ಶ್ರದ್ಧೆಯಿಂದ ನನ್ನ ಆರಾಧನೆಯಲ್ಲಿ ನಿರತರಾದವರು, ಅತ್ಯಂತ ಪರಿಪೂರ್ಣರೆಂದು ನನ್ನಿಂದ ಪರಿಗಣಿಸಲ್ಪಟ್ಟಿದ್ದಾರೆ.**

**ಭಾವಾರ್ಥ :** ತನ್ನ ವ್ಯಕ್ತಿಗತರೂಪದ ಮೇಲೆ ಚಿತ್ತೈಕಾಗ್ರತೆ ಮಾಡುವವರು ಮತ್ತು ತನ್ನನ್ನು ಶ್ರದ್ಧಾಭಕ್ತಿಯಿಂದ ಆರಾಧಿಸುವವರು ಅತ್ಯಂತ ಪರಿಪೂರ್ಣ ಯೋಗಿಗಳು ಎಂದು ಭಾವಿಸಲ್ಪಡಬೇಕೆಂದು ಕೃಷ್ಣನು ಅರ್ಜುನನ ಪ್ರಶ್ನೆಗೆ ಸ್ಪಷ್ಟವಾಗಿ ಉತ್ತರಿಸುತ್ತಾನೆ. ಇಂಥ ಕೃಷ್ಣ ಪ್ರಜ್ಞೆಯಲ್ಲಿ ಇರುವವನಿಗೆ ಭೌತಿಕ ಚಟುವಟಿಕೆಗಳು ಎಂಬುದಿಲ್ಲ. ಏಕೆಂದರೆ ಪ್ರತಿಯೊಂದೂ ಕೃಷ್ಣನಿಗಾಗಿ ಮಾಡಿದೆ. ಶುದ್ಧ ಭಕ್ತನು ಸದಾ ನಿರತನು. ಕೆಲವು ಸಲ ಅವನು ಜಪಿಸುತ್ತಾನೆ, ಕೆಲವು ಸಲ ಶ್ರವಣ ಮಾಡುತ್ತಾನೆ,ಕೆಲವು ಸಲ ಕೃಷ್ಣನನ್ನು ಕುರಿತ ಗ್ರಂಥಗಳನ್ನು ಓದುತ್ತಾನೆ, ಅಥವಾ ಕೆಲವು ಸಲ ಕೃಷ್ಣ ಪ್ರಸಾದವನ್ನು ಪಾಕ ಮಾಡುತ್ತಾನೆ, ಅಥವಾ ಕೃಷ್ಣನಿಗಾಗಿ ಏನನ್ನೋ ತರಲು ಪೇಟೆಗೆ ಹೋಗುತ್ತಾನೆ, ಅಥವಾ ಕೆಲವು ಸಲ ಅವನು ಮಂದಿರ ಮಾರ್ಜನ ಮಾಡುತ್ತಾನೆ, ಅಥವಾ ತಟ್ಟೆ ತೊಳೆಯುತ್ತಾನೆ— ಅವನು ಏನೇ ಮಾಡಲಿ, ತನ್ನ ಚಟುವಟಿಕೆಗಳು ಕೃಷ್ಣಭಕ್ತಿ ಇಲ್ಲದೆ ಒಂದು ಕ್ಷಣವೂ ನಡೆಯದಂತೆ ನೋಡಿಕೊಳ್ಳುತ್ತಾನೆ. ಅಂಥ ಕ್ರಿಯೆಯು ಪೂರ್ಣ ಸಮಾಧಿಯಲ್ಲಿ ನಡೆಯುತ್ತದೆ.

**ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।**
**ಸರ್ವತ್ರಗಮಚಿನ್ತ್ಯಂ ಚ ಕೂಟಸ್ಥಮಚಲಂ ಧ್ರುವಮ್ ॥ ೩ ॥**
**ಸನ್ನಿಯಮ್ಯೇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ ।**
**ತೇ ಪ್ರಾಪ್ನುವನ್ತಿ ಮಾಮೇವ ಸರ್ವಭೂತಹಿತೇ ರತಾಃ ॥ ೪ ॥**

ಯೇ—ಯಾರು, ತು—ಆದರೆ, ಅಕ್ಷರಮ್—ಇಂದ್ರಿಯಾಗೋಚರಾತೀತ, ಅನಿರ್ದೇಶ್ಯಮ್—ಅನಿರ್ದೇಶ್ಯವಾದ, ಅವ್ಯಕ್ತಮ್—ಅವ್ಯಕ್ತವನ್ನು, ಪರ್ಯುಪಾಸತೇ—ಆರಾಧಿಸುವಲ್ಲಿ ಸಂಪೂರ್ಣವಾಗಿ ನಿರತರು, ಸರ್ವತ್ರಗಮ್—ಸರ್ವವ್ಯಾಪಕವಾದ, ಅಚಿನ್ತ್ಯಮ್—ಭಾವಿಸಲಾಗದ, ಚ—ಕೂಡ, ಕೂಟಸ್ಥಮ್—ಬದಲಾವಣೆ ಇಲ್ಲದ, ಅಚಲಮ್—ಸ್ಥಿರವಾದ, ಧ್ರುವಮ್—ನಿಶ್ಚಿತ, ಸನ್ನಿಯಮ್ಯ—ನಿಯಂತ್ರಿಸಿ, ಇಂದ್ರಿಯ-ಗ್ರಾಮಮ್—ಎಲ್ಲ ಇಂದ್ರಿಯಗಳನ್ನು, ಸರ್ವತ್ರ—ಎಲ್ಲ ಕಡೆಯಲ್ಲಿ, ಸಮ-ಬುದ್ಧಯಃ—ಸಮಬುದ್ಧಿಯವರು, ತೇ—ಅವರು, ಪ್ರಾಪ್ನುವನ್ತಿ—ಹೊಂದುತ್ತಾರೆ, ಮಾಮ್—ನನ್ನನ್ನು, ಏವ—ಖಂಡಿತವಾಗಿ, ಸರ್ವಭೂತ-ಹಿತೇ—ಸಕಲ ಜೀವಿಗಳ ಹಿತಕ್ಕಾಗಿ, ರತಾಃ—ತೊಡಗಿದವರು.

**ಆದರೆ, ಇಂದ್ರಿಯ ಗೋಚರಾತೀತವಾದ, ಅವ್ಯಕ್ತ ಸರ್ವವ್ಯಾಪಕವಾದ, ಅಚಿಂತ್ಯವಾದ, ಬದಲಾವಣೆ ಇಲ್ಲದ, ನಿಶ್ಚಿತವಾದ ಮತ್ತು ಅಚಲವಾದ ಅವ್ಯಕ್ತತೆಯ ಪರತತ್ತ್ವದ ವ್ಯಕ್ತಿಶೂನ್ಯಕಲ್ಪನೆಯ ಪೂರ್ಣಾರಾಧಕರು, ಸಕಲೇಂದ್ರಿಯಗಳ ನಿಯಂತ್ರಣದಿಂದ ಮತ್ತು ಪ್ರತಿಯೊಬ್ಬರಿಗೂ ಸಮವಾಗಿದ್ದು ಸಕಲ ಕಲ್ಯಾಣತರಾಗಿ, ಕೊನೆಗೆ ನನ್ನನ್ನು ಹೊಂದುತ್ತಾರೆ.**

**ಭಾವಾರ್ಥ :** ಪರಮ ದೇವೋತ್ತಮ ಕೃಷ್ಣನನ್ನು ಸಾಕ್ಷಾತ್ತಾಗಿ ಆರಾಧಿಸದವರು, ಆದರೆ ಆ ಧ್ಯೇಯವನ್ನು ಪರೋಕ್ಷ ವಿಧಾನದಿಂದ ಹೊಂದಲೆತ್ನಿಸುವವರು ಕೂಡ, ಕೊನೆಗೆ

ಅದೇ ಗುರಿಯನ್ನು, ಶ್ರೀಕೃಷ್ಣನನ್ನು, ಹೊಂದುತ್ತಾರೆ. "ಅನೇಕ ಜನ್ಮಗಳ ತರುವಾಯ, ಜ್ಞಾನವುಳ್ಳವರು ವಾಸುದೇವನೇ ಸರ್ವಂ ಎಂದು ತಿಳಿದು ನನ್ನಲ್ಲಿ ಆಶ್ರಯ ಹೊಂದುತ್ತಾರೆ." ಒಬ್ಬನು ಅನೇಕ ಜನ್ಮಗಳ ತರುವಾಯ ಪೂರ್ಣ ಜ್ಞಾನಕ್ಕೆ ಬಂದಾಗ ಅವನು ಶ್ರೀಕೃಷ್ಣನಿಗೆ ಶರಣಾಗತನಾಗುತ್ತಾನೆ. ಆದರೆ, ಒಬ್ಬನು ಈ ಶ್ಲೋಕದಲ್ಲಿ ಹೇಳಿದ ವಿಧಾನದಿಂದ ದೇವೋತ್ತಮನ ಬಳಿಗೆ ಹೋಗುವುದಾದರೆ ಅವನು ಇಂದ್ರಿಯ ನಿಗ್ರಹ ಮಾಡಬೇಕು, ಪ್ರತಿಯೊಬ್ಬರಿಗೂ ಸೇವೆ ಸಲ್ಲಿಸಬೇಕು ಮತ್ತು ಸರ್ವಜೀವಿಗಳ ಕಲ್ಯಾಣದಲ್ಲಿ ನಿರತನಾಗಬೇಕು. ಒಬ್ಬನು ಶ್ರೀಕೃಷ್ಣನ ಬಳಿಗೆ ಹೋಗಬೇಕು, ಅನ್ಯಥಾ ಪರಿಪೂರ್ಣ ಸಾಕ್ಷಾತ್ಕಾರವಿಲ್ಲ ಎಂಬುದು ಎಂದು ಹೇಳಿದೆ. ಒಬ್ಬನು ಅವನಿಗೆ ಪೂರ್ಣಶರಣಾಗತನಾಗುವ ಮೊದಲು ಅನೇಕ ಸಲ ಸಾಕಷ್ಟು ತಪಸ್ಸು ಮಾಡಬೇಕಾಗುವುದು.

ವ್ಯಕ್ತಿಗತ ಆತ್ಮನಲ್ಲಿ ಪರಮಾತ್ಮನನ್ನು ಕಾಣಲು, ಒಬ್ಬನು ನೋಡುವ, ಕೇಳುವ, ಆಸ್ವಾದಿಸುವ, ಕರ್ಮಮಾಡುವ ಇತ್ಯಾದಿ ಇಂದ್ರಿಯ ಚಟುವಟಿಕೆಗಳನ್ನು ನಿಲ್ಲಿಸಬೇಕಾಗುವುದು. ಆಗ ಪರಮಾತ್ಮನು ಸರ್ವತ್ರದಲ್ಲಿದ್ದಾನೆ ಎಂಬ ಅರಿವು ಅವನಿಗೆ ಒದಗುತ್ತದೆ. ಈ ಸಾಕ್ಷಾತ್ಕಾರ ಹೊಂದಿ, ಅವನು ಯಾವ ಜೀವಿಯ ಬಗ್ಗೆಯೂ ಅಸೂಯೆಪಡುವುದಿಲ್ಲ—ಅವನು ಮಾನವ ಮತ್ತು ಪ್ರಾಣಿಯ ನಡುವೆ ವ್ಯತ್ಯಾಸ ಕಾಣುವುದಿಲ್ಲ. ಏಕೆಂದರೆ ಅಲ್ಲಿ ಆತ್ಮನನ್ನು ಮಾತ್ರ ಕಾಣುತ್ತಾನೆ. ಹೊರ ಆವರಣವನ್ನಲ್ಲ, ಆದರೆ ಸಾಮಾನ್ಯ ಮಾನವನಿಗೆ ಈ ವ್ಯಕ್ತಿಶೂನ್ಯ ಸಾಕ್ಷಾತ್ಕಾರ ವಿಧಾನವು ಬಹು ಕಷ್ಟ.

**ಕ್ಲೇಶೋऽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಮ್ ।**
**ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥ ೫ ॥**

ಕ್ಲೇಶಃ—ತೊಂದರೆಯು, ಅಧಿಕ-ತರಃ—ಬಹಳಷ್ಟು, ತೇಷಾಮ್—ಅವರ, ಅವ್ಯಕ್ತ—ಅವ್ಯಕ್ತಕ್ಕೆ, ಆಸಕ್ತ—ಆಸಕ್ತರು, ಚೇತಸಾಮ್—ಯಾರ ಮನಸ್ಸು, ಅವ್ಯಕ್ತಾ—ಅವ್ಯಕ್ತದಕಡೆಗೆ, ಹಿ—ಖಂಡಿತವಾಗಿ, ಗತಿಃ—ಪ್ರಗತಿಯು, ದುಃಖಮ್—ತೊಂದರೆಯಿಂದ, ದೇಹವದ್ಭಿಃ—ದೇಹಿಯಿಂದ, ಅವಾಪ್ಯತೇ—ಹೊಂದಲ್ಪಡುತ್ತದೆ.

**ಅವ್ಯಕ್ತಕ್ಕೆ, ಪರಮನ ವ್ಯಕ್ತಿಶೂನ್ಯ ಲಕ್ಷಣಕ್ಕೆ, ಮನಸ್ಸು ಆಸಕ್ತರಾದವರಿಗೆ ಪ್ರಗತಿ ಬಹುಕಷ್ಟಕರ. ಆ ಮಾರ್ಗದಲ್ಲಿ ಪ್ರಗತಿ ಸಾಧಿಸುವುದು ದೇಹಿಗಳಿಗೆ ಸದಾ ದುಸ್ತರ.**

**ಭಾವಾರ್ಥ :** ಪರಮಪ್ರಭುವಿನ ಅಚಿಂತ್ಯ,ಅವ್ಯಕ್ತ, ವ್ಯಕ್ತಿಶೂನ್ಯ ಲಕ್ಷಣದ ಮಾರ್ಗಾನುಸಾರಿಗಳಾದ, ದಿವ್ಯವಾದಿಗಳ, ಗುಂಪಿನವರನ್ನು ಜ್ಞಾನಯೋಗಿಗಳು ಎಂದು ಕರೆದಿದೆ, ಮತ್ತು ಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಭಗವಂತನಿಗೆ ಭಕ್ತಿಯುತ ಸೇವಾನಿರತರನ್ನು ಭಕ್ತಿಯೋಗಿಗಳೆಂದು ಕರೆದಿದೆ. ಈಗ ಇಲ್ಲಿ ಜ್ಞಾನಯೋಗ ಮತ್ತು ಭಕ್ತಿಯೋಗದ ವ್ಯತ್ಯಾಸವನ್ನು ನಿರ್ದಿಷ್ಟವಾಗಿ ವ್ಯಕ್ತಪಡಿಸಿದೆ.ಜ್ಞಾನಯೋಗ ಪ್ರಕ್ರಿಯೆಯು ಕೊನೆಗೆ ಅದೇ ಗುರಿಗೆ ಕರೆದೊಯ್ಯುವುದಾದರೂ ಬಹು ಕಷ್ಟಸಾಧ್ಯ, ಆದರೆ ಭಕ್ತಿಯೋಗ ಮಾರ್ಗವು, ಎಂದರೆ

ಪರಮ ದೇವೋತ್ತಮ ಪುರುಷನ ಸಾಕ್ಷಾತ್ ಸೇವೆಯಲ್ಲಿರುವ ಪ್ರಕ್ರಿಯೆಯು ಸುಲಭ ವಾದುದು, ಮತ್ತು ದೇಹಗತ ಆತ್ಮನಿಗೆ ಅದು ಸ್ವಾಭಾವಿಕವಾದುದು. ವ್ಯಕ್ತಿಗತ ಆತ್ಮನು ಅನಾದಿಕಾಲದಿಂದ ದೇಹಗತನು. ತಾನು ದೇಹವಲ್ಲ ಎಂದು ಸುಮ್ಮನೆ ತಾತ್ವಿಕವಾಗಿ ಅರಿತುಕೊಳ್ಳುವುದು ಅವನಿಗೆ ಬಹು ಕಷ್ಟ. ಆದ್ದರಿಂದ, ಕೃಷ್ಣಮೂರ್ತಿಯು ಪೂಜ್ಯವೆಂದು ಭಕ್ತಿಯೋಗಿಯು ಅಂಗೀಕರಿಸುವುದು, ಏಕೆಂದರೆ ಮನಸ್ಸಿನಲ್ಲಿ ಒಂದು ದೈಹಿಕ ಕಲ್ಪನೆಯು ಸ್ಥಿತವಾಗಿ,ಅದನ್ನು ಅನ್ವಯಿಸಿಕೊಳ್ಳಬಹುದು. ದೇವಾಲಯದಲ್ಲಿನ ಪರಮ ದೇವೋತ್ತಮ ಪುರುಷನ ರೂಪ ಆರಾಧನೆಯು ಕೇವಲ ವಿಗ್ರಹಾರಾಧನೆಯಲ್ಲ. ಉಪಾಸನೆಯು ಸಗುಣ ಮತ್ತು ನಿರ್ಗುಣವಾಗಿರಬಹುದೆಂದು ವೇದ ಸಾಹಿತ್ಯದಲ್ಲಿ ಪ್ರಮಾಣ ವಚನಗಳಿವೆ. ಮಂದಿರಗತ ಮೂರ್ತಿ ಪೂಜೆಯು ಸಗುಣೋಪಾಸನೆ, ಏಕೆಂದರೆ ಭಗವಂತನು ಭೌತಿಕ ಗುಣಗಳಿಂದ ಪ್ರತಿನಿಧಿತನು. ಆದರೆ ಶಿಲೆ, ಮರ ಅಥವಾ ತೈಲ ಚಿತ್ರದಂಥ ಭೌತಿಕ ವಸ್ತುಗಳಿಂದ ಭಗವಂತನ ರೂಪವು ಪ್ರತಿನಿಧಿತವಾಗಿದ್ದರೂ ಅದು ವಾಸ್ತವಿಕವಾಗಿ ಭೌತಿಕವಲ್ಲ. ಅದು ಪರಮ ಪ್ರಭುವಿನ ಪರಾಪ್ರಕೃತಿ.

ಒಂದು ಸ್ಥೂಲ ಉದಾಹರಣೆಯನ್ನು ಇಲ್ಲಿ ನೀಡಬಹುದು. ನಾವು ಬೀದಿಯಲ್ಲಿ ಕೆಲವು ಅಂಚೆ ಪೆಟ್ಟಿಗೆಗಳನ್ನು ಕಾಣಬಹುದು ಮತ್ತು ಆ ಪೆಟ್ಟಿಗೆಗಳಲ್ಲಿ ಪತ್ರಗಳನ್ನು ಹಾಕಿ ದರೆ ಅವು ಯಾವ ತೊಂದರೆ ಇಲ್ಲದೆ ಸ್ವಾಭಾವಿಕವಾಗಿ ತಮ್ಮ ಗುರಿ ತಲುಪುತ್ತವೆ. ಆದರೆ ಯಾವುದೇ ಹಳೆಯ ಪೆಟ್ಟಿಗೆ ಅಥವಾ ಎಲ್ಲಿಯೋ ಇರುವ ಒಂದು ನಕಲಿ ಪೆಟ್ಟಿಗೆ ಅಥವಾ ಅಂಚೆ ಕಛೇರಿಯಿಂದ ಅಧಿಕೃತವಲ್ಲದ ಪೆಟ್ಟಿಗೆ ಇದ್ದರೆ ಅದರಿಂದ ಕಾರ್ಯಸಿದ್ಧಿಸುವುದಿಲ್ಲ. ಮೂರ್ತಿರೂಪವು ಅವನ ಅಧಿಕೃತ ಪ್ರಾತಿನಿಧ್ಯ. ಅದೇ ಪ್ರಕಾರ ಭಗವಂತನು ಅದನ್ನು ಅರ್ಚಾ-ವಿಗ್ರಹವೆಂದು ಕರೆದಿರುವ ಈ ಅರ್ಚಾ ವಿಗ್ರಹವು ಪರಮ ಪ್ರಭುವಿನ ಅವತಾರ. ಭಗವಂತನು ಆ ರೂಪದ ಮೂಲಕ ಸೇವೆ ಸ್ವೀಕರಿಸುತ್ತಾನೆ. ಭಗವಂತನು ಸರ್ವಶಕ್ತನು, ಸರ್ವಸಮರ್ಥನು, ಆದ್ದರಿಂದ ತನ್ನ ಅರ್ಚಾ-ವಿಗ್ರಹ ಅವತಾರದಿಂದ ಬದ್ಧ ಜೀವನದಲ್ಲಿ ಮಾನವನಿಗೆ ಅನುಕೂಲ ಮಾಡಲು ಅವನು ಭಕ್ತನ ಸೇವೆಗಳನ್ನು ಸ್ವೀಕರಿಸಬಹುದು. ಆದ್ದರಿಂದ ಭಕ್ತನಿಗೆ ಪರಮನನ್ನು ಕೂಡಲೇ ಮತ್ತು ಸಾಕ್ಷಾತ್ತಾಗಿ ತಲುಪುವಲ್ಲಿ ಯಾವ ತೊಂದರೆಯೂ ಇಲ್ಲ. ಆದರೆ ಆಧ್ಯಾತ್ಮ ಸಾಕ್ಷಾತ್ಕಾರದ ವ್ಯಕ್ತಿಶೂನ್ಯ ಮಾರ್ಗಾನುಸಾರಿಗಳಿಗೆ ಈ ಪಥವು ದುಸ್ತರ. ಅವರು ಪರಮನ ಅವ್ಯಕ್ತ ಪ್ರತಿನಿಧಿತ್ವ ವನ್ನು ಉಪನಿಷತ್ತಿನಂಥ ವೈದಿಕ ಸಾಹಿತ್ಯಗಳ ಮೂಲಕ ಅರಿತುಕೊಳ್ಳಬೇಕಾಗುವುದು, ಮತ್ತು ಅವರು ಆ ಭಾಷೆಯನ್ನು ಕಲಿತುಕೊಳ್ಳಬೇಕು. ಕಲ್ಪನೆಗೆ ನಿಲುಕದ ಭಾವನೆಗಳನ್ನು ಅರಿತುಕೊಳ್ಳಬೇಕು, ಮತ್ತು ಈ ಎಲ್ಲ ಪ್ರಕ್ರಿಯೆಗಳನ್ನು ಸಾಕ್ಷಾತ್ಕರಿಸಿಕೊಳ್ಳಬೇಕು. ಇದು ಸಾಮಾನ್ಯ ಮಾನವನಿಗೆ ಅಷ್ಟು ಸುಲಭವಲ್ಲ. ಕೃಷ್ಣಪ್ರಾಜ್ಞನು ಭಕ್ತಿಯುತ ಸೇವಾ ನಿರತನಾಗಿ ಯೋಗ್ಯ ಗುರುಗಳ ಮಾರ್ಗದರ್ಶನದಿಂದಲೇ, ಸುಮ್ಮನೆ ಭಗವದ್ ಮೂರ್ತಿಗೇ ನಿಯಂತ್ರಿತ ನಮಸ್ಕಾರಗಳ ಅರ್ಪಣೆಗಳಿಂದಲೇ, ಮಹಿಮೆ ಗಳ ಶ್ರವಣದಿಂದಲೇ ಮತ್ತು ಭಗವಂತನ ನೈವೇದ್ಯಶೇಷ ಭೋಜನದಿಂದಲೇ ಬಹು ಸುಲಭವಾಗಿ ಪರಮ ದೇವೋತ್ತಮ ಪುರುಷನನ್ನು ಸಾಕ್ಷಾತ್ಕರಿಸುತ್ತಾನೆ.

ವ್ಯಕ್ತಿಶೂನ್ಯವಾದಿಗಳು ಕೊನೆಗೆ ಪರತತ್ತ್ವ ಸಾಕ್ಷಾತ್ಕಾರ ಸಾಧ್ಯವಾಗದೇಹೋಗಬಹುದಾದ ದುಸ್ತರ ಮಾರ್ಗವನ್ನು ಅನವಶ್ಯಕವಾಗಿ ಅನುಸರಿಸುತ್ತಾರೆ ಎಂಬುದರಲ್ಲಿ ಸಂದೇಹವಿಲ್ಲ. ಆದರೆ ವ್ಯಕ್ತಿವಾದಿಯು, ಯಾವ ಅಪಾಯ, ತೊಂದರೆ ಅಥವಾ ಕಷ್ಟವಿಲ್ಲದೆ. ಸಾಕ್ಷಾತ್ತಾಗಿ ಪರಮ ಪುರುಷನನ್ನು ತಲುಪುತ್ತಾನೆ. ಇದೇ ಬಗೆಯ ಒಂದು ಭಾಗವು ಶ್ರೀಮದ್‌ಭಾಗವತದಲ್ಲಿ ಕಾಣುತ್ತದೆ. ಒಬ್ಬನು ಕೊನೆಗೆ ಪರಮ ದೇವೋತ್ತಮ ಪುರುಷನಿಗೆ ಶರಣಾಗತನಾಗಲೇ ಬೇಕಾದರೆ (ಈ ಶರಣಾಗತಿಯನ್ನು ಭಕ್ತಿ ಎಂದು ಕರೆದಿದೆ) ಆದರ ಬದಲಾಗಿ ಬ್ರಹ್ಮನ್ ಎಂದರೆ ಏನು ಅಥವಾ ಯಾವುದು ಬ್ರಹ್ಮನ್ ಅಲ್ಲ ಎಂಬುದನ್ನು ಅರಿತುಕೊಳ್ಳುವ ಶ್ರಮವಹಿಸಿದರೆ ಮತ್ತು ಇಡೀ ಜೀವನವನ್ನು ಆ ರೀತಿಯಲ್ಲಿಯೇ ಕಳೆದರೆ ದೊರೆಯುವ ಫಲ ಕೇವಲ ಕಷ್ಟಕರ ಎಂದು ಅಲ್ಲಿ ಹೇಳಿದೆ.ಆದ್ದರಿಂದ ಒಬ್ಬನು ಆತ್ಮ ಸಾಕ್ಷಾತ್ಕಾರದ ಈ ಕಷ್ಟಕರ ಮಾರ್ಗವನ್ನು ಅನುಸರಿಸಕೂಡದೆಂದು ಇಲ್ಲಿ ಹೇಳಿದೆ, ಏಕೆಂದರೆ ಅಂತಿಮ ಫಲ ಅನಿಶ್ಚಿತ.

ಜೀವಿಯು ಶಾಶ್ವತ ವ್ಯಕ್ತಿಗತ ಆತ್ಮ, ಮತ್ತು ಅವನು ಅಧ್ಯಾತ್ಮ ಪೂರ್ಣತೆಯಲ್ಲಿ ಲೀನವಾಗಬಯಸಿದರೆ, ಅವನು ಅವನ ಮೂಲ ಪ್ರಕೃತಿಯು ಶಾಶ್ವತ ಮತ್ತು ಜ್ಞೇಯ ಅಂಶಗಳ ಸಾಕ್ಷಾತ್ಕಾರ ಸಾಧಿಸಬಹುದು, ಆದರೆ ಆನಂದ ಭಾಗದ ಸಾಕ್ಷಾತ್ಕಾರ ಆಗುವುದಿಲ್ಲ. ಅಂಥ ಜ್ಞಾನಯೋಗ ಪ್ರಕ್ರಿಯೆಯಲ್ಲಿ ಘನ ವಿದ್ವಾಂಸನಾದ ದಿವ್ಯವಾದಿಯು ಒಬ್ಬ ಭಕ್ತನ ಅನುಗ್ರಹದಿಂದ ಭಕ್ತಿಯೋಗದ ಘಟ್ಟಕ್ಕೆ ಬರಬಹುದು. ಆಗ ವ್ಯಕ್ತಿಶೂನ್ಯ—ದೀರ್ಘ ಉಪಾಸನೆಯು ಕೂಡ ಕಷ್ಟದ ಮೂಲವಾಗಿ ಪರಿಗಣಿಸಬಹುದು, ಏಕೆಂದರೆ ಅವನು ಆ ಕಲ್ಪನೆಯನ್ನು ಬಿಡಲಾಗುವುದಿಲ್ಲ. ಆದ್ದರಿಂದ ದೇಹಗತ ಆತ್ಮನು ಸಾಧನೆಯ ಕಾಲದಲ್ಲಿ ಮತ್ತು ಸಾಕ್ಷಾತ್ಕಾರದ ಕಾಲದಲ್ಲಿ ಮತ್ತು ಉಭಯ ಸಮಯಗಳಲ್ಲಿ ಅವ್ಯಕ್ತದೊಂದಿಗೆ ಸದಾ ಕಷ್ಟಕ್ಕೆ ಸಿಲುಕುತ್ತಾನೆ. ಪ್ರತಿಯೊಬ್ಬ ಚೇತನಾತ್ಮನು ಭಾಗಶಃ ಸ್ವತಂತ್ರ ಮತ್ತು ಈ ಅವ್ಯಕ್ತ ಸಾಕ್ಷಾತ್ಕಾರವು ಅವನ ಸ್ವಾಭಾವಿಕ ಅಧ್ಯಾತ್ಮ ಆತ್ಮಾನಂದಕ್ಕೆ ವಿರುದ್ಧವಾದುದು ಎಂಬುದನ್ನು ಖಚಿತವಾಗಿ ತಿಳಿದುಕೊಳ್ಳಬೇಕು. ಒಬ್ಬನು ಈ ಪ್ರಕ್ರಿಯೆಯನ್ನು ಅನುಸರಿಸಕೂಡದು. ಪ್ರತಿಯೊಬ್ಬ ವ್ಯಕ್ತಿಗತ ಜೀವಿಗೆ ಭಕ್ತಿಯುತ ಸೇವೆಯು ಪೂರ್ಣ ನಿರತತೆಯನ್ನು ಒಳಗೊಂಡ ಕೃಷ್ಣಪ್ರಜ್ಞಾ ಪ್ರಕ್ರಿಯೆಯು ಅತ್ಯುತ್ತಮ ಮಾರ್ಗ. ಒಬ್ಬನು ಈ ಭಕ್ತಿಯುತ ಸೇವೆಯನ್ನು ಉಪೇಕ್ಷಿಸಬಯಸಿದರೆ, ನಾಸ್ತಿಕನಾಗುವ ಅಪಾಯವಿದೆ, ಈ ಶ್ಲೋಕದಲ್ಲಿ ಆಗಲೇ ಹೇಳಿರುವಂತೆ, ಇಂದ್ರಿಯ ಗೋಚರಾತೀತವಾದ ಅವ್ಯಕ್ತ, ಅಚಿಂತ್ಯದ ಕಡೆಗೆ ಗಮನವನ್ನು ಕೇಂದ್ರೀಕರಿಸುವ ಪ್ರಕ್ರಿಯೆಯು ವಿಶೇಷವಾಗಿ ಈ ಯುಗದಲ್ಲಿ ಎಂದೂ ಪ್ರೋತ್ಸಾಹಿಸಲ್ಪಡಕೂಡದು. ಅದು ಕೃಷ್ಣನಿಂದ ಹೇಳಲ್ಪಟ್ಟಿಲ್ಲ.

**ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ ।**
**ಅನನ್ಯೇನೈವ ಯೋಗೇನ ಮಾಂ ಧ್ಯಾಯನ್ತ ಉಪಾಸತೇ ॥ ೬ ॥**
**ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।**
**ಭವಾಮಿ ನ ಚಿರಾತ್ ಪಾರ್ಥ ಮಯ್ಯಾವೇಶಿತಚೇತಸಾಮ್ ॥ ೭ ॥**

ಯೇ—ಯಾರು, ತು—ಆದರೆ, ಸರ್ವಾಣಿ—ಎಲ್ಲ, ಕರ್ಮಾಣಿ—ಚಟುವಟಿಕೆಗಳನ್ನು, ಮಯಿ—ನನಗೆ, ಸಂನ್ಯಸ್ಯ—ಅರ್ಪಿಸಿ, ಮತ್‌ಪರಾಃ—ನನ್ನಲ್ಲಿ ಆಸಕ್ತರಾಗಿ, ಅನನ್ಯೇನ—ವಿಚಲಿತರಾಗದೆ, ಏವ—ಖಂಡಿತವಾಗಿ, ಯೋಗೇನ—ಅಂಥ ಭಕ್ತಿಯೋಗ ಸಾಧನೆಯಿಂದ, ಮಾಮ್—ನನ್ನನ್ನು, ಧ್ಯಾಯನ್ತಃ—ಧ್ಯಾನ ಮಾಡುತ್ತಾ, ಉಪಾಸತೇ—ಆರಾಧಿಸುತ್ತಾರೆ, ತೇಷಾಮ್—ಅವರ, ಅಹಮ್—ನಾನು, ಸಮುದ್ಧರ್ತಾ—ಉದ್ಧಾರಕನು, ಮೃತ್ಯು—ಮೃತ್ಯುವಿನಿಂದ, ಸಂಸಾರ—ಭೌತಿಕ ಅಸ್ತಿತ್ವದ, ಸಾಗರಾತ್—ಸಾಗರದಿಂದ, ಭವಾಮಿ—ಆಗುತ್ತೇನೆ, ನ—ಇಲ್ಲ, ಚಿರಾತ್—ಅನತಿ ಕಾಲದಲ್ಲಿ, ಪಾರ್ಥ—ಹೇ ಪೃಥಾ ಪುತ್ರನೇ, ಮಯಿ—ನನ್ನಲ್ಲಿ, ಆವೇಶಿತ—ಸ್ಥಿರಗೊಳಿಸಿ, ಚೇತಸಾಮ್—ಮನಸ್ಸುಳ್ಳವರ.

**ಆದರೆ ತಮ್ಮ ಎಲ್ಲ ಕರ್ಮಗಳನ್ನು ನನಗೆ ಅರ್ಪಿಸಿ, ವಿಚಲಿತರಾಗದೆ ನನಗೆ ಅರ್ಪಿತರಾಗಿ ಭಕ್ತಿಯುತ ಸೇವಾ ನಿರತರಾಗಿ, ತಮ್ಮ ಮನಸ್ಸುಗಳನ್ನು ನನ್ನಲ್ಲಿ ಸ್ಥಿತಗೊಳಿಸಿ ನನ್ನನ್ನು ಸದಾ ಧ್ಯಾನ ಮಾಡುತ್ತ, ನನ್ನನ್ನೇ ಆರಾಧಿಸುವವರಿಗೆ, ಹೇ ಪೃಥಾ ಪುತ್ರನೇ— ಅವರಿಗೆ, ನಾನು, ಜನನ ಮರಣ ಸಾಗರದಿಂದ ಶೀಘ್ರ ಉದ್ಧಾರಕನಾಗುತ್ತೇನೆ.**

**ಭಾವಾರ್ಥ :** ಭಕ್ತರು ಭಗವಂತನಿಂದ ಬಹು ಬೇಗನೇ ಭೌತಿಕ ಅಸ್ತಿತ್ವದಿಂದ ಉದ್ಧಾರ ಹೊಂದುವ ಬಹು ಭಾಗ್ಯ ಶಾಲಿಗಳು ಎಂಬುದು ಇಲ್ಲಿ ಸ್ಪಷ್ಟ ನಿರೂಪಿತ. ಶುದ್ಧ ಭಕ್ತಿಯುತ ಸೇವೆಯಲ್ಲಿ ಒಬ್ಬನು ಭಗವಂತನು ದೊಡ್ಡವನು ಮತ್ತು ವ್ಯಕ್ತಿಗತ ಆತ್ಮನು ಅವನಿಗೆ ಆಧೀನ ಎಂಬ ಸಾಕ್ಷಾತ್ಕಾರಕ್ಕೆ ಬರುತ್ತಾನೆ. ಭಗವಂತನಿಗೆ ಸೇವೆ ಸಲ್ಲಿಸುವುದು ಅವನ ಕರ್ತವ್ಯ —ಹಾಗೆ ಮಾಡದಿದ್ದರೆ, ಅವನು ಮಾಯೆಗೆ ಸೇವೆ ಮಾಡುತ್ತಾನೆ.

ಮುಂಚೆ ಹೇಳಿದಂತೆ ಭಗವಂತನನ್ನು ಭಕ್ತಿಯುತ ಸೇವೆಯಿಂದ ಮಾತ್ರ ಅರಿತುಕೊಳ್ಳಬಹುದು. ಆದ್ದರಿಂದ ಒಬ್ಬನು ಪೂರ್ಣ ಭಕ್ತಿಯುತನಾಗಬೇಕು. ಒಬ್ಬನು ಕೃಷ್ಣಪ್ರಾಪ್ತಿಗಾಗಿ ಕೃಷ್ಣನಲ್ಲಿ ಸ್ಥಿತನಾಗಬೇಕು. ಕೃಷ್ಣನಿಗಾಗಿ ಮಾತ್ರವೇ ಒಬ್ಬನು ಕರ್ಮ ಮಾಡಬೇಕು, ಅವನು ಯಾವುದೇ ಕೆಲಸದಲ್ಲಿ ತೊಡಗಿದ್ದರೂ ಚಿಂತೆಯಿಲ್ಲ. ಆದರೆ ಆ ಕೆಲಸವು ಕೃಷ್ಣನಿಗಾಗಿಯೇ ಮಾಡಲ್ಪಡಬೇಕು. ಅದು ಭಕ್ತಿಯುತ ಸೇವೆಯ ಮಾನಕ. ಭಕ್ತನು ಪರಮ ದೇವೋತ್ತಮ ಪುರುಷನ ತುಷ್ಟಿಯನ್ನುಳಿದು ಬೇರೆ ಏನನ್ನೂ ಬಯಸುವುದಿಲ್ಲ. ಕೃಷ್ಣ ತುಷ್ಟಿಯೇ ಅವನ ಜೀವನದ ಧ್ಯೇಯ, ಮತ್ತು ಅರ್ಜುನನು ಕುರುಕ್ಷೇತ್ರ ರಣರಂಗದಲ್ಲಿ ದಲ್ಲಿ ಮಾಡಿದಂತೆ ಅವನು ಕೃಷ್ಣನಿಗಾಗಿ ಪ್ರತಿಯೊಂದನ್ನೂ ತ್ಯಾಗ ಮಾಡಬಲ್ಲನು. ಈ ಪ್ರಕ್ರಿಯೆಯು ಬಹು ಸುಲಭ. ಒಬ್ಬನ ತನ್ನ ವೃತ್ತಿ ಕರ್ಮದಲ್ಲಿಯೇ ನಿರತನಾಗಿದ್ದು, ಜೊತೆಗೆ ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ/ ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ, ಮಹಾಮಂತ್ರ ಸಂಕೀರ್ತನ ಮಾಡಬಹುದು. ಇಂಥ ದಿವ್ಯ ಸಂಕೀರ್ತನವು ಭಕ್ತನನ್ನು ದೇವೋತ್ತಮ ಪುರುಷನೆಡೆಗೆ ಆಕರ್ಷಿಸುತ್ತದೆ.

ಹೀಗೆ ನಿರತನಾದ ಭಕ್ತನನ್ನು ಭೌತಿಕ ಅಸ್ತಿತ್ವ ಸಾಗರದಿಂದ ವಿಳಂಬವಿಲ್ಲದೆ ಉದ್ಧರಿಸುವುದಾಗಿ ಪರಮಪ್ರಭು ಇಲ್ಲಿ ಭರವಸೆ ನೀಡುತಿದ್ದಾನೆ. ಯೋಗಸಾಧನೆಯಲ್ಲಿ

ಉತ್ಕೃಷ್ಟರಾದವರು ಯೋಗ ಪ್ರಕ್ರಿಯೆಯಿಂದ ತಮ್ಮ ಇಚ್ಛಾನುಸಾರ, ತಮ್ಮ ಇಚ್ಛೆಗೆ ಬಂದ ಲೋಕಕ್ಕೆ ಆತ್ಮವನ್ನು ವರ್ಗಾಯಿಸಬಲ್ಲರು. ಇತರರು ಈ ಅವಕಾಶವನ್ನು ನಾನಾ ರೀತಿಯಲ್ಲಿ ಉಪಯೋಗಿಸುತ್ತಾರೆ. ಆದರೆ ಭಕ್ತರ ಮಟ್ಟಿಗೆ ಸ್ವಯಂ ಭಗವಂತನೇ ಅವರನ್ನು ಕೈಹಿಡಿಯುತ್ತಾನೆ ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಭಕ್ತನು ತನ್ನನ್ನು ಪರವ್ಯೋಮಕ್ಕೆ ವರ್ಗಾಯಿಸಿಕೊಳ್ಳಲು ಬಹಳಷ್ಟು ಅನುಭವಿ ಆಗಬೇಕಾಗಿಲ್ಲ.

**ವರಾಹಪುರಾಣದಲ್ಲಿ** ಈ ಶ್ಲೋಕವಿದೆ

ನಯಾಮಿ ಪರಮಂ ಸ್ಥಾನಮರ್ಚಿರಾದಿಗತಿಂ ವಿನಾ।
ಗರುಡ-ಸ್ಕಂಧಮಾರೋಪ್ಯ ಯಥೇಚ್ಛಮನಿವಾರಿತಃ॥

ಈ ಶ್ಲೋಕದ ತಾತ್ಪರ್ಯವೆಂದರೆ, ಭಕ್ತನು ತನ್ನ ಆತ್ಮವನ್ನು ಆಧ್ಯಾತ್ಮ ಲೋಕಕ್ಕೆ ವರ್ಗಾಯಿಸಿಕೊಳ್ಳಲು ಅಷ್ಟಾಂಗ ಯೋಗಾಭ್ಯಾಸ ಮಾಡಬೇಕಾಗಿಲ್ಲ. ಆ ಹೊಣೆಯನ್ನು ಸ್ವಯಂ ಪರಮಪ್ರಭುವೇ ಹೊತ್ತುಕೊಳ್ಳುತ್ತಾನೆ. ಸ್ವಯಂ ತಾನೇ ಉದ್ಧಾರಕನಾಗುವೆನೆಂದು ಇಲ್ಲಿ ಸ್ಪಷ್ಟವಾಗಿ ಹೇಳುತ್ತಾನೆ. ಮಗುವನ್ನು ಅದರ ತಂದೆ ತಾಯಿಗಳು ಸಂಪೂರ್ಣವಾಗಿ ರಕ್ಷಿಸುತ್ತಾರೆ ಮತ್ತು ಹೀಗೆ ಅದು ಸುರಕ್ಷಿತ. ಅದೇ ಪ್ರಕಾರ ಭಕ್ತನು ಯೋಗಸಾಧನೆಯಿಂದ ತನ್ನನ್ನು ಇತರ ಲೋಕಗಳಿಗೆ ವರ್ಗಾಯಿಸಿಕೊಳ್ಳುವ ಪ್ರಯತ್ನ ಮಾಡಬೇಕಾಗಿಲ್ಲ, ಬದಲಾಗಿ ಪರಮಪ್ರಭುವು ತನ್ನ ಮಹಾನುಗ್ರಹದಿಂದ, ತನ್ನ ಪಕ್ಷಿವಾಹನ ಗರುಡಾರೂಢನಾಗಿ ಕೂಡಲೇ ಬರುತ್ತಾನೆ, ಮತ್ತು ಕೂಡಲೇ ಭಕ್ತನನ್ನು ಭೌತಿಕ ಅಸ್ತಿತ್ವದಿಂದ ಉದ್ಧರಿಸುತ್ತಾನೆ. ಸಾಗರದಲ್ಲಿ ಬಿದ್ದವನು ಬಹು ಹೋರಾಡುತ್ತಿರಬಹುದಾಗಿದ್ದರೂ ಮತ್ತು ಒಳ್ಳೆಯ ಈಜುಗಾರನಾಗಿರಬಹುದಾಗಿದ್ದರೂ, ತನ್ನನ್ನು ರಕ್ಷಿಸಿಕೊಳ್ಳಲಾರದೆ ಹೋಗಬಹುದು. ಆದರೆ ಒಬ್ಬನು ಬಂದು ಅವನನ್ನು ನೀರಿನಿಂದ ಮೇಲೆತ್ತಿದರೆ ಅವನು ಸುಲಭವಾಗಿ ಪಾರಾಗುವನು. ಅದೇ ಪ್ರಕಾರ, ಭಗವಂತನು ಭಕ್ತನನ್ನು ಈ ಭೌತಿಕ ಅಸ್ತಿತ್ವದಿಂದ ಮೇಲೆತ್ತುತ್ತಾನೆ. ಒಬ್ಬನು ಸುಮ್ಮನೇ ಸುಲಭ ಕೃಷ್ಣ ಪ್ರಜ್ಞಾ ಪ್ರಕ್ರಿಯೆಯನ್ನು ಆಚರಿಸಬೇಕು ಮತ್ತು ಭಕ್ತಿಯುತ ಸೇವೆಯಲ್ಲಿ ಪೂರ್ಣವಾಗಿ ತನ್ನನ್ನು ತೊಡಗಿಸಿಕೊಳ್ಳಬೇಕು. ಬುದ್ಧಿವಂತನು ಯಾವಾಗಲೂ ಎಲ್ಲ ಇತರ ಮಾರ್ಗಗಳಿಗಿಂತ ಭಕ್ತಿಯುತ ಸೇವಾ ಪ್ರಕ್ರಿಯೆಗೆ ಪ್ರಾಶಸ್ತ್ಯ ನೀಡುತ್ತಾನೆ. **ನಾರಾಯಣೀಯದಲ್ಲಿ** ಇದು ಹೀಗೆ ದೃಢಪಟ್ಟಿದೆ.

ಯಾ ವೈ ಸಾಧನ-ಸಂಪತ್ತಿಃ ಪುರುಷಾರ್ಥಚತುಷ್ಟಯೇ।
ತಯಾ ವಿನಾ ತದ್ ಆಪ್ನೋತಿ ನರೋ ನಾರಾಯಣಾಶ್ರಯಃ॥

ಈ ಶ್ಲೋಕದ ತಾತ್ಪರ್ಯವೆಂದರೆ, ಒಬ್ಬನು ಕಾಮ್ಯಕಾರ್ಯಗಳ ವಿವಿಧ ಪ್ರಕ್ರಿಯೆಗಳಲ್ಲಿ ತೊಡಗಬಾರದು ಅಥವಾ ಮಾನಸಿಕ ಊಹಾಪೋಹ ಪ್ರಕ್ರಿಯೆಯಿಂದ ಜ್ಞಾನ ಸಾಧನೆ ಮಾಡಕೂಡದು. ಪರಮ ಪುರುಷಾರ್ಪಿತನು ಇತರ ಯೋಗ ಪ್ರಕ್ರಿಯೆ

ಗಳಿಂದ, ಊಹಾಪೋಹದಿಂದ, ಕರ್ಮಕಾಂಡಗಳಿಂದ, ಯಜ್ಞಗಳಿಂದ, ದಾನಾದಿಗಳಿಂದ ಹೊಂದಬಹುದಾದ ಎಲ್ಲ ಫಲಗಳನ್ನು ಹೊಂದಬಹುದು, ಅದು ಭಕ್ತಿಯುತ ಸೇವೆಯ ವಿಶೇಷ ವರಪ್ರಸಾದ.

ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ,/ ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ—ಎಂಬ ಕೃಷ್ಣ ಪುಣ್ಯನಾಮ ಕೀರ್ತನೆಯಿಂದಲೇ—ಭಗವದ್ಭಕ್ತನು ಸುಲಭವಾಗಿ ಮತ್ತು ಸುಖವಾಗಿ ಪರಮಧ್ಯೇಯವನ್ನು ತಲುಪಬಹುದು. ಆದರೆ ಈ ಧ್ಯೇಯವನ್ನು ಧರ್ಮದ ಯಾವುದೇ ಇತರ ಪ್ರಕ್ರಿಯೆಯಿಂದ ಹೊಂದಲಾಗದು.

ಭಗವದ್ಗೀತೆಯ ಸಿದ್ಧಾಂತವು ಹದಿನೆಂಟನೆಯ ಅಧ್ಯಾಯದಲ್ಲಿ ಹೀಗೆ ನಿರೂಪಿತ :

ಸರ್ವಧರ್ಮಾನ್ ಪರಿತ್ಯಜ್ಯ ಮಾಮ್ ಏಕಂ ಶರಣಂ ವ್ರಜ।
ಅಹಂ ತ್ವಾಂ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ॥

ಒಬ್ಬನು ಆತ್ಮ-ಸಾಕ್ಷಾತ್ಕಾರದಲ್ಲಿ ಎಲ್ಲ ಇತರ ಪ್ರಕ್ರಿಯೆಗಳನ್ನು ತ್ಯಜಿಸಬೇಕು ಮತ್ತು ಸುಮ್ಮನೇ ಕೃಷ್ಣಪ್ರಜ್ಞೆಯಲ್ಲಿ ಭಕ್ತಿಯುತ ಸೇವೆಯನ್ನು ಆಚರಿಸಬೇಕು. ಇದು ಒಬ್ಬನು ಜೀವನದ ಅತ್ಯುನ್ನತ ಪರಿಪೂರ್ಣತೆಯನ್ನು ತಲುಪುವಂತೆ ಶಕ್ತಗೊಳಿಸುವುದು. ಒಬ್ಬನು ತನ್ನ ಪೂರ್ವಜೀವನದ ಪಾಪ ಕಾರ್ಯಗಳನ್ನು ಕುರಿತು ಚಿಂತಿಸಬೇಕಾಗಿಲ್ಲ, ಏಕೆಂದರೆ ಭಗವಂತನು ಅವನ ಪೂರ್ಣಭಾರ ಹೊತ್ತುಕೊಳ್ಳುತ್ತಾನೆ. ಆದ್ದರಿಂದ ಒಬ್ಬನು ಆಧ್ಯಾತ್ಮಿಕ ಸಾಕ್ಷಾತ್ಕಾರದಲ್ಲಿ ತನ್ನನ್ನು ಉದ್ಧರಿಸಿಕೊಳ್ಳಲು ವ್ಯರ್ಥ ಪ್ರಯತ್ನಿಸಕೂಡದು. ಪ್ರತಿಯೊಬ್ಬನೂ ಪರಮ ಸರ್ವಶಕ್ತ ದೇವೋತ್ತಮ ಕೃಷ್ಣನನ್ನು ಆಶ್ರಯಿಸಬೇಕು. ಅದು ಜೀವನದ ಅತ್ಯುನ್ನತ ಪರಿಪೂರ್ಣತೆ.

**ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ ।**
**ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥ ೮ ॥**

ಮಯಿ—ನನ್ನಲ್ಲಿ, ಏವ—ಖಂಡಿತವಾಗಿ, ಮನಃ—ಮನಸ್ಸು, ಆಧತ್ಸ್ವ—ಸ್ಥಿರಗೊಳಿಸಿ, ಮಯಿ—ನನ್ನಲ್ಲಿ, ಬುದ್ಧಿಮ್—ಬುದ್ಧಿಯನ್ನು, ನಿವೇಶಯ—ಅನ್ವಯಿಸು, ನಿವಸಿಷ್ಯಸಿ—ನೀನು ಜೀವಿಸುವೆ, ಮಯಿ—ನನ್ನಲ್ಲಿ, ಏವ—ಖಂಡಿತವಾಗಿ, ಅತಃ-ಊರ್ಧ್ವಂ—ಆಮೇಲೆ, ನ—ಎಂದಿಗೂ ಇಲ್ಲ, ಸಂಶಯಃ—ಸಂಶಯವು.

**ಪರಮ ದೇವೋತ್ತಮ ಪುರುಷನಾದ ನನ್ನಲ್ಲಿ, ಸುಮ್ಮನೇ ನಿನ್ನ ಮನಸ್ಸನ್ನು ಸ್ಥಿರಗೊಳಿಸು ಮತ್ತು ನಿನ್ನ ಬುದ್ಧಿಯನ್ನೆಲ್ಲಾ ನನ್ನಲ್ಲಿ ತೊಡಗಿಸು. ಹೀಗೆ ನೀನು ನಿಸ್ಸಂಶಯವಾಗಿ ಸದಾ ನನ್ನಲ್ಲಿರುವೆ.**

**ಭಾವಾರ್ಥ :** ಶ್ರೀಕೃಷ್ಣನ ಭಕ್ತಿಯುತ ಸೇವಾನಿರತನು ಪರಮ ಪ್ರಭುವಿನ ನೇರ ಸಂಬಂಧದಲ್ಲಿ ಜೀವಿಸುತ್ತಾನೆ. ಆದ್ದರಿಂದ ಅವನ ಸ್ಥಾನವು ಪ್ರಾರಂಭದಿಂದಲೇ ದಿವ್ಯ ಎಂಬುದರಲ್ಲಿ ಸಂದೇಹವಿಲ್ಲ. ಭಕ್ತನು ಭೌತಿಕ ರಂಗದಲ್ಲಿ ಇರುವುದಿಲ್ಲ—ಅವನು ಕೃಷ್ಣನಲ್ಲಿರುತ್ತಾನೆ. ಭಗವಂತ ಮತ್ತು ಭಗವಂತನ ಪುಣ್ಯನಾಮವು ಅಭಿನ್ನ; ಆದ್ದರಿಂದ

ಭಕ್ತನು ಹರೇ ಕೃಷ್ಣ ಮಂತ್ರ ಜಪ ಮಾಡುವಾಗ, ಕೃಷ್ಣನು ಮತ್ತು ಅವನ ಅಂತರಂಗ ಶಕ್ತಿಯು ಭಕ್ತನ ನಾಲಿಗೆಯಲ್ಲಿ ನರ್ತಿಸುತ್ತದೆ. ಅವನು ಕೃಷ್ಣನಿಗಾಗಿ ನೈವೇದ್ಯ ಸಮರ್ಪಿಸಿದಾಗ ಕೃಷ್ಣನು ಸಾಕ್ಷಾತ್ತಾಗಿ ಆ ನೈವೇದ್ಯಗಳನ್ನು ಸ್ವೀಕರಿಸುತ್ತಾನೆ, ಮತ್ತು ಭಕ್ತನು ಆ ನೈವೇದ್ಯ ಶೇಷ ಭೋಜನದಿಂದ ಕೃಷ್ಣಾವೇಶಿತನಾಗುತ್ತಾನೆ. ಅಂಥ ಸೇವೆಯಲ್ಲಿ ತೊಡಗದವನು, ಈ ಪ್ರಕ್ರಿಯೆಯು ಭಗವದ್ಗೀತೆಯಲ್ಲಿ ಮತ್ತು ಇತರ ವೈದಿಕ ಸಾಹಿತ್ಯದಲ್ಲಿ ಹೇಳಲ್ಪಟ್ಟಿದ್ದರೂ, ಇದು ಹೀಗೆ ಎಂಬುದನ್ನು ಅರಿತುಕೊಳ್ಳಲಾರನು.

**ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್ ।**
**ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ ॥ ೯ ॥**

ಅಥ—ಆದರೆ ಆದ್ದರಿಂದ, ಚಿತ್ತಂ—ಮನಸ್ಸನ್ನು, ಸಮಾಧಾತುಂ—ಸ್ಥಿತಗೊಳಿಸಲು, ನ—ಇಲ್ಲ, ಶಕ್ನೋಷಿ— ನಿನಗೆ ಆಗುವುದು, ಮಯಿ—ನನ್ನಲ್ಲಿ, ಸ್ಥಿರಮ್—ಸ್ಥಿರವಾಗಿ, ಅಭ್ಯಾಸ-ಯೋಗೇನ—ಭಕ್ತಿಯುತ ಸೇವಾಭ್ಯಾಸದಿಂದ, ತತಃ—ಆಗ, ಮಾಮ್—ನನ್ನನ್ನು, ಇಚ್ಛಾ—ಆಸೆ, ಆಪ್ತುಮ್—ಹೊಂದುವ, ಧನಮ್-ಜಯ—ಹೇ ಧನಂಜಯನೇ, ಅರ್ಜುನನೇ.

**ನನ್ನ ಪ್ರಿಯ ಅರ್ಜುನನೇ, ಹೇ ಧನಂಜಯನೇ, ವಿಚಲಿತನಾಗದೆ ನೀನು ನಿನ್ನ ಮನಸ್ಸನ್ನು ನನ್ನಲ್ಲಿ ಸ್ಥಿತಗೊಳಿಸಲಾಗದಿದ್ದರೆ, ಭಕ್ತಿಯೋಗ ನಿಯಂತ್ರಣ ತತ್ತ್ವಗಳನ್ನು ಅನುಸರಿಸು. ಹೀಗೆ ನನ್ನನ್ನು ಹೊಂದಲು ಇಚ್ಛೆಯನ್ನು ಬೆಳೆಸಿಕೋ.**

**ಭಾವಾರ್ಥ :** ಈ ಶ್ಲೋಕದಲ್ಲಿ, ಭಕ್ತಿಯೋಗದ ಎರಡು ಭಿನ್ನ ಪ್ರಕ್ರಿಯೆಗಳು ಸೂಚಿತವಾಗಿವೆ. ಮೊದಲನೆಯದು, ದಿವ್ಯ ಪ್ರೇಮದಿಂದ, ಪರಮ ದೇವೋತ್ತಮ ಪುರುಷ, ಶ್ರೀಕೃಷ್ಣನಿಗೆ ಆಸಕ್ತಿಯನ್ನು ವಾಸ್ತವಿಕವಾಗಿ ಬೆಳೆಸಿಕೊಂಡವನಿಗೆ ಅನ್ವಯಿಸುತ್ತದೆ. ಮತ್ತೊಂದು ದಿವ್ಯಪ್ರೇಮದಿಂದ ಪರಮ ಪುರುಷನಲ್ಲಿ ಅನುರಕ್ತಿಯನ್ನು ಬೆಳೆಸಿಕೊಂಡಿರದವನಿಗೆ ಅನ್ವಯಿಸುತ್ತದೆ. ಈ ಎರಡನೆಯ ವರ್ಗದವರಿಗೆ, ಒಬ್ಬನು ಕೊನೆಗೆ ಕೃಷ್ಣಾನುರಾಗದ ಮಟ್ಟಕ್ಕೆ ಉನ್ನತಿಸಲ್ಪಡಲು ಅನುಸರಿಸಬಹುದಾದ ಭಿನ್ನ ಭಿನ್ನ ವಿಧಿತ ನಿಯಮ ನಿಯಂತ್ರಣಗಳಿವೆ.

ಭಕ್ತಿಯೋಗವು ಇಂದ್ರಿಯ ಶುದ್ಧಿಕಾರಕವಾಗಿದೆ. ಸದ್ಯ ಭೌತಿಕ ಅಸ್ತಿತ್ವದಲ್ಲಿ ಇಂದ್ರಿಯಗಳು, ಇಂದ್ರಿಯ ತೋಷಣ ನಿರತವಾಗಿ ಸದಾ ಅಶುದ್ಧ. ಆದರೆ ಭಕ್ತಿಯೋಗ ಸಾಧನೆಯಿಂದ ಈ ಇಂದ್ರಿಯಗಳು ಶುದ್ಧವಾಗಬಲ್ಲವು, ಮತ್ತು ಆ ಶುದ್ಧ ದೆಸೆಯಲ್ಲಿ ಅವು ನೇರವಾಗಿ ಪರಮಪ್ರಭುವಿನ ಸಂಪರ್ಕದಲ್ಲಿ ಬರುವುವು. ಈ ಭೌತಿಕ ಅಸ್ತಿತ್ವದಲ್ಲಿ ನಾನು ಯಾವನೋ ಒಬ್ಬ ಯಜಮಾನನ ಸೇವಾನಿರತನಾಗಿರಬಹುದು. ಆದರೆ ನಾನು ನಿಜವಾದ ಪ್ರೇಮದಿಂದ ಆ ಸ್ವಾಮಿಯ ಸೇವೆ ಮಾಡುವುದಿಲ್ಲ. ಕೇವಲ ಹಣಕ್ಕಾಗಿ ಸೇವೆ ಮಾಡುತ್ತೇನೆ. ಯಜಮಾನನಿಗೂ ನನ್ನಲ್ಲಿ ಪ್ರೀತಿ ಇರುವುದಿಲ್ಲ. ಅವನು ನನ್ನಿಂದ ಸೇವೆ ಪಡೆದು ಹಣ ಕೊಡುತ್ತಾನೆ. ಹೀಗಾಗಿ ಅಲ್ಲಿ ಪ್ರೇಮದ ಪ್ರಶ್ನೆಯೇ ಇಲ್ಲ. ಆದರೆ

ಆದರೆ ಆಧ್ಯಾತ್ಮ ಜೀವನಕ್ಕಾಗಿ, ಒಬ್ಬನು ಪ್ರೇಮದ ಶುದ್ಧ ಮಟ್ಟಕ್ಕೆ ಉನ್ನತಿ ಸಲ್ಲಪಡಬೇಕು. ಆ ಪ್ರೇಮ ಮಟ್ಟವನ್ನು ಸದ್ಯದ ಇಂದ್ರಿಯಗಳಿಂದ ಆಚರಿಸುವ ಭಕ್ತಿಯುತ ಸೇವೆಯಿಂದ ಹೊಂದಬಹುದು.

ಈ ಭಗವತ್ ಪ್ರೇಮವುಈಗ ಪ್ರತಿಯೊಬ್ಬನ ಹೃದಯದಲ್ಲಿ ಸುಪ್ತವಾಗಿದೆ. ಮತ್ತು ಅಲ್ಲಿ, ಭಗವತ್ ಪ್ರೇಮವು ನಾನಾ ವಿಧಗಳಲ್ಲಿ ವ್ಯಕ್ತ, ಆದರೆ ಅದು ಭೌತಿಕ ಸಂಗದಿಂದ ಕಲುಷಿತ. ಈಗ ಹೃದಯವನ್ನು ಭೌತಿಕ ಸಂಗದಿಂದ ಶುದ್ಧಗೊಳಿಸಬೇಕು ಮತ್ತು ಸುಪ್ತ ಸ್ವಾಭಾವಿಕ ಕೃಷ್ಣ ಪ್ರೇಮದಿಂದ ಜಾಗೃತಗೊಳಿಸಬೇಕು. ಅದೇ ಇಡೀ ಪ್ರಕ್ರಿಯೆ.

ಭಕ್ತಿಯೋಗದ ನಿಯಂತ್ರಣ ತತ್ವಗಳನ್ನಾಚರಿಸಲು ಒಬ್ಬನು, ಅನುಭವೀ ಗುರುವಿನ ಮಾರ್ಗದರ್ಶನದಲ್ಲಿ ಕೆಲವೊಂದು ತತ್ತ್ವಗಳನ್ನು ಅನುಸರಿಸಬೇಕು. ಒಬ್ಬನು ಪ್ರಾತಃ ಕಾಲದಲ್ಲಿ ಏಳಬೇಕು, ಸ್ನಾನಮಾಡಬೇಕು, ಮಂದಿರಕ್ಕೆ ಹೋಗಿ ಪ್ರಾರ್ಥನೆ ಸಲ್ಲಿಸಬೇಕು, ಮತ್ತು ಹರೇ ಕೃಷ್ಣ ಜಪ ಮಾಡಬೇಕು ಮತ್ತು ಅರ್ಚನಗಾಗಿ ಪುಷ್ಪಗಳನ್ನು ಸಂಗ್ರಹಿಸಬೇಕು, ಮೂರ್ತಿಯ ನೈವೇದ್ಯಕ್ಕಾಗಿ ಭಕ್ಷ್ಯಗಳನ್ನು ಮಾಡಬೇಕು, ಆಮೇಲೆ ಪ್ರಸಾದ ಸ್ವೀಕರಿಸಬೇಕು, ಇತ್ಯಾದಿ. ಒಬ್ಬನು ಅನುಸರಿಸಬೇಕಾದ ವಿವಿಧ ನಿಯಂತ್ರಣಗಳಿವೆ, ಮತ್ತು ಒಬ್ಬನು ಸತತವಾಗಿ ಶುದ್ಧ ಭಕ್ತರಿಂದ ಭಗವದ್ಗೀತೆ ಮತ್ತು ಶ್ರೀಮದ್ ಭಾಗವತ ಶ್ರವಣ ಮಾಡಬೇಕು. ಈ ಸಾಧನವು ಒಬ್ಬನು ಭಗವತ್ ಪ್ರೇಮ ಮಟ್ಟಕ್ಕೆ ಏರಲು ಸಹಾಯಕವಾಗುವುದು, ಆಗ ಅವನು ಭಗವಂತನ ಆಧ್ಯಾತ್ಮ ಸಾಮ್ರಾಜ್ಯದಲ್ಲ ಪ್ರಗತಿ ಹೊಂದುವುದು ಖಂಡಿತ. ನಿಯಮ ನಿಯಂತ್ರಣಗಳ ಮೇರಗೆ ಗುರುವಿನ ನಿರ್ದೇಶನದಲ್ಲಿ ಈ ಭಕ್ತಿ ಯೋಗಾಚರಣೆಯು ಖಂಡಿತವಾಗಿ ಒಬ್ಬನನ್ನು ಭಗವತ್ ಪ್ರೇಮ ಮಟ್ಟಕ್ಕೆ ಕರೆದೊಯ್ಯುವುದು.

**ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।**
**ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ॥ ೧೦ ॥**

ಅಭ್ಯಾಸೇ—ಅಭ್ಯಾಸದಲ್ಲಿ, ಅಪಿ—ಕೂಡ, ಅಸಮರ್ಥಃ—ನೀನು ಅಸಮರ್ಥನು, ಅಸಿ—ನೀನು ಆಗಿದ್ದೀಯ, ಮತ್-ಕರ್ಮ—ನನ್ನ ಕಾರ್ಯಕ್ಕೆ, ಪರಮಃ—ಅರ್ಪಿತನು, ಭವ—ಆಗು, ಮತ್-ಅರ್ಥಮ್—ನನಗಾಗಿ, ಅಪಿ—ಕೂಡ, ಕರ್ಮಾಣಿ—ಕರ್ಮಗಳನ್ನು, ಕುರ್ವನ್—ಮಾಡುವವನಾಗು, ಸಿದ್ಧಿಮ್—ಸಿದ್ಧಿಯನ್ನು, ಅವಾಪ್ಸ್ಯಸಿ—ಹೊಂದುವೆ.

**ನಿನಗೆ ಭಕ್ತಿಯೋಗ ನಿಯಂತ್ರಣಗಳನ್ನು ಆಚರಿಸಲಾಗದಿದ್ದರೆ, ಆಗ ಕೇವಲ ನನಗಾಗಿ ಕರ್ಮ ಮಾಡಲೆತ್ನಿಸು, ಏಕೆಂದರೆ ನನಗಾಗಿ ಕರ್ಮಮಾಡುವುದರಿಂದ ನೀನು ಪರಿಪೂರ್ಣ ಮಟ್ಟಕ್ಕೆ ಬರುವೆ.**

**ಭಾವಾರ್ಥ :** ಒಬ್ಬನು ಗುರುವಿನ ಮಾರ್ಗದರ್ಶನದಲ್ಲಿ ಭಕ್ತಿಯೋಗ ನಿಯಂತ್ರಣ ತತ್ತ್ವವನ್ನು ಆಚರಿಸಲು ಕೂಡ ಸಮರ್ಥನಾಗದಿದ್ದರೂ, ಪರಮಪ್ರಭುವಿಗಾಗಿ ಕರ್ಮ

ಮಾಡುವ ಮೂಲಕ ಅವನನ್ನು ಪರಿಪೂರ್ಣವಟ್ಟದ ಕಡೆಗೆ ಸೆಳೆಯಬಹುದಾಗಿದೆ. ಈ ಕರ್ಮವನ್ನು ಹೇಗೆ ಮಾಡಬೇಕೆಂಬುವನ್ನು ಈಗಾಗಲೇ ಹನ್ನೊಂದನೆಯ ಅಧ್ಯಾಯದ ಐವತ್ತೈದನೆಯ ಶ್ಲೋಕದಲ್ಲಿ ವಿವರಿಸಿದೆ. ಒಬ್ಬನು ಕೃಷ್ಣಪ್ರಜ್ಞಾ ಪ್ರಚಾರಕ್ಕೆ ಸಹಾನುಭೂತಿಪರನಾಗಿರಬೇಕು. ಅನೇಕ ಭಕ್ತರು ಕೃಷ್ಣಪ್ರಜ್ಞಾ ಪ್ರಚಾರ ನಿರತರಾಗಿದ್ದಾರೆ ಮತ್ತು ಅವರಿಗೆ ಸಹಾಯಬೇಕು. ಆದ್ದರಿಂದ ಒಬ್ಬನು ನೇರವಾಗಿ ಭಕ್ತಿಯೋಗ ತತ್ತ್ವಾಚರಣೆ ಮಾಡಲಾಗದಿದ್ದರೂ ಕೂಡ ಅವನು ಅಂಥ ಕಾರ್ಯಕ್ಕೆ ಸಹಾಯ ಮಾಡಲೆತ್ನಿಸಬಹುದು. ಪ್ರತಿಯೊಂದು ಪ್ರಯತ್ನದಲ್ಲಿ, ಭೂಮಿ, ಬಂಡವಾಳ, ವ್ಯವಸ್ಥೆ ಮತ್ತು ಶ್ರಮ ಅಗತ್ಯ. ಹೀಗೆ ಒಂದು ಉದ್ಯೋಗದಲ್ಲಿ ಒಬ್ಬನಿಗೆ ಇರಲು ಒಂದು ಸ್ಥಳ, ವಿನಿಯೋಗಕ್ಕೆ ಸ್ವಲ್ಪ ಬಂಡವಾಳ, ಕೆಲಮಟ್ಟಿನ ಕಾರ್ಮಿಕ ಬಲ ಮತ್ತು ವಿಸ್ತರಿಸಲು ಒಂದು ವ್ಯವಸ್ಥೆ ಅಗತ್ಯವಿರುವಂತೆ, ಕೃಷ್ಣಸೇವೆಯಲ್ಲಿ ಅದು ಅಗತ್ಯ. ಕೇವಲ ವ್ಯತ್ಯಾಸ ವೆಂದರೆ ಭೌತಿಕ ಜೀವನದಲ್ಲಿ ಒಬ್ಬನು ಇಂದ್ರಿಯ ತೋಷಣೆಗಾಗಿ ಮಾತ್ರ ಕೆಲಸ ಮಾಡುತ್ತಾನೆ. ಆದರೆ ಅದೇ ಕೆಲಸವನ್ನು ಕೃಷ್ಣ ತುಷ್ಟಿಗಾಗಿ ಆಚರಿಸಬಹುದು, ಅದು ಆಧ್ಯಾತ್ಮ ಚಟುವಟಿಕೆ. ಒಬ್ಬನು ಸಾಕಷ್ಟು ಧನಿಕನಾಗಿದ್ದರೆ, ಅವನು ಕೃಷ್ಣಪ್ರಜ್ಞಾ ಪ್ರಚಾರದ ಒಂದು ಕಾರ್ಯಾಲಯ ಅಥವಾ ಮಂದಿರ ನಿರ್ಮಾಣಕ್ಕೆ ಸಹಾಯ ಮಾಡ ಬಹುದು, ಅಥವಾ ಅವನು ಪ್ರಕಟನೆಗಳಿಗೆ ಸಹಾಯ ಮಾಡಬಹುದು. ಚಟುವಟಿಕೆಯ ಅನೇಕ ಕ್ಷೇತ್ರಗಳಿವೆ, ಒಬ್ಬನು ಅಂಥ ಚಟುವಟಿಕೆಗಳಲ್ಲಿ ಆಸಕ್ತನಾಗಿರಬೇಕು. ಒಬ್ಬನು ತನ್ನ ಕರ್ಮಫಲಗಳನ್ನು ತ್ಯಜಿಸಲಾಗದಿದ್ದರೆ, ಅವನು ಆಗಲೂ ಕೂಡ ಅದರ ಕೆಲಭಾಗ ವನ್ನು ಕೃಷ್ಣಪ್ರಜ್ಞಾಪ್ರಚಾರಕ್ಕಾಗಿ ತ್ಯಾಗ ಮಾಡಬಹುದು. ಕೃಷ್ಣಪ್ರಜ್ಞಾ ಪ್ರಚಾರಕ್ಕೆ ಈ ಸ್ವಯಂ ಸೇವೆಯು ಒಬ್ಬನು ಭಗವತ್ ಪ್ರೇಮದ ಹೆಚ್ಚಿನ ಮಟ್ಟಕ್ಕೇರಲು ಸಹಾಯಕ, ಆಮೇಲೆ ಅವನು ಪರಿಪೂರ್ಣನಾಗುತ್ತಾನೆ.

**ಅಥೈತದಪ್ಯಶಕ್ತೋऽಸಿ ಕರ್ತುಂ ಮದ್‌ಯೋಗಮಾಶ್ರಿತಃ ।**
**ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ॥ ೧೧ ॥**

ಅಥ—ಆದಾಗ್ಯೂ, ಏತತ್—ಇದು, ಅಪಿ—ಕೂಡ, ಅಶಕ್ತಃ—ಅಶಕ್ತನು, ಅಸಿ— ನೀನು ಆಗಿದ್ದೀಯಾ, ಕರ್ತುಮ್—ಆಚರಿಸಲು, ಮತ್—ನನಗಾಗಿ, ಯೋಗಮ್— ಭಕ್ತಿಯುತ ಸೇವೆಯಲ್ಲಿ, ಆಶ್ರಿತಃ—ಆಶ್ರಯ ತೆಗೆದುಕೊಂಡು ಸರ್ವ-ಕರ್ಮ—ಎಲ್ಲ ಚಟುವಟಿಕೆಗಳ, ಫಲ—ಫಲಗಳು, ತ್ಯಾಗಮ್—ತ್ಯಾಗವನ್ನು, ತತಃ—ಆಗ, ಕುರು— ಮಾಡು, ಯತ-ಆತ್ಮ-ವಾನ್—ಆತ್ಮ-ಸನ್ನಿವೇಶಿತನಾಗಿ.

**ಹೀಗಾಗಿ, ನೀನು ನನ್ನ ಈ ಪ್ರಜ್ಞೆಯಲ್ಲಿ ಈ ಕರ್ಮ ಮಾಡಲು ಕೂಡ ಅಶಕ್ತ ನಾಗಿದ್ದರೆ, ನಿನ್ನ ಕರ್ಮದ ಎಲ್ಲ ಫಲಗಳನ್ನು ತ್ಯಾಗಮಾಡಲು ಮತ್ತು ಆತ್ಮ— ಸನ್ನಿವೇಶಿತನಾಗಲು ಯತ್ನಿಸು.**

**ಭಾವಾರ್ಥ :** ಸಾಮಾಜಿಕ, ಕೌಟುಂಬಿಕ, ಅಥವಾ ಧಾರ್ಮಿಕ ವಿಚಾರಗಳಿಂದ ಅಥವಾ ಯಾವುದೋ ಇತರ ಅಡಚಣೆಗಳ ನಿಮಿತ್ತ ಒಬ್ಬನು ಕೃಷ್ಣ ಪ್ರಜ್ಞಾ ಚಟುವಟಿಕೆಗಳಿಗೆ

ಸಹಾನುಭೂತಿ ತೋರಲು ಕೂಡ ಸಮರ್ಥನಾಗದೆ ಹೋಗಬಹುದು. ಆದರೆ ಒಬ್ಬನು ನೇರವಾಗಿ ಕೃಷ್ಣಪ್ರಜ್ಞಾ ಚಟುವಟಿಕೆಗಳಲ್ಲಿ ಅನುರಕ್ತನಾದರೆ, ಕುಟುಂಬದವರಿಂದ ಆಕ್ಷೇಪಣೆಗಳು ಬರಬಹುದು, ಅಥವಾ ಇತರ ಅನೇಕ ತೊಂದರೆಗಳು ಉಂಟಾಗಬಹುದು. ಇಂಥ ಸಮಸ್ಯೆ ಇರುವವನು ತನ್ನ ಚಟುವಟಿಕೆಗಳ ಸಂಚಿತ ಫಲಗಳನ್ನು ಒಂದು ಒಳ್ಳೆಯ ಕಾರ್ಯಕ್ಕೆ ತ್ಯಾಗ ಮಾಡಬೇಕೆಂದು ಹೇಳಿದೆ. ವೈದಿಕ ನಿಯಮಗಳಲ್ಲಿ ಅಂಥ ವಿಧಾನಗಳು ವರ್ಣಿತ. ಯಜ್ಞಯಾಗಗಳ ಮತ್ತು ವಿಶೇಷ ಪುಣ್ಯಕಾರ್ಯಗಳ, ಅಥವಾ ಒಬ್ಬನ ಪೂರ್ವ ಕರ್ಮದ ಫಲಗಳನ್ನು ವಿನಿಯೋಗಿಸಬಹುದಾದ ವಿಶೇಷ ಕಾರ್ಯಗಳ ಅನೇಕ ವರ್ಣನೆಗಳಿವೆ. ಹೀಗೆ ಒಬ್ಬನು ಕ್ರಮೇಣ ಜ್ಞಾನಮಟ್ಟಕ್ಕೆ ಉನ್ನತಿಸಬಹುದು. ಒಬ್ಬನು ಕೃಷ್ಣಪ್ರಜ್ಞಾ ಚಟುವಟಿಕೆಗಳಲ್ಲಿ ಆಸಕ್ತನಾಗಿರದಿದ್ದರೂ ಕೂಡ ಅವನು ಯಾವುದೋ ಆಸ್ಪತ್ರೆಗೆ, ಇತರ ಸಾಮಾಜಿಕ ಸಂಸ್ಥೆಗೆ ದಾನ ಕೊಡುವುದು, ತನ್ನ ಚಟುವಟಿಕೆಗಳಿಂದ ಶ್ರಮಾರ್ಜಿತ ಧನವನ್ನು ದಾನಮಾಡುವುದು ಕಂಡು ಬಂದಿದೆ. ಅದೂ ಕೂಡ ಇಲ್ಲಿ ಹೇಳಿದೆ. ಏಕೆಂದರೆ ಒಬ್ಬನು ಕರ್ಮಫಲಗಳನ್ನು ತ್ಯಜಿಸುವ ಅಭ್ಯಾಸದಿಂದ ಅವನು ಕ್ರಮೇಣ ತನ್ನ ಮನಸ್ಸನ್ನು ಖಂಡಿತ ಶುದ್ಧಗೊಳಿಸುತ್ತಾನೆ, ಮತ್ತು ಮನಸ್ಸಿನ ಆ ಶುದ್ಧ ಸ್ಥಿತಿಯಲ್ಲಿ ಒಬ್ಬನು ಕೃಷ್ಣಪ್ರಜ್ಞೆಯನ್ನು ಅರಿತುಕೊಳ್ಳಲು ಶಕ್ತನಾಗುತ್ತಾನೆ. ಕೃಷ್ಣಪ್ರಜ್ಞೆಯು ಯಾವುದೇ ಇತರ ಅನುಭವವನ್ನು ಅವಲಂಬಿಸಿಲ್ಲ ನಿಜ, ಏಕೆಂದರೆ ಸ್ವಯಂ ಕೃಷ್ಣಪ್ರಜ್ಞೆಯೇ ಒಬ್ಬನ ಮನಸ್ಸನ್ನು ಶುದ್ಧಗೊಳಿಸಬಲ್ಲದು, ಆದರೆ ಕೃಷ್ಣ ಪ್ರಜ್ಞಾ ಸ್ವೀಕಾರಕ್ಕೆ ಆತಂಕಗಳಿದ್ದರೆ, ಒಬ್ಬನು ತನ್ನ ಕರ್ಮಫಲಗಳನ್ನು ತ್ಯಾಗಮಾಡಲು ಯತ್ನಿಸಬಹುದು. ಆ ವಿಷಯದಲ್ಲಿ ಸಮಾಜಸೇವೆ, ಸಮುದಾಯ ಸೇವೆ, ರಾಷ್ಟ್ರ ಸೇವೆ, ದೇಶಕ್ಕಾಗಿ ತ್ಯಾಗ ಇತ್ಯಾದಿಗಳನ್ನು ಅಂಗೀಕರಿಸಬಹುದು, ಏಕೆಂದರೆ ಅದರಿಂದ ಒಂದಾ ನೊಂದು ದಿನ ಒಬ್ಬನು ಪರಮಪ್ರಭುವಿನ ಶುದ್ಧ ಭಕ್ತಿಯುತ ಸೇವಾಮಟ್ಟಕ್ಕೆ ಬರ ಬಹುದು. **ಯತಃ ಪ್ರವೃತ್ತಿರ್ ಭೂತಾನಾಮ್** ಎಂದು ಭಗವದ್ಗೀತೆಯಲ್ಲಿ (18-46) ಕಾಣುತ್ತೇವೆ. ಪರಮ ಕಾರಣಕ್ಕಾಗಿ ಒಬ್ಬನು ತ್ಯಾಗಮಾಡಲು ನಿರ್ಧರಿಸಿದ್ದರೆ, ಕೃಷ್ಣನೇ ಪರಮಕಾರಣನೆಂಬುದು ಅವನಿಗೆ ತಿಳಿದಿರದಿದ್ದರೂ ಕೂಡ, ಆ ತ್ಯಾಗ ವಿಧಾನದಿಂದ ಕೃಷ್ಣನೇ ಪರಮಕಾರಣನೆಂಬುದನ್ನು ಕ್ರಮೇಣ ಅವನು ಅರಿತುಕೊಳ್ಳುತ್ತಾನೆ.

**ಶ್ರೇಯೋ ಹಿ ಜ್ಞಾನಮಭ್ಯಾಸಾಜ್ ಜ್ಞಾನಾದ್ಧ್ಯಾನಂ ವಿಶಿಷ್ಯತೇ ।**
**ಧ್ಯಾನಾತ್ಕರ್ಮಫಲತ್ಯಾಗಸ್ತ್ಯಾಗಾಚ್ಛಾನ್ತಿರನನ್ತರಮ್ ॥ ೧೨ ॥**

ಶ್ರೇಯಃ—ಉತ್ತಮ, ಹಿ—ಖಂಡಿತವಾಗಿ, ಜ್ಞಾನಮ್—ಜ್ಞಾನವು, ಅಭ್ಯಾಸಾತ್—ಅಭ್ಯಾಸಕ್ಕಿಂತ, ಜ್ಞಾನಾತ್—ಜ್ಞಾನಕ್ಕಿಂತ, ಧ್ಯಾನಮ್—ಧ್ಯಾನವು, ವಿಶಿಷ್ಯತೇ—ಉತ್ತಮವೆಂದು ಪರಿಗಣಿತ, ಧ್ಯಾನಾತ್—ಧ್ಯಾನಕ್ಕಿಂತ, ಕರ್ಮ-ಫಲ ತ್ಯಾಗಃ—ಕರ್ಮಫಲತ್ಯಾಗವು, ತ್ಯಾಗಾತ್—ಅಂಥ ತ್ಯಾಗದಿಂದ, ಶಾನ್ತಿಃ—ಶಾಂತಿಯು. ಅನನ್ತರಮ್—ಆಮೇಲೆ.

**ನಿನಗೆ ಇದನ್ನು ಆಚರಿಸಲಾಗದಿದ್ದರೆ, ಆಗ ಜ್ಞಾನಾರ್ಜನೆಯಲ್ಲಿ ನಿರತನಾಗು. ಆದರೆ ಜ್ಞಾನಕ್ಕಿಂತ ಧ್ಯಾನವು ಉತ್ತಮ, ಮತ್ತು ಧ್ಯಾನಕ್ಕಿಂತ ಕರ್ಮಫಲತ್ಯಾಗವು**

**ಉತ್ತಮ, ಏಕೆಂದರೆ ಅಂಥ ತ್ಯಾಗದಿಂದ ಒಬ್ಬನು ಮನಃಶಾಂತಿಯನ್ನು ಹೊಂದಬಹುದು.**

**ಭಾವಾರ್ಥ** : ಹಿಂದಿನ ಶ್ಲೋಕದಲ್ಲಿ ಹೇಳಿದಂತೆ, ಭಕ್ತಿಯುತ ಸೇವೆಯು ಎರಡು ಪ್ರಕಾರ: ಒಂದು ನಿಯಂತ್ರಣ ತತ್ತ್ವಗಳ ಮಾರ್ಗ, ಮತ್ತೊಂದು ಪರಮದೇವೋತ್ತಮ ಪುರುಷನ ಪ್ರೇಮದಲ್ಲಿ ಪೂರ್ಣಾನುರಕ್ತಿ. ಕೃಷ್ಣಪ್ರಜ್ಞಾತತ್ತ್ವವನ್ನು ವಾಸ್ತವಿಕವಾಗಿ ಅನುಸರಿಸಲಾಗದವರಿಗೆ ಜ್ಞಾನಾರ್ಜನೆ ಉತ್ತಮ, ಏಕಂದರೆ ಜ್ಞಾನದಿಂದ ಒಬ್ಬನು ತನ್ನ ನಿಜ ಸ್ಥಿತಿಯನ್ನು ಅರಿತುಕೊಳ್ಳಲು ಸಮರ್ಥನಾಗಬಹುದು. ಕ್ರಮೇಣ ಜ್ಞಾನವು ಧ್ಯಾನ ಮಟ್ಟಕ್ಕೆ ಬೆಳೆಯಬಹುದು. ಧ್ಯಾನದಿಂದ, ಕ್ರಮೇಣ ಪ್ರಕ್ರಿಯೆಯಿಂದ ಒಬ್ಬನು ಪರಮದೇವೋತ್ತಮ ಪುರುಷನನ್ನು ಅರಿತುಕೊಳ್ಳಲು ಶಕ್ತನಾಗಬಹುದು. ತಾನೇ ಪರಮನೆಂದು ಅರಿತುಕೊಳ್ಳುವಂತೆ ಶಕ್ತಗೊಳಿಸುವ ಪ್ರಕ್ರಿಯೆಗಳೂ ಇವೆ, ಮತ್ತು ಭಕ್ತಿಯೋಗದಲ್ಲಿ ನಿರತನಾಗಲು ಶಕ್ತನಾಗದವನಿಗೆ ಆ ಬಗೆಯ ಧ್ಯಾನವು ಉಚಿತ. ಆ ರೀತಿಯಲ್ಲಿಯೂ ಧ್ಯಾನಮಾಡಲಾಗದವನಿಗೆ ವೇದ ಸಾಹಿತ್ಯದಲ್ಲಿ, ಬ್ರಾಹ್ಮಣರಿಗೆ, ಕ್ಷತ್ರಿಯರಿಗೆ, ವೈಶ್ಯರಿಗೆ ಮತ್ತು ಶೂದ್ರರಿಗೆ ವಿಧಿಸಿದಂತೆ ನಿಯತ ಕರ್ತವ್ಯಗಳಿವೆ. ಅವು ಭಗವದ್ಗೀತೆಯ ಕೊನೆಯ ಅಧ್ಯಾಯದಲ್ಲಿ ನಮಗೆ ಕಾಣಬರುತ್ತದೆ. ಆದರೆ ಎಲ್ಲ ಸಂದರ್ಭಗಳಲ್ಲಿಯೂ ಒಬ್ಬನು ಕರ್ಮಫಲಗಳನ್ನು ತ್ಯಜಿಸಲೇ ಬೇಕು ; ಎಂದರೆ ಒಬ್ಬನು ತನ್ನ ಕರ್ಮಫಲಗಳನ್ನು ಸದುದ್ದೇಶಕ್ಕಾಗಿ ವಿನಿಯೋಗಿಸಿಕೊಳ್ಳಬೇಕು.

ಒಟ್ಟಿನಲ್ಲಿ, ಅತ್ಯುನ್ನತ ಧ್ಯೇಯವಾದ ಪರಮ ದೇವೋತ್ತಮ ಪುರುಷನನ್ನು ತಲುಪಲು ಎರಡು ಪ್ರಕ್ರಿಯೆಗಳಿವೆ: ಒಂದು ಸಾವಧಾನವಾದ ಬೆಳವಣಿಗೆ, ಮತ್ತೊಂದು ನೇರ ಪ್ರಕ್ರಿಯೆ. ಕೃಷ್ಣಪ್ರಜ್ಞೆಯಲ್ಲಿ ಭಕ್ತಿಯೋಗವು ನೇರವಾದ ವಿಧಾನ, ಮತ್ತೊಂದು ವಿಧಾನದಲ್ಲಿ ಒಬ್ಬನ ಕರ್ಮಫಲಗಳ ತ್ಯಾಗ ಅಡಗಿದೆ. ಆಗ ಒಬ್ಬನು ಜ್ಞಾನ ಮಟ್ಟಕ್ಕೆ ನಂತರ ಧ್ಯಾನಮಟ್ಟಕ್ಕೆ, ಅನಂತರ ಪರಮಾತ್ಮನನ್ನು ಅರಿತುಕೊಳ್ಳುವ ಮಟ್ಟಕ್ಕೆ, ಆ ತರುವಾಯ ಪರಮ ದೇವೋತ್ತಮ ಪುರುಷನ ಮಟ್ಟಕ್ಕೆ ಬರಬಹುದು. ಒಬ್ಬನು ಕ್ರಮ ಕ್ರಮವಾದ ವಿಧಾನವನ್ನು ಅಥವಾ ನೇರ ಮಾರ್ಗವನ್ನು ಅನುಸರಿಸಬಹದು. ನೇರ ಮಾರ್ಗವು ಪ್ರತಿಯೊಬ್ಬರಿಗೂ ಸಾಧ್ಯವಿಲ್ಲ. ಆದ್ದರಿಂದ ಪರೋಕ್ಷ ಪ್ರಕ್ರಿಯೆಯೂ ಒಳ್ಳೆಯದು. ಆದರೆ ಪರೋಕ್ಷ ಪ್ರಕ್ರಿಯೆಯು ಅರ್ಜುನನಿಗೆ ಹೇಳಲ್ಪಡಲಿಲ್ಲ ಎಂಬುದನ್ನು ಅರಿತುಕೊಳ್ಳಬೇಕು, ಏಕೆಂದರೆ, ಆಗಲೇ ಅವನು ಪರಮದೇವೋತ್ತಮ ಪುರುಷನ ಪ್ರೇಮಯುತ ಭಕ್ತಿ ಸೇವಾ ಮಟ್ಟದಲ್ಲಿದ್ದಾನೆ. ಈ ಮಟ್ಟದಲ್ಲಿ ಇಲ್ಲದ ಇತರರು ತ್ಯಾಗ, ಜ್ಞಾನ ಧ್ಯಾನ, ಮತ್ತು ಪರಮಾತ್ಮನ ಮತ್ತು ಬ್ರಹ್ಮನ್‌ನ ಸಾಕ್ಷಾತ್ಕಾರದ ಕ್ರಮೇಣ ಪ್ರಕ್ರಿಯೆಯನ್ನು ಅನುಸರಿಸಬೇಕು. ಆದರೆ ಭಗವದ್ಗೀತೆಗೆ ಸಂಬಂಧಿಸಿದ ಮಟ್ಟಿಗೆ ನೇರ ವಿಧಾನಕ್ಕೆಯೇ ಹೆಚ್ಚು ಒತ್ತು ಕೊಡಲಾಗಿದೆ. ಪ್ರತಿಯೊಬ್ಬನೂ ನೇರ ವಿಧಾನವನ್ನು ಅನುಸರಿಸಲು ಮತ್ತು ಪರಮ ದೇವೋತ್ತಮ ಪುರುಷ ಕೃಷ್ಣನಿಗೆ ಶರಣಾಗತನಾಗಲು ಉಪದೇಶಿಸಿದೆ.

**ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।**
**ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ ॥ ೧೩ ॥**
**ಸನ್ತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।**
**ಮಯ್ಯರ್ಪಿತಮನೋಬುದ್ಧಿರ್ಯೋ ಮದ್ಭಕ್ತಃ ಸ ಮೇ ಪ್ರಿಯಃ ॥೧೪॥**

ಅದ್ವೇಷ್ಟಾ—ಅಸೂಯಾರಹಿತನಾಗಿ, ಸರ್ವ-ಭೂತಾನಾಮ್—ಎಲ್ಲ ಜೀವಿಗಳ ಬಗ್ಗೆ, ಮೈತ್ರಃ—ಸ್ನೇಹಯುಕ್ತನಾಗಿ, ಕರುಣಃ—ಕರುಣೆ, ಏವ—ಖಂಡಿತವಾಗಿ, ಚ—ಕೂಡ, ನಿರ್ಮಮಃ—ಸ್ವಾಮಿತ್ವಭಾವರಹಿತನಾಗಿ, ನಿರಹಂಕಾರಃ—ಮಿಥ್ಯಾಹಂಕಾರ ರಹಿತನಾಗಿ, ಸಮ—ಸಮನಾಗಿ, ದುಃಖ—ದುಃಖದಲ್ಲಿ, ಸುಖಃ—ಮತ್ತು ಸುಖದಲ್ಲಿ, ಕ್ಷಮೀ—ಕ್ಷಮಾಗುಣಿ, ಸನ್ತುಷ್ಟಃ—ತೃಪ್ತನಾಗಿ, ಸತತಮ್—ಸದಾ, ಯೋಗೀ—ಭಕ್ತಿರತನಾಗಿ, ಯತ-ಆತ್ಮಾ—ಆತ್ಮಸಂಯಮಿಯಾಗಿ, ದೃಢ-ನಿಶ್ಚಯಃ—ದೃಢನಿರ್ಧಾರ ದಿಂದ, ಮಯಿ—ನನ್ನಲ್ಲಿ, ಅರ್ಪಿತ—ನಿರತನಾಗಿ, ಮನಃ—ಮನಸ್ಸಿನ, ಬುದ್ಧಿಃ—ಮತ್ತು ಬುದ್ಧಿ, ಯಃ—ಯಾರು, ಮತ್-ಭಕ್ತಃ—ನನ್ನ ಭಕ್ತನು, ಸಃ—ಅವನು, ಮೇ—ನನಗೆ, ಪ್ರಿಯಃ—ಪ್ರಿಯನು.

**ಅನಸೂಯನು ಮತ್ತು ಸಕಲ ಜೀವಿಗಳಿಗೆ ದಯಾಮಯ ಮಿತ್ರನು, ತಾನು ಸ್ವಾಮಿಯೆಂಬ ಭಾವ ಇಲ್ಲದವನು, ಮಿಥ್ಯಾಹಂಕಾರ ಮುಕ್ತನು, ಸುಖದುಃಖಗಳಲ್ಲಿ ಸಮನು, ಕ್ಷಮಾಗುಣಿಯು, ಸದಾ ಸಂತುಷ್ಟನು, ಆತ್ಮ ಸಂಯಮಿಯು ಮತ್ತು ದೃಢ ನಿಶ್ಚಯದಿಂದ ತನ್ನ ಮನಸ್ಸು ಮತ್ತು ಬುದ್ಧಿಯನ್ನು ನನ್ನಲ್ಲಿ ಸ್ಥಿತಗೊಳಿಸಿ ಭಕ್ತಿಯುತ ಸೇವಾನಿರತನು, ಅಂಥ ಭಕ್ತನು ನನಗೆ ಬಹು ಪ್ರಿಯನು.**

**ಭಾವಾರ್ಥ :** ಮತ್ತೆ ಶುದ್ಧ ಭಕ್ತಿಯೋಗದ ವಿಷಯಕ್ಕೆ ಬರುತ್ತಾ, ಭಗವಂತನು ಈ ಎರಡು ಶ್ಲೋಕಗಳಲ್ಲಿ ಶುದ್ಧ ಭಕ್ತನ ದಿವ್ಯ ಅರ್ಹತೆಗಳನ್ನು ವರ್ಣಿಸುತ್ತಿದ್ದಾನೆ. ಶುದ್ಧ ಭಕ್ತನು ಯಾವ ಸಂದರ್ಭಗಳಲ್ಲಿಯೂ ಎಂದೂ ಕ್ಷೋಭೆಗೊಳ್ಳುವುದಿಲ್ಲ, ಅಥವಾ ಯಾರೊಬ್ಬರನ್ನೂ ದ್ವೇಷಿಸುವುದಿಲ್ಲ, ಅಥವಾ ಭಕ್ತನು ತನ್ನ ದ್ವೇಷಿಯ ದ್ವೇಷಿಯೂ ಆಗುವುದಿಲ್ಲ ; "ನನ್ನ ಸ್ವಂತ ಪೂರ್ವ ದುಷ್ಕಾರ್ಯಗಳ ನಿಮಿತ್ತ ಈ ವ್ಯಕ್ತಿಯು ನನ್ನ ದ್ವೇಷಿಯಾಗಿ ವರ್ತಿಸುತ್ತಿದ್ದಾನೆ. ಆದ್ದರಿಂದ ಪ್ರತಿಭಟಿಸುವುದಕ್ಕಿಂತ ಸಹಿಸಿಕೊಳ್ಳುವುದು ಉತ್ತಮ", ಎಂದು ಅವನು ಭಾವಿಸುತ್ತಾನೆ. ಶ್ರೀಮದ್ ಭಾಗವತದಲ್ಲಿ (10, 14, 8) ಹೀಗೆ ಹೇಳಿದೆ : **ತತ್ ತೇಽನುಕಂಪಾಂ ಸುಸಮೀಕ್ಷಮಾಣೋ ಭುಂಜಾನ ಏವಾತ್ಮ ಕೃತಂ ವಿಪಾಕಮ್**—ದುಃಖದಲ್ಲಿದ್ದಾಗಲೆಲ್ಲಾ ಅಥವಾ ತೊಂದರೆಗೆ ಒಳಗಾದಾಗ, ಅದು ಭಗವಂತನು ತನಗೆ ತೋರಿದ ಅನುಗ್ರಹವೆಂದು ಭಕ್ತನು ಭಾವಿಸುತ್ತಾನೆ. ನನ್ನ ಪೂರ್ವ ಪಾಪಕಾರ್ಯಗಳಿಗೆ, ನಾನು ಈಗ ಅನುಭವಿಸುವುದಕ್ಕಿಂತ ಇನ್ನೂ ಎಷ್ಟೋ ಹೆಚ್ಚು ದುಃಖ ಪಡಬೇಕಾಗಿತ್ತು. ಆದ್ದರಿಂದ ಪರಮಪ್ರಭುವಿನ ಅನುಗ್ರಹದಿಂದ ನನಗೆ ಆಗಬೇಕಾದ ಎಲ್ಲಾ ಶಿಕ್ಷೆ ಆಗಿಲ್ಲ. ಪರಮ ದೇವೋತ್ತಮ ಪುರುಷನ ಅನುಗ್ರಹದಿಂದಾಗಿ ಅಲ್ಪ ಶಿಕ್ಷೆ ಮಾತ್ರ ಆಗಿದೆ," ಎಂದು ಭಾವಿಸುತ್ತಾನೆ. ಆದ್ದರಿಂದ ಅನೇಕ ದುಃಖಕರ ಸ್ಥಿತಿಗಳಿದ್ದರೂ

ಅವನು ಶಾಂತನು, ಮೌನಿ ಮತ್ತು ತಾಳ್ಮೆಯುವನು ಆಗಿರುತ್ತಾನೆ. ಭಕ್ತನು ಸದಾ ಪ್ರತಿಯೊಬ್ಬನ, ತನ್ನ ವೈರಿಯ ವಿಷಯದಲ್ಲಿ ಕೂಡ, ಕರುಣಾಮಯಿ. **ನಿರ್ಮಮ** ಎಂದರೆ ಭಕ್ತನು ದೇಹ ಸಂಬಂಧಿ ನೋವು ಮತ್ತು ಕಷ್ಟಗಳಿಗೆ ಬಹಳಷ್ಟು ಮಹತ್ವ ಕೊಡುವುದಿಲ್ಲ. ಏಕೆಂದರೆ ತಾನು ಭೌತಿಕ ದೇಹವಲ್ಲ ಎಂಬುದನ್ನು ಅವನು ಪರಿಪೂರ್ಣವಾಗಿ ತಿಳಿದಿದ್ದಾನೆ. ಅವನು ದೇಹದೊಂದಿಗೆ ತನ್ನನ್ನು ಗುರುತಿಸಿಕೊಳ್ಳುವುದಿಲ್ಲ. ಆದ್ದರಿಂದ ಅವನು ಮಿಥ್ಯಾಹಂಕಾರಭಾವಮುಕ್ತನು ಮತ್ತು ಸುಖದುಃಖಗಳಲ್ಲಿ ಸಮನು. ಅವನು ಸಹನಶೀಲನು ಮತ್ತು ಪರಮಪ್ರಭುವಿನ ಅನುಗ್ರಹದಿಂದ ದೊರೆತದ್ದರಿಂದ ಸಂತುಷ್ಟನು. ಬಹು ಕಷ್ಟಪಟ್ಟು ಏನನ್ನೋ ಗಳಿಸಲು ಅವನು ಹೆಚ್ಚು ಪ್ರಯತ್ನ ಮಾಡುವುದಿಲ್ಲ. ಆದ್ದರಿಂದ ಅವನು ಸದಾ ಸಂತೋಷಭರಿತನು. ಅವನು ಗುರುಗಳಿಂದ ಪಡೆದ ಉಪದೇಶಗಳಲ್ಲಿ ಸ್ಥಿತನಾಗಿರುವುದರಿಂದ ಅವನು, ಸಂಪೂರ್ಣವಾಗಿ ಪರಿಪೂರ್ಣಯೋಗಿ, ಮತ್ತು ಅವನ ಇಂದ್ರಿಯಗಳು ನಿಯಂತ್ರಿತವಾಗಿರುವುದರಿಂದ ಅವನು ದೃಢ ನಿಶ್ಚಯ ಉಳ್ಳವನು. ಮಿಥ್ಯಾಮಾರ್ಗಗಳಿಂದ ಅವನು ಮಾರ್ಗ ಭ್ರಷ್ಟನಾಗುವುದಿಲ್ಲ, ಏಕೆಂದರೆ ಯಾರೂ ಕೂಡ ಭಕ್ತಿಯುತ ಸೇವಾ ದೃಢ ನಿಶ್ಚಯದಿಂದ ಅವನನ್ನು ಬೇರೆಡೆಗೆ ತಿರುಗಿಸಲಾರರು. ಕೃಷ್ಣನು ಶಾಶ್ವತ ಪ್ರಭು ಎಂಬ ಬಗ್ಗೆ ಅವನು ಪೂರ್ಣ ಪ್ರಾಜ್ಞ, ಆದ್ದರಿಂದ ಯಾರೂ ಅವನನ್ನು ಕ್ಷೋಭೆಗೊಳಿಸಲಾಗದು. ಈ ಎಲ್ಲ ಅರ್ಹತೆಗಳು, ಅವನು ತನ್ನ ಮನಸ್ಸು ಮತ್ತು ಬುದ್ಧಿಯನ್ನು ಸಂಪೂರ್ಣವಾಗಿ ಪರಮ ಪ್ರಭುವಿನಲ್ಲಿ ಸ್ಥಿತಗೊಳಿಸಲು ಅವನನ್ನು ಶಕ್ತಗೊಳಿಸುತ್ತವೆ. ಇಂಥ ಭಕ್ತಿಯೋಗ ಮಟ್ಟವು ನಿಸ್ಸಂದೇಹವಾಗಿ ಬಹು ದುರ್ಲಭ, ಆದರೆ ಭಕ್ತನು ಭಕ್ತಿನಿಯಂತ್ರಣ ತತ್ತ್ವಾಚರಣೆಯಿಂದ ಆ ಮಟ್ಟದಲ್ಲಿ ಸನ್ನಿವೇಶಿತನಾಗುತ್ತಾನೆ. ಇಷ್ಟೇಅಲ್ಲದೇ, ಅಂಥ ಭಕ್ತನು ತನಗೆ ಬಹು ಪ್ರಿಯನೆಂದು ಭಗವಂತನು ಹೇಳುತ್ತಾನೆ, ಏಕೆಂದರೆಭಗವಂತನು ಸದಾ ಪೂರ್ಣ ಕೃಷ್ಣ ಪ್ರಜ್ಞೆಯಲ್ಲಿನ ಅವನ ಸಕಲ ಕ್ರಿಯೆಗಳಿಂದ ಪ್ರೀತನು.

**ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ ।**
**ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಚ ಮೇ ಪ್ರಿಯಃ ॥೧೫॥**

ಯಸ್ಮಾತ್—ಯಾರಿಂದ, ನ—ಎಂದಿಗೂ ಇಲ್ಲ, ಉದ್ವಿಜತೇ—ಕ್ಷೋಭೆಗೊಳ್ಳುವುದು, ಲೋಕಃ—ಜನರು, ಲೋಕಾತ್—ಜನರಿಂದ, ನ—ಇಲ್ಲ, ಉದ್ವಿಜತೇ—ಉದ್ವಿಗ್ನವಾಗುವುದು, ಚ—ಕೂಡ, ಯಃ—ಯಾರೊಬ್ಬನು, ಹರ್ಷ—ಹರ್ಷದಿಂದ, ಅಮರ್ಷ—ದುಃಖದಿಂದ, ಭಯ—ಭಯ,ಉದ್ವೇಗೈಃ—ಮತ್ತು ಉದ್ವೇಗ, ಮುಕ್ತಃ—ಮುಕ್ತನು, ಯಃ—ಯಾರು, ಸಃ—ಅವನು, ಚ—ಕೂಡ, ಮೇ—ನನಗೆ, ಪ್ರಿಯಃ—ಬಹು ಪ್ರಿಯನು.

**ಯಾರ ಸಲುವಾಗಿ ಯಾರೂ ಕಷ್ಟಕ್ಕೀಡಾಗುವುದಿಲ್ಲವೋ ಮತ್ತು ಯಾರಿಂದಲೂ ಉದ್ವಿಗ್ನನಾಗದವನು, ಸುಖದುಃಖ ಮತ್ತು ಭಯ ಆತಂಕಗಳಲ್ಲಿ, ಸಮನಾಗಿರುವವನು, ಅವನು ನನಗೆ ಬಹು ಪ್ರಿಯನು.**

**ಭಾವಾರ್ಥ :** ಭಕ್ತನ ಮತ್ತೆ ಕೆಲವು ಗುಣಗಳು ಮತ್ತಷ್ಟು ವರ್ಣಿಸಲ್ಪಟ್ಟಿವೆ. ಅಂಥ ಭಕ್ತನಿಂದ ಯಾರೂ ಕೂಡ ತೊಂದರೆ, ಆತಂಕ, ಭಯ ಅಥವಾ ಅಸಂತೋಷಕ್ಕೆ ಗುರಿ

ಯಾಗುವುದಿಲ್ಲ. ಭಕ್ತನು ಪ್ರತಿಯೊಬ್ಬನಿಗೂ ಕರುಣಾಮಯನಾಗಿರುವುದರಿಂದ ಇತರರನ್ನು ಆತಂಕಕ್ಕೆ ಒಳಪಡಿಸುವಂಥಹ ಕಾರ್ಯ ಮಾಡುವುದಿಲ್ಲ. ಅದೇ ಕಾಲದಲ್ಲಿ ಇತರರು ಭಕ್ತನನ್ನು ತೊಂದರೆಗೊಳಪಡಿಸಲು ಯತ್ನಿಸಿದರೆ, ಅವನು ಅದರಿಂದ ಉದ್ವೇಗಗೊಳ್ಳುವುದಿಲ್ಲ. ಭಗವಂತನ ಅನುಗ್ರಹದಿಂದ ಅವನು ಯಾವ ಬಾಹ್ಯ ಕ್ಷೋಭೆಯಿಂದ ಉದ್ವೇಗಗೊಳ್ಳದಷ್ಟು ಅಭ್ಯಾಸಿಯಾಗಿರುತ್ತಾನೆ. ವಾಸ್ತವಿಕವಾಗಿ ಭಕ್ತನು ಸದಾ ಕೃಷ್ಣಪ್ರಜ್ಞೆಯಲ್ಲಿ ನಿಮಗ್ನನಾಗಿರುವುದರಿಂದ, ಮತ್ತು ಭಕ್ತಿ ಸೇವೆಯಲ್ಲಿ ನಿರತನಾಗಿರುವುದರಿಂದ ಅಂಥ ಭೌತಿಕ ಸನ್ನಿವೇಶಗಳು ಅವನನ್ನು ಕದಡಲಾರವು. ಸಾಮಾನ್ಯವಾಗಿ ಪ್ರಾಪಂಚಿಕ ವ್ಯಕ್ತಿಯು ತನ್ನ ಇಂದ್ರಿಯ ತೋಷಣಕ್ಕೆ ಮತ್ತು ತನ್ನ ದೇಹಕ್ಕೆ ಏನಾದರೂ ದೊರೆತಾಗ ಬಹಳ ಸುಖಪಡುತ್ತಾನೆ, ಮತ್ತು ಇತರರು ಇಂದ್ರಿಯ ತೋಷಣಕ್ಕೆ ವಸ್ತುಗಳನ್ನು ಹೊಂದಿರುವಾಗ ಮತ್ತು ತನಗೆ ಅವು ದೊರೆಯದಿರುವಾಗ, ಅವನು ಅಸಮಾಧಾನ ಮತ್ತು ಅಸೂಯೆಪಡುತ್ತಾನೆ. ವೈರಿಯಿಂದ ಪ್ರತೀಕಾರ ನಿರೀಕ್ಷಿಸಿದಾಗ ಭಯಗೊಳ್ಳುತ್ತಾನೆ, ಮತ್ತು ಏನನ್ನಾದರೂ ಯಶಸ್ವಿಯಾಗಿ ನಿರ್ವಹಿಸಲು ಆಗದೆ ಹೋದಾಗ ನಿರುತ್ಸಾಹಗೊಳ್ಳುತ್ತಾನೆ. ಈ ಎಲ್ಲ ಉದ್ವೇಗಗಳಿಗೆ ಸದಾ ಅತೀತನಾದ ಭಕ್ತನು ಕೃಷ್ಣನಿಗೆ ಬಹು ಪ್ರಿಯನು.

**ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ ।**
**ಸರ್ವಾರಂಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ॥ ೧೬ ॥**

ಅನಪೇಕ್ಷಃ—ತಟಸ್ಥ, ಶುಚಿಃ—ಶುದ್ಧ, ದಕ್ಷಃ—ದಕ್ಷ, ಉದಾಸೀನಃ—ಚಿಂತೆಯಿಂದ ಮುಕ್ತನು, ಗತ-ವ್ಯಥಃ—ಸಕಲ ದುಃಖಗಳಿಂದ ಮುಕ್ತನು, ಸರ್ವ-ಆರಂಭ—ಸಕಲ ಪ್ರಯತ್ನಗಳ, ಪರಿತ್ಯಾಗೀ—ಪರಿತ್ಯಾಗಿಯು, ಯಃ—ಯಾರೋ ಅವನು, ಮತ್-ಭಕ್ತಃ—ನನ್ನ ಭಕ್ತನು, ಸಃ—ಅವನು, ಮೇ—ನನಗೆ, ಪ್ರಿಯಃ—ಬಹು ಪ್ರಿಯನು.

**ಸಾಮಾನ್ಯ ಕರ್ಮಾವಲಂಬಿಯಲ್ಲದ, ಶುದ್ಧ, ದಕ್ಷ, ಚಿಂತಾರಹಿತ, ಸಕಲ ನೋವುರಹಿತ, ಮತ್ತು ಫಲಕ್ಕಾಗಿ ಹೋರಾಡದ ನನ್ನ ಭಕ್ತನು, ನನಗೆ ಬಹು ಪ್ರಿಯನು.**

**ಭಾವಾರ್ಥ :** ಭಕ್ತನಿಗೆ ಹಣ ನೀಡಬಹುದು, ಆದರೆ ಅದನ್ನು ಆರ್ಜಿಸಲು ಅವನು ಹೋರಾಡಕೂಡದು. ಪರಮನ ಅನುಗ್ರಹದಿಂದ ತಾನಾಗಿಯೇ ಅವನಿಗೆ ಹಣ ದೊರೆತರೆ, ಅದರಿಂದ ಅವನು ಉದ್ವಿಗ್ನನಾಗುವುದಿಲ್ಲ. ಸ್ವಾಭಾವಿಕವಾಗಿ ಭಕ್ತನು ಕನಿಷ್ಟ ದಿನಕ್ಕೆ ಎರಡು ಸಲ ಸ್ನಾನ ಮಾಡುತ್ತಾನೆ, ಮತ್ತು ಭಕ್ತಿಯುತ ಸೇವೆಗಾಗಿ ಪ್ರಾತಃಕಾಲದಲ್ಲಿ ಏಳುತ್ತಾನೆ. ಹೀಗೆ ಸ್ವಾಭಾವಿಕವಾಗಿ ಅಂತರಂಗ ಬಹಿರಂಗಗಳಲ್ಲಿ ಶುದ್ಧನು. ಭಕ್ತನು ಜೀವನದ ಎಲ್ಲ ಚಟುವಟಿಕೆಗಳ ಸಾರವನ್ನು ಪೂರ್ತಿಯಾಗಿ ತಿಳಿದವನಾದ್ದರಿಂದ, ಅವನು ಸದಾ ದಕ್ಷನು ಮತ್ತು ಪ್ರಮಾಣ ಶಾಸ್ತ್ರಗಳ ಬಗ್ಗೆ ಅವನಿಗೆ ಪೂರ್ಣ ವಿಶ್ವಾಸ, ಭಕ್ತನು ವಿಶಿಷ್ಟಪಕ್ಷದ ಪರವಾಗಿ ಎಂದೂ ಭಾಗವಹಿಸುವುದಿಲ್ಲ, ಆದ್ದರಿಂದ ಅವನು ನಿಶ್ಚಿಂತನು. ಅವನಿಗೆ ಎಂದಿಗೂ ನೋವಾಗುವುದಿಲ್ಲ, ಏಕೆಂದರೆ ಅವನು ಸರ್ವೋಪಾಧಿ

ಮುಕ್ತನು; ತನ್ನ ದೇಹವು ಒಂದು ಉಪಾಧಿ ಎಂದು ತಿಳಿದಿದ್ದಾನೆ, ಆದ್ದರಿಂದ ದೈಹಿಕ ನೋವುಗಳಿಂದ ಅವನು ಮುಕ್ತನು. ಭಕ್ತಿಯುತ ಸೇವಾ ತತ್ತ್ವದ ವಿರೋಧಿಯಾದ ಯಾವುದಕ್ಕಾಗಿಯೂ ಶುದ್ಧಭಕ್ತನು ಯತ್ನಿಸುವುದಿಲ್ಲ. ಉದಾಹರಣೆಗೆ, ಒಂದು ದೊಡ್ಡ ಕಟ್ಟಡ ನಿರ್ಮಾಣ ಮಾಡಲು ಬಹಳಷ್ಟು ಶಕ್ತಿಬೇಕು, ಅಂಥ ಉದ್ಯೋಗದಿಂದ ತನ್ನ ಭಕ್ತಿಯುತ ಸೇವಾ ಪ್ರಗತಿಗೆ ಪ್ರಯೋಜನವಿರದಿದ್ದರೆ, ಅವನು ಅಂಥ ಉದ್ಯೋಗ ಮಾಡುವುದಿಲ್ಲ. ಅವನು ಭಗವಂತನಿಗಾಗಿ ಮಂದಿರ ನಿರ್ಮಾಣ ಮಾಡಬಹುದು. ಮತ್ತು ಅದಕ್ಕಾಗಿ ಅವನು ಎಲ್ಲ ಬಗೆಯ ತೊಂದರೆಗಳನ್ನು ತೆಗೆದುಕೊಳ್ಳಬಹುದು, ಆದರೆ ತನ್ನ ವೈಯಕ್ತಿಕ ಸಂಬಂಧಗಳಿಗಾಗಿ ಅವನು ದೊಡ್ಡ ಮನೆ ನಿರ್ಮಿಸುವುದಿಲ್ಲ.

**ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ ।**
**ಶುಭಾಶುಭಪರಿತ್ಯಾಗೀ ಭಕ್ತಿಮಾನ್ ಯಃ ಸ ಮೇ ಪ್ರಿಯಃ ॥ ೧೭ ॥**

ಯಃ—ಯಾರು, ನ—ಎಂದೂ ಇಲ್ಲ, ಹೃಷ್ಯತಿ—ಸಂತೋಷಿಸುವುದು, ನ—ಇಲ್ಲ, ದ್ವೇಷ್ಟಿ—ದುಃಖಿಸುವುದು, ನ—ಇಲ್ಲ, ಶೋಚ—ಶೋಕಿಸುವುದು, ನ—ಎಂದಿಗೂ ಇಲ್ಲ, ಕಾಂಕ್ಷತಿ—ಇಚ್ಛಿಸುವುದು, ಶುಭ—ಶುಭಕರ, ಅಶುಭ—ಅಶುಭಕರ, ಪರಿತ್ಯಾಗೀ—ಪರಿತ್ಯಾಗಿಯು, ಭಕ್ತಿಮಾನ್—ಭಕ್ತನು, ಯಃ—ಯಾರೋ, ಸಃ—ಅವನು, ಮೇ—ನನಗೆ, ಪ್ರಿಯಃ—ಪ್ರಿಯನು.

**ಯಾರು ಸಂತೋಷ ಅಥವಾ ದುಃಖಪಡುವುದಿಲ್ಲವೋ, ಶೋಕ ಅಥವಾ ಇಚ್ಛೆ ಪಡುವುದಿಲ್ಲವೋ, ಮತ್ತು ಶುಭಾಶುಭಗಳನ್ನು ಪರಿತ್ಯಜಿಸಿರುವನೋ-ಅಂಥ ಭಕ್ತನು ನನಗೆ ಬಹು ಪ್ರಿಯನು.**

**ಭಾವಾರ್ಥ :** ಶುದ್ಧ ಭಕ್ತನು ಭೌತಿಕ ಲಾಭ ನಷ್ಟದಿಂದ ಸುಖಿಯೂ ಅಲ್ಲ, ದುಃಖಿಯೂ ಅಲ್ಲ, ಅಥವಾ ಪುತ್ರನನ್ನೋ, ಶಿಷ್ಯನನ್ನೋ ಹೊಂದಲು ಬಹಳಷ್ಟು ಕಾತುರನಲ್ಲ, ಅಥವಾ ಅವರ ಅಪ್ರಾಪ್ತಿಯಿಂದ ದುಃಖಿತನೂ ಅಲ್ಲ. ತನಗೆ ಬಹುಪ್ರಿಯವಾದ ಏನನ್ನೋ ಕಳೆದುಕೊಂಡರೆ, ಅದಕ್ಕಾಗಿ ಶೋಕಿಸುವುದಿಲ್ಲ. ಅದೇ ಪ್ರಕಾರ ಅವನು ಇಚ್ಛೆಪಟ್ಟದ್ದು ದೊರೆಯದಿದ್ದರೆ, ಅವನು ದುಃಖಿತನಲ್ಲ. ಸಕಲ ಶುಭಾಶುಭ ಪಾಪಕಾರ್ಯಗಳ ಇದಿರಿನಲ್ಲಿ ಅವನು ಅತೀತನು. ಪರಮ ಪ್ರಭುವಿನ ತುಷ್ಟಿಗಾಗಿ ಅವನು ಎಲ್ಲ ಪ್ರಕಾರ ಕಷ್ಟ ಅನುಭವಕ್ಕೆ ಸಿದ್ಧನು. ಅವನ ಭಕ್ತಿಯುತ ಸೇವಾ ನಿರ್ವಹಣೆಯಲ್ಲಿ ಅವನಿಗೆ ಯಾವುದೂ ಅಡ್ಡಿಯಾಗುವುದಿಲ್ಲ. ಅಂಥ ಭಕ್ತನು ಕೃಷ್ಣನಿಗೆ ಬಹು ಪ್ರಿಯನು.

**ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ ॥**
**ಶೀತೋಷ್ಣಸುಖದುಃಖೇಷು ಸಮಃ ಸಂಗವಿವರ್ಜಿತಃ ॥ ೧೮ ॥**
**ತುಲ್ಯನಿಂದಾಸ್ತುತಿರ್ಮೌನೀ ಸನ್ತುಷ್ಟೋ ಯೇನ ಕೇನಚಿತ್ ।**
**ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ಮೇ ಪ್ರಿಯೋ ನರಃ ॥ ೧೯ ॥**

ಸಮಃ—ಸಮನು, ಶತ್ರೌ—ಶತ್ರುವಿಗೆ, ಚ—ಕೂಡ, ಮಿತ್ರೇ—ಮಿತ್ರನಿಗೆ, ಚ—ಕೂಡ, ತಥಾ—ಹಾಗೆ, ಮಾನ—ಗೌರವದಲ್ಲಿ, ಅಪಮಾನಯೋಃ—ಅಪಮಾನಗಳಲ್ಲಿ,

ಶೀತ—ಶೀತದಲ್ಲಿ, ಉಷ್ಣ—ಉಷ್ಣದಲ್ಲಿ, ಸುಖ—ಸುಖ, ದುಃಖೇಷು—ಮತ್ತು ದುಃಖದಲ್ಲಿ, ಸಮಃ—ಸಮಚಿತ್ತನು, ಸಂಗ-ವಿವರ್ಜಿತಃ—ಸಕಲ ಸಂಗ ಮುಕ್ತನು, ತುಲ್ಯ—ಸಮತೋಲನು, ನಿಂದಾ—ನಿಂದೆ, ಸ್ತುತಿಃ—ಮತ್ತು ಸ್ತುತಿಯಲ್ಲಿ, ಮೌನೀ—ಶಾಂತನು, ಸನ್ತುಷ್ಟಃ—ತೃಪ್ತನು, ಯೇನ-ಕೇನಚಿತ್—ಯಾವುದರಿಂದಲೂ, ಅನಿಕೇತಃ—ನಿವಾಸ ರಹಿತನು, ಸ್ಥಿರ—ದೃಢ, ಮತಿಃ—ನಿರ್ಧಾರದಿಂದ, ಭಕ್ತಿ-ಮಾನ್—ಭಕ್ತಿನಿರತನು, ಮೇ—ನನಗೆ, ಪ್ರಿಯಃ—ಪ್ರಿಯನು, ನರಃ—ಮಾನವನು.

**ಯಾರು, ಮಿತ್ರ ಶತ್ರುಗಳಿಗೆ ಸಮಾನನು, ಮಾನಾಪಮಾನ, ಶೀತೋಷ್ಣ, ಸುಖದುಃಖ, ಕೀರ್ತಿ-ಅಪಕೀರ್ತಿಗಳಲ್ಲಿ ಸಮಚಿತ್ತನು, ಸದಾ ದುಷ್ಟಸಂಗ ವಿವರ್ಜಿತನು ಮತ್ತು ಯಾವುದರಿಂದಲೂ ಸದಾ ಶಾಂತನು ಮತ್ತು ತೃಪ್ತನು, ನಿವಾಸದ ಬಗ್ಗೆ ಚಿಂತೆ ಇಲ್ಲದವನು, ಜ್ಞಾನಸ್ಥಿತನು ಮತ್ತು ಭಕ್ತಿಯುತ ಸೇವಾನಿರತನು— ಅಂಥವನು ನನಗೆ ಬಹು ಪ್ರಿಯನು.**

**ಭಾವಾರ್ಥ :** ಭಕ್ತನು ಸದಾ ದುಸ್ಸಂಗ ಮುಕ್ತನು. ಕೆಲವು ಸಲ ಒಬ್ಬರ ಸ್ತುತಿ ಮತ್ತೆ ಕೆಲವು ಸಲ ನಿಂದೆ ನಡೆಯುತ್ತದೆ; ಅದು ಮಾನವ ಸಮಾಜದ ಸ್ವಭಾವ. ಆದರೆ ಭಕ್ತನು ಸದಾ ಅಸಹಜ ಕೀರ್ತಿ ಅಪಕೀರ್ತಿಗಳಿಗೆ, ದುಃಖ ಸುಖಗಳಿಗೆ ಅತೀತನು. ಅವನು ಬಹು ಸಹನಶೀಲನು. ಅವನು ಕೃಷ್ಣ ಕಥೆಯನ್ನು ಬಿಟ್ಟು ಬೇರೆ ಯಾವುದನ್ನೂ ಕುರಿತು ಮಾತನಾಡುವುದಿಲ್ಲ; ಆದ್ದರಿಂದ ಅವನನ್ನು ಮೌನಿ ಎಂದು ಕರೆದಿದೆ. ಮೌನಿ ಎಂದರೆ ನಿರರ್ಥಕ ಮಾತನಾಡದವನು; ಮೌನ ಎಂದರೆ ಒಬ್ಬನು ಅರ್ಥಹೀನವಾಗಿ ಮಾತನಾಡ ಕೂಡದು. ಅವಶ್ಯಕವಾದವುಗಳನ್ನು ಕುರಿತು ಮಾತ್ರ ಮಾತನಾಡಬೇಕು, ಮತ್ತು ಭಕ್ತನಿಗೆ ಅತ್ಯಗತ್ಯವಾದ ಮಾತು ಎಂದರೆ ಪರಮ ಪ್ರಭುವಿಗೋಸ್ಕರವಾದ ಮಾತು. ಭಕ್ತನು ಸರ್ವ ಸ್ಥಿತಿಗಳಲ್ಲಿ ಸುಖಿ, ಕೆಲವು ಸಲ ಅವನಿಗೆ ಬಹು ಅಸ್ವಾದ್ಯ ಆಹಾರ ದೊರೆಕಬಹುದು, ಕೆಲವು ಸಲ ದೊರೆಯದಿರಬಹುದು, ಆದರೂ ಅವನು ತುಷ್ಟನು. ಅವನು ವಸತಿ ಸೌಕರ್ಯಕ್ಕಾಗಿ ಚಿಂತಿಸುವುದಿಲ್ಲ. ಕೆಲವು ಸಲ ಅವನು ಮರದ ಕೆಳಗೆ ಜೀವಿಸಬಹುದು, ಮತ್ತೆ ಕೆಲವು ಸಲ ದೊಡ್ಡ ಭವ್ಯ ಕಟ್ಟಡಗಳಲ್ಲಿ ವಾಸಿಸಬಹುದು; ಅವನು ಆ ಎರಡಕ್ಕೂ ಆಕರ್ಷಿತನಲ್ಲ. ಅವನು ತನ್ನ ನಿರ್ಧಾರ ಮತ್ತು ಜ್ಞಾನದಲ್ಲಿ ಸ್ಥಿತನಾದುದರಿಂದ, ಅವನನ್ನು ಸ್ಥಿತನು ಎಂದು ಕರೆದಿದೆ. ಭಕ್ತನ ಗುಣವರ್ಣನೆಯಲ್ಲಿ ನಾವು ಕೆಲಮಟ್ಟಿನ ಪುನರುಕ್ತಿಯನ್ನು ಕಾಣಬಹುದು. ಆದರೆ ಇದು ಭಕ್ತನು ಈ ಎಲ್ಲ ಗುಣಾರ್ಜನೆ ಮಾಡಬೇಕೆಂಬುದನ್ನು ಒತ್ತಿ ಹೇಳಲು ಮಾತ್ರ. ಸದ್ಗುಣಗಳಿಲ್ಲದೆ, ಒಬ್ಬನು ಶುದ್ಧ ಭಕ್ತನಾಗಲಾರನು. **ಹರಾವ್ ಅಭಕ್ತಸ್ಯ ಕುತೋ ಮಹದ್‌ಗುಣಾಃ :** ಭಕ್ತನಲ್ಲದವನಲ್ಲಿ ಸದ್ಗುಣಗಳು ಇರುವುದಿಲ್ಲ. ಭಕ್ತ ಎನಿಸಿಕೊಳ್ಳಬಯಸುವವನು ಸದ್ಗುಣಗಳನ್ನು ಬೆಳೆಸಿಕೊಳ್ಳಬೇಕು. ಅವನು ಈ ಅರ್ಹತೆಗಳನ್ನು ಆರ್ಜಿಸಲು ಬಾಹ್ಯತಃ ಪ್ರಯತ್ನಿಸುವುದಿಲ್ಲ ನಿಜ, ಆದರೆ ಕೃಷ್ಣಪ್ರಜ್ಞಾ ನಿರತತೆಯೂ ಮತ್ತು ಭಕ್ತಿಯುತ ಸೇವೆಯೂ ಅವುಗಳನ್ನು ಬೆಳೆಸಿಕೊಳ್ಳಲು ತಾವಾಗಿಯೇ ಅವನಿಗೆ ಸಹಾಯಕವಾಗುತ್ತವೆ.

**ಯೇ ತು ಧರ್ಮಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।**
**ಶ್ರದ್ಧಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ॥ ೨೦ ॥**

ಯೇ—ಯಾರು, ತು—ಆದರೆ, ಧರ್ಮ—ಧರ್ಮದ, ಅಮೃತಮ್—ಅಮೃತವನ್ನು, ಇದಮ್—ಇದನ್ನು, ಯಥಾ-ಉಕ್ತಂ—ಹೇಳಿದಂತೆ, ಪರ್ಯುಪಾಸತೇ—ಸಂಪೂರ್ಣವಾಗಿ ಅದರಲ್ಲಿ ನಿರತರಾಗುವ, ಶ್ರದ್ಧಧಾನಾಃ—ಶ್ರದ್ಧೆಯಿಂದ, ಮತ್-ಪರಮಾಃ—ನನ್ನನ್ನು ಪರಮಪ್ರಭುವೆಂದು, ಸರ್ವಸ್ವವೆಂದು ಗ್ರಹಿಸಿ, ಭಕ್ತಾಃ—ಭಕ್ತರು, ತೇ—ಅವರು, ಅತೀವ—ಬಹು ಬಹು, ಮೇ—ನನಗೆ, ಪ್ರಿಯಾಃ—ಪ್ರಿಯರು.

**ಯಾರು ಅವಿನಾಶಿಯಾದ ಈ ಭಕ್ತಿಸೇವಾ ಮಾರ್ಗವನ್ನು ಅನುಸರಿಸುವರೋ, ಮತ್ತು ನನ್ನನ್ನು ಪರಮ ಧ್ಯೇಯವಾಗಿ ಮಾಡಿಕೊಂಡು ಶ್ರದ್ಧೆಯಿಂದ ಸಂಪೂರ್ಣವಾಗಿ ಅದರಲ್ಲಿ ನಿರತರಾಗುವರೋ, ಅವರು ನನಗೆ ಬಹು ಬಹು ಪ್ರಿಯರು.**

**ಭಾವಾರ್ಥ :** ಈ ಅಧ್ಯಾಯದಲ್ಲಿ ಎರಡನೆಯ ಶ್ಲೋಕದಿಂದ ಕೊನೆಯವರೆಗೆ **ಮಯ್ಯಾವೇಶ್ಯ ಮನೋ ಯೇ ಮಾಮ್** ("ಮನಸ್ಸನ್ನು ನನ್ನಲ್ಲಿ ಸ್ಥಿತಗೊಳಿಸಿ") **ಯೇ ತು ಧರ್ಮಾಮೃತಮ್ ಇದಮ್**("ಶಾಶ್ವತ ತೊಡಗುವಿಕೆಯ ಈ ಧರ್ಮವನ್ನು") ಎಂಬಲ್ಲಿಯವರೆಗೆ—ಪರಮಪ್ರಭು ತನ್ನನ್ನು ತಲುಪಲು ದಿವ್ಯ ಸೇವಾ ಪ್ರಕ್ರಿಯೆಗಳನ್ನು ವಿವರಿಸಿದ್ದಾನೆ. ಅಂಥ ಪ್ರಕ್ರಿಯೆಗಳು ಪ್ರಭುವಿಗೆ ಬಹು ಪ್ರಿಯ, ಮತ್ತು ಅವುಗಳಲ್ಲಿ ನಿರತನಾದವನನ್ನು ಅವನು ಅಂಗೀಕರಿಸುತ್ತಾನೆ. ವ್ಯಕ್ತಿಶೂನ್ಯ ಬ್ರಹ್ಮನ್ ಮಾರ್ಗನಿರತನು ಅಥವಾ ಪರಮ ದೇವೋತ್ತಮ ಪುರುಷನ ವ್ಯಕ್ತಿ ಸೇವಾ ನಿರತನು—ಇದರಲ್ಲಿ ಯಾರು ಉತ್ತಮರು ಎಂದು ಅರ್ಜುನನಿಂದ ಪ್ರಶ್ನಿಸಲ್ಪಟ್ಟಿತು,ಮತ್ತು ಭಗವಂತನು ದೇವೋತ್ತಮ ಪುರುಷನ ಭಕ್ತಿಯುತ ಸೇವೆಯು, ಅಧ್ಯಾತ್ಮ ಸಾಕ್ಷಾತ್ಕಾರದ ಸಕಲ ಪ್ರಕ್ರಿಯೆಗಳಲ್ಲಿ ನಿಸ್ಸಂದೇಹವಾಗಿ ಅತ್ಯುತ್ತಮ ಎಂದು ಬಹು ಸ್ಪಷ್ಟವಾಗಿ ಉತ್ತರಿಸಿದ್ದಾನೆ, ಅರ್ಥಾತ್ ಈ ಅಧ್ಯಾಯದಲ್ಲಿ ಸತ್ಸಂಗದಿಂದ ಒಬ್ಬನು ಶುದ್ಧ ಭಕ್ತಿಯುತ ಸೇವಾರತಿ ಬೆಳೆಸಿಕೊಳ್ಳುತ್ತಾನೆ, ಮತ್ತು ಆ ಮೂಲಕ ಸದ್ಗುರುವನ್ನು ಪಡೆಯುತ್ತಾನೆ, ಮತ್ತು ಅವನಿಂದ ಶ್ರವಣ ಮತ್ತು ಕೀರ್ತನೆಯನ್ನು ಪ್ರಾರಂಭಿಸುತ್ತಾನೆ, ಆಸಕ್ತಿ ಮತ್ತು ಭಕ್ತಿಯಿಂದ ಭಕ್ತಿಯುತ ಸೇವೆಯ ನಿಯಂತ್ರಣ ತತ್ವಗಳನ್ನು ಆಚರಿಸಿ ಭಗವಂತನ ದಿವ್ಯಯುತ ಸೇವಾ ನಿರತನಾಗುತ್ತಾನೆ. ಈ ಅಧ್ಯಾಯದಲ್ಲಿ ಈ ಮಾರ್ಗವು ಹೇಳಲ್ಪಟ್ಟಿದೆ, ಆದ್ದರಿಂದ ಭಕ್ತಿಯುತ ಸೇವೆಯು ಮಾತ್ರ ಆತ್ಮ-ಸಾಕ್ಷಾತ್ಕಾರಕ್ಕೆ, ಪರಮ ದೇವೋತ್ತಮ ಪುರುಷನ ಪ್ರಾಪ್ತಿಗೆ, ಏಕೈಕ ಮಾರ್ಗ ಎಂಬುದರಲ್ಲಿ ಸಂದೇಹವಿಲ್ಲ. ಈ ಅಧ್ಯಾಯದಲ್ಲಿ ವರ್ಣಿಸಿದಂತೆ, ಪರಮ ಪರತತ್ವದ ವ್ಯಕ್ತಿಶೂನ್ಯ ಕಲ್ಪನೆಯು ಆತ್ಮ-ಸಾಕ್ಷಾತ್ಕಾರಕ್ಕಾಗಿ, ಒಬ್ಬನು ಶರಣಾಗತನಾಗುವವರೆಗೆ ಮಾತ್ರ ಹೇಳಲ್ಪಟ್ಟಿದೆ. ಅರ್ಥಾತ್, ಒಬ್ಬನು ಶುದ್ಧ ಭಕ್ತನ ಸಂಗಾವಕಾಶ ದೊರೆಯುದವರೆಗೆ, ವ್ಯಕ್ತಿಶೂನ್ಯ ಕಲ್ಪನೆಯು ಪ್ರಯೋಜಕವಾಗ ಬಹುದು. ಪರತತ್ವದ ವ್ಯಕ್ತಿಶೂನ್ಯ ಕಲ್ಪನೆಯಲ್ಲಿ ಒಬ್ಬನು ಫಲಾಪೇಕ್ಷೆ ಇಲ್ಲದ ಕರ್ಮ ಮಾಡುತ್ತಾನೆ, ಮತ್ತು ಚೇತನ ಮತ್ತು ಜಡದ ಅರಿವಿಗಾಗಿ ಧ್ಯಾನಮಾಡಿ ಜ್ಞಾನ

ಪಡೆಯುತ್ತಾನೆ. ಒಬ್ಬನು ಶುದ್ಧ ಭಕ್ತನ ಸಂಗದಲ್ಲಿ ಇರದವರೆಗೆ, ಇದು ಅವಶ್ಯ. ಸುದೈವದಿಂದ,ಒಬ್ಬನು ಶುದ್ಧ ಭಕ್ತಿಯುತ ಸೇವೆಯಲ್ಲಿ ಕೃಷ್ಣಪ್ರಜ್ಞಾ ನಿರತನಾಗುವ ನೇರ ಇಚ್ಛೆ ಹೊಂದಿದ್ದರೆ, ಅವನು ಆಧ್ಯಾತ್ಮ ಸಾಕ್ಷಾತ್ಕಾರದ ಉನ್ನತಿಗಾಗಿ ಹಂತ ಹಂತವಾಗಿ ಸಾಗಬೇಕಾಗಿಲ್ಲ. ಭಗವದ್ಗೀತೆಯ ಮಧ್ಯದ ಆರು ಅಧ್ಯಾಯಗಳಲ್ಲಿ ವರ್ಣಿತವಾದಂತೆ ಭಕ್ತಿಯೋಗವು ಹೆಚ್ಚು ಅನುಕೂಲವಾದುದು. ಒಬ್ಬನು ದೇಹಾತ್ಮಗಳನ್ನು ಒಟ್ಟಾಗಿರಿಸಿ ಕೊಳ್ಳುವ ವಸ್ತುಗಳಿಗಾಗಿ ಚಿಂತಿಸಬೇಕಾಗಿಲ್ಲ, ಏಕೆಂದರೆ ಭಗವದನುಗ್ರಹದಿಂದ ಪ್ರತಿಯೊಂದೂ ತಾನಾಗಿ ನಿರ್ವಹಿಸಲ್ಪಡುತ್ತದೆ.

**ಇಲ್ಲಿಗೆ ಭಕ್ತಿಯೋಗದ ವಿಷಯದಲ್ಲಿ ಶ್ರೀಮದ್ ಭಗವದ್ಗೀತೆಯ ಹನ್ನೆರಡನೆಯ ಅಧ್ಯಾಯದ ಭಕ್ತಿವೇದಾಂತ ತಾತ್ಪರ್ಯವು ಮುಗಿಯಿತು.**



## ಅಧ್ಯಾಯ ಹದಿಮೂರು



# ಪ್ರಕೃತಿ, ಪುರುಷ ಮತ್ತು ಪ್ರಜ್ಞೆ

ಅರ್ಜುನ ಉವಾಚ

ಪ್ರಕೃತಿಂ ಪುರುಷಂ ಚೈವ ಕ್ಷೇತ್ರಂ ಕ್ಷೇತ್ರಜ್ಞಮೇವ ಚ
ಏತದ್ ವೇದಿತುಮಿಚ್ಛಾಮಿ ಜ್ಞಾನಂ ಜ್ಞೇಯಂ ಚ ಕೇಶವ ॥ ೧ ॥

ಶ್ರೀ ಭಗವಾನುವಾಚ

ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ ।
ಏತದ್ ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ॥ ೨ ॥

ಅರ್ಜುನಃ ಉವಾಚ—ಅರ್ಜುನನು ನುಡಿದನು, ಪ್ರಕೃತಿಂ—ಪ್ರಕೃತಿ, ಪುರುಷಂ—ಪುರುಷ, ಚ—ಕೂಡ, ಏವ—ಖಂಡಿತವಾಗಿ, ಕ್ಷೇತ್ರಂ—ಕ್ಷೇತ್ರ, ಕ್ಷೇತ್ರ-ಜ್ಞಂ—ಕ್ಷೇತ್ರವನ್ನು ತಿಳಿದವನು, ಏವ—ಖಂಡಿತವಾಗಿ, ಚ—ಕೂಡ, ಏತತ್—ಈ ಎಲ್ಲವನ್ನೂ, ವೇದಿತುಂ—ತಿಳಿದುಕೊಳ್ಳಲು, ಇಚ್ಛಾಮಿ—ಇಚ್ಛಿಸುತ್ತೇನೆ, ಜ್ಞಾನಮ್—ಜ್ಞಾನವನ್ನು, ಜ್ಞೇಯಮ್—ಜ್ಞಾನದ ಧ್ಯೇಯವನ್ನು, ಚ—ಕೂಡ, ಕೇಶವ—ಹೇ ಕೃಷ್ಣ, ಶ್ರೀಭಗವಾನುವಾಚ—ದೇವೋತ್ತಮ ಪುರುಷನು ನುಡಿದನು, ಇದಮ್—ಇದನ್ನು, ಶರೀರಮ್—ಶರೀರವನ್ನು, ಕೌಂತೇಯ—ಹೇ ಕುಂತೀ ಪುತ್ರನೇ, ಕ್ಷೇತ್ರಮ್—

ಕ್ಷೇತ್ರ, ಇತಿ—ಹೀಗೆ, ಅಭಿಧೀಯತೇ—ಎಂದು ಕರೆದಿದೆ; ಏತತ್—ಇದನ್ನು, ಯಃ—ಯಾರು, ವೇತ್ತಿ—ತಿಳಿಯುವನೋ, ತಮ್—ಅವನನ್ನು ಪ್ರಾಹುಃ—ಕರೆದಿದೆ, ಕ್ಷೇತ್ರ—ಜ್ಞಃ—ಕ್ಷೇತ್ರವನ್ನು ತಿಳಿದವನು ಎಂದು, ಇತಿ—ಹೀಗೆ, ತತ್—ವಿದಃ—ಇದನ್ನು ತಿಳಿದವರಿಂದ.

**ಅರ್ಜುನನು ನುಡಿದನು: ಹೇ ನನ್ನ ಪ್ರಿಯ ಕೃಷ್ಣನೇ, ನಾನು ಪ್ರಕೃತಿ, ಪುರುಷ ಮತ್ತು ಕ್ಷೇತ್ರ ಮತ್ತು ಕ್ಷೇತ್ರಜ್ಞನನ್ನು, ಜ್ಞಾನ ಮತ್ತು ಜ್ಞಾನದ ಧ್ಯೇಯವನ್ನು ತಿಳಿಯಬಯಸುತ್ತೇನೆ.**

**ಪರಮದೇವೋತ್ತಮನು ಪುರುಷನು ನುಡಿದನು: ಹೇ ಕುಂತೀ ಪುತ್ರನೇ, ಈ ದೇಹವನ್ನು ಕ್ಷೇತ್ರ ಎಂದು ಕರೆದಿದೆ, ಮತ್ತು ಈ ದೇಹವನ್ನು ತಿಳಿದವನನ್ನು ಕ್ಷೇತ್ರಜ್ಞ ಎಂದು ಕರೆದಿದೆ.**

**ಭಾವಾರ್ಥ :** ಅರ್ಜುನನು ಪ್ರಕೃತಿ, ಪುರುಷ (ಭೋಕ್ತೃ) ಕ್ಷೇತ್ರ, ಕ್ಷೇತ್ರಜ್ಞ ಮತ್ತು ಜ್ಞಾನ ಹಾಗೂ ಜ್ಞಾನದ ಧ್ಯೇಯವನ್ನು ತಿಳಿಯಲು ಕಾತುರನಾಗಿದ್ದನು. ಈ ಎಲ್ಲ ವಿಷಯಗಳ ಬಗ್ಗೆ ಅವನು ವಿಚಾರಿಸಿದಾಗ, ಈ ದೇಹವು ಕ್ಷೇತ್ರವೆಂದು ಮತ್ತು ಅದನ್ನು ತಿಳಿದವನನ್ನು ಕ್ಷೇತ್ರಜ್ಞನೆಂದು ಕರೆದಿದೆ ಎಂದು ಕೃಷ್ಣನು ಹೇಳಿದನು. ಈ ದೇಹವು ಬದ್ಧಾತ್ಮನ ಚಟುವಟಿಕೆಗಳ ಕ್ಷೇತ್ರ. ಬದ್ಧ ಆತ್ಮನು ಭೌತಿಕ ಅಸ್ತಿತ್ವದಲ್ಲಿ ಸಿಲುಕಿದ್ದಾನೆ, ಮತ್ತು ಅದರ ಮೇಲೆ ಒಡೆತನ ನಡೆಸಲು ಅವನು ಯತ್ನಿಸುತ್ತಾನೆ. ಹೀಗೆ, ಪ್ರಕೃತಿಯ ಮೇಲೆ ಆಧಿಪತ್ಯ ನಡೆಸುವ ಅವನ ಸಾಮರ್ಥ್ಯಾನುಸಾರ, ಅವನಿಗೆ ಕಾರ್ಯ ಕ್ಷೇತ್ರ ದೊರಕುತ್ತದೆ. ಆ ಕಾರ್ಯ ಕ್ಷೇತ್ರವೇ ದೇಹ ಮತ್ತು ದೇಹವು ಯಾವುದು ? ದೇಹವು ಇಂದ್ರಿಯಗಳಿಂದ ಕೂಡಿದೆ. ಬದ್ಧಾತ್ಮನು ಇಂದ್ರಿಯ ತೋಷಣ ಭೋಗಿಸ ಬಯಸುತ್ತಾನೆ, ಮತ್ತು ಇಂದ್ರಿಯ ತೋಷಣ ಭೋಗದ ಅವನ ಸಾಮರ್ಥ್ಯಾನುಸಾರ ಅವನಿಗೆ ದೇಹ, ಅಥವಾ ಕಾರ್ಯಕ್ಷೇತ್ರ ನೀಡಲಾಗಿದೆ. ಆದ್ದರಿಂದ ದೇಹವನ್ನು ಕ್ಷೇತ್ರ, ಅಥವಾ ಬದ್ಧಾತ್ಮನ ಕಾರ್ಯಕ್ಷೇತ್ರ ಎಂದು ಕರೆದಿದೆ. ಈಗ, ದೇಹದೊಂದಿಗೆ ತನ್ನನ್ನು ಗುರುತಿಸಿಕೊಳ್ಳುವವನನ್ನು ಕ್ಷೇತ್ರಜ್ಞ ಎಂದು ಕರೆದಿದೆ. ಕ್ಷೇತ್ರ ಮತ್ತು ಕ್ಷೇತ್ರಜ್ಞ, ದೇಹ ಮತ್ತು ದೇಹಿಯ ವ್ಯತ್ಯಾಸವನ್ನು ಅರಿತುಕೊಳ್ಳುವುದು ಅಷ್ಟೇನು ಕಷ್ಟವಲ್ಲ. ಒಬ್ಬನು ಬಾಲ್ಯದಿಂದ ಮುಪ್ಪಿನವರೆಗೂ ದೇಹ ಬದಲಾವಣೆ ಹೊಂದಿದರೂ ಅವನು ಒಬ್ಬನೇ ಆಗಿರುತ್ತಾನೆ ಎಂಬುದನ್ನು ಯಾರಾದರೂ ಗಮನಿಸಬಹುದು. ಹೀಗೆ ಕ್ಷೇತ್ರಜ್ಞ ಮತ್ತು ವಾಸ್ತವಿಕ ಕಾರ್ಯ ಕ್ಷೇತ್ರ ಇದರ ನಡುವೆ ವ್ಯತ್ಯಾಸವಿದೆ. ತಾನು ದೇಹದಿಂದ ಭಿನ್ನ ಎಂಬುದನ್ನು ಬದ್ಧಾತ್ಮ ಜೀವಿಯು ಹೀಗೆ ಅರಿತುಕೊಳ್ಳಬಹುದು. **ದೇಹಿನೋಽಸ್ಮಿನ್**—ಎಂದರೆ ಜೀವಿಯು ದೇಹದಲ್ಲಿದ್ದಾನೆ, ಮತ್ತು ದೇಹವು ಶೈಶವದಿಂದ ಬಾಲ್ಯಕ್ಕೆ ಮತ್ತು ಬಾಲ್ಯದಿಂದ ಯೌವನಕ್ಕೆ ಮತ್ತು ಯೌವನದಿಂದ ಮುಪ್ಪಿಗೆ ಬದಲಾವಣೆ ಹೊಂದುತ್ತದೆ ಮತ್ತು ದೇಹವನ್ನು ಹೊಂದಿದವನು, ದೇಹದಲ್ಲಿ ಬದಲಾವಣೆಯಾಗುತ್ತಿದೆ ಎಂಬುದನ್ನು ತಿಳಿದಿರುತ್ತಾನೆ ಎಂದು ಪ್ರಾರಂಭದಲ್ಲಿ ವರ್ಣಿಸಿದೆ. ದೇಹದ ಒಡೆಯನು ಸ್ಪಷ್ಟವಾಗಿ ಕ್ಷೇತ್ರಜ್ಞ. ಕೆಲವು ಸಲ ನಾವು "ನಾನು ಸುಖಿ". "ನಾನು ಪುರುಷ", "ನಾನು ಸ್ತ್ರೀ" "ನಾನು

ನಾಯಿ" "ನಾನು ಬೆಕ್ಕು" ಎಂದು ಯೋಚಿಸುತ್ತೇವೆ. ಇವು ಕ್ಷೇತ್ರಜ್ಞನ ದೈಹಿಕ ಉಪಾಧಿಗಳು. ಆದರೆ ಕ್ಷೇತ್ರಜ್ಞನು ದೇಹದಿಂದ ಭಿನ್ನ. ನಾವು ಅನೇಕ ವಸ್ತುಗಳನ್ನು —ನಮ್ಮ ವಸ್ತ್ರ ಇತ್ಯಾದಿಗಳನ್ನು ಉಪಯೋಗಿಸಿದರೂ ಕೂಡ ಹೀಗೆ ಉಪಯೋಗಿಸಿದ ವಸ್ತುಗಳಿಂದ ನಾವು ಭಿನ್ನರೆಂದು ತಿಳಿದಿರುತ್ತೇವೆ. ಅದೇ ಪ್ರಕಾರ, ಸ್ವಲ್ಪ ವಿಚಾರದಿಂದ ನಾವು ದೇಹದಿಂದ ಭಿನ್ನ ಎಂಬುದನ್ನು ಕೂಡ ಅರಿತುಕೊಳ್ಳಬಹುದು. ನಾವು ಅಥವಾ ನೀವು ಬೇರೆ ಯಾರೇ ದೇಹ ಉಳ್ಳವರಾಗಲಿ ಕ್ಷೇತ್ರಜ್ಞ, ಕಾರ್ಯಕ್ಷೇತ್ರ ತಿಳಿದವನು ಎಂದು ಕರೆಯಲಾಗಿದೆ, ಮತ್ತು ದೇಹವು, ಕ್ಷೇತ್ರ ಕಾರ್ಯಕ್ಷೇತ್ರವೆಂದೇ ಕರೆಯಲ್ಪಟ್ಟಿದೆ.

ಭಗವದ್ಗೀತೆಯ ಮೊದಲನೆಯ ಆರು ಅಧ್ಯಾಯದಲ್ಲಿ ಕ್ಷೇತ್ರಜ್ಞನನ್ನು (ಜೀವಿಯು) ಕುರಿತು ಮತ್ತು ಅವನು ಪರಮ ಪ್ರಭುವನ್ನು ಅರಿತುಕೊಳ್ಳಬಹುದಾದ ಸ್ಥಾನವನ್ನು ವರ್ಣಿಸಿದೆ. ಭಗವದ್ಗೀತೆಯ ಮಧ್ಯದ ಆರು ಅಧ್ಯಾಯಗಳಲ್ಲಿ ಪರಮದೇವೋತ್ತಮ ಪುರುಷ ಮತ್ತು ವ್ಯಕ್ತಿಗತ ಆತ್ಮ ಮತ್ತು ಪರಮಾತ್ಮರ ವಿಷಯದಲ್ಲಿ ಭಕ್ತಿಯುತ ಸೇವಾ ಸಂಬಂಧವನ್ನು ಕುರಿತು ವರ್ಣಿಸಿದೆ. ಪರಮದೇವೋತ್ತಮ ಪುರುಷನ ಪರಮ ಸ್ಥಾನವು ಮತ್ತು ವ್ಯಕ್ತಿಗತ ಆತ್ಮನ ಅಧೀನ ಸ್ಥಾನವು ಈ ಅಧ್ಯಾಯಗಳಲ್ಲಿ ಸ್ಫುಟವಾಗಿ ಪರಿಭಾಷಿತ. ಜೀವಿಗಳು ಸಕಲ ಸನ್ನಿವೇಶಗಳಲ್ಲಿ ಅಧೀನರು. ಪುಣ್ಯಕರ್ಮಗಳಿಂದ ಜ್ಞಾನೋದಯ ಹೊಂದಿದಾಗ, ಅವರು ನಾನಾ ರೀತಿಯಲ್ಲಿ ಆರ್ತರಾಗಿ, ಅರ್ಥಾರ್ಥಿಗಳಾಗಿ,ಜಿಜ್ಞಾಸುಗಳಾಗಿ ಮತ್ತು ಜ್ಞಾನಾರ್ಥಿಗಳಾಗಿ ಪರಮಪ್ರಭುವಿನ ಬಳಿಗೆ ಹೋಗುತ್ತಾರೆ. ಅದು ಕೂಡ ಅಲ್ಲಿ ವರ್ಣಿತ. ಈಗ, ಹದಿಮೂರನೆಯ ಅಧ್ಯಾಯದಿಂದ ಆರಂಭ ಮಾಡಿ ಜೀವಿಯು ಭೌತಿಕ ಪ್ರಕೃತಿಯೊಂದಿಗೆ ಹೇಗೆ ಸಂಪರ್ಕ ಹೊಂದುತ್ತಾನೆ ಮತ್ತು ಕಾಮ್ಯ ಕರ್ಮಗಳ ನಾನಾ ವಿಧಗಳಲ್ಲಿ, ಜ್ಞಾನಾರ್ಜನೆಯಿಂದ, ಮತ್ತು ಭಕ್ತಿಯುತ ಸೇವೆಯಿಂದ ಪರಮ ಪ್ರಭುವಿನಿಂದ ಒಬ್ಬನು ಹೇಗೆ ಉದ್ಧೃತನಾಗುತ್ತಾನೆ ಎಂಬುದು ವಿವರಿಸಲ್ಪಟ್ಟಿದೆ. ಜೀವಿಯು ಭೌತಿಕ ದೇಹದಿಂದ ಸಂಪೂರ್ಣವಾಗಿ ಭಿನ್ನನಾಗಿದ್ದರೂ, ಹೇಗೋ ಅವನು ಸಂಬಂಧಿತನಾಗುತ್ತಾನೆ. ಇದೂ ಕೂಡ ವಿವರಿಸಲ್ಪಟ್ಟಿದೆ.

**ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ ।**
**ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತಜ್ಜ್ಞಾನಂ ಮತಂ ಮಮ ॥ ೩ ॥**

ಕ್ಷೇತ್ರಜ್ಞಮ್—ಕ್ಷೇತ್ರವನ್ನು, ತಿಳಿದವನು, ಚ—ಕೂಡ, ಅಪಿ—ಖಂಡಿತವಾಗಿ, ಮಾಮ್—ನನ್ನನ್ನು, ವಿದ್ಧಿ—ತಿಳಿದುಕೋ, ಸರ್ವ—ಎಲ್ಲ, ಕ್ಷೇತ್ರೇಷು—ದೈಹಿಕ ಕ್ಷೇತ್ರ, ಗಳಲ್ಲಿ, ಭಾರತ—ಹೇ ಭರತ ಪುತ್ರನೇ, ಕ್ಷೇತ್ರ—ಕಾರ್ಯಕ್ಷೇತ್ರ (ದೇಹ), ಕ್ಷೇತ್ರ-ಜ್ಞಯೋಃ—ಮತ್ತು ಕ್ಷೇತ್ರವನ್ನು ತಿಳಿದವನನ್ನು, ಜ್ಞಾನಮ್—ಜ್ಞಾನದ, ಯತ್—ಯಾವುದು. ತತ್—ಅದು. ಜ್ಞಾನಮ್—ಜ್ಞಾನವು, ಮತಮ್—ಅಭಿಪ್ರಾಯ, ಮಮ—ನನ್ನ.

**ಹೇ ಭರತ ವಂಶಜನೇ, ನಾನೂ ಕೂಡ ಸಕಲ ದೇಹಗಳ ಕ್ಷೇತ್ರಜ್ಞ ಎಂಬುದನ್ನು ನೀನು ಅರಿತುಕೊಳ್ಳಬೇಕು, ಮತ್ತು ಈ ದೇಹ ಮತ್ತು ಅದನ್ನು ತಿಳಿದವನನ್ನು ಅರಿತುಕೊಳ್ಳುವುದನ್ನು ಜ್ಞಾನ ಎಂದು ಕರೆದಿದ್ದೇ. ಅದು ನನ್ನ ಅಭಿಪ್ರಾಯ.**

**ಭಾವಾರ್ಥ :** ದೇಹ ಮತ್ತು ದೇಹವನ್ನು ತಿಳಿದವನ, ಆತ್ಮ ಮತ್ತು ಪರಮಾತ್ಮ ವಿಷಯಗಳನ್ನು ಚರ್ಚಿಸುವಾಗ ನಮಗೆ ಮೂರು ಭಿನ್ನ ಭಿನ್ನ ಅಧ್ಯಯನ ವಿಷಯಗಳು ಸಿಗುತ್ತವೆ; ಭಗವಂತ, ಜೀವಿ ಮತ್ತು ಪ್ರಕೃತಿ (ಜಡ). ಪ್ರತಿಯೊಂದು ಕಾರ್ಯಕ್ಷೇತ್ರದಲ್ಲಿ, ಪ್ರತಿಯೊಂದು ದೇಹದಲ್ಲಿ, ಇಬ್ಬರು ಆತ್ಮರಿದ್ದಾರೆ : ವ್ಯಕ್ತಿಗತ ಆತ್ಮ ಮತ್ತು ಪರಮಾತ್ಮ. ಪರಮಾತ್ಮನು ಪರಮ ದೇವೋತ್ತಮ ಪುರುಷ, ಕೃಷ್ಣನ ಸಮಗ್ರ ವಿಸ್ತರಣೆಯಾದುದರಿಂದ "ನಾನೂ ಕೂಡ ಕ್ಷೇತ್ರಜ್ಞ, ಆದರೆ ನಾನು ವ್ಯಕ್ತಿಗತ ಕ್ಷೇತ್ರಜ್ಞನಲ್ಲ. ನಾನು ಪರಮ ಕ್ಷೇತ್ರಜ್ಞ. ನಾನು ಪ್ರತಿಯೊಂದು ದೇಹದಲ್ಲಿ ಪರಮಾತ್ಮನಾಗಿ ಸನ್ನಿಹಿತ," ಎಂದು ಕೃಷ್ಣನು ಹೇಳುತ್ತಾನೆ.

ಕಾರ್ಯಕ್ಷೇತ್ರವನ್ನು ಮತ್ತು ಕ್ಷೇತ್ರಜ್ಞನನ್ನು ಕುರಿತು ಈ ಭಗವದ್ಗೀತಾನುಸಾರ, ಬಹು ಸೂಕ್ಷ್ಮವಾಗಿ ಅಧ್ಯಯನ ಮಾಡುವವನು ಜ್ಞಾನ ಪಡೆಯಬಹುದು.

"ಪ್ರತಿಯೊಂದು ವ್ಯಕ್ತಿಗತ ದೇಹದಲ್ಲಿ ನಾನು ಕ್ಷೇತ್ರಜ್ಞ", ಎಂದು ಭಗವಂತನು ಹೇಳುತ್ತಾನೆ. ವ್ಯಕ್ತಿಯು ತನ್ನ ಸ್ವಂತ ದೇಹವನ್ನು ಮಾತ್ರ ತಿಳಿದಿರಬಹುದು, ಆದರೆ ಅವನಿಗೆ ಇತರ ದೇಹಗಳ ಜ್ಞಾನವಿಲ್ಲ. ಸಕಲ ದೇಹಗಳಲ್ಲಿಯೂ ಸನ್ನಿಹಿತನಾದ ಪರಮ ದೇವೋತ್ತಮ ಪುರುಷನು, ಎಲ್ಲ ದೇಹಗಳ ಬಗ್ಗೆ ಪ್ರತಿಯೊಂದನ್ನೂ ಅರಿತಿರುತ್ತಾನೆ. ಅವನು ಎಲ್ಲ ನಾನಾ ಜೀವಯೋನಿಗಳ, ಎಲ್ಲ ವಿವಿಧ ದೇಹಗಳನ್ನು ಬಲ್ಲವನು. ಒಬ್ಬ ಪ್ರಜೆಯು ತಾನಿರುವ ಭೂಭಾಗದ ಪ್ರತಿಯೊಂದನ್ನು ತಿಳಿದಿರಬಹುದು, ಆದರೆ ರಾಜನು ತನ್ನ ಅರಮನೆಯನ್ನಷ್ಟೇ ಅಲ್ಲದೆ ಪ್ರತಿಯೊಬ್ಬ ನಾಗರಿಕನು ಹೊಂದಿರುವ ಎಲ್ಲ ಸ್ವತ್ತುಗಳನ್ನು ತಿಳಿದಿರುತ್ತಾನೆ. ಅದೇ ಪ್ರಕಾರ, ಒಬ್ಬನು ವ್ಯಕ್ತಿಗತನಾಗಿ ದೇಹದ ಒಡೆಯನಾಗಿರಬಹುದು, ಆದರೆ ಪರಮಪ್ರಭು ಸರ್ವ ದೇಹಗಳ ಸ್ವಾಮಿ. ರಾಜನು ರಾಜ್ಯದ ಮೂಲ ಒಡೆಯ, ಮತ್ತು ಪ್ರಜೆಯು ಗೌಣ ಒಡೆಯ. ಅದೇ ಪ್ರಕಾರ, ಪರಮಪ್ರಭು ಸಕಲ ದೇಹಗಳ ಪರಮಸ್ವಾಮಿ.

ದೇಹವು ಇಂದ್ರಿಯಗಳಿಂದ ಕೂಡಿದೆ. ಪರಮಪ್ರಭುವು ಹೃಷೀಕೇಶ, ಎಂದರೆ "ಸಕಲೇಂದ್ರಿಯ ನಿಯಾಮಕ". ಹೇಗೆ ರಾಜನು ರಾಜ್ಯದ ಸಕಲ ಚಟುವಟಿಕೆಗಳ ಮೂಲ ನಿಯಾಮಕನೋ ಹಾಗೆಯೇ ಅವನು ಸಕಲೇಂದ್ರಿಯಗಳ ಮೂಲ ನಿಯಾಮಕನು; ಪ್ರಜೆಗಳು ಅಪ್ರಧಾನ ನಿಯಾಮಕರು. "ನಾನೂ ಕ್ಷೇತ್ರಜ್ಞ", ಎಂದು ಭಗವಂತನು ಹೇಳುತ್ತಾನೆ. ಹೀಗೆಂದರೆ, ಅವನು ಪರಮ ಕ್ಷೇತ್ರಜ್ಞ, ವ್ಯಕ್ತಿಗತ ಆತ್ಮನು ತನ್ನ ವಿಶಿಷ್ಟ ದೇಹವನ್ನು ಮಾತ್ರ ತಿಳಿದಿರುತ್ತಾನೆ. ವೇದ ಸಾಹಿತ್ಯದಲ್ಲಿ ಹೀಗೆ ಹೇಳಿದೆ :

ಕ್ಷೇತ್ರಾಣಿ ಹಿ ಶರೀರಾಣಿ
ಬೀಜಂ ಚಾಪಿ ಶುಭಾಶುಭೇ
ತಾನಿ ವೇತ್ತಿ ಸ ಯೋಗಾತ್ಮಾ
ತತಃ ಕ್ಷೇತ್ರಜ್ಞ ಉಚ್ಯತೇ

ಈ ದೇಹವು ಕ್ಷೇತ್ರ ಎಂದು ಕರೆದಿದೆ ಮತ್ತು ಅದರಲ್ಲಿ ದೇಹದ ಒಡೆಯನು ಮತ್ತು ದೇಹ ಮತ್ತು ದೇಹದ ಒಡೆಯನು ಇಬ್ಬರನ್ನೂ ತಿಳಿದ ಪರಮ ಪ್ರಭುವು ವಾಸಿಸುತ್ತಾನೆ. ಆದ್ದರಿಂದ ಅವನನ್ನು ಸಕಲ ಕ್ಷೇತ್ರಜ್ಞ ಎಂದು ಕರೆದಿದೆ. ಕ್ಷೇತ್ರ, ಕ್ಷೇತ್ರಜ್ಞ ಮತ್ತು ಪರಮ ಕ್ಷೇತ್ರಜ್ಞ, ಇವರ ವ್ಯತ್ಯಾಸವು ಹೀಗೆ ವರ್ಣಿಸಲಾಗಿದೆ. ದೇಹದ ಸ್ವರೂಪ, ವ್ಯಕ್ತಿಗತ ಆತ್ಮನ ಸ್ವರೂಪ ಮತ್ತು ಪರಮಾತ್ಮನ ಸ್ವರೂಪದ ಪರಿಪೂರ್ಣ ಜ್ಞಾನವು ವೇದ ಸಾಹಿತ್ಯದ ಅರ್ಥದಲ್ಲಿ **ಜ್ಞಾನ.** ಅದು ಕೃಷ್ಣನ ಅಭಿಪ್ರಾಯ. ಆತ್ಮ ಮತ್ತು ಪರಮಾತ್ಮನು ಒಂದೇ ಆದರೂ ಭಿನ್ನರೆಂದು ತಿಳಿದುಕೊಳ್ಳುವುದು ಜ್ಞಾನ. ಕಾರ್ಯಕ್ಷೇತ್ರವನ್ನು ಮತ್ತು ಕ್ಷೇತ್ರಜ್ಞನನ್ನು ಅರಿತುಕೊಳ್ಳದವನು ಪರಿಪೂರ್ಣಜ್ಞಾನಿಯಲ್ಲ, ಒಬ್ಬನು ಪ್ರಕೃತಿ, ಪುರುಷ (ಪ್ರಕೃತಿಯ ಭೋಕ್ತೃ) ಮತ್ತು ಈಶ್ವರನನ್ನು (ಪ್ರಕೃತಿ ಮತ್ತು ವ್ಯಕ್ತಿಗತ ಆತ್ಮನ ಮೇಲೆ ಆಧಿಪತ್ಯ ಅಥವಾ ನಿಯಂತ್ರಣ ಹೊಂದಿದ ಕ್ಷೇತ್ರಜ್ಞ) ತಿಳಿದುಕೊಳ್ಳಬೇಕು. ಇವುಗಳ ಭಿನ್ನ ಸಾಮರ್ಥ್ಯಗಳಲ್ಲಿ ಈ ಮೂರರಲ್ಲಿ ಗೊಂದಲ ಉಂಟುಮಾಡಿಕೊಳ್ಳಬಾರದು. ಒಬ್ಬನು ವರ್ಣಚಿತ್ರಕಾರ, ವರ್ಣಚಿತ್ರ ಮತ್ತು ಚಿತ್ರಾಧಾರವಾಗಿರುವ ಚೌಕಟ್ಟುಮರ ಅಥವಾ ವಸ್ತ್ರವನ್ನು ಕುರಿತು ಗೊಂದಲಹೊಂದಬಾರದು. ಕಾರ್ಯಕ್ಷೇತ್ರವಾದ ಈ ಭೌತಿಕ ಲೋಕವು ಪ್ರಕೃತಿ, ಮತ್ತು ಪ್ರಕೃತಿಭೋಕ್ತೃ ಜೀವಿ ಮತ್ತು ಅವರಿಬ್ಬರ ಮೇಲೆ ಪರಮ ನಿಯಾಮಕನು ದೇವೋತ್ತಮ ಪುರುಷ. ವೇದ ಭಾಷೆಯಲ್ಲಿ ಹೀಗೆ ಹೇಳಿದೆ (ಶ್ವೇತಾಶ್ವತರ ಉಪನಿಷದ್ 1.12ರಲ್ಲಿ) **ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ/ಸರ್ವಂ ಪ್ರೋಕ್ತಂ ತ್ರಿ-ವಿಧಂ ಬ್ರಹ್ಮಮ್ ಏತತ್.** ಮೂರು ಬ್ರಹ್ಮನ್ ಕಲ್ಪನೆಗಳಿವೆ. ಕಾರ್ಯ ಕ್ಷೇತ್ರವಾಗಿ ಪ್ರಕೃತಿಯು ಬ್ರಹ್ಮನ್, ಮತ್ತು ಜೀವಿಯು (ವ್ಯಕ್ತಿಗತ ಆತ್ಮ) ಕೂಡ ಬ್ರಹ್ಮನ್—ಭೌತಿಕ ಪ್ರಕೃತಿಯನ್ನು ನಿಯಂತ್ರಣಮಾಡಲು ಯತ್ನಿಸುತ್ತಾನೆ, ಮತ್ತು ಅವರಿಬ್ಬರ ನಿಯಂತ್ರಕನೂ ಬ್ರಹ್ಮನ್, ಆದರೆ ಅವನೇ ವಾಸ್ತವಿಕ ನಿಯಾಮಕನು.

ಇಬ್ಬರು ಕ್ಷೇತ್ರಜ್ಞರಲ್ಲಿ ಒಬ್ಬನು ಚ್ಯುತಿಹೊಂದುವನು ಮತ್ತೊಬ್ಬನು ಚ್ಯುತಿ ರಹಿತನು ಎಂಬುದಾಗಿ ಕೂಡ ಈ ಅಧ್ಯಾಯದಲ್ಲಿ ವಿವರಿಸಲ್ಪಟ್ಟಿದೆ. ಒಬ್ಬನು ಶ್ರೇಷ್ಠ ಮತ್ತು ಮತ್ತೊಬ್ಬನು ಕನಿಷ್ಠ ಇಬ್ಬರು ಕ್ಷೇತ್ರಜ್ಞರನ್ನು ಒಂದೇ ಮತ್ತು ಸಮ ಎಂದು ತಿಳಿಯುವವನು, "ನಾನೂ ಕ್ಷೇತ್ರಜ್ಞನು," ಎಂದು ಬಹು ಸ್ಪಷ್ಟವಾಗಿ ಹೇಳುವ ಪರಮ ದೇವೋತ್ತಮ ಪುರುಷನ ಮಾತನ್ನು ವಿರೋಧಿಸುತ್ತಾನೆ. ಹಗ್ಗವನ್ನು ಹಾವೆಂದು ತಪ್ಪಾಗಿ ಅರಿತುಕೊಳ್ಳುವವನು ಅಜ್ಞಾನಿ. ನಾನಾ ಬಗೆಯ ದೇಹಗಳಿವೆ, ಮತ್ತು ನಾನಾ ಬಗೆಯ ದೇಹಗಳ ಒಡೆಯರಿದ್ದಾರೆ. ಪ್ರತಿಯೊಬ್ಬ ವ್ಯಕ್ತಿಗತ ಆತ್ಮನೂ ಭೌತಿಕ ಪ್ರಕೃತಿಯ ಮೇಲೆ ಒಡೆತನ ನಡೆಸುವ ವ್ಯಕ್ತಿಗತ ಸಾಮರ್ಥ್ಯ ಹೊಂದಿರುವುದರಿಂದ, ಭಿನ್ನ ಭಿನ್ನ ದೇಹಗಳಿವೆ. ಆದರೆ ಪರಮನು ಕೂಡ ನಿಯಾಮಕನಾಗಿ ಅವುಗಳಲ್ಲಿ ಇದ್ದಾನೆ. **ಚ** ಎಂಬ ಪದವು ಮಹತ್ವದ್ದು. ಏಕೆಂದರೆ ಅದು ದೇಹಗಳ ಸಮಗ್ರ ಸಂಖ್ಯೆಯನ್ನು ಸೂಚಿಸುತ್ತದೆ. ಅದು ಶ್ರೀಲ ಬಲದೇವ ವಿದ್ಯಾಭೂಷಣರ ಅಭಿಪ್ರಾಯ. ಕೃಷ್ಣನು, ವ್ಯಕ್ತಿಗತ ಆತ್ಮನಿಂದ ಹೊರತಾಗಿ ಪ್ರತಿಯೊಂದು ದೇಹದಲ್ಲಿರುವ ಪರಮಾತ್ಮನು,

ಮತ್ತು ಪರಮಾತ್ಮನು ಕಾರ್ಯಕ್ಷೇತ್ರ ಮತ್ತು ಪರಿಮಿತ ಭೋಕ್ತೃ ಇಬ್ಬರ ನಿಯಾಮಕನು ಎಂದು ಕೃಷ್ಣನು ಇಲ್ಲಿ ಸ್ಪಷ್ಟವಾಗಿ ಹೇಳುತ್ತಾನೆ.

**ತತ್ ಕ್ಷೇತ್ರಂ ಯಚ್ಚ ಯಾದೃಕ್ ಚ ಯದ್ವಿಕಾರಿ ಯತಃಶ್ಚ ಯತ್ ।**
**ಸ ಚ ಯೋ ಯತ್ಪ್ರಭಾವಶ್ಚ ತತ್ ಸಮಾಸೇನ ಮೇ ಶೃಣು ॥ ೪ ॥**

ತತ್—ಅದನ್ನು, ಕ್ಷೇತ್ರಮ್—ಕಾರ್ಯಕ್ಷೇತ್ರವನ್ನು, ಯತ್—ಯಾವುದು, ಚ—ಮತ್ತು, ಯಾದೃಕ್—ಇದ್ದಂತೆ, ಚ—ಕೂಡ, ಯತ್—ಯಾವುದನ್ನು ಹೊಂದಿ, ವಿಕಾರಿ—ಬದಲಾವಣೆಗಳು, ಯತಃ—ಯಾವುದರಿಂದ, ಚ—ಕೂಡ, ಯತ್—ಯಾವುದು, ಸಃ—ಅವನು, ಚ—ಕೂಡ, ಯಃ—ಯಾವನು, ಯತ್—ಯಾವುದನ್ನು ಹೊಂದಿ, ಪ್ರಭಾವಃ—ಪ್ರಭಾವ, ಚ—ಕೂಡ, ತತ್—ಅದನ್ನು, ಸಮಾಸೇನ—ಸಾರಾಂಶ ರೂಪದಲ್ಲಿ, ಮೇ—ನನ್ನಿಂದ, ಶೃಣು—ಅರಿತುಕೋ.

**ಈ ಕಾರ್ಯಕ್ಷೇತ್ರ ಮತ್ತು ಅದು ಹೇಗೆ ರಚಿತ, ಅದರ ಬದಲಾವಣೆಗಳೇನು, ಅದರ ಉತ್ಪತ್ತಿ ಯಾವಾಗ, ಅದರ ಕ್ಷೇತ್ರಜ್ಞನಾರು, ಮತ್ತು ಅವನ ಪ್ರಭಾವಗಳೇನು ಎಂಬುದನ್ನು ಕುರಿತು ಈಗ ನನ್ನಿಂದ ಸಂಕ್ಷೇಪ ವರ್ಣನೆ ಕೇಳು.**

**ಭಾವಾರ್ಥ :** ಭಗವಂತನು ಕ್ಷೇತ್ರ ಮತ್ತು ಕ್ಷೇತ್ರಜ್ಞರ ಸ್ವರೂಪ ಸ್ಥಿತಿಗಳನ್ನು ವರ್ಣಿಸುತ್ತಿದ್ದಾನೆ. ಈ ದೇಹವು ಹೇಗೆ ರಚನೆಗೊಂಡಿದೆ, ಅದು ಯಾವ ಸಾಮಾಗ್ರಿಗಳಿಂದ ನಿರ್ಮಿತ, ಯಾರ ನಿಯಂತ್ರಣದಲ್ಲಿ ಈ ದೇಹವು ಕಾರ್ಯ ಮಾಡುತ್ತದೆ, ಬದಲಾವಣೆಗಳು ಹೇಗೆ ನಡೆಯುತ್ತಿವೆ, ಬದಲಾವಣೆಗಳು ಎಲ್ಲಿಂದ ಬರುತ್ತಿವೆ, ಅದರ ಕಾರಣಗಳೇನು, ನಿಮಿತ್ತಗಳೇನು, ವ್ಯಕ್ತಿಗತ ಆತ್ಮನ ಅಂತಿಮ ಧ್ಯೇಯವೇನು ಮತ್ತು ವ್ಯಕ್ತಿಗತ ಆತ್ಮನ ವಾಸ್ತವಿಕ ರೂಪವೇನು ಎಂಬುದನ್ನು ಒಬ್ಬನು ತಿಳಿಯಬೇಕು ಮತ್ತು ವ್ಯಕ್ತಿಗತ ಆತ್ಮ ಮತ್ತು ಪರಮಾತ್ಮ ಇವರ ನಡುವಿನ ವ್ಯತ್ಯಾಸ, ಅವರ ವಿವಿಧ ಪ್ರಭಾವಗಳು, ಅವರ ಶಕ್ತಿ ಇತ್ಯಾದಿಗಳನ್ನು ಕೂಡ ಒಬ್ಬನು ತಿಳಿಯಬೇಕು. ಈ ಭಗವದ್ಗೀತೆಯನ್ನು ಒಬ್ಬನು ನೇರವಾಗಿ ಪರಮ ದೇವೋತ್ತಮ ಪುರುಷನ ವರ್ಣನೆಯಿಂದ ಅರಿತುಕೊಳ್ಳಬೇಕು ಅಷ್ಟೇ, ಮತ್ತು ಇವೆಲ್ಲವನ್ನು ವಿಶದೀಕರಿಸಲಾಗುವುದು. ಆದರೆ ಪ್ರತಿಯೊಂದು ದೇಹದಲ್ಲಿರುವ ಪರಮ ದೇವೋತ್ತಮ ಪುರುಷನು, ವ್ಯಕ್ತಿಗತ ಜೀವನೊಂದಿಗೆ ಒಂದೇ ಎಂದು ಭಾವಿಸದಂತೆ ಎಚ್ಚರಿಕೆವಹಿಸಬೇಕು. ಇದು ಪುರುಷ ಮತ್ತು ಷಂಡ ಇಬ್ಬರನ್ನೂ ಒಂದೇ ಎಂದು ಹೇಳಿದಂತಾಗುವುದು.

**ಋಷಿಭಿರ್ಬಹುಧಾ ಗೀತಂ ಛಂದೋಭಿರ್ವಿವಿಧೈಃ ಪೃಥಕ್ ।**
**ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ ॥ ೫ ॥**

ಋಷಿಭಿಃ—ಜ್ಞಾನಿಗಳಿಂದ, ಬಹುಧಾ—ಅನೇಕ ರೀತಿಗಳಲ್ಲಿ, ಗೀತಮ್—ವರ್ಣಿತ, ಛನ್ದೋಭಿಃ—ವೇದ ಮಂತ್ರಗಳಿಂದ, ವಿವಿಧೈಃ—ನಾನಾ ಪ್ರಕಾರವಾಗಿ, ಪೃಥಕ್—ವಿವಿಧವಾಗಿ, ಬ್ರಹ್ಮ-ಸೂತ್ರ—ವೇದಾಂತದ, ಪದೈಃ—ವಾಕ್ಯಗಳಿಂದ, ಚ—

ಕೂಡ, ಏವ—ಖಂಡಿತವಾಗಿ, ಹೇತು-ಮದ್ಭಿಃ—ಕಾರಣ ಮತ್ತು ಕಾರ್ಯ ಸಹಿತ, ವಿನಿಶ್ಚಿತೈಃ—ನಿಶ್ಚಿತವಾಗಿ.

**ಕ್ಷೇತ್ರದ ಮತ್ತು ಕ್ಷೇತ್ರಜ್ಞನ ಆ ಜ್ಞಾನವು ಅನೇಕ ವೇದಶಾಸ್ತ್ರಗಳಲ್ಲಿ ವಿವಿಧ ಜ್ಞಾನಿಗಳಿಂದ ವರ್ಣಿಸಲ್ಪಟ್ಟಿದೆ. ಕಾರಣ ಕಾರ್ಯಗಳ ಬಗ್ಗೆ ಸಕಲ ಯುಕ್ತಿಗಳಿಂದ ಅದು ವೇದಾಂತ-ಸೂತ್ರದಲ್ಲಿ ವಿಶೇಷವಾಗಿ ನಿರೂಪಿತ.**

**ಭಾವಾರ್ಥ :** ಈ ಜ್ಞಾನವನ್ನು ವಿವರಿಸುವಲ್ಲಿ ಪರಮ ದೇವೋತ್ತಮ ಪುರುಷ ಕೃಷ್ಣನು ಸರ್ವಶ್ರೇಷ್ಠ ಅಧಿಕಾರಿ. ಆದರೂ ಸಾಮಾನ್ಯ ಕ್ರಮದಲ್ಲಿ ವಿದ್ವದ್ ಜ್ಞಾನಿಗಳು ಮತ್ತು ಉತ್ಕೃಷ್ಟಾಧಿಕಾರಿಗಳು ಯಾವಾಗಲು ಪೂರ್ವಾಚಾರ್ಯರಿಂದ ಪ್ರಮಾಣಗಳನ್ನು ನೀಡುತ್ತಾರೆ. ಕೃಷ್ಣನು ಆತ್ಮನ ಮತ್ತು ಪರಮಾತ್ಮನ ಅತ್ಯಂತ ವಿವಾದಾಸ್ಪದವಾದ ದ್ವೈತಾದ್ವೈತ ಅಂಶವನ್ನು ಕುರಿತು ಪ್ರಮಾಣವೆಂದು ಅಂಗೀಕೃತವಾದ ವೇದಾಂತ ಸೂತ್ರವನ್ನು ಉಲ್ಲೇಖಿಸಿ ವಿವರಿಸುತ್ತಾನೆ. ಮೊದಲು, ತಾನಲ್ಲದೆ ಜ್ಞಾನಿಗಳ ವಿಷಯದಲ್ಲಿ, "ಇದು ಬೇರೆ ಬೇರೆ ಋಷಿಗಳ ಪ್ರಕಾರ" ಎಂದು ಅವನು ಹೇಳುತ್ತಾನೆ. ಋಷಿಗಳಮಟ್ಟಿಗಾದರೋ ತಾನು ಮಾತ್ರವಲ್ಲದೆ (ವೇದಾಂತ ಸೂತ್ರಕರ್ತೃ) ವೇದವ್ಯಾಸರು ಮಹರ್ಷಿ ಮತ್ತು ವೇದಾಂತ ಸೂತ್ರದಲ್ಲಿ ದ್ವೈತವು ಪರಿಪೂರ್ಣವಾಗಿ ವಿವರಿಸಲ್ಪಟ್ಟಿದೆ. ವೇದವ್ಯಾಸರ ತಂದೆ ಪರಾಶರರು ಕೂಡ ಮಹಾ ಋಷಿಗಳು. ಅವರು ಧರ್ಮಗ್ರಂಥಗಳಲ್ಲಿ **ಅಹಮ್ ತ್ವಂ ಚ ತಥಾನ್ಯೇ........** "ನಾವು, ನೀನು, ನಾನು ಮತ್ತು ವಿವಿಧ ಇತರ ಜೀವಿಗಳು—ಭೌತಿಕ ದೇಹದಲ್ಲಿದ್ದರೂ ದಿವ್ಯರು. ನಾವು ಈಗ ನಮ್ಮ ಭಿನ್ನ ಭಿನ್ನ ಕರ್ಮಾನುಸಾರ ಭೌತಿಕ ಪ್ರಕೃತಿಯ ತ್ರಿಗುಣಗಳ ಮಾರ್ಗದಲ್ಲಿ ಬಿದ್ದಿದ್ದೇವೆ. ಹೀಗಾಗಿ, ಕೆಲವರು ಉನ್ನತ ಮಟ್ಟದಲ್ಲಿದ್ದಾರೆ, ಕೆಲವರು ಅಧಮ ಪ್ರಕೃತಿಯಲ್ಲಿದ್ದಾರೆ. ಉತ್ತಮ ಮತ್ತು ಅಧಮ ಪ್ರಕೃತಿಗಳು ಅಜ್ಞಾನ ನಿಮಿತ್ತ ಇರುತ್ತವೆ ಮತ್ತು ಅಸಂಖ್ಯಜೀವರಾಶಿಗಳಲ್ಲಿ ವ್ಯಕ್ತವಾಗುತ್ತವೆ. ಆದರೆ ಅಚ್ಯುತನಾದ ಪರಮಾತ್ಮನು ಪ್ರಕೃತಿಯ ತ್ರಿಗುಣಗಳಿಂದ ಕಲುಷಿತನಾಗುವುದಿಲ್ಲ ಮತ್ತು ಅವುಗಳಿಗೆ ಅತೀತನು" ಎಂದು ಅವರು ಬರೆಯುತ್ತಾರೆ. ಅದೇ ಪ್ರಕಾರ, ವೇದಗಳಲ್ಲಿ ವಿಶೇಷವಾಗಿ ಕಠೋಪನಿಷತ್ತಿನಲ್ಲಿ ಆತ್ಮ, ಪರಮಾತ್ಮ ಮತ್ತು ದೇಹದ ನಡುವೆ ವ್ಯತ್ಯಾಸ ಮಾಡಿದೆ. ಇದನ್ನು ವಿವರಿಸಿದ ಅನೇಕ ಮಹರ್ಷಿಗಳಿದ್ದಾರೆ. ಅವರಲ್ಲಿ ಪರಾಶರರನ್ನು ಪ್ರಧಾನರೆಂದು ಭಾವಿಸಿದೆ.

ಛಂದೋಭಿಃ ಎಂಬ ಪದವು ಅನೇಕ ವೇದ ಸಾಹಿತ್ಯಗಳನ್ನು ಸೂಚಿಸುತ್ತದೆ. ಉದಾಹರಣೆಗೆ, ಯಜುರ್ ವೇದದ ಶಾಖೆಯಾದ ತೈತ್ತಿರೀಯ ಉಪನಿಷತ್ತು ಪ್ರಕೃತಿ, ಜೀವಿ ಮತ್ತು ಪರಮ ದೇವೋತ್ತಮ ಪುರುಷನನ್ನು ವರ್ಣಿಸುತ್ತದೆ.

ಹಿಂದೆ ಹೇಳಿದಂತೆ, ಕ್ಷೇತ್ರ ಎಂದರೆ ಕಾರ್ಯಕ್ಷೇತ್ರ ಮತ್ತು ಎರಡು ಬಗೆಯ ಕ್ಷೇತ್ರಜ್ಞರಿದ್ದಾರೆ. ವ್ಯಕ್ತಿಗತ ಜೀವಿ ಮತ್ತು ಪರಮ ಜೀವಿ. ತೈತ್ತಿರೀಯ ಉಪನಿಷತ್ತಿನಲ್ಲಿ (2.9) ಹೇಳಿದಂತೆ **ಬ್ರಹ್ಮ ಪುಚ್ಛಂ ಪ್ರತಿಷ್ಠಾ**ಃ ಪರಮ ಪ್ರಭುವಿನ **ಅನ್ನ-ಮಯ,**

ಎಂದರೆ ಅಸ್ತಿತ್ವಕ್ಕಾಗಿ ಅನ್ನವನ್ನವಲಂಬಿಸುವ ಶಕ್ತಿಯು ಅಭಿವ್ಯಕ್ತ. ಇದು ಪರಮನ ಭೌತಿಕ ಸಾಕ್ಷಾತ್ಕಾರ. ಆಮೇಲೆ, **ಪ್ರಾಣ-ಮಯದಲ್ಲಿ:** ಅನ್ನದಲ್ಲಿ ಪರಾತ್ಪರ, ತತ್ತ್ವವನ್ನು ಸಾಕ್ಷಾತ್ಕರಿಸಿಕೊಂಡ ಬಳಿಕ ಒಬ್ಬನು ಪರತತ್ವವನ್ನು ಚೇತನ ಸಂಕೇತಗಳಲ್ಲಿ ಅಥವಾ ಜೀವ ರೂಪಗಳಲ್ಲಿ, ಸಾಕ್ಷಾತ್ಕರಿಸಿಕೊಳ್ಳಬಹುದು. **ಜ್ಞಾನ-ಮಯದಲ್ಲಿ :** ಸಾಕ್ಷಾತ್ಕಾರವು ಚೇತನ ಸಂಕೇತಗಳಿಂದ ಮುಂದೆ ವಿಚಾರ, ಭಾವ ಮತ್ತು ಕ್ರಿಯೆಗಳ ಮಟ್ಟಕ್ಕೆ ವಿಸ್ತರಿಸುತ್ತದೆ. ಆಮೇಲೆ, ಜೀವಿಯ ಮನಸ್ಸು ಮತ್ತು ಜೀವ ಸಂಕೇತಗಳು ಸ್ವಯಂ ಜೀವಿಯಿಂದ ಭಿನ್ನವಾಗಿ ಕಾಣುವ **ವಿಜ್ಞಾನ-ಮಯ :** ಎಂಬ ಬ್ರಹ್ಮನ್ ಸಾಕ್ಷಾತ್ಕಾರ, ಆ ಮುಂದಿನ ಮತ್ತು ಪರಮ ಮಟ್ಟವು **ಆನಂದಮಯ :** ಸರ್ವಾನಂದ ಪ್ರಕೃತಿಯ ಸಾಕ್ಷಾತ್ಕಾರ ಹೀಗೆ **ಬ್ರಹ್ಮ ಪುಚ್ಛಂ** ಎಂದು ಕರೆಯುವ ಐದು ಘಟ್ಟಗಳ ಬ್ರಹ್ಮನ್ ಸಾಕ್ಷಾತ್ಕಾರವಿದೆ. ಇವುಗಳಲ್ಲಿ ಮೊದಲ ಮೂರು— **ಅನ್ನಮಯ, ಪ್ರಾಣಮಯ** ಮತ್ತು **ಜ್ಞಾನಮಯ** ಜೀವಿಗಳ ಚಟುವಟಿಕೆಯ ಕ್ಷೇತ್ರಗಳನ್ನು ಒಳಗೊಂಡಿವೆ. ಈ ಎಲ್ಲ ಕಾರ್ಯಕ್ಷೇತ್ರಗಳಿಗೆ ಅತೀತವಾದವನು ಪರಮಪ್ರಭು, ಅವನನ್ನು **ಆನಂದ-ಮಯ** ಎಂದು ಕರೆದಿದೆ. ವೇದಾಂತ-ಸೂತ್ರವು ಕೂಡ ಪರಮನನ್ನು **ಆನಂದ-ಮಯೋಽಭ್ಯಾಸಾತ್** ಎಂದು ವರ್ಣಿಸುತ್ತದೆ. ಪರಮ ದೇವೋತ್ತಮ ಪುರುಷನು ಸ್ವಭಾವತಃ ಆನಂದಪೂರ್ಣನು. ಅವನು ತನ್ನ ದಿವ್ಯಾನಂದವನ್ನು ಭೋಗಿಸಲು **ವಿಜ್ಞಾನ-ಮಯ, ಪ್ರಾಣ-ಮಯ, ಜ್ಞಾನ-ಮಯ ಮತ್ತು ಅನ್ನ-ಮಯವಾಗಿ ವಿಸ್ತರಿಸುತ್ತಾನೆ.** ಕಾರ್ಯಕ್ಷೇತ್ರದಲ್ಲಿ ಜೀವಿಯು ಭೋಕ್ತೃ ಎಂದು ತಿಳಿಯಲ್ಪಟ್ಟಿದ್ದಾನೆ ಮತ್ತು ಆನಂದಮಯನು ಅವನಿಂದ ಭಿನ್ನ. ಎಂದರೆ ಜೀವಿಯು ಆನಂದಮಯನಿಗೆ ಹೊಂದಿಕೊಂಡು ಭೋಗಿಸಬಯಸಿದರೆ, ಆಗ ಅವನು ಪರಿಪೂರ್ಣನು. ಇದೇ ಪರಮ ಕ್ಷೇತ್ರಜ್ಞನಾಗಿ ಪರಮ ಪ್ರಭುವಿನ, ಅಧೀನ ಕ್ಷೇತ್ರಜ್ಞನಾಗಿ ಜೀವಿಯ ಮತ್ತು ಕಾರ್ಯಕ್ಷೇತ್ರ ಪ್ರಕೃತಿಯ, ನಿಜ ಚಿತ್ರ. ಒಬ್ಬನು ವೇದಾಂತ-ಸೂತ್ರ ಅಥವಾ ಬ್ರಹ್ಮ-ಸೂತ್ರದಲ್ಲಿ ಈ ತತ್ತ್ವವನ್ನು ಶೋಧಿಸಬೇಕು.

ಬ್ರಹ್ಮ-ಸೂತ್ರದ ಸೂತ್ರಗಳು ಕಾರಣ ಮತ್ತು ಪರಿಣಾಮಾನುಸಾರ ಸೊಗಸಾಗಿ ವ್ಯವಸ್ಥಿತವಾಗಿವೆ ಎಂದು ಇಲ್ಲಿ ಹೇಳಿದೆ. ಕೆಲವು ಸೂತ್ರಗಳು, **ನ ವಿಯದ್ ಅಶ್ರುತೇಃ (2. 3.2) ನಾತ್ಮಾ ಶ್ರುತೇಃ (2.3. 18), ಮತ್ತು ಪರಾತ್ ತು ತಚ್ಛ್ರುತೇಃ** (2.3.40) ಆಗಿದೆ. ಮೊದಲನೆಯ ಸೂತ್ರವು ಕಾರ್ಯಕ್ಷೇತ್ರವನ್ನು ಸೂಚಿಸುತ್ತದೆ. ಎರಡನೆಯದು ಜೀವಿಯನ್ನು ಸೂಚಿಸುತ್ತದೆ ಮತ್ತು ಮೂರನೆಯದು, ಪರಮ ಪ್ರಭುವನ್ನು (ಜೀವಿಗಳ) ನಾನಾ ವಸ್ತುಗಳ ಎಲ್ಲ ಉದ್ಭೂತಿಗಳಲ್ಲಿ ಸಾರಭೂತವಾದುದನ್ನು ಸೂಚಿಸುತ್ತದೆ.

**ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ ।**
**ಇಂದ್ರಿಯಾಣಿ ದಶೈಕಂ ಚ ಪಂಚ ಚೇಂದ್ರಿಯಗೋಚರಾಃ ॥೬॥**
**ಇಚ್ಛಾ ದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ ।**
**ಏತತ್ ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಮ್ ॥೭॥**

ಮಹಾಭೂತಾನಿ—ಮಹಾಭೂತಗಳು, ಅಹಂಕಾರಃ—ಮಿಥ್ಯಾಹಂಕಾರ, ಬುದ್ಧಿಃ—ಬುದ್ಧಿ, ಅವ್ಯಕ್ತಮ್—ಅವ್ಯಕ್ತ, ಏವ—ಖಂಡಿತವಾಗಿ, ಚ—ಕೂಡ, ಇಂದ್ರಿಯಾಣಿ—ಇಂದ್ರಿಯಗಳು, ದಶಏಕಮ್—ಹನ್ನೊಂದು, ಚ—ಕೂಡ, ಪಂಚ—ಐದು, ಚ—ಕೂಡ, ಇಂದ್ರಿಯ-ಗೋ-ಚರಾಃ—ಇಂದ್ರಿಯವಿಷಯಗಳು, ಇಚ್ಛಾ—ಇಚ್ಛೆ, ದ್ವೇಷಃ—ದ್ವೇಷ, ಸುಖಮ್—ಸುಖ, ದುಃಖಮ್—ದುಃಖ, ಸಂಘಾತಃ—ಒಟ್ಟು, ಚೇತನ—ಚೇತನ ಸಂಕೇತಗಳು, ಧೃತಿಃ—ದೃಢ ನಿಶ್ಚಯ, ಏತತ್—ಈ ಎಲ್ಲ, ಕ್ಷೇತ್ರಮ್—ಕ್ಷೇತ್ರವನ್ನು, ಸಮಾಸೇನ—ಸಾರಭೂತವಾಗಿ, ಸ-ವಿಕಾರಮ್—ಪರಸ್ಪರ ಕ್ರಿಯೆಯಿಂದ, ಉದಾಹೃತಮ್—ಉದಾಹೃತವಾಗಿವೆ.

**ಪಂಚ ಮಹಾಭೂತಗಳು, ಮಿಥ್ಯಾಹಂಕಾರ, ಬುದ್ಧಿ, ಅವ್ಯಕ್ತ ತತ್ತ್ವ, ದಶೇಂದ್ರಿಯಗಳು ಮತ್ತು ಮನಸ್ಸು, ಪಂಚೇಂದ್ರಿಯ ವಿಷಯಗಳು, ಇಚ್ಛೆ, ದ್ವೇಷ, ಸುಖ, ದುಃಖ, ಒಟ್ಟಾಗಿ ಚೇತನ ಸಂಕೇತಗಳು, ಮತ್ತು ನಿರ್ಧಾರಗಳು— ಇವು ಎಲ್ಲವು ಸಾರಭೂತವಾಗಿ ಕಾರ್ಯಕ್ಷೇತ್ರ ಮತ್ತು ಅದರ ಪರಸ್ಪರ ಕ್ರಿಯೆಗಳು ಎಂದು ತಿಳಿಯಲ್ಪಟ್ಟಿವೆ.**

**ಭಾವಾರ್ಥ :** ಮಹರ್ಷಿಗಳ ಎಲ್ಲ ಅಧಿಕಾರಯುತ ನಿರೂಪಣೆಗಳಿಂದ, ವೇದಸೂತ್ರಗಳು ಮತ್ತು ವೇದಾಂತ ಸೂತ್ರಗಳಿಂದ ಈ ಜಗತ್ತಿನ ಘಟಕಾಂಶಗಳನ್ನು ಹೀಗೆ ಅರಿತುಕೊಳ್ಳಬಹುದು. ಮೊದಲು ಪೃಥ್ವಿ, ಅಪ್, ತೇಜ, ವಾಯು, ಮತ್ತು ಆಕಾಶಗಳಿವೆ. ಇವು ಪಂಚ ಮಹಾಭೂತಗಳು. ಆಮೇಲೆ ಮಿಥ್ಯಾಹಂಕಾರ, ಬುದ್ಧಿ ಮತ್ತು ಅವ್ಯಕ್ತ ತ್ರಿವಿಧ ಪ್ರಕೃತಿ ಗುಣಗಳು ಇವೆ. ಆಮೇಲೆ ಜ್ಞಾನಾರ್ಜನೆಗೆ ಕಣ್ಣು, ಕಿವಿ, ಮೂಗು, ನಾಲಿಗೆ ಮತ್ತು ಚರ್ಮ—ಐದು ಇಂದ್ರಿಯಗಳಿವೆ. ಆಮೇಲೆ, ಶಬ್ದ, ಪಾದಗಳು, ಪಾಣಿಗಳು, ಗುದ ಮತ್ತು ಉಪಸ್ಥಗಳು—ಈ ಐದು ಕರ್ಮೇಂದ್ರಿಯಗಳಿವೆ. ಆಮೇಲೆ ಇಂದ್ರಿಯಗಳ ಮೇಲೆ, ಒಳಗಿರುವ ಅಂತರೇಂದ್ರಿಯ ಎಂದು ಕರೆಯುವ ಮನಸ್ಸಿದೆ. ಆದ್ದರಿಂದ ಮನಸ್ಸು ಸೇರಿ ಒಟ್ಟು ಹನ್ನೊಂದು ಇಂದ್ರಿಯಗಳಿವೆ. ಆಮೇಲೆ ಗಂಧ, ರಸ, ರೂಪ, ಸ್ಪರ್ಶ, ಮತ್ತು ಶಬ್ದ ಎಂಬ ಐದು ಇಂದ್ರಿಯ ವಿಷಯಗಳಿವೆ. ಈಗ ಒಟ್ಟು ಈ ಇಪ್ಪತ್ನಾಲ್ಕು ತತ್ತ್ವಗಳನ್ನು ಕಾರ್ಯಕ್ಷೇತ್ರವೆಂದು ಕರೆದಿದೆ. ಒಬ್ಬನು ಈ ಇಪ್ಪತ್ನಾಲ್ಕು ವಿಷಯಗಳನ್ನು ವಿಶ್ಲೇಷಣಾತ್ಮಕವಾಗಿ ಅಧ್ಯಯನ ಮಾಡಿದರೆ ಅವನು ಕಾರ್ಯಕ್ಷೇತ್ರವನ್ನು ಚೆನ್ನಾಗಿ ಅರಿತುಕೊಳ್ಳಬಹುದು. ಆಮೇಲೆ, ಪರಸ್ಪರ ಕ್ರಿಯೆ ಪ್ರತಿಕ್ರಿಯೆಗಳು, ಜಡ ದೇಹದಲ್ಲಿ ಪಂಚ ಮಹಾಭೂತಗಳ ಪ್ರತಿನಿಧಿಗಳಾದ, ಇಚ್ಛೆ, ದ್ವೇಷ, ಸುಖ ಮತ್ತು ದುಃಖಗಳಿವೆ. ಪ್ರಜ್ಞೆ ಮತ್ತು ನಿರ್ಧಾರದಿಂದ ಪ್ರತಿನಿಧಿತ ಚೇತನ ಸಂಕೇತಗಳು ಸೂಕ್ಷ್ಮ ದೇಹದ ಮನಸ್ಸು, ಅಹಂಕಾರ ಮತ್ತು ಬುದ್ಧಿ ಅಭಿವ್ಯಕ್ತತೆಗಳು. ಈ ಸೂಕ್ಷ್ಮ ತತ್ತ್ವಗಳು ಕೂಡ ಕಾರ್ಯಕ್ಷೇತ್ರದಲ್ಲಿ ಸೇರಿದೆ. ಪಂಚ ಮಹಾಭೂತಗಳು ಮಿಥ್ಯಾಹಂಕಾರದ ಸ್ಥೂಲ ಪ್ರಾತಿನಿಧ್ಯ. ಅವು ಮತ್ತೆ ಶಾಸ್ತ್ರ ಭಾಷೆಯಲ್ಲಿ ಕರೆಯಲ್ಪಡುವ ಭೌತಿಕ ಕಲ್ಪನೆ, ಅಥವಾ ತಾಮಸ ಬುದ್ಧಿ, ಎಂಬ ಮಿಥ್ಯಾಹಂಕಾರದ ಪ್ರಾಥಮಿಕ ಘಟ್ಟವನ್ನು ಪ್ರತಿ

ನಿಧಿಸುತ್ತವೆ. ಇದು ಮತ್ತೆ ಭೌತಿಕ ಪ್ರಕೃತಿಯ ತ್ರಿಗುಣಗಳ ಅವ್ಯಕ್ತಮಟ್ಟವನ್ನು ಪ್ರತಿನಿಧಿಸುತ್ತದೆ. ಭೌತಿಕ ಪ್ರಕೃತಿಯ ಅವ್ಯಕ್ತ ಗುಣಗಳು **ಪ್ರಧಾನ** ಎಂದು ಕರೆಯಲ್ಪಟ್ಟಿವೆ.

ಇಪ್ಪತ್ನಾಲ್ಕು ತತ್ತ್ವಗಳನ್ನು ಅವುಗಳ ಕ್ರಿಯೆ ಪ್ರತಿಕ್ರಿಯೆಗಳೊಂದಿಗೆ ವಿವರವಾಗಿ ತಿಳಿಯಲಿಚ್ಛಿಸುವವನು ತತ್ತ್ವಜ್ಞಾನವನ್ನು ಇನ್ನೂ ಹೆಚ್ಚು ವಿವರವಾಗಿ ಅಧ್ಯಯನ ಮಾಡಬೇಕು. ಭಗವದ್ಗೀತೆಯಲ್ಲಿ ಸಾರಾಂಶ ಮಾತ್ರ ನೀಡಲಾಗಿದೆ.

ದೇಹವು ಈ ಎಲ್ಲ ಅಂಶಗಳ ಪ್ರತಿನಿಧಿ, ಮತ್ತು ದೇಹದ ಬದಲಾವಣೆಗಳಿವೆ, ಅವು ಆರು : ದೇಹ ಹುಟ್ಟುತ್ತದೆ, ಬೆಳೆಯುತ್ತದೆ, ಇರುತ್ತದೆ, ಉಪೋತ್ಪತ್ತಿಗಳನ್ನು ಉತ್ಪಾದಿಸುತ್ತದೆ, ಆಮೇಲೆ ಅದು ಕ್ಷೀಣಿಸಲಾರಂಭಿಸುತ್ತದೆ, ಮತ್ತು ಕೊನೆಯ ಘಟ್ಟದಲ್ಲಿ ಅದು ನಷ್ಟವಾಗುತ್ತದೆ. ಆದ್ದರಿಂದ ಕ್ಷೇತ್ರವು ಅನಿತ್ಯ ಭೌತಿಕ ವಸ್ತು. ಆದರೆ, ಅದರ ಒಡೆಯನಾದ ಕ್ಷೇತ್ರಜ್ಞನು ಅದರಿಂದ ಭಿನ್ನನು.

**ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾನ್ತಿರಾರ್ಜವಮ್ ।**
**ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ॥ ೮ ॥**

**ಇಂದ್ರಿಯಾರ್ಥೇಷು ವೈರಾಗ್ಯಮನಹಂಕಾರ ಏವ ಚ ।**
**ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಮ್ ॥ ೯ ॥**

**ಅಸಕ್ತಿರನಭಿಷ್ವಂಗಃ ಪುತ್ರದಾರಾಗೃಹಾದಿಷು ।**
**ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥ ೧೦ ॥**

**ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।**
**ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ ॥ ೧೧ ॥**

**ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಮ್ ।**
**ಏತಜ್ ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥ ೧೨ ॥**

ಅಮಾನಿತ್ವಮ್—ವಿನೀತತೆ, ಅದಂಭಿತ್ವಮ್—ಗರ್ವರಹಿತತೆ, ಅಹಿಂಸಾ—ಅಹಿಂಸೆ, ಕ್ಷಾನ್ತಿಃ—ತಾಳ್ಮೆ, ಆರ್ಜವಮ್—ಸರಳತೆ, ಆಚಾರ್ಯ-ಉಪಾಸನಮ್—ಸದ್ಗುರುಗಳ ಬಳಿಗೆ ಹೋಗುವುದು, ಶೌಚಮ್—ಶುಚಿತ್ವ, ಸ್ಥೈರ್ಯಮ್—ಸ್ಥೈರ್ಯ, ಆತ್ಮ-ವಿನಿಗ್ರಹಃ—ಆತ್ಮನಿಗ್ರಹ, ಇಂದ್ರಿಯ-ಅರ್ಥೇಷು—ಇಂದ್ರಿಯಗಳ ವಿಷಯದಲ್ಲಿ, ವೈರಾಗ್ಯಮ್—ವೈರಾಗ್ಯ, ಅನಹಂಕಾರಃ—ಮಿಥ್ಯಾಹಂಕಾರರಹಿತತೆ, ಏವ—ಖಂಡಿತವಾಗಿ, ಚ—ಕೂಡ, ಜನ್ಮ—ಜನ್ಮದ, ಮೃತ್ಯು—ಮೃತ್ಯು, ಜರಾ—ಮುಪ್ಪು, ವ್ಯಾಧಿ—ಮತ್ತು ರೋಗ, ದುಃಖ—ದುಃಖದ, ದೋಷ—ದೋಷದ, ಅನುದರ್ಶನಮ್—ದರ್ಶನ, ಅಸಕ್ತಿಃ—ಆಸಕ್ತಿ, ಅನಭಿಷ್ವಂಗಃ—ಅಸಂಗ, ಪುತ್ರ—ಪುತ್ರನಿಗಾಗಿ, ದಾರ—ಹೆಂಡತಿಗಾಗಿ, ಗೃಹ-ಆದಿಷು—ಮನೆ ಇತ್ಯಾದಿಗಳಿಗಾಗಿ, ನಿತ್ಯಮ್—ನಿತ್ಯ, ಚ—ಕೂಡ, ಸಮ-ಚಿತ್ತತ್ವಮ್—ಸಮಚಿತ್ತತೆ, ಇಷ್ಟ—ಇಷ್ಟವಾದುದು, ಅನಿಷ್ಟ—ಮತ್ತು ಅನಿಷ್ಟವಾದುದು, ಉಪಪತ್ತಿಷು—ಹೊಂದಿ, ಮಯಿ—ನನ್ನಲ್ಲಿ, ಚ—ಕೂಡ,

ಅನನ್ಯ-ಯೋಗೇನ—ಅಮಿಶ್ರ ಭಕ್ತಿಯೋಗದಿಂದ, ಭಕ್ತಿಃ—ಭಕ್ತಿ, ಅವ್ಯಭಿಚಾರಿಣೀ—ಅಸ್ಖಲಿತ, ವಿವಿಕ್ತ—ಏಕಾಂತ, ದೇಶ—ಸ್ಥಳಗಳಿಗೆ, ಸೇವಿತ್ವಮ್—ಹೋಗ ಬಯಸುತ್ತ, ಅರತಿಃ—ರತಿ ಇಲ್ಲದೆ, ಜನ-ಸಂಸದಿ—ಜನ ಸಾಮಾನ್ಯರಿಗೆ, ಅಧ್ಯಾತ್ಮ—ಅಧ್ಯಾತ್ಮ ಆತ್ಮ ಸಂಬಂಧಿ, ಜ್ಞಾನ—ಜ್ಞಾನದಲ್ಲಿ, ನಿತ್ಯತ್ವಮ್—ನಿತ್ಯತ್ವವನ್ನು, ತತ್ತ್ವಜ್ಞಾನ—ತತ್ತ್ವಜ್ಞಾನದ, ಅರ್ಥ—ಉದ್ದೇಶಕ್ಕಾಗಿ, ದರ್ಶನಮ್—ದರ್ಶನವನ್ನು, ಏತತ್—ಈ ಎಲ್ಲವನ್ನು, ಜ್ಞಾನಮ್—ಜ್ಞಾನವನ್ನು, ಇತಿ—ಹೀಗೆ, ಪ್ರೋಕ್ತಮ್—ಘೋಷಿತ, ಅಜ್ಞಾನಮ್—ಅಜ್ಞಾನವನ್ನು, ಯತ್—ಯಾವುದು, ಅತಃ—ಇದರಿಂದ, ಅನ್ಯಥಾ—ಅನ್ಯಥಾ (ಇತರ).

**ವಿನಯ, ನಿಗರ್ವ, ಅಹಿಂಸೆ, ತಾಳ್ಮೆ, ಸರಳತೆ, ಸದ್ಗುರುಗಳ ಬಳಿಗೆ ಹೋಗುವುದು, ಶೌಚ, ಸ್ಥೈರ್ಯ, ಆತ್ಮ ನಿಗ್ರಹ, ಇಂದ್ರಿಯತೋಷಣ ವಿಷಯಗಳಲ್ಲಿ ವೈರಾಗ್ಯ, ಮಿಥ್ಯಾಹಂಕಾರರಹಿತತೆ, ಜನನ, ಮರಣ, ವೃದ್ಧಾಪ್ಯ ಮತ್ತು ವ್ಯಾಧಿ ದೋಷದರ್ಶನ, ಅಸಂಗ, ಮಕ್ಕಳು, ಹೆಂಡತಿ, ಮನೆ ಇತ್ಯಾದಿಗಳ ವ್ಯಾಮೋಹ ರಹಿತತೆ, ಸುಖದುಃಖಗಳಲ್ಲಿ ಸಮಚಿತ್ತತೆ, ನನ್ನಲ್ಲಿ ಸಂತತ ಮತ್ತು ಅಮಿಶ್ರ ಭಕ್ತಿ, ಏಕಾಂತವಾಸ ಅಭಿಲಾಷೆ, ಜನಸಾಮಾನ್ಯರಿಂದ ಅಸಂಗ, ಆತ್ಮಸಾಕ್ಷಾತ್ಕಾರದ ಮಹತ್ವದ ಅಂಗೀಕಾರ ಮತ್ತು ಪರತತ್ತ್ವದ ತಾತ್ತ್ವಿಕ ಶೋಧ—ಇವು ಎಲ್ಲವೂ ಜ್ಞಾನವೆಂದು ಸಾರುತ್ತೇನೆ, ಮತ್ತು ಇವುಗಳನ್ನುಳಿದು ಇರುವ ಇತರ ಎಲ್ಲವೂ ಅಜ್ಞಾನ.**

**ಭಾವಾರ್ಥ :** ಈ ಜ್ಞಾನ ಪ್ರಕ್ರಿಯೆಯು ಕೆಲವು ಸಲ ಬುದ್ಧಿಹೀನರಿಂದ ಕಾರ್ಯಕ್ಷೇತ್ರದ ಪರಸ್ಪರ ಕ್ರಿಯೆ ಎಂದು ತಪ್ಪಾಗಿ ತಿಳಿಯಲ್ಪಡುತ್ತದೆ. ಆದರೆ ವಾಸ್ತವಿಕವಾಗಿ ಇದು ನಿಜವಾದ ಜ್ಞಾನ ಪ್ರಕ್ರಿಯೆ. ಒಬ್ಬನು ಈ ಪ್ರಕ್ರಿಯೆಯನ್ನು ಅಂಗೀಕರಿಸಿದರೆ, ಆಗ ಪರತತ್ತ್ವದ ಬಳಿಗೆ ಹೋಗುವ ಸಂಭವ ಉಂಟು. ಇದು ಮುಂಚೆ ವರ್ಣಿಸಿದಂತೆ ಇಪತ್ನಾಲ್ಕು ತತ್ತ್ವಗಳ ಪರಸ್ಪರ ಪ್ರಕ್ರಿಯೆಯಲ್ಲ. ಇದು ವಾಸ್ತವಿಕವಾಗಿ ಮಹಾಭೂತಗಳ ತೊಡಕಿನಿಂದ ಪಾರಾಗುವ ಸಾಧನ. ದೇಹಗತ ಆತ್ಮನು ಇಪ್ಪತ್ನಾಲ್ಕು ತತ್ವಗಳಿಂದ ನಿರ್ಮಿತವಾದ ಕವಚವಾಗಿರುವ ದೇಹದ ಬಲೆಯಲ್ಲಿ ಸಿಲುಕಿದ್ದಾನೆ, ಮತ್ತು ಇಲ್ಲಿ ವರ್ಣಿಸಿದ ಜ್ಞಾನಪ್ರಕ್ರಿಯೆಯು ಆದರಿಂದ ಹೊರಬರುವ ಸಾಧನ. ಜ್ಞಾನ ಪ್ರಕ್ರಿಯೆಯ ಎಲ್ಲ ವರ್ಣನೆಗಳಲ್ಲಿ ಅತ್ಯಂತ ಮುಖ್ಯ ಅಂಶವು ಹನ್ನೊಂದನೆಯ ಶ್ಲೋಕದ ಮೊದಲನೆಯ ಸಾಲಿನಲ್ಲಿ ವರ್ಣಿತ. **ಮಯಿ ಚಾನನ್ಯಯೋಗೇನ ಭಕ್ತಿರ್ ಅವ್ಯಭಿಚಾರಿಣೀ :** ಜ್ಞಾನ ಪ್ರಕ್ರಿಯೆಯು ಭಗವಂತನ ಅಮಿಶ್ರ ಭಕ್ತಿ ಸೇವೆಯಲ್ಲಿ ಪರ್ಯಾವಸನ ಹೊಂದುತ್ತದೆ. ಆದ್ದರಿಂದ ಒಬ್ಬನು ಭಗವಂತನ ದಿವ್ಯಸೇವೆಗೆ ತಲುಪದಿದ್ದರೆ, ಅಥವಾ ತಲುಪಲು ಶಕ್ತನಾಗದಿದ್ದರೆ, ಆಗ ಇತರ ಹತ್ತೊಂಭತ್ತು ಅಂಶಗಳು ಯಾವ ವಿಶೇಷ ಮೌಲ್ಯವನ್ನು ಹೊಂದಿರುವುದಿಲ್ಲ. ಆದರೆ ಒಬ್ಬನು ಪೂರ್ಣ ಕೃಷ್ಣ ಪ್ರಜ್ಞೆಯಲ್ಲಿ ಭಕ್ತಿಯುತ ಸೇವೆಯನ್ನು ಅಂಗೀಕರಿಸಿದರೆ, ಉಳಿದ ಹತ್ತೊಂಭತ್ತು ಅಂಶಗಳು ಅವನಲ್ಲಿ ತಾವಾಗಿಯೇ ಬೆಳೆಯುತ್ತವೆ. ಶ್ರೀಮದ್ ಭಾಗವತದಲ್ಲಿ ಹೇಳಿದಂತೆ (5.18.12)

**ಯಸ್ಯಾಸ್ತಿ ಭಕ್ತಿರ್ ಭಗವತಿ ಅಕಿಂಚನಾ ಸರ್ವೈರ್ ಗುಣೈಸ್ತತ್ರ ಸಮಾಸತೇ ಸುರಾಃ** ಜ್ಞಾನದ ಎಲ್ಲ ಸದ್ಗುಣಗಳು ಭಕ್ತಿಯುತ ಸೇವಾ ಮಟ್ಟವನ್ನು ಹೊಂದಿದವನಲ್ಲಿ ಬೆಳೆಯುತ್ತವೆ. ಎಂಟನೆಯ ಶ್ಲೋಕದಲ್ಲಿ ಹೇಳಿದಂತೆ ಗುರುಗಳನ್ನು ಅಂಗೀಕರಿಸುವ ತತ್ತ್ವವು ಅವಶ್ಯ. ಭಕ್ತಿಯುತ ಸೇವೆಯನ್ನು ಸ್ವೀಕರಿಸುವವನಿಗೂ ಕೂಡ ಇದು ಅತ್ಯಂತ ಮಹತ್ವದ್ದು. ಒಬ್ಬನು ಸದ್ಗುರುಗಳನ್ನು ಅಂಗೀಕರಿಸಿದಾಗ ದಿವ್ಯ ಜೀವನವು ಪ್ರಾರಂಭ ವಾಗುತ್ತದೆ. ಈ ಜ್ಞಾನಪ್ರಕ್ರಿಯೆಯು ವಾಸ್ತವಿಕ ಪಥ ಎಂದು ಪರಮ ದೇವೋತ್ತಮ ಪುರುಷ ಶ್ರೀಕೃಷ್ಣನು ಸ್ಪಷ್ಟವಾಗಿ ಇಲ್ಲಿ ಹೇಳುತ್ತಾನೆ. ಇದಕ್ಕಿಂತ ಮಿಗಿಲಾಗಿ ಊಹಿಸುವುದು ಅರ್ಥಹೀನ.

ಇಲ್ಲಿ ನಿರೂಪಿತ ಜ್ಞಾನದ ವಿಷಯದಲ್ಲಿ ವಿಷಯಗಳನ್ನು ಹೀಗೆ ವಿಶ್ಲೇಷಿಸಬಹುದು. ವಿನಯ ಎಂದರೆ ಒಬ್ಬನು ಇತರರಿಂದ ಗೌರವಿತನಾಗುವ ತೃಪ್ತಿಗೆ ಕಾತುರನಾಗಿರಕೂಡದು. ಜೀವನದ ಭೌತಿಕ ಕಲ್ಪನೆಯು ಇತರರಿಂದ ಗೌರವಿಸಲ್ಪಡಲು ನಮ್ಮನ್ನು ಬಹಳ ಉತ್ಸುಕರನ್ನಾಗಿ ಮಾಡುತ್ತದೆ, ಆದರೆ ಪರಿಪೂರ್ಣ ಜ್ಞಾನದಲ್ಲಿರುವ—ತಾನು ಈ ದೇಹವಲ್ಲ ಎಂದು ತಿಳಿದಿರುವವನ–ದೃಷ್ಟಿಯಿಂದ, ಈ ದೇಹಕ್ಕೆ ಸಂಬಂಧಿಸಿದ ಮಾನಾಪಮಾನದ ಯಾವುದೇ ವಿಷಯವು ನಿರರ್ಥಕ. ಒಬ್ಬನು ಈ ಭೌತಿಕ ವಂಚನೆಯ ಹಿಂದೆ ಬೆನ್ನು ಹತ್ತಕೂಡದು. ಜನರು ತಮ್ಮ ತಮ್ಮ ಧರ್ಮದ ಖ್ಯಾತಿಗೆ ಬಹಳ ಕಾತುರರು, ಪರಿಣಾಮ ವಾಗಿ ಕೆಲವು ಸಲ ಧರ್ಮತತ್ತ್ವಜ್ಞರಿಯದೆ ಒಬ್ಬನು ವಾಸ್ತವಿಕವಾಗಿ ಧರ್ಮತತ್ತ್ವ ಗಳನ್ನು ಅನುಸರಿಸದವರ ಗುಂಪನ್ನು ಸೇರಿಕೊಂಡುಬಿಡುತ್ತಾನೆ, ಮತ್ತು ತಾನು ಧರ್ಮಗುರು ಎಂದು ಪ್ರಚಾರ ಮಾಡಿಕೊಳ್ಳಬಯಸುತ್ತಾನೆ, ಅಧ್ಯಾತ್ಮ ವಿದ್ಯೆಯಲ್ಲಿ ವಾಸ್ತವಿಕ ಉತ್ಕೃಷ್ಟತೆಗಾಗಿ, ತಾನು ಪ್ರಗತಿ ಮಾರ್ಗದಲ್ಲಿ ಎಷ್ಟು ದೂರ ಸಾಗಿದ್ದೇನೆ ಎಂಬುದನ್ನು ಪರೀಕ್ಷೆ ಮಾಡಿಕೊಳ್ಳಬೇಕು. ಅವನು ಈ ವಿಷಯಗಳ ಸಹಾಯದಿಂದ ನಿರ್ಣಯಕ್ಕೆ ಬರಬಹುದು.

ಅಹಿಂಸೆ ಎಂದರೆ ಸಾಮಾನ್ಯವಾಗಿ ಕೊಲ್ಲದಿರುವುದು ಅಥವಾ ದೇಹನಾಶ ಮಾಡ ದಿರುವುದು ಎಂದು ಗ್ರಹಿಸಲಾಗಿದೆ, ಆದರೆ ಅಹಿಂಸೆ ಎಂದರೆ ವಾಸ್ತವಿಕವಾಗಿ ಇತರರನ್ನು ತೊಂದರೆಗೆ ಒಳಪಡಿಸದಿರುವುದು. ಜನಸಾಮಾನ್ಯರು ಅಜ್ಞಾನದಿಂದ ಜೀವನದ ಭೌತಿಕ ಕಲ್ಪನೆಯಲ್ಲಿ ಸಿಕ್ಕಿಕೊಂಡಿದ್ದಾರೆ, ಮತ್ತು ಅವರು ನಿರಂತರವಾಗಿ ಭೌತಿಕ ದುಃಖಗಳನ್ನು ಅನುಭವಿಸುತ್ತಾರೆ, ಆದ್ದರಿಂದ ಒಬ್ಬನು ಜನರನ್ನು ಅಧ್ಯಾತ್ಮ ಜ್ಞಾನ ಮಟ್ಟಕ್ಕೆ ಉನ್ನತಿಸದ ಹೊರತು, ಅವನು ಹಿಂಸಾಚಾರಿಯೆಂದೇ ಅರ್ಥ. ಒಬ್ಬನು ಜನರಿಗೆ ನಿಜಜ್ಞಾನ ಹಂಚಲು ತನ್ನಿಂದಾದ ಸರ್ವ ಪ್ರಯತ್ನ ಮಾಡಬೇಕು. ಅದರಿಂದ ಅವರು ಜ್ಞಾನೋದಯ ಹೊಂದಿ ಈ ಭೌತಿಕ ಜಾಲದಿಂದ ಪಾರಾಗಬಹುದು. ಅದು ಅಹಿಂಸೆ.

ಕ್ಷಾಂತಿ (ತಾಳ್ಮೆ) ಎಂದರೆ ಒಬ್ಬನು ಇತರರಿಂದ ಅವಮಾನ ಮತ್ತು ಅಗೌರವವನ್ನು ಸಹಿಸಿಕೊಳ್ಳಲು ಅಭ್ಯಾಸ ಹೊಂದಿರಬೇಕು. ಒಬ್ಬನು ಅಧ್ಯಾತ್ಮ ಜ್ಞಾನಸಾಧನೆಯಲ್ಲಿ ತೊಡಗಿದ್ದರೆ, ಅನೇಕ ಅವಮಾನಗಳು ಮತ್ತು ಇತರರಿಂದ ಅಗೌರವಗಳು ಒದಗುತ್ತವೆ.

ಭೌತಿಕ ಪ್ರಕೃತಿಯೇ ಹಾಗೆ ಇರುವುದರಿಂದ, ಇದು ನಿರೀಕ್ಷಿತ.ಐದು ವರ್ಷದ ಮಗುವಾಗಿದ್ದ ಪ್ರಹ್ಲಾದನು ಕೂಡ, ಅಧ್ಯಾತ್ಮ ಜ್ಞಾನ ಸಾಧನೆಯಲ್ಲಿ ತೊಡಗಿದ್ದೂ ಅವನ ತಂದೆಯು ಅವನ ಭಕ್ತಿಮಾರ್ಗ ವಿರೋಧಿಯಾಗಿ ಅವನಿಗೆ ಅಪಾಯ ಉಂಟಾಗಿತ್ತು. ತಂದೆಯು ಅನೇಕ ರೀತಿಗಳಲ್ಲಿ ಅವನನ್ನು ಕೊಲ್ಲಲೆತ್ನಿಸಿದನು. ಆದರೆ ಪ್ರಹ್ಲಾದನು ಅವನನ್ನು ಸಹಿಸಿ ಕೊಂಡನು. ಹೀಗೆ ಅಧ್ಯಾತ್ಮ ಜ್ಞಾನ ಸಾಧನೆಯ ಉನ್ನತಿಯಲ್ಲಿ ಅನೇಕ ಅಡಚಣೆಗಳು ಒದಗಬಹುದು, ಆದರೆ ನಾವು ತಾಳ್ಮೆಯಿಂದ ಇರಬೇಕು ಮತ್ತು ದೃಢ ನಿರ್ಧಾರದಿಂದ ನಮ್ಮ ಪ್ರಗತಿಯನ್ನು ಮುಂದುವರಿಸಬೇಕು.

ಸರಳತೆ ಎಂದರೆ ಒಬ್ಬನು ರಾಜಕಾರಣ ಮಾಡದೆ ನಿಜ ಸತ್ಯವನ್ನು ವೈರಿಗೂ ಕೂಡ ಹೇಳಬಹುದಾದಷ್ಟು ಋಜುವಾಗಿರಬೇಕು. ಗುರುಗಳನ್ನು ಅಂಗೀಕರಿಸುವ ಮಟ್ಟಿಗೆ ಅದು ಅಗತ್ಯವಾದುದು. ಏಕೆಂದರೆ ನಿಜಗುರುವಿನ ಉಪದೇಶವಿಲ್ಲದೆ ಒಬ್ಬನು ಅಧ್ಯಾತ್ಮ ವಿದ್ಯೆಯಲ್ಲಿ ಪ್ರಗತಿ ಹೊಂದಲಾರನು. ಒಬ್ಬನು ಸರ್ವ ಸೌಜನ್ಯದಿಂದ ಗುರುಗಳ ಬಳಿಗೆ ಹೋಗಬೇಕು, ಮತ್ತು ಅವರ ಎಲ್ಲ ಸೇವೆ ಮಾಡಿ, ಅವರು ಶಿಷ್ಯನ ಮೇಲೆ ಅನುಗ್ರಹ ತೋರಿಸುವಷ್ಟು ತುಷ್ಟರಾಗುವಂತೆ ಮಾಡಬೇಕು. ನಿಜಗುರುಗಳು ಕೃಷ್ಣನ ಪ್ರತಿನಿಧಿ ಯಾಗಿರುವುದರಿಂದ ಅವರು ಶಿಷ್ಯನ ಮೇಲೆ ಅನುಗ್ರಹ ತೋರಿದರೆ, ಅದು ಶಿಷ್ಯನು ನಿಯಂತ್ರಣ ತತ್ತ್ವಗಳನ್ನಾಚರಿಸದೆಯೇ ಕೂಡಲೇ ಉತ್ಕೃಷ್ಟನಾಗುವಂತೆ ಮಾಡುತ್ತದೆ. ಅಥವಾ, ನಿಸ್ಸಂಕೋಚವಾಗಿ ಗುರುಶುಶ್ರೂಷೆ ಮಾಡಿದವನಿಗೆ ನಿಯಂತ್ರಣ ತತ್ತ್ವಗಳು ಸುಲಭವಾಗುತ್ತವೆ.

ಅಧ್ಯಾತ್ಮ ಜೀವನದಲ್ಲಿ ಪ್ರಗತಿಹೊಂದಲು ಶೌಚ ಅತ್ಯವಶ್ಯ. ಶೌಚವು ಎರಡು ವಿಧ: ಬಹಿರಂಗ ಮತ್ತು ಅಂತರಂಗ. ಬಹಿರಂಗ ಶುಚಿವೆಂದರೆ ಸ್ನಾನಮಾಡುವುದು, ಆದರೆ ಅಂತರಂಗ ಶುಚಿಗಾಗಿ ಒಬ್ಬನು ಸದಾ ಕೃಷ್ಣ ಚಿಂತನ ಮಾಡಬೇಕು ಮತ್ತು ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ ಹರೇ ಹರೇ/ಹರೇ ರಾಮ, ಹರೇ ರಾಮ, ರಾಮ ರಾಮ ಹರೇ ಹರೇ, ಮಹಾ ಮಂತ್ರವನ್ನು ಜಪಿಸಬೇಕು. ಈ ಪ್ರಕ್ರಿಯೆಯು ಪೂರ್ವ ಕರ್ಮದಿಂದ ಮನಸ್ಸಿನ ಮೇಲೆ ಆವರಿಸಿರುವ ಸಂಚಿತ ಧೂಳನ್ನು ಶುದ್ಧಗೊಳಿಸುತ್ತದೆ.

ಸ್ಥೈರ್ಯ ಎಂದರೆ ಒಬ್ಬನು ಅಧ್ಯಾತ್ಮ ಜೀವನದಲ್ಲಿ ಪ್ರಗತಿ ಸಾಧಿಸಲು ಕೃತ ನಿಶ್ಚಯನಾಗಿರಬೇಕು. ಅಂಥ ನಿರ್ಧಾರವಿಲ್ಲದೆ, ಒಬ್ಬನು ಗಣನಾರ್ಹ ಪ್ರಗತಿ ಸಾಧಿಸ ಲಾರನು. ಆತ್ಮ ಸಂಯಮ ಎಂದರೆ ಒಬ್ಬನು ಅಧ್ಯಾತ್ಮ ಪ್ರಗತಿ ಮಾರ್ಗಕ್ಕೆ ಅಡ್ಡಿ ಯಾಗುವ ಯಾವುದನ್ನೂ ಅಂಗೀಕರಿಸಕೂಡದು. ಒಬ್ಬನು ಈ ಮಾರ್ಗಕ್ಕೆ ಹೊಂದಿ ಕೊಂಡು ಅಧ್ಯಾತ್ಮ ಪ್ರಗತಿ ಪಥಕ್ಕೆ ವಿರುದ್ಧವಾದುದನ್ನು ತಿರಸ್ಕರಿಸಬೇಕು. ಇದು ನಿಜ ವಾದ ವೈರಾಗ್ಯ. ಇಂದ್ರಿಯಗಳು ಅದೆಷ್ಟು ಪ್ರಬಲವೆಂದರೆ ಅವು ಸದಾ ಇಂದ್ರಿಯ ತೋಷಣಾಕಾಂಕ್ಷಿಗಳು. ಒಬ್ಬನು ಇವುಗಳ ಅನವಶ್ಯಕ ಬೇಡಿಕೆಗಳನ್ನು ಪೂರೈಸಕೂಡದು. ಒಬ್ಬನ ದೇಹವು ಸದೃಢವಾಗಿರುವ ಮಟ್ಟಿಗೆ ಇಂದ್ರಿಯಗಳನ್ನು ತೃಪ್ತಿಪಡಿಸಬೇಕು. ಅವ ರಿಂದ ಒಬ್ಬನು ಅಧ್ಯಾತ್ಮ ಜೀವನದಲ್ಲಿ ಸಾಧನೆ ಮಾಡುವ ತನ್ನ ಕರ್ತವ್ಯ ನಿರ್ವಹಿಸಬಹು

ದಾಗಿದೆ. ಅತ್ಯಂತ ಮಹತ್ವದ ನಿಯಂತ್ರಣ ಸಾಧ್ಯವಾಗದ ಇಂದ್ರಿಯ ಎಂದರೆ ಜಿಹ್ವೆ. ಒಬ್ಬನು ತನ್ನ ನಾಲಿಗೆಯನ್ನು ನಿಯಂತ್ರಿಸಿಕೊಳ್ಳಬಹುದಾದರೆ, ಇತರ ಇಂದ್ರಿಯಗಳನ್ನು ನಿಯಂತ್ರಿಸುವ ಸರ್ವ ಸಂಭವವಿದೆ· ಆಸ್ವಾದಿಸುವುದು ಮತ್ತು ಧ್ವನಿಗೈಯುವುದು ನಾಲಿಗೆಯ ಕೆಲಸ. ಆದ್ದರಿಂದ ವ್ಯವಸ್ಥಿತ ಕ್ರಮದಲ್ಲಿ, ನಾಲಿಗೆಯನ್ನು ಕೃಷ್ಣಾರ್ಪಿತ ನೈವೇದ್ಯ ಶೇಷವನ್ನು ಭುಂಜಿಸುವಲ್ಲಿ ಮತ್ತು ಹರೇ ಕೃಷ್ಣ ಮಂತ್ರ ಕೀರ್ತನೆಯಲ್ಲಿ ತೊಡಗಿಸಬೇಕು. ಕಣ್ಣುಗಳ ಮಟ್ಟಿಗೆ, ಅವು ಕೃಷ್ಣನ ಸುಂದರ ರೂಪವಲ್ಲದೆ ಬೇರೆ ಏನನ್ನೂ ನೋಡದಂತಿರಬೇಕು. ಅದು ದೃಷ್ಟಿಯನ್ನು ನಿಯಂತ್ರಿಸುವುದು. ಅದೇ ಪ್ರಕಾರ, ಕೃಷ್ಣನನ್ನು ಕುರಿತ ಶ್ರವಣದಲ್ಲಿ ಕಿವಿಗಳನ್ನು ತೊಡಗಿಸಬೇಕು ಮತ್ತು ಮೂಗನ್ನು ಕೃಷ್ಣಾರ್ಪಿತ ಪುಷ್ಪ ಆಘ್ರಾಣದಲ್ಲಿ ತೊಡಗಿಸಬೇಕು. ಇದು ಭಕ್ತಿಯುತ ಸೇವಾ ಪ್ರಕ್ರಿಯೆ, ಮತ್ತು ಭಗವದ್ಗೀತೆಯು ಭಕ್ತಿಯೋಗ ವಿದ್ಯೆಯನ್ನು ಪ್ರತಿಪಾದಿಸುತ್ತದೆ ಎಂದು ಇಲ್ಲಿ ಗ್ರಹಿಸಲಾಗಿದೆ. ಭಕ್ತಿಯುತ ಸೇವೆಯು ಪ್ರಧಾನವಾದುದು ಮತ್ತು ಏಕೈಕ ಧ್ಯೇಯವು. ಭಗವದ್ಗೀತೆಯ ಬಗ್ಗೆ ಬುದ್ಧಿಹೀನ ವ್ಯಾಖ್ಯಾನಕಾರರು ವಾಚಕರ ಮನಸ್ಸನ್ನು ಇತರ ವಿಷಯಗಳ ಕಡೆಗೆ ಸೆಳೆಯಲೆತ್ನಿಸುತ್ತಾರೆ, ಆದರೆ ಭಗವದ್ಗೀತೆಯಲ್ಲಿ ಭಕ್ತಿಯೋಗವನ್ನುಳಿದು ಅನ್ಯ ವಿಷಯವೇ ಇಲ್ಲ.

ಮಿಥ್ಯಾಹಂಕಾರ ಎಂದರೆ ಈ ದೇಹವನ್ನು ತಾನೆಂದು ಅಂಗೀಕರಿಸುವುದು. ತಾನು ಈ ದೇಹವಲ್ಲ, ಚೇತನಾತ್ಮ ಎಂದು ಒಬ್ಬನು ಅರಿತುಕೊಂಡಾಗ. ಅವನು ತನ್ನ ನಿಜ ಅಹಂ ಮಟ್ಟಕ್ಕೆ ಬರುತ್ತಾನೆ. ಅಹಂ ಎಂಬುದು ಇದೆ. ಮಿಥ್ಯಾಹಂಕಾರವು ಖಂಡಿಸಲ್ಪಟ್ಟಿದೆ, ಆದರೆ ನಿಜವಾದ ಅಹಂಕಾರವಲ್ಲ. ವೇದ ಸಾಹಿತ್ಯದಲ್ಲಿ (ಬೃಹದ್–ಆರಣ್ಯಕ ಉಪನಿಷದ 1. 4. 10) ಹೀಗೆ ಹೇಳಿದೆ, **ಅಹಂ ಬ್ರಹ್ಮಾಸ್ಮಿ**: ನಾನು ಬ್ರಹ್ಮನ್, ನಾನು ಚೇತನ. ಈ "ನಾನು" ಎಂಬ ಈ ಭಾವವು ಅಹಂಕಾರ, ಆದರೆ "ನಾನು" ಎಂಬ ಭಾವವು ಈ ಮಿಥ್ಯಾ ದೇಹಕ್ಕೆ ಅನ್ವಯಿಸಿದಾಗ ಅದು ಮಿಥ್ಯಾಹಂಕಾರ. ಆತ್ಮ ಭಾವವು ನಿಜ ತತ್ತ್ವಕ್ಕೆ ಅನ್ವಯಿಸಿದಾಗ ಅದು ನಿಜ ಅಹಂಭಾವ. ನಾವು ಅಹಂಭಾವವನ್ನು ತ್ಯಜಿಸಬೇಕು ಎಂದು ಕೆಲವು ತಾತ್ತ್ವಿಕರು ಹೇಳುತ್ತಾರೆ, ಆದರೆ ನಮ್ಮ ಅಹಂಭಾವವನ್ನು ತ್ಯಜಿಸಲಾಗದು, ಏಕೆಂದರೆ ಅಹಂ ಎಂಬುದು ವ್ಯಕ್ತಿತ್ವ. ಆದರೆ, ದೇಹದೊಂದಿಗೆ ಮಿಥ್ಯಾ ವ್ಯಕ್ತಿತ್ವವನ್ನು ತ್ಯಜಿಸಬೇಕು ನಿಜ.

ಜನನ, ಮರಣ, ಮುಪ್ಪು ಮತ್ತು ರೋಗವನ್ನು ಹೊಂದುವುದರ ದುಃಖವನ್ನು ಒಬ್ಬನು ಅರಿತುಕೊಳ್ಳಲೆತ್ನಿಸಬೇಕು. ಜನನದ ಬಗ್ಗೆ ವಿವಿಧ ವೇದ ಸಾಹಿತ್ಯಗಳಲ್ಲಿ ವರ್ಣನೆಗಳಿವೆ. ಶ್ರೀಮದ್ ಭಾಗವತದಲ್ಲಿ ಇನ್ನೂ ಜನನವಾಗದಿರುವ ಲೋಕದ, ತಾಯಿ ಗರ್ಭದಲ್ಲಿರುವ ಮಗುವಿನ ಇರುವಿಕೆ, ಅದರ ಕಷ್ಟ ಇತ್ಯಾದಿಗಳ ವರ್ಣನೆಗಳೆಲ್ಲವೂ ವಿರಳವಿರಳವಾಗಿ ವರ್ಣಿತ. ಜನನವು ದುಃಖಕಾರಕ ಎಂಬುದನ್ನು ಚೆನ್ನಾಗಿ ಅರಿತುಕೊಳ್ಳಬೇಕು. ನಾವು ತಾಯಿಗರ್ಭದಲ್ಲಿ ಅದೆಷ್ಟು ದುಃಖವನ್ನು ಅನುಭವಿಸಿದ್ದೇವೆ ಎಂಬುದನ್ನು ಮರೆತ ಕಾರಣ, ಮತ್ತೆಮತ್ತೆ ಜನನ ಮರಣಗಳು ಉಂಟಾಗದಂತೆ ಯಾವುದೇ ಉಪಾಯವನ್ನು ಮಾಡುತ್ತಿಲ್ಲ. ಅದೇ ಪ್ರಕಾರ ಮರಣ ಕಾಲದಲ್ಲಿಯೂ ಎಲ್ಲ ಬಗೆಯ ದುಃಖಗಳೂ ಇವೆ,

ಮತ್ತು ಅವು ಕೂಡ ಶಾಸ್ತ್ರಗಳಲ್ಲಿ ಪ್ರಸ್ತಾಪಿತ. ಇವುಗಳನ್ನು ಚರ್ಚಿಸಬೇಕು. ಇನ್ನು ರೋಗ ಮತ್ತು ವೃದ್ಧಾಪ್ಯದ ವಿಷಯದಲ್ಲಿ ಪ್ರತಿಯೊಬ್ಬನಿಗೆ ವಾಸ್ತವಿಕ ಅನುಭವ ಬರುತ್ತದೆ. ಯಾರೂ ಕಾಯಿಲೆ ಬಯಸುವುದಿಲ್ಲ ಯಾರೂ ಮುದುಕರಾಗ ಬಯಸುವುದಿಲ್ಲ. ಆದರೆ ಇವುಗಳನ್ನು ತಪ್ಪಿಸಿಕೊಳ್ಳಲಾಗದು. ಜನನ, ಮರಣ, ಮುಪ್ಪು ಮತ್ತು ರೋಗದ ದುಃಖಗಳನ್ನು ಗಮನಿಸಿ, ನಾವು ಭೌತಿಕ ಜೀವನದ ನಿರಾಶಾದೃಷ್ಟಿಯನ್ನು ಹೊಂದದ ಹೊರತು ಆಧ್ಯಾತ್ಮ ಜೀವನದಲ್ಲಿ ಪ್ರಗತಿಗೆ ಪ್ರಯತ್ನಿಸಲು ಯಾವ ಪ್ರಚೋದನೆ ದೊರೆಯದು.

ಹೆಂಡತಿ ಮಕ್ಕಳು ಮನೆಮಠದಿಂದ ಅಸಂಗನಾಗಲು, ಅವರಿಗಾಗಿ ಒಬ್ಬನು ಯಾವ ಭಾವನೆಗಳನ್ನೂ ಹೊಂದಿರಕೂಡದೆಂದು ಅರ್ಥವಲ್ಲ. ಅವು ಪ್ರೀತಿಯ ಸಹಜ ವಸ್ತುಗಳು. ಆದರೆ ಅವು ಅಧ್ಯಾತ್ಮ ಪ್ರಗತಿಗೆ ಅನುಕೂಲವಿಲ್ಲದಾಗ ಒಬ್ಬನು ಅವುಗಳಲ್ಲಿ ಆಸಕ್ತನಾಗಕೂಡದು. ಮನೆಯನ್ನು ಸಂತೋಷವಾಗಿರಿಸಲು ಕೃಷ್ಣಪ್ರಜ್ಞೆಯೇ ಅತ್ಯುತ್ತಮ ಪ್ರಕ್ರಿಯೆ. ಒಬ್ಬನು ಪೂರ್ಣ ಕೃಷ್ಣಪ್ರಜ್ಞೆಯಲ್ಲಿದ್ದರೆ ಅವನು ತನ್ನ ಮನೆಯನ್ನು ಸಂತೋಷವಾಗಿಡಬಹುದು, ಏಕೆಂದರೆ ಈ ಕೃಷ್ಣಪ್ರಜ್ಞೆ ಪ್ರಕ್ರಿಯೆಯು ಬಹು ಸುಲಭವಾದುದು. ಒಬ್ಬನು ಹರೇಕೃಷ್ಣ, ಹರೇಕೃಷ್ಣ, ಕೃಷ್ಣ ಕೃಷ್ಣ, ಹರೇಹರೇ/ಹರೇರಾಮ, ಹರೇರಾಮ, ರಾಮ ರಾಮ, ಹರೇ ಹರೇ ಜಪಿಸಬೇಕು, ಕೃಷ್ಣಾರ್ಪಿತ ನೈವೇದ್ಯ ಶೇಷವನ್ನು ಸ್ವೀಕರಿಸಬೇಕು, ಭಗವದ್ಗೀತೆ ಮತ್ತು ಶ್ರೀಮದ್ ಭಾಗವತದಂಥ ಗ್ರಂಥಗಳ ಬಗ್ಗೆ ಚರ್ಚಿಸಬೇಕು, ಮತ್ತು ತನ್ನನ್ನು ದೇವಪೂಜೆಯಲ್ಲಿ ತೊಡಗಿಸಿಕೊಳ್ಳಬೇಕು ಅಷ್ಟೆ. ಈ ನಾಲ್ಕು ವಿಷಯಗಳು ಒಬ್ಬನನ್ನು ಸುಖಿಗೊಳಿಸುವುವು. ಒಬ್ಬನು ಈ ರೀತಿಯಲ್ಲಿ ತನ್ನ ಕುಟುಂಬವನ್ನು ತರಬೇತಿಗೊಳಿಸಬೇಕು. ಕುಟುಂಬದವರೆಲ್ಲಾ ಬೆಳಗ್ಗೆ ಮತ್ತು ಸಾಯಂಕಾಲ ಒಟ್ಟಾಗಿ ಕುಳಿತು ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ/ಹರೇ ರಾಮ ಹರೇ ರಾಮ, ರಾಮ ರಾಮ, ಹರೇ ಹರೇ, ಎಂದು ಕೀರ್ತನೆ ಮಾಡಬೇಕು. ಈ ನಾಲ್ಕು ತತ್ತ್ವಗಳನ್ನು ಅನುಸರಿಸುತ್ತಾ, ಕೃಷ್ಣಪ್ರಜ್ಞೆಯನ್ನು ಬೆಳೆಸಿಕೊಳ್ಳಲು ಒಬ್ಬನು ತನ್ನ ಕುಟುಂಬ ಜೀವನವನ್ನು ಈ ಪ್ರಕಾರ ಪರಿವರ್ತಿಸಿಕೊಳ್ಳಬಲ್ಲವನಾದರೆ, ಆಗ ಕುಟುಂಬ ಜೀವನದಿಂದ ವಿರಕ್ತ ಜೀವನಕ್ಕೆ ಬದಲಾವಣೆ ಅಗತ್ಯವಿಲ್ಲ. ಅದು ಅನುಕೂಲವಾಗದಿದ್ದರೆ, ಅಧ್ಯಾತ್ಮ ಪ್ರಗತಿಗೆ ಸಾಧಕವಾಗದಿದ್ದರೆ, ಆಗ ಕುಟುಂಬ ಜೀವನವನ್ನು ತ್ಯಜಿಸಬೇಕು. ಅರ್ಜುನನು ಮಾಡಿದಂತೆ ಸಾಕ್ಷಾತ್ಕಾರಕ್ಕಾಗಿ ಅಥವಾ ಕೃಷ್ಣಸೇವೆಗಾಗಿ ಒಬ್ಬನು ಪ್ರತಿಯೊಂದನ್ನೂ ತ್ಯಾಗ ಮಾಡಬೇಕು. ಅರ್ಜುನನು ತನ್ನ ಕುಟುಂಬದವರನ್ನು ಕೊಲ್ಲ ಬಯಸಲಿಲ್ಲ, ಆದರೆ ಆ ಕುಟುಂಬ ವರ್ಗದವರು ತನ್ನ ಕೃಷ್ಣ ಸಾಕ್ಷಾತ್ಕಾರಕ್ಕೆ ಆತಂಕಗಳೆಂದು ಅರಿತುಕೊಂಡಾಗ, ಅವನು ಕೃಷ್ಣೋಪದೇಶಗಳನ್ನು ಅಂಗೀಕರಿಸಿ ಮತ್ತು ಯುದ್ಧ ಮಾಡಿ ಅವರನ್ನು ಕೊಂದನು. ಎಲ್ಲ ಸಂದರ್ಭಗಳಲ್ಲಿಯೂ ಒಬ್ಬನು ಕುಟುಂಬ ಜೀವನದ ಸುಖ ದುಃಖಗಳಿಂದ ಅಸಂಗನಾಗಬೇಕು, ಏಕೆಂದರೆ ಈ ಜಗತ್ತಿನಲ್ಲಿ ಒಬ್ಬನು ಪೂರ್ಣ ಸುಖಿ ಮತ್ತು ಪೂರ್ಣ ದುಃಖಿಯಾಗುವುದು ಎಂದೂ ಸಾಧ್ಯವಿಲ್ಲ.

ಸುಖ ದುಃಖಗಳು ಭೌತಿಕ ಜೀವನದ ಸಹಜ ಪರಿಣಾಮಗಳು. ಭಗವದ್ಗೀತೆಯಲ್ಲಿ ಹೇಳಿದಂತೆ ಅವುಗಳನ್ನು ಸಹಿಸಿಕೊಳ್ಳಲು ಕಲಿಯಬೇಕು. ಸುಖ ದುಃಖಗಳ ಬರುಹೋಗು ವಿಕೆಯನ್ನು ಒಬ್ಬನು ಎಂದೂ ತಡೆಗಟ್ಟಲಾರನು, ಆದ್ದರಿಂದ ಒಬ್ಬನು ಭೌತಿಕ ಜೀವನ ಮಾರ್ಗದಿಂದ ಅಸಂಗನಾಗಬೇಕು ಮತ್ತು ಸ್ವಾಭಾವಿಕವಾಗಿಯೇ ಉಭಯ ಸಂದರ್ಭಗಳಲ್ಲಿ ಸಮಚಿತ್ತನಾಗಬೇಕು. ಸಾಮಾನ್ಯವಾಗಿ, ನಮಗೆ ಇಷ್ಟವಾದುದು ದೊರೆತಾಗ ನಾವು ಸಂತೋಷಗೊಳ್ಳುತ್ತೇವೆ, ಮತ್ತು ನಮಗೆ ಇಷ್ಟವಾಗದ್ದು ದೊರೆತಾಗ ದುಃಖಿಸುತ್ತೇವೆ. ಆದರೆ ನಾವು ವಾಸ್ತವಿಕವಾಗಿ ಅಧ್ಯಾತ್ಮ ಸ್ಥಿತಿಯಲ್ಲಿದ್ದರೆ ಇವು ನಮ್ಮನ್ನು ಉದ್ವಿಗ್ನ ಗೊಳಿಸುವುದಿಲ್ಲ. ಆ ಮಟ್ಟವನ್ನು ತಲುಪಲು ನಾವು ಅಸ್ಖಲಿತ ಭಕ್ತಿಯೋಗವನ್ನಾಚರಿಸ ಬೇಕು. ಒಂಭತ್ತನೆಯ ಅಧ್ಯಾಯದ ಕೊನೆಯ ಶ್ಲೋಕದ ಕೊನೆಯಲ್ಲಿ ವರ್ಣಿಸಿದಂತೆ, ವಿಚಲಿತರಾಗದೆ ಕೃಷ್ಣನಿಗೆ ಭಕ್ತಿಯುತ ಸೇವೆ ಎಂದರೆ ಒಬ್ಬನು ನವವಿಧ ಭಕ್ತಿಯೋಗದಲ್ಲಿ ಕೀರ್ತನ, ಶ್ರವಣ, ಅರ್ಚನ, ವಂದನ, ಇತ್ಯಾದಿ ಸೇವೆಗಳಲ್ಲಿ— ತನ್ನನ್ನು ತೊಡಗಿಸಿ ಕೊಳ್ಳುವುದು. ಆ ಪ್ರಕ್ರಿಯೆಯನ್ನು ಅನುಸರಿಸಬೇಕು.

ಸ್ವಾಭಾವಿಕವಾಗಿ ಒಬ್ಬನು ಅಧ್ಯಾತ್ಮ ಜೀವನ ಮಾರ್ಗಕ್ಕೆ ಹೊಂದಿಕೊಂಡಿದ್ದರೆ ಅವನು ಪ್ರಾಪಂಚಿಕ ಜನರೊಂದಿಗೆ ಬೆರೆಯ ಬಯಸುವುದಿಲ್ಲ ಅದು ಅವನ ಸ್ವಾಭಾವಕ್ಕೆಯೇ ವಿರುದ್ಧವಾಗಿರುತ್ತದೆ, ಒಬ್ಬನು ಅನಪೇಕ್ಷಿತ ಸಂಗರಹಿತನಾಗಿ ಎಷ್ಟೊಂದು ಏಕಾಂತ ಸ್ಥಳದಲ್ಲಿ ತಾನು ಇರಬಯಸುತ್ತಾನೆ ಎಂಬುದನ್ನು ಪರೀಕ್ಷಿಸಿಕೊಳ್ಳಬೇಕು. ಸ್ವಾಭಾವಿಕ ವಾಗಿ ಭಕ್ತನು ಅನವಶ್ಯಕ ಆಟಪಾಠಗಳಲ್ಲಿ ಅಥವಾ ಸಿನಿಮಾ ನೋಡುವುದರಲ್ಲಿ ಅಥವಾ ಯಾವುದೋ ಸಾಮಾಜಿಕ ಕಾರ್ಯಕ್ರಮದಲ್ಲಿ ಅಭಿರುಚಿ ಹೊಂದಿರುವುದಿಲ್ಲ, ಏಕೆಂದರೆ ಇವು ಕೇವಲ ವ್ಯರ್ಥಕಾಲಹರಣ ಎಂಬುದನ್ನು ಅವನು ಅರಿತಿರುತ್ತಾನೆ. ಲೈಂಗಿಕ ಜೀವನ ಅಥವಾ ಇತರ ವಿಷಯವನ್ನು ಅಧ್ಯಯನ ಮಾಡುವ ಅನೇಕ ಸಂಶೋಧಕ ಪಂಡಿತರು ಮತ್ತು ತತ್ತ್ವಜ್ಞಾನಿಗಳು ಇದ್ದಾರೆ, ಆದರೆ ಭಗವದ್ಗೀತಾನುಸಾರ ಅಂಥ ಸಂಶೋಧನ ಕಾರ್ಯ ಅಥವಾ ತಾತ್ವಿಕ ಊಹಾಪೋಹಗಳಿಗೆ ಯಾವ ಬೆಲೆ ಇಲ್ಲ. ಸರಿ ಸುಮಾರು ಅದು ಅರ್ಥಹೀನ. ಭಗವದ್ಗೀತೆಯ ಪ್ರಕಾರ, ಒಬ್ಬನು ತಾತ್ವಿಕ ವಿವೇಚನೆ ಯಿಂದ ಆತ್ಮವನ್ನು ಅರಿಯಲು ಒಬ್ಬನು ಸಂಶೋಧನೆಯನ್ನು ಮಾಡಬೇಕು. ಅದು ಇಲ್ಲಿ ಹೇಳಲ್ಪಟ್ಟಿದೆ.

ಇನ್ನು ಆತ್ಮಸಾಕ್ಷಾತ್ಕಾರದ ವಿಷಯದಲ್ಲಿ, ಭಕ್ತಿಯೋಗವು ವಿಶೇಷವಾಗಿ ಕಾರ್ಯ ಸಾಧ್ಯವಾದುದು ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಭಕ್ತಿಯ ಪ್ರಶ್ನೆ ಬಂದೊಡನೆಯೇ, ಒಬ್ಬನು ಪರಮಾತ್ಮ ಮತ್ತು ವ್ಯಕ್ತಿಗತ ಆತ್ಮನ ನಡುವಿನ ಸಂಬಂಧವನ್ನು ಗಮನಿಸಬೇಕು. ವ್ಯಕ್ತಿಗತ ಆತ್ಮ ಮತ್ತು ಪರಮಾತ್ಮ, ಕನಿಷ್ಠ ಪಕ್ಷ ಭಕ್ತಿ ಕಲ್ಪನೆ, ಭಕ್ತಿಯುತ ಜೀವನ ಕಲ್ಪನೆಯಲ್ಲಾದರೂ ಒಂದೇ ಆಗಿರಲಾರರು. ಪರಮಾತ್ಮನಿಗೆ ಜೀವಾತ್ಮನ ಈ ಸೇವೆಯು ಸ್ಪಷ್ಟವಾಗಿ ಹೇಳಿದಂತೆ ನಿತ್ಯವಾದುದು. ಆದ್ದರಿಂದ ಭಕ್ತಿ ಅಥವಾ ಭಕ್ತಿಯುತ ಸೇವೆಯು ಶಾಶ್ವತ. ಒಬ್ಬನು ಆ ತಾತ್ವಿಕ ಶ್ರದ್ಧೆಯಲ್ಲಿ ಪ್ರತಿಷ್ಠಿತನಾಗಬೇಕು.

ಶ್ರೀಮದ್ ಭಾಗವತದಲ್ಲಿ (1. 2. 11) ಇದು ವಿವರಿಸಲ್ಪಟ್ಟಿದೆ. **ವದನ್ತಿ ತತ್ ತತ್ತ್ವವಿದಸ್ ತತ್ತ್ವಂ ಯಜ್ ಜ್ಞಾನಮ್ ಅದ್ವಯಮ್:** "ವಾಸ್ತವಿಕವಾಗಿ ಪರತತ್ತ್ವವನ್ನು ತಿಳಿದವರು ಆತ್ಮನು ಮೂರು ಭಿನ್ನ ಭಿನ್ನ ಹಂತಗಳಲ್ಲಿ— ಎಂದರೆ, ಬ್ರಹ್ಮನ್, ಪರಮಾತ್ಮ ಮತ್ತು ಭಗವಾನ್ ಹಂತಗಳಲ್ಲಿ ಸಾಕ್ಷಾತ್ಕರಿಸಲ್ಪಡುತ್ತಾನೆ ಎಂದು ಅರಿತಿರುತ್ತಾರೆ". ಪರತತ್ತ್ವ ಸಾಕ್ಷಾತ್ಕಾರದಲ್ಲಿ ಭಗವಾನ್ ಎಂಬುದು ಕೊನೆಯ ಮಾತು ; ಆದ್ದರಿಂದ ಒಬ್ಬನು ಪರಮ ದೇವೋತ್ತಮ ಪುರುಷನನ್ನು ಅರಿಯುವ ಆ ವೇದಿಕೆಯನ್ನು ತಲುಪಬೇಕು ಮತ್ತು ಹೀಗೆ ಭಗವದ್ ಭಕ್ತಿಯುತ ಸೇವೆಯಲ್ಲಿ ನಿರತನಾಗಬೇಕು. ಅದೇ, ಜ್ಞಾನದ ಪರಿಪೂರ್ಣತೆ.

ವಿನಯದಿಂದ ಆರಂಭವಾಗಿ ಪರಮತತ್ತ್ವದ, ಪರಾತ್ಪರ ದೇವೋತ್ತಮ ಪುರುಷನ ಸಾಕ್ಷಾತ್ಕಾರದ ಮಟ್ಟದವರೆಗೆ ಈ ಪ್ರಕ್ರಿಯೆಯು ನೆಲಮಾಳಿಗೆಯಿಂದ ಆರಂಭಮಾಡಿ ತುದಿಯ ಮಹಡಿಯವರೆಗೆ ಏರುವ ಮೆಟ್ಟಿಲು ಇದ್ದಂತೆ. ಈಗ ಈ ಏಣಿಯಲ್ಲಿ ಮೊದಲನೆಯ ಮಹಡಿ, ಎರಡನೆಯ ಮಹಡಿ ಅಥವಾ ಮೂರನೆಯ ಮಹಡಿ ಇತ್ಯಾದಿಗಳನ್ನು ತಲುಪಿದವರು ಅನೇಕರಿದ್ದಾರೆ. ಆದರೆ ಒಬ್ಬನು ಕೃಷ್ಣನನ್ನು ಅರಿಯುವ ತುತ್ತತುದಿಯ ಮಹಡಿ ತಲುಪದ ಹೊರತು, ಅವನು ಜ್ಞಾನದ ಕೆಳಮಟ್ಟದಲ್ಲಿರುತ್ತಾನೆ. ಒಬ್ಬನು ದೇವರೊಂದಿಗೆ ಸ್ಪರ್ಧಿಸಬಯಸಿ, ಜೊತೆಗೆ ಆಧ್ಯಾತ್ಮ ಜ್ಞಾನದಲ್ಲಿ ಸಾಧನೆಮಾಡಬಯಸಿದರೆ, ಅವನು ಹತಾಶನಾಗುವನು, ವಿನೀತಭಾವವಿಲ್ಲದೆ, ನಿಜವಾಗಿ ಅರಿವು ಸಾಧ್ಯವಿಲ್ಲ ಎಂದು ಸ್ಪಷ್ಟವಾಗಿ ಹೇಳಿದೆ. ತಾನೇ ದೇವರೆಂದು ತಿಳಿಯುವುದು ಅತ್ಯಂತ ಅಹಂಕಾರ. ಜೀವಿಯು ಸದಾ ಕಠೋರ ಭೌತಿಕ ಪ್ರಕೃತಿ ನಿಯಮಗಳಿಂದ ಒದೆ ಪಡೆಯುತ್ತಿದ್ದರೂ ಅವನು ಇನ್ನೂ ಅಜ್ಞಾನ ನಿಮಿತ್ತ "ನಾನೇ ದೇವರು" ಎಂದು ತಿಳಿಯುತ್ತಾನೆ. ಆದ್ದರಿಂದ ಜ್ಞಾನದ ಆರಂಭ ಎಂದರೆ ಅಮಾನಿತ್ವ, ವಿನಯ. ಒಬ್ಬನು ವಿನೀತನಾಗಬೇಕು ಮತ್ತು ತಾನು ಪರಮ ಪ್ರಭುವಿಗೆ ಅಧೀನನೆಂದು ತಿಳಿಯಬೇಕು. ಪರಮ ಪ್ರಭುವಿನ ವಿರುದ್ಧ ವಿದ್ರೋಹದಿಂದ ಒಬ್ಬನು ಭೌತಿಕ ಪ್ರಕೃತಿಗೆ ಆಳಾಗುತ್ತಾನೆ. ಒಬ್ಬನು ಈ ತತ್ತ್ವವನ್ನು ತಿಳಿಯಬೇಕು ಮತ್ತು ಅದರಲ್ಲಿ ನಂಬಿಕೆ ಹೊಂದಬೇಕು.

**ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಮೃತಮಶ್ನುತೇ ।**
**ಅನಾದಿ ಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥೧೩॥**

ಜ್ಞೇಯಮ್—ಜ್ಞೇಯವು, ಯತ್—ಯಾವುದು, ತತ್—ಅದನ್ನು, ಪ್ರವಕ್ಷ್ಯಾಮಿ—ಈಗ ವಿವರಿಸುತ್ತೇನೆ, ಯತ್—ಯಾವುದನ್ನು, ಜ್ಞಾತ್ವಾ—ತಿಳಿದು, ಅಮೃತಮ್—ಅಮೃತವನ್ನು, ಅಶ್ನುತೇ—ಒಬ್ಬನು ಆಸ್ವಾದಿಸುತ್ತಾನೆ, ಅನಾದಿ—ಆದಿರಹಿತ, ಮತ್-ಪರಮ—ನನಗೆ ಅಧೀನ, ಬ್ರಹ್ಮ—ಚೇತನ, ನ—ಅಥವಾ, ಸತ್—ಕಾರಣ, ತತ್—ಅದು, ನ—ಅಲ್ಲ, ಅಸತ್—ಪರಿಣಾಮ, ಉಚ್ಯತೇ—ಎಂದು ಹೇಳಲ್ಪಡುತ್ತದೆ.

**ಈಗ ನಾನು ಜ್ಞೇಯವನ್ನು ವಿವರಿಸುತ್ತೇನೆ, ಅದನ್ನು ತಿಳಿದು ನೀನು ನಿತ್ಯ ವಸ್ತುವನ್ನು ಆಸ್ವಾದಿಸುವೆ. ಬ್ರಹ್ಮನ್, ಚೇತನವು, ಅನಾದಿ ಮತ್ತು ನನಗೆ ಅಧೀನ ವಾಗಿದ್ದು, ಈ ಭೌತಿಕ ಜಗತ್ತಿನ ಕಾರಣ ಕಾರ್ಯಕ್ಕೆ ಅತೀತ.**

**ಭಾವಾರ್ಥ :** ಭಗವಂತನು ಕಾರ್ಯಕ್ಷೇತ್ರ ಮತ್ತು ಕ್ಷೇತ್ರಜ್ಞನನ್ನು ವಿವರಿಸಿದ್ದಾನೆ. ಅವನು ಕ್ಷೇತ್ರಜ್ಞನನ್ನು ಕುರಿತು ತಿಳಿಯುವ ಪ್ರಕ್ರಿಯೆಯನ್ನು ಕೂಡ ವಿವರಿಸಿದ್ದಾನೆ. ಈಗ ಜ್ಞೇಯವನ್ನು, ಮೊದಲು ಆತ್ಮ ಮತ್ತು ಆಮೇಲೆ ಪರಮಾತ್ಮನನ್ನು ಕುರಿತು ವಿವರಿಸಲು ಪ್ರಾರಂಭಿಸುತ್ತಾನೆ. ಕ್ಷೇತ್ರಜ್ಞನ ಜ್ಞಾನ, ಆತ್ಮ ಮತ್ತು ಪರಮಾತ್ಮ ಇಬ್ಬರ ಜ್ಞಾನದಿಂದ, ಒಬ್ಬನು ಜೀವನಾಮೃತವನ್ನು ಸವಿಯಬಹುದು. ಎರಡನೆಯ ಅಧ್ಯಾಯದಲ್ಲಿ ಹೇಳಿದಂತೆ, ಜೀವಿಯು ನಿತ್ಯ. ಇದೂ ಕೂಡ ಇಲ್ಲಿ ಧೃಢಪಟ್ಟಿದೆ. ಜೀವನು ಹುಟ್ಟಿದ ವಿಶಿಷ್ಟ ದಿನ ಎಂಬುದಿಲ್ಲ. ಅಥವಾ ಪರಮ ಪ್ರಭುವಿನಿಂದ ಜೀವಾತ್ಮನ ಉದ್ಭೂತಿಯ ಇತಿಹಾಸವನ್ನು ಯಾರೂ ಗುರುತಿಸಲಾರರು. ಆದ್ದರಿಂದ ಅದು ಅನಾದಿ. ವೇದ ಸಾಹಿತ್ಯವು ಇದನ್ನು ದೃಢಪಡಿಸುತ್ತದೆ : **ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್** (ಕಠ ಉಪನಿಷದ್ 2. 18) ಕ್ಷೇತ್ರಜ್ಞನು ಎಂದೂ ಹುಟ್ಟುವುದಿಲ್ಲ, ಎಂದೂ ಸಾಯುವುದಿಲ್ಲ. ಮತ್ತು ಅವನು ಜ್ಞಾನಪೂರ್ಣನು.

ಪರಮಪ್ರಭುವು, ಪರಮಾತ್ಮನಾಗಿ, ದೇಹದ ಪ್ರಧಾನ ಕ್ಷೇತ್ರಜ್ಞ ಮತ್ತು ಭೌತಿಕ ಪ್ರಕೃತಿಯ ತ್ರಿಗುಣಗಳ ಸ್ವಾಮಿ, **ಪ್ರಧಾನ-ಕ್ಷೇತ್ರಜ್ಞ-ಪತಿರ್ ಗುಣೇಶಃ** ಎಂದು ವೇದ ಸಾಹಿತ್ಯದಲ್ಲಿ(ಶ್ವೇತಾಶ್ವತರ ಉಪನಿಷದ್.6-16) ಹೇಳಲ್ಪಟ್ಟಿದ್ದಾನೆ. ಸ್ಮೃತಿಯಲ್ಲಿ ಹೀಗೆ ಹೇಳಿದೆ : **ದಾಸ-ಭೂತೋ ಹರೇರ್ ಏವ ನಾನ್ಯಸ್ಯೈವ ಕದಾಚನ**— ಜೀವಿಗಳು ಶಾಶ್ವತವಾಗಿ ಪರಮಪ್ರಭುವಿನ ಸೇವಾನಿರತರು. ಇದು ಕೂಡ ಅವರ ಉಪದೇಶಗಳಲ್ಲಿ ಶ್ರೀಚೈತನ್ಯರಿಂದ ದೃಢಪಟ್ಟಿದೆ. ಆದ್ದರಿಂದ ಈ ಶ್ಲೋಕದಲ್ಲಿ ಪ್ರಸ್ತಾಪಿತ ಬ್ರಹ್ಮನ್ ವರ್ಣನೆಯು ಜೀವಾತ್ಮನ ಸಂಬಂಧದಲ್ಲಿ ಇದೆ, ಮತ್ತು ಬ್ರಹ್ಮನ್ ಪದವು ಜೀವಾತ್ಮನಿಗೆ ಅನ್ವಯಿಸಿದಾಗ, ಅವನು ಆನಂದ-ಬ್ರಹ್ಮನಿಗೆ ವ್ಯತಿರಿಕ್ತನಾದ ವಿಜ್ಞಾನ-ಬ್ರಹ್ಮ ಎಂದು ಅರಿತುಕೊಳ್ಳಬೇಕು. ಆನಂದ-ಬ್ರಹ್ಮನು ದೇವೋತ್ತಮ ಪುರುಷನಾದ ಪರಬ್ರಹ್ಮನು.

**ಸರ್ವತಃ ಪಾಣಿಪಾದಂ ತತ್ ಸರ್ವತೋಽಕ್ಷಿಶಿರೋಮುಖಮ್ ।**
**ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥೧೪॥**

ಸರ್ವತಃ—ಎಲ್ಲ ಕಡೆಯಲ್ಲಿ, ಪಾಣಿ—ಕೈಗಳು, ಪಾದಮ್—ಪಾದಗಳು, ತತ್—ಆ, ಸರ್ವತಃ—ಎಲ್ಲ ಕಡೆಯಲ್ಲಿ, ಅಕ್ಷಿ—ಕಣ್ಣುಗಳು, ಶಿರಃ—ತಲೆಗಳು, ಮುಖಮ್—ಮುಖಗಳು, ಸರ್ವತಃ—ಎಲ್ಲ ಕಡೆಯಲ್ಲಿ, ಶ್ರುತಿಮತ್—ಕಿವಿಗಳುಳ್ಳ, ಲೋಕೇ—ಜಗತ್ತಿನಲ್ಲಿ ಸರ್ವಮ್—ಎಲ್ಲವನ್ನು, ಆವೃತ್ಯ—ಆವರಿಸಿ, ತಿಷ್ಠತಿ—ಇರುತ್ತದೆ.

**ಪ್ರತಿಯೊಂದು ಕಡೆಯಲ್ಲಿ ಅವನ ಕೈಗಳು, ಮತ್ತು ಕಾಲುಗಳು, ಅವನ ಕಣ್ಣುಗಳು, ಶಿರಸ್ಸುಗಳು, ಮತ್ತು ಮುಖಗಳು ಇವೆ, ಮತ್ತು ಪ್ರತಿಯೊಂದು ಕಡೆ**

**ಯಲ್ಲಿಯೂ ಅವನ ಕಿವಿಗಳಿವೆ. ಹೀಗೆ ಪರಮಾತ್ಮನು ಪ್ರತಿಯೊಂದನ್ನೂ ವ್ಯಾಪಿಸಿದ್ದಾನೆ.**

**ಭಾವಾರ್ಥ :** ಸೂರ್ಯನು ತನ್ನ ಅಪರಿಮಿತ ಕಿರಣಗಳನ್ನು ಪ್ರಸರಿಸುವಂತೆ, ಪರಮಾತ್ಮನು ಅಥವಾ ಪರಮ ದೇವೋತ್ತಮ ಪುರುಷನೂ ಇರುತ್ತಾನೆ. ಅವನು ತನ್ನ ಸರ್ವವ್ಯಾಪ್ತ ರೂಪದಲ್ಲಿರುತ್ತಾನೆ, ಮತ್ತು ಅವನಲ್ಲಿ ಪ್ರಥಮ ಮಹಾಗುರು ಬ್ರಹ್ಮನಿಂದ ಆರಂಭಿಸಿ ಚಿಕ್ಕ ಇರುವೆಯುವರೆಗೆ ಸಕಲ ಜೀವಿಗಳು ಇರುತ್ತಾರೆ. ಅಪರಿಮಿತ ಶಿರಸ್ಸುಗಳು, ಪಾದಗಳು, ಪಾಣಿಗಳು ಮತ್ತು ಕಣ್ಣುಗಳು ಮತ್ತು ಅಪರಿಮಿತ ಜೀವಿಗಳಿದ್ದಾರೆ. ಎಲ್ಲರೂ ಪರಮಾತ್ಮನಲ್ಲಿದ್ದಾರೆ ಮತ್ತು ಅವನನ್ನು ಆಶ್ರಯಿಸಿದ್ದಾರೆ. ಆದ್ದರಿಂದ ಪರಮಾತ್ಮನು ಸರ್ವತ್ರವ್ಯಾಪ್ತನು, ಆದರೆ ವ್ಯಕ್ತಿಗತ ಆತ್ಮನು, ತನ್ನ ಕೈಗಳು, ಕಾಲುಗಳು ಮತ್ತು ಕಣ್ಣುಗಳು ಪ್ರತಿಯೊಂದು ಕಡೆಯಲ್ಲಿ ಇವೆ ಎಂದು ಹೇಳಲಾರನು. ಅದು ಅಸಂಭವ. ಅಜ್ಞಾನಕ್ಕೊಳಪಟ್ಟು ತನ್ನ ಕೈಕಾಲುಗಳು ಎಲ್ಲ ಕಡೆಯಲ್ಲಿ ಪ್ರಸರಿಸಿವೆ ಎಂಬ ಪ್ರಜ್ಞೆ ತನಗೆ ಇಲ್ಲ, ಆದರೆ, ತಕ್ಕ ಜ್ಞಾನ ಪ್ರಾಪ್ತಿಯ ಬಳಿಕ ಅವನು ಆ ಮಟ್ಟಕ್ಕೆ ಬರುವನು ಎಂದು ಅವನು ಭಾವಿಸುವುದಾದರೆ, ಅವನ ಆ ಭಾವನೆಯು ಪರಸ್ಪರ ವಿರೋಧ. ಇದೇನೆಂದರೆ, ಭೌತಿಕ ಪ್ರಕೃತಿಯಿಂದ ಬದ್ಧನಾದ ವ್ಯಕ್ತಿಗತ ಆತ್ಮನು ಪರಮನಲ್ಲ. ಪರಮನು ವ್ಯಕ್ತಿಗತ ಆತ್ಮನಿಂದ ಭಿನ್ನನು. ಪರಮ ಪ್ರಭುವು ಪರಿಮಿತಿ ಇಲ್ಲದೆ ತನ್ನ ಕೈಗಳನ್ನು ಚಾಚಬಲ್ಲನು; ವ್ಯಕ್ತಿಗತ ಆತ್ಮನಿಗೆ ಅಸಾಧ್ಯ. ಒಬ್ಬನು ತನಗೆ ಪುಷ್ಪ ಅಥವಾ ಫಲ, ಅಥವಾ ಕಿಂಚಿತ್ ತೋಯ (ನೀರು) ಅರ್ಪಿಸಿದರೆ ಅದನ್ನು ಅವನು ಸ್ವೀಕರಿಸುವೆನೆಂದು ಭಗವಂತನು ಭಗವದ್ಗೀತೆಯಲ್ಲಿ ಹೇಳುತ್ತಾನೆ. ಭಗವಂತನು ಬಹು ದೂರ ಇದ್ದರೆ, ಅವನು ವಸ್ತುಗಳನ್ನು ಹೇಗೆ ಸ್ವೀಕರಿಸಬಲ್ಲನು ? ಇದೇ ಭಗವಂತನ ಸರ್ವಶಕ್ತಿತ್ವ : ಅವನು ಭೂಮಂಡಲದಿಂದ, ದೂರ, ಬಹುದೂರ ತನ್ನ ನಿಜಧಾಮದಲ್ಲಿ ಇದ್ದರೂ ಕೂಡ, ಒಬ್ಬನು ಅರ್ಪಿಸಿದ್ದನ್ನು ಸ್ವೀಕರಿಸಲು ತನ್ನ ಕೈ ಚಾಚಬಲ್ಲನು. ಅದು ಅವನ ಶಕ್ತಿ. ಬ್ರಹ್ಮ-ಸಂಹಿತೆಯಲ್ಲಿ (5.37) ಹೀಗೆ ಹೇಳಿದೆ, **ಗೋಲೋಕ ಏವ ನಿವಸತಿ ಅಖಿಲಾತ್ಮ-ಭೂತಃ** ಅವನು ಸದಾ ತನ್ನ ದಿವ್ಯಲೋಕದಲ್ಲಿ ಲೀಲಾನಿರತನಾಗಿದ್ದರೂ, ಅವನು ಸರ್ವ-ವ್ಯಾಪ್ತ. ತಾನು ಸರ್ವವ್ಯಾಪ್ತನೆಂದು ವ್ಯಕ್ತಿಗತ ಆತ್ಮನು ಹೇಳಲಾರನು. ಆದ್ದರಿಂದ ಈ ಶ್ಲೋಕವು ಪರಮ ಆತ್ಮನನ್ನು, ದೇವೋತ್ತಮ ಪುರುಷನನ್ನು, ಕುರಿತು ವರ್ಣಿಸುವುದೇ ಹೊರತು, ವ್ಯಕ್ತಿಗತ ಆತ್ಮನನ್ನಲ್ಲ.

**ಸರ್ವೇಂದ್ರಿಯ ಗುಣಾಭಾಸಂ ಸರ್ವೇಂದ್ರಿಯ ವಿವರ್ಜಿತಮ್ ।**
**ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ ॥ ೧೫ ॥**

ಸರ್ವ—ಎಲ್ಲರ, ಇಂದ್ರಿಯ—ಇಂದ್ರಿಯಗಳು, ಗುಣ—ಗುಣಗಳು, ಆಭಾಸಮ್—ಮೂಲ ಸ್ರೋತವು, ಸರ್ವ—ಎಲ್ಲ, ಇಂದ್ರಿಯ—ಇಂದ್ರಿಯಗಳು, ವಿವರ್ಜಿತಮ್—ರಹಿತನು, ಅಸಕ್ತಮ್—ಸಂಗರಹಿತನು, ಸರ್ವ-ಭೃತ್—ಪ್ರತಿಯೊಬ್ಬರ ಪಾಲಕನು, ಚ—ಮತ್ತು, ಏವ—ಖಂಡಿತವಾಗಿ, **ನಿರ್ಗುಣಮ್—ಭೌತಿಕ ಗುಣರಹಿತನು, ಗುಣ-ಭೋಕ್ತೃ—ಗುಣಗಳ ಸ್ವಾಮಿ, ಚ—ಕೂಡ.**

**ಪರಮಾತ್ಮನು ಸಕಲೇಂದ್ರಿಯಗಳ ಮೂಲ ಸ್ರೋತನು, ಆದರೂ ಅವನಿಗೆ ಇಂದ್ರಿಯಗಳಿಲ್ಲ, ಅವನು ಸಕಲ ಜೀವಿಗಳ ಪಾಲಕನಾಗಿದ್ದರೂ, ಅವನುಅಸಂಗಿ. ಅವನು ಪ್ರಕೃತಿ ಗುಣಗಳಿಗೆ ಅತೀತನು, ಮತ್ತು ಅದೇ ಕಾಲದಲ್ಲಿ ಅವನು ಸಕಲ ಭೌತಿಕ ಪ್ರಕೃತಿ ಗುಣಗಳ ಸ್ವಾಮಿ.**

**ಭಾವಾರ್ಥ:** ಪರಮ ಪ್ರಭುವು ಜೀವಿಗಳ ಸಕಲೇಂದ್ರಿಯಗಳ ಆಕರನಾಗಿದ್ದರೂ, ಅವರು ಹೊಂದಿರುವಂತೆ ಭೌತಿಕ ಇಂದ್ರಿಯಗಳನ್ನು ಹೊಂದಿಲ್ಲ. ವಾಸ್ತವಿಕವಾಗಿ, ವ್ಯಕ್ತಿಗತ ಆತ್ಮರಿಗೆ ಆಧ್ಯಾತ್ಮ ಇಂದ್ರಿಯಗಳಿವೆ, ಆದರೆ ಬದ್ಧಜೀವನದಲ್ಲಿ ಅವು ಭೌತಿಕ ಅಂಶಗಳಿಂದ ಆವೃತ, ಆದ್ದರಿಂದ ಇಂದ್ರಿಯ ಚಟುವಟಿಕೆಗಳು ಪ್ರಕೃತಿಯ (ಜಡ) ಮೂಲಕ ವ್ಯಕ್ತ ವಾಗುತ್ತವೆ. ಪರಮ ಪ್ರಭುವಿನ ಇಂದ್ರಿಯಗಳು ಹಾಗೆ ಆವೃತವಾಗಿಲ್ಲ. ಅವನ ಇಂದ್ರಿಯಗಳು **ದಿವ್ಯ**, ಆದ್ದರಿಂದ **ನಿರ್ಗುಣ** ಎಂದು ಕರೆದಿದೆ. ಗುಣ ಎಂದರೆ ಭೌತಿಕ ಗುಣಗಳು, ಆದರೆ ಅವನ ಇಂದ್ರಿಯಗಳು ಭೌತಿಕವಾಗಿ ಆವರಣ ರಹಿತ. ಅವನ ಇಂದ್ರಿಯಗಳು ನಮ್ಮ ಇಂದ್ರಿಯಗಳಂತೆಯೇ ಅಲ್ಲ ಎಂಬುದನ್ನು ಅರಿತಿರಬೇಕು. ಅವನು ನಮ್ಮ ಎಲ್ಲ ಇಂದ್ರಿಯ ಚಟುವಟಿಕೆಗಳ ಮೂಲನಾಗಿದ್ದರೂ ಅವನಿಗೆ ಕಲುಷರಹಿತವಾದ ದಿವ್ಯೇಂದ್ರಿಯಗಳಿವೆ. ಇದು ಶ್ವೇತಾಶ್ವತರ ಉಪನಿಷತ್ತಿನಲ್ಲಿ (3.19) **ಅಪಾಣಿ-ಪಾದೋ ಜವನೋ ಗ್ರಹೀತಾ** ಎಂಬ ಈ ಶ್ಲೋಕದಲ್ಲಿ ಬಹು ಸೊಗಸಾಗಿ ವಿವರಿಸಲ್ಪಟ್ಟಿದೆ. ಪರಮ ದೇವೋತ್ತಮ ಪುರುಷನು ಭೌತಿಕವಾದ ಕಲುಷಿತ ಕೈಗಳನ್ನು ಹೊಂದಿಲ್ಲ, ಆದರೆ ಅವನಿಗೆ ಕೈಗಳಿವೆ ಮತ್ತು ಅವನಿಗೆ ಅರ್ಪಿಸಿದ್ದನ್ನು ಸ್ವೀಕರಿಸುತ್ತಾನೆ. ಇದೇ ಜೀವಾತ್ಮನ ಮತ್ತು ಪರಮಾತ್ಮನ ನಡುವಿನ ವ್ಯತ್ಯಾಸ. ಅವನಿಗೆ ಭೌತಿಕ ಕಣ್ಣುಗಳಿಲ್ಲ, ಆದರೆ ಅವನಿಗೆ ಕಣ್ಣುಗಳಿವೆ—ಅನ್ಯಥಾ ಅವನು ಹೇಗೆ ನೋಡಬಲ್ಲನು ? ಅವನು ಭೂತ, ವರ್ತಮಾನ ಮತ್ತು ಭವಿಷ್ಯ ಪ್ರತಿಯೊಂದನ್ನು ನೋಡುತ್ತಾನೆ. ಅವನು ಜೀವಿಯ ಹೃದಯದಲ್ಲಿ ಇದ್ದಾನೆ ಮತ್ತು ನಾವು ಹಿಂದೆ ಏನು ಮಾಡಿದ್ದೇವೆ, ಈಗ ಏನು ಮಾಡುತ್ತಿದ್ದೇವೆ, ಮತ್ತು ಮುಂದೆ ಏನು ಮಾಡುತ್ತೇವೆ ಮತ್ತು ಭವಿಷ್ಯತ್ತಿನಲ್ಲಿ ನಮಗೆ ಏನು ಕಾದಿದೆ ಎಂಬುದು ಅವನಿಗೆ ತಿಳಿದಿದೆ. ಇದೂ ಕೂಡ ಭಗವದ್ಗೀತೆಯಲ್ಲಿ ದೃಢಪಟ್ಟಿದೆ : ಅವನು ಪ್ರತಿಯೊಂದನ್ನೂ ತಿಳಿದಿದ್ದಾನೆ ಆದರೆ ಅವನನ್ನು ಯಾರೂ ತಿಳಿದಿಲ್ಲ, ಪರಮಪ್ರಭು ನಮ್ಮಂಥ ಪಾದಗಳನ್ನು ಹೊಂದಿಲ್ಲ, ಆದರೆ ಅವನು ಆಧ್ಯಾತ್ಮ (ದೈವೀ) ಪಾದಗಳನ್ನು ಹೊಂದಿರುವುದರಿಂದ ಅವನು ಅಂತರಿಕ್ಷದಲ್ಲೆಲ್ಲ ಸಂಚರಿಸಬಲ್ಲನು. ಅರ್ಥಾತ್, ಭಗ ವಂತನು ವ್ಯಕ್ತಿಶೂನ್ಯನಲ್ಲ; ಅವನಿಗೆ ಅವನ ಕಣ್ಣುಗಳು, ಕಾಲುಗಳು, ಕೈಗಳು, ಮತ್ತು ಪ್ರತಿಯೊಂದೂ ಇವೆ ಮತ್ತು ನಾವು ಪರಮ ಪ್ರಭುವಿನ ವಿಭಿನ್ನಾಂಶರಾದುದರಿಂದ, ನಮಗೂ ಇವೆಲ್ಲವೂ ಇವೆ. ಆದರೆ ಅವನ ಕೈಗಳು, ಕಾಲುಗಳು, ಕಣ್ಣುಗಳು ಮತ್ತು ಇಂದ್ರಿಯಗಳು ಭೌತಿಕ ಪ್ರಕೃತಿಯಿಂದ ಕಲುಷಿತವಲ್ಲ.

ಭಗವಂತನು ಆವಿರ್ಭವಿಸುವಾಗ ಅವನು ತನ್ನ ಅಂತರಂಗ ಶಕ್ತಿಯಿಂದ ಯಥಾರೂಪ ಆವಿರ್ಭವಿಸುತ್ತಾನೆ ಎಂಬುದನ್ನು ಕೂಡ ಭಗವದ್ಗೀತೆಯು ದೃಢಪಡಿಸುತ್ತದೆ. ಅವನು

ಭೌತಿಕ ಶಕ್ತಿಯಿಂದ ಕಲುಷಿತನಲ್ಲ, ಏಕೆಂದರೆ ಅವನೇ ಭೌತಿಕ ಶಕ್ತಿಯ ಪ್ರಭು. ಅವನ ಇಡೀ ದೇಹವು ಆಧ್ಯಾತ್ಮಿಕವೆಂದು ವೇದಸಾಹಿತ್ಯದಲ್ಲಿ ಕಾಣುತ್ತೇವೆ. ಅವನಿಗೆ ಸಚ್ಚಿದಾನಂದ ವಿಗ್ರಹ ಎಂಬ ನಿತ್ಯರೂಪವಿದೆ. ಅವನು ಸಕಲೈಶ್ವರ್ಯಪೂರ್ಣನು. ಅವನು ಸಕಲ ಸಂಪತ್ತಿನ ಸ್ವಾಮಿ, ಸಕಲ ಶಕ್ತಿಯ ಒಡೆಯ. ಅವನು ಅತ್ಯಂತ ಬುದ್ಧಿಶಾಲಿ ಮತ್ತು ಜ್ಞಾನಪೂರ್ಣನು. ಇವು ಕೆಲವು ಪರಮ ದೇವೋತ್ತಮ ಪುರುಷನ ಲಕ್ಷಣಗಳು. ಅವನು ಸಕಲ ಜೀವಿಗಳ ಪಾಲಕನು ಮತ್ತು ಸಕಲ ಚಟುವಟಿಕೆಯ ಸಾಕ್ಷಿ. ವೇದಸಾಹಿತ್ಯದಿಂದ ನಾವು ಅರಿತುಕೊಳ್ಳಬಹುದಾದ ಮಟ್ಟಿಗೆ, ಪರಮ ಪ್ರಭು ಸದಾ ದಿವ್ಯನು. ನಾವು ಅವನ ಶಿರಸ್ಸು, ಮುಖ, ಕೈ ಅಥವಾ ಕಾಲುಗಳನ್ನು ಕಾಣುವುದಿಲ್ಲವಾದರೂ ಅವನಿಗೆ ಅವೆಲ್ಲವೂ ಇವೆ, ಮತ್ತು ನಾವು ದಿವ್ಯ ಪದಕ್ಕೆ ಉನ್ನತಿಸಿದಾಗ ಭಗವದ್ರೂಪವನ್ನು ಕಾಣಬಹುದು. ಭೌತಿಕವಾಗಿ ಕಲುಷಿತ ಇಂದ್ರಿಯಗಳ ನಿಮಿತ್ತ ನಾವು ಅವನ ರೂಪವನ್ನು ಕಾಣಲಾರೆವು. ಆದ್ದರಿಂದ, ಇನ್ನೂ, ಭೌತಿಕವಾಗಿ ಬಾಧಿತರಾಗಿರುವ ವ್ಯಕ್ತಿಶೂನ್ಯವಾದಿಗಳು, ದೇವೋತ್ತಮ ಪುರುಷನನ್ನು ಅರಿತುಕೊಳ್ಳಲಾರರು.

**ಬಹಿರಂತಶ್ಚ ಭೂತಾನಾಮಚರಂ ಚರಮೇವ ಚ ।**
**ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾಂತಿಕೇಚ ತತ್ ॥ ೧೬ ॥**

ಬಹಿಃ—ಹೊರಗೆ, ಅಂತಃ—ಒಳಗೆ, ಚ—ಕೂಡ, ಭೂತಾನಾಮ್—ಎಲ್ಲ ಜೀವಿಗಳ, ಅಚರಮ್—ಚಲಿಸದ, ಚರಮ್—ಚಲಿಸುವ, ಏವ—ಕೂಡ, ಚ—ಮತ್ತು, ಸೂಕ್ಷ್ಮತ್ವಾತ್—ಸೂಕ್ಷ್ಮವಾದ್ದರಿಂದ, ತತ್—ಅದು,, ಅವಿಜ್ಞೇಯಮ್—ತಿಳಿಯಲಾಗದ್ದು, ದೂರ-ಸ್ಥಮ್—ಬಹುದೂರ, ಚ—ಕೂಡ, ಅಂತಿಕೇ—ಸಮೀಪ, ಚ—ಮತ್ತು, ತತ್—ಅದು.

**ಪರಮತತ್ತ್ವನು ಚಲಿಸುವ ಮತ್ತು ಚಲಿಸದ ಸಕಲ ಜೀವಿಗಳ ಹೊರಗೂ ಒಳಗೂ ಇರುತ್ತಾನೆ. ಅವನು ಸೂಕ್ಷ್ಮನಾದ್ದರಿಂದ, ಅವನು ನೋಡುವ ಅಥವಾ ತಿಳಿಯುವ ಭೌತಿಕ ಇಂದ್ರಿಯಗಳ ಶಕ್ತಿಗೆ ಅತೀತನು. ದೂರ, ಬಹು ದೂರ ವಿದ್ದರೂ, ಅವನು ಸಕಲರಿಗೂ ಸಮೀಪನು ಕೂಡ.**

**ಭಾವಾರ್ಥ :** ನಾರಾಯಣನು, ಪರಮ ಪುರುಷನು ಪ್ರತಿಯೊಬ್ಬ ಜೀವಿಯ ಹೊರಗೂ ಒಳಗೂ ಇರುವನೆಂದು ವೇದ ಸಾಹಿತ್ಯದಿಂದ ಅರಿತುಕೊಳ್ಳುತ್ತೇವೆ. ಅವನು ಆಧ್ಯಾತ್ಮಿಕ ಮತ್ತು ಭೌತಿಕ ಉಭಯ ಜಗತ್ತುಗಳಲ್ಲಿದ್ದಾನೆ. ಅವನು ದೂರ ಬಹುದೂರವಿದ್ದರೂ ನಮಗೆ ಸಮಿಪನು. ಇವು ವೇದಸಾಹಿತ್ಯದ ನಿರೂಪಣೆಗಳು. **ಆಸೀನೋ ದೂರಂ ವ್ರಜತಿ ಶಯಾನೋ ಯಾತಿ ಸರ್ವತಃ** (ಕಠ ಉಪನಿಷದ್ 1.2.21) ಅವನು ಸದಾ ದಿವ್ಯಾನಂದ ನಿರತನಾದ್ದರಿಂದ ಅವನು ತನ್ನ ಪೂರ್ಣೈಶ್ವರ್ಯವನ್ನು ಹೇಗೆ ಭೋಗಿಸುತ್ತಾನೆ ಎಂಬುದನ್ನು ನಾವು ಅರಿತುಕೊಳ್ಳಲಾಗದು. ಈ ಭೌತಿಕ ಇಂದ್ರಿಯಗಳಿಂದ ನೋಡುವುದು ಅಥವಾ ತಿಳಿದುಕೊಳ್ಳುವುದು ನಮಗೆ ಸಾಧ್ಯವಾಗದು. ಆದ್ದರಿಂದ ಅವನನ್ನು ಅರಿತುಕೊಳ್ಳಲು ನಮ್ಮ ಭೌತಿಕ ಮನಸ್ಸು ಮತ್ತು ಇಂದ್ರಿಯಗಳು ಕಾರ್ಯ

ಮಾಡಲಾರವು ಎಂದು ವೇದ ಸಾಹಿತ್ಯದಲ್ಲಿ ಹೇಳಿದೆ. ಆದರೆ ಭಕ್ತಿಯೋಗದಲ್ಲಿ ಕೃಷ್ಣ ಪ್ರಜ್ಞಾಚರಣೆಯಿಂದ ತನ್ನ ಮನಸ್ಸನ್ನು ಮತ್ತು ಇಂದ್ರಿಯಗಳನ್ನು ಶುದ್ಧೀಕರಿಸಿ ಕೊಂಡವನು ನಿರಂತರ ಅವನನ್ನು ನೋಡಬಲ್ಲನು. ಪರಮದೇವನ ಬಗ್ಗೆ ಪ್ರೀತಿಯನ್ನು ಬೆಳೆಸಿಕೊಂಡ ಭಕ್ತನು ಭಂಗರಹಿತನಾಗಿ ಸದಾ ಅವನನ್ನು ಕಾಣಬಲ್ಲನು ಎಂದು ಬ್ರಹ್ಮ ಸಂಹಿತೆಯಲ್ಲಿ ದೃಢಪಟ್ಟಿದೆ. ಭಕ್ತಿಯೋಗದಿಂದಲೇ ಅವನನ್ನು ನೋಡಬಹುದು ಮತ್ತು ಅರಿತುಕೊಳ್ಳಬಹುದು ಎಂದು ಭಗವದ್ಗೀತೆಯಲ್ಲಿ (11.54) ದೃಢಪಟ್ಟಿದೆ. **"ಭಕ್ತ್ಯಾ ತ್ವನನ್ಯಯಾ ಶಕ್ಯಃ".**

**ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಮ್ ।**
**ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥ ೧೭ ॥**

ಅವಿಭಕ್ತಮ್—ವಿಭಜಿತನಾಗದೆ, ಚ—ಕೂಡ, ಭೂತೇಷು—ಸಕಲ ಜೀವಿಗಳಲ್ಲಿ, ವಿಭಕ್ತಮ್—ವಿಭಕ್ತನಾಗಿ, ಇವ—ಎಂಬಂತೆ, ಚ—ಕೂಡ, ಸ್ಥಿತಮ್—ಸ್ಥಿತನು, ಭೂತ-ಭರ್ತೃ—ಸಕಲ ಜೀವಿಗಳ ಪಾಲಕನು, ಚ—ಕೂಡ, ತತ್—ಅದನ್ನು, ಜ್ಞೇಯಮ್—ತಿಳಿದುಕೊಳ್ಳಬೇಕು, ಗ್ರಸಿಷ್ಣು—ಭಕ್ಷಕನು, ಪ್ರಭವಿಷ್ಣು—ವೃದ್ಧಿ ಕಾರಕನು, ಚ—ಕೂಡ.

**ಪರಮಾತ್ಮನು ಸಕಲ ಜೀವಿಗಳಲ್ಲಿ ವಿಭಕ್ತನೆಂದು ತೋರಿದರೂ ಕೂಡ, ಅವನು ಎಂದೂ ವಿಭಕ್ತನಲ್ಲ. ಅವನು ಏಕೈಕನಾಗಿ ಸ್ಥಿತನು. ಅವನು ಪ್ರತಿಯೊಬ್ಬ ಜೀವಿಯ ಪಾಲಕನಾಗಿದ್ದರೂ ಸಕಲವನ್ನು ಭಕ್ಷಿಸುವನು ಮತ್ತು ವೃದ್ಧಿಸುವನು ಎಂದು ಅರಿಯಬೇಕು.**

**ಭಾವಾರ್ಥ :** ಭಗವಂತನು ಪ್ರತಿಯೊಬ್ಬರ ಹೃದಯದಲ್ಲಿ ಪರಮಾತ್ಮನಾಗಿ ಸನ್ನಿವೇಶಿತನು. ಹೀಗೆಂದರೆ ಅವನು ವಿಭಕ್ತನೆಂದು ಅರ್ಥವೇ ? ಅಲ್ಲ, ವಾಸ್ತವಿಕವಾಗಿ, ಅವನು ಒಬ್ಬನೇ. ಸೂರ್ಯನ ದೃಷ್ಟಾಂತ ನೀಡಲಾಗುತ್ತದೆ ಸೂರ್ಯನು ಮಧ್ಯಾಹ್ನ ರೇಖೆಯಲ್ಲಿರುವಾಗ, ತನ್ನ ಸ್ಥಾನದಲ್ಲಿರುತ್ತಾನೆ. ಆದರೆ ಒಬ್ಬನು ಎಲ್ಲ ದಿಕ್ಕುಗಳಲ್ಲಿ, ಐದು ಸಾವಿರ ಮೈಲುಗಳಷ್ಟು ದೂರ ಹೋಗಿ, "ಸೂರ್ಯನು ಎಲ್ಲಿ ?" ಎಂದು ಕೇಳಿದರೆ, ಅವನು ಅವನ ತಲೆಯ ಮೇಲೆಯೇ ಪ್ರಕಾಶಿಸುತ್ತಿದ್ದಾನೆ ಎಂದು ಪ್ರತಿಯೊಬ್ಬರೂ ಹೇಳು ತ್ತಾರೆ. ಭಗವಂತನು ಅವಿಭಕ್ತನಾದರೂ ವಿಭಕ್ತನಾದಂತೆ ಸನ್ನಿವೇಶಿತನು ಎಂಬುದನ್ನು ತೋರಿಸಲು ವೇದ ಸಾಹಿತ್ಯದಲ್ಲಿ ಈ ದೃಷ್ಟಾಂತ ನೀಡಲಾಗಿದೆ. ಅಲ್ಲದೆ, ಒಬ್ಬನೇ ವಿಷ್ಣು ತನ್ನ ಸರ್ವಶಕ್ತಿಯಿಂದ, ಸೂರ್ಯನು ಅನೇಕ ಸ್ಥಳಗಳಲ್ಲಿ ಅನೇಕರಿಗೆ ಗೋಚರಿಸುವಂತೆ ಎಲ್ಲ ಕಡೆಯಲ್ಲೂ ಇದ್ದಾನೆ ಎಂದು ಕೂಡ ಹೇಳಿದೆ, ಮತ್ತು ಪರಮಪ್ರಭುವು ಪ್ರತಿ ಯೊಬ್ಬ ಜೀವಿಯ ಪಾಲಕನಾಗಿದ್ದರೂ, ಪ್ರಳಯ ಕಾಲದಲ್ಲಿ ಎಲ್ಲವನ್ನು ಭಕ್ಷಿಸುತ್ತಾನೆ. ಇದು ಹನ್ನೊಂದನೆಯ ಅಧ್ಯಾಯದಲ್ಲಿ, ಭಗವಂತನು, ಕುರುಕ್ಷೇತ್ರದಲ್ಲಿ ಸೇರಿದ್ದ ಸಕಲ ಯೋಧರನ್ನು ನುಂಗಿಹಾಕಲು ಬಂದಿದ್ದೇನೆ ಎಂದು ಹೇಳಿದಾಗ, ದೃಢಪಟ್ಟಿದೆ.

ಅವನು ಕಾಲರೂಪದಲ್ಲಿ ಕೂಡ ಭಕ್ಷಿಸುವವನು ಎಂದೂ ಹೇಳಿದ್ದಾನೆ. ಅವನು ಲಯಕಾರಕನು, ಸರ್ವ ಸಂಹಾರಕನು. ಸೃಷ್ಟಿಯಾದಾಗ, ಅವನು ಎಲ್ಲವನ್ನು ಮೂಲ ಸ್ಥಿತಿಯಿಂದ ಬೆಳೆಸುತ್ತಾನೆ, ಮತ್ತು ಪ್ರಳಯ ಕಾಲದಲ್ಲಿ ಅವುಗಳನ್ನು ನುಂಗಿಹಾಕುತ್ತಾನೆ. ಅವನು ಸರ್ವಜೀವಿಗಳ ಮೂಲನು ಮತ್ತು ಸರ್ವರ ಆಶ್ರಯನು ಎಂದು ವೇದ ಮಂತ್ರಗಳು ದೃಢಪಡಿಸುತ್ತವೆ. ಸೃಷ್ಟಿಯ ಅನಂತರ, ಪ್ರತಿಯೊಂದು ಅವನ ಸರ್ವಶಕ್ತಿಯನ್ನು ಆವಲಂಬಿಸಿರುತ್ತದೆ, ಮತ್ತು ಪ್ರಳಯಾನಂತರ ಮತ್ತೆ ಪ್ರತಿಯೊಂದು ಅವನಲ್ಲಿಗೆ ಹಿಂದಿರುಗುತ್ತದೆ. ಇವು ವೇದಮಂತ್ರಗಳ ದೃಢೀಕರಣಗಳು **"ಯತೋ ವಾ ಇಮಾನಿ ಭೂತಾನಿ ಜಾಯನ್ತೇ ಯೇನ ಜಾತಾನಿ ಜೀವನ್ತಿ ಯತ್ ಪ್ರಯನ್ತಿ ಅಭಿಸಂವಿಶನ್ತಿ ತದ್ ಬ್ರಹ್ಮ ತದ್ ವಿಜಿಜ್ಞಾಸಸ್ವ"** (ತೈತ್ತಿರೀಯಾ ಉಪನಿಷತ್ತು 3. 1)

**ಜ್ಯೋತಿಷಾಮಪಿ ತ ಜ್ಜ್ಯೋತಿಸ್ತಮಸಃ ಪರಮುಚ್ಯತೇ ।**
**ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಮ್ ॥ ೧೮ ॥**

ಜ್ಯೋತಿಷಾಮ್—ಎಲ್ಲ ಜ್ಯೋತಿರ್ನಿಕಾಯಗಳಲ್ಲಿ, ಅಪಿ—ಕೂಡ, ತತ್—ಅವನು ಜ್ಯೋತಿಃ—ಜ್ಯೋತಿಮೂಲನು, ತಮಸಃ—ಕತ್ತಲು, ಪರಮ್—ಆಚೆಗೆ, ಉಚ್ಯತೇ—ಎಂದು ಹೇಳಿದೆ, ಜ್ಞಾನಮ್—ಜ್ಞಾನ, ಜ್ಞೇಯಮ್—ತಿಳಿಯಬೇಕಾದುದು, ಜ್ಞಾನ-ಗಮ್ಯಮ್—ಜ್ಞಾನದಿಂದ ಗಮ್ಯನು, ಹೃದಿ—ಹೃದಯದಲ್ಲಿ, ಸರ್ವಸ್ಯ—ಪ್ರತಿಯೊಬ್ಬನ ವಿಷ್ಠಿತಮ್—ಸನ್ನಿವೇಶಿತನು.

**ಅವನು ಎಲ್ಲ ಜ್ಯೋತಿರ್ನಿಕಾಯಗಳಲ್ಲಿ ಬೆಳಕಿನ ಮೂಲನು. ಜಡಾಂಧಕಾರಕ್ಕೆ ಅತೀತನು ಮತ್ತು ಅವ್ಯಕ್ತನು. ಅವನು ಜ್ಞಾನ, ಜ್ಞಾನದ ವಿಷಯ ಮತ್ತು ಜ್ಞಾನದ ಉದ್ದೇಶ. ಅವನು ಪ್ರತಿಯೊಬ್ಬನ ಹೃದಯದಲ್ಲಿ ಸನ್ನಿವೇಶಿತನು.**

**ಭಾವಾರ್ಥ :** ಪರಮಾತ್ಮನಾದ, ಪರಮದೇವೋತ್ತಮ ಪುರುಷನು, ಸೂರ್ಯ, ಚಂದ್ರ, ಮತ್ತು ನಕ್ಷತ್ರಗಳಂತೆ ಸಕಲ ಜ್ಯೋತಿ ನಿಕಾಯಗಳಲ್ಲಿ ಪ್ರಕಾಶ ಮೂಲನು ಆಧ್ಯಾತ್ಮ ಸಾಮ್ರಾಜ್ಯದಲ್ಲಿ ಭಗವಂತನ ಪ್ರಕಾಶವಿರುವುದರಿಂದ, ಸೂರ್ಯ ಚಂದ್ರರ ಅವಶ್ಯಕತೆ ಇಲ್ಲ ಎಂಬುದನ್ನು ನಾವು ವೇದ ಸಾಹಿತ್ಯದಲ್ಲಿ ಕಾಣುತ್ತೇವೆ. ಭೌತಿಕ ಜಗತ್ತಿನಲ್ಲಿ **ಬ್ರಹ್ಮ ಜ್ಯೋತಿಯು,** ಭಗವಂತನ ಆಧ್ಯಾತ್ಮ ಪ್ರಕಾಶವು, ಮಹತ್-ತತ್ತ್ವ—ಮಹಾಭೂತಗಳಿಂದ ಆವೃತ; ಆದ್ದರಿಂದ ಈ ಭೌತಿಕ ಜಗತ್ತಿನಲ್ಲಿ ಬೆಳಕಿಗಾಗಿ ನಮಗೆ ಸೂರ್ಯ, ಚಂದ್ರ ವಿದ್ಯುಚ್ಛಕ್ತಿ ಇತ್ಯಾದಿಗಳ ಸಹಾಯ ಬೇಕಾಗಿದೆ. ಆದರೆ ಆಧ್ಯಾತ್ಮ ಜಗತ್ತಿನಲ್ಲಿ ಅಂಥ ವಸ್ತುಗಳ ಅಗತ್ಯವಿಲ್ಲ. ಅವನ ಜಾಜ್ವಲ್ಯ ಪ್ರಕಾಶ ನಿಮಿತ್ತ ಪ್ರತಿಯೊಂದೂ ಬೆಳಗುತ್ತದೆ; ಎಂದು ವೇದಸಾಹಿತ್ಯದಲ್ಲಿ ಸ್ಪಷ್ಟವಾಗಿ ಹೇಳಿದೆ. ಇದರಿಂದ ಅವನು ಭೌತಿಕ ಜಗತ್ತಿನಲ್ಲಿ ಸನ್ನಿವೇಶಿತನಲ್ಲ ಎಂಬುದು ಸ್ಪಷ್ಟ. ಅವನು ದೂರಾತಿದೂರವಾದ ಪರವ್ಯೋಮದಲ್ಲಿರುವ ಆಧ್ಯಾತ್ಮಲೋಕದಲ್ಲಿದ್ದಾನೆ. ಅದು ಕೂಡ ವೇದ ಸಾಹಿತ್ಯದಲ್ಲಿ ದೃಢಪಟ್ಟಿದೆ. **ಆದಿತ್ಯ-ವರ್ಣಂ ತಮಸಃ ಪರಸ್ತಾತ್ (ಶ್ವೇತಾಶ್ವತರ ಉಪನಿಷದ್ 3. 8)** ಅವನು ಸೂರ್ಯನ

ಹಾಗೆ, ಶಾಶ್ವತ ಪ್ರಕಾಶಮಯನು, ಆದರೆ ಅವನು ಈ ಭೌತಿಕ ಕತ್ತಲೆಯಿಂದ ಆಚೆಗೆ ದೂರ ಬಹುದೂರ ಇದ್ದಾನೆ.

ಅವನ ಜ್ಞಾನವು ದಿವ್ಯ. ಬ್ರಹ್ಮನ್ ಎಂಬುದು ಘನೀಕೃತ ದಿವ್ಯಜ್ಞಾನ ಎಂಬುದನ್ನು ವೇದ ಸಾಹಿತ್ಯವು ದೃಢಪಡಿಸುತ್ತದೆ. ಆ ಆಧ್ಯಾತ್ಮ ಜಗತ್ತಿಗೆ ವರ್ಗಾಯಿಸಲ್ಪಡಲು ಕಾತುರನಾದವನಿಗೆ, ಪ್ರತಿಯೊಬ್ಬರ ಹೃದಯ ಸ್ಥಿತನಾದ ಪರಮ ಪ್ರಭುವಿನಿಂದ ಜ್ಞಾನವು ನೀಡಲ್ಪಡುತ್ತದೆ. ಒಂದು ವೈದಿಕ ಮಂತ್ರವು ಹೀಗೆ ಹೇಳುತ್ತದೆ: **ತಂ ಹ ದೇವಮ್ ಆತ್ಮ-ಬುದ್ಧಿ-ಪ್ರಕಾಶಂ ಮುಮುಕ್ಷುರ್ ವೈ ಶರಣಮ್ ಅಹಂ ಪ್ರಪದ್ಯೇ.** (ಶ್ವೇತಾಶ್ವತರ ಉಪನಿಷದ್ 6.18) ಒಬ್ಬನಿಗೆ ಮೋಕ್ಷಾಪೇಕ್ಷೆಯೇನಾದರೂ ಇದ್ದರೆ, ಪರಮ ದೇವೋತ್ತಮ ಪುರುಷನಿಗೆ ಶರಣಾಗತನಾಗಬೇಕು. ಅಂತಿಮ ಜ್ಞಾನದ ಗುರಿಯ ಮಟ್ಟಿಗೆ, **ತಂ ಏವ ವಿದಿತ್ವಾತಿ ಮೃತ್ಯುಮ್ ಏತಿ,** "ಅವನನ್ನು ತಿಳಿಯುವ ಮಾತ್ರದಿಂದ ಒಬ್ಬನು ಜನನ ಮರಣಗಳ ಗಡಿಯನ್ನು ದಾಟಬಲ್ಲನು" ಎಂದು ಕೂಡ ವೇದಸಾಹಿತ್ಯದಲ್ಲಿ ದೃಢಪಟ್ಟಿದೆ. (ಶ್ವೇತಾಶ್ವತರ ಉಪನಿಷದ್ 3.8)

ಅವನು ಪರಮ ನಿಯಂತ್ರಕನಾಗಿ ಪ್ರತಿಯೊಬ್ಬನ ಹೃದಯದಲ್ಲಿ ಸನ್ನಿವೇಶಿತನು. ಪರಮನು ಸರ್ವತ್ರ ಹರಡಿದ ಪಾದಪಾಣಿಗಳನ್ನು ಹೊಂದಿದ್ದಾನೆ, ಇದು ವ್ಯಕ್ತಿಗತ ಆತ್ಮನ ವಿಷಯದಲ್ಲಿ ಹೇಳಲಾಗದು. ಆದ್ದರಿಂದ—ವ್ಯಕ್ತಿಗತ ಆತ್ಮ ಮತ್ತು ಪರಮಾತ್ಮ—ಇಬ್ಬರು ಕ್ಷೇತ್ರಜ್ಞರಿದ್ದಾರೆ ಎಂಬುದನ್ನು ಒಪ್ಪಿಕೊಳ್ಳಲೇಬೇಕು. ಒಬ್ಬನ ಕೈಗಳು, ಕಾಲುಗಳು ಸ್ಥಳೀಯವಾಗಿ ಪರಿಮಿತ ವ್ಯಾಪ್ತ. ಆದರೆ ಕೃಷ್ಣನ ಪಾಣಿಪಾದಗಳು ಸರ್ವತ್ರ ವಿಸ್ತೃತ. ಇದು ಶ್ವೇತಾಶ್ವತರ ಉಪನಿಷತ್ತಿನಲ್ಲಿ (3.17) ದೃಢಪಟ್ಟಿದೆ: **ಸರ್ವಸ್ಯ ಪ್ರಭುಮ್ ಈಶಾನಂ ಸರ್ವಸ್ಯ ಶರಣಂ ಬೃಹತ್.** ಆ ಪರಮ ದೇವೋತ್ತಮ ಪುರುಷನು ಪರಮಾತ್ಮನು, ಸಕಲ ಜೀವಿಗಳ ಪ್ರಭು ; ಆದ್ದರಿಂದ ಅವನೇ ಸಕಲ ಜೀವಿಗಳ ಕೊನೆಯ ಆಶ್ರಯನು. ಆದ್ದರಿಂದ ಪರಮ ಪರಮಾತ್ಮನು ಮತ್ತು ವ್ಯಕ್ತಿಗತ ಆತ್ಮನು ಸದಾ ಭಿನ್ನವೆಂಬ ಸತ್ಯವನ್ನು ನಿರಾಕರಿಸಲಾಗದು.

**ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ ।**
**ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ ॥ ೧೯ ॥**

ಇತಿ—ಹೀಗೆ, ಕ್ಷೇತ್ರಮ್—ಕಾರ್ಯಕ್ಷೇತ್ರವನ್ನು (ದೇಹ), ತಥಾ—ಕೂಡ, ಜ್ಞಾನಮ್—ಜ್ಞಾನವನ್ನು, ಜ್ಞೇಯಮ್—ಜ್ಞೇಯವನ್ನು, ಚ—ಕೂಡ, ಉಕ್ತಮ್—ವರ್ಣಿಸಿದೆ, ಸಮಾಸತಃ—ಸಾರಾಂಶ ರೂಪದಲ್ಲಿ, ಮತ್-ಭಕ್ತಃ—ನನ್ನ ಭಕ್ತನು, ಏತತ್—ಇದನ್ನೆಲ್ಲ, ವಿಜ್ಞಾಯ—ಅರಿತ ಅನಂತರ, ಮತ್-ಭಾವಾಯ—ನನ್ನ ಭಾವವನ್ನು, ಉಪಪದ್ಯತೇ—ಹೊಂದುತ್ತಾನೆ.

**ಹೀಗೆ ಕಾರ್ಯಕ್ಷೇತ್ರವು (ದೇಹ), ಜ್ಞಾನ ಮತ್ತು ಜ್ಞೇಯವು ನನ್ನಿಂದ ಸಂಕ್ಷೇಪವಾಗಿ ವಿವರಿಸಲ್ಪಟ್ಟಿದೆ. ನನ್ನ ಭಕ್ತರು ಮಾತ್ರ ಇದನ್ನು ಚೆನ್ನಾಗಿ ಅರಿತುಕೊಳ್ಳಬಲ್ಲರು ಮತ್ತು ಹೀಗೆ ನನ್ನ ಭಾವವನ್ನು ಹೊಂದಬಲ್ಲರು.**

**ಭಾವಾರ್ಥ** : ಭಗವಂತನು ಸಾರರೂಪವಾಗಿ ದೇಹ, ಜ್ಞಾನ ಮತ್ತು ಜ್ಞೇಯವನ್ನು ವರ್ಣಿಸಿದ್ದಾನೆ. ಈ ಜ್ಞಾನವು ಮೂರು ವಿಷಯಗಳದ್ದು : ಕ್ಷೇತ್ರಜ್ಞ, ಜ್ಞೇಯ ಮತ್ತು ಜ್ಞಾನಪ್ರಕ್ರಿಯೆ. ಒಟ್ಟಾಗಿ, ಇವನ್ನು **ವಿಜ್ಞಾನ** ಎಂದು ಕರೆದಿದೆ. ಪರಿಪೂರ್ಣ ಜ್ಞಾನವು ಅಮಿಶ್ರ ಭಗವದ್ಭಕ್ತರಿಂದ ನೇರವಾಗಿ ತಿಳಿಯಲ್ಪಡುವುದು. ಇತರರು ಅದನ್ನರಿಯಲು ಅಸಮರ್ಥರು. ಕೊನೆಯಲ್ಲಿ ಈ ಮೂರು ವಿಷಯಗಳು ಒಂದಾಗುತ್ತವೆ ಎಂದು ಅದ್ವೈತಿಗಳು ಹೇಳುತ್ತಾರೆ. ಆದರೆ ಭಕ್ತರು ಇದನ್ನು ಒಪ್ಪುವುದಿಲ್ಲ. ಜ್ಞಾನ ಮತ್ತು ಜ್ಞಾನಾಭಿವೃದ್ಧಿ ಎಂದರೆ ಕೃಷ್ಣಪ್ರಜ್ಞೆಯಲ್ಲಿ ತನ್ನನ್ನು ಅರಿತುಕೊಳ್ಳುವುದು. ನಾವು ಭೌತಿಕ ಪ್ರಜ್ಞೆಯಿಂದ ಚಾಲಿತರು, ಆದರೆ ನಾವು ನಮ್ಮ ಸಕಲ, ಪ್ರಜ್ಞೆಯನ್ನು ಕೃಷ್ಣ ಕಾರ್ಯಗಳ ಕಡೆಗೆ ವರ್ಗಾಯಿಸಿದಾಗ ಮತ್ತು ಕೃಷ್ಣನೇ ಸರ್ವಸ್ವವೆಂದು ಸಾಕ್ಷಾತ್ಕಾರ ಹೊಂದಿದಾಗ, ನಾವು ನಿಜ ಜ್ಞಾನ ಹೊಂದುತ್ತೇವೆ. ಅರ್ಥಾತ್ ಜ್ಞಾನವೆಂಬುದು ಭಕ್ತಿಯುತ ಸೇವೆಯನ್ನು ಪರಿಪೂರ್ಣವಾಗಿ ಅರಿತುಕೊಳ್ಳುವ ಪ್ರಾಥಮಿಕ ಹಂತ. ಹದಿನೈದನೆಯ ಅಧ್ಯಾಯದಲ್ಲಿ ಇದು ಬಹು ಸ್ಪಷ್ಟವಾಗಿ ವಿವರಿಸಲ್ಪಡಲಾಗುವುದು.

ಈಗ, ಸಾರಾಂಶವಾಗಿ, ಒಬ್ಬನು, **ಮಹಾ-ಭೂತಾನಿ** ಎಂಬುದರಿಂದ ಆರಂಭವಾಗಿ ಮತ್ತು **ಚೇತನಾ ಧೃತಿಃ** ಎನ್ನುವವರೆಗೆ ಮುಂದುವರೆಯುವ 6 ಮತ್ತು 7ನೆಯ ಶ್ಲೋಕಗಳು ಮಹಾಭೂತಗಳನ್ನು ಮತ್ತು ಜೀವ ಸಂಕೇತಗಳ ಕೆಲವು ಉದ್ಭೂತಿಗಳನ್ನು ವಿಶ್ಲೇಷಿಸುತ್ತವೆ—ಎಂದು ಅರಿತುಕೊಳ್ಳಬಹುದು. ಇವು ಒಟ್ಟಾಗಿ ದೇಹವನ್ನು ಅಥವಾ ಕಾರ್ಯಕ್ಷೇತ್ರವನ್ನು ರೂಪಿಸುತ್ತವೆ. **ಅಮಾನಿತ್ವಮ್** ಎಂಬುದರಿಂದ **ತತ್ತ್ವ ಜ್ಞಾನಾರ್ಥ ದರ್ಶನಂ** ಎಂಬಲ್ಲಿಯವರೆಗಿನ 8 ರಿಂದ 12 ರವರೆಗಿನ ಶ್ಲೋಕಗಳು ಕಾರ್ಯಕ್ಷೇತ್ರದ ಉಭಯ ಪ್ರಕಾರದ ಕ್ಷೇತ್ರಜ್ಞರನ್ನು ಎಂದರೆ ಆತ್ಮ ಮತ್ತು ಪರಮಾತ್ಮ ರನ್ನು ಅರಿತುಕೊಳ್ಳಲು ಜ್ಞಾನ ಪ್ರಕ್ರಿಯೆಯನ್ನು ವರ್ಣಿಸುತ್ತವೆ. ಆಮೇಲೆ **ಅನಾದಿ ಮತ್-ಪರಮ್** ಎಂಬಲ್ಲಿಂದ **ಹೃದಿ ಸರ್ವಸ್ಯ ವಿಷ್ಠಿತಮ್** ಎಂಬಲ್ಲಿಯವರೆಗಿನ 13 ರಿಂದ 18 ರವರೆಗಿನ ಶ್ಲೋಕಗಳು ಆತ್ಮ ಮತ್ತು ಪರಮ ಪ್ರಭು ಅಥವಾ ಪರಮಾತ್ಮನನ್ನು ವರ್ಣಿಸುತ್ತವೆ.

ಹೀಗೆ ಮೂರು ವಿಷಯಗಳು ಎಂದರೆ, ಕಾರ್ಯಕ್ಷೇತ್ರ (ದೇಹ) ಅರಿತುಕೊಳ್ಳುವ ಪ್ರಕ್ರಿಯೆ, ಮತ್ತು ಆತ್ಮ ಮತ್ತು ಪರಮಾತ್ಮ ಉಭಯರೂ ವರ್ಣಿತವಾಗಿವೆ. ಅಮಿಶ್ರ ಭಗವದ್ಭಕ್ತರು ಮಾತ್ರ ಈ ಮೂರು ವಿಷಯಗಳನ್ನು ಸ್ಪಷ್ಟವಾಗಿ ತಿಳಿಯಬಲ್ಲರೆಂದು ಇವು ಇಲ್ಲಿ ವಿಶೇಷವಾಗಿ ವರ್ಣಿತ. ಈ ಭಕ್ತರಿಗೆ ಭಗವದ್ಗೀತೆಯು ಪೂರ್ಣ ಪ್ರಯೋಜಕ; ಅವರು ಮಾತ್ರ ಪರಮ ಗುರಿಯನ್ನು, ಶ್ರೀಕೃಷ್ಣಭಾವವನ್ನು ಹೊಂದಬಲ್ಲರು. ಅರ್ಥಾತ್ ಭಕ್ತರು ಮಾತ್ರವೇ ಭಗವದ್ಗೀತೆಯನ್ನು ಅರಿಯಬಲ್ಲರು ಮತ್ತು ಅಪೇಕ್ಷಿತ ಫಲವನ್ನು ಪಡೆಯಬಲ್ಲರು, ಇತರರಲ್ಲ ಎಂದು ಅರ್ಥ.

**ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ ।**
**ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿಸಮ್ಭವಾನ್ ॥ ೨೦ ॥**

ಪ್ರಕೃತಿಮ್—ಭೌತಿಕ ಪ್ರಕೃತಿಯನ್ನು, ಪುರುಷಮ್—ಜೀವಿಗಳನ್ನು, ಚ—ಕೂಡ, ಏವ—ನಿಶ್ಚಿತವಾಗಿ, ವಿದ್ಧಿ—ನೀನು ತಿಳಿಯಬೇಕು, ಅನಾದಿ—ಆದಿ ಇಲ್ಲದ, ಉಭೌ—ಎರಡೂ, ಅಪಿ—ಕೂಡ, ವಿಕಾರಾನ್—ವಿಕಾರಗಳನ್ನು, ಚ—ಕೂಡ, ಗುಣಾನ್—ಮೂರು ಪ್ರಕೃತಿ ಗುಣಗಳನ್ನು, ಚ—ಕೂಡ, ಏವ—ನಿಶ್ಚಿತವಾಗಿ, ವಿದ್ಧಿ—ತಿಳಿದುಕೋ, ಪ್ರಕೃತಿ—ಭೌತಿಕ ಪ್ರಕೃತಿ, ಸಮ್ಭವಾನ್—ಯಿಂದ ಉತ್ಪನ್ನ.

**ಭೌತಿಕ ಪ್ರಕೃತಿ ಮತ್ತು ಜೀವಿಗಳು ಅನಾದಿ ಎಂದು ತಿಳಿಯಲ್ಪಡಬೇಕು. ಅವುಗಳ ವಿಕಾರಗಳು ಮತ್ತು ಪ್ರಕೃತಿ ಗುಣಗಳು ಭೌತಿಕ ಪ್ರಕೃತಿಯ ಉತ್ಪತ್ತಿಗಳು.**

**ಭಾವಾರ್ಥ :** ಈ ಅಧ್ಯಾಯದಲ್ಲಿ ನೀಡಿದ ಜ್ಞಾನದಿಂದ ಒಬ್ಬನು ದೇಹವನ್ನು (ಕಾರ್ಯಕ್ಷೇತ್ರವನ್ನು) ಮತ್ತು ಕ್ಷೇತ್ರಜ್ಞರನ್ನು, ವ್ಯಕ್ತಿಗತ ಆತ್ಮ ಮತ್ತು ಪರಮಾತ್ಮ ಉಭಯರನ್ನು ಅರಿತುಕೊಳ್ಳಬಹುದು. ದೇಹವು ಕಾರ್ಯಕ್ಷೇತ್ರ ಮತ್ತು ಅದು ಭೌತಿಕ ಪ್ರಕೃತಿ ಸಂರಚಿತ. ದೇಹದಲ್ಲಿರುವ ವ.ತ್ತು ದೇಹ ಚಟುವಟಿಕೆಗಳನ್ನು ಭೋಗಿಸುವ ವ್ಯಕ್ತಿಗತ ಆತ್ಮನು **ಪುರುಷನು ಅಥವಾ ಜೀವಿ.** ಅವನೊಬ್ಬ ಕ್ಷೇತ್ರಜ್ಞ, ಮತ್ತೊಬ್ಬನು ಪರಮಾತ್ಮ. ಪರಮಾತ್ಮ ಮತ್ತು ವ್ಯಕ್ತಿಗತ ಜೀವ ಎರಡೂ ಕೂಡ ಪರಮದೇವೋತ್ತಮ ಪುರುಷನ ಭಿನ್ನ ಉದ್ಭೂತಿಗಳೆಂದು ತಿಳಿಯಬೇಕಾದುದು ನಿಜ. ಜೀವಿಯು ಅವನ ಶಕ್ತಿ ಶ್ರೇಣಿಗೆ ಸೇರಿದ್ದಾನೆ ಮತ್ತು ಪರಮಾತ್ಮನು ಅವನ ಸ್ವಾಂಶ ವಿಸ್ತರಣೆಯ ಶ್ರೇಣಿಯಲ್ಲಿದ್ದಾನೆ.

ಭೌತಿಕ ಪ್ರಕೃತಿ ಮತ್ತು ಜೀವಿ ಉಭಯರೂ ಶಾಶ್ವತ, ಎಂದರೆ ಅವರು ಸೃಷ್ಟಿಯ ಮುಂಚೆನಿಂದಲೂ ಇದ್ದರು. ಭಗವತ್ ಶಕ್ತಿಯಿಂದ ಭೌತಿಕ ಉದ್ಭೂತಿ, ಮತ್ತು ಜೀವಿಗಳೂ ಹಾಗೆಯೇ. ಆದರೆ ಜೀವಿಗಳು ಪರಾ ಶಕ್ತಿಯವು ಜೀವಿಗಳು ಮತ್ತು ಭೌತಿಕ ಪ್ರಕೃತಿ, ಎರಡೂ ಈ ವಿಶ್ವ ಉದ್ಭೂತಿಗೆ ಮುಂಚೆ ಇದ್ದವು. ಭೌತಿಕ ಪ್ರಕೃತಿಯು ಪರಮದೇವೋತ್ತಮ ಪುರುಷ, ಮಹಾವಿಷ್ಣುವಿನಲ್ಲಿ ಲೀನವಾಗಿತ್ತು, ಮತ್ತು ಅದರ ಅವಶ್ಯಕತೆ ಉಂಟಾದಾಗ ಅದು ಮಹತ್-ತತ್ತ್ವದ ಅಭಿಕರಣದ ಮೂಲಕ ವ್ಯಕ್ತವಾಗಿತ್ತು. ಅದೇ ಪ್ರಕಾರ ಜೀವಿಗಳು ಅವನಲ್ಲಿದ್ದಾರೆ, ಆದರೆ ಅವರು ಬದ್ಧರಾಗಿರುವುದರಿಂದ ಭಗವತ್ಸೇವೆಗೆ ವಿಮುಖರು. ಆದ್ದರಿಂದ ಅವರಿಗೆ ಪರವ್ಯೋಮದಲ್ಲಿ ಪ್ರವೇಶವಿಲ್ಲ. ಭೌತಿಕ ಪ್ರಕೃತಿಯ ಸೃಷ್ಟಿಯಿಂದ ಈ ಜೀವಿಗಳು ಭೌತಿಕ ಜಗತ್ತಿನಲ್ಲಿ ಸಾಧನೆಮಾಡಿ ಆಧ್ಯಾತ್ಮ ಜಗತ್ತಿಗೆ ಪ್ರವೇಶಿಸಲು ಸಿದ್ಧತೆಮಾಡಿಕೊಳ್ಳಲು ಮತ್ತೆ ಒಂದು ಅವಕಾಶ ನೀಡಲಾಗುತ್ತದೆ. ಇದೇ ಭೌತಿಕ ಸೃಷ್ಟಿಯ ರಹಸ್ಯ. ವಾಸ್ತವಿಕವಾಗಿ ಮೂಲತಃ ಜೀವಿಯು ಪರಮಪ್ರಭುವಿನ ಆಧ್ಯಾತ್ಮಿಕ ವಿಭಿನ್ನಾಂಶ. ಆದರೆ ತನ್ನ ವಿದ್ರೋಹ ಸ್ವಭಾವದಿಂದ ಅವನು ಭೌತಿಕ ಪ್ರಕೃತಿಯಲ್ಲಿ ಬದ್ಧನು. ಈ ಜೀವಿಗಳು ಅಥವಾ ಭಗವಂತನ ಪರಾಶಕ್ತಿಗಳು ಹೇಗೆ ಈ ಭೌತಿಕ ಪ್ರಕೃತಿ ಸಂಪರ್ಕದಲ್ಲಿ ಬಂದರು ಎಂಬುದು ನಿಜವಾಗಿ ಮಹತ್ವ ವಿಷಯವಲ್ಲ. ಆದರೆ ಇದು ವಾಸ್ತವಿಕವಾಗಿ ಹೇಗೆ ಮತ್ತು ಏಕೆ ಉಂಟಾಯಿತು ಎಂಬುದನ್ನು ಪರಮದೇವೋತ್ತಮ ಪುರುಷನು ಬಲ್ಲನು. ಭೌತಿಕ ಪ್ರಕೃತಿ

ಯಿಂದ ಆಕೃಷ್ಟರು ಅಸ್ತಿತ್ವಕ್ಕಾಗಿ ಕಠಿನವಾಗಿ ಹೋರಾಡುತ್ತಿದ್ದಾರೆ ಎಂದು ಭಗವಂತನು ಶಾಸ್ತ್ರಗಳಲ್ಲಿ ಹೇಳಿದ್ದಾನೆ ಆದರೆ ಈ ಕೆಲವು ಶ್ಲೋಕಗಳಿಂದ, ಭೌತಿಕ ಪ್ರಕೃತಿಯ ತ್ರಿಗುಣಗಳಿಂದ ಎಲ್ಲ ವಿಕಾರಗಳು ಮತ್ತು ಪ್ರಭಾವಗಳು ಕೂಡ ಭೌತಿಕ ಪ್ರಕೃತಿಯ ಉತ್ಪನ್ನಗಳು ಎಂಬುದನ್ನು ನಿಶ್ಚಿತವಾಗಿ ನಾವು ತಿಳಿದುಕೊಳ್ಳಬೇಕು. ಜೀವಿಯ ಮಟ್ಟಿಗೆ ಎಲ್ಲ ವಿಕಾರಗಳು ಮತ್ತು ವೈವಿಧ್ಯಗಳು ದೇಹ ನಿಮಿತ್ತ. ಚೇತನದ ಮಟ್ಟಿಗೆ ಎಲ್ಲ ಜೀವಿಗಳು ಒಂದೇ.

**ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ।**
**ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥ ೨೦ ॥**

ಕಾರ್ಯ—ಪರಿಣಾಮದ, ಕಾರಣ—ಮತ್ತು ಕಾರಣ, ಕರ್ತೃತ್ವೇ—ಸೃಷ್ಟಿಯ ವಿಷಯದಲ್ಲಿ, ಹೇತುಃ—ಸಾಧನ, ಪ್ರಕೃತಿಃ—ಭೌತಿಕ ಪ್ರಕೃತಿ, ಉಚ್ಯತೇ—ಎಂದು ಹೇಳಿದೆ, ಪುರುಷಃ—ಜೀವಿಯು, ಸುಖ—ಸುಖದ, ದುಃಖಾನಾಮ್—ಮತ್ತು ದುಃಖಗಳ, ಭೋಕ್ತೃತ್ವೇ—ಭೋಗದಲ್ಲಿ, ಹೇತುಃ—ಸಾಧನ, ಉಚ್ಯತೇ—ಎಂದು ಹೇಳಿದೆ.

**ಪ್ರಕೃತಿಯು ಎಲ್ಲ ಭೌತಿಕ ಕಾರಣಗಳ ಮತ್ತು ಕಾರ್ಯಗಳ ಕಾರಣ ಎಂದು ಹೇಳಿದೆ, ಆದರೆ ಜೀವಿಯು ಈ ಜಗತ್ತಿನಲ್ಲಿ ನಾನಾ ದುಃಖಗಳ ಮತ್ತು ಸುಖಭೋಗಗಳ ಕಾರಣನು.**

**ಭಾವಾರ್ಥ :** ಜೀವಿಗಳಲ್ಲಿ ದೇಹ ಮತ್ತು ಇಂದ್ರಿಯಗಳ ಭಿನ್ನ ಭಿನ್ನ ಉದ್ಭೂತಿಗಳು ಭೌತಿಕ ಪ್ರಕೃತಿ ನಿಮಿತ್ತವಾದವು. 8,400,000 ಭಿನ್ನ ಭಿನ್ನ ಜೀವಯೋನಿಗಳಿವೆ ಮತ್ತು ಈ ವೈವಿಧ್ಯಗಳು ಭೌತಿಕ ಪ್ರಕೃತಿಯ ಸೃಷ್ಟಿಗಳು. ಅವು ಜೀವಿಯ ಭಿನ್ನಭಿನ್ನ ಇಂದ್ರಿಯ ಸುಖಭೋಗಗಳಿಂದ ಉತ್ಪನ್ನವಾಗುತ್ತವೆ. ಹೀಗೆ ಜೀವಿಯು ಇದೋ ಅಥವಾ ಮತ್ತೊಂದೋ ದೇಹದಲ್ಲಿ ಇರಬಯಸುತ್ತಾನೆ. ಅವನು ಭಿನ್ನಭಿನ್ನ ದೇಹಗಳಲ್ಲಿ ಇರಿಸಲ್ಪಟ್ಟಾಗ, ಭಿನ್ನಭಿನ್ನ ಸುಖದುಃಖಗಳನ್ನು ಅನುಭವಿಸುತ್ತಾನೆ. ಅವನ ಭೌತಿಕ ಸುಖದುಃಖಗಳು ಅವನ ದೇಹ ನಿಮಿತ್ತವಾದವು, ಅವನಿರುವಂತೆ ಅವನ ದೆಸೆಯಿಂದ ಆದುವಲ್ಲ. ಅವನ ಮೂಲ ಸ್ಥಿತಿಯಲ್ಲಿ ಭೋಗದ ಬಗ್ಗೆ ಸಂದೇಹಕ್ಕೆ ಅವಕಾಶವಿಲ್ಲ; ಆದ್ದರಿಂದ ಅದು ಅವನ ನಿಜಸ್ಥಿತಿ, ಭೌತಿಕ ಪ್ರಕೃತಿಯ ಮೇಲೆ ಆಧಿಪತ್ಯ ನಡೆಸುವ ಇಚ್ಛಾನಿಮಿತ್ತ, ಅವನು ಈ ಭೌತಿಕ ಜಗತ್ತಿನಲ್ಲಿದ್ದಾನೆ. ಅಧ್ಯಾತ್ಮ ಜಗತ್ತಿನಲ್ಲಿ ಅಂತಹದು ಯಾವುದೂ ಇಲ್ಲ. ಅಧ್ಯಾತ್ಮ ಜಗತ್ತು ಶುದ್ಧ, ಆದರೆ ಭೌತಿಕ ಜಗತ್ತಿನಲ್ಲಿ ಪ್ರತಿಯೊಬ್ಬನೂ ಭಿನ್ನಭಿನ್ನ ಬಗೆಯ ದೇಹ ಸುಖ ಪಡೆಯಲು ಕಠಿಣ ಹೋರಾಟ ಮಾಡುತ್ತಿದ್ದಾನೆ. ಈ ದೇಹವು ಇಂದ್ರಿಯಗಳ ಪರಿಣಾಮ ಎಂದು ಹೇಳುವುದು ಹೆಚ್ಚು ಸ್ಪಷ್ಟವಾಗಬಹುದು. ಇಚ್ಛಾತೋಷಣೆಗೆ ಇಂದ್ರಿಯಗಳು ಸಾಧನಗಳು. ಈಗ, ದೇಹ ಮತ್ತು ಇಂದ್ರಿಯಗಳ ಸಾಧನೆಗಳು—ಒಟ್ಟಾಗಿ ಭೌತಿಕ ಪ್ರಕೃತಿಯಿಂದ ನೀಡಲ್ಪಟ್ಟಿವೆ, ಮತ್ತು ಮುಂದಿನ ಶ್ಲೋಕದಿಂದ ಸ್ಪಷ್ಟವಾಗುವಂತೆ, ಜೀವಿಯು ತನ್ನ ಪೂರ್ವ ಇಚ್ಛೆ

ಮತ್ತು ಕ್ರಿಯೆಗಳಿಗೆನುಸಾರವಾಗಿ ಉತ್ತಮ ಅಥವಾ ಅಧಮ ಸನ್ನಿವೇಶಗಳನ್ನು ಹೊಂದುತ್ತಾನೆ ಒಬ್ಬನ ಇಚ್ಛಾಕ್ರಿಯೆಗಳಿಗೆನುಸಾರವಾಗಿ ಭೌತಿಕ ಪ್ರಕೃತಿಯು ಒಬ್ಬನನ್ನು ವಿವಿಧ ಸ್ಥಾನಗಳಲ್ಲಿ ಇರಿಸುತ್ತದೆ. ಸ್ವಯಂ ಜೀವಿಯೇ ಅಂಥ ಸ್ಥಾನಗಳನ್ನು ಮತ್ತು ಸುಖದುಃಖಗಳನ್ನು ಪಡೆದುಕೊಳ್ಳಲು ಕಾರಣನು. ಒಂದು ಸಲ ವಿಶಿಷ್ಟ ದೇಹದಲ್ಲಿ ಇರಿಸಲ್ಪಟ್ಟರೆ ಅವನು ಪ್ರಕೃತಿ ನಿಯಂತ್ರಣಕ್ಕೆ ಒಳಪಡುತ್ತಾನೆ. ಏಕೆಂದರೆ ಜಡವಾಗಿರುವ ದೇಹವು ಪ್ರಕೃತಿ ನಿಯಮಾನುಸಾರ ವರ್ತಿಸುತ್ತದೆ. ಆಗ ಜೀವಿಯು ಆ ನಿಯಮವನ್ನು ಬದಲಾಯಿಸಲು ಶಕ್ತನಲ್ಲ. ಜೀವಿಯನ್ನು ಒಂದು ನಾಯಿಯ ದೇಹದಲ್ಲಿ ಇರಿಸಲಾಗಿದೆ ಯೆಂದು ಭಾವಿಸೋಣ, ಅವನನ್ನು ನಾಯಿಯ ದೇಹದಲ್ಲಿ ಇರಿಸಿದೊಡನೆಯೇ, ಅವನು ನಾಯಿಯಂತೆಯೇ ಕಾರ್ಯಮಾಡಬೇಕಾಗುವುದು. ಅನ್ಯಥಾ ವರ್ತಿಸಲಾರನು. ಜೀವಿಯು ಹಂದಿಯ ದೇಹದಲ್ಲಿ ಇರಿಸಲ್ಪಟ್ಟರೆ, ಅವನು ಅಮೇಧ್ಯವನ್ನು ತಿನ್ನಲು ಮತ್ತು ಹಂದಿಯಂತೆ ವರ್ತಿಸಲು ಒತ್ತಾಯಿಸಲ್ಪಡುವನು, ಅದೇ ಪ್ರಕಾರ, ಜೀವಿಯು ದೇವತಾ ಶರೀರದಲ್ಲಿ ಇರಿಸಲ್ಪಟ್ಟರೆ ಆ ದೇಹಾನುಸಾರ ವರ್ತಿಸಬೇಕು. ಇದೇ ಪ್ರಕೃತಿ ನಿಯಮ. ಆದರೆ ಎಲ್ಲ ಸನ್ನಿವೇಶಗಳಲ್ಲಿ ಪರಮಾತ್ಮನು ವ್ಯಕ್ತಿಗತ ಆತ್ಮನೊಂದಿಗೆ ಇರುತ್ತಾನೆ. ಇದು ವೇದಗಳಲ್ಲಿ (ಮುಂಡಕ ಉಪನಿಷತ್ತಿನಲ್ಲಿ 3-1.1) ಹೀಗೆ ವಿವರಿಸಲ್ಪಟ್ಟಿದೆ : **ದ್ವಾ ಸುಪರ್ಣಾ ಸಯುಜಾ ಸಖಾಯಃ** ಪರಮ ಪ್ರಭು ಜೀವಿಯ ಬಗ್ಗೆ ಅದೆಷ್ಟು ದಯಾ ಮಯನೆಂದರೆ ಅವನು ಸದಾ ವ್ಯಕ್ತಿಗತ ಆತ್ಮನೊಂದಿಗೆ ಜೊತೆಗೆ ಇರುವನು ಮತ್ತು ಸರ್ವ ಸನ್ನಿವೇಶಗಳಲ್ಲಿ ಪರಮಾತ್ಮನಾಗಿ ಸನ್ನಿಹಿತನು,

**ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ ಗುಣಾನ್ ।**
**ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು ॥ ೨೨ ॥**

ಪುರುಷಃ—ಜೀವಿಯು, ಪ್ರಕೃತಿ-ಸ್ಥಃ—ಭೌತಿಕ ಶಕ್ತಿಯಲ್ಲಿ ಸನ್ನಿವೇಶಿತನಾಗಿ, ಹಿ—ಖಂಡಿತವಾಗಿ, ಭುಂಕ್ತೇ—ಭೋಗಿಸುತ್ತಾನೆ, ಪ್ರಕೃತಿ-ಜಾನ್—ಭೌತಿಕ ಪ್ರಕೃತಿ ಯಿಂದ ಉತ್ಪನ್ನ, ಗುಣಾನ್—ಪ್ರಕೃತಿ ಗುಣಗಳನ್ನು, ಕಾರಣಮ್—ಕಾರಣವನ್ನು, ಗುಣ-ಸಂಗಃ—ಪ್ರಕೃತಿ ಗುಣ ಸಂಗ, ಅಸ್ಯ—ಜೀವಿಯ, ಸತ್-ಅಸತ್—ಒಳ್ಳೆಯ ಮತ್ತು ಕೆಟ್ಟ, ಯೋನಿ—ಜೀವ ಯೋನಿಗಳಲ್ಲಿ, ಜನ್ಮಸು—ಜನ್ಮಗಳು.

**ಹೀಗೆ ಭೌತಿಕ ಪ್ರಕೃತಿಯಲ್ಲಿ ಜೀವಿಯು ತ್ರಿವಿಧ ಪ್ರಕೃತಿಗುಣ ಭೋಗ ಮಾಡುತ್ತ ಜೀವನ ಮಾರ್ಗವನ್ನು ಅನುಸರಿಸುತ್ತಾನೆ. ಇದು ಅವನ ಭೌತಿಕ ಪ್ರಕೃತಿ ಸಂಗ ನಿಮಿತ್ತವಾದುದು. ಹೀಗೆ ಅವನು ನಾನಾ ಯೋನಿಗಳಲ್ಲಿ ಒಳ್ಳೆಯದನ್ನೋ, ಕೆಟ್ಟದ್ದನ್ನೋ ಸಂಧಿಸುತ್ತಾನೆ.**

**ಭಾವಾರ್ಥ :** ಜೀವಿಗಳು ಹೇಗೆ ದೇಹದಿಂದ ದೇಹಕ್ಕೆ ದೇಹಾಂತರ ಹೊಂದುತ್ತಾರೆ ಎಂಬುದನ್ನು ಅರಿತುಕೊಳ್ಳಲು ಈ ಶ್ಲೋಕವು ಮಹತ್ವದ್ದು. ಒಬ್ಬನು ಬಟ್ಟೆ ಬದಲಾಯಿಸಿದಂತೆ ಜೀವಿಯು ದೇಹದಿಂದ ದೇಹಕ್ಕೆ ದೇಹಾಂತರ ಹೊಂದುತ್ತಾನೆಂದು ಎರಡನೆಯ ಅಧ್ಯಾಯದಲ್ಲಿ ವಿವರಿಸಿದೆ. ಈ ಬಟ್ಟೆ ಬದಲಾವಣೆಯು ಅವನ ಭೌತಿಕ

ಅಸ್ತಿತ್ವದ ಆಸಕ್ತಿ ನಿಮಿತ್ತವಾದುದು. ಎಲ್ಲಿಯವರೆಗೆ ಜೀವಿಯು ಈ ಮಿಥ್ಯಾಭಿವ್ಯಕ್ತತೆಯಿಂದ ಆಕರ್ಷಿತನೋ ಆವರೆಗೆ, ಅವನು ದೇಹದಿಂದ ದೇಹಕ್ಕೆ ಸಾಗುತ್ತಿರಲೇಬೇಕು. ಭೌತಿಕ ಪ್ರಕೃತಿಯ ಮೇಲೆ ಆಧಿಪತ್ಯವು ಇಚ್ಛಾ ನಿಮಿತ್ತವಾದ್ದರಿಂದ ಅವನು ಅಂಥ ಅನಪೇಕ್ಷಣೀಯ ಸನ್ನಿವೇಶಗಳಲ್ಲಿ ಇರಿಸಲ್ಪಡುತ್ತಾನೆ. ಭೌತಿಕ ಪ್ರಕೃತಿ ಪ್ರಭಾವದಲ್ಲಿ, ಜೀವಿಯು ಕೆಲವು ಸಲ ದೇವತೆಯಾಗಿ, ಕೆಲವು ಸಲ ಮಾನವನಾಗಿ, ಕೆಲವು ಸಲ ಪಶು ಪ್ರಾಣಿಯಾಗಿ, ಪಕ್ಷಿ, ಕೀಟವಾಗಿ, ಜಲಚರವಾಗಿ, ಸಾಧು ಪುರುಷನಾಗಿ ಮತ್ತು ತಿಗಣೆಯಾಗಿಯೂ ಹುಟ್ಟುತ್ತಾನೆ. ಇದು ನಡೆದಿದೆ ಮತ್ತು ಈ ಎಲ್ಲ ಸಂದರ್ಭಗಳಲ್ಲಿ ಜೀವಿಯು ತಾನು ತನ್ನ ಸನ್ನಿವೇಶಗಳ ಸ್ವಾಮಿ ಎಂದು ಭಾವಿಸುತ್ತಾನೆ, ಆದರೆ ಅವನು ಭೌತಿಕ ಪ್ರಕೃತಿ ಪ್ರಭಾವಾಧೀನನು.

ಅವನು ಹೇಗೆ ವಿವಿಧ ದೇಹಗಳಲ್ಲಿ ಇರಿಸಲ್ಪಡುವನು ಎಂಬುದು ಇಲ್ಲಿ ವಿವರಿಸಿದೆ. ಅದು ವಿವಿಧ ಪ್ರಕೃತಿ ಗುಣಸಂಗದಿಂದ ಉಂಟಾಗುವುದು. ಆದ್ದರಿಂದ, ಒಬ್ಬನು ತ್ರಿವಿಧ ಭೌತಿಕ ಗುಣಗಳಿಂದ ಮೇಲೇರಬೇಕು ಮತ್ತು ದಿವ್ಯ ಸ್ಥಾನದಲ್ಲಿ ಸನ್ನಿವೇಶಿತನಾಗಬೇಕು. ಅದನ್ನೇ ಕೃಷ್ಣಪ್ರಜ್ಞೆ ಎಂದು ಕರೆದಿದೆ. ಒಬ್ಬನು ಕೃಷ್ಣ ಪ್ರಜ್ಞೆಯಲ್ಲಿ ಸನ್ನಿವೇಶಿತನಾದ ಹೊರತು, ಅವನ ಭೌತಿಕ ಪ್ರಜ್ಞೆಯು ದೇಹದಿಂದ ದೇಹಕ್ಕೆ ಸಾಗುವಂತೆ ಅವನನ್ನು ಒತ್ತಾಯಿಸುವುದು. ಏಕೆಂದರೆ ಅವನು ಅನಾದಿ ಕಾಲದಿಂದ ಭೌತಿಕ ಇಚ್ಛೆಗಳನ್ನು ಹೊಂದಿದ್ದಾನೆ. ಆದರೆ ಅವನು ಆ ಕಲ್ಪನೆಯನ್ನು ಬದಲಾಯಿಸಿಕೊಳ್ಳಬೇಕು. ಅಧಿಕೃತ ಮೂಲಗಳಿಂದ ಶ್ರವಣ ಮಾಡುವುದರಿಂದಲೇ ಅಂಥ ಬದಲಾವಣೆ ಮಾಡಿಕೊಳ್ಳಬಹುದು. ಅತ್ಯುತ್ತಮ ಉದಾಹರಣೆ ಇಲ್ಲಿದೆ : ಅರ್ಜುನನು ಕೃಷ್ಣನಿಂದ ಭಗವದ್ ವಿಜ್ಞಾನ ಶ್ರವಣ ಮಾಡುತ್ತಿದ್ದಾನೆ. ಜೀವಿಯು, ಈ ಶ್ರವಣ ಪ್ರಕ್ರಿಯೆಗೆ ಒಳಪಟ್ಟರೆ, ತನ್ನ ಬಹುಕಾಲದ ಭೌತಿಕ ಪ್ರಕೃತಿಯ ಆಧಿಪತ್ಯದ ಇಚ್ಛೆಯನ್ನು ಕಳೆದುಕೊಳ್ಳುತ್ತಾನೆ, ಮತ್ತು ಕ್ರಮೇಣ ಹಾಗೂ ಪ್ರಮಾಣಗತವಾಗಿ ಅಧಿಪತ್ಯದ ಸುದೀರ್ಘ ಇಚ್ಛೆಯನ್ನು ತಗ್ಗಿಸಿದಂತೆ, ಅವನು ಆಧ್ಯಾತ್ಮ ಸುಖಭೋಗಕ್ಕೆ ಬರುತ್ತಾನೆ. ಪರಮ ದೇವೋತ್ತಮ ಪುರುಷನ ಸಂಗದಲ್ಲಿ ಅವನು ಜ್ಞಾನಿಯಾದಂತೆ ಅದಕ್ಕೆ ತಕ್ಕ ಪ್ರಮಾಣದಲ್ಲಿ ಅವನು ತನ್ನ ನಿತ್ಯಾನಂದ ಜೀವನವನ್ನು ಆಸ್ವಾದಿಸುತ್ತಾನೆ.

**ಉಪದ್ರಷ್ಟಾನುಮನ್ತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।**
**ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ॥ ೨೩ ॥**

ಉಪದ್ರಷ್ಟಾ—ಮೇಲ್ವಿಚಾರಕನು, ಅನುಮನ್ತಾ—ಅನುಮತಿಸುವವನು, ಚ—ಕೂಡ, ಭರ್ತಾ—ಒಡೆಯ, ಭೋಕ್ತಾ—ಪರಮ ಭೋಕ್ತನು, ಮಹಾ-ಈಶ್ವರಃ—ಪರಮಪ್ರಭು, ಪರಮ-ಆತ್ಮಾ—ಪರಮಾತ್ಮನು, ಇತಿ—ಕೂಡ, ಚ—ಮತ್ತು, ಅಪಿ—ನಿಜವಾಗಿ, ಉಕ್ತಃ—ಹೇಳಿದೆ, ದೇಹೇ—ದೇಹದಲ್ಲಿ, ಅಸ್ಮಿನ್—ಇದು, ಪುರುಷಃ—ಭೋಕ್ತಾರನು, ಪರಃ—ದಿವ್ಯ.

**ಆದರೆ ಈ ದೇಹದಲ್ಲಿ, ಪರಮಾತ್ಮನೆಂದು ವಿದಿತನಾದ ಮೇಲ್ವಿಚಾರಕನು ಮತ್ತು ಅನುಮತಿಸುವವನಾಗಿರುವ ಪರಮ ಒಡೆಯನು, ಸ್ವಾಮಿಯೂ ಆಗಿರುವ ದಿವ್ಯ ಭೋಕ್ತಾರನಿದ್ದಾನೆ.**

**ಭಾವಾರ್ಥ :** ವ್ಯಕ್ತಿಗತ ಆತ್ಮನೊಂದಿಗೆ ಸದಾ ಇರುವ ಪರಮಾತ್ಮನು ಪರಮ ಪ್ರಭುವಿನ ಪ್ರತಿನಿಧಿ ಎಂದು ಇಲ್ಲಿ ಹೇಳಿದೆ. ಅವನು ಸಾಮಾನ್ಯ ಜೀವಿಯಲ್ಲ. ಕ್ಷೇತ್ರಜ್ಞನು ಒಬ್ಬನೇ ಎಂದು ಅದ್ವೈತ ದಾರ್ಶನಿಕರು ಗ್ರಹಿಸುವುದರಿಂದ, ಪರಮಾತ್ಮ ಮತ್ತು ವ್ಯಕ್ತಿಗತ ಆತ್ಮರಲ್ಲಿ ಭೇದವಿಲ್ಲ ಎಂದು ಅವರು ಭಾವಿಸುತ್ತಾರೆ. ಇದನ್ನು ಸ್ಪಷ್ಟಪಡಿಸಲು ತಾನು ಪ್ರತಿಯೊಂದು ದೇಹದಲ್ಲಿ ಪರಮಾತ್ಮನಾಗಿ ಪ್ರತಿನಿಧಿತ ಎಂದು ಹೇಳುತ್ತಾನೆ. ಅವನು ವ್ಯಕ್ತಿಗತ ಆತ್ಮನಿಂದ ಭಿನ್ನನು; ಅವನು **ಪರ,** ದಿವ್ಯನು. ವ್ಯಕ್ತಿಗತ ಆತ್ಮನು ವಿಶಿಷ್ಟ ಕ್ಷೇತ್ರದ ಚಟುವಟಿಕೆಗಳನ್ನು ಭೋಗಿಸುವವನು, ಆದರೆ ಪರಮಾತ್ಮನು ಪರಿಮಿತ ಭೋಕ್ತೃವಾಗಿ ಅಥವಾ ದೈಹಿಕ ಚಟುವಟಿಕೆಗಳಲ್ಲಿ ಭಾಗವಹಿಸುವವನಾಗಿ ಸನ್ನಿಹಿತನಲ್ಲ, ಆದರೆ ಸಾಕ್ಷಿಯಾಗಿ, ಉಪದ್ರಷ್ಟನಾಗಿ, ಅನುಮತಿದಾತನಾಗಿ ಮತ್ತು ಪರಮ ಭೋಕ್ತೃವಾಗಿ ಸನ್ನಿಹಿತನು. ಅವನ ಹೆಸರು ಪರಮಾತ್ಮ. ಆತ್ಮಾ ಎಂದಲ್ಲ ಮತ್ತು ಅವನು ದಿವ್ಯನು. ಆತ್ಮಾ ಮತ್ತು ಪರಮಾತ್ಮ ಭಿನ್ನವೆಂದು ಸುಸ್ಪಷ್ಟ. ಪರಮಾತ್ಮನಿಗೆ ಸರ್ವತ್ರ ಪಾದಪಾಣಿಗಳಿವೆ, ಆದರೆ ವ್ಯಕ್ತಿಗತ ಆತ್ಮನಿಗೆ ಇಲ್ಲ. ಪರಮಾತ್ಮನು ಪರಮ ಪ್ರಭು. ಆದುದರಿಂದ, ಅವನು ವ್ಯಕ್ತಿಗತ ಆತ್ಮನ ಭೌತಿಕ ಭೋಗಕ್ಕೆ ಅನುಮತಿ ನೀಡಲು ಅಂತಃಸನ್ನಿಹಿತನು. ಪರಮ ಆತ್ಮನ ಅಪ್ಪಣೆ ಇಲ್ಲದೆ, ವ್ಯಕ್ತಿಗತ ಆತ್ಮನು ಏನೂ ಮಾಡಲಾರನು. ವ್ಯಕ್ತಿಯು **ಭುಕ್ತನು,** ಅಥವಾ ಪಾಲಿತನು, ಮತ್ತು ಭಗವಂತನು ಭೋಕ್ತಾ, ಅಥವಾ ಪಾಲಕನು. ಅಸಂಖ್ಯ ಜೀವಿಗಳಿದ್ದಾರೆ ಮತ್ತು ಅವನು ಅವರಲ್ಲಿ ಸಖನಾಗಿ ಸ್ಥಿತನು.

ಪ್ರತಿಯೊಬ್ಬ ವ್ಯಕ್ತಿಗತ ಜೀವಿಯು ಶಾಶ್ವತವಾಗಿ ಪರಮಪ್ರಭುವಿನ ವಿಭಿನ್ನಾಂಶನು ಎಂಬುದು ಸತ್ಯಸಂಗತಿ, ಮತ್ತು ಅವರೀರ್ವರೂ ಬಹುನಿಕಟ ಸಖ್ಯ ಸಂಬಂಧಿಗಳು. ಆದರೆ ಜೀವಿಯು ಪರಮಪ್ರಭುವಿನ ಅಪ್ಪಣೆಯನ್ನು ನಿರಾಕರಿಸುವ ಮತ್ತು ಪ್ರಕೃತಿಯ ಮೇಲೆ ಆಧಿಪತ್ಯ ನಡೆಸುವ ಪ್ರಯತ್ನದಲ್ಲಿ ಸ್ವತಂತ್ರವಾಗಿ ವರ್ತಿಸುವ ಪ್ರವಣತೆ ಹೊಂದಿದ್ದಾನೆ, ಮತ್ತು ಅವನಲ್ಲಿ ಈ ಪ್ರವಣತೆ ಇರುವುದರಿಂದ ಅವನನ್ನು ಪರಮಪ್ರಭುವಿನ ತಟಸ್ಥ ಶಕ್ತಿ ಎಂದು ಕರೆದಿದೆ. ಜೀವಿಯು ಭೌತಿಕ ಶಕ್ತಿಯಲ್ಲಿರಬಹುದು ಅಥವಾ ಅಧ್ಯಾತ್ಮ ಶಕ್ತಿಯಲ್ಲಿರಬಹುದು. ಅವನು ಭೌತಿಕ ಶಕ್ತಿಯಿಂದ ಬದ್ಧನಾಗಿರುವವರೆಗೆ, ಪರಮಪ್ರಭುವು, ಅವನ ಸಖನಾಗಿ ಪರಮಾತ್ಮನಾಗಿ ಅವನನ್ನು ಆಧ್ಯಾತ್ಮಶಕ್ತಿಗೆ ಮರಳಿ ತರಲು ಅವನೊಂದಿಗೆ ಇರುತ್ತಾನೆ. ಅವನನ್ನು ಮತ್ತೆ ಪರಾಶಕ್ತಿಗೆ ಮರಳಿತರಲು ಭಗವಂತನು ಸದಾ ಕಾತುರನು, ಆದರೆ ತನ್ನ ಸೂಕ್ಷ್ಮ ಸ್ವಾತಂತ್ರ್ಯದಿಂದಾಗಿ ವ್ಯಕ್ತಿಗತ ಆತ್ಮನು ನಿರಂತರವಾಗಿ ದಿವ್ಯ ಪ್ರಕಾಶದ ಸಂಗವನ್ನು ನಿರಾಕರಿಸುತ್ತಿದ್ದಾನೆ. ಸ್ವಾತಂತ್ರ್ಯದ ಈ ದುರುಪಯೋಗವು ಬದ್ಧ ಪ್ರಕೃತಿಯಲ್ಲಿ ಅವನ ಭೌತಿಕ ಹೋರಾಟಕ್ಕೆ ಕಾರಣ ಆದ್ದರಿಂದ ಭಗವಂತನು ಸದಾ ಒಳಗಿನಿಂದಲೂ ಹೊರಗಿನಿಂದಲೂ ಉಪದೇಶ ನೀಡುತ್ತಾನೆ. ಹೊರಗಿನಿಂದ ಭಗವ

ದ್ಗೀತೆಯಲ್ಲಿ ಹೇಳಿದಂತೆ ಮತ್ತು ಒಳಗಿನಿಂದ ಅವನು ಭೌತಿಕ ಜಗತ್ತಿನಲ್ಲಿನ ಜೀವಿಯ ಚಟುವಟಿಕೆಗಳು ಅವನ ನಿಜಸುಖಕ್ಕೆ ಸಹಾಯಕವಲ್ಲ ಎಂದು ಅವನಿಗೆ ಒಪ್ಪಿಸಲು ಪ್ರಯತ್ನಿಸುತ್ತಾನೆ. "ಅದನ್ನು ಬಿಡು, ನಿನ್ನ ಶ್ರದ್ಧೆಯನ್ನು ನನ್ನೆಡೆಗೆ ತಿರುಗಿಸು. ಆಗ ನೀನು ಸುಖಿಯಾಗುವೆ", ಎಂದು ಹೇಳುತ್ತಾನೆ. ಹೀಗೆ ಪರಮಾತ್ಮನಲ್ಲಿ ಅಥವಾ ಪರಮ ದೇವೋತ್ತಮ ಪುರುಷನಲ್ಲಿ ಶ್ರದ್ಧೆಯನ್ನಿಡುವ ಬುದ್ಧಿವಂತನು ನಿತ್ಯ ಜ್ಞಾನಾನಂದಮಯ ಜೀವನದೆಡೆಗೆ ಸಾಗಲು ಪ್ರಾರಂಭಿಸುತ್ತಾನೆ.

**ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ ।**
**ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ ॥೨೪॥**

ಯಃ—ಯಾರು, ಏವಮ್—ಹೀಗೆ, ವೇತ್ತಿ—ಅರಿತುಕೊಳ್ಳುತ್ತಾನೆ, ಪುರುಷಮ್—ಜೀವಿಯನ್ನು, ಪ್ರಕೃತಿಮ್—ಭೌತಿಕ ಪ್ರಕೃತಿಯನ್ನು, ಚ—ಮತ್ತು, ಗುಣೈಃ—ಭೌತಿಕ ಪ್ರಕೃತಿ ಗುಣಗಳ, ಸಹ—ಜೊತೆಗೆ, ಸರ್ವಥಾ—ಎಲ್ಲ ರೀತಿಗಳಲ್ಲಿ, ವರ್ತಮಾನಃ—ಸನ್ನಿವೇಶಿತನಾಗಿ, ಅಪಿ—ಇದ್ದರೂ ಕೂಡ, ನ—ಎಂದಿಗೂ ಇಲ್ಲ, ಸಃ—ಅವನು, ಭೂಯಃ—ಮತ್ತೆ, ಅಭಿಜಾಯತೇ—ಜನ್ಮವೆತ್ತುವುದು.

**ಭೌತಿಕ ಪ್ರಕೃತಿ, ಜೀವಿ ಮತ್ತು ಪ್ರಕೃತಿ ಗುಣಗಳ ಪರಸ್ಪರ ಕ್ರಿಯೆಯ ಈ ತತ್ತ್ವಜ್ಞಾನವನ್ನು ಅರಿತುಕೊಂಡವನು ಮೋಕ್ಷ ಹೊಂದುವುದು ಖಂಡಿತ. ಅವನು ಈಗ ಯಾವ ಸ್ಥಿತಿಯಲ್ಲಿಯೇ ಇರಲಿ, ಮತ್ತೆ ಇಲ್ಲಿ ಜನ್ಮ ಎತ್ತುವುದಿಲ್ಲ.**

**ಭಾವಾರ್ಥ :** ಭೌತಿಕ ಪ್ರಕೃತಿಯ, ಪರಮಾತ್ಮನ, ವ್ಯಕ್ತಿಗತ ಆತ್ಮನ ಮತ್ತು ಅವರ ಪರಸ್ಪರ ಸಂಬಂಧದ ಸ್ಪಷ್ಟ ಅರಿವು ಒಬ್ಬನನ್ನು ಮುಕ್ತನಾಗಲು ಮತ್ತು ಈ ಭೌತಿಕ ಪ್ರಕೃತಿಗೆ ಮರಳುವಂತೆ ಒತ್ತಾಯವಿಲ್ಲದೆ ಅಧ್ಯಾತ್ಮ ವಾತಾವರಣಕ್ಕೆ ತಿರುಗಲು ಅರ್ಹಗೊಳಿಸುತ್ತದೆ. ಇದು ಜ್ಞಾನದ ಫಲ. ಜೀವಿಯು ಆಕಸ್ಮಾತ್ತಾಗಿ ಈ ಭೌತಿಕ ಅಸ್ತಿತ್ವದಲ್ಲಿ ಬಿದ್ದಿದ್ದಾನೆ ಎಂದು ಸ್ಪಷ್ಟವಾಗಿ ಅರಿತುಕೊಳ್ಳುವುದು ಜ್ಞಾನದ ಉದ್ದೇಶ. ಅಧಿಕಾರಿಗಳ, ಸಾಧುಪುರುಷರ, ಮತ್ತು ಗುರುಗಳ ಸಂಗದಲ್ಲಿ ಸ್ವಯಂ ಪ್ರಯತ್ನದಿಂದ, ಅವನು ತನ್ನ ಸ್ಥಾನವನ್ನು ಅರಿತುಕೊಳ್ಳಬೇಕು, ಮತ್ತು ಆಮೇಲೆ ಪರಮ ದೇವೋತ್ತಮ ಪುರುಷನಿಂದ ವಿವರಿಸಲ್ಪಟ್ಟಂತೆ ಯಥಾರೂಪ ಭಗವದ್ಗೀತೆಯನ್ನು ಅರಿತುಕೊಳ್ಳುವ ಮೂಲಕ ಅಧ್ಯಾತ್ಮ ಪ್ರಜ್ಞೆಗೆ ಅಥವಾ ಕೃಷ್ಣಪ್ರಜ್ಞೆಗೆ ಹಿಂದಿರುಗಬೇಕು. ಆಗ ಅವನು ಮತ್ತೆ ಈ ಭೌತಿಕ ಅಸ್ತಿತ್ವಕ್ಕೆ ಎಂದೂ ಮರಳುವುದಿಲ್ಲ ಎಂಬುದು ಖಂಡಿತ ; ಅವನು ನಿತ್ಯಜ್ಞಾನಾನಂದ ಜೀವನಕ್ಕಾಗಿ ಅಧ್ಯಾತ್ಮ ಜಗತ್ತಿಗೆ ವರ್ಗಾಯಿಸಲ್ಪಡುತ್ತಾನೆ.

**ಧ್ಯಾನೇನಾತ್ಮನಿ ಪಶ್ಯನ್ತಿ ಕೇಚಿದಾತ್ಮಾನಮಾತ್ಮನಾ ।**
**ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ ॥೨೫॥**

ಧ್ಯಾನೇನ—ಧ್ಯಾನದಿಂದ, ಆತ್ಮನಿ—ಆತ್ಮನಲ್ಲಿ, ಪಶ್ಯನ್ತಿ—ನೋಡುತ್ತಾರೆ, **ಕೇಚಿತ್**—ಕೆಲವರು, ಆತ್ಮಾನಮ್—ಪರಮಾತ್ಮನನ್ನು, ಆತ್ಮನಾ—ಮನಸ್ಸಿನಿಂದ, ಅನ್ಯೇ

—ಇತರರು, ಸಾಂಖ್ಯೇನ—ತಾತ್ವಿಕ ಚರ್ಚೆಯ, ಯೋಗೇನ—ಯೋಗಸಾಧನೆಯಿಂದ, ಕರ್ಮ-ಯೋಗೇನ—ಕಾಮ್ಯ ಫಲಾಪೇಕ್ಷೆಯಿಲ್ಲದ ಚಟುವಟಿಕೆಗಳಿಂದ, ಚ—ಕೂಡ, ಅಪರೇ—ಇತರರು.

**ಕೆಲವರು ಧ್ಯಾನದಿಂದ ತನ್ನೊಳಗೆಯೇ, ಇತರರು ಜ್ಞಾನಸಾಧನೆ ಮೂಲಕ, ಇನ್ನೂ ಕೆಲವರು ಫಲಾಪೇಕ್ಷೆಯಿಲ್ಲದೆ ಕರ್ಮಮಾಡುವ ಮೂಲಕ, ಪರಮಾತ್ಮನನ್ನು ಕಾಣುತ್ತಾರೆ.**

**ಭಾವಾರ್ಥ :** ಮಾನವನ ಆತ್ಮ ಸಾಕ್ಷಾತ್ಕಾರ ಶೋಧದ ಮಟ್ಟಿಗೆ ಬದ್ಧಾತ್ಮರನ್ನು ಎರಡು ವರ್ಗವಾಗಿ ವಿಂಗಡಿಸಬಹುದೆಂದು ಭಗವಂತನು ಅರ್ಜುನನಿಗೆ ತಿಳಿಸುತ್ತಾನೆ. ನಾಸ್ತಿಕರು, ಅಜ್ಞೇಯತಾವಾದಿಗಳು, ಮತ್ತು ಸಂದೇಹವಾದಿಗಳು ಅಧ್ಯಾತ್ಮ ಅರಿವಿನ ಭಾವಕ್ಕೆ ದೂರರು. ಆದರೆ ಅಧ್ಯಾತ್ಮ ಜೀವನದ ತಮ್ಮ ಅರಿವಿನಲ್ಲಿ ನಂಬಿಕೆ ಇರುವ ಇತರರು ಇದ್ದಾರೆ, ಮತ್ತು ಅವರನ್ನು ಕಾಮ್ಯಫಲಗಳನ್ನು ತ್ಯಜಿಸಿದ ಅಂತರ್ಮುಖೀ ಭಕ್ತರು, ದಾರ್ಶನಿಕರು ಮತ್ತು ಕರ್ಮಿಗಳೆಂದು ಕರೆದಿದೆ. ಅದ್ವೈತ ತತ್ತ್ವವನ್ನು ಸ್ಥಾಪಿಸಲು ಸದಾ ಪ್ರಯತ್ನಿಸುವವರೂ ಕೂಡ ನಾಸ್ತಿಕರು ಮತ್ತು ಅಜ್ಞೇಯತಾವಾದಿಗಳಲ್ಲಿ ಸೇರಿದವರೆಂದು ಪರಿಗಣಿಸಲ್ಪಡುತ್ತಾರೆ. ಎಂದರೆ ಪರಮ ದೇವೋತ್ತಮ ಪುರುಷನ ಭಕ್ತರು, ಮಾತ್ರ ಅಧ್ಯಾತ್ಮ ಅರಿವಿನಲ್ಲಿ ಅತ್ಯುತ್ತಮವಾಗಿ ಸನ್ನಿವೇಶಿತರು, ಏಕೆಂದರೆ ಈ ಭೌತಿಕ ಪ್ರಕೃತಿಯಾಚೆಗೆ ಅಧ್ಯಾತ್ಮ ಲೋಕವಿದೆ ಮತ್ತು ಪ್ರತಿಯೊಬ್ಬನಲ್ಲಿ ಪರಮಾತ್ಮನಾಗಿ ಸರ್ವತ್ರವ್ಯಾಪ್ತ ದೇವೋತ್ತಮನಾಗಿ ಪರಮ ದೇವೋತ್ತಮ ಪುರುಷನು ವಿಸ್ತಾರಗಿದ್ದಾನೆ ಎಂಬುದನ್ನು ಅವರು ತಿಳಿದಿರುತ್ತಾರೆ. ಜ್ಞಾನ ಸಾಧನದಿಂದ ಪರಮ ಪರತತ್ತ್ವವನ್ನು ಅರಿತುಕೊಳ್ಳಲು ಪ್ರಯತ್ನಿಸುವ ಇತರರೂ ಇದ್ದಾರೆ, ಮತ್ತು ಅವರನ್ನು ಶ್ರದ್ಧಾವಂತರ ವರ್ಗಕ್ಕೆ ಸೇರಿದವರೆಂದು ಪರಿಗಣಿಸಬಹುದು. ಸಾಂಖ್ಯದಾರ್ಶನಿಕರು ಈ ಭೌತಿಕ ಜಗತ್ತನ್ನು ಇಪ್ಪತ್ತು-ನಾಲ್ಕು ತತ್ತ್ವಗಳಲ್ಲಿ ವಿಶ್ಲೇಷಿಸುತ್ತಾರೆ, ಮತ್ತು ವ್ಯಕ್ತಿಗತ ಆತ್ಮನನ್ನು ಇಪ್ಪತ್ತೈದನೆಯ ತತ್ತ್ವವೆಂದು ಸ್ಥಾಪಿಸುತ್ತಾರೆ. ವ್ಯಕ್ತಿಗತ ಆತ್ಮನು ಮಹಾಭೂತಗಳಿಗೆ ಅತೀತನಾದವನು ಎಂದು ಅವನ ಸ್ವಭಾವ ಅರಿತುಕೊಳ್ಳಲು ಸಮರ್ಥರಾದಾಗ, ಅವರು ಆ ವ್ಯಕ್ತಿಗತ ಆತ್ಮನ ಮೇಲೆ ಪರಮದೇವೋತ್ತಮ ಪುರುಷನಿದ್ದಾನೆ ಎಂಬುದನ್ನು ಕೂಡ ಅರಿತುಕೊಳ್ಳಲು ಸಮರ್ಥರು ಅವನು ಇಪ್ಪತ್ತಾರನೆಯ ತತ್ತ್ವ, ಹೀಗೆ ಕ್ರಮೇಣ ಅವರು ಕೂಡ ಕೃಷ್ಣಪ್ರಜ್ಞೆಯಲ್ಲಿ ಭಕ್ತಿಸೇವಾ ಮಟ್ಟಕ್ಕೆ ಬರುತ್ತಾರೆ. ಕಾಮ್ಯ ಫಲಗಳಿಲ್ಲದೆ ಕರ್ಮ ಮಾಡುವವರೂ ಕೂಡ ತಮ್ಮ ಭಾವದಲ್ಲಿ ಪರಿಪೂರ್ಣರು. ಅವರಿಗೆ ಕೃಷ್ಣಪ್ರಜ್ಞೆಯಲ್ಲಿ ಭಕ್ತಿಯುತ ಸೇವಾಮಟ್ಟಕ್ಕೆ ಪ್ರಗತಿಹೊಂದಲು ಅವಕಾಶ ನೀಡಲಾಗುತ್ತದೆ. ಧ್ಯಾನದಿಂದ ಪರಮಾತ್ಮನನ್ನು ಕಂಡುಕೊಳ್ಳಲು ಯತ್ನಿಸುವ ಪ್ರಜ್ಞೆಯಲ್ಲಿ ಶುದ್ಧರಾದವರೂ ಕೆಲವರಿದ್ದಾರೆ, ಮತ್ತು ತಮ್ಮೊಳಗೆ ಪರಮಾತ್ಮನನ್ನು ಕಂಡಾಗ ಅವರು ದಿವ್ಯವಾಗಿ ಸನ್ನಿವೇಶಿತರು, ಎಂದು ಇಲ್ಲಿ ಹೇಳಿದೆ. ಅದೇ ಪ್ರಕಾರ, ಜ್ಞಾನ ಸಾಧನೆಯಿಂದ ಪರಮ ಆತ್ಮನನ್ನು ಅರಿತುಕೊಳ್ಳಲೆತ್ನಿಸುವ ಇತರರೂ ಇದ್ದಾರೆ, ಮತ್ತು ಬಾಲಿಶ

ಚಟುವಟಿಕೆಗಳಿಂದ ಪರಮಪುರುಷೋತ್ತಮ ಪುರುಷನನ್ನು ತುಷ್ಟಿಪಡಿಸಲು ಪ್ರಯತ್ನಿಸುವ ಹಠ-ಯೋಗ ಪದ್ಧತಿಯನ್ನು ಸಾಧಿಸುವ ಇನ್ನೂ ಕೆಲವರಿದ್ದಾರೆ.

**ಅನ್ಯೇ ತ್ವೇವಮಜಾನನ್ತಃ ಶ್ರುತ್ವಾನ್ಯೇಭ್ಯ ಉಪಾಸತೇ ।**
**ತೇಽಪಿ ಚಾತಿತರನ್ತ್ಯೇವ ಮೃತ್ಯುಂ ಶ್ರುತಿಪರಾಯಣಾಃ ॥ ೨೬ ॥**

ಅನ್ಯೇ—ಇತರರು, ತು—ಆದರೆ, ಏವಮ್—ಹೀಗೆ, ಅಜಾನನ್ತಃ—ಅಧ್ಯಾತ್ಮ ಜ್ಞಾನವಿಲ್ಲದೆ, ಶ್ರುತ್ವಾ—ಶ್ರವಣ ಮಾಡಿ, ಅನ್ಯೇಭ್ಯಃ—ಇತರರಿಂದ, ಉಪಾಸತೇ—ಆರಾಧಿಸಲಾರಂಭಿಸುತ್ತಾರೆ, ತೇ—ಅವರು, ಅಪಿ—ಕೂಡ, ಚ—ಮತ್ತು, ಅತಿತರನ್ತಿ—ದಾಟುತ್ತಾರೆ, ಏವ—ಖಂಡಿತವಾಗಿ, ಮೃತ್ಯುಮ್—ಮರಣ ಪಥವನ್ನು, ಶ್ರುತಿ-ಪರಾಯಣಾಃ—ಶ್ರವಣ ಪ್ರಕ್ರಿಯಾ ಪರಾಯಣರು.

**ಮತ್ತೆ ಅಧ್ಯಾತ್ಮ ಜ್ಞಾನ ಪರಿಚಯವಿಲ್ಲದಿದ್ದರೂ ಇತರರಿಂದ ಅವನ ಬಗ್ಗೆ ಶ್ರವಣ ಮಾಡಿ ಪರಮಪ್ರಭುವನ್ನು ಪೂಜಿಸಲು ಪ್ರಾರಂಭಿಸುವವರೂ ಇದ್ದಾರೆ. ಅವರು ಪ್ರಮಾಣಾಚಾರ್ಯರಿಂದ ಶ್ರವಣ ಮಾಡುವ ಪ್ರವಣತೆ ಹೊಂದಿದ್ದು. ಅವರೂ ಕೂಡ ಜನನ ಮರಣಗಳ ಪಥವನ್ನು ದಾಟುತ್ತಾರೆ**

**ಭಾವಾರ್ಥ :** ಈ ಶ್ಲೋಕವು ವಿಶೇಷವಾಗಿ ಆಧುನಿಕ ಸಮಾಜಕ್ಕೆ ಅನ್ವಯಿಸುತ್ತದೆ. ಏಕೆಂದರೆ ಆಧುನಿಕ ಸಮಾಜದಲ್ಲಿ ಆಧ್ಯಾತ್ಮ ವಿಷಯಗಳಲ್ಲಿ ಶಿಕ್ಷಣವೆಂಬುದೇ ಇಲ್ಲ. ಕೆಲವರು ನಾಸ್ತಿಕರು ಅಥವಾ ಅಜ್ಞೇಯತಾವಾದಿಗಳು ಅಥವಾ ತಾತ್ವಿಕರು ಎಂದು ತೋರಬಹುದು, ಆದರೆ ವಾಸ್ತವಿಕವಾಗಿ ಅವರಿಗೆ ತತ್ತ್ವಜ್ಞಾನವಿರುವುದಿಲ್ಲ. ಸಾಮಾನ್ಯ ಮಾನವನ ಮಟ್ಟಿಗಾದರೋ ಅವರು ಸದಾತ್ಮನಾಗಿದ್ದರೆ ಅವನಿಗೆ ಶ್ರವಣ ಮೂಲಕ ಸಾಧನದ ಅವಕಾಶ ಉಂಟು. ಈ ಶ್ರವಣ ಪ್ರಕ್ರಿಯೆಯು ಬಹು ಮುಖ್ಯವಾದುದು. ಆಧುನಿಕ ಜಗತ್ತಿನಲ್ಲಿ ಕೃಷ್ಣ ಪ್ರಜ್ಞೆಯನ್ನು ಬೋಧಿಸಿದ ಶ್ರೀ ಚೈತನ್ಯರು ಶ್ರವಣಕ್ಕೆ ಬಹಳಷ್ಟು ಒತ್ತುಕೊಟ್ಟರು, ಏಕೆಂದರೆ ಸಾಮಾನ್ಯ ಮಾನವನು ಅಧಿಕೃತ ಮೂಲಗಳಿಂದ ಸುಮ್ಮನೆ ಶ್ರವಣ ಮಾಡಿದರೆ ಸಾಕು, ವಿಶೇಷವಾಗಿ ಶ್ರೀ ಚೈತನ್ಯರ ಪ್ರಕಾರ ಅವನು ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ, ಎಂಬ ದಿವ್ಯ ಉಚ್ಚಾರವನ್ನು ಶ್ರವಣ ಮಾಡಿದರೆ ಅವನು ಪ್ರಗತಿ ಹೊಂದಬಲ್ಲನು. ಆದ್ದರಿಂದ ಎಲ್ಲ ಮಾನವರು ಸಾಕ್ಷಾತ್ಕೃತ ಆತ್ಮರಿಂದ ಶ್ರವಣಲಾಭವನ್ನು ಪಡೆಯಬೇಕು, ಮತ್ತು ಕ್ರಮೇಣ ಪ್ರತಿಯೊಂದನ್ನೂ ಅರಿತುಕೊಳ್ಳಲು ಶಕ್ತರಾಗಬೇಕೆಂದು ಹೇಳಿದೆ. ಆಗ ಭಗವದಾರಾಧನೆಯು ನಿಸ್ಸಂದೇಹವಾಗಿ ಕಾರ್ಯರೂಪಕ್ಕೆ ಬರುತ್ತದೆ. ಈ ಯುಗದಲ್ಲಿ ಯಾರೂ ತನ್ನ ಸ್ಥಾನವನ್ನು ಬದಲಾಯಿಸಿಕೊಳ್ಳುವ ಅಗತ್ಯವಿಲ್ಲ. ಆದರೆ ಒಬ್ಬನು ಪರಮಾತ್ಮನನ್ನು ಊಹಾಪೋಹಾತ್ಮಕ ತರ್ಕದಿಂದ ಅರಿತುಕೊಳ್ಳುವ ಪ್ರಯತ್ನವನ್ನು ತ್ಯಜಿಸಬೇಕು ಎಂದು ಶ್ರೀ ಚೈತನ್ಯರು ಹೇಳಿದ್ದಾರೆ. ಒಬ್ಬನು ಭಗವದ್ ಜ್ಞಾನದಲ್ಲಿರುವವರ ದಾಸನಾಗಲು ಕಲಿಯಬೇಕು. ಒಬ್ಬನು ಶುದ್ಧ ಭಕ್ತನನ್ನು ಆಶ್ರಯಿಸುವಷ್ಟು ಮತ್ತು ಆತ್ಮ ಸಾಕ್ಷಾತ್ಕಾರದ

ಬಗ್ಗೆ ಅವನಿಂದ ಶ್ರವಣ ಮಾಡುವಷ್ಟು ಮತ್ತು ಅವನ ಮಾರ್ಗವನ್ನು ಅನುಸರಿಸುವಷ್ಟು ಸುದೈವಿಯಾಗಿದ್ದರೆ, ಅವನು ಸಾವಧಾನವಾಗಿ ಶುದ್ಧ ಭಕ್ತನ ಸ್ಥಾನಕ್ಕೆ ಉನ್ನತಿಹೊಂದುವನು. ಈ ಶ್ಲೋಕದಲ್ಲಿ ವಿಶೇಷವಾಗಿ ಶ್ರವಣ ವಿಧಾನವು ಒತ್ತಾಸೆಯಿಂದ ಹೇಳಲ್ಪಟ್ಟಿದೆ, ಮತ್ತು ಇದು ಬಹಳ ಸಮರ್ಪಕ. ಸಾಮಾನ್ಯ ಮನುಷ್ಯನು ಅನೇಕ ಸಲ ಹಾಗೆಂದು ಕರೆಯುವ ತಾತ್ವಿಕರಷ್ಟು ಯೋಗ್ಯನಾಗಿರದಿದ್ದರೂ, ಅಧಿಕೃತ ವ್ಯಕ್ತಿಯಿಂದ ಶ್ರದ್ಧಾಪೂರ್ವಕ ಶ್ರವಣದ ಮೂಲಕ ಒಬ್ಬನು ಈ ಭೌತಿಕ ಅಸ್ತಿತ್ವವನ್ನು ದಾಟಲು ಮತ್ತು ದೇವತ್ವಕ್ಕೆ ಮರಳಿ ಧಾಮಕ್ಕೆ ಹಿಂದಿರುಗಲು ಸಹಾಯಕವಾಗುವುದು

**ಯಾವತ್ ಸಂಜಾಯತೇ ಕಿಂಚಿತ್ ಸತ್ತ್ವಂ ಸ್ಥಾವರಜಂಗಮಮ್ ।**
**ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ ತದ್ವಿದ್ಧಿ ಭರತರ್ಷಭ ॥ ೨೭ ॥**

ಯಾವತ್—ಯಾವುದೇ, ಸಂಜಾಯತೇ—ಅಸ್ತಿತ್ವಕ್ಕೆ ಬರುವುದು, ಕಿಂಚಿತ್—ಯಾವುದೇ, ಸತ್ತ್ವಮ್—ಅಸ್ತಿತ್ವ, ಸ್ಥಾವರ—ಅಚಲ, ಜಂಗಮಮ್—ಚಲಿಸುವ, ಕ್ಷೇತ್ರ—ದೇಹದ, ಕ್ಷೇತ್ರಜ್ಞ—ಮತ್ತು ಕ್ಷೇತ್ರಜ್ಞನ ಸಂಯೋಗಾತ್—ಸಂಯೋಗದಿಂದ, ತತ್ ವಿದ್ಧಿ—ಅದನ್ನು ನೀನು ತಿಳಿಯಬೇಕು, ಭರತ-ಋಷಭ—ಹೇ ಭಾರತ ಶ್ರೇಷ್ಠನೇ.

**ಹೇ ಭರತ ಶ್ರೇಷ್ಠನೇ, ಅಸ್ತಿತ್ವದಲ್ಲಿ, ನೀನು ಕಾಣುವ ಚಲಿಸುವ ಮತ್ತು ಚಲಿಸದ ಎಲ್ಲವೂ ಕ್ಷೇತ್ರ ಮತ್ತು ಕ್ಷೇತ್ರಜ್ಞನ ಸಂಯೋಗ ಮಾತ್ರ.**

**ಭಾವಾರ್ಥ :** ವಿಶ್ವಸೃಷ್ಟಿಗೆ ಮೊದಲು ಅಸ್ತಿತ್ವದಲ್ಲಿದ್ದ ಭೌತಿಕ ಪ್ರಕೃತಿ ಮತ್ತು ಜೀವಿ, ಎರಡೂ ಈ ಶ್ಲೋಕದಲ್ಲಿ ವಿವರಿಸಲ್ಪಟ್ಟಿವೆ. ಸೃಷ್ಟವಾದುದು ಯಾವುದೇ ಇರಲಿ, ಅದು ಜೀವಿಯ ಮತ್ತು ಭೌತಿಕ ಪ್ರಕೃತಿಯ ಸಂಯೋಗ. ವೃಕ್ಷಗಳು, ಪರ್ವತಗಳು ಮತ್ತು ಗಿರಿಗಳಂಥ ಅನೇಕ ಅಚಲ ಉದ್ಭೂತಿಗಳಿವೆ, ಮತ್ತು ಚಲಿಸುತ್ತಿರುವ ಅನೇಕ ಜೀವಿಗಳಿವೆ ಮತ್ತು ಅವೆಲ್ಲವು ಕೇವಲ ಭೌತಿಕ ಪ್ರಕೃತಿಯ ಮತ್ತು ಪರಾಪ್ರಕೃತಿಯ ಸಂಯೋಗ ಮಾತ್ರ—ಜೀವಿ ಪರಾ ಪ್ರಕೃತಿಯಾದ ಜೀವಿಯ ಸ್ಪರ್ಶವಿಲ್ಲದೆ ಯಾವುದೂ ವೃದ್ಧಿಸಲಾರದು. ಜಡ ಮತ್ತು ಪ್ರಕೃತಿಯ ಸಂಬಂಧವು ನಿರಂತರವಾಗಿ ಸಾಗಿದೆ, ಮತ್ತು ಈ ಸಂಯೋಗವು ಭಗವಂತನಿಂದ ಘಟಿಸುತ್ತದೆ. ಆದ್ದರಿಂದ ಅವನು ಪರಾ ಮತ್ತು ಅಪರಾ ಎರಡೂ ಪ್ರಕೃತಿಗಳ ನಿಯಾಮಕನು. ಭೌತಿಕ ಪ್ರಕೃತಿಯು ಅವನಿಂದ ಸೃಷ್ಟ ಮತ್ತು ಪರಾಪ್ರಕೃತಿಯು ಭೌತಿಕ ಪ್ರಕೃತಿಯಲ್ಲಿ ಇರಿಸಲ್ಪಟ್ಟಿದೆ, ಹೀಗಾಗಿ ಈ ಎಲ್ಲ ಚಟುವಟಿಕೆಗಳು ಮತ್ತು ಉದ್ಭೂತಿಗಳು ಪರಿಣಮಿಸುತ್ತವೆ.

**ಸಮಂ ಸರ್ವೇಷು ಭೂತೇಷು ತಿಷ್ಠನ್ತಂ ಪರಮೇಶ್ವರಮ್ ।**
**ವಿನಶ್ಯತ್ಸ್ವವಿನಶ್ಯನ್ತಂ ಯಃ ಪಶ್ಯತಿ ಸ ಪಶ್ಯತಿ ॥ ೨೮ ॥**

ಸಮಮ್—ಸಮವಾಗಿ, ಸರ್ವೇಷು—ಎಲ್ಲ, ಭೂತೇಷು—ಜೀವಿಗಳಲ್ಲಿ, ತಿಷ್ಠನ್ತಮ್—ಇರುವ, ಪರಮ-ಈಶ್ವರಮ್—ಪರಮಾತ್ಮನು, ವಿನಶ್ಯತ್ಸು—ವಿನಾಶವಾಗುವುಗಳಲ್ಲಿ,

ಅವಿನಶ್ಯನ್ತಮ್—ಅವಿನಾಶಿಯನ್ನು, ಯಃ—ಯಾವನು, ಪಶ್ಯತಿ—ಕಾಣುತ್ತಾನೆ, ಸಃ—ಅವನು, ಪಶ್ಯತಿ—ವಾಸ್ತವಿಕವಾಗಿ ಕಾಣುತ್ತಾನೆ.

**ಯಾವನು ಎಲ್ಲ ದೇಹಗಳಲ್ಲಿ ವ್ಯಕ್ತಿಗತ ಆತ್ಮನೊಂದಿಗೆ ಪರಮಾತ್ಮನಿರುವುದನ್ನು ಕಾಣುತ್ತಾನೋ ಮತ್ತು ನಾಶಶೀಲ ದೇಹದಲ್ಲಿ ಆತ್ಮನಾಗಲಿ ಅಥವಾ ಪರಮಾತ್ಮನಾಗಲಿ ಎಂದೂ ವಿನಾಶಿಯಲ್ಲ ಎಂಬುದನ್ನು ಅರಿತುಕೊಳ್ಳುವವನು ವಾಸ್ತವಿಕವಾಗಿ ಕಾಣುತ್ತಾನೆ.**

**ಭಾವಾರ್ಥ :** ಸತ್ಸಂಗದಿಂದ ಮೂರು ವಿಷಯಗಳನ್ನು— ದೇಹ, ದೇಹದ ಒಡೆಯ, ಅಥವಾ ವ್ಯಕ್ತಿಗತ ಆತ್ಮ ಮತ್ತು ವ್ಯಕ್ತಿಗತ ಆತ್ಮನ ಸಖ—ಇವುಗಳ ಸಂಯೋಗವನ್ನು ಕಾಣುವವನು ನಿಜವಾಗಿ ಜ್ಞಾನಸ್ಥಿತನು, ಅಧ್ಯಾತ್ಮ ವಿಷಯಗಳ ನಿಜ ಜ್ಞಾನಿಯ ಸಂಗ ಹೊಂದದ ಹೊರತು, ಒಬ್ಬನು ಈ ಮೂರು ವಿಷಯಗಳನ್ನು ಕಾಣಲಾರನು. ಅಂಥ ಸಂಗ ರಹಿತರು ಅಜ್ಞಾನಿಗಳು ; ಅವರು ಕೇವಲ ದೇಹವನ್ನು ಕಾಣುತ್ತಾರೆ, ಮತ್ತು ದೇಹನಾಶವಾದಾಗ ಎಲ್ಲವೂ ಕೊನೆಗೊಳ್ಳುವುದೆಂದು ತಿಳಿಯುತ್ತಾರೆ. ಆದರೆ ವಾಸ್ತವಿಕವಾಗಿ ಅದು ಹಾಗಲ್ಲ. ದೇಹನಾಶಾನಂತರ, ಆತ್ಮ ಮತ್ತು ಪರಮಾತ್ಮರು ಇರುತ್ತಾರೆ, ಮತ್ತು ಅವರು ನಿರಂತರವಾಗಿ ಅನೇಕ ಚಲಾಚಲ ರೂಪಗಳಲ್ಲಿ ಮುಂದುವರಿಯುತ್ತಾರೆ, ಆತ್ಮನು ದೇಹದ ಒಡೆಯ ಮತ್ತು ದೇಹ ನಾಶಾನಂತರ ಅವನು ಮತ್ತೊಂದು ರೂಪಕ್ಕೆ ಸಾಗುತ್ತಾನೆ ಎಂಬ ಕಾರಣದಿಂದ ಸಂಸ್ಕೃತ ಪದ **ಪರಮೇಶ್ವರ** ಎಂಬುದನ್ನು ಕೆಲವು ಸಲ **"ವ್ಯಕ್ತಿಗತ ಆತ್ಮ"** ಎಂದು ಅನುವಾದಿಸಲಾಗಿದೆ. ಆ ಪ್ರಕಾರ ಆವನು ಯಜಮಾನ. ಆದರೆ ಈ **ಪರಮೇಶ್ವರ** ಎಂಬುದು ಪರಮಾತ್ಮ ಎಂದು ಇತರರು ಅರ್ಥೈಸುತ್ತಾರೆ. ಉಭಯ ಸಂದರ್ಭಗಳಲ್ಲಿ, ಪರಮಾತ್ಮ ಮತ್ತು ವ್ಯಕ್ತಿಗತ ಆತ್ಮ ಮುಂದುವರಿಯುತ್ತಾರೆ. ಅವರು ನಾಶವಾಗುವುದಿಲ್ಲ. ಈ ರೀತಿಯಲ್ಲಿ ಕಾಣುವವನು ವಾಸ್ತವಿಕವಾಗಿ ನಡೆಯುವುದನ್ನು ಕಾಣಬಹುದು.

**ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತಮೀಶ್ವರಮ್ ।**
**ನ ಹಿನಸ್ತ್ಯಾತ್ಮನಾತ್ಮಾನಂ ತತೋ ಯಾತಿ ಪರಾಂ ಗತಿಮ್ ॥ ೨೯ ॥**

ಸಮಮ್—ಸಮಾನವಾಗಿ, ಪಶ್ಯನ್—ನೋಡುತ್ತಾ, ಹಿ—ಖಂಡಿತವಾಗಿ, ಸರ್ವತ್ರ—ಪ್ರತಿಯೊಂದು ಕಡೆಯಲ್ಲಿ, ಸಮವಸ್ಥಿತಮ್—ಸಮಾನವಾಗಿ ಸನ್ನಿವೇಶಿತ, ಈಶ್ವರಮ್—ಪರಮಾತ್ಮನನ್ನು, ನ—ಇಲ್ಲ, ಹಿನಸ್ತಿ—ಹೀನೈಸುವುದು, ಆತ್ಮನಾ—ಮನಸ್ಸಿನಿಂದ, ಆತ್ಮಾನಾಮ್—ಆತ್ಮನನ್ನು, ತತಃ—ಆಗ, ಯಾತಿ—ತಲುಪುತ್ತಾನೆ, ಪರಾಮ್—ದಿವ್ಯ, ಗತಿಮ್—ಗತಿಯನ್ನು.

**ಪರಮಾತ್ಮನನ್ನು ಸಮಾನವಾಗಿ ಪ್ರತಿಯೊಂದು ಕಡೆಯಲ್ಲಿಯೂ, ಪ್ರತಿಯೊಬ್ಬ ಜೀವಿಯಲ್ಲಿಯೂ ಕಾಣುವವನು ತನ್ನ ಮನಸ್ಸಿನಿಂದ ತನ್ನನ್ನು ಹೀನಗೊಳಿಸಿಕೊಳ್ಳುವುದಿಲ್ಲ. ಹೀಗೆ ಅವನು ದಿವ್ಯ ಗತಿಯನ್ನು ತಲುಪುತ್ತಾನೆ.**

**ಭಾವಾರ್ಥ :** ಜೀವಿಯು ತನ್ನ ಭೌತಿಕ ಅಸ್ತಿತ್ವವನ್ನು ಸ್ವೀಕರಿಸಿ ತನ್ನ ಅಧ್ಯಾತ್ಮ ಅಸ್ತಿತ್ವದಿಂದ ಭಿನ್ನವಾಗಿ ಸನ್ನಿವೇಶಿತನು. ಆದರೆ ಪರಮನು ತನ್ನ ಪರಮಾತ್ಮ

ಅಭಿವ್ಯಕ್ತತೆಯಲ್ಲಿ ಪ್ರತಿಯೊಂದು ಕಡೆಯಲ್ಲಿಯೂ ಇದ್ದಾನೆ ಎಂದು ಒಬ್ಬನು ತಿಳಿದರೆ, ಎಂದರೆ, ಒಬ್ಬನು ಪರಮ ದೇವೋತ್ತಮ ಪುರುಷನು ಪ್ರತಿಯೊಂದು ಜೀವಿಯಲ್ಲಿಯೂ ಇರುವುದನ್ನು ಕಂಡರೆ, ಅವನು ವಿನಾಶಕಾರಿ ಮನೋಭಾವದಿಂದ ತನ್ನನ್ನು ಹೀನೈಸಿ ಕೊಳ್ಳುವುದಿಲ್ಲ. ಆದ್ದರಿಂದ ಅವನು ಕ್ರಮೇಣ ಆಧ್ಯಾತ್ಮ ಜಗತ್ತಿಗೆ ಸಾಗುತ್ತಾನೆ. ಮನಸ್ಸು ಸಾಮಾನ್ಯವಾಗಿ ಇಂದ್ರಿಯ ತೋಷಣ ಪ್ರಕ್ರಿಯೆಗಳಿಗೆ ಒಗ್ಗುತ್ತದೆ, ಆದರೆ ಮನಸ್ಸು ಪರಮಾತ್ಮನ ಕಡೆಗೆ ತಿರುಗಿದಾಗ, ಒಬ್ಬನು ಆಧ್ಯಾತ್ಮ ಅರಿವಿನಲ್ಲಿ ಉತ್ಕೃಷ್ಟನಾಗುತ್ತಾನೆ.

**ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ ।**
**ಯಃ ಪಶ್ಯತಿ ತಥಾತ್ಮಾನಮಕರ್ತಾರಂ ಸ ಪಶ್ಯತಿ ॥ ೩೦ ॥**

ಪ್ರಕೃತ್ಯಾ—ಭೌತಿಕ ಪ್ರಕೃತಿಯಿಂದ, ಏವ—ಖಂಡಿತವಾಗಿ, ಚ—ಕೂಡ, ಕರ್ಮಾಣಿ—ಕರ್ಮಗಳಿಂದ, ಕ್ರಿಯಮಾಣಾನಿ—ಮಾಡಲ್ಪಡುವ, ಸರ್ವಶಃ—ಎಲ್ಲ ವಿಷಯಗಳಲ್ಲಿ, ಯಃ—ಯಾವನು, ಪಶ್ಯತಿ—ನೋಡುತ್ತಾನೆ, ತಥಾ—ಕೂಡ, ಆತ್ಮಾನಮ್—ತನ್ನನ್ನು, ಅಕರ್ತಾರಮ್—ಅಕರ್ತರಾನೆಂದು, ಸಃ—ಅವನು, ಪಶ್ಯತಿ—ಪರಿಪೂರ್ಣವಾಗಿ ಕಾಣುತ್ತಾನೆ.

**ಎಲ್ಲ ಚಟುವಟಿಕೆಗಳು ಭೌತಿಕ ಪ್ರಕೃತಿ ಸೃಷ್ಟ ದೇಹದಿಂದ ನಡೆಯುತ್ತಿವೆ ಎಂಬುದನ್ನು ಕಾಣಬಲ್ಲವನು, ಮತ್ತು ಆತ್ಮನು ಏನೂ ಮಾಡುವುದಿಲ್ಲ ಎಂದು ಕಾಣುವವನು ವಾಸ್ತವಿಕವಾಗಿ ಕಾಣುತ್ತಾನೆ.**

**ಭಾವಾರ್ಥ :** ಈ ದೇಹವು ಪರಮಾತ್ಮನ ನಿರ್ದೇಶನದಲ್ಲಿ ಭೌತಿಕ ಪ್ರಕೃತಿ ನಿರ್ಮಿತ, ಮತ್ತು ಒಬ್ಬನ ದೇಹ ಸಂಬಂಧದಲ್ಲಿ ನಡೆಯುವ ಕರ್ಮಗಳೆಲ್ಲ ಅವನ ಕರ್ಮಗಳಲ್ಲ. ಸುಖಕ್ಕಾಗಲಿ, ಅಥವಾ ದುಃಖಕ್ಕಾಗಲಿ, ಒಬ್ಬನು ಮಾಡಬೇಕಾದುದು ಯಾವುದೇ ಆದರೂ ದೇಹ ರಚನಾ ನಿಮಿತ್ತ ಒಬ್ಬನು ಮಾಡಲೇಬೇಕಾಗುವುದು. ಆದರೆ ಆತ್ಮವು ಈ ಎಲ್ಲ ದೈಹಿಕ ಚಟುವಟಿಕೆಗಳಿಂದ ಬಾಹ್ಯ. ಈ ದೇಹವು ಒಬ್ಬನ ಪೂರ್ವವಾಸನಾನುಸಾರ ನೀಡಲ್ಪಟ್ಟಿದೆ. ಇಚ್ಛಾಪೂರ್ತಿಗಾಗಿ, ಒಬ್ಬನಿಗೆ ದೇಹ ನೀಡಲಾಗಿದೆ. ಆ ನಿಮಿತ್ತ ಅವನು ಅದರಿಂದ ಕ್ರಿಯೆ ಮಾಡುತ್ತಾನೆ. ವಾಸ್ತವಿಕವಾಗಿ ಹೇಳುವುದಾದರೆ, ದೇಹವು ಇಚ್ಛಾಪೂರ್ತಿಗಾಗಿ ಪರಮ ಪ್ರಭುವಿನಿಂದ ರೂಪಿಸಲ್ಪಟ್ಟ ಒಂದು ಯಂತ್ರ. ಇಚ್ಛಾ ನಿಮಿತ್ತವಾಗಿಯೇ, ಸುಖದುಃಖಾನುಭವಕ್ಕಾಗಿ ಒಬ್ಬನನ್ನು ಕಷ್ಟಕರ ಸನ್ನಿವೇಶಗಳಲ್ಲಿ ಇರಿಸಲಾಗಿದೆ. ಜೀವಿಯನ್ನು ಕುರಿತ ಈ ದಿವ್ಯದೃಷ್ಟಿಯು ಬೆಳೆದಾಗ ಅದು ಒಬ್ಬನನ್ನು ದೈಹಿಕ ಚಟುವಟಿಕೆಗಳಿಂದ ಬೇರ್ಪಡಿಸುತ್ತದೆ. ಅಂಥ ದೃಷ್ಟಿಯುಳ್ಳವನು ವಾಸ್ತವಿಕ ದ್ರಷ್ಟಾರನು.

**ಯದಾ ಭೂತಪೃಥಗ್ ಭಾವಮೇಕಸ್ಥಮನುಪಶ್ಯತಿ ।**
**ತತ ಏವ ಚ ವಿಸ್ತಾರಂ ಬ್ರಹ್ಮ ಸಮ್ಪದ್ಯತೇ ತದಾ ॥ ೩೦ ॥**

ಯದಾ—ಯಾವಾಗ, ಭೂತ—ಜೀವಿಗಳ, ಪೃಥಕ್-ಭಾವಮ್—ಪೃಥಕ್ ವ್ಯಕ್ತಿತ್ವಗಳು, ಏಕ-ಸ್ಥಮ್—ಒಟ್ಟಿನಲ್ಲಿ ಸನ್ನಿವೇಶಿತ, ಅನುಪಶ್ಯತಿ—ಪ್ರಾಮಾಣ್ಯ ಮೂಲಕ ಒಬ್ಬನು ನೋಡಲೆತ್ನಿಸುತ್ತಾನೆ, ತತಃ-ಏವ—ಆ ತರವಾಯ, ಚ—ಕೂಡ, ವಿಸ್ತಾರಮ್—ವಿಸ್ತರಣೆಯನ್ನು, ಬ್ರಹ್ಮ-ಪರತರ, ಸಮ್ಪದ್ಯತೇ—ಹೊಂದುತ್ತಾನೆ, ತದಾ—ಆಗ.

**ಬುದ್ಧಿವಂತನು ಯಾವಾಗ ಭಿನ್ನ ಭಿನ್ನ ಭೌತಿಕ ದೇಹ ನಿಮಿತ್ತ ಭಿನ್ನ ಭಿನ್ನ ಉಪಾಧಿಗಳನ್ನು ಕಾಣುವುದನ್ನು ನಿಲ್ಲಿಸುವನೋ ಮತ್ತು ಹೇಗೆ ಜೀವಿಗಳು ಎಲ್ಲ ಕಡೆ ಗಳಲ್ಲಿ ವಿಸ್ತರಿಸಲ್ಪಟ್ಟಿದ್ದಾರೆ ಎಂಬುದನ್ನು ಕಾಣುವನೋ, ಆಗ, ಅವನು ಬ್ರಹ್ಮನ್ ಕಲ್ಪನೆಯನ್ನು ಹೊಂದುತ್ತಾನೆ.**

**ಭಾವಾರ್ಥ :** ಜೀವಿಯ ನಾನಾ ದೇಹಗಳು ವ್ಯಕ್ತಿಗತ ಆತ್ಮನ ಭಿನ್ನ ಇಚ್ಛಾನುಸಾರ ಉಂಟಾಗುತ್ತವೆ ಮತ್ತು ಅವು ವಾಸ್ತವಿಕವಾಗಿ ಸ್ವಯಂ ಆತ್ಮನಿಗೆ ಸೇರಿದುವಲ್ಲ ಎಂಬುದನ್ನು ಒಬ್ಬನು ಕಂಡಾಗ, ಒಬ್ಬನು ವಾಸ್ತವಿಕವಾಗಿ ಕಾಣುತ್ತಾನೆ. ಜೀವನದ ಭೌತಿಕ ಕಲ್ಪನೆಯಲ್ಲಿ, ನಾವು ಒಬ್ಬನನ್ನು ದೇವತೆಯಾಗಿ, ಒಬ್ಬನನ್ನು ಮಾನವನಾಗಿ, ನಾಯಿ, ಬೆಕ್ಕು, ಇತ್ಯಾದಿಯಾಗಿ ಕಾಣುತ್ತೇವೆ. ಇದು ಭೌತಿಕ ದೃಷ್ಟಿ. ವಾಸ್ತವಿಕ ದೃಷ್ಟಿಯಲ್ಲ. ಈ ಭೌತಿಕ ಭಿನ್ನತ್ವವು ಜೀವನದ ಭೌತಿಕ ಕಲ್ಪನಾ ನಿಮಿತ್ತ. ಭೌತಿಕ ದೇಹ ನಾಶಾನಂತರ, ಚೇತನಾತ್ಮನು ಏಕೈಕನು. ಭೌತಿಕ ಪ್ರಕೃತಿ ಸಂಬಂಧದಿಂದ ನಾನಾ ಬಗೆಯ ದೇಹ ಹೊಂದುತ್ತಾನೆ. ಒಬ್ಬನು ಇದನ್ನು ಕಾಣಬಹುದಾದಾಗ, ಅವನು ದಿವ್ಯ ದೃಷ್ಟಿ ಹೊಂದುತ್ತಾನೆ; ಹೀಗೆ ಮನುಷ್ಯ, ಪ್ರಾಣಿ, ಮೇಲು, ಕೀಳು ಇತ್ಯಾದಿ ವ್ಯತ್ಯಾಸ ಮುಕ್ತನಾಗಿ, ಒಬ್ಬನು ತನ್ನ ಪ್ರಜ್ಞೆಯಲ್ಲಿ ಶುದ್ಧನಾಗುತ್ತಾನೆ ಮತ್ತು ತನ್ನ ಆಧ್ಯಾತ್ಮ ವ್ಯಕ್ತಿತ್ವದಲ್ಲಿ ಕೃಷ್ಣಪ್ರಜ್ಞೆಯನ್ನು ಬೆಳೆಸಿಕೊಳ್ಳಲು ಶಕ್ತನಾಗುತ್ತಾನೆ. ಆಗ ಅವನು ವಸ್ತುಗಳನ್ನು ಹೇಗೆ ಕಾಣುತ್ತಾನೆ ಎಂಬುದು ಮುಂದಿನ ಶ್ಲೋಕದಲ್ಲಿ ವಿವರಿಸಲ್ಪಡುವುದು.

**ಅನಾದಿತ್ವಾನ್ನಿರ್ಗುಣತ್ವಾತ್ ಪರಮಾತ್ಮಾಯಮವ್ಯಯಃ ।**
**ಶರೀರಸ್ಥೋಽಪಿ ಕೌನ್ತೇಯ ನ ಕರೋತಿ ನ ಲಿಪ್ಯತೇ ॥ ೩೨ ॥**

ಅನಾದಿತ್ವಾತ್—ಅನಾದಿತ್ವದಿಂದ, ನಿರ್ಗುಣತ್ವಾತ್—ದಿವ್ಯವಾಗಿರುವುದರ ನಿಮಿತ್ತ, ಪರಮ—ಭೌತಿಕ ಪ್ರಕೃತಿಗೆ ಅತೀತ, ಆತ್ಮಾ—ಚೇತನನು, ಅಯಮ್—ಈ, ಅವ್ಯಯಃ—ಅವ್ಯಯವಾದ, ಶರೀರ-ಸ್ಥಃ—ದೇಹಸ್ಥ, ಅಪಿ—ಆಗಿದ್ದರೂ, ಕೌನ್ತೇಯ—ಹೇ ಕುಂತೀ ಪುತ್ರನೇ, ನ ಕರೋತಿ—ಏನನ್ನೂ ಮಾಡುವುದಿಲ್ಲ, ನ ಲಿಪ್ಯತೇ—ಸಿಲುಕುವುದೂ ಇಲ್ಲ.

**ಅನಾದಿತ್ವ ದೃಷ್ಟಿಯುಳ್ಳವರು, ಅವಿನಾಶಿಯಾದ ಆತ್ಮನು ದಿವ್ಯನು, ಶಾಶ್ವತನು, ಮತ್ತು ಪ್ರಕೃತಿ ಗುಣಾತೀತನು ಎಂಬುದನ್ನು ಕಾಣಬಲ್ಲರು. ಭೌತಿಕ ದೇಹ ಸಂಪರ್ಕ**

**ವಿದ್ದರೂ, ಹೇ ಅರ್ಜುನ, ಆತ್ಮವು ಯಾವುದನ್ನೂ ಮಾಡುವುದಿಲ್ಲ ಅಥವಾ ಸಿಲುಕಿ ಕೊಳ್ಳುವುದೂ ಇಲ್ಲ.**

**ಭಾವಾರ್ಥ :** ಭೌತಿಕ ದೇಹೋತ್ಪತ್ತಿ ನಿಮಿತ್ತ ಜೀವಿಯು ಹುಟ್ಟಿದಂತೆ ತೋರುತ್ತಾನೆ. ಆದರೆ ವಾಸ್ತವಿಕವಾಗಿ ಜೀವಿಯು ನಿತ್ಯ; ಅವನು ಹುಟ್ಟುವುದಿಲ್ಲ, ಮತ್ತು ಅವನು ಭೌತಿಕ ದೇಹದಲ್ಲಿ ಸನ್ನಿವೇಶಿತನಾಗಿದ್ದರೂ ಅವನು ದಿವ್ಯನು ಮತ್ತು ಶಾಶ್ವತನು. ಆದ್ದರಿಂದ ಅವನನ್ನು ನಾಶಗೊಳಿಸಲಾಗದು. ಸ್ವಭಾವತಃ ಅವನು ಆನಂದಮಯನು. ಅವನು ಯಾವುದೇ ಭೌತಿಕ ಚಟುವಟಿಕೆಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳುವುದಿಲ್ಲ. ಆದ್ದರಿಂದ ಅವನ ಭೌತಿಕ ದೇಹಗಳ ಸಂಪರ್ಕದಿಂದ ನಡೆಯುವ ಚಟುವಟಿಕೆಗಳು ಅವನನ್ನು ಸಿಲುಕಿಸುವುದಿಲ್ಲ.

**ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ ।**
**ಸರ್ವತ್ರಾವಸ್ಥಿತೋ ದೇಹೇ ತಥಾತ್ಮಾ ನೋಪಲಿಪ್ಯತೇ ॥೩೩॥**

ಯಥಾ—ಹೇಗೆ, ಸರ್ವ-ಗತಮ್—ಸರ್ವವ್ಯಾಪಿ, ಸೌಕ್ಷ್ಮ್ಯಾತ್—ಸೂಕ್ಷ್ಮವಾಗಿರುವುದರಿಂದ, ಆಕಾಶಮ್—ಆಕಾಶವು, ನ—ಎಂದಿಗೂ ಇಲ್ಲ, ಉಪಲಿಪ್ಯತೇ—ಮಿಶ್ರವಾಗುವುದು, ಸರ್ವತ್ರ—ಎಲ್ಲ ಕಡೆಯಲ್ಲಿ, ಅವಸ್ಥಿತಃ—ಸನ್ನಿವೇಶಿತ, ದೇಹೇ—ದೇಹದಲ್ಲಿ, ತಥಾ—ಹಾಗೆ, ಆತ್ಮಾ—ಆತ್ಮನು, ನ—ಎಂದಿಗೂ ಇಲ್ಲ, ಉಪಲಿಪ್ಯತೇ—ಮಿಶ್ರವಾಗುವುದು.

**ಆಕಾಶವು, ಅದರ ಸೂಕ್ಷ್ಮ ಸ್ವಭಾವ ನಿಮಿತ್ತ ಸರ್ವತ್ರಗತವಾಗಿದ್ದರೂ ಯಾವುದರೊಂದಿಗೂ ಕೂಡ ಮಿಶ್ರವಾಗುವುದಿಲ್ಲ. ಅದೇ ಪ್ರಕಾರ, ಬ್ರಹ್ಮನ್ ದೃಷ್ಟಿಯಲ್ಲಿ ಸನ್ನಿವೇಶಿತ ಆತ್ಮವು ದೇಹದಲ್ಲಿದ್ದರೂ, ಅದರೊಂದಿಗೆ ಮಿಶ್ರವಾಗುವುದಿಲ್ಲ.**

**ಭಾವಾರ್ಥ :** ಗಾಳಿಯು ನೀರು, ರಾಡಿ, ಅಮೇಧ್ಯ ಮತ್ತು ಇರುವ ಏನೆಲ್ಲದರಲ್ಲಿಯೂ ಪ್ರವೇಶಿಸುತ್ತದೆ ; ಆದರೂ ಅದು ಯಾವುದರೊಂದಿಗೂ ಮಿಶ್ರವಾಗುವುದಿಲ್ಲ. ಅದೇ ಪ್ರಕಾರ. ಜೀವಿಯು ನಾನಾ ದೇಹಗಳಲ್ಲಿ ಸನ್ನಿವೇಶಿತನಾಗಿದ್ದರೂ, ತನ್ನ ಸೂಕ್ಷ್ಮಸ್ವಭಾವ ನಿಮಿತ್ತ ಅವುಗಳಿಂದ ದೂರನು. ಆದ್ದರಿಂದ ಜೀವಿಯು ಹೇಗೆ ಈ ದೇಹ ಸಂಪರ್ಕದಲ್ಲಿದ್ದಾನೆ ಮತ್ತು ದೇಹನಾಶಾನಂತರ ಹೇಗೆ ಅದರ ಹೊರಗಿದ್ದಾನೆ ಎಂಬುದನ್ನು ಈ ಭೌತಿಕ ಕಣ್ಣುಗಳಿಂದ ಕಾಣುವುದು ಅಸಂಭವ. ವಿಜ್ಞಾನದಲ್ಲಿ ಯಾರೂ ಇದನ್ನು ಸುನಿಶ್ಚಿತವಾಗಿ ತಿಳಿಯಲಾರರು.

**ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ ।**
**ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ॥೩೪॥**

ಯಥಾ—ಹೇಗೆ, ಪ್ರಕಾಶಯತಿ—ಪ್ರಕಾಶಿಸುತ್ತಾನೆ, ಏಕಃ—ಒಬ್ಬನೇ, ಕೃತ್ಸ್ನಮ್—ಎಲ್ಲ, ಲೋಕಮ್—ಲೋಕವನ್ನು, ಇಮಮ್—ಈ, ರವಿಃ—ಸೂರ್ಯನು,

ಕ್ಷೇತ್ರಮ್—ಈ ದೇಹವನ್ನು, ಕ್ಷೇತ್ರೀ—ಆತ್ಮನು, ತಥಾ—ಹಾಗೆಯೇ, ಕೃತ್ಸ್ನಮ್—ಎಲ್ಲವನ್ನು, ಪ್ರಕಾಶಯತಿ—ಪ್ರಕಾಶಿಸುತ್ತಾನೆ, ಭಾರತ—ಹೇ ಭರತ ಪುತ್ರನೇ.

**ಹೇ ಭರತ ಪುತ್ರನೇ, ಸೂರ್ಯನೊಬ್ಬನೇ ಈ ಬ್ರಹ್ಮಾಂಡವನ್ನೆಲ್ಲಾ ಬೆಳಗುವ ಹಾಗೆ ದೇಹದಲ್ಲಿರುವ ಜೀವಿಯೊಬ್ಬನೇ, ಪ್ರಜ್ಞೆಯಿಂದ ಇಡೀ ದೇಹವನ್ನು ಬೆಳಗುತ್ತಾನೆ.**

**ಭಾವಾರ್ಥ :** ಪ್ರಜ್ಞೆಯ ವಿಷಯದಲ್ಲಿ ನಾನಾ ತತ್ತ್ವಗಳಿವೆ. ಇಲ್ಲಿ ಭಗವದ್ಗೀತೆಯಲ್ಲಿ ಸೂರ್ಯ ಮತ್ತು ಸೂರ್ಯ ಪ್ರಕಾಶದ ದೃಷ್ಟಾಂತ ನೀಡಿದೆ. ಸೂರ್ಯನು ಒಂದೇ ಕಡೆಯಲ್ಲಿದ್ದು ಹೇಗೆ ಇಡೀ ಬ್ರಹ್ಮಾಂಡವನ್ನು ಬೆಳಗುವಂತೆ, ಹಾಗೆಯೇ ಒಂದು ಸಣ್ಣ ಚೇತನ ಕಣವು, ಈ ದೇಹದ ಹೃದಯದಲ್ಲಿ ಸನ್ನಿವೇಶಿತನಾಗಿದ್ದರೂ, ಪ್ರಜ್ಞೆಯಿಂದ ಇಡೀ ದೇಹವನ್ನು ಬೆಳಗುತ್ತದೆ. ಹೇಗೆ ಸೂರ್ಯಪ್ರಕಾಶವು ಅಥವಾ ಬೆಳಕು ಸೂರ್ಯನ ಇರುವಿಕೆಯ ರುಜುವಾತಾಗಿದೆಯೋ, ಹಾಗೆ ಪ್ರಜ್ಞೆಯು ಆತ್ಮನ ಇರುವಿಕೆಯ ರುಜುವಾತು. ಆತ್ಮನು ದೇಹದಲ್ಲಿದ್ದಾಗ, ದೇಹದಲ್ಲೆಲ್ಲಾ ಪ್ರಜ್ಞೆ ಇರುತ್ತದೆ, ಮತ್ತು ಆತ್ಮವು ದೇಹದಿಂದ ಹೊರಟುಹೋದೊಡನೆ ಪ್ರಜ್ಞೆ ಇರುವುದಿಲ್ಲ. ಇದನ್ನು ಯಾವೊಬ್ಬ ಬುದ್ಧಿವಂತನೂ ಸುಲಭವಾಗಿ ಅರಿತುಕೊಳ್ಳಬಹುದು. ಆದ್ದರಿಂದ ಪ್ರಜ್ಞೆಯು ಜಡ ಸಂಯೋಗಗಳ ಉತ್ಪತ್ತಿಯಲ್ಲ. ಅದು ಜೀವಿಯ ಸಂಕೇತ ಲಕ್ಷಣ. ಜೀವಿಯ ಪ್ರಜ್ಞೆಯು ಗುಣಾತ್ಮಕವಾಗಿ ಪರಮ ಪ್ರಜ್ಞೆಯೊಂದಿಗೆ ಏಕೀಭೂತವಾಗಿದ್ದರೂ, ಅದು ಪರಮವಲ್ಲ, ಏಕೆಂದರೆ ಒಂದು ವಿಶಿಷ್ಟ ದೇಹಪ್ರಜ್ಞೆಯು ಮತ್ತೊಂದು ದೇಹ ಪ್ರಜ್ಞೆಯ ಭಾಗಿಯಲ್ಲ. ಆದರೆ ವ್ಯಕ್ತಿಗತ ಆತ್ಮನ ಸಖನಾಗಿ ಸರ್ವದೇಹ ಸನ್ನಿವೇಶಿತ ಪರಮಾತ್ಮನು, ಸರ್ವದೇಹಗಳ ಪ್ರಾಜ್ಞನು. ಇದೇ ಪರಮ ಪ್ರಜ್ಞೆ ಮತ್ತು ವ್ಯಕ್ತಿಗತ ಜೀವಪ್ರಜ್ಞೆಯ ವ್ಯತ್ಯಾಸ.

**ಕ್ಷೇತ್ರಕ್ಷೇತ್ರಜ್ಞಯೋರೇವಮನ್ತರಂ ಜ್ಞಾನಚಕ್ಷುಷಾ ।**
**ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾನ್ತಿ ತೇ ಪರಮ್ ॥ ೩೫ ॥**

ಕ್ಷೇತ್ರ—ದೇಹದ, ಕ್ಷೇತ್ರ-ಜ್ಞಯೋಃ—ದೇಹದ ಯಜಮಾನನ, ಏವಮ್—ಹೀಗೆ, ಅನ್ತರಮ್—ಭೇದವನ್ನು, ಜ್ಞಾನ-ಚಕ್ಷುಷಾ—ಜ್ಞಾನ ದೃಷ್ಟಿಯಿಂದ, ಭೂತ—ಜೀವಿಯ, ಪ್ರಕೃತಿ—ಭೌತಿಕ ಪ್ರಕೃತಿಯಿಂದ, ಮೋಕ್ಷಮ್—ಮೋಕ್ಷವನ್ನು, ಚ—ಕೂಡ, ಯೇ—ಯಾರು, ವಿದುಃ—ತಿಳಿಯುತ್ತಾರೆ, ಯಾನ್ತಿ—ಹೊಂದುತ್ತಾರೆ, ತೇ—ಅವರು, ಪರಮ್—ಪರಮನನ್ನು

**ಜ್ಞಾನದೃಷ್ಟಿಯಿಂದ ಕ್ಷೇತ್ರ ಮತ್ತು ಕ್ಷೇತ್ರಜ್ಞನ ಭೇದವನ್ನು ಕಾಣುವವರು, ಮತ್ತು ಭೌತಿಕ ಪ್ರಕೃತಿ ಬಂಧನದಿಂದ ಮೋಕ್ಷ ಪ್ರಕ್ರಿಯೆಯನ್ನೂ ಅರಿತುಕೊಳ್ಳುವವರು ಪರಮ ಗುರಿಯನ್ನು ಹೊಂದುತ್ತಾರೆ.**

**ಭಾವಾರ್ಥ :** ಒಬ್ಬನು ದೇಹ, ದೇಹದ ಒಡೆಯ, ಮತ್ತು ಪರಮಾತ್ಮನ ಭೇದವನ್ನು ತಿಳಿಯಬೇಕೆಂಬುದು ಈ ಹದಿಮೂರನೆಯ ಅಧ್ಯಾಯದ ತಾತ್ಪರ್ಯ. 8 ರಿಂದ 12 ನೆಯ

ಶ್ಲೋಕಗಳಲ್ಲಿ ವರ್ಣಿಸಿದಂತೆ, ಒಬ್ಬನು ಮೋಕ್ಷ ಪ್ರಕ್ರಿಯೆಯನ್ನು ಗುರುತಿಸಬೇಕು. ಆಗ ಒಬ್ಬನು ಪರಮ ಗುರಿಯ ಕಡೆಗೆ ಹೋಗಬಲ್ಲನು.

ಶ್ರದ್ಧಾವಂತನು ಭಗವತ್ ಶ್ರವಣಕ್ಕೆ ಮೊದಲು ಸತ್ಸಂಗ ಹೊಂದಬೇಕು ಮತ್ತು ಹಾಗೆ ಕ್ರಮೇಣ ಜ್ಞಾನೋದಿತನಾಗಬೇಕು. ಒಬ್ಬನು ಗುರುಗಳನ್ನು ಅಂಗೀಕರಿಸಿದರೆ, ಜಡ ಮತ್ತು ಚೇತನದ ಅಂತರವನ್ನು ತಿಳಿದುಕೊಳ್ಳಬಹುದು, ಮತ್ತು ಅದು ಆಧ್ಯಾತ್ಮ ಸಾಕ್ಷಾತ್ಕಾರದ ಮುನ್ನಡೆಗೆ ಮೊದಲ ಮೆಟ್ಟಿಲಾಗುವುದು. ಗುರು, ನಾನಾ ಉಪದೇಶ ಗಳಿಂದ ಜೀವನದ ಭೌತಿಕ ಕಲ್ಪನೆಯಿಂದ ಪಾರಾಗಲು ತನ್ನ ಶಿಷ್ಯರಿಗೆ ಭೋಧಿಸುತ್ತಾನೆ. ಉದಾಹರಣೆಗೆ, ಭಗವದ್ಗೀತೆಯಲ್ಲಿ ಕೃಷ್ಣನು ಅರ್ಜುನನನ್ನು ಭೌತಿಕ ಭಾವನೆಗಳಿಂದ ಪಾರುಮಾಡಲು ಉಪದೇಶಿಸುವುದನ್ನು ನಾವು ಕಾಣುತ್ತೇವೆ.

ಈ ದೇಹವು ಜಡ ಎಂದು ಒಬ್ಬನು ಅರಿತುಕೊಳ್ಳಬಹುದು ; ಅದನ್ನು, ಅದರ ಇಪ್ಪತ್ನಾಲ್ಕು ತತ್ತ್ವಗಳಿಂದ ವಿಶ್ಲೇಷಿಸಬಹುದು. ದೇಹವು ಜಡ ಉದ್ಭೂತಿ. ಮನಸ್ಸು ಮತ್ತು ಮಾನಸಿಕ ಕಾರ್ಯಗಳು ಸೂಕ್ಷ್ಮ ಉದ್ಭೂತಿ ಮತ್ತು ಜೀವ ಸಂಕೇತಗಳು ಈ ಲಕ್ಷಣಗಳ ಪರಸ್ಪರ ಕ್ರಿಯೆಗಳು. ಆದರೆ ಇವುಗಳಿಗಿಂತ ಮೇಲೆ ಆತ್ಮನಿದ್ದಾನೆ ಮತ್ತು ಪರಮಾತ್ಮನೂ ಇದ್ದಾನೆ. ಆತ್ಮ ಮತ್ತು ಪರಮಾತ್ಮ ಇಬ್ಬರು. ಈ ಭೌತಿಕ ಜಗತ್ತು ಆತ್ಮ ಮತ್ತು ಇಪ್ಪತ್ನಾಲ್ಕು ಭೌತಿಕತತ್ತ್ವಗಳ ಸಂಯೋಗದಿಂದ ಕಾರ್ಯಶೀಲ. ಈ ಇಡೀ ಭೌತಿಕ ಉದ್ಭೂತಿಯ ಸಂರಚನೆಯು ಆತ್ಮ ಮತ್ತು ಭೌತಿಕ ತತ್ತ್ವಗಳ ಸಂಯೋಗವೆಂದು ಕಾಣಬಲ್ಲವನು ಮತ್ತು ಪರಮಾತ್ಮನ ಸ್ಥಾನವನ್ನೂ ಕಾಣಬಲ್ಲವನು ಆಧ್ಯಾತ್ಮಲೋಕಕ್ಕೆ ವರ್ಗಾಯಿಸಲ್ಪಡಲು ಅರ್ಹನಾಗುವನು. ಇವು ಚಿಂತನ ಮತ್ತು ಸಾಕ್ಷಾತ್ಕಾರಕ್ಕಾಗಿ ಉದ್ದಿಷ್ಟ, ಮತ್ತು ಒಬ್ಬನು ಗುರುಗಳ ಸಹಾಯದಿಂದ ಈ ಅಧ್ಯಾಯದ ಸಮಗ್ರ ಅರಿವನ್ನು ಹೊಂದಬೇಕು.

ಇಲ್ಲಿಗೆ ಪ್ರಕೃತಿ ಪುರುಷ ಮತ್ತು ಪ್ರಜ್ಞೆಯ ವಿಷಯದಲ್ಲಿ ಶ್ರೀಮದ್ ಭಗವದ್ಗೀತೆಯ, ಹದಿಮೂರನೆಯ ಅಧ್ಯಾಯದ ಭಕ್ತಿವೇದಾಂತ ತಾತ್ಪರ್ಯವು ಮುಗಿಯಿತು.



# ಅಧ್ಯಾಯ ಹದಿನಾಲ್ಕು



# ಭೌತಿಕ ಪ್ರಕೃತಿಯ ತ್ರಿಗುಣಗಳು

**ಶ್ರೀಭಗವಾನುವಾಚ—**

**ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಮ್ ।**
**ಯಜ್‍ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ ॥ ೧ ॥**

ಶ್ರೀಭಗವಾನ್ ಉವಾಚ—ಪರಮ ದೇವೋತ್ತಮ ಪುರುಷನು ನುಡಿದನು, ಪರಮ್—ದಿವ್ಯವನ್ನು ಕುರಿತು, ಭೂಯಃ—ಮತ್ತೆ, ಪ್ರವಕ್ಷ್ಯಾಮಿ—ಹೇಳುತ್ತೇನೆ, ಜ್ಞಾನಾನಾಮ್—ಎಲ್ಲ ಜ್ಞಾನದ, ಜ್ಞಾನಮ್—ಜ್ಞಾನವನ್ನು, ಉತ್ತಮಮ್—ಪರಮವಾದ, ಯತ್—ಯಾವುದನ್ನು, ಜ್ಞಾತ್ವಾ—ತಿಳಿದು, ಮುನಯಃ—ಮುನಿಗಳು ಸರ್ವೇ—ಎಲ್ಲ, ಪರಾಮ್—ದಿವ್ಯ, ಸಿದ್ಧಿಮ್—ಸಿದ್ಧಿಯನ್ನು, ಇತಃ—ಈ ಲೋಕದಿಂದ, ಗತಾಃ—ಪಡೆದರು.

**ಪರಮ ದೇವೋತ್ತಮ ಪುರುಷನು ನುಡಿದನು : ಮತ್ತೆ ನಾನು ಸಕಲ ಜ್ಞಾನದ ಅತ್ಯುತ್ತಮ ಪರಮ ಜ್ಞಾನವನ್ನು ನಿನಗೆ ಹೇಳುತ್ತೇನೆ, ಅದನ್ನು ತಿಳಿದು ಎಲ್ಲ ಮುನಿಗಳು ಪರಮ ಸಿದ್ಧಿಯನ್ನು ಹೊಂದಿದ್ದಾರೆ.**

**ಭಾವಾರ್ಥ :** ಏಳನೆಯ ಅಧ್ಯಾಯದಿಂದ ಹನ್ನೆರಡನೆಯ ಅಧ್ಯಾಯದವರೆಗೆ ಶ್ರೀಕೃಷ್ಣನು ಪರತತ್ತ್ವ, ಪರಮ ದೇವೋತ್ತಮ ಪುರುಷನನ್ನು ವಿವರವಾಗಿ ತಿಳಿಸುತ್ತಾನೆ.

ಈಗ ಸ್ವಯಂ ಭಗವಂತನು ಅರ್ಜುನನಿಗೆ ಮತ್ತಷ್ಟು ಜ್ಞಾನೋದಯ ನೀಡುತ್ತಿದ್ದಾನೆ. ತಾತ್ವಿಕ ಊಹಾಪೋಹ ಪ್ರಕ್ರಿಯೆ ಮೂಲಕ ಈ ಅಧ್ಯಾಯವನ್ನು ಒಬ್ಬನು ಅರಿತು ಕೊಂಡರೆ, ಅವನ ಭಕ್ತಿಯುತ ಸೇವೆಯ ಅರಿಯುವಿಕೆಗೆ ಬರುತ್ತಾನೆ. ವಿನೀತವಾಗಿ ಜ್ಞಾನ ಸಂಪಾದಿಸಿ, ಒಬ್ಬನು ಭೌತಿಕ ಬಂಧಮುಕ್ತನಾಗುವ ಸಾಧ್ಯತೆಯಿದೆ ಎಂದು ಸ್ಪಷ್ಟ ವಾಗಿ ಹದಿಮೂರನೆಯ ಅಧ್ಯಾಯದಲ್ಲಿ ವಿವರಿಸಲಾಯಿತು. ಪ್ರಕೃತಿ ಗುಣಸಂಗದಿಂದ ಜೀವಿಯು ಈ ಭೌತಿಕ ಜಗತ್ತಿನಲ್ಲಿ ಸಿಲುಕಿಕೊಂಡಿದ್ದಾನೆ ಎಂಬುದನ್ನು ಕೂಡ ವಿವರಿಸಿದೆ. ಈಗ ಈ ಅಧ್ಯಾಯದಲ್ಲಿ, ಆ ಪ್ರಕೃತಿ ಗುಣಗಳು ಯಾವುವು, ಅವು ಹೇಗೆ ಕಾರ್ಯ ಮಾಡುತ್ತವೆ, ಹೇಗೆ ಬಂಧಿಸುತ್ತವೆ ಮತ್ತು ಹೇಗೆ ಮೋಕ್ಷ ನೀಡುತ್ತವೆ ಎಂಬುದನ್ನು ಪರಮ ಪುರುಷನು ವಿವರಿಸುತ್ತಾನೆ. ಈ ಅಧ್ಯಾಯದಲ್ಲಿ ವಿವರಿಸಿರುವ ಜ್ಞಾನವು ಇತರ ಅಧ್ಯಾಯಗಳಲ್ಲಿ ಈವರೆಗೆ ನೀಡಿರುವ ಜ್ಞಾನಕ್ಕಿಂತ ಶ್ರೇಷ್ಠವಾದುದೆಂದು ಭಗವಂತನು ಘೋಷಿಸುತ್ತಾನೆ. ಈ ಜ್ಞಾನದ ಅರಿವಿನಿಂದ ಅನೇಕ ಮಹರ್ಷಿಗಳು ಪರಿಪೂರ್ಣತೆಯನ್ನು ಹೊಂದಿದರು ಮತ್ತು ಆಧ್ಯಾತ್ಮ ಲೋಕಕ್ಕೆ ವರ್ಗಾಂತರಿತರಾದರು. ಈಗ ಭಗವಂತನು ಆ ಜ್ಞಾನವನ್ನು ಮತ್ತಷ್ಟು ಉತ್ತಮ ರೀತಿಯಲ್ಲಿ ವರ್ಣಿಸುತ್ತಾನೆ. ಈ ಜ್ಞಾನವು ಈವರೆಗೆ ವಿವರಿಸಿದ ಎಲ್ಲ ಇತರ ಜ್ಞಾನ ಪ್ರಕ್ರಿಯೆಗಳಿಗಿಂತ ಬಹು ಶ್ರೇಷ್ಠವಾದುದು ಮತ್ತು ಇದನ್ನು ತಿಳಿದು ಅನೇಕರು ಪರಿಪೂರ್ಣತೆಯನ್ನು ಪಡೆದರು. ಹೀಗೆ ಒಬ್ಬನು ಈ ಹದಿನಾಲ್ಕನೆಯ ಅಧ್ಯಾಯವನ್ನು ಅರಿತುಕೊಂಡು ಪರಿಪೂರ್ಣತೆಯನ್ನು ಪಡೆಯುವನೆಂದು ನಿರೀಕ್ಷಿಸಿದೆ.

**ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।**
**ಸರ್ಗೇಽಪಿ ನೋಪಜಾಯನ್ತೇ ಪ್ರಲಯೇ ನ ವ್ಯಥನ್ತಿ ಚ ॥ ೨ ॥**

ಇದಮ್—ಈ, ಜ್ಞಾನಮ್—ಜ್ಞಾನವನ್ನು, ಉಪಾಶ್ರಿತ್ಯ—ಆಶ್ರಯಿಸಿ, ಮಮ—ನನ್ನ, ಸಾಧರ್ಮ್ಯಮ್—ಸಾಧರ್ಮ್ಯವನ್ನು, ಆಗತಾಃ—ಹೊಂದಿ, ಸರ್ಗೇ–ಅಪಿ—ಸೃಷ್ಟಿಯಲ್ಲಿ ಕೂಡ, ನ—ಎಂದಿಗೂ ಇಲ್ಲ, ಉಪಜಾಯನ್ತೇ—ಹುಟ್ಟುವುದು, ಪ್ರಲಯೇ—ಪ್ರಳಯದಲ್ಲಿ, ನ—ಇಲ್ಲ, ವ್ಯಥನ್ತಿ—ಕ್ಷೋಭಿತರಾಗುವುದು, ಚ—ಕೂಡ.

**ಈ ಜ್ಞಾನಸ್ಥಿತನಾಗಿ, ಒಬ್ಬನು ನನ್ನಂಥ ದಿವ್ಯಪ್ರಕೃತಿಯನ್ನು ಹೊಂದಬಲ್ಲನು. ಹೀಗೆ ಪ್ರತಿಷ್ಠಿತನಾಗಿ, ಒಬ್ಬನು ಸೃಷ್ಟಿಕಾಲದಲ್ಲಿ ಹುಟ್ಟುವುದಿಲ್ಲ ಅಥವಾ ಪ್ರಳಯ ದಲ್ಲಿ ಕ್ಷೋಭಿತನಾಗುವುದಿಲ್ಲ.**

**ಭಾವಾರ್ಥ:** ಪರಿಪೂರ್ಣ ದಿವ್ಯ ಜ್ಞಾನವನ್ನು ಆರ್ಜಿಸಿದ ತರುವಾಯ ಒಬ್ಬನು ಜನನ ಮರಣಗಳ ಪುನರಾವೃತ್ತಿಯಿಂದ ಮುಕ್ತನಾಗಿ ಗುಣಾತ್ಮಕವಾಗಿ ಪರಮ ದೇವೋತ್ತಮ ಪುರುಷನೊಡನೆ ಸಮಾನತೆಯನ್ನು ಆರ್ಜಿಸುತ್ತಾನೆ. ಆದರೆ ಒಬ್ಬನು ತನ್ನ ವ್ಯಕ್ತಿಗತ ಆತ್ಮನ ವ್ಯಕ್ತಿತ್ವವನ್ನು ಕಳೆದುಕೊಳ್ಳುವುದಿಲ್ಲ. ಪರವ್ಯೋಮದ ದಿವ್ಯಲೋಕಗಳನ್ನು ತಲು ಪಿದ ಮುಕ್ತಾತ್ಮರು, ಅವನ ದಿವ್ಯ ಪ್ರೇಮ ಸೇವಾ ನಿರತರಾಗಿ, ಸದಾ ಪರಮಪ್ರಭುವಿನ

ಪಾದಕಮಲಗಳನ್ನು ದರ್ಶಿಸುತ್ತಾರೆ, ಎಂದು ವೇದಸಾಹಿತ್ಯದಿಂದ ತಿಳಿದುಬರುವುದು. ಹೀಗೆ ಮೋಕ್ಷಾನಂತರವೂ, ಭಕ್ತರು ತಮ್ಮ ವ್ಯಕ್ತಿತ್ವವನ್ನು ಕಳೆದುಕೊಳ್ಳುವುದಿಲ್ಲ.

ಸಾಮಾನ್ಯವಾಗಿ, ನಾವು ಭೌತಿಕ ಜಗತ್ತಿನಲ್ಲಿ ಪಡೆಯುವ ಜ್ಞಾನವೆಲ್ಲ ಭೌತಿಕ ತ್ರಿವಿಧ ಪ್ರಕೃತಿಗುಣಗಳಿಂದ ಕಲುಷಿತ. ತ್ರಿವಿಧ ಪ್ರಕೃತಿ ಕಲುಷಿತವಲ್ಲದ ಜ್ಞಾನವು ದಿವ್ಯ ಜ್ಞಾನ ಎಂದು ಕರೆದಿದೆ. ಒಬ್ಬನು ಆ ದಿವ್ಯ ಜ್ಞಾನದಲ್ಲಿ ಸನ್ನಿವೇಶಿತನಾದೊಡನೆ ಅವನು ಪರಮಪುರುಷನ ವೇದಿಕೆಯಲ್ಲಿಯೇ ಇರುವನು. ಪರವ್ಯೋಮದ ಜ್ಞಾನವಿಲ್ಲದವರು ಈ ಭೌತಿಕ ರೂಪದ, ಭೌತಿಕ ಚಟುವಟಿಕೆಗಳಿಂದ ಮುಕ್ತರಾದ ಮೇಲೆ ಯಾವ ವೈವಿಧ್ಯತೆಯೂ ಇಲ್ಲದೆ ಈ ಅಧ್ಯಾತ್ಮವ್ಯಕ್ತಿತ್ವವು ಆಕಾರರಹಿತವಾಗುತ್ತದೆ ಎಂದು ಹೇಳುತ್ತಾರೆ. ಆದರೆ,ಈ ಲೋಕದಲ್ಲಿ ಹೇಗೆ ಭೌತಿಕ ವೈವಿಧ್ಯತೆ ಇದೆಯೋ,ಹಾಗೆಯೇ ಅಧ್ಯಾತ್ಮ ಲೋಕದಲ್ಲಿಯೂ ವೈವಿಧ್ಯತೆ ಇದೆ. ಇದನ್ನು ತಿಳಿಯದವರು ಆಧ್ಯಾತ್ಮಿಕ ಅಸ್ತಿತ್ವವು ಭೌತಿಕ ವೈವಿಧ್ಯತೆಗೆ ವಿರುದ್ಧವಾದುದು ಎಂದು ಭಾವಿಸುತ್ತಾರೆ. ಆದರೆ ವಾಸ್ತವಿಕವಾಗಿ ಪರವ್ಯೋಮದಲ್ಲಿ, ಒಬ್ಬನು ಆಧ್ಯಾತ್ಮಿಕರೂಪವನ್ನು ಹೊಂದುತ್ತಾನೆ. ಆಧ್ಯಾತ್ಮಿಕ ಚಟುವಟಿಕೆಗಳಿವೆ ಮತ್ತು ಅಧ್ಯಾತ್ಮ ಸನ್ನಿವೇಶವು ಭಕ್ತಿಯುತ ಜೀವನ ಎಂದು ಕರೆದಿದೆ. ಆ ವಾತಾವರಣವು ಅಕಲುಷಿತ, ಮತ್ತು ಅಲ್ಲಿ ಒಬ್ಬನು ಗುಣಾತ್ಮಕವಾಗಿ ಪರಮಪ್ರಭುವಿಗೆ ಸಾಮ್ಯನು ಎಂದು ಹೇಳಿದೆ. ಅಂಥ ಜ್ಞಾನ ಪ್ರಾಪ್ತಿಗೆ, ಒಬ್ಬನು ಎಲ್ಲ ಅಧ್ಯಾತ್ಮಿಕ ಗುಣಗಳನ್ನು ಬೆಳೆಸಿಕೊಳ್ಳಬೇಕು. ಹೀಗೆ ಅಧ್ಯಾತ್ಮಿಕ ಗುಣಗಳನ್ನು ಬೆಳೆಸಿಕೊಂಡವನು ಭೌತಿಕ ಜಗತ್ತಿನ ಸೃಷ್ಟಿಯಿಂದಾಗಲಿ ಅಥವಾ ನಾಶದಿಂದಾಗಲಿ ಬಾಧಿತನಾಗುವುದಿಲ್ಲ.

**ಮಮ ಯೋನಿರ್ಮಹದ್ ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್ ।**
**ಸಮ್ಭವಃ ಸರ್ವಭೂತಾನಾಂ ತತೋ ಭವತಿ ಭಾರತ ॥೩॥**

ಮಮ—ನನ್ನ, ಯೋನಿಃ—ಜನ್ಮ ಮೂಲವು, ಮಹತ್—ಮಹತ್ ತತ್ತ್ವ, ಬ್ರಹ್ಮ—ಪರಮ, ತಸ್ಮಿನ್—ಅದರಲ್ಲಿ, ಗರ್ಭಮ್—ಗರ್ಭವನ್ನು, ದಧಾಮಿ—ಸೃಷ್ಟಿಸುತ್ತೇನೆ, ಅಹಮ್—ನಾನು, ಸಮ್ಭವಃ—ಸಂಭವ, ಸರ್ವ-ಭೂತಾನಾಮ್—ಎಲ್ಲ ಜೀವಿಗಳ, ತತಃ—ಆಮೇಲೆ, ಭವತಿ—ಆಗುತ್ತದೆ, ಭಾರತ—ಹೇ ಭರತ ವಂಶಜನೇ.

**ಬ್ರಹ್ಮನ್ ಎಂದು ಕರೆಯಲ್ಪಟ್ಟ ಭೌತಿಕ ಮಹತ್ ತತ್ತ್ವವು ಜನನ ಮೂಲವಾಗಿದೆ ಮತ್ತು ಆ ಬ್ರಹ್ಮನ್‌ನಲ್ಲಿ, ಹೇ ಭರತ ವಂಶಜನೇ, ಎಲ್ಲ ಜೀವಿಗಳ ಜನನ ಸಂಭವಿಸುವಂತೆ ಗರ್ಭೀಕರಿಸುತ್ತೇನೆ.**

**ಭಾವಾರ್ಥ :** ಇದು ಜಗತ್ತಿನ ವಿವರಣೆ: ಸಂಭವಿಸುವ ಪ್ರತಿಯೊಂದೂ ಕ್ಷೇತ್ರ ಮತ್ತು ಕ್ಷೇತ್ರಜ್ಞರ, ಎಂದರೆ ದೇಹ ಮತ್ತು ಚೇತನಾತ್ಮ ಸಂಯೋಗ ನಿಮಿತ್ತ. ಭೌತಿಕ ಪ್ರಕೃತಿ ಮತ್ತು ಜೀವಿಯ ಈ ಸಂಯೋಗವು ಸ್ವಯಂ ಪರಮ ದೇವನಿಂದಲೇ ಸಾಧ್ಯ. ಮಹತ್-ತತ್ತ್ವವು ಸಮಗ್ರ ವಿಶ್ವಉದ್ಭೂತಿಯ ಸಮಗ್ರ ಕಾರಣ; ತ್ರಿವಿಧ ಪ್ರಕೃತಿ ಗುಣಗಳಿರುವ ಭೌತಿಕ ಕಾರಣವಾದ ಮಹತ್-ತತ್ತ್ವವನ್ನು ಕೆಲವು ಸಲ ಬ್ರಹ್ಮನ್ ಎಂದು

ಕರೆದಿದೆ. ಪರಮ ಪುರುಷನು ಆ ಮಹತ್‌ತತ್ತ್ವವನ್ನು ಗರ್ಭೀಕರಿಸುತ್ತಾನೆ, ಮತ್ತು ಹೀಗೆ ಅಸಂಖ್ಯ ಬ್ರಹ್ಮಾಂಡಗಳು ಸಂಭವಿಸುತ್ತವೆ. ಈ ಮಹತ್-ತತ್ತ್ವವು ವೇದ ಸಾಹಿತ್ಯದಲ್ಲಿ ಬ್ರಹ್ಮನ್ ಎಂದು ವರ್ಣಿತ (ಮುಂಡಕ ಉಪನಿಷದ್ 1. 1. 9): **ತಸ್ಮಾದ್ ಏತದ್ ಬ್ರಹ್ಮ ನಾಮ-ರೂಪಮ್ ಅನ್ನಂ ಚ ಜಾಯತೇ.** ಪರಮ ಪುರುಷನು ಆ ಬ್ರಹ್ಮನನ್ನು ಜೀವ ಬೀಜಗಳಿಂದ ಗರ್ಭೀಕರಿಸುತ್ತಾನೆ. ಪೃಥ್ವಿ, ಅಪ್ಪು, ಅಗ್ನಿ, ಮತ್ತು ವಾಯುವಿನಿಂದ ಆರಂಭಿಸಿ ಇಪ್ಪತ್ನಾಲ್ಕು ತತ್ತ್ವಗಳು ಎಲ್ಲವೂ ಭೌತಿಕ ಶಕ್ತಿ ಮತ್ತು ಅವು **ಮಹದ್ ಬ್ರಹ್ಮ** ಎಂಬ ಭೌತಿಕ ಪ್ರಕೃತಿಯಾಗಿವೆ. ಏಳನೆಯ ಅಧ್ಯಾಯದಲ್ಲಿ ವಿವರಿಸಿದಂತೆ ಇದರಾಚೆಗೆ ಮತ್ತೊಂದು ಪರಾ ಪ್ರಕೃತಿ—ಜೀವಿ ಇದ್ದಾನೆ ಎಂದು ವಿವರಿಸಿದೆ. ಭೌತಿಕ ಪ್ರಕೃತಿಯಲ್ಲಿ ಪರಾ ಪ್ರಕೃತಿಯು ಪರಮ ದೇವೋತ್ತಮ ಪುರುಷನ ಇಚ್ಛೆಯಿಂದ ಮಿಶ್ರಿತ, ಆದ್ದರಿಂದ ಎಲ್ಲ ಜೀವಿಗಳು ಈ ಭೌತಿಕ ಪ್ರಕೃತಿಯಿಂದ ಜನಿತ.

ಚೇಳು ಅಕ್ಕಿ ಮೂಟೆಯ ರಾಶಿಗಳಲ್ಲಿ ಮೊಟ್ಟೆ ಇಡುತ್ತವೆ, ಮತ್ತು ಕೆಲವು ಸಲ ಚೇಳು ಅಕ್ಕಿಯಿಂದ ಜನಿತ ಎಂದು ಹೇಳುವುದುಂಟು. ಆದರೆ ಅಕ್ಕಿ ಚೇಳಿನ ಕಾರಣವಲ್ಲ. ವಾಸ್ತವಿಕವಾಗಿ, ತಾಯಿ ಚೇಳು ಆ ಮೊಟ್ಟೆಗಳನ್ನಿಟ್ಟಿತು. ಅದೇ ಪ್ರಕಾರ ಭೌತಿಕ ಪ್ರಕೃತಿಯು ಜೀವಿಗಳ ಜನನಕ್ಕೆ ಕಾರಣವಲ್ಲ.ಬೀಜವು ಪರಮ ದೇವೋತ್ತಮ ಪುರುಷನಿಂದ ದತ್ತ, ಮತ್ತು ಅವು ಭೌತಿಕ ಪ್ರಕೃತಿ ಉತ್ಪನ್ನಗಳೆಂಬಂತೆ ಮಾತ್ರ ತೋರುತ್ತವೆ. ಹೀಗೆ ಪ್ರತಿಯೊಬ್ಬ ಜೀವಿಯು ತನ್ನ ಪೂರ್ವ ಕರ್ಮಾನುಸಾರ ಈ ಭೌತಿಕ ಪ್ರಕೃತಿ ನಿರ್ಮಿತ ಭಿನ್ನ ದೇಹ ಹೊಂದಿರುತ್ತಾನೆ. ಹೀಗೆ ವ್ಯಕ್ತಿಯು ತನ್ನ ಪೂರ್ವ ಕರ್ಮಾನುಸಾರ ಭೋಗಿಸಬಲ್ಲನು ಅಥವಾ ದುಃಖಾನುಭವ ಹೊಂದುವನು, ಭಗವಂತನು ಭೌತಿಕ ಜಗತ್ತಿನಲ್ಲಿ ಜೀವಿಗಳ ಸಕಲ ಉದ್ಭೂತಿಗಳ ಕಾರಣನು.

**ಸರ್ವಯೋನಿಷು ಕೌನ್ತೇಯ ಮೂರ್ತಯಃ ಸಮ್ಭವನ್ತಿ ಯಾಃ ।**
**ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ ॥ ೪ ॥**

ಸರ್ವ-ಯೋನಿಷು—ಎಲ್ಲ ಜೀವ ಯೋನಿಗಳಲ್ಲಿ, ಕೌನ್ತೇಯ—ಹೇ ಕುಂತಿ ಪುತ್ರನೇ, ಮೂರ್ತಯಃ—ಆಕಾರಗಳು, ಸಮ್ಭವನ್ತಿ—ಕಾಣಿಸಿಕೊಳ್ಳುತ್ತವೆ, ಯಾಃ—ಅವು, ತಾಸಾಮ್—ಅವೆಲ್ಲದರ, ಬ್ರಹ್ಮ—ಪರಮ, ಮಹತ್-ಯೋನಿಃ—ಮಹತ್ ತತ್ತ್ವದ ಜನನ ಮೂಲ, ಅಹಮ್—ನಾನು, ಬೀಜಪ್ರದಃ—ಬೀಜ ಪ್ರದಾನದ, ಪಿತಾ—ತಂದೆ.

**ಹೇ ಕುಂತಿ ಪುತ್ರನೇ, ಎಲ್ಲ ಜೀವಯೋನಿಗಳು ಈ ಭೌತಿಕ ಪ್ರಕೃತಿಯಲ್ಲಿ ಜನಿಸುವಂತೆ ಸಾಧ್ಯಗೊಳಿಸಲಾಗುವುದು, ಮತ್ತು ನಾನು ಬೀಜ ನೀಡುವ ತಂದೆ ಎಂಬುದನ್ನು ಅರಿಯಬೇಕು.**

**ಭಾವಾರ್ಥ:** ಪರಮ ದೇವೋತ್ತಮ ಪುರುಷ, ಕೃಷ್ಣನು ಸಕಲ ಜೀವಿಗಳ ಮೂಲ ತಂದೆ ಎಂದು ಈ ಶ್ಲೋಕದಲ್ಲಿ ಸ್ಪಷ್ಟವಾಗಿ ವಿವರಿಸಿದೆ. ಜೀವಿಗಳು ಭೌತಿಕ ಪ್ರಕೃತಿ ಮತ್ತು

ಆಧ್ಯಾತ್ಮ ಪ್ರಕೃತಿಯ ಸಂಯೋಗಗಳು. ಅಂಥ ಜೀವಿಗಳು ಈ ಗ್ರಹದಲ್ಲಷ್ಟೇ ಅಲ್ಲದೆ ಪ್ರತಿಯೊಂದು ಗ್ರಹದಲ್ಲಿ, ಬ್ರಹ್ಮನಿರುವ ಅತ್ಯುನ್ನತ ಲೋಕದಲ್ಲಿ ಕೂಡ ಕಾಣುತ್ತಾರೆ. ಪ್ರತಿಯೊಂದು ಕಡೆಯಲ್ಲಿ ಜೀವಿಗಳುಂಟು, ಈ ಭೂಮಿಯ ಒಳಗೂ, ನೀರಿನಲ್ಲೂ ಮತ್ತು ಅಗ್ನಿಯಲ್ಲಿಯೂ ಜೀವಿಗಳುಂಟು. ಈ ಎಲ್ಲ ತೋರಿಕೆಗಳು ಮಾತೆ ಭೌತಿಕ ಪ್ರಕೃತಿ ಮತ್ತು ಕೃಷ್ಣನ ಬೀಜದಾನ ಪ್ರಕ್ರಿಯೆಯ ನಿಮಿತ್ತವಾದವು. ತಾತ್ಪರ್ಯವೆಂದರೆ, ಭೌತಿಕ ಜಗತ್ತು, ತಮ್ಮ ಪೂರ್ವ ಕರ್ಮಾನುಸಾರ ಸೃಷ್ಟಿಕಾಲದಲ್ಲಿ ನಾನಾ ರೂಪಗಳಲ್ಲಿ ಹೊರ ಬರುವ ಜೀವಿಗಳಿಂದ ಗರ್ಭೀಕೃತವಾಗುತ್ತದೆ.

**ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಮ್ಭವಾಃ ।**
**ನಿಬಧ್ನನ್ತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್ ॥ ೫ ॥**

ಸತ್ತ್ವಮ್—ಸತ್ತ್ವಗುಣ, ರಜಃ—ರಜೋಗುಣ, ತಮಃ—ತಮೋಗುಣ, ಇತಿ—ಹೀಗೆ, ಗುಣಾಃ—ಗುಣಗಳು, ಪ್ರಕೃತಿ—ಭೌತಿಕ ಪ್ರಕೃತಿಯಿಂದ, ಸಮ್ಭವಾಃ—ಉತ್ಪನ್ನ, ನಿಬಧ್ನನ್ತಿ—ಬಧ್ಧಗೊಳಿಸುತ್ತವ, ಮಹಾಬಾಹೋ—ಹೇ ಮಹಾಬಾಹುವೇ, ದೇಹೇ—ಈ ದೇಹದಲ್ಲಿ, ದೇಹಿನಮ್—ಜೀವಿಯನ್ನು ಅವ್ಯಯಮ್—ನಿತ್ಯನಾದ.

**ಭೌತಿಕ ಪ್ರಕೃತಿಯು ಸತ್ತ್ವ,ರಜ ಮತ್ತು ತಮಸ್ಸೆಂಬ ತ್ರಿಗುಣಗಳಿಂದ ಕೂಡಿದೆ. ನಿತ್ಯನಾದ ಜೀವಿಯು ಪ್ರಕೃತಿ ಸಂಪರ್ಕದಲ್ಲಿ ಬಂದಾಗ, ಹೇ ಮಹಾಬಾಹು ಅರ್ಜುನನೇ, ಅವನು ಈ ಗುಣಗಳಿಂದ ಬದ್ಧನಾಗುತ್ತಾನೆ.**

**ಭಾವಾರ್ಥ :** ಜೀವಿಯು ದಿವ್ಯನಾದ್ದರಿಂದ ಈ ಭೌತಿಕ ಪ್ರಕೃತಿಯೊಂದಿಗೆ ಮಾಡಬೇಕಾದುದೇನೂ ಇಲ್ಲ. ಆದರೂ, ಭೌತಿಕ ಜಗತ್ತಿನಿಂದ ಬದ್ಧನಾಗಿರುವುದರಿಂದ, ಅವನು ಭೌತಿಕ ಪ್ರಕೃತಿಯ ತ್ರಿಗುಣಗಳ ಪ್ರಭಾವದಲ್ಲಿ ವರ್ತಿಸುತ್ತಾನೆ. ಜೀವಿಗಳು, ಭಿನ್ನಭಿನ್ನ ಪ್ರಕೃತಿ ಅಂಶದಿಂದ ಭಿನ್ನಭಿನ್ನ ಪ್ರಕಾರದ ದೇಹಗಳನ್ನು ಹೊಂದಿರುವುದರಿಂದ, ಅವರು ಆ ಪ್ರಕೃತಿಗೆ ಅನುಸಾರವಾಗಿ ವರ್ತಿಸುವಂತೆ ಪ್ರೇರಿತ. ಇದು ವೈವಿಧ್ಯಮಯ ಸುಖ ದುಃಖಗಳಿಗೆ ಕಾರಣ.

**ತತ್ರ ಸತ್ತ್ವಂ ನಿರ್ಮಲತ್ವಾತ್ ಪ್ರಕಾಶಕಮನಾಮಯಮ್ ।**
**ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ ॥೬॥**

ತತ್ರ—ಅಲ್ಲಿ, ಸತ್ತ್ವಮ್—ಸತ್ವಗುಣ, ನಿರ್ಮಲತ್ವಾತ್—ಭೌತಿಕ ಜಗತ್ತಿನಲ್ಲಿ ಅತ್ಯಂತ ಶುದ್ಧವಾಗಿದ್ದು, ಪ್ರಕಾಶಕಮ್—ಪ್ರಕಾಶಮಾನ, ಅನಾಮಯಮ್—ಯಾವ ಪಾಪ ಪ್ರತಿಕ್ರಿಯೆಯೂ ಇಲ್ಲದೆ, ಸುಖ—ಸುಖದ, ಸಂಗೇನ—ಸಂಗದಿಂದ, ಬಧ್ನಾತಿ—ಬದ್ಧಗೊಳಿಸುತ್ತದೆ, ಜ್ಞಾನ—ಜ್ಞಾನದ, ಸಂಗೇನ—ಸಂಗದಿಂದ, ಚ—ಕೂಡ, ಅನಘ—ಹೇ ಪಾಪರಹಿತನೇ.

**ಹೇ ಪಾಪರಹಿತನೇ, ಸತ್ತ್ವಗುಣವು ಇತರ ಗುಣಗಳಿಗಿಂತ ಅತಿ ಶುದ್ಧವಾಗಿದ್ದು, ಪ್ರಕಾಶಮಾನ, ಮತ್ತು ಅದು ಸಕಲ ಪಾಪ ಪ್ರತಿಕ್ರಿಯೆಗಳಿಂದ ಮುಕ್ತಗೊಳಿಸು**

**ತ್ತದೆ. ಆ ಗುಣ ಸನ್ನಿವೇಶಿತರು ಸುಖ ಮತ್ತು ಜ್ಞಾನ ಭಾವನೆಯಿಂದ ಬದ್ಧರಾಗುತ್ತಾರೆ.**

**ಭಾವಾರ್ಥ :** ಭೌತಿಕ ಪ್ರಕೃತಿ ಬದ್ಧ ಜೀವಿಗಳು ನಾನಾ ವಿಧ. ಒಬ್ಬನು ಸುಖಿ, ಮತ್ತೊಬ್ಬನು ಬಹು ಕ್ರಿಯಾಶೀಲ, ಇನ್ನೊಬ್ಬನು ಅಸಹಾಯಕ. ಈ ಎಲ್ಲ ಬಗೆಯ ಮನೋಭಾವೋದ್ಭೂತಿಗಳು ಪ್ರಕೃತಿಯಲ್ಲಿ ಜೀವಿಯ ಬದ್ಧ ಸ್ಥಿತಿಗೆ ಕಾರಣಗಳು. ಅವರು ಹೇಗೆ ಭಿನ್ನಭಿನ್ನ ಸ್ಥಿತಿಗಳಿಗೆ ಬದ್ಧರು ಎಂಬುದು ಭಗವದ್ಗೀತೆಯ ಈ ಭಾಗದಲ್ಲಿ ವಿವರಿಸಲಾಗಿದೆ. ಸತ್ತ್ವ ಗುಣವು ಮೊದಲು ವಿಚಾರಿಸಲ್ಪಟ್ಟಿದೆ. ಭೌತಿಕ ಜಗತ್ತಿನಲ್ಲಿ ಸತ್ತ್ವಗುಣ ಬೆಳವಣಿಗೆಯ ಪರಿಣಾಮವೆಂದರೆ ಒಬ್ಬನು ಇತರ ಸ್ಥಿತಿಗಳಿಗೆ ಬದ್ಧರಾದವರಿಗಿಂತ ಹೆಚ್ಚು ತಿಳುವಳಿಕೆಯುಳ್ಳವನಾಗುತ್ತಾನೆ. ಸತ್ತ್ವಗುಣದಲ್ಲಿ ಇರುವವನು ಭೌತಿಕ ಕ್ಲೇಶಗಳಿಂದ ಅಷ್ಟಾಗಿ ಬಾಧಿತನಾಗುವುದಿಲ್ಲ, ಮತ್ತು ಅವನಿಗೆ ಭೌತಿಕ ಜ್ಞಾನದಲ್ಲಿ ಪ್ರಗತಿಯ ಅರಿವು ಇರುತ್ತದೆ. ಸತ್ತ್ವಗುಣ ಸನ್ನಿವೇಶಿತನಾಗಿರಬೇಕೆಂದು ತಿಳಿಯಲ್ಪಟ್ಟ ಬ್ರಾಹ್ಮಣನು ಈ ಪ್ರಕಾರದ ಪ್ರಾತಿನಿಧಿಕ ರೂಪ. ಈ ಸುಖಭಾವವು, ಸತ್ತ್ವಗುಣದಲ್ಲಿ ಒಬ್ಬನು ಸರಿಸುಮಾರು ಪಾಪ ಪ್ರತಿಕ್ರಿಯೆಗಳಿಂದ ಮುಕ್ತನೆಂಬ ಅರಿವಿಕೆಯ ನಿಮಿತ್ತವಾದುದು. ವಾಸ್ತವಿಕವಾಗಿ ಸಾತ್ವಿಕ ಗುಣವೆಂದರೆ ಹೆಚ್ಚಿನ ಜ್ಞಾನ ಮತ್ತು ಹೆಚ್ಚಿನ ಸುಖದ ಭಾವ ಎಂದು ವೇದ ಸಾಹಿತ್ಯದಲ್ಲಿ ಹೇಳಿದೆ.

ಇಲ್ಲಿ ಸಮಸ್ಯೆಯೇನೆಂದರೆ, ಜೀವಿಯು ಸತ್ತ್ವಗುಣದಲ್ಲಿ ಸನ್ನಿವೇಶಿತನಾದಾಗ, ತಾನು ಜ್ಞಾನದಲ್ಲಿ ಮುಂದುವರಿದವನು ಮತ್ತು ಇತರರಿಗಿಂತ ಉತ್ತಮನು ಎಂದು ಭಾವಿಸುವುದರಲ್ಲಿ ಬದ್ಧನಾಗುತ್ತಾನೆ. ಈ ಪ್ರಕಾರ ಬದ್ಧನಾಗುತ್ತಾನೆ. ಇದಕ್ಕೆ ವಿಜ್ಞಾನಿ ಮತ್ತು ದಾರ್ಶನಿಕ ಅತ್ಯುತ್ತಮ ಉದಾಹರಣೆಗಳು. ಪ್ರತಿಯೊಬ್ಬನೂ ತನ್ನ ಜ್ಞಾನದ ಬಗ್ಗೆ ಹೆಮ್ಮೆಪಡುತ್ತಾನೆ, ಮತ್ತು ಸಾಮಾನ್ಯವಾಗಿ ಅವರು ತಮ್ಮ ಜೀವನದ ಸ್ಥಿತಿಗತಿಗಳನ್ನು ಸುಧಾರಿಸಿಕೊಳ್ಳುವರಾದ್ದರಿಂದ ಅವರು ಒಂದು ಬಗೆಯ ಭೌತಿಕ ಸುಖವನ್ನು ಅನುಭವಿಸುತ್ತಾರೆ. ಬದ್ಧ ಜೀವನದಲ್ಲಿ ಈ ಪ್ರಗತಿಪರ ಸುಖದ ಭಾವನೆಯು ಅವರನ್ನು ಭೌತಿಕ ಪ್ರಕೃತಿಯ ಸತ್ತ್ವಗುಣಕ್ಕೆ ಬದ್ಧಗೊಳಿಸುತ್ತದೆ. ಹೀಗಾಗಿ, ಅವರು ಸತ್ತ್ವಗುಣದಲ್ಲಿ ಕರ್ಮಮಾಡಲು ಆಕರ್ಷಿತರು, ಮತ್ತು ಆ ರೀತಿಯಲ್ಲಿ ಕಾರ್ಯಮಾಡಲು ಆಕರ್ಷಿತರಾಗಿರುವವರೆಗೆ, ಅವರು ಪ್ರಕೃತಿ ಗುಣಗಳಲ್ಲಿ ಒಂದಿಲ್ಲೊಂದು ಬಗೆಯ ದೇಹ ಹೊಂದಬೇಕಾಗುವುದು. ಪರಿಣಾಮವಾಗಿ ಅವರು ಮುಕ್ತರಾಗುವ, ಅಥವಾ ಅಧ್ಯಾತ್ಮ ಲೋಕಕ್ಕೆ ವರ್ಗಾಂತರವಾಗುವ ಸಾಧ್ಯತೆಯಿಲ್ಲ. ಒಬ್ಬನು ಮತ್ತೆ ಮತ್ತೆ ತತ್ತ್ವಜ್ಞಾನಿ, ವಿಜ್ಞಾನಿ ಅಥವಾ ಕವಿಯಾಗಿ ಹುಟ್ಟಬಹುದು ಮತ್ತು ಪುನಃ ಪುನಃ ಜನನ ಮರಣಗಳ ಅದೇ ತೊಂದರೆಗಳಲ್ಲಿ ಸಿಲುಕಿಕೊಳ್ಳಬಹುದು. ಆದರೆ, ಭೌತಿಕ ಶಕ್ತಿಯ ಮೋಹ ನಿಮಿತ್ತ ಆ ಜೀವನವೇ ಸುಖಕರವೆಂದು ಭಾವಿಸುತ್ತಾನೆ.

**ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗಸಮುದ್ಭವಮ್**
**ತನ್ನಿಬಧ್ನಾತಿ ಕೌನ್ತೇಯ ಕರ್ಮಸಂಗೇನ ದೇಹಿನಮ್ ॥೭॥**

ರಜಃ—ರಜೋಗುಣ, ರಾಗ-ಆತ್ಮಕಮ್—ರಾಗ ಅಥವಾ ಮೋಹದಿಂದ ಹುಟ್ಟಿದ್ದು, ವಿದ್ಧಿ—ತಿಳಿ, ತೃಷ್ಣಾ—ತೃಷೆಯಿಂದ, ಸಂಗ—ಸಂಗ, ಸಮುದ್ಭವಮ್—ಉತ್ಪನ್ನವಾದ, ತತ್—ಅದು, ನಿಬಧ್ನಾತಿ—ಬಂಧಿಸುತ್ತದೆ, ಕೌನ್ತೇಯ—ಹೇ ಕುಂತಿ ಪುತ್ರನೇ, ಕರ್ಮ-ಸಂಗೇನ—ಕಾಮ್ಯಕರ್ಮ ಸಂಗದಿಂದ, ದೇಹಿನಮ್—ದೇಹಿಯನ್ನು.

**ಹೇ ಕುಂತಿ ಪುತ್ರನೇ, ರಜೋಗುಣವು ಮಿತಿ ಇಲ್ಲದ ಇಚ್ಛೆಗಳು ಮತ್ತು ಅಭೀಷ್ಟಗಳಿಂದ ಹುಟ್ಟುತ್ತದೆ, ಮತ್ತು ಇದರಿಂದ ದೇಹಗತ ಜೀವಿಯು ಭೌತಿಕ ಕಾಮ್ಯ ಕರ್ಮಗಳಿಗೆ ಬದ್ಧನು.**

**ಭಾವಾರ್ಥ :** ರಜೋಗುಣವು ಸ್ತ್ರೀ ಪುರುಷರಲ್ಲಿ ಪರಸ್ಪರ ಆಕರ್ಷಣೆಯಿಂದ ಲಕ್ಷಿತ. ಸ್ತ್ರೀಯಳಿಗೆ ಪುರುಷನ ಆಕರ್ಷಣೆ, ಪುರುಷನಿಗೆ ಸ್ತ್ರೀಯಳ ಆಕರ್ಷಣೆ. ಇದನ್ನು ರಜೋ ಗುಣ ಎಂದು ಕರೆದಿದೆ. ರಜೋಗುಣವು ಹೆಚ್ಚಾದಾಗ, ಒಬ್ಬನು ಭೌತಿಕ ಭೋಗದ ತೃಷ್ಣೆ ಬೆಳಸಿಕೊಳ್ಳುತ್ತಾನೆ. ಅವನು ಇಂದ್ರಿಯ ತೋಷಣ ಹೊಂದಬಯಸುತ್ತಾನೆ. ಇಂದ್ರಿಯ ತೋಷಣಕ್ಕಾಗಿ, ರಜೋಗುಣಿಯು ಸಮಾಜದಲ್ಲಿ, ಅಥವಾ ರಾಷ್ಟ್ರದಲ್ಲಿ ಯಾವುದೋ ಗೌರವ ಬಯಸುತ್ತಾನೆ, ಮತ್ತು ಒಳ್ಳೆಯ ಮಕ್ಕಳು, ಹೆಂಡತಿ ಮತ್ತು ಮನೆ ಇವುಗಳಿಂದ ಸುಖೀ ಕುಟುಂಬ ಹೊಂದಬಯಸುತ್ತಾನೆ. ಇವು ರಜೋಗುಣದ ಉತ್ಪನ್ನಗಳು. ಒಬ್ಬನು ಈ ವಸ್ತುಗಳ ಹಿಂದೆ ಬೆನ್ನುಹತ್ತಿರುವವರೆಗೆ ಅವನು ಬಹಳ ಶ್ರಮಿಸ ಬೇಕಾಗುವುದು. ಆದ್ದರಿಂದ ಅವನು ತನ್ನ ಕಾಮ್ಯಕರ್ಮ ಫಲಗಳ ಸಂಗ ಹೊಂದುತ್ತಾನೆ ಮತ್ತು ಅಂಥ ಚಟುವಟಿಕೆಗಳಿಗೆ ಬದ್ಧನಾಗುತ್ತಾನೆ ಎಂದು ಇಲ್ಲಿ ಹೇಳಿದೆ. ತನ್ನ ಹೆಂಡತಿ ಮಕ್ಕಳು ಮತ್ತು ಸಮಾಜವನ್ನು ತುಷ್ಟಿಪಡಿಸಲು ಮತ್ತು ತನ್ನ ಗೌರವ ಕಾಪಾಡಿ ಕೊಳ್ಳಲು ಒಬ್ಬನು ದುಡಿಯಲೇಬೇಕು. ಆದ್ದರಿಂದ ಇಡೀ ಭೌತಿಕ ಜಗತ್ತು ಸರಿಸುಮಾರು ರಜೋಗುಣದಲ್ಲಿರುವುದು. ಆಧುನಿಕ ನಾಗರಿಕತೆಯು ರಜೋಗುಣ ಮಟ್ಟದಲ್ಲಿ ಪ್ರಗತಿ ಸಾಧಿಸಿದೆ ಎಂದು ತಿಳಿಯಲಾಗಿದೆ. ಹಿಂದೆ ಇಂಥ ಮುಂದುವರಿದ ಸ್ಥಿತಿಯು ಸಾತ್ವಿಕ ಗುಣವೆಂದು ಭಾವಿಸಲಾಗಿತ್ತು. ಸತ್ತ್ವ ಗುಣದಲ್ಲಿ ಇರುವವರಿಗೇನೇ ಮೋಕ್ಷವಿಲ್ಲದಿದ್ದರೆ, ಇನ್ನು ತಮೋ ಗುಣಕ್ಕೆ ಸಿಲುಕಿಕೊಂಡವರ ಮಾತೇನು ?

**ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಮ್ ।**
**ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ ॥೮॥**

ತಮಃ—ತಮೋಗುಣ, ತು—ಆದರೆ, ಅಜ್ಞಾನ-ಜಮ್—ಅಜ್ಞಾನ ಉತ್ಪನ್ನ, ವಿದ್ಧಿ—ತಿಳಿ, ಮೋಹನಮ್—ಮೋಹಕವು, ಸರ್ವದೇಹಿನಾಮ್—ಎಲ್ಲ ದೇಹಗಳ, ಪ್ರಮಾದ—ಪ್ರಮಾದ, ಆಲಸ್ಯ—ಆಲಸ್ಯದೊಡನೆ, ನಿದ್ರಾಭಿಃ—ಮತ್ತು ನಿದ್ರೆಯಿಂದ, ತತ್—ಅದು, ನಿಬಧ್ನಾತಿ—ಬದ್ಧಗೊಳಿಸುತ್ತದೆ, ಭಾರತ—ಹೇಭರತ ಪುತ್ರನೇ.

**ಹೇ ಭರತ ವಂಶಜನೇ, ಅಜ್ಞಾನ ಜನ್ಯ ತಮೋಗುಣವು ಎಲ್ಲ ದೇಹಗತ ಜೀವಿಗಳ ಭ್ರಮೆ ಎಂದು ತಿಳಿ. ಈ ಗುಣದ ಫಲಗಳು ಅವು ಬದ್ಧಾತ್ಮನನ್ನು ಸಿಲುಕಿಸುವ ಪ್ರಮಾದ, ಆಲಸ್ಯ ಮತ್ತು ನಿದ್ರೆ.**

**ಭಾವಾರ್ಥ :** ಈ ಶ್ಲೋಕದಲ್ಲಿ **ತು** ಎಂಬ ಪದದ ವಿಶೇಷ ಅನ್ವಯವು ಬಹು ಮಹತ್ವದ್ದು. ಎಂದರೆ ತಮೋಗುಣವು ದೇಹಗತ ಆತ್ಮನ ಬಹು ವಿಶಿಷ್ಟಗುಣ. ತಮೋಗುಣವು ಸತ್ತ್ವಗುಣಕ್ಕೆ ಪೂರ್ಣ ವಿರುದ್ಧ. ಸತ್ತ್ವಗುಣದಲ್ಲಿ ಜ್ಞಾನದ ಬೆಳವಣಿಗೆಯಿಂದ ಯಾವುದು ಏನು ಎಂಬುದನ್ನು ಒಬ್ಬನು ಅರಿತುಕೊಳ್ಳಬಲ್ಲನು. ಆದರೆ ತಮೋಗುಣವು ತದ್ವಿರುದ್ಧ. ತಮೋಗುಣದ ಪ್ರಭಾವದಲ್ಲಿರುವ ಪ್ರತಿಯೊಬ್ಬನೂ ಹುಚ್ಚನಾಗುತ್ತಾನೆ, ಮತ್ತು ಉನ್ಮತ್ತನು ಯಾವುದು ಏನು ಎಂಬುದನ್ನು ಅರಿತುಕೊಳ್ಳಲಾರನು. ಪ್ರಗತಿ ಸಾಧಿಸುವ ಬದಲು, ಒಬ್ಬನು ಕೀಳಾಗುತ್ತಾನೆ. ವೇದ ಸಾಹಿತ್ಯದಲ್ಲಿ ತಮೋಗುಣದ ಪರಿಭಾಷೆ ಹೀಗಿದೆ, **ವಸ್ತು-ಯಾಥಾತ್ಮ್ಯ-ಜ್ಞಾನಾವರಕಂ ವಿಪರ್ಯಯಜ್ಞಾನ-ಜನಕಂ ತಮಃ :** ಅಜ್ಞಾನ ಪ್ರಭಾವದಲ್ಲಿ, ಒಬ್ಬನು ವಸ್ತುವನ್ನು ಇದ್ದಂತೆ ಅರಿಯಲಾರನು. ಉದಾಹರಣೆಗೆ, ತನ್ನ ತಾತನು ಸತ್ತುಹೋಗಿದ್ದಾನೆ ಮತ್ತು ತಾನು ಕೂಡ ಸಾಯುತ್ತಾನೆ ಎಂಬುದನ್ನು ಪ್ರತಿಯೊಬ್ಬನು ಕಾಣಬಹುದು. ಮಾನವನು ಮರ್ತ್ಯನು. ಅವನು ಪಡೆಯುವ ಮಕ್ಕಳು ಕೂಡ ಮರಣಶೀಲರು. ಆದ್ದರಿಂದ ಮೃತ್ಯು ಖಚಿತ, ಆದರೂ ಜನ ಹುಚ್ಚರಾಗಿ ಹಣ ಸಂಚಯ ಮಾಡುತ್ತಾರೆ ಮತ್ತು ನಿತ್ಯ ಚೇತನವನ್ನು ಗಮನಿಸದೆ, ಹಗಲಿರುಳು ಬಹುವಾಗಿ ಶ್ರಮಿಸುತ್ತಾರೆ. ಇದೇ ಪ್ರಮಾದ. ತಮ್ಮ ಈ ಪ್ರಮಾದದಲ್ಲಿ ಅವರು ಆಧ್ಯಾತ್ಮಿಕ ಅರಿವಿನಲ್ಲಿ ಪ್ರಗತಿ ಸಾಧಿಸಲು ಬಹಳಹಿಂಜರಿಯುತ್ತಾರೆ. ಅಂಥವರು ಬಹು ಸೋಮಾರಿಗಳು. ಆಧ್ಯಾತ್ಮಿಕ ಅರಿವಿಗಾಗಿ ಸಂಗ ಸೇರಲು ಅವರನ್ನು ಆಮಂತ್ರಿಸಿದಾಗ, ಅವರು ಹೆಚ್ಚು ಆಸಕ್ತಿ ತೋರುವುದಿಲ್ಲ. ರಜೋಗುಣ ಅಧೀನನಂತೆ ಅವರು ಕ್ರಿಯಾಶೀಲರೂ ಅಲ್ಲ. ಹೀಗೆ ಒಬ್ಬನು ತಮೋಗುಣದಲ್ಲಿ ಸಿಲುಕಿದ್ದಾನೆ ಎಂಬ ಮತ್ತೊಂದು ಸಂಕೇತವೆಂದರೆ ಅವನು ಅಗತ್ಯಕ್ಕಿಂತ ಹೆಚ್ಚು ನಿದ್ದೆ ಮಾಡುತ್ತಾನೆ. ಆರು ಗಂಟೆ ನಿದ್ದೆ ಸಾಕು, ಆದರೆ ತಮೋಗುಣಿಯು ದಿನಕ್ಕೆ ಕನಿಷ್ಠ ಹತ್ತು ಅಥವಾ ಹನ್ನೆರಡು ಗಂಟೆ ನಿದ್ದೆ ಮಾಡುತ್ತಾನೆ. ಅಂಥವನು ಸದಾ ನಿರುತ್ಸಾಹಿಯಾಗಿ ತೋರುತ್ತಾನೆ ಮತ್ತು ಮಾದಕದ್ರವ್ಯಾಭ್ಯಾಸಿ ಮತ್ತು ನಿದ್ರಾಶೀಲ. ಇವು ತಮೋಗುಣ ಬದ್ಧ ವ್ಯಕ್ತಿಯ ಸಂಕೇತಗಳು.

**ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ ।**
**ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಂಜಯತ್ಯುತ ॥೯॥**

ಸತ್ತ್ವಮ್—ಸತ್ತ್ವಗುಣ, ಸುಖೇ—ಸುಖದಲ್ಲಿ, ಸಂಜಯತಿ—ಬದ್ಧಗೊಳಿಸುತ್ತದೆ, ರಜಃ—ರಜೋಗುಣವು, ಕರ್ಮಣಿ—ಕಾಮ್ಯ ಕರ್ಮಗಳಲ್ಲಿ, ಭಾರತ—ಹೇ ಭರತ ಪುತ್ರನೇ, ಜ್ಞಾನಮ್—ಜ್ಞಾನವನ್ನು, ಆವೃತ್ಯ—ಆವರಿಸಿ, ತು—ಆದರೆ, ತಮಃ—ತಮೋಗುಣವು, ಪ್ರಮಾದೇ—ಪ್ರಮಾದದಲ್ಲಿ, ಸಂಜಯತಿ—ಬದ್ಧಗೊಳಿಸುತ್ತದೆ, ಉತ—ಎಂದು ಹೇಳಿದೆ.

**ಹೇ ಭರತ ಪುತ್ರನೇ, ಸತ್ವಗುಣವು ಒಬ್ಬನನ್ನು ಸುಖಕ್ಕೆ ಬದ್ಧಗೊಳಿಸುತ್ತದೆ; ರಜೋಗುಣವು ಕಾಮ್ಯ ಕರ್ಮಕ್ಕೆ ; ಮತ್ತು ತಮೋಗುಣವು, ಒಬ್ಬನ ಜ್ಞಾನವನ್ನು ಆವರಿಸಿ, ಅವನನ್ನು ಪ್ರಮಾದಕ್ಕೆ ಬದ್ಧಗೊಳಿಸುತ್ತದೆ.**

**ಭಾವಾರ್ಥ :** ಸತ್ತ್ವಗುಣವು, ವಿಶಿಷ್ಟ ಜ್ಞಾನಕ್ಷೇತ್ರದಲ್ಲಿ ನಿರತನಾಗಿ ಆ ಮಾರ್ಗದಲ್ಲಿ ತುಷ್ಟನಾಗಬಹುದಾದ ತತ್ತ್ವಜ್ಞಾನಿ, ವಿಜ್ಞಾನಿ ಅಥವಾ ಬೋಧಕನ ಹಾಗೆ ತನ್ನ ಕೆಲಸ ಅಥವಾ ಬುದ್ಧಿಕಾರ್ಯದಿಂದ ತುಷ್ಟನು. ರಜೋಗುಣವು ಕಾಮ್ಯ ಕರ್ಮ ನಿರತನಾಗಿರಬಹುದು : ಅವನು ಸಾಧ್ಯವಿದ್ದಷ್ಟನ್ನು ಹೊಂದಿರುತ್ತಾನೆ, ಮತ್ತು ಸತ್ಕಾರ್ಯಗಳಿಗೆ ವೆಚ್ಚಮಾಡುತ್ತಾನೆ. ಕೆಲವು ಸಲ ಅವನು ಆಸ್ಪತ್ರೆಗಳನ್ನು ತೆರೆಯಲು, ಸಂಘ ಸಂಸ್ಥೆಗಳಿಗೆ ದಾನ ನೀಡಲು ಇತ್ಯಾದಿಗಳಿಗೆ ಯತ್ನಿಸುತ್ತಾನೆ. ಇವು ರಜೋಗುಣದ ಸಂಕೇತಗಳು ಮತ್ತು ತಮೋಗುಣವು ಜ್ಞಾನವನ್ನು ಆವರಿಸುತ್ತದೆ. ತಮೋಗುಣದಲ್ಲಿ ಏನೇ ಮಾಡಿದರೂ, ಅದು ಅವನಿಗಾಗಲೀ ಅಥವಾ ಅನ್ಯರಿಗಾಗಲೀ ಹಿತವಲ್ಲ.

**ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ ।**
**ರಜಃ ಸತ್ತ್ವಂ ತಮಶ್ಚೈವ ತಮಃ ಸತ್ತ್ವಂ ರಜಸ್ತಥಾ ॥೧೦॥**

ರಜಃ—ರಜೋಗುಣವು, ತಮಃ—ತಮೋಗುಣವು, ಚ—ಕೂಡ, ಅಭಿಭೂಯ—ದಾಟಿ, ಸತ್ತ್ವಮ್—ಸತ್ತ್ವಗುಣವು ಭವತಿ—ಪ್ರಧಾನವಾಗುತ್ತದೆ, ಭಾರತ—ಹೇ ಭರತ ಪುತ್ರನೇ, ರಜಃ—ರಜೋಗುಣವು, ಸತ್ತ್ವಮ್—ಸತ್ತ್ವಗುಣವು, ತಮಃ—ತಮೋಗುಣವು, ಚ—ಕೂಡ, ಏವ—ಹಾಗೆಯೇ, ತಮಃ—ತಮೋಗುಣ, ಸತ್ತ್ವಂ—ಸತ್ತ್ವಗುಣ, ರಜ—ರಜೋಗುಣ, ತಥಾ—ಹೀಗೆ.

**ಹೇ ಭರತ ಪುತ್ರನೇ, ಕೆಲವು ಸಲ ರಜೋಗುಣ, ತಮೋಗುಣಗಳನ್ನು ಹಿಮ್ಮೆಟ್ಟಿಸಿ ಸತ್ತ್ವಗುಣವು ಪ್ರಧಾನವಾಗುತ್ತದೆ. ಮತ್ತೆ ಕೆಲವು ಸಲ ರಜೋಗುಣವು ಸತ್ತ್ವಗುಣ, ತಮೋಗುಣಗಳನ್ನು ಹಿಮ್ಮೆಟ್ಟಿಸುತ್ತದೆ, ಮತ್ತೆ ಕೆಲವು ಸಮಯಗಳಲ್ಲಿ ತಮೋಗುಣವು, ಸತ್ತ್ವ ಮತ್ತು ರಜೋಗುಣಗಳನ್ನು ವಿಫಲಗೊಳಿಸುತ್ತದೆ, ಹೀಗೆ ಪ್ರಾಧಾನ್ಯತೆಗಾಗಿ ಸದಾ ಪೈಪೋಟಿ ನಡೆದಿದೆ.**

**ಭಾವಾರ್ಥ :** ರಜೋಗುಣವು ಪ್ರಧಾನವಾದಾಗ, ಸತ್ತ್ವ ಮತ್ತು ತಮೋಗುಣಗಳು ವಿಫಲಗೊಳ್ಳುತ್ತವೆ. ಸತ್ತ್ವಗುಣ ಪ್ರಧಾನವಿದ್ದಾಗ, ರಜೋ ಮತ್ತು ತಮೋಗುಣಗಳು ಹಿಮ್ಮೆಟ್ಟುತ್ತವೆ. ಮತ್ತು ತಮೋಗುಣವು ಪ್ರಧಾನವಾಗಿರುವಾಗ ರಜೋಗುಣ ಮತ್ತು ಸತ್ತ್ವಗುಣಗಳು ಹಿಮ್ಮೆಟ್ಟುತ್ತವೆ. ಈ ಪೈಪೋಟಿ ಸದಾ ನಡೆಯುತ್ತಿದೆ. ಆದ್ದರಿಂದ, ಕೃಷ್ಣ ಪ್ರಜ್ಞೆಯಲ್ಲಿ ವಾಸ್ತವಿಕವಾಗಿ ಮುಂದುವರಿಯಬಯಸುವವನು ಈ ಮೂರು ಗುಣಗಳನ್ನು ದಾಟಬೇಕು. ಯಾವುದಾದರೊಂದು ವಿಶಿಷ್ಟ ಪ್ರಕೃತಿ ಗುಣ ಪ್ರಾಧಾನ್ಯವು, ಒಬ್ಬನ ವ್ಯವಹಾರ, ಅವನ ಚಟುವಟಿಕೆ, ಅವನ ಆಹಾರ ಇತ್ಯಾದಿಗಳಲ್ಲಿ ಪ್ರಮುಖ. ಇದನ್ನೆಲ್ಲ ಮುಂದಿನ ಅಧ್ಯಾಯಗಳಲ್ಲಿ ವಿವರಿಸಲಾಗುವುದು. ಆದರೆ ಒಬ್ಬನು ಇಚ್ಛಿಸಿದರೆ ಅಭ್ಯಾಸಬಲದಿಂದ, ಸತ್ತ್ವಗುಣವನ್ನು ಬೆಳೆಸಿಕೊಳ್ಳಬಹುದು ಮತ್ತು ತಮೋ ರಜೋ ಗುಣಗಳನ್ನು ಹಿಮ್ಮೆಟ್ಟಿಸಬಹುದು. ಅದೇ ಪ್ರಕಾರ, ಒಬ್ಬನು ರಜೋಗುಣವನ್ನು ಬೆಳೆಸಿಕೊಂಡು ಸತ್ತ್ವ ಮತ್ತು ತಮೋ ಗುಣಗಳನ್ನು ಹಿಮ್ಮೆಟ್ಟಿಸಬಹುದು. ಅಥವಾ ಒಬ್ಬನು ತಮೋಗುಣವನ್ನು ಬೆಳೆಸಿಕೊಂಡು ಸತ್ತ್ವ ಮತ್ತು ರಜೋ ಗುಣಗಳನ್ನು ವಿಫಲ

ಗೊಳಿಸಬಹುದು. ಇವು ಮೂರು ಭೌತಿಕ ಪ್ರಕೃತಿ ಗುಣಗಳಾಗಿದ್ದರೂ, ಒಬ್ಬನು ಕೃತ ನಿಶ್ಚಯನಾಗಿದ್ದರೆ ಅವನು ಸತ್ತ್ವಗುಣ ಹೊಂದಬಲ್ಲನು. ಮತ್ತು ಸತ್ತ್ವಗುಣವನ್ನು ದಾಟಿ **ವಾಸುದೇವ** ಮಟ್ಟ ಎಂದು ಕರೆದಿರುವ ಶುದ್ಧ ಸತ್ತ್ವದಲ್ಲಿ ಸನ್ನಿವೇಶಿತನಾಗಬಹುದು. ಆ ಸ್ಥಿತಿಯಲ್ಲಿ ಒಬ್ಬನು ಭಗವದ್ ವಿಜ್ಞಾನವನ್ನು ಅರಿತುಕೊಳ್ಳಬಹುದು. ವಿಶಿಷ್ಟ ಚಟುವಟಿಕೆಗಳ ಅಭಿವ್ಯಕ್ತತೆಯಿಂದ,ಒಬ್ಬನು ಯಾವ ಪ್ರಕೃತಿ ಗುಣ ಸನ್ನಿವೇಶಿತನು ಎಂಬುದನ್ನು ಅರಿಯಬಹುದಾಗಿದೆ.

**ಸರ್ವದ್ವಾರೇಷು ದೇಹೇಽಸ್ಮಿನ್ ಪ್ರಕಾಶ ಉಪಜಾಯತೇ ।**
**ಜ್ಞಾನಂ ಯದಾ ತದಾ ವಿದ್ಯಾದ್ ವಿವೃದ್ಧಂ ಸತ್ತ್ವಮಿತ್ಯುತ ॥ ೧೧ ॥**

ಸರ್ವ-ದ್ವಾರೇಷು—ಎಲ್ಲ ದ್ವಾರಗಳಲ್ಲಿ, ದೇಹೇ-ಅಸ್ಮಿನ್—ಈ ದೇಹದಲ್ಲಿ. ಪ್ರಕಾಶಃ—ಪ್ರಕಾಶ ಗುಣವು, ಉಪಜಾಯತೇ—ಬೆಳೆಯುತ್ತದೆ, ಜ್ಞಾನಮ್—ಜ್ಞಾನವನ್ನು, ಯದಾ—ಯಾವಾಗ, ತದಾ—ಆ ಕಾಲದಲ್ಲಿ, ವಿದ್ಯಾತ್—ತಿಳಿ, ವಿವೃದ್ಧಮ್—ವೃದ್ಧಿಯಾಗಿದೆ ಎಂದು, ಸತ್ತ್ವಮ್—ಸತ್ತ್ವಗುಣವು ಇತಿ ಉತ—ಹೀಗೆ ಹೇಳಿದೆ.

**ದೇಹದ ಎಲ್ಲ ದ್ವಾರಗಳು ಜ್ಞಾನಪ್ರಕಾಶದಿಂದ ದೀಪ್ತವಾದಾಗ, ಸತ್ತ್ವ ಗುಣಗಳ ಅಭಿವ್ಯಕ್ತತೆಗಳನ್ನು ಅನುಭವಿಸಬಹುದು.**

**ಭಾವಾರ್ಥ .** ದೇಹದಲ್ಲಿ ನವದ್ವಾರಗಳಿವೆ; ಎರಡು ಕಣ್ಣು, ಎರಡು ಕಿವಿ, ಎರಡು ನಾಸಾಪುಟಗಳು, ಬಾಯಿ, ಜನನೇಂದ್ರಿಯ ಮತ್ತು ಗುದ. ಈ ಪ್ರತಿಯೊಂದೂ ಸಾತ್ವಿಕ ಸಂಕೇತಗಳಿಂದ ದೀಪ್ತವಾದಾಗ, ಒಬ್ಬನು ಸತ್ತ್ವಗುಣ ಬೆಳೆಸಿಕೊಂಡಿದ್ದಾನೆ ಎಂದು ತಿಳಿಯಬೇಕು. ಸತ್ತ್ವಗುಣದಲ್ಲಿ ಒಬ್ಬನು ವಿಷಯಗಳನ್ನು ಸರಿಯಾದ ಸ್ಥಿತಿಯಲ್ಲಿ ಕಾಣಬಲ್ಲನು, ವಿಷಯಗಳನ್ನು ಸರಿಯಾದ ಸ್ಥಿತಿಯಲ್ಲಿ ಶ್ರವಣಮಾಡಬಲ್ಲನು, ಮತ್ತು ಒಬ್ಬನು ವಿಷಯಗಳನ್ನು ಸರಿಯಾದ ಸ್ಥಿತಿಯಲ್ಲಿ ಆಸ್ವಾದಿಸಬಲ್ಲನು. ಒಬ್ಬನು ಒಳಗೂ ಹೊರಗೂ ಶುದ್ಧನಾಗುತ್ತಾನೆ. ಪ್ರತಿಯೊಂದು ದ್ವಾರದಲ್ಲಿ ಸುಖ ಸಂಕೇತಗಳು ವೃದ್ಧಿಸುತ್ತವೆ, ಮತ್ತು ಅದೇ ಸತ್ತ್ವ ಸ್ಥಿತಿ.

**ಲೋಭಃ ಪ್ರವೃತ್ತಿರಾರಮ್ಭಃ ಕರ್ಮಣಾಮಶಮಃ ಸ್ಪೃಹಾ ।**
**ರಜಸ್ಯೇತಾನಿ ಜಾಯನ್ತೇ ವಿವೃದ್ಧೇ ಭರತರ್ಷಭ ॥ ೧೨ ॥**

ಲೋಭಃ—ಲೋಭ, ಪ್ರವೃತ್ತಿಃ—ಚಟುವಟಿಕೆ, ಆರಮ್ಭಃ—ಪ್ರಯತ್ನ, ಕರ್ಮಣಾಮ್—ಚಟುವಟಿಕೆಗಳಲ್ಲಿ, ಅಶಮಃ—ಅಂಕೆ ತಪ್ಪಿದ, ಸ್ಪೃಹಾ—ಇಚ್ಛೆ. ರಜಸಿ—ರಾಜಸ ಗುಣದ್ದು, ಏತಾನಿ—ಈ ಎಲ್ಲ, ಜಾಯನ್ತೇ—ಬೆಳೆಯುತ್ತವೆ. ವಿವೃದ್ಧೇ—ಅತಿಯಾದಾಗ, ಭರತ-ಋಷಭ—ಹೇ ಭರತ ವಂಶ ಪ್ರಧಾನನೇ.

**ಹೇ ಭರತ ಕುಲ ಪ್ರಧಾನನೇ, ರಜೋಗುಣ ವೃದ್ಧಿಯಾದಾಗ ಅತಿವ್ಯಾಮೋಹ, ಕಾಮ್ಯ ಕರ್ಮ, ತೀವ್ರ ಪ್ರಯತ್ನ, ಮಿತಿಮೀರಿದ ಇಚ್ಛೆ ಮತ್ತು ದುರಾಸೆಯು ಬೆಳೆಯುತ್ತದೆ.**

**ಭಾವಾರ್ಥ :** ರಜೋಗುಣಿಯು ತಾನು ಆಗಲೇ ಗಳಿಸಿರುವ ಸ್ಥಿತಿಯಿಂದ ಎಂದೂ ತೃಪ್ತನಲ್ಲ; ಅವನು ತನ್ನ ಸ್ಥಿತಿಯನ್ನು ವೃದ್ಧಿಸಿಕೊಳ್ಳಲು ತೀವ್ರವಾಗಿ ಆಶಿಸುತ್ತಾನೆ. ಒಂದು ವಾಸದ ಮನೆ ಕಟ್ಟಬಯಸಿದರೆ, ತಾನು ಶಾಶ್ವತವಾಗಿ ಆ ಮನೆಯಲ್ಲಿ ಇರುವನೋ ಎಂಬಂತೆ ಭವ್ಯ ಭವನವನ್ನು ಕಟ್ಟಲು ತನ್ನ ಅತ್ಯುತ್ತಮಪ್ರಯತ್ನ ಮಾಡುತ್ತಾನೆ ಮತ್ತು ಇಂದ್ರಿಯದ ತೋಷಣಕ್ಕೆ ತನ್ನ ಚಾಪಲ್ಯ ಬೆಳೆಸಿಕೊಳ್ಳುತ್ತಾನೆ. ಇಂದ್ರಿಯ ತೋಷಣಕ್ಕೆ ಕೊನೆ ಎಂಬುದಿಲ್ಲ. ಅವನು ಸದಾ ಕುಟುಂಬದೊಂದಿಗೆ ತನ್ನ ಮನೆಯಲ್ಲಿರಲು ಮತ್ತು ಇಂದ್ರಿಯ ತೋಷಣ ಪ್ರಕ್ರಿಯೆಯನ್ನು ಮುಂದುವರಿಸಲು ಬಯಸುತ್ತಾನೆ. ಇದಕ್ಕೆ ಮುಕ್ತಾಯ ಎಂಬುದಿಲ್ಲ, ಈ ಎಲ್ಲ ಸಂಕೇತಗಳನ್ನು ರಜೋಗುಣದ ಲಕ್ಷಣಗಳೆಂದು ತಿಳಿಯಬೇಕು.

**ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ ।**
**ತಮಸ್ಯೇತಾನಿ ಜಾಯನ್ತೇ ವಿವೃದ್ಧೇ ಕುರುನಂದನ ॥ ೧೩ ॥**

ಅಪ್ರಕಾಶಃ—ಅಂಧಕಾರ, ಅಪ್ರವೃತ್ತಿಃ—ನಿಷ್ಕ್ರಿಯತೆ, ಚ—ಮತ್ತು, ಪ್ರಮಾದಃ—ಪ್ರಮಾದ, ಮೋಹ—ಮೋಹ, ಏವ—ಖಂಡಿತವಾಗಿ, ಚ—ಕೂಡ, ತಮಸಿ—ತಮೋಗುಣದಲ್ಲಿ, ಏತಾನಿ—ಇವು, ಜಾಯನ್ತೇ—ಪ್ರಕಟವಾಗುತ್ತವೆ, ವಿವೃದ್ಧೇ—ವೃದ್ಧಿಯಾದಾಗ, ಕುರು-ನಂದನ—ಹೇ ಕುರುಪುತ್ರನೇ.

**ಹೇ ಕುರುಪುತ್ರನೇ, ತಮೋಗುಣ ವೃದ್ಧಿಯಾದಾಗ ಅಂಧಕಾರ, ಅಪ್ರವೃತ್ತಿ ಪ್ರಮಾದ ಮತ್ತು ಮೋಹಗಳು ವ್ಯಕ್ತವಾಗುತ್ತವೆ.**

**ಭಾವಾರ್ಥ :** ದೀಪ್ತಿ ಇಲ್ಲದಾಗ ಜ್ಞಾನದ ಅಭಾವ ಇರುತ್ತದೆ. ತಮೋಗುಣಿಯು ನಿಯಂತ್ರಣ ತತ್ತ್ವಾನುಸಾರ ಕೆಲಸ ಮಾಡುವುದಿಲ್ಲ ; ಯಾವ ಉದ್ದೇಶವಿಲ್ಲದೆ ಇಷ್ಟ ಬಂದ ಹಾಗೆ ವರ್ತಿಸಬಯಸುತ್ತಾನೆ. ಕಾರ್ಯಶಕ್ತಿ ಇದ್ದರೂ ಕೂಡ ಪ್ರಯತ್ನ ಮಾಡುವುದಿಲ್ಲ. ಇದನ್ನು ಮೋಹ (ಮಾಯೆ) ಎಂದು ಕರೆದಿದೆ. ಪ್ರಜ್ಞೆ ಇದ್ದರೂ, ಜೀವನ ನಿಷ್ಕ್ರಿಯ. ಇವು ತಮೋ ಗುಣಿಯ ಸಂಕೇತಗಳು.

**ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಲಯಂ ಯಾತಿ ದೇಹಭೃತ್ ।**
**ತದೋತ್ತಮವಿದಾಂ ಲೋಕಾನಮಲಾನ್ ಪ್ರತಿಪದ್ಯತೇ ॥ ೧೪ ॥**

ಯದಾ—ಯಾವಾಗ, ಸತ್ತ್ವೇ—ಸತ್ತ್ವಗುಣ, ಪ್ರವೃದ್ಧೇ—ಬೆಳೆಯುವುದೋ, ತು—ಆದರೆ, ಪ್ರಲಯಮ್—ಪ್ರಳಯವು, ಯಾತಿ—ಸರಿಯುತ್ತದೆ, ದೇಹ-ಭೃತ್—ದೇಹಧಾರಿ, ತದಾ—ಆ ಕಾಲದಲ್ಲಿ, ಉತ್ತಮ-ವಿದಾಮ್—ಮಹರ್ಷಿಗಳ, ಲೋಕಾನ್—ಲೋಕಗಳನ್ನು, ಅಮಲಾನ್—ಶುದ್ಧವಾದ, ಪ್ರತಿಪದ್ಯತೇ—ಹೊಂದುತ್ತಾನೆ.

**ಒಬ್ಬನು ಸತ್ತ್ವಭಾವದಲ್ಲಿ ಮರಣ ಹೊಂದಿದಾಗ, ಅವನು ಮಹರ್ಷಿಗಳ ಶುದ್ಧ ಉನ್ನತ ಲೋಕಗಳನ್ನು ಹೊಂದುತ್ತಾನೆ.**

**ಭಾವಾರ್ಥ :** ಸತ್ತ್ವಗುಣಿಯು ಬ್ರಹ್ಮಲೋಕ ಅಥವಾ ಜನೋಲೋಕದಂಥ ಊರ್ಧ್ವ ಲೋಕಗಳನ್ನು ಹೊಂದುತ್ತಾನೆ, ಮತ್ತು ಅಲ್ಲಿ ದೈವೀಸುಖವನ್ನು ಭೋಗಿಸುತ್ತಾನೆ.

**ಅಮಲಾನ್** ಪದವು ಮಹತ್ವದ್ದು ; ಅದು "ರಜೋ, ತಮೋ ಗುಣಗಳಿಂದ ಮುಕ್ತ" ಎಂದು ಅರ್ಥ. ಭೌತಿಕ ಜಗತ್ತಿನಲ್ಲಿ ಕಲ್ಮಷಗಳಿವೆ, ಆದರೆ ಸತ್ತ್ವಗುಣವು ಭೌತಿಕ ಜಗತ್ತಿನ ಅಸ್ತಿತ್ವದ ಅತ್ಯಂತ ಶುದ್ಧರೂಪ. ಭಿನ್ನಭಿನ್ನ ಜೀವಿಗಳಿಗಾಗಿ ಭಿನ್ನಭಿನ್ನ ಬಗೆಯ ಲೋಕಗಳಿವೆ. ಸತ್ತ್ವಗುಣದಲ್ಲಿ ಮರಣ ಹೊಂದುವವರು ಮಹರ್ಷಿಗಳು ಮತ್ತು ಮಹಾ ಭಕ್ತರು ವಾಸಿಸುವ ಲೋಕಗಳಿಗೆ ಉನ್ನತಿಸಲ್ಪಡುತ್ತಾರೆ.

**ರಜಸಿ ಪ್ರಲಯಂ ಗತ್ವಾ ಕರ್ಮಸಂಗಿಷು ಜಾಯತೇ ।**
**ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ ॥ ೧೫ ॥**

ರಜಸಿ—ರಜೋಗುಣದಲ್ಲಿ, ಪ್ರಲಯಮ್—ಪ್ರಲಯ, ಗತ್ವಾ—ಹೊಂದಿ. ಕರ್ಮ-ಸಂಗಿಷು—ಕಾಮ್ಯ ಕರ್ಮರತರ ಸಂಗದಲ್ಲಿ, ಜಾಯತೇ—ಹುಟ್ಟುತ್ತಾನೆ, ತಥಾ— ಅದೇ ಪ್ರಕಾರ, ಪ್ರಲೀನಃ—ಪ್ರಲಯ ಹೊಂದುವನು, ತಮಸಿ—ತಮೋಗುಣದಲ್ಲಿ, ಮೂಢ-ಯೋನಿಷು—ಪಶುಯೋನಿಗಳಲ್ಲಿ, ಜಾಯತೇ—ಹುಟ್ಟುತ್ತಾನೆ.

**ಒಬ್ಬನು ರಜೋಗುಣದಲ್ಲಿ ಮೃತನಾದಾಗ ಅವನು ಕಾಮ್ಯ ಕರ್ಮಿಗಳಲ್ಲಿ ಜನ್ಮವೆತ್ತುತ್ತಾನೆ; ಮತ್ತು ತಮೋಗುಣದಲ್ಲಿ ಮೃತನಾದಾಗ ಅವನು ಪಶುಲೋಕದಲ್ಲಿ ಜನ್ಮವೆತ್ತುತ್ತಾನೆ.**

**ಭಾವಾರ್ಥ :** ಆತ್ಮವು ಮಾನವ ಜನ್ಮದ ವೇದಿಕೆಗೆ ತಲುಪಿದ ಮೇಲೆ ಮತ್ತೆ ಎಂದೂ ಕೆಳಗಿಳಿಯುವುದಿಲ್ಲ ಎಂದು ಕೆಲವರಲ್ಲಿ ಮನೋಭಾವವುಂಟು. ಇದು ಸರಿಯಲ್ಲ. ಈ ಶ್ಲೋಕದ ಪ್ರಕಾರ ಒಬ್ಬನು ತಾಮಸ ಗುಣವನ್ನು ಬೆಳೆಸಿಕೊಂಡರೆ ಮರಣಾನಂತರ ಅವನು ಪಶು ಜೀವನಕ್ಕೆ ಇಳಿಯುತ್ತಾನೆ. ಮತ್ತೆ ಅಲ್ಲಿಂದ ಮಾನವ ಜನ್ಮಕ್ಕೆ ಬರಲು ವಿಕಾಸ ಕ್ರಮದಲ್ಲಿ ತನ್ನನ್ನು ತಾನು ಉನ್ನತಿಸಿಕೊಳ್ಳಬೇಕಾಗುವುದು. ಆದ್ದರಿಂದ ಮಾನವ ಜನ್ಮದ ಬಗ್ಗೆ ವಾಸ್ತವಿಕವಾಗಿ ತೀವ್ರ ಆಸಕ್ತಿಯುಳ್ಳವರು ಸತ್ತ್ವಗುಣವನ್ನು ಗ್ರಹಿಸಬೇಕು ಮತ್ತು ಸತ್ಸಂಗದಲ್ಲಿ ಆ ಗುಣಗಳನ್ನು ದಾಟಬೇಕು ಮತ್ತು ಕೃಷ್ಣಪ್ರಜ್ಞೆಯಲ್ಲಿ ಸನ್ನಿವೇಶಿತನಾಗುವುದು ಮಾನವ ಜನ್ಮದ ಗುರಿ. ಇಲ್ಲದಿದ್ದರೆ ಮಾನವ ಜೀವಿಯು ಮತ್ತೆ ಮಾನವ ಮಟ್ಟಕ್ಕೆ ಬರುವುದು ಖಚಿತವಲ್ಲ.

**ಕರ್ಮಣಃ ಸುಕೃತಸ್ಯಾಹುಃ ಸಾತ್ತ್ವಿಕಂ ನಿರ್ಮಲಂ ಫಲಮ್ ।**
**ರಜಸಸ್ತು ಫಲಂ ದುಃಖಮಜ್ಞಾನಂ ತಮಸಃ ಫಲಮ್ ॥೧೬॥**

ಕರ್ಮಣಃ—ಕರ್ಮದ, ಸು-ಕೃತಸ್ಯ—ಪುಣ್ಯಕರ, ಆಹುಃ—ಎಂದು ಹೇಳಿದೆ, ಸಾತ್ತ್ವಿಕಮ್—ಸತ್ತ್ವಭಾವದಲ್ಲಿ, ನಿರ್ಮಲಮ್—ಶುದ್ಧ, ಫಲಮ್—ಫಲವು, ರಜಸಃ —ರಾಜಸ ಗುಣದ, ತು—ಆದರೆ, ಫಲಮ್—ಫಲವು, ದುಃಖಮ್—ಕ್ಲೇಶವು, ಅಜ್ಞಾನಮ್—ಅಜ್ಞಾನ, ತಮಸಃ—ತಮೋಗುಣದ, ಫಲಮ್—ಫಲ.

**ಪುಣ್ಯ ಕರ್ಮದ ಫಲವು ಶುದ್ಧ ಮತ್ತು ಅದು ಸತ್ತ್ವಭಾವದಲ್ಲಿರುವುದು ಎಂದು ಹೇಳಿದೆ. ಆದರೆ ರಜೋಗುಣದಲ್ಲಿ ಮಾಡಿದ ಕಾರ್ಯವು ಕ್ಲೇಶದಲ್ಲಿ ಪರಿಣಮಿಸುತ್ತದೆ, ಮತ್ತು ತಮೋಗುಣದಲ್ಲಿ ಮಾಡಿದ ಕಾರ್ಯವು ಮೂಢತನದಲ್ಲಿ ಪರಿಣಮಿಸುತ್ತದೆ.**

**ಭಾವಾರ್ಥ :** ಸತ್ತ್ವಗುಣದಲ್ಲಿಯ ಪವಿತ್ರ ಚಟುವಟಿಕೆಗಳ ಫಲವು ಶುದ್ಧವಾದುದು. ಆದ್ದರಿಂದ ಎಲ್ಲಾ ಮೋಹಗಳಿಂದ ಮುಕ್ತರಾದ ಋಷಿಗಳು, ಸುಖಸನ್ನಿವೇಶಿತರು. ಆದರೆ ರಜೋಗುಣದ ಚಟುವಟಿಕೆಗಳು ಕ್ಲೇಶದಾಯಕ. ಭೌತಿಕ ಸುಖದ ಯಾವುದೇ ಚಟುವಟಿಕೆಯು ವಿಫಲವಾಗುವುದು ಖಂಡಿತ. ಉದಾಹರಣೆಗೆ, ಒಬ್ಬನು ಒಂದು ಗಗನಚುಂಬೀ ಕಟ್ಟಡ ಕಟ್ಟಬಯಸಿದರೆ, ಅದನ್ನು ನಿರ್ಮಿಸುವ ಮೊದಲು ಎದೆಷ್ಟು ಮಾನವ ಕ್ಲೇಶಪಡಬೇಕಾಗುವುದು. ಅಪಾರ ಹಣಗಳಿಸಲು ಒಬ್ಬನು ಸಾಕಷ್ಟು ಕಷ್ಟಪಡಬೇಕು, ಮತ್ತು ಕಟ್ಟಡ ನಿರ್ಮಿಸುವವನು ದೈಹಿಕ ಶ್ರಮಪಡಬೇಕಾಗುವುದು. ಕ್ಲೇಶಗಳು ಇದ್ದೇ ಇವೆ. ಹೀಗೆ ರಜೋಗುಣ ಪ್ರಭಾವದಲ್ಲಿ ನಡೆಯುವ ಯಾವುದೇ ಚಟುವಟಿಕೆಯಲ್ಲಿ, ಖಂಡಿತ ಬಹಳಷ್ಟು ಕ್ಲೇಶವಿದೆ ಎಂದು ಭಗವದ್ಗೀತೆಯು ಹೇಳುತ್ತದೆ. "ನನಗೆ ಈ ಮನೆ ಇದೆ, ಈ ಹಣವಿದೆ"—ಎಂದು ಏನೋ ಅಲ್ಪ ಮಾನಸಿಕ ಸುಖ ಇರಬಹುದು, ಆದರೆ ನಿಜ ಸುಖವಲ್ಲ.

ತಾಮಸ ಗುಣದ ವಿಷಯದಲ್ಲಿ, ಕಾರ್ಯಕರ್ತನು ಜ್ಞಾನಶೂನ್ಯನು, ಆದ್ದರಿಂದ ಅವನ ಎಲ್ಲ ಚಟುವಟಿಕೆಗಳು ಸದ್ಯ ಕ್ಲೇಶದಲ್ಲಿ ಪರಿಣಮಿಸುತ್ತವೆ, ಮತ್ತು ಆಮೇಲೆ ಪಶು ಜೀವನದ ಕಡೆಗೆ ಅವನು ಸಾಗುತ್ತಾನೆ. ಪಶು ಜೀವನವು ಮಾಯಾ ಶಕ್ತಿಯ ಪ್ರಭಾವದಲ್ಲಿ ಇದ್ದರೂ ಕೂಡ ಸದಾ ಕ್ಲೇಶಕರ. ಪಶುಗಳು ಇದನ್ನು ಅರಿತುಕೊಳ್ಳುವುದಿಲ್ಲ. ಮೂಕ ಪ್ರಾಣಿಗಳನ್ನು ವಧೆಮಾಡುವುದು ಕೂಡ ತಾಮಸ ಗುಣ ನಿಮಿತ್ತ. ಅವರನ್ನು ಕೊಲ್ಲಲು ಪ್ರಾಣಿಯು ಮುಂದೆ ತಕ್ಕ ದೇಹ ಪಡೆಯುವುದೆಂದು ಪಶುಹಂತಕರು ತಿಳಿದಿಲ್ಲ. ಅದೇ ಪ್ರಕೃತಿ ನಿಯಮ. ಮಾನವ ಸಮಾಜದಲ್ಲಿ ಒಬ್ಬನು ಮಾನವನನ್ನು ಕೊಂದರೆ ಅವನನ್ನು ನೇಣುಹಾಕಬೇಕು. ಅದು ರಾಜ್ಯದ ನಿಯಮ. ತಮೋಗುಣ ನಿಮಿತ್ತ, ಪರಮಪ್ರಭುವಿನಿಂದ ನಿಯಂತ್ರಿತ ಸಂಪೂರ್ಣರಾಜ್ಯವಿದೆ ಎಂಬುದನ್ನು ಜನರು ಗ್ರಹಿಸುವುದಿಲ್ಲ. ಪ್ರತಿಯೊಂದು ಜೀವ ಜಂತುವು ಪರಮಪ್ರಭುವಿನ ಪುತ್ರ ಮತ್ತು ಅವನು ಇರುವೆಯನ್ನು ಕೂಡ ಕೊಲ್ಲುವುದನ್ನು ಸಹಿಸುವುದಿಲ್ಲ. ಅದಕ್ಕಾಗಿ ಒಬ್ಬನು ಶಿಕ್ಷೆ ಅನುಭವಿಸಬೇಕು. ಆದ್ದರಿಂದ ನಾಲಿಗೆ ರುಚಿಗಾಗಿ ಪಶುವಧೆಗೆ ತೊಡಗುವುದು ಅತಿ ತೀವ್ರಸ್ವರೂಪದ ತಾಮಸಗುಣ. ಮಾನವನು ಪಶುಗಳನ್ನು ಕೊಲ್ಲಬೇಕಾಗಿಲ್ಲ ಏಕೆಂದರೆ, ಭಗವಂತನು ಅನೇಕ ಒಳ್ಳೆಯ ವಸ್ತುಗಳನ್ನು ಒದಗಿಸಿದ್ದಾನೆ. ಆದರೂ ಒಬ್ಬನು ಮಾಂಸಾಹಾರದಲ್ಲಿ ತೊಡಗಿದರೆ ಅವನು ತಮೋಗುಣದಲ್ಲಿ ವರ್ತಿಸುತ್ತಿದ್ದಾನೆ ಮತ್ತು ತನ್ನ ಭವಿಷ್ಯವನ್ನು ಬಹು ಅಂಧಕಾರಮಯ ಮಾಡಿಕೊಳ್ಳುತ್ತಿದ್ದಾನೆ ಎಂದು ಅರಿತಿರಬೇಕು. ಎಲ್ಲ ಬಗೆಯ ಪಶುವಧೆಗಳಲ್ಲಿ ಗೋಹತ್ಯೆಯು ಅತ್ಯಂತ ಕೆಟ್ಟದ್ದು. ಏಕೆಂದರೆ ಹಸು ನಮಗೆ ಹಾಲುನೀಡಿ ಎಲ್ಲ ಬಗೆಯ ಸುಖ ನೀಡುತ್ತದೆ. ಗೋ ವಧೆಯು ಅಜ್ಞಾನದ ಒಂದು ತೀರಾ ಕೆಟ್ಟಕಾರ್ಯ. ವೇದ ಸಾಹಿತ್ಯದಲ್ಲಿ, (ಋಗ್ವೇದ 9. 4. 64) **ಗೋಭಿಃ ಪ್ರೀನಿತ–ಮತ್ಸರವ್ :** ಎಂಬ ಪದಗಳು ಒಬ್ಬನು ಹಾಲಿನಿಂದ ಪೂರ್ಣ ತೃಪ್ತನಾಗಿಯೂ ಹಸುವನ್ನು ಕೊಲ್ಲಬಯಸಿದರೆ, ಅವನು ತೀರಾ ಅಜ್ಞಾನದಲ್ಲಿ ಇರುವನೆಂದು ಸೂಚಿಸುತ್ತವೆ. ವೇದ ಸಾಹಿತ್ಯದಲ್ಲಿ ಒಂದು ಪ್ರಾರ್ಥನೆಯು ಕೂಡ ಹೀಗೆ ಹೇಳುತ್ತದೆ:

ನಮೋ ಬ್ರಹ್ಮಣ್ಯ–ದೇವಾಯ
ಗೋ–ಬ್ರಾಹ್ಮಣ–ಹಿತಾಯ ಚ
ಜಗದ್–ಧ್ಧಿತಾಯ ಕೃಷ್ಣಾಯ
ಗೋವಿನ್ದಾಯ ನಮೋ ನಮಃ

"ನನ್ನ ಪ್ರಭುವೇ, ನೀನು ಗೋ ಬ್ರಾಹ್ಮಣರ ಹಿತೈಷಿ, ಮತ್ತು ನೀನು ಇಡೀ ಮಾನವ ಕುಲದ ಮತ್ತು ಜಗತ್ತಿನ ಹಿತಚಿಂತಕ" (ವಿಷ್ಣುಪುರಾಣ 1.19.65) ತಾತ್ಪರ್ಯವೆಂದರೆ ಆ ಸ್ತೋತ್ರದಲ್ಲಿ ಗೋ ಮತ್ತು ಬ್ರಾಹ್ಮಣರ ರಕ್ಷಣೆಯ ವಿಶೇಷ ಪ್ರಸ್ತಾಪ ಇದೆ. ಬ್ರಾಹ್ಮಣರು ಆಧ್ಯಾತ್ಮ ಶಿಕ್ಷಣದ ಸಂಕೇತ, ಮತ್ತು ಹಸುಗಳು ಅತ್ಯಂತ ಬೆಲೆಯುಳ್ಳ ಆಹಾರದ ಸಂಕೇತ ; ಈ ಎರಡು ಬಗೆಯ ಜೀವಿಗಳು, ಎಂದರೆ ಬ್ರಾಹ್ಮಣರು ಮತ್ತು ಗೋವುಗಳಿಗೆ ಎಲ್ಲ ರಕ್ಷಣೆ ನೀಡಲ್ಪಡಬೇಕು— ಅದು ನಿಜವಾದ ನಾಗರಿಕತೆಯ ಮುನ್ನಡೆ. ಆಧುನಿಕ ಮಾನವ ಸಮಾಜದಲ್ಲಿ, ಅಧ್ಯಾತ್ಮ ಜ್ಞಾನವು ಉಪೇಕ್ಷಿತ, ಮತ್ತು ಗೋಹತ್ಯೆಗೆ ಪ್ರೋತ್ಸಾಹ ನೀಡಲಾಗುತ್ತಿದೆ. ಆದ್ದರಿಂದ ಮಾನವ ಕುಲವು ತಪ್ಪುದಾರಿಯಲ್ಲಿ ಸಾಗಿದೆ ಮತ್ತು ಆತ್ಮನಾಶದ ಕಡೆಗೆ ದಾರಿ ಮಾಡಿಕೊಳ್ಳುತ್ತಿದೆ ಎಂದು ತಿಳಿಯಬೇಕು. ಮುಂದಿನ ಜನ್ಮದಲ್ಲಿ ಪಶುಗಳಾಗುವಂತೆ ಪ್ರಜೆಗಳಿಗೆ ದಾರಿ ತೋರುವ ನಾಗರಿಕತೆಯು ಖಂಡಿತವಾಗಿ ಮಾನವ ನಾಗರಿಕತೆಯಲ್ಲ. ಸದ್ಯದ ಮಾನವ ನಾಗರಿಕತೆಯು ರಜೋಗುಣ ಮತ್ತು ತಮೋಗುಣದಿಂದ ತೀರಾ ದಾರಿ ತಪ್ಪಿದೆ ನಿಜ. ಇದು ಬಹು ಅಪಾಯಕಾರ ಯುಗ, ಆದ್ದರಿಂದ ಎಲ್ಲ ರಾಷ್ಟ್ರಗಳು ಮಾನವ ಕುಲವನ್ನು ಮಹಾಪಾಯದಿಂದ ರಕ್ಷಿಸಲು ಅತಿ ಸುಲಭ ಪ್ರಕ್ರಿಯೆಯಾದ ಕೃಷ್ಣಪ್ರಜ್ಞೆಯನ್ನು ಒದಗಿಸಲು ಗಮನ ನೀಡಬೇಕು.

**ಸತ್ತ್ವಾತ್ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ ।**
**ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವಚ ॥೧೭॥**

ಸತ್ತ್ವಾತ್—ಸತ್ತ್ವಗುಣದಿಂದ, ಸಂಜಾಯತೇ—ಬೆಳೆಯುತ್ತದೆ, ಜ್ಞಾನಮ್—ಜ್ಞಾನವು, ರಜಸಃ—ರಜೋಗುಣದಿಂದ, ಲೋಭಃ—ಲೋಭವು, ಏವ—ಖಚಿತವಾಗಿ, ಚ—ಕೂಡ, ಪ್ರಮಾದ—ಪ್ರಮಾದವು, ಮೋಹೌ—ಮತ್ತು ಮೋಹವು, ತಮಸಃ—ತಮೋಗುಣದಿಂದ, ಭವತಃ—ಬೆಳೆಯುತ್ತದೆ, ಅಜ್ಞಾನಮ್—ಅಜ್ಞಾನವು, ಏವ—ಖಂಡಿತವಾಗಿ, ಚ—ಕೂಡ.

**ಸತ್ತ್ವಗುಣದಿಂದ ನಿಜಜ್ಞಾನವು ಬೆಳೆಯುತ್ತದೆ. ರಜೋಗುಣದಿಂದ ಲೋಭವು ಬೆಳೆಯುತ್ತದೆ ಮತ್ತು ತಮೋಗುಣದಿಂದ ಮೂಢತನ, ಉನ್ಮತ್ತತೆ ಮತ್ತು ಮೋಹವು ಬೆಳೆಯುತ್ತವೆ.**

**ಭಾವಾರ್ಥ :** ಸದ್ಯದ ನಾಗರಿಕತೆಯು ಜೀವಿಗಳಿಗೆ ಅಷ್ಟೊಂದು ಅನುಕೂಲಕರವಾಗಿಲ್ಲವಾದ್ದರಿಂದ ಕೃಷ್ಣಪ್ರಜ್ಞೆಯು ಹೇಳಲ್ಪಟ್ಟಿದೆ. ಕೃಷ್ಣಪ್ರಜ್ಞೆಯ ಮೂಲಕ ಸಮಾಜವು ಸತ್ತ್ವಗುಣವನ್ನು ಬೆಳೆಸಿಕೊಳ್ಳುವುದು. ಸತ್ತ್ವಗುಣವು ಬೆಳೆದಾಗ ಜನರು ವಿಷಯಗಳನ್ನು ಯಥಾರ್ಥವಾಗಿ ಕಾಣುವರು. ರಜೋಗುಣದಲ್ಲಿ ಜನ ಪಶು ಸದೃಶರು, ಆದ್ದರಿಂದ

ವಿಷಯುಗಳನ್ನು ಸ್ಪಷ್ಟವಾಗಿ ಕಾಣಲಾರರು. ಉದಾಹರಣೆಗೆ—ತಮೋಗುಣದಲ್ಲಿ ಒಂದು ಪಶುವನ್ನು ಕೊಂದು ಮುಂದಿನ ಜನ್ಮದಲ್ಲಿ ತಾವು ಅದೇ ಪಶುವಿನಿಂದ ಕೊಲ್ಲಲ್ಪಡುವ ಅವಕಾಶವನ್ನು ಸೃಷ್ಟಿಸಿಕೊಳ್ಳುತ್ತಾರೆ, ಎಂಬುದನ್ನು ಅವರು ಗ್ರಹಿಸುವುದಿಲ್ಲ. ಜನರಿಗೆ ವಾಸ್ತವಿಕ ಜ್ಞಾನದಲ್ಲಿ ಶಿಕ್ಷಣವಿಲ್ಲದ್ದರಿಂದ ಅವರು ಹೊಣೆಗೇಡಿಗಳಾಗುತ್ತಾರೆ. ಈ ಹೊಣೆಗೇಡಿತನವನ್ನು ನಿಲ್ಲಿಸಲು, ಜನಸಾಮಾನ್ಯರ ಸತ್ತ್ವಗುಣಾಭಿವೃದ್ಧಿಗೆ ಶಿಕ್ಷಣವಿರಬೇಕು. ಅವರು ವಾಸ್ತವಿಕವಾಗಿ ಸತ್ತ್ವಗುಣದಲ್ಲಿ ಶಿಕ್ಷಣ ಪಡೆದಾಗ ಅವರು ವಿಷಯುಗಳ ಪೂರ್ಣ ಯಥಾರ್ಥ ಜ್ಞಾನದಿಂದ ಸಾತ್ವಿಕರಾಗುವರು. ಆಗ ಜನ ಸುಖಿಗಳು ಮತ್ತು ಸಮೃದ್ಧರಾಗುವರು. ಬಹು ಜನರು ಸುಖಿಗಳು ಮತ್ತು ಸಮೃದ್ಧರು ಆಗಿರದಿದ್ದರೂ ಕೂಡ ಕೆಲವೇ ಜನರಾದರೂ, ಕೃಷ್ಣಪ್ರಜ್ಞೆಯನ್ನು ಬೆಳೆಸಿಕೊಂಡು ಸತ್ತ್ವಗುಣ ಸನ್ನಿವೇಶಿತರಾದರೆ, ಆಗ ಜಗತ್ತಿನಲ್ಲೆಲ್ಲ ಶಾಂತಿ ಮತ್ತು ಸಮೃದ್ಧಿಯು ಸಂಭವ. ಇಲ್ಲದಿದ್ದರೆ, ಜಗತ್ತು ರಜೋಗುಣ ಮತ್ತು ತಮೋಗುಣಕ್ಕೆ ಅಂಟಿಕೊಂಡರೆ ಶಾಂತಿ ಅಥವಾ ಸಮೃದ್ಧಿ ಇರಲಾರದು. ರಾಜಸ ಗುಣದಲ್ಲಿ ಜನ ಲೋಭಿಗಳಾಗುತ್ತಾರೆ, ಮತ್ತು ಅವರ ಇಂದ್ರಿಯ ಭೋಗದ ತೃಷೆಯು ಮಿತಿಯರಿಯದು. ಒಬ್ಬನಿಗೆ ಸಾಕಷ್ಟು ಸಂಪತ್ತು ಮತ್ತು ಇಂದ್ರಿಯ ತೋಷಣದ ಏರ್ಪಾಡುಗಳಿದ್ದರೂ ಅವನಿಗೆ ಸುಖ ಅಥವಾ ಮಾನಸಿಕ ಶಾಂತಿ ಇಲ್ಲದಿರುವುದನ್ನು ಕಾಣಬಹುದು. ಅದು ಅಸಾಧ್ಯ, ಏಕೆಂದರೆ ಒಬ್ಬನು ರಜೋಗುಣದಲ್ಲಿ ಸನ್ನಿವೇಶಿತನು. ಒಬ್ಬನಿಗೆ ಸುಖ ಬೇಕಾಗಿದ್ದರೆ, ಅವನ ಹಣವು ಸಹಾಯ ಮಾಡದು; ಅವನು ಕೃಷ್ಣಪ್ರಜ್ಞಾಚರಣೆಯಿಂದ ತನ್ನನ್ನು ಸತ್ತ್ವಗುಣಕ್ಕೆ ಉನ್ನತಿಸಿಕೊಳ್ಳಬೇಕು. ಒಬ್ಬನು ರಜೋಗುಣದಲ್ಲಿ ತೊಡಗಿದಾಗ, ಅವನು ಮಾನಸಿಕವಾಗಿ ಅಸಂತುಷ್ಟನಷ್ಟೇ ಅಲ್ಲದೆ, ಅವನ ವೃತ್ತಿ ಉದ್ಯೋಗಗಳು ಕೂಡ ಬಹಳ ಕಷ್ಟದಾಯಕ. ಅವನು ತನ್ನ ಯಥಾಸ್ಥಿತಿಯನ್ನು ಕಾಪಾಡಿಕೊಳ್ಳಲು ಸಾಕಷ್ಟು ಹಣಗಳಿಸುವ ಅನೇಕ ಯೋಜನೆ ಮತ್ತು ಅನುಯೋಜನೆಗಳನ್ನು ರೂಪಿಸಿಕೊಳ್ಳಬೇಕಾಗುವುದು. ಇದೆಲ್ಲವೂ ಕ್ಲೇಶಕರ. ತಾಮಸ ಗುಣದಲ್ಲಿ ಜನರು ಉನ್ಮತ್ತರಾಗುತ್ತಾರೆ. ಸನ್ನಿವೇಶಗಳಿಂದ ಆರ್ತರಾಗಿ, ಸುರಾಪಾನಕ್ಕೆ ಶರಣು ಹೋಗುತ್ತಾರೆ, ಮತ್ತು ಅವರು ಮತ್ತಷ್ಟು ತಮೋಗುಣದಲ್ಲಿ ಮುಳುಗುತ್ತಾರೆ. ಅವರ ಭಾವೀ ಜೀವನವು ಬಹು ಅಂಧಕಾರ.

**ಊರ್ಧ್ವಂ ಗಚ್ಛನ್ತಿ ಸತ್ತ್ವಸ್ಥಾ ಮಧ್ಯೇ ತಿಷ್ಠನ್ತಿ ರಾಜಸಾಃ ।**
**ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛನ್ತಿ ತಾಮಸಾಃ ॥ ೧೮ ॥**

ಊರ್ಧ್ವಮ್—ಮೇಲಕ್ಕೆ, ಗಚ್ಛನ್ತಿ—ಹೋಗುತ್ತಾರೆ, ಸತ್ತ್ವ-ಸ್ಥಾಃ—ಸತ್ವಗುಣದಲ್ಲಿ ಸನ್ನಿವೇಶಿತರು, ಮಧ್ಯೇ—ಮಧ್ಯದಲ್ಲಿ, ತಿಷ್ಠನ್ತಿ—ಇರುತ್ತಾರೆ, ರಾಜಸಾಃ—ರಾಜಸ ಗುಣ ಸನ್ನಿವೇಶಿತರು, ಜಘನ್ಯ—ಕೀಳು, ಗುಣ—ಗುಣ, ವೃತ್ತಿ-ಸ್ಥಾಃ—ವೃತ್ತಿಯುವರು, ಅಧಃ—ಕೆಳಕ್ಕೆ, ಗಚ್ಛನ್ತಿ—ಹೋಗುತ್ತಾರೆ, ತಾಮಸಾಃ—ತಮೋಗುಣಿಗಳು.

**ಸತ್ತ್ವಗುಣ ಸನ್ನಿವೇಶಿತರು ಕ್ರಮೇಣ ಊರ್ಧ್ವ ಲೋಕಗಳಿಗೆ ಹೋಗುತ್ತಾರೆ. ರಜೋಗುಣಿಗಳು ಭೂಲೋಕಗಳಲ್ಲಿ ಇರುತ್ತಾರೆ; ಮತ್ತು ಕೀಳು ತಾಮಸ ಗುಣದಲ್ಲಿರುವವರು ನರಕ ಲೋಕಗಳಿಗೆ ಹೋಗುತ್ತಾರೆ.**

**ಭಾವಾರ್ಥ** : ಈ ಶ್ಲೋಕದಲ್ಲಿ ಪ್ರಕೃತಿಯ ತ್ರಿಗುಣಗಳ ಕಾರ್ಯ ಫಲಗಳು ಹೆಚ್ಚು ಸ್ಪಷ್ಟವಾಗಿ ನಿರೂಪಿತ. ಪ್ರತಿಯೊಬ್ಬನೂ ಬಹಳ ಉನ್ನತವಾಗಿ ಇರುವ ಸ್ವರ್ಗಲೋಕಗಳ ಊರ್ಧ್ವಗ್ರಹವ್ಯೂಹವಿದೆ. ಸತ್ತ್ವಗುಣಾಭಿವೃದ್ಧಿಯ ಮಟ್ಟವನ್ನನುಸರಿಸಿ, ಜೀವಿಯು ಈ ವ್ಯೂಹದಲ್ಲಿ ಅನೇಕ ಲೋಕಗಳಿಗೆ ವರ್ಗಾಯಿತವಾಗಬಹುದು. ಶ್ರೀ ಬ್ರಹ್ಮನು ವಾಸಿಸುವ ಬ್ರಹ್ಮಲೋಕ ಅಥವಾ ಸತ್ಯಲೋಕವು ಉತ್ಕೃಷ್ಟ ಲೋಕ. ಬ್ರಹ್ಮಲೋಕದ ಅದ್ಭುತ ಜೀವನ ಸ್ಥಿತಿಯನ್ನು ನಾವು ಕಿಂಚಿತ್ತಾದರೂ ಎಣಿಕೆ ಹಾಕುವುದು ಸಾಧ್ಯವಿಲ್ಲ ಎಂಬುದನ್ನು ಈಗಾಗಲೇ ಕಂಡಿದ್ದೇವೆ, ಆದರೆ ಸತ್ತ್ವಗುಣದ ಅತ್ಯುಚ್ಚ ಜೀವನ ಸ್ಥಿತಿಯು ನಮ್ಮನ್ನು ಈ ಲೋಕಕ್ಕೆ ಕೊಂಡೊಯ್ಯಬಹುದು.

ರಜೋಗುಣವು ಮಿಶ್ರಿತ. ಅದು ಸತ್ತ್ವ ಮತ್ತು ತಮೋಗುಣಗಳ ಮಧ್ಯವಿದೆ. ಒಬ್ಬನು ಸದಾ ಶುದ್ಧನಲ್ಲ. ಆದರೆ ಒಬ್ಬನು ಶುದ್ಧವಾಗಿ ರಜೋಗುಣದಲ್ಲಿದ್ದರೂ, ಅವನು ರಾಜನಾಗಿಯೋ ಅಥವಾ ಸಿರಿವಂತನಾಗಿಯೋ ಈ ಭೂಮಿಯಲ್ಲಿಯೇ ಇರುವನು. ಗುಣ ಮಿಶ್ರಣವಿರುವುದರಿಂದ, ಒಬ್ಬನು ಕೆಳಗೂ ಹೋಗಬಹುದು. ಈ ಭೂಮಿಯ ಮೇಲಿನ ಜನರು ರಜೋ ಅಥವಾ ತಮೋ ಗುಣಿಗಳಾಗಿದ್ದು, ಯಂತ್ರ ಸಹಾಯದಿಂದ ಒತ್ತಾಯಪೂರ್ವಕ ಊರ್ಧ್ವಲೋಕಗಳಿಗೆ ಹೋಗಲಾರರು. ರಜೋಗುಣದಲ್ಲಿ, ಮುಂದಿನ ಜನ್ಮದಲ್ಲಿ ಹುಚ್ಚನಾಗುವ ಸಂಭವವೂ ಉಂಟು.

ಅತ್ಯಂತ ಅಧಮ ಗುಣವಾದ ತಾಮಸವು ಇಲ್ಲಿ ಹೇಯವೆಂದು ವರ್ಣಿತ. ತಮೋಗುಣ ಅಭಿವೃದ್ಧಿ ಫಲವು ಬಹು ಬಹು ಅಪಾಯಕರ. ಅದು ಭೌತಿಕ ಪ್ರಕೃತಿಯಲ್ಲಿ ಅತ್ಯಧಮ ಗುಣ. ಮಾನವನ ಮಟ್ಟದಿಂದ ಕೆಳಗೆ—ಪಕ್ಷಿ, ಪಶು, ವಿಷಜಂತುಗಳು, ವೃಕ್ಷಗಳು ಇತ್ಯಾದಿ—ಎಂಟು ದಶಲಕ್ಷ ಜೀವಯೋನಿಗಳಿವೆ. ಮತ್ತು ತಮೋಗುಣ ಅಭಿವೃದ್ಧಿಗನುಸಾರವಾಗಿ ಜನರು ಈ ಹೇಯ ಸ್ಥಿತಿಗೆ ಇಳಿಯುತ್ತಾರೆ. **ತಾಮಸಾಃ** ಪದವು ಇಲ್ಲ ಬಹು ಮಹತ್ವದ್ದು. **ತಾಮಸಾಃ** ಎಂಬುದು ಮೇಲು ಗುಣಕ್ಕೆ ಏರದೆ ಸತತವಾಗಿ ತಮೋಗುಣದಲ್ಲಿಯೇ ಇರುವವರನ್ನು ಸೂಚಿಸುತ್ತದೆ. ಅವರ ಭವಿಷ್ಯವು ಬಹು ಕತ್ತಲುಮಯ.

ರಜೋಗುಣ ಮತ್ತು ತಮೋಗುಣದಲ್ಲಿ ಇರುವವರು ಸತ್ತ್ವಗುಣಕ್ಕೆ ಉನ್ನತಿಸಲು ಅವಕಾಶವಿದೆ ಮತ್ತು ಆ ವಿಧಾನವು ಕೃಷ್ಣಪ್ರಜ್ಞೆ ಎಂದು ಕರೆದಿದೆ. ಆದರೆ ಈ ಅವಕಾಶದ ಪ್ರಯೋಜನ ಪಡೆಯದವನು ಖಂಡಿತವಾಗಿ ಅಧಮ ಗುಣಗಳಲ್ಲಿ ಮುಂದುವರೆಯುತ್ತಾನೆ.

**ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾನುಪಶ್ಯತಿ ।**
**ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ ॥ ೧೯ ॥**

ನ—ಇಲ್ಲ, ಅನ್ಯಮ್—ಇತರ, ಗುಣೇಭ್ಯಃ—ಗುಣಗಳಿಗಿಂತ, **ಕರ್ತಾರಮ್**—**ಕರ್ತಾರನು**, **ಯದಾ**—ಯಾವಾಗ, ದ್ರಷ್ಟಾ—ದ್ರಷ್ಟಾರನು, **ಅನುಪಶ್ಯತಿ**—ಸರಿಯಾಗಿ **ಕಾಣುತ್ತಾನೆ**, **ಗುಣೇಭ್ಯಃ**—**ಪ್ರಕೃತಿ ಗುಣಗಳನ್ನು**, **ಚ**—**ಮತ್ತು**, **ಪರಮ್**—

ದಿವ್ಯವನ್ನು, ವೇತ್ತಿ—ತಿಳಿಯುತ್ತಾನೆ, ಮತ್-ಭಾವಮ್—ನನ್ನ ಆಧ್ಯಾತ್ಮ ಪ್ರಕೃತಿಗೆ ಸಃ—ಅವನು, ಅಧಿಗಚ್ಛತಿ—ಉನ್ನತಿಸುತ್ತಾನೆ.

**ಎಲ್ಲ ಚಟುವಟಿಕೆಗಳಲ್ಲಿ ಈ ಪ್ರಕೃತಿ ಗುಣಗಳಲ್ಲದೆ ಬೇರೊಬ್ಬ ಕರ್ತಾರನಿಲ್ಲ ಎಂಬುದನ್ನು ಸರಿಯಾಗಿ ಕಂಡಾಗ ಮತ್ತು ಈ ಎಲ್ಲ ಗುಣಗಳಿಗೆ ಅತೀತನಾದ ಪರಮಪ್ರಭುವನ್ನು ತಿಳಿದಾಗ, ಅವನು ನನ್ನ ಅಧ್ಯಾತ್ಮ ಪ್ರಕೃತಿಯನ್ನು ಹೊಂದುತ್ತಾನೆ.**

**ಭಾವಾರ್ಥ :** ಒಬ್ಬನು ಅವುಗಳನ್ನು ಯೋಗ್ಯರಿಂದ ಕಲಿತು ಸರಿಯಾಗಿ ಅರಿತು ಕೊಳ್ಳುವ ಮಾತ್ರದಿಂದ ಪ್ರಕೃತಿ ಗುಣಗಳ ಎಲ್ಲ ಚಟವಟಿಕೆಗಳನ್ನು ದಾಟಬಲ್ಲನು. ನಿಜ ಆಧ್ಯಾತ್ಮಿಕ ಒಡೆಯನು ಕೃಷ್ಣ ಮತ್ತು ಅವನು ಈ ಆಧ್ಯಾತ್ಮಿಕ ಜ್ಞಾನವನ್ನು ಅರ್ಜುನನಿಗೆ ಬೋಧಿಸುತ್ತಿದ್ದಾನೆ. ಅದೇ ಪ್ರಕಾರ ಪೂರ್ಣ ಕೃಷ್ಣಪ್ರಾಜ್ಞಗಳಿಂದ ಒಬ್ಬನು ಪ್ರಕೃತಿ ಗುಣಗಳ ವಿಷಯದಲ್ಲಿ ಈ ಕರ್ಮವಿಜ್ಞಾನವನ್ನು ಕಲಿತುಕೊಳ್ಳಬೇಕು. ಇಲ್ಲದಿದ್ದರೆ ಒಬ್ಬನ ಜೀವನವು ದಾರಿ ತಪ್ಪುತ್ತದೆ. ನಿಜ ಗುರುಗಳ ಉಪದೇಶದಿಂದ, ಜೀವಿಯು ಈ ಅಧ್ಯಾತ್ಮ ಸ್ಥಿತಿಯನ್ನು, ಈ ಭೌತಿಕ ದೇಹವನ್ನು, ತನ್ನ ಇಂದ್ರಿಯಗಳನ್ನು, ತಾನು ಹೇಗೆ ಬಲೆಗೆ ಬಿದ್ದಿದ್ದೇನೆ ಎಂಬುದನ್ನು, ಮತ್ತು ತಾನು ಹೇಗೆ ಭೌತಿಕ ಗುಣಗಳ ಪ್ರಭಾವದಲ್ಲಿ ಇದ್ದೇನೆ ಎಂಬುದನ್ನು ತಿಳಿದುಕೊಳ್ಳಬಹುದು. ಅವನು ಗುಣಗಳ ಹಿಡಿತದಲ್ಲಿದ್ದು ಅಸಹಾಯಕನು. ಆದರೆ ಅವನು ತನ್ನ ನಿಜ ಸ್ಥಿತಿಯನ್ನು ನೋಡಲಾದಾಗ, ಅಧ್ಯಾತ್ಮ ಜೀವನಕ್ಕೆ ಅವಕಾಶ ಹೊಂದಿ ದಿವ್ಯ ವೇದಿಕೆಯನ್ನು ಹೊಂದಬಹುದು. ವಾಸ್ತವಿಕವಾಗಿ ಜೀವಿಯು ಭಿನ್ನಭಿನ್ನ ಕರ್ಮಗಳ ಕರ್ತಾರನಲ್ಲ. ಅವನು ವಿಶಿಷ್ಟ ಮಾದರಿಯ ದೇಹದಲ್ಲಿ ವಿಶಿಷ್ಟ ಭೌತಿಕ ಪ್ರಕೃತಿಯ ಗುಣದಿಂದ ನಿರ್ದೇಶಿತನಾಗಿದ್ದು, ಹಾಗೆ ವರ್ತಿಸಲು ಒತ್ತಾಯಿಸಲ್ಪಡುತ್ತಾನೆ. ಒಬ್ಬನಿಗೆ ಅಧ್ಯಾತ್ಮ ಅಧಿಕಾರ ಬಲವಿದ್ದ ಹೊರತು, ಅವನು ವಾಸ್ತವಿಕವಾಗಿ ಯಾವ ಸ್ಥಿತಿಯಲ್ಲಿ ಸನ್ನಿವೇಶಿತನು ಎಂಬುದನ್ನು ಅರಿತುಕೊಳ್ಳಲಾರನು. ನಿಜಗುರುಗಳ ಸಂಗದಿಂದ ಅವನು ತನ್ನ ನಿಜ ಸ್ಥಿತಿಯನ್ನು ಕಾಣಬಲ್ಲನು, ಮತ್ತು ಅಂಥ ಅರಿವಿನಿಂದ ಅವನು ಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಸ್ಥಿತನಾಗಬಲ್ಲನು. ಕೃಷ್ಣಪ್ರಜ್ಞೆಯು ಭೌತಿಕ ಪ್ರಕೃತಿ ಗುಣಗಳ ಪ್ರಭಾವದಿಂದ ನಿಯಂತ್ರಿತನಲ್ಲ. ಕೃಷ್ಣನಿಗೆ ಶರಣಾಗತನಾದವನು ಭೌತಿಕ ಪ್ರಕೃತಿಯ ಚಟುವಟಿಕೆಗಳಿಂದ ಮುಕ್ತನೆಂದು ಈಗಾಗಲೇ ಏಳನೆಯ ಅಧ್ಯಾಯ ದಲ್ಲಿ ಹೇಳಲಾಗಿದೆ. ವಿಷಯಗಳನ್ನು ಯಥಾರ್ಥವಾಗಿ ಕಾಣಲು ಶಕ್ತನಾದವನಿಗೆ, ಭೌತಿಕ ಪ್ರಕೃತಿ ಪ್ರಭಾವವು ಕ್ರಮೇಣ ಕುಗ್ಗುತ್ತದೆ.

**ಗುಣಾನೇತಾನತೀತ್ಯ ತ್ರೀನ್ ದೇಹೀ ದೇಹಸಮುದ್ಭವಾನ್ ।**
**ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ** ॥೨೦॥

ಗುಣಾನ್—ಗುಣಗಳನ್ನು, ಏತಾನ್—ಈ ಎಲ್ಲ, ಅತೀತ್ಯ—ದಾಟಿ, ತ್ರೀನ್—ಮೂರು, ದೇಹೀ—ದೇಹಿಯು ದೇಹ—ದೇಹ, ಸಮುದ್ಭವಾನ್—ಉತ್ಪನ್ನವಾದ, ಜನ್ಮ—ಜನ್ಮದ, ಮೃತ್ಯು—ಮರಣ, ಜರಾ—ಮುಪ್ಪು, ದುಃಖೈ—ದುಃಖಗಳಿಂದ, ವಿಮುಕ್ತಃ—ಮುಕ್ತನಾಗಿ, ಅಮೃತಮ್—ಅಮೃತವನ್ನು, ಅಶ್ನುತೇ—ಭೋಗಿಸುತ್ತಾನೆ.

**ದೇಹಿಯು ಭೌತಿಕ ದೇಹ ಸಂಬಂಧ ತ್ರಿಗುಣಗಳನ್ನು ದಾಟಿದಾಗ ಅವನು ಜನನ ಮರಣ ಮತ್ತು ವೃದ್ಧಾಪ್ಯದ ದುಃಖಗಳಿಂದ ಮುಕ್ತನಾಗಬಲ್ಲನು ಮತ್ತು ಈ ಜನ್ಮದಲ್ಲಿಯೇ ಅಮೃತವನ್ನು ಭೋಗಿಸಬಲ್ಲನು.**

**ಭಾವಾರ್ಥ :** ಹೇಗೆ ಒಬ್ಬನು ಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಇದೇ ದೇಹದಲ್ಲಿಯೇ ದಿವ್ಯ ಸ್ಥಿತಿಯಲ್ಲಿ ಇರಬಲ್ಲನು ಎಂಬುದನ್ನು ಈ ಶ್ಲೋಕದಲ್ಲಿ ವಿವರಿಸಿದೆ. ಸಂಸ್ಕೃತ ಪದ **ದೇಹೀ** ಎಂದರೆ "ದೇಹಗತನು". ಒಬ್ಬನು ಈ ಭೌತಿಕ ದೇಹದಲ್ಲಿದ್ದರೂ, ತನ್ನ ಅಧ್ಯಾತ್ಮ ಜ್ಞಾನ ಸಾಧನೆಯಿಂದ ಅವನು ಪ್ರಕೃತಿ ಗುಣಗಳ ಪ್ರಭಾವ ಮುಕ್ತನಾಗಬಹುದು. ಅವನು ಈ ದೇಹದಲ್ಲಿಯೇ ಅಧ್ಯಾತ್ಮ ಜೀವನ ಸುಖವನ್ನು ಭೋಗಿಸಬಹುದು, ಏಕೆಂದರೆ ಈ ದೇಹ ಬಿಟ್ಟ ಬಳಿಕ ಖಂಡಿತ ಅವನು ಪರವ್ಯೋಮಕ್ಕೆ ಹೋಗುವನು. ಆದರೆ ಈ ದೇಹದಲ್ಲಿಯೂ ಅವನ ಅಧ್ಯಾತ್ಮ ಸುಖ ಭೋಗಿಸಬಹುದು. ಅರ್ಥಾತ್ ಕೃಷ್ಣಪ್ರಜ್ಞೆಯಲ್ಲಿ ಭಕ್ತಿಯುತ ಸೇವೆಯು ಭೌತಿಕ ಬಂಧನದಿಂದ ಮುಕ್ತಿಯ ಸಂಕೇತ, ಇದು ಹದಿನೆಂಟನೆಯ ಅಧ್ಯಾಯ ದಲ್ಲಿ ವಿವರಿಸಲ್ಪಡುವುದು. ಒಬ್ಬನು ಭೌತಿಕ ಪ್ರಕೃತಿ ಗುಣಗಳ ಪ್ರಭಾವದಿಂದ ಮುಕ್ತ ನಾದಾಗ ಭಕ್ತಿಯುತ ಸೇವೆಯಲ್ಲಿ ಪ್ರವೇಶಿಸುತ್ತಾನೆ.

**ಅರ್ಜುನ ಉವಾಚ**

**ಕೈರ್ ಲಿಂಗೈಸ್ತ್ರೀನ್ ಗುಣಾನೇತಾನತೀತೋ ಭವತಿ ಪ್ರಭೋ ।**
**ಕಿಮಾಚಾರಃ ಕಥಂ ಚೈತಾಂಸ್ತ್ರೀನ್ ಗುಣಾನತಿವರ್ತತೇ ॥ ೨೧ ॥**

ಅರ್ಜುನಃ ಉವಾಚ—ಅರ್ಜುನನು ನುಡಿದನು. ಕೈಃ—ಯಾವುದರಿಂದ, ಲಿಂಗೈಃ—ಸಂಕೇತಗಳು, ತ್ರೀನ್—ಮೂರು, ಗುಣಾನ್—ಗುಣಗಳನ್ನು, ಏತಾನ್—ಈ ಎಲ್ಲ, ಅತೀತಃ—ದಾಟಿ, ಭವತಿ—ಇರುತ್ತಾನೆ, ಪ್ರಭೋ—ಹೇ ನನ್ನ ಪ್ರಭುವೇ, ಕಿಮ್—ಏನು, ಆಚಾರಃ—ಆಚಾರ, ಕಥಮ್—ಹೇಗೆ, ಚ—ಕೂಡ, ಏತಾನ್—ಇವು, ತ್ರೀನ್—ಮೂರು, ಗುಣಾನ್—ಗುಣಗಳನ್ನು, ಅತಿವರ್ತತೇ—ದಾಟುತ್ತಾನೆ.

**ಅರ್ಜುನನು ಕೇಳಿದನು : ಹೇ ನನ್ನ ಪ್ರಿಯ ಪ್ರಭುವೇ, ಈ ಮೂರು ಗುಣಗಳಿಗೆ ಅತೀತನಾದವನು ಯಾವ ಸಂಕೇತಗಳಿಂದ ತಿಳಿಯಲ್ಪಡುತ್ತಾನೆ ? ಅವನ ನಡತೆ ಏನು ? ಮತ್ತು ಅವನು ಪ್ರಕೃತಿ ಗುಣಗಳನ್ನು ಹೇಗೆ ದಾಟುತ್ತಾನೆ ?**

**ಭಾವಾರ್ಥ :** ಈ ಶ್ಲೋಕದಲ್ಲಿ ಅರ್ಜುನನ ಪ್ರಶ್ನೆಗಳು ಬಹು ಸಮರ್ಪಕ. ಆಗಲೇ ಭೌತಿಕ ಗುಣಗಳನ್ನು ದಾಟಿದ ವ್ಯಕ್ತಿಯ ಸಂಕೇತಗಳನ್ನು ಅವನು ತಿಳಿಯಬಯಸುತ್ತಾನೆ. ಅಂಥ ದಿವ್ಯ ವ್ಯಕ್ತಿಯ ಸಂಕೇತಗಳನ್ನು ಕುರಿತು ಮೊದಲು ಪ್ರಶ್ನಿಸುತ್ತಾನೆ. ಅವನು ಆಗಲೇ ಭೌತಿಕ ಪ್ರಕೃತಿ ಗುಣಗಳ ಪ್ರಭಾವವನ್ನು ದಾಟಿದ್ದಾನೆಂದು ಒಬ್ಬನು ಅರಿತು ಕೊಳ್ಳುವುದು ಹೇಗೆ? ಅವನು ಹೇಗೆ ಜೀವಿಸುತ್ತಾನೆ, ಮತ್ತು ಅವನ ಚಟುವಟಿಕೆಗಳೇನು? ಅವು ನಿಯಂತ್ರಿತವೋ, ಅಥವಾ ಅನಿಯಂತ್ರಿತವೋ ಎಂದು ಎರಡನೆಯ ಪ್ರಶ್ನೆ ಕೇಳುತ್ತಾನೆ. ಆಮೇಲೆ, ಯಾವ ಮಾರ್ಗದಿಂದ ಅವನು ದಿವ್ಯ ಪ್ರಕೃತಿಯನ್ನು ಹೊಂದಿ

ವನು ಎಂದು ಅರ್ಜುನನು ಪ್ರಶ್ನಿಸುತ್ತಾನೆ. ಅದು ಬಹು ಮಹತ್ವದ್ದು. ಒಬ್ಬನು ಸದಾ ದಿವ್ಯ ಸ್ಥಿತಿಯಲ್ಲಿರುವ ನೇರ ಮಾರ್ಗಗಳನ್ನು ತಿಳಿದ ಹೊರತು ಸಂಕೇತ ಲಕ್ಷಣಗಳನ್ನು ತೋರಿಸುವ ಸಾಧ್ಯತೆ ಇಲ್ಲ. ಆದ್ದರಿಂದ ಅರ್ಜುನನು ಮುಂದಿಟ್ಟ ಈ ಎಲ್ಲ ಪ್ರಶ್ನೆಗಳು ಬಹು ಮುಖ್ಯವಾದವು ಮತ್ತು ಅವುಗಳಿಗೆ ಭಗವಂತನು ಉತ್ತರಿಸುತ್ತಾನೆ.

**ಶ್ರೀಭಗವಾನುವಾಚ**

**ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಣ್ಡವ ।**
**ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಙ್ಕ್ಷತಿ ॥ ೨೨ ॥**
**ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ ।**
**ಗುಣಾ ವರ್ತನ್ತ ಇತ್ಯೇವಂ ಯೋऽವತಿಷ್ಠತಿ ನೇಙ್ಗತೇ ॥ ೨೩ ॥**
**ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಂಚನಃ ।**
**ತುಲ್ಯಪ್ರಿಯಾಪ್ರಿಯೋ ಧೀರಸ್ತುಲ್ಯನಿಂದಾತ್ಮಸಂಸ್ತುತಿಃ ॥ ೨೪ ॥**
**ಮಾನಾಪಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ ।**
**ಸರ್ವಾರಮ್ಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ ॥ ೨೫ ॥**

ಶ್ರೀಭಗವಾನ್ ಉವಾಚ—ಪರಮ ದೇವೋತ್ತಮ ಪುರುಷನು ನುಡಿದನು, ಪ್ರಕಾಶಮ್—ಪ್ರಕಾಶ, ಚ—ಮತ್ತು, ಪ್ರವೃತ್ತಿಮ್—ಆಸಕ್ತಿ, ಚ—ಮತ್ತು, ಮೋಹಮ್—ಮೋಹ, ಏವ-ಚ—ಕೂಡ, ಪಾಣ್ಡವ—ಹೇ ಪಾಂಡುಪುತ್ರನೇ, ನ ದ್ವೇಷ್ಟಿ—ದ್ವೇಷಿಸುವುದಿಲ್ಲ, ಸಂಪ್ರವೃತ್ತಾನಿ—ಉಂಟಾದರೂ ಕೂಡ,, ನ ನಿವೃತ್ತಾನಿ—ಅಥವಾ ಬೆಳವಣಿಗೆಯನ್ನು ತಡೆಯುವುದನ್ನು, ಕಾಙ್ಕ್ಷತಿ—ಬಯಸುವುದಿಲ್ಲ, ಉದಾಸೀನವತ್—ಉದಾಸೀನನಂತೆ, ಆಸೀನಃ—ಸನ್ನಿವೇಶಿತನು, ಗುಣೈಃ—ಗುಣಗಳಿಂದ, ಯಃ—ಯಾರೊಬ್ಬನು, ನ—ಎಂದಿಗೂ ಇಲ್ಲ, ವಿಚಾಲ್ಯತೇ—ವಿಚಲಿತನಾಗುವುದಿಲ್ಲ, ಗುಣಾಃ—ಗುಣಗಳು, ವರ್ತನ್ತೇ—ವರ್ತಿಸುತ್ತವೆ, ಇತಿ ಏವಮ್—ಹೀಗೆ ತಿಳಿದು, ಯಃ—ಯಾರೊಬ್ಬನು, ಅವತಿಷ್ಠತಿ—ಇರುತ್ತಾನೆ, ನ—ಎಂದೂ ಇಲ್ಲ, ಇಂಗತೇ—ಅಲುಗಾಡುವುದು, ಸಮ—ಸಮ, ದುಃಖ—ದುಃಖದಲ್ಲಿ, ಸುಖಃ—ಸುಖದಲ್ಲಿ, ಸ್ವ-ಸ್ಥಃ—ತನ್ನಲ್ಲಿಯೇ ಸನ್ನಿವೇಶಿತನಾಗಿ, ಸಮ—ಸಮವಾಗಿ, ಲೋಷ್ಟ—ಮಣ್ಣು ಹೆಂಟೆ, ಅಶ್ಮ—ಕಲ್ಲು, ಕಾಂಚನಃ—ಬಂಗಾರ, ತುಲ್ಯ—ಬಗ್ಗೆ ಸಮಾನವರ್ತಿ, ಪ್ರಿಯ—ಪ್ರಿಯರಿಗೆ, ಅಪ್ರಿಯಃ—ಮತ್ತು ಅಪ್ರಿಯರಿಗೆ, ಧೀರಃ—ಸ್ಥಿರನು, ತುಲ್ಯ—ಸಮನು, ನಿಂದಾ—ನಿಂದೆಯಲ್ಲಿ, ಆತ್ಮ-ಸಂಸ್ತುತಿಃ—ತನ್ನ ಸ್ತುತಿಯಲ್ಲಿ, ಮಾನ—ಮಾನದಲ್ಲಿ, ಅಪಮಾನಯೋಃ—ಮತ್ತು ಅಪಮಾನದಲ್ಲಿ, ತುಲ್ಯಃ—ಸಮನು, ತುಲ್ಯಃ—ಸಮನು, ಮಿತ್ರ—ಮಿತ್ರ, ಅರಿ—ಮತ್ತು ವೈರಿಗಳಿಗೆ, ಪಕ್ಷಯೋಃ—ಪಕ್ಷಗಳಿಗೆ, ಸರ್ವ—ಎಲ್ಲ, ಆರಮ್ಭ—ಪ್ರಯತ್ನಗಳು, ಪರಿತ್ಯಾಗೀ—ಪರಿತ್ಯಾಗಿ, ಗುಣ-ಅತೀತಃ—ಭೌತಿಕ ಪ್ರಕೃತಿ ಗುಣಗಳಿಗೆ ಅತೀತನು, ಸಃ—ಅವನು, ಉಚ್ಯತೇ—ಎಂದು ಹೇಳುತ್ತಾನೆ.

**ಪರಮ ದೇವೋತ್ತಮ ಪುರುಷನು ನುಡಿದನು : ಹೇ ಪಾಂಡುಪುತ್ರನೇ, ಪ್ರಕಾಶವನ್ನು, ಮೋಹವನ್ನು ಮತ್ತು ಭ್ರಮೆಯನ್ನು ಅವು ಉಂಟಾದಾಗ, ದ್ವೇಷಿಸ**

**ದವನು ಅಥವಾ ಅವು ಇಲ್ಲದಾಗ ಬಯಸುವವನು, ಗುಣಗಳೇ ಕ್ರಿಯೆ ಮಾಡುತ್ತಿವೆ ಎಂದು ತಿಳಿದು, ಉದಾಸೀನನಾಗಿ ಮತ್ತು ದಿವ್ಯನಾಗಿ ಈ ಎಲ್ಲ ಭೌತಿಕ ಗುಣಗಳ ಪ್ರತಿಕ್ರಿಯೆಗಳಿಂದ ವಿಚಲಿತನಾಗದವನು ಮತ್ತು ಅನುದ್ವಿಗ್ನನು ಆತ್ಮಸ್ಥಿತನಾಗಿ ಸುಖದುಃಖಗಳನ್ನು ಸಮಾನವಾಗಿ ಕಾಣುವವನು, ಮಣ್ಣುಹೆಂಟೆ ಇರಲಿ, ಕಲ್ಲೇ ಇರಲಿ ಅಥವಾ ಬಂಗಾರದ ತುಂಡು ಇರಲಿ ಅದನ್ನು ಸಮಾನವಾಗಿ ಕಾಣುವವನು, ಪ್ರಿಯ ಮತ್ತು ಅಪ್ರಿಯರ ಬಗ್ಗೆ ಸಮಾನನು, ಸ್ಥಿರನು, ನಿಂದೆ ಮತ್ತು ಸ್ತುತಿ, ಮಾನಾಪಮಾನಗಳಲ್ಲಿ ಸಮ ಸನ್ನಿವೇಶಿತನು, ಮಿತ್ರ ಮತ್ತು ವೈರಿಯನ್ನು ಸಮಾನ ರಾಗಿ ನೋಡುವವನು ಮತ್ತು ಎಲ್ಲ ಭೌತಿಕ ಚಟುವಟಿಕೆಗಳನ್ನು ಪರಿತ್ಯಜಿಸಿದವನು— ಅಂತಹ ವ್ಯಕ್ತಿಯು ಪ್ರಕೃತಿ ಗುಣಗಳನ್ನು ದಾಟಿದ್ದಾನೆಂದು ಹೇಳಲಾಗಿದೆ.**

**ಭಾವಾರ್ಥ :** ಅರ್ಜುನನು ಮೂರು ಭಿನ್ನಭಿನ್ನ ಪ್ರಶ್ನೆಗಳನ್ನು ಮುಂದಿಟ್ಟನು ಮತ್ತು ಭಗವಂತನು ಒಂದರ ಅನಂತರ ಒಂದನ್ನು ಉತ್ತರಿಸಿದನು. ದಿವ್ಯ ಸ್ಥಿತನಾದವನು ಯಾವುದನ್ನೂ ದ್ವೇಷಿಸುವುದಿಲ್ಲ ಮತ್ತು ಯಾವುದನ್ನೂ ಆಕಾಂಕ್ಷಿಸುವುದಿಲ್ಲ ಎಂದು ಕೃಷ್ಣನು ಈ ಶ್ಲೋಕದಲ್ಲಿ ಮೊದಲು ಸೂಚಿಸುತ್ತಾನೆ. ಜೀವಿಯು ಈ ಭೌತಿಕ ದೇಹಗತ ಈ ಭೌತಿಕ ಜಗತ್ತಿನಲ್ಲಿದ್ದಾಗ, ಅವನು ಈ ಮೂರು ಪ್ರಕೃತಿ ಗುಣಗಳಲ್ಲಿ ಒಂದರ ನಿಯಂತ್ರಣದಲ್ಲಿ ಇದ್ದಾನೆಂದು ಅರಿತಿರಬೇಕು. ಒಬ್ಬನು ವಾಸ್ತವಿಕವಾಗಿ ದೇಹದಿಂದ ಹೊರಗಿರುವಾಗ, ಅವನು ಭೌತಿಕ ಪ್ರಕೃತಿ ಗುಣಗಳ ಪಾಶಗಳ ಹೊರಗಿರುವನು. ಅವನು ಭೌತಿಕ ದೇಹದಿಂದ ಹೊರಗೆ ಇಲ್ಲದವರೆಗೆ, ಅವನು ತಟಸ್ಥನಾಗಿರಬೇಕು. ಭೌತಿಕ ದೇಹ ದೊಂದಿಗೆ ಅವನ ಗುರುತಿಸಿಕೊಳ್ಳುವಿಕೆಯು ತಾನಾಗಿಯೇ ಮರೆತು ಹೋಗಲು ಅವನು ತನ್ನನ್ನು ಭಗವಂತನ ಭಕ್ತಿಯುತ ಸೇವೆಯಲ್ಲಿ ತೊಡಗಿಸಿಕೊಳ್ಳಬೇಕು. ಒಬ್ಬನು ಭೌತಿಕ ದೇಹಪ್ರಜ್ಞೆಯಲ್ಲಿರುವಾಗ ಇಂದ್ರಿಯತೋಷಣಕ್ಕಾಗಿ ಮಾತ್ರವೇ ಅವನು ಕರ್ಮ ಮಾಡು ತ್ತಾನೆ, ಆದರೆ ಒಬ್ಬನು ಪ್ರಜ್ಞೆಯನ್ನು ಕೃಷ್ಣನ ಕಡೆಗೆ ವರ್ಗಾಯಿಸಿದಾಗ, ಇಂದ್ರಿಯ ತೋಷಣವು ತಾನಾಗಿಯೇ ನಿಂತು ಹೋಗುತ್ತದೆ. ಒಬ್ಬನಿಗೆ ಈ ಭೌತಿಕ ದೇಹದ ಅಗತ್ಯ ವಿಲ್ಲ ಮತ್ತು ಅವನು ಭೌತಿಕ ದೇಹದ ಆದೇಶಗಳನ್ನು ಅಂಗೀಕರಿಸಬೇಕಾಗಿಲ್ಲ. ದೇಹಗತ ಭೌತಿಕ ಗುಣಗಳು ಕಾರ್ಯ ಮಾಡುತ್ತವೆ. ಆದರೆ ಚೇತನಾತ್ಮನಾಗಿ ಆತ್ಮವು ಈ ಚಟುವಟಿಕೆ ಗಳಿಂದ ವಿದೂರ. ಅವನು ಹೇಗೆ ವಿದೂರನಾಗುತ್ತಾನೆ? ಅವನು ದೇಹ ಭೋಗ ಬಯಸು ವುದಿಲ್ಲ, ಅಥವಾ ಅದರಿಂದ ಹೊರ ಹೋಗ ಬಯಸುವುದಿಲ್ಲ. ಹೀಗೆ ದಿವ್ಯ ಸ್ಥಿತನಾಗಿ, ಭಕ್ತನು ತಾನಾಗಿಯೇ ಮುಕ್ತನಾಗುತ್ತಾನೆ. ಅವನು ಭೌತಿಕ ಪ್ರಕೃತಿ ಗುಣಪ್ರಭಾವ ದಿಂದ ಮುಕ್ತನಾಗಲು ಯತ್ನಿಸಬೇಕಾಗಿಲ್ಲ.

ಮುಂದಿನ ಪ್ರಶ್ನೆಯು ದಿವ್ಯ ಸನ್ನಿವೇಶಿತನ ನಡತೆಗಳನ್ನು ಕುರಿತದ್ದು. ಭೌತಿಕವಾಗಿ ಸನ್ನಿವೇಶಿತನು ದೇಹಕ್ಕಾದ ಮಾನಾಪಮಾನಗಳಿಂದ ಪ್ರಭಾವಿತನು, ಆದರೆ ದಿವ್ಯ ಸನ್ನಿ ವೇಶಿತನು ಅಂಥ ಮಿಥ್ಯಾ ಮಾನಾಪಮಾನಗಳಿಂದ ಪ್ರಭಾವಿತನಲ್ಲ. ಅವನು ಕೃಷ್ಣಪ್ರಜ್ಞೆ ಯಲ್ಲಿ ತನ್ನ ಕರ್ತವ್ಯ ಮಾಡುತ್ತಾನೆ. ಒಬ್ಬನು ತನ್ನನ್ನು ಗೌರವಿಸುವುದು ಅಥವಾ ಗೌರವಿಸದಿರುವುದನ್ನು ಗಮನಿಸುವುದಿಲ್ಲ. ಕೃಷ್ಣಪ್ರಜ್ಞೆಯಲ್ಲಿ ತನ್ನ ಕರ್ತವ್ಯಕ್ಕೆ ಅನು

ಕೂಲವಾದುದನ್ನು ಅಂಗೀಕರಿಸುತ್ತಾನೆ. ಅನ್ಯಥಾ ಅವನಿಗೆ ಕಲ್ಲಾಗಲಿ ಅಥವಾ ಬಂಗಾರ ವಾಗಲಿ ಯಾವ ಭೌತಿಕ ವಸ್ತುವೂ ಅಗತ್ಯವಿಲ್ಲ. ಈ ಕೃಷ್ಣಪ್ರಜ್ಞಾಚರಣೆಯಲ್ಲಿ ತನಗೆ ಸಹಾಯ ಮಾಡುವ ಪ್ರತಿಯೊಬ್ಬನನ್ನೂ ಪ್ರಿಯಮಿತ್ರನನ್ನಾಗಿ ತಿಳಿಯುತ್ತಾನೆ, ಮತ್ತು ಹಾಗೆಂಬ ವೈರಿಯನ್ನು ಅವನು ದ್ವೇಷಿಸುವುದಿಲ್ಲ. ಅವನು ಸಮವರ್ತಿ ಮತ್ತು ಪ್ರತಿಯೊಂದನ್ನೂ ಸಮವಾಗಿ ಕಾಣುತ್ತಾನೆ, ಏಕೆಂದರೆ ತಾನು ಭೌತಿಕ ಅಸ್ತಿತ್ವದೊಂದಿಗೆ ಮಾಡಬೇಕಾದುದೇನೂ ಇಲ್ಲ ಎಂಬುದನ್ನು ಪರಿಪೂರ್ಣವಾಗಿ ತಿಳಿದಿದ್ದಾನೆ. ಸಾಮಾಜಿಕ ಮತ್ತು ರಾಜಕೀಯ ವಿಷಯಗಳು ಅವನನ್ನು ಬಾಧಿಸುವುದಿಲ್ಲ. ಏಕೆಂದರೆ ಅವನು ಅನಿತ್ಯ ಏರುಪೇರುಗಳನ್ನು ಮತ್ತು ಕ್ಷೋಭೆಗಳನ್ನು ಅರಿತಿದ್ದಾನೆ. ತನಗಾಗಿ ಯಾವ ಪ್ರಯತ್ನವನ್ನೂ ಮಾಡುವುದಿಲ್ಲ. ಕೃಷ್ಣನಿಗಾಗಿ ಯಾವ ಪ್ರಯತ್ನವನ್ನಾದರೂ ಮಾಡುತ್ತಾನೆ, ಆದರೆ ತನಗಾಗಿ ಮಾತ್ರ ಏನನ್ನೂ ಮಾಡುವುದಿಲ್ಲ. ಅಂಥ ವರ್ತನೆಯಿಂದ ಒಬ್ಬನು ಸಮಾನವಾಗಿ ಮತ್ತು ದಿವ್ಯವಾಗಿ ಸನ್ನಿವೇಶಿತನು.

**ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।**
**ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ ॥ ೨೬ ॥**

ಮಾಮ್—ನನಗೆ, ಚ—ಕೂಡ, ಯಃ—ಯಾವ ವ್ಯಕ್ತಿಯು ಅವ್ಯಭಿಚಾರೇಣ—ತಪ್ಪದೆ, ಭಕ್ತಿ-ಯೋಗೇನ—ಭಕ್ತಿ ಸೇವೆಯಿಂದ, ಸೇವತೇ—ಸೇವೆ ಸಲ್ಲಿಸುತ್ತಾನೆ, ಸಃ—ಅವನು, ಗುಣಾನ್—ಭೌತಿಕ ಪ್ರಕೃತಿ ಗುಣಗಳನ್ನು, ಸಮತೀತ್ಯ—ದಾಟಿ, ಏತಾನ್—ಈ ಎಲ್ಲ, ಬ್ರಹ್ಮ-ಭೂಯಾಯ—ಬ್ರಹ್ಮನ್‌ವೇದಿಕೆಗೆ, ಕಲ್ಪತೇ—ಏರುತ್ತಾನೆ.

**ಯಾವ ಸಂದರ್ಭಗಳಲ್ಲಿಯೂ ವಿಫಲನಾಗದೆ ಪೂರ್ಣ ಭಕ್ತಿಯುತ ಸೇವೆಯಲ್ಲಿ ನಿರತನಾಗುವವನು, ಕೂಡಲೇ ಭೌತಿಕ ಪ್ರಕೃತಿ ಗುಣಗಳನ್ನು ದಾಟುತ್ತಾನೆ ಮತ್ತು ಬ್ರಹ್ಮನ್‌ಮಟ್ಟಕ್ಕೆ ಬರುತ್ತಾನೆ.**

**ಭಾವಾರ್ಥ :** ಈ ಶ್ಲೋಕವು ಅರ್ಜುನನ ಮೂರನೆಯ ಪ್ರಶ್ನೆಗೆ ಉತ್ತರ ; ದಿವ್ಯ ಸ್ಥಿತಿ ಹೊಂದಲು ಮಾರ್ಗ ಯಾವುದು ? ಮುಂಚೆ ವಿವರಿಸಿದಂತೆ, ಭೌತಿಕ ಜಗತ್ತು ಭೌತಿಕ ಪ್ರಕೃತಿ ಗುಣಗಳ ಪ್ರಭಾವದಲ್ಲಿ ಕಾರ್ಯಮಾಡುತ್ತದೆ. ಒಬ್ಬನು ಪ್ರಕೃತಿ ಗುಣ ಕಾರ್ಯಗಳಿಂದ ಉದ್ವಿಗ್ನನಾಗಕೂಡದು ; ತನ್ನ ಪ್ರಜ್ಞೆಯನ್ನು ಅಂತಹ ಚಟುವಟಿಕೆಗಳಲ್ಲಿ ಹಾಕುವ ಬದಲು ತನ್ನ ಪ್ರಜ್ಞೆಯನ್ನು ಕೃಷ್ಣ ಕಾರ್ಯಗಳಲ್ಲಿ ವರ್ಗಾಯಿಸಬಹುದು. ಕೃಷ್ಣ ಚಟುವಟಿಕೆಗಳು ಭಕ್ತಿಯೋಗ-ಸದಾ ಕೃಷ್ಣನಿಗಾಗಿ ಕಾರ್ಯಮಾಡುವುದು ಎಂದು ಕರೆದಿದೆ. ಇದು ಕೃಷ್ಣನನ್ನು ಅಷ್ಟೇ ಅಲ್ಲ, ರಾಮ ನಾರಾಯಣರಂಥ ಅವನ ಭಿನ್ನಭಿನ್ನ ಸಮಗ್ರ ವಿಸ್ತರಣೆಗಳನ್ನು ಒಳಗೊಂಡಿದೆ. ಅವನು ಅಸಂಖ್ಯ ವಿಸ್ತರಣೆಗಳನ್ನು ಹೊಂದಿದ್ದಾನೆ. ಕೃಷ್ಣನ ಯಾವುದೇ ರೂಪಗಳಲ್ಲಿ ಅಥವಾ ಅವನ ಸಮಗ್ರ ವಿಸ್ತರಣೆಗಳಲ್ಲಿ ಯಾವುದೊಂದರಲ್ಲಿ ನಿರತನಾದವನು, ದಿವ್ಯ ಸನ್ನಿವೇಶಿತನೆಂದು ತಿಳಿದಿದೆ. ಕೃಷ್ಣನ ಎಲ್ಲ ರೂಪಗಳು ಪೂರ್ಣವಾಗಿ ದಿವ್ಯ, ಆನಂದಮಯ, ಜ್ಞಾನಪೂರ್ಣ ಮತ್ತು ನಿತ್ಯವಾದವುಗಳು ಎಂಬುದನ್ನೂ ಗಮನಿಸಬೇಕು. ದೇವೋತ್ತಮನ ಅಂಥ ವ್ಯಕ್ತಿತ್ವಗಳು ಸರ್ವಶಕ್ತ ಮತ್ತು ಸರ್ವಜ್ಞ, ಮತ್ತು ಅವು ಸಕಲ ದಿವ್ಯ ಗುಣೋಪೇತ. ಆದ್ದರಿಂದ ಒಬ್ಬನು ಕೃಷ್ಣನ

ಅಥವಾ ಅವನ ಸಮಗ್ರ ವಿಸ್ತರಣೆಗಳ ಸೇವೆಯಲ್ಲಿ ತಪ್ಪದೆ ತೊಡಗಿದರೆ, ಭೌತಿಕ ಪ್ರಕೃತಿ ಗುಣಗಳನ್ನು ದಾಟುವುದು ಕಷ್ಟಸಾಧ್ಯವಾಗಿದ್ದರೂ ಅವನು ಸುಲಭವಾಗಿ ಅವುಗಳನ್ನು ದಾಟುತ್ತಾನೆ. ಇದು ಈಗಾಗಲೇ ಏಳನೆಯ ಅಧ್ಯಾಯದಲ್ಲಿ ವಿವರಿಸಿದೆ. ಕೃಷ್ಣನಿಗೆ ಶರಣಾಗತನಾದವನು ತಕ್ಷಣ ಭೌತಿಕ ಪ್ರಕೃತಿ ಗುಣ ಪ್ರಭಾವವನ್ನು ಕ್ರಮಿಸುತ್ತಾನೆ. ಕೃಷ್ಣಪ್ರಜ್ಞೆಯಲ್ಲಿರುವುದು ಅಥವಾ ಭಕ್ತಿಯುತ ಸೇವೆಯಲ್ಲಿ ಇರುವುದೆಂದರೆ ಕೃಷ್ಣ ಸಮತ್ವವನ್ನು ಹೊಂದುವುದು. ತನ್ನ ಸ್ವಭಾವವು ನಿತ್ಯ, ಆನಂದಮಯ ಮತ್ತು ಜ್ಞಾನಪೂರ್ಣ, ಮತ್ತು ಚಿನ್ನದ ಕಣಗಳು, ಚಿನ್ನದ ಗಣಿಯ ಭಾಗವಾಗಿರುವಂತೆ ಜೀವಿಗಳು ಪರಮನ ವಿಭಿನ್ನಾಂಶರು ಎಂದು ಭಗವಂತನು ಹೇಳುತ್ತಾನೆ. ಹೀಗೆ ಜೀವಿಯು ಅವನ ಅಧ್ಯಾತ್ಮ ಸ್ಥಿತಿಯಲ್ಲಿ ಬಂಗಾರವಿದ್ದಂತೆ, ಗುಣದಲ್ಲಿ ಕೃಷ್ಣನಿದ್ದಂತೆ, ವ್ಯಕ್ತಿತ್ವ ವ್ಯತ್ಯಾಸವು ಮಾತ್ರ ಮುಂದುವರಿಯುತ್ತದೆ, ಇಲ್ಲದಿದ್ದರೆ ಭಕ್ತಿಯೋಗದ ಪ್ರಶ್ನೆಯೇ ಇರುವುದಿಲ್ಲ. ಭಕ್ತಿ-ಯೋಗ ಎಂದರೆ ಭಗವಂತನಿದ್ದಾನೆ, ಭಕ್ತನಿದ್ದಾನೆ ಮತ್ತು ಭಗವಂತ ಮತ್ತು ಭಕ್ತರ ನಡುವೆ ಪ್ರೀತಿ ವಿನಿಮಯದ ಚಟುವಟಿಕೆ ಇದೆ ಎಂದು ಅರ್ಥ. ಆದ್ದರಿಂದ ಎರಡು ವ್ಯಕ್ತಿಗಳ ವ್ಯಕ್ತಿತ್ವವು ಪರಮದೇವೋತ್ತಮ ಪುರುಷನಲ್ಲಿ ಮತ್ತು ವ್ಯಕ್ತಿಗತ ಜೀವನದಲ್ಲಿ ಇದೆ. ಹಾಗಿಲ್ಲದಿದ್ದರೆ ಭಕ್ತಿಯೋಗ ಎಂಬುದಕ್ಕೆ ಅರ್ಥವೇ ಇಲ್ಲ. ಒಬ್ಬನು ಭಗವಂತನೊಂದಿಗೆ ಅದೇ ದಿವ್ಯ ಮಟ್ಟದಲ್ಲಿ ಸನ್ನಿವೇಶಿತನಾಗದಿದ್ದರೆ, ಒಬ್ಬನು ಪರಮಪ್ರಭುವಿನ ಸೇವೆ ಮಾಡಲಾರನು. ರಾಜನ ಆಪ್ತ ಸಹಾಯಕನಾಗಬೇಕಾದರೆ, ಒಬ್ಬನು ಅರ್ಹತೆಗಳನ್ನು ಗಳಿಸಿಕೊಳ್ಳಬೇಕು. ಆದ್ದರಿಂದ ಅರ್ಹತೆ ಎಂದರೆ ಬ್ರಹ್ಮನ್ ಆಗುವುದು, ಅಥವಾ ಎಲ್ಲ ಭೌತಿಕ ಕಲ್ಮಷ ಮುಕ್ತನಾಗುವುದು. **ಬ್ರಹ್ಮೈವಸನ್ ಬ್ರಹ್ಮಾಪಿ ಏತಿ** ಎಂದು ವೇದ ಸಾಹಿತ್ಯದಲ್ಲಿ ಹೇಳಿದೆ. ಒಬ್ಬನು ಬ್ರಹ್ಮನ್ ಆಗಿ ಪರಬ್ರಹ್ಮನನ್ನು ಹೊಂದಬಹುದು. ಹೀಗೆಂದರೆ ಒಬ್ಬನು ಬ್ರಹ್ಮನ್‌ನೊಂದಿಗೆ ಗುಣಾತ್ಮಕವಾಗಿ ಏಕೀಭೂತನಾಗಬೇಕೆಂದು ಅರ್ಥ. ಬ್ರಹ್ಮನ್‌ನನ್ನು ಹೊಂದಿ, ಒಬ್ಬನು ವೈಯಕ್ತಿಕ ಆತ್ಮನಾಗಿ ತನ್ನ ನಿತ್ಯ ಬ್ರಹ್ಮನ್ ವ್ಯಕ್ತಿತ್ವವನ್ನು ಕಳೆದುಕೊಳ್ಳುವುದಿಲ್ಲ.

**ಬ್ರಹ್ಮಣೋ ಹಿ ಪ್ರತಿಷ್ಠಾಹಮಮೃತಸ್ಯಾವ್ಯಯಸ್ಯ ಚ**
**ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾನ್ತಿಕಸ್ಯ ಚ ॥ ೨೭ ॥**

ಬ್ರಹ್ಮಣಃ—ವ್ಯಕ್ತಿಶೂನ್ಯ ಬ್ರಹ್ಮಜ್ಯೋತಿಯ, ಹಿ—ಖಂಡಿತವಾಗಿ, ಪ್ರತಿಷ್ಠಾ—ಆಶ್ರಯ, ಅಹಮ್—ನಾನು, ಅಮೃತಸ್ಯ—ಅಮೃತತ್ವದ, ಅವ್ಯಯಸ್ಯ—ಅವ್ಯಯದ, ಚ—ಕೂಡ, ಶಾಶ್ವತಸ್ಯ—ಶಾಶ್ವತದ, ಚ—ಮತ್ತು, ಧರ್ಮಸ್ಯ—ಸ್ವರೂಪಸ್ಥಿತಿಯ, ಸುಖಸ್ಯ—ಸುಖದ, ಐಕಾನ್ತಿಕಸ್ಯ—ಅಂತಿಮ, ಚ—ಕೂಡ.

**ಮತ್ತು, ನಾನು, ಅಮೃತವಾದ, ಅವಿನಾಶಿಯಾದ, ನಿತ್ಯವಾದ ಮತ್ತು ಅಂತಿಮ ಸುಖ ಸ್ವರೂಪ ಸ್ಥಿತಿಯಾಗಿರುವ ವ್ಯಕ್ತಿಶೂನ್ಯ ಬ್ರಹ್ಮನ್‌ನಿಗೆ ಆಧಾರನು.**

**ಭಾವಾರ್ಥ :** ಬ್ರಹ್ಮನ್‌ನಿನ ಸ್ವರೂಪವು ಅಮೃತ, ಅವಿನಾಶಿ, ನಿತ್ಯ ಮತ್ತು ಸುಖ, ಬ್ರಹ್ಮನ್ ದಿವ್ಯ ಸಾಕ್ಷಾತ್ಕಾರದ ಪ್ರಾರಂಭ. ಪರಮಾತ್ಮನು, ಮಧ್ಯದಲ್ಲಿರುವ ದಿವ್ಯ.

ಸಾಕ್ಷಾತ್ಕಾರದಲ್ಲಿ ಎರಡನೆಯ ಹಂತ, ಮತ್ತು ಪರಮದೇವೋತ್ತಮ ಪುರುಷನು ಪರತತ್ತ್ವದ ಅಂತಿಮ ಸಾಕ್ಷಾತ್ಕಾರ. ಆದ್ದರಿಂದ ಪರಮಾತ್ಮ ಮತ್ತು ವ್ಯಕ್ತಿಶೂನ್ಯ ಬ್ರಹ್ಮನ್ ಇಬ್ಬರೂ ಪರಮ ಪುರುಷನಲ್ಲಿದ್ದಾರೆ. ಭೌತಿಕ ಪ್ರಕೃತಿಯು ಪರಮ ಪ್ರಭುವಿನ ಅಪರಾ ಶಕ್ತಿಯ ಉದ್ಭೂತಿ ಎಂದು ಏಳನೆಯ ಅಧ್ಯಾಯದಲ್ಲಿ ವಿವರಿಸಿದೆ. ಭಗವಂತನು ಅಪರಾ ಭೌತಿಕ ಪ್ರಕೃತಿಯಲ್ಲಿ ಪರಾಪ್ರಕೃತಿಯ ಅಂಶಗಳನ್ನು ಗರ್ಭೀಕರಿಸುತ್ತಾನೆ. ಮತ್ತು ಅದೇ ಭೌತಿಕ ಪ್ರಕೃತಿಯಲ್ಲಿ ಆಧ್ಯಾತ್ಮಿಕ ಸಂಪರ್ಕ. ಈ ಭೌತಿಕ ಪ್ರಕೃತಿಯಿಂದ ಬದ್ಧವಾದ ಜೀವಿಯು ಅಧ್ಯಾತ್ಮ ಜ್ಞಾನ ಸಾಧನವನ್ನು ಪ್ರಾರಂಭಿಸಿದಾಗ, ಅವನು ಭೌತಿಕ ಅಸ್ತಿತ್ವ ಸ್ಥಿತಿಯಿಂದ ತನ್ನನ್ನು ಉನ್ನತಿಸಿಕೊಳ್ಳುತ್ತಾನೆ ಮತ್ತು ಕ್ರಮೇಣ ಪರಮನ ಬ್ರಹ್ಮನ್ ಕಲ್ಪನೆಗೆ ಏರುತ್ತಾನೆ. ಜೀವನದ ಈ ಬ್ರಹ್ಮನ್ ಕಲ್ಪನೆಯ ಪ್ರಾಪ್ತಿಯು ಆತ್ಮಸಾಕ್ಷಾತ್ಕಾರದಲ್ಲಿ ಪ್ರಥಮ ಹಂತ. ಈ ಹಂತದಲ್ಲಿ ಬ್ರಹ್ಮನ್ ಸಾಕ್ಷಾತ್ಕಾರಿ ವ್ಯಕ್ತಿಯು ಭೌತಿಕ ಸ್ಥಿತಿಗೆ ಅತೀತನು. ಆದರೆ ಅವನು ವಾಸ್ತವಿಕವಾಗಿ ಬ್ರಹ್ಮನ್ ಸಾಕ್ಷಾತ್ಕಾರದಲ್ಲಿ ಪರಿಪೂರ್ಣನಲ್ಲ. ಅವನಿಗೆ ಬೇಕಾದರೆ ಅವನು ಬ್ರಹ್ಮನ್ ಸ್ಥಾನದಲ್ಲಿ ಮುಂದುವರೆಯ ಬಹುದು. ಆಮೇಲೆ ಕ್ರಮೇಣ ಪರಮಾತ್ಮ ಸಾಕ್ಷಾತ್ಕಾರಕ್ಕೆ ಮತ್ತು ಆಮೇಲೆ ಪರಮ ದೇವೋತ್ತಮ ಪುರುಷನ ಸಾಕ್ಷಾತ್ಕಾರಕ್ಕೆ ಏರಬಹುದು. ಈ ಬಗ್ಗೆ ವೇದ ಸಾಹಿತ್ಯದಲ್ಲಿ ಅನೇಕ ದೃಷ್ಟಾಂತಗಳಿವೆ. ನಾಲ್ಕು ಕುಮಾರರು ಮೊದಲು ತತ್ತ್ವದ ವ್ಯಕ್ತಿಶೂನ್ಯ ಬ್ರಹ್ಮನ್ ಕಲ್ಪನೆಯಲ್ಲಿ ಸನ್ನಿವೇಶಿತರಾಗಿದ್ದರು, ಆದರೆ ಆಮೇಲೆ ಕ್ರಮೇಣ ಭಕ್ತಿಯುತ ಸೇವಾ ವೇದಿಕೆಗೆ ಏರಿದರು. ವ್ಯಕ್ತಿಶೂನ್ಯ ಬ್ರಹ್ಮನ್ ಕಲ್ಪನೆಗಿಂತ ಮೇಲೆ ಉನ್ನತಿಸಿಕೊಳ್ಳಲಾಗದವನು ಮತ್ತೆ ಪತನದ ಅಪಾಯ ಹೊಂದಿದ್ದಾನೆ. ಒಬ್ಬನು ವ್ಯಕ್ತಿಶೂನ್ಯ ಬ್ರಹ್ಮನ್ ಹಂತಕ್ಕೆ ಏರಬಹುದಾಗಿದ್ದರೂ ಪರಮ ಪುರುಷನ ಜ್ಞಾನವಿಲ್ಲದೆ ಮತ್ತಷ್ಟು ಮುಂದೆ ಹೋಗದಿದ್ದರೆ, ಅವನ ಬುದ್ಧಿಯು ಪರಿಪೂರ್ಣವಾಗಿ ನಿರ್ಮಲವಲ್ಲ ಎಂದು ಶ್ರೀಮದ್ ಭಾಗವತದಲ್ಲಿ ಹೇಳಿದೆ. ಆದ್ದರಿಂದ, ಬ್ರಹ್ಮನ್ ವೇದಿಕೆಗೆ ಏರಿದ್ದರೂ ಕೂಡ, ಒಬ್ಬನು ಭಗವಂತನ ಭಕ್ತಿಯುತ ಸೇವೆಯಲ್ಲಿ ನಿರತನಾಗದಿದ್ದರೆ ಅವನ ಪತನಕ್ಕೆ ಅವಕಾಶ ಉಂಟು. ವೇದ ಭಾಷೆಯಲ್ಲಿ ಹೀಗೂ ಹೇಳಿದೆ, **ರಸೋ ವೈ ಸಃ ರಸಂ ಹಿ ಏವಾಯಂ ಲಬ್ಧ್ವಾನಂದೀ ಭವತಿ** "ಒಬ್ಬನು ಆನಂದಸಾಗರ ದೇವೋತ್ತಮ ಪುರುಷನನ್ನು, ಕೃಷ್ಣನನ್ನು ಅರಿತುಕೊಂಡಾಗ, ಅವನು ವಾಸ್ತವಿಕವಾಗಿ ದಿವ್ಯಾನಂದ ಪೂರ್ಣನಾಗುತ್ತಾನೆ." (ತೈತ್ತಿರೀಯ ಉಪನಿಷದ್ 2.7.1) ಪರಮಪ್ರಭುವು ಷಡೈಶ್ವರ್ಯ ಪೂರ್ಣನು, ಮತ್ತು ಭಕ್ತನು ಅವನ ಬಳಿ ತಲುಪಿದಾಗ ಈ ಷಡೈಶ್ವರ್ಯಗಳ ವಿನಿಮಯವಾಗುತ್ತದೆ. ರಾಜದೂತನು ಸರಿಸುಮಾರು ರಾಜ್ಯಮಟ್ಟದಲ್ಲಿಯೇ ಭೋಗಹೊಂದುತ್ತಾನೆ. ಆದ್ದರಿಂದ ನಿತ್ಯಸುಖಿ, ಅವಿನಾಶಿಯಾದ ಸುಖ ಮತ್ತು ಶಾಶ್ವತ ಜೀವನ ಭಕ್ತಿಯೋಗವನ್ನು ಹಿಂಬಾಲಿಸುತ್ತವೆ. ಆದ್ದರಿಂದ, ಬ್ರಹ್ಮನ್ ಸಾಕ್ಷಾತ್ಕಾರ, ಅಥವಾ ಶಾಶ್ವತತೆ ಅಥವಾ ಅವಿನಾಶಿತ್ವ ಭಕ್ತಿಯುತ ಸೇವೆಯಲ್ಲಿ ಸೇರಿವೆ. ಇದು ಭಕ್ತಿಯೋಗ ನಿರತನಿಂದ ಆಗಲೇ ಹೊಂದಲ್ಪಟ್ಟಿವೆ.

ಜೀವಿಯು ಸ್ವಭಾವತಃ ಬ್ರಹ್ಮನ್ ಆಗಿದ್ದರೂ, ಭೌತಿಕ ಜಗತ್ತಿನ ಮೇಲೆ ಆಧಿಪತ್ಯ ಮಾಡುವ ಇಚ್ಛೆ ಹೊಂದಿದ್ದಾನೆ, ಇದರಿಂದಾಗಿ ಪತನ ಹೊಂದುತ್ತಾನೆ. ಈ ಸ್ವರೂಪ ಸ್ಥಿತಿಯಲ್ಲಿ ಜೀವಿಯು ತ್ರಿವಿಧ ಪ್ರಕೃತಿ ಗುಣಗಳಿಗೆ ಮೇಲಿದ್ದಾನೆ, ಆದರೆ ಭೌತಿಕ ಪ್ರಕೃತಿ

ಸಂಗವು— ಸತ್ತ್ವ, ರಾಜಸ, ಮತ್ತು ತಾಮಸ ಭೌತಿಕ ಪ್ರಕೃತಿಯ ಭಿನ್ನಗುಣಗಳಲ್ಲಿ ಅವನನ್ನು ಸಿಕ್ಕಿಸುತ್ತದೆ. ಈ ತ್ರಿಗುಣಗಳ ಸಂಗದಿಂದ ಭೌತಿಕ ಜಗತ್ತಿನ ಆಧಿಪತ್ಯ ಮಾಡುವ ಇಚ್ಛೆ ಅವನಿಗೆ ಇದೆ. ಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಭಕ್ತಿಯುತ ಸೇವಾ ನಿರತತೆಯಿಂದ, ಅವನು ಕೂಡಲೇ ದಿವ್ಯಸ್ಥಿತಿ ಸನ್ನಿವೇಶಿತನು, ಮತ್ತು ಭೌತಿಕ ಪ್ರಕೃತಿ ಆಧಿಪತ್ಯದ ಅವನ ನೀತಿಬಾಹಿರ ಇಚ್ಛೆಯು ನಿವಾರಣೆಯಾಗುತ್ತದೆ. ಆದ್ದರಿಂದ ಶ್ರವಣ, ಕೀರ್ತನ, ಸ್ಮರಣ, ಭಕ್ತಿಯುತಸೇವಾ ಸಾಕ್ಷಾತ್ಕಾರಕ್ಕಾಗಿ ನವವಿಧಾನಗಳು. ವಿದಿತವಾದ ಭಕ್ತಿಯುತ ಸೇವಾ ಪ್ರಕ್ರಿಯೆಯು ಪ್ರಾರಂಭದಿಂದ ಭಕ್ತರ ಸಂಗದಲ್ಲಿ ಆಚರಿಸಬೇಕು, ಕ್ರಮೇಣ ಅಂಥ ಸಂಗದಿಂದ, ಗುರುಗಳ ಪ್ರಭಾವದಿಂದ, ಆಧಿಪತ್ಯದ ಭೌತಿಕ ಇಚ್ಛೆಯು ನಿವಾರಣೆಯಾಗುತ್ತದೆ, ಮತ್ತು ಒಬ್ಬನು ಭಗವಂತನ ದಿವ್ಯ ಪ್ರೀತಿಯುತ ಸೇವೆಯಲ್ಲಿ ದೃಢವಾಗಿ ಸನ್ನಿವೇಶಿತನಾಗುತ್ತಾನೆ. ಈ ವಿಧಾನವು ಈ ಅಧ್ಯಾಯದ ಇಪ್ಪತ್ತೆರಡರಿಂದ ಕೊನೆಯವರೆಗಿನ ಶ್ಲೋಕಗಳಲ್ಲಿ ವಿಧಿಸಲ್ಪಟ್ಟಿದೆ. ಭಗವಂತನ ಭಕ್ತಿಯೋಗವು ಬಹು ಸುಲಭ: ಒಬ್ಬನು ಸದಾ ಭಗವತ್ಸೇವೆಯಲ್ಲಿ ತೊಡಗಿರಬೇಕು, ಭಗವದರ್ಪಿತ ನೈವೇದ್ಯಶೇಷವನ್ನು ಭುಂಜಿಸಬೇಕು, ಭಗವಂತನ ಪಾದಕಮಲಗಳಿಗೆ ಅರ್ಪಿಸಿದ ಪುಷ್ಪಗಳನ್ನು ಮೂಸಬೇಕು, ಭಗವಂತನು ದಿವ್ಯ ಲೀಲೆ ಮಾಡಿದ ಸ್ಥಳಗಳನ್ನು ಸಂದರ್ಶಿಸಬೇಕು, ತನ್ನ ಭಕ್ತರೊಡನೆ ಪ್ರೇಮ ವಿನಿಮಯ ಮಾಡಿಕೊಳ್ಳುವ ಭಗವಂತನ ನಾನಾ ಕ್ರಿಯೆಗಳನ್ನು ಕುರಿತು ಓದಬೇಕು, ಮತ್ತು ಸದಾ ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ, ದಿವ್ಯ ಶಬ್ದಗಳನ್ನು ಜಪಿಸಬೇಕು, ಮತ್ತು ಭಗವಂತನ ಮತ್ತು ಅವನ ಭಕ್ತರ ಆವಿರ್ಭಾವ ಮತ್ತು ಅದೃಶ್ಯದಿನಗಳಂದು ಉಪವಾಸ ಆಚರಣೆಗಳನ್ನು ಮಾಡಬೇಕು. ಈ ಪ್ರಕ್ರಿಯಾ ಅನುಸರಣೆಯಿಂದ ಒಬ್ಬನು ಸಂಪೂರ್ಣವಾಗಿ ಸಕಲ ಭೌತಿಕ ಚಟುವಟಿಕೆಗಳಿಂದ ಮುಕ್ತನಾಗುತ್ತಾನೆ. ಹೀಗೆ ಬ್ರಹ್ಮಜ್ಯೋತಿಯಲ್ಲಿ ಅಥವಾ ಬ್ರಹ್ಮನ್ ಕಲ್ಪನೆಯ ವೈವಿಧ್ಯಗಳಲ್ಲಿ ತನ್ನನ್ನು ಸನ್ನಿವೇಶಿತಗೊಳಿಸಿಕೊಳ್ಳಬಲ್ಲವನು ಗುಣಾತ್ಮಕವಾಗಿ ಪರಮ ದೇವೋತ್ತಮ ಪುರುಷನಿಗೆ ಸದೃಶನು

**ಇಲ್ಲಿಗೆ ಭೌತಿಕ ಪ್ರಕೃತಿಯ ತ್ರಿಗುಣಗಳು ಎಂಬ ವಿಷಯದಲ್ಲಿ ಶ್ರೀಮದ್ ಭಗವದ್ಗೀತೆಯ ಹದಿನಾಲ್ಕನೆಯ ಅಧ್ಯಾಯದ ಭಕ್ತಿವೇದಾಂತ ತಾತ್ಪರ್ಯವು ಮುಗಿಯಿತು.**



## ಅಧ್ಯಾಯ ಹದಿನೈದು



# ಪುರುಷೋತ್ತಮ ಯೋಗ

**ಶ್ರೀಭಗವಾನ್ ಉವಾಚ,**

**ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಮ್ ।**
**ಛನ್ದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥೧॥**

ಶ್ರೀಭಗವಾವ್ ಉವಾಚ—ಪರಮ ದೇವೋತ್ತಮ ಪುರುಷನು ನುಡಿದನು, ಊರ್ಧ್ವ-ಮೂಲಮ್—ಬೇರುಗಳು ಮೇಲೆ, ಅಧಃ—ಕೆಳಕ್ಕೆ, ಶಾಖಮ್—ರೆಂಬೆಗಳು, ಅಶ್ವತ್ಥಮ್—ಅಶ್ವತ್ಥವೃಕ್ಷ, ಪ್ರಾಹುಃ—ಎಂದು ಹೇಳಲ್ಪಟ್ಟಿದೆ, ಅವ್ಯಯಮ್—ಅವ್ಯಯವಾದುದು, ಛನ್ದಾಂಸಿ—ವೇದಮಂತ್ರಗಳು, ಯಸ್ಯ—ಯಾವುದರ, ಪರ್ಣಾನಿ—ಎಲೆಗಳು, ಯಃ—ಯಾವೊಬ್ಬನು, ತಮ್—ಅದನ್ನು, ವೇದ—ತಿಳಿಯುತ್ತಾನೆ, ಸಃ—ಅವನು, ವೇದವಿತ್—ವೇದಗಳನ್ನು ತಿಳಿದವನು.

**ಪರಮ ದೇವೋತ್ತಮ ಪುರುಷನು ನುಡಿದನು : ಬೇರುಗಳು ಮೇಲೆ ಮತ್ತು ಅದರ ರೆಂಬೆಗಳು ಕೆಳಗೆ ಹಾಗೂ ವೇದಮಂತ್ರಗಳು ಅದರ ಎಲೆಗಳು ಆಗಿರುವ ಒಂದು ಅವಿನಾಶಿ ಅಶ್ವತ್ಥಮರವಿದೆ. ಈ ವೃಕ್ಷವನ್ನು ತಿಳಿದವನು ವೇದಗಳನ್ನು ತಿಳಿದವನು.**

**ಭಾವಾರ್ಥ :** ಭಕ್ತಿಯೋಗದ ಮಹತ್ವವನ್ನು ಕುರಿತ ಚರ್ಚೆಯ ತರುವಾಯ, "ವೇದಗಳ ವಿಷಯ ಏನು ?" ಎಂದು ಒಬ್ಬನು ಪ್ರಶ್ನಿಸಬಹುದು. ಕೃಷ್ಣನನ್ನು ಅರಿತುಕೊಳ್ಳುವುದು ವೇದಾಧ್ಯಯನದ ಉದ್ದೇಶ ಎಂದು ಈ ಅಧ್ಯಾಯದಲ್ಲಿ ವಿವರಿಸಿದೆ. ಆದ್ದರಿಂದ, ಭಕ್ತಿಯುತ ಸೇವಾನಿರತನಾದ ಕೃಷ್ಣಪ್ರಜ್ಞೆಯು ವೇದಗಳನ್ನು ಆಗಲೇ ತಿಳಿದಿದ್ದಾನೆ.

ಈ ಭೌತಿಕ ಜಗತ್ತಿನಲ್ಲಿ ಸಿಲುಕಿಕೊಳ್ಳುವುದನ್ನು ಇಲ್ಲಿ ಅಶ್ವತ್ಥವೃಕ್ಷಕ್ಕೆ ಹೋಲಿಸಿದೆ. ಕಾಮ್ಯ ಕರ್ಮಗಳಲ್ಲಿ ತೊಡಗಿದವನಿಗೆ ಅಶ್ವತ್ಥವೃಕ್ಷಕ್ಕೆ ಕೊನೆಯೇ ಇಲ್ಲ, ಅವನು ಶಾಖೆಯಿಂದ ಶಾಖೆಗೆ ಅಲೆಯುತ್ತಲೇ ಇರುತ್ತಾನೆ. ಈ ಭೌತಿಕ ಜಗತ್ ವೃಕ್ಷಕ್ಕೆ ಕೊನೆ ಎಂಬುದಿಲ್ಲ, ಮತ್ತು ಈ ವೃಕ್ಷದಲ್ಲಿ ಅನುರಕ್ತನಾದವನಿಗೆ ಮೋಕ್ಷ ಸಂಭವವಿಲ್ಲ, ಒಬ್ಬನು ತನ್ನನ್ನು ಉನ್ನತಿಸಿಕೊಳ್ಳಲು ಉದ್ದಿಷ್ಟವಾದ ವೇದ ಮಂತ್ರಗಳಿಗೆ ಈ ವೃಕ್ಷದ ಶಾಖೆಗಳೆಂದು ಕರೆದಿದೆ. ಈ ವೃಕ್ಷದ ಬೇರುಗಳು ಮೇಲ್ಮುಖವಾಗಿ ಬೆಳೆಯುತ್ತವೆ, ಏಕೆಂದರೆ ಈ ಬ್ರಹ್ಮಾಂಡದ ಅತ್ಯುನ್ನತ ಲೋಕ ಬ್ರಹ್ಮನು ಇರುವಲ್ಲಿಂದ ಅವು ಪ್ರಾರಂಭವಾಗುತ್ತವೆ. ಒಬ್ಬನು ಈ ಅವಿನಾಶಿ ಮಾಯಾ ವೃಕ್ಷವನ್ನು ಅರಿತುಕೊಂಡರೆ, ಆಗ ಅವನು ಅದರಿಂದ ಪಾರಾಗಬಹುದು.

ಪಾರಾಗುವ ಈ ಪ್ರಕ್ರಿಯೆಯನ್ನು ಅರಿತಿರಬೇಕು. ಭೌತಿಕ ಬಂಧ ನಿವೃತ್ತಿಗೆ ಅನೇಕ ಮಾರ್ಗಗಳಿವೆ ಎಂದು ಹಿಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ, ಮತ್ತು ಹದಿಮೂರನೆಯ ಅಧ್ಯಾಯದವರೆಗೂ ಭಗವಂತನ ಭಕ್ತಿಯುತ ಸೇವೆಯು ಅತ್ಯುತ್ತಮವಾದುದು ಎಂಬುದನ್ನು ಕಂಡಿದ್ದೇವೆ. ಈಗ, ಭಕ್ತಿಯುತ ಸೇವೆಯ ಮೂಲತತ್ತ್ವವು ಭೌತಿಕ ಚಟುವಟಿಕೆಗಳಿಂದ ಅಸಂಗ ಮತ್ತು ಭಗವಂತನ ದಿವ್ಯಸೇವೆಯಲ್ಲಿ ಅನುರಾಗ. ಭೌತಿಕ ಜಗತ್ತಿನೊಂದಿಗೆ ಅಸಂಗದ ಪ್ರಕ್ರಿಯೆಯನ್ನು ಈ ಅಧ್ಯಾಯದ ಪ್ರಾರಂಭದಲ್ಲಿ ಚರ್ಚಿಸಿದೆ. ಈ ಭೌತಿಕ ಅಸ್ತಿತ್ವದ ಬೇರು ಮೇಲ್ಮುಖವಾಗಿ ಬೆಳೆಯುತ್ತದೆ. ಎಂದರೆ ಅದು ಮಹತ್ ತತ್ತ್ವದಿಂದ, ಬ್ರಹ್ಮಾಂಡದ ಅತ್ಯುನ್ನತ ಲೋಕದಿಂದ ಪ್ರಾರಂಭವಾಗುತ್ತದೆ. ಅಲ್ಲಿಂದ ಇಡೀ ಬ್ರಹ್ಮಾಂಡವು ನಾನಾ ಗ್ರಹವ್ಯೂಹಗಳನ್ನು ಪ್ರತಿನಿಧಿಸುವ ನಾನಾ ಶಾಖೆಗಳಿಂದ ವಿಸ್ತೃತ. ಫಲಗಳು, ಜೀವಿಯ ಕರ್ಮಫಲಗಳನ್ನು ಎಂದರೆ, ಧರ್ಮ, ಅರ್ಥ, ಕಾಮ, ಮತ್ತು ಮೋಕ್ಷಗಳನ್ನು ಪ್ರತಿನಿಧಿಸುತ್ತದೆ.

ಈಗ ಕೆಳಗೆ ರೆಂಬೆ, ಮತ್ತು ಮೇಲೆ ಬೇರುಗಳುಳ್ಳ ವೃಕ್ಷ ಇರುವುದು ಈ ಜಗತ್ತಿನಲ್ಲಿ ಎಲ್ಲಿಯೂ ಅನುಭವವಿಲ್ಲ, ಆದರೆ ಅಂತಹ ಒಂದು ವೃಕ್ಷವಿದೆ. ಅಂಥ ವೃಕ್ಷವನ್ನು ಜಲಾಶಯದ ಪಕ್ಕದಲ್ಲಿ ಕಾಣಬಹುದು. ಜಲಾಶಯದ ತೀರದಲ್ಲಿರುವ ವೃಕ್ಷಗಳು ರೆಂಬೆ ಕೆಳಗೆ ಬೇರು ಮೇಲಾಗಿ ನೀರಿನಲ್ಲಿ ಪ್ರತಿಬಿಂಬಿತ. ಎಂದರೆ ಈ ಭೌತಿಕ ಜಗತ್ ವೃಕ್ಷವು ಅಧ್ಯಾತ್ಮ ಜಗತ್ತಿನ ನಿಜ ವೃಕ್ಷದ ಛಾಯೆ ಮಾತ್ರ. ಒಂದು ವೃಕ್ಷದ ಪ್ರತಿಬಿಂಬವು ನೀರಿನಲ್ಲಿ ಇರುವ ಹಾಗೆ, ಅಧ್ಯಾತ್ಮ ಜಗತ್ತಿನ ಈ ಪ್ರತಿಬಿಂಬವು ಇಚ್ಛೆಯಲ್ಲಿ ಸನ್ನಿವೇಶಿತ. ಇಚ್ಛೆಯು ಈ ಪ್ರತಿಬಿಂಬಿತ ಭೌತಿಕ ಪ್ರಕಾಶದಲ್ಲಿ ವಸ್ತುಗಳ ಸನ್ನಿವೇಶಕ್ಕೆ ಕಾರಣ. ಈ ಭೌತಿಕ ಅಸ್ತಿತ್ವದಿಂದ ಪಾರಾಗಬಯಸುವವನು ವಿಶ್ಲೇಷಣಾತ್ಮಕ ಅಧ್ಯಯನದ ಮೂಲಕ ಈ ವೃಕ್ಷವನ್ನು ಚೆನ್ನಾಗಿ ಅರಿತುಕೊಳ್ಳಬೇಕು. ಆಗ ಅವನು ಅದರೊಡನೆ ತನ್ನ ಸಂಬಂಧವನ್ನು ಕಡಿದುಕೊಳ್ಳಬಹುದು.

ಈ ವೃಕ್ಷವು; ನಿಜ ವೃಕ್ಷದ ಛಾಯೆಯಾಗಿದ್ದು, ಅದರ ಪಡಿಯಚ್ಚಾಗಿದೆ. ಅಧ್ಯಾತ್ಮ ಜಗತ್ತಿನಲ್ಲಿ ಪ್ರತಿಯೊಂದೂ ಇದೆ ವ್ಯಕ್ತಿಶೂನ್ಯವಾದಿಗಳು ಬ್ರಹ್ಮನ್‌ನನ್ನು ಈ ಭೌತಿಕ ವೃಕ್ಷದ ಬೇರೆಂದು, ಮತ್ತು ಆ ಬೇರಿನಿಂದ, ಸಾಂಖ್ಯ ತತ್ತ್ವಾನುಸಾರ, ಪ್ರಕೃತಿ, ಪುರುಷ,

ಆಮೇಲೆ ತ್ರಿಗುಣಗಳು, ತರುವಾಯ ಪಂಚಮಹಾಭೂತಗಳು, ಆಮೇಲೆ ದಶೇಂದ್ರಿಯ ಗಳು, ಮನಸ್ಸು ಇತ್ಯಾದಿಗಳು ಬರುತ್ತವೆ ಎಂದು ಹೇಳುತ್ತಾರೆ. ಹೀಗೆ ಅವರು ಇಡೀ ಭೌತಿಕ ಜಗತ್ತನ್ನು ಇಪ್ಪತ್ತನಾಲ್ಕು ತತ್ವಗಳಾಗಿ ವಿಭಾಗಿಸುತ್ತಾರೆ. ಬ್ರಹ್ಮನ್‌ನು ಸಕಲ ಉದ್ಭೂತಿಗಳ ಕೇಂದ್ರನಾಗಿದ್ದರೆ, ಈ ಭೌತಿಕ ಜಗತ್ತು ಕೇಂದ್ರದ 180 ಡಿಗ್ರಿಗಳಿಂದ ಉದ್ಭೂತಿ, ಮತ್ತು ಇನ್ನುಳಿದ 180 ಡಿಗ್ರಿಗಳು ಆಧ್ಯಾತ್ಮ ಜಗತ್ತಾಗಿವೆ. ಭೌತಿಕ ಜಗತ್ತು ತಿರೋಹಿತ ಛಾಯೆ. ಆದ್ದರಿಂದ ಆಧ್ಯಾತ್ಮ ಜಗತ್ತು ಅದೇ ಬಗೆಯ ವೈವಿಧ್ಯತೆ ನಿಜವಾಗಿ ಹೊಂದಬೇಕು. ಪ್ರಕೃತಿಯು ಪರಮ ಪ್ರಭುವಿನ ಬಹಿರಂಗ ಶಕ್ತಿ, ಮತ್ತು ಪುರುಷನು ಸ್ವಯಂ ಪರಮ ಪ್ರಭು, ಮತ್ತು ಅದು ಭಗವದ್ಗೀತೆಯಲ್ಲಿ ವಿವರಿಸಲ್ಪಟ್ಟಿದೆ. ಈ ಉದ್ಭೂತಿಯು ಭೌತಿಕವಾದುದರಿಂದ, ಅದು ಅನಿತ್ಯ. ಛಾಯೆಯು ಅನಿತ್ಯ, ಏಕೆಂದರೆ ಕೆಲವು ಸಲ ಅದು ಕಾಣುತ್ತದೆ ಮತ್ತೆ ಕೆಲವು ಸಲ ಕಾಣುವುದಿಲ್ಲ— ಆದರೆ ಛಾಯೆಯು ಎಲ್ಲಿಂದ ಬರುವುದೋ ಆ ಮೂಲವು ಶಾಶ್ವತ. ನಿಜ ವೃಕ್ಷದ ಭೌತಿಕ ಛಾಯೆಯನ್ನು ಕಡಿದು ಹಾಕಬೇಕು. ಒಬ್ಬನು ವೇದಗಳನ್ನು ತಿಳಿದಾಗ, ಈ ಭೌತಿಕ ಜಗತ್ತಿನ ಸಂಗವನ್ನು ಹೇಗೆ ಕಡಿದುಕೊಳ್ಳಬೇಕೆಂಬುದನ್ನು ತಿಳಿದಿರುವನೆಂದು ಗೃಹೀತ. ಒಬ್ಬನು ಆ ಪ್ರಕ್ರಿಯೆಯನ್ನು ತಿಳಿದರೆ ವಾಸ್ತವಿಕವಾಗಿ ಅವನು ವೇದಗಳನ್ನು ತಿಳಿದವನು. ವೇದಗಳ ಕರ್ಮಕಾಂಡಸೂತ್ರಗಳಿಂದ ಆಕರ್ಷಿತನಾದವನು ವೃಕ್ಷದ ಸುಂದರ ಹಸಿರೆಲೆ ಗಳಿಂದ ಆಕರ್ಷಿತನು. ಅವನು ವೇದಗಳ ಉದ್ದೇಶವನ್ನು ಯಥಾರ್ಥವಾಗಿ ತಿಳಿದಿರುವು ದಿಲ್ಲ. ವೇದಗಳ ಉದ್ದೇಶವು, ಸ್ವಯಂ ದೇವೋತ್ತಮ ಪುರುಷನೇ ಹೇಳಿದಂತೆ, ಈ ಛಾಯಾವೃಕ್ಷವನ್ನು ಕಡಿದು ಹಾಕುವುದು ಮತ್ತು ಅಧ್ಯಾತ್ಮ ಜಗತ್ತಿನ ನಿಜ ವೃಕ್ಷವನ್ನು ಹೊಂದುವುದು,

**ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ**
**ಗುಣಪ್ರವೃದ್ಧಾ ವಿಷಯಪ್ರವಾಲಾಃ ।**
**ಅಧಶ್ಚ ಮೂಲಾನ್ಯನುಸನ್ತತಾನಿ**
**ಕರ್ಮಾನುಬನ್ಧೀನಿ ಮನುಷ್ಯಲೋಕೇ॥ ೨ ॥**

ಅಧಃ—ಕೆಳಮುಖವಾಗಿ, ಚ—ಮತ್ತು, ಊರ್ಧ್ವಮ್—ಮೇಲ್ಮುಖವಾಗಿ, ಪ್ರಸೃತಾಃ—ವಿಸ್ತರಿಸಿವೆ, ತಸ್ಯ—ಅದರ, ಶಾಖಾಃ—ಶಾಖೆಗಳು, ಗುಣ—ಭೌತಿಕ ಪ್ರಕೃತಿ ಗುಣಗಳಿಂದ, ಪ್ರವೃದ್ಧಾಃ—ಬೆಳೆದಿವೆ, ವಿಷಯ—ಇಂದ್ರಿಯ ವಿಷಯಗಳು, ಪ್ರವಾಲಾಃ—ಕುಡಿಗಳು, ಅಧಃ—ಕೆಳಮುಖವಾಗಿ, ಚ—ಮತ್ತು, ಮೂಲಾನಿ—ಬೇರು ಗಳು, ಅನುಸನ್ತತಾನಿ—ವಿಸ್ತರಿಸುತ್ತವೆ, ಕರ್ಮ—ಕರ್ಮಕ್ಕೆ, ಅನುಬನ್ಧೀನಿ—ಬದ್ಧ, ಮನುಷ್ಯ-ಲೋಕೇ—ಮಾನವ ಸಮಾಜದ ಜಗತ್ತಿನಲ್ಲಿ.

**ಈ ವೃಕ್ಷದ ರೆಂಬೆಗಳು ಭೌತಿಕ ಪ್ರಕೃತಿ ಗುಣಗಳಿಂದ ಪೋಷಣೆಗೊಂಡು ಕೆಳಗೆ ಮತ್ತು ಮೇಲೆ ವಿಸ್ತರಿಸುತ್ತವೆ. ಕುಡಿಗಳು ಇಂದ್ರಿಯ ವಿಷಯಗಳು, ಈ ವೃಕ್ಷವು ಕೆಳಮುಖ ಬೇರುಗಳನ್ನೂ ಹೊಂದಿದೆ, ಮತ್ತು ಅವು ಮಾನವ ಸಮಾಜದ ಕಾಮ್ಯ ಕರ್ಮಗಳಿಗೆ ಬದ್ಧವಾಗಿವೆ.**

**ಭಾವಾರ್ಥ :** ಅಶ್ವತ್ಥ ಮರದ ವರ್ಣನೆಯು ಇಲ್ಲಿ ಮತ್ತಷ್ಟು ವಿವರಿಸಲ್ಪಟ್ಟಿದೆ. ಅದರ ರೆಂಬೆಗಳು ಎಲ್ಲ ದಿಕ್ಕುಗಳಲ್ಲಿ ಹರಡುತ್ತವೆ. ಅಧೋಭಾಗಗಳಲ್ಲಿ, ಜೀವಿಗಳ—ಮಾನವ ಜೀವಿಗಳ. ಪ್ರಾಣಿಗಳ, ಅಶ್ವಗಳ, ಗೋವುಗಳ, ನಾಯಿಗಳ, ಬೆಕ್ಕುಗಳ, ಇತ್ಯಾದಿಗಳ ವೈವಿಧ್ಯತೆಯು ಉದ್ಭೂತಿಗಳಿವೆ. ಇವು ರೆಂಬೆಗಳ ಕೆಳಭಾಗದಲ್ಲಿವೆ, ಆದರೆ ಮೇಲ್ಭಾಗ ಗಳಲ್ಲಿ ಉತ್ತಮ ಜೀವ ಪ್ರಕಾರಗಳು—ದೇವತೆಗಳು, ಗಂಧರ್ವರು ಮತ್ತು ಅನೇಕ ಉತ್ತಮ ಜೀವಯೋನಿಗಳಿವೆ, ಮರವು ಬೆಳೆಯುವಂತೆ ಈ ವೃಕ್ಷವು ಭೌತಿಕ ತ್ರಿವಿಧ ಪ್ರಕೃತಿ ಗುಣಗಳಿಂದ ಬೆಳೆಯುತ್ತದೆ. ಕೆಲವು ಸಲ ಒಂದು ಭೂಭಾಗವು ಸಾಕಷ್ಟು ನೀರಿಲ್ಲದೆ ಬಂಜರು ಆಗಿರುವುದನ್ನು ನಾವು ಕಾಣುತ್ತೇವೆ. ಮತ್ತೆ ಕೆಲವು ಸಲ ಒಂದು ಭೂಭಾಗವು ಬಹಳ ಹಸಿರಾಗಿರುತ್ತದೆ; ಅದೇ ಪ್ರಕಾರ, ವಿಶಿಷ್ಟ ಭೌತಿಕ ಪ್ರಕೃತಿ ಗುಣ ಗಳು ಪ್ರಮಾಣದಲ್ಲಿ ಹೆಚ್ಚಾಗಿರುವಲ್ಲಿ, ನಾನಾ ಜೀವಯೋನಿಗಳು ಆ ಪ್ರಕಾರ ಉದ್ಭೂತ.

ವೃಕ್ಷದ ಕುಡಿಗಳು ಇಂದ್ರಿಯ ವಿಷಯಗಳೆಂದು ಹೇಳಿದೆ. ವಿವಿಧ ಪ್ರಕೃತಿ ಗುಣ ಬೆಳವಣಿಗೆಯಿಂದ, ನಾವು ನಾನಾ ಇಂದ್ರಿಯಗಳನ್ನು ಬೆಳೆಸಿಕೊಳ್ಳುತ್ತೇವೆ ಮತ್ತು ಆ ಇಂದ್ರಿಯಗಳಿಂದ, ನಾನಾ ಬಗೆಯ ಇಂದ್ರಿಯವಿಷಯಗಳನ್ನು ಭೋಗಿಸುತ್ತೇವೆ. ರೆಂಬೆಯ ತುದಿಗಳು—ಕಿವಿ, ಮೂಗು, ಕಣ್ಣು, ಇತ್ಯಾದಿಗಳು—ಭಿನ್ನಭಿನ್ನ ಇಂದ್ರಿಯ ವಿಷಯ ಭೋಗಕ್ಕೆ ಆಸಕ್ತವಾದ ಇಂದ್ರಿಯಗಳು. ರೆಂಬೆಗಳ ತುದಿಗಳು-ಶಬ್ದ. ರೂಪ, ಸ್ಪರ್ಶ ಮುಂತಾದ ಇಂದ್ರಿಯ ವಿಷಯಗಳು. ನಾನಾ ಬಗೆಯ ದುಃಖಾನುಭವ ಮತ್ತು ಇಂದ್ರಿಯ ಭೋಗದ ಉಪೋತ್ಪನ್ನಗಳಾದ ರಾಗದ್ವೇಷಗಳು ಉಪಬೇರುಗಳು. ಎಲ್ಲ ದಿಕ್ಕುಗಳಲ್ಲಿ ಹರಡುವ ಈ ಉಪ ಬೇರುಗಳಿಂದ ಪುಣ್ಯ ಪಾಪ ಪ್ರವೃತ್ತಿಗಳು ಬೆಳೆಯುವುವೆಂದು ಪರಿಗಣಿಸಿದೆ. ನಿಜ ಬೇರು ಬ್ರಹ್ಮಲೋಕದಿಂದ ಪ್ರಾರಂಭ, ಮತ್ತು ಇತರ ಬೇರಗಳು ಮಾನವ ಗ್ರಹವ್ಯೂಹಗಳಲ್ಲಿವೆ. ಒಬ್ಬನು ಊರ್ಧ್ವ ಲೋಕಗಳಲ್ಲಿ ಪುಣ್ಯಕರ್ಮ ಫಲ ಗಳನ್ನು ಭೋಗಿಸಿದ ತರುವಾಯ, ಅವನು ಮತ್ತೆ ಈ ಭೂಮಿಗೆ ಇಳಿಯುತ್ತಾನೆ, ಮತ್ತು ಉನ್ನತಿಗಾಗಿ ಕಾಮ್ಯಕರ್ಮಗಳನ್ನು ಪುನರಾರಂಭಿಸುತ್ತಾನೆ. ಮಾನವ ಜೀವಿಗಳ ಈ ಲೋಕವು ಕರ್ಮಕ್ಷೇತ್ರವೆಂದು ಪರಿಗಣಿಸಿದೆ.

**ನ ರೂಪಮಸ್ಯೇಹ ತಥೋಪಲಭ್ಯತೇ**
**ನಾನ್ತೋ ನ ಚಾದಿರ್ನ ಚ ಸಮ್ಪ್ರತಿಷ್ಠಾ ।**
**ಅಶ್ವತ್ಥಮೇನಂ ಸುವಿರೂಢಮೂಲಮ್**
**ಅಸಂಗಶಸ್ತ್ರೇಣ ದೃಢೇನ ಛಿತ್ವಾ ॥೩॥**

**ತತಃ ಪದಂ ತತ್ಪರಿಮಾರ್ಗಿತವ್ಯಂ**
**ಯಸ್ಮಿನ್ ಗತಾ ನ ನಿವರ್ತನ್ತಿ ಭೂಯಃ ।**
**ತಮೇವ ಚಾದ್ಯಂ ಪುರುಷಂ ಪ್ರಪದ್ಯೇ**
**ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ॥ ೪ ॥**

ನ—ಇಲ್ಲ, ರೂಪಮ್—ರೂಪವು, ಅಸ್ಯ—ಈ ವೃಕ್ಷದ, ಇಹ—ಈ ಜಗತ್ತಿನಲ್ಲಿ, ತಥಾ—ಕೂಡ, ಉಪಲಭ್ಯತೇ—ಕಾಣುವುದು, ನ—ಎಂದೂ, ಅಂತಃ—ಕೊನೆ, ನ—ಎಂದೂ, ಚ—ಕೂಡ, ಆದಿಃ—ಆದಿಯು, ನ—ಎಂದೂ, ಚ—ಕೂಡ, ಸಂಪ್ರತಿಷ್ಠಾ—ತಳಪಾಯ, ಅಶ್ವತ್ಥಮ್—ಅಶ್ವತ್ಥ ವೃಕ್ಷವನ್ನು, ಏನಮ್—ಇದನ್ನು, ಸು-ವಿರೂಢ—ಬಲವಾಗಿ, ಮೂಲಮ್—ಬೇರೂರಿರುವ, ಅಸಂಗ-ಶಸ್ತ್ರೇಣ—ಅಸಂಗ ಶಸ್ತ್ರದಿಂದ, ದೃಢೇನ—ದೃಢವಾಗಿ, ಛಿತ್ವಾ—ಕತ್ತರಿಸಿ, ತತಃ—ಆಮೇಲೆ, ಪದಮ್—ಸನ್ನಿವೇಶಿತ, ತತ್—ಅದನ್ನು, ಪರಿಮಾರ್ಗಿತವ್ಯಮ್—ಕಂಡುಹಿಡಿಯಬೇಕು, ಯಸ್ಮಿನ್—ಅದರಲ್ಲಿ, ಗತಾಃ—ಹೋದವರು, ನ—ಎಂದಿಗೂ ಇಲ್ಲ, ನಿವರ್ತನ್ತಿ—ಅವರು ಮರಳುವುದು, ಭೂಯಃ—ಮತ್ತೆ, ತಮ್—ಅವನಿಗೆ, ಏವ—ಖಂಡಿತವಾಗಿ, ಚ—ಕೂಡ, ಆದ್ಯಮ್—ಮೂಲನಾದ, ಪುರುಷಮ್—ದೇವೋತ್ತಮ ಪುರುಷನಿಗೆ, ಪ್ರಪದ್ಯೇ—ಶರಣು ಹೋಗಬೇಕು, ಯತಃ—ಯಾವನಿಂದ, ಪ್ರವೃತ್ತಿಃ—ಪ್ರವೃತ್ತಿಯು, ಪ್ರಸೃತಾ—ವಿಸ್ತರಿಸಿದೆ, ಪುರಾಣೀ—ಬಹು ಪ್ರಾಚೀನವಾದ.

**ಈ ವೃಕ್ಷದ ನಿಜರೂಪವನ್ನು ಈ ಜಗತ್ತಿನಲ್ಲಿ ಕಾಣಲಾಗದು. ಅದು ಎಲ್ಲಿ ಕೊನೆಗೊಳ್ಳುತ್ತದೆ ಎಲ್ಲಿ ಪ್ರಾರಂಭವಾಗುತ್ತದೆ, ಅಥವಾ ಅದರ ತಳಪಾಯ ಎಲ್ಲಿ ಎಂಬುದನ್ನು ಯಾರೂ ಅರಿಯಲಾಗದು. ಆದರೆ ದೃಢ ನಿರ್ಧಾರದಿಂದ ಬಲವಾಗಿ ಬೇರೂರಿದ ಈ ವೃಕ್ಷವನ್ನು ಅಸಂಗ ಶಸ್ತ್ರದಿಂದ ಒಬ್ಬನು ಕಡಿದು ಹಾಕಬೇಕು. ಆಮೇಲೆ, ಹೋದ ಮೇಲೆ ಮರಳದಂಥ ಸ್ಥಳವನ್ನು ಒಬ್ಬನು ಹುಡುಕಿಕೊಳ್ಳಬೇಕು, ಮತ್ತು ಅಲ್ಲಿ ಯಾವನಿಂದ ಪ್ರತಿಯೊಂದು ಪ್ರಾರಂಭವಾಗಿದೆಯೋ ಮತ್ತು ಯಾವನಿಂದ ಅನಾದಿ ಕಾಲದಿಂದ ಪ್ರತಿಯೊಂದು ವಿಸ್ತರಿಸಿದೆಯೋ ಆ ಪರಮ ದೇವೋತ್ತಮ ಪುರುಷನಿಗೆ ಶರಣಾಗತನಾಗಬೇಕು.**

**ಭಾವಾರ್ಥ** : ಈ ಅಶ್ವತ್ಥ ವೃಕ್ಷದ ನಿಜರೂಪವನ್ನು ಈ ಭೌತಿಕ ಜಗತ್ತಿನಲ್ಲಿ ಅರಿತುಕೊಳ್ಳಲಾಗದು ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಅದರ ಬೇರು ಮೇಲಿರುವುದರಿಂದ, ನಿಜ ವೃಕ್ಷದ ವಿಸ್ತರಣೆಯು ತದ್ವಿರುದ್ಧ ದಿಕ್ಕಿನಲ್ಲಿದೆ. ಈ ವೃಕ್ಷದ ಭೌತಿಕ ವಿಸ್ತರಣೆಯಲ್ಲಿ ಸಿಕ್ಕಿಕೊಂಡಾಗ, ಆ ವೃಕ್ಷವು ಎಷ್ಟು ದೂರ ವಿಸ್ತರಿಸಿದೆ ಎಂಬುದನ್ನು ಒಬ್ಬನು ಕಾಣಲಾರನು, ಅಥವಾ ಈ ವೃಕ್ಷದ ಆದಿಯನ್ನು ಕಾಣಲಾರನು, ಆದರೂ ಅದರ ಕಾರಣವನ್ನು ಹುಡುಕಲೇಬೇಕು. "ನಾನು ನನ್ನ ತಂದೆಯ ಮಗ, ನನ್ನ ತಂದೆ ಇಂಥ ವ್ಯಕ್ತಿಯ ಮಗ, ಇತ್ಯಾದಿ." ಹೀಗೆ ಶೋಧಿಸುತ್ತಾ ಒಬ್ಬನು ಗರ್ಭೋದಕಶಾಯಿ ವಿಷ್ಣುವಿನಿಂದ ಜನಿತ ಬ್ರಹ್ಮನಲ್ಲಿಗೆ ಬರುತ್ತಾನೆ. ಈ ರೀತಿಯಲ್ಲಿ ಕೊನೆಗೆ ಒಬ್ಬನು ಪರಮ ದೇವೋತ್ತಮ ಪುರುಷನನ್ನು ತಲುಪಿದಾಗ, ಅಲ್ಲಿಗೆ ಶೋಧಕಾರ್ಯವು ಮುಗಿಯಿತು. ಒಬ್ಬನು, ಆ ಪರಮ ದೇವೋತ್ತಮ ಪುರುಷನ ಜ್ಞಾನಿಗಳ ಸಂಗದಲ್ಲಿ, ಆ ವೃಕ್ಷದ ಈ ಮೂಲವನ್ನು ಪರಮ ದೇವೋತ್ತಮ ಪುರುಷನನ್ನು, ಕಂಡುಕೊಳ್ಳಬೇಕು. ಆಗ ಆ ಅರಿವಿನಿಂದ ಒಬ್ಬನು ಕ್ರಮೇಣ ಈ ಸತ್ಯಾಭಾಸದಿಂದ ಅಸಂಗನಾಗುತ್ತಾನೆ, ಮತ್ತು ಆ ಜ್ಞಾನದಿಂದ

ಒಬ್ಬನು ಆ ಸಂಬಂಧವನ್ನು ಕಡಿದುಕೊಳ್ಳಬಹುದು ಮತ್ತು ನಿಜ ವೃಕ್ಷದಲ್ಲಿ ವಾಸ್ತವಿಕ ವಾಗಿ ಸನ್ನಿವೇಶಿತನಾಗಬಹುದು.

**ಅಸಂಗ** ಎಂಬ ಪದವು ಈ ಸಂಬಂಧದಲ್ಲಿ ಬಹು ಮಹತ್ವದ್ದು, ಏಕೆಂದರೆ ಇಂದ್ರಿಯ ಭೋಗ ಸಂಗವು ಮತ್ತು ಭೌತಿಕ ಪ್ರಕೃತಿಯ ಮೇಲೆ ಆಧಿಪತ್ಯ ನಡೆಸುವ ಆಸಕ್ತಿಯು ಬಹು ಬಲವಾದುದು. ಆದ್ದರಿಂದ ಒಬ್ಬನು ಅಧಿಕೃತ ಶಾಸ್ತ್ರಾಧಾರದಿಂದ ಅಧ್ಯಾತ್ಮ ವಿಜ್ಞಾನ ಕುರಿತು ಚರ್ಚಿಸಿ ಅಸಂಗವನ್ನು ಕಲಿತುಕೊಳ್ಳಬೇಕು, ಮತ್ತು ವಾಸ್ತವಿಕ ಜ್ಞಾನಿಗಳಿಂದ ಶ್ರವಣ ಮಾಡಬೇಕು. ಭಕ್ತರ ಸಂಗದಲ್ಲಿ ಅಂಥ ಚರ್ಚೆಯ ಫಲವಾಗಿ ಒಬ್ಬನು ಪರಮ ದೇವೋತ್ತಮ ಪುರುಷನಲ್ಲಿಗೆ ಬರುತ್ತಾನೆ. ಆಗ ಭಗವಂತನಿಗೆ ಶರಣಾಗುವುದು ಒಬ್ಬನ ಮೊದಲ ಕರ್ತವ್ಯ. ಎಲ್ಲಿಗೆ ಹೋದ ಮೇಲೆ ಮತ್ತೆ ಈ ಮಿಥ್ಯಾವೃಕ್ಷಕ್ಕೆ ಮರಳುವುದಿಲ್ಲವೋ, ಆ ಸ್ಥಳದ ವರ್ಣನೆಯು ಇಲ್ಲಿ ಕೊಡಲ್ಪಟ್ಟಿದೆ. ಪ್ರತಿಯೊಂದೂ ಅವನಿಂದ ಉದ್ಭೂತವಾದ ಪರಮ ದೇವೋತ್ತಮ ಪುರುಷ ಕೃಷ್ಣನು, ಮೂಲ ಬೇರು. ಆ ದೇವೋತ್ತಮ ಪುರುಷನ ಅನುಗ್ರಹ ಪಡೆಯಲು ಒಬ್ಬನು ಶರಣಾಗಬೇಕಷ್ಟೇ, ಮತ್ತು ಇದು ಶ್ರವಣ, ಕೀರ್ತನ ಇತ್ಯಾದಿ ಭಕ್ತಿಯುತ ಸೇವಾಚರಣೆಯ ಫಲ. ಅವನು ಭೌತಿಕ ಜಗತ್ತಿನ ವಿಸ್ತರಣೆಯ ಕಾರಣನು. ಇದು ಆಗಲೇ ಸ್ವಯಂ ಭಗವಂತನಿಂದ ವಿವರಿಸಲ್ಪಟ್ಟಿದೆ. **ಅಹಂ ಸರ್ವಸ್ಯ ಪ್ರಭವಃ** "ನಾನು ಪ್ರತಿಯೊಂದರ ಮೂಲನು." ಆದ್ದರಿಂದ ಭೌತಿಕ ಜೀವನದ ಬಲವಾದ ಈ ಅಶ್ವತ್ಥ ವೃಕ್ಷದ ತೊಡಕಿನಿಂದ ಪಾರಾಗಲು ಒಬ್ಬನು ಕೃಷ್ಣನಿಗೆ ಶರಣಾಗಬೇಕು. ಒಬ್ಬನು ಕೃಷ್ಣನಿಗೆ ಶರಣಾದೊಡನೆಯೇ ಅವನು ಈ ಭೌತಿಕ ವಿಸ್ತರಣೆಯಿಂದ ತಾನಾಗಿಯೇ ಅಸಂಗನಾಗುತ್ತಾನೆ.

**ನಿರ್ಮಾನಮೋಹಾ ಜಿತಸಂಗದೋಷಾ**
**ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ।**
**ದ್ವನ್ದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈರ್**
**ಗಚ್ಛನ್ತ್ಯಮೂಢಾಃ ಪದಮವ್ಯಯಂ ತತ್ ॥ ೫ ॥**

ನಿಃ—ಇಲ್ಲದೆ, ಮಾನ—ಮಿಥ್ಯಾಹಂಕಾರ, ಮೋಹಾಃ—ಮತ್ತು ಮೋಹ, ಜಿತ—ಗೆದ್ದು, ಸಂಗ—ಸಂಗದ, ದೋಷಾಃ—ದೋಷಗಳು, ಅಧ್ಯಾತ್ಮ—ಅಧ್ಯಾತ್ಮ ಜ್ಞಾನದಲ್ಲಿ, ನಿತ್ಯಾಃ—ನಿತ್ಯದಲ್ಲಿ, ವಿನಿವೃತ್ತ—ಅಸಂಗರಾಗಿ, ಕಾಮಾಃ—ಕಾಮದಿಂದ, ದ್ವನ್ದ್ವೈಃ—ದ್ವಂದ್ವಗಳಿಂದ, ವಿಮುಕ್ತಾಃ—ಮುಕ್ತರಾಗಿ, ಸುಖ-ದುಃಖ—ಸುಖದುಃಖಗಳಿಂದ, ಸಂಜ್ಞೈಃ—ಸಂಜ್ಞಿತರಾಗಿ, ಗಚ್ಛನ್ತಿ—ಹೊಂದುತ್ತಾರೆ, ಅಮೂಢಾಃ—ದಿಗ್ಭ್ರಮಿತರಾಗದೆ, ಪದಮ್—ಪದವನ್ನು, ಅವ್ಯಯಮ್—ಅವ್ಯಯವಾದ, ತತ್—ಅದನ್ನು.

**ಮಿಥ್ಯಾಹಂಕಾರದಿಂದ, ಮೋಹ ಮತ್ತು ಮಿಥ್ಯಾಸಂಗದಿಂದ ಮುಕ್ತರಾದವರು, ನಿತ್ಯವನ್ನು ಅರಿತವರು, ಭೌತಿಕ ಕಾಮರಹಿತರು, ಸುಖದುಃಖಗಳ ದ್ವಂದ್ವ**

**ಗಳಿಂದ ಮುಕ್ತರು, ಮತ್ತು ದಿಗ್ಭ್ರಮೆ ಇಲ್ಲದೆ ಪರಮ ಪುರುಷನಿಗೆ ಹೇಗೆ ಶರಣಾಗಬೇಕೆಂಬುದನ್ನು ಅರಿತಿರುವವರು, ಆ ಶಾಶ್ವತ ಸಾಮ್ರಾಜ್ಯವನ್ನು ಸೇರುತ್ತಾರೆ.**

**ಭಾವಾರ್ಥ :** ಶರಣಾಗತಿಯ ಪ್ರಕ್ರಿಯೆಯು ಇಲ್ಲಿ ಬಹು ಸೊಗಸಾಗಿ ವರ್ಣಿತ. ಒಬ್ಬನು ಗರ್ವದಿಂದ ಭ್ರಮಿತನಾಗದಿರುವುದು ಇರಬೇಕಾದ ಪ್ರಥಮ ಅರ್ಹತೆ. ಬದ್ಧಾತ್ಮನು ತಾನು ಭೌತಿಕ ಪ್ರಕೃತಿಯ ಸ್ವಾಮಿ ಎಂದು ಯೋಚಿಸುತ್ತಾ ಉಬ್ಬಿರುವುದರಿಂದ ಅವನು ಪರಮ ದೇವೋತ್ತಮ ಪುರುಷನಿಗೆ ಶರಣಾಗುವುದು ಬಹು ಕಷ್ಟ. ನಿಜ ಜ್ಞಾನ ಸಾಧನೆಯಿಂದ ಭೌತಿಕ ಪ್ರಕೃತಿಗೆ ತಾನು ಸ್ವಾಮಿಯಲ್ಲ, ಆದರೆ ಪರಮ ದೇವೋತ್ತಮ ಪುರುಷನು ಸ್ವಾಮಿ ಎಂದು ಒಬ್ಬನು ತಿಳಿದುಕೊಳ್ಳಬೇಕು. ಒಬ್ಬನು ಗರ್ವದಿಂದುಂಟಾದ ಭ್ರಮಾಮುಕ್ತನಾದಾಗ, ಅವನು ಶರಣಾಗತಿಯ ಪ್ರಕ್ರಿಯೆಯನ್ನು ಪ್ರಾರಂಭಿಸಬಹುದು. ಈ ಭೌತಿಕ ಜಗತ್ತಿನಲ್ಲಿ ಸದಾ ಯಾವುದೋ ಮರ್ಯಾದೆಯನ್ನು ನಿರೀಕ್ಷಿಸುವವನು ಪರಮ ಪುರುಷನಿಗೆ ಶರಣಾಗುವುದು ಅಸಂಭವ. ಅಹಂಕಾರವು ಮೋಹ ನಿಮಿತ್ತ, ಏಕೆಂದರೆ, ಒಬ್ಬನು ಇಲ್ಲಿಗೆ ಬಂದು, ಅಲ್ಪ ಕಾಲ ಇದ್ದು ಮತ್ತೆ ಹೊರಟು ಹೋಗುವವನು ಎಂದಾಗಿದ್ದರೂ, ತಾನು ಜಗತ್ಪತಿ ಎಂಬ ಮೂರ್ಖ ಕಲ್ಪನೆ ಹೊಂದಿರುತ್ತಾನೆ. ಹೀಗೆ ಎಲ್ಲವನ್ನು ತೊಡಕುಗೊಳಿಸುತ್ತಾನೆ ಮತ್ತು ಸದಾ ಕಷ್ಟದಲ್ಲಿರುತ್ತಾನೆ. ಇಡೀ ಜಗತ್ತು ಈ ಭಾವನೆಯಲ್ಲಿಯೇ ಚಲಿಸುತ್ತದೆ. ಈ ಭೂಮಿ, ಈ ಪೃಥ್ವಿ, ಮಾನವನಿಗೆ ಸೇರಿದ್ದು ಎಂದು ಜನ ಭಾವಿಸುತ್ತಾರೆ, ಮತ್ತು ತಾವೇ ಇದರ ಯಜಮಾನರೆಂಬ ಮಿಥ್ಯಾ ಕಲ್ಪನೆಯಿಂದ ಭೂಮಿಯನ್ನು ವಿಭಾಗಿಸಿದ್ದಾರೆ. ಮಾನವ ಸಮಾಜವು ಜಗತ್ತಿನ ಒಡೆಯ ಎಂಬ ಈ ಮಿಥ್ಯಾ ಕಲ್ಪನೆಯಿಂದ ಒಬ್ಬನು ಹೊರಬರಬೇಕು. ಈ ಮಿಥ್ಯಾ ಕಲ್ಪನೆಯಿಂದ ಒಬ್ಬನು ಮುಕ್ತನಾದಾಗ, ಒಬ್ಬನು ಕೌಟುಂಬಿಕ, ಸಾಮಾಜಿಕ, ಮತ್ತು ರಾಷ್ಟ್ರೀಯ ಮೋಹಗಳಿಂದ ಉಂಟಾದ ಮಿಥ್ಯಾ ಸಂಗಗಳಿಂದ ಮುಕ್ತನಾಗುತ್ತಾನೆ. ಈ ಮಿಥ್ಯಾ ಸಂಗಗಳು ಒಬ್ಬನನ್ನು ಈ ಭೌತಿಕ ಜಗತ್ತಿಗೆ ಬಂಧಿಸುತ್ತವೆ. ಈ ಹಂತದ ತರುವಾಯ, ಒಬ್ಬನು ಅಧ್ಯಾತ್ಮ ಜ್ಞಾನ ಬೆಳೆಸಿಕೊಳ್ಳಬೇಕು. ನಿಜವಾಗಿ ಯಾವುದು ತನ್ನದು ಮತ್ತು ಯಾವುದು ವಾಸ್ತವಿಕವಾಗಿ ತನ್ನದಲ್ಲ ಎಂಬ ಜ್ಞಾನವನ್ನು ಒಬ್ಬನು ಸಾಧಿಸಬೇಕು. ಒಬ್ಬನು ವಸ್ತುಗಳ ಯಥಾರ್ಥ ಅರಿವನ್ನು ಹೊಂದಿದಾಗ, ಅವನು ಸುಖದುಃಖಗಳಂಥ, ನಲಿವು ನೋವುಗಳಂಥ ಎಲ್ಲ ದ್ವಂದ್ವ ಕಲ್ಪನೆಗಳಿಂದ ಮುಕ್ತನಾಗುತ್ತಾನೆ. ಅವನು ಪೂರ್ಣ ಜ್ಞಾನಿಯಾಗುತ್ತಾನೆ; ಆಗ ಅವನು ಪರಮ ದೇವೋತ್ತಮ ಪುರುಷನಿಗೆ ಶರಣಾಗುವುದು ಸಾಧ್ಯ.

**ನ ತದ್ ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।**
**ಯದ್ ಗತ್ವಾ ನ ನಿವರ್ತನ್ತೇ ತದ್ಧಾಮ ಪರಮಂ ಮಮ ॥ ೬ ॥**

ನ—ಇಲ್ಲ, ತತ್—ಅದು, ಭಾಸಯತೇ—ಪ್ರಕಾಶಿಸುವುದು, ಸೂರ್ಯಃ—ಸೂರ್ಯನು, ನ—ಅಥವಾ, ಶಶಾಂಕಃ—ಚಂದ್ರನು, ನ—ಅಥವಾ, ಪಾವಕಃ—ಅಗ್ನಿ, ವಿದ್ಯುಚ್ಛಕ್ತಿ, ಯತ್—ಎಲ್ಲಿ, ಗತ್ವಾ—ಹೋಗಿ, ನ—ಎಂದಿಗೂ ಇಲ್ಲ, ನಿವರ್ತನ್ತೇ—

ಮರಳಿ ಬರುವುದು, ತತ್ ಧಾಮ—ಆ ಧಾಮವು, ಪರಮಮ್—ಪರಮ, ಮಮ—ನನ್ನದು.

**ಆ ನನ್ನ ಪರಮಧಾಮವು ಸೂರ್ಯ ಅಥವಾ ಚಂದ್ರ ಅಥವಾ ಅಗ್ನಿ ಅಥವಾ ವಿದ್ಯುತ್ತಿನಿಂದ ಬೆಳಗುವುದಿಲ್ಲ. ಅಲ್ಲಿಗೆ ಹೋದವರು ಮತ್ತೆ ಈ ಭೌತಿಕ ಜಗತ್ತಿಗೆ ಮರಳುವುದಿಲ್ಲ.**

**ಭಾವಾರ್ಥ :** ಕೃಷ್ಣಲೋಕ, ಗೋಲೋಕ ವೃಂದಾವನ ಎಂಬ—ಆಧ್ಯಾತ್ಮ ಲೋಕವು, ಪರಮ ದೇವೋತ್ತಮ ಪುರುಷ, ಕೃಷ್ಣನ ಧಾಮವು ಇಲ್ಲಿ ವರ್ಣಿತ. ಪರವ್ಯೋಮದಲ್ಲಿ ಸೂರ್ಯ ಪ್ರಕಾಶ, ಚಂದ್ರ ಪ್ರಭೆ, ಅಗ್ನಿ ಅಥವಾ ವಿದ್ಯುತ್ತಿನ ಬೆಳಕಿನ ಅಗತ್ಯವಿಲ್ಲ, ಏಕೆಂದರೆ ಎಲ್ಲ ಲೋಕಗಳೂ ಸ್ವಯಂ ಪ್ರಕಾಶಿತ. ಈ ನಮ್ಮ ಬ್ರಹ್ಮಾಂಡದಲ್ಲಿ ಸ್ವಯಂ ಪ್ರಕಾಶವಿರುವ ಒಂದೇ ಗ್ರಹ, ಸೂರ್ಯ, ಹೊಂದಿದ್ದೇವೆ, ಆದರೆ ಪರವ್ಯೋಮದ ಎಲ್ಲ ಗ್ರಹಗಳು ಸ್ವಯಂ ಪ್ರಕಾಶಿತ. ಎಲ್ಲ ಗ್ರಹಗಳ (ವೈಕುಂಠ ಲೋಕಗಳೆಂಬ) ಹೊಳೆಯುವ ಪ್ರಕಾಶವು **ಬ್ರಹ್ಮಜ್ಯೋತಿ** ಎಂಬ ಜ್ಯೋತಿರ್ ಆಕಾಶವಾಗಿದೆ. ವಾಸ್ತವಿಕವಾಗಿ ಆ ಪ್ರಕಾಶವು ಗೋಲೋಕ ವೃಂದಾವನ, ಕೃಷ್ಣಲೋಕದಿಂದ ಉದ್ಭೂತ. ಆ ಬೆಳಗುವ ಪ್ರಕಾಶದ ಒಂದು ಭಾಗವು ಎಂದರೆ ಭೌತಿಕ ಜಗತ್ ಆಗಿರುವ ಮಹತ್ ತತ್ವದಿಂದ ಆವೃತ. ಇದನ್ನು ಬಿಟ್ಟರೆ, ಆ ಜ್ಯೋತಿರ್ ಆಕಾಶದ ಹೆಚ್ಚಿನ ಭಾಗವು ಆಧ್ಯಾತ್ಮ ಲೋಕಗಳಿಂದ ತುಂಬಿದೆ, ಅವು ವೈಕುಂಠಗಳು ಎಂದು ಕರೆದಿದೆ, ಅವುಗಳಲ್ಲಿ ಗೋಲೋಕ ವೃಂದಾವನವು ಪ್ರಧಾನವಾದುದು.

ಜೀವಿಯು ಅಂಧಕಾರಮಯ ಈ ಭೌತಿಕ ಲೋಕದಲ್ಲಿ ಇರುವವರೆಗೆ, ಅವನು ಬದ್ಧ ಜೀವನದಲ್ಲಿರುತ್ತಾನೆ, ಮಿಥ್ಯಾತಿರೋಹಿತ ಈ ಭೌತಿಕ ಜಗತ್ತಿನ ವೃಕ್ಷವನ್ನು ಕಡಿದುಹಾಕಿ ಪರವ್ಯೋಮಕ್ಕೆ ಅವನು ತಲುಪಿದ ಕೂಡಲೇ, ಅವನು ಮುಕ್ತನಾಗುತ್ತಾನೆ. ಆಮೇಲೆ ಅವನು ಇಲ್ಲಿಗೆ ಮರಳಲು ಅವಕಾಶವಿಲ್ಲ. ಈ ಬದ್ಧ ಜೀವನದಲ್ಲಿ ಜೀವಿಯು ತಾನು ಈ ಭೌತಿಕ ಜಗತ್ತಿನ ಒಡೆಯನೆಂದು ಭಾವಿಸುತ್ತಾನೆ, ಆದರೆ ಮುಕ್ತ ಸ್ಥಿತಿಯಲ್ಲಿ ಅವನು ಆಧ್ಯಾತ್ಮ ಸಾಮ್ರಾಜ್ಯವನ್ನು ಪ್ರವೇಶಿಸುತ್ತಾನೆ ಮತ್ತು ಪರಮ ಪ್ರಭುವಿನ ಸಂಗಿಯಾಗುತ್ತಾನೆ. ಅಲ್ಲಿ ಅವನು ನಿತ್ಯಾನಂದ, ಶಾಶ್ವತ ಜೀವನ, ಮತ್ತು ಪೂರ್ಣಜ್ಞಾನವನ್ನು ಭೋಗಿಸುತ್ತಾನೆ.

ಈ ಸಮಾಚಾರದಿಂದ ಒಬ್ಬನು ಆಕರ್ಷಿತನಾಗಬೇಕು. ಆ ನಿತ್ಯ ಲೋಕಕ್ಕೆ ತನ್ನನ್ನು ವರ್ಗಾಯಿಸಿಕೊಳ್ಳಲು ಮತ್ತು ಈ ಸತ್ಯಾಭಾಸದಿಂದ ತನ್ನನ್ನು ಬಿಡಿಸಿಕೊಳ್ಳಲು ಇಚ್ಛಿಸಬೇಕು. ಈ ಭೌತಿಕ ಜಗತ್ತಿನಲ್ಲಿ ಅತಿ ಸಂಗ ಹೊಂದಿದವನಿಗೆ, ಆ ಸಂಗವನ್ನು ಕಡಿದು ಹಾಕುವುದು ಬಹು ಕಷ್ಟ, ಆದರೆ ಅವನು ಕೃಷ್ಣ ಪ್ರಜ್ಞೆಯನ್ನು ಸ್ವೀಕರಿಸಿದರೆ, ಕ್ರಮೇಣ ನಿಸ್ಸಂಗಿಯಾಗುವ ಅವಕಾಶ ಉಂಟು. ಒಬ್ಬನು ಕೃಷ್ಣಪ್ರಜ್ಞೆಗಳಾದ ಭಕ್ತರೊಂದಿಗೆ ಸಂಗ ಮಾಡಬೇಕು. ಕೃಷ್ಣ ಪ್ರಜ್ಞೆಗೆ ಅರ್ಪಿತವಾದ ಸಂಗವನ್ನು ಹುಡುಕಿಕೊಳ್ಳಬೇಕು ಮತ್ತು ಭಕ್ತಿಯುತ ಸೇವೆ ಹೇಗೆ ಮಾಡಬೇಕೆಂಬುದನ್ನು ಕಲಿತುಕೊಳ್ಳಬೇಕು. ಈ ರೀತಿ

ಯಲ್ಲಿ ಅವನು ಭೌತಿಕ ಜಗತ್ತಿನ ತನ್ನ ಆಸಕ್ತಿಯನ್ನು ಕಡಿದುಕೊಳ್ಳಬಹುದು. ಕೇವಲ ಕಾವಿಬಟ್ಟೆ ಧರಿಸಿ ಒಬ್ಬನು ಭೌತಿಕ ಜಗತ್ತಿನ ಆಕರ್ಷಣೆಯಿಂದ ಸಂಗರಹಿತನಾಗಲಾರನು. ಅವನು ಭಗವತ್ ಭಕ್ತಿಯುತ ಸೇವಾ ರತಿ ಹೊಂದಬೇಕು. ಆದ್ದರಿಂದ ಹನ್ನೆರಡನೆಯ ಅಧ್ಯಾಯದಲ್ಲಿ ವರ್ಣಿಸಿದ ಭಕ್ತಿಯುತ ಸೇವೆಯು ನಿಜ ವೃಕ್ಷದ ಈ ಆಭಾಸದಿಂದ ಹೊರ ಬರಲು ಏಕೈಕ ಮಾರ್ಗ ಎಂಬುದನ್ನು ಒಬ್ಬನು ಬಹು ಗಂಭೀರವಾಗಿ ಗ್ರಹಿಸಬೇಕು. ಹದಿನಾಲ್ಕನೆಯ ಅಧ್ಯಾಯದಲ್ಲಿ ಭೌತಿಕ ಪ್ರಕೃತಿಯ ಎಲ್ಲ ಬಗೆಯ ಪ್ರಕ್ರಿಯೆಗಳು ಕಲುಷಿತವಾಗುವುದನ್ನು ವರ್ಣಿಸಿದೆ. ಭಕ್ತಿಯುತ ಸೇವೆಯು ಮಾತ್ರ ಶುದ್ಧವಾಗಿ ದಿವ್ಯ ವಾದುದು ಎಂದು ವರ್ಣಿಸಿದೆ. **ಪರಮಂ ಮಮ** ಪದಗಳು ಇಲ್ಲಿ ಬಹು ಮುಖ್ಯ ವಾದುವು, ವಾಸ್ತವಿಕವಾಗಿ ಮೂಲೆ ಮೂಲೆಯು ಕೂಡ ಪರಮ ಪ್ರಭುವಿನ ಸ್ವತ್ತು. ಆದರೆ ಆಧ್ಯಾತ್ಮ ಜಗತ್ತು ಪರಮಮ್, ಷಡೈಶ್ವರ್ಯ ಪೂರ್ಣವಾದುದು. ಆಧ್ಯಾತ್ಮ ಜಗತ್ತಿನಲ್ಲಿ ಸೂರ್ಯ ಚಂದ್ರರ, ಅಥವಾ ನಕ್ಷತ್ರಗಳ ಬೆಳಕಿನ ಅಗತ್ಯವಿಲ್ಲ ಎಂದು ಕಠ ಉಪನಿಷತ್ತು ಕೂಡ ದೃಢಪಡಿಸುತ್ತದೆ. (2.2.51) (**ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕವ್**) ಏಕೆಂದರೆ ಇಡೀ ಪರವ್ಯೋಮವು ಪರಮ ಪ್ರಭುವಿನ ಅಂಥ ಪ್ರಭೆ ಯಿಂದ ಪ್ರಕಾಶಿತ. ಆ ಪರಮ ಧಾಮವನ್ನು ಶರಣಾಗತಿಯಿಂದ ಮಾತ್ರ ಹೊಂದ ಬಹುದು, ಅನ್ಯ ಮಾರ್ಗಗಳಿಂದ ಅಲ್ಲ.

**ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ ।**
**ಮನಃಷಷ್ಠಾನೀನ್ದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ॥ ೭ ॥**

ಮಮ—ನನ್ನ, ಏವ—ಖಂಡಿತವಾಗಿ, ಅಂಶಃ—ಅಂಶಭಾಗನು, ಜೀವಲೋಕೇ—ಬದ್ಧಜೀವನದ ಜಗತ್ತಿನಲ್ಲಿ, ಜೀವ-ಭೂತಃ—ಬದ್ಧ ಜೀವಿಯು, ಸನಾತನಃ—ಸನಾತನನು, ಮನಃ—ಮನಸ್ಸಿನೊಡನೆ, ಷಷ್ಠಾನಿ—ಆರು, ಇನ್ದ್ರಿಯಾಣಿ—ಇಂದ್ರಿಯಗಳನ್ನು, ಪ್ರಕೃತಿ—ಭೌತಿಕ ಪ್ರಕೃತಿಯಲ್ಲಿ, ಸ್ಥಾನಿ—ಸನ್ನಿವೇಶಿತ, ಕರ್ಷತಿ—ಹೋರಾಡುತ್ತಿದ್ದಾನೆ.

**ಈ ಬದ್ಧ ಜಗತ್ತಿನಲ್ಲಿ ಜೀವಿಗಳು ನನ್ನ ಸನಾತನ ಅಂಶ ಭಾಗಗಳು. ಬದ್ಧ ಜೀವನ ನಿಮಿತ್ತ ಅವರು, ಮನಸ್ಸೂ ಸೇರಿ ಆರು ಇಂದ್ರಿಯಗಳೊಡನೆ ಬಹಳ ಹೋರಾಡುತ್ತಿದ್ದಾರೆ.**

**ಭಾವಾರ್ಥ :** ಈ ಶ್ಲೋಕದಲ್ಲಿ ಜೀವಿಯ ವ್ಯಕ್ತಿತ್ವವು ಸ್ಪಷ್ಟವಾಗಿ ನೀಡಲ್ಪಟ್ಟಿದೆ. ಜೀವಿಯು ಶಾಶ್ವತವಾಗಿ ಪರಮ ಪ್ರಭುವಿನ ವಿಭಿನ್ನಾಂಶ ಭಾಗನು. ಅವನು ತನ್ನ ಬದ್ಧ ಜೀವನದಲ್ಲಿ ವ್ಯಕ್ತಿತ್ವವನ್ನು ಹೊಂದುತ್ತಾನೆ ಮತ್ತು ತನ್ನ ಮುಕ್ತ ಸ್ಥಿತಿಯಲ್ಲಿ ಪರಮ ಪ್ರಭುವಿನೊಂದಿಗೆ ಒಂದಾಗುತ್ತಾನೆ ಎಂಬುದಿಲ್ಲ. ಅವನು ಶಾಶ್ವತ ಅಂಶನು. **ಸನಾತನಃ** ಎಂದು ಸ್ಪಷ್ಟವಾಗಿ ಹೇಳಿದೆ. ವೇದ ವರ್ಣನಾನುಸಾರ ಪರಮ ಪ್ರಭುವು ತನ್ನನ್ನು ಅಸಂಖ್ಯ ವಿಸ್ತರಣೆಗಳಲ್ಲಿ ವ್ಯಕ್ತಗೊಳಿಸಿ ವಿಸ್ತರಿಸುತ್ತಾನೆ, ಅವುಗಳಲ್ಲಿ ವಿಷ್ಣು-ತತ್ತ್ವವು ಪ್ರಧಾನ ವಿಸ್ತರಣೆಗಳು ಮತ್ತು ಜೀವಿಗಳು ಗೌಣ ವಿಸ್ತರಣೆಗಳು ಎಂದು ಕರೆದಿದೆ.

ಅರ್ಥಾತ್ ವಿಷ್ಣು ತತ್ತ್ವವು ಸ್ವಾಂಶ ವಿಸ್ತರಣೆ ಮತ್ತು ಜೀವಿಗಳು ಪೃಥಕ್ ವಿಸ್ತರಣೆಗಳು. ತನ್ನ ಸ್ವಾಂಶ ವಿಸ್ತರಣೆಯಿಂದ ಅವನು ರಾಮ, ನೃಸಿಂಹದೇವ, ವಿಷ್ಣುಮೂರ್ತಿ ಮತ್ತು ವೈಕುಂಠ ಲೋಕಗಳ ಎಲ್ಲ ಪ್ರಧಾನ ಮೂರ್ತಿಗಳಾಗಿ ನಾನಾ ರೂಪಗಳಲ್ಲಿ ಅಭಿವ್ಯಕ್ತನು. ಪೃಥಕ್ ವಿಸ್ತರಣೆಗಳಾದ ಜೀವಿಗಳು ನಿತ್ಯ ಸೇವಕರು. ಪರಮ ದೇವೋತ್ತಮ ಪುರುಷನ ವೈಯಕ್ತಿಕ ವಿಸ್ತರಣೆಗಳು, ದೇವೋತ್ತಮನ ವ್ಯಕ್ತಿಗತ ಗುರ್ತುಗಳು ಸದಾಸನ್ನಿಹಿತ. ಅದೇ ಪ್ರಕಾರ ಪೃಥಕ್ ವಿಸ್ತರಣೆಗಳಾದ ಜೀವಿಗಳು ತಮ್ಮ ವ್ಯಕ್ತಿತ್ವಗಳನ್ನು ಹೊಂದಿದ್ದಾರೆ. ಪರಮ ಪ್ರಭುವಿನ ವಿಭಿನ್ನಾಂಶ ಭಾಗಗಳಾಗಿ ಜೀವಿಗಳು ಕೂಡ ಅವನ ಗುಣಗಳ ಅಂಶ ಭಾಗಗಳನ್ನು ಹೊಂದಿರುತ್ತಾರೆ. ಅವುಗಳಲ್ಲಿ ಸ್ವಾತಂತ್ರ್ಯವು ಒಂದು. ಪ್ರತಿಯೊಬ್ಬ ಜೀವಿಯು, ವ್ಯಕ್ತಿಗತ ಆತ್ಮನಾಗಿ, ತನ್ನ ಸ್ವಂತ ವ್ಯಕ್ತಿತ್ವವನ್ನು ಮತ್ತು ಒಂದು ಸೂಕ್ಷ್ಮ ರೂಪದ ಸ್ವಾತಂತ್ರ್ಯವನ್ನು ಹೊಂದಿದ್ದಾನೆ. ಆ ಸ್ವಾತಂತ್ರ್ಯದ ದುರುಪಯೋಗದಿಂದ ಒಬ್ಬನು ಬದ್ಧಾತ್ಮನಾಗುತ್ತಾನೆ, ಮತ್ತು ಸ್ವಾತಂತ್ರ್ಯದ ಸದುಪಯೋಗದಿಂದ ಸದಾ ಮುಕ್ತನು. ಉಭಯ ಸಂದರ್ಭಗಳಲ್ಲಿ ಜೀವನು ಪರಮ ಪ್ರಭುವಿನ ಹಾಗೆ ಗುಣಾತ್ಮಕ ವಾಗಿ ನಿತ್ಯನು. ಮೋಕ್ಷ ಸ್ಥಿತಿಯಲ್ಲಿ ಅವನು ಈ ಭೌತಿಕ ಸ್ಥಿತಿಯಿಂದ ಮುಕ್ತನು, ಮತ್ತು ಭಗವಂತನ ದಿವ್ಯ ಸೇವಾ ನಿರತನು; ಬದ್ಧ ಜೀವನದಲ್ಲಿ ಭೌತಿಕ ಪ್ರಕೃತಿ ಗುಣಗಳ ಆಧಿ ಪತ್ಯಕ್ಕೆ ಒಳಗಾಗಿರುತ್ತಾನೆ, ಮತ್ತು ಭಗವಂತನ ದಿವ್ಯ ಪ್ರೀತಿಯುತ ಸೇವೆಯನ್ನು ಮರೆಯುತ್ತಾನೆ. ಪರಿಣಾಮವಾಗಿ, ಭೌತಿಕ ಜಗತ್ತಿನಲ್ಲಿ ತನ್ನ ಅಸ್ತಿತ್ವವನ್ನು ಕಾಪಾಡಿ ಕೊಳ್ಳಲು ಅವನು ಬಹಳಷ್ಟು ಹೋರಾಡಬೇಕಾಗುತ್ತದೆ.

ಮಾನವರು ಮತ್ತು ಬೆಕ್ಕು ನಾಯಿಗಳು ಜೀವಿಗಳಷ್ಟೇ ಅಲ್ಲದೆ, ಭೌತಿಕ ಜಗತ್ತಿನ ಮಹಾ ನಿಯಂತ್ರಕರಾದ ಬ್ರಹ್ಮ, ಶಿವ ಮತ್ತು ವಿಷ್ಣು ಕೂಡ ಪರಮಪ್ರಭುವಿನ ಅಂಶರು. ಅವರೆಲ್ಲಾ ನಿತ್ಯರು, ತಾತ್ಕಾಲಿಕ ಉದ್ಭೂತಿಗಳಲ್ಲ. **ಕರ್ಷತಿ** ("ಹೋರಾಡುವ" ಅಥವಾ "ಹೆಣಗುವ") ಪದವು ಬಹು ಮಹತ್ವದ್ದು. ಬದ್ಧ ಆತ್ಮನು ಲೋಹದ ಸರಪಣಿಗಳಲ್ಲಿ ಬಂಧಿತನೋ ಎಂಬಂತೆ ಕಟ್ಟಲ್ಪಟ್ಟಿದ್ದಾನೆ. ಅವನು ಮಿಥ್ಯಾಹಂಕಾರದಿಂದ ಬಂಧಿತನು ಮತ್ತು ಮನಸ್ಸು ಅವನನ್ನು ಈ ಭೌತಿಕ ಅಸ್ತಿತ್ವದಲ್ಲಿ ಚಲಿಸುವಂತೆ ಮಾಡುವ ಮುಖ್ಯ ಸಾಧನ. ಮನಸ್ಸು ಸತ್ತ್ವ ಗುಣದಲ್ಲಿದ್ದಾಗ ಕ್ರಿಯೆಗಳು ಒಳ್ಳೆಯವು ; ಮನಸ್ಸು ರಜೋ ಗುಣದಲ್ಲಿದ್ದಾಗ, ಅವನ ಕ್ರಿಯೆಗಳು ತ್ರಾಸದಾಯಕ; ಮತ್ತು ಮನಸ್ಸು ತಮೋ ಗುಣದಲ್ಲಿದ್ದಾಗ ಅವನು ಅಧಮ ಜೀವಯೋನಿಗಳಲ್ಲಿ ಚಲಿಸು ವನು. ಬದ್ಧಾತ್ಮನು ಭೌತಿಕದೇಹ ಮನಸ್ಸು ಮತ್ತು ಇಂದ್ರಿಯಗಳಿಂದ ಆವೃತನು, ಮತ್ತು ಅವನು ಮುಕ್ತನಾದಾಗ ಈ ಭೌತಿಕ ಆವರಣವು ನಷ್ಟವಾಗುತ್ತದೆ, ಆದರೆ ಅವನ ಆಧ್ಯಾತ್ಮ ದೇಹವು ತನ್ನ ವ್ಯಕ್ತಿಗತ ಸಾಮರ್ಥ್ಯದಲ್ಲಿ ಪ್ರಕಟವಾಗುತ್ತದೆ ಎಂಬುದು ಈ ಶ್ಲೋಕದಲ್ಲಿ ಸ್ಪಷ್ಟ. **ಮಾಧ್ಯಂದಿನಾಯನ-ಶ್ರುತಿಯಲ್ಲಿ** ಈ ಕೆಳಗಿನ ವಿಷಯವಿದೆ : **ಸ ವಾ ಏಷ ಬ್ರಹ್ಮನಿಷ್ಠ ಇದಂ ಶರೀರಂ ಮರ್ತ್ಯಮ್ ಅತಿಸೃಜ್ಯ ಬ್ರಹ್ಮಾಭಿಸಂಪದ್ಯ ಬ್ರಹ್ಮಣಾ ಪಶ್ಯತಿ ಬ್ರಹ್ಮಣಾ ಶೃಣೋತಿ ಬ್ರಹ್ಮಣೈವೇದಂ ಸರ್ವಮ್ ಅನುಭವತಿ.** ಜೀವಿಯು ಭೌತಿಕ ದೇಹಗತನಾಗಿರುವುದನ್ನು ತ್ಯಜಿಸಿ ಆಧ್ಯಾತ್ಮ ಜಗತ್ತನ್ನು ಪ್ರವೇಶಿಸಿ

ದಾಗ, ಅವನು ತನ್ನ ಅಧ್ಯಾತ್ಮ ದೇಹವನ್ನು ಮತ್ತೆ ಪಡೆದುಕೊಳ್ಳುತ್ತಾನೆ ಮತ್ತು ಆ ಆಧ್ಯಾತ್ಮ ದೇಹದಲ್ಲಿ ಪರಮ ದೇವೋತ್ತಮ ಪುರುಷನನ್ನು ಸಮ್ಮುಖವಾಗಿ ಕಾಣಬಲ್ಲನು. ಅವನ ಸಮಕ್ಷವೇ ಶ್ರವಣ ಮಾಡಬಲ್ಲನು ಮತ್ತು ಮಾತಾಡಬಲ್ಲನು ಮತ್ತು ಪರಮ ಪುರುಷನನ್ನು ಯಥಾರೂಪ ಅರಿತುಕೊಳ್ಳಬಹುದು. ಇದು ಸ್ಮೃತಿಯಿಂದಲೇ ತಿಳಿದು ಬಂದಿದೆ. **ವಸನ್ತಿ ಯತ್ರ ಪುರುಷಾಃ ಸರ್ವೇ ವೈಕುಂಠ-ಮೂರ್ತಯಃ** ಅಧ್ಯಾತ್ಮ ಲೋಕಗಳಲ್ಲಿ ಪ್ರತಿಯೊಬ್ಬನು ಪರಮ ದೇವೋತ್ತಮ ಪುರುಷ ಸದೃಶ ದೇಹಗಳಲ್ಲಿರು ತ್ತಾನೆ. ದೇಹ ರಚನೆಯ ಮಟ್ಟಿಗೆ ವಿಭಿನ್ನಾಂಶರಾದ ಜೀವರು ಮತ್ತು ವಿಷ್ಣುಮೂರ್ತಿಯ ವಿಸ್ತರಣೆಗಳಲ್ಲಿ ಯಾವ ವ್ಯತ್ಯಾಸವೂ ಇರುವುದಿಲ್ಲ. ಅರ್ಥಾತ್ ಮೋಕ್ಷದಲ್ಲಿ ಜೀವಿಯು ಪರಮ ದೇವೋತ್ತಮ ಪುರುಷನ ಅನುಗ್ರಹದಿಂದ ಅಧ್ಯಾತ್ಮ ದೇಹವನ್ನು ಪಡೆಯುತ್ತಾನೆ.

**ಮಮೈವಾಂಶಃ** ("ಪರಮ ಪ್ರಭುವಿನ ವಿಭಿನ್ನಾಂಶ ಭಾಗಗಳು")ಎಂಬ ಪದಗಳು ಕೂಡ ಬಹು ಮುಖ್ಯವಾದವು. ಪರಮ ಪ್ರಭುವಿನ ಭಾಗಾಂಶವು ಯಾವುದೋ ಒಡೆದ ಭೌತಿಕ ಪದಾರ್ಥದ ಚೂರಿನಂತಲ್ಲ. ಚೇತನವನ್ನು ತುಂಡು ತುಂಡಾಗಿ ಮಾಡುವುದು ಸಾಧ್ಯವಿಲ್ಲ ಎಂಬುದನ್ನು ಈಗಾಗಲೇ ಎರಡನೆಯ ಅಧ್ಯಾಯದಲ್ಲಿ ಅರಿತಿದ್ದೇವೆ. ಈ ಭಾಗವು ಭೌತಿಕ ವಾಗಿ ರೂಪಿತವಲ್ಲ. ಅದು ತುಂಡು ತುಂಡು ಮಾಡಿ ಮತ್ತೆ ಜೋಡಿಸಬಹುದಾದ ಜಡ ದಂತೆ ಅಲ್ಲ. ಆ ಕಲ್ಪನೆಯು ಇಲ್ಲಿ ಅನ್ವಯಿಸುವುದಿಲ್ಲ, ಏಕೆಂದರೆ ಸಂಸ್ಕೃತ ಪದ **ಸನಾತನ** ಇಲ್ಲಿ ಉಪಯೋಗಿಸಲ್ಪಟ್ಟಿದೆ. ಈ ಅಂಶ ಭಾಗವು ಶಾಶ್ವತವಾದುದು. ಪ್ರತಿಯೊಬ್ಬ ವ್ಯಕ್ತಿಯ ದೇಹದಲ್ಲಿ ಪರಮ ಪ್ರಭುವಿನ ಅಂಶ ಭಾಗವು ಇದೆ ಎಂದು ಎರಡನೆಯ ಅಧ್ಯಾಯದ ಪ್ರಾರಂಭದಲ್ಲಿ ಕೂಡ ಹೇಳಿದೆ **(ದೇಹಿನೋಽಸ್ಮಿನ್ ಯಥಾ ದೇಹೇ).** ಆ ಅಂಶಭಾಗವು ದೇಹ ಬಂಧನದಿಂದ ಮುಕ್ತವಾದಾಗ, ಅಧ್ಯಾತ್ಮ ಲೋಕದಲ್ಲಿ ಪರವ್ಯೋಮ ದಲ್ಲಿ ತನ್ನ ಮೂಲ ಆಧ್ಯಾತ್ಮಿಕ ದೇಹವನ್ನು ಮತ್ತೆ ಪಡೆದುಕೊಳ್ಳುತ್ತದೆ ಮತ್ತು ಪರಮ ಪ್ರಭುವಿನೊಂದಿಗೆ ಸಂಗವನ್ನು ಭೋಗಿಸುತ್ತದೆ. ಆದರೆ, ಸುವರ್ಣದ ವಿಭಿನ್ನಾಂಶಗಳು ಸುವರ್ಣವೇ ಆಗಿರುವಂತೆ ಪರಮ ಪ್ರಭುವಿನ ವಿಭಿನ್ನಾಂಶ ಭಾಗವಾದ ಜೀವನು ಭಗವಂತ ನೊಂದಿಗೆ ಗುಣಾತ್ಮಕವಾಗಿ ಒಂದೇ ಎಂದು ಇಲ್ಲಿ ತಿಳಿಯಲಾಗಿದೆ.

**ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ ।**
**ಗೃಹೀತ್ವೈತಾನಿ ಸಂಯಾತಿ ವಾಯುರ್ಗನ್ಧಾನಿವಾಶಯಾತ್ ॥೮॥**

ಶರೀರಂ—ದೇಹವನ್ನು, ಯತ್—ಹೇಗೆ, ಅವಾಪ್ನೋತಿ—ಪಡೆಯುತ್ತಾನೆ, ಯತ್—ಹೇಗೆ, ಚ ಅಪಿ—ಕೂಡ, ಉತ್ಕ್ರಾಮತಿ—ತ್ಯಜಿಸುತ್ತಾನೆ, ಈಶ್ವರಃ—ದೇಹದ ಯಜ ಮಾನನು, ಗೃಹೀತ್ವಾ—ಧರಿಸಿ, ಏತಾನಿ— ಈ ಎಲ್ಲ, ಸಂಯಾತಿ—ಹೊರಟು ಹೋಗು ತ್ತಾನೆ, ವಾಯುಃ—ವಾಯು, ಗನ್ಧಾನ್—ವಾಸನೆಗಳನ್ನು, ಇವ—ಹಾಗೆ, ಆಶಯಾತ್ —ಅವುಗಳ ಆಕರದಿಂದ.

**ಗಾಳಿಯು ಗಂಧಗಳನ್ನು ಹೊತ್ತು ಸಾಗುವಂತೆ ಜೀವಿಯು ಈ ಭೌತಿಕ ಜಗತ್ತಿ ನಲ್ಲಿ ಜೀವನದ ತನ್ನ ಭಿನ್ನಭಿನ್ನ ಕಲ್ಪನೆಗಳನ್ನು ದೇಹದಿಂದ ದೇಹಕ್ಕೆ ಕೊಂಡೊಯ್ಯು**

**ತ್ತಾನೆ. ಹೀಗೆ ಅವನು ಒಂದು ಬಗೆಯ ದೇಹ ಪಡೆಯುತ್ತಾನೆ, ಮತ್ತೆ ಇನ್ನೊಂದನ್ನು ಪಡೆಯಲು ಅದನ್ನು ತ್ಯಜಿಸುತ್ತಾನೆ.**

**ಭಾವಾರ್ಥ :** ಇಲ್ಲಿ ಜೀವಿಯು **ಈಶ್ವರ,** ತನ್ನ ದೇಹದ ನಿಯಂತ್ರಕನು ಎಂದು ವರ್ಣಿಸಿದೆ. ಅವನು ಇಷ್ಟಪಟ್ಟರೆ ತನ್ನ ದೇಹವನ್ನು ಉತ್ತಮ ಶ್ರೇಣಿಯದನ್ನಾಗಿ ಬದಲಾಯಿಸಿಕೊಳ್ಳಬಹುದು, ಮತ್ತು ಇಚ್ಛೆಪಟ್ಟರೆ ಅಧಮ ಯೋನಿಗಳಿಗೂ ಹೋಗ ಬಹುದು. ಸೂಕ್ಷ್ಮ ಸ್ವಾತಂತ್ರ್ಯವು ಇದೆ. ಅವನ ದೇಹವು ಹೊಂದುವ ಬದಲಾವಣೆ ಗಳು ಅವನನ್ನು ಅವಲಂಬಿಸಿವೆ. ಮರಣಕಾಲದಲ್ಲಿ, ಅವನು ಸೃಷ್ಟಿಸಿಕೊಂಡಿರುವ ಪ್ರಜ್ಞೆಯು ಅವನನ್ನು ಮುಂದಿನ ಮಾದರಿಯ ದೇಹಕ್ಕೆ ಸಾಗಿಸುತ್ತದೆ. ಅವನು ಬೆಕ್ಕು ನಾಯಿಗಳಂಥ ಪ್ರಜ್ಞೆಗಳನ್ನು ಸೃಷ್ಟಿಸಿಕೊಂಡಿದ್ದರೆ, ಅವನು ಬೆಕ್ಕು ನಾಯಿಗಳ ದೇಹಕ್ಕೆ ಪರಿವರ್ತನೆ ಹೊಂದುವುದು ಖಂಡಿತ, ಮತ್ತು ಅವನು ತನ್ನ ಪ್ರಜ್ಞೆಯನ್ನು ದೈವೀಕ ಗುಣಗಳಲ್ಲಿ ಸ್ಥಿತಗೊಳಿಸಿದ್ದರೆ, ದೇವತಾರೂಪಕ್ಕೆ ಪರಿವರ್ತಿಸುತ್ತಾನೆ. ಮತ್ತು ಕೃಷ್ಣ ಪ್ರಜ್ಞೆಯಲ್ಲಿದ್ದರೆ, ಅವನು ಆಧ್ಯಾತ್ಮ ಲೋಕದಲ್ಲಿ ಕೃಷ್ಣಲೋಕಕ್ಕೆ ವರ್ಗಾಯಿತನಾಗಿ ಕೃಷ್ಣಸಂಗ ಮಾಡುತ್ತಾನೆ. ಈ ದೇಹ ನಾಶಾನಂತರ ಪ್ರತಿಯೊಂದೂ ನಾಶವಾಗುತ್ತದೆ ಎಂಬುದು ಮಿಥ್ಯಾವಾದ. ವ್ಯಕ್ತಿಗತ ಆತ್ಮನು ದೇಹದಿಂದ ದೇಹಕ್ಕೆ ಜನ್ಮಾಂತರ ಹೊಂದು ತ್ತಾನೆ, ಮತ್ತು ಅವನ ಈ ದೇಹ ಮತ್ತು ಈಗಿನ ಚಟುವಟಿಕೆಗಳು ಅವನ ಮುಂದಿನ ದೇಹಕ್ಕೆ ಹಿನ್ನೆಲೆ. ಒಬ್ಬನು **ಕರ್ಮಾನುಸಾರ** ಭಿನ್ನಭಿನ್ನ ದೇಹ ಹೊಂದುತ್ತಾನೆ, ಮತ್ತು ಕಾಲಾಂತರದಲ್ಲಿ ಅವನು ದೇಹವನ್ನು ತ್ಯಜಿಸಬೇಕು. ಮುಂದಿನ ದೇಹದ ಕಲ್ಪನೆಯನ್ನು ಹೊತ್ತುಸಾಗುವ ಸೂಕ್ಷ್ಮ ದೇಹವು ಮುಂದಿನ ಜನ್ಮದಲ್ಲಿ ಮತ್ತೊಂದು ದೇಹವನ್ನು ಬೆಳೆಸುತ್ತದೆ ಎಂದು ಇಲ್ಲಿ ಹೇಳಿದೆ. ದೇಹದಿಂದ ದೇಹಕ್ಕೆ ಈ ಜನ್ಮಾಂತರ ಪ್ರಕ್ರಿಯೆಯು ಮತ್ತು ದೇಹದಲ್ಲಿರುವಾಗ ಹೋರಾಟ ಇವು **ಕರ್ಷತಿ,** ಅಥವಾ ಅಸ್ತಿತ್ವದ ಹೋರಾಟ ಎಂದು ಕರೆದಿದೆ.

**ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।**
**ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥೯॥**

ಶ್ರೋತ್ರಮ್—ಕಿವಿಗಳು, ಚಕ್ಷುಃ—ಕಣ್ಣುಗಳು, ಸ್ಪರ್ಶನಮ್—ಸ್ಪರ್ಶವು, ಚ—ಕೂಡ, ರಸನಮ್—ನಾಲಿಗೆ, ಘ್ರಾಣಮ್—ಘ್ರಾಣಶಕ್ತಿ, ಏವ—ಕೂಡ, ಚ—ಮತ್ತು ಅಧಿಷ್ಠಾಯ—ಸನ್ನಿವೇಶಿತವಾಗಿ, ಮನಃ—ಮನಸ್ಸು, ಚ—ಕೂಡ, ಅಯಮ್—ಅವನು, ವಿಷಯಾನ್—ಇಂದ್ರಿಯ ವಿಷಯಗಳನ್ನು, ಉಪಸೇವತೇ—ಭೋಗಿಸುತ್ತಾನೆ.

**ಜೀವಿಯು, ಹೀಗೆ ಮತ್ತೊಂದು ಜಡ ದೇಹ ಪಡೆದು, ಮನಸ್ಸಿನೊಂದಿಗೆ ಸೇರಿ ರುವ ವಿಶಿಷ್ಟ ಮಾದರಿಯ ಕಿವಿ, ಕಣ್ಣು, ನಾಲಿಗೆ, ಮೂಗು, ಮತ್ತು ಸ್ಪರ್ಶೇಂದ್ರಿಯ ಗಳನ್ನು ಪಡೆಯುತ್ತಾನೆ. ಹೀಗೆ ಅವನು ವಿಶಿಷ್ಟ ಇಂದ್ರಿಯ ವಿಷಯಗಳನ್ನು ಭೋಗಿಸುತ್ತಾನೆ.**

**ಭಾವಾರ್ಥ :** ಅನ್ಯ ಪದಗಳಲ್ಲಿ, ಜೀವಿಯು ತನ್ನ ಪ್ರಜ್ಞೆಯನ್ನು ಬೆಕ್ಕು, ನಾಯಿಗಳ ಗುಣಗಳೊಂದಿಗೆ ಕಲಬೆರಕೆ ಮಾಡಿಕೊಂಡರೆ, ಮುಂದಿನ ಜನ್ಮದಲ್ಲಿ ಅವನು ಬೆಕ್ಕು ಅಥವಾ ನಾಯಿ ದೇಹ ಪಡೆದು ಭೋಗಿಸುತ್ತಾನೆ. ಮೂಲತಃ ಪ್ರಜ್ಞೆಯು ನೀರಿನಂತೆ ಶುದ್ಧ. ಆದರೆ ನಾವು ನೀರಿನಲ್ಲಿ ಏನೊಂದು ಬಣ್ಣವನ್ನು ಮಿಶ್ರ ಮಾಡಿದರೆ, ಅದು ಬದಲಾಗುತ್ತದೆ. ಅದೇ ಪ್ರಕಾರ ಪ್ರಜ್ಞೆಯು ಶುದ್ಧ. ಏಕೆಂದರೆ ಚೇತನಾತ್ಮನು ಶುದ್ಧ. ಆದರೆ ಪ್ರಜ್ಞೆಯು ಭೌತಿಕ ಗುಣ ಸಂಗದಿಂದ ಬದಲಾವಣೆಗೊಳ್ಳುತ್ತದೆ. ಕೃಷ್ಣಪ್ರಜ್ಞೆಯು ನಿಜ ಪ್ರಜ್ಞೆ. ಆದ್ದರಿಂದ, ಕೃಷ್ಣಪ್ರಜ್ಞೆಯಲ್ಲಿದ್ದಾಗ ಒಬ್ಬನು ಶುದ್ಧ ಜೀವನದಲ್ಲಿರುತ್ತಾನೆ. ಆದರೆ ಅವನ ಪ್ರಜ್ಞೆಯು ವಿಶಿಷ್ಟ ಭೌತಿಕ ಮನೋಭಾವದೊಂದಿಗೆ ಮಿಶ್ರವಾದರೆ, ಮುಂದಿನ ಜನ್ಮದಲ್ಲಿ ಅದಕ್ಕೆ ಅನುಗುಣವಾದ ದೇಹವನ್ನು ಪಡೆಯುತ್ತಾನೆ. ಅಂಥವನು ಮತ್ತೆ ಮಾನವ ದೇಹ ಪಡೆಯುವನೆಂದು ಹೇಳಲಾಗದು ; 8,400,000 ಜೀವಯೋನಿಗಳಿರುವುದರಿಂದ ಅವನು ಬೆಕ್ಕು, ನಾಯಿ, ಹಂದಿ, ದೇವತಾ ದೇಹಗಳನ್ನು ಅಥವಾ ಅನೇಕ ಇತರ ರೂಪಗಳಲ್ಲಿ ಒಂದನ್ನು ಪಡೆಯಬಹುದು.

**ಉತ್ಕ್ರಾಮನ್ತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಮ್ ।**
**ವಿಮೂಢಾ ನಾನುಪಶ್ಯನ್ತಿ ಪಶ್ಯನ್ತಿ ಜ್ಞಾನಚಕ್ಷುಷಃ ॥೧೦॥**

ಉತ್ಕ್ರಾಮನ್ತಮ್—ದೇಹ ಬಿಟ್ಟು, ಸ್ಥಿತಮ್—ದೇಹದಲ್ಲಿ ಸನ್ನಿವೇಶಿತನಾಗಿ, ವಾ ಅಪಿ—ಕೂಡ, ಭುಂಜಾನಮ್—ಭೋಗಿಸುತ್ತ, ವಾ—ಅಥವಾ, ಗುಣ ಅನ್ವಿತಮ್—ಭೌತಿಕ ಪ್ರಕೃತಿ ಗುಣ ಪ್ರಭಾವದಲ್ಲಿ, ವಿಮೂಢಾಃ—ಮೂಢರು, ನ—ಎಂದಿಗೂ ಇಲ್ಲ, ಅನುಪಶ್ಯನ್ತಿ—ಕಾಣುವುದು, ಪಶ್ಯನ್ತಿ—ಕಾಣಬಲ್ಲರು, ಜ್ಞಾನ-ಚಕ್ಷುಷಃ—ಜ್ಞಾನ ಚಕ್ಷುಗಳಿರುವವರು.

**ಜೀವಿಯು ಹೇಗೆ ದೇಹ ಬಿಡುತ್ತಾನೆ ಎಂಬುದನ್ನು ಮೂಢರು ಅರಿಯಲಾರರು ಅಥವಾ ಪ್ರಕೃತಿ ಗುಣ ಪ್ರಭಾವದಲ್ಲಿ ಅವನು ಎಂಥಹ ಬಗೆಯ ದೇಹಭೋಗ ಮಾಡುತ್ತಾನೆ ಎಂಬುದನ್ನು ಕೂಡ ಅರಿಯಲಾರರು. ಆದರೆ 'ಜ್ಞಾನ ಚಕ್ಷುಗಳಿರುವವನು ಇದೆಲ್ಲವನ್ನು ಕಾಣಬಲ್ಲನು.**

**ಭಾವಾರ್ಥ :** **ಜ್ಞಾನ-ಚಕ್ಷುಷಃ** ಪದವು ಬಹು ಮಹತ್ವದ್ದು. ಜ್ಞಾನವಿಲ್ಲದೆ, ಹೇಗೆ ಜೀವಿಯು ತನ್ನ ಈ ದೇಹ ಬಿಡುತ್ತಾನೆ ಅಥವಾ ಮುಂದಿನ ಜನ್ಮದಲ್ಲಿ ಯಾವ ಬಗೆಯ ದೇಹ ಹೊಂದಲಿದ್ದಾನೆ ಅಥವಾ ವಿಶಿಷ್ಟ ಮಾದರಿಯ ದೇಹದಲ್ಲಿ ತಾನು ಏಕೆ ಇದ್ದಾನೆ ಎಂಬುದನ್ನು ಕೂಡ ಒಬ್ಬನು ಅರಿಯಲಾರನು. ಇದಕ್ಕೆ ಸದ್ಗುರುಗಳಿಂದ ಶ್ರವಣ ಮಾಡಿದ ಭಗವದ್ಗೀತೆ ಮತ್ತು ಇತರ ಅಂಥ ಶಾಸ್ತ್ರಗಳಿಂದ ಅರಿತುಕೊಂಡ ಅಪಾರ ಜ್ಞಾನ ಅಗತ್ಯ. ಈ ಎಲ್ಲ ವಿಷಯಗಳನ್ನು ಕಾಣುವ ಪರಿಶ್ರಮ ಹೊಂದಿದವನು ಭಾಗ್ಯಶಾಲಿ. ಪ್ರತಿಯೊಬ್ಬ ಜೀವಿಯು ವಿಶಿಷ್ಟ ಸನ್ನಿವೇಶಗಳಲ್ಲಿ ದೇಹ ಬಿಡುತ್ತಿದ್ದಾನೆ, ವಿಶಿಷ್ಟ ಸನ್ನಿವೇಶಗಳಲ್ಲಿ ಇರುತ್ತಾನೆ ಮತ್ತು ಭೌತಿಕ ಪ್ರಕೃತಿಯ ಪ್ರಭಾವದಲ್ಲಿ ವಿಶಿಷ್ಟ ಸನ್ನಿವೇಶಗಳಲ್ಲಿ ಭೋಗಿಸುತ್ತಾನೆ. ಪರಿಣಾಮವಾಗಿ, ಇಂದ್ರಿಯ ಭೋಗದ ಮಾಯೆಯಲ್ಲಿ

ನಾನಾ ಬಗೆಯ ಸುಖ-ದುಃಖಗಳನ್ನು ಅನುಭವಿಸುತ್ತಿದ್ದಾನೆ. ಕಾಮಾದಿ ಇಚ್ಛೆಗಳಿಂದ ನಿತ್ಯ ವಿಮೂಢರಾದವರು ತಮ್ಮ ದೇಹ ಬದಲಾವಣೆ ಮತ್ತು ವಿಶಿಷ್ಟ ದೇಹದಲ್ಲಿ ತಾವಿರುವುದನ್ನು ಅರಿತುಕೊಳ್ಳುವ ಎಲ್ಲ ಶಕ್ತಿಯನ್ನು ಕಳೆದುಕೊಳ್ಳುತ್ತಾರೆ. ಅವರು ಅದನ್ನು ಕಾಣಲಾರರು. ಆದರೆ ಅಧ್ಯಾತ್ಮ ಜ್ಞಾನ ಬೆಳಸಿಕೊಂಡವರು ಚೇತನವು ದೇಹದಿಂದ ಭಿನ್ನ ಮತ್ತು ದೇಹ ಬದಲಾವಣೆ ಮಾಡಿಕೊಳ್ಳುತ್ತ ನಾನಾ ರೀತಿಯಲ್ಲಿ ಭೋಗಹೊಂದುತ್ತಾನೆ ಎಂಬುದನ್ನು ಕಾಣಬಲ್ಲರು. ಅಂಥ ಜ್ಞಾನಿಯು ಬದ್ಧಾತ್ಮನು ಈ ಭೌತಿಕ ಅಸ್ತಿತ್ವದಲ್ಲಿ ಹೇಗೆ ದುಃಖಾನುಭವ ಮಾಡುತ್ತಿದ್ದಾನೆ ಎಂಬುದನ್ನು ಅರಿಯಬಲ್ಲನು. ಆದ್ದರಿಂದ ಕೃಷ್ಣಪ್ರಜ್ಞೆಯಲ್ಲಿ ಬಹಳಷ್ಟು ವೃದ್ಧಿ ಹೊಂದಿದವರು ತಮ್ಮ ಈ ಜ್ಞಾನವನ್ನು ಸಾಮಾನ್ಯರಿಗೆ ನೀಡಲು ಅತ್ಯಧಿಕ ಪ್ರಯತ್ನ ಮಾಡುತ್ತಾರೆ, ಏಕೆಂದರೆ ಅಂಥ ಜನರ ಬದ್ಧ ಜೀವನವು ಬಹು ಕಷ್ಟಕರ. ಆದ್ದರಿಂದ ಅವರು ಹೊರಬಂದು ಕೃಷ್ಣಪ್ರಾಜ್ಞಿಗಳಾಗಿ ತಮ್ಮನ್ನು ಅಧ್ಯಾತ್ಮ ಜಗತ್ತಿಗೆ ವರ್ಗಾಯಿಸಿಕೊಳ್ಳಲು ಮುಕ್ತಗೊಳಿಸಿಕೊಳ್ಳಬೇಕು.

**ಯತನ್ತೋ ಯೋಗಿನಶ್ಚೈನಂ ಪಶ್ಯನ್ತ್ಯಾತ್ಮನ್ಯವಸ್ಥಿತಮ್ ।**
**ಯತನ್ತೋಽಪ್ಯಕೃತಾತ್ಮಾನೋ ನೈನಂ ಪಶ್ಯನ್ತ್ಯಚೇತಸಃ ॥ ೧೧ ॥**

ಯತನ್ತಃ—ಯತ್ನಿಸುತ್ತ, ಯೋಗಿನಃ—ಯೋಗಿಗಳು, ಚ—ಕೂಡ, ಏನಮ್—ಇದನ್ನು, ಪಶ್ಯನ್ತಿ—ಕಾಣಬಲ್ಲರು, ಆತ್ಮನಿ—ಆತ್ಮನಲ್ಲಿ, ಅವಸ್ಥಿತಮ್—ಸನ್ನಿವೇಶಿತರು. ಯತನ್ತಃ—ಯತ್ನಿಸುತ್ತ, ಅಪಿ—ಆದರೂ, ಅಕೃತ-ಆತ್ಮಾನಃ—ಆತ್ಮಸಾಕ್ಷಾತ್ಕಾರ ರಹಿತರು, ನ—ಇಲ್ಲ, ಏನಮ್—ಇದನ್ನು, ಪಶ್ಯನ್ತಿ—ನೋಡುವುದು, ಅಚೇತಸಃ—ಅಪ್ರಬುದ್ಧ ಮನಸ್ಸು ಉಳ್ಳವರಾಗಿ.

**ಆತ್ಮಸಾಕ್ಷಾತ್ಕಾರ ಸನ್ನಿವೇಶಿತ ಯತ್ನಶೀಲ ಯೋಗಿಗಳು ಇದೆಲ್ಲವನ್ನು ಸ್ಪಷ್ಟವಾಗಿ ಕಾಣಬಲ್ಲರು. ಆದರೆ ಪ್ರಬುದ್ಧ ಮನಸ್ಸು ಹೊಂದಿರದ ಮತ್ತು ಆತ್ಮಸಾಕ್ಷಾತ್ಕಾರ ಸನ್ನಿವೇಶಿತರಲ್ಲದವರು ಅವರು ಯತ್ನಿಸಿದರೂ ಕೂಡ, ಏನು ನಡೆಯುತ್ತಿದೆ ಎಂಬುದನ್ನು ಕಾಣಲಾರರು.**

**ಭಾವಾರ್ಥ :** ಆಧ್ಯಾತ್ಮಿಕ ಆತ್ಮಸಾಕ್ಷಾತ್ಕಾರದ ಮಾರ್ಗದಲ್ಲಿ ಅನೇಕ ದಿವ್ಯವಾದಿಗಳಿದ್ದಾರೆ, ಆದರೆ ಆತ್ಮಸಾಕ್ಷಾತ್ಕಾರದಲ್ಲಿ ಸನ್ನಿವೇಶಿತನಾಗದವನು ಜೀವಿಯ ದೇಹದಲ್ಲಿ ಹೇಗೆ ಬದಲಾವಣೆಗಳು ನಡೆದಿವೆ ಎಂಬುದನ್ನು ಕಾಣಲಾರನು. **ಯೋಗಿನಃ** ಎಂಬ ಪದವು ಈ ಸಂಬಂಧದಲ್ಲಿ ಮಹತ್ವದ್ದು. ಈಗಿನ ಕಾಲದಲ್ಲಿ ಹಾಗೆಂಬ ಯೋಗಿಗಳು ಅನೇಕರಿದ್ದಾರೆ, ಮತ್ತು ಯೋಗ ಸಂಘಗಳೆಂಬ ಅನೇಕ ಸಂಘಗಳೂ ಇವೆ, ಆದರೆ ಅವು ಆತ್ಮಸಾಕ್ಷಾತ್ಕಾರ ವಿಷಯದಲ್ಲಿ ವಾಸ್ತವಿಕವಾಗಿ ಕುರುಡಾಗಿವೆ. ಅವರು ಕೇವಲ ಕೆಲವು ಬಗೆಯ ಕಸರತ್ತುಗಳಲ್ಲಿ ಮಾತ್ರ ನಿರತರು ಮತ್ತು ದೇಹವು ಆರೋಗ್ಯಕರವಾಗಿ ಸದೃಢವಾಗಿ ಬೆಳೆಯುತ್ತಿದ್ದರೆ ತೃಪ್ತರು, ಅವರಿಗೆ ಬೇರೆ ವಿಚಾರ ಗೊತ್ತಿಲ್ಲ. ಅವರು **ಯತನ್ತೋಽಪಿ ಅಕೃತಾತ್ಮಾನಃ** ಎಂದು ಕರೆಯಲ್ಪಟ್ಟಿದ್ದಾರೆ. ಅವರು ಹಾಗೆಂಬ

ಯೋಗ ಪದ್ಧತಿಯಲ್ಲಿ ಪ್ರಯತ್ನಿಸುತ್ತಿದ್ದರೂ, ಅವರು ಆತ್ಮಸಾಕ್ಷಾತ್ಕಾರಿಗಳಲ್ಲ ಅಂಥವರು ಆತ್ಮನ ಜನ್ಮಾಂತರ ಪ್ರಕ್ರಿಯೆಯನ್ನು ಅರಿತುಕೊಳ್ಳಲಾರರು. ವಾಸ್ತವಿಕ ಯೋಗ ಪದ್ಧತಿಯಲ್ಲಿರುವವರು ಮತ್ತು ಆತ್ಮ, ಜಗತ್ತು, ಮತ್ತು ಪರಮಪ್ರಭುವನ್ನು ಸಾಕ್ಷಾತ್ಕರಿಸಿಕೊಂಡವರು ಮಾತ್ರ—ಅನ್ಯ ಪದಗಳಲ್ಲಿ, ಶುದ್ಧ ಭಕ್ತಿಯುತ ಕೃಷ್ಣಪ್ರಜ್ಞೆಯಲ್ಲಿ ನಿರತರಾದ ಭಕ್ತಿಯೋಗಿಗಳು ಮಾತ್ರ ಕಾರ್ಯಗಳು ಹೇಗೆ ನಡೆಯುತ್ತಿವೆ ಎಂಬುದನ್ನು ಅರಿತುಕೊಳ್ಳಬಲ್ಲರು.

**ಯದಾದಿತ್ಯಗತತೇಜೋ ಜಗದ್ ಭಾಸಯತೇಽಖಿಲಮ್ ।**
**ಯಚ್ಚನ್ದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥ ೧೨ ॥**

ಯತ್—ಯಾವುದು ಅದು, ಆದಿತ್ಯ-ಗತಮ್—ಸೂರ್ಯನಲ್ಲಿ ಬೆಳಕಿನಲ್ಲಿ, ತೇಜಃ—ತೇಜಸ್ಸು, ಜಗತ್—ಇಡೀ ಜಗತ್ತು, ಭಾಸಯತೇ—ಪ್ರಕಾಶಿತವೋ, ಅಖಿಲಮ್—ಪೂರ್ಣವಾಗಿ, ಯತ್—ಯಾವುದು ಅದು. ಚನ್ದ್ರಮಸಿ—ಚಂದ್ರನಲ್ಲಿ, ಯತ್—ಯಾವುದು ಅದು, ಚ—ಕೂಡ, ಅಗ್ನೌ—ಅಗ್ನಿಯಲ್ಲಿ, ತತ್—ಅದು, ತೇಜಃ—ತೇಜವು, ವಿದ್ಧಿ—ತಿಳಿ, ಮಾಮಕಮ್—ನನ್ನಿಂದ ಎಂದು.

**ಈ ಇಡೀ ಜಗತ್ತಿನ ಕತ್ತಲೆಯನ್ನು ನಿವಾರಿಸುವ ಸೂರ್ಯನ ತೇಜಸ್ಸು ನನ್ನಿಂದಲೇ ಬರುತ್ತದೆ. ಚಂದ್ರನ ಪ್ರಕಾಶ ಮತ್ತು ಅಗ್ನಿಯ ತೇಜಸ್ಸು ಕೂಡ ನನ್ನಿಂದಲೇ ಬರುತ್ತವೆ.**

**ಭಾವಾರ್ಥ :** ಕಾರ್ಯಗಳು ಹೇಗೆನಡೆಯುತ್ತಿವೆ ಎಂಬುದನ್ನು ಬುದ್ಧಿಹೀನರು ಅರಿತುಕೊಳ್ಳಲಾರರು. ಭಗವಂತನು ಇಲ್ಲಿ ಹೇಳುವುದನ್ನು ಅರಿತುಕೊಳ್ಳುವ ಮೂಲಕ ಒಬ್ಬನು ಜ್ಞಾನದಲ್ಲಿ ಪ್ರತಿಷ್ಠಿತನಾಗಬಹುದು. ಪ್ರತಿಯೊಬ್ಬನೂ, ಸೂರ್ಯ, ಚಂದ್ರ, ಅಗ್ನಿ ಮತ್ತು ವಿದ್ಯುಚ್ಛಕ್ತಿಯನ್ನು ನೋಡುತ್ತಾನೆ. ಸೂರ್ಯನ ತೇಜಸ್ಸು, ಚಂದ್ರನ ತೇಜಸ್ಸು, ವಿದ್ಯುಚ್ಛಕ್ತಿಯ ಅಥವಾ ಅಗ್ನಿಯ ತೇಜಸ್ಸು ಪರಮದೇವೋತ್ತಮ ಪುರುಷನಿಂದ ಬರುತ್ತವೆ ಎಂಬುದನ್ನು ಅರಿತುಕೊಳ್ಳಲು ಪ್ರಯತ್ನಿಸಬೇಕು ಅಷ್ಟೆ. ಅಂಥ ಜೀವನ ಕಲ್ಪನೆಯಲ್ಲಿ ಕೃಷ್ಣಪ್ರಜ್ಞೆಯ ಪ್ರಾರಂಭದಲ್ಲಿ, ಈ ಭೌತಿಕ ಜಗತ್ತಿನಲ್ಲಿ ಬದ್ಧಾತ್ಮನಿಗೆ ಅಪಾರ ಪ್ರಗತಿ ಇರುತ್ತದೆ. ಜೀವಿಗಳು ಅವಶ್ಯವಾಗಿ ಪರಮ ಪ್ರಭುವಿನ ವಿಭಿನ್ನಾಂಶರು ಮತ್ತು ಅವರು ಹೇಗೆ ದೇವತ್ವಕ್ಕೆ ಮರಳಿ ಧಾಮಕ್ಕೆ ಹಿಂದಿರುಗುವರು ಎಂಬ ಬಗ್ಗೆ ಕೃಷ್ಣನು ಇಲ್ಲಿ ಸೂಚನೆ ನೀಡುತ್ತಿದ್ದಾನೆ.

ಈ ಶ್ಲೋಕದಿಂದ ಸೂರ್ಯನು ಇಡೀ ಸೌರವ್ಯೂಹವನ್ನು ಬೆಳಗುತ್ತಿದ್ದಾನೆ ಎಂದು ನಾವು ಅರಿತುಕೊಳ್ಳಬಹುದು. ಅನೇಕ ಬ್ರಹ್ಮಾಂಡಗಳು ಮತ್ತು ಸೌರವ್ಯೂಹಗಳಿವೆ, ಮತ್ತು ಅನೇಕ ಸೂರ್ಯರು ಮತ್ತು ಚಂದ್ರರು ಮತ್ತು ಗ್ರಹಗಳೂ ಇವೆ, ಆದರೆ ಪ್ರತಿಯೊಂದು ಬ್ರಹ್ಮಾಂಡದಲ್ಲಿ ಒಬ್ಬನೇ ಒಬ್ಬ ಸೂರ್ಯನಿದ್ದಾನೆ. ಭಗವದ್ಗೀತೆಯಲ್ಲಿ ಹೇಳಿದಂತೆ (10.21) ಚಂದ್ರನು ನಕ್ಷತ್ರಗಳಲ್ಲಿ ಒಬ್ಬನು. **(ನಕ್ಷತ್ರಾಣಾಮ್ ಅಹಂ ಶಶೀ)**

ಸೂರ್ಯಪ್ರಕಾಶವು ಪರವ್ಯೋಮದಲ್ಲಿ ಪರಮ ಪ್ರಭುವಿನ ಆಧ್ಯಾತ್ಮ ಪ್ರಕಾಶದ ನಿಮಿತ್ತವಾದುದು. ಸೂರ್ಯೋದಯದಿಂದ ಮಾನವರ ಚಟುವಟಿಕೆಗಳು ಪ್ರಾರಂಭವಾಗುತ್ತವೆ. ತಮ್ಮ ಆಹಾರ ತಯಾರಿಸಲು ಬೆಂಕಿ ಹೊತ್ತಿಸುತ್ತಾರೆ. ಕಾರ್ಖಾನೆ ಇತ್ಯಾದಿಗಳನ್ನು ನಡೆಸಲು ಅಗ್ನಿಯನ್ನು ಪ್ರಜ್ವಲಿಸುತ್ತಾರೆ. ಬೆಂಕಿಯ ಸಹಾಯದಿಂದ ಅನೇಕ ಕೆಲಸಗಳು ನಡೆಯುತ್ತವೆ. ಆದ್ದರಿಂದ ಸೂರ್ಯೋದಯ, ಅಗ್ನಿ ಮತ್ತು ಬೆಳದಿಂಗಳು ಜೀವಿಗಳಿಗೆ ಅದೆಷ್ಟು ಹಿತಕರ. ಅವುಗಳ ಸಹಾಯವಿಲ್ಲದೆ ಯಾವ ಜೀವಿಯೂ ಬದುಕಲಾರ. ಆದ್ದರಿಂದ ಸೂರ್ಯ, ಚಂದ್ರ ಮತ್ತು ಅಗ್ನಿಯ ಪ್ರಕಾಶ ಮತ್ತು ತೇಜಸ್ಸು ಪರಮ ದೇವೋತ್ತಮ ಪುರುಷ, ಕೃಷ್ಣನಿಂದ ಉದ್ಭೂತವೆಂದು ಒಬ್ಬನು ಅರಿತುಕೊಳ್ಳಬಲ್ಲವನಾದರೆ, ಆಗ ಅವನ ಕೃಷ್ಣ ಪ್ರಜ್ಞೆಯು ಪ್ರಾರಂಭವಾಗುತ್ತದೆ. ಬೆಳದಿಂಗಳಿನಿಂದ ತರಕಾರಿಗಳು ಪೋಷಿತ. ಬೆಳದಿಂಗಳು ಅದೆಷ್ಟು ಆಹ್ಲಾದಕರವೆಂದರೆ ಜನರು ಪರಮ ದೇವೋತ್ತಮ ಪುರುಷ, ಕೃಷ್ಣನ ಕರುಣೆಯಿಂದ ಜೀವಿಸುತ್ತಿದ್ದೇವೆ ಎಂದು ಸುಲಭವಾಗಿ ಅರಿತುಕೊಳ್ಳಬಹುದು. ಅವನ ಅನುಗ್ರಹವಿಲ್ಲದೆ ಸೂರ್ಯನಿರಲಾರನು, ಅವನ ಅನುಗ್ರಹವಿಲ್ಲದೆ ಚಂದ್ರನಿರಲಾರನು, ಮತ್ತು ಅವನ ಅನುಗ್ರಹವಿಲ್ಲದೆ ಅಗ್ನಿ ಇರಲಾರದು, ಮತ್ತು ಚಂದ್ರ, ಸೂರ್ಯ ಮತ್ತು ಅಗ್ನಿ ಸಹಾಯವಿಲ್ಲದೆ ಯಾರೂ ಜೀವಿಸಲಾರರು. ಇವು ಕೆಲವು ಬದ್ಧಾತ್ಮನಲ್ಲಿ ಕೃಷ್ಣಪ್ರಜ್ಞೆಯನ್ನು ಪ್ರಚೋದಿಸುವ ವಿಷಯಗಳಾಗಿವೆ.

**ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ ।**
**ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ ॥ ೧೩ ॥**

ಗಾಮ್—ಲೋಕಗಳನ್ನು, ಆವಿಶ್ಯ—ಪ್ರವೇಶಿಸಿ, ಚ—ಕೂಡ, ಭೂತಾನಿ—ಜೀವಿಗಳನ್ನು, ಧಾರಯಾಮಿ—ಧರಿಸುತ್ತೇನೆ, ಅಹಮ್—ನಾನು, ಓಜಸಾ—ಓಜಸ್ಸಿನಿಂದ. ಪುಷ್ಣಾಮಿ—ಪೋಷಿಸುತ್ತಿದ್ದೇನೆ, ಚ—ಮತ್ತು, ಔಷಧೀಃ—ಶಾಕಗಳನ್ನು, ಸರ್ವಾಃ—ಎಲ್ಲ, ಸೋಮಃ—ಚಂದ್ರ, ಭೂತ್ವಾ—ಆಗಿ, ರಸ-ಆತ್ಮಕಃ—ರಸವನ್ನೊದಗಿಸುತ್ತೇನೆ.

**ನಾನು ಪ್ರತಿಯೊಂದು ಗ್ರಹವನ್ನೂ ಪ್ರವೇಶಿಸುತ್ತೇನೆ, ಮತ್ತು ನನ್ನ ಶಕ್ತಿಯಿಂದ ಅವು ಕಕ್ಷೆಯಲ್ಲಿರುತ್ತವೆ. ನಾನು ಚಂದ್ರನಾಗುತ್ತೇನೆ ಮತ್ತು ಆ ಮೂಲಕ ಎಲ್ಲ ಶಾಕಗಳಿಗೆ ಜೀವರಸ ಒದಗಿಸುತ್ತೇನೆ.**

**ಭಾವಾರ್ಥ :** ಎಲ್ಲ ಗ್ರಹಗಳು ಭಗವತ್ ಶಕ್ತಿಯಿಂದಲೇ ಗಾಳಿಯಲ್ಲಿ ತೇಲುತ್ತಿವೆ ಎಂದು ತಿಳಿಯಲಾಗಿದೆ. ಭಗವಂತನು ಪ್ರತಿಯೊಂದು ಅಣುವಿನಲ್ಲಿ, ಪ್ರತಿಯೊಂದು ಗ್ರಹದಲ್ಲಿ ಮತ್ತು ಪ್ರತಿಯೊಬ್ಬ ಜೀವಿಯಲ್ಲಿ ಪ್ರವೇಶಿಸುತ್ತಾನೆ. ಅದು ಬ್ರಹ್ಮ-ಸಂಹಿತೆಯಲ್ಲಿ ಚರ್ಚಿತ. ಪರಮ ದೇವೋತ್ತಮ ಪುರುಷನ, ಒಂದು ಸಮಗ್ರ ವಿಸ್ತರಣೆ. ಪರಮಾತ್ಮನು ಗ್ರಹಗಳಲ್ಲಿ, ಬ್ರಹ್ಮಾಂಡದಲ್ಲಿ, ಜೀವಿಯಲ್ಲಿ ಮತ್ತು ಅಣುವಿನಲ್ಲಿ ಕೂಡ ಪ್ರವೇಶಿಸುತ್ತಾನೆ ಎಂದು ಅಲ್ಲಿ ಹೇಳಿದೆ. ಹೀಗೆ ಅವನ ಪ್ರವೇಶದಿಂದ ಪ್ರತಿಯೊಂದು ಸರಿಯಾಗಿ ಪ್ರಕಟವಾಗಿದೆ. ಚೇತನಾತ್ಮನಿದ್ದಾಗ, ಜೀವಂತ ಮನುಷ್ಯನು ನೀರಿನ ಮೇಲೆ ತೇಲಬಲ್ಲನು, ಆದರೆ ಚೇತನ ಕಣವು ದೇಹ ಬಿಟ್ಟಾಗ ದೇಹವು ಮೃತ, ಮತ್ತು ಅದು

ಮುಳುಗುತ್ತದೆ; ಅದು ಸಂಪೂರ್ಣ ಕೆಟ್ಟು ಹೋದಾಗ ಹುಲ್ಲುಕಡ್ಡಿ ಅಥವಾ ಇತರ ವಸ್ತುಗಳಂತೆ ತೇಲುತ್ತದೆ ನಿಜ, ಆದರೆ ಮನುಷ್ಯನು ಸತ್ತೊಡನೆ ಕೂಡಲೇ ನೀರಿನಲ್ಲಿ ಮುಳುಗಿ ಹೋಗುತ್ತಾನೆ. ಅದೇ ಪ್ರಕಾರ, ಈ ಎಲ್ಲಾ ಗ್ರಹಗಳು ಅಂತರಿಕ್ಷದಲ್ಲಿ ತೇಲುತ್ತಾ ಇವೆ, ಮತ್ತು ಇದು ಪರಮ ದೇವೋತ್ತಮ ಪುರುಷನ ಪರಮ ಶಕ್ತಿಯ ಪ್ರವೇಶ ನಿಮಿತ್ತ. ಅವನ ಶಕ್ತಿಯು ಒಂದು ಹಿಡಿ ಧೂಳು ಹಿಡಿದಂತೆ ಪ್ರತಿಯೊಂದು ಗ್ರಹವನ್ನು ಧಾರಣ ಮಾಡುತ್ತದೆ. ಒಬ್ಬನು ಒಂದು ಹಿಡಿ ಧೂಳು ಹಿಡಿದರೆ ಅದು ಕೆಳಗೆ ಬೀಳುವ ಸಾಧ್ಯತೆ ಇಲ್ಲ. ಆದರೆ ಅದನ್ನು ಗಾಳಿಯಲ್ಲಿ ತೂರಿದರೆ ಅದು ಕೆಳಗೆ ಬೀಳುತ್ತದೆ. ಅದೇ ಪ್ರಕಾರ ಗಾಳಿಯಲ್ಲಿ ತೇಲುವ ಈ ಗ್ರಹಗಳು ಪರಮ ಪ್ರಭುವಿನ ವಿರಾಟ ರೂಪದ ಮುಷ್ಟಿಯಲ್ಲಿ ವಾಸ್ತವಿಕವಾಗಿ ಧರಿಸಲ್ಪಟ್ಟಿವೆ. ಅವನ ಬಲ ಮತ್ತು ಓಜಸ್ಸಿನಿಂದ ಎಲ್ಲ ಚಲ ಮತ್ತು ಅಚಲ ವಸ್ತುಗಳು ತಮ್ಮ ತಮ್ಮ ಸ್ಥಾನದಲ್ಲಿ ನಿಂತಿವೆ. ಪರಮ ದೇವೋತ್ತಮ ಪುರುಷನ ನಿಮಿತ್ತದಿಂದ ಸೂರ್ಯನು ಬೆಳಗುತ್ತಾನೆ ಮತ್ತು ಗ್ರಹಗಳು ಸರಿಯಾಗಿ ಚಲಿಸುತ್ತವೆ ಎಂದು ವೇದಮಂತ್ರಗಳಲ್ಲಿ ಹೇಳಿದೆ. ಅವನ ನಿಮಿತ್ತವಿಲ್ಲದಿದ್ದರೆ ಎಲ್ಲ ಗ್ರಹಗಳು ಗಾಳಿಯಲ್ಲಿ ಧೂಳಿನಂತೆ ಚದರಿ ನಾಶವಾಗುತ್ತಿದ್ದವು. ಅದೇ ಪ್ರಕಾರ, ಪರಮ ದೇವೋತ್ತಮ ಪುರುಷನ ಕಾರಣದಿಂದಲೇ ಚಂದ್ರನು ಎಲ್ಲ ಶಾಕಗಳನ್ನು ಪೋಷಿಸುತ್ತಾನೆ. ಬೆಳದಿಂಗಳಿನಿಂದ, ಶಾಕಗಳು ರುಚಿಕರವಾಗಿರುತ್ತವೆ. ಬೆಳದಿಂಗಳಿಲ್ಲದೆ ಶಾಕಗಳು ಬೆಳೆಯಲಾರವು ಅಥವಾ ರುಚಿಕರವಾಗಲಾರವು. ಪರಮ ಪ್ರಭುವಿನ ಪೂರೈಕೆಯಿಂದ ಮಾನವ ಸಮಾಜವು ಕಾರ್ಯಶೀಲವಾಗಿದೆ, ಮತ್ತು ಸುಖವಾಗಿ ಜೀವಿಸಿ ಅನ್ನ ಭೋಗ ಮಾಡುತ್ತಿದೆ. ಇಲ್ಲದಿದ್ದರೆ, ಮಾನವ ಕುಲವು ಬದುಕುತ್ತಿರಲಿಲ್ಲ. **ರಸಾತ್ಮಕಃ** ಪದವು ಬಹು ಮಹತ್ವದ್ದು. ಪ್ರತಿಯೊಂದೂ ಚಂದ್ರಪ್ರಭೆಯ ಮೂಲಕ ಪರಮ ಪ್ರಭುವಿನ ನಿಮಿತ್ತ ಆಸ್ವಾದ್ಯವಾಗುತ್ತದೆ.

**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥೧೪॥**

ಅಹಮ್—ನಾನು, ವೈಶ್ವಾನರಃ—ಜಠರಾಗ್ನಿ ನನ್ನ ಸಮಗ್ರ ವಿಸ್ತರಣೆಯಾದ, ಭೂತ್ವಾ—ಆಗಿ, ಪ್ರಾಣಿನಾಮ್—ಎಲ್ಲ ಜೀವಿಗಳ, ದೇಹಮ್—ದೇಹಗಳಲ್ಲಿ, ಆಶ್ರಿತಃ—ಸನ್ನಿವೇಶಿತ, ಪ್ರಾಣ—ಹೊರಹೋಗುವ ವಾಯು, ಅಪಾನ—ಕೆಳಗೆ ಹೋಗುವ ವಾಯು, ಸಮಾಯುಕ್ತಃ—ಸಮತೋಲದಲ್ಲಿರಿಸಿ, ಪಚಾಮಿ—ನಾನು ಜೀರ್ಣಮಾಡುತ್ತೇನೆ, ಅನ್ನಮ್—ಆಹಾರವನ್ನು, ಚತುಃ-ವಿಧಮ್—ನಾಲ್ಕು ಬಗೆಯ.

**ನಾನು ಎಲ್ಲ ಜೀವಿಗಳ ದೇಹಗಳಲ್ಲಿ ಜಠರಾಗ್ನಿ, ಮತ್ತು ನಾನು, ನಾಲ್ಕು ಬಗೆಯ ಆಹಾರಗಳನ್ನು ಜೀರ್ಣಿಸಲು, ಹೊರಗೆ ಹೋಗುವ ಮತ್ತು ಒಳಗೆ ಬರುವ ಪ್ರಾಣವಾಯುವಿನೊಂದಿಗೆ ಇರುತ್ತೇನೆ.**

**ಭಾವಾರ್ಥ :** ಆಯುರ್ವೇದ ಶಾಸ್ತ್ರಾನುಸಾರ ಹೊಟ್ಟೆಗೆ ಬಿದ್ದ ಎಲ್ಲ ಆಹಾರವನ್ನು ಜೀರ್ಣಿಸುವ ಅಗ್ನಿಯೊಂದು ಹೊಟ್ಟೆಯಲ್ಲಿದೆ ಎಂದು ತಿಳಿಯುತ್ತೇವೆ. ಆ ಅಗ್ನಿಯು

ಪ್ರಜ್ವಲ ಇಲ್ಲದಾಗ ಹಸಿವು ಇರುವುದಿಲ್ಲ, ಮತ್ತು ಆ ಅಗ್ನಿಯು ಸುಸ್ಥಿತಿಯಲ್ಲಿದ್ದಾಗ ನಮಗೆ ಹಸಿವಾಗುತ್ತದೆ. ಆ ಅಗ್ನಿಯು ಸರಿಯಾಗಿ ಜ್ವಲಿಸದಿರುವಾಗ, ಚಿಕಿತ್ಸೆ ಅಗತ್ಯ. ಏನೇ ಇರಲಿ, ಈ ಅಗ್ನಿಯು ಪರಮದೇವೋತ್ತಮ ಪುರುಷನ ಪ್ರತಿನಿಧಿ. ಪರಮ ಪ್ರಭು ಅಥವಾ ಬ್ರಹ್ಮನ್‌ನು ಅಗ್ನಿರೂಪದಲ್ಲಿ ಜಠರದಲ್ಲಿದ್ದು ಎಲ್ಲಾ ಬಗೆಯ ಆಹಾರಗಳನ್ನು ಜೀರ್ಣಮಾಡುತ್ತಾನೆ ಎಂದು ವೇದ ಮಂತ್ರಗಳು ಕೂಡ ದೃಢಪಡಿಸುತ್ತವೆ. (ಬೃಹದ್ ಆರಣ್ಯಕ ಉಪನಿಷದ್ 5.9.1) **ಅಯಮ್ ಅಗ್ನಿರ್ ವೈಶ್ವಾನರೋ ಯೋಽ ಯಮ್ ಅನ್ತಃ ಪುರುಷೇ ಯೇನೇದಮ್ ಅನ್ನಂ ಪಚ್ಯತೇ.**) ಆದ್ದರಿಂದ ಅವನು ಎಲ್ಲ ಬಗೆಯ ಆಹಾರಗಳ ಜೀರ್ಣಕ್ಕೆ ಸಹಾಯಕನಾದ್ದರಿಂದ, ಜೀವಿಯು ಆಹಾರ ವಿಷಯದಲ್ಲಿ, ಸ್ವತಂತ್ರನಲ್ಲ. ಪರಮಪ್ರಭು ಜೀರ್ಣಕಾರ್ಯದಲ್ಲಿ ಸಹಾಯ ಮಾಡಿದ ಹೊರತು ಅನ್ನ ತಿನ್ನುವ ಸಂಭವವೇ ಇಲ್ಲ. ಹೀಗೆ ಅವನು ಆಹಾರಗಳನ್ನು ಉತ್ಪತ್ತಿ ಮಾಡುತ್ತಾನೆ ಮತ್ತು ಜೀರ್ಣಿಸುತ್ತಾನೆ, ಮತ್ತು ಅವನ ಅನುಗ್ರಹದಿಂದ ನಾವು ಜೀವನ ಸುಖಭೋಗ ಮಾಡುತ್ತೇವೆ. ಇದು ಕೂಡ ವೇದಾಂತ ಸೂತ್ರದಲ್ಲಿ ದೃಢೀಕೃತ (1.2.27). **ಶಬ್ದಾದಿಭ್ಯೋಽನ್ತಃ ಪ್ರತಿಷ್ಠಾನಾಚ್ಚ** : ಭಗವಂತನು ಶಬ್ದದಲ್ಲಿ ಮತ್ತು ದೇಹದಲ್ಲಿ, ವಾಯುವಿನಲ್ಲಿ ಮತ್ತು ಜೀರ್ಣ ಶಕ್ತಿಯಾಗಿ ಜಠರದಲ್ಲಿ ಸನ್ನಿವೇಶಿತನು. ನುಂಗುವ, ಅಗಿಯುವ, ನೆಕ್ಕುವ ಮತ್ತು ಚೀಪುವ— ಹೀಗೆ ನಾಲ್ಕು ಬಗೆಯ ಆಹಾರಗಳಿವೆ. ಅವೆಲ್ಲವುಗಳಿಗೆ ಅವನೇ ಜೀರ್ಣಶಕ್ತಿ.

**ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ**
**ಮತ್ತಃ ಸ್ಮೃತಿಜ್ಞಾನಮಪೋಹನಂ ಚ ।**
**ವೇದೈಶ್ಚ ಸರ್ವೈರಹಮೇವ ವೇದ್ಯೋ**
**ವೇದಾನ್ತಕೃದ್ ವೇದವಿದೇವ ಚಾಹಮ್ ॥೧೫॥**

ಸರ್ವಸ್ಯ—ಎಲ್ಲ ಜೀವಿಗಳ, ಚ—ಮತ್ತು, ಅಹಮ್—ನಾನು, ಹೃದಿ—ಹೃದಯದಲ್ಲಿ, ಸನ್ನಿವಿಷ್ಟಃ—ಸನ್ನಿವೇಶಿತನು, ಮತ್ತಃ—ನನ್ನಿಂದ, ಸ್ಮೃತಿಃ—ನೆನಪು ಜ್ಞಾನಮ್—ಜ್ಞಾನವು, ಅಪೋಹನಮ್—ಮರೆವು, ಚ—ಮತ್ತು, ವೇದೈಃ—ವೇದಗಳಿಂದ, ಚ—ಕೂಡ, ಸರ್ವೈಃ—ಎಲ್ಲ, ಅಹಮ್—ಆಗಿದ್ದೇನೆ, ಏವ—ಖಂಡಿತವಾಗಿ, ವೇದ್ಯಃ—ವೇದ್ಯನು, ವೇದಾಂತ-ಕೃತ್—ವೇದಾನ್ತ ಕರ್ತೃ, ವೇದವಿತ್—ವೇದಗಳನ್ನು ತಿಳಿದವನು, ಏವ—ಖಂಡಿತವಾಗಿ, ಚ—ಮತ್ತು, ಅಹಮ್—ನಾನು.

**ನಾನು ಪ್ರತಿಯೊಬ್ಬರ ಹೃದಯನಿವಿಷ್ಟನು, ಮತ್ತು ನನ್ನಿಂದ ನೆನಪು, ಜ್ಞಾನ, ಮತ್ತು ಮರೆವು ಬರುತ್ತವೆ. ಎಲ್ಲ ವೇದಗಳಿಂದ ನನ್ನನ್ನೇ ತಿಳಿಯಬೇಕು. ನಿಜವಾಗಿ, ನಾನೇ ವೇದಾಂತ ಕರ್ತೃ, ಮತ್ತು ನಾನು ವೇದಗಳನ್ನು ತಿಳಿದವನು.**

**ಭಾವಾರ್ಥ** : ಪರಮ ಪ್ರಭುವು ಪರಮಾತ್ಮನಾಗಿ ಪ್ರತಿಯೊಬ್ಬರ ಹೃದಯ ನಿವಿಷ್ಟನು, ಮತ್ತು ಅವನಿಂದಲೇ ಸಕಲ ಚಟುವಟಿಕೆಗಳು ಪ್ರಾರಂಭ. ಜೀವಿಯು ತನ್ನ ಪೂರ್ವ ಜನ್ಮದ ಪ್ರತಿಯೊಂದನ್ನೂ ಮರೆಯುತ್ತಾನೆ, ಆದರೆ ಅವನು ತನ್ನ ಸಕಲ ಕರ್ಮ

ಸಾಕ್ಷಿಯಾದ ಪರಮ ಪ್ರಭುವಿನ ನಿರ್ದೇಶಾನುಸಾರ ವರ್ತಿಸಬೇಕು. ಆದ್ದರಿಂದ, ಅವನು ತನ್ನ ಪೂರ್ವಕರ್ಮಾನುಸಾರ ಕರ್ಮ ಮಾಡುತ್ತಾನೆ. ಅಗತ್ಯ ಜ್ಞಾನವು ಅವನಿಗೆ ಒದಗಿಸಲ್ಪಡುತ್ತದೆ, ಮತ್ತು ಅವನಿಗೆ ಸ್ಮೃತಿ ನೀಡಲಾಗುತ್ತದೆ, ಮತ್ತು ಅವನು ತನ್ನ ಪೂರ್ವಜನ್ಮ ವಿಷಯವನ್ನು ಕೂಡ ಮರೆತುಹೋಗುತ್ತಾನೆ. ಹೀಗೆ ಭಗವಂತನು ಸರ್ವ ವ್ಯಾಪ್ತನಷ್ಟೇ ಅಲ್ಲದೇ, ಅವನು ಪ್ರತಿಯೊಬ್ಬನ ಹೃದಯದಲ್ಲಿಯೂ ಸ್ಥಾಪಿತನು; ಅವನು ನಾನಾ ಕಾಮ್ಯ ಫಲಗಳನ್ನು ನೀಡುತ್ತಾನೆ. ಅವನು ವ್ಯಕ್ತಿಶೂನ್ಯ ಬ್ರಹ್ಮನ್ ಆಗಿ, ಪರಮ ದೇವೋತ್ತಮ ಪುರುಷನಾಗಿ ಮತ್ತು ಸ್ಥಳೀಯ ಪರಮಾತ್ಮನಾಗಿ ಅಷ್ಟೇ ಅಲ್ಲದೆ ವೇದಾವತಾರ ರೂಪನಾಗಿಯೂ ಆರಾಧ್ಯನು. ಜನರು ತಮ್ಮ ಜೀವನವನ್ನು ಸರಿಯಾಗಿ ರೂಪಿಸಿಕೊಂಡು ದೇವತ್ವಕ್ಕೆ ಮರಳಿ ಧಾಮಕ್ಕೆ ಹಿಂದಿರುಗಲು ವೇದಗಳು ಸರಿಯಾದ ನಿರ್ದೇಶನ ನೀಡುತ್ತವೆ. ವೇದಗಳು ಪರಮ ದೇವೋತ್ತಮ ಪುರುಷ ಶ್ರೀಕೃಷ್ಣನ ಜ್ಞಾನ ವನ್ನು ನೀಡುತ್ತವೆ, ಮತ್ತು ವ್ಯಾಸರ ಅವತಾರವಾಗಿ ಕೃಷ್ಣನು ವೇದಾಂತ ಸೂತ್ರದ ಕರ್ತೃ. ವೇದವ್ಯಾಸರಿಂದ ಶ್ರೀಮದ್ ಭಾಗವತದಲ್ಲಿ ವೇದಾಂತ ಸೂತ್ರದ ವ್ಯಾಖ್ಯಾನವು ವೇದಾಂತ ಸೂತ್ರಗಳ ನಿಜ ಅರಿವನ್ನು ನೀಡುತ್ತದೆ. ಪರಮ ಪ್ರಭು ಅದೆಷ್ಟು ಪೂರ್ಣ ನೆಂದರೆ ಬದ್ಧ ಆತ್ಮನ ಉದ್ಧಾರಕ್ಕಾಗಿ ಅವನು ಆಹಾರ ಒದಗಿಸುವವನು ಮತ್ತು ಜೀರ್ಣಿಸು ವವನು, ಅವನು ಕರ್ಮಸಾಕ್ಷಿಯೂ, ಮತ್ತು ವೇದಗಳ ರೂಪದಲ್ಲಿ ಜ್ಞಾನ ಪ್ರದಾಯಕನು, ಮತ್ತು ಪರಮ ದೇವೋತ್ತಮ ಪುರುಷ ಶ್ರೀಕೃಷ್ಣನಾಗಿ ಅವನು ಬದ್ಧಾತ್ಮನಿಂದ ಆರಾಧ್ಯನು. ಹೀಗೆ ಭಗವಂತನು ಸರ್ವ ಮಂಗಲನು; ಭಗವಂತನು ದಯಾಪೂರ್ಣನು.

**ಅನ್ತಃ ಪ್ರವಿಷ್ಟಃ ಶಾಸ್ತಾ ಜನಾನಾಮ್.** ಜೀವಿಯು ತನ್ನ ಸದ್ಯದ ದೇಹ ಬಿಟ್ಟೊಡನೆಯೇ ವಿಸ್ಮೃತಿ ಹೊಂದುತ್ತಾನೆ, ಆದರೆ ಪರಮ ಪ್ರಭುವಿನಿಂದ ಚಾಲಿತವಾದ ಕೆಲಸವನ್ನು ಮತ್ತೆ ಪ್ರಾರಂಭಿಸುತ್ತಾನೆ. ಅವನು ಮರೆತರೂ, ಅವನು ಪೂರ್ವ ಜನ್ಮ ದಲ್ಲಿ ನಿಲ್ಲಿಸಿದ್ದರಿಂದ ಮತ್ತೆ ತನ್ನ ಕೆಲಸವನ್ನು ಹೊಸದಾಗಿ ಪ್ರಾರಂಭಿಸಲು ಭಗವಂತನು ಅವನಿಗೆ ಬುದ್ಧಿ ನೀಡುತ್ತಾನೆ. ಹೀಗೆ ಹೃದಯ ಸ್ಥಳದಲ್ಲಿ ಸನ್ನಿವೇಶಿತ ಪರಮ ಪ್ರಭು ವಿನ ಆದೇಶಾನುಸಾರ ಜೀವಿಯು ಈ ಜಗತ್ತಿನಲ್ಲಿ ಸುಖಭೋಗ ಅಥವಾ ದುಃಖಾನುಭವ ಮಾಡುವುದಲ್ಲದೆ ಅವನು ಅವನಿಂದ ವೇದಗಳನ್ನು ಅರಿತುಕೊಳ್ಳುವ ಅವಕಾಶವನ್ನು ಪಡೆಯುತ್ತಾನೆ. ಒಬ್ಬನು ವೇದಜ್ಞಾನವನ್ನು ಅರಿತುಕೊಳ್ಳುವ ಬಗ್ಗೆ ತೀವ್ರಾಸಕ್ತ ನಾಗಿದ್ದರೆ, ಆಗ ಕೃಷ್ಣನು ಅಗತ್ಯವಾದ ಬುದ್ಧಿಯನ್ನು ನೀಡುತ್ತಾನೆ. ಏಕೆ ಅವನು ಅರಿವಿಗಾಗಿ ವೇದಜ್ಞಾನವನ್ನು ನೀಡುತ್ತಾನೆ ? ಏಕೆಂದರೆ ಜೀವಿಯು ವ್ಯಕ್ತಿಗತವಾಗಿ ಕೃಷ್ಣನನ್ನು ಅರಿತುಕೊಳ್ಳುವ ಅವಶ್ಯಕತೆಯಿದೆ. ವೇದ ಸಾಹಿತ್ಯವು ಇದನ್ನು ದೃಢಪಡಿಸು ತ್ತದೆ. (**ಯೋಽಸೌ ಸರ್ವೈರ್ ವೇದೈರ್ ಗೀಯತೇ**) ಸಕಲ ವೇದ ಸಾಹಿತ್ಯದಲ್ಲಿ, ನಾಲ್ಕು ವೇದಗಳು, ವೇದಾಂತಸೂತ್ರ, ಉಪನಿಷತ್ತುಗಳು ಮತ್ತು ಪುರಾಣಗಳಿಂದ ಆರಂಭ ಮಾಡಿ ಭಗವಂತನ ಮಹಿಮೆಗಳು ಗಾನ ಮಾಡಲ್ಪಟ್ಟಿವೆ. ವೈದಿಕ ಕರ್ಮಗಳ ಆಚರಣೆಯಿಂದ ವೇದ ತತ್ವಜ್ಞಾನ, ಚರ್ಚೆಯಿಂದ ಮತ್ತು ಭಕ್ತಿಯುತ ಸೇವೆಯಲ್ಲಿ ಭಗವದಾರಾಧನೆಯಿಂದ

ಅವನು ಪ್ರಾಪ್ಯನು. ಆದ್ದರಿಂದ ಕೃಷ್ಣನನ್ನು ಅರಿತುಕೊಳ್ಳುವುದೇ ವೇದಗಳ ಉದ್ದೇಶ. ವೇದಗಳು ಕೃಷ್ಣನನ್ನು ಅರಿತುಕೊಳ್ಳುವ ನಿರ್ದೇಶನವನ್ನು ಮತ್ತು ಅವನ ಸಾಕ್ಷಾತ್ಕಾರದ ಪ್ರಕ್ರಿಯೆಯನ್ನು ನೀಡುತ್ತವೆ. ಅಂತಿಮ ಗುರಿ ಪರಮ ದೇವೋತ್ತಮ ಪುರುಷನು. ವೇದಾಂತ ಸೂತ್ರ (1.1.4) ಈ ಮುಂದಿನ ಶಬ್ದಗಳಲ್ಲಿ ಇದನ್ನು ದೃಢೀಕರಿಸುತ್ತದೆ. **ತತ್ ತು ಸಮನ್ವಯಾತ್.** ಒಬ್ಬನು ಮೂರು ಹಂತಗಳಲ್ಲಿ ಪರಿಪೂರ್ಣತೆಯನ್ನು ಪಡೆದುಕೊಳ್ಳಬಹುದು. ವೈದಿಕ ಸಾಹಿತ್ಯದ ಅರಿವಿನಿಂದ ಒಬ್ಬನು ಪರಮ ದೇವೋತ್ತಮ ಪುರುಷನೊಂದಿಗೆ ತನ್ನ ಸಂಬಂಧವನ್ನು ಅರಿತುಕೊಳ್ಳಬಹುದು, ನಾನಾ ಪ್ರಕ್ರಿಯೆಗಳ ಆಚರಣೆಯಿಂದ ಒಬ್ಬನು ಅವನ ಬಳಿಗೆ ಹೋಗಬಹುದು, ಮತ್ತು ಕೊನೆಗೆ ಪರಮ ದೇವೋತ್ತಮ ಪುರುಷನ ಹೊರತು ಬೇರೆಯಲ್ಲದ ಪರಮಗುರಿಯನ್ನು ಹೊಂದಬಹುದು. ಈ ಶ್ಲೋಕದಲ್ಲಿ ವೇದಗಳ ಉದ್ದೇಶ, ವೇದಗಳ ಅರಿವು ಮತ್ತು ವೇದಗಳ ಗುರಿ ಸ್ಪಷ್ಟವಾಗಿ ನಿರೂಪಿತ.

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥ ೧೬ ॥**

ದ್ವೌ—ಎರಡು, ಇಮೌ—ಈ, ಪುರುಷೌ—ಜೀವಿಗಳು, ಲೋಕೇ—ಲೋಕದಲ್ಲಿ, ಕ್ಷರಃ—ಕ್ಷರ, ಚ—ಮತ್ತು, ಅಕ್ಷರಃ—ಅಕ್ಷರ, ಏವ—ಖಂಡಿತವಾಗಿ, ಚ—ಮತ್ತು, ಕ್ಷರಃ—ಕ್ಷರ, ಸರ್ವಾಣಿ—ಎಲ್ಲ, ಭೂತಾನಿ—ಜೀವಿಗಳು, ಕೂಟ-ಸ್ಥಃ—ಏಕತ್ವದಲ್ಲಿ, ಅಕ್ಷರಃ—ಅಕ್ಷರ, ಉಚ್ಯತೇ—ಎಂದು ಹೇಳಿದೆ.

**ಜೀವಿಗಳಲ್ಲಿ ಕ್ಷರ ಮತ್ತು ಅಕ್ಷರವೆಂದು ಎರಡು ವರ್ಗಗಳಿವೆ. ಭೌತಿಕ ಜಗತ್ತಿನಲ್ಲಿ ಪ್ರತಿಯೊಬ್ಬ ಜೀವಿಯೂ ಕ್ಷರನು, ಮತ್ತು ಅಧ್ಯಾತ್ಮ ಜಗತ್ತಿನಲ್ಲಿ ಪ್ರತಿಯೊಬ್ಬ ಜೀವಿಯೂ ಅಕ್ಷರನು ಎಂದು ಕರೆದಿದೆ.**

**ಭಾವಾರ್ಥ :** ಈಗಾಗಲೇ ವಿವರಿಸಿದಂತೆ, ವೇದವ್ಯಾಸಾವತಾರದಲ್ಲಿ ಭಗವಂತನು ವೇದಾಂತ ಸೂತ್ರವನ್ನು ರಚಿಸಿದನು. ಇಲ್ಲಿ ಭಗವಂತನು ಸಾರಾಂಶ ರೂಪದಲ್ಲಿ ವೇದಾಂತ ಸೂತ್ರಗಳ ಅಂಶಗಳನ್ನು ನೀಡುತ್ತಿದ್ದಾನೆ. ಅಸಂಖ್ಯರಾದ ಜೀವಿಗಳನ್ನು ಕ್ಷರ ಮತ್ತು ಅಕ್ಷರ ವೆಂಬ ಎರಡು ವರ್ಗವಾಗಿ ವಿಂಗಡಿಸಬಹುದೆಂದು ಅವನು ಹೇಳುತ್ತಾನೆ. ಜೀವಿಗಳು ಪರಮದೇವೋತ್ತಮ ಪುರುಷನ ನಿತ್ಯ ಪ್ರತ್ಯೇಕಿತ ವಿಭಿನ್ನಾಂಶರು. ಅವರು ಭೌತಿಕ ಜಗತ್ತಿನೊಂದಿಗೆ ಸಂಪರ್ಕದಲ್ಲಿದ್ದಾಗ ಜೀವ-ಭೂತ ಎಂದು ಕರೆದಿದೆ. ಮತ್ತು ಇಲ್ಲಿ ಕೊಟ್ಟ **ಕ್ಷರಃ ಸರ್ವಾಣಿ ಭೂತಾನಿ** ಸಂಸ್ಕೃತ ಪದಗಳ ಅರ್ಥವೆಂದರೆ ಅವರು ಕ್ಷರರು. ಆದರೆ ಪರಮದೇವೋತ್ತಮ ಪುರುಷನೊಂದಿಗೆ ಅಖಂಡವಾಗಿರುವವರು ಅಕ್ಷರ ಎಂದು ಕರೆದಿದೆ. ಅಖಂಡತ್ವ ಎಂದರೆ ಅವರಿಗೆ ಪ್ರತ್ಯೇಕ ವ್ಯಕ್ತಿತ್ವ ಇಲ್ಲವೆಂದಲ್ಲ. ಆದರೆ, ಅನೈಕ್ಯತೆ ಇಲ್ಲ ಎಂದು ಅರ್ಥ. ಅವರೆಲ್ಲರೂ ಸೃಷ್ಟಿಯ ಉದ್ದೇಶದಲ್ಲಿ ಸಮ್ಮತರು. ಆದರೆ ಅಧ್ಯಾತ್ಮ ಜಗತ್ತಿನಲ್ಲಿ ಸೃಷ್ಟಿ ಎಂಬುದಿಲ್ಲ ನಿಜ. ಆದರೆ ವೇದಾಂತ-ಸೂತ್ರದಲ್ಲಿ ಹೇಳಿದಂತೆ ಪರಮದೇವೋತ್ತಮ ಪುರುಷನು ಸಕಲ ಉದ್ಭೂತಿಗಳ ಆಕರನಾದ್ದರಿಂದ ಆ ಕಲ್ಪನೆಯು ವಿವರಿಸಲ್ಪಟ್ಟಿದೆ.

ಪರಮಪುರುಷೋತ್ತಮ ಪುರುಷ, ಶ್ರೀಕೃಷ್ಣನ ನಿರೂಪಣಾನುಸಾರ, ಜೀವಿಗಳಲ್ಲಿ ಎರಡು ವರ್ಗಗಳು. ವೇದಗಳು ಈ ಬಗ್ಗೆ ಪ್ರಮಾಣ ಒದಗಿಸುತ್ತವೆ, ಆದ್ದರಿಂದ ಆ ಬಗ್ಗೆ ಸಂದೇಹವಿಲ್ಲ. ಈ ಜಗತ್ತಿನಲ್ಲಿ ಮನಸ್ಸು ಮತ್ತು ಪಂಚೇಂದ್ರಿಯಗಳೊಡನೆ ಹೋರಾಡುವ ಜೀವಿಗಳು ಬದಲಾವಣೆ ಹೊಂದುವ ಭೌತಿಕ ದೇಹವುಳ್ಳವರು. ಜೀವಿಯು ಬದ್ಧನಾಗಿರುವವರೆಗೆ ಅವನ ದೇಹವು ಜಡ ಸಂಪರ್ಕದಿಂದ ಬದಲಾವಣೆ ಹೊಂದುತ್ತದೆ, ಜಡವು ಬದಲಾವಣೆ ಹೊಂದುವುದರಿಂದ, ಜೀವಿಯು ಬದಲಾದಂತೆ ತೋರುತ್ತಾನೆ. ಆದರೆ ಆಧ್ಯಾತ್ಮ ಜಗತ್ತಿನಲ್ಲಿ ದೇಹವು ಜಡ ನಿರ್ಮಿತವಲ್ಲ; ಆದ್ದರಿಂದ ಬದಲಾವಣೆ ಇಲ್ಲ. ಭೌತಿಕ ಜಗತ್ತಿನಲ್ಲಿ ಜೀವಿಯು—ಜನನ, ಬೆಳವಣಿಗೆ, ಬದುಕು, ಪುನರ್ ಉತ್ಪತ್ತಿ, ಆ ಮೇಲೆ ಮುಪ್ಪು ಮತ್ತು ನಾಶ—ಹೀಗೆ ಆರು ಬಗೆಯ ಬದಲಾವಣೆಗಳನ್ನು ಹೊಂದುತ್ತಾನೆ. ಇವು ಭೌತಿಕ ದೇಹದ ಬದಲಾವಣೆಗಳು. ಆದರೆ ಆಧ್ಯಾತ್ಮ ಜಗತ್ತಿನಲ್ಲಿ ದೇಹ ಬದಲಾವಣೆ ಇಲ್ಲ; ಮುಪ್ಪು ಇಲ್ಲ, ಜನನವಿಲ್ಲ. ಮರಣವಿಲ್ಲ, ಅಲ್ಲಿ ಎಲ್ಲವೂ ಅಖಂಡದಲ್ಲಿರುತ್ತವೆ. **ಕ್ಷರಃ ಸರ್ವಾಣಿ ಭೂತಾನಿ :** ಪ್ರಥಮ ಸೃಷ್ಟ ಜೀವಿ ಬ್ರಹ್ಮನಿಂದ ಕ್ಷುದ್ರ ಇರುವೆಯುವರೆಗೆ ಜಡ ಸಂಪರ್ಕದಲ್ಲಿ ಬರುವ ಯಾವ ಜೀವಿಯೇ ಆಗಲಿ, ತನ್ನ ದೇಹ ಬದಲಾಯಿಸಿಕೊಳ್ಳುತ್ತಿದೆ; ಆದ್ದರಿಂದ ಅವರೆಲ್ಲ ಕ್ಷರರು. ಆದರೆ ಆಧ್ಯಾತ್ಮ ಜಗತ್ತಿನಲ್ಲಿ, ಅವರು ಸದಾ ಅಖಂಡತ್ವದಲ್ಲಿ ಮುಕ್ತರು.

**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥ ೧೭ ॥**

ಉತ್ತಮಃ—ಅತ್ಯುತ್ತಮ, ಪುರುಷಃ—ಪುರುಷನು, ತು—ಆದರೆ, ಅನ್ಯಃ—ಅನ್ಯನು, ಪರಮ—ಪರಮನು, ಆತ್ಮಾ—ಆತ್ಮನು, ಇತಿ—ಹೀಗೆ, ಉದಾಹೃತಃ—ಎಂದು ಹೇಳಿದೆ, ಯಃ—ಯಾರು. ಲೋಕ—ಬ್ರಹ್ಮಾಂಡದ, ತ್ರಯಮ್—ಮೂರು ಭಾಗಗಳನ್ನು, ಆವಿಶ್ಯ—ಪ್ರವೇಶಿಸಿ, ಬಿಭರ್ತಿ—ಪೋಷಣೆ ಮಾಡುತ್ತಾನೆ, ಅವ್ಯಯಃ—ನಾಶರಹಿತನು, ಈಶ್ವರಃ—ಪ್ರಭು.

**ಇವರಿಬ್ಬರಲ್ಲದೆ, ಮೂರುಲೋಕಗಳಲ್ಲಿ ಪ್ರವೇಶಿಸಿ ಮತ್ತು ಪಾಲನೆ ಮಾಡುತ್ತಿರುವ ಅವಿನಾಶಿ, ಪರಮ ಆತ್ಮ, ಅತ್ಯುನ್ನತ ಪುರುಷ, ಸ್ವಯಂ ಭಗವಾನ್ ಇದ್ದಾನೆ.**

**ಭಾವಾರ್ಥ :** ಈ ಶ್ಲೋಕದ ವಿಚಾರವು ಕಠ ಉಪನಿಷತ್ತಿನಲ್ಲಿ (2.2.13) ಮತ್ತು ಶ್ವೇತಾಶ್ವತರ ಉಪನಿಷತ್ತಿನಲ್ಲಿ (6.13.) ಬಹು ಸೊಗಸಾಗಿ ವ್ಯಕ್ತಪಟ್ಟಿದೆ. ಅಲ್ಲಿ, ಅಸಂಖ್ಯ ಜೀವಿಗಳಲ್ಲಿ ಕೆಲವರು ಬದ್ಧರು ಮತ್ತು ಕೆಲವರು ಮುಕ್ತರ ಮೇಲೆ ಪರಮಾತ್ಮನಾದ ಪರಮ ಪುರುಷನಿದ್ದಾನೆ, ಎಂದು ಸ್ಪಷ್ಟವಾಗಿ ಹೇಳಿದೆ. ಉಪನಿಷತ್ತಿನ ಶ್ಲೋಕವು ಹೀಗೆ ಮುಂದುವರಿಯುತ್ತದೆ. **ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮ್** ತಾತ್ಪರ್ಯವೆಂದರೆ, ಬದ್ಧ ಮತ್ತು ಮುಕ್ತ ಸಕಲ ಜೀವಿಗಳಲ್ಲಿ ಅವರನ್ನು ಪಾಲಿಸುವ ಮತ್ತು ಭಿನ್ನ ಭಿನ್ನ ಕರ್ಮಾನುಸಾರ ಅವರಿಗೆ ಭೋಗಾನುಕೂಲಗಳನ್ನು ಒದಗಿಸುವ ಪರಮ

ದೇವೋತ್ತಮ ಪುರುಷನಾದ ಏಕೈಕ ಪರಮ ಪುರುಷನಿದ್ದಾನೆ. ಆ ಪರಮ ದೇವೋತ್ತಮ ಪುರುಷನು ಪರಮಾತ್ಮನಾಗಿ ಪ್ರತಿಯೊಬ್ಬರ ಹೃದಯ ಸನ್ನಿವೇಶಿತನು. ಅವನನ್ನು ಅರಿಯಬಲ್ಲ ಜ್ಞಾನಿಯು ಪರಿಪೂರ್ಣ ಶಾಂತಿಯನ್ನು ಹೊಂದಲು ಅರ್ಹನು, ಅನ್ಯರಲ್ಲ.

**ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥ ೧೮ ॥**

ಯಸ್ಮಾತ್—ಏಕೆಂದರೆ, ಕ್ಷರಮ್—ಕ್ಷರರಿಗೆ, ಅತೀತಃ—ಅತೀತನು, ಅಹಮ್—ನಾನು ಇದ್ದೇನೆ, ಅಕ್ಷರಾತ್—ಅಕ್ಷರಾತೀತನಾಗಿ, ಅಪಿ—ಕೂಡ, ಚ—ಮತ್ತು, ಉತ್ತಮಃ—ಉತ್ತಮನು, ಅತಃ—ಆದ್ದರಿಂದ, ಅಸ್ಮಿ—ನಾನು ಆಗಿದ್ದೇನೆ,ಲೋಕೇ—ಜಗತ್ತಿನಲ್ಲಿ, ವೇದೇ—ವೇದ ಸಾಹಿತ್ಯದಲ್ಲಿ, ಚ—ಮತ್ತು, ಪ್ರಥಿತಃ—ಪ್ರಸಿದ್ಧನು. ಪುರುಷ-ಉತ್ತಮಃ—ಪರಮ ಪುರುಷನಾಗಿ.

**ನಾನು ಕ್ಷರ ಮತ್ತು ಅಕ್ಷರದಿಂದ ಅತೀತನಾಗಿರುವುದರಿಂದ, ಮತ್ತು ನಾನು ಅತ್ಯುತ್ತಮನಾದ್ದರಿಂದ ಜಗತ್ತಿನಲ್ಲಿ ಮತ್ತು ವೇದಗಳಲ್ಲಿ ಎರಡರಲ್ಲಿಯೂ ಪರಮ ಪುರುಷನಾಗಿ ಖ್ಯಾತನು.**

**ಭಾವಾರ್ಥ :** ಬದ್ಧಾತ್ಮನಾಗಲಿ, ಮುಕ್ತಾತ್ಮನಾಗಲಿ, ಯಾರೂ ಕೂಡ ಪರಮ ದೇವೋತ್ತಮ ಪುರುಷ, ಕೃಷ್ಣನನ್ನು ಮೀರಿಸಲಾರರು. ಆದ್ದರಿಂದ ಅವನು ಉತ್ತಮೋತ್ತಮ ಪುರುಷನು. ಜೀವಿ ಮತ್ತು ಪರಮದೇವೋತ್ತಮ ಪುರುಷ ಉಭಯರೂ ವ್ಯಕ್ತಿಗಳು ಎಂಬುದು ಇಲ್ಲಿ ಸ್ಪಷ್ಟ. ಬದ್ಧ ಸ್ಥಿತಿಯಲ್ಲಾಗಲಿ, ಅಥವಾ ಮುಕ್ತ ಸ್ಥಿತಿಯಲ್ಲಾಗಲಿ, ಜೀವಿಗಳು ಪ್ರಮಾಣದಲ್ಲಿ ಪರಮ ದೇವೋತ್ತಮ ಪುರುಷನ ಅಚಿಂತ್ಯ ಶಕ್ತಿಗಳನ್ನು ದಾಟಿ ಹೋಗಲಾರರು ಎಂಬುದೇ ವ್ಯತ್ಯಾಸ. ಪರಮಪ್ರಭು ಮತ್ತು ಜೀವಿಗಳು ಎಲ್ಲ ಅಂಶಗಳಲ್ಲಿ ಒಂದೇ ಮಟ್ಟದವರು ಅಥವಾ ಸಮರು ಎಂದು ಭಾವಿಸುವುದು ತಪ್ಪು. ಅವರೀರ್ವರ ವ್ಯಕ್ತಿತ್ವಗಳಲ್ಲಿ ಮೇಲು ಕೀಳುಗಳ ಪ್ರಶ್ನೆ ಸದಾ ಇದ್ದೇ ಇದೆ. **ಉತ್ತಮ** ಪದವು ಬಹು ಮಹತ್ವದ್ದು. ಪರಮ ದೇವೋತ್ತಮ ಪುರುಷನನ್ನು ಯಾರೂ ಮೀರಿಸಲಾರರು.

**ಲೋಕೇ** ಎಂಬ ಪದವು "ಪೌರುಷ ಆಗಮದಲ್ಲಿ( ಸ್ಮೃತಿ ಶಾಸ್ತ್ರಗಳಲ್ಲಿ)" ಮಹತ್ವದ್ದು. **ನಿರುಕ್ತಿ ನಿಘಂಟಿ**ನಲ್ಲಿ ದೃಢಪಟ್ಟಂತೆ, **ಲೋಕ್ಯತೇ ವೇದಾರ್ಥೋಽನೇನ :** ವೇದಗಳ ಉದ್ದೇಶವು ಸ್ಮೃತಿ ಶಾಸ್ತ್ರಗಳಿಂದ ವಿವರಿಸಲ್ಪಟ್ಟಿದೆ."

ಪರಮ ಪ್ರಭು, ತನ್ನ ಸ್ಥಳೀಯ ಪರಮಾತ್ಮ ಅಂಶದಲ್ಲಿ ಸ್ವಯಂ ವೇದಗಳಲ್ಲಿಯೂ ವರ್ಣಿಸಲ್ಪಟ್ಟಿದ್ದಾನೆ. ಈ ಕೆಳಗಿನ ಶ್ಲೋಕವು ವೇದಗಳಲ್ಲಿ ಬರುತ್ತದೆ. ಛಾಂದೋಗ್ಯ ಉಪನಿಷದ್ **(8.12.3) : ತಾವದ್ ಏಷ ಸಂಪ್ರಸಾ ದೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂ ಜ್ಯೋತಿರೂಪಂ ಸಮ್ಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ಸ ಉತ್ತಮಃ ಪುರುಷಃ.** "ದೇಹದಿಂದ ಹೊರಬರುವ ಪರಮಾತ್ಮನು ವ್ಯಕ್ತಿಶೂನ್ಯ **ಬ್ರಹ್ಮಜ್ಯೋತಿ**ಯಲ್ಲಿ ಪ್ರವೇಶಿಸುತ್ತಾನೆ. ಅನಂತರ ತನ್ನ ರೂಪದಲ್ಲಿ ಅವನು ತನ್ನ ಆಧ್ಯಾತ್ಮ ವ್ಯಕ್ತಿತ್ವದಲ್ಲಿ ಇರುತ್ತಾನೆ. ಆ ಪರಮನನ್ನು ಪರಮ

ಪುರುಷ ಎಂದು ಕರೆದಿದೆ." ಹೀಗೆಂದರೆ ಪರಮ ಪುರುಷನು ಅಂತಿಮ ಜ್ಯೋತಿಯಾದ ತನ್ನ ಆಧ್ಯಾತ್ಮ ಪ್ರಕಾಶವನ್ನು ಬೀರುತ್ತಿದ್ದಾನೆ ಮತ್ತು ಪ್ರಸರಿಸುತ್ತಿದ್ದಾನೆ ಎಂದು ಅರ್ಥ. ಆ ಪರಮ ಪುರುಷನಿಗೆ ಪರಮಾತ್ಮನಾಗಿ ಸ್ಥಳೀಯ ರೂಪವೂ ಇದೆ. ಸತ್ಯವತಿ ಮತ್ತು ಪರಾಶರರ ಪುತ್ರನಾದ ವ್ಯಾಸನಾಗಿ ಅವತರಿಸಿ ಅವನು ವೇದಜ್ಞಾನವನ್ನು ವಿವರಿಸುತ್ತಾನೆ.

**ಯೋ ಮಾಮೇವಮಸಮ್ಮೂಢೋ ಜಾನಾತಿ ಪುರುಷೋತ್ತಮಮ್ ।**
**ಸ ಸರ್ವವಿದ್ ಭಜತಿ ಮಾಂ ಸರ್ವಭಾವೇನ ಭಾರತ ॥ ೧೯ ॥**

ಯಃ—ಯಾರೋ ಅವನು, ಮಾಮ್—ನನ್ನನ್ನು, ಏವಮ್—ಹೀಗೆ, ಅಸಮ್ಮೂಢಃ—ಸಂದೇಹವಿಲ್ಲದೆ, ಜಾನಾತಿ—ತಿಳಿಯುತ್ತಾನೆ, ಪುರುಷ-ಉತ್ತಮಮ್—ಪರಮ ದೇವೋತ್ತಮ ಪುರುಷನೆಂದು, ಸಃ—ಅವನು, ಸರ್ವ-ವಿತ್—ಪ್ರತಿಯೊಂದನ್ನು ತಿಳಿದವನು, ಭಜತಿ—ಭಕ್ತಿಯುತ ಸೇವೆ ಸಲ್ಲಿಸುತ್ತಾನೆ, ಮಾಮ್—ನನಗೆ, ಸರ್ವ-ಭಾವೇನ—ಸರ್ವ ಭಾವಗಳಲ್ಲಿ, ಭಾರತ—ಹೇ ಭರತ ಪುತ್ರನೇ.

**ನಿಸ್ಸಂದೇಹವಾಗಿ ನನ್ನನ್ನು ಪರಮ ದೇವೋತ್ತಮ ಪುರುಷನೆಂದು ತಿಳಿದವನು ಪ್ರತಿಯೊಂದನ್ನೂ ತಿಳಿದವನು. ಆದ್ದರಿಂದ ಹೇ ಭರತ ಪುತ್ರನೇ, ಅವನು ನನಗೆ ಪೂರ್ಣ ಭಕ್ತಿಯುತ ಸೇವೆ ಮಾಡಲು ತನ್ನನ್ನು ತೊಡಗಿಸಿಕೊಳ್ಳುತ್ತಾನೆ.**

**ಭಾವಾರ್ಥ :** ಜೀವಿಗಳ ಮತ್ತು ಪರಮ ಪರತತ್ತ್ವದ ಸ್ವರೂಪದ ಬಗ್ಗೆ ಅನೇಕ ತಾತ್ವಿಕ ಊಹಾಪೋಹಗಳಿವೆ. ಶ್ರೀಕೃಷ್ಣನನ್ನು ಪರಮ ಪುರುಷನೆಂದು ತಿಳಿದವನು ಪ್ರತಿಯೊಂದನ್ನೂ ವಾಸ್ತವಿಕವಾಗಿ ತಿಳಿದಿದ್ದಾನೆ ಎಂದು ಈ ಶ್ಲೋಕದಲ್ಲಿ ಪರಮ ದೇವೋತ್ತಮ ಪುರುಷನು ಸ್ಪಷ್ಟವಾಗಿ ವಿವರಿಸುತ್ತಾನೆ. ಅಪರಿಪೂರ್ಣವಾಗಿ ತಿಳಿದವನು ಪರತತ್ವದ ಬಗ್ಗೆ ಸುಮ್ಮನೆ ಊಹಾಪೋಹ ಮಾಡುತ್ತಾ ಹೋಗುತ್ತಾನೆ, ಆದರೆ ಪರಿಪೂರ್ಣವಾಗಿ ತಿಳಿದವನು ತನ್ನ ಬೆಲೆಯುಳ್ಳ ಸಮಯವನ್ನು ಹಾಳು ಮಾಡದೆ, ನೇರವಾಗಿ ಪರಮ ಪ್ರಭುವಿನ ಭಕ್ತಿಯುತ ಸೇವೆಯಾದ ಕೃಷ್ಣಪ್ರಜ್ಞೆಯಲ್ಲಿ ನಿರತನಾಗುತ್ತಾನೆ. ಇಡೀ ಭಗವದ್ಗೀತೆಯಲ್ಲಿ ಈ ಸಂಗತಿಯು ಪ್ರತಿ ಹೆಜ್ಜೆಯಲ್ಲಿ ಒತ್ತಿ ಹೇಳಲ್ಪಟ್ಟಿದೆ. ಇಷ್ಟಾದರೂ ಪರಮ ಪರತತ್ವ ಮತ್ತು ಜೀವಿಗಳು ಒಂದೇ ಎಂದು ವ್ಯಾಖ್ಯಾನ ಮಾಡುವ ಹಠಮಾರಿಗಳು ಅನೇಕರಿದ್ದಾರೆ.

ವೇದ ಜ್ಞಾನವನ್ನು ಶ್ರವಣದ ಮೂಲಕ ಕಲಿಯುವುದನ್ನು **ಶ್ರುತಿ** ಎಂದು ಕರೆದಿದೆ. ಒಬ್ಬನು ವಾಸ್ತವಿಕವಾಗಿ ಕೃಷ್ಣ ಮತ್ತು ಆವನ ಪ್ರತಿನಿಧಿಗಳಾದ ಅಧಿಕಾರಿಗಳಿಂದ ವೇದ ಸಂದೇಶವನ್ನು ಪಡೆಯಬೇಕು. ಇಲ್ಲಿ ಕೃಷ್ಣನು ಪ್ರತಿಯೊಂದನ್ನು ಬಹು ಸೊಗಸಾಗಿ ಸ್ಪಷ್ಟಗೊಳಿಸುತ್ತಾನೆ, ಮತ್ತು ಒಬ್ಬನು ಈ ಆಕರದಿಂದ ಶ್ರವಣ ಮಾಡಬೇಕು. ಕೇವಲ ಸೂಕರಗಳಂತೆ (ಹಂದಿಗಳಂತೆ) ಶ್ರವಣ ಮಾಡಿದರೆ ಸಾಲದು ; ಅಧಿಕಾರಿಗಳಿಂದ ಅರಿತುಕೊಳ್ಳಲು ಶಕ್ತನಾಗಬೇಕು. ಒಬ್ಬನು ಸುಮ್ಮನೆ ತಾತ್ವಿಕವಾಗಿ ಊಹಾಪೋಹ ಮಾಡಬೇಕೆಂದಲ್ಲ. ಈ ಜೀವಿಗಳು ಸದಾ ಪರಮದೇವೋತ್ತಮ ಪುರುಷನ ಅಧೀನರು ಎಂಬು

ದನ್ನು ಒಬ್ಬನು ವಿನೀತನಾಗಿ ಭಗವದ್ಗೀತೆಯಿಂದ ಶ್ರವಣ ಮಾಡಬೇಕು. ಇದನ್ನರಿಯಲು ಶಕ್ತನಾದವನು ಪರಮ ದೇವೋತ್ತಮ ಪುರುಷ, ಶ್ರೀಕೃಷ್ಣನ ಪ್ರಕಾರ ವೇದಗಳ ಉದ್ದೇಶವನ್ನು ತಿಳಿದಿರುವನು; ಇತರರು ಯಾರೂ ವೇದಗಳ ಉದ್ದೇಶವನ್ನು ಅರಿತಿಲ್ಲ.

**ಭಜತಿ** ಪದವು ಬಹು ಮಹತ್ವದ್ದು. ಅನೇಕ ಕಡೆಗಳಲ್ಲಿ **ಭಜತಿ** ಪದವು ಪರಮ ಪ್ರಭುವಿನ ಸೇವಾ ಸಂಬಂಧದಲ್ಲಿ ವ್ಯಕ್ತಪಟ್ಟಿದೆ. ಒಬ್ಬನು ಪೂರ್ಣ ಕೃಷ್ಣಪ್ರಜ್ಞೆಯಲ್ಲಿ, ಪರಮ ಪ್ರಭುವಿನ ಸೇವೆಯಲ್ಲಿ ನಿರತನಾಗಿದ್ದರೆ, ಅವನು ಸಕಲ ವೇದ ಜ್ಞಾನವನ್ನು ಅರಿತಿದ್ದಾನೆ ಎಂದು ತಿಳಿಯಬೇಕು. ಒಬ್ಬನು ಕೃಷ್ಣನ ಭಕ್ತಿಯುತ ಸೇವೆಯಲ್ಲಿ ತೊಡಗಿದ್ದರೆ, ಆಗ ಪರಮತತ್ವವನ್ನು ಅರಿತುಕೊಳ್ಳುವ ಯಾವುದೇ ಆಧ್ಯಾತ್ಮಿಕ ಪ್ರಕ್ರಿಯೆಯ ಅಗತ್ಯವಿಲ್ಲ ಎಂದು ವೈಷ್ಣವ ಪರಂಪರೆಯಲ್ಲಿ ಹೇಳಿದೆ. ಅವನು ಪ್ರಭುವಿನ ಭಕ್ತಿಯುತ ಸೇವೆಯಲ್ಲಿ ನಿರತನಾಗಿರುವುದರಿಂದ ಆಗಲೇ ಆ ಮಟ್ಟಕ್ಕೆ ಬಂದಿರುತ್ತಾನೆ. ಅವನು ಅರಿವಿನ ಎಲ್ಲ ಪ್ರಾಥಮಿಕ ಪ್ರಕ್ರಿಯೆಗಳನ್ನು ಪೂರ್ತಿಸಿರುತ್ತಾನೆ. ಆದರೆ ಸಾವಿರಾರು ಜನ್ಮಗಳವರೆಗೆ ಊಹಾಪೋಹದ ತರುವಾಯ ಕೃಷ್ಣನು ಪರಮದೇವೋತ್ತಮ ಪುರುಷ, ಮತ್ತು ಒಬ್ಬನು ಅವನಿಗೆ ಶರಣಾಗತನಾಗಬೇಕು ಎಂಬ ಮಟ್ಟಕ್ಕೆ ಬರದಿದ್ದರೆ, ಅಷ್ಟು ವರ್ಷಗಳ ಮತ್ತು ಜೀವನಗಳ ಅವನ ಊಹಾಪೋಹಗಳೆಲ್ಲವೂ ವ್ಯರ್ಥಕಾಲಹರಣ.

**ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ ।**
**ಏತದ್ ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ ॥೨೦॥**

ಇತಿ—ಹೀಗೆ, ಗುಹ್ಯ-ತಮಮ್—ಅತ್ಯಂತ ಗುಹ್ಯತಮವಾದ, ಶಾಸ್ತ್ರಮ್—ದೃಷ್ಟ ಶಾಸ್ತ್ರವನ್ನು, ಇದಮ್—ಇದು, ಉಕ್ತಮ್—ಹೇಳಲ್ಪಟ್ಟಿದೆ, ಮಯಾ—ನನ್ನಿಂದ, ಅನಘ—ಹೇ ದೋಷರಹಿತನೇ, ಏತದ್—ಇದನ್ನು, ಬುದ್ಧ್ವಾ—ಅರಿತು, ಬುದ್ಧಿ-ಮಾನ್—ಬುದ್ಧಿವಂತನು, ಸ್ಯಾತ್—ಒಬ್ಬನು ಆಗುತ್ತಾನೆ, ಕೃತ-ಕೃತ್ಯಃ—ತನ್ನ ಪ್ರಯತ್ನಗಳಲ್ಲಿ ಅತ್ಯಂತ ಪರಿಪೂರ್ಣನು, ಚ—ಮತ್ತು, ಭಾರತ—ಹೇ ಭರತ ಪುತ್ರನೇ.

**ಹೇ ದೋಷರಹಿತನೇ, ಇದೇ ವೇದ ಶಾಸ್ತ್ರಗಳ ಗುಹ್ಯತಮ ಭಾಗ, ಮತ್ತು ಇದು ಈಗ ನನ್ನಿಂದ ಹೇಳಲ್ಪಟ್ಟಿದೆ. ಇದನ್ನರಿತವನು ಬುದ್ಧಿವಂತನು ಆಗುತ್ತಾನೆ, ಮತ್ತು ಅವನ ಪ್ರಯತ್ನಗಳು ಸಿದ್ಧಿಯನ್ನು ಹೊಂದುತ್ತವೆ.**

**ಭಾವಾರ್ಥ :** ಇದು ಎಲ್ಲ ದೃಷ್ಟ ಶಾಸ್ತ್ರಗಳ ಸಾರ ಎಂದು ಇಲ್ಲಿ ಭಗವಂತನು ಸ್ಪಷ್ಟವಾಗಿ ವಿವರಿಸುತ್ತಾನೆ ಮತ್ತು ಇದನ್ನು ಒಬ್ಬನು ಪರಮದೇವೋತ್ತಮ ಪುರುಷನಿಂದ ಯಥಾರೂಪ ನೀಡಲ್ಪಟ್ಟಂತೆ ಅರಿಯಬೇಕು. ಹೀಗೆ ಒಬ್ಬನು ದಿವ್ಯಜ್ಞಾನದಲ್ಲಿ ಬುದ್ಧಿಯುಳ್ಳವನು ಮತ್ತು ಸಿದ್ಧನು ಆಗುತ್ತಾನೆ. ಅನ್ಯ ಪದಗಳಲ್ಲಿ, ಪರಮದೇವೋತ್ತಮ ಪುರುಷನ ಈ ತತ್ತ್ವಜ್ಞಾನವನ್ನು ಅರಿತುಕೊಳ್ಳುವ ಮೂಲಕ ಮತ್ತು ಅವನ ದಿವ್ಯ ಸೇವೆಯಲ್ಲಿ ನಿರತನಾಗುವ ಮೂಲಕ ಪ್ರತಿಯೊಬ್ಬನೂ ಭೌತಿಕ ಪ್ರಕೃತಿ ಗುಣಗಳ ಎಲ್ಲ

ಕಲ್ಮಷಗಳಿಂದ ಮುಕ್ತನಾಗುವನು. ಭಕ್ತಿಯುತ ಸೇವೆಯು ಆಧ್ಯಾತ್ಮ ಅರಿವಿನ ಪ್ರಕ್ರಿಯೆ. ಭಕ್ತಿಯುತ ಸೇವೆ ಇರುವಲ್ಲೆಲ್ಲಾ,ಭೌತಿಕ ಕಲ್ಮಷವು ಇರಲಾರದು.ಭಗವಂತನಿಗೆ ಭಕ್ತಿಯುತ ಸೇವೆ ಮತ್ತು ಸ್ವಯಂ ಭಗವಂತ ಉಭಯರೂ ಒಂದೇ, ಏಕೆಂದರೆ ಅವೆರಡೂ ಆಧ್ಯಾತ್ಮಿಕ; ಭಕ್ತಿಯುತ ಸೇವೆಯು ಪರಮ ಪ್ರಭುವಿನ ಅಂತರಂಗ ಶಕ್ತಿಯಲ್ಲಿ ನಡೆಯುತ್ತದೆ. ಭಗವಂತನು ಸೂರ್ಯನೆಂದು, ಅಜ್ಞಾನವು (ಅವಿದ್ಯೆ) ಕತ್ತಲೆ ಎಂದೂ ಹೇಳಿದೆ. ಸೂರ್ಯನಿದ್ದಲ್ಲಿ ಕತ್ತಲೆಯ ಪ್ರಶ್ನೆಯೇ ಇಲ್ಲ. ಆದ್ದರಿಂದ, ನಿಜ ಗುರುಗಳ ಮಾರ್ಗ ದರ್ಶನದಲ್ಲಿ ಭಕ್ತಿಯುತ ಸೇವೆಯು ಇರುವಲ್ಲೆಲ್ಲಾ ಅಜ್ಞಾನದ ಪ್ರಶ್ನೆಯೇ ಇಲ್ಲ.

ಪ್ರತಿಯೊಬ್ಬನೂ ಈ ಕೃಷ್ಣಪ್ರಜ್ಞೆಯನ್ನು ಗ್ರಹಿಸಬೇಕು ಮತ್ತು ಬುದ್ಧಿವಂತ ನಾಗಲು ಮತ್ತು ಶುದ್ಧನಾಗಲು ಭಕ್ತಿಯುತ ಸೇವೆಯಲ್ಲಿ ನಿರತನಾಗಬೇಕು. ಕೃಷ್ಣನ ಅರಿವಿನ ಈ ಸ್ಥಿತಿಗೆ ಒಬ್ಬನು ಬಾರದ ಹೊರತು ಮತ್ತು ಭಕ್ತಿಯುತ ಸೇವೆಯಲ್ಲಿ ನಿರತನಾಗದ ಹೊರತು, ಅವನು ಸಾಮಾನ್ಯನ ದೃಷ್ಟಿಯಲ್ಲಿ ಎಷ್ಟೇ ಬುದ್ಧಿವಂತ ನಾಗಿದ್ದರೂ, ಅವನು ಪರಿಪೂರ್ಣ ಬುದ್ಧಿವಂತನಲ್ಲ.

ಅರ್ಜುನನು ಸಂಬೋಧಿತನಾದ **ಅನಘ** ಪದವು ಬಹು ಮಹತ್ವದ್ದು. **ಅನಘ** "ಹೇ ದೋಷ ದೂರನೇ," ಎಂದರೆ ಸಕಲ ಪಾಪಕಾರ್ಯ ಪ್ರತಿಕ್ರಿಯೆಗಳಿಂದ ಒಬ್ಬನು ಮುಕ್ತನಾಗದ ಹೊರತು ಕೃಷ್ಣನನ್ನು ಅರಿತುಕೊಳ್ಳುವುದು ಬಹು ಕಷ್ಟ. ಒಬ್ಬನು ಸಕಲ ಕಲ್ಮಷಗಳಿಂದ, ಸಕಲ ಪಾಪಕಾರ್ಯಗಳಿಂದ, ಮುಕ್ತನಾಗಬೇಕು; ಆಗ ಅವನು ಅರಿತು ಕೊಳ್ಳಬಲ್ಲನು. ಆದರೆ ಭಕ್ತಿಯುತ ಸೇವೆಯು ಅದೆಷ್ಟು ಶುದ್ಧ ಮತ್ತು ಶಕ್ತಿಯುತ ವೆಂದರೆ, ಒಬ್ಬನು ಅದರಲ್ಲಿ ಒಂದು ಸಲ ತೊಡಗಿದ್ದರೆ ಸಾಕು, ಅವನು ತಾನಾಗಿಯೇ ದೋಷರಹಿತ ಮಟ್ಟಕ್ಕೆ ಬರುತ್ತಾನೆ.

ಒಬ್ಬನು ಭಕ್ತರ ಸಂಗದಲ್ಲಿ ಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಭಕ್ತಿಯುತ ಸೇವೆಯನ್ನು ಆಚರಿಸುತ್ತಿರುವಾಗ, ಸಂಪೂರ್ಣವಾಗಿ ಹೊಡೆದೋಡಿಸಬೇಕಾದ ಕೆಲವೊಂದು ವಿಷಯ ಗಳಿವೆ. ಗೆಲ್ಲಬೇಕಾದ ಅತಿ ಮಹತ್ವದ ವಿಷಯ ಎಂದರೆ ಹೃದಯ ದೌರ್ಬಲ್ಯ. ಭೌತಿಕ ಪ್ರಕೃತಿಯ ಮೇಲೆ ಒಡೆತನದ ಇಚ್ಛೆಯಿಂದ ಪ್ರಥಮ ಪತನವು ಉಂಟಾಗುತ್ತದೆ. ಹೀಗೆ ಒಬ್ಬನು ಪರಮ ಪ್ರಭುವಿನ ದಿವ್ಯ ಪ್ರೀತಿಯುತ ಸೇವೆಯನ್ನು ತ್ಯಜಿಸುತ್ತಾನೆ. ಒಬ್ಬನು ಭೌತಿಕ ಪ್ರಕೃತಿಯ ಮೇಲೆ ಒಡೆತನ ಹೊಂದಲು ಪ್ರವಣತೆಯನ್ನು ಹೆಚ್ಚಿಸಿಕೊಂಡಂತೆ ಅವನು ಜಡಕ್ಕೆ ಮತ್ತು ಜಡ ವಸ್ತುವಿನ ಸ್ವಾಧೀನಕ್ಕೆ ಮೋಹಿತನಾಗುತ್ತಾನೆ, ಇದು ಎರಡನೆಯ ಹೃದಯ ದೌರ್ಬಲ್ಯ. ಭೌತಿಕ ಅಸ್ತಿತ್ವದ ಸಮಸ್ಯೆಗಳು ಈ ಹೃದಯ ದೌರ್ಬಲ್ಯ ನಿಮಿತ್ತವಾದವು. ಈ ಅಧ್ಯಾಯದಲ್ಲಿ ಮೊದಲನೆಯ ಐದು ಶ್ಲೋಕಗಳು ಈ ಹೃದಯ ದೌರ್ಬಲ್ಯಗಳಿಂದ ಒಬ್ಬನು ತನ್ನನ್ನು ಮುಕ್ತಗೊಳಿಸುವ ಪ್ರಕ್ರಿಯೆಯನ್ನು ವರ್ಣಿಸುತ್ತವೆ, ಮತ್ತು ಆರನೆಯ ಶ್ಲೋಕದಿಂದ ಕೊನೆಯವರೆಗಿನ ಅಧ್ಯಾಯದ ಇನ್ನುಳಿದ ಭಾಗವು ಪುರುಷೋತ್ತಮ–ಯೋಗವನ್ನು ಕುರಿತು ಚರ್ಚಿಸುತ್ತದೆ.

**ಇಲ್ಲಿಗೆ ಪುರುಷೋತ್ತಮ–ಯೋಗ ವಿಷಯದಲ್ಲಿ ಶ್ರೀಮದ್ ಭಗವದ್ಗೀತೆಯ ಹದಿನೈದನೆಯ ಅಧ್ಯಾಯದ ಭಕ್ತಿ–ವೇದಾಂತ ತಾತ್ಪರ್ಯವು ಮುಗಿಯಿತು.**

ಅಧ್ಯಾಯ ಹದಿನಾರು



# ದೈವಾಸುರ ಸ್ವಭಾವಗಳು

ಶ್ರೀಭಗವಾನುವಾಚ

ಅಭಯಂ ಸತ್ತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ ।
ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ॥ ೧ ॥

ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾನ್ತಿರಪೈಶುನಮ್ ।
ದಯಾ ಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಮ್ ॥ ೨ ॥

ತೇಜಃ ಕ್ಷಮಾ ಧೃತಿಃ ಶೌಚಮದ್ರೋಹೋ ನಾತಿಮಾನಿತಾ ।
ಭವನ್ತಿ ಸಮ್ಪದಂ ದೈವೀಮಭಿಜಾತಸ್ಯ ಭಾರತ ॥ ೩ ॥

ಶ್ರೀಭಗವಾನುವಾಚ—ಪರಮದೇವೋತ್ತಮ ಪುರುಷನು ನುಡಿದನು, ಅಭಯಮ್—ಅಭಯವು, ಸತ್ತ್ವ-ಸಂಶುದ್ಧಿಃ—ಒಬ್ಬನ ಅಸ್ತಿತ್ವ ಶುದ್ಧಿ, ಜ್ಞಾನ—ಜ್ಞಾನದಲ್ಲಿ, ಯೋಗ—ಸಂಪರ್ಕಿಸುವ, ವ್ಯವಸ್ಥಿತಿಃ—ಸನ್ನಿವೇಶ, ದಾನಮ್—ದಾನವನ್ನು, ದಮಃ—ಮನೋನಿಗ್ರಹ, ಚ—ಮತ್ತು, ಯಜ್ಞಃ—ಯಜ್ಞಾಚರಣೆ, ಚ—ಮತ್ತು, ಸ್ವಾಧ್ಯಾಯಃ—ವೇದ ಸಾಹಿತ್ಯಾಧ್ಯಯನ, ತಪಃ—ತಪಸ್ಸು, ಆರ್ಜವಮ್—ಸರಳತೆ, ಅಹಿಂಸಾ—ಅಹಿಂಸೆ, ಸತ್ಯಮ್—ಸತ್ಯ, ಅಕ್ರೋಧಃ—ಕ್ರೋಧರಾಹಿತ್ಯ, ತ್ಯಾಗಃ—ತ್ಯಾಗ, ಶಾನ್ತಿಃ—ಶಾಂತಿ, ಅಪೈಶುನಮ್—ತಪ್ಪು ಕಂಡುಹಿಡಿಯಲು ವಿಮುಖತೆ, ದಯಾ—ದಯೆ, ಭೂತೇಷು—ಸಕಲ ಜೀವಿಗಳಲ್ಲಿ, ಅಲೋಲುಪ್ತ್ವಂ—ಲೋಭ ರಾಹಿತ್ಯ, ಮಾರ್ದವಮ್—ಸಭ್ಯತೆ, ಹ್ರೀಃ—ಸೌಜನ್ಯ, ಅಚಾಪಲಮ್—ಅಚಾಪಲ್ಯ ನಿರ್ಧಾರ, ತೇಜಃ—ತೇಜ, ಕ್ಷಮಾ—ಕ್ಷಮೆ, ಧೃತಿಃ—ಧೃತಿ, ಶೌಚಮ್—ಶುಚಿ,

ಅದ್ರೋಹಃ—ಅಸೂಯೆ, ನ—ಇಲ್ಲ, ಅತಿ-ಮಾನಿತಾ—ಗೌರವ ನಿರೀಕ್ಷೆ, ಭವನ್ತಿ—ಆಗಿವೆ, ಸಮ್ಪದಮ್—ಗುಣಗಳು, ದೈವೀಮ್—ದಿವ್ಯ ಸ್ವಭಾವ, ಅಭಿಜಾತಸ್ಯ—ಇವುಗಳಿಂದ ಹುಟ್ಟಿದವನ, ಭಾರತ—ಹೇ ಭರತ ಪುತ್ರನೇ.

**ಪರಮ ದೇವೋತ್ತಮ ಪುರುಷನು ನುಡಿದನು: ಅಭಯ; ಒಬ್ಬನ ಅಸ್ತಿತ್ವ ಶುದ್ಧಿ; ಅಧ್ಯಾತ್ಮ ಜ್ಞಾನ ಸಾಧನೆ, ದಾನ, ಆತ್ಮನಿಗ್ರಹ; ಯಜ್ಞಾಚರಣೆ; ವೇದಾಧ್ಯಯನ; ತಪಸ್ಸು ಮತ್ತು ಸರಳತೆ; ಅಹಿಂಸೆ; ಸತ್ಯ; ಅಕ್ರೋಧ; ತ್ಯಾಗ; ಶಾಂತಿ; ತಪ್ಪು ಕಂಡು ಹಿಡಿಯಲು ವಿಮುಖತೆ; ಸಕಲ ಜೀವಿಗಳಲ್ಲಿ ಸಹಾನುಭೂತಿ; ಅನಸೂಯೆ; ಸಭ್ಯತೆ; ಸೌಜನ್ಯ; ಸ್ಥಿರ ನಿರ್ಧಾರ ; ತೇಜಸ್ಸು; ಕ್ಷಮೆ; ಧೃತಿ; ಶುಚಿತ್ವ; ಮತ್ತು ಅದ್ವೇಷ ಮತ್ತು ಗೌರವ ಅನಿರೀಕ್ಷೆ—ಈ ದಿವ್ಯ ಗುಣಗಳು, ಹೇಭರತ ಪುತ್ರನೇ, ದೈವೀ ಸ್ವಭಾವದ ದೇವ ಮಾನವರಿಗೆ ಸೇರಿವೆ.**

**ಭಾವಾರ್ಥ** ಹದಿನೈದನೆಯ ಅಧ್ಯಾಯದ ಪ್ರಾರಂಭದಲ್ಲಿ ಈ ಭೌತಿಕ ಜಗತ್ತಿನ ಅಶ್ವತ್ಥ ವೃಕ್ಷವು ವಿವರಿಸಲ್ಪಟ್ಟಿದೆ. ಅದರಿಂದ ಹೊರಡುವ ಅನೇಕ ಬೇರುಗಳು ಜೀವಿಗಳ ಕೆಲವು ಶುಭಾಶುಭ ಚಟುವಟಿಕೆಗಳಿಗೆ ಹೋಲಿಸಲ್ಪಟ್ಟಿವೆ. ಒಂಬತ್ತನೆಯ ಅಧ್ಯಾಯದಲ್ಲಿ ಕೂಡ ದೇವಾಸುರರ ವಿಷಯವು ವಿವರಿಸಲ್ಪಟ್ಟಿದೆ. ಈಗ, ವೈದಿಕ ಕರ್ಮಾನುಸಾರ ಸಾತ್ವಿಕ ಗುಣದ ಚಟುವಟಿಕೆಗಳು ಮೋಕ್ಷ ಮಾರ್ಗದ ಪ್ರಗತಿಗೆ ಶುಭಕರವೆಂದು ಪರಿಗಣಿಸಲ್ಪಟ್ಟಿವೆ, ಮತ್ತು ಅಂಥ ಚಟುವಟಿಕೆಗಳು ದೈವೀ ಪ್ರಕೃತಿ ಎಂದು ಕರೆದಿದೆ. ದೈವೀ ಪ್ರಕೃತಿ ಸನ್ನಿವೇಶಿತರು ಮೋಕ್ಷ ಮಾರ್ಗದಲ್ಲಿ ಪ್ರಗತಿ ಸಾಧಿಸುತ್ತಾರೆ. ಇದಕ್ಕೆ ಬದಲಾಗಿ ರಾಜಸ ಮತ್ತು ತಾಮಸ ಗುಣದಲ್ಲಿ ಕಾರ್ಯ ಮಾಡುವವರಿಗೆ ಮೋಕ್ಷ ಅಸಂಭವ. ಅವರು ಈ ಭೌತಿಕ ಜಗತ್ತಿನಲ್ಲಿ ಮಾನವರಾಗಿ ಉಳಿಯಬೇಕಾಗುವುದು ಅಥವಾ ಪಶುಯೋನಿಗಳಿಗೆ ಅಥವಾ ಅದಕ್ಕಿಂತ ಕೆಳಗಿನ ಯೋನಿಗಳಿಗೆ ಇಳಿಯಬೇಕಾಗುವುದು. ಈ ಹದಿನಾರನೆಯ ಅಧ್ಯಾಯದಲ್ಲಿ ಭಗವಂತನು ದಿವ್ಯ ಪ್ರಕೃತಿ ಮತ್ತು ಅದರ ಗುಣಗಳನ್ನು ಮತ್ತು ಅಸುರೀ ಪ್ರಕೃತಿ ಮತ್ತು ಅದರ ಗುಣಗಳನ್ನು ವಿವರಿಸುತ್ತಾನೆ. ಮತ್ತು ಈ ಗುಣಗಳ ಲಾಭಹಾನಿಗಳನ್ನು ಕೂಡ ವಿವರಿಸುತ್ತಾನೆ.

ದಿವ್ಯಗುಣಗಳಿಂದ ಅಥವಾ ದೈವೀ ಪ್ರವೃತ್ತಿಗಳಿಂದ ಹುಟ್ಟಿಬಂದವನನ್ನು ಉಲ್ಲೇಖಿಸುವ **ಅಭಿಜಾತಸ್ಯ** ಪದವು ಬಹು ಮಹತ್ವದ್ದು. ದೈವೀ ಪ್ರಕೃತಿಯ ಮಗುವನ್ನು ಪಡೆಯುವುದನ್ನು ವೇದಶಾಸ್ತ್ರಗಳಲ್ಲಿ ಗರ್ಭಧಾನ ಸಂಸ್ಕಾರ ಎಂದು ಕರೆದಿದೆ. ದೈವೀ ಗುಣಗಳ ಮಗುವನ್ನು ಬಯಸುವ ತಂದೆತಾಯಿಗಳು ಮಾನವರ ಸಾಮಾಜಿಕ ಜೀವನದ ಬಗ್ಗೆ ಹೇಳಿದ ಹತ್ತು ತತ್ತ್ವಗಳನ್ನು ಅನುಸರಿಸಬೇಕು. ಒಳ್ಳೆಯ ಮಗುವನ್ನು ಪಡೆಯಲು ಕಾಮಭೋಗವು ಸ್ವಯಂ ಕೃಷ್ಣನೇ ಎಂಬುದನ್ನು ಭಗವದ್ಗೀತೆಯಲ್ಲಿ ಈ ಮುಂಚೆ ನಾವು ಅಧ್ಯಯನ ಮಾಡಿದ್ದೇವೆ. ಲೈಂಗಿಕ ಜೀವನವು ಕೃಷ್ಣಪ್ರಜ್ಞೆಯಲ್ಲಿ ಉಪಯೋಗಿಸಲ್ಪಟ್ಟಾಗ ಅದು ಖಂಡನೀಯವಲ್ಲ. ಕನಿಷ್ಠಪಕ್ಷ ಕೃಷ್ಣ ಪ್ರಾಜ್ಞಿಗಳು ಬೆಕ್ಕು ನಾಯಿಗಳಂತೆ ಮಕ್ಕಳನ್ನು ಪಡೆಯಕೂಡದು. ಆದರೆ ಹುಟ್ಟಿದ ಮೇಲೆ ಕೃಷ್ಣಪ್ರಾಜ್ಞಿಗಳಾಗುವಂಥ ಮಕ್ಕಳನ್ನು

ಪಡೆಯಬೇಕು. ಅದು ಕೃಷ್ಣಪ್ರಜ್ಞಾ ತಲ್ಲೀನರಾದ ತಂದೆತಾಯಿಗಳಿಂದ ಹುಟ್ಟಿದ ಮಕ್ಕಳ ಲಾಭವಾಗಿರಬೇಕು.

ಸಮಾಜವನ್ನು ನಾಲ್ಕು ಸಾಮಾಜಿಕ ವಿಭಾಗಗಳಲ್ಲಿ ಮತ್ತು ನಾಲ್ಕು ವೃತ್ತಿವಿಭಾಗ ಗಳಲ್ಲಿ ವಿಂಗಡಿಸುವ—ವರ್ಣಾಶ್ರಮ—ಧರ್ಮವು ಜನ್ಮಾನುಸಾರ ಮಾನವರನ್ನು ವಿಭಾಗ ಮಾಡಲು ಉದ್ದಿಷ್ಟವಲ್ಲ. ಅಂಥ ವಿಭಾಗಗಳು ವಿದ್ಯಾರ್ಹತೆಗಳನ್ನು ಉದ್ದೇಶಿಸಿವೆ. ಅವು ಸಮಾಜವನ್ನು ಶಾಂತಿ ಮತ್ತು ಸಮೃದ್ಧಿಯಲ್ಲಿರಿಸಲು ಉದ್ದೇಶಿತ. ಇಲ್ಲಿ ಪ್ರಸ್ತಾಪಿತ ಗುಣ ಗಳು ಒಬ್ಬನು ಆಧ್ಯಾತ್ಮ ಅರಿವಿನಲ್ಲಿ ಪ್ರಗತಿ ಸಾಧಿಸಿ ಭೌತಿಕ ಜಗತ್ತಿನಿಂದ ಮುಕ್ತನಾಗಲು ಉದ್ದಿಷ್ಟವಾದ ದೈವೀಗುಣಗಳೆಂದು ವಿವರಿಸಲ್ಪಟ್ಟಿವೆ.

**ವರ್ಣಾಶ್ರಮ** ಪದ್ಧತಿಯಲ್ಲಿ ಸನ್ಯಾಸಿಯು ಎಲ್ಲ ವರ್ಣಗಳು ಮತ್ತು ಆಶ್ರಮ ಗಳಿಗೆ ಮುಖ್ಯನು ಅಥವಾ ಗುರು ಎಂದು ಪರಿಗಣಿಸಲಾಗಿದೆ. ಬ್ರಾಹ್ಮಣನು, ಸಮಾಜದ ಇತರ ಮೂರು ವರ್ಗಗಳು ಎಂದರೆ, ಕ್ಷತ್ರಿಯ, ವೈಶ್ಯ, ಮತ್ತು ಶೂದ್ರರಿಗೆ ಗುರು ಎಂದು ಭಾವಿಸಲಾಗಿದೆ, ಆದರೆ ಈ ಪದ್ಧತಿಯ ಅಗ್ರಸ್ಥಾನದಲ್ಲಿರುವ ಸನ್ಯಾಸಿಯು ಬ್ರಾಹ್ಮಣರಿಗೂ ಗುರುವೆಂದು ತಿಳಿಯಲ್ಪಟ್ಟಿದ್ದಾನೆ. ಸನ್ಯಾಸಿಗೆ ಅಭಯವು ಮೊದಲನೆಯ ಅರ್ಹತೆಯಾಗಿರ ಬೇಕು. ಏಕೆಂದರೆ ಸನ್ಯಾಸಿಯು ಯಾರ ಬಲ ಅಥವಾ ಬಲದ **ಆಶ್ವಾಸನೆ** ಇಲ್ಲದೆ ಇರ ಬೇಕಾಗುವುದು, ಅವನು ಕೇವಲ ಪರಮದೇವೋತ್ತಮ ಪುರುಷನ **ಅನುಗ್ರಹವನ್ನು** ಮಾತ್ರ ಅವಲಂಬಿಸಿರಬೇಕು. "ನಾನು ನನ್ನ ಸಂಬಂಧಗಳನ್ನೆಲ್ಲ ಬಿಟ್ಟರೆ ನನ್ನನ್ನು ಯಾರು ರಕ್ಷಿಸು ವರು?" ಎಂದು ಒಬ್ಬನು ಯೋಚಿಸಿದರೆ ಅಂಥವನು ಸನ್ಯಾಸಾಶ್ರಮ ಸ್ವೀಕರಿಸಕೂಡದು. ಕೃಷ್ಣನು ಅಥವಾ ಪರಮ ದೇವೋತ್ತಮ ಪುರುಷನು ತನ್ನ ಸ್ಥಳೀಯ ಪರಮಾತ್ಮ (ಬಿಂಬ) ಅಂಶದಲ್ಲಿ ಪರಮಾತ್ಮನಾಗಿ ಸದಾ ಒಳಗಿದ್ದು, ಪ್ರತಿಯೊಂದನ್ನು ನೋಡುತ್ತಿದ್ದಾನೆ ಮತ್ತು ಒಬ್ಬನು ಏನು ಮಾಡಬಯಸುತ್ತಾನೆ ಎಂಬುದನ್ನು ಸದಾ ತಿಳಿದಿರುತ್ತಾನೆ ಎಂಬ ಬಗ್ಗೆ ಒಬ್ಬನು ಪೂರ್ಣ ವಿಶ್ವಾಸ ಹೊಂದಿರಬೇಕು. ಕೃಷ್ಣನು ಪರಮಾತ್ಮನಾಗಿ ತನಗೆ ಶರಣಾಗತ ನಾದ ಆತ್ಮನ ಯೋಗಕ್ಷೇಮ ವಹಿಸಿಕೊಳ್ಳುವನೆಂದು ಒಬ್ಬನಿಗೆ ದೃಢ ವಿಶ್ವಾಸವಿರಬೇಕು. "ನಾನು ಎಂದೂ ಏಕಾಕಿಯಲ್ಲ", ಎಂದು ಒಬ್ಬನು ಯೋಚಿಸಬೇಕು. ನಾನು ಕಾಡಿನ ಅಂಧ ಕಾರತಮ ಪ್ರದೇಶದಲ್ಲಿದ್ದರೂ ನನ್ನ ಜೊತೆಗೆ ಕೃಷ್ಣನಿರುತ್ತಾನೆ ಮತ್ತು ಅವನು ನನಗೆ ಎಲ್ಲ ರಕ್ಷಣೆ ನೀಡುತ್ತಾನೆ ಎಂದು ಒಬ್ಬನು ಭಾವಿಸಬೇಕು. ಈ ವಿಶ್ವಾಸವನ್ನು **ಅಭಯ** ಎಂದು ಕರೆದಿದೆ. ಸನ್ಯಾಸಾಶ್ರಮದಲ್ಲಿ ಒಬ್ಬನಿಗೆ ಈ ವಿಶ್ವಾಸ ಅಗತ್ಯ. ಆಮೇಲೆ ಅವನು ತನ್ನ ಅಸ್ತಿತ್ವವನ್ನು ಶುದ್ಧಿಗೊಳಿಸಿಕೊಳ್ಳಬೇಕು. ಸನ್ಯಾಸಾಶ್ರಮದಲ್ಲಿ ಪಾಲಿಸಬೇಕಾದ ಅನೇಕ ನೀತಿ, ನಿಯಮ, ನಿಯಂತ್ರಣಗಳಿವೆ. ಅವುಗಳಲ್ಲಿ ಅತ್ಯಂತ ಮಹತ್ವದ್ದೆಂದರೆ, ಸ್ತ್ರೀಯರೊಂದಿಗೆ ಯಾವುದೇ ನಿಕಟ ಸಂಬಂಧವು ಇರುವುದು ಸನ್ಯಾಸಿಗೆ ನಿಷಿದ್ಧ. ಏಕಾಂತ ಸ್ಥಳದಲ್ಲಿ ಅವನು ಸ್ತ್ರೀಯರೊಡನೆ ಮಾತು ಕೂಡ ಆಡ ಕೂಡದು. ಶ್ರೀಚೈತನ್ಯರು ಆದರ್ಶ ಸನ್ಯಾಸಿಯಾಗಿದ್ದರು, ಅವರು ಪುರಿಯಲ್ಲಿದ್ದಾಗ ಅವರ ಮಹಿಳಾ ಭಕ್ತರು ನಮಸ್ಕರಿಸಲು ಅವರ ಸಮೀಪ ಕೂಡ ಬರಲಾಗಲಿಲ್ಲ. ಅವರು ದೂರದಿಂದಲೇ ನಮಸ್ಕರಿಸುವಂತೆ ಹೇಳಲಾಯಿತು. ಇದು ಸ್ತ್ರೀಯರ ವರ್ಗದ ಬಗ್ಗೆ

ತಿರಸ್ಕಾರದ ಲಕ್ಷಣವಲ್ಲ, ಆದರೆ ಸನ್ಯಾಸಿಯು ಸ್ತ್ರೀಯರೊಂದಿಗೆ ಹತ್ತಿರದ ಸಂಬಂಧ ಹೊಂದದೆ ಇರಬೇಕೆಂದು ವಿಧಿನಿಯಮ. ಒಬ್ಬನು ತನ್ನ ಅಸ್ತಿತ್ವ ಶುದ್ಧಿಗಾಗಿ ವಿಶಿಷ್ಟ ಆಶ್ರಮದ ನೀತಿ, ನಿಯಮ, ನಿಯಂತ್ರಣಗಳನ್ನು ಅನುಸರಿಸಬೇಕು. ಸನ್ಯಾಸಿಗೆ ಸ್ತ್ರೀಯರೊಡನೆ ನಿಕಟ ಸಂಬಂಧ ಮತ್ತು ಇಂದ್ರಿಯ ತೋಷಣೆಗಾಗಿ ಸಂಪತ್ತು ಹೊಂದಿರುವುದು ಕಟ್ಟುನಿಟ್ಟಾಗಿ ನಿಷೇಧಿಸಲ್ಪಟ್ಟಿವೆ. ಭಗವಾನ್ ಚೈತನ್ಯರು ಸ್ವಯಂ ಆದರ್ಶ ಸನ್ಯಾಸಿಗಳಾಗಿದ್ದರು, ಅವರು ಸ್ತ್ರೀಯರ ವಿಷಯದಲ್ಲಿ ಬಹು ಕಟ್ಟುನಿಟ್ಟಾಗಿದ್ದರೆಂದು ಅವರ ಜೀವನದಿಂದ ನಾವು ತಿಳಿದುಕೊಳ್ಳಬಹುದು. ಅವರು ಅತ್ಯಂತ ಪತಿತ ಬದ್ಧಾತ್ಮರನ್ನು ಅನುಗ್ರಹಿಸಿ ಭಗವಂತನ ಅತ್ಯಂತ ಉದಾರ ಅವತಾರಿಗಳೆಂದು ಭಾವಿಸಲ್ಪಟ್ಟಿದ್ದರೂ, ಸ್ತ್ರೀಸಂಗ ವಿಷಯದಲ್ಲಿ ಸನ್ಯಾಸಾಶ್ರಮದ ನಿಯಮ ನಿಯಂತ್ರಣಗಳನ್ನು ಕಟ್ಟುನಿಟ್ಟಾಗಿ ಅನುಸರಿಸಿದರು. ಅವರ ಆತ್ಮೀಯ ಸಹಚರರಲ್ಲೊಬ್ಬರಾದ ಛೋಟಾ ಹರಿದಾಸರು ಚೈತನ್ಯರ ಇತರ ನಿಕಟ ಸಹಚರರೊಂದಿಗೆ ಭಗವಾನ್ ಚೈತನ್ಯರ ಸಂಗದಲ್ಲಿದ್ದರು, ಆದರೆ ಅದೆಂತೋ ಈ ಛೋಟಾ ಹರಿದಾಸರು ಯುವತಿಯೊಬ್ಬಳ ಕಡೆಗೆ ಕಾಮುಕ ದೃಷ್ಟಿ ಬೀರಿದರು, ಭಗವಾನ್ ಚೈತನ್ಯರು ಅದೆಷ್ಟು ಕಠೋರರೆಂದರೆ ಕೂಡಲೇ ಹರಿದಾಸರನ್ನು ತಮ್ಮ ಸಹವಾಸ ಮತ್ತು ಸಹಚರರ ಸಹವಾಸದಿಂದ ಹೊರಗೆ ಹಾಕಿದರು. "ಸನ್ಯಾಸಿಗೆ ಅಥವಾ ಭೌತಿಕ ಪ್ರಕೃತಿ ಪಾಶಗಳಿಂದ ಹೊರಬರಲು ಯತ್ನಿಸುವ ಮತ್ತು ಆಧ್ಯಾತ್ಮ ಪ್ರಕೃತಿಗೆ ತನ್ನನ್ನು ಉನ್ನತಿಸಿಕೊಳ್ಳಲು ಯತ್ನಿಸುವ, ಮತ್ತು ದೇವತ್ವಕ್ಕೆ ಮರಳಿ ಧಾಮಕ್ಕೆ ಹಿಂದಿರುಗ ಬಯಸುವ ಯಾವೊಬ್ಬನಿಗೆ ಭೌತಿಕ ವಸ್ತುಗಳನ್ನು ಭೋಗಿಸುವುದಂತೂ ಇರಲಿ—ಸ್ತ್ರೀಯರ ಕಡೆಗೆ ಇಂದ್ರಿಯ ತೋಷಣ ದೃಷ್ಟಿ ಬೀರುವುದು ಕೂಡ ಅದೆಷ್ಟು ಖಂಡಿಸಲ್ಪಟ್ಟಿದೆ ಎಂದರೆ ಅಂಥ ನಿಷಿದ್ಧ ಕಾಮಗಳನ್ನು ಅನುಭವಿಸುವ ಮೊದಲೇ ಅವನು ಆತ್ಮಹತ್ಯೆ ಮಾಡಿಕೊಳ್ಳುವುದು ಒಳ್ಳೆಯದು," ಎಂದು ಭಗವಾನ್ ಚೈತನ್ಯರು ಹೇಳಿದರು. ಹೀಗೆ ಇವು ಶುದ್ಧಿಯ ಪ್ರಕ್ರಿಯೆಗಳಾಗಿವೆ.

ಎರಡನೆಯದು **ಜ್ಞಾನ-ಯೋಗ-ವ್ಯವಸ್ಥಿತಿಃ :** ಎಂದರೆ ಜ್ಞಾನ ಸಾಧನೆಯಲ್ಲಿ ತೊಡಗಿರುವುದು. ಗೃಹಸ್ಥರಿಗೆ ಮತ್ತು ತಮ್ಮ ಆಧ್ಯಾತ್ಮ ಮುನ್ನಡೆಯ ನಿಜ ಜೀವನವನ್ನು ಮರೆತ ಇತರರಿಗೆ ಜ್ಞಾನ ಹಂಚಲು ಸನ್ಯಾಸ ಜೀವನವು ಉದ್ದಿಷ್ಟ. ಸನ್ಯಾಸಿಯು ತನ್ನ ಉಪ ಜೀವನಕ್ಕಾಗಿ ಮನೆ ಮನೆಗೆ ಹೋಗಿ ಭಿಕ್ಷೆ ಸ್ವೀಕರಿಸಬೇಕು, ಹೀಗೆಂದ ಮಾತ್ರಕ್ಕೆ ಅವರು ಭಿಕ್ಷುಕರೆಂದಲ್ಲ. ವಿನೀತ ಭಾವವು ಕೂಡ ದಿವ್ಯ ಸನ್ನಿವೇಶಿತ ವ್ಯಕ್ತಿಯ ಅರ್ಹತೆಗಳಲ್ಲಿ ಒಂದು, ಮತ್ತು ಕೇವಲ ವಿನೀತನಾಗಿ ಸನ್ಯಾಸಿಯು ಮನೆ ಮನೆಗೆ ಹೋಗುತ್ತಾನೆ ಭಿಕ್ಷೆಗಾಗಿ ಮಾತ್ರವೇ ಅಲ್ಲ, ಗೃಹಸ್ಥಾಶ್ರಮಿಗಳನ್ನು ಕಂಡು ಅವರಲ್ಲಿ ಕೃಷ್ಣಪ್ರಜ್ಞೆ ಜಾಗ್ರತಗೊಳಿಸಲು, ಇದು ಸನ್ಯಾಸಿಯ ಕರ್ತವ್ಯ. ಅವನು ವಾಸ್ತವಿಕವಾಗಿ ಉತ್ಕೃಷ್ಟನಾಗಿದ್ದರೆ ಮತ್ತು ಗುರುಗಳಿಂದ ಹಾಗೆ ಆದೇಶಿತನಾಗಿದ್ದರೆ ಅವನು ತರ್ಕಬದ್ಧ ಅರಿವುಳ್ಳವನಾಗಿ ಕೃಷ್ಣಪ್ರಜ್ಞೆಯನ್ನು ಪ್ರಚಾರ ಮಾಡಬೇಕು, ಮತ್ತು ಒಬ್ಬನು ಅಷ್ಟು ಪ್ರಗತಿ ಹೊಂದಿರದಿದ್ದರೆ, ಸನ್ಯಾಸಾಶ್ರಮವನ್ನು ಸ್ವೀಕರಿಸಕೂಡದು. ಆದರೆ ಸಾಕಷ್ಟು ಜ್ಞಾನವಿಲ್ಲದೆ ಒಬ್ಬನು ಸನ್ಯಾಸಾಶ್ರಮ ಸ್ವೀಕರಿಸಿದ್ದರೂ ಕೂಡ ಜ್ಞಾನ ಸಾಧನೆಗಾಗಿ ಒಬ್ಬ ಸದ್ಗುರು

ಗಳಿಂದ ಶ್ರವಣ ಮಾಡುವಲ್ಲಿ ಪೂರ್ತಿ ನಿರತನಾಗಬೇಕು. ಸನ್ಯಾಸಿಯು ಅಭಯದಲ್ಲಿ, ಸತ್ತ್ವ **ಸಂಶುದ್ಧಿಃ** (ಪವಿತ್ರತೆ)ಯಲ್ಲಿ ಮತ್ತು **ಜ್ಞಾನ-ಯೋಗದಲ್ಲಿ** ಸನ್ನಿವೇಶಿತನಾಗಿರಬೇಕು.

ಅನಂತರ ದಾನ. ದಾನವು ಗೃಹಸ್ಥರಿಗೆ ಉದ್ದಿಷ್ಟ. ಗೃಹಸ್ಥರು ಗೌರವಯುತ ಮಾರ್ಗದಿಂದ ಜೀವಿಕೆಯನ್ನು ಗಳಿಸಬೇಕು ಮತ್ತು ಜಗತ್ತಿನಲ್ಲೆಲ್ಲಾ ಕೃಷ್ಣಪ್ರಜ್ಞೆಯ ಪ್ರಚಾರಕ್ಕಾಗಿ ತಮ್ಮ ಆದಾಯದ ಅರ್ಧದಷ್ಟನ್ನು ಖರ್ಚುಮಾಡಬೇಕು. ಹೀಗೆ ಗೃಹಸ್ಥಾಶ್ರಮಿಯು ಆ ರೀತಿ ನಿರತನಾಗಿ ಸಾಂಸ್ಥಿಕ ಸಂಘಗಳಿಗೆ ದಾನ ಮಾಡಬೇಕು. ಸತ್ಪಾತ್ರನಿಗೆ ದಾನ ನೀಡಬೇಕು. ಮುಂದೆ ವಿವರಿಸುವಂತೆ— ಸಾತ್ವಿಕ, ರಾಜಸ ಮತ್ತು ತಾಮಸ ಗುಣಗಳಲ್ಲಿ ದಾನ—ಹೀಗೆ ಅನೇಕ ಬಗೆಯ ದಾನಗಳಿವೆ. ಸತ್ತ್ವಭಾವದಲ್ಲಿ ದಾನ ಕೊಡುವುದು ಶಾಸ್ತ್ರ ಪ್ರತಿಪಾದಿತ, ಆದರೆ ರಾಜಸ ಮತ್ತು ತಮೋಗುಣಗಳಲ್ಲಿ ದಾನವು ಹೇಳಲ್ಪಟ್ಟಿಲ್ಲ. ಏಕೆಂದರೆ ಅದು ವ್ಯರ್ಥ ಹಣ ವ್ಯಯ. ಜಗತ್ತಿನಲ್ಲೆಲ್ಲಾ ಕೃಷ್ಣಪ್ರಜ್ಞಾ ಪ್ರಚಾರಕ್ಕೆ ಮಾತ್ರ ದಾನ ನೀಡಬೇಕು. ಅದು ಸತ್ವಭಾವದ ದಾನ.

**ದಮ** (ಆತ್ಮನಿಗ್ರಹ)ದ ವಿಷಯದಲ್ಲಿ ಅದು ಧಾರ್ಮಿಕ ಸಮಾಜದ ಇತರ ಆಶ್ರಮಗಳಿಗೆ ಮಾತ್ರವಲ್ಲದೆ, ವಿಶೇಷವಾಗಿ ಗೃಹಸ್ಥಾಶ್ರಮಿಗೂ ಕೂಡ ಉದ್ದೇಶಿತ. ಗೃಹಸ್ಥಾಶ್ರಮಿಗೆ ಹೆಂಡತಿ ಇದ್ದರೂ ಅವಳನ್ನು ಅನವಶ್ಯಕವಾಗಿ ತನ್ನ ಕಾಮತೃಪ್ತಿಗೆ ಬಳಸಿಕೊಳ್ಳಬಾರದು. ಲೈಂಗಿಕ ಜೀವನದಲ್ಲಿ ಕೂಡ ಗೃಹಸ್ಥಾಶ್ರಮಿಗೆ ಅನೇಕ ನಿರ್ಬಂಧಗಳಿವೆ. ಅವುಗಳನ್ನು ಪ್ರಜಾವೃದ್ಧಿಗಾಗಿ ಮಾತ್ರ ಬಳಸಿಕೊಳ್ಳಬೇಕು. ಮಕ್ಕಳು ಬೇಡವಾಗಿದ್ದರೆ ಹೆಂಡತಿಯೊಂದಿಗೆ ಸಂಭೋಗ ಸುಖ ಹೊಂದಲೇ ಕೂಡದು. ಈಗಿನ ಸಮಾಜವು ಗರ್ಭನಿರೋಧಕಗಳೊಂದಿಗೆ ಅಥವಾ ಮಕ್ಕಳ ಜವಾಬ್ದಾರಿಯನ್ನು ತಪ್ಪಿಸಿಕೊಳ್ಳಲು ಇನ್ನೂ ಹೆಚ್ಚು ಭಯಾನಕ ವಿಧಾನಗಳೊಂದಿಗೆ ಲೈಂಗಿಕ ಭೋಗ ಹೊಂದುತ್ತಿದೆ. ಇದು ದಿವ್ಯ ಗುಣವಲ್ಲ, ಆಸುರೀ ಗುಣ. ಒಬ್ಬನು ಗೃಹಸ್ಥಾಶ್ರಮಿಯಾಗಿದ್ದರೂ ಅಧ್ಯಾತ್ಮ ಜೀವನದಲ್ಲಿ ಪ್ರಗತಿ ಹೊಂದ ಬಯಸಿದರೆ ಅವನು ತನ್ನ ಲೈಂಗಿಕ ಜೀವನವನ್ನು ನಿಯಂತ್ರಿಸಿಕೊಳ್ಳಬೇಕು ಮತ್ತು ಕೃಷ್ಣನ ಸೇವಾ ಉದ್ದೇಶಕ್ಕಲ್ಲದೆ ಮಗುವನ್ನು ಪಡೆಯಕೂಡದು. ಕೃಷ್ಣಪ್ರಜ್ಞೆಯಲ್ಲಿ ಇರಲು ಅವನು ಮಕ್ಕಳನ್ನು ಪಡೆದರೆ ಅವನು ನೂರಾರು ಮಕ್ಕಳನ್ನು ಪಡೆಯಬಹುದು, ಆದರೆ ಈ ಸಾಮರ್ಥ್ಯವಿಲ್ಲದೆ ಇಂದ್ರಿಯ ಸುಖಕ್ಕಾಗಿ ಮಾತ್ರ ಆ ಕಾರ್ಯದಲ್ಲಿ ತೊಡಗಬಾರದು.

ಯಜ್ಞವು ಗೃಹಸ್ಥಾಶ್ರಮಿಯು ಆಚರಿಸಬೇಕಾದ ಮತ್ತೊಂದು ಅಂಶ. ಏಕೆಂದರೆ ಯಜ್ಞಕ್ಕೆ ಬಹಳಷ್ಟು ಹಣಬೇಕು. ಬ್ರಹ್ಮಚರ್ಯ, ವಾನಪ್ರಸ್ಥ, ಮತ್ತು ಸನ್ಯಾಸ ಆಶ್ರಮಿಗಳಿಗೆ ಹಣವಿರುವುದಿಲ್ಲ. ಅವರು ಭಿಕ್ಷೆಯಿಂದ ಜೀವಿಸುತ್ತಾರೆ. ಆದ್ದರಿಂದ ಗೃಹಸ್ಥಾಶ್ರಮಿಗಳಿಗೆ ವಿವಿಧ ಪ್ರಕಾರದ ಯಜ್ಞಗಳು ಹೇಳಲ್ಪಟ್ಟಿವೆ. ಅವರು ವೇದ ಸಾಹಿತ್ಯದಲ್ಲಿ ವಿಧಿಸಿದ ಅಗ್ನಿಹೋತ್ರಯಜ್ಞಗಳನ್ನು ಆಚರಿಸಬೇಕು, ಆದರೆ ಅಂಥ ಯಜ್ಞಗಳಿಗೆ ಈ ಕಾಲದಲ್ಲಿ ಬಹಳ ವೆಚ್ಚಬೇಕು, ಮತ್ತು ಯಾವ ಗೃಹಸ್ಥಾಶ್ರಮಿಗೂ ಅವುಗಳನ್ನಾಚರಿಸುವುದು ಅಸಂಭವ. ಈ ಯುಗಕ್ಕೆ ಹೇಳಲ್ಪಟ್ಟ ಅತ್ಯುತ್ತಮ ಯಜ್ಞ

ವೆಂದರೆ ಸಂಕೀರ್ತನ. ಯಜ್ಞ ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ/ ಹರೇ ರಾಮ, ಹರೇ ರಾಮ,ರಾಮ ರಾಮ, ಹರೇ ಹರೇ ಎಂಬ ಈ ಸಂಕೀರ್ತನ ಯಜ್ಞವು ಅತ್ಯುತ್ತಮವಾದುದು ಮತ್ತು ಅತಿ ಕಡಿಮೆ ವೆಚ್ಚದ್ದು; ಪ್ರತಿಯೊಬ್ಬನು ಇದನ್ನು ಅಂಗೀಕರಿಸಿ ಪ್ರಯೋಜನ ಪಡೆಯಬಹುದು. ಹೀಗೆ ಈ ಮೂರು ವಿಷಯಗಳು ಎಂದರೆ ದಾನ, ಇಂದ್ರಿಯ ನಿಗ್ರಹ ಮತ್ತು ಯಜ್ಞಾಚರಣೆ ಇವು ಗೃಹಸ್ಥಾಶ್ರಮಿಗೆ ಉದ್ದಿಷ್ಟ.

ಆಮೇಲೆ **ಸ್ವಾಧ್ಯಾಯ** ಬ್ರಹ್ಮಚರ್ಯಕ್ಕೆ ಉದ್ದಿಷ್ಟ. ಬ್ರಹ್ಮಚಾರಿಗಳು ಸ್ತ್ರೀ ಸಂಪರ್ಕ ಹೊಂದಕೂಡದು; ಅವನು ಬ್ರಹ್ಮಚರ್ಯ ಜೀವನ ನಡೆಸಬೇಕು ಮತ್ತು ಅಧ್ಯಾತ್ಮ ಜ್ಞಾನ ಸಾಧನೆಗಾಗಿ ವೇದಸಾಹಿತ್ಯಾಧ್ಯಯನದಲ್ಲಿ ಮನಸ್ಸನ್ನು ತೊಡಗಿಸಬೇಕು. ಇದನ್ನು **ಸ್ವಾಧ್ಯಾಯ** ಎಂದು ಕರೆದಿದೆ.

ತಪಸ್ಸು, ವಿಶೇಷವಾಗಿ ನಿವೃತ್ತ ಜೀವನಕ್ಕೆ ಉದ್ದಿಷ್ಟ. ಒಬ್ಬನು ಇಡೀ ತನ್ನ ಜೀವನದಲ್ಲಿ ಗ್ರಹಸ್ಥಾಶ್ರಮಿಯಾಗಿ ಉಳಿಯಬಾರದು. ಜೀವನದಲ್ಲಿ—ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸ ಎಂಬ ನಾಲ್ಕು ವಿಭಾಗಗಳಿವೆ ಎಂಬುದನ್ನು ಅವನು ಸದಾ ನೆನಪಿನಲ್ಲಿಡಬೇಕು. ಆದ್ದರಿಂದ ಗೃಹಸ್ಥಾಶ್ರಮದ ಬಳಿಕ ಅವನು ನಿವೃತ್ತನಾಗಬೇಕು. ಒಬ್ಬನು ನೂರು ವರ್ಷ ಜೀವಿಸಿದರೆ ಅವನು ಇಪ್ಪತ್ತೈದು ವರ್ಷ ಅಧ್ಯಯನದಲ್ಲಿ, ಇಪ್ಪತ್ತೈದು ವರ್ಷ ಗೃಹಸ್ಥ ಜೀವನದಲ್ಲಿ, ಇಪ್ಪತ್ತೈದು ವರ್ಷ ನಿವೃತ್ತ ಜೀವನದಲ್ಲಿ ಉಳಿದ ಇಪ್ಪತ್ತೈದು ವರ್ಷ ಸನ್ಯಾಸಾಶ್ರಮದಲ್ಲಿ ಕಳೆಯಬೇಕು. ಇವು ವೈದಿಕ ಧರ್ಮದ ಶಿಷ್ಟಾಚಾರದ ನಿಯಂತ್ರಣಗಳು. ಗೃಹಸ್ಥ ಜೀವನದಿಂದ ನಿವೃತ್ತನಾದವನು ದೇಹ, ಮನಸ್ಸು ಮತ್ತು ನಾಲಿಗೆಯ ವ್ರತಗಳನ್ನಾಚರಿಸಬೇಕು. ಅದೇ ತಪಸ್ಯ. ಇಡೀ ವರ್ಣಾಶ್ರಮ–ಧರ್ಮ ಸಮಾಜವು ತಪಸ್ಸಿಗೆ ಉದ್ದಿಷ್ಟ. ತಪಸ್ಸಿಲ್ಲದೆ, ಯಾವ ಮಾನವನೂ ಮೋಕ್ಷ ಪಡೆಯಲಾರನು. ಜೀವನದಲ್ಲಿ ವ್ರತಾಚರಣೆಯ ಅಗತ್ಯವಿಲ್ಲ, ಹೀಗಾಗಿ ಒಬ್ಬನು ಊಹಾಪೋಹ ಮಾಡಿ ಸಾಗುತ್ತಿದ್ದರೆ ಪ್ರತಿಯೊಂದು ಚೆನ್ನಾಗಿ ನಡೆಯುತ್ತದೆ ಎಂಬ ತತ್ತ್ವವು ವೈದಿಕ ಸಾಹಿತ್ಯದಲ್ಲಿ ಅಥವಾ ಭಗವದ್ಗೀತೆಯಲ್ಲಿ ಹೇಳಿಲ್ಲ. ಅಂಥ ತತ್ತ್ವಗಳು ಹೆಚ್ಚು ಶಿಷ್ಯರನ್ನು ಸಂಪಾದಿಸಲೆತ್ನಿಸುವ ತೋರಿಕೆಯ ಅಧ್ಯಾತ್ಮ ವಾದಿಗಳಿಂದ ಸೃಷ್ಟ. ನಿರ್ಬಂಧಗಳು, ನಿಯಮ ನಿಯಂತ್ರಣಗಳು ಇದ್ದರೆ, ಜನ ಆಕರ್ಷಿತರಾಗುವುದಿಲ್ಲ. ಆದ್ದರಿಂದ ಧರ್ಮದ ಹೆಸರಿನಲ್ಲಿ ಸುಮ್ಮನೆ ನಟನೆ ಮಾಡಿ ಶಿಷ್ಯರನ್ನು ಹೊಂದ ಬಯಸುವವರು ತಮ್ಮ ಶಿಷ್ಯರನ್ನು ಅಥವಾ ತಮ್ಮ ಜೀವನಗಳನ್ನು ನಿರ್ಬಂಧಗಳಿಗೆ ಒಳಪಡಿಸುವುದಿಲ್ಲ. ಆದರೆ ಆ ವಿಧಾನವು ವೇದ ಮನ್ನಿತವಲ್ಲ.

ಬ್ರಾಹ್ಮಣ ಗುಣವಾದ ಸರಳತೆಯ ಮಟ್ಟಿಗೆ, ವಿಶಿಷ್ಟ ಆಶ್ರಮದವರು ಮಾತ್ರ ಈ ತತ್ತ್ವವನ್ನು ಪಾಲಿಸಬೇಕೆಂದಲ್ಲ. ಆದರೆ, ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಅಥವಾ ಸನ್ಯಾಸ ಯಾವುದೇ ಆಶ್ರಮದಲ್ಲಿರುವ ಪ್ರತಿಯೊಬ್ಬನೂ ಕೂಡ ಈ ತತ್ತ್ವವನ್ನು ಪಾಲಿಸಬೇಕು. ಒಬ್ಬನು ಬಹು ಸರಳ ಮತ್ತು ಋಜುಮಾರ್ಗಿಯಾಗಿರಬೇಕು.

**ಅಹಿಂಸಾ** ಎಂದರೆ ಯಾವೊಬ್ಬ ಜೀವಿಯ ಪ್ರಗತಿಪರ ಜೀವನವನ್ನು ತಡೆಗಟ್ಟದೇ ಇರುವುದು. ದೇಹನಾಶವಾದ ಬಳಿಕ ಕೂಡ **ಚೇತನಾತ್ಮವು** ನಾಶವಾಗುವುದಿಲ್ಲವಾದ್ದ

ರಿಂದ, ಇಂದ್ರಿಯ ತೋಷಣಕ್ಕಾಗಿ ಪ್ರಾಣಿಗಳನ್ನು ಕೊಲ್ಲುವುದರಿಂದ ಹಾನಿ ಏನೂ ಇಲ್ಲ ಎಂದು ಒಬ್ಬನು ಭಾವಿಸಕೂಡದು. ಈಗ ಜನ ಸಾಕಷ್ಟು ಆಹಾರ ಧಾನ್ಯ, ಹಣ್ಣು ಮತ್ತು ಹಾಲು ದೊರೆಯುತ್ತಿದ್ದರೂ, ಪ್ರಾಣಿ ಆಹಾರಕ್ಕೆ ಒಗ್ಗಿ ಹೋಗಿದ್ದಾರೆ. ಪ್ರಾಣಿವಧೆ ಅವಶ್ಯವಿಲ್ಲ. ಈ ವಿಧಿ ಪ್ರತಿಯೊಬ್ಬರಿಗಾಗಿ ಇದೆ. ಅನ್ಯ ಮಾರ್ಗವೇ ಇಲ್ಲದಾಗ ಒಬ್ಬನು ಪ್ರಾಣವಧೆ ಮಾಡಬಹುದು. ಆದರೆ, ಅದು ಯಜ್ಞದಲ್ಲಿ ಅರ್ಪಿತವಾಗಬೇಕು. ಏನೇ ಇರಲಿ, ಮಾನವರಿಗಾಗಿ ಸಾಕಷ್ಟು ಆಹಾರವಿರುವಾಗ ಆಧ್ಯಾತ್ಮ ಸಾಕ್ಷಾತ್ಕಾರದಲ್ಲಿ ಪ್ರಗತಿ ಸಾಧಿಸ ಬಯಸುವವರು, ಪ್ರಾಣಿಗಳನ್ನು ಹಿಂಸಿಸಕೂಡದು. ನಿಜ ಅಹಿಂಸೆ ಎಂದರೆ ಯಾರೊಬ್ಬರ ಪ್ರಗತಿಪರ ಜೀವನವನ್ನು ತಡೆಗಟ್ಟದಿರುವುದು. ಪ್ರಾಣಿಗಳು ಕೂಡ, ಒಂದು ಪ್ರಾಣಿ ಜೀವನ ವರ್ಗದಿಂದ ಮತ್ತೊಂದು ವರ್ಗಕ್ಕೆ ದೇಹಾಂತರ ಹೊಂದುವ ಮೂಲಕ ತಮ್ಮ ವಿಕಾಸ ಕ್ರಮದಲ್ಲಿ ಪ್ರಗತಿ ಹೊಂದುತ್ತವೆ. ವಿಶಿಷ್ಟ ಪ್ರಾಣಿಯನ್ನು ಕೊಂದರೆ ಅದರ ಪ್ರಗತಿ ಕುಂಠಿತ. ಒಂದು ಪ್ರಾಣಿಯು ವಿಶಿಷ್ಟ ದೇಹದಲ್ಲಿ ಬಹು ದಿನ ಗಳವರೆಗೆ ಅಥವಾ ಅನೇಕ ವರ್ಷಗಳವರೆಗೆ ಇದ್ದರೆ ಮತ್ತು ಕೊನೆಗೆ ಕೊಲ್ಲಲ್ಪಟ್ಟರೆ, ಆಗ ಅದು ಮತ್ತೆ ಆ ಜನ್ಮಕ್ಕೆ ಹಿಂದಿರುಗಿ ಮುಂದಿನ ಜೀವಯೋನಿಗೆ ಉನ್ನತಿ ಹೊಂದಲು ಆಯುಷ್ಯದ ಉಳಿದ ದಿನಗಳನ್ನು ಕಳೆಯಬೇಕಾಗುವುದು. ಆದ್ದರಿಂದ ಕೇವಲ ಒಬ್ಬನ ರುಚಿಗಾಗಿ ಅವುಗಳ ಪ್ರಗತಿಯನ್ನು ತಡೆಗಟ್ಟಕೂಡದು. ಇದನ್ನು **ಅಹಿಂಸೆ** ಎಂದು ಕರೆದಿದೆ.

**ಸತ್ಯಮ್.** ಹೀಗೆಂದರೆ ಒಬ್ಬನು ಸ್ವಾರ್ಥಕ್ಕಾಗಿ ಸತ್ಯವನ್ನು ಅಲ್ಲಗಳೆಯ ಕೂಡದು. ವೈದಿಕ ಸಾಹಿತ್ಯದಲ್ಲಿ ಕೆಲವು ಕಠಿಣ ವಿಷಯಗಳಿವೆ. ಆದರೆ ಅವುಗಳ ಅರ್ಥ ವನ್ನು ಅಥವಾ ಉದ್ದೇಶವನ್ನು ನಿಜ ಗುರುಗಳಿಂದ ಅರಿತುಕೊಳ್ಳಬೇಕು. ಅದು ವೇದ ಗಳನ್ನು ಅರಿತುಕೊಳ್ಳುವ ಪ್ರಕ್ರಿಯೆ. **ಶ್ರುತಿ** ಎಂದರೆ ಆಚಾರ್ಯರಿಂದ ಶ್ರವಣ ಮಾಡ ಬೇಕು. ತನ್ನ ಸ್ವಾರ್ಥಕ್ಕಾಗಿ ಯಾವುದೋ ಅರ್ಥವನ್ನು ಕಲ್ಪಿಸಕೂಡದು. ಭಗವದ್ಗೀತೆಯ ಮೂಲ ಸಾರಕ್ಕೆ ಅಪಾರ್ಥ ಮಾಡುವ ಅನೇಕ ವ್ಯಾಖ್ಯಾನಗಳಿವೆ. ಶಬ್ದದ ನಿಜಾರ್ಥವನ್ನು ಹೇಳಬೇಕು ಮತ್ತು ಅದನ್ನು ಸದ್ಗುರುಗಳಿಂದ ತಿಳಿದುಕೊಳ್ಳಬೇಕು.

**ಅಕ್ರೋಧ** ಎಂದರೆ ಕ್ರೋಧವನ್ನು ತಡೆಗಟ್ಟುವುದು. ಕೆಣಕಿದಾಗಲೂ ಕೂಡ ಒಬ್ಬನು ತಾಳ್ಮೆಯಿಂದಿರಬೇಕು. ಏಕೆಂದರೆ ಒಬ್ಬನು ಒಂದು ಸಲ ಕೋಪಗೊಂಡರೆ ಅವನ ಇಡೀ ದೇಹವು ಕಲುಷಿತವಾಗುತ್ತದೆ. ಕ್ರೋಧವು ರಜೋಗುಣದ ಮತ್ತು ಕಾಮದ ಉತ್ಪತ್ತಿ, ಆದ್ದರಿಂದ ದಿವ್ಯ ಸನ್ನಿವೇಶಿತನು ತನ್ನ ಕ್ರೋಧವನ್ನು ತಡೆಗಟ್ಟಬೇಕು. **ಅಪೈಶುನಮ್** ಎಂದರೆ ಒಬ್ಬನು ಇತರರಲ್ಲಿ ದೋಷ ಎಣಿಸಕೂಡದು ಅಥವಾ ಅನವಶ್ಯಕ ವಾಗಿ ಅವರನ್ನು ತಿದ್ದಕೂಡದು. ಆದರೆ ಕಳ್ಳನನ್ನು ಕಳ್ಳ ಎಂದು ಕರೆಯದಿರುವುದು ಪ್ರಾಮಾಣಿಕ ವ್ಯಕ್ತಿಯನ್ನು ಕಳ್ಳನೆಂದು ಕರೆಯುವುದು ಆಧ್ಯಾತ್ಮ ಜೀವನದಲ್ಲಿ ಪ್ರಗತಿ ಸಾಧಿಸುವವನಿಗೆ ಬಹು ದೊಡ್ಡ ಅಪರಾಧ. **ಹ್ರೀ** ಎಂದರೆ ಒಬ್ಬನು ಬಹು ಸೌಜನ್ಯ ಶೀಲ ನಾಗಿರಬೇಕು ಮತ್ತು ಹೇಯ ಕಾರ್ಯ ಮಾಡಕೂಡದು. **ಅಚಾಪಲಮ್** ಎಂದರೆ ದೃಢ ನಿರ್ಧಾರ, ಒಬ್ಬನು ಉದ್ವಿಗ್ನನಾಗಕೂಡದು ಅಥವಾ ಯಾವುದೇ ಪ್ರಯತ್ನದಲ್ಲಿ ಹತಾಶನಾಗಕೂಡದು. ಪ್ರಯತ್ನದಲ್ಲಿ ವಿಫಲತೆ ಇರಬಹುದು ಆದರೆ ಆದಕ್ಕಾಗಿ ಒಬ್ಬನು ಖೇದಪಡಬೇಕಾಗಿಲ್ಲ; ತಾಳ್ಮೆ ಮತ್ತು ದೃಢತೆಯಿಂದ ಪ್ರಗತಿ ಸಾಧಿಸಬೇಕು.

**ತೇಜಸ್** ಎಂಬ ಪದವು ಇಲ್ಲಿ ಕ್ಷತ್ರಿಯರಿಗೆ ಉದ್ದಿಷ್ಟ. ಕ್ಷತ್ರಿಯರು ದುರ್ಬಲರಿಗೆ ರಕ್ಷಣೆ ನೀಡಲು ಸದಾ ಬಹು ಬಲಶಾಲಿಗಳಾಗಿರಬೇಕು. ಅವರು ತಾವು ಅಹಿಂಸಕರೆಂದು ನಟಿಸಕೂಡದು. ಹಿಂಸೆ ಅಗತ್ಯವಾದರೆ ಅವರು ಅದನ್ನು ಪ್ರಕಟಿಸಬೇಕು. ಆದರೆ ತನ್ನ ವೈರಿಯನ್ನು ಬಗ್ಗುಬಡಿಯಲು ಶಕ್ತನಾದವನು ಕೆಲವು ಸಲ ಕ್ಷಮೆ ತೋರಬಹುದು. ಕ್ಷುದ್ರ ಅಪರಾಧಗಳನ್ನು ಅವನು ಕ್ಷಮಿಸಬಹುದು.

**ಶೌಚಮ್** ಎಂದರೆ ಶುಚಿತ್ವ, ಒಬ್ಬನ ಮನಸ್ಸು ಮತ್ತು ದೇಹದಲ್ಲಿ ಮಾತ್ರವಲ್ಲದೆ ವ್ಯವಹಾರದಲ್ಲೂ ಕೂಡ. ಇದು ವಿಶೇಷವಾಗಿ ಕಳ್ಳಪೇಟೆ ವ್ಯವಹಾರ ಮಾಡುವ ವಣಿಕ್ ಸಮಾಜಕ್ಕೆ ಉದ್ದಿಷ್ಟ. **ನಾತಿ-ಮಾನಿತಾ** ಗೌರವ ನಿರೀಕ್ಷಿಸದಿರುವುದು, ವೇದಾಜ್ಞೆಗಳನು ಸಾರ ಪರಿಗಣಿಸಿರುವ ನಾಲ್ಕು ವರ್ಣಗಳಲ್ಲಿ ತೀರ ಕೆಳಗಿನ ವರ್ಗದವರಾದ ಕಾರ್ಮಿಕ ವರ್ಗದ ಶೂದ್ರರಿಗೆ ಅನ್ವಯಿಸುತ್ತದೆ. ಅವರು ಅನವಶ್ಯಕ ಗೌರವ ಅಥವಾ ಘನತೆ ಯಿಂದ ಬೀಗಬಾರದು, ಮತ್ತು ತಮ್ಮ ಸ್ಥಾನದಲ್ಲಿಯೇ ಇರಬೇಕು. ಸಮಾಜ ಸುವ್ಯವಸ್ಥೆ ಯನ್ನು ಕಾಪಾಡಲು ಶೂದ್ರರು ಇತರ ಉಚ್ಚ ವರ್ಗದವರಿಗೆ ಗೌರವ ಸಲ್ಲಿಸುವುದು ಅವರ ಕರ್ತವ್ಯ.

ಇಲ್ಲಿ ಪ್ರಸ್ತಾಪಿಸಿದ ಈ ಎಲ್ಲ ಇಪ್ಪತ್ತಾರು ಅರ್ಹತೆಗಳು ದಿವ್ಯ ಗುಣಗಳು. ಅವು ಗಳನ್ನು ಭಿನ್ನಭಿನ್ನ ಸಾಮಾಜಿಕ, ಸ್ಥಾನಮಾನ ಮತ್ತು ವೃತ್ತಿಕ್ರಮಾನುಸಾರ ಬೆಳಸಿಕೊಳ್ಳ ಬೇಕು. ತಾತ್ಪರ್ಯವೆಂದರೆ, ಭೌತಿಕ ಸ್ಥಿತಿಗತಿಗಳು ಕ್ಲೇಶಕರವಾಗಿದ್ದರೂ, ಅಭ್ಯಾಸದಿಂದ ಎಲ್ಲ ವರ್ಗದವರು ಈ ಗುಣಗಳನ್ನು ಬೆಳೆಸಿಕೊಂಡರೆ, ಆಗ ಕ್ರಮೇಣ ದಿವ್ಯ ಸಾಕ್ಷಾತ್ಕಾರದ ಅತ್ಯುನ್ನತ ವೇದಿಕೆಗೆ ಏರುವುದು ಸಾಧ್ಯ.

**ದಮ್ಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ ।**
**ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಮ್ಪದಮಾಸುರೀಮ್ ॥೪॥**

ದಮ್ಭಃ—ದಂಭ, ದರ್ಪಃ—ದರ್ಪ, ಅಭಿಮಾನಃ—ದುರಭಿಮಾನ, ಚ—ಮತ್ತು, ಕ್ರೋಧಃ—ಕೋಪ, ಪಾರುಷ್ಯಮ್—ಕಠಿಣತೆ, ಏವ— ಖಂಡಿತವಾಗಿ, ಚ—ಮತ್ತು, ಅಜ್ಞಾನಮ್—ಅಜ್ಞಾನ, ಚ—ಮತ್ತು, ಅಭಿಜಾತಸ್ಯ—ಅಭಿಜಾತನ, ಪಾರ್ಥ—ಹೇ ಪೃಥಾಪುತ್ರನೇ, ಸಮ್ಪದಮ್—ಗುಣಗಳು, ಆಸುರೀಮ್—ಅಸುರ ಸ್ವಭಾವದ.

**ದಂಭ, ದರ್ಪ, ದುರಹಂಕಾರ ಕಠಿಣತೆ ಮತ್ತು ಅಜ್ಞಾನ— ಪೃಥಾ ಪುತ್ರನೇ ಈ ಗುಣಗಳು ಆಸುರೀ ಸ್ವಭಾವದವರದು.**

**ಭಾವಾರ್ಥ :** ಈ ಶ್ಲೋಕದಲ್ಲಿ ನರಕಕ್ಕೆ ಹೆದ್ದಾರಿಯು ವರ್ಣಿತ. ಅಸುರರು ತತ್ತ್ವಾಚರಣೆ ಮಾಡದಿದ್ದರೂ, ಧರ್ಮದ ಮತ್ತು ಅಧ್ಯಾತ್ಮ ವಿಜ್ಞಾನದ ಪ್ರಗತಿಯ ನಟನೆ ಮಾಡಬಯಸುತ್ತಾರೆ. ಅವರು ಸದಾ ದರ್ಪಿಗಳು ಅಥವಾ ಯಾವುದೋ ಬಗೆಯ ಶಿಕ್ಷಣ ಅಥವಾ ಬಹಳಷ್ಟು ಸಿರಿವಂತಿಕೆ ಹೊಂದಿರುವಿಕೆಯ ಗರ್ವದಲ್ಲಿರುತ್ತಾರೆ. ಅವರು ಗೌರವ ಯೋಗ್ಯರಲ್ಲದಿದ್ದರೂ ಅನ್ಯರಿಂದ ಪೂಜಿಸಲ್ಪಡಲು ಮತ್ತು ಗೌರವಿಸಲ್ಪಡಲು ಬಯಸುತ್ತಾರೆ. ಕ್ಷುಲ್ಲಕ ವಿಷಯಗಳಲ್ಲಿ ಕೋಪಗೊಳ್ಳುತ್ತಾರೆ, ಮತ್ತು ಕಠಿಣ ಶಬ್ದ

ಗಳನ್ನಾಡುತ್ತಾರೆ, ಸೌಜನ್ಯದಿಂದ ಮಾತನಾಡುವುದಿಲ್ಲ. ಏನು ಮಾಡಬೇಕು ಮತ್ತು ಏನು ಮಾಡಬಾರದೆಂಬುದು ಅವರಿಗೆ ತಿಳಿದಿಲ್ಲ. ಅವರು ತಮ್ಮ ಇಚ್ಛಾನುಸಾರ ಪ್ರತಿಯೊಂದನ್ನೂ ಮನಬಂದಂತೆ ಮಾಡುತ್ತಾರೆ, ಮತ್ತು ಅವರು ಯಾರ ಹಿರಿತನವನ್ನೂ ಮನ್ನಿಸುವುದಿಲ್ಲ. ಅವರು ತಾಯಿ ಗರ್ಭದಲ್ಲಿರುವಾಗಿನಿಂದ ತಮ್ಮ ದೇಹಗಳ ಜೊತೆಗೆಯೇ ಈ ಆಸುರೀ ಗುಣಗಳನ್ನು ಪಡೆದಿರುತ್ತಾರೆ, ಮತ್ತು ಬೆಳೆದ ಹಾಗೆ ಈ ಎಲ್ಲ ಅಮಂಗಲ ಗುಣಗಳನ್ನು ಪ್ರಕಟಿಸುತ್ತಾರೆ.

**ದೈವೀ ಸಮ್ಪದ್ ವಿಮೋಕ್ಷಾಯ ನಿಬನ್ಧಾಯಾಸುರೀ ಮತಾ ।**
**ಮಾ ಶುಚಃ ಸಮ್ಪದಂ ದೈವೀಮಭಿಜಾತೋಽಸಿ ಪಾಣ್ಡವಾ ॥೫॥**

ದೈವೀ—ದಿವ್ಯ, ಸಮ್ಪತ್—ಸಂಪತ್ತು, ವಿಮೋಕ್ಷಾಯ—ಮೋಕ್ಷಕ್ಕೆ ಉದ್ದಿಷ್ಟ, ನಿಬನ್ಧಾಯ—ಬಂಧಕ್ಕಾಗಿ, ಆಸುರೀ—ಆಸುರೀ ಗುಣಗಳು, ಮತಾ—ಎಂದು ತಿಳಿಯಲ್ಪಟ್ಟಿವೆ, ಮಾ—ಬೇಡ, ಶುಚಃ—ಶೋಕಿಸುವುದು, ಸಮ್ಪದಮ್—ಸಂಪತ್ತುಗಳೊಡನೆ, ದೈವೀಮ್—ದಿವ್ಯವಾಗಿ, ಅಭಿಜಾತಃ—ಹುಟ್ಟಿದವನು, ಅಸಿ—ಆಗಿರುವೆ, ಪಾಣ್ಡವ—ಹೇ ಪಾಂಡು ಪುತ್ರನೇ.

**ದಿವ್ಯಗುಣಗಳು ಮೋಕ್ಷಕ್ಕೆ ಸಹಾಯಕ, ಆದರೆ ಆಸುರೀ ಗುಣಗಳು ಬಂಧನಕ್ಕೆ ಕಾರಣ. ಚಿಂತಿಸಬೇಡ, ಹೇ ಪಾಂಡು ಪುತ್ರನೇ, ಏಕೆಂದರೆ ನೀನು ದೈವೀ ಗುಣಗಳೊಡನೆ ಹುಟ್ಟಿರುವೆ.**

**ಭಾವಾರ್ಥ :** ಅರ್ಜುನನು ಆಸುರೀ ಗುಣಗಳಿಂದ ಹುಟ್ಟಿದವನಲ್ಲ ಎಂಬುದನ್ನು ಹೇಳುತ್ತಾ ಶ್ರೀಕೃಷ್ಣನು ಅರ್ಜುನನನ್ನು ಪ್ರೋತ್ಸಾಹಿಸಿದನು. ಯುದ್ಧದಲ್ಲಿ ಅವನ ತೊಡಗುವಿಕೆಯು ಆಸುರೀಯದಾಗಿರಲಿಲ್ಲ, ಏಕೆಂದರೆ ಅವನು ಸಾಧಕ ಬಾಧಕಗಳನ್ನು ಕುರಿತು ವಿಚಾರ ಮಾಡುತ್ತಿದ್ದನು. ಗೌರವಾನ್ವಿತರಾದ ಭೀಷ್ಮ ಮತ್ತು ದ್ರೋಣರನ್ನು ಕೊಲ್ಲಬೇಕೋ ಬೇಡವೋ ಎಂಬುದನ್ನು ವಿಚಾರಿಸುತ್ತಿದ್ದನು, ಆದ್ದರಿಂದ ಅವನು ಕ್ರೋಧ ಪ್ರಭಾವದಲ್ಲಿ, ಮಿಥ್ಯಾಹಂಕಾರದಲ್ಲಿ ಅಥವಾ ಕಠಿಣತೆಯಿಂದ ವರ್ತಿಸುತ್ತಿರಲಿಲ್ಲ. ಆದ್ದರಿಂದ ಅವನು ಆಸುರೀ ಗುಣದವನಾಗಿರಲಿಲ್ಲ. ಕ್ಷತ್ರಿಯನಿಗೆ, ಯೋಧನಿಗೆ, ವೈರಿಯ ಮೇಲೆ ಬಾಣ ಪ್ರಯೋಗ ಮಾಡುವುದು ದಿವ್ಯವೆಂದು ಪರಿಗಣಿಸಲಾಗಿದೆ, ಮತ್ತು ಅಂಥ ಕರ್ತವ್ಯ ವಿಮುಖನಾಗುವುದು ಆಸುರೀಯತೆ. ಆದ್ದರಿಂದ ಅರ್ಜುನನು ಶೋಕಿಸಲು ಯಾವ ಕಾರಣವೂ ಇರಲಿಲ್ಲ. ಭಿನ್ನಭಿನ್ನ ವರ್ಣಗಳ ನಿಯಂತ್ರಣ ತತ್ತ್ವಗಳನ್ನು ಆಚರಿಸುವವನು ದಿವ್ಯವಾಗಿ ಸನ್ನಿವೇಶಿತನು.

**ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ ।**
**ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ ಶೃಣು ॥೬॥**

ದ್ವೌ—ಎರಡು, ಭೂತ-ಸರ್ಗೌ—ಸೃಷ್ಟ ಜೀವಿಗಳು, ಲೋಕೇ—ಲೋಕದಲ್ಲಿ, ಅಸ್ಮಿನ್—ಈ, ದೈವಃ—ದೈವೀ, ಆಸುರಃ—ಆಸುರೀ, ಏವ—ಖಂಡಿತವಾಗಿ, ಚ—

ಮತ್ತು, ದೈವಃ—ದೈವೀ, ವಿಸ್ತರಶ್—ವಿಸ್ತಾರವಾಗಿ, ಪ್ರೋಕ್ತಃ—ಹೇಳಿದೆ, ಆಸುರಮ್—ಆಸುರೀ, ಪಾರ್ಥ—ಹೇ ಪೃಥಾ ಪುತ್ರನೇ, ಮೇ—ನನ್ನಿಂದ, ಶೃಣು—ಶ್ರವಣ ಮಾಡು ಅಷ್ಟೆ.

**ಹೇ ಪೃಥಾ ಪುತ್ರನೇ, ಈ ಜಗತ್ತಿನಲ್ಲಿ ಎರಡು ಬಗೆಯ ಸೃಷ್ಟ ಜೀವಿಗಳಿದ್ದಾರೆ. ಒಬ್ಬನು ದೈವೀ ಮತ್ತೊಬ್ಬನು ಆಸುರೀ ಜೀವಿ ಎಂದು ಕರೆದಿದೆ. ನಾನು ಆಗಲೇ ನಿನಗೆ ವಿಸ್ತಾರವಾಗಿ ದೈವೀಗುಣಗಳನ್ನು ವಿವರಿಸಿದ್ದೇನೆ. ಈಗ ನನ್ನಿಂದ ಆಸುರೀ ಗುಣಗಳನ್ನು ಕುರಿತು ಕೇಳು.**

**ಭಾವಾರ್ಥ :** ಅರ್ಜುನನು ದೈವೀ ಗುಣಗಳಿಂದ ಹುಟ್ಟಿದವನು ಎಂಬುದನ್ನು ಶ್ರೀಕೃಷ್ಣನು ಅವನಿಗೆ ಖಚಿತಗೊಳಿಸಿ, ಈಗ ಆಸುರೀ ಮಾರ್ಗವನ್ನು ವರ್ಣಿಸುತ್ತಿದ್ದಾನೆ. ಬದ್ಧಾತ್ಮರು ಈ ಜಗತ್ತಿನಲ್ಲಿ ಎರಡು ಪ್ರಕಾರವಾಗಿ ವಿಂಗಡಿಸ್ಪಟ್ಟಿದ್ದಾರೆ. ದೈವೀ ಗುಣಗಳಿಂದ ಹುಟ್ಟಿದವರು ನಿಯಂತ್ರಿತ ಜೀವನವನ್ನು ಅನುಸರಿಸುತ್ತಾರೆ ; ಎಂದರೆ ಅವರು ಶಾಸ್ತ್ರವಿಧಿಗಳನ್ನು ಮತ್ತು ಅಧಿಕಾರಿಗಳನ್ನು ಅನುಸರಿಸುತ್ತಾರೆ. ಒಬ್ಬನು ಅಧಿಕೃತ ಶಾಸ್ತ್ರದ ಬೆಳಕಿನಲ್ಲಿ ಕರ್ತವ್ಯಗಳನ್ನು ನಿರ್ವಹಿಸಬೇಕು. ಈ ಮನೋಭಾವವು ದೈವೀಭಾವ ಎಂದು ಕರೆದಿದೆ. ಶಾಸ್ತ್ರಗಳಲ್ಲಿ ವಿಧಿಸಿದಂತೆ ನಿಯಂತ್ರಣ ತತ್ತ್ವಗಳನ್ನು ಅನುಸರಿಸದವನು ಮತ್ತು ತನ್ನ ಇಷ್ಟಬಂದಂತೆ ವರ್ತಿಸುವುದನ್ನು ಆಸುರೀ ಎಂದು ಕರೆದಿದೆ. ಶಾಸ್ತ್ರಗಳ ನಿಯಂತ್ರಣ ತತ್ತ್ವಗಳನ್ನು ಪಾಲಿಸುವುದನ್ನು ಬಿಟ್ಟು ಇತರ ಯಾವುದೇ ತತ್ತ್ವವಿಲ್ಲ. ದೇವತೆಗಳು ಮತ್ತು ದೈತ್ಯರು ಪ್ರಜಾಪತಿಯಿಂದ ಹುಟ್ಟಿದವರು ಎಂದು ವೇದಸಾಹಿತ್ಯದಲ್ಲಿ ಪ್ರಸ್ತಾಪಿತ ; ವ್ಯತ್ಯಾಸ ಇಷ್ಟೇ, ಎಂದರೆ ಒಂದು ವರ್ಗವು ವೇದ ವಿಧಿಗಳನ್ನು ಪಾಲಿಸುತ್ತದೆ, ಮತ್ತೊಂದು ವರ್ಗವು ಪಾಲಿಸುವುದಿಲ್ಲ.

**ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ ।**
**ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ ॥೭॥**

ಪ್ರವೃತ್ತಿಮ್—ಸರಿಯಾಗಿ ವರ್ತಿಸುವುದು, ಚ—ಕೂಡ, ನಿವೃತ್ತಿಮ್—ಸರಿಯಾಗಿ ಕೆಲಸ ಮಾಡದಿರುವುದು, ಚ—ಮತ್ತು, ಜನಾಃ—ಜನರು, ನ—ಎಂದಿಗೂ ಇಲ್ಲ, ವಿದುಃ—ತಿಳಿಯುವುದು ಅಸುರಾಃ—ಆಸುರೀ ಗುಣದ, ನ—ಎಂದಿಗೂ ಇಲ್ಲ, ಶೌಚಮ್—ಶುಚಿ, ನ—ಅಥವಾ, ಅಪಿ—ಕೂಡ, ಚ—ಮತ್ತು, ಆಚಾರಃ—ಆಚಾರ, ನ—ಎಂದಿಗೂ ಇಲ್ಲ, ಸತ್ಯಮ್—ಸತ್ಯವು, ತೇಷು—ಅವರಲ್ಲಿ, ವಿದ್ಯತೇ—ಇದೆ.

**ಆಸುರೀ ಸ್ವಭಾವದವರು ಯಾವುದನ್ನು ಮಾಡಬೇಕು ಮತ್ತು ಯಾವುದನ್ನು ಮಾಡಬಾರದು ಎಂಬುದನ್ನು ತಿಳಿದಿರುವುದಿಲ್ಲ. ಅವರಲ್ಲಿ ಸ್ವಚ್ಛತೆಯಾಗಲಿ, ಯೋಗ್ಯ ನಡತೆಯಾಗಲಿ ಅಥವಾ ಸತ್ಯವಾಗಲಿ ಇರುವುದಿಲ್ಲ.**

**ಭಾವಾರ್ಥ :** ಪ್ರತಿಯೊಂದು ನಾಗರಿಕ ಮಾನವ ಸಮಾಜದಲ್ಲಿ ಆದಿಯಿಂದ ಅನುಸರಿಸಿಕೊಂಡು ಬಂದ ಕೆಲವು ಶಾಸ್ತ್ರ ನಿಯಮಗಳಿವೆ, ವಿಶೇಷವಾಗಿ ಆರ್ಯರಲ್ಲಿ ವೈದಿಕ

ನಾಗರಿಕತೆಯನ್ನು ಅನುಸರಿಸಿಕೊಂಡುಬಂದವರು ಮತ್ತು ಅತ್ಯಂತ ಮುಂದುವರಿದ ನಾಗರಿಕ ಜನಾಂಗವೆಂದು ಪ್ರಸಿದ್ಧರು ಮತ್ತು ಶಾಸ್ತ್ರವಿಧಿಗಳನ್ನು ಅನುಸರಿಸದವರು ಅಸುರರೆಂದು ತಿಳಿಯಲ್ಪಟ್ಟಿದ್ದಾರೆ. ಆದ್ದರಿಂದ ಅಸುರರು ಶಾಸ್ತ್ರನಿಯಮಗಳನ್ನು ತಿಳಿದಿಲ್ಲ ಅಥವಾ ಅನುಸರಿಸುವ ಯಾವ ಇಚ್ಛೆಯೂ ಇಲ್ಲ ಎಂದು ಇಲ್ಲಿ ಹೇಳಿದೆ. ಅವರಲ್ಲಿ ಅನೇಕರು ಅವುಗಳನ್ನು ತಿಳಿದಿಲ್ಲ, ಕೆಲವರು ತಿಳಿದಿದ್ದರೂ ಕೂಡ ಅನುಸರಿಸುವ ಪ್ರವೃತ್ತಿಯಿಲ್ಲ. ಅವರಲ್ಲಿ ಶ್ರದ್ಧೆಯಿಲ್ಲ, ಅಥವಾ ಅವರು ವೈದಿಕ ವಿಧಿಗಳನುಸಾರ ವರ್ತಿಸುವ ಇಚ್ಛೆ ಹೊಂದಿಲ್ಲ. ಅಸುರರು ಬಹಿರಂಗ ಅಥವಾ ಅಂತರಂಗ ಎರಡೂ ಶುದ್ಧಿಗಳನ್ನು ಹೊಂದಿರುವುದಿಲ್ಲ. ಒಬ್ಬನು, ಹಲ್ಲುಜ್ಜಿ ಕ್ಷೌರ ಮಾಡಿಕೊಂಡು, ಸ್ನಾನಮಾಡಿ ಬಟ್ಟೆ ಬದಲಾಯಿಸಿ ಇತ್ಯಾದಿ ರೀತಿಯಿಂದ ತನ್ನ ದೇಹವನ್ನು ಶುಚಿಯಾಗಿಟ್ಟುಕೊಳ್ಳಲು ಸದಾ ಎಚ್ಚರಿಕೆ ವಹಿಸಬೇಕು. ಆಂತರಿಕ ಶುದ್ಧಿಯ ವಿಷಯದಲ್ಲಿ ಒಬ್ಬನು ಸದಾ ಭಗವಂತನ ಪುಣ್ಯನಾಮಗಳನ್ನು ಸ್ಮರಿಸಬೇಕು ಮತ್ತು ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ,/ ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ, ಎಂದು ಜಪಿಸಬೇಕು. ಅಸುರರು ಅಂತರಂಗ ಮತ್ತು ಬಹಿರಂಗ ಶುದ್ಧಿಗಾಗಿ ಎಲ್ಲ ನಿಯಮಗಳನ್ನು ಮೆಚ್ಚುವುದಿಲ್ಲ ಅಥವಾ ಪಾಲಿಸುವುದಿಲ್ಲ.

ಇನ್ನು ನಡತೆಯ ಮಟ್ಟಿಗೆ, ಮಾನವ ನಡತೆಗೆ ಮಾರ್ಗದರ್ಶನ ನೀಡುವಂಥ ಜನಾಂಗದ ನ್ಯಾಯ ನಿಯಮವಾದ ಮನು–ಸಂಹಿತೆಯಂಥ ಅನೇಕ ನೀತಿನಿಯಮ ನಿಯಂತ್ರಣಗಳಿವೆ. ಈವರೆಗೂ ಕೂಡ ಹಿಂದೂ ಆಗಿರುವವರು ಮನು–ಸಂಹಿತೆಯನ್ನು ಅನುಸರಿಸುತ್ತಾರೆ. ವಾರಸು ನ್ಯಾಯ ಮತ್ತು ಇತರ ನ್ಯಾಯ ಅಂಶಗಳು ಈ ಸಂಹಿತೆಯಿಂದ ತೆಗೆದುಕೊಳ್ಳಲ್ಪಟ್ಟಿವೆ. ಮನು–ಸಂಹಿತೆಯಲ್ಲಿ ಸ್ತ್ರೀಯರಿಗೆ ಸ್ವಾತಂತ್ರ್ಯ ನೀಡಕೂಡದೆಂದು ಸ್ಪಷ್ಟವಾಗಿ ಹೇಳಿದೆ. ಹಾಗೆಂದ ಮಾತ್ರಕ್ಕೆ ಸ್ತ್ರೀಯರನ್ನು ದಾಸ್ಯದಲ್ಲಿ ಇರಿಸಬೇಕೆಂದಲ್ಲ, ಅವರು ಮಕ್ಕಳಿದ್ದಂತೆ. ಮಕ್ಕಳಿಗೆ ಸ್ವಾತಂತ್ರ್ಯ ನೀಡುವುದಿಲ್ಲ, ಆದರೆ ಅವರನ್ನು ದಾಸರಾಗಿ ಇರಿಸುವುದಿಲ್ಲ. ಅಸುರರು ಈಗ ಈ ವಿಧಿಗಳನ್ನೆಲ್ಲಾ ಉಪೇಕ್ಷಿಸಿದ್ದಾರೆ ಮತ್ತು ಸ್ತ್ರೀಯರಿಗೆ ಪುರುಷರಷ್ಟೇ ಸ್ವಾತಂತ್ರ್ಯ ನೀಡಬೇಕೆಂದು ಭಾವಿಸುತ್ತಾರೆ. ಆದರೂ, ಇದು ಜಗತ್ತಿನ ಸಾಮಾಜಿಕ ಸ್ಥಿತಿಯನ್ನು ಸುಧಾರಿಸಿಲ್ಲ. ವಾಸ್ತವಿಕವಾಗಿ ಸ್ತ್ರೀಯರಿಗೆ ಪ್ರತಿಯೊಂದು ಹಂತದಲ್ಲಿ ರಕ್ಷಣೆ ಬೇಕು ; ಬಾಲ್ಯದಲ್ಲಿ ಅವಳಿಗೆ ತಂದೆಯ ರಕ್ಷಣೆ ಬೇಕು. ಯೌವನದಲ್ಲಿ ಗಂಡನ ರಕ್ಷಣೆ ಮತ್ತು ಮುಪ್ಪಿನಲ್ಲಿ ದೊಡ್ಡವರ ರಕ್ಷಣೆ ಬೇಕು. ಮನು–ಸಂಹಿತೆಯ ಪ್ರಕಾರ ಇದು ಸರಿಯಾದ ಸಾಮಾಜಿಕ ವರ್ತನೆ. ಆದರೆ ಆಧುನಿಕ ಶಿಕ್ಷಣವು ಸ್ತ್ರೀಯರ ಜೀವನದ ಬಗ್ಗೆ ಕೃತಕ ಅಹಂಕಾರದ ಕಲ್ಪನೆಯನ್ನು ರೂಪಿಸಿದೆ, ಹೀಗಾಗಿ ಮದುವೆಯು ಮಾನವ ಸಮಾಜದಲ್ಲಿ ಕಾರ್ಯತಃ ಒಂದು ಊಹೆಯಾಗಿ ಉಳಿದಿದೆ. ಮತ್ತು ಸ್ತ್ರೀಯರ ನೈತಿಕ ಸ್ಥಿತಿಯೂ ಕೂಡ ಅಷ್ಟು ಸರಿಯಾಗಿಲ್ಲ. ಆದ್ದರಿಂದ ಅಸುರರಾದವರು ಸಮಾಜಕ್ಕೆ ಹಿತವಾದ ಯಾವ ಆದೇಶವನ್ನು ಒಪ್ಪುವುದಿಲ್ಲ. ಮತ್ತು ಅವರು ಮಹರ್ಷಿಗಳ ಅನುಭವವನ್ನು ಮತ್ತು ಅವರು ವಿಧಿಸಿದ ನಿಯಮ ನಿಯಂತ್ರಣಗಳನ್ನು ಅನುಸರಿಸುವುದಿಲ್ಲವಾದ್ದರಿಂದ, ಆಸುರೀ ಸ್ವಭಾವದವರ ಸಾಮಾಜಿಕ ಸ್ಥಿತಿಯು ಬಹು ಕ್ಲೇಶಮಯವಾಗಿದೆ.

**ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।**
**ಅಪರಸ್ಪರಸಂಭೂತಂ ಕಿಮನ್ಯತ್ ಕಾಮಹೈತುಕಮ್ ॥೮॥**

ಅಸತ್ಯಮ್—ಅಸತ್ಯ, ಅಪ್ರತಿಷ್ಠಮ್—ಆಧಾರರಹಿತ, ತೇ—ಅವರು, ಜಗತ್—ವಿಶ್ವ ಉದ್ಭೂತಿ, ಆಹುಃ—ಹೇಳುತ್ತಾರೆ, ಅನೀಶ್ವರಮ್—ನಿಯಾಮಕನಿಲ್ಲದ್ದು, ಅಪರಸ್ಪರ—ಕಾರಣರಹಿತ, ಸಂಭೂತಮ್—ಹುಟ್ಟಿದ್ದು,ಕಿಮ್ ಅನ್ಯತ್—ಬೇರೆ ಏನು ಕಾರಣವಿಲ್ಲ, ಕಾಮ-ಹೈತುಕಮ್—ಅದು ಕಾಮ ನಿಮಿತ್ತ ಮಾತ್ರ ಆದುದು,

**ಈ ಜಗತ್ತು ಅಸತ್ಯ, ಆಧಾರರಹಿತ, ನಿಯಾಮಕ ಭಗವಂತನಿಲ್ಲ. ಅದು ಲೈಂಗಿಕ ಕಾಮೇಚ್ಛೆಯಿಂದ ಉತ್ಪನ್ನ, ಲೈಂಗಿಕ ಹೊರತಾಗಿ ಬೇರೆ ಯಾವ ಕಾರಣವಿಲ್ಲ, ಎಂದು ಅವರು ಹೇಳುತ್ತಾರೆ.**

**ಭಾವಾರ್ಥ :** ಜಗತ್ತು ಕೇವಲ ಒಂದು ಕಲ್ಪನಾ ಸಾಮ್ರಾಜ್ಯ ಎಂದು ಅಸುರರು ಹೇಳುತ್ತಾರೆ. ಕಾರಣ ಮತ್ತು ಕಾರ್ಯವಿಲ್ಲ, ನಿಯಾಮಕನಿಲ್ಲ, ಯಾವುದೇ ಉದ್ದೇಶವಿಲ್ಲ, ಎಲ್ಲವೂ ಅಸತ್ಯ, ಈ ವಿಶ್ವ ಉದ್ಭೂತಿಯು ಆಕಸ್ಮಿಕ ಭೌತಿಕ ಕ್ರಿಯೆ ಮತ್ತು ಪ್ರತಿಕ್ರಿಯೆಗಳಿಂದ ಉದ್ಭವಿಸುತ್ತವೆ ಎಂದು ಹೇಳುತ್ತಾರೆ. ಜಗತ್ತು ವಿಶಿಷ್ಟ ಉದ್ದೇಶಕ್ಕಾಗಿ ಭಗವತ್ ಸೃಷ್ಟ ಎಂದು ಅವರು ಭಾವಿಸುವುದಿಲ್ಲ. ಅವರು ತಮ್ಮದೇ ಆದ ತತ್ತ್ವ ಹೊಂದಿದ್ದಾರೆ. ಜಗತ್ತು ತಾನೇ ತಾನಾಗಿ ಮೂಡಿಬಂದಿದೆ ಮತ್ತು ಅದರ ಹಿಂದೆ ಭಗವಂತನಿದ್ದಾನೆ ಎಂದು ನಂಬಲು ಯಾವುದೇ ಕಾರಣವಿಲ್ಲ. ಅವರಿಗೆ ಚೇತನ ಮತ್ತು ಜಡದಲ್ಲಿ ಪರಸ್ಪರ ವ್ಯತ್ಯಾಸವಿಲ್ಲ ಮತ್ತು ಅವರು ಪರಮ ಚೇತನನನ್ನು ಒಪ್ಪುವುದಿಲ್ಲ. ಪ್ರತಿಯೊಂದೂ ಜಡವೇ ಮತ್ತು ಇಡೀ ವಿಶ್ವವು ಒಂದು ಅವಿದ್ಯೆಯ ಮೊತ್ತ. ಅವರ ಪ್ರಕಾರ ಪ್ರತಿಯೊಂದು ಶೂನ್ಯ ಮತ್ತು ಅಸ್ತಿತ್ವದಲ್ಲಿರುವುದು ನಮ್ಮ ಅಜ್ಞಾನ ದೃಷ್ಟಿ ನಿಮಿತ್ತ. ವೈವಿಧ್ಯಮಯ ಎಲ್ಲ ಉದ್ಭೂತಿಯು ಅಜ್ಞಾನದ ಪ್ರದರ್ಶನ ಎಂದು ಅವರು ಗ್ರಹಿಸುತ್ತಾರೆ. ಕನಸಿನಲ್ಲಿ ನಾವು ಅನೇಕ ವಾಸ್ತವಿಕವಾಗಿ ಅಸ್ತಿತ್ವದಲ್ಲಿಲ್ಲದ ವಸ್ತುಗಳನ್ನು ಸೃಷ್ಟಿಸುತ್ತೇವೆ. ನಾವು ಎಚ್ಚೆತ್ತಾಗ ಪ್ರತಿಯೊಂದು ಕನಸು ಮಾತ್ರ ಎಂದು ಕಾಣುತ್ತೇವೆ. ಜೀವನವು ಒಂದು ಕನಸು ಎಂದು ಅಸುರರು ಹೇಳುತ್ತಿದ್ದರೂ ವಾಸ್ತವಿಕವಾಗಿ ಅವರು ಈ ಕನಸಿನ ಭೋಗ ಪಡೆಯುವಲ್ಲಿ ಬಹು ನಿಪುಣರು. ಆದ್ದರಿಂದ, ಜ್ಞಾನಾರ್ಜನೆಯ ಬದಲು ಅವರು ತಮ್ಮ ಸ್ವಪ್ನ ಲೋಕದಲ್ಲಿ ಹೆಚ್ಚು ಹೆಚ್ಚು ಸಿಲುಕಿಕೊಳ್ಳುತ್ತಾರೆ. ಮಗು ಸ್ತ್ರೀ ಪುರುಷರ ಸಂಭೋಗ ಪರಿಣಾಮ ಮಾತ್ರ. ಮತ್ತು ಈ ಜಗತ್ತು ಆತ್ಮರಹಿತವಾಗಿ ಹುಟ್ಟಿದೆ ಎಂದು ಹೇಳುತ್ತಾರೆ. ಅವರ ಮಟ್ಟಿಗೆ ಇದು ಜಡವಸ್ತುಗಳ ಸಂಯೋಗ ಮಾತ್ರ. ಅದರಿಂದ ಜೀವಿಗಳು ಉತ್ಪನ್ನರು ಮತ್ತು ಆತ್ಮದ ಅಸ್ತಿತ್ವದ ಪ್ರಶ್ನೆಯೇ ಇಲ್ಲ. ಅನೇಕ ಜೀವಿಗಳು ಬೆವರಿನಿಂದ ಮತ್ತು ಕಾರಣರಹಿತವಾಗಿ ಮೃತದೇಹದಿಂದ ಹುಟ್ಟಿಬರುವ ಹಾಗೆ ಇಡೀ ಜೀವ ಜಗತ್ತು ವಿಶ್ವ ಉದ್ಭೂತಿಯ ಭೌತಿಕ ಸಂಯೋಗಗಳಿಂದ ಹುಟ್ಟಿ ಬಂದಿದೆ. ಆದ್ದರಿಂದ ಭೌತಿಕ ಪ್ರಕೃತಿಯು ಈ ಉದ್ಭೂತಿಯ ಕಾರಣ, ಬೇರೆ ಕಾರಣವಿಲ್ಲ. **ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸ ಚರಾಚರಮ್** ಎಂಬ

ಭಗವದ್ಗೀತೆಯ ಕೃಷ್ಣನ ಮಾತುಗಳನ್ನು ಅವರು ನಂಬುವುದಿಲ್ಲ. ಅನ್ಯ ಪದಗಳಲ್ಲಿ, ಅಸುರರಲ್ಲಿ ಜಗತ್ ಸೃಷ್ಟಿಯ ಪರಿಪೂರ್ಣ ಜ್ಞಾನವಿಲ್ಲ. ಅವರಲ್ಲಿ ಪ್ರತಿಯೊಬ್ಬನು ತನ್ನದೇ ಆದ ವಿಶಿಷ್ಟ ತತ್ತ್ವ ಹೊಂದಿದ್ದಾನೆ. ಅವರ ಪ್ರಕಾರ ಶಾಸ್ತ್ರದ ಒಂದು ಅರ್ಥವು ಮತ್ತೊಂದು ಅರ್ಥವಿದ್ದಂತೆಯೇ, ಏಕೆಂದರೆ, ಅವರು ಶಾಸ್ತ್ರ ವಿಧಿಗಳ ಒಂದು ನಿಷ್ಕೃಷ್ಟ ಅರಿವಿನಲ್ಲಿ ನಂಬಿಕೆ ಹೊಂದಿರುವುದಿಲ್ಲ.

**ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।**
**ಪ್ರಭವನ್ತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥ ೯ ॥**

ಏತಾಮ್—ಈ, ದೃಷ್ಟಿಮ್—ದೃಷ್ಟಿಯನ್ನು, ಅವಷ್ಟಭ್ಯ—ಅಂಗೀಕರಿಸಿ, ನಷ್ಟ—ಕಳೆದುಕೊಂಡು, ಆತ್ಮಾನಃ—ತಮ್ಮನ್ನು, ಅಲ್ಪಬುದ್ಧಯಃ—ಅಲ್ಪಬುದ್ಧಿಯವರು, ಪ್ರಭವನ್ತಿ—ಜೀವಿಸುತ್ತಾರೆ, ಉಗ್ರ-ಕರ್ಮಾಣಂ—ದುಃಖದಾಯಕ ಚಟುವಟಿಕೆಗಳಲ್ಲಿ ತೊಡಗಿ, ಕ್ಷಯಾಯ—ನಾಶಕ್ಕಾಗಿ, ಜಗತಃ—ಜಗತ್ತಿನ, ಅಹಿತಾಃ—ಅಹಿತಕಾರಿ.

**ಅಂಥ ಸಿದ್ಧಾಂತಗಳನ್ನನುಸರಿಸಿ ತಮ್ಮನ್ನು ನಷ್ಟಗೊಳಿಸಿಕೊಂಡ ಮತ್ತು ಬುದ್ಧಿಹೀನ ಅಸುರರು ಜಗತ್ತಿನ ನಾಶಕ್ಕಾಗಿ ಅಹಿತಕಾರಿ ಭಯಾನಕ ಕಾರ್ಯಗಳಲ್ಲಿ ತೊಡಗುತ್ತಾರೆ.**

**ಭಾವಾರ್ಥ :** ಅಸುರರು ಜಗತ್ತು ನಾಶವಾಗುವಂಥ ಚಟುವಟಿಕೆಗಳಲ್ಲಿ ತೊಡಗಿದ್ದಾರೆ. ಅವರು ಬುದ್ಧಿಹೀನರೆಂದು ಭಗವಂತನು ಇಲ್ಲಿ ಹೇಳುತ್ತಾನೆ. ದೇವರ ಕಲ್ಪನೆ ಇಲ್ಲದ ಭೌತವಾದಿಗಳು ತಾವು ಪ್ರಗತಿ ಹೊಂದುತ್ತಿದ್ದೇವೆಂದು ಭಾವಿಸುತ್ತಾರೆ. ಆದರೆ ಭಗವದ್ಗೀತೆಯ ಪ್ರಕಾರ, ಅವರು ಮಂದಮತಿಗಳು ಮತ್ತು ವಿವೇಕಶೂನ್ಯರು. ಅವರು ಈ ಭೌತಿಕ ಜಗತ್ತನ್ನು ಪರಮಾವಧಿ ಭೋಗಿಸಲೆತ್ನಿಸುತ್ತಾರೆ. ಆದ್ದರಿಂದ ಇಂದ್ರಿಯ ತೋಷಣಕ್ಕಾಗಿ ಏನನ್ನೋ ಕಂಡು ಹಿಡಿಯಲು ಸದಾ ತೊಡಗಿರುತ್ತಾರೆ. ಇಂಥ ಭೌತಿಕ ಸಂಶೋಧನೆಗಳು ಮಾನವ ನಾಗರಿಕತೆಯ ಪ್ರಗತಿ ಎಂದು ಪರಿಗಣಿಸಲಾಗಿವೆ. ಆದರೆ ಪರಿಣಾಮವಾಗಿ ಜನ ಹೆಚ್ಚು ಹೆಚ್ಚು ಹಿಂಸಾ ಪ್ರವೃತ್ತಿಯವರು, ಮತ್ತು ಹೆಚ್ಚು ಹೆಚ್ಚು ಕ್ರೂರರು, ಪ್ರಾಣಿಗಳಿಗೆ ಮತ್ತು ಇತರ ಮಾನವರಿಗೆ ಕ್ರೂರಿಗಳಾಗಿ ಬೆಳೆಯುತ್ತಿದ್ದಾರೆ. ಪಶುವಧೆಯು ಅಸುರರಲ್ಲಿ ಬಹಳ ಹೆಚ್ಚು. ಅಂಥವರು ಜಗದ್ ವೈರಿಗಳು ಎಂದು ತಿಳಿಯಲಾಗಿದೆ, ಏಕೆಂದರೆ ಕೊನೆಗೆ ಎಲ್ಲವನ್ನು ನಾಶಪಡಿಸುವಂಥ ಏನನ್ನೋ ಕಂಡುಹಿಡಿಯುತ್ತಾರೆ ಅಥವಾ ಸೃಷ್ಟಿಸುತ್ತಾರೆ. ಪರೋಕ್ಷವಾಗಿ ಈ ಶ್ಲೋಕವು ಅಣ್ವಸ್ತ್ರಗಳ ನಿರ್ಮಾಣವನ್ನು ನಿರೀಕ್ಷಿಸುತ್ತದೆ. ಇಂದು ಇಡೀ ಜಗತ್ತು ಅವುಗಳ ಬಗ್ಗೆ ಬಹಳ ಹೆಮ್ಮೆಪಡುತ್ತಿದೆ. ಯಾವ ಗಳಿಗೆಯಲ್ಲಾದರೂ ಯುದ್ಧ ತಲೆದೋರಬಹುದು ಮತ್ತು ಈ ಅಣ್ವಸ್ತ್ರಗಳು ದುರಂತವನ್ನು ಸೃಷ್ಟಿಸಬಹುದು. ಅಂಥ ವಸ್ತುಗಳು ಕೇವಲ ಜಗತ್ ನಾಶಕ್ಕಾಗಿ ಸೃಷ್ಟ. ಇದು ಇಲ್ಲಿ ಸೂಚಿತ. ದೈವಹೀನತೆಯ ನಿಮಿತ್ತ ಮಾನವ ಸಮಾಜದಲ್ಲಿ ಇಂಥ ಅಸ್ತ್ರಗಳು ಸೃಷ್ಟ; ಅವು ಜಗತ್ತಿನ ಶಾಂತಿ ಮತ್ತು ಸಮೃದ್ಧಿಗೆ ಉದ್ದಿಷ್ಟವಲ್ಲ.

**ಕಾಮಮಾಶ್ರಿತ್ಯ ದುಷ್ಪೂರಂ ದಮ್ಭಮಾನಮದಾನ್ವಿತಾಃ ।**
**ಮೋಹಾದ್ ಗೃಹೀತ್ವಾಸದ್‌ಗ್ರಾಹಾನ್ ಪ್ರವರ್ತನ್ತೇಽಶುಚಿವ್ರತಾಃ ॥೧೦॥**

ಕಾಮಮ್—ಕಾಮವನ್ನು, ಆಶ್ರಿತ್ಯ—ಆಶ್ರಯಿಸಿ, ದುಷ್ಪೂರಮ್—ಪೂರೈಸದ, ದಮ್ಭ—ದಂಭದ, ಮಾನ—ಮತ್ತು ಮಿಥ್ಯಾ ಮರ್ಯಾದೆ, ಮದ-ಅನ್ವಿತಾಃ—ಮದೋನ್ಮತ್ತ, ಮೋಹಾತ್—ಮೋಹದಿಂದ, ಗೃಹೀತ್ವಾ—ಗ್ರಹಿಸಲ್ಪಟ್ಟು, ಅಸತ್—ಅಶಾಶ್ವತ, ಗ್ರಾಹಾನ್—ವಿಷಯಗಳಿಗೆ, ಪ್ರವರ್ತನ್ತೇ—ಅವರು ಮೆರೆಯುತ್ತಾರೆ, ಅಶುಚಿ—ಅಶುಚಿ, ವ್ರತಾಃ—ವ್ರತಗಳು.

**ಪೂರೈಸದ ಕಾಮವನ್ನಾಶ್ರಯಿಸಿ ಮತ್ತೆ ದಂಭ ಮತ್ತು ಮಿಥ್ಯಾಮರ್ಯಾದೆಯ ಉನ್ಮತ್ತತೆಯಲ್ಲಿ ತಲ್ಲೀನರಾಗಿ, ಅಸುರರು ಹೀಗೆ ಮೋಹಿತರಾಗಿ, ಆ ಸದಾ ಅಶಾಶ್ವತ ವಸ್ತುಗಳಿಂದ ಆಕರ್ಷಿತರಾಗಿ ಅಶುಚಿ ಕರ್ಮಗಳಿಗೆ ಸದಾ ಕಟಿಬದ್ಧರು.**

**ಭಾವಾರ್ಥ :** ಇಲ್ಲಿ ಆಸುರೀ ಮನೋಭಾವವು ವರ್ಣಿತ. ಅಸುರರಿಗೆ ತಮ್ಮ ಕಾಮದ ತೃಪ್ತಿಯೇ ಆಗುವುದಿಲ್ಲ. ಅವರು ಭೌತಿಕ ಭೋಗಗಳ ತೃಪ್ತಿಯರಿಯದ ಇಚ್ಛೆಗಳನ್ನು ಹೆಚ್ಚು ಹೆಚ್ಚು ಬೆಳೆಸಿಕೊಳ್ಳುತ್ತಾ ಹೋಗುತ್ತಾರೆ. ಅಶಾಶ್ವತ ವಿಷಯಗಳನ್ನು ಅಂಗೀಕರಿಸಿ ಸದಾ ಭಯಭೀತರಾಗಿದ್ದರೂ, ಮೋಹಿತರಾಗಿ ಅವರು ಅಂಥ ಚಟುವಟಿಕೆಗಳಲ್ಲಿಯೇ ಮುಂದುವರಿಯುತ್ತಾರೆ. ಅವರಿಗೆ ಜ್ಞಾನವಿಲ್ಲ ಮತ್ತು ತಾವು ತಪ್ಪುದಾರಿ ಹಿಡಿದಿದ್ದೇವೆ ಎಂದು ಅವರು ಹೇಳಲಾರರು. ಅಶಾಶ್ವತ ವಸ್ತುಗಳನ್ನು ಅಂಗೀಕರಿಸಿ, ಅಂಥ ಆಸುರೀ ಜನರು ತಮ್ಮದೇ ಆದ ದೇವರನ್ನು ಸೃಷ್ಟಿಸಿಕೊಳ್ಳುತ್ತಾರೆ, ತಮ್ಮದೇ ಆದ ಮಂತ್ರಗಳನ್ನು ಸೃಷ್ಟಿಸುತ್ತಾರೆ ಮತ್ತು ಆ ಪ್ರಕಾರ ಜಪಿಸುತ್ತಾರೆ. ಪರಿಣಾಮವಾಗಿ ಅವರು ಲೈಂಗಿಕ ಭೋಗ ಮತ್ತು ಭೌತಿಕ ಐಶ್ವರ್ಯ ಸಂಗ್ರಹಣೆ—ಇವೆರಡರಿಂದ ಹೆಚ್ಚು ಹೆಚ್ಚು ಆಕರ್ಷಿತರಾಗುತ್ತಾರೆ. **ಅಶುಚಿ-ವ್ರತಾಃ** "ಅಶುಚಿ ವ್ರತಗಳು" ಎಂಬ ಪದವು ಈ ಸಂಬಂಧದಲ್ಲಿ ಬಹು ಮಹತ್ವದ್ದು. ಅಂಥ ಆಸುರೀ ಜನರು ಮದ್ಯ, ಮಹಿಳೆಯರು, ಜೂಜು, ಮತ್ತು ಮಾಂಸಹಾರಗಳಿಂದ ಆಕರ್ಷಿತರು;ಅವೇ ಅವರ ಅಶುಚಿ ಅಭ್ಯಾಸಗಳು. ಗರ್ವ ಮತ್ತು ಮಿಥ್ಯಾಮರ್ಯಾದೆಯಿಂದ ಪ್ರೇರಿತರಾಗಿ ಅವರು ವೇದವಿಧಿಗಳಿಂದ ಮನ್ನಿತವಲ್ಲದ ಕೆಲವು ಧರ್ಮ ತತ್ತ್ವಗಳನ್ನು ಸೃಷ್ಟಿಸುತ್ತಾರೆ. ಅಂಥ ಅಸುರ ಸ್ವಭಾವದವರು ಜಗತ್ತಿನಲ್ಲಿ ಅತ್ಯಂತ ಹೇಯರಾದರೂ, ಕೃತಕ ವಿಧಾನಗಳಿಂದ ಜಗತ್ತು ಅವರಿಗೆ ಮಿಥ್ಯಾ ಮರ್ಯಾದೆಯನ್ನು ಸೃಷ್ಟಿಸುತ್ತದೆ. ಅವರು ನರಕದ ಕಡೆಗೆ ಇಳಿಯುತ್ತಿದ್ದರೂ ತಾವು ಬಹು ಪ್ರಗತಿಪರರೆಂದು ಭಾವಿಸುತ್ತಾರೆ.

**ಚಿನ್ತಾಮಪರಿಮೇಯಾಂ ಚ ಪ್ರಲಯಾನ್ತಾಮುಪಾಶ್ರಿತಾಃ ।**
**ಕಾಮೋಪಭೋಗಪರಮಾ ಏತಾವದಿತಿ ನಿಶ್ಚಿತಾಃ ॥ ೧೧ ॥**
**ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ ।**
**ಈಹನ್ತೇ ಕಾಮಭೋಗಾರ್ಥಮನ್ಯಾಯೇನಾರ್ಥಸಂಚಯಾನ್ ॥ ೧೨ ॥**

ಚಿನ್ತಾಮ್—ಭಯ ಮತ್ತು ಚಿಂತೆಗಳು, ಅಪರಿಮೇಯಾಮ್—ಅಳತೆಗೆ ಸಿಲುಕದ, ಚ—ಮತ್ತು, ಪ್ರಲಯ-ಅನ್ತಾಮ್—ಮರಣಪರ್ಯಂತ, ಉಪಾಶ್ರಿತಾಃ—ಆಶ್ರಯಿಸಿ,

ಕಾಮ-ಉಪಭೋಗ—ಇಂದ್ರಿಯ ತೋಷಣ, ಪರಮಾ—ಜೀವನದ ಅತ್ಯುನ್ನತ ಧ್ಯೇಯ, ಏತಾವತ್—ಹೀಗೆ, ಇತಿ—ಈ ರೀತಿಯಲ್ಲಿ, ನಿಶ್ಚಿತಾಃ—ನಿಶ್ಚಯಪಡಿಸಿಕೊಂಡು ಆಶಾ-ಪಾಶ—ಆಶಾಪಾಶದಲ್ಲಿ ಸಿಲುಕಿ, ಶತೈಃ—ನೂರಾರು, ಬದ್ಧಾ—ಬದ್ಧರಾಗಿ, ಕಾಮ—ಕಾಮದ, ಕ್ರೋಧ—ಮತ್ತು ಕ್ರೋಧದ, ಪರಾಯಣಾಃ—ಸದಾ ಆ ಮನೋಭಾವದಲ್ಲಿ ಸನ್ನಿವೇಶಿತರಾಗಿ, ಈಹನ್ತೇ—ಇಚ್ಛಿಸುತ್ತಾರೆ. ಕಾಮ—ಕಾಮ, ಭೋಗ—ಇಂದ್ರಿಯ ಭೋಗ, ಅರ್ಥಮ್—ಉದ್ದೇಶಕ್ಕಾಗಿ, ಅನ್ಯಾಯೇನ—ಅನ್ಯಾಯದಿಂದ, ಅರ್ಥ—ಸಂಪತ್ತಿನ, ಸಂಚಯಾನ್—ಸಂಚಯನ.

**ಇಂದ್ರಿಯಗಳನ್ನು ತೋಷಿಸುವುದು ಮಾನವ ನಾಗರಿಕತೆಯ ಪ್ರಧಾನ ಅಗತ್ಯತೆ ಎಂದು ಅವರು ನಂಬುತ್ತಾರೆ. ಹೀಗೆ ಜೀವನದ ಕೊನೆಯವರೆಗೂ ಅವರ ಚಿಂತೆ ಅಪಾರ. ನೂರಾರು ಸಾವಿರಾರು ಇಚ್ಛೆಗಳಿಂದ ಬದ್ಧರಾಗಿ ಮತ್ತು ಕಾಮ ಕ್ರೋಧಗಳಲ್ಲಿ ಮಗ್ನರಾಗಿ, ಅವರು ಇಂದ್ರಿಯ ತೋಷಣಕ್ಕಾಗಿ ಅನ್ಯಾಯದಿಂದ ಹಣ ಗಳಿಸುತ್ತಾರೆ.**

**ಭಾವಾರ್ಥ :** ಇಂದ್ರಿಯ ಭೋಗವೇ ಜೀವನದ ಅಂತಿಮ ಗುರಿ ಎಂದು ಅಸುರರು ಅಂಗೀಕರಿಸುತ್ತಾರೆ, ಮತ್ತು ಅವರು ಆ ಮರಣ ಈ ಕಲ್ಪನೆಯನ್ನು ಹೊಂದಿರುತ್ತಾರೆ. ಅವರು ಮುಂದಿನ ಜನ್ಮವನ್ನು ನಂಬುವುದಿಲ್ಲ ಮತ್ತು ಒಬ್ಬನ ಕರ್ಮಾನುಸಾರ ಅವನು ನಾನಾ ಬಗೆಯ ದೇಹಗಳನ್ನು ಧರಿಸುತ್ತಾನೆ ಎಂದು ನಂಬುವುದಿಲ್ಲ. ಅವರ ಜೀವನದ ಯೋಜನೆಗಳು ಮುಗಿಯುವುದೇ ಇಲ್ಲ, ಮತ್ತು ಒಂದರ ನಂತರ ಮತ್ತೊಂದರಂತೆ ಯೋಜನೆಗಳನ್ನು ತಯಾರಿಸುತ್ತಾ ಹೋಗುತ್ತಾರೆ. ಅವು ಎಂದಿಗೂ ಮುಗಿಯುವುದಿಲ್ಲ. ಇಂಥ ಆಸುರೀ ಮನೋಭಾವದ ವ್ಯಕ್ತಿಯ ಸ್ವಂತ ಅನುಭವ ನಮಗಿದೆ. ಅವನ, ಮರಣ ಗಳಿಗೆಯಲ್ಲಿ ಕೂಡ ತನ್ನ ಯೋಜನೆಗಳು ಇನ್ನೂ ಮುಗಿದಿಲ್ಲವಾದ್ದರಿಂದ ತಾನು ಇನ್ನೂ ನಾಲ್ಕು ವರ್ಷಗಳು ಬದುಕುವಂತೆ ಮಾಡಬೇಕೆಂದು ವೈದ್ಯರಲ್ಲಿ ಕೇಳಿಕೊಳ್ಳುತ್ತಿದ್ದನು. ವೈದ್ಯನು ಕ್ಷಣಕಾಲ ಕೂಡ ಒಬ್ಬನ ಆಯುಷ್ಯವನ್ನು ಮುಂದುವರಿಸಲಾರನು ಎಂಬುದನ್ನು ಅಂಥ ಮೂಢರು ತಿಳಿಯುವುದಿಲ್ಲ. ಒಂದು ಸಲ ಕರೆ ಬಂದರೆ ಮಾನವನ ಇಚ್ಛೆಗೆ ಯಾವ ಬೆಲೆಯೂ ಇಲ್ಲ. ಒಬ್ಬನ ನಿರ್ದಿಷ್ಟ ಭೋಗಕ್ಕಿಂತ ಒಂದು ಕ್ಷಣ ಕೂಡ ನಿಸರ್ಗ ನಿಯಮಗಳು ಅವನಿಗೆ ಆಯುಷ್ಯವನ್ನು ನೀಡುವುದಿಲ್ಲ.

ಭಗವಂತನಲ್ಲಿ ಅಥವಾ ತನ್ನೊಳಗಿರುವ ಪರಮಾತ್ಮನಲ್ಲಿ ಶ್ರದ್ಧೆಯಿಲ್ಲದ ಅಸುರನು ಇಂದ್ರಿಯ ತೋಷಣಕ್ಕಾಗಿ ಮಾತ್ರ ಎಲ್ಲ ಬಗೆಯ ಪಾಪ ಕಾರ್ಯಗಳನ್ನು ಮಾಡುತ್ತಾನೆ. ಹೃದಯದಲ್ಲಿ ಸಾಕ್ಷಿ ಚೇತನನಿದ್ದಾನೆ ಎಂಬುದು ಅವನಿಗೆ ತಿಳಿದಿಲ್ಲ. ಪರಮಾತ್ಮನು ವ್ಯಕ್ತಿಗತ ಆತ್ಮನ ಚಟುವಟಿಕೆಗಳನ್ನು ಗಮನಿಸುತ್ತಿದ್ದಾನೆ. ಉಪನಿಷತ್ತುಗಳಲ್ಲಿ ಹೇಳಿದಂತೆ, ಒಂದು ವೃಕ್ಷದಲ್ಲಿ ಎರಡು ಪಕ್ಷಿಗಳು ಕುಳಿತಿವೆ. ಒಂದು ಕರ್ಮ ಮಾಡುತ್ತಿದೆ; ಮತ್ತು ಶಾಖೆಗಳ ಫಲಭೋಗ ಮಾಡುತ್ತಿದೆ ಅಥವಾ ದುಃಖಪಡುತ್ತಿದೆ, ಮತ್ತೊಂದು ಪಕ್ಷಿ ಸಾಕ್ಷಿಯಾಗಿದೆ.ಆದರೆ ಅಸುರೀ ಸ್ವಭಾವದವನು ವೇದಶಾಸ್ತ್ರಜ್ಞಾನ ಹೊಂದಿರುವುದಿಲ್ಲ.

ಅಥವಾ ಅವನಿಗೆ ಯಾವ ಶ್ರದ್ಧೆಯೂ ಇರುವುದಿಲ್ಲ; ಆದ್ದರಿಂದ ಅವನು ಪರಿಣಾಮಗಳನ್ನು ಲೆಕ್ಕಿಸದೆ ಇಂದ್ರಿಯ ಭೋಗಕ್ಕಾಗಿ ಏನಾದರೂ ಮಾಡಲು ತಾನು ಸ್ವತಂತ್ರನು ಎಂದು ಭಾವಿಸುತ್ತಾನೆ.

**ಇದಮದ್ಯ ಮಯಾ ಲಬ್ಧಮಿಮಂ ಪ್ರಾಪ್ಸ್ಯೇ ಮನೋರಥಮ್ ।**
**ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಮ್ ॥ ೧೩ ॥**
**ಅಸೌ ಮಯಾ ಹತಃ ಶತ್ರುರ್ಹನಿಷ್ಯೇ ಚಾಪರಾನಪಿ ।**
**ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ ಸುಖೀ ॥ ೧೪ ॥**
**ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ ।**
**ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನವಿಮೋಹಿತಾಃ ॥ ೧೫ ॥**

ಇದಮ್—ಇದನ್ನು, ಅದ್ಯ—ಈ ದಿನ, ಮಯಾ—ನನ್ನಿಂದ, ಲಬ್ಧಮ್—ಪಡೆದು, ಇಮಮ್—ಇದನ್ನು, ಪ್ರಾಪ್ಸ್ಯೇ—ಪಡೆಯುತ್ತೇನೆ, ಮನಃ-ರಥಮ್—ನನ್ನ ಇಚ್ಛಾನುಸಾರ, ಇದಮ್—ಇದು, ಅಸ್ತಿ—ಇದೆ, ಇದಮ್—ಇದು, ಅಪಿ—ಕೂಡ, ಮೇ—ನನ್ನದು. ಭವಿಷ್ಯತಿ—ಮುಂದೆ ವೃದ್ಧಿಸುತ್ತದೆ, ಪುನಃ—ಮತ್ತೆ, ಧನಮ್—ಸಂಪತ್ತು, ಅಸೌ—ಆ, ಮಯಾ—ನನ್ನಿಂದ, ಹತಃ—ಸಂಹರಿಸಲ್ಪಟ್ಟಿದ್ದಾನೆ, ಶತ್ರುಃ—ಶತ್ರು, ಹನಿಷ್ಯೇ—ಕೊಲ್ಲುತ್ತೇನೆ, ಚ—ಕೂಡ, ಅಪರಾನ್—ಇತರರನ್ನು, ಅಪಿ—ಖಂಡಿತವಾಗಿ, ಈಶ್ವರಃ—ಈಶ್ವರನು, ಅಹಮ್—ನಾನು, ಅಹಮ್—ನಾನು, ಭೋಗಿ—ಭೋಗಿಯು, ಸಿದ್ಧಃ—ಸಿದ್ಧನು. ಅಹಮ್—ನಾನು, ಬಲ-ವಾನ್—ಬಲವಂತನು, ಸುಖೀ—ಸುಖಿಯು, ಆಢ್ಯಃ—ಸಿರಿವಂತನು, ಅಭಿಜನವಾನ್—ಸಿರಿವಂತ ಬಂಧುಗಳಿಂದ ಸುತ್ತುವರಿಯಲ್ಪಟ್ಟವನು, ಅಸ್ಮಿ—ಆಗಿದ್ದೇನೆ, ಕಃ—ಯಾರು, ಅನ್ಯಃ—ಇತರರು ಅಸ್ತಿ—ಇರುವವರು, ಸದೃಶಃ—ಸದೃಶರಾಗಿ, ಮಯಾ—ನಾನು, ಯಕ್ಷ್ಯೇ—ಯಜ್ಞ ಮಾಡುತ್ತೇನೆ, ದಾಸ್ಯಾಮಿ—ದಾನಕೊಡುತ್ತೇನೆ, ಮೋದಿಷ್ಯೇ—ಸಂತೋಷಿಸುತ್ತೇನೆ, ಇತಿ—ಹೀಗೆ, ಅಜ್ಞಾನ—ಅಜ್ಞಾನದಿಂದ, ವಿಮೋಹಿತಾಃ—ವಿಮೋಹಿತನು.

**ಅಸುರನು ಹೀಗೆ ಯೋಚಿಸುತ್ತಾನೆ, "ನನ್ನಲ್ಲಿ ಇಷ್ಟು ಸಂಪತ್ತು ಈದಿನ ಇದೆ, ಮತ್ತು ನನ್ನ ಯೋಜನಾನುಸಾರ ಇನ್ನೂ ಹೆಚ್ಚು ಸಂಪಾದಿಸುತ್ತೇನೆ. ಈಗ ಇಷ್ಟೊಂದು ನನ್ನದು ಮತ್ತು ಮುಂದೆ ಅದು ಹೆಚ್ಚುತ್ತಾ ಹೋಗುತ್ತದೆ. ಅವನು ನನ್ನ ದ್ವೇಷಿ, ಅವನನ್ನು ಕೊಂದುಹಾಕಿದ್ದೇನೆ ಮತ್ತು ನನ್ನ ಇತರ ವೈರಿಗಳೂ ಕೊಲ್ಲಲ್ಪಡುತ್ತಾರೆ. ನಾನು ಎಲ್ಲದರ ಸ್ವಾಮಿ,ನಾನು ಭೋಗಿ. ನಾನು ಪರಿಪೂರ್ಣನು, ಬಲವಂತ ಮತ್ತು ಸುಖಿ, ನಾನು ಸುತ್ತಲೂ ಸಿರಿವಂತ ಬಂಧುಗಳಿರುವ ಅತ್ಯಂತ ಶ್ರೀಮಂತ. ನನ್ನಷ್ಟು ಬಲವಂತ ಮತ್ತು ಸುಖಿ ಬೇರೆ ಯಾರೂ ಇಲ್ಲ. ನಾನು ಯಜ್ಞ ಮಾಡುತ್ತೇನೆ, ದಾನ ಕೊಡುತ್ತೇನೆ ಮತ್ತು ಹೀಗೆ ಸಂತೋಷಿಸುತ್ತೇನೆ." ಹೀಗೆ ಅಂಥ ವ್ಯಕ್ತಿಗಳು ಅಜ್ಞಾನದಿಂದ ಭ್ರಮಿತರು.**

**ಅನೇಕಚಿತ್ತವಿಭ್ರಾನ್ತಾ ಮೋಹಜಾಲಸಮಾವೃತಾಃ ।**
**ಪ್ರಸಕ್ತಾಃ ಕಾಮಭೋಗೇಷು ಪತನ್ತಿ ನರಕೇಽಶುಚೌ ॥ ೧೬ ॥**

ಅನೇಕ—ಅನೇಕ, ಚಿತ್ತ—ಚಿಂತೆಗಳಿಂದ, ವಿಭ್ರಾನ್ತಾಃ—ಭ್ರಾಂತರಾದ, ಮೋಹ—ಮೋಹಗಳಿಂದ, ಜಾಲ—ಜಾಲದಿಂದ, ಸಮಾವೃತಾ—ಆವೃತರು, ಪ್ರಸಕ್ತಾಃ—ಪ್ರಸಕ್ತರು, ಕಾಮ-ಭೋಗೇಷು—ಇಂದ್ರಿಯತೋಷಕ್ಕೆ, ಪತನ್ತಿ—ಪತನ ಹೊಂದುತ್ತಾರೆ, ನರಕೇ—ನರಕದಲ್ಲಿ, ಅಶುಚೌ—ಅಶುಚಿಗಳು.

**ಹೀಗೆ ಅನೇಕ ಚಿಂತನೆಗಳಿಂದ ಭ್ರಮಿತರಾದ ಮತ್ತು ಮೋಹಜಾಲದಲ್ಲಿ ಬದ್ಧರಾದವರು ಇಂದ್ರಿಯ ಭೋಗದಲ್ಲಿ ಅತ್ಯಾಸಕ್ತರಾಗುತ್ತಾರೆ, ಮತ್ತು ಅವರು ನರಕಕ್ಕೆ ಬೀಳುತ್ತಾರೆ.**

**ಭಾವಾರ್ಥ :** ಆಸುರೀ ಸ್ವಭಾವದವನು ಧನಾರ್ಜನೆಯ ತನ್ನ ಇಚ್ಛೆಗೆ ಮಿತಿಯೇ ಅರಿತಿರುವುದಿಲ್ಲ. ಅದು ಮಿತಿ ಇಲ್ಲದ್ದು. ಈಗ ತನ್ನಲ್ಲಿ ಎಷ್ಟು ಹಣ ಇದೆ ಮತ್ತು ಆ ಹಣವನ್ನು ವೃದ್ಧಿಗೊಳಿಸಲು ಯಾವ ಯಾವ ಯೋಜನೆಗಳು ಇವೆ ಎಂಬುದನ್ನಷ್ಟೆ ಯೋಚಿಸುತ್ತಾನೆ. ಆ ಕಾರಣಕ್ಕಾಗಿ ಯಾವ ಪಾಪಮಾರ್ಗದಲ್ಲಿ ವರ್ತಿಸಲೂ ಹಿಂಜರಿಯುವುದಿಲ್ಲ. ಆದ್ದರಿಂದ ಕಳ್ಳಪೇಟೆಯಲ್ಲಿ ಅಥವಾ ಅನ್ಯಾಯ ತೋಷಣೆಯಲ್ಲಿ ವ್ಯವಹರಿಸುತ್ತಾನೆ. ತನ್ನಲ್ಲಿರುವ ಸಂಪತ್ತಿನಿಂದ, ಎಂದರೆ ಭೂಮಿ, ಕುಟುಂಬ, ಮನೆ ಮತ್ತು ಬ್ಯಾಂಕಿನಲ್ಲಿರುವ ಹಣ ಇವುಗಳಿಂದ ತುಷ್ಟನು, ಮತ್ತು ಅವುಗಳನ್ನು ವರ್ಧಿಸಲು ಸದಾ ಯೋಜನೆ ಮಾಡುತ್ತಾನೆ. ಅವನು ಸ್ವಬಲದಲ್ಲಿ ನಂಬಿಕೆ ಇಟ್ಟಿರುತ್ತಾನೆ. ತಾನು ಪಡೆಯುವುದೆಲ್ಲಾ ತನ್ನ ಪೂರ್ವ ಸತ್ಕರ್ಮಗಳ ಫಲ ಎಂಬುದನ್ನು ಅವನು ತಿಳಿಯುವುದಿಲ್ಲ. ಅಂಥ ವಸ್ತುಗಳನ್ನೆಲ್ಲ ಸಂಚಯನ ಮಾಡಲು ಅವನಿಗೆ ಒಂದು ಅವಕಾಶ ನೀಡಲಾಗಿದೆ. ಆದರೆ ಅವನಿಗೆ ಪೂರ್ವ ಕಾರಣಗಳ ಕಲ್ಪನೆ ಇಲ್ಲ. ತನ್ನ ಸಂಪತ್ತೆಲ್ಲಾ ತನ್ನ ಪ್ರಯತ್ನ ನಿಮಿತ್ತವೇ ಎಂದು ಮಾತ್ರ ಭಾವಿಸುತ್ತಾನೆ.ಆಸುರೀ ಸ್ವಭಾವದವನು ಸ್ವಕರ್ಮ ಬಲದಲ್ಲಿ ನಂಬಿಕೆಯುಳ್ಳವನು ಕರ್ಮ ನಿಯಮದಲ್ಲಿ ಅಲ್ಲ. ಕರ್ಮ ನಿಯಮಾನುಸಾರ, ಒಬ್ಬನು ಉನ್ನತ ಕುಟುಂಬದಲ್ಲಿ ಜನ್ಮಪೆತ್ತುತ್ತಾನೆ ಅಥವಾ ಸಿರಿವಂತನಾಗುತ್ತಾನೆ, ಅಥವಾ ಒಳ್ಳೆಯ ವಿದ್ಯಾವಂತನಾಗುತ್ತಾನೆ ಅಥವಾ ಪೂರ್ವ ಸತ್ಕರ್ಮಗಳ ನಿಮಿತ್ತ ಬಹು ಸುಂದರನಾಗಿರುತ್ತಾನೆ. ಇವು ಎಲ್ಲವೂ ಆಕಸ್ಮಿಕ ಮತ್ತು ತನ್ನ ಸ್ವಯಂ ಯೋಗ್ಯತಾ ಬಲದ ನಿಮಿತ್ತ ಎಂದು ಆಸುರೀ ಸ್ವಭಾವದವನು ಭಾವಿಸುತ್ತಾನೆ. ಎಲ್ಲ ಜನರ ನಾನಾ ಬಗೆಯ ಸೌಂದರ್ಯ ಮತ್ತು, ವಿದ್ಯೆಯ ಹಿಂದೆ ಒಂದು ಏರ್ಪಾಡು ಇದೆ ಎಂಬುದನ್ನು ಅವನು ತಿಳಿಯುವುದಿಲ್ಲ. ಇಂಥ ಆಸುರೀ ಸ್ವಭಾವದವನೊಂದಿಗೆ ಪೈಪೋಟಿಗಿಳಿಯುವವನು ಅವನ ವೈರಿಯಾಗುತ್ತಾನೆ. ಅನೇಕ ಆಸುರೀ ಸ್ವಭಾವಿಗಳಿದ್ದಾರೆ, ಮತ್ತು ಆ ಪ್ರತಿಯೊಬ್ಬನೂ ಇತರರ ವೈರಿ. ಈ ವೈರತ್ವವು ವ್ಯಕ್ತಿ ವ್ಯಕ್ತಿಗಳಲ್ಲಿ, ಆಮೇಲೆ ಕುಟುಂಬಗಳಲ್ಲಿ, ಆಮೇಲೆ ಸಮಾಜಗಳಲ್ಲಿ ಮತ್ತು ಕೊನೆಗೆ ರಾಷ್ಟ್ರ ರಾಷ್ಟ್ರಗಳಲ್ಲಿ ಹೆಚ್ಚು ಹೆಚ್ಚು ಬೇರೂರುತ್ತ ಹೋಗುತ್ತದೆ. ಆದ್ದರಿಂದ ಸದಾ ಜಗತ್ತಿನಲ್ಲೆಲ್ಲಾ ಕದನ, ಯುದ್ಧ ಮತ್ತು ದ್ವೇಷವು ಉಂಟಾಗುತ್ತದೆ.

ಪ್ರತಿಯೊಬ್ಬ ಆಸುರೀ ಸ್ವಭಾವದವನು ಎಲ್ಲ ಇತರರನ್ನು ನಾಶಪಡಿಸಿ ತಾನೊಬ್ಬನೇ ಜೀವಿಸಬಲ್ಲನೆಂದು ತಿಳಿಯುತ್ತಾನೆ. ಸಾಮಾನ್ಯವಾಗಿ ಆಸುರೀ ಸ್ವಭಾವದವನು ತಾನೇ

ಪರಮ ದೇವ ಎಂದು ತಿಳಿಯುತ್ತಾನೆ. ಮತ್ತು ಆಸುರೀ ಬೋಧಕನು ತನ್ನ ಶಿಷ್ಯರಿಗೆ ಹೀಗೆ ಹೇಳುತ್ತಾನೆ: "ನೀವು ದೇವರನ್ನು ಬೇರೆಡೆಗೆ ಏಕೆ ಹುಡುಕುವಿರಿ ? ನೀವೆಲ್ಲರೂ ಸ್ವಯಂ ದೇವರು ! ನೀವು ನಿಮ್ಮ ಇಚ್ಛಾನುಸಾರ ವರ್ತಿಸಬಹುದು. ದೇವರನ್ನು ನಂಬ ಬೇಡಿ, ದೇವರನ್ನು ಎಸೆದು ಬಿಡಿ, ದೇವರು ಸತ್ತು ಹೋಗಿದ್ದಾನೆ." ಇವು ಅಸುರರ ಉಪದೇಶಗಳು.

ಅಸುರ ಸ್ವಭಾವದವನು ತನ್ನಷ್ಟೇ ಅಥವಾ ಇನ್ನೂ ಹೆಚ್ಚು ಸಿರಿವಂತರಾದ ಮತ್ತು ಪ್ರಭಾವಶಾಲಿಗಳಾದ ಇತರರನ್ನು ಕಾಣುತ್ತಿದ್ದರೂ, ತನಗಿಂತ ಸಿರಿವಂತರಿಲ್ಲ ಮತ್ತು ತನಗಿಂತ ಹೆಚ್ಚು ಪ್ರಭಾವಶಾಲಿಗಳಿಲ್ಲ ಎಂದು ಭಾವಿಸುತ್ತಾನೆ. ಊರ್ಧ್ವ ಗ್ರಹವ್ಯೂಹ ಗಳಿಗೆ ಉನ್ನತಿಯ ವಿಷಯದಲ್ಲಿ ಅವನು ಯಜ್ಞಾಚರಣೆಯಲ್ಲಿ ಶ್ರದ್ಧೆ ಹೊಂದಿರುವುದಿಲ್ಲ. ತಮ್ಮದೇ ಆದ ಯಜ್ಞ ವಿಧಾನಗಳನ್ನು ತಯಾರಿಸುವೆವು, ಮತ್ತು ಯಾವುದೇ ಊರ್ಧ್ವ ಲೋಕ ತಲುಪಲು ತಾವು ಶಕ್ತರಾಗುವಂತಹ ಯಾವುದೇ ಪ್ರಯತ್ನವನ್ನು ತಯಾರಿಸ ಬಲ್ಲೆವು ಎಂದು ಅಸುರರು ಭಾವಿಸುತ್ತಾರೆ. ಇದಕ್ಕೆ ರಾವಣನು ಅತ್ಯುತ್ತಮ ಉದಾಹರಣೆ ಯಾಗಿದ್ದನು. ವೇದಗಳಲ್ಲಿ ಹೇಳಿದಂಥ ಯಜ್ಞಗಳನ್ನು ಮಾಡದೆ ಯಾವನು ಬೇಕಾದರೂ ತಾನು ಸ್ವರ್ಗ ಲೋಕಗಳಿಗೆ ತಲುಪಲು ಅನುಕೂಲವಾಗುವಂತೆ ಸೋಪಾನ ಶ್ರೇಣಿಯನ್ನು ನಿರ್ಮಿಸುವುದಾಗಿ ಯೋಜನೆಯನ್ನು ಜನರ ಮುಂದಿಟ್ಟನು. ಅದೇ ಪ್ರಕಾರ, ಈಗಿನ ಕಾಲ ದಲ್ಲಿ ಅಂಥ ಅಸುರರು ಯಂತ್ರ ಸಾಧನಗಳ ಮೂಲಕ ಊರ್ಧ್ವಗ್ರಹವ್ಯೂಹಗಳನ್ನು ತಲುಪಲು ಯತ್ನಿಸುತ್ತಿದ್ದಾರೆ. ಇವು ದಿಗ್ಭ್ರಮೆಯ ಉದಾಹರಣೆಗಳು. ಪರಿಣಾಮ ವೆಂದರೆ, ಅವರಿಗೆ ತಿಳಿಯದಂತೆ, ಅವರು ನರಕಕ್ಕೆ ಜಾರುತ್ತಿದ್ದಾರೆ. ಇಲ್ಲಿ **"ಮೋಹ ಜಾಲ"** ಎಂಬ ಸಂಸ್ಕೃತ ಪದವು ಬಹು ಮಹತ್ವದ್ದು. ಜಾಲ ಎಂದರೆ "ಬಲೆ", ಬಲೆ ಯಲ್ಲಿ ಸಿಕ್ಕ ಮೀನಿನಂತೆ ಹೊರಬರಲು ಅವರಿಗೆ ದಾರಿಯೇ ಇಲ್ಲ.

**ಆತ್ಮಸಮ್ಭಾವಿತಾಃ ಸ್ತಬ್ಧಾ ಧನಮಾನಮದಾನ್ವಿತಾಃ ।**
**ಯಜನ್ತೇ ನಾಮಯಜ್ಞೈಸ್ತೇ ದಮ್ಭೇನಾವಿಧಿಪೂರ್ವಕಮ್ ॥ ೧೭ ॥**

ಆತ್ಮ-ಸಮ್ಭಾವಿತಾಃ—ತಾವೇ ಮಾನಿಗಳೆಂದು ತಿಳಿಯುವವರು, ಸ್ತಬ್ಧಾಃ—ವ್ಯವ ಹಾರ ಜ್ಞಾನಶೂನ್ಯರು, ಧನ-ಮಾನ—ಐಶ್ವರ್ಯದ ಮತ್ತು ಮಿಥ್ಯಾಅಹಂಭಾವದ, ಮದ—ಭ್ರಮೆಯಲ್ಲಿ, ಅನ್ವಿತಾಃ—ಮಗ್ನರು, ಯಜನ್ತೇ—ಯಜ್ಞಮಾಡುತ್ತಾರೆ, ನಾಮ— ನಾಮಮಾತ್ರಕ್ಕೆ, ಯಜ್ಞೈಃ—ಯಜ್ಞಗಳಿಂದ, ತೇ—ಅವರು, ದಮ್ಭೇನ—ದಂಭದಿಂದ, ಅವಿಧಿ-ಪೂರ್ವಕಮ್—ಯಾವ ನಿಯಮ ನಿಯಂತ್ರಣಗಳನ್ನು ಅನುಸರಿಸದೆ.

**ಸ್ವಸಮಾಹಿತರು ಮತ್ತು ಸದಾ ವ್ಯವಹಾರ ಜ್ಞಾನಶೂನ್ಯರು, ಸಂಪತ್ತು ಮತ್ತು ಮಿಥ್ಯಾಹಂಕಾರದಿಂದ ಭ್ರಮಿತರಾಗಿ, ಯಾವ ನಿಯಮ ನಿಯಂತ್ರಣ ಗಳನ್ನು ಅನುಸರಿಸದೆ ನಾಮಕಾರ್ಥ ಹೆಮ್ಮೆಯಿಂದ ಕೆಲವುಸಲ ಯಜ್ಞಗಳನ್ನಾ ಚರಿಸುತ್ತಾರೆ.**

**ಭಾವಾರ್ಥ :** ಯಾವುದೇ ಪ್ರಮಾಣ ಅಥವಾ ಶಾಸ್ತ್ರಕ್ಕೆ ಗಮನಕೊಡದೆ ತಾವೇ ಸರ್ವಸ್ವವೆಂದು ತಿಳಿಯುತ್ತ ಅಸುರೀ ಸ್ವಭಾವದವರು ಕೆಲವು ಸಲ ಹಾಗೆಂಬ ಧಾರ್ಮಿಕ ಅಥವಾ ಯಜ್ಞಕರ್ಮಗಳನ್ನು ಆಚರಿಸುತ್ತಾರೆ. ಮತ್ತು ಪ್ರಮಾಣದಲ್ಲಿ ನಂಬಿಕೆ ಇಲ್ಲದ್ದರಿಂದ ಅವರು ಬಹು ವಿವೇಕಶೂನ್ಯರು. ಇದು ಕೆಲಮಟ್ಟಿನ ಐಶ್ವರ್ಯ ಸಂಚಯ ಮತ್ತು ಮಿಥ್ಯಾಹಂಕಾರದಿಂದುಂಟಾದ ಮೋಹ ನಿಮಿತ್ತ. ಕೆಲವು ಸಲ ಅಂಥ ಅಸುರರು ಉಪದೇಶಕರ ಪಾತ್ರ ವಹಿಸುತ್ತಾರೆ. ಜನರನ್ನು ತಪ್ಪುದಾರಿಗೆ ಎಳೆಯುತ್ತಾರೆ ಮತ್ತು ಧರ್ಮಸುಧಾರಕರು ಅಥವಾ ಭಗವದವತಾರಿಗಳೆಂದು ಪ್ರಸಿದ್ಧವಾಗುತ್ತಾರೆ. ಅವರು ಯಜ್ಞಾಚರಣೆಯ ನಟನೆ ಮಾಡುತ್ತಾರೆ, ಅಥವಾ ದೇವತಾರಾಧನೆ ಮಾಡುತ್ತಾರೆ ಅಥವಾ ತಮ್ಮದೇ ಆದ ಭಗವಂತನನ್ನು ಸೃಷ್ಟಿಸಿಕೊಳ್ಳುತ್ತಾರೆ. ಜನ ಸಾಮಾನ್ಯರು ಅವರನ್ನು ಭಗವಂತನೆಂದು ಆರಾಧಿಸುತ್ತಾರೆ ಮತ್ತು ಮೂಢತನದಿಂದ ಅಥವಾ ಅಧ್ಯಾತ್ಮ ಜ್ಞಾನದಲ್ಲಿ ಮುಂದುವರಿದವರೆಂದು ಮೂರ್ಖರಿಂದ ಭಾವಿಸಲ್ಪಡುತ್ತಾರೆ. ಅವರು ಸನ್ಯಾಸ ವೇಷಧರಿಸಿ ಆ ವೇಷದಲ್ಲಿ ಎಲ್ಲ ದುಷ್ಕಾರ್ಯಗಳಲ್ಲಿ ತೊಡಗುತ್ತಾರೆ. ಸರ್ವಸಂಗ ಪರಿತ್ಯಾಗ ಮಾಡಿದವನಿಗೆ ವಾಸ್ತವಿಕವಾಗಿ ಅನೇಕ ನಿರ್ಬಂಧಗಳಿವೆ. ಆದರೆ ಅಸುರರು ಆ ನಿರ್ಬಂಧಗಳಿಗೆ ಲಕ್ಷ್ಯ ಕೊಡುವುದಿಲ್ಲ. ತಾವು ಕಂಡುಕೊಂಡದ್ದೇ ಮಾರ್ಗ ಎಂದು ಭಾವಿಸುತ್ತಾರೆ ; ಅವರಿಗೆ ಒಬ್ಬನು ಅನುಸರಿಸಬೇಕಾದ ನಿರ್ದಿಷ್ಟ ಪಥವೆಂಬುದಿಲ್ಲ. **ಅವಿಧಿ-ಪೂರ್ವಕಮ್** ಪದವು ನಿಯಮ ನಿಯಂತ್ರಣಗಳಿಗೆ ಅಲಕ್ಷ್ಯತೆ ಎಂದು ಅರ್ಥಮಾಡುತ್ತಾ ಇಲ್ಲಿ ವಿಶೇಷವಾಗಿ ಒತ್ತಿ ಹೇಳಲ್ಪಟ್ಟಿದೆ, ಇವು ಎಲ್ಲ ಸದಾ ಅಜ್ಞಾನ ಮತ್ತು ಭ್ರಮಾ ನಿಮಿತ್ತ.

**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ ।**
**ಮಾಮಾತ್ಮಪರದೇಹೇಷು ಪ್ರದ್ವಿಷನ್ತೋಽಭ್ಯಸೂಯಕಾಃ ॥ ೧೮ ॥**

ಅಹಂಕಾರಮ್—ಮಿಥ್ಯಾಹಂಕಾರ, ಬಲಮ್—ಬಲ, ದರ್ಪಮ್—ದರ್ಪ, ಕಾಮಮ್—ಕಾಮ, ಕ್ರೋಧಮ್—ಕ್ರೋಧ, ಚ—ಕೂಡ, ಸಂಶ್ರಿತಾಃ—ಆಶ್ರಯಿಸಿ, ಮಾಮ್—ನನ್ನನ್ನು, ಆತ್ಮ—ತಮ್ಮ, ಪರ—ಮತ್ತು ಇತರ, ದೇಹೇಷು—ದೇಹಗಳಲ್ಲಿ, ಪ್ರದ್ವಿಷನ್ತಃ—ತೆಗಳುತ್ತಾರೆ, ಅಭ್ಯಸೂಯಕಾಃ—ಅಸೂಯಾಪರರಾಗಿ.

**ಮಿಥ್ಯಾಹಂಕಾರ, ಬಲ, ದರ್ಪ, ಕಾಮ ಮತ್ತು ಕ್ರೋಧಗಳಿಂದ ದಿಗ್ಭ್ರಮಿತರಾಗಿ, ಅಸುರರು, ತಮ್ಮ ಸ್ವಂತ ದೇಹಗಳಲ್ಲಿ ಮತ್ತು ಇತರರ ದೇಹಗಳಲ್ಲಿ ಸನ್ನಿವೇಶಿತನಾದ ಪರಮದೇವೋತ್ತಮ ಪುರುಷನ ಬಗ್ಗೆ ಅಸೂಯಾಪರರಾಗುತ್ತಾರೆ ಮತ್ತು ನಿಜ ಧರ್ಮದ ವಿರುದ್ಧ ಅಪಪ್ರಚಾರ ಮಾಡುತ್ತಾರೆ.**

**ಭಾವಾರ್ಥ :** ಅಸುರ ಸ್ವಭಾವದ ವ್ಯಕ್ತಿಯು ಭಗವಂತನ ಪಾರಮ್ಯದ ಬಗ್ಗೆ ಸದಾ ವಿರೋಧಿಯಾಗಿದ್ದು ಮತ್ತು ಶಾಸ್ತ್ರಗಳಲ್ಲಿ ನಂಬಿಕೆ ಇಡಬಯಸುವುದಿಲ್ಲ. ಅವನು ಶಾಸ್ತ್ರ ಮತ್ತು ಪರಮದೇವೋತ್ತಮ ಪುರುಷನ ಅಸ್ತಿತ್ವ, ಎರಡೂ ವಿಷಯದಲ್ಲಿ ಅಸೂಯೆ ಪಡುತ್ತಾನೆ. ಇದು ಹಾಗೆಂಬ ಅವರ ಅಹಂಕಾರದಿಂದ ಮತ್ತು ಅವನ ಸಂಚಿತ ಸಂಪತ್ತು ಬಲದ ಕಾರಣ ಮತ್ತು ಈಗಿನ ಜೀವನ ಮುಂದಿನ ಜೀವನಕ್ಕೆ ಸಿದ್ಧತೆ ಎಂಬುದನ್ನು ಅವನು

ತಿಳಿದಿಲ್ಲ. ಇದನ್ನು ತಿಳಿಯದೆ, ಅವನು ವಾಸ್ತವಿಕವಾಗಿ ಸ್ವಯಂ ತನ್ನ ಮತ್ತು ಇತರರ ಬಗ್ಗೆ ಅಸೂಯೆಪಡುತ್ತಾನೆ. ಅವನಿಗೆ ಜ್ಞಾನವಿಲ್ಲದ್ದರಿಂದ ಅವನು ದೇವೋತ್ತಮ ಪುರುಷನ ನಿಯಂತ್ರಣಕ್ಕೆ ಗಮನವನ್ನು ನೀಡುವುದಿಲ್ಲ. ಶಾಸ್ತ್ರಗಳ ಮತ್ತು ಪರಮ ದೇವೋತ್ತಮ ಪುರುಷನ ಬಗ್ಗೆ ಅಸೂಯಾಪರನಾಗಿ, ಅವನು ಭಗವಂತನ ಅಸ್ತಿತ್ವದ ವಿರುದ್ಧ ಮಿಥ್ಯಾವಾದಗಳನ್ನು ಒಡ್ಡುತ್ತಾನೆ ಮತ್ತು ಶಾಸ್ತ್ರ ಪ್ರಾಮಾಣ್ಯವನ್ನು ನಿರಾಕರಿಸುತ್ತಾನೆ. ತಾನು ಸ್ವಯಂ ಪ್ರತಿಯೊಂದು ಕಾರ್ಯದಲ್ಲಿ ಸ್ವತಂತ್ರ ಮತ್ತು ಶಕ್ತಿಶಾಲಿ ಎಂದು ತಿಳಿಯುತ್ತಾನೆ. ಬಲದಲ್ಲಿ, ಶಕ್ತಿ ಅಥವಾ ಐಶ್ವರ್ಯದಲ್ಲಿ ಯಾರೂ ಅವನನ್ನು ಸರಿಗಟ್ಟಲಾರರು. ಆದ್ದರಿಂದ, ಅವನು ಯಾವ ರೀತಿಯಲ್ಲಾದರೂ ಕಾರ್ಯಮಾಡಬಹುದು ಮತ್ತು ಯಾರೂ ಅವನನ್ನು ತಡೆಯಲಾರರು ಎಂದು ಅವನು ಭಾವಿಸುತ್ತಾನೆ. ಅವನ ಇಂದ್ರಿಯ ವಿಷಯದ ಚಟುವಟಿಕೆಗಳ ಮುನ್ನಡೆಯನ್ನು ತಡೆಗಟ್ಟುವ ವೈರಿ ಇದ್ದರೆ, ತನ್ನ ಸ್ವಯಂ ಶಕ್ತಿಯಿಂದ ಅವನನ್ನು ಕತ್ತರಿಸಿಹಾಕಲು ಯೋಚಿಸುತ್ತಾನೆ.

**ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।**
**ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥ ೧೯ ॥**

ತಾನ್—ಆ, ಅಹಮ್—ನಾನು, ದ್ವಿಷತಃ—ಅಸೂಯಾಪರು, ಕ್ರೂರಾನ್—ದುಷ್ಟರನ್ನು, ಸಂಸಾರೇಷು—ಭೌತಿಕ ಅಸ್ತಿತ್ವ ಸಾಗರಕ್ಕೆ, ನರ-ಅಧಮಾನ್—ನರಾಧಮರನ್ನು, ಕ್ಷಿಪಾಮಿ—ನಾನು ಹಾಕುತ್ತೇನೆ, ಅಜಸ್ರಮ್—ಎಂದೆಂದಿಗೂ, ಅಶುಭಾನ್—ಅಶುಭ, ಆಸುರೀಷು—ಆಸುರೀ, ಏವ—ಖಂಡಿತವಾಗಿ, ಯೋನಿಷು—ಯೋನಿಗಳಿಗೆ

**ಅಸೂಯಾಪರರು ಮತ್ತು ಕ್ರೂರಿಗಳು ಮತ್ತು ನರಾಧಮರನ್ನು ನಿರಂತರವಾಗಿ ಭೌತಿಕ ಅಸ್ತಿತ್ವ ಸಾಗರದಲ್ಲಿ, ನಾನಾ ಆಸುರೀ ಯೋನಿಗಳಿಗೆ ಎಂದೆಂದಿಗೂ ಎಸೆಯುತ್ತೇನೆ.**

**ಭಾವಾರ್ಥ :** ಒಬ್ಬ ವ್ಯಕ್ತಿಗತ ಆತ್ಮನನ್ನು ವಿಶಿಷ್ಟ ದೇಹದಲ್ಲಿರಿಸುವುದು ಪರಮ ಇಚ್ಛೆಯ ಪರಮಾಧಿಕಾರ ಎಂಬುದು ಈ ಶ್ಲೋಕದಲ್ಲಿ ಸ್ಪಷ್ಟವಾಗಿ ಸೂಚಿತ. ಆಸುರೀ ವ್ಯಕ್ತಿಯು ಭಗವಂತನ ಪಾರಮ್ಯವನ್ನು ಅಂಗೀಕರಿಸಲು ಒಪ್ಪದಿರಬಹುದು, ಮತ್ತು ಅವನು ತನ್ನ ಇಚ್ಛಾನುಸಾರ ವರ್ತಿಸಬಹುದು ಎಂಬುದು ಸತ್ಯ ಸಂಗತಿ. ಆದರೆ ಅವನ ಮುಂದಿನ ಜನ್ಮವು ಪರಮದೇವೋತ್ತಮ ಪುರುಷನ ತೀರ್ಮಾನವನ್ನು ಅವಲಂಬಿಸಿದೆಯೇ ಹೊರತು ಸ್ವಯಂ ಅವನನ್ನಲ್ಲ, ಎಂದು ಶ್ರೀಮದ್ ಭಾಗವತದ ಮೂರನೆಯ ಸ್ಕಂಧದಲ್ಲಿ ಹೇಳಿದೆ. ವ್ಯಕ್ತಿಗತ ಆತ್ಮನು, ಮರಣಾನಂತರ ಉನ್ನತ ಶಕ್ತಿಯ ನೇತೃತ್ವದಲ್ಲಿ ವಿಶಿಷ್ಟ ಮಾದರಿಯ ದೇಹ ಪಡೆಯುವ ತಾಯಿಯ ಗರ್ಭದಲ್ಲಿ ಇರಿಸಲ್ಪಡುತ್ತಾನೆ. ಆದ್ದರಿಂದ ಭೌತಿಕ ಅಸ್ತಿತ್ವದಲ್ಲಿ ನಾವು—ಪ್ರಾಣಿಗಳು, ಕ್ರಿಮಿಕೀಟಗಳು, ಮಾನವರು ಮುಂತಾದ—ಅನೇಕ ಜೀವ ಯೋನಿಗಳನ್ನು ಕಾಣುತ್ತೇವೆ. ಎಲ್ಲವೂ ಪರಾಶಕ್ತಿಯಿಂದ ಏರ್ಪಾಡಾಗಿವೆ. ಅವು ಆಕಸ್ಮಿಕವಲ್ಲ. ಆಸುರೀಯರ ಮಟ್ಟಿಗೆ, ಅವರು ನಿರಂತರವಾಗಿ ಅಸುರರ ಗರ್ಭದಲ್ಲಿ ಇರಿಸಲ್ಪಡುತ್ತಾರೆಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ ಮತ್ತು ಹೀಗೆ ಅವರು ಅಸೂಯಾಪರ

ರಾಗಿ ಮುಂದುವರಿಯುವ ನರಾಧಮರು. ಅಂಥ ಆಸುರೀ ಯೋನಿಯ ಜನಗಳು ಸದಾ ಕಾಮುಕರು, ಸದಾ ಹಿಂಸ್ರಕರು, ಮತ್ತು ದ್ವೇಷ ಭಾವದವರು ಮತ್ತು ಸದಾ ಅಶುಚಿ ವಂತರು. ಕಾಡಿನ ನಾನಾ ಬಗೆಯ ಬೇಟೆಗಾರರು ಅಸುರ ಜೀವಯೋನಿಗಳಿಗೆ ಸೇರಿದವ ರೆಂದು ಭಾವಿಸಲಾಗಿದೆ.

**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।**
**ಮಾಮಪ್ರಾಪ್ಯೈವ ಕೌನ್ತೇಯ ತತೋ ಯಾನ್ತ್ಯಧಮಾಂ ಗತಿಮ್ ॥ ೨೦ ॥**

ಆಸುರೀಮ್—ಅಸುರೀ, ಯೋನಿಮ್—ಯೋನಿಗಳು, ಆಪನ್ನಾಃ—ಪಡೆದು, ಮೂಢಾಃ—ಮೂಢರು, ಜನ್ಮನಿಜನ್ಮನಿ—ಜನ್ಮಜನ್ಮಗಳಲ್ಲಿ. ಮಾಮ್—ನನ್ನನ್ನು, ಅಪ್ರಾಪ್ಯ—ಹೊಂದದೆ, ಏವ—ಖಂಡಿತವಾಗಿ, ಕೌನ್ತೇಯ—ಹೇ ಕುಂತೀ ಪುತ್ರನೇ, ತತಃ—ಆಮೇಲೆ, ಯಾನ್ತಿ—ಹೋಗುತ್ತಾರೆ, ಅಧಮಾಮ್—ಅಧಮ,ಗತಿಮ್—ಗತಿಗೆ.

**ಆಸುರೀ ಯೋನಿಗಳಲ್ಲಿ ಮತ್ತೆ ಮತ್ತೆ ಜನ್ಮಪಡೆದು, ಹೇ ಕುಂತೀ ಪುತ್ರನೇ, ಅಂಥವರು ಎಂದೂ ನನ್ನಲ್ಲಿಗೆ ಬರಲಾರರು. ಕ್ರಮೇಣ ಅವರು ಅತ್ಯಂತ ಹೇಯಕರ ವಾದ ಅಸ್ತಿತ್ವದಲ್ಲಿ ಮುಳುಗುತ್ತಾರೆ.**

**ಭಾವಾರ್ಥ :** ಭಗವಂತನು ದಯಾಪೂರ್ಣ ಎಂದು ವಿದಿತ. ಆದರೆ ಭಗವಂತನು ಅಸುರರಿಗೆ ಎಂದೂ ಕರುಣಾಮಯಿಯಲ್ಲ ಎಂಬುದನ್ನು ಇಲ್ಲಿ ಕಾಣುತ್ತೇವೆ. ಅಸುರರು ಜನ್ಮ ಜನ್ಮಗಳಲ್ಲಿ, ಅದೇ ಬಗೆಯ ಅಸುರರ ಗರ್ಭಗಳಲ್ಲಿ ಇರಿಸಲ್ಪಡುತ್ತಾರೆ ಮತ್ತು ಪರಮ ಪ್ರಭುವಿನ ಅನುಗ್ರಹ ಹೊಂದದೆ, ಅವರು ಮತ್ತಷ್ಟು ಕೆಳಕ್ಕೆ ಇಳಿಯುತ್ತಾ, ಕೊನೆಗೆ ಅವರು ಬೆಕ್ಕು, ನಾಯಿ ಹಂದಿಗಳಂತಹ ದೇಹಗಳನ್ನು ಪಡೆಯುತ್ತಾರೆ. ಅಂಥ ಅಸುರರು ಅನಂತರದ ಜೀವನದ ಯಾವುದೇ ಮಟ್ಟದಲ್ಲಿ ಕೂಡ ಭಗವಂತನ ಅನುಗ್ರಹ ಪಡೆಯುವ ಯಾವ ಅವಕಾಶ ಹೊಂದುವುದಿಲ್ಲ ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಅಂಥ ವ್ಯಕ್ತಿಗಳು ಕ್ರಮೇಣ ನಾಯಿ ಹಂದಿಗಳ ಮಟ್ಟಕ್ಕೆ ಇಳಿಯುತ್ತಾರೆ ಎಂದು ವೇದಗಳಲ್ಲಿ ಕೂಡ ಹೇಳಿದೆ. ಹಾಗಾದರೆ ಭಗವಂತನು ಅಂಥ ಅಸುರರಿಗೆ ದಯಾಮಯನಲ್ಲದ್ದರಿಂದ ದಯಾಪೂರ್ಣ ಎಂದು ಹೇಳಕೂಡದೆಂದು ಈ ಬಗ್ಗೆ ವಾದಿಸಬಹುದು. ಇದಕ್ಕೆ ಉತ್ತರವಾಗಿ, ಭಗವಂತನಿಗೆ ಯಾರ ಬಗ್ಗೆಯೂ ಅಸೂಯೆ ಇಲ್ಲ ಎಂದು ವೇದಾಂತ ಸೂತ್ರಗಳಲ್ಲಿ ನಾವು ಕಾಣುತ್ತೇವೆ. ಅಸುರರನ್ನು ಅಧಮತಮ ಯೋನಿಗಳಲ್ಲಿರಿಸುವುದು ಅವನ ಕರುಣೆಯ ಮತ್ತೊಂದು ಲಕ್ಷಣ ಅಷ್ಟೇ. ಕೆಲವು ಸಲ ಅಸುರರು ಭಗವಂತನಿಂದ ಸಂಹರಿಸಲ್ಪಡುತ್ತಾರೆ, ಆದರೆ ಈ ಸಂಹಾರವು ಕೂಡ ಅವರಿಗೆ ಒಳ್ಳೆಯದು, ಏಕೆಂದರೆ ಪರಮಪ್ರಭುವಿನಿಂದ ಸಂಹೃತರಾದವರು ಮೋಕ್ಷಹೊಂದುತ್ತಾರೆ ಎಂಬುದನ್ನು ವೇದ ಸಾಹಿತ್ಯದಲ್ಲಿ ಕಾಣುತ್ತೇವೆ. ಇತಿಹಾಸದಲ್ಲಿ ಅಸುರರಾದ—ರಾವಣ, ಕಂಸ, ಹಿರಣ್ಯಕಶಿಪು ಕೊಲ್ಲಲೆಂದೇ ಭಗವಂತನು ನಾನಾವತಾರಗಳನ್ನು ಧರಿಸಿದ ಅಂಥ ಅನೇಕ ಉದಾ ಹರಣೆಗಳಿವೆ. ಆದ್ದರಿಂದ ಅವನಿಂದ ಸಂಹೃತರಾಗುವ ಭಾಗ್ಯಶಾಲಿಗಳಾದ ಅಸುರರಿಗೆ ಭಗವಂತನು ಕರುಣೆ ತೋರುತ್ತಾನೆ.

**ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।**
**ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ॥ ೨೧ ॥**

ತ್ರಿ-ವಿಧಮ್—ಮೂರು ಬಗೆಯ, ನರಕಸ್ಯ—ನರಕದ, ಇದಮ್—ಇದು, ದ್ವಾರಮ್—ದ್ವಾರ, ನಾಶನಮ್—ನಾಶಕರ, ಆತ್ಮನಃ—ಆತ್ಮನ, ಕಾಮಃ—ಕಾಮ, ಕ್ರೋಧಃ—ಕೋಪ, ತಥಾ—ಮತ್ತು, ಲೋಭಃ—ಲೋಭ, ತಸ್ಮಾತ್—ಆದ್ದರಿಂದ, ಏತತ್—ಈ, ತ್ರಯಮ್—ಮೂರು, ತ್ಯಜೇತ್—ತ್ಯಜಿಸಬೇಕು.

**ಈ ನರಕಕ್ಕೆ ಕೊಂಡೊಯ್ಯುವ ಕಾಮ, ಕ್ರೋಧ ಮತ್ತು ಲೋಭ—ಎಂಬ ಮೂರು ದ್ವಾರಗಳಿವೆ. ಪ್ರತಿಯೊಬ್ಬ ವಿವೇಕಯುಕ್ತನು ಇವುಗಳನ್ನು ತ್ಯಜಿಸಬೇಕು, ಏಕೆಂದರೆ ಅವು ಆತ್ಮನನ್ನು ಕೀಳುದೆಸೆಗೆ ಕೊಂಡೊಯ್ಯುತ್ತವೆ.**

**ಭಾವಾರ್ಥ :** ಆಸುರೀ ಜೀವನದ ಪ್ರಾರಂಭವು ಇಲ್ಲಿ ವರ್ಣಿಸಲ್ಪಟ್ಟಿದೆ ಒಬ್ಬನು. ತನ್ನ ಕಾಮವನ್ನು ತುಷ್ಟಿಪಡಿಸಲೆತ್ನಿಸುತ್ತಾನೆ, ಮತ್ತು ಅವನಿಗೆ ಸಾಧ್ಯವಾಗದಾಗ ಕ್ರೋಧ ಮತ್ತು ಲೋಭಗಳು ಹುಟ್ಟುತ್ತವೆ. ಆಸುರೀ ಜೀವ ಯೋನಿಗಳಿಗೆ ಇಳಿಯ ಬಯಸದ ವಿವೇಕಿಯು ಈ ಮೂರು ವೈರಿಗಳನ್ನು ತ್ಯಜಿಸಲೆತ್ನಿಸಬೇಕು. ಅವು ಆತ್ಮನನ್ನು ಅದೆಷ್ಟು ಮಟ್ಟಿಗೆ ಕೊಲ್ಲುತ್ತವೆಂದರೆ ಆಮೇಲೆ ಭೌತಿಕ ಬಂಧದಿಂದ ನಿವೃತ್ತಿಯ ಸಾಧ್ಯತೆಯೇ ಇಲ್ಲ.

**ಏತೈರ್ವಿಮುಕ್ತಃ ಕೌನ್ತೇಯ ತಮೋದ್ವಾರೈಸ್ತ್ರಿಭಿರ್ನರಃ ।**
**ಆಚಾರತ್ಯಾತ್ಮನಃ ಶ್ರೇಯಸ್ತತೋ ಯಾತಿ ಪರಾಂ ಗತಿಮ್ ॥ ೨೨ ॥**

ಏತೈಃ—ಇವುಗಳಿಂದ, ವಿಮುಕ್ತಃ—ವಿಮುಕ್ತನಾಗಿ, ಕೌನ್ತೇಯ—ಹೇ ಕುಂತೀ ಪುತ್ರನೇ, ತಮಃ-ದ್ವಾರೈಃ—ತಮೋ ದ್ವಾರಗಳಿಂದ, ತ್ರಿಭಿಃ—ಮೂರು ಬಗೆಯ, ನರಃ—ನರನು, ಆಚರತಿ—ಆಚರಿಸುತ್ತಾನೆ, ಆತ್ಮನಃ—ಆತ್ಮನಿಗಾಗಿ, ಶ್ರೇಯಃ—ಶ್ರೇಯಸ್ಸು, ತತಃ—ಆಮೇಲೆ, ಯಾತಿ—ಹೋಗುತ್ತಾನೆ, ಪರಾಮ್—ಪರಮ, ಗತಿಮ್—ಗತಿಗೆ.

**ಹೇ ಕುಂತೀ ಪುತ್ರನೇ, ಈ ಮೂರು ನರಕ ದ್ವಾರಗಳಿಂದ ಪಾರಾದವನು ಆತ್ಮಸಾಕ್ಷಾತ್ಕಾರಕ್ಕೆ ಅನುಕೂಲಕರ ಕಾರ್ಯಗಳನ್ನು ಮಾಡುತ್ತಾನೆ ಮತ್ತು ಹೀಗೆ ಕ್ರಮೇಣ ಪರಮ ಗಮ್ಯಸ್ಥಾನವನ್ನು ಹೊಂದುತ್ತಾನೆ.**

**ಭಾವಾರ್ಥ :** ಒಬ್ಬನು ಮಾನವ ಜನ್ಮದ ಈ ಮೂರು ವೈರಿಗಳ—ಕಾಮ, ಕ್ರೋಧ, ಮತ್ತು ಲೋಭಗಳ ಬಗ್ಗೆ ಬಹು ಎಚ್ಚರಿಕೆಯಿಂದಿರಬೇಕು. ಕಾಮ, ಕ್ರೋಧ ಮತ್ತು ಲೋಭಗಳಿಂದ ಎಷ್ಟೆಷ್ಟು ಮುಕ್ತನಾಗುತ್ತಾನೋ ಅಷ್ಟಷ್ಟು ಅವನ ಅಸ್ತಿತ್ವ ಶುದ್ಧವಾಗುತ್ತದೆ. ಆಗ ಅವನು ವೇದಸಾಹಿತ್ಯದಲ್ಲಿ ವಿಧಿಸಿದ ನಿಯಮ ನಿಯಂತ್ರಣಗಳನ್ನು ಅನುಸರಿಸಬಹುದು. ಮಾನವ ಜೀವನದ ನಿಯಂತ್ರಣ ತತ್ತ್ವಗಳನ್ನು ಅನುಸರಿಸಿ ಒಬ್ಬನು ಕ್ರಮೇಣ ತನ್ನನ್ನು ಆತ್ಮಸಾಕ್ಷಾತ್ಕಾರದ ವೇದಿಕೆಗೆ ಏರಿಸಿಕೊಳ್ಳುತ್ತಾನೆ. ಆ ಸಾಧನೆಯಿಂದ ಕೃಷ್ಣಪ್ರಜ್ಞಾ ವೇದಿಕೆಗೆ ಏರಲು ಒಬ್ಬನು ಅಷ್ಟು ಭಾಗ್ಯಶಾಲಿಯಾಗಿದ್ದರೆ ಆಗ

ಅವನಿಗೆ ಯಶಸ್ಸು ಖಂಡಿತ. ವೇದಸಾಹಿತ್ಯದಲ್ಲಿ, ಕ್ರಿಯೆ ಪ್ರಕ್ರಿಯೆಗಳ ರೀತಿಗಳು ಒಬ್ಬನು ಶುದ್ಧ ಮಟ್ಟಕ್ಕೆ ಬರಲು ಸಮರ್ಥನಾಗುವಂತೆ ವಿಧಿಸಲ್ಪಟ್ಟಿವೆ. ಇಡೀ ವಿಧಾನವು ಕಾಮ, ಲೋಭ, ಮತ್ತು ಕ್ರೋಧಗಳ ತ್ಯಾಗವನ್ನು ಅವಲಂಬಿಸಿದೆ. ಈ ಪ್ರಕ್ರಿಯಾ ಜ್ಞಾನ ಸಾಧನೆಯಿಂದ, ಒಬ್ಬನು ಆತ್ಮಸಾಕ್ಷಾತ್ಕಾರದ ಅತ್ಯುನ್ನತ ಸ್ಥಿತಿಗೆ ಉನ್ನತಿಸ ಬಹುದು. ಈ ಆತ್ಮ ಸಾಕ್ಷಾತ್ಕಾರವು ಭಕ್ತಿಯುತ ಸೇವೆಯಲ್ಲಿ ಪರಿಪೂರ್ಣವಾಗುತ್ತದೆ. ಆ ಭಕ್ತಿಯುತ ಸೇವೆಯಲ್ಲಿ ಬದ್ಧಾತ್ಮನ ಮುಕ್ತಿಯು ಖಂಡಿತ. ಆದ್ದರಿಂದ ವೈದಿಕ ಪದ್ಧತಿ ಗನುಸಾರ ಜಾತಿ ಪದ್ಧತಿ ಮತ್ತು ಅಧ್ಯಾತ್ಮ ಮಟ್ಟ ಪದ್ಧತಿ ಎಂದು ಕರೆಯಲ್ಪಡುವ ನಾಲ್ಕು ವರ್ಣಗಳು ಮತ್ತು ನಾಲ್ಕು ಆಶ್ರಮಗಳು ಸ್ಥಾಪಿತ. ಭಿನ್ನ ಜಾತಿಗಳಿಗೆ ಅಥವಾ ಸಮಾಜ ವಿಭಾಗಗಳಿಗೆ ಭಿನ್ನ ನಿಯಮ ನಿಯಂತ್ರಣಗಳಿವೆ, ಮತ್ತು ಒಬ್ಬನು ಅವುಗಳನ್ನು ಅನುಸರಿಸಲಾದರೆ, ಅವನು ತಾನಾಗಿಯೇ ಆತ್ಮ ಸಾಕ್ಷಾತ್ಕಾರದ ಅತ್ಯುನ್ನತ ವೇದಿಕೆಗೆ ಉನ್ನತಿಸುತ್ತಾನೆ. ಆಗ ಅವನು ನಿಸ್ಸಂದೇಹವಾಗಿ ಮೋಕ್ಷ ಹೊಂದಬಲ್ಲನು.

**ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।**
**ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್ ॥ ೨೩ ॥**

ಯಃ—ಯಾರೊಬ್ಬನು, ಶಾಸ್ತ್ರ-ವಿಧಿಮ್—ಶಾಸ್ತ್ರವಿಧಿಗಳನ್ನು, ಉತ್ಸೃಜ್ಯ—ಬಿಟ್ಟು, ವರ್ತತೇ—ವರ್ತಿಸುತ್ತಾನೆ, ಕಾಮ-ಕಾರತಃ—ಕಾಮದಲ್ಲಿ ಇಚ್ಛೆ ಬಂದಂತೆ ವರ್ತಿಸಿ, ನ—ಎಂದೂ, ಸಃ—ಅವನು, ಸಿದ್ಧಿಮ್—ಪರಿಪೂರ್ಣತೆಯನ್ನು, ಅವಾಪ್ನೋತಿ—ಹೊಂದುವುದಿಲ್ಲ. ನ—ಎಂದಿಗೂ ಇಲ್ಲ, ಸುಖಮ್—ಸುಖವನ್ನು, ನ—ಎಂದಿಗೂ ಇಲ್ಲ, ಪರಾಮ್—ಪರಮ, ಗತಿಮ್—ಗತಿಯನ್ನು.

**ಶಾಸ್ತ್ರವಿಧಿಗಳನ್ನು ಕಡೆಗಣಿಸಿ ತನ್ನ ಮನಬಂದಂತೆ ವರ್ತಿಸುವವನು. ಪರಿಪೂರ್ಣತೆಯನ್ನಾಗಲೀ, ಸುಖವನ್ನಾಗಲೀ ಅಥವಾ ಪರಮ ಗಮ್ಯಸ್ಥಾನವನ್ನಾಗಲೀ ಹೊಂದುವುದಿಲ್ಲ.**

**ಭಾವಾರ್ಥ :** ಮೇಲೆ ವರ್ಣಿಸಿದಂತೆ ಶಾಸ್ತ್ರವಿಧಿ ಅಥವಾ ಶಾಸ್ತ್ರ ನಿರ್ದೇಶನವನ್ನು ಮಾನವ ಸಮಾಜದ ಭಿನ್ನಭಿನ್ನ ವರ್ಣ ಮತ್ತು ಆಶ್ರಮಗಳಿಗೆ ನೀಡಿದೆ. ಪ್ರತಿಯೊಬ್ಬನೂ ಈ ನಿಯಮ ನಿಯಂತ್ರಣಗಳನ್ನು ಅನುಸರಿಸುವನೆಂದು ನಿರೀಕ್ಷಿತ. ಒಬ್ಬನು ಅವುಗಳನ್ನು ಅನುಸರಿಸದೆ ಮನಬಂದಂತೆ ತನ್ನ ಕಾಮ, ಲೋಭ ಮತ್ತು ಇಚ್ಛೆಗನುಸಾರವಾಗಿ ವರ್ತಿಸಿದರೆ ಅವನು ತನ್ನ ಜೀವನದಲ್ಲಿ ಎಂದೂ ಪರಿಪೂರ್ಣನಾಗುವುದಿಲ್ಲ. ಎಂದರೆ, ಒಬ್ಬನು ತಾತ್ವಿಕವಾಗಿ ಈ ಎಲ್ಲ ವಿಷಯಗಳನ್ನು ತಿಳಿದಿರಬಹುದು, ಆದರೆ ಅವನು ಅವುಗಳನ್ನು ತನ್ನ ಜೀವನದಲ್ಲಿ ಅನ್ವಯಿಸಿಕೊಳ್ಳದಿದ್ದರೆ ಆಗ ಅವನು ನರಾಧಮನೆಂದು ತಿಳಿಯಲ್ಪಡುವನು. ಮಾನವ ಜನ್ಮದಲ್ಲಿ ಜೀವಿಯು ಸಾತ್ವಿಕನಾಗಿ ತನ್ನ ಜೀವನವನ್ನು ಅತ್ಯುನ್ನತ ವೇದಿಕೆಗೆ ಏರಿಸಿಕೊಳ್ಳುವ ನಿಯಂತ್ರಣಗಳನ್ನು ಪಾಲಿಸುವನೆಂದು ನಿರೀಕ್ಷಿಸಲಾಗಿದೆ, ಆದರೆ ಅವನು ಅವುಗಳನ್ನು ಅನುಸರಿಸದಿದ್ದರೆ, ಅವನು ತನ್ನನ್ನು ಕೀಳು ದೆಸೆಗೆ ಇಳಿಸಿಕೊಳ್ಳುತ್ತಾನೆ. ಆದರೆ ಅವನು ನಿಯಮ ನಿಯಂತ್ರಣಗಳನ್ನು ಮತ್ತು ನೀತಿ ತತ್ವಗಳನ್ನು ಅನುಸರಿಸಿದರೂ

ಕೊನೆಗೆ ಪರಮ ಪ್ರಭುವನ್ನು ಅರಿತುಕೊಳ್ಳುವ ಮಟ್ಟಕ್ಕೆ ಬಾರದಿದ್ದರೆ, ಆಗ ಅವನ ಜ್ಞಾನವೆಲ್ಲಾ ಹಾಳಾಗುತ್ತದೆ. ಅವನು ದೇವರ ಅಸ್ತಿತ್ವವನ್ನು ಒಪ್ಪಿಕೊಂಡರೂ ಕೂಡ, ಅವನು ತನ್ನನ್ನು ಭಗವತ್ ಸೇವೆಯಲ್ಲಿ ತೊಡಗಿಸಿಕೊಳ್ಳದಿದ್ದರೆ ಅವನ ಪ್ರಯತ್ನಗಳು ಹಾಳಾಗುತ್ತವೆ. ಆದ್ದರಿಂದ ಒಬ್ಬನು ಕ್ರಮೇಣ ತನ್ನನ್ನು ಕೃಷ್ಣ ಪ್ರಜ್ಞೆ ಮತ್ತು ಭಕ್ತಿ ಯುತ ಸೇವಾ ವೇದಿಕೆಗೆ ಏರಿಸಿಕೊಳ್ಳಬೇಕು; ಆಗ ಮತ್ತು ಅಲ್ಲಿ ಮಾತ್ರ ಅವನು ಆತ್ಯುನ್ನತೆಯ ಪರಿಪೂರ್ಣತೆಯ ಮಟ್ಟವನ್ನು ಗಳಿಸಬಹುದೇ ವಿನಾ ಅನ್ಯಥಾ ಇಲ್ಲ.

**ಕಾಮ ಕಾರತಃ** ಪದವು ಬಹು ಮಹತ್ವದ್ದು. ತಿಳಿದೂ ತಿಳಿದೂ ನಿಯಮಗಳನ್ನು, ಉಲ್ಲಂಘಿಸುವವನು ಕಾಮ ಮೋಹದಲ್ಲಿ ವರ್ತಿಸುತ್ತಾನೆ. ಇದು ನಿಷೇಧಿತ ಎಂಬುದು ಅವನಿಗೆ ಗೊತ್ತಿದೆ. ಆದರೂ ಅವನು ಹಾಗೆ ವರ್ತಿಸುತ್ತಾನೆ. ಇದನ್ನು ಇಚ್ಛಾನುವರ್ತನೆ ಎಂದು ಕರೆದಿದೆ. ಇದನ್ನು ಹೀಗೆ ಮಾಡಬೇಕೆಂದು ಅವನಿಗೆ ಗೊತ್ತಿದ್ದರೂ ಅವನು ಮಾಡುವುದಿಲ್ಲ; ಆದ್ದರಿಂದ ಅವನನ್ನು ಇಚ್ಛಾನುವರ್ತಿ ಎಂದು ಕರೆದಿದೆ. ಅಂಥ ವ್ಯಕ್ತಿಗಳು ಪರಮಪ್ರಭುವಿನಿಂದ ತ್ಯಕ್ತರಾಗಲು ಬದ್ಧರು, ಅವರು ಮಾನವ ಜೀವಿತಕ್ಕೆ ಉದ್ದಿಷ್ಟ ಪರಿಪೂರ್ಣತೆಯನ್ನು ಹೊಂದಲಾರರು. ಮಾನವ ಜನ್ಮವು ವಿಶೇಷವಾಗಿ ಒಬ್ಬನ ಅಸ್ತಿತ್ವ ವನ್ನು ಶುದ್ಧಗೊಳಿಸಲು ಉದ್ದಿಷ್ಟ, ಮತ್ತು ನಿಯಮ ನಿಯಂತ್ರಣಗಳನ್ನು ಅನುಸರಿಸ ದವನು ತನ್ನನ್ನು ಶುದ್ಧಗೊಳಿಸಿಕೊಳ್ಳಲಾರನು, ಅಥವಾ ಅವನು ಸುಖದ ನಿಜಮಟ್ಟವನ್ನು ಹೊಂದಲಾರನು.

**ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ।**
**ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥ ೨೪ ॥**

ತಸ್ಮಾತ್—ಆದ್ದರಿಂದ, ಶಾಸ್ತ್ರಮ್—ಶಾಸ್ತ್ರಗಳು, ಪ್ರಮಾಣಮ್—ಪ್ರಮಾಣವನ್ನು ತೇ—ನಿನ್ನ, ಕಾರ್ಯ—ಕರ್ತವ್ಯ, ಅಕಾರ್ಯ—ನಿಷಿದ್ಧಕಾರ್ಯಗಳು ವ್ಯವಸ್ಥಿತೌ—ನಿರ್ಧರಿಸುವಲ್ಲಿ, ಜ್ಞಾತ್ವಾ—ತಿಳಿದು, ಶಾಸ್ತ್ರ—ಶಾಸ್ತ್ರದ, ವಿಧಾನ—ನಿಯಂತ್ರಣಗಳು, ಉಕ್ತಮ್—ಹೇಳಿರುವಂತೆ, ಕರ್ಮ—ಕರ್ಮ, ಕರ್ತುಮ್—ಮಾಡಲು ಇಹ—ಈ ಜಗತ್ತಿನಲ್ಲಿ, ಅರ್ಹಸಿ—ನೀನು ಅರ್ಹನು.

**ಆದ್ದರಿಂದ ಒಬ್ಬನು ಶಾಸ್ತ್ರ ನಿಯಂತ್ರಣಾನುಸಾರ ಯಾವುದು ಕರ್ತವ್ಯ ಯಾವುದು ಕರ್ತವ್ಯವಲ್ಲ ಎಂಬುದನ್ನು ಅರಿಯಬೇಕು. ಇಂಥ ನಿಯಮ ನಿಯಂತ್ರಣ ಗಳನ್ನು ತಿಳಿದು, ಒಬ್ಬನು ಕ್ರಮೇಣ ಉನ್ನತಿಹೊಂದುವಂತೆ ವರ್ತಿಸಬೇಕು.**

**ಭಾವಾರ್ಥ :** ಹದಿನೈದನೆಯ ಅಧ್ಯಾಯದಲ್ಲಿ ಹೇಳಿದಂತೆ ವೇದಗಳ ಎಲ್ಲ ನಿಯಮ ನಿಯಂತ್ರಣಗಳು ಕೃಷ್ಣನನ್ನು ತಿಳಿಯಲು ಉದ್ದಿಷ್ಟ. ಒಬ್ಬನು ಭಗವದ್ಗೀತೆಯಿಂದ ಕೃಷ್ಣನು ಯಾರೆಂಬುದನ್ನು ಅರಿತುಕೊಂಡರೆ ಮತ್ತು ಕೃಷ್ಣಪ್ರಜ್ಞಾ ಸನ್ನಿವೇಶಿತ ನಾಗಿ ಭಕ್ತಿಯುತ ಸೇವಾ ನಿರತನಾದರೆ, ಅವನು ವೇದ ಸಾಹಿತ್ಯವು ನೀಡುವ ಅತ್ಯುನ್ನತ ಸಿದ್ಧಿತಲುಪಿದ್ದಾನೆ, ಶ್ರೀ ಚೈತನ್ಯ ಮಹಾಪ್ರಭುಗಳು ಈ ಪ್ರಕ್ರಿಯೆಯನ್ನು ಬಹು

ಸುಲಭಗೊಳಿಸಿದ್ದಾರೆ. ಜನರು ಸುಮ್ಮನೆ, ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ/ ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ ಎಂದು ಸಂಕೀರ್ತನ ಮಾಡಬೇಕೆಂದು ಮತ್ತು ಭಗವಂತನ ಭಕ್ತಿಯುತ ಸೇವೆಯಲ್ಲಿ ನಿರತರಾಗ ಬೇಕೆಂದು ಮತ್ತು ಭಗವದರ್ಪಿತ ನೈವೇದ್ಯ ಶೇಷವನ್ನು ಭುಂಜಿಸಬೇಕೆಂದು ಹೇಳಿದ್ದಾರೆ. ಈ ಭಕ್ತಿಯುತ ಚಟುವಟಿಕೆಗಳಲ್ಲಿ ನೇರವಾಗಿ ತೊಡಗಿದವನು ಎಲ್ಲ ವೈದಿಕ ಸಾಹಿತ್ಯವನ್ನು ಅಧ್ಯಯನ ಮಾಡಿದ್ದಾನೆಂದು ತಿಳಿಯಲ್ಪಡಬೇಕು. ಅವನು ಸರಿಯಾಗಿ ನಿರ್ಣಯಕ್ಕೆ ಬಂದಿದ್ದಾನೆ. ಕೃಷ್ಣಪ್ರಜ್ಞೆಯಲ್ಲಿಲ್ಲದವರಿಗೆ ಅಥವಾ ಭಕ್ತಿಯುತ ಸೇವೆಯಲ್ಲಿ ನಿರತರಾಗದವರಿಗೆ ಏನು ಮಾಡಬೇಕು ಏನು ಮಾಡಬಾರದು ಎಂಬುದನ್ನು ವೇದಾಜ್ಞೆಗಳು ತೀರ್ಮಾನಿಸಬೇಕು ನಿಜ.ಒಬ್ಬನು ಆ ಪ್ರಕಾರ, ವಾದಮಾಡದೆ ವರ್ತಿಸಬೇಕು. ಅದನ್ನು ಶಾಸ್ತ್ರತತ್ತ್ವಾನುಸರಣೆ ಎಂದು ಕರೆದಿದೆ. ಶಾಸ್ತ್ರವು ಬದ್ಧಾತ್ಮನಲ್ಲಿ ಗೋಚರಿಸುವ ನಾಲ್ಕು ಮುಖ್ಯದೋಷಗಳಿಂದ ರಹಿತ, ಎಂದರೆ ದೋಷಯುಕ್ತ ಇಂದ್ರಿಯಗಳು,ವಂಚನೆಯ ಪ್ರವಣತೆ ತಪ್ಪದೆ ಅಪರಾಧ ವೆಸಗುವುದು ಮತ್ತು ತಪ್ಪದೆ ಮೋಹಿತವಾಗುವುದು. ಬದ್ಧಾತ್ಮನಲ್ಲಿಯ ಈ ನಾಲ್ಕು ದೋಷಗಳು ಒಬ್ಬನನ್ನು ನಿಯಮ ನಿಯಂತ್ರಣಗಳನ್ನು ಅನುಸರಿಸಲು ಅನರ್ಹಗೊಳಿ ಸುತ್ತವೆ. ಆದ್ದರಿಂದ, ನಿಯಮ ನಿಯಂತ್ರಣಗಳು—ಈ ದೋಷಗಳಿಗೆ ಅತೀತ ವಾಗಿದ್ದು—ಯಾವ ಬದಲಾವಣೆ ಇಲ್ಲದೆ, ಮಹಾ ಸಾಧುಪುರುಷರಿಂದ ಆಚಾರ್ಯರಿಂದ ಮತ್ತು ಮಹಾತ್ಮರಿಂದ ಅಂಗೀಕೃತ.

ಭಾರತದಲ್ಲಿ ಅಧ್ಯಾತ್ಮ ಅರಿವಿನಲ್ಲಿ ಸಾಮಾನ್ಯವಾಗಿ ವ್ಯಕ್ತಿಶೂನ್ಯ ಮತ್ತು ವ್ಯಕ್ತಿ ವಾದಿ ಎಂಬ ಎರಡು ವರ್ಗಗಳಿವೆ. ಆದರೆ ಅವರಿಬ್ಬರೂ ಕೂಡ ವೇದ ತತ್ತ್ವಾನುಸಾರ ಜೀವನ ನಡೆಸುತ್ತಾರೆ. ಶಾಸ್ತ್ರ ತತ್ತ್ವಾನುಸಾರವಿಲ್ಲದೆ ಒಬ್ಬನು ತನ್ನನ್ನು ಪರಿಪೂರ್ಣತೆಯ ಮಟ್ಟಕ್ಕೆ ಏರಿಸಿಕೊಳ್ಳಲಾರನು. ಆದ್ದರಿಂದ ವಾಸ್ತವಿಕವಾಗಿ ಶಾಸ್ತ್ರತಾತ್ಪರ್ಯವನ್ನು ಅರಿತವನು ಭಾಗ್ಯವಂತನೆಂದು ಪರಿಗಣಿತನು.

ಮಾನವ ಸಮಾಜದಲ್ಲಿ ಪರಮದೇವೋತ್ತಮ ಪುರುಷನನ್ನು ಅರಿತುಕೊಳ್ಳುವ ತತ್ತ್ವಗಳ ಬಗ್ಗೆ ಉದಾಸೀನತೆಯು ಎಲ್ಲಾ ಪತನಗಳಿಗೆ ಕಾರಣ. ಅದು ಮಾನವ ಜನ್ಮದ ಮಹಾಪರಾಧ. ಆದ್ದರಿಂದ ಪರಮ ದೇವೋತ್ತಮ ಪುರುಷನು ಭೌತಿಕ ಶಕ್ತಿಯಾದ ಮಾಯೆ ತ್ರಿವಿಧ ಕ್ಲೇಶಗಳ ರೂಪದಲ್ಲಿ ನಮಗೆ ಸದಾ ತೊಂದರೆ ಕೊಡುತ್ತಿದೆ. ಈ ಭೌತಿಕ ಶಕ್ತಿಯು ತ್ರಿವಿಧ ಭೌತಿಕ ಗುಣಗಳಿಂದ ಕೂಡಿದೆ. ಒಬ್ಬನು ಪರಮ ಪ್ರಭುವಿನ ಅರಿವಿನ ಪಥ ತೆರೆಯುವ ಮುಂಚೆ ಕನಿಷ್ಠ ಪಕ್ಷ ಸತ್ತ್ವಗುಣದಲ್ಲಾದರೂ ಉನ್ನತಿಸಿರ ಬೇಕು, ಸತ್ತ್ವಗುಣ ಮಟ್ಟಕ್ಕೆ ಏರದೆ ಒಬ್ಬನು ಆಸುರೀ ಜೀವನ ಕಾರಣವಾದ ರಜೋಗುಣ ಮತ್ತು ತಮೋಗುಣದಲ್ಲಿರುತ್ತಾನೆ. ರಜೋಗುಣ ಮತ್ತು ತಮೋಗುಣದಲ್ಲಿರುವವರು ಶಾಸ್ತ್ರನಿಂದೆ ಮಾಡುತ್ತಾರೆ, ಪವಿತ್ರ ಮಾನವನನ್ನು ನಿಂದಿಸುತ್ತಾರೆ, ಮತ್ತು ಪರಮ ದೇವೋತ್ತಮ ಪುರುಷನ ಸರಿಯಾದ ಅರಿವನ್ನು ನಿಂದಿಸುತ್ತಾರೆ. ಅವರು ಗುರುಗಳ ಉಪದೇಶಗಳನ್ನು ಉಲ್ಲಂಘಿಸುತ್ತಾರೆ, ಮತ್ತು ಶಾಸ್ತ್ರನಿಯಂತ್ರಣಗಳಿಗೆ ಗಮನ ನೀಡುವುದಿಲ್ಲ. ಭಕ್ತಿಯುತ ಸೇವಾ ಮಹಿಮೆಯನ್ನು ಶ್ರವಣ ಮಾಡಿದರೂ ಕೂಡ

ಆದರಿಂದ ಆಕರ್ಷಿತರಲ್ಲ. ಹೀಗೆ ತಮ್ಮದೇ ಆದ ಉನ್ನತಿ ಮಾರ್ಗವನ್ನು ಸೃಷ್ಟಿಸಿಕೊಳ್ಳುತ್ತಾರೆ. ಮನುಷ್ಯನನ್ನು ಜೀವನದಲ್ಲಿ ಆಸುರೀ ಪ್ರವೃತ್ತಿಗೆ ಕೊಂಡೊಯ್ಯುವ ಕೆಲವೊಂದು ದೋಷಗಳು ಮಾನವ ಸಮಾಜದಲ್ಲಿವೆ. ಆದರೆ ಒಬ್ಬನು ಔನ್ನತ್ಯಕ್ಕೆ ಮಾರ್ಗದರ್ಶನ ನೀಡುವ ಯೋಗ್ಯ ಅಧಿಕೃತ ಗುರುವಿನಿಂದ ಮಾರ್ಗದರ್ಶನ ಪಡೆದರೆ, ನಂತರ ಒಬ್ಬನ ಜೀವನವು ಯಶಸ್ವಿಯಾಗುವುದು.

**ಇಲ್ಲಿಗೆ ದೈವಾಸುರ ಸ್ವಭಾವಗಳ ವಿಷಯದಲ್ಲಿ ಶ್ರೀಮದ್ ಭಗವದ್ಗೀತೆಯ ಹದಿನಾರನೆಯ ಅಧ್ಯಾಯದ ಭಕ್ತಿವೇದಾಂತ ತಾತ್ಪರ್ಯವು ಮುಗಿಯಿತು.**



## ಅಧ್ಯಾಯ ಹದಿನೇಳು



# ಶ್ರದ್ಧೆಯ ವಿಭಾಗಗಳು

**ಅರ್ಜುನ ಉವಾಚ**

**ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜನ್ತೇ ಶ್ರದ್ಧಯಾನ್ವಿತಾಃ ।**
**ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ತ್ವಮಾಹೋ ರಜಸ್ತಮಃ ॥೧॥**

ಅರ್ಜುನ ಉವಾಚ—ಅರ್ಜುನನು ನುಡಿದನು, ಯೇ—ಯಾರು, ಶಾಸ್ತ್ರ-ವಿಧಿಮ್—ಶಾಸ್ತ್ರವಿಧಿಗಳನ್ನು, ಉತ್ಸೃಜ್ಯ—ಮೀರಿ, ಯಜನ್ತೇ—ಪೂಜಿಸುತ್ತಾರೆ, ಶ್ರದ್ಧಯಾ—ಪೂರ್ಣ ಶ್ರದ್ಧೆಯಿಂದ, ಅನ್ವಿತಾಃ—ಕೂಡಿ, ತೇಷಾಂ—ಅವರ, ನಿಷ್ಠಾ—ನಿಷ್ಠೆ, ತು—ಆದರೆ, ಕಾ—ಏನು, ಕೃಷ್ಣ—ಹೇ ಕೃಷ್ಣ, ಸತ್ತ್ವಮ್—ಸತ್ತ್ವದಲ್ಲಿ, ಆಹೋ—ಅಥವಾ ಅನ್ಯ, ರಜಃ—ರಾಜಸದಲ್ಲಿ, ತಮಃ—ತಮೋ ಗುಣದಲ್ಲಿ.

**ಅರ್ಜುನನು ಪ್ರಶ್ನಿಸಿದನು : ಹೇ ಕೃಷ್ಣ, ಶಾಸ್ತ್ರ ತತ್ತ್ವಗಳನ್ನು ಅನುಸರಿಸ ದವರ ಆದರೆ ತಮ್ಮದೇ ಆದ ಕಲ್ಪನಾನುಸಾರ, ಆರಾಧಿಸುವವರ ಸ್ಥಿತಿ ಏನು ? ಅವರು ಸಾತ್ತ್ವಿಕ, ರಾಜಸ ಅಥವಾ ತಮೋಗುಣದಲ್ಲಿರುವವರೇ ?**

**ಭಾವಾರ್ಥ :** ಹದಿನಾಲ್ಕನೆಯ ಅಧ್ಯಾಯದ ಮೂವತ್ತೊಂಭತ್ತನೆಯ ಶ್ಲೋಕದಲ್ಲಿ, ವಿಶಿಷ್ಟ ಮಾದರಿಯ ಅರ್ಚನೆಗೆ ನಿಷ್ಠನಾದವನು ಕ್ರಮೇಣ ಜ್ಞಾನ ಹಂತಕ್ಕೆ ಉನ್ನತಿಸು ತ್ತಾನೆ ಮತ್ತು ಅತ್ಯುನ್ನತ ಪರಿಪೂರ್ಣತೆಯ ಶಾಂತಿ ಮತ್ತು ಸಮೃದ್ಧಿಯ ಮಟ್ಟಕ್ಕೆ ಉನ್ನತಿಸುತ್ತಾನೆ ಎಂದು ಹೇಳಿದೆ. ಶಾಸ್ತ್ರಗಳಲ್ಲಿ ವಿಧಿಸಿದ ತತ್ತ್ವಗಳನ್ನು ಅನುಸರಿಸ ದವನು, ಅಸುರನು, ಮತ್ತು ಶಾಸ್ತ್ರ ವಿಧಿಗಳನ್ನು ನಿಷ್ಠೆಯಿಂದ ಅನುಸರಿಸುವವನು

ದೇವತೆಯೂ ಎಂದು ಹದಿನಾರನೆಯ ಅಧ್ಯಾಯದಲ್ಲಿ ನಿರ್ಣೀತವಾಗಿದೆ. ಈಗ ಒಬ್ಬನು, ಶಾಸ್ತ್ರವಿಧಿಗಳಲ್ಲಿ ಪ್ರಸ್ತಾಪಿತವಲ್ಲದ ಕೆಲವು-ನಿಯಮಗಳನ್ನು ಅನುಸರಿಸಿದರೆ ಅವನ ಸ್ಥಾನ ಮಾನವೇನು ? ಅರ್ಜುನನ ಈ ಸಂದೇಹವು ಕೃಷ್ಣನಿಂದ ಸ್ಪಷ್ಟವಾಗಬೇಕು. ಒಬ್ಬ ಮನುಷ್ಯನನ್ನು ಆಯ್ದುಕೊಂಡು ಆವನನ್ನು ಒಂದು ಬಗೆಯ ಭಗವಂತನನ್ನಾಗಿ ಸೃಷ್ಟಿಸಿ ಕೊಂಡು ಅವನಲ್ಲಿ ಶ್ರದ್ಧೆ ಇರುವವರು ಸಾತ್ವಿಕ, ರಾಜಸ ಅಥವಾ ತಮೋ ಗುಣದಲ್ಲಿ ಅವನನ್ನು ಆರಾಧಿಸುವರೋ ? ಅಂಥವರು ಜೀವನದ ಪರಿಪೂರ್ಣ ಮಟ್ಟವನ್ನು ಹೊಂದುವರೇ ? ಅವರು ನಿಜ ಸ್ಥಾನದಲ್ಲಿ ಸನ್ನಿವೇಶಿತರಾಗುವ ಮತ್ತು ಪರಿಪೂರ್ಣ ತೆಯ ಅತ್ಯುನ್ನತ ಮಟ್ಟಕ್ಕೆ ತಮ್ಮನ್ನು ಉನ್ನತಿಸಿಕೊಳ್ಳುವ ಸಾಧ್ಯತೆ ಇದೆಯೇ ? ಶಾಸ್ತ್ರ ನಿಯಮ ನಿಯಂತ್ರಣಗಳನ್ನು ಅನುಸರಿಸದೆ ಆದರೆ ಯಾವುದರಲ್ಲಿಯೋ ಶ್ರದ್ಧೆ ಹೊಂದಿ ದೇವರನ್ನು ಮತ್ತು ದೇವತೆಗಳನ್ನು ಮತ್ತು ಮನುಷ್ಯರನ್ನು ಪೂಜಿಸುವವರು ತಮ್ಮ ಪ್ರಯತ್ನಗಳಲ್ಲಿ ಯಶಸ್ಸು ಹೊಂದುವರೇ ? ಅರ್ಜುನನು ಈ ಪ್ರಶ್ನೆಗಳನ್ನು ಕೃಷ್ಣನ ಮುಂದೆ ಇಡುತ್ತಿದ್ದಾನೆ.

**ಶ್ರೀಭಗವಾನುವಾಚ**

**ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ ।**
**ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ॥ ೨ ॥**

ಶ್ರೀಭಗವಾನುವಾಚ—ಪರಮ ದೇವೋತ್ತಮ ಪುರುಷನು ನುಡಿದನು, ತ್ರಿವಿಧಾ—ಮೂರು ಬಗೆಗಳಾಗಿ, ಭವತಿ—ಇರುತ್ತದೆ, ಶ್ರದ್ಧಾ—ಶ್ರದ್ಧೆ, ದೇಹಿನಾಮ್—ದೇಹಿ ಗಳ, ಸಾ—ಅದು, ಸ್ವ-ಭಾವಜಾ—ಅವನ ಭೌತಿಕ ಪ್ರಕೃತಿ ಗುಣಾನುಸಾರ, ಸಾತ್ತ್ವಿಕೀ—ಸತ್ತ್ವಗುಣದಲ್ಲಿ, ರಾಜಸೀ—ರಜೋ ಗುಣದಲ್ಲಿ, ಚ—ಕೂಡ, ಏವ—ಖಂಡಿತವಾಗಿ, ತಾಮಸೀ—ತಮೋಗುಣದಲ್ಲಿ, ಚ—ಮತ್ತು, ಇತಿ—ಹೀಗೆ, ತಾಮ್—ಅದನ್ನು, ಶೃಣು—ನನ್ನಿಂದ ಕೇಳು.

**ಪರಮ ದೇವೋತ್ತಮ ಪುರುಷನು ನುಡಿದನು : ದೇಹಗತ ಆತ್ಮನು ಆರ್ಜಿಸಿದ ಪ್ರಕೃತಿ ಗುಣಾನುಸಾರ, ಒಬ್ಬನ ಶ್ರದ್ಧೆಯು—ಸಾತ್ತ್ವಿಕ, ರಾಜಸ ಅಥವಾ ತಾಮಸ—ಈ ಮೂರು ಬಗೆಯದಾಗಿರಬಹುದು. ಈಗ ಅದನ್ನು ಕುರಿತು ಕೇಳು.**

**ಭಾವಾರ್ಥ :** ಶಾಸ್ತ್ರ ನಿಯಮ ನಿಯಂತ್ರಣಗಳನ್ನು ತಿಳಿದವರು, ಆದರೆ ಸೋಮಾರಿ ತನದಿಂದಲೋ ಅಥವಾ ಉದ್ಧಟತನದಿಂದಲೋ ಈ ನಿಯಮ ನಿಯಂತ್ರಣಗಳ ಅನು ಸರಣೆಯನ್ನು ತ್ಯಜಿಸುವವರು ಭೌತಿಕ ಪ್ರಕೃತಿ ಗುಣಗಳಿಗೆ ಒಳಪಡುತ್ತಾರೆ. ಅವರು ಹಿಂದೆ ಮಾಡಿದ ಸಾತ್ವಿಕ, ರಾಜಸ ಅಥವಾ ತಮೋ ಗುಣದ ಚಟುವಟಿಕೆಗಳಿಗೆ ಅನುಸಾರ ವಾಗಿ ವಿಶಿಷ್ಟ ಗುಣದ ಸ್ವಭಾವವನ್ನು ಆರ್ಜಿಸುತ್ತಾರೆ. ಜೀವಿಯ ವಿವಿಧ ಪ್ರಕೃತಿ ಗುಣಗಳ ಸಂಗವು ನಿರಂತರವಾಗಿ ಸಾಗುತ್ತಿದೆ. ಜೀವಿಯು ಭೌತಿಕ ಪ್ರಕೃತಿ ಸಂಪರ್ಕದಲ್ಲಿ ಇರು ವುದರಿಂದ, ಅವನು ಭೌತಿಕ ಗುಣ ಸಂಗಾನುಸಾರ ವಿವಿಧ ಬಗೆಯ ಮನೋಭಾವಗಳನ್ನು ಹೊಂದುತ್ತಾನೆ. ಆದರೆ ಒಬ್ಬನು ಸದ್ಗುರುಗಳ ಸಂಗ ಮಾಡಿದರೆ ಮತ್ತು ಅವರ ಪ್ರಕಾರ

**ಮತ್ತು** ಶಾಸ್ತ್ರ ನಿಯಮಾನುಸಾರ ವರ್ತಿಸಿದರೆ ಈ ಸ್ವಭಾವವು ಬದಲಾಗಬಹುದು. ಕ್ರಮೇಣ ಒಬ್ಬನು ತನ್ನ ಸ್ಥಿತಿಯನ್ನು ಅಜ್ಞಾನದಿಂದ ಸಾತ್ವಿಕಕ್ಕೆ ಅಥವಾ ರಾಜಸದಿಂದ ಸಾತ್ವಿಕಕ್ಕೆ ಬದಲಾಯಿಸಿಕೊಳ್ಳಬಹುದು. ನಿರ್ಣಯವೆಂದರೆ, ವಿಶಿಷ್ಟ ಪ್ರಕೃತಿ ಗುಣದಲ್ಲಿ ಅಂಧ ಶ್ರದ್ಧೆಯು ಒಬ್ಬನನ್ನು ತನ್ನನ್ನು ಪರಿಪೂರ್ಣ ಮಟ್ಟಕ್ಕೇರಿಸಿಕೊಳ್ಳಲು ಸಹಾಯಕವಾಗದು. ಒಬ್ಬನು ಎಚ್ಚರಿಕೆಯಿಂದ ಬುದ್ಧಿಯುಕ್ತನಾಗಿ ಸದ್ಗುರುಗಳ ಸಂಗದಲ್ಲಿ ವಿಚಾರ ವಿನಿಮಯ ಮಾಡಬೇಕು. ಹೀಗೆ ಒಬ್ಬನು ತನ್ನ ಸ್ಥಾನವನ್ನು ಉನ್ನತ ಪ್ರಕೃತಿ ಗುಣಕ್ಕೆ ಬದಲಾಯಿಸಿಕೊಳ್ಳಬಹುದು.

**ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ ।**
**ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ ॥ ೩ ॥**

ಸತ್ತ್ವ-ಅನುರೂಪಾ—ಅಸ್ತಿತ್ವಾನುಸಾರ, ಸರ್ವಸ್ಯ—ಪ್ರತಿಯೊಬ್ಬನ, ಶ್ರದ್ಧಾ—ಶ್ರದ್ಧೆ, ಭವತಿ—ಇರುತ್ತದೆ, ಭಾರತ—ಹೇ ಭರತ ಪುತ್ರನೇ, ಶ್ರದ್ಧಾ—ಶ್ರದ್ಧೆ, ಮಯಃ—ಪೂರ್ಣವಾಗಿ, ಅಯಮ್—ಈ, ಪುರುಷಃ—ಜೀವಿಯು, ಯಃ—ಯಾರು, ಯತ್—ಯಾವುದನ್ನು ಹೊಂದಿ, ಶ್ರದ್ಧಃ—ಶ್ರದ್ಧೆ, ಸಃ—ಹೀಗೆ, ಏವ—ಖಂಡಿತವಾಗಿ, ಸಃ—ಅವನು.

**ಹೇ ಭರತ ಪುತ್ರನೇ, ವಿವಿಧ ಪ್ರಕೃತಿ ಗುಣಾಧೀನನಾದ ಒಬ್ಬನು ಅಸ್ತಿತ್ವಾನುಸಾರ ಒಬ್ಬನು ವಿಶಿಷ್ಟ ಬಗೆಯ ಶ್ರದ್ಧೆಯನ್ನು ರೂಪಿಸಿಕೊಳ್ಳುತ್ತಾನೆ. ಜೀವಿಯು ಆರ್ಜಿಸಿದ ಗುಣಾನುಸಾರ ವಿಶಿಷ್ಟ ಬಗೆಯ ಶ್ರದ್ಧಾವಂತನೆಂದು ಹೇಳಲಾಗುತ್ತದೆ.**

**ಭಾವಾರ್ಥ :** ಪ್ರತಿಯೊಬ್ಬನು ಅವನು ಏನೇ ಇರಲಿ, ವಿಶಿಷ್ಟ ಬಗೆಯ ಶ್ರದ್ಧೆ ಹೊಂದಿರುತ್ತಾನೆ. ಆದರೆ ಅವನು ಆರ್ಜಿಸಿದ ಸ್ವಭಾವಾನುಸಾರ ಅವನ ಶ್ರದ್ಧೆಯು ಸಾತ್ವಿಕ, ರಾಜಸ ಅಥವಾ ತಾಮಸವೆಂದು ಪರಿಗಣಿಸಲ್ಪಡುತ್ತದೆ. ಹೀಗೆ, ಅವನ ವಿಶಿಷ್ಟ ಮಾದರಿಯ ಶ್ರದ್ಧಾನುಸಾರ, ಅವನು ವಿಶಿಷ್ಟ ವ್ಯಕ್ತಿಗಳ ಸಂಗ ಮಾಡುತ್ತಾನೆ. ಈಗ ನಿಜ ಸಂಗತಿ ಎಂದರೆ, ಪ್ರತಿ ಜೀವಿಯು ಹದಿನೈದನೆಯ ಅಧ್ಯಾಯದಲ್ಲಿ ಹೇಳಿದಂತೆ, ಮೂಲತಃ ಪರಮ ಪ್ರಭುವಿನ ವಿಭಿನ್ನಾಂಶ ಭಾಗ. ಆದ್ದರಿಂದ ಎಲ್ಲ ಭೌತಿಕ ಪ್ರಕೃತಿ ಗುಣಗಳಿಗೆ ಮೂಲತಃ ಅತೀತನು. ಆದರೆ ಒಬ್ಬನು ಪರಮ ದೇವೋತ್ತಮ ಪುರುಷನೊಂದಿಗೆ ತನ್ನ ಸಂಬಂಧವನ್ನು ಮರೆತು ಬದ್ಧ ಜೀವನದಲ್ಲಿ ಭೌತಿಕ ಪ್ರಕೃತಿ ಸಂಪರ್ಕದಲ್ಲಿ ಬಂದಾಗ, ಅವನು ಭೌತಿಕ ಪ್ರಕೃತಿಯ ಭಿನ್ನಭಿನ್ನ ವೈವಿಧ್ಯಗಳ ಸಂಗದಿಂದ ತನ್ನದೇ ಆದ ಸ್ಥಾನವನ್ನು ಸೃಷ್ಟಿಸಿಕೊಳ್ಳುತ್ತಾನೆ. ಆ ಪರಿಣಾಮವಾದ ಅಸಹಜ ಶ್ರದ್ಧೆ ಮತ್ತು ಅಸ್ತಿತ್ವವು ಭೌತಿಕ ಮಾತ್ರ. ಒಬ್ಬನು ಯಾವುದೋ ಭಾವದಲ್ಲಿ, ಅಥವಾ ಯಾವುದೋ ಜೀವನದ ಕಲ್ಪನೆಯಲ್ಲಿ ಸಾಗುತ್ತಿದ್ದರೂ, ಮೂಲತಃ ಅವನು ನಿರ್ಗುಣ, ಅಥವಾ ಅತೀತನು. ಆದ್ದರಿಂದ ಒಬ್ಬನು, ಪರಮ ಪ್ರಭುವಿನೊಂದಿಗೆ ತನ್ನ ಸಂಬಂಧವನ್ನು ಮತ್ತೆ ಪಡೆದುಕೊಳ್ಳಲು, ತಾನು ಆರ್ಜಿಸಿದ ಭೌತಿಕ ಕಲ್ಮಷದಿಂದ ಶುದ್ಧನಾಗಬೇಕು. ಭಯವಿಲ್ಲದೆ ಹಿಂದಿರುಗಲು ಅದೊಂದೇ ಮಾರ್ಗ; ಕೃಷ್ಣ ಪ್ರಜ್ಞೆ. ಒಬ್ಬನು

ಕೃಷ್ಣಪ್ರಜ್ಞಾ ಸನ್ನಿವೇಶಿತನಾದರೆ ಆಗ ಆ ಮಾರ್ಗವು ಅವನ ಪರಿಪೂರ್ಣ ಮಟ್ಟದ ಉನ್ನತಿಗೆ ಸುನಿಶ್ಚಿತ. ಒಬ್ಬನು ಆತ್ಮಸಾಕ್ಷಾತ್ಕಾರದ ಈ ಮಾರ್ಗವನ್ನು ಗ್ರಹಿಸದಿದ್ದರೆ, ಆಗ ಅವನು ಪ್ರಕೃತಿ ಗುಣ ಪ್ರಭಾವಕ್ಕೆ ಒಳಪಡುವುದು ಖಂಡಿತ.

ಶ್ರದ್ಧಾ ಪದವು ಈ ಶ್ಲೋಕದಲ್ಲಿ ಬಹು ಮಹತ್ವದ್ದು. ಶ್ರದ್ಧೆಯು ಮೂಲತಃ ಸತ್ತ್ವಗುಣ ನಿಷ್ಪನ್ನ. ಒಬ್ಬನ ಶ್ರದ್ಧೆಯು ಯಾವೊಬ್ಬ ದೇವತೆಯಲ್ಲಿ ಅಥವಾ ಸೃಷ್ಟ ದೇವರಲ್ಲಿ ಅಥವಾ ಯಾವುದೋ ಮಾನಸಿಕ ಕಲ್ಪಿತ ಭಾವನೆಯಲ್ಲಿ ಇರಬಹುದು. ಒಬ್ಬನ ಬಲವಾದ ಶ್ರದ್ಧೆಯು ಭೌತಿಕ ಸತ್ತ್ವ ಕಾರ್ಯಗಳ ಉತ್ಪಾದಕವೆಂದು ಹೇಳಿದೆ. ಆದರೆ ಭೌತಿಕ ಬದ್ಧ ಜೀವನದಲ್ಲಿ ಯಾವ ಕರ್ಮಗಳೂ ಕೂಡ ಸಂಪೂರ್ಣವಾಗಿ ಶುದ್ಧವಲ್ಲ. ಅವು ಮಿಶ್ರಿತ. ಅವು ಶುದ್ಧ ಸತ್ತ್ವದಲ್ಲಿ ಇರುವುದಿಲ್ಲ. ಶುದ್ಧ ಸತ್ತ್ವವು ದಿವ್ಯವಾದುದು; ಶುದ್ಧ ಸತ್ತ್ವದಲ್ಲಿ ಒಬ್ಬನು ಪರಮ ದೇವೋತ್ತಮ ಪುರುಷನ ನಿಜ ಪ್ರಕೃತಿಯನ್ನು ಅರಿತುಕೊಳ್ಳಬಹುದು. ಒಬ್ಬನ ಶ್ರದ್ಧೆಯು ಸಂಪೂರ್ಣವಾಗಿ ಶುದ್ಧ ಸತ್ತ್ವದಲ್ಲಿ ಇಲ್ಲದವರೆಗೆ ಅದು ಭೌತಿಕ ಪ್ರಕೃತಿ ಗುಣಗಳಲ್ಲಿ ಯಾವುದಾದರೊಂದರಿಂದ ಕಲ್ಮಷಕ್ಕೆ ಅಧೀನ. ಕಲುಷಿತ ಭೌತಿಕ ಪ್ರಕೃತಿ ಗುಣಗಳು ಹೃದಯಕ್ಕೆ ವಿಸ್ತರಿಸುತ್ತವೆ. ಆದ್ದರಿಂದ ವಿಶಿಷ್ಟ ಬಗೆಯ ಭೌತಿಕ ಪ್ರಕೃತಿ ಗುಣ ಸಂಪರ್ಕದಲ್ಲಿ ಇರುವ ಹೃದಯದ ಸ್ಥಾನಾನುಸಾರ ಒಬ್ಬನ ಶ್ರದ್ಧೆಯು ಪ್ರತಿಷ್ಠಿತ. ಒಬ್ಬನ ಹೃದಯವು ಸತ್ತ್ವಗುಣದಲ್ಲಿದ್ದರೆ ಅವನ ಶ್ರದ್ಧೆಯು ಕೂಡ ಸತ್ತ್ವಗುಣದಲ್ಲಿದೆ ಎಂದು ತಿಳಿಯಬೇಕು. ಅವನ ಹೃದಯವು ರಾಜಸ ಗುಣದಲ್ಲಿದ್ದರೆ ಅವನ ಶ್ರದ್ಧೆಯು ರಾಜಸ ಗುಣದಲ್ಲಿರುವುದು. ಅವನ ಹೃದಯವು ತಮೋಗುಣದಲ್ಲಿ ಮಾಯೆಯಲ್ಲಿದ್ದರೆ ಹಾಗೆಯೇ ಅವನ ಶ್ರದ್ಧೆಯೂ ಕೂಡ ಕಲುಷಿತ. ಹೀಗೆ ನಾವು ಈ ಜಗತ್ತಿನಲ್ಲಿ ನಾನಾ ಬಗೆಯ ಶ್ರದ್ಧೆಗಳನ್ನು ಕಾಣುತ್ತೇವೆ, ಮತ್ತು ಭಿನ್ನ ಭಿನ್ನ ಮಾದರಿಯ ಶ್ರದ್ಧೆಯ ನಿಮಿತ್ತ ಭಿನ್ನಭಿನ್ನ ಮಾದರಿಯ ಧರ್ಮಗಳೂ ಹುಟ್ಟಿಕೊಂಡಿವೆ. ಧರ್ಮ ಶ್ರದ್ಧೆಯ ನಿಜ ತತ್ತ್ವವು ಶುದ್ಧ ಸತ್ತ್ವಗುಣದಲ್ಲಿ ಸನ್ನಿವೇಶಿತ, ಆದರೆ ಹೃದಯವು ದೂಷಿತವಾದ್ದರಿಂದ ನಾವು ನಾನಾ ಬಗೆಯ ಧರ್ಮತತ್ತ್ವಗಳನ್ನು ಕಾಣುತ್ತೇವೆ. ಹೀಗೆ ನಾನಾ ಬಗೆಯ ಶ್ರದ್ಧಾನುಸಾರ ನಾನಾ ಬಗೆಯ ಆರಾಧನೆಗಳೂ ಇವೆ.

**ಯಜನ್ತೇ ಸಾತ್ತ್ವಿಕಾ ದೇವಾನ್ ಯಕ್ಷರಕ್ಷಾಂಸಿ ರಾಜಸಾಃ ।**
**ಪ್ರೇತಾನ್ ಭೂತಗಣಾಂಶ್ಚಾನ್ಯೇ ಯಜನ್ತೇ ತಾಮಸಾ ಜನಾಃ ॥ ೪ ॥**

ಯಜನ್ತೇ—ಆರಾಧಿಸುತ್ತಾರೆ, ಸಾತ್ತ್ವಿಕಾಃ—ಸಾತ್ತ್ವಿಕರು, ದೇವಾನ್—ದೇವತೆಗಳನ್ನು, ಯಕ್ಷ-ರಕ್ಷಾಂಸಿ—ದೈತ್ಯರನ್ನು, ರಾಜಸಾಃ—ರಾಜಸ ಗುಣಗಳು, ಪ್ರೇತಾನ್—ಮೃತರ ಪ್ರೇತಗಳನ್ನು, ಭೂತ-ಗಣಾನ್—ಭೂತಗಣಗಳನ್ನು, ಚ—ಮತ್ತು, ಅನ್ಯೇ—ಇತರರನ್ನು, ಯಜನ್ತೇ—ಆರಾಧಿಸುತ್ತಾರೆ, ತಾಮಸಾಃ—ತಾಮಸ ಗುಣದಲ್ಲಿ, ಜನಾಃ—ಜನ.

**ಸಾತ್ವಿಕರು ದೇವತೆಗಳನ್ನು ಆರಾಧಿಸುತ್ತಾರೆ; ರಾಜಸರು ಅಸುರರನ್ನು ಆರಾಧಿಸುತ್ತಾರೆ; ಮತ್ತು ತಾಮಸರು ಭೂತಪ್ರೇತಗಳನ್ನು ಆರಾಧಿಸುತ್ತಾರೆ.**

**ಭಾವಾರ್ಥ :** ಈ ಶ್ಲೋಕದಲ್ಲಿ ಆವರವರ ಬಹಿರಂಗ ಚಟುವಟಿಕೆಗಳಿಗೆ ಅನುಸಾರವಾಗಿ ವಿವಿಧ ಪ್ರಕಾರದ ಆರಾಧಕರನ್ನು ಪರಮ ದೇವೋತ್ತಮ ಪುರುಷನು ವರ್ಣಿಸುತ್ತಾನೆ. ಶಾಸ್ತ್ರವಿಧಿಗನುಸಾರ, ಪರಮ ದೇವೋತ್ತಮ ಪುರುಷನು ಮಾತ್ರ ಪೂಜ್ಯನು. ಆದರೆ ಶಾಸ್ತ್ರವಿಧಿಗಳನ್ನು ಸರಿಯಾಗಿ ತಿಳಿಯದವರು, ಅಥವಾ ಅವುಗಳಲ್ಲಿ ಶ್ರದ್ಧೆಯಿಲ್ಲದವರು, ಭೌತಿಕ ಪ್ರಕೃತಿ ಗುಣಗಳಲ್ಲಿ ತಮ್ಮ ವಿಶಿಷ್ಟ ಸನ್ನಿವೇಶಾನುಸಾರ ಭಿನ್ನಭಿನ್ನ ವಸ್ತುಗಳನ್ನು ಆರಾಧಿಸುತ್ತಾರೆ. ಸತ್ತ್ವಗುಣ ಸನ್ನಿವೇಶಿತರು ಸಾಮಾನ್ಯವಾಗಿ ದೇವತೆಗಳನ್ನು ಅರ್ಚಿಸುತ್ತಾರೆ. ದೇವತೆಗಳಲ್ಲಿ ಬ್ರಹ್ಮ, ಶಿವ ಮತ್ತು ಇಂದ್ರ, ಚಂದ್ರ ಮತ್ತು ಸೂರ್ಯದೇವ ನಂಥ ಇತರರು ಸೇರಿದ್ದಾರೆ. ನಾನಾ ಬಗೆಯ ದೇವತೆಗಳಿದ್ದಾರೆ. ಸಾತ್ವಿಕರು ವಿಶಿಷ್ಟ ಉದ್ದೇಶಕ್ಕಾಗಿ ವಿಶಿಷ್ಟ ದೇವತೆಗಳನ್ನು ಆರಾಧಿಸುತ್ತಾರೆ. ಅದೇ ಪ್ರಕಾರ, ರಜೋಗುಣಿಗಳು ದೈತ್ಯರನ್ನು ಆರಾಧಿಸುತ್ತಾರೆ. ಎರಡನೆಯ ಮಹಾಯುದ್ಧ ಕಾಲದಲ್ಲಿ ಕಲ್ಕತ್ತಾದಲ್ಲಿ ಒಬ್ಬನು ಹಿಟ್ಲರನನ್ನು ಆರಾಧಿಸಿದನು ಎಂದು ನಾವು ಕೇಳಿದ್ದೇವೆ. ಏಕೆಂದರೆ ಆ ಯುದ್ಧದಿಂದ ಅವನ ಕಳ್ಳಪೇಟೆ ವ್ಯವಹಾರದಲ್ಲಿ ಅಪಾರ ಸಂಪತ್ತನ್ನು ಆರ್ಜಿಸಿದನು. ಅದೇ ಪ್ರಕಾರ ರಾಜಸ ಮತ್ತು ತಾಮಸ ಗುಣಿಗಳು ಸಾಮಾನ್ಯವಾಗಿ ಬಲಿಷ್ಠನನ್ನು ದೇವರೆಂದು ಆಯ್ದುಕೊಳ್ಳುತ್ತಾರೆ. ಯಾರನ್ನು ಬೇಕಾದರೂ ದೇವರೆಂದು ಆರಾಧಿಸಬಹುದು, ಅದರಿಂದ ಒಂದೇ ಬಗೆಯ ಫಲಗಳು ದೊರೆಯುತ್ತವೆ ಎಂದು ಅವರು ಭಾವಿಸುತ್ತಾರೆ.

ರಜೋಗುಣಿಗಳು ಅಂಥ ದೇವರನ್ನು ಸೃಷ್ಟಿಸುತ್ತಾರೆ ಮತ್ತು ಪೂಜಿಸುತ್ತಾರೆ ಮತ್ತು ತಾಮಸ ಗುಣಿಗಳು ಅಂಧಕಾರದಲ್ಲಿ ಮೃತ ಪ್ರೇತಗಳನ್ನು ಆರಾಧಿಸುತ್ತಾರೆ ಎಂದು ಇಲ್ಲಿ ಸ್ಪಷ್ಟವಾಗಿ ವರ್ಣಿತ. ಕೆಲವು ಸಲ ಜನ ಮೃತನ ಸಮಾಧಿಗೆ ಪೂಜೆ ಸಲ್ಲಿಸುತ್ತಾರೆ. ಲೈಂಗಿಕ ಸೇವೆಯು ಕೂಡ ತಾಮಸವೆಂದು ಪರಿಗಣಿಸಲಾಗಿದೆ. ಅದೇ ಪ್ರಕಾರ, ಭಾರತದ ದೂರ ದೂರ ಗ್ರಾಮಗಳಲ್ಲಿ ಭೂತಾರಾಧಕರಿದ್ದಾರೆ. ಭಾರತದಲ್ಲಿ ಕೆಳ ವರ್ಗದ ಜನರು ಕೆಲವು ಸಲ ಕಾಡಿಗೆ ಹೋಗಿ ಅಲ್ಲಿ ಯಾವುದೋ ಒಂದು ಮರದಲ್ಲಿ ಭೂತವಿದೆಯೆಂದು ತಿಳಿದರೆ ಆ ಮರಕ್ಕೆ ಪೂಜೆ ಸಲ್ಲಿಸಿ ಬಲಿಗಳನ್ನು ಸಮರ್ಪಿಸುತ್ತಾರೆ. ಈ ನಾನಾ ಬಗೆಗಳ ಆರಾಧನೆಯು ವಾಸ್ತವಿಕವಾಗಿ ಭಗವದಾರಾಧನೆಯಲ್ಲ. ಭಗವದಾರಾಧನೆಯು ಶುದ್ಧ ಸತ್ತ್ವದಲ್ಲಿ ದಿವ್ಯ ಸನ್ನಿವೇಶಿತರಿಗೆ ಉದ್ದಿಷ್ಟ. ಶ್ರೀಮದ್ ಭಾಗವತದಲ್ಲಿ ಹೀಗೆ ಹೇಳಿದೆ (4.3.23.) **ಸತ್ತ್ವಂ ವಿಶುದ್ಧಂ ವಾಸುದೇವ–ಶಬ್ದಿತಮ್** : "ಒಬ್ಬನು ಶುದ್ಧ ಸತ್ತ್ವದಲ್ಲಿ ಸನ್ನಿವೇಶಿತನಾದಾಗ, ವಾಸುದೇವನನ್ನು ಆರಾಧಿಸುತ್ತಾನೆ." ತಾತ್ಪರ್ಯವೆಂದರೆ, ಭೌತಿಕ ಪ್ರಕೃತಿ ಗುಣಗಳಿಂದ ಸಂಪೂರ್ಣ ಶುದ್ಧರಾದವರು ಮತ್ತು ದಿವ್ಯವಾಗಿ ಸನ್ನಿವೇಶಿತರು ಪರಮ ದೇವೋತ್ತಮ ಪುರುಷನನ್ನು ಆರಾಧಿಸಬಹುದು.

ವ್ಯಕ್ತಿಶೂನ್ಯವಾದಿಗಳು ಸತ್ತ್ವಗುಣದಲ್ಲಿ ಸನ್ನಿವೇಶಿತರಾಗಿರಬೇಕಾಗಿರುವುದು ಮತ್ತು ಅವರು ಐದು ಬಗೆಯ ದೇವತಾರಾಧಕರು. ಅವರು ಭೌತಿಕ ಜಗತ್ತಿನಲ್ಲಿ ವಿಷ್ಣು

ತತ್ತ್ವ ಎಂದು ಕರೆಯುವ ವಿಷ್ಣುವಿನ ವ್ಯಕ್ತಿಶೂನ್ಯ ರೂಪವನ್ನು ಆರಾಧಿಸುತ್ತಾರೆ. ವಿಷ್ಣುವು ಪರಮ ದೇವೋತ್ತಮ ಪುರುಷನ ವಿಸ್ತರಣೆ. ಆದರೆ ವ್ಯಕ್ತಿಶೂನ್ಯವಾದಿಗಳು ಅಂತಿಮವಾಗಿ ಪರಮ ದೇವೋತ್ತಮ ಪುರುಷನನ್ನು ನಂಬುವುದಿಲ್ಲವರಾದ್ದರಿಂದ ವಿಷ್ಣು ರೂಪವು ವ್ಯಕ್ತಿಶೂನ್ಯ ಬ್ರಹ್ಮನ್‌ನ ಕೇವಲ ಮತ್ತೊಂದು ಅಂಶ ಎಂದು ಊಹಿಸುತ್ತಾರೆ; ಅದೇ ಪ್ರಕಾರ, ಶ್ರೀ ಬ್ರಹ್ಮನು ಭೌತಿಕ ರಜೋಗುಣದಲ್ಲಿ ವ್ಯಕ್ತಿಶೂನ್ಯ ರೂಪವೆಂದು ಊಹಿಸುತ್ತಾರೆ. ಹೀಗೆ ಐದು ಬಗೆಯ ಆರಾಧ್ಯ ದೇವರನ್ನು ಅವರು ಆರಾಧಿಸುತ್ತಾರೆ, ಆದರೆ ವಾಸ್ತವಿಕ ತತ್ತ್ವವು ವ್ಯಕ್ತಿಶೂನ್ಯ ಬ್ರಹ್ಮನ್ ಎಂದು ಭಾವಿಸುವುದರಿಂದ, ಅವರು ಎಲ್ಲ ಆರಾಧ್ಯ ವಸ್ತುಗಳನ್ನು ಅಂತಿಮದಲ್ಲಿ ಬಿಟ್ಟುಬಿಡುತ್ತಾರೆ. ತಾತ್ಪರ್ಯವೆಂದರೆ, ಭೌತಿಕ ಪ್ರಕೃತಿಯ ಭಿನ್ನ ಗುಣಗಳನ್ನು ದಿವ್ಯ ಸ್ವಭಾವದವರ ಸಂಗದಲ್ಲಿ ಶುದ್ಧೀಕರಿಸಿ ಕೊಳ್ಳಬಹುದು.

**ಅಶಾಸ್ತ್ರವಿಹಿತಂ ಘೋರಂ ತಪ್ಯನ್ತೇ ಯೇ ತಪೋ ಜನಾಃ ।**
**ದಮ್ಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ॥ ೫ ॥**
**ಕರ್ಷಯನ್ತಃ ಶರೀರಸ್ಥಂ ಭೂತಗ್ರಾಮಮಚೇತಸಃ ।**
**ಮಾಂ ಚೈವಾನ್ತಃಶರೀರಸ್ಥಂ ತಾನ್ ವಿದ್ಧ್ಯಾಸುರನಿಶ್ಚಯಾನ್ ॥ ೬ ॥**

ಅಶಾಸ್ತ್ರ—ಶಾಸ್ತ್ರದಲ್ಲಿಲ್ಲದ, ವಿಹಿತಮ್—ನಿರ್ದೇಶಿತ, ಘೋರಮ್—ಇತರರಿಗೆ ಹಾನಿಕಾರಕ, ತಪ್ಯನ್ತೇ—ಆಚರಿಸುತ್ತಾರೆ, ಯೇ—ಯಾರು, ತಪಃ—ತಪಸ್ಸುಗಳು, ಜನಾಃ—ಜನರು, ದಮ್ಭ—ದಂಭದಿಂದ, ಅಹಂಕಾರ—ಮತ್ತು ಅಹಂಕಾರ, ಸಂಯುಕ್ತಾಃ—ಕೂಡಿದವರು, ಕಾಮ—ಕಾಮದ, ರಾಗ—ರಾಗ, ಬಲ—ಬಲದಿಂದ, ಅನ್ವಿತಾಃ—ಒತ್ತಾಯಿಸಲ್ಪಟ್ಟು, ಕರ್ಷಯನ್ತಃ—ತೊಂದರೆಪಡಿಸುತ್ತ, ಶರೀರ-ಸ್ಥಮ್—ಶರೀರದಲ್ಲಿ ಸನ್ನಿವೇಶಿತನಾದ, ಭೂತ-ಗ್ರಾಮಮ್—ಮಹಾ ಭೂತಗಳ ಸಂಯೋಜನೆಯ, ಅಚೇತಸಃ—ಮಾರ್ಗ ಭ್ರಷ್ಟ ಮನೋಭಾವ ಹೊಂದಿ, ಮಾಮ್—ನನ್ನನ್ನು, ಚ—ಕೂಡ, ಏವ—ಖಂಡಿತವಾಗಿ, ಅನ್ತಃ—ಒಳಗೆ, ಶರೀರ-ಸ್ಥಮ್—ಶರೀರದಲ್ಲಿ ಸನ್ನಿವೇಶಿತನಾದ, ತಾನ್—ಅವುಗಳನ್ನು, ವಿದ್ಧಿ—ತಿಳಿದುಕೋ, ಅಸುರ-ನಿಶ್ಚಯಾನ್—ಅಸುರರು.

**ಶಾಸ್ತ್ರಗಳಲ್ಲಿ ಹೇಳದ ಕಠೋರ ವ್ರತ ತಪಸ್ಸುಗಳನ್ನು ದಂಭ ಮತ್ತು ಅಹಂಕಾರ ದಿಂದ ಆಚರಿಸುತ್ತಿರುವವರು, ಕಾಮ ಮತ್ತು ರಾಗದಿಂದ ಪ್ರಭಾವಿತರು, ಮೂಢರು, ಮತ್ತು ದೇಹದ ಮಹಾ ಭೂತಗಳನ್ನು ಮತ್ತು ಒಳಗಿರುವ ಪರಮಾತ್ಮನನ್ನು ಹಿಂಸಿಸುವವರನ್ನು ಅಸುರರೆಂದು ತಿಳಿಯಬೇಕು.**

**ಭಾವಾರ್ಥ :** ಶಾಸ್ತ್ರವಿಧಿಗಳಲ್ಲಿ ಪ್ರಸ್ತಾಪಿತವಲ್ಲದ ವ್ರತ ತಪಸ್ಸುಗಳ ವಿಧಾನಗಳನ್ನು ತಯಾರಿಸುವವರಿದ್ದಾರೆ. ಉದಾಹರಣೆಗೆ, ರಾಜಕೀಯ ಉದ್ದೇಶದಂಥ ಯಾವುದೋ ಉದ್ದೇಶ ಮಾತ್ರದಿಂದ ಉಪವಾಸ ಮಾಡುವುದು ಶಾಸ್ತ್ರ ನಿರ್ದೇಶನಗಳಲ್ಲಿ ಪ್ರಸ್ತಾಪಿತ ವಲ್ಲ. ಶಾಸ್ತ್ರಗಳು ಆಧ್ಯಾತ್ಮಿಕ ಪ್ರಗತಿಗಾಗಿ ಉಪವಾಸ ಹೇಳುತ್ತವೆ, ಯಾವುದೋ

ರಾಜಕೀಯ ಅಥವಾ ಸಾಮಾಜಿಕ ಉದ್ದೇಶಕ್ಕಲ್ಲ. ಅಂಥ ವ್ರತೋಪವಾಸಗಳನ್ನು ಮಾಡುವವರು ಭಗವದ್ಗೀತೆಯ ಪ್ರಕಾರ ಖಂಡಿತ ಅಸುರರು. ಅವರ ಕಾರ್ಯಗಳು ಶಾಸ್ತ್ರವಿಧಿಗೆ ವಿರುದ್ಧ ಮತ್ತು ಜನಸಾಮಾನ್ಯರಿಗೆ ಅಪ್ರಯೋಜಕ. ವಾಸ್ತವಿಕವಾಗಿ ಅವರು ದಂಭ ಮತ್ತು ಮಿಥ್ಯಾಹಂಕಾರದಿಂದ ಐಹಿಕ ಭೋಗದ ಕಾಮ ಮತ್ತು ರಾಗ ದಿಂದ ಮಾಡುತ್ತಾರೆ. ಅಂಥ ಚಟುವಟಿಕೆಗಳಿಂದ ಯಾವ ಮಹಾ ಭೂತಗಳ ಸಂಯೋಗ ದಿಂದ ದೇಹ ರಚನೆಯಾಗಿದೆಯೋ ಅದು ಕ್ಷೋಭಿತವಾಗುವುದಲ್ಲದೆ, ಆ ದೇಹದಲ್ಲಿರುವ ಸ್ವಯಂ ಪರಮ ದೇವೋತ್ತಮ ಪುರುಷನಿಗೂ ಕ್ಷೋಭೆ. ಯಾವುದೋ ರಾಜಕೀಯ ಉದ್ದೇಶಕ್ಕಾಗಿ ಅಂಥ ಅನಧಿಕೃತ ಉಪವಾಸ ಅಥವಾ ವ್ರತಗಳು ಖಂಡಿತ ಇತರರಿಗೆ ಬಹು ಕ್ಷೋಭಕಾರಕ. ಅವು ವೇದ ಸಾಹಿತ್ಯದಲ್ಲಿ ಪ್ರಸ್ತಾಪಿತವಲ್ಲ. ಈ ವಿಧಾನ ದಿಂದ ತನ್ನ ವೈರಿಯನ್ನು ಅಥವಾ ಇತರ ಪಕ್ಷಕಾರರನ್ನು ತನ್ನ ಇಚ್ಛೆಯನ್ನು ಈಡೇರಿಸುವಂತೆ ಒತ್ತಾಯಿಸಬಹುದುದೆಂದು ಅಸುರನು ಯೋಚಿಸಬಹುದು, ಆದರೆ ಕೆಲವು ಸಲ ಅಂಥ ಉಪವಾಸದಿಂದ ಒಬ್ಬನು ಸತ್ತುಹೋಗುತ್ತಾನೆ. ಈ ಕಾರ್ಯಗಳು ಪರಮ ದೇವೋತ್ತಮ ಪುರುಷನಿಂದ ಅನನುಮೋದಿತ,ಮತ್ತು ಅವುಗಳಲ್ಲಿ ತೊಡಗುವವರು ಅಸುರ ರೆಂದು ಅವನು ಹೇಳುತ್ತಾನೆ. ಅಂಥ ಪ್ರದರ್ಶನಗಳು ಪರಮ ದೇವೋತ್ತಮ ಪುರುಷನಿಗೆ ಮಾಡಿದ ಅವಮಾನಗಳು, ಏಕೆಂದರೆ ಅವುಗಳನ್ನು ವೈದಿಕ ಶಾಸ್ತ್ರ ವಿಧಿ ಉಲ್ಲಂಘನೆ ಯಲ್ಲಿ ಆಚರಿಸಲಾಗುತ್ತದೆ. **ಅಚೇತಸಃ** ಪದವು ಈ ಸಂಬಂಧದಲ್ಲಿ ಮಹತ್ವದ್ದು. ಸಹಜ ಮನೋಸ್ಥಿತಿ ಇರುವವರು ಶಾಸ್ತ್ರ ಆಜ್ಞೆಗಳನ್ನು ಪಾಲಿಸಬೇಕು. ಅಂಥ ಸ್ಥಿತಿಯಲ್ಲಿ ಇಲ್ಲದವರು ಶಾಸ್ತ್ರಗಳನ್ನು ನಿರ್ಲಕ್ಷಿಸುತ್ತಾರೆ ಮತ್ತು ಉಲ್ಲಂಘಿಸುತ್ತಾರೆ ಮತ್ತು ತಮ್ಮದೇ ಆದ ವ್ರತ ತಪಸ್ಸುಗಳನ್ನು ನಿರ್ಮಿಸಿಕೊಳ್ಳುತ್ತಾರೆ. ಹಿಂದಿನ ಅಧ್ಯಾಯದಲ್ಲಿ ವರ್ಣಿಸಿದಂತೆ ಅಸುರರ ಅಂತಿಮ ಗುರಿಯನ್ನು ಸದಾ ನೆನಪಿನಲ್ಲಿಡಬೇಕು. ಭಗವಂತನು ಅವರು ಅಸುರರ ಹೊಟ್ಟೆಯಲ್ಲಿ ಹುಟ್ಟುವಂತೆ ಒತ್ತಾಯಿಸುತ್ತಾನೆ. ಪರಿಣಾಮವಾಗಿ ಅವರು ಪರಮದೇವೋತ್ತಮ ಪುರುಷನೊಡನೆ ತಮ್ಮ ಸಂಬಂಧವನ್ನು ತಿಳಿಯದೆ ಜನ್ಮ ಜನ್ಮಗಳಲ್ಲಿ ಆಸುರೀ ತತ್ತ್ವಾನುಸಾರ ಜೀವನ ಮಾಡುತ್ತಾರೆ. ಆದರೆ, ಒಂದು ವೇಳೆ ಅವರಿಗೆ ವೇದಜ್ಞಾನ ಮಾರ್ಗವನ್ನು ನಿರ್ದೇಶಿಸಬಲ್ಲ ಗುರುಗಳ ಮಾರ್ಗ ದರ್ಶನ ಪಡೆಯುವಷ್ಟು ಅವರು ಭಾಗ್ಯಶಾಲಿಗಳಾಗಿದ್ದರೆ, ಅವರು ಈ ಬಂಧನದಿಂದ ಪಾರಾಗಬಹುದು ಮತ್ತು ಕೊನೆಗೆ ಪರಮ ಗುರಿಯನ್ನು ಹೊಂದಬಹುದು.

**ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ ।**
**ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು ॥ ೭ ॥**

ಆಹಾರಃ—ತಿನ್ನುವುದು, ತು—ಖಂಡಿತವಾಗಿ, ಅಪಿ—ಕೂಡ, ಸರ್ವಸ್ಯ—ಪ್ರತಿ ಯೊಬ್ಬನ, ತ್ರಿ-ವಿಧಃ—ಮೂರು ಬಗೆಯದು, ಭವತಿ—ಆಗಿದೆ, ಪ್ರಿಯಃ—ಪ್ರಿಯ, ಯಜ್ಞಃ—ಯಜ್ಞ, ತಪಃ—ತಪಸ್ಸು, ತಥಾ—ಕೂಡ, ದಾನಮ್—ದಾನ, ತೇಷಾಮ್ —ಅವುಗಳ, ಭೇದಮ್—ಭೇದಗಳನ್ನು, ಇಮಮ್—ಈ, ಶೃಣು—ಕೇಳು.

**ಒಬ್ಬನು ಬಯಸುವ ಆಹಾರವು ಕೂಡ ತ್ರಿವಿಧ ಭೌತಿಕ ಪ್ರಕೃತಿಯ ಗುಣಾನು**

**ಸಾರ ಮೂರು ಬಗೆಯದಾಗಿದೆ: ಯಜ್ಞ, ತಪಸ್ಸು ಮತ್ತು ದಾನದ ವಿಷಯದಲ್ಲೂ ಇದು ನಿಜ. ಈಗ ಅವುಗಳ ಭೇದಗಳನ್ನು ಕೇಳು.**

**ಭಾವಾರ್ಥ :** ಭೌತಿಕ ಪ್ರಕೃತಿ ಗುಣಗಳ ಭಿನ್ನಭಿನ್ನ ಸನ್ನಿವೇಶಗಳ ಪ್ರಕಾರ, ಊಟ ಮತ್ತು ಯಜ್ಞ ತಪಸ್ಸು ಮತ್ತು ದಾನಗಳ ಆಚರಣೆಯಲ್ಲಿ ವ್ಯತ್ಯಾಸಗಳಿವೆ. ಅವು ಎಲ್ಲವೂ ಒಂದೇ ಮಟ್ಟದಲ್ಲಿ ನಡೆಯುವುದಿಲ್ಲ. ಯಾವ ಬಗೆಯ ಆಚರಣೆಗಳು ಯಾವ ಭೌತಿಕ ಪ್ರಕೃತಿ ಗುಣದಲ್ಲಿ ನಡೆಯುತ್ತಿವೆ ಎಂಬುದನ್ನು ವಿಶ್ಲೇಷಣಾತ್ಮಕವಾಗಿ ಅರಿತು ಕೊಳ್ಳಬಲ್ಲವನು ನಿಜವಾಗಿ ಜ್ಞಾನಿ; ಎಲ್ಲ ಬಗೆಯ ಯಜ್ಞ ಆಹಾರ ಅಥವಾ ದಾನವು ಒಂದೇ ಮಟ್ಟದೆಂದು ತಿಳಿಯುವವರು ತಾರತಮ್ಯವನ್ನು ತಿಳಿಯಲಾರರು, ಮತ್ತು ಅವರು ಮೂಢರು. ಒಬ್ಬನು ಇಷ್ಟ ಬಂದದ್ದನ್ನು ಮಾಡಬಹುದು ಮತ್ತು ಸಿದ್ಧಿ ಪಡೆಯ ಬಹುದು ಎಂದು ವಾದಿಸುವ ಧರ್ಮಪ್ರಚಾರಕರಿದ್ದಾರೆ. ಆದರೆ ಈ ಮೂಢ ಮಾರ್ಗ ದರ್ಶಕರು ಶಾಸ್ತ್ರನಿರ್ದೇಶಾನುಸಾರ ವರ್ತಿಸುತ್ತಿಲ್ಲ. ಅವರು ತಮ್ಮದೇ ಆದ ಮಾರ್ಗ ಗಳನ್ನು ನಿರ್ಮಿಸಿ ಜನ ಸಾಮಾನ್ಯರನ್ನು ಮಾರ್ಗಭ್ರಷ್ಟಗೊಳಿಸುತ್ತಾರೆ.

**ಆಯುಃಸತ್ತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ ।**
**ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ತ್ವಿಕಪ್ರಿಯಾಃ ॥ ೮ ॥**

ಆಯುಃ—ಆಯುಷ್ಯ, ಸತ್ತ್ವ—ಅಸ್ತಿತ್ವ, ಬಲ—ಬಲ, ಆರೋಗ್ಯ—ಆರೋಗ್ಯ, ಸುಖ—ಸುಖ, ಪ್ರೀತಿ—ಮತ್ತು ತೃಪ್ತಿ, ವಿವರ್ಧನಾಃ—ವರ್ಧಿಸುವ, ರಸ್ಯಾಃ—ರಸ ರೂಪಿ, ಸ್ನಿಗ್ಧಾಃ—ಸ್ನಿಗ್ಧ, ಸ್ಥಿರಾಃ—ಬಹುಕಾಲ ಇರುವ, ಹೃದ್ಯಾಃ—ಹೃದಯಕ್ಕೆ ತೋಷಕರ, ಆಹಾರಾಃ—ಆಹಾರಗಳು, ಸಾತ್ತ್ವಿಕ—ಸಾತ್ವಿಕ, ಪ್ರಿಯಾಃ—ರುಚಿಕರ.

**ಸಾತ್ವಿಕರಿಗೆ ಪ್ರಿಯವಾದ ಆಹಾರಗಳು ಆಯುಷ್ಯವನ್ನು ವರ್ಧಿಸುತ್ತವೆ, ಒಬ್ಬನ ಅಸ್ತಿತ್ವವನ್ನು ಶುದ್ಧಗೊಳಿಸಿ ಬಲ, ಆರೋಗ್ಯ, ಸುಖ ಮತ್ತು ತೃಪ್ತಿಯನ್ನು ನೀಡುತ್ತವೆ. ಅಂಥ ಆಹಾರಗಳು ರಸರೂಪಿ, ಸ್ನಿಗ್ಧ ಮತ್ತು ಆರೋಗ್ಯಕರ ವಾಗಿರುತ್ತವೆ, ಮತ್ತು ಹೃದಯ ತೋಷಕವಾಗಿರುತ್ತವೆ.**

**ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ ।**
**ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ ॥ ೯ ॥**

ಕಟು—ಕಹಿ, ಆಮ್ಲ—ಹುಳಿ, ಲವಣ—ಉಪ್ಪು, ಅತಿ–ಉಷ್ಣ—ಬಹು ಉಷ್ಣ, ತೀಕ್ಷ್ಣ—ತೀಕ್ಷ್ಣ, ರೂಕ್ಷ—ಒಣಗಿದ, ವಿದಾಹಿನಃ—ಸುಡುತ್ತಿರುವ, ಆಹಾರಃ—ಆಹಾರ ಗಳು, ರಾಜಸಸ್ಯ—ರಾಜಸ ಗುಣದಲ್ಲಿ ಇರುವವನಿಗೆ, ಇಷ್ಟಾಃ—ಇಷ್ಟ, ದುಃಖ—ದುಃಖ ಶೋಕ—ಶೋಕ, ಆಮಯ—ರೋಗ, ಪ್ರದಾಃ—ಕಾರಕ.

**ಅತಿ ಕಹಿ, ಅತಿ ಹುಳಿ, ಉಪ್ಪು, ಉಷ್ಣ, ತೀಕ್ಷ್ಣ, ಶುಷ್ಕ ಮತ್ತು ಬಹು ಬಿಸಿಯಾದ ಆಹಾರಗಳು ರಾಜಸಗುಣಿಗಳಿಗೆ ಪ್ರಿಯ. ಅಂಥ ಆಹಾರಗಳು ದುಃಖ, ಶೋಕ ಮತ್ತು ರೋಗಕಾರಕ.**

**ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್ ।**
**ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಮ್ ॥ ೧೦ ॥**

ಯಾತ-ಯಾಮಮ್—ತಿನ್ನುವುದಕ್ಕೆ ಮೂರುಗಂಟೆ ಮುಂಚೆ ಮಾಡಿದ ಆಹಾರ, ಗತರಸಮ್—ರುಚಿ ಕಳೆದುಕೊಂಡ, ಪೂತಿ—ದುರ್ವಾಸನೆ ಬರುವ, ಪರ್ಯುಷಿತಮ್—ಹಳಸಿದ, ಚ—ಕೂಡ, ಯತ್—ಯಾವುದು, ಉಚ್ಛಿಷ್ಟಮ್—ಇತರರು ತಿಂದುಳಿದ, ಅಪಿ—ಕೂಡ, ಚ—ಮತ್ತು, ಅಮೇಧ್ಯಮ್—ಸ್ಪರ್ಶಯೋಗ್ಯವಲ್ಲದ, ಭೋಜನಮ್ ಭೋಜನವು, ತಾಮಸ—ತಾಮಸಗುಣಿಗೆ, ಪ್ರಿಯಮ್—ಪ್ರಿಯ.

**ತಿನ್ನುವುದಕ್ಕೆ ಮೂರು ಗಂಟೆಗಳ ಮುಂಚೆ ತಯಾರಿಸಿದ ಆಹಾರವು, ರುಚಿ ಕಳೆದುಕೊಂಡ ಹಳಸಿದ ಮತ್ತು ಒಣಗಿಹೋದ ಆಹಾರವು, ಮತ್ತು ಎಂಜಲು ಮತ್ತು ಮುಟ್ಟಬಾರದ ಆಹಾರವು ತಾಮಸ ಗುಣಿಗಳಿಗೆ ಪ್ರಿಯ.**

**ಭಾವಾರ್ಥ :** ಆಯುಷ್ಯವನ್ನು ವರ್ಧಿಸುವುದು, ಮನುಷ್ಯನನ್ನು ಶುದ್ಧಿಗೊಳಿಸುವುದು ಮತ್ತು ದೇಹಕ್ಕೆ ಬಲ ನೀಡುವುದು ಆಹಾರದ ಉದ್ದೇಶ. ಇದು ಅದರ ಏಕಮೇವ ಉದ್ದೇಶ. ಹಿಂದೆ ಮಹಾಚಾರ್ಯರು ಆರೋಗ್ಯಕ್ಕೆ ಅತ್ಯುತ್ತಮವಾದ ಮತ್ತು ಆಯುರ್ವರ್ಧಕ, ಎಂದರೆ ಹಾಲಿನ ಪದಾರ್ಥಗಳು ಸಕ್ಕರೆ, ಅಕ್ಕಿ, ಹಣ್ಣುಗಳು ಮತ್ತು ತರಕಾರಿಗಳಂತಹ ಆಹಾರಗಳನ್ನು ಆಯ್ಕೆಮಾಡಿದರು. ಈ ಆಹಾರಗಳು ಸತ್ವಗುಣಿಗಳಿಗೆ ಬಹು ಪ್ರಿಯವಾದುದು. ಹುರಿದ ಜೋಳ ಮತ್ತು ಕಾಕಂಬಿ, ಇವು ಸ್ವಯಂ ಬಹು ರುಚಿಕರವಲ್ಲದಿದ್ದರೂ ಹಾಲಿನೊಂದಿಗೆ ಅಥವಾ ಇತರ ಆಹಾರಗಳೊಂದಿಗೆ ಮಿಶ್ರ ಮಾಡಿ ರುಚಿಕರಗೊಳಿಸಬಹುದು. ಆಗ ಅವು ಸಾತ್ವಿಕವಾಗುತ್ತವೆ. ಈ ಎಲ್ಲ ಆಹಾರಗಳು ಸ್ವಭಾವತಃ ಶುದ್ಧ. ಅವು ಅಸ್ಪೃಶ್ಯವಾದ ಮಾಂಸ ಮತ್ತು ಮದ್ಯಗಳಂಥ ವಸ್ತುಗಳಿಂದ ತೀರಾ ಭಿನ್ನ. ಎಂಟನೆಯ ಶ್ಲೋಕದಲ್ಲಿ ಹೇಳಿದ ಸ್ನಿಗ್ಧ ಇರುವ ಆಹಾರಗಳು ಪ್ರಾಣಿ ವಧೆಯಿಂದ ಪಡೆದ ಪಶುವಿನ ಕೊಬ್ಬಿಗೆ ಸಂಬಂಧಿಸಿದ್ದಲ್ಲ. ಎಲ್ಲ ಆಹಾರಗಳಲ್ಲಿ ಅತ್ಯಂತ ಶ್ರೇಷ್ಠವಾದ ಹಾಲಿನ ರೂಪದಲ್ಲಿ ಪ್ರಾಣಿ ಕೊಬ್ಬು ಉಂಟು. ಹಾಲು, ಬೆಣ್ಣೆ, ಕೆನೆ ಮತ್ತು ಅಂಥ ಪದಾರ್ಥಗಳು ಅಮಾಯಕ ಪ್ರಾಣಿ ವಧೆಯ ಅವಶ್ಯಕತೆ ಇಲ್ಲದೆಯೇ ಪ್ರಾಣಿ ಕೊಬ್ಬು ನೀಡುತ್ತವೆ. ಕೇವಲ ಪಾಶವೀ ವೃತ್ತಿಯಿಂದ ಪ್ರಾಣಿವಧೆ ನಡೆಯುತ್ತದೆ. ಅಗತ್ಯವಾದ ಕೊಬ್ಬು ಪಡೆಯುವ ನಾಗರಿಕ ವಿಧಾನ ಎಂದರೆ ಹಾಲು. ಪ್ರಾಣಿವಧೆ ಕೀಳು ಮಾನವನ ಮಾರ್ಗ. ಬಟಾಣಿ, ಬೇಳೆ, ಇಡೀ ಗೋಧಿ, ಇತ್ಯಾದಿಗಳಲ್ಲಿ ಸಾಕಷ್ಟು ಪೌಷ್ಟಿಕಾಂಶ ದೊರೆಯುತ್ತದೆ.

ರಾಜಸ ಆಹಾರವು ಕಹಿ, ಅತಿ ಉಷ್ಣ, ಅತಿ ಉಪ್ಪು ಅಥವಾ ಅತಿಯಾಗಿ ಮೆಣಸಿನ ಕಾಯಿ ಮಿಶ್ರಿತವಾಗಿದ್ದು ಜಠರದಲ್ಲಿ ಆಮಾಯಾಂಶವನ್ನು ಕಡಿಮೆಮಾಡಿ ಕ್ಲೇಶಕರವಾಗಿ ರೋಗಕ್ಕೆ ಕಾರಣವಾಗುತ್ತದೆ. ತಮೋಗುಣ ಆಹಾರವು ಅವಶ್ಯವಾಗಿ ತಾಜಾ ಅಲ್ಲದ ಆಹಾರಗಳು. ತಿನ್ನುವುದಕ್ಕಿಂತ ಮೂರು ಗಂಟೆ ಮುಂಚೆ ತಯಾರಿಸಿದ (**ಭಗವತ್ಪ್ರಸಾದ**

ವನ್ನುಳಿದು) ಯಾವುದೇ ಆಹಾರವು ತಾಮಸ ಆಹಾರವೆಂದು ಪರಿಗಣಿತ. ಅವು ಕೆಟ್ಟು ಹೋಗುವುವಾದ್ದರಿಂದ, ಅಂಥ ಪದಾರ್ಥಗಳು ದುರ್ಗಂಧ ನೀಡುತ್ತವೆ. ಅದು ತಾಮಸ ಗುಣಿಗಳಿಗೆ ಹೆಚ್ಚಾಗಿ ಆಕರ್ಷಕ. ಆದರೆ ಸಾತ್ವಿಕರಿಗೆ ಅಸಹ್ಯಕರ.

ಪ್ರಪ್ರಥಮವಾಗಿ ಭಗವಂತನಿಗೆ ಅರ್ಪಿತವಾದ ಅಥವಾ ವಿಶೇಷವಾಗಿ ಗುರುಗಳಂಥ ಸಾಧು ಪುರುಷರಿಂದ ಸೇವಿಸಲ್ಪಟ್ಟ ನೈವೇದ್ಯ ಭಾಗವಾಗಿರುವಾಗ ಮಾತ್ರ ಶೇಷಾಹಾರ ವನ್ನು ಭುಂಜಿಸಬಹುದು. ಅನ್ಯಥಾ ಶೇಷಾನ್ನವು ತಾಮಸವೆಂದು ಪರಿಗಣಿತ ಮತ್ತು ಅದು ಸೋಂಕು ಅಥವಾ ರೋಗವನ್ನು ಹೆಚ್ಚಿಸುತ್ತದೆ. ಅಂಥ ಅಹಾರಗಳು ತಾಮಸರಿಗೆ ಬಹು ರುಚಿಕರವಾಗಿದ್ದರೂ, ಸಾತ್ವಿಕರು ಅದನ್ನು ಇಚ್ಛಿಸುವುದೂ ಇಲ್ಲ ಅಥವಾ ಅದನ್ನು ಮುಟ್ಟುವುದೂ ಇಲ್ಲ. ಪರಮ ದೇವೋತ್ತಮ ಪುರುಷನಿಗೆ ಅರ್ಪಿತ ನೈವೇದ್ಯ ಶೇಷವು ಅತ್ಯುತ್ತಮ ಆಹಾರ. ತಾನು ಭಕ್ತಿಯಿಂದ ನೀಡಿದ ತರಕಾರಿ, ಹಿಟ್ಟು ಮತ್ತು ಹಾಲಿನ ಪದಾರ್ಥಗಳನ್ನು ಸ್ವೀಕರಿಸುವೆನೆಂದು ಭಗವದ್ಗೀತೆಯಲ್ಲಿ ಭಗವಂತನು ಹೇಳುತ್ತಾನೆ. **ಪತ್ರಂ, ಪುಷ್ಪಂ, ಫಲಂ, ತೋಯಮ್.** ಭಕ್ತಿ ಮತ್ತು ಪ್ರೇಮ ಇವು ಪರಮ ದೇವೋತ್ತಮ ಪುರುಷನಿಗೆ ಸ್ವೀಕಾರ ಯೋಗ್ಯವಾದ ಮುಖ್ಯ ವಿಷಯಗಳು, ನಿಜ. ಪ್ರಸಾದವನ್ನು ಕೂಡ ವಿಶಿಷ್ಟ ರೀತಿಯಲ್ಲಿ ತಯಾರಿಸಬೇಕೆಂದು ಹೇಳಿದೆ. ಶಾಸ್ತ್ರ ವಿಧಿ ಪ್ರಕಾರ ತಯಾರಿಸಿದ ಮತ್ತು ಪರಮ ದೇವೋತ್ತಮ ಪುರುಷನಿಗೆ ನಿವೇದಿಸಿದ ಆಹಾರವನ್ನು, ಬಹಳ ಮುಂಚೆಯೇ ತಯಾರಿಸಿದ್ದರೂ ಕೂಡ,ಸ್ವೀಕರಿಸಬಹುದು ಏಕೆಂದರೆ ಅದು ದಿವ್ಯ ಆಹಾರ. ಆದ್ದರಿಂದ ಆಹಾರವನ್ನು ದೋಷರಹಿತ ಮಾಡಲು, ಎಲ್ಲರಿಗೂ ಭೋಜ್ಯ ಮತ್ತು ರುಚಿಕರವಾಗಿ ಮಾಡಲು, ಒಬ್ಬನು ಆಹಾರವನ್ನು ಪರಮ ದೇವೋತ್ತಮ ಪುರುಷನಿಗೆ ಅರ್ಪಿಸಬೇಕು.

**ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದಿಷ್ಟೋ ಯ ಇಜ್ಯತೇ ।**
**ಯಷ್ಟವ್ಯಮೇವೇತಿ ಮನಃ ಸಮಾಧಾಯ ಸ ಸಾತ್ತ್ವಿಕಃ ॥೧೧॥**

ಅಫಲ–ಆಕಾಂಕ್ಷಿಭಿಃ—ಫಲಾಕಾಂಕ್ಷೆ ಇಲ್ಲದವರಿಂದ, ಯಜ್ಞಃ—ಯಜ್ಞವು, ವಿಧಿದಿಷ್ಟಃ—ಶಾಸ್ತ್ರ ನಿರ್ದೇಶನಾನುಸಾರ, ಯಃ—ಯಾವುದು, ಇಜ್ಯತೇ—ಆಚರಿಸಲ್ಪಡುತ್ತದೆ, ಯಷ್ಟವ್ಯಮ್—ಆಚರಿಸಲ್ಪಡಬೇಕು, ಏವ—ಖಂಡಿತವಾಗಿ, ಇತಿ—ಹೀಗೆ, ಸಮಾಧಾಯ—ಸ್ಥಿತಿಗೊಳಿಸಿದ, ಸಃ—ಅದು, ಸಾತ್ತ್ವಿಕಃ—ಸಾತ್ವಿಕ.

**ಯಜ್ಞಗಳಲ್ಲಿ, ಶಾಸ್ತ್ರ ನಿರ್ದೇಶನಾನುಸಾರ, ಕರ್ತವ್ಯವಾಗಿ, ಫಲ ಬಯಸದವರಿಂದ ನೆರವೇರಿಸಲ್ಪಟ್ಟ ಯಜ್ಞವು ಸಾತ್ವಿಕ ಸ್ವಭಾವದ್ದು.**

**ಭಾವಾರ್ಥ :** ಯಾವುದೋ ಉದ್ದೇಶದಿಂದ ಯಜ್ಞ ಆಚರಿಸುವುದು ಸಾಮಾನ್ಯ ಪ್ರವೃತ್ತಿ, ಆದರೆ ಅಂಥ ಯಾವುದೇ ಇಚ್ಛೆ ಇಲ್ಲದೆ ಯಜ್ಞವನ್ನಾಚರಿಸಬೇಕೆಂದು ಇಲ್ಲಿ ಹೇಳಿದೆ. ಅದನ್ನು ಕರ್ತವ್ಯವೆಂದು ಆಚರಿಸಬೇಕು. ಉದಾಹರಣೆಗೆ, ಮಂದಿರಗಳಲ್ಲಿ ಅಥವಾ ಚರ್ಚುಗಳಲ್ಲಿ ನಡೆಯುವ ಕರ್ಮಾಚರಣೆಗಳನ್ನು ತೆಗೆದುಕೊಳ್ಳಿ. ಸಾಮಾನ್ಯವಾಗಿ ಅವುಗಳನ್ನು ಐಹಿಕ ಪ್ರಯೋಜನಕ್ಕಾಗಿ ಆಚರಿಸಲಾಗುತ್ತದೆ, ಅಂದರೆ ಅದು ಸಾತ್ವಿಕ

ಸ್ವಭಾವದ್ದಲ್ಲ. ಒಬ್ಬನು ಮಂದಿರಕ್ಕೋ ಚರ್ಚಿಗೋ ಕರ್ತವ್ಯ ಕರ್ಮವಾಗಿ ಹೋಗಬೇಕು, ಪರಮ ದೇವೋತ್ತಮ ಪುರುಷನಿಗೆ ವಂದಿಸಬೇಕು ಮತ್ತು ಪುಷ್ಪಗಳನ್ನು ಮತ್ತು ತಿನಿಸುಗಳನ್ನು ಅರ್ಪಿಸಬೇಕು. ದೇವರ ಪೂಜೆಗೆಂದೇ ಮಂದಿರಕ್ಕೆ ಹೋಗುವುದು ಅಪ್ರಯೋಜಕ ಎಂದು ಪ್ರತಿಯೊಬ್ಬನೂ ಭಾವಿಸುತ್ತಾನೆ. ಆದರೆ ಅರ್ಥ ಲಾಭ ದೃಷ್ಟಿ ಪೂಜೆ ಮಾಡುವುದು ಶಾಸ್ತ್ರಾಜ್ಞೆಗಳಲ್ಲಿ ಹೇಳಲ್ಪಟ್ಟಿಲ್ಲ. ಒಬ್ಬನು ದೇವರಿಗೆ ನಮಸ್ಕರಿಸ ಲೋಸುಗವೇ ಮಂದಿರಕ್ಕೆ ಹೋಗಬೇಕು. ಅದು ಒಬ್ಬನನ್ನು ಸತ್ತ್ವ ಸ್ವಭಾವದಲ್ಲಿ ಇರಿಸುತ್ತದೆ. ಶಾಸ್ತ್ರಾಜ್ಞೆಗಳನ್ನು ಪಾಲಿಸುವುದು ಮತ್ತು ಪರಮ ದೇವೋತ್ತಮ ಪುರುಷ ನಿಗೆ ವಂದಿಸುವುದು ಪ್ರತಿಯೊಬ್ಬ ನಾಗರಿಕ ಮಾನವನ ಕರ್ತವ್ಯ.

**ಅಭಿಸನ್ಧಾಯ ತು ಫಲಂ ದಮ್ಭಾರ್ಥಮಪಿ ಚೈವ ಯತ್ ।**
**ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಮ್ ॥೧೨॥**

ಅಭಿಸನ್ಧಾಯ—ಬಯಸಿ, ತು—ಆದರೆ, ಫಲಮ್—ಫಲವನ್ನು, ದಮ್ಭ—ದಂಭ, ಅರ್ಥಮ್—ಉದ್ದೇಶಕ್ಕಾಗಿ, ಯತ್—ಯಾವುದು, ಇಜ್ಯತೇ—ಆಚರಿಸಲ್ಪಡುತ್ತದೆ, ಭರತ-ಶ್ರೇಷ್ಠ—ಹೇ ಭರತ ಶ್ರೇಷ್ಠನೇ, ತಮ್—ಆ, ಯಜ್ಞಮ್—ಯಜ್ಞವು, ವಿದ್ಧಿ—ಎಂದು ತಿಳಿ, ರಾಜಸಮ್—ರಾಜಸ ಸ್ವಭಾವದ್ದು.

**ಆದರೆ, ಹೇ ಭರತ ಶ್ರೇಷ್ಠನೇ, ಯಾವುದೋ ಭೌತಿಕ ಪ್ರಯೋಜನಕ್ಕಾಗಿ ಅಥವಾ ದಂಭಕ್ಕಾಗಿ ಆಚರಿಸಿದ ಯಜ್ಞವು ರಾಜಸ ಸ್ವಭಾವದ್ದು ಎಂದು ನೀನು ತಿಳಿಯಬೇಕು.**

**ಭಾವಾರ್ಥ :** ಕೆಲವು ಸಲ ಸ್ವರ್ಗಕ್ಕೆ ಏರಲು ಅಥವಾ ಈ ಜಗತ್ತಿನಲ್ಲಿ ಯಾವುದೋ ಐಹಿಕ ಪ್ರಯೋಜನ ಹೊಂದಲು ಯಜ್ಞಗಳನ್ನು ಅಥವಾ ಕರ್ಮಾಚರಣೆಗಳನ್ನು ಆಚರಿಸ ಲಾಗುತ್ತದೆ. ಅಂಥ ಯಜ್ಞಗಳು ಅಥವಾ ಕರ್ಮಾಚರಣೆಗಳು ರಾಜಸ ಸ್ವಭಾವದವು ಎಂದು ತಿಳಿಯಲ್ಪಡುತ್ತವೆ.

**ವಿಧಿಹೀನಮಸೃಷ್ಟಾನ್ನಂ ಮನ್ತ್ರಹೀನಮದಕ್ಷಿಣಮ್ ।**
**ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥೧೩॥**

ವಿಧಿ-ಹೀನಮ್—ಶಾಸ್ತ್ರ ನಿರ್ದೇಶನವಿಲ್ಲದ, ಅಸೃಷ್ಟ-ಅನ್ನಮ್—ಪ್ರಸಾದ ವಿತರಣೆ ಇಲ್ಲದ, ಮನ್ತ್ರ-ಹೀನಮ್—ವೇದ ಮಂತ್ರ ಪಠನವಿಲ್ಲದ, ಅದಕ್ಷಿಣಮ್—ಪುರೋಹಿತರಿಗೆ ದಕ್ಷಿಣೆ ಇಲ್ಲದ, ಶ್ರದ್ಧಾ—ಶ್ರದ್ಧೆ, ವಿರಹಿತಮ್—ಇಲ್ಲದ, ಯಜ್ಞಮ್—ಯಜ್ಞವು, ತಾಮಸಮ್—ತಾಮಸ ಸ್ವಭಾವದ್ದು, ಪರಿಚಕ್ಷತೇ—ಎಂದು ಪರಿಗಣಿಸಲ್ಪಡಬೇಕು.

**ಶಾಸ್ತ್ರ ನಿರ್ದೇಶನಗಳನ್ನು ಗಮನಿಸದೆ, ಪ್ರಸಾದ ವಿತರಣೆ ಮಾಡದೆ, ವೇದ ಮಂತ್ರಗಳ ಪಠನವಿಲ್ಲದೆ ಮತ್ತು ಪುರೋಹಿತರಿಗೆ ದಕ್ಷಿಣೆ ಕೊಡದೆ ಮತ್ತು ಶ್ರದ್ಧೆ ಇಲ್ಲದೆ ಮಾಡುವ ಯಾವುದೇ ಯಜ್ಞವು ತಾಮಸ ಸ್ವಭಾವದ್ದೆಂದು ತಿಳಿಯಬೇಕು.**

**ಭಾವಾರ್ಥ :** ತಾಮಸ ಸ್ವಭಾವದ ಶ್ರದ್ಧೆಯು ನಿಜವಾಗಿ ಶ್ರದ್ಧೆಯೇ ಅಲ್ಲ. ಕೆಲವು ಸಲ ಜನರು ಶಾಸ್ತ್ರಾಜ್ಞೆಗಳನ್ನು ಉಪೇಕ್ಷಿಸಿ, ಕೇವಲ ಹಣ ಸಂಪಾದನೆಗಾಗಿ ಮತ್ತು ಮನರಂಜನೆಗಾಗಿ ಖರ್ಚುಮಾಡಲು ಯಾವುದೋ ದೇವತೆಯನ್ನು ಆರಾಧಿಸುತ್ತಾರೆ. ಅಂಥ ಧಾರ್ಮಿಕ ಸಮಾರಂಭಗಳು ನಿಜವಾದವುಗಳೆಂದು ಅಂಗೀಕೃತವಲ್ಲ. ಅವು ಎಲ್ಲ ತಾಮಸ ಸ್ವಭಾವದವು ; ಅವು ಆಸುರೀ ಮನೋಭಾವವನ್ನು ಹುಟ್ಟಿಸುತ್ತವೆ ಮತ್ತು ಮಾನವ ಸಮಾಜಕ್ಕೆ ಪ್ರಯೋಜಕವಲ್ಲ.

**ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್ ।**
**ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥೧೪॥**

ದೇವ—ಪರಮ ಪ್ರಭುವಿನ, ದ್ವಿಜ—ಬ್ರಾಹ್ಮಣರ, ಗುರು—ಗುರುಗಳ, ಪ್ರಾಜ್ಞ—ಪೂಜ್ಯರ, ಪೂಜನಮ್—ಪೂಜೆಯು, ಶೌಚಮ್—ಶುಚಿತ್ವವು, ಆರ್ಜವಮ್—ಸರಳತೆಯು, ಬ್ರಹ್ಮಚರ್ಯಮ್—ಬ್ರಹ್ಮಚರ್ಯವು, ಅಹಿಂಸಾ—ಅಹಿಂಸೆಯು, ಚ—ಕೂಡ, ಶಾರೀರಮ್—ಶರೀರ ಸಂಬಂಧಿ, ತಪಃ—ತಪಸ್ಸು, ಉಚ್ಯತೇ—ಎಂದು ಹೇಳಿದೆ.

**ಪರಮ ಪ್ರಭುವಿನ, ಬ್ರಾಹ್ಮಣರ, ಗುರುಗಳ, ತಂದೆ ತಾಯಿಗಳಂಥ ಹಿರಿಯರ ಆರಾಧನೆ ಮತ್ತು ಶೌಚ, ಸರಳತೆ, ಬ್ರಹ್ಮಚರ್ಯ ಮತ್ತು ಅಹಿಂಸೆ— ಇವೆಲ್ಲವು ದೇಹ ಸಂಬಂಧಿತ ತಪಸ್ಸು.**

**ಭಾವಾರ್ಥ :** ಪರಮ ದೇವೋತ್ತಮನು ಇಲ್ಲಿ ನಾನಾ ಬಗೆಯ ವ್ರತ, ತಪಸ್ಸುಗಳನ್ನು ವಿವರಿಸುತ್ತಾನೆ. ಮೊದಲು ಶರೀರದಿಂದ ಆಚರಿಸುವ ವ್ರತ, ತಪಸ್ಸುಗಳನ್ನು ವಿವರಿಸುತ್ತಾನೆ. ಒಬ್ಬನು ದೇವರು ಅಥವಾ ದೇವತೆಗಳಿಗೆ, ಸಿದ್ಧ, ಅರ್ಹ, ಬ್ರಾಹ್ಮಣರಿಗೆ ಮತ್ತು ಗುರುಗಳಿಗೆ ಮತ್ತು ತಂದೆ ತಾಯಿಗಳಂಥ ಹಿರಿಯರಿಗೆ ಅಥವಾ ವೇದಜ್ಞರಾದವರಿಗೆ ವಂದಿಸಬೇಕು, ಅಥವಾ ವಂದಿಸಲು ಕಲಿಯಬೇಕು. ಅವರಿಗೆ ತಕ್ಕ ಗೌರವ ನೀಡಬೇಕು. ಒಬ್ಬನು ಅಂತರಂಗ ಬಹಿರಂಗ ಶುಚಿಯನ್ನು ಆಚರಿಸಬೇಕು ಮತ್ತು ನಡತೆಯಲ್ಲಿ ಸರಳನಾಗಿರಲು ಕಲಿಯಬೇಕು. ಶಾಸ್ತ್ರಾಜ್ಞೆಗಳ ಮನ್ನಣೆ ಇಲ್ಲದ ಯಾವುದನ್ನೂ ಮಾಡಕೂಡದು. ವಿವಾಹಬಾಹಿರ ಲೈಂಗಿಕ ರತಿ ಹೊಂದಕೂಡದು, ಏಕೆಂದರೆ ಶಾಸ್ತ್ರದಲ್ಲಿ ವೈವಾಹಿಕ ಲೈಂಗಿಕ ಸಂಪರ್ಕಕ್ಕೆ ಮಾತ್ರ ಅನುಮತಿ ಇದೆ, ಅನ್ಯಥಾ ಇಲ್ಲ. ಇದು ಬ್ರಹ್ಮಚರ್ಯ ಎಂದು ಕರೆದಿದೆ. ಶರೀರದ ಮಟ್ಟಿಗೆ ಇವು ವ್ರತ ತಪಸ್ಸುಗಳು.

**ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।**
**ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥ ೧೫ ॥**

ಅನುದ್ವೇಗ-ಕರಮ್—ಉದ್ವೇಗಕರವಲ್ಲದ, ವಾಕ್ಯಮ್—ಮಾತುಗಳು, ಸತ್ಯಮ್—ಸತ್ಯವಾದ, ಪ್ರಿಯ—ಪ್ರಿಯವಾದ, ಹಿತಮ್—ಹಿತಕರವಾದ, ಚ—ಕೂಡ, ಯತ್—ಯಾವುದು, ಸ್ವಾಧ್ಯಾಯ—ವೇದಾಧ್ಯಯನ, ಅಭ್ಯಸನಮ್—ಅಭ್ಯಾಸ, ಚ—ಕೂಡ, ಏವ—ಖಂಡಿತವಾಗಿ, ವಾಕ್-ಮಯಮ್—ಮಾತಿನ, ತಪಃ—ತಪಸ್ಸು, ಉಚ್ಯತೇ—ಎಂದು ಹೇಳಿದೆ.

**ಸತ್ಯವಚನ, ತುಷ್ಟಿಕರ, ಪ್ರಯೋಜಕ ಮತ್ತು ಇತರರಿಗೆ ಉದ್ವೇಗಕರವಲ್ಲದ ರೀತಿಯಲ್ಲಿ ಮಾತನಾಡುವುದು ಮತ್ತು ತಪ್ಪದೇ ವೇದ ಸಾಹಿತ್ಯ ಪಠನ ಇವು ವಾಕ್ ತಪಸ್ಸು.**

**ಭಾವಾರ್ಥ :** ಒಬ್ಬನು ಇತರರ ಮನಸ್ಸನ್ನು ಉದ್ವೇಗಗೊಳಿಸುವ ರೀತಿಯಲ್ಲಿ ಮಾತನಾಡಕೂಡದು. ಒಬ್ಬ ಶಿಕ್ಷಕನು ಮಾತನಾಡುವಾಗ, ಅವನು ತನ್ನ ಶಿಷ್ಯರ ಬೋಧೆಗಾಗಿ ಸತ್ಯವನ್ನು ನುಡಿಯಬಹುದು ನಿಜ, ಆದರೆ ಅಂಥ ಶಿಕ್ಷಕನು ತನ್ನ ಶಿಷ್ಯರಲ್ಲದವರ ಮನಸ್ಸು ಉದ್ವೇಗಗೊಳ್ಳುವುದಾದರೆ, ಅಂಥವರೊಂದಿಗೆ ಮಾತನ್ನಾಡಕೂಡದು. ಇದು ಮಾತುಗಳ ಮಟ್ಟಿಗೆ ತಪಸ್ಸು. ಇದಲ್ಲದೆ ಒಬ್ಬನು ಅರ್ಥಹೀನ ಮಾತುಗಳನ್ನಾಡಕೂಡದು. ಆಧ್ಯಾತ್ಮಿಕ ಗೋಷ್ಠಿಗಳಲ್ಲಿ ಮಾತನಾಡುವ ಪ್ರಕ್ರಿಯೆಯು ಶಾಸ್ತ್ರಮನ್ನಿತವಾದ ಯಾವುದನ್ನೇ ನುಡಿಯುವುದು. ತಾನು ಹೇಳಿದ್ದನ್ನು ಸಮರ್ಥಿಸಿಕೊಳ್ಳಲು ಒಬ್ಬನು ಕೂಡಲೇ ಶಾಸ್ತ್ರ ಪ್ರಮಾಣವನ್ನು ಉಲ್ಲೇಖಿಸಬೇಕು, ಜೊತೆಗೆ, ಅಂಥ ಸಂಭಾಷಣೆಯು ಬಹು ಶ್ರವಣಾನಂದಕರವಾಗಿರಬೇಕು. ಅಂಥ ಸಂಭಾಷಣೆಯಿಂದ ಒಬ್ಬನು ಅತ್ಯುನ್ನತ ಪ್ರಯೋಜನ ಪಡೆಯಬಹುದು ಮತ್ತು ಮಾನವ ಸಮಾಜವನ್ನು ಉನ್ನತಿಸಬಹುದು. ವೇದ ಸಾಹಿತ್ಯದ ಅಪಾರ ಸಂಗ್ರಹವಿದೆ, ಒಬ್ಬನು ಅದನ್ನು ಅಧ್ಯಯನ ಮಾಡಬೇಕು. ಇದು ವಾಕ್ ತಪಸ್ಸು ಎಂದು ಕರೆದಿದೆ.

**ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ।**
**ಭಾವಸಂಶುದ್ಧಿರಿತ್ಯೇತತ್ ತಪೋ ಮಾನಸಮುಚ್ಯತೇ** ॥ ೧೬ ॥

ಮನಃ-ಪ್ರಸಾದಃ—ಮನಸ್ಸಿನ ತೃಪ್ತಿ, ಸೌಮ್ಯತ್ವಮ್—ಇತರರ ಬಗ್ಗೆ ವಂಚನೆ ಇಲ್ಲದಿರುವುದು, ಮೌನಮ್—ಮೌನ, ಆತ್ಮ—ಆತ್ಮನ, ವಿನಿಗ್ರಹಃ—ನಿಗ್ರಹ, ಭಾವ—ಒಬ್ಬನ ಸ್ವಭಾವದ, ಸಂಶುದ್ಧಿಃ—ಸಂಶುದ್ಧಿಯು, ಇತಿ—ಹೀಗೆ, ಏತತ್—ಇದು, ತಪಃ—ತಪಸ್ಸು, ಮಾನಸಮ್—ಮನಸ್ಸಿನ, ಉಚ್ಯತೇ—ಎಂದು ಹೇಳಿದೆ.

**ತೃಪ್ತಿ, ಸರಳತೆ, ಮೌನ, ಆತ್ಮನಿಗ್ರಹ ಮತ್ತು ಒಬ್ಬನ ಅಸ್ತಿತ್ವ ಶುದ್ಧಿ, ಮನಸ್ಸಿನ ತಪಸ್ಸುಗಳು.**

**ಭಾವಾರ್ಥ :** ಮನಸ್ಸನ್ನು ವ್ರತಸ್ಥಗೊಳಿಸಲು ಅದನ್ನು ಇಂದ್ರಿಯ ತೋಷಣದಿಂದ ಅಸಂಗಗೊಳಿಸಬೇಕು. ಅದು ಸದಾ ಇತರರ ಒಳಿತನ್ನು ಮಾಡುವಂತೆ ಯೋಚಿಸುವ ಹಾಗೆ ಮನಸ್ಸಿಗೆ ತರಬೇತಿ ನೀಡಬೇಕು. ಮನಸ್ಸಿಗೆ ಅತ್ಯುತ್ತಮ ತರಬೇತಿ ಎಂದರೆ ವಿಚಾರ ಮೌನತೆ, ಒಬ್ಬನು ಕೃಷ್ಣಪ್ರಜ್ಞೆಯಿಂದ ವಿಚಲಿತನಾಗಕೂಡದು ಮತ್ತು ಸದಾ ಇಂದ್ರಿಯ ತೋಷಣವನ್ನು ತಪ್ಪಿಸಬೇಕು, ಕೃಷ್ಣಪ್ರಜ್ಞೆಯಾಗುವುದು ಒಬ್ಬನ ಸ್ವಭಾವವನ್ನು ಶುದ್ಧಗೊಳಿಸುವುದಾಗಿದೆ. ಇಂದ್ರಿಯ ತೋಷಣ ವಿಚಾರಗಳಿಂದ ಮನಸ್ಸನ್ನು ದೂರ ಮಾಡುವ ಮೂಲಕವೇ ಮನಸ್ಸನ್ನು ತುಷ್ಟಿಗೊಳಿಸಬಹುದು. ಇಂದ್ರಿಯ ಭೋಗವನ್ನು ಹೆಚ್ಚು ಹೆಚ್ಚು ಯೋಚಿಸಿದಂತೆ ಮನಸ್ಸು ಹೆಚ್ಚು ಹೆಚ್ಚು ಅತೃಪ್ತವಾಗುವುದು. ಈಗಿನ ಕಾಲದಲ್ಲಿ ಇಂದ್ರಿಯ ತೋಷಣಕ್ಕಾಗಿ ನಾವು ಅನವಶ್ಯಕವಾಗಿ ಮನಸ್ಸನ್ನು

ನಾನಾ ರೀತಿಯಲ್ಲಿ ತೊಡಗಿಸುತ್ತೇವೆ, ಹೀಗಾಗಿ ಮನಸ್ಸು ತುಷ್ಟವಾಗುವ ಸಂಭವವಿಲ್ಲ. ಅತ್ಯುತ್ತಮ ಮಾರ್ಗವೆಂದರೆ ಮನಸ್ಸನ್ನು ವೇದ ಸಾಹಿತ್ಯದ ಕಡೆಗೆ ತಿರುಗಿಸಬೇಕು, ಆ ಸಾಹಿತ್ಯವು ಪುರಾಣ ಮಹಾಭಾರತಗಳಲ್ಲಿ ಇದ್ದಂತೆ ತೃಪ್ತಿಕರ ಕಥೆಗಳಿಂದ ತುಂಬಿದೆ. ಒಬ್ಬನು ಈ ಜ್ಞಾನದಿಂದ ಪ್ರಯೋಜನ ಪಡೆಯಬಹುದು ಮತ್ತು ಶುದ್ಧನಾಗಬಹುದು. ಮನಸ್ಸು ವಂಚನರಹಿತವಾಗಿರಬೇಕು, ಮತ್ತು ಒಬ್ಬನು ಸಕಲ ಕಲ್ಯಾಣವನ್ನು ಯೋಚಿಸಬೇಕು. ಮೌನ ಎಂದರೆ ಒಬ್ಬನು ಸದಾ ಆತ್ಮ ಸಾಕ್ಷಾತ್ಕಾರದ ಚಿಂತನೆಯಲ್ಲಿರಬೇಕು. ಕೃಷ್ಣಪ್ರಜ್ಞೆಯು ಈ ಅರ್ಥದಲ್ಲಿ ಪೂರ್ಣ ಮೌನವನ್ನು ಆಚರಿಸುತ್ತಾನೆ. ಮನೋನಿಗ್ರಹ ಎಂದರೆ ಮನಸ್ಸನ್ನು ಇಂದ್ರಿಯ ಭೋಗದಿಂದ ಅಸಂಗಗೊಳಿಸಬೇಕು. ಒಬ್ಬನು ತನ್ನ ವ್ಯವಹಾರದಲ್ಲಿ ಋಜು ಮಾರ್ಗಿಯಾಗಿರಬೇಕು ಮತ್ತು ಆ ಮೂಲಕ ತನ್ನ ಅಸ್ತಿತ್ವವನ್ನು ಶುದ್ಧೀಕರಿಸಬೇಕು. ಈ ಎಲ್ಲ ಗುಣಗಳು ಒಟ್ಟಾಗಿ ಮಾನಸಿಕ ಚಟುವಟಿಕೆಗಳ ತಪಸ್ಸು ಆಗಿವೆ.

**ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ ತ್ರಿವಿಧಂ ನರೈಃ ।**
**ಅಫಲಾಕಾಂಕ್ಷಿಭಿರ್ಯುಕ್ತೈಃ ಸಾತ್ತ್ವಿಕಂ ಪರಿಚಕ್ಷತೇ ॥ ೧೭ ॥**

ಶ್ರದ್ಧಯಾ—ಶ್ರದ್ಧೆಯಿಂದ, ಪರಯಾ—ದಿವ್ಯ, ತಪ್ತಮ್—ನಿರ್ವಹಿಸಿದ, ತಪಃ—ತಪಸ್ಸು, ತತ್—ಆ, ತ್ರಿ-ವಿಧಮ್—ಮೂರು ಪ್ರಕಾರದ, ನರೈಃ—ನರರಿಂದ, ಅಫಲ-ಆಕಾಂಕ್ಷಿಭಿಃ—ಫಲಾಪೇಕ್ಷೆ ಇಲ್ಲದವರು, ಯುಕ್ತೈಃ—ನಿರತರು, ಸಾತ್ತ್ವಿಕಮ್—ಸಾತ್ತ್ವಿಕ, ಪರಿಚಕ್ಷತೇ—ಎಂದು ಕರೆದಿದೆ.

**ಐಹಿಕ ಫಲಗಳನ್ನು ಬಯಸದೆ, ದಿವ್ಯ ಶ್ರದ್ಧೆಯಿಂದ, ಆದರೆ ಪರಮನಿಗಾಗಿ ಮಾತ್ರ ತೊಡಗಿರುವ ಈ ಮೂರು ಬಗೆಯ ತಪಸ್ಸನ್ನಾಚರಿಸುವುದು ಸಾತ್ತ್ವಿಕ ತಪಸ್ಸು ಎಂದು ಕರೆದಿದೆ.**

**ಸತ್ಕಾರಮಾನಪೂಜಾರ್ಥಂ ತಪೋ ದಮ್ಭೇನ ಚೈವ ಯತ್ ।**
**ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಮ್ ॥ ೧೮ ॥**

ಸತ್-ಕಾರ—ಸತ್ಕಾರ, ಮಾನ—ಮಾನ, ಪೂಜಾ—ಪೂಜೆ, ಅರ್ಥಮ್—ಸಲುವಾಗಿ, ತಪಃ—ತಪಸ್ಸು, ದಮ್ಭೇನ—ದಂಭದಿಂದ, ಚ—ಕೂಡ, ಏವ—ಖಂಡಿತವಾಗಿ, ಯತ್—ಯಾವುದು, ಕ್ರಿಯತೇ—ಮಾಡಲ್ಪಡುತ್ತದೆ. ತತ್—ಅದು, ಇಹ—ಈ ಜಗತ್ತಿನಲ್ಲಿ, ಪ್ರೋಕ್ತಮ್—ಹೇಳಿದೆ, ರಾಜಸಮ್—ರಾಜಸ ಸ್ವಭಾವದ್ದು, ಚಲಮ್—ಚಂಚಲ, ಅಧ್ರುವಮ್—ಅಸ್ಥಿರ.

**ದಂಭದಿಂದ ಮತ್ತು ಮಾನ, ಗೌರವ ಮತ್ತು ಪೂಜಾರ್ಥವಾಗಿ ಮಾಡಿದ ತಪಸ್ಸು ರಾಜಸವೆಂದು ಹೇಳಿದೆ. ಅದು ಸ್ಥಿರವೂ ಅಲ್ಲ ಶಾಶ್ವತವೂ ಅಲ್ಲ.**

**ಭಾವಾರ್ಥ :** ಕೆಲವು ಸಲ ವ್ರತ ತಪಸ್ಸುಗಳನ್ನು ಜನರನ್ನು ಆಕರ್ಷಿಸಿ ಇತರರಿಂದ ಮಾನ, ಗೌರವ ಮತ್ತು ಪೂಜೆಯನ್ನು ಪಡೆಯಲು ಆಚರಿಸಲಾಗುತ್ತದೆ. ತಾಮಸ

ಸ್ವಭಾವದ ಜನರು ತಮ್ಮ ಅಧೀನರಿಂದ ಪೂಜೆಗೊಳ್ಳಲು ಮತ್ತು ಅವರು ತಮ್ಮ ಕಾಲು ತೊಳೆದು ಸಂಪತ್ತನ್ನು ಅರ್ಪಿಸುವಂತೆ ಏರ್ಪಾಡು ಮಾಡಿಕೊಳ್ಳುತ್ತಾರೆ. ತಪಸ್ಸುಗಳನ್ನು ಆಚರಿಸಿ ಇಂಥ ಕೃತಕ ಏರ್ಪಾಡುಗಳನ್ನು ಮಾಡಿಕೊಳ್ಳುವವರು ತಪೋಗುಣಗಳಿಂದು ತಿಳಿಯಬೇಕು. ಫಲಗಳು ಅನಿತ್ಯ, ಅವು ಕೆಲಕಾಲ ಮುಂದುವರಿಯಬಹುದು. ಆದರೆ ಅವು ಶಾಶ್ವತವಲ್ಲ.

**ಮೂಢಗ್ರಾಹೇಣಾತ್ಮನೋ ಯತ್ ಪೀಡಯಾ ಕ್ರಿಯತೇ ತಪಃ ।**
**ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸಮುದಾಹೃತಮ್ ॥ ೧೯ ॥**

ಮೂಢ—ಮೂಢ, ಗ್ರಾಹೇಣ—ಪ್ರಯತ್ನದಿಂದ, ಆತ್ಮನಃ—ಸ್ವಯಂ ತನ್ನ, ಯತ್—ಯಾವುದು. ಪೀಡಯಾ—ಪೀಡೆಯಿಂದ, ಕ್ರಿಯತೇ—ಮಾಡಲ್ಪಡುತ್ತದೆ, ತಪಃ—ತಪಸ್ಸು, ಪರಸ್ಯ—ಇತರರಿಗೆ, ಉತ್ಸಾದನ-ಅರ್ಥಮ್—ಹಾನಿ ಉಂಟುಮಾಡುವುದಕ್ಕಾಗಿ, ವಾ—ಅಥವಾ, ತತ್—ಅದು, ತಾಮಸಮ್—ತಾಮಸ ಸ್ವಭಾವದ್ದು, ಉದಾಹೃತಮ್—ಎಂದು ಹೇಳಿದೆ.

**ಮೂಢತನದಿಂದ, ಆತ್ಮಪೀಡೆಯೊಡನೆ ಅಥವಾ ಇತರರನ್ನು ನಾಶಮಾಡಲು ಅಥವಾ ಅವರಿಗೆ ಹಾನಿ ಮಾಡಲು ಮಾಡುವ ತಪಸ್ಸು ತಾಮಸ ಸ್ವಭಾವದ್ದೆಂದು ಹೇಳಿದೆ.**

**ಭಾವಾರ್ಥ :** ಅಮರನಾಗಲು ಮತ್ತು ದೇವತೆಗಳನ್ನು ಸಂಹಾರ ಮಾಡಲು ಉದ್ದೇಶಿಸಿ ವ್ರತಗಳನ್ನಾಚರಿಸಿದ ಹಿರಣ್ಯಕಶಿಪುವಿನಂಥ ಅಸುರರಿಂದ ಕೈಕೊಳ್ಳಲಾದ ಮೂಢ ತಪಸ್ಸುಗಳ ದೃಷ್ಟಾಂತಗಳಿವೆ. ಅವನು ಅಂಥ ವರಗಳಿಗಾಗಿ ಬ್ರಹ್ಮನನ್ನು ಪ್ರಾರ್ಥಿಸಿದನು, ಆದರೆ ಕೊನೆಗೆ ಅವನು ಪರಮ ದೇವೋತ್ತಮ ಪುರುಷನಿಂದ ಕೊಲ್ಲಲ್ಪಟ್ಟನು. ಅಸಂಭವವಾದ ಯಾವುದೊಂದರ ಸಲುವಾಗಿ ತಪಸ್ಸುಗಳನ್ನಾಚರಿಸುವುದು ಖಂಡಿತ ತಮೋಗುಣದ್ದು.

**ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।**
**ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಮ್ ॥ ೨೦ ॥**

ದಾತವ್ಯಮ್—ದಾನ ಯೋಗ್ಯ, ಇತಿ—ಹೀಗೆ, ಯತ್—ಯಾವುದು, ದಾನಮ್—ದಾನವನ್ನು, ದೀಯತೇ—ಕೊಡಲಾಗುತ್ತದೆ, ಅನುಪಕಾರಿಣೇ—ಪ್ರತ್ಯುಪಕಾರ ಗಮನಿಸದೆ, ದೇಶೇ—ವಿಶಿಷ್ಟ ಸ್ಥಳದಲ್ಲಿ, ಕಾಲೇ—ಯೋಗ್ಯ ಸ್ಥಳದಲ್ಲಿ, ಚ—ಕೂಡ, ಪಾತ್ರೇ—ಪಾತ್ರನಾದವನಿಗೆ, ಚ—ಮತ್ತು, ತತ್—ಆ, ದಾನಮ್—ದಾನವನ್ನು, ಸಾತ್ತ್ವಿಕಮ್—ಸಾತ್ತ್ವಿಕವೆಂದು, ಸ್ಮೃತಮ್—ತಿಳಿಯಲಾಗಿದೆ,

**ಪ್ರತಿಫಲ ಬಯಸದೆ, ಕರ್ತವ್ಯ ದೃಷ್ಟಿಯಿಂದ, ಯೋಗ್ಯ ಕಾಲ ಮತ್ತು ದೇಶದಲ್ಲಿ ಸತ್ಪಾತ್ರನಿಗೆ ನೀಡಿದ ದಾನವು ಸಾತ್ವಿಕವೆಂದು ಪರಿಗಣಿತ.**

**ಭಾವಾರ್ಥ :** ಅಧ್ಯಾತ್ಮ ಚಟುವಟಿಕೆಗಳಲ್ಲಿ ತೊಡಗಿದವನಿಗೆ ದಾನ ನೀಡಬೇಕೆಂದು ವೇದ ಸಾಹಿತ್ಯದಲ್ಲಿ ಹೇಳಿದೆ. ವಿವೇಚನೆ ಇಲ್ಲದೆ ದಾನ ಕೊಡುವುದು ಹೇಳಲ್ಪಟ್ಟಿಲ್ಲ. ಅಧ್ಯಾತ್ಮ ಸಿದ್ಧಿಯು ಸದಾ ಅದರ ಉದ್ದೇಶ. ಆದ್ದರಿಂದ ದಾನವನ್ನು ಕ್ಷೇತ್ರಗಳಲ್ಲಿ ಮತ್ತು ಚಂದ್ರ ಅಥವಾ ಸೂರ್ಯ ಗ್ರಹಣ ಕಾಲಗಳಲ್ಲಿ ಅಥವಾ ಮಾಸಾಂತ್ಯದಲ್ಲಿ ಯೋಗ್ಯ ಬ್ರಾಹ್ಮಣನಿಗೆ ಅಥವಾ ವೈಷ್ಣವನಿಗೆ (ಭಕ್ತ) ಅಥವಾ ಮಂದಿರಗಳಿಗೆ ಕೊಡಬೇಕೆಂದು ಹೇಳಿದೆ. ಅಂಥ ದಾನಗಳನ್ನು ಪ್ರತ್ಯುಪಕಾರ ಬಯಸದೆ ನೀಡಬೇಕು. ಕೆಲವು ಸಲ ಸಹಾನುಭೂತಿಯಿಂದ ಬಡವರಿಗೆ ದಾನ ಕೊಡಲಾಗುತ್ತದೆ, ಆದರೆ ಆ ಬಡವನು ದಾನಪಾತ್ರನಲ್ಲದಿದ್ದರೆ, ಅದರಿಂದ ಆಧ್ಯಾತ್ಮಿಕ ಪ್ರಗತಿ ಇಲ್ಲ. ಎಂದರೆ. ವಿವೇಚನಾರಹಿತ ದಾನವು ವೇದ ಸಾಹಿತ್ಯದಲ್ಲಿ ಹೇಳಲ್ಪಟ್ಟಿಲ್ಲ.

**ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ ।**
**ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ ಸ್ಮೃತಮ್ ॥ ೨೧ ॥**

ಯತ್—ಯಾವುದು, ತು—ಆದರೆ, ಪ್ರತಿ–ಉಪಕಾರ–ಅರ್ಥಮ್—ಯಾವುದೋ ಪ್ರತಿಫಲದ ಸಲುವಾಗಿ, ಫಲಮ್—ಫಲವನ್ನು, ಉದ್ದಿಶ್ಯ—ಬಯಸಿ, ವಾ–ಅಥವಾ, ಪುನಃ—ಮತ್ತೆ, ದೀಯತೇ—ಕೊಡಲ್ಪಡುವ ಚ—ಕೂಡ, ಪರಿಕ್ಲಿಷ್ಟಮ್—ಗೊಣಗುತ್ತ, ತತ್—ಆ, ದಾನಮ್—ದಾನವು, ರಾಜಸಮ್—ರಾಜಸಗುಣದ್ದು, ಸ್ಮೃತಮ್—ಎಂದು ತಿಳಿದಿದೆ.

**ಆದರೆ ಫಲಾಪೇಕ್ಷೆಯಿಂದ, ಅಥವಾ ಕಾಮ್ಯಕರ್ಮ ಇಚ್ಛೆಯಿಂದ ಅಥವಾ ಗೊಣಗುತ್ತ ಆಚರಿಸಿದ ದಾನವು ರಜೋಗುಣದಲ್ಲಿನ ದಾನ ಎಂದು ಹೇಳಿದೆ.**

**ಭಾವಾರ್ಥ :** ದಾನವು ಕೆಲವು ಸಲ ಸ್ವರ್ಗಲೋಕ ಉನ್ನತಿಗಾಗಿ ಮತ್ತು ಕೆಲವು ಸಲ ಬಹು ಶ್ರಮವಹಿಸಿ ಹಾಗೂ ಆಮೇಲ, "ನಾನು ಈ ರೀತಿಯಲ್ಲಿ ಇಷ್ಟೇಕೇ ವೆಚ್ಚ ಮಾಡಿದೆ ? " ಎಂದು ಪಶ್ಚಾತ್ತಾಪ ಪಡುತ್ತ ನೀಡಲಾಗುತ್ತದೆ. ಮತ್ತೆ ಕಲವು ಸಲ ವರಿಷ್ಠರ ಕೋರಿಕೆಯ ಮೇರೆಗೆ ದಾಕ್ಷಿಣ್ಯದಿಂದ ಕೂಡ ದಾನ ನೀಡಲಾಗುತ್ತದೆ. ಈ ಬಗೆಯ ದಾನಗಳು ರಾಜಸ ಸ್ವಭಾವದ ದಾನಗಳು ಎಂದು ಹೇಳಿದೆ.

ಅನೇಕ ದಾನ ದತ್ತಿ ಪ್ರತಿಷ್ಠಾನಗಳಿವೆ. ಅವು ಇಂದ್ರಿಯ ತೋಷಣೆ ನಡೆಯುವ ಸಂಸ್ಥೆಗಳಿಗೆ ಕೊಡಿಗೆಗಳನ್ನು ನೀಡುತ್ತವೆ. ಅಂಥ ದಾನಗಳು ವೇದಶಾಸ್ತ್ರಗಳಲ್ಲಿ ಹೇಳಲ್ಪಟ್ಟಿಲ್ಲ. ಸಾತ್ವಿಕ ಸ್ವಭಾವದ ದಾನವು ಮಾತ್ರ ಹೇಳಲ್ಪಟ್ಟಿದೆ.

**ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ ।**
**ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಮ್ ॥ ೨೨ ॥**

ಅದೇಶ—ಅಪವಿತ್ರ ಸ್ಥಳದಲ್ಲಿ, ಕಾಲೇ—ಅಪವಿತ್ರ ಕಾಲದಲ್ಲಿ, ಯತ್—ಯಾವ, ದಾನಮ್—ದಾನವು, ಅಪಾತ್ರೇಭ್ಯಃ—ಅಪಾತ್ರರಿಗೆ, ಚ–ಕೂಡ, ದೀಯತೇ—ಕೊಡಲ್ಪಡುತ್ತದೆ, ಅಸತ್-ಕೃತಮ್–ಗೌರವರಹಿತವಾಗಿ, ಅವಜ್ಞಾತಮ್—ಉಚಿತ

ಗಮನವಿಲ್ಲದೆ, ತತ್—ಅದು, ತಾಮಸಮ್—ತಾಮಸ ಸ್ವಭಾವದ್ದು, ಉದಾಹೃತಮ್—ಎಂದು ಹೇಳಿದೆ.

**ಅಪವಿತ್ರ ಸ್ಥಳದಲ್ಲಿ, ಅಶುಭಕಾಲದಲ್ಲಿ, ಅಪಾತ್ರರಿಗೆ ಅಥವಾ ಯೋಗ್ಯ ಗಮನ ಮತ್ತು ಗೌರವವಿಲ್ಲದೆ ನೀಡುವ ದಾನವು ತಾಮಗುಣದ್ದೆಂದು ಹೇಳಿದೆ.**

**ಭಾವಾರ್ಥ** : ಸುರಾಪಾನ ದ್ಯೂತಕ್ಕಾಗಿ ನೀಡುವ ಕೊಡುಗೆಗಳಿಗೆ ಇಲ್ಲಿ ಪ್ರೋತ್ಸಾಹವಿಲ್ಲ. ಅಂಥ ಕೊಡುಗೆಗಳು ತಾಮಸ ಸ್ವಭಾವದವು, ಅಂಥ ದಾನ ಅಪ್ರಯೋಜಕ; ಬದಲಾಗಿ ಅವರಿಂದ ಪಾಪಿಷ್ಠರಿಗೆ ಉತ್ತೇಜನ ದೊರೆಯುತ್ತದೆ. ಅದೇ ಪ್ರಕಾರ, ಒಬ್ಬನು ಯೋಗ್ಯ ವ್ಯಕ್ತಿಗೆ, ಗಮನ ಗೌರವವಿಲ್ಲದೆ ದಾನ ನೀಡಿದರೆ, ಅಂಥ ದಾನವು ಕೂಡ ತಾಮಸ ಗುಣದ್ದೆಂದು ಹೇಳಿದೆ.

**ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ ।**
**ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ ॥ ೨೩ ॥**

ಓಂ—ಪರಮನ ಸೂಚಕ, ತತ್—ಅದು, ಸತ್—ಶಾಶ್ವತ, ಇತಿ—ಹೀಗೆ, ನಿರ್ದೇಶಃ—ನಿರ್ದೇಶನ, ಬ್ರಹ್ಮಣಃ—ಪರಮನ, ತ್ರಿ-ವಿಧಃ—ತ್ರಿವಿಧ, ಸ್ಮೃತಃ—ಪರಿಗಣಿತ, ಬ್ರಾಹ್ಮಣಾಃ—ಬ್ರಾಹ್ಮಣರು, ತೇನ—ಅದರಿಂದ, ವೇದಾಃ—ವೇದ ಸಾಹಿತ್ಯ, ಚ—ಕೂಡ, ಯಜ್ಞಾಃ—ಯಜ್ಞಗಳು, ಚ—ಕೂಡ ವಿಹಿತಾಃ—ವಿನಿಯೋಜಿತ, ಪುರಾ—ಹಿಂದೆ.

**ಸೃಷ್ಟಿಯ ಆದಿಯಿಂದಲೇ ಓಂ ತತ್ ಸತ್ ಎಂಬ ಮೂರು ಪದಗಳು ಪರಮ ಪರತತ್ತ್ವವನ್ನು ಸೂಚಿಸಲು ಉಪಯೋಗಿಸಲ್ಪಟ್ಟಿದ್ದವು. ವೇದಮಂತ್ರಗಳನ್ನು ಪಠಿಸುವಾಗ ಮತ್ತು ಪರಮನ ತುಷ್ಟಿಗಾಗಿ ಯಜ್ಞಗಳನ್ನು ಮಾಡುವಾಗ ಈ ಮೂರು ಸಾಂಕೇತಿಕ ಅಕ್ಷರಗಳು ಬ್ರಾಹ್ಮಣರಿಂದ ಉಪಯೋಗಿಸಲ್ಪಡುತ್ತಿದ್ದವು.**

**ಭಾವಾರ್ಥ** : ತಪಸ್ಸು, ಯಜ್ಞ, ದಾನ ಮತ್ತು ಅನ್ನ ಇವು ಮೂರು ಶ್ರೇಣಿಗಳಲ್ಲಿ ವಿಭಜಿತ ಎಂದು ವಿವರಿಸಿದೆ. ಎಂದರೆ ಸಾತ್ವಿಕ, ರಾಜಸ ಮತ್ತು ತಾಮಸ. ಇದರೆ ಅವು ಪ್ರಥಮ, ದ್ವಿತೀಯ ಅಥವಾ ತೃತೀಯ ಯಾವುದೇ ಆಗಿರಲಿ, ಅವು ಎಲ್ಲ ಭೌತಿಕ ಪ್ರಕೃತಿಯ ಗುಣಗಳಿಂದ ಕಲುಷಿತವಾಗಿ ಬದ್ಧ. ಅವು ಪರಮನಿಗೆ–**ಓಂ ತತ್ ಸತ್**, ನಿತ್ಯನಾದ ಪರಮದೇವೋತ್ತಮ ಪುರುಷನಿಗೆ ಉದ್ದೇಶಿತವಾದಾಗ, ಆಧ್ಯಾತ್ಮಿಕ ಉನ್ನತಿಗೆ ಸಾಧನವಾಗಿರುತ್ತವೆ. ಶಾಸ್ತ್ರಾಜ್ಞೆಗಳಲ್ಲಿ ಅಂಥ ಉದ್ದೇಶವು ಸೂಚಿತ. **ಓಂ ತತ್ ಸತ್** ಈ ಮೂರು ಪದಗಳು ವಿಶೇಷವಾಗಿ ಪರತತ್ತ್ವ ಪರಮ ದೇವೋತ್ತಮ ಪುರುಷನನ್ನು ಸೂಚಿಸುತ್ತವೆ. ವೇದ ಮಂತ್ರಗಳಲ್ಲಿ **ಓಂ** ಪದವು ಸದಾ ಇದೆ.

ಶಾಸ್ತ್ರ ನಿಯಂತ್ರಣಗಳನ್ನು ಅನುಸರಿಸದೆ ಕರ್ಮ ಮಾಡುವವನು ಪರತತ್ತ್ವವನ್ನು ಹೊಂದುವುದಿಲ್ಲ. ಅವನು ಅನಿತ್ಯ ಫಲ ಪಡೆಯುತ್ತಾನೆಯೇ ಹೊರತು, ಜೀವನದ ಅಂತಿಮ ಗುರಿಯನ್ನಲ್ಲ. ತಾತ್ಪರ್ಯವೆಂದರೆ ದಾನ, ಯಜ್ಞ ಮತ್ತು ತಪಸ್ಸುಗಳನ್ನು

ಸತ್ತ್ವಗುಣದಲ್ಲಿ ಆಚರಿಸಬೇಕು. ರಾಜಸ ಅಥವಾ ತಾಮಸ ಗುಣದಲ್ಲಿ ಆಚರಿಸಿದರೆ ಅವು ಗುಣದಲ್ಲಿ ಖಂಡಿತ ಕನಿಷ್ಠ. **ಓಂ ತತ್ ಸತ್** ಈ ಮೂರುಪದಗಳು ಪರಮ ಪ್ರಭು ಪುಣ್ಯ ನಾಮದೊಂದಿಗೆ ಉಚ್ಚರಿಸಲಾಗುತ್ತವೆ. ಉದಾಹರಣೆಗೆ **ಓಂ ತದ್ ವಿಷ್ಣೋಃ** ವೇದ, ಮಂತ್ರ ಅಥವಾ ಪರಮ ಪ್ರಭುವಿನ ಪುಣ್ಯನಾಮವು ಉಚ್ಚರಿಸಿದಾಗಲ್ಲೆಲ್ಲಾ ಓಂ ಸೇರಿಸಲಾಗುತ್ತದೆ. ಇದು ವೇದ ಸಾಹಿತ್ಯದ ನಿರ್ದೇಶನ. ಈ ಮೂರು ಪದಗಳು ವೇದ ಮಂತ್ರಗಳಿಂದ ತೆಗೆದುಕೊಳ್ಳಲ್ಪಟ್ಟಿವೆ. **ಓಂ ಇತಿ ಏತದ್ ಬ್ರಹ್ಮಣೋ ನೇದಿಷ್ಟಂನಾಮ** (ಋಗ್-ವೇದ) ಪ್ರಥಮ ಗುರಿಯನ್ನು ಸೂಚಿಸುತ್ತದೆ. ಆಮೇಲೆ **ತತ್ ತ್ವಮ್ ಅಸಿ** (ಛಾಂದೋಗ್ಯ ಉಪನಿಷದ್ 6. 8. 7) ಎರಡನೆಯ ಗುರಿಯನ್ನು ಸೂಚಿಸುತ್ತದೆ. ಮತ್ತು **ಸದ್ ಏವ ಸೌಮ್ಯ** (ಛಾಂದೋಗ್ಯ ಉಪನಿಷದ್ 6. 2. 1) ಮೂರನೆಯ ಗುರಿಯನ್ನು ಸೂಚಿಸುತ್ತಿವೆ. ಒಟ್ಟು ಸೇರಿ ಅವು **ಓಂ ತತ್ ಸತ್** ಆಗುತ್ತವೆ. ಹಿಂದೆ ಪ್ರಥಮ ಸೃಷ್ಟ ಜೀವಿ ಬ್ರಹ್ಮನು ಯಜ್ಞಗಳನ್ನಾಚರಿಸಿದಾಗ, ಈ ಮೂರು ಪದಗಳಿಂದ ಪರಮದೇವೋತ್ತಮ ಪುರುಷನನ್ನು ಸೂಚಿಸಿದನು. ಆದ್ದರಿಂದ ಅದೇ ನಿಯಮವು ಗುರು ಪರಂಪರಾಗತವಾಗಿ ಸದಾ ಅನುಸ್ಕೃತ. ಆದ್ದರಿಂದ ಈ ಮಂತ್ರವು ವಿಶೇಷ ಮಹತ್ವ ಹೊಂದಿದೆ. ಆದ್ದರಿಂದ ಮಾಡುವ ಯಾವುದೇ ಕರ್ಮವು ಓಂ **ತತ್ ಸತ್**ಗಾಗಿ, ಅಥವಾ ಪರಮ ದೇವೋತ್ತಮ ಪುರುಷನಿಗಾಗಿ ಮಾಡಬೇಕೆಂದು ಭಗವದ್ಗೀತೆಯು ಹೇಳುತ್ತದೆ. ಒಬ್ಬನು ಈ ಮೂರು ಪದಗಳ ಸಹಿತವಾಗಿ ತಪಸ್ಸು, ದಾನ ಮತ್ತು ಯಜ್ಞವನ್ನು ಆಚರಿಸಿದಾಗ ಅವನು ಕೃಷ್ಣ ಪ್ರಜ್ಞೆಯಲ್ಲಿ ಕರ್ಮ ಮಾಡುತ್ತಾನೆ. ಕೃಷ್ಣಪ್ರಜ್ಞೆಯು ದೇವತ್ವಕ್ಕೆ ಮರಳಿ ಧಾಮಕ್ಕೆ ಹಿಂದಿರುಗುವಂತೆ ಮಾಡುವ ದಿವ್ಯ ಚಟುವಟಿಕೆಗಳ ವೈಜ್ಞಾನಿಕ ನಿರ್ವಹಣೆ, ಈ ದಿವ್ಯ ರೀತಿಯಲ್ಲಿ ಕರ್ಮ ಮಾಡಿದರೆ ಶಕ್ತಿಯ ನಷ್ಟವಿಲ್ಲ.

**ತಸ್ಮಾದ್ ಓಂ ಇತ್ಯುದಾಹೃತ್ಯ ಯಜ್ಞದಾನತಪಃಕ್ರಿಯಾಃ ।**
**ಪ್ರವರ್ತನ್ತೇ ವಿಧಾನೋಕ್ತಾಃ ಸತತಂ ಬ್ರಹ್ಮವಾದಿನಾಮ್ ॥ ೨೪ ॥**

ತಸ್ಮಾತ್—ಆದ್ದರಿಂದ, ಓಂ—ಓಂ ನಿಂದ ಆರಂಭಿಸಿ, ಇತಿ—ಹೀಗೆ, ಉದಾಹೃತ್ಯ—ಸೂಚಿಸುತ್ತ, ಯಜ್ಞಃ—ಯಜ್ಞದ, ದಾನ—ದಾನ, ತಪಃ—ಮತ್ತು ತಪಸ್ಸು, ಕ್ರಿಯಾಃ—ಕ್ರಿಯೆಗಳು, ಪ್ರವರ್ತನ್ತೇ—ಪ್ರಾರಂಭಿಸಲ್ಪಡುತ್ತವೆ, ವಿಧಾನ-ಉಕ್ತಾಃ—ಶಾಸ್ತ್ರನಿಯಂತ್ರಣಾನುಸಾರ, ಸತತಮ್—ಸದಾ, ಬ್ರಹ್ಮ-ವಾದಿನಾಮ್—ಬ್ರಹ್ಮವಾದಿಗಳಿಂದ.

**ಆದ್ದರಿಂದ ಪರಮನ ಪ್ರಾಪ್ತಿಗಾಗಿ ಶಾಸ್ತ್ರನಿಯಮಾನುಸಾರ ಯಜ್ಞ, ದಾನ ಮತ್ತು ತಪಸ್ಸುಗಳ ಆಚರಣೆಯನ್ನು ಕೈಕೊಳ್ಳುವ ಬ್ರಹ್ಮ ವಾದಿಗಳು ಸದಾ ಓಂ ನಿಂದ ಪ್ರಾರಂಭಿಸುತ್ತಾರೆ.**

**ಭಾವಾರ್ಥ : ಓಂ ತದ್ ವಿಷ್ಣೋಃ ಪರಮಂ ಪದಮ್** (ಋಗ್ವೇದ 1.22.20). ವಿಷ್ಣುವಿನ ಪಾದ ಕಮಲಗಳು, ಪರಮ ಭಕ್ತಿಯುತ ವೇದಿಕೆ, ಪ್ರತಿಯೊಂದನ್ನು ಪರಮ

ದೇವೋತ್ತಮ ಪುರುಷನ ಪರವಾಗಿ ಆಚರಿಸುವುದು ಸಕಲ ಕರ್ಮಗಳ ಸಿದ್ಧಿಯನ್ನು ಖಚಿತಗೊಳಿಸುತ್ತದೆ.

**ತದಿತ್ಯನಭಿಸನ್ಧಾಯ ಫಲಂ ಯಜ್ಞತಪಃಕ್ರಿಯಾಃ ।**
**ದಾನಕ್ರಿಯಾಶ್ಚ ವಿವಿಧಾಃ ಕ್ರಿಯನ್ತೇ ಮೋಕ್ಷಕಾಂಕ್ಷಿಭಿಃ ॥ ೨೫ ॥**

ತತ್—ಅದು, ಇತಿ—ಹೀಗೆ, ಅನಭಿಸನ್ಧಾಯ—ಅಪೇಕ್ಷಿಸದೆ, ಫಲಮ್—ಕಾಮ್ಯ ಫಲವನ್ನು, ಯಜ್ಞ—ಯಜ್ಞದ. ತಪಃ—ಮತ್ತು ತಪಸ್ಸಿನ, ಕ್ರಿಯಾಃ—ಚಟುವಟಿಕೆಗಳು, ದಾನ—ದಾನದ, ಕ್ರಿಯಾಃ—ಚಟುವಟಿಕೆಗಳು, ಚ—ಕೂಡ, ವಿವಿಧಾಃ—ವಿವಿಧ, ಕ್ರಿಯನ್ತೇ—ಮಾಡಲ್ಪಡುತ್ತವೆ, ಮೋಕ್ಷ-ಕಾಂಕ್ಷಿಭಿಃ—ವಾಸ್ತವಿಕ ಮೋಕ್ಷಾಪೇಕ್ಷಿಗಳಿಂದ.

**ಕಾಮ್ಯ ಫಲಗಳನ್ನು ಬಯಸದೆ, ಒಬ್ಬನು "ತತ್" ಪದದೊಂದಿಗೆ ವಿವಿಧ ಪ್ರಕಾರದ ಯಜ್ಞ, ತಪಸ್ಸು ಮತ್ತು ದಾನಗಳನ್ನು ಆಚರಿಸಬೇಕು. ಭೌತಿಕ ಬಂಧನದಿಂದ ಮುಕ್ತನಾಗುವುದೇ ಅಂಥ ದಿವ್ಯ ಚಟುವಟಿಕೆಗಳ ಉದ್ದೇಶ.**

**ಭಾವಾರ್ಥ :** ಅಧ್ಯಾತ್ಮ ಸ್ಥಾನಕ್ಕೆ ಉನ್ನತಿಸಲು ಒಬ್ಬನು ಯಾವುದೇ ಭೌತಿಕ ಲಾಭ ದೃಷ್ಟಿಯಿಂದ ಕರ್ಮ ಮಾಡಕೂಡದು. ದೇವತ್ವಕ್ಕೆ ಮರಳಿ ಧಾಮಕ್ಕೆ ಹಿಂದಿರುಗುವ, ಅಧ್ಯಾತ್ಮ ಸಾಮ್ರಾಜ್ಯಕ್ಕೆ ವರ್ಗಾಯಿಸಲ್ಪಡುವ ಅಂತಿಮ ಧ್ಯೇಯದಿಂದ ಕರ್ಮಗಳನ್ನಾಚರಿಸಬೇಕು.

**ಸದ್ ಭಾವೇ ಸಾಧುಭಾವೇ ಚ ಸದಿತ್ಯೇತತ್ ಪ್ರಯುಜ್ಯತೇ ।**
**ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ॥ ೨೬ ॥**
**ಯಜ್ಞೇ ತಪಸಿ ದಾನೇ ಚ ಸ್ಥಿತಿಃ ಸದಿತಿ ಚೋಚ್ಯತೇ ।**
**ಕರ್ಮ ಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ ॥ ೨೭ ॥**

ಸತ್‌ಭಾವೇ—ಪರಮನ ಸ್ವಭಾವದಲ್ಲಿ, ಸಾಧು-ಭಾವೇ—ಭಕ್ತನ ಸ್ವಭಾವದಲ್ಲಿ, ಚ—ಕೂಡ, ಸತ್—ಸತ್ ಶಬ್ದವು, ಇತಿ—ಹೀಗೆ, ಏತತ್—ಇದು, ಪ್ರಯುಜ್ಯತೇ—ಪ್ರಯೋಗಿಸಲ್ಪಟ್ಟಿದೆ, ಪ್ರಶಸ್ತೇ—ಅಧಿಕೃತವಾಗಿ, ಕರ್ಮಣಿ—ಚಟುವಟಿಕೆಗಳಲ್ಲಿ, ತಥಾ—ಕೂಡ, ಸತ್-ಶಬ್ದಃ—ಸತ್ ಶಬ್ದವು, ಪಾರ್ಥ—ಹೇ ಪೃಥಾ ಪುತ್ರನೇ, ಯುಜ್ಯತೇ—ಉಪಯೋಗಿಸಲ್ಪಟ್ಟಿದೆ, ಯಜ್ಞೇ—ಯಜ್ಞದಲ್ಲಿ, ತಪಸಿ—ತಪಸ್ಸಿನಲ್ಲಿ, ದಾನೇ—ದಾನದಲ್ಲಿ, ಚ—ಕೂಡ, ಸ್ಥಿತಿಃ—ಸನ್ನಿವೇಶ, ಸತ್—ಪರಮ, ಇತಿ—ಹೀಗೆ, ಚ—ಮತ್ತು, ಉಚ್ಯತೇ—ಉಚ್ಚರಿಸಲ್ಪಡುತ್ತದೆ, ಕರ್ಮ—ಕರ್ಮ, ಚ—ಕೂಡ, ಏವ—ಖಂಡಿತವಾಗಿ, ತತ್—ಅದಕ್ಕಾಗಿ, ಅರ್ಥೀಯಮ್—ಉದ್ದಿಷ್ಟ, ಸತ್—ಪರಮ, ಇತಿ—ಹೀಗೆ ,ಏವ—ಖಂಡಿತವಾಗಿ, ಅಭಿಧೀಯತೇ—ಸೂಚಿತವಾಗಿದೆ.

**ಪರತತ್ತ್ವವು ಭಕ್ತಿಯುತ ಯಜ್ಞದ ಉದ್ದೇಶ, ಮತ್ತು ಅದು ಸತ್ ಶಬ್ದದಿಂದ ಸೂಚಿತ. ಹೇ ಪೃಥಾ ಪುತ್ರನೇ, ಪರಮಪ್ರಕೃತಿಗೆ ತಕ್ಕ ಎಲ್ಲ ಯಜ್ಞ, ತಪಸ್ಸು**

**ಮತ್ತು ದಾನ ಕರ್ಮಗಳು, ಪರಮ ಪುರುಷನ ತುಷ್ಟಿಗಾಗಿ ಆಚರಿಸಲ್ಪಡುವುದರಿಂದ ಅಂಥ ಯಜ್ಞ ಮಾಡುವವನನ್ನೂ ಸತ್ ಎಂದು ಕರೆದಿದೆ.**

**ಭಾವಾರ್ಥ : ಪ್ರಶಸ್ತೇ ಕರ್ಮಣಿ,** ಅಥವಾ "ವಿಧಿತ ಕರ್ತವ್ಯಗಳು," ಎಂಬ ಪದಗಳು, ಗರ್ಭಧಾರಣೆಯ ಕಾಲದಿಂದ ಜೀವನದ ಕೊನೆಯವರೆಗಿನ ಸಂಸ್ಕಾರ ವಿಧಾನಗಳಾಗಿರುವ ವೇದ ಸಾಹಿತ್ಯದಲ್ಲಿ ವಿಧಿತ ಅನೇಕ ಕರ್ಮಗಳಿವೆ ಎಂಬುದನ್ನು ಸೂಚಿಸುತ್ತವೆ. ಜೀವಿಯ ಅಂತಿಮ ಮೋಕ್ಷಕ್ಕಾಗಿ ಅಂಥ ಶುದ್ಧ ಪ್ರಕ್ರಿಯೆಗಳು ಅನುಸರಿಸಲ್ಪಡುತ್ತವೆ. ಅಂಥ ಎಲ್ಲ ಚಟುವಟಿಕೆಗಳಲ್ಲಿ ಒಬ್ಬನು **ಓಂ ತತ್ ಸತ್** ಶಬ್ದೋಚ್ಚಾರವನ್ನು ಮಾಡಬೇಕೆಂದು ಹೇಳಿದೆ. **ಸದ್-ಭಾವೇ** ಮತ್ತು **ಸಾಧು-ಭಾವೇ** ಪದಗಳು ದಿವ್ಯ ಸನ್ನಿವೇಶವನ್ನು ಸೂಚಿಸುತ್ತವೆ. ಕೃಷ್ಣಪ್ರಜ್ಞಾ ಕಾರ್ಯವು **ಸತ್ತ್ವ** ಎಂದು ಕರೆದಿದೆ, ಮತ್ತು ಕೃಷ್ಣಪ್ರಜ್ಞಾ ಚಟುವಟಿಕೆಗಳ ಪೂರ್ಣ ಪ್ರಜ್ಞಾವಂತನನ್ನು **ಸಾಧು** ಎಂದು ಕರೆದಿದೆ. ಶ್ರೀಮದ್ ಭಾಗವತದಲ್ಲಿ (3.25.25) ದಿವ್ಯ ವಿಷಯವು ಭಕ್ತರ ಸಂಗದಲ್ಲಿ ಸ್ಪಷ್ಟವಾಗುತ್ತದೆ ಎಂದು ಹೇಳಿದೆ. ಇಲ್ಲಿ ಉಪಯೋಗಿಸಿದ ಶಬ್ದಗಳು **ಸತಾಂ ಪ್ರಸಂಗಾತ್.** 'ಸತ್ಸಂಗ ರಹಿತವಾಗಿ ಒಬ್ಬನು ದಿವ್ಯ ಜ್ಞಾನ ಹೊಂದಲಾರನು. ಒಬ್ಬನಿಗೆ ದೀಕ್ಷೆ ನೀಡುವಾಗ ಅಥವಾ ಉಪನಯನ ಮಾಡುವಾಗ ಒಬ್ಬನು **ಓಂ ತತ್ ಸತ್** ಶಬ್ದೋಚ್ಚಾರ ಮಾಡುತ್ತಾನೆ. ಅದೇ ಪ್ರಕಾರ, ಯಜ್ಞಾಚರಣೆಯ ಎಲ್ಲ ಪ್ರಕಾರಗಳಲ್ಲಿ ಧ್ಯೇಯವು ಪರಮವಾದ **ಓಂ ತತ್ ಸತ್. ತದ್-ಅರ್ಥೀಯಮ್** ಎಂದರೆ, ಪರಮನನ್ನು ಪ್ರತಿನಿಧಿಸುವ ಯಾವುದಕ್ಕಾದರೂ ಸೇವೆ ಸಲ್ಲಿಸುವುದು ಎಂದು ಅರ್ಥ; ಅಂದರೆ, ಅಡಿಗೆ ಮಾಡುವುದು, ಭಗವಂತನ ಮಂದಿರದಲ್ಲಿ ಸಹಾಯ ಸಲ್ಲಿಸುವುದು ಅಥವಾ ಭಗವಂತನ ಮಹಿಮೆ ಪ್ರಸಾರಕ್ಕಾಗಿ ಯಾವುದೇ ಕಾರ್ಯ ಮಾಡುವುದು ಸೇರಿದೆ. **ಓಂ ತತ್ ಸತ್** ಎಂಬ ಈ ಪರಮ ಪದಗಳನ್ನು, ಹೀಗೆ ಎಲ್ಲಾ ಚಟುವಟಿಕೆಗಳನ್ನು ಪರಿಪೂರ್ಣಗೊಳಿಸಲು ಮತ್ತು ಪ್ರತಿಯೊಂದನ್ನು ಸಂಪೂರ್ಣಗೊಳಿಸಲು ಅನೇಕ ರೀತಿಯಲ್ಲಿ ಉಪಯೋಗಿಸಿದೆ.

**ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ ।**
**ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯ ನೋ ಇಹ ॥ ೨೮ ॥**

ಅಶ್ರದ್ಧಯಾ—ಶ್ರದ್ಧೆ ಇಲ್ಲದೆ, ಹುತಮ್—ಯಜ್ಞದಲ್ಲಿ ಸಮರ್ಪಿಸಿದ್ದು, ದತ್ತಮ್—ನೀಡಿದ, ತಪಃ—ತಪಸ್ಸು, ತಪ್ತಮ್—ನಿರ್ವಹಿಸಿದ, ಕೃತಮ್—ಆಚರಿಸಿದ, ಚ—ಕೂಡ, ಯತ್—ಯಾವುದು, ಅಸತ್—ಮಿಥ್ಯಾ, ಇತಿ—ಹೀಗೆ, ಉಚ್ಯತೇ—ಎಂದು ಹೇಳಿದೆ, ಪಾರ್ಥ—ಹೇ ಪೃಥಾ ಪುತ್ರನೇ, ನ—ಎಂದಿಗೂ ಇಲ್ಲ, ಚ—ಕೂಡ, ತತ್—ಅದು, ಪ್ರೇತ್ಯ—ಮರಣಾನಂತರ, ನ ಉ—ಅಥವಾ, ಇಹ—ಈ ಜನ್ಮದಲ್ಲಿ.

**ಹೇ ಪೃಥಾ ಪುತ್ರನೇ, ಪರಮನಲ್ಲಿ ಶ್ರದ್ಧೆ ಇಲ್ಲದೆ ಯಜ್ಞ, ದಾನ ಅಥವಾ ತಪೋ ರೂಪದಲ್ಲಿ ಮಾಡಿದ ಯಾವುದೇ ಕಾರ್ಯವು ಅಶಾಶ್ವತ. ಅದು 'ಅಸತ್' ಎಂದು ಕರೆದಿದೆ ಮತ್ತು ಅದು ಈ ಜನ್ಮದಲ್ಲಿ ಮತ್ತು ಮುಂದೆ ಉಭಯತ್ರದಲ್ಲಿ ನಿರುಪಯುಕ್ತ.**

**ಭಾವಾರ್ಥ :** ದಿವ್ಯ ಉದ್ದೇಶವಿಲ್ಲದೆ ಮಾಡಿದ ಯಾವುದೇ ಕಾರ್ಯವು ಅದು ಯಜ್ಞವಿರಲಿ, ದಾನವಿರಲಿ ಅಥವಾ ತಪಸ್ಸಿರಲಿ—ನಿರುಪಯುಕ್ತ. ಆದ್ದರಿಂದ ಅಂಥ ಚಟುವಟಿಕೆಗಳು **ಹೇಯ** ಎಂದು ಈ ಶ್ಲೋಕದಲ್ಲಿ ಸಾರಿದೆ. ಪ್ರತಿಯೊಂದನ್ನು ಪರಮನಿಗಾಗಿ ಕೃಷ್ಣಪ್ರಜ್ಞೆಯಲ್ಲಿ ಮಾಡಬೇಕು. ಅಂಥ ಶ್ರದ್ಧೆಯಿಲ್ಲದೆ ಮತ್ತು ಯೋಗ್ಯ ಮಾರ್ಗದರ್ಶನವಿಲ್ಲದೆ ಎಂದೂ ಯಾವ ಫಲವೂ ದೊರೆಯುವುದಿಲ್ಲ. ಎಲ್ಲ ವೇದ ಶಾಸ್ತ್ರಗಳಲ್ಲಿಯೂ ಪರಮನಲ್ಲಿ ಶ್ರದ್ಧೆ ಇಡಬೇಕೆಂದು ಹೇಳಿದೆ. ಸಕಲ ವೈದಿಕ ಆದೇಶಾನುಸಾರ, ಕೃಷ್ಣ ಜ್ಞಾನವು ಅಂತಿಮ ಧ್ಯೇಯ. ಈ ತತ್ತ್ವವನ್ನು ಅನುಸರಿಸದೆ ಯಾರೂ ಯಶಸ್ಸು ಗಳಿಸಲಾರರು. ಆದ್ದರಿಂದಲೇ, ಅತ್ಯುತ್ತಮ ಮಾರ್ಗವೆಂದರೆ ಪ್ರಾರಂಭದಿಂದಲೇ ಸದ್ಗುರುಗಳ ಮಾರ್ಗದರ್ಶನದಲ್ಲಿ ಕೃಷ್ಣಪ್ರಜ್ಞೆಯಲ್ಲಿ ಕಾರ್ಯ ಮಾಡಬೇಕು. ಪ್ರತಿಯೊಂದನ್ನು ಸಫಲಗೊಳಿಸಲು ಅದೊಂದೇ ಮಾರ್ಗ.

ಬದ್ಧ ಸ್ಥಿತಿಯಲ್ಲಿ, ಜನರು ದೇವತೆಗಳನ್ನು, ಭೂತಗಳನ್ನು, ಅಥವಾ ಕುಬೇರನಂಥ ಯಕ್ಷರನ್ನು ಆರಾಧಿಸಲು ಆಕರ್ಷಿತರು. ಸತ್ತ್ವಗುಣವು ರಾಜಸ ಮತ್ತು ತಾಮಸ ಗುಣಗಳಿಗಿಂತ ಉತ್ತಮ, ಆದರೆ ನೇರವಾಗಿ ಕೃಷ್ಣಪ್ರಜ್ಞೆಯನ್ನು ಗ್ರಹಿಸುವವನು ಭೌತಿಕ ಪ್ರಕೃತಿಯ ಎಲ್ಲ ಮೂರು ಗುಣಗಳಿಗೆ ಅತೀತನು. ಕ್ರಮೇಣ ಉನ್ನತಿಯ ಪ್ರಕ್ರಿಯೆ ಇದ್ದರೂ, ಒಬ್ಬನು ಶುದ್ಧ ಭಕ್ತರ ಸಂಗದಿಂದ, ನೇರವಾಗಿ ಕೃಷ್ಣಪ್ರಜ್ಞೆಯನ್ನು ಗ್ರಹಿಸಿದರೆ ಅದು ಅತ್ಯುತ್ತಮ ಮಾರ್ಗ ಮತ್ತು ಅದನ್ನೇ ಈ ಅಧ್ಯಾಯದಲ್ಲಿ ಹೇಳಿದೆ. ಈ ರೀತಿಯಲ್ಲಿ ಯಶಸ್ಸು ಗಳಿಸಲು, ಒಬ್ಬನು ಯೋಗ್ಯ ಗುರುಗಳನ್ನು ಮೊದಲು ಹುಡುಕಿಕೊಳ್ಳಬೇಕು, ಮತ್ತು ಅವರಿಂದ ನಿರ್ದೇಶಿತವಾದ ಶಿಕ್ಷಣ ಪಡೆಯಬೇಕು. ಆಗ ಒಬ್ಬನು ಪರಮನಲ್ಲಿ ಶ್ರದ್ಧೆ ಹೊಂದಬಹುದು. ಆ ಶ್ರದ್ಧೆಯು, ಕಾಲಕ್ರಮದಲ್ಲಿ ಪಕ್ವವಾದಾಗ ಅದು ಭಗವತ್ ಪ್ರೇಮ ಎಂದು ಕರೆದಿದೆ. ಈ ಪ್ರೇಮವು ಜೀವನದ ಅಂತಿಮ ಗುರಿ. ಆದ್ದರಿಂದ ಒಬ್ಬನು ನೇರವಾಗಿ ಕೃಷ್ಣಪ್ರಜ್ಞೆಯನ್ನು ಅಂಗೀಕರಿಸಬೇಕು. ಅದೇ ಈ ಹದಿನೇಳನೆಯ ಅಧ್ಯಾಯದ ಸಂದೇಶ.

**ಇಲ್ಲಿಗೆ ಶ್ರದ್ಧೆಯ ವಿಭಾಗಗಳು ವಿಷಯದಲ್ಲಿ, ಶ್ರೀಮದ್ ಭಗವದ್ಗೀತೆಯ ಹದಿನೇಳನೆಯ ಅಧ್ಯಾಯದ, ಭಕ್ತಿವೇದಾಂತ ತಾತ್ಪರ್ಯವು ಮುಗಿಯಿತು.**



## ಅಧ್ಯಾಯ ಹದಿನೆಂಟು



# ಸಿದ್ಧಾಂತ–ವೈರಾಗ್ಯದ ಪರಿಪೂರ್ಣತೆ

**ಅರ್ಜುನ ಉವಾಚ**

**ಸಂನ್ಯಾಸಸ್ಯ ಮಹಾಬಾಹೋ ತತ್ತ್ವಮಿಚ್ಛಾಮಿ ವೇದಿತುಮ್ ।**
**ತ್ಯಾಗಸ್ಯ ಚ ಹೃಷೀಕೇಶ ಪೃಥಕ್ಕೇಶಿನಿಷೂದನ ॥೧॥**

ಅರ್ಜುನ ಉವಾಚ—ಅರ್ಜುನನು ನುಡಿದನು, ಸಂನ್ಯಾಸಸ್ಯ—ಸನ್ಯಾಸದ, ಮಹಾಬಾಹೋ—ಹೇ ಮಹಾಬಾಹುವೇ, ತತ್ತ್ವಮ್—ತತ್ತ್ವವನ್ನು, ಇಚ್ಛಾಮಿ—ಬಯಸುತ್ತೇನೆ, ವೇದಿತುಮ್—ತಿಳಿಯಲು, ತ್ಯಾಗಸ್ಯ—ತ್ಯಾಗದ, ಚ—ಕೂಡ, ಹೃಷೀಕೇಶ—ಹೇ ಇಂದ್ರಿಯಗಳ ಸ್ವಾಮಿಯೇ, ಪೃಥಕ್—ಪ್ರತ್ಯೇಕವಾಗಿ, ಕೇಶಿ–ನಿಷೂದನ—ಹೇ ಕೇಶಿ ದೈತ್ಯ ಸಂಹಾರಕನೇ.

**ಅರ್ಜುನನು ನುಡಿದನು : ಹೇ ಕೇಶಿ ದೈತ್ಯ ಸಂಹಾರಕನೇ, ಹೃಷೀಕೇಶನೇ, ಹೇ ಮಹಾಪ್ರಭುವೇ, ನಾನು ತ್ಯಾಗದ ಮತ್ತು ಸನ್ಯಾಸದ ಉದ್ದೇಶವನ್ನು ಅರಿಯ ಬಯಸುತ್ತೇನೆ.**

**ಭಾವಾರ್ಥ :** ವಾಸ್ತವಿಕವಾಗಿ ಹದಿನೇಳು ಅಧ್ಯಾಯಗಳಲ್ಲಿ ಭಗವದ್ಗೀತೆಯು ಮುಗಿದಿದೆ. ಹದಿನೆಂಟನೆಯ ಅಧ್ಯಾಯವು ಮುಂಚೆ ಚರ್ಚಿಸಿದ ವಿಷಯಗಳ ಪೂರಕ ಸಾರಾಂಶ. ಭಗವದ್ಗೀತೆಯ ಪ್ರತಿಯೊಂದು ಅಧ್ಯಾಯದಲ್ಲಿ, ಶ್ರೀಕೃಷ್ಣನು, ಪರಮ ದೇವೋತ್ತಮ ಪುರುಷನ ಭಕ್ತಿಯೋಗವು ಜೀವನದ ಪರಮ ಗುರಿ ಎಂದು ಒತ್ತಿ ಹೇಳುತ್ತಾನೆ. ಈ ಅಂಶವೇ ಹದಿನೆಂಟನೆಯ ಅಧ್ಯಾಯದಲ್ಲಿ ಗುಹ್ಯತಮ ಜ್ಞಾನವೆಂದು ಸಾರಾಂಶಿತ. ಮೊದಲನೆಯ ಆರು ಅಧ್ಯಾಯಗಳಲ್ಲಿ, ಭಕ್ತಿಯೋಗಕ್ಕೆ ಮಹತ್ವ ಕೊಡಲಾಯಿತು.

**ಯೋಗಿನಾಮ್ ಅಪಿ ಸರ್ವೇಷಾಮ್**. ... "ಎಲ್ಲ ಯೋಗಿಗಳಲ್ಲಿ ಅಥವಾ ದಿವ್ಯವಾದಿಗಳಲ್ಲಿ, ತನ್ನಲ್ಲಿ ಸದಾ ನನ್ನನ್ನು ಚಿಂತಿಸುವನೋ ಅವನು ಅತ್ಯುತ್ತಮನು". ಮುಂದಿನ ಆರು ಅಧ್ಯಾಯಗಳಲ್ಲಿ ಶುದ್ಧ ಭಕ್ತಿಯುತ ಸೇವೆ ಮತ್ತು ಅದರ ಸ್ವರೂಪ ಮತ್ತು ಚಟುವಟಿಕೆಗಳು ಚರ್ಚಿಸಲ್ಪಟ್ಟವು. ಮೂರನೆಯ ಆರು ಅಧ್ಯಾಯಗಳಲ್ಲಿ ಜ್ಞಾನ ವೈರಾಗ್ಯ, ಭೌತಿಕ ಪ್ರಕೃತಿಯ ಚಟುವಟಿಕೆಗಳು, ದಿವ್ಯ ಪ್ರಕೃತಿ, ಮತ್ತು ಭಕ್ತಿಯುತ ಸೇವೆಯು ವರ್ಣಿಸಲ್ಪಟ್ಟವು. ಪರಮ ಪುರುಷ ವಿಷ್ಣುವನ್ನು ಸೂಚಿಸುವ **ಓಂ ತತ್ ಸತ್** ಪದಗಳಿಂದ ಪ್ರತಿನಿಧಿತ— ಸಕಲ ಕಾರ್ಯಗಳು ಪರಮ ಪ್ರಭುವಿನೊಂದಿಗೆ ಮಾಡಲ್ಪಡಬೇಕು ಎಂದು ನಿರ್ಣಯಿಸಲಾಯಿತು. ಭಕ್ತಿಯುತ ಸೇವೆಯಲ್ಲದೆ ಬೇರೆ ಯಾವುದೂ ಜೀವನದ ಅಂತಿಮ ಉದ್ದೇಶವಲ್ಲ ಎಂಬುದನ್ನು ಭಗವದ್ಗೀತೆಯ ಮೂರನೆಯ ಭಾಗವು ತೋರಿಸಿದೆ. ಇದು ಪೂರ್ವಾಚಾರ್ಯರನ್ನು, ಬ್ರಹ್ಮಸೂತ್ರ, ವೇದಾಂತ ಸೂತ್ರಗಳನ್ನು ಉಲ್ಲೇಖಿಸಿ ಸ್ಥಾಪಿತ. ಕೆಲವು ವ್ಯಕ್ತಿಶೂನ್ಯವಾದಿಗಳು ವೇದಾಂತ ಸೂತ್ರಜ್ಞಾನದ ಬಗ್ಗೆ ಹೇಳಲು ತಮಗೆ ಮಾತ್ರ ಅಧಿಕಾರ ಎಂದು ಭಾವಿಸುತ್ತಾರೆ. ಆದರೆ ವಾಸ್ತವಿಕವಾಗಿ ವೇದಾಂತ ಸೂತ್ರಗಳು ಭಕ್ತಿಯೋಗದ ಅರಿವಿಗಾಗಿ ಇವೆ, ಏಕೆಂದರೆ ಸ್ವಯಂ ಭಗವಂತನೇ ವೇದಾಂತ ಸೂತ್ರಕರ್ತನು ಮತ್ತು ಅವನೇ ಅದನ್ನು ತಿಳಿದವನು. ಅದು ಹದಿನೈದನೆಯ ಅಧ್ಯಾಯದಲ್ಲಿ ವರ್ಣಿತ. ಪ್ರತಿಯೊಂದು ಶಾಸ್ತ್ರದಲ್ಲಿ, ಪ್ರತಿಯೊಂದು ವೇದದಲ್ಲಿ, ಭಕ್ತಿಯುತ ಸೇವೆಯೇ ಉದ್ದೇಶ. ಅದು ಭಗವದ್ಗೀತೆಯಲ್ಲಿ ವಿವರಿಸಿದೆ.

ಎರಡನೆಯ ಅಧ್ಯಾಯದಲ್ಲಿ ಇಡೀ ವಿಷಯ ವಸ್ತುವಿನ ಸಂಕ್ಷಿಪ್ತ ಪೂರ್ವ ಪರಿಚಯ ವರ್ಣಿತವಾಗಿತ್ತು. ಹದಿನೆಂಟನೆಯ ಅಧ್ಯಾಯದಲ್ಲಿ ಕೂಡ ಸಕಲೋಪದೇಶದ ಸಾರವು ಕೊಟ್ಟಿದೆ. ಸಂನ್ಯಾಸ ಮತ್ತು ತ್ರಿವಿಧ ಭೌತಿಕ ಪ್ರಕೃತಿ ಗುಣಗಳಿಗೆ ಅತೀತವಾದ ದಿವ್ಯ ಸ್ಥಾನ ಪ್ರಾಪ್ತಿ. ಜೀವನದ ಉದ್ದೇಶವೆಂದು ಸೂಚಿತ. ಅರ್ಜುನನು ಭಗವದ್ಗೀತೆಯ ಎರಡು ಸ್ಪಷ್ಟ ವಿಷಯ ವಸ್ತುಗಳನ್ನು ಎಂದರೆ ತ್ಯಾಗ ಮತ್ತು ಸನ್ಯಾಸವನ್ನು ಸ್ಪಷ್ಟೀಕರಿಸ ಬಯಸುತ್ತಾನೆ. ಹೀಗೆ ಅವನು ಈ ಎರಡೂ ಪದಗಳ ಅರ್ಥವನ್ನು ಕೇಳುತ್ತಿದ್ದಾನೆ.

ಈ ಶ್ಲೋಕದಲ್ಲಿ ಪರಮ ಪ್ರಭುವನ್ನು ಸಂಬೋಧಿಸಲು ಉಪಯೋಗಿಸಿದ ಹೃಷಿಕೇಶ ಮತ್ತು ಕೇಶಿ–ನಿಷೂದನ— ಎಂಬ ಎರಡು ಪದಗಳು ಮಹತ್ವದವು. ಹೃಷಿಕೇಶ ಕೃಷ್ಣನು, ಸಕಲೇಂದ್ರಿಯಗಳ ಸ್ವಾಮಿ, ಅವನು ಸದಾ ಮಾನಸಿಕ ಮನೋಜ್ಞತೆಯನ್ನು ಹೊಂದಲು ನಮಗೆ ಸಹಾಯಕನು. ತಾನು ಸಮಚಿತ್ತನಾಗಿ ಉಳಿಯುವಂತೆ ಪ್ರತಿಯೊಂದನ್ನೂ ಸಾರರೂಪವಾಗಿ ತನಗೆ ಹೇಳಬೇಕೆಂದು ಅರ್ಜುನನು ಕೃಷ್ಣನನ್ನು ಕೋರುತ್ತಾನೆ. ಆದರೂ ಅವನಿಗೆ ಕೆಲವು ಸಂಶಯಗಳಿವೆ ಮತ್ತು ಸಂಶಯಗಳನ್ನು ಸದಾ ದೈತ್ಯರಿಗೆ ಹೋಲಿಸಲಾಗುವುದು. ಆದ್ದರಿಂದ ಅವನು ಕೃಷ್ಣನನ್ನು ಕೇಶಿ–ನಿಷೂದನ ಎಂದು ಸಂಬೋಧಿಸುತ್ತಾನೆ. ಕೃಷ್ಣನಿಂದ ಕೊಲ್ಲಲ್ಪಟ್ಟ ಕೇಶಿಯು ಅತ್ಯಂತ ಭೀಕರ ದೈತ್ಯನು. ಈಗ ಕೃಷ್ಣನು ಸಂಶಯ ದೈತ್ಯನನ್ನು ಕೊಲ್ಲಬೇಕೆಂದು ಅರ್ಜುನನು ನಿರೀಕ್ಷಿಸುತ್ತಿದ್ದಾನೆ.

**ಶ್ರೀಭಗವಾನುವಾಚ**

**ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ ।**
**ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥೨॥**

ಶ್ರೀ-ಭಗವಾನ್ ಉವಾಚ—ಪರಮ ದೇವೋತ್ತಮ ಪುರುಷನು ನುಡಿದನು, ಕಾಮ್ಯಾನಾಮ್—ಕಾಮನೆಯಿಂದ, ಕರ್ಮಣಾಮ್—ಚಟುವಟಿಕೆಗಳ, ನ್ಯಾಸಮ್—ತ್ಯಾಗವು, ಸಂನ್ಯಾಸಮ್—ಸನ್ಯಾಸ ಆಶ್ರಮ ಎಂದು, ಕವಯಃ—ಜ್ಞಾನಿಗಳು, ವಿದುಃ—ತಿಳಿಯುತ್ತಾರೆ, ಸರ್ವ—ಎಲ್ಲ, ಕರ್ಮ—ಚಟುವಟಿಕೆಗಳು, ಫಲ—ಫಲಗಳ, ತ್ಯಾಗಮ್—ತ್ಯಾಗವನ್ನು, ಪ್ರಾಹುಃ—ಕರೆದಿದ್ದಾರೆ, ತ್ಯಾಗಮ್—ತ್ಯಾಗವೆಂದು, ವಿಚಕ್ಷಣಾಃ—ಅನುಭವಿಗಳು.

**ಪರಮ ದೇವೋತ್ತಮ ಪುರುಷನು ನುಡಿದನು : ಮಹಾ ಜ್ಞಾನಿಗಳು ಕರೆಯುವ ಸನ್ಯಾಸಾಶ್ರಮವು, ಭೌತಿಕ ಇಚ್ಛೆಯನ್ನಾಧರಿಸಿದ ಚಟುವಟಿಕೆಗಳ ತ್ಯಾಗ. ಜ್ಞಾನಿಗಳು ಕರೆಯುವ ತ್ಯಾಗವು ಸಕಲ ಕರ್ಮ ಫಲ ತ್ಯಾಗ.**

**ಭಾವಾರ್ಥ :** ಫಲಕ್ಕಾಗಿ ಮಾಡುವ ಕರ್ಮಾಚರಣೆಯನ್ನು ತ್ಯಜಿಸಬೇಕು. ಇದು ಭಗವದ್ಗೀತೆಯ ಉಪದೇಶ. ಆದರೆ ಉತ್ಕೃಷ್ಟ ಅಧ್ಯಾತ್ಮ ಜ್ಞಾನದೆಡೆಗೆ ಕೊಂಡೊಯ್ಯುವ ಕರ್ಮಗಳನ್ನು ತ್ಯಜಿಸಕೂಡದು. ಇದನ್ನು ಮುಂದಿನ ಶ್ಲೋಕಗಳಲ್ಲಿ ಸ್ಪಷ್ಟಗೊಳಿಸಲಾಗುವುದು. ವೇದ ಸಾಹಿತ್ಯದಲ್ಲಿ ವಿಶಿಷ್ಟ ಉದ್ದೇಶಕ್ಕಾಗಿ ಯಜ್ಞವನ್ನಾಚರಿಸಲು ಅನೇಕ ವಿಧಾನಗಳು ವಿಧಿಸಲ್ಪಟ್ಟಿವೆ. ಸತ್ಪುತ್ರನನ್ನು ಪಡೆಯಲು ಅಥವಾ ಊರ್ಧ್ವಗ್ರಹವ್ಯೂಹಗಳಿಗೆ ಉನ್ನತಿಸಲು ಆಚರಿಸುವ ಕೆಲವು ಯಜ್ಞಗಳಿವೆ, ಆದರೆ ಇಚ್ಛಾ ಪ್ರೇರಿತ ಯಜ್ಞಗಳನ್ನು ನಿಲ್ಲಿಸಬೇಕು. ಆದರೆ, ಒಬ್ಬನ ಹೃದಯ ಶುದ್ಧಿಯ ಅಥವಾ ಅಧ್ಯಾತ್ಮ ವಿಜ್ಞಾನ ಸಾಧನೆಯ ಯಜ್ಞವನ್ನು ಮಾತ್ರ ತ್ಯಜಿಸಬಾರದು.

**ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ ।**
**ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ ॥೩॥**

ತ್ಯಾಜ್ಯಮ್—ತ್ಯಜಿಸಬೇಕು, ದೋಷ-ವತ್—ದೋಷವೆಂಬಂತೆ, ಇತಿ—ಹೀಗೆ, ಏಕೆ—ಒಂದು ಗುಂಪಿನ, ಕರ್ಮ—ಕರ್ಮವನ್ನು, ಪ್ರಾಹುಃ—ಎಂದು ಹೇಳುತ್ತಾರೆ, ಮನೀಷಿಣಃ—ಮಹಾ ಜಿಜ್ಞಾಸುಗಳು, ಯಜ್ಞ—ಯಜ್ಞದ, ದಾನ—ದಾನ, ತಪಃ—ಮತ್ತು ತಪಸ್ಸಿನ, ಕರ್ಮ—ಕರ್ಮಗಳು, ನ—ಎಂದಿಗೂ, ತ್ಯಾಜ್ಯಮ್—ತ್ಯಜಿಸಲ್ಪಡಬೇಕಾದುವಲ್ಲ, ಇತಿ—ಹೀಗೆ, ಚ—ಮತ್ತು, ಅಪರೇ—ಇತರರು.

**ದೋಷಯುಕ್ತವೆಂದು ಎಲ್ಲ ಬಗೆಯ ಕಾಮ್ಯ ಕರ್ಮಗಳನ್ನು ತ್ಯಜಿಸಬೇಕೆಂದು ಕೆಲವು ಜ್ಞಾನಿಗಳು ಸಾರುತ್ತಾರೆ, ಹಾಗಿದ್ದೂ ಋಷಿಗಳು ಯಜ್ಞ, ದಾನ ಮತ್ತು ತಪಸ್ಸಿನ ಕಾರ್ಯಗಳನ್ನು ಎಂದಿಗೂ ತ್ಯಜಿಸಕೂಡದೆಂದು ಹೇಳುತ್ತಾರೆ.**

**ಭಾವಾರ್ಥ :** ವೇದಸಾಹಿತ್ಯದಲ್ಲಿ ವಿವಾದಾಸ್ಪದ ವಿಷಯಗಳಾದ ಅನೇಕ ಕರ್ಮಗಳಿವೆ. ಉದಾಹರಣೆಗೆ, ಯಜ್ಞದಲ್ಲಿ ಪಶುವಧೆ ಮಾಡಬಹುದೆಂದು ಹೇಳಿದೆ, ಹಾಗಿದ್ದೂ ಪಶು

ವಧೆಯು ತೀರಾ ಹ್ಯೇಯವೆಂದು ಕೆಲವರು ಹೇಳುತ್ತಾರೆ. ಯಜ್ಞದಲ್ಲಿ ಪಶುವಧೆಯನ್ನು ವೇದಸಾಹಿತ್ಯದಲ್ಲಿ ಹೇಳಲ್ಪಟ್ಟಿದ್ದರೂ ಪಶುವಧೆಯಾಯಿತೆಂದು ತಿಳಿಯಲ್ಪಡುವುದಿಲ್ಲ. ಪಶುವಿಗೆ ನವ ಜೀವನವನ್ನು ನೀಡಲು ಯಜ್ಞವು ಉದ್ದಿಷ್ಟ. ಕೆಲವು ಸಲ ಯಜ್ಞದಲ್ಲಿ ವಧೆಯಾದ ಪಶುವು ಮತ್ತೆ ಹೊಸ ಪಶು ಜೀವನ ಪಡೆಯುತ್ತದೆ ಮತ್ತು ಇನ್ನೂ ಕೆಲವು ಸಮಯಗಳಲ್ಲಿ ಪಶುವು ಕೂಡಲೇ ಮಾನವ ಜನ್ಮಕ್ಕೆ ಉನ್ನತಿಸುತ್ತದೆ. ಈ ಬಗ್ಗೆ ಋಷಿಗಳಲ್ಲಿ ವಿವಿಧ ಅಭಿಪ್ರಾಯಗಳಿವೆ. ಪಶುವಧೆಯನ್ನು ಸದಾ ತ್ಯಜಿಸಬೇಕೆಂದು ಕೆಲವರು ಹೇಳುತ್ತಾರೆ. ವಿಶಿಷ್ಟ ಯಜ್ಞದಲ್ಲಿ ಅದು ವಿಹಿತ ಎಂದು ಇತರರು ಹೇಳುತ್ತಾರೆ. ಯಜ್ಞ ಕಾರ್ಯಗಳ ಬಗ್ಗೆ ಈ ಎಲ್ಲ ಅಭಿಪ್ರಾಯ ವೈವಿಧ್ಯತೆಗಳು ಈಗ ಸ್ವಯಂ ಭಗವಂತನಿಂದಲೇ ಸ್ಪಷ್ಟವಾಗಿ ಹೇಳಲ್ಪಡುತ್ತಿವೆ.

**ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ ।**
**ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಃ ಸಂಪ್ರಕೀರ್ತಿತಃ ॥೪॥**

ನಿಶ್ಚಯಮ್—ಖಂಡಿತವಾಗಿ, ಶೃಣು—ಕೇಳು, ಮೇ—ನನ್ನಿಂದ, ತತ್ರ—ಅಲ್ಲಿ, ತ್ಯಾಗೇ—ತ್ಯಾಗದ ವಿಷಯದಲ್ಲಿ, ಭರತ-ಸತ್-ತಮ—ಹೇ ಭರತ ಶ್ರೇಷ್ಠನೇ, ತ್ಯಾಗಃ—ತ್ಯಾಗವು, ಹಿ— ಖಂಡಿತವಾಗಿ, ಪುರುಷ-ವ್ಯಾಘ್ರ—ಹೇ ಪುರುಷ ವ್ಯಾಘ್ರನೇ, ತ್ರಿ-ವಿಧಃ—ಮೂರು ಬಗೆಯದು ಎಂದು, ಸಂಪ್ರಕೀರ್ತಿತಃ—ಸಾರಲ್ಪಟ್ಟಿದೆ.

**ಹೇ ಭರತ ಶ್ರೇಷ್ಠನೇ, ಈಗ ತ್ಯಾಗದ ಬಗ್ಗೆ ನನ್ನ ನಿರ್ಣಯವನ್ನು ಕೇಳು. ಹೇ ಪುರುಷವ್ಯಾಘ್ರನೇ, ತ್ಯಾಗವು ಶಾಸ್ತ್ರಗಳಲ್ಲಿ ಮೂರು ವಿಧಗಳೆಂದು ಸಾರಿದೆ.**

**ಭಾವಾರ್ಥ :** ತ್ಯಾಗದ ಬಗ್ಗೆ ಭಿನ್ನಾಭಿಪ್ರಾಯಗಳಿದ್ದರೂ, ಇಲ್ಲಿ ಪರಮ ದೇವೋತ್ತಮ ಪುರುಷ, ಶ್ರೀಕೃಷ್ಣನು ತನ್ನ ನಿರ್ಣಯವನ್ನು ನೀಡುತ್ತಿದ್ದಾನೆ. ಅದೇ ಅಂತಿಮವೆಂದು ಗ್ರಹಿಸಬೇಕು. ವೇದಗಳಾದರೋ ಭಗವಂತನಿಂದ ಪ್ರದತ್ತ ವಿವಿಧ ನಿಯಮಗಳು. ಇಲ್ಲಿ ಭಗವಂತನು ಸಾಕ್ಷಾತ್ತಾಗಿ ಸನ್ನಿವೇಶಿತನು. ಆದ್ದರಿಂದ ಅವನ ಮಾತು ಅಂತಿಮವೆಂದು ಸ್ವೀಕರಿಸಬೇಕು. ತ್ಯಾಗದ ಪ್ರಕ್ರಿಯೆಯು ಯಾವ ಭೌತಿಕ ಪ್ರಕೃತಿ ಗುಣದಲ್ಲಿ ಆಚರಿಸಲ್ಪಡುವುದೋ ಆ ಪ್ರಕಾರದ್ದೆಂದು ತಿಳಿಯಬೇಕು ಎಂದು ಭಗವಂತನು ಹೇಳುತ್ತಾನೆ.

**ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ।**
**ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ॥೫॥**

ಯಜ್ಞ—ಯಜ್ಞದ, ದಾನ—ದಾನದ, ತಪಃ—ಮತ್ತು ತಪಸ್ಸು, ಕರ್ಮ—ಕರ್ಮವು, ನ—ಎಂದಿಗೂ, ತ್ಯಾಜ್ಯಮ್—ತ್ಯಾಜ್ಯವಲ್ಲ, ಕಾರ್ಯಮ್—ಮಾಡಲೇಬೇಕಾದುದು, ಏವ—ಖಂಡಿತವಾಗಿ, ತತ್—ಅದು, ಯಜ್ಞಃ—ಯಜ್ಞವು, ದಾನಮ್—ದಾನವು, ತಪಃ—ತಪಸ್ಸು, ಚ—ಕೂಡ, ಏವ—ಖಂಡಿತವಾಗಿ, ಪಾವನಾನಿ—ಶುದ್ಧಿಕಾರಕ, ಮನೀಷಿಣಾಮ್—ಮಹಾತ್ಮರಿಗೂ ಕೂಡ.

**ಯಜ್ಞ, ದಾನ, ಮತ್ತು ತಪೋಕಾರ್ಯಗಳನ್ನು ತ್ಯಜಿಸಕೂಡದು ; ಅವುಗಳನ್ನು ಆಚರಿಸಲೇಬೇಕು. ನಿಜವಾಗಿ, ಯಜ್ಞ, ದಾನ ಮತ್ತು ತಪಸ್ಸು ಮಹಾತ್ಮರನ್ನು ಕೂಡ ಶುದ್ಧಗೊಳಿಸುತ್ತವೆ.**

**ಭಾವಾರ್ಥ :** ಯೋಗಿಗಳು ಮಾನವ ಸಮಾಜದ ಪ್ರಗತಿಗಾಗಿ ಕರ್ಮಗಳನ್ನಾಚರಿಸಬೇಕು. ಮಾನವನನ್ನು ಅಧ್ಯಾತ್ಮ ಜೀವನಕ್ಕೆ ಪ್ರಗತಿಸಲು ಅನೇಕ ಶುದ್ಧೀಕರಣ ಪ್ರಕ್ರಿಯೆಗಳಿವೆ. ಉದಾಹರಣೆಗೆ ವಿವಾಹ ಸಮಾರಂಭವು ಈ ಯಜ್ಞಗಳಲ್ಲಿ ಒಂದು ಎಂದು ಪರಿಗಣಿತ. ಅದನ್ನು **ವಿವಾಹ-ಯಜ್ಞ** ಎಂದು ಕರೆದಿದೆ. ಕೌಟುಂಬಿಕ ಸಂಬಂಧ ತ್ಯಾಗ ಮಾಡಿದ ಸನ್ಯಾಸಿಯು ವಿವಾಹ ಸಮಾರಂಭವನ್ನು ಪ್ರೋತ್ಸಾಹಿಸಬೇಕೇ ? ಮಾನವ ಕಲ್ಯಾಣಕ್ಕೆ ಉದ್ದಿಷ್ಟವಾದ ಯಾವ ಯಜ್ಞವನ್ನೂ ಎಂದಿಗೂ ತ್ಯಜಿಸಕೂಡದೆಂದು ಇಲ್ಲಿ ಭಗವಂತನು ಹೇಳುತ್ತಾನೆ. ವಿವಾಹ ಯಜ್ಞವು ಮಾನವನ ಮನಸ್ಸು ಆಧ್ಯಾತ್ಮಿಕ ಪ್ರಗತಿಗಾಗಿ ಶಾಂತವಾಗಲು ಅದನ್ನು ನಿಯಮನ ಮಾಡಲು ಉದ್ದಿಷ್ಟ. ಅನೇಕರಿಗಾಗಿ, ಸನ್ಯಾಸಾಶ್ರಮದಲ್ಲಿರುವವರು ಕೂಡ ಈ **ವಿವಾಹ-ಯಜ್ಞ**ವನ್ನು ಪ್ರೋತ್ಸಾಹಿಸಬೇಕು. ಸನ್ಯಾಸಿಗಳು ಎಂದೂ ಸ್ತ್ರೀಸಂಗ ಮಾಡಕೂಡದು, ಆದರೆ ಹಾಗೆಂದ ಮಾತ್ರದಿಂದ ಜೀವನದ ಕೆಳಮಟ್ಟಗಳಲ್ಲಿರುವ ಯುವಕನು ವಿವಾಹದಲ್ಲಿ ಹೆಂಡತಿಯನ್ನು ಸ್ವೀಕರಿಸಕೂಡದೆಂದಲ್ಲ. ಎಲ್ಲ ವಿಧಿತ ಯಜ್ಞಗಳು ಪರಮ ಪ್ರಭುವಿನ ಪ್ರಾಪ್ತಿಗಾಗಿ ಉದ್ದಿಷ್ಟ. ಆದ್ದರಿಂದ ಕೆಳಮಟ್ಟಗಳಲ್ಲಿ ಅವುಗಳನ್ನು ತ್ಯಜಿಸಕೂಡದು. ಅದೇ ಪ್ರಕಾರ ದಾನವು ಹೃದಯ ಶುದ್ಧಿಗಾಗಿ. ಹಿಂದೆ ವರ್ಣಿಸಿದಂತೆ, ದಾನವು ಸತ್ಪಾತ್ರದಲ್ಲಿ ನೀಡಲ್ಪಟ್ಟರೆ, ಅದು ಒಬ್ಬನನ್ನು ಉತ್ಕೃಷ್ಟ ಅಧ್ಯಾತ್ಮ ಜೀವನಕ್ಕೆ ಕೊಂಡೊಯ್ಯುತ್ತದೆ.

**ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ ।**
**ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್ ॥೬॥**

ಏತಾನಿ—ಈ ಎಲ್ಲ, ಅಪಿ—ಖಂಡಿತವಾಗಿ, ತು—ಆದರೆ, ಕರ್ಮಾಣಿ—ಕರ್ಮಗಳು, ಸಂಗಮ್—ಸಂಗವನ್ನು, ತ್ಯಕ್ತ್ವಾ—ತ್ಯಜಿಸಿ, ಫಲಾನಿ—ಫಲಗಳನ್ನು, ಚ—ಕೂಡ, ಕರ್ತವ್ಯಾನಿ—ಕರ್ತವ್ಯವೆಂದು ಮಾಡಬೇಕು, ಇತಿ—ಹೀಗೆ, ಮೇ—ನನ್ನ, ಪಾರ್ಥ—ಹೇ ಪೃಥಾ ಪುತ್ರನೇ, ನಿಶ್ಚಿತಮ್—ನಿಶ್ಚಿತವಾದ, ಮತಮ್—ಅಭಿಪ್ರಾಯ, ಉತ್ತಮಮ್ ಉತ್ತಮವಾದುದು.

**ಈ ಎಲ್ಲ ಚಟುವಟಿಕೆಗಳನ್ನು ಮೋಹವಿಲ್ಲದೆ ಅಥವಾ ಯಾವುದೇ ಫಲಾಪೇಕ್ಷೆ ಇಲ್ಲದೆ ಆಚರಿಸಬೇಕು. ಹೇ ಪೃಥಾ ಪುತ್ರನೇ, ಅವುಗಳನ್ನು ಕರ್ತವ್ಯವೆಂದು ಆಚರಿಸಬೇಕು. ಇದು ನನ್ನ ಅಂತಿಮ ಅಭಿಪ್ರಾಯ.**

**ಭಾವಾರ್ಥ :** ಎಲ್ಲ ಯಜ್ಞಗಳು ಶುದ್ಧಕಾರಕವಾಗಿದ್ದರೂ ಅಂಥ ಆಚರಣೆಗಳ ಯಾವುದೇ ಫಲವನ್ನು ಒಬ್ಬನು ನಿರೀಕ್ಷಿಸಕೂಡದು. ಅರ್ಥಾತ್ ಭೌತಿಕ ಜೀವನ ಪ್ರಗತಿಗೆ ಉದ್ದಿಷ್ಟ ಸಕಲ ಯಜ್ಞಗಳನ್ನು ತ್ಯಜಿಸಬೇಕು, ಆದರೆ ಒಬ್ಬನ ಅಸ್ತಿತ್ವವನ್ನು ಶುದ್ಧಗೊಳಿಸುವ ಮತ್ತು ಒಬ್ಬನನ್ನು ಅಧ್ಯಾತ್ಮ ವೇದಿಕೆಗೆ ಉನ್ನತಿಸುವ ಯಜ್ಞಗಳನ್ನು ನಿಲ್ಲಿಸಕೂಡದು.

ಕೃಷ್ಣ ಪ್ರಜ್ಞೆಗೆ ಕೊಂಡೊಯ್ಯುವ ಪ್ರತಿಯೊಂದನ್ನು ಪ್ರೋತ್ಸಾಹಿಸಬೇಕು. ಭಗವದ್ಭಕ್ತಿ ಯೋಗಕ್ಕೆ ಕರೆದೊಯ್ಯುವ ಯಾವುದೇ ಚಟುವಟಿಕೆಯನ್ನು ಅಂಗೀಕರಿಸಬೇಕು ಎಂದು ಶ್ರೀಮದ್ ಭಾಗವತದಲ್ಲಿ ಕೂಡ ಹೇಳಿದೆ. ಅದು ಧರ್ಮದ ಅತ್ಯುನ್ನತ ತತ್ತ್ವ. ಭಗವದ್ಭಕ್ತನು ಭಗವದ್ಭಕ್ತಿ ಸೇವಾ ನಿರ್ವಹಣೆಯಲ್ಲಿ ತನಗೆ ಸಹಾಯಕವಾಗುವ ಯಾವುದೇ ಕಾರ್ಯವನ್ನು, ಅಥವಾ ದಾನವನ್ನು ಅಂಗೀಕರಿಸಬೇಕು.

**ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ ।**
**ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ ॥೭॥**

ನಿಯತಸ್ಯ—ವಿಧಿತನಿಗೆ, ತು—ಆದರೆ, ಸಂನ್ಯಾಸಃ—ಸನ್ಯಾಸವು, ಕರ್ಮಣಃ—ಕರ್ಮಗಳು, ನ—ಎಂದಿಗೂ, ಉಪಪದ್ಯತೇ—ಯೋಗ್ಯವಲ್ಲ, ಮೋಹಾತ್—ಮೋಹದಿಂದ, ತಸ್ಯ—ಅವುಗಳ, ಪರಿತ್ಯಾಗಃ—ಪರಿತ್ಯಾಗವು, ತಾಮಸಃ—ತಮೋಗುಣದಲ್ಲಿ, ಪರಿಕೀರ್ತಿತಃ—ಎಂದು ಹೇಳಿದೆ.

**ವಿಧಿತ ಕರ್ತವ್ಯಗಳನ್ನು ಎಂದೂ ತ್ಯಜಿಸಕೂಡದು. ಒಬ್ಬನು ಮೋಹದಿಂದ ವಿಧಿತ ಕರ್ತವ್ಯಗಳನ್ನು ತ್ಯಜಿಸಿದರೆ, ಅಂಥ ತ್ಯಾಗವು ತಮೋ ಗುಣದ್ದು ಎಂದು ಹೇಳಿದೆ.**

**ಭಾವಾರ್ಥ :** ಭೌತಿಕ ತುಷ್ಟಿಯ ಕಾರ್ಯವನ್ನು ತ್ಯಜಿಸಬೇಕು, ಆದರೆ ಪರಮ ಪ್ರಭುವಿಗಾಗಿ ಅಡಿಗೆ ಮಾಡುವ ಮತ್ತು ಅದನ್ನು ಅವನಿಗೆ ಅರ್ಪಿಸಿ ಆಮೇಲೆ ಸ್ವೀಕರಿಸುವಂಥ ಆಧ್ಯಾತ್ಮ ಚಟುವಟಿಕೆಗೆ ಒಬ್ಬನನ್ನು ಉನ್ನತಿಸುವ ಕಾರ್ಯವನ್ನು ಮಾಡಬೇಕೆಂದು ಹೇಳಿದೆ. ಸನ್ಯಾಸಿಯು ತನಗಾಗಿ ಅಡಿಗೆ ಮಾಡಬೇಕಾಗಿಲ್ಲ. ತನಗಾಗಿ ಅಡಿಗೆ ಮಾಡುವುದು ನಿಷಿದ್ಧ, ಆದರೆ ಭಗವಂತನಿಗಾಗಿ ಅಡಿಗೆ ಮಾಡುವುದು ನಿಷಿದ್ಧವಲ್ಲ. ಅದೇ ಪ್ರಕಾರ, ಸನ್ಯಾಸಿಯು ತನ್ನ ಶಿಷ್ಯನು ಕೃಷ್ಣಪ್ರಜ್ಞೆಯಲ್ಲಿ ಪ್ರಗತಿ ಸಾಧಿಸಲು ಸಹಾಯಕವಾಗಿ ಅವನ ಮದುವೆ ಮಾಡಿಸಬಹುದು. ಒಬ್ಬನು ಅಂಥ ಚಟುವಟಿಕೆಗಳನ್ನು ತ್ಯಜಿಸಿದರೆ ಅವನು ತಮೋ ಗುಣದಲ್ಲಿ ಕಾರ್ಯ ಮಾಡುತ್ತಿರುವನೆಂದು ತಿಳಿಯಬೇಕು.

**ದುಃಖಮಿತ್ಯೇವ ಯತ್ ಕರ್ಮ ಕಾಯಕ್ಲೇಶಭಯಾತ್ತ್ಯಜೇತ್ ।**
**ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್ ॥೮॥**

ದುಃಖಮ್—ದುಃಖವು, ಇತಿ—ಹೀಗೆ, ಏವ—ಖಂಡಿತವಾಗಿ, ಯತ್—ಯಾವುದು, ಕರ್ಮ—ಕರ್ಮವು, ಕಾಯ—ದೇಹಕ್ಕೆ, ಕ್ಲೇಶ—ಕ್ಲೇಶಕಾರಕ, ಭಯಾತ್—ಭಯದಿಂದ, ತ್ಯಜೇತ್—ಅದನ್ನು ಬಿಡುವನೋ, ಸಃ—ಅವನು, ಕೃತ್ವಾ—ಮಾಡಿದ ಬಳಿಕ, ರಾಜಸಮ್—ರಾಜಸ ಗುಣದಲ್ಲಿ, ತ್ಯಾಗಮ್—ತ್ಯಾಗವನ್ನು, ಏವ—ಖಂಡಿತವಾಗಿ, ನ—ಇಲ್ಲ, ತ್ಯಾಗ—ತ್ಯಾಗದ, ಫಲಮ್—ಫಲಗಳನ್ನು, ಲಭೇತ್—ಪಡೆಯುವುದು.

**ವಿಧಿತ ಕರ್ತವ್ಯಗಳನ್ನು ಕ್ಲೇಶಕಾರಕವೆಂದು ಅಥವಾ ದೈಹಿಕ ಅಸುಖ ಭಯದಿಂದ ಯಾವನು ತ್ಯಜಿಸುವನೋ, ಅವನು ರಾಜಸ ಗುಣದಲ್ಲಿ ತ್ಯಾಗ ಮಾಡಿರುವ**

**ನೆಂದು ಹೇಳಿದೆ. ಅಂಥ ಕಾರ್ಯವು ಅವನನ್ನು ಎಂದೂ ತ್ಯಾಗದ ಮಟ್ಟಕ್ಕೆ ಉನ್ನತಿಸುವುದಿಲ್ಲ.**

**ಭಾವಾರ್ಥ :** ಕೃಷ್ಣಪ್ರಜ್ಞೆಯು ತಾನು ಕಾಮ್ಯಕರ್ಮಗಳನ್ನು ಆಚರಿಸುತ್ತಿರುವೆನೆಂಬ ಭಯದಿಂದ ಧನಾರ್ಜನೆಯನ್ನು ತ್ಯಜಿಸಕೂಡದು. ಹಾಗೆ ಕೆಲಸಮಾಡಿ ಒಬ್ಬನು ತನ್ನ ಹಣವನ್ನು ಕೃಷ್ಣಪ್ರಜ್ಞೆಗಾಗಿ ತೊಡಗಿಸಬಹುದಾದರೆ. ಅಥವಾ ಪ್ರಾತಃಕಾಲದಲ್ಲಿ ಎದ್ದು ಒಬ್ಬನು ತನ್ನ ದಿವ್ಯ ಕೃಷ್ಣಪ್ರಜ್ಞೆಯನ್ನು ಬೆಳೆಸಿಕೊಳ್ಳುವುದಾದರೆ, ಒಬ್ಬನು ತನ್ನ ಅಂಥ ಚಟುವಟಿಕೆಗಳನ್ನು ಭಯದಿಂದ ಅಥವಾ ಕ್ಲೇಶಕಾರಕವೆಂದು ತಿಳಿದು ತ್ಯಜಿಸಕೂಡದು. ಅಂಥ ತ್ಯಾಗವು ರಜೋಗುಣದ್ದು. ರಾಜಸ ಕರ್ಮಫಲವು ಸದಾ ಕ್ಲೇಶಕಾರಕ. ಒಬ್ಬನು ಆ ಭಾವದಲ್ಲಿ ಕರ್ಮ ಸನ್ಯಾಸ ಮಾಡಿದರೆ, ಅವನು ಎಂದೂ ತ್ಯಾಗದ ಫಲ ಪಡೆಯುವುದಿಲ್ಲ.

**ಕಾರ್ಯಮಿತ್ಯೇವ ಯತ್ ಕರ್ಮ ನಿಯತಂ ಕ್ರಿಯತೇऽರ್ಜುನ ।**
**ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ ಸಾತ್ತ್ವಿಕೋ ಮತಃ ॥ ೯ ॥**

ಕಾರ್ಯಮ್—ಮಾಡಲೇಬೇಕು, ಇತಿ—ಹೀಗೆ, ಏವ—ನಿಜವಾಗಿ, ಯತ್—ಯಾವುದು, ಕರ್ಮ—ಕರ್ಮ, ನಿಯತಮ್—ವಿಧಿತ, ಕ್ರಿಯತೇ—ಮಾಡಲ್ಪಡುತ್ತದೆ, ಅರ್ಜುನ—ಹೇ ಅರ್ಜುನ, ಸಂಗಮ್—ಸಂಗವನ್ನು, ತ್ಯಕ್ತ್ವಾ—ತ್ಯಜಿಸಿ, ಫಲಮ್—ಫಲವನ್ನು, ಚ—ಕೂಡ, ಏವ—ಖಂಡಿತವಾಗಿ, ಸಃ—ಅವನ, ತ್ಯಾಗಃ—ತ್ಯಾಗವು, ಸಾತ್ತ್ವಿಕಃ—ಸಾತ್ವಿಕವಾದುದು, ಮತಃ—ನನ್ನ ಅಭಿಪ್ರಾಯದಲ್ಲಿ.

**ಹೇ ಅರ್ಜುನ, ತಾನು ಮಾಡಬೇಕಾದುದು ಎಂದು ಒಬ್ಬನು ತನ್ನ ವಿಧಿತ ಕರ್ತವ್ಯವನ್ನು ಆಚರಿಸಿ ಮತ್ತು ಎಲ್ಲ ಭೌತಿಕ ಸಂಗವನ್ನು ಮತ್ತು ಎಲ್ಲಾ ಫಲಾನುರಾಗವನ್ನು ತ್ಯಜಿಸಿದರೆ, ಅವನ ತ್ಯಾಗವು ಸಾತ್ವಿಕ ಗುಣದ್ದು ಎಂದು ಹೇಳಿದೆ.**

**ಭಾವಾರ್ಥ :** ವಿಧಿತ ಕರ್ತವ್ಯಗಳನ್ನು ಈ ಮನೋಭಾವದಿಂದ ಆಚರಿಸಬೇಕು. ಒಬ್ಬನು ಫಲಾನುರಾಗರಹಿತವಾಗಿ ಕರ್ಮಮಾಡಬೇಕು; ಅವನು ಕರ್ಮಗುಣಗಳಿಂದ ಅಸಂಗಿಯಾಗಬೇಕು. ಕಾರ್ಖಾನೆಯಲ್ಲಿ ಒಬ್ಬನು ಕೃಷ್ಣಪ್ರಜ್ಞೆಯಲ್ಲಿ ಕರ್ಮ ಮಾಡುತ್ತಿದ್ದರೆ ಅವನು ಕಾರ್ಖಾನೆಯ ಕೆಲಸದೊಂದಿಗೆ ಅಥವಾ ಕಾರ್ಖಾನೆಯ ಕಾರ್ಮಿಕರೊಂದಿಗೆ ಸಂಗಿಯಾಗಿರುವುದಿಲ್ಲ. ಅವನು ಕೃಷ್ಣನಿಗಾಗಿ ಮಾತ್ರ ಶ್ರಮಿಸುತ್ತಾನೆ. ಅವನು ಫಲವನ್ನು ಕೃಷ್ಣನಿಗೆ ಸಮರ್ಪಿಸಿದಾಗ ಅವನು ದಿವ್ಯವಾಗಿ ವರ್ತಿಸುತ್ತಿರುತ್ತಾನೆ.

**ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ ।**
**ತ್ಯಾಗೀ ಸತ್ತ್ವಸಮಾವಿಷ್ಟೋ ಮೇಧಾವೀ ಛಿನ್ನಸಂಶಯಃ ॥ ೧೦ ॥**

ನ—ಎಂದಿಗೂ ಇಲ್ಲ, ದ್ವೇಷ್ಟಿ—ದ್ವೇಷಿಸುವುದು, ಅಕುಶಲಮ್—ಅಶುಭವಾದ, ಕರ್ಮ—ಕರ್ಮವನ್ನು, ಕುಶಲೇ—ಶುಭವಾದುದರಲ್ಲಿ, ನ—ಅಥವಾ, ಅನುಷಜ್ಜತೇ—ಅನುರಕ್ತನಾಗುವುದಿಲ್ಲ, ತ್ಯಾಗೀ—ತ್ಯಾಗಿಯು, ಸತ್ತ್ವ—ಸತ್ತ್ವದಲ್ಲಿ ಸಮಾವಿಷ್ಟಃ—ಸಮಾವಿಷ್ಟನು, ಮೇಧಾವೀ—ಬುದ್ಧಿವಂತನು, ಛಿನ್ನ—ನಿವಾರಿಸಿಕೊಂಡು, ಸಂಶಯಃ—ಎಲ್ಲ ಸಂಶಯಗಳನ್ನು.

**ಸತ್ತ್ವಗುಣ ಸನ್ನಿವೇಶಿತನಾದ ಬುದ್ಧಿವಂತ ತ್ಯಾಗಿಯು, ಅಶುಭಕಾರ್ಯಗಳ ದ್ವೇಷ ಅಥವಾ ಶುಭಕಾರ್ಯಗಳಲ್ಲಿ ಆಸಕ್ತಿ ಇಲ್ಲದೆ, ತನ್ನ ಕಾರ್ಯದ ಬಗ್ಗೆ ಅಸಂಶಯನು.**

**ಭಾವಾರ್ಥ :** ಕೃಷ್ಣಪ್ರಜ್ಞೆಯು ಅಥವಾ ಸಾತ್ವಿಕನು ಯಾರನ್ನೂ ಅಥವಾ ತನ್ನ ದೇಹಕ್ಕೆ ಕ್ಲೇಶಪಡಿಸುವ ಯಾವುದನ್ನೂ ದ್ವೇಷಿಸುವುದಿಲ್ಲ. ತನ್ನ ಕರ್ತವ್ಯದ ಕ್ಲೇಶಕರ ಪರಿಣಾಮಗಳನ್ನು ಲೆಕ್ಕಿಸದೆ ಯೋಗ್ಯ ಸ್ಥಳದಲ್ಲಿ ಮತ್ತು ಯೋಗ್ಯ ಕಾಲದಲ್ಲಿ ಅವನು ಕೆಲಸ ಮಾಡುತ್ತಾನೆ. ಹೀಗೆ ದಿವ್ಯ ಸನ್ನಿವೇಶಿಶನು ಅತ್ಯಂತ ಮೇಧಾವಿಯೆಂದು ಮತ್ತು ತನ್ನ ಚಟುವಟಿಕೆಗಳಲ್ಲಿ ಸಂಶಯಾತೀತನೆಂದು ತಿಳಿಯಬೇಕು.

**ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ।**
**ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ॥ ೧೧ ॥**

ನ—ಎಂದಿಗೂ ಇಲ್ಲ, ಹಿ—ಖಂಡಿತವಾಗಿ, ದೇಹ–ಭೃತಾ—ದೇಹಧಾರಿಯಿಂದ, ಶಕ್ಯಮ್—ಸಾಧ್ಯವಿಲ್ಲ, ತ್ಯಕ್ತುಮ್—ಬಿಡುವುದು, ಕರ್ಮಾಣಿ—ಚಟುವಟಿಕೆಗಳು, ಅಶೇಷತಃ—ಸಂಪೂರ್ಣವಾಗಿ, ಯಃ—ಯಾರೊಬ್ಬನು, ತು—ಆದರೆ, ಕರ್ಮ—ಕರ್ಮದ, ಫಲ—ಫಲದ, ತ್ಯಾಗೀ—ತ್ಯಾಗಿಯು, ಸಃ—ಅವನು, ತ್ಯಾಗೀ—ತ್ಯಾಗಿಯು, ಇತಿ—ಹೀಗೆ, ಅಭಿಧೀಯತೇ—ಹೇಳಿದೆ.

**ಎಲ್ಲಾ ಚಟುವಟಿಕೆಗಳನ್ನು ತ್ಯಜಿಸುವುದು ನಿಜವಾಗಿಯೂ ದೇಹೀ ಜೀವಕ್ಕೆ ಅಸಂಭವ. ಆದರೆ ಕರ್ಮಫಲ ತ್ಯಾಗ ಮಾಡುವವನನ್ನು ನಿಜವಾಗಿ ತ್ಯಾಗಿ ಎಂದು ಕರೆದಿದೆ.**

**ಭಾವಾರ್ಥ :** ಒಬ್ಬನು ಯಾವ ಕಾಲದಲ್ಲಿಯೂ ಚಟುವಟಿಕೆಯನ್ನು ಎಂದೂ ತ್ಯಜಿಸಲಾಗದು ಎಂದು ಭಗವದ್ಗೀತೆಯಲ್ಲಿ ಹೇಳಿದೆ. ಆದ್ದರಿಂದ ಕೃಷ್ಣನಿಗೆ ಕರ್ಮ ಮಾಡುವವನು ಮತ್ತು ಕರ್ಮಫಲ ಭೋಗಿಸುವವನು ಪ್ರತಿಯೊಂದನ್ನು ಕೃಷ್ಣನಿಗೆ ಅರ್ಪಿಸುವವನು ವಾಸ್ತವಿಕವಾಗಿ ತ್ಯಾಗಿ. ತಮ್ಮ ಕಛೇರಿಯಲ್ಲಿ ಅಥವಾ ಕಾರ್ಖಾನೆಯಲ್ಲಿ ಅಥವಾ ಇತರ ಸ್ಥಳದಲ್ಲಿ ಬಹಳ ಶ್ರಮಿಸುವ ಅಂತರಾಷ್ಟ್ರೀಯ ಕೃಷ್ಣಪ್ರಜ್ಞಾ ಸಂಘದ ಅನೇಕ ಸದಸ್ಯರಿದ್ದಾರೆ, ಮತ್ತು ಅವರು ಆರ್ಜಿಸಿದ್ದನ್ನೆಲ್ಲಾ ಸಂಘಕ್ಕೆ ಕೊಡುತ್ತಾರೆ, ಅಂಥ ಉನ್ನತ ಆತ್ಮರು ವಾಸ್ತವಿಕ ಸನ್ಯಾಸಿಗಳು ಮತ್ತು ಸಂನ್ಯಾಸಾಶ್ರಮ ಸನ್ನಿವೇಶಿತರು. ಕರ್ಮಫಲಗಳನ್ನೆಲ್ಲ ಹೇಗೆ ತ್ಯಾಗ ಮಾಡಬೇಕು ಮತ್ತು ಯಾವ ಉದ್ದೇಶಕ್ಕಾಗಿ ಫಲಗಳನ್ನು ತ್ಯಾಗ ಮಾಡಬೇಕು ಎಂಬುದು ಇಲ್ಲಿ ಸ್ಪಷ್ಟವಾಗಿ ನಿರೂಪಿತ.

**ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಮ್ ।**
**ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸಂನ್ಯಾಸಿನಾಂ ಕ್ವಚಿತ್ ॥ ೧೨ ॥**

ಅನಿಷ್ಟಮ್—ನರಕ ಪ್ರಾಪಕ, ಇಷ್ಟಮ್—ಸ್ವರ್ಗ ಪ್ರಾಪಕ, ಮಿಶ್ರಮ್—ಮಿಶ್ರ ಚ—ಮತ್ತು, ತ್ರಿ–ವಿಧಮ್—ಮೂರು ವಿಧಗಳು, ಕರ್ಮಣಃ—ಕರ್ಮದ, ಫಲಮ್—

ಫಲವು, ಭವತಿ—ಬರುತ್ತದೆ, ಅತ್ಯಾಗಿನಾಮ್—ತ್ಯಾಗಿಗಳಲ್ಲದವರಿಗೆ, ಪ್ರೇತ್ಯ—ಮರಣಾನಂತರ, ನ—ಇಲ್ಲ, ತು—ಆದರೆ, ಸಂನ್ಯಾಸಿನಾಮ್—ಸನ್ಯಾಸಿಗಳಿಗೆ, ಕ್ವಚಿತ್—ಯಾವ ಕಾಲದಲ್ಲಿಯೂ.

**ತ್ಯಾಗಿಯಲ್ಲದವನಿಗೆ, ಕರ್ಮದ ಮೂರು ವಿಧ ಫಲಗಳು—ಇಷ್ಟ, ಅನಿಷ್ಟ, ಮತ್ತು ಮಿಶ್ರಫಲಗಳು—ಮರಣಾನಂತರ ಒದಗುತ್ತವೆ. ಆದರೆ ಸನ್ಯಾಸಾಶ್ರಮಿಗಳಿಗೆ ಅಂಥ ಸುಖ ಅಥವಾ ದುಃಖಕಾರಕ ಫಲಗಳು ಇರುವುದಿಲ್ಲ.**

**ಭಾವಾರ್ಥ :** ಕೃಷ್ಣನೊಂದಿಗೆ ತನ್ನ ಸಂಬಂಧ ಜ್ಞಾನದಲ್ಲಿ ಕರ್ಮ ಮಾಡುವ ಕೃಷ್ಣಪ್ರಾಜ್ಞಿಯು ಸದಾ ಮುಕ್ತನು. ಆದ್ದರಿಂದ ಅವನು ಮರಣಾನಂತರ ತನ್ನ ಕರ್ಮಫಲಗಳನ್ನು ಭೋಗಿಸಬೇಕಾಗಿಲ್ಲ ಅಥವಾ ಅನುಭವಿಸಬೇಕಾಗಿಲ್ಲ.

**ಪಂಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ ।**
**ಸಾಂಖ್ಯೇ ಕೃತಾನ್ತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಮ್ ॥ ೧೩ ॥**

ಪಂಚ—ಐದು, ಏತಾನಿ—ಈ, ಮಹಾ-ಬಾಹೋ—ಹೇ ಮಹಾಬಾಹುವೇ, ಕಾರಣಾನಿ—ಕಾರಣಗಳು, ನಿಬೋಧ—ತಿಳಿದುಕೋ ಅಷ್ಟೆ, ಮೇ—ನನ್ನಿಂದ, ಸಾಂಖ್ಯೇ—ವೇದಾಂತದಲ್ಲಿ, ಕೃತ-ಅನ್ತೇ—ಸಿದ್ಧಾಂತದಲ್ಲಿ, ಪ್ರೋಕ್ತಾನಿ—ಹೇಳಿದೆ, ಸಿದ್ಧಯೇ—ಸಿದ್ಧಿಗಾಗಿ, ಸರ್ವ—ಎಲ್ಲರ, ಕರ್ಮಣಾಮ್—ಕರ್ಮಗಳು.

**ಹೇ ಮಹಾಬಾಹು ಅರ್ಜುನನೇ,** ವೇದಾಂತ ಪ್ರಕಾರ ಎಲ್ಲಾ ಕರ್ಮಸಿದ್ಧಿಗೆ **ಐದು ಕಾರಣಗಳುಂಟು. ಇವುಗಳನ್ನು ಈಗ ನನ್ನಿಂದ ತಿಳಿದುಕೋ.**

**ಭಾವಾರ್ಥ :** ಯಾವುದೇ ಕಾರ್ಯಾಚರಣೆಗೆ ಯಾವುದಾದರೂ ಪ್ರತಿಕ್ರಿಯೆ ಇರಬೇಕಾದ್ದರಿಂದ, ಕೃಷ್ಣಪ್ರಾಜ್ಞಿಯು ಕರ್ಮ ಪ್ರತಿಕ್ರಿಯೆಗಳನ್ನು ಅನುಭವಿಸುವುದಿಲ್ಲ ಅಥವಾ ಭೋಗಿಸುವುದಿಲ್ಲ ಹೇಗೆ ? ಎಂದು ಪ್ರಶ್ನೆ ಮಾಡಬಹುದು. ಇದು ಹೇಗೆ ಸಾಧ್ಯ ಎಂಬುದನ್ನು ತೋರಿಸಲು ಭಗವಂತನು ವೇದಾಂತ ದರ್ಶನವನ್ನು ಉಲ್ಲೇಖಿಸುತ್ತಿದ್ದಾನೆ. ಎಲ್ಲ ಕರ್ಮಗಳಿಗೆ ಐದು ಕಾರಣಗಳುಂಟು ಮತ್ತು ಎಲ್ಲ ಕರ್ಮಗಳಲ್ಲಿನ ಯಶಸ್ಸಿಗೆ ಈ ಐದು ಕಾರಣಗಳು ಇವೆ ಎಂದು ತಿಳಿಯಬೇಕು. **ಸಾಂಖ್ಯ** ಎಂದರೆ ಜ್ಞಾನಶಾಖೆ, ಮತ್ತು **ವೇದಾಂತ** ಎಲ್ಲ ಪ್ರಮುಖ ಆಚಾರ್ಯರಿಂದ ಅಂತಿಮ ಜ್ಞಾನ ಶಾಖೆ ಎಂದು ಅಂಗೀಕೃತ. ಶಂಕರರು ಕೂಡ ವೇದಾಂತ ಸೂತ್ರವನ್ನು ಹಾಗೆಯೇ ಅಂಗೀಕರಿಸಿದ್ದಾರೆ. ಆದ್ದರಿಂದ ಅಂಥ ಅಧಿಕಾರಿಗಳ ಅಭಿಪ್ರಾಯವನ್ನು ಅಂಗೀಕರಿಸಬೇಕು.

ಅಂತಿಮ ನಿಯಂತ್ರಣವು ಪರಮಾತ್ಮನಲ್ಲಿ ನಿಹಿತ. ಭಗವದ್ಗೀತೆಯಲ್ಲಿ ಹೇಳಿದಂತೆ **ಸರ್ವಸ್ಯ** ಚಾಹಮ್ **ಹೃದಿ ಸನ್ನಿವಿಷ್ಟಃ** ಅವನು ಅವನವನ ಪೂರ್ವಕರ್ಮಗಳನ್ನು ಜ್ಞಾಪಿಸಿಕೊಳ್ಳುವಂತೆ ಮಾಡಿ ವಿಶಿಷ್ಟ ಚಟುವಟಿಕೆಗಳಲ್ಲಿ ಪ್ರತಿಯೊಬ್ಬನನ್ನು ತೊಡಗಿಸಿದ್ದಾನೆ ಮತ್ತು ಒಳಗಿನಿಂದ ದೊರೆಯುವ ಅವನ ನಿರ್ದೇಶನದ ಮೇರೆಗೆ ಮಾಡಿದ ಕೃಷ್ಣಪ್ರಜ್ಞಾ

ಕಾರ್ಯಗಳು ಈ ಜನ್ಮದಲ್ಲಿ ಅಥವಾ ಮರಣಾನಂತರ ಮುಂದಿನ ಜನ್ಮದಲ್ಲಿ ಯಾವ ಪ್ರತಿಕ್ರಿಯೆಯನ್ನೂ ಉಂಟು ಮಾಡುವುದಿಲ್ಲ.

**ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ ।**
**ವಿವಿಧಾಶ್ಚ ಪೃಥಕ್ ಚೇಷ್ಟಾ ದೈವಂ ಚೈವಾತ್ರ ಪಂಚಮಮ್ ॥ ೧೪ ॥**

ಅಧಿಷ್ಠಾನಮ್—ಸ್ಥಳ, ತಥಾ—ಕೂಡಾ, ಕರ್ತಾ—ಕರ್ತನು, ಕರಣಮ್—ಸಾಧನಗಳು, ಚ—ಮತ್ತು, ಪೃಥಕ್-ವಿಧಮ್—ಭಿನ್ನ ಭಿನ್ನ ಬಗೆಯ, ವಿವಿಧಾಃ—ವಿವಿಧ, ಚ—ಮತ್ತು, ಪೃಥಕ್—ಪ್ರತ್ಯೇಕ, ಚೇಷ್ಟಾಃ—ಪ್ರಯತ್ನಗಳು, ದೈವಮ್—ಚ—ಕೂಡ, ಏವ—ಖಂಡಿತವಾಗಿ, ಅತ್ರ—ಇಲ್ಲಿ, ಪಂಚಮಮ್—ಐದನೆಯದು.

**ಕರ್ಮಸ್ಥಾನವು (ದೇಹ), ಕರ್ತ, ವಿವಿಧ ಕಾರಣಗಳು, ಅನೇಕ ಬಗೆಯ ಪ್ರಯತ್ನಗಳು, ಮತ್ತು ಕೊನೆಗೆ ಪರಮಾತ್ಮನು—ಈ ಐದು ಕರ್ಮಾಂಶಗಳು.**

**ಭಾವಾರ್ಥ : ಅಧಿಷ್ಠಾನಮ್** ಪದವು ದೇಹವನ್ನು ಸೂಚಿಸುತ್ತದೆ. ದೇಹಗತ ಆತ್ಮವು ಕರ್ಮಫಲಗಳನ್ನು ಉತ್ಪಾದಿಸಲು ಕರ್ಮ ಮಾಡುತ್ತದೆ. ಆದ್ದರಿಂದ **ಕರ್ತಾ,** "ಮಾಡುವವನು" ಎಂದು ಕರೆಯಲ್ಪಟ್ಟಿದೆ. ಆತ್ಮನನ್ನು ಕ್ಷೇತ್ರಜ್ಞನು ಮತ್ತು ಕರ್ತಾ ಎಂದು ಶ್ರುತಿಯಲ್ಲಿ ಹೇಳಿದೆ. **ಏಷ ಹಿ ದ್ರಷ್ಟಾ ಸ್ರಷ್ಟಾ** (ಪ್ರಶ್ನ ಉಪನಿಷದ್ 4.9). **ಜ್ಞೋऽತ ಏವ** ಎಂಬ ಶ್ಲೋಕಗಳ ಮೂಲಕ (2.3.18) ಎಂದು ವೇದಾಂತ ಸೂತ್ರದಲ್ಲಿ ಮತ್ತು **ಕರ್ತಾ ಶಾಸ್ತ್ರಾರ್ಥವತ್ತ್ವಾತ್** (2.3.33) ಎಂದು ಕೂಡ ದೃಢಪಟ್ಟಿದೆ. ಇಂದ್ರಿಯಗಳು ಕರ್ಮ ಸಾಧನಗಳು, ಮತ್ತು ಇಂದ್ರಿಯಗಳಿಂದ ಆತ್ಮವು ವಿವಿಧ ರೀತಿಯಲ್ಲಿ ವರ್ತಿಸುತ್ತದೆ. ಪ್ರತಿಯೊಂದು ಕರ್ಮದ ಸಲುವಾಗಿ ಭಿನ್ನ ಪ್ರಯತ್ನವಿರುತ್ತದೆ. ಆದರೆ ಒಬ್ಬನ ಎಲ್ಲ ಚಟುವಟಿಕೆಗಳು ಸಖನಾಗಿ ಹೃದಯದಲ್ಲಿರುವ ಪರಮಾತ್ಮನ ಇಚ್ಛೆಯನ್ನು ಅವಲಂಬಿಸಿವೆ. ಪರಮಪ್ರಭು ಪರಮ ಕಾರಣನು. ಈ ಸಂದರ್ಭಗಳಲ್ಲಿ ಹೃದಯದಲ್ಲಿ ಸನ್ನಿವೇಶಿತ ಪರಮಾತ್ಮನ ನಿರ್ದೇಶಾನುಸಾರ ಕೃಷ್ಣಪ್ರಜ್ಞೆಯಲ್ಲಿ ಕರ್ಮ ಮಾಡುವವನು ಸ್ವಾಭಾವಿಕವಾಗಿ ಯಾವ ಕರ್ಮದಿಂದಲೂ ಬದ್ಧನಲ್ಲ. ಪೂರ್ಣ ಕೃಷ್ಣಪ್ರಜ್ಞೆಗಳು ಕೊನೆಗೆ ತಮ್ಮ ಕರ್ಮಗಳಿಗೆ ಹೊಣೆಗಾರರಲ್ಲ. ಪ್ರತಿಯೊಂದು ಪರಮಾತ್ಮನ ಪರಮ ದೇವೋತ್ತಮ ಪುರುಷನ ಪರಮ ಇಚ್ಛೆಯನ್ನು ಅವಲಂಬಿಸಿದೆ.

**ಶರೀರವಾಙ್ಮನೋಭಿರ್ಯತ್ ಕರ್ಮ ಪ್ರಾರಭತೇ ನರಃ ।**
**ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ ॥ ೧೫ ॥**

ಶರೀರ—ಶರೀರದಿಂದ, ವಾಕ್—ಮಾತಿನಿಂದ, ಮನೋಭಿಃ—ಮತ್ತು ಮನಸ್ಸಿನಿಂದ, ಯತ್—ಯಾವುದು, ಕರ್ಮ—ಕರ್ಮವು, ಪ್ರಾರಭತೇ—ಪ್ರಾರಂಭವಾಗುತ್ತದೆ, ನರಃ—ಪುರುಷನು, ನ್ಯಾಯ್ಯಮ್—ನ್ಯಾಯವಾದ, ವಾ—ಅಥವಾ, ವಿಪರೀತಮ್—ತದ್ವಿರುದ್ಧ, ವಾ—ಅಥವಾ, ಪಂಚ—ಐದು, ತೇ—ಈ ಎಲ್ಲ, ತಸ್ಯ—ಅದರ, ಹೇತವಃ—ಕಾರಣಗಳು.

**ಒಬ್ಬನು ಕಾಯ, ವಾಚಾ ಅಥವಾ ಮನಸ್ಸಿನಿಂದ ನ್ಯಾಯವಾದ ಅಥವಾ ಅನ್ಯಾಯವಾದ ಯಾವುದೇ ಕಾರ್ಯ ಮಾಡಲಿ ಅದು ಈ ಐದು ಕಾರಣಗಳಿಂದ ಉತ್ಪನ್ನ.**

**ಭಾವಾರ್ಥ :** "ನ್ಯಾಯ" ಮತ್ತು "ವಿಪರೀತಮ್," ಎಂಬ ಪದಗಳು ಈ ಶ್ಲೋಕದಲ್ಲಿ ಬಹು ಮಹತ್ವದವು. ಶಾಸ್ತ್ರಗಳಲ್ಲಿ ವಿಧಿತ ನಿರ್ದೇಶನಗಳಿಗೆ ಅನುಸಾರವಾಗಿ ಮಾಡಿದ ಕಾರ್ಯವು ನ್ಯಾಯವಾದ ಕಾರ್ಯ, ಮತ್ತು ಶಾಸ್ತ್ರಜ್ಞಗಳ ತತ್ವಗಳಿಗೆ ವಿರುದ್ಧವಾದುದು ವಿಪರೀತ ಕಾರ್ಯ. ಆದರೆ ಮಾಡಿದ ಕಾರ್ಯ ಯಾವುದೇ ಇರಲಿ ಅದರ ಆಚರಣೆಯು ಸಂಪೂರ್ಣವಾಗಬೇಕಾದರೆ ಈ ಐದು ಕಾರಣಗಳು ಅಗತ್ಯ.

**ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ ।**
**ಪಶ್ಯತ್ಯಕೃತಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ ॥ ೧೬ ॥**

ತತ್ರ—ಅಲ್ಲಿ, ಏವಮ್—ಹೀಗೆ, ಸತಿ—ಇದ್ದು, ಕರ್ತಾರಮ್—ಕರ್ತಾರನು, ಆತ್ಮಾನಮ್—ತನ್ನನ್ನು, ಕೇವಲಮ್—ಏಕೈಕ, ತು—ಆದರೆ, ಯಃ—ಯಾವನೊಬ್ಬನು, ಪಶ್ಯತಿ—ನೋಡುತ್ತಾನೆ, ಅಕೃತ-ಬುದ್ಧಿತ್ವಾತ್—ಅಬುದ್ಧಿ ನಿಮಿತ್ತ, ನ—ಎಂದೂ, ಸಃ—ಅವನು, ಪಶ್ಯತಿ—ನೋಡುವುದಿಲ್ಲ, ದುರ್ಮತಿಃ—ಮೂಢನು.

**ಆದ್ದರಿಂದ ಐದು ಕಾರಣಗಳನ್ನು ಗಮನಿಸದೆ ತಾನೇ ಕರ್ತಾರನೆಂದು ತಿಳಿಯುವವನು ಖಂಡಿತ ಅಷ್ಟು ಬುದ್ಧಿವಂತನಲ್ಲ, ಮತ್ತು ಇರುವಂತೆ ವಸ್ತುಗಳನ್ನು ಕಾಣಲಾರನು.**

**ಭಾವಾರ್ಥ :** ಪರಮಾತ್ಮನು ಸಖನಾಗಿ ಒಳಗೆ ಕುಳಿತಿದ್ದಾನೆ ಎಂಬುದನ್ನೇ ಮೂರ್ಖನು ಅರಿತುಕೊಳ್ಳಲಾರನು. ಸ್ಥಳ, ಕರ್ತಾರ, ಪ್ರಯತ್ನ ಮತ್ತು ಇಂದ್ರಿಯಗಳು ಭೌತಿಕ ಕಾರಣಗಳಾಗಿದ್ದರೂ, ಪರಮನು, ಪರಮದೇವೋತ್ತಮ ಪುರುಷನು ಅಂತಿಮ ಕಾರಣನು. ಆದ್ದರಿಂದ ಒಬ್ಬನು ನಾಲ್ಕು ಭೌತಿಕ ಕಾರಣಗಳನ್ನು ಮಾತ್ರ ನೋಡುವುದೊಂದೇ ಅಲ್ಲದೆ ಪರಮ ನಿಮಿತ್ತ ಕಾರಣವನ್ನೂ ನೋಡಬೇಕು. ಪರಮನನ್ನು ಕಾಣದವನು ತಾನೇ ಕರ್ತನೆಂದು ಭಾವಿಸುತ್ತಾನೆ.

**ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।**
**ಹತ್ವಾಪಿ ಸ ಇಮಾಲ್ಲೋಕಾನ್ನ ಹನ್ತಿ ನ ನಿಬಧ್ಯತೇ ॥೧೭॥**

ಯಸ್ಯ—ಯಾರ, ನ—ಎಂದೂ, ಅಹಂಕೃತಃ—ಮಿಥ್ಯಾಹಂಕಾರದ, ಭಾವಃ—ಸ್ವಭಾವವು, ಬುದ್ಧಿಃ—ಬುದ್ಧಿ, ಯಸ್ಯ—ಯಾರ, ನ—ಎಂದೂ, ಲಿಪ್ಯತೇ—ಲೇಪವಾಗುವುದಿಲ್ಲ, ಹತ್ವಾ—ಕೊಂದರೂ, ಅಪಿ—ಕೂಡ, ಸಃ—ಅವನು, ಇಮಾನ್—ಈ, ಲೋಕಾನ್—ಲೋಕಗಳನ್ನು, ನ—ಎಂದೂ, ಹನ್ತಿ—ಕೊಲ್ಲುವುದಿಲ್ಲ, ನ—ಎಂದೂ, ನಿಬಧ್ಯತೇ—ಸಿಲುಕುವುದಿಲ್ಲ.

**ಮಿಥ್ಯಾಹಂಕಾರದಿಂದ ಪ್ರೇರಿತನಲ್ಲದವನು, ಯಾವನ ಬುದ್ಧಿಯು ನಿಬದ್ಧವಲ್ಲವೋ ಅವನು, ಈ ಜಗತ್ತಿನಲ್ಲಿ ಜನರನ್ನು ಕೊಂದರೂ ಕೂಡ, ಕೊಲ್ಲುವುದಿಲ್ಲ. ಅಥವಾ ಅವನು ತನ್ನ ಕಾರ್ಯಗಳಿಂದ ಬದ್ಧನೂ ಅಲ್ಲ.**

**ಭಾವಾರ್ಥ :** ಯುದ್ಧ ಮಾಡದಿರುವ ಇಚ್ಛೆಯು ಮಿಥ್ಯಾಹಂಕಾರದಿಂದ ಹುಟ್ಟುತ್ತದೆ ಎಂದು ಶ್ರೀಕೃಷ್ಣನು ಈ ಶ್ಲೋಕದಲ್ಲಿ ಅರ್ಜುನನಿಗೆ ತಿಳಿಸುತ್ತಾನೆ. ಅರ್ಜುನನು ತಾನೇ ಕರ್ತನೆಂದು ಭಾವಿಸಿದ್ದನು, ಆದರೆ ಅವನು ಒಳಗೂ ಹೊರಗೂ ಪರಮನ ಅಪ್ಪಣೆಯನ್ನು ಗಮನಿಸಲಿಲ್ಲ. ಪರಮನ ಅಪ್ಪಣೆ ಇದೆ ಎಂಬುದನ್ನು ಒಬ್ಬನು ತಿಳಿಯದಿದ್ದರೆ, ಅವನು ಏಕೆ ಕಾರ್ಯ ಮಾಡಬೇಕು? ಆದರೆ ಸ್ವಯಂಕರ್ತನಾಗಿ ಕರ್ಮದ ಉಪಾಯಗಳನ್ನು ಮತ್ತು ಪರಮಪ್ರಭು ಪರಮ ಅನುಮೋದಕನು ಎಂಬುದನ್ನು ಬಲ್ಲವನಾಗಿದ್ದರೆ, ಪ್ರತಿಯೊಂದನ್ನು ಮಾಡುವಲ್ಲಿ ಅವನು ಪರಿಪೂರ್ಣನು. ಅಂಥವನು ಎಂದೂ ಮೋಹಿತನಲ್ಲ. ವೈಯಕ್ತಿಕ ಚಟುವಟಿಕೆಗಳು ಮತ್ತು ಹೊಣೆ, ಮಿಥ್ಯಾಹಂಕಾರ ಮತ್ತು ದೈವಹೀನತೆ ಅಥವಾ ಕೃಷ್ಣಪ್ರಜ್ಞಾ ಅಭಾವದಿಂದ ಉಂಟಾಗುತ್ತವೆ. ಪರಮಾತ್ಮನ ಅಥವಾ ಪರಮ ದೇವೋತ್ತಮ ಪುರುಷನ ನಿರ್ದೇಶನದ ಮೇರೆಗೆ ಕೃಷ್ಣಪ್ರಜ್ಞೆಯಲ್ಲಿ ಕಾರ್ಯ ಮಾಡುವವನು ಕೊಂದರೂ ಕೂಡ, ಕೊಲ್ಲುವುದಿಲ್ಲ ಅಥವಾ ಅಂಥ ಸಂಹಾರ ಪ್ರತಿಕ್ರಿಯೆಗಳಿಂದ ವನೆಂದೂ ಬಾಧಿತನಲ್ಲ. ಯೋಧನು ತನ್ನ ಮೇಲಿನ ಅಧಿಕಾರಿಯ ಆದೇಶದ ಮೇರೆಗೆ ಕೊಂದಾಗ, ಅವನು ದೋಷಿಯಲ್ಲ, ಆದರೆ ಸೈನಿಕನು ತನಗಾಗಿ ಕೊಂದರೆ, ಅವನು ಖಂಡಿತ ನ್ಯಾಯಾಲಯದ ನಿರ್ಣಯಕ್ಕೆ ಒಳಪಡುತ್ತಾನೆ.

**ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ ।**
**ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ ॥ ೧೮ ॥**

ಜ್ಞಾನಮ್—ಜ್ಞಾನ, ಜ್ಞೇಯಮ್—ಜ್ಞಾನ ವಿಷಯ, ಪರಿಜ್ಞಾತಾ—ತಿಳಿಯುವವನು, ತ್ರಿ–ವಿಧಾ—ಮೂರು ವಿಧದ, ಕರ್ಮ—ಕರ್ಮದ, ಚೋದನಾ—ಚೋದನೆ, ಕರಣಮ್—ಇಂದ್ರಿಯಗಳು, ಕರ್ಮ—ಕರ್ಮದ, ಕರ್ತಾ—ಕರ್ತಾ, ಇತಿ—ಹೀಗೆ, ತ್ರಿವಿಧಃ—ಮೂರು ಬಗೆಯ, ಕರ್ಮ—ಕರ್ಮದ, ಸಂಗ್ರಹಃ—ಸಂಗ್ರಹ.

**ಜ್ಞಾನ, ಜ್ಞಾನದ ವಿಷಯ ಮತ್ತು ತಿಳಿಯುವವನು ಇವು ಮೂರು ಕರ್ಮ ಚೋದಕ ಅಂಶಗಳು ; ಇಂದ್ರಿಯಗಳು, ಕರ್ಮ ಮತ್ತು ಕರ್ತಾ, ಇವು ಕರ್ಮದ ಮೂರು ಘಟಕಗಳು.**

**ಭಾವಾರ್ಥ :** ನಿತ್ಯ ಕರ್ಮಕ್ಕೆ ಮೂರು ಬಗೆಯ ಚೋದನೆಗಳುಂಟು. ಜ್ಞಾನ, ಜ್ಞಾನ ವಿಷಯ ಮತ್ತು ತಿಳಿಯುವವನು. ಕರ್ಮಸಾಧನಗಳು ಮತ್ತು ಸ್ವಯಂ ಕರ್ಮ ಮತ್ತು ಕರ್ತನು ಕರ್ಮದ ಘಟಕಗಳೆಂದು ಕರೆದಿದೆ. ಯಾವೊಬ್ಬ ಮನುಷ್ಯನಿಂದ ಮಾಡಲ್ಪಟ್ಟ ಯಾವುದೇ ಕಾರ್ಯವು ಈ ಮೂರು ಘಟಕಗಳನ್ನು ಒಳಗೊಂಡಿರುತ್ತದೆ. ಒಬ್ಬನು ಕಾರ್ಯ ಮಾಡುವ ಮುಂಚೆ ಅದು ಸ್ಫೂರ್ತಿ ಎಂಬ ಯಾವುದೋ ಚೋದನವಿರುತ್ತದೆ. ವಾಸ್ತವಿಕವಾಗಿ ಕರ್ಮ ನಡೆಯುವ ಮುಂಚೆ ಕಂಡುಕೊಂಡ ಯಾವುದೇ ಪರಿಹಾರವು ಕರ್ಮದ ಸೂಕ್ಷ್ಮರೂಪ. ಆಗ ಕರ್ಮವು ಕಾರ್ಯರೂಪ ತಾಳುತ್ತದೆ. ಮೊದಲು ಒಬ್ಬನು ವಿಚಾರದ ಮಾನಸಿಕ ಪ್ರಕ್ರಿಯೆಯನ್ನು, ಭಾವನೆ ಮತ್ತು ಇಚ್ಛೆಯನ್ನು ಹೊಂದಬೇಕು ಮತ್ತು ಅದು ಚೋದನ ಎಂದು ಕರೆದಿದೆ. ಕರ್ಮ ಚೋದನವು ಶಾಸ್ತ್ರದಿಂದೇ

ಬರಲಿ ಅಥವಾ ಗುರೂಪದೇಶದಿಂದೇ ಬರಲಿ ಒಂದೇ. ಸ್ಫೂರ್ತಿ ಮತ್ತು ಕರ್ತಾ ಇದ್ದಾಗ ವಾಸ್ತವಿಕ ಕಾರ್ಯವು ಸಕಲೇಂದ್ರಿಯಗಳ ಕೇಂದ್ರವಾದ ಮನಸ್ಸು ಸೇರಿ ಇಂದ್ರಿಯಗಳ ಸಹಾಯದಿಂದ ನಡೆಯುತ್ತದೆ. ಚಟುವಟಿಕೆಯ ಎಲ್ಲ ಘಟಕಗಳ ಒಟ್ಟು ಮೊತ್ತವು ಕರ್ಮಸಂಗ್ರಹ ಎಂದು ಕರೆದಿದೆ.

**ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ ।**
**ಪ್ರೋಚ್ಯತೇ ಗುಣಸಂಖ್ಯಾನೇ ಯಥಾವಚ್ಛೃಣು ತಾನ್ಯಪಿ ॥ ೧೯ ॥**

ಜ್ಞಾನಮ್—ಜ್ಞಾನ, ಕರ್ಮ—ಕರ್ಮ, ಚ—ಕೂಡ, ಕರ್ತಾ—ಕರ್ತೃ, ಚ—ಕೂಡ, ತ್ರಿಧಾ—ಮೂರು ಬಗೆಯ, ಏವ—ಖಂಡಿತವಾಗಿ, ಗುಣ-ಭೇದತಃ—ಭಿನ್ನ ಪ್ರಕೃತಿ ಗುಣಗಳ ಪ್ರಕಾರ, ಪ್ರೋಚ್ಯತೇ—ಹೇಳಲ್ಪಟ್ಟಿವೆ, ಗುಣ-ಸಂಖ್ಯಾನೇ—ಭಿನ್ನ ಭಿನ್ನ ಗುಣಗಳ ಪ್ರಕಾರ, ಯಥಾ-ವತ್—ಇರುವ ಹಾಗೆ, ಶೃಣು—ಕೇಳು, ತಾನಿ—ಅವೆಲ್ಲವುಗಳನ್ನು, ಅಪಿ—ಕೂಡ.

**ಭಿನ್ನಭಿನ್ನ ಭೌತಿಕ ಪ್ರಕೃತಿ ಗುಣಾನುಸಾರ, ಮೂರು ಬಗೆಯ ಜ್ಞಾನ, ಕರ್ಮ ಮತ್ತು ಕರ್ತಾ ಇರುತ್ತವೆ. ಈಗ ಅವುಗಳನ್ನು ನನ್ನಿಂದ ಕೇಳು.**

**ಭಾವಾರ್ಥ :** ಹದಿನಾಲ್ಕನೆಯ ಅಧ್ಯಾಯದಲ್ಲಿ ಭೌತಿಕ ಪ್ರಕೃತಿ ಗುಣಗಳ ಮೂರು ಭಾಗಗಳು ವರ್ಣಿತವಾಗಿವೆ. ಆ ಅಧ್ಯಾಯದಲ್ಲಿ ಸತ್ತ್ವಗುಣವು ಪ್ರಕಾಶಮಾನ, ರಾಜಸ ಗುಣವು ಭೌತಿಕ, ಮತ್ತು ತಮೋಗುಣವು ಸೋಮಾರಿತನಕ್ಕೆ ಮತ್ತು ಉದ್ಧಟತನಕ್ಕೆ ಸಹಾಯಕ ಎಂದು ಹೇಳಲ್ಪಟ್ಟಿದೆ. ಭೌತಿಕ ಪ್ರಕೃತಿಯ ಎಲ್ಲ ಗುಣಗಳು ಬಂಧಕ; ಅವು ಮೋಕ್ಷ ಕಾರಣಗಳಲ್ಲ, ಸತ್ತ್ವಗುಣದಲ್ಲಿ ಕೂಡ ಒಬ್ಬನು ಬದ್ಧನು. ಹದಿನೇಳನೆಯ ಅಧ್ಯಾಯದಲ್ಲಿ, ಭಿನ್ನಭಿನ್ನ ಭೌತಿಕ ಪ್ರಕೃತಿ ಗುಣಗಳ ಭಿನ್ನಭಿನ್ನ ಮಾದರಿಯ ಜನರಿಂದ ನಡೆಯುವ ಭಿನ್ನಭಿನ್ನ ಮಾದರಿಯ ಪೂಜೆಗಳು ವರ್ಣಿತವಾಗಿವೆ. ಈ ಶ್ಲೋಕದಲ್ಲಿ ಮೂರು ಭೌತಿಕ ಗುಣಾನುಸಾರ ಭಿನ್ನಭಿನ್ನ ಬಗೆಯ ಜ್ಞಾನ, ಕರ್ಮಗಳು ಮತ್ತು ಸ್ವಯಂ ಕರ್ಮವನ್ನು ಕುರಿತು ತಾನು ಹೇಳಬಯಸುವುದಾಗಿ ಭಗವಂತನು ಹೇಳುತ್ತಾನೆ.

**ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ತ್ವಿಕಮ್ ॥ ೨೦ ॥**

ಸರ್ವ-ಭೂತೇಷು—ಎಲ್ಲ ಜೀವಿಗಳಲ್ಲಿ, ಯೇನ—ಯಾವುದರಿಂದ, ಏಕಮ್—ಒಂದು, ಭಾವಮ್—ಸನ್ನಿವೇಶವು, ಅವ್ಯಯಮ್—ಅವ್ಯಯ, ಈಕ್ಷತೇ—ಒಬ್ಬನು ನೋಡುತ್ತಾನೆ, ಅವಿಭಕ್ತಮ್—ಅವಿಭಕ್ತ, ವಿಭಕ್ತೇಷು—ಅಸಂಖ್ಯ ವಿಭಕ್ತಗಳಲ್ಲಿ ತತ್—ಆ, ಜ್ಞಾನಮ್—ಜ್ಞಾನವನ್ನು, ವಿದ್ಧಿ—ತಿಳಿದುಕೋ, ಸಾತ್ತ್ವಿಕಮ್—ಸಾತ್ವಿಕವೆಂದು.

**ಜೀವಿಗಳು ಅಸಂಖ್ಯ ರೂಪಗಳಲ್ಲಿ ವಿಭಕ್ತವಾಗಿದ್ದರೂ ಕೂಡ, ಸಕಲ ಜೀವಿಗಳಲ್ಲಿ ಒಂದೇ ಅವಿಭಕ್ತ ಚೇತನ ಸ್ವರೂಪವನ್ನು ಕಾಣುವ ಜ್ಞಾನದಿಂದ, ನೀನು ಸಾತ್ತ್ವಿಕ ಗುಣದಲ್ಲಿರುವುದಾಗಿ ತಿಳಿದುಕೋ.**

**ಭಾವಾರ್ಥ :** ದೇವತೆಯಾಗಿರಲಿ, ಮಾನವನಾಗಿರಲಿ, ಪಶುವಾಗಿರಲಿ, ಪಕ್ಷಿಯಾಗಿರಲಿ, ಪ್ರಾಣಿಯಾಗಿರಲಿ, ಜಲಚರವಾಗಿರಲಿ ಅಥವಾ ಸಸ್ಯವಾಗಿರಲಿ, ಪ್ರತಿಯೊಂದು ಜೀವಿಯಲ್ಲಿ ಒಂದೇ ಚೇತನಾತ್ಮನನ್ನು ಕಾಣುವವನು, ಸತ್ತ್ವ ಗುಣದ ಜ್ಞಾನ ಹೊಂದಿರುತ್ತಾನೆ. ಎಲ್ಲ ಜೀವಿಗಳು ತಮ್ಮ ಪೂರ್ವ ಕರ್ಮಾನುಸಾರ ಭಿನ್ನಭಿನ್ನ ದೇಹಗಳನ್ನು ಹೊಂದಿದ್ದರೂ, ಅವುಗಳಲ್ಲಿ ಒಂದೇ ಚೇತನಾತ್ಮವಿದೆ. ಏಳನೆಯ ಅಧ್ಯಾಯದಲ್ಲಿ ವರ್ಣಿಸಿದಂತೆ, ಪ್ರತಿಯೊಂದು ದೇಹದಲ್ಲಿ ವ್ಯಕ್ತ ಜೀವಶಕ್ತಿ ಪರಮ ಪ್ರಭುವಿನ ಪರಾಪ್ರಕೃತಿಯ ನಿಮಿತ್ತವಾದುದು. ಆದ್ದರಿಂದ, ಪರಾಪ್ರಕೃತಿಯಾದ ಆ ಒಂದು ಜೀವಶಕ್ತಿಯನ್ನು ಪ್ರತಿಯೊಂದು ದೇಹದಲ್ಲಿ ಕಾಣುವುದನ್ನು ಸತ್ತ್ವಗುಣದಲ್ಲಿ ಕಾಣುವಂತಾಗಿದೆ. ದೇಹಗಳು ನಾಶಶೀಲವಾಗಿದ್ದರೂ, ಆ ಜೀವಶಕ್ತಿಯು ಅವಿನಾಶಿ. ದೇಹ ವಿಷಯದಲ್ಲಿ ಭಿನ್ನತೆಗಳು ಗೋಚರ; ಬದ್ಧ ಜೀವನದಲ್ಲಿ ಭೌತಿಕ ಅಸ್ತಿತ್ವದ ನಾನಾ ರೂಪಗಳ ಇರುವುದರಿಂದ ಜೀವ ಶಕ್ತಿಯು ವಿಭಕ್ತವಾಗಿರುವುದೆಂದು ತೋರುತ್ತದೆ. ಅಂಥ ವ್ಯಕ್ತಿಶೂನ್ಯ ಜ್ಞಾನವು ಆತ್ಮ ಸಾಕ್ಷಾತ್ಕಾರದ ಅಂಶ.

**ಪೃಥಕ್ತ್ವೇನ ತು ಯಜ್ ಜ್ಞಾನಂ ನಾನಾಭಾವಾನ್ ಪೃಥಗ್ ವಿಧಾನ್ ।**
**ವೇತ್ತಿ ಸರ್ವೇಷು ಭೂತೇಷು ತಜ್ ಜ್ಞಾನಂ ವಿದ್ಧಿ ರಾಜಸಮ್ ॥ ೨೧ ॥**

ಪೃಥಕ್ತ್ವೇನ—ವಿಭಾಗ ನಿಮಿತ್ತ, ತು—ಆದರೆ, ಯತ್—ಯಾವುದು, ಜ್ಞಾನಮ್—ಜ್ಞಾನವನ್ನು, ನಾನಾ ಭಾವಾನ್—ನಾನಾ ಸನ್ನಿವೇಶಗಳು, ಪೃಥಕ್-ವಿಧಾನ್—ಭಿನ್ನಭಿನ್ನವೆಂದು, ವೇತ್ತಿ—ತಿಳಿಯುತ್ತಾನೆ, ಸರ್ವೇಷು—ಎಲ್ಲರಲ್ಲಿ, ಭೂತೇಷು—ಜೀವಿಗಳಲ್ಲಿ, ತತ್—ಆ, ಜ್ಞಾನಮ್—ಜ್ಞಾನವನ್ನು, ವಿದ್ಧಿ—ತಿಳಿದುಕೊಳ್ಳಬೇಕು, ರಾಜಸಮ್—ರಾಜಸವೆಂದು.

**ಪ್ರತಿಯೊಂದು ಭಿನ್ನ ದೇಹದಲ್ಲಿ ಭಿನ್ನ ಬಗೆಯ ಜೀವಿ ಇರುವನು ಎಂದು ಒಬ್ಬನು ನೋಡುವ ಜ್ಞಾನವು ರಾಜಸ ಗುಣದಲ್ಲಿರುವುದೆಂದು ನೀನು ಅರಿಯಬೇಕು.**

**ಭಾವಾರ್ಥ :** ಭೌತಿಕ ದೇಹವು ಜೀವಿ ಮತ್ತು ದೇಹನಾಶದೊಂದಿಗೆ ಪ್ರಜ್ಞೆಯು ಕೂಡ ನಾಶವಾಗುವುದೆಂಬ ಕಲ್ಪನೆಯು ರಾಜಸ ಜ್ಞಾನ ಎಂದು ಕರೆದಿದೆ. ಆ ಜ್ಞಾನಾನುಸಾರ, ದೇಹಗಳು ಪರಸ್ಪರ ಭಿನ್ನವೇಕೆಂದರೆ, ಭಿನ್ನ ಭಿನ್ನ ಬಗೆಯ ಪ್ರಜ್ಞಾಭಿವೃದ್ಧಿ ನಿಮಿತ್ತ, ಅನ್ಯಥಾ ಪ್ರಜ್ಞೆಯನ್ನು ವ್ಯಕ್ತಮಾಡುವ ಪ್ರತ್ಯೇಕ ಆತ್ಮ ಇಲ್ಲ. ದೇಹವೇ ಆತ್ಮ, ದೇಹಾತೀತವಾದ ಪ್ರತ್ಯೇಕ ಆತ್ಮವಿಲ್ಲ. ಆ ಜ್ಞಾನದ ಪ್ರಕಾರ ಪ್ರಜ್ಞೆಯು ಅನಿತ್ಯ ಅಥವಾ ವ್ಯಕ್ತಿಗತ ಆತ್ಮರೇ ಇಲ್ಲ, ಆದರೆ ಜ್ಞಾನಪೂರ್ಣವಾದ ಸರ್ವವ್ಯಾಪ್ತ ಆತ್ಮ ಮಾತ್ರ ಇದೆ, ಮತ್ತು ಈ ದೇಹವು ಅನಿತ್ಯ ಅವಿದ್ಯಾ ಉದ್ಭೂತಿ ಅಥವಾ ಈ ದೇಹಾತಿರಿಕ್ತ ವಿಶಿಷ್ಟ ವ್ಯಕ್ತಿಯೂ ಇಲ್ಲ ಅಥವಾ ಪರಮ ಆತ್ಮನೂ ಇಲ್ಲ. ಅಂಥ ಎಲ್ಲ ಕಲ್ಪನೆಗಳು ತಮೋಗುಣದ ಉತ್ಪತ್ತಿಗಳೆಂದು ಪರಿಗಣಿತ.

**ಯತ್ತು ಕೃತ್ಸ್ನವದೇಕಸ್ಮಿನ್ ಕಾರ್ಯೇ ಸಕ್ತಮಹೈತುಕಮ್ ।**
**ಅತತ್ತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಮ್ ॥ ೨೨ ॥**

ಯತ್—ಯಾವುದು ಅದು, ತು—ಆದರೆ, ಕೃತ್ಸ್ನ-ವತ್—ಸರ್ವಸ್ವವಾಗಿ, ಏಕಸ್ಮಿನ್—ಒಂದರಲ್ಲಿಯೇ, ಕಾರ್ಯೇ—ಕಾರ್ಯದಲ್ಲಿ, ಸಕ್ತಮ್—ಸಕ್ತ, ಅಹೈತುಕಮ್—ಕಾರಣರಹಿತ, ಅತತ್ತ್ವ-ಅರ್ಥ-ವಿತ್—ಸತ್ಯಜ್ಞಾನವಿಲ್ಲದೆ, ಅಲ್ಪಮ್ ಅತ್ಯಲ್ಪ, ಚ—ಕೂಡ, ತತ್—ಅದು, ತಾಮಸಮ್—ತಾಮಸ ಗುಣದಲ್ಲಿದೆ ಎಂದು, ಉದಾಹೃತಮ್—ಹೇಳಲಾಗಿದೆ.

**ಮತ್ತು ಸತ್ಯದ ಜ್ಞಾನವಿಲ್ಲದೆ ಒಂದು ಬಗೆಯ ಕಾರ್ಯವು ಸರ್ವಸ್ವ ಎಂದು ತಿಳಿದು ಅದರಲ್ಲಿಯೇ ಆಸಕ್ತವಾಗುವ ಮತ್ತು ಅತ್ಯಲ್ಪವಾದ ಜ್ಞಾನವು ತಾಮಸ ಗುಣದಲ್ಲಿ ಇದೆಯೆಂದು ಹೇಳಲಾಗಿದೆ.**

**ಭಾವಾರ್ಥ :** ಸಾಮಾನ್ಯ ಮಾನವನ "ಜ್ಞಾನವು" ಸದಾ ಅಂಧಕಾರ ಅಥವಾ ತಮೋ ಗುಣದಲ್ಲಿರುವುದು, ಏಕೆಂದರೆ ಬದ್ಧ ಜೀವನದ ಪ್ರತಿಯೊಬ್ಬ ಜೀವಿಯೂ ತಮೋಗುಣದಲ್ಲಿ ಹುಟ್ಟುತ್ತಾನೆ. ಪ್ರಮಾಣಾಧಾರಗಳು ಅಥವಾ ಶಾಸ್ತ್ರ ಆಜ್ಞೆಗಳ ಮೂಲಕ ಜ್ಞಾನ ಬೆಳೆಸಿಕೊಳ್ಳದವನು ದೇಹಕ್ಕೆ ಮಾತ್ರ ಸೀಮಿತವಾದ ಜ್ಞಾನ ಹೊಂದಿರುತ್ತಾನೆ. ಅವನು ಶಾಸ್ತ್ರ ನಿರ್ದೇಶನಾನುಸಾರ ಕಾರ್ಯಮಾಡುವ ವಿಷಯದಲ್ಲಿ ಆಸಕ್ತನಲ್ಲ. ಹಣ ಅವನಿಗೆ ದೇವರು ಮತ್ತು ಜ್ಞಾನ ಎಂದರೆ ದೈಹಿಕ ಬೇಡಿಕೆಗಳ ತೃಪ್ತಿ. ಪರತತ್ತ್ವಕ್ಕೆ ಅಂಥ ಜ್ಞಾನ ಸಂಬಂಧಿತವಲ್ಲ. ಅದು ಸರಿಸುಮಾರು ಸಾಮಾನ್ಯ ಪಶುಗಳ ಜ್ಞಾನದಂತೆ ಎಂದರೆ ಆಹಾರ, ನಿದ್ರೆ, ರಕ್ಷಣೆ, ಮೈಥುನದ ಜ್ಞಾನ. ಅಂಥ ಜ್ಞಾನವು ತಮೋಗುಣದ ಉತ್ಪತ್ತಿ ಎಂದು ಇಲ್ಲಿ ವರ್ಣಿತ. ಅರ್ಥಾತ್, ಈ ದೇಹಾತಿರಿಕ್ತ ಚೇತನಾತ್ಮವನ್ನು ಕುರಿತ ಜ್ಞಾನವನ್ನು ಸತ್ತ್ವಗುಣದಲ್ಲಿನ ಜ್ಞಾನ ಎಂದು ಕರೆದಿದೆ. ಲೌಕಿಕ ತರ್ಕ ಮತ್ತು ಮಾನಸಿಕ ಊಹಾಪೋಹದ ನಿಮಿತ್ತ ಅನೇಕ ಪ್ರಮೇಯಗಳನ್ನು ಮತ್ತು ತತ್ತ್ವಗಳನ್ನು ಸೃಷ್ಟಿಸುವ ಜ್ಞಾನವು ರಾಜಸ ಗುಣದ ಉತ್ಪತ್ತಿ, ಮತ್ತು ದೇಹವನ್ನು ಸೌಖ್ಯವಾಗಿಡುವ ಕುರಿತ ಮಾತ್ರದ ಜ್ಞಾನವು ತಮೋಗುಣದಲ್ಲಿದೆ ಎಂದು ಹೇಳಲಾಗಿದೆ.

**ನಿಯತಂ ಸಂಗರಹಿತಮರಾಗದ್ವೇಷತಃ ಕೃತಮ್ ।**
**ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ತ್ವಿಕಮುಚ್ಯತೇ ॥೨೩॥**

ನಿಯತಮ್—ನಿಯತ, ಸಂಗ-ರಹಿತಮ್—ಸಂಗರಹಿತವಾಗಿ, ಅರಾಗದ್ವೇಷತಃ—ಪ್ರೀತಿ ಅಥವಾ ಅಸೂಯೆ ಇಲ್ಲದೆ, ಕೃತಮ್—ಮಾಡಿದ, ಅಫಲ-ಪ್ರೇಪ್ಸುನಾ—ಕಾಮ್ಯ ಫಲ ಕಾಮನೆ ಇಲ್ಲದೆ, ಕರ್ಮ—ಕರ್ಮ, ಯತ್—ಯಾವುದು, ತತ್—ಅದು, ಸಾತ್ತ್ವಿಕಮ್—ಸಾತ್ತ್ವಿಕ ಗುಣದಲ್ಲಿದೆ, ಉಚ್ಯತೇ—ಎಂದು ಕರೆದಿದೆ.

**ನಿಯಂತ್ರಿತವೂ ಮತ್ತು ಅನುರಕ್ತಿ ಇಲ್ಲದೆ, ರಾಗದ್ವೇಷರಹಿತವಾಗಿ, ಮತ್ತು ಕಾಮ್ಯಫಲಾಪೇಕ್ಷೆ ಇಲ್ಲದೆ ಆಚರಿಸಿದ ಕರ್ಮವು ಸಾತ್ತ್ವಿಕ ಗುಣದ್ದು ಎಂದು ಹೇಳಲಾಗಿದೆ.**

**ಭಾವಾರ್ಥ :** ಸಮಾಜದ ಭಿನ್ನಭಿನ್ನ ವರ್ಣ ಮತ್ತು ಆಶ್ರಮೋಚಿತ ಶಾಸ್ತ್ರ ವಿಧಿತ ನಿಯಂತ್ರಿತ ವೃತ್ತಿ ಕರ್ತವ್ಯಗಳು, ಮೋಹ ಅಥವಾ ಒಡೆತನದ ಅಧಿಕಾರಗಳಿಲ್ಲದೆ ನಿರ್ವಹಿ

ಸಲ್ಪಟ್ಟ, ಆದರಿಂದ, ರಾಗದ್ವೇಷರಹಿತವಾದ ಮತ್ತು ಆತ್ಮ ತೃಪ್ತಿ ಅಥವಾ ಆತ್ಮ ತುಷ್ಟಿಗಲ್ಲದೆ ಪರಮನ ತುಷ್ಟಿಗಾಗಿ ಕೃಷ್ಣಪ್ರಜ್ಞೆಯಲ್ಲಿ ಆಚರಿಸಿದ ಕರ್ತವ್ಯಗಳು ಸಾತ್ವಿಕ ಗುಣದಲ್ಲಿನ ಕರ್ತವ್ಯಗಳೆಂದು ಕರೆದಿದೆ.

**ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ ।**
**ಕ್ರಿಯತೇ ಬಹುಲಾಯಾಸಂ ತದ್ ರಾಜಸಮುದಾಹೃತಮ್ ॥ ೨೪ ॥**

ಯತ್—ಯಾವುದು ಅದು, ತು—ಆದರೆ, ಕಾಮ-ಈಪ್ಸುನಾ—ಕಾಮ್ಯ ಫಲ ಕಾಮನೆಗಳು ಇರುವವನಿಂದ, ಕರ್ಮ—ಕರ್ಮ, ಸ-ಅಹಂಕಾರೇಣ—ಅಹಂಕಾರ ದೊಡನೆ, ವಾ—ಅಥವಾ, ಪುನಃ—ಮತ್ತೆ, ಕ್ರಿಯತೇ—ಮಾಡಿದ, ಬಹುಲ-ಆಯಾಸಮ್—ಬಹು ಪ್ರಯಾಸದೊಡನೆ, ತತ್—ಅದು, ರಾಜಸಮ್—ರಾಜಸ ಗುಣದಲ್ಲಿದೆ, ಉದಾಹೃತಮ್—ಎಂದು ಹೇಳಿದೆ.

**ಆದರೆ, ಮಿಥ್ಯಾಹಂಕಾರ ಭಾವದಿಂದ ಆಚರಿಸಿದ ಮತ್ತು ತನ್ನ ಇಚ್ಛೆಗಳನ್ನು ತುಷ್ಟಿಪಡಿಸಿಕೊಳ್ಳಬಯಸುವವನಿಂದ, ಬಹು ಪ್ರಯಾಸದೊಡನೆ ಆಚರಿಸಿದ ಕಾರ್ಯವು ರಜೋಗುಣದಲ್ಲಿನ ಕರ್ಮ ಎಂದು ಕರೆದಿದೆ.**

**ಅನುಬನ್ಧಂ ಕ್ಷಯಂ ಹಿಂಸಾಮನಪೇಕ್ಷ್ಯ ಚ ಪೌರುಷಮ್ ।**
**ಮೋಹಾದಾರಭ್ಯತೇ ಕರ್ಮ ಯತ್ತತ್ತಾಮಸಮುಚ್ಯತೇ ॥ ೨೫ ॥**

ಅನುಬನ್ಧಮ್—ಭವಿಷ್ಯ ಬಂಧನದ, ಕ್ಷಯಮ್—ನಾಶ, ಹಿಂಸಾಮ್—ಮತ್ತು ಇತರರ ಸಂಕಟ, ಅನಪೇಕ್ಷ್ಯ—ಪರಿಣಾಮಗಳನ್ನು ಲೆಕ್ಕಿಸದೆ, ಚ—ಸಹ, ಪೌರುಷಮ್—ಸ್ವ ಇಚ್ಛಾ, ಮೋಹಾತ್—ಮೋಹದಿಂದ, ಆರಭ್ಯತೇ—ಆರಂಭಿಸಿದ, ಕರ್ಮ—ಕರ್ಮವು, ಯತ್—ಯಾವುದು, ತತ್—ಅದು, ತಾಮಸಮ್—ತಮೋಗುಣ ದಲ್ಲಿನದು, ಉಚ್ಯತೇ—ಎಂದು ಹೇಳಿದೆ.

**ಶಾಸ್ತ್ರಾಜ್ಞೆಗಳನ್ನು ಅಲಕ್ಷಿಸಿ, ಇತರರಿಗೆ ಹಿಂಸೆ ಅಥವಾ ಸಂಕಟವನ್ನು ಅಥವಾ ಭವಿಷ್ಯ ಬಂಧನವನ್ನು ಲೆಕ್ಕಿಸದೆ ಮೋಹವಶವಾಗಿ ಮಾಡಿದ ಕರ್ಮವು ತಾಮಸ ಗುಣದಲ್ಲಿಯ ಕರ್ಮ ಎಂದು ಹೇಳಿದೆ.**

**ಭಾವಾರ್ಥ :** ಒಬ್ಬನು ತನ್ನ ಕರ್ಮಗಳ ವರದಿಯನ್ನು ರಾಜ್ಯಕ್ಕೆ ಅಥವಾ ಯಮ ದೂತರೆಂಬ ಪರಮ ಪ್ರಭುವಿನ ಪ್ರತಿನಿಧಿಗಳಿಗೆ ಒಪ್ಪಿಸಬೇಕಾಗುವುದು. ಹೊಣೆಯರಿಯದ ಕರ್ಮವು ವಿನಾಶಕಾರಿ, ಏಕೆಂದರೆ ಅದು ಶಾಸ್ತ್ರಾಜ್ಞೆಯ ನಿಯಂತ್ರಣ ತತ್ತ್ವಗಳನ್ನು ನಾಶ ಪಡಿಸುತ್ತದೆ. ಅದು ಹೆಚ್ಚಾಗಿ ಹಿಂಸಾಪರವಾಗಿದ್ದು ಇತರ ಜೀವಿಗಳಿಗೆ ದುಃಖಕಾರಕ. ಅಂಥ ಹೊಣೆಯರಿಯದ ಕರ್ಮವು ಒಬ್ಬನ ಸ್ವಾನುಭವದ ಹಿನ್ನೆಲೆಯಲ್ಲಿ ಮಾಡಲ್ಪಡುತ್ತದೆ. ಇದು ಮಾಯೆ ಎಂದು ಕರೆದಿದೆ. ಅಂಥ ಎಲ್ಲ ಮೋಹ ಕರ್ಮವು ತಾಮಸ ಗುಣದ ಉತ್ಪತ್ತಿ.

**ಮುಕ್ತಸಂಗೋಽನಹಂವಾದೀ ಧೃತ್ಯುತ್ಸಾಹಸಮನ್ವಿತಃ ।**
**ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ತ್ವಿಕ ಉಚ್ಯತೇ ॥ ೨೬ ॥**

ಮುಕ್ತ-ಸಂಗಃ—ಎಲ್ಲ ಭೌತಿಕ ಸಂಗ ಮುಕ್ತನಾಗಿ, ಅನಹಮ್‌ವಾದಿ—ಮಿಥ್ಯಾಹಂಕಾರ ರಹಿತನಾಗಿ, ಧೃತಿ—ದೃಢ ನಿಶ್ಚಯದೊಡನೆ, ಉತ್ಸಾಹ—ಮತ್ತು ಮಹಾ ಉತ್ಸಾಹದಿಂದ,ಸಮನ್ವಿತಃ—ಕೂಡಿದವನಾಗಿ, ಸಿದ್ಧಿ—ಪರಿಪೂರ್ಣತೆಯಲ್ಲಿ,ಅಸಿದ್ಧ್ಯೋಃ—ಮತ್ತು ವಿಫಲತೆಯಲ್ಲಿ, ನಿರ್ವಿಕಾರ—ವಿಕಾರರಹಿತನಾದ, ಕರ್ತಾ—ಕರ್ತನು, ಸಾತ್ತ್ವಿಕಃ—ಸಾತ್ತ್ವಿಕ ಗುಣದಲ್ಲಿರುವನು, ಉಚ್ಯತೇ—ಎಂದು ಹೇಳಿದೆ.

**ಮಿಥ್ಯಾಹಂಕಾರವಿಲ್ಲದೆ, ಮಹಾ ದೃಢನಿಶ್ಚಯ ಮತ್ತು ಉತ್ಸಾಹದೊಡನೆ ಮತ್ತು ಸಿದ್ಧಿ ಅಥವಾ ವಿಫಲತೆಯಲ್ಲಿ ಸಂಚಲಿಸದೆ ಭೌತಿಕ ಪ್ರಕೃತಿಯ ಗುಣಗಳ ಸಂಗರಹಿತನಾಗಿ ತನ್ನ ಕರ್ತವ್ಯ ಮಾಡುವವನನ್ನು ಸಾತ್ತ್ವಿಕ ಗುಣದಲ್ಲಿನ ಕರ್ತಾ ಎಂದು ಹೇಳಿದೆ.**

**ಭಾವಾರ್ಥ :** ಕೃಷ್ಣಪ್ರಜ್ಞೆಯು ಭೌತಿಕ ಪ್ರಕೃತಿ ಗುಣಗಳಿಗೆ ಸದಾ ಅತೀತನು. ವಹಿಸಿಕೊಟ್ಟ ಕರ್ಮ ಫಲದ ಬಗ್ಗೆ ಅವನಿಗೆ ಅಪೇಕ್ಷೆ ಇಲ್ಲ, ಏಕೆಂದರೆ ಅವನು ಮಿಥ್ಯಾಹಂಕಾರ ಮತ್ತು ಗರ್ವಕ್ಕೆ ಅತೀತನು. ಆದರೂ ಅಂಥ ಕಾರ್ಯವು ಮುಗಿಯುವವರೆಗೆ ಅವನು ಸದಾ ಉತ್ಸಾಹಿ. ಕೈಕೊಂಡ ಕಷ್ಟಕಾರ್ಯದ ಬಗ್ಗೆ ಅವನೆಂದೂ ಚಿಂತಿತನಲ್ಲ; ಅವನು ಸದಾ ಉತ್ಸಾಹಿ. ಜಯಾಪಜಯಗಳಿಗೆ ಅವನು ಗಮನ ನೀಡುವುದಿಲ್ಲ ; ಅವನು ಸುಖದುಃಖಗಳಲ್ಲಿ ಸಮನು. ಅಂಥ ಕರ್ತನು ಸಾತ್ವಿಕ ಗುಣ ಸನ್ನಿವೇಶಿತನು.

**ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋಽಶುಚಿಃ ।**
**ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ ॥ ೨೭ ॥**

ರಾಗೀ—ಬಹು ಆಸಕ್ತ, ಕರ್ಮಫಲ—ಕರ್ಮಫಲದಲ್ಲಿ, ಪ್ರೇಪ್ಸುಃ—ಬಯಸುತ್ತ. ಲುಬ್ಧಃ—ಲೋಭಿ, ಹಿಂಸಾ-ಆತ್ಮಕಃ—ಸದಾ ಅಸೂಯೆ, ಅಶುಚಿಃ—ಅಶುಚಿ, ಹರ್ಷ-ಶೋಕ-ಅನ್ವಿತಃ—ಸುಖದುಃಖಗಳಿಗೆ ಒಳಪಟ್ಟ, ಕರ್ತಾ—ಅಂಥ ಕರ್ತನು, ರಾಜಸಃ—ರಾಜಸ ಗುಣದವನೆಂದು. ಪರಿಕೀರ್ತಿತಃ—ಪರಿಗಣಿತನು.

**ಫಲಭೋಗ ಮಾಡಲು ಬಯಸುತ್ತ ಕರ್ಮ ಮತ್ತು ಕರ್ಮಫಲಗಳಲ್ಲಿ ಆಸಕ್ತನಾಗಿ, ಲೋಭಿ, ಸದಾ ಅಸೂಯಾಪರ, ಅಶುಚಿ, ಮತ್ತು ಸುಖದುಃಖದಿಂದ ಸಂಚಲಿತ ಕರ್ತನು, ರಾಜಸ ಗುಣದಲ್ಲಿರುವನೆಂದು ಹೇಳಲಾಗಿದೆ.**

**ಭಾವಾರ್ಥ :** ಒಬ್ಬನು ವಿಶಿಷ್ಟ ಬಗೆಯ ಕರ್ಮದಲ್ಲಿ ಅಥವಾ ಅದರ ಫಲದಲ್ಲಿ ಅತ್ಯಾಸಕ್ತನು. ಏಕೆಂದರೆ ಭೌತಿಕ ವಸ್ತುಗಳಲ್ಲಿ ಅಥವಾ ಮನೆ ಮಠಗಳಲ್ಲಿ ಅಥವಾ, ಹೆಂಡಿರು ಮಕ್ಕಳಲ್ಲಿ ಅತ್ಯಾಸಕ್ತನು. ಅಂಥ ವ್ಯಕ್ತಿಗೆ ಜೀವನದಲ್ಲಿ ಉತ್ತಮೋನ್ನತಿಯ ಇಚ್ಛೆ ಇಲ್ಲ; ಈ ಭೌತಿಕ ಜಗತ್ತಿನಲ್ಲಿ ಸಾಧ್ಯವಿದ್ದಷ್ಟು ಸುಖಕರವಾಗಿರಬೇಕೆಂಬುದು ಮಾತ್ರ ಅವನ ಯತ್ನ. ಸಾಮಾನ್ಯವಾಗಿ ಅವನು ಬಹು ಲೋಭಿ, ಮತ್ತು ತಾನು ಗಳಿಸಿದ್ದೆಲ್ಲಾ ಶಾಶ್ವತ

ಮತ್ತು ಅವ್ಯಯ, ಎಂದೂ ನಷ್ಟವಾಗದ್ದು ಎಂದು ಭಾವಿಸುತ್ತಾನೆ. ಅಂಥವನು ಸದಾ ಅಸೂಯಾಪರ ಮತ್ತು ಇಂದ್ರಿಯ ತೋಷಣಕ್ಕಾಗಿ ಯಾವುದೇ ಕೆಟ್ಟ ಕೆಲಸ ಮಾಡಲೂ ಸಿದ್ಧ. ಆದ್ದರಿಂದ ಅಂಥ ವ್ಯಕ್ತಿಯು ಅಶುಚಿ, ಮತ್ತು ತನ್ನ ಆರ್ಜನೆಯು ಶುದ್ಧವೋ, ಅಥವಾ ಅಶುದ್ಧವೋ ಎಂಬುದನ್ನು ಅವನು ಲೆಕ್ಕಿಸುವುದಿಲ್ಲ.ತನ್ನ ಕಾರ್ಯವು ಜಯಪ್ರದವಾದಲ್ಲಿ ಅವನು ಬಹು ಸಂತುಷ್ಟನು, ಅನ್ಯಥಾ ಬಹು ದುಃಖಿ ಅಂಥ ಕರ್ತನು ರಜೋಗುಣಿ.

**ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋ ನೈಷ್ಕೃತಿಕೋಽಲಸಃ ।**
**ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ ॥ ೨೮ ॥**

ಅಯುಕ್ತಃ—ಶಾಸ್ತ್ರಾಜ್ಞೆಗಳನ್ನು ಗಮನಿಸಿದೆ, ಪ್ರಾಕೃತಃ—ಭೌತಿಕ, ಸ್ತಬ್ಧಃ—ಹಠವಾದಿ, ಶಠಃ—ವಂಚಕ, ನೈಷ್ಕೃತಿಕಃ—ಇತರರನ್ನು ಅವಮಾನಗೊಳಿಸುವಲ್ಲಿ ನಿಪುಣಃ ಅಲಸಃ—ಸೋಮಾರಿ.ವಿಷಾದೀ—ಉತ್ಸಾಹರಹಿತ, ದೀರ್ಘ-ಸೂತ್ರೀ—ವಿಲಂಬಿಯಾದ, ಚ—ಕೂಡ,ಕರ್ತಾ—ಕರ್ತನು, ತಾಮಸಃ—ತಾಮಸಗುಣದಲ್ಲಿರುವನು, ಉಚ್ಯತೇ—ಎಂದು ಹೇಳಿದೆ.

**ಶಾಸ್ತ್ರಾಜ್ಞೆಗಳಿಗೆ ವಿರುದ್ಧವಾಗಿ ಸದಾ ಕರ್ಮನಿರತನಾದ, ಪ್ರಾಪಂಚಿಕ, ಹಠಮಾರಿ, ವಂಚಕ ಮತ್ತು ಪರರನ್ನು ಅವಮಾನಿಸುವಲ್ಲಿ ನಿಪುಣನಾದ, ಸೋಮಾರಿ ಮತ್ತು ಸದಾ ಶೋಕಯುಕ್ತನು ಮತ್ತು ವಿಲಂಬ ನೀತಿಯುವನೂ ಆದ ಕರ್ಮಿಯು ತಮೋಗುಣಿಯೆಂದು ಹೇಳಲಾಗಿದೆ.**

**ಭಾವಾರ್ಥ :** ಶಾಸ್ತ್ರಾಜ್ಞೆಗಳಲ್ಲಿ ಯಾವ ಬಗೆಯ ಕರ್ಮ ಮಾಡಬೇಕು ಮತ್ತು ಯಾವ ಬಗೆಯ ಕರ್ಮ ಮಾಡಬಾರದು ಎಂಬುದನ್ನು ನಾವು ಕಾಣುತ್ತೇವೆ. ಆ ಆಜ್ಞೆಗಳಿಗೆ ಗಮನ ನೀಡದವರು ಮಾಡಬಾರದ ಕರ್ಮಗಳಲ್ಲಿ ತೊಡಗುತ್ತಾರೆ, ಮತ್ತು ಅಂಥ ವ್ಯಕ್ತಿಗಳು ಸಾಮಾನ್ಯವಾಗಿ ಪ್ರಾಪಂಚಿಕರು. ಅವರು ಪ್ರಕೃತಿ ಗುಣಾನುಸಾರ ಕಾರ್ಯ ಮಾಡುವರೇ ಹೊರತು ಶಾಸ್ತ್ರಾಜ್ಞಾನುಸಾರವಾಗಿ ಮಾಡುವುದಿಲ್ಲ. ಅವರು ಸೌಜನ್ಯಶೀಲರಲ್ಲ, ಮತ್ತು ಸಾಮಾನ್ಯವಾಗಿ ಅವರು ಸದಾ ವಂಚಕರು ಮತ್ತು ಪರಾವಹೇಳನದಲ್ಲಿ ನಿಪುಣರು. ಅವರು ಬಹು ಸೋಮಾರಿಗಳು. ಮಾಡಬೇಕಾದ ಕರ್ತವ್ಯವಿದ್ದರೂ ಸರಿಯಾಗಿ ಮಾಡುವುದಿಲ್ಲ, ಮತ್ತು ಆಮೇಲೆ ಮಾಡಿದರಾಯಿತು ಎಂದು ಅದನ್ನು ಬದಿಗೆ ತಳ್ಳುತ್ತಾರೆ. ಆದ್ದರಿಂದ ಅವರು ಖಿನ್ನರಾಗಿ ತೋರುತ್ತಾರೆ. ಅವರದು ವಿಲಂಬ ನೀತಿ; ಒಂದು ಗಂಟೆಯಲ್ಲಿ ಮಾಡಬಹುದಾದದ್ದನ್ನು ಅನೇಕ ವರ್ಷಗಳವರೆಗೆ ಮುಂದೆ ತಳ್ಳಿಕೊಂಡು ಹೋಗುತ್ತಾರೆ. ಅಂಥ ಕರ್ಮಿಗಳು ತಾಮಸ ಗುಣ ಸನ್ನಿವೇಶಿತರು.

**ಬುದ್ಧೇರ್ಭೇದಂ ಧೃತೇಶ್ಚೈವ ಗುಣತಸ್ತ್ರಿವಿಧಂ ಶೃಣು ।**
**ಪ್ರೋಚ್ಯಮಾನಮಶೇಷೇಣ ಪೃಥಕ್ತ್ವೇನ ಧನಂಜಯ ॥ ೨೯ ॥**

ಬುದ್ಧೇಃ—ಬುದ್ಧಿಯ, ಭೇದಮ್—ಭೇದಗಳು, ಧೃತೇಃ—ಧೃತಿಯ, ಚ—ಕೂಡ, ಏವ—ಖಂಡಿತವಾಗಿ, ಗುಣತಃ—ಭೌತಿಕ ಪ್ರಕೃತಿ ಗುಣಗಳಿಂದ,ತ್ರಿ-ವಿಧಮ್—ಮೂರು ಬಗೆಯ, ಶೃಣು—ಸ್ವಲ್ಪ ಕೇಳು, ಪ್ರೋಚ್ಯಮಾನಮ್—ನನ್ನಿಂದ ವರ್ಣಿತ

ವಾದಂತೆ, ಅಶೇಷೇಣ—ವಿವರವಾಗಿ ಪೃಥಕ್ತ್ವೇನ—ಪ್ರತ್ಯೇಕವಾಗಿ, ಧನಂಜಯ—ಹೇ ಧನಂಜಯನೇ.

**ಹೇ ಧನಂಜಯನೇ, ಭೌತಿಕ ಪ್ರಕೃತಿ ತ್ರಿಗುಣಾನುಸಾರ ನಾನಾ ಬಗೆಯ ಅರಿವು ಮತ್ತು ನಿರ್ಧಾರದ ವಿವರಗಳನ್ನು ಈಗ ನಿನಗೆ ನಾನು ಹೇಳುವಂತೆ, ದಯವಿಟ್ಟು ಕೇಳು.**

**ಭಾವಾರ್ಥ :** ಈಗ ಜ್ಞಾನ, ಜ್ಞಾನದ ವಿಷಯ ಮತ್ತು ಕ್ಷೇತ್ರಜ್ಞನನ್ನು ಕುರಿತು ಭೌತಿಕ ಪ್ರಕೃತಿ ಗುಣಾನುಸಾರ ಮೂರು ಬಗೆಯಾಗಿ ವಿವರಿಸಿದ ತರುವಾಯ, ಅದೇ ರೀತಿಯಲ್ಲಿ ಭಗವಂತನು ಕರ್ಮಿಯ ಬುದ್ಧಿ ಮತ್ತು ನಿರ್ಧಾರವನ್ನು ವಿವರಿಸುತ್ತಾನೆ.

**ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ ।**
**ಬನ್ಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಃ ಸಾ ಪಾರ್ಥ ಸಾತ್ತ್ವಿಕೀ ॥ ೩೦ ॥**

ಪ್ರವೃತ್ತಿಮ್—ಮಾಡುವುದು, ಚ—ಕೂಡ, ನಿವೃತ್ತಿಮ್—ಮಾಡದಿರುವುದು, ಚ—ಮತ್ತು, ಕಾರ್ಯ—ಮಾಡಲೇಬೇಕಾದುದು, ಅಕಾರ್ಯೇ—ಮಾಡಲೇಬಾರದ್ದು, ಭಯ—ಭಯ, ಅಭಯೇ—ಮತ್ತು ಅಭಯ, ಬನ್ಧಮ್—ಬಂಧನ, ಮೋಕ್ಷಮ್—ಮೋಕ್ಷ, ಚ—ಮತ್ತು, ಯಾ—ಯಾವುದೆಂದು, ವೇತ್ತಿ—ತಿಳಿಯುವ, ಬುದ್ಧಿಃ—ಅರಿವು, ಸಾ—ಅದು, ಪಾರ್ಥ—ಹೇ ಪೃಥಾ ಪುತ್ರನೇ, ಸಾತ್ತ್ವಿಕೀ—ಸಾತ್ವಿಕ ಗುಣದ್ದು.

**ಹೇ ಪೃಥಾ ಪುತ್ರನೇ, ಏನು ಮಾಡಲೇಬೇಕು ಮತ್ತು ಏನು ಮಾಡಲೇಬಾರದು, ಯಾವುದಕ್ಕೆ ಭಯಪಡಬೇಕು ಮತ್ತು ಯಾವುದಕ್ಕೆ ಭಯಪಡಕೂಡದು, ಯಾವುದು ಬಂಧಕ ಮತ್ತು ಯಾವುದು ಮೋಚಕ ಎಂಬುದನ್ನು ಒಬ್ಬನು ತಿಳಿದುಕೊಳ್ಳುವ ಅರಿವು ಸಾತ್ತ್ವಿಕ ಗುಣದಲ್ಲಿರುವುದು.**

**ಭಾವಾರ್ಥ :** ಶಾಸ್ತ್ರ ನಿರ್ದೇಶಗಳನುಸಾರ ಕರ್ಮ ಮಾಡುವುದು, ಅಥವಾ ಒಬ್ಬನು ನಿರ್ವಹಿಸಬೇಕಾದ ಕಾರ್ಯಗಳು **ಪ್ರವೃತ್ತಿ** ಎಂದು ಕರೆದಿದೆ ಮತ್ತು ಹಾಗೆ ನಿರ್ದೇಶಿತವಲ್ಲದ ಕಾರ್ಯಗಳು ಮಾಡಬೇಕಾದ ಕಾರ್ಯಗಳಲ್ಲ. ಶಾಸ್ತ್ರನಿರ್ದೇಶನವನ್ನರಿಯದವನು ಕರ್ಮದ ಕ್ರಿಯೆ ಮತ್ತು ಪ್ರತಿಕ್ರಿಯೆಗಳಲ್ಲಿ ಸಿಲುಕಿಕೊಳ್ಳುತ್ತಾನೆ. ಬುದ್ಧಿಯಿಂದ ತಾರತಮ್ಯವನ್ನು ತಿಳಿಯುವ ಅರಿವು ಸಾತ್ವಿಕ ಗುಣದ್ದು.

**ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವ ಚ ।**
**ಅಯಥಾವತ್ಪ್ರಜಾನತಿ ಬುದ್ಧಿಃ ಸಾ ಪಾರ್ಥ ರಾಜಸೀ ॥ ೩೧ ॥**

ಯಯಾ—ಯಾವುದರಿಂದ, ಧರ್ಮಮ್—ಧರ್ಮ ತತ್ತ್ವಗಳನ್ನು, ಅಧರ್ಮಮ್—ಅಧರ್ಮವನ್ನು, ಚ—ಮತ್ತು, ಕಾರ್ಯಮ್—ಮಾಡಲೇಬೇಕಾದ್ದು ಚ—ಕೂಡ, ಅಕಾರ್ಯಮ್—ಮಾಡಲೇಬಾರದ್ದು, ಏವ—ಖಂಡಿತವಾಗಿ, ಚ—ಕೂಡ, **ಅಯಥಾ-ವತ್—ಅಪರಿಪೂರ್ಣವಾಗಿ, ಪ್ರಜಾನತಿ—ತಿಳಿಯುವ, ಬುದ್ಧಿಃ—ಬುದ್ಧಿಯು, ಸಾ—ಆ, ಪಾರ್ಥ—ಹೇ ಪೃಥಾ ಪುತ್ರನೇ, ರಾಜಸೀ—ರಾಜಸ ಗುಣದ್ದು.**

**ಹೇ ಪೃಥಾ ಪುತ್ರನೇ, ಧರ್ಮಾಧರ್ಮಗಳ ವ್ಯತ್ಯಾಸವನ್ನು, ಮಾಡಲೇಬೇಕಾದ ಮತ್ತು ಮಾಡಬಾರದ ಕರ್ಮದ ನಡುವಿನ ವ್ಯತ್ಯಾಸವನ್ನು ತಿಳಿಯಲಾಗದ ಅರಿವು ರಾಜಸ ಗುಣದಲ್ಲಿರುವುದು.**

**ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾವೃತಾ ।**
**ಸರ್ವಾರ್ಥಾನ್ ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ ॥ ೩೨ ॥**

ಅಧರ್ಮಮ್—ಅಧರ್ಮವನ್ನು, ಧರ್ಮಮ್—ಧರ್ಮ, ಇತಿ—ಹೀಗೆ, ಯಾ—ಯಾವನು, ಮನ್ಯತೇ—ತಿಳಿಯುತ್ತಾನೆ, ತಮಸಾ—ಮಾಯೆಯಿಂದ, ಆವೃತಾ—ಆವೃತವಾದ, ಸರ್ವ-ಅರ್ಥಾನ್—ಎಲ್ಲ ವಿಷಯಗಳನ್ನು, ವಿಪರೀತಾನ್—ವಿಪರೀತವಾಗಿ, ಚ—ಕೂಡ, ಬುದ್ಧಿಃ—ಆ ಬುದ್ಧಿಯು, ಸಾ—ಅದು, ಪಾರ್ಥ—ಹೇ ಪೃಥಾ ಪುತ್ರನೇ ತಾಮಸೀ—ತಾಮಸ ಗುಣದಲ್ಲಿರುವುದು.

**ಮಾಯೆ ಮತ್ತು ತಮೋ ಪ್ರಭಾವಕ್ಕೆ ಒಳಗಾಗಿ ಅಧರ್ಮವನ್ನು ಧರ್ಮವೆಂದು ಮತ್ತು ಧರ್ಮವನ್ನು ಅಧರ್ಮವೆಂದು ತಿಳಿಯುವ ಮತ್ತು ತಪ್ಪು ಮಾರ್ಗದಲ್ಲಿ ಸದಾ ಶ್ರಮಿಸುವ ಅರಿವು ಹೇ ಪೃಥಾ ಪುತ್ರನೇ, ತಾಮಸ ಗುಣದಲ್ಲಿರುವುದು.**

**ಭಾವಾರ್ಥ :** ತಾಮಸಗುಣ ಬುದ್ಧಿಯು ಸದಾ ವರ್ತಿಸಬೇಕಾದ ಮಾರ್ಗಕ್ಕೆ ವಿರುದ್ಧವಾಗಿ ವರ್ತಿಸುತ್ತದೆ. ಅದು, ವಾಸ್ತವಿಕವಾಗಿ ಧರ್ಮವಲ್ಲದ್ದನ್ನು ಧರ್ಮವೆಂದು ಅಂಗೀಕರಿಸುತ್ತದೆ ಮತ್ತು ವಾಸ್ತವಿಕ ಧರ್ಮವನ್ನು ನಿರಾಕರಿಸುತ್ತದೆ. ತಾಮಸ ಗುಣಿಗಳು ಮಹಾತ್ಮನನ್ನು ಸಾಮಾನ್ಯ ಮಾನವನೆಂದು ಮತ್ತು ಸಾಮಾನ್ಯನನ್ನು ಮಹಾತ್ಮನೆಂದು ಅರಿತುಕೊಳ್ಳುತ್ತಾರೆ. ಅವರು ಸತ್ಯವನ್ನು ಅಸತ್ಯವೆಂದು ಮತ್ತು ಅಸತ್ಯವನ್ನು ಸತ್ಯವೆಂದು ಗ್ರಹಿಸುತ್ತಾರೆ. ಎಲ್ಲ ಚಟುವಟಿಕೆಗಳಲ್ಲಿ ಅವರು ಕೇವಲ ತಪ್ಪುಮಾರ್ಗ ಹಿಡಿಯುತ್ತಾರೆ. ಆದ್ದರಿಂದ ಅವರ ಬುದ್ಧಿಯು ತಾಮಸ ಗುಣದಲ್ಲಿರುವುದು.

**ಧೃತ್ಯಾ ಯಯಾ ಧಾರಯತೇ ಮನಃಪ್ರಾಣೇನ್ದ್ರಿಯಕ್ರಿಯಾಃ ।**
**ಯೋಗೇನಾವ್ಯಭಿಚಾರಿಣ್ಯಾ ಧೃತಿಃ ಸಾ ಪಾರ್ಥ ಸಾತ್ತ್ವಿಕೀ ॥ ೩೩ ॥**

ಧೃತ್ಯಾ—ನಿರ್ಧಾರ, ಯಯಾ—ಯಾವುದರಿಂದ, ಧಾರಯತೇ—ಧಾರಣ ಮಾಡುತ್ತಾನೆ, ಮನಃ—ಮನಸ್ಸಿನ, ಪ್ರಾಣ—ಪ್ರಾಣ, ಇನ್ದ್ರಿಯ—ಮತ್ತು ಇಂದ್ರಿಯಗಳ, ಕ್ರಿಯಾಃ—ಚಟುವಟಿಕೆಗಳು, ಯೋಗೇನ—ಯೋಗಾಭ್ಯಾಸದಿಂದ, ಅವ್ಯಭಿಚಾರಿಣ್ಯಾ—ಭಂಗರಹಿತವಾಗಿ, ಧೃತಿಃ—ನಿರ್ಧಾರವು, ಸಾ—ಅದು, ಪಾರ್ಥ—ಹೇ ಪೃಥಾ ಪುತ್ರನೇ, ಸಾತ್ತ್ವಿಕೀ—ಸಾತ್ತ್ವಿಕ ಗುಣದ್ದು.

**ಹೇ ಪೃಥಾ ಪುತ್ರನೇ, ಭಂಗರಹಿತವಾದ, ಯೋಗಾಭ್ಯಾಸದ ಸ್ಥಿರತೆಯಿಂದ ಧಾರಣ ಮಾಡಿದ ಮತ್ತು ಯಾವುದು ಮನಸ್ಸಿನ, ಪ್ರಾಣದ ಮತ್ತು ಇಂದ್ರಿಯಗಳ ಚಟುವಟಿಕೆಗಳನ್ನು ಹೀಗೆ ನಿಯಂತ್ರಿಸುವುದೋ ಆ ನಿರ್ಧಾರವು ಸಾತ್ವಿಕ ಗುಣದಲ್ಲಿರುವುದು.**

**ಭಾವಾರ್ಥ :** ಯೋಗವು ಪರಮ ಆತ್ಮನನ್ನು ಅರಿತುಕೊಳ್ಳುವ ಸಾಧನ. ಒಬ್ಬನು ತನ್ನ ಮನಸ್ಸು, ಪ್ರಾಣ ಮತ್ತು ಇಂದ್ರಿಯ ಚಟುವಟಿಕೆಗಳನ್ನು ಪರಮನಲ್ಲಿ ಕೇಂದ್ರೀಕರಿಸಿ ದೃಢ ನಿರ್ಧಾರದಿಂದ ಪರಮ ಆತ್ಮನಲ್ಲಿ ಸ್ಥಿರವಾಗಿ ಸ್ಥಿತನಾದವನು ಕೃಷ್ಣ ಪ್ರಜ್ಞಾನಿರತನು. ಅಂಥ ನಿರ್ಧಾರವು ಸಾತ್ತ್ವಿಕ ಗುಣದ್ದು. **ಅವ್ಯಭಿಚಾರಿಣ್ಯಾ** ಪದವು ಬಹಳ ಮಹತ್ವದ್ದು. ಏಕೆಂದರೆ ಕೃಷ್ಣಪ್ರಜ್ಞಾ ನಿರತರು ಅನ್ಯ ಚಟುವಟಿಕೆಯಿಂದ ಎಂದೂ ವಿಚಲಿತರಲ್ಲ ಎಂಬುದನ್ನು ಸೂಚಿಸುತ್ತದೆ.

**ಯಯಾ ತು ಧರ್ಮಕಾಮಾರ್ಥಾನ್ ಧೃತ್ಯಾ ಧಾರಯತೇಽರ್ಜುನ ।**
**ಪ್ರಸಂಗೇನ ಫಲಾಕಾಂಕ್ಷೀ ಧೃತಿಃ ಸಾ ಪಾರ್ಥ ರಾಜಸೀ ॥೩೪॥**

ಯಯಾ—ಯಾವುದರಿಂದ, ತು—ಆದರೆ, ಧರ್ಮ—ಧರ್ಮ, ಕಾಮ—ಇಂದ್ರಿಯ ತೋಷಣ, ಅರ್ಥಾನ್—ಮತ್ತು ಆರ್ಥಿಕ ಅಭಿವೃದ್ಧಿ, ಧೃತ್ಯಾ—ನಿರ್ಧಾರದಿಂದ, ಧಾರಯತೇ—ಧಾರಣ ಮಾಡುತ್ತಾನೆ, ಅರ್ಜುನ—ಹೇ ಅರ್ಜುನ, ಪ್ರಸಂಗೇನ—ಅನುರುಕ್ತಿಯ ಕಾರಣ, ಫಲ-ಆಕಾಂಕ್ಷೀ—ಕಾಮ್ಯ ಫಲಗಳನ್ನು ಬಯಸಿ, ಧೃತಿಃ—ನಿರ್ಧಾರವು, ಸಾ—ಅದು, ಪಾರ್ಥ—ಹೇ ಪೃಥಾ ಪುತ್ರನೇ, ರಾಜಸೀ—ರಾಜಸ ಗುಣದ್ದು.

**ಧರ್ಮ, ಅರ್ಥ ಮತ್ತು ಕಾಮದ ಫಲಗಳಿಗೆ ಯಾವುದು ಒಬ್ಬನನ್ನು ಬಲವಾಗಿ ಬಂಧಿಸುವುದೋ ಆ ನಿರ್ಧಾರವು, ಹೇ ಅರ್ಜುನ, ರಜೋ ಭಾವದ್ದು.**

**ಭಾವಾರ್ಥ :** ಸದಾ ಧರ್ಮ ಅಥವಾ ಅರ್ಥ ಚಟುವಟಿಕೆಗಳ ಕಾಮ್ಯ ಫಲಾಪೇಕ್ಷಿಯು ಮತ್ತು ಇಂದ್ರಿಯ ತೋಷಣವೇ ಯಾವನ ಏಕೈಕ ಇಚ್ಛೆಯೋ, ಮತ್ತು ಯಾವನ ಮನಸ್ಸು, ಪ್ರಾಣ ಮತ್ತು ಇಂದ್ರಿಯಗಳು ಹೀಗೆ ತೊಡಗಿರುವುವೋ ಅವನು ರಾಜಸ ಗುಣದಲ್ಲಿರುವನು.

**ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವ ಚ ।**
**ನ ವಿಮುಂಚತಿ ದುರ್ಮೇಧಾ ಧೃತಿಃ ಸಾ ಪಾರ್ಥ ತಾಮಸೀ ॥೩೫॥**

ಯಯಾ—ಯಾವುದರಿಂದ, ಸ್ವಪ್ನಮ್—ಸ್ವಪ್ನ, ಭಯಮ್—ಭಯ, ಶೋಕಮ್—ಶೋಕ, ವಿಷಾದಮ್—ವಿಷಾದ, ಮದಮ್—ಭ್ರಮೆಯನ್ನು, ಏವ—ಖಂಡಿತವಾಗಿ, ಚ—ಕೂಡ, ನ—ಎಂದೂ, ವಿಮುಂಚತಿ—ತ್ಯಜಿಸುವುದಿಲ್ಲವೋ, ದುರ್ಮೇಧಾ—ಬುದ್ಧಿರಹಿತನ, ಧೃತಿಃ—ನಿರ್ಧಾರ, ಸಾ—ಅದು, ಪಾರ್ಥ—ಹೇ ಪೃಥಾ ಪುತ್ರನೇ, ತಾಮಸೀ—ತಾಮಸ ಗುಣದ್ದು.

**ಮತ್ತು ಸ್ವಪ್ನ, ಭಯ, ಶೋಕ, ವಿಷಾದ ಮತ್ತು ಭ್ರಮೆಯನ್ನು ದಾಟದ ನಿರ್ಧಾರವು, ಹೇ ಪೃಥಾ ಪುತ್ರನೇ, ಅಂಥ ಬುದ್ಧಿರಹಿತ ನಿರ್ಧಾರವು ತಾಮಸ ಗುಣದಲ್ಲಿನದು.**

**ಭಾವಾರ್ಥ :** ಸಾತ್ವಿಕ ಗುಣಿಯು ಸ್ವಪ್ನ ಕಾಣುವುದಿಲ್ಲ ಎಂದು ಸಿದ್ಧಾಂತ ಮಾಡಕೂಡದು. ಇಲ್ಲಿ "ಸ್ವಪ್ನ" ಎಂದರೆ ಅತಿ ನಿದ್ರೆ. ಸ್ವಪ್ನವು ಸದಾ ಇರುತ್ತದೆ ; ಸತ್ತ್ವ,

ರಾಜಸ ಅಥವಾ ತಮೋ ಗುಣದಲ್ಲಿ ಸ್ವಪ್ನವು ಸ್ವಾಭಾವಿಕ ಕ್ರಿಯೆ. ಆದರೆ ಅತಿ ನಿದ್ರೆಯನ್ನು ತಪ್ಪಿಸಲಾಗದವರು, ಮತ್ತು ಭೌತಿಕ ವಸ್ತುಗಳ ಭೋಗ ಮದವನ್ನು ತಪ್ಪಿಸಿಕೊಳ್ಳಲಾಗದವರು, ಮತ್ತು ಸದಾ ಭೌತಿಕ ಜಗತ್ತಿನ ಮೇಲೆ ಒಡೆತನದ ಸ್ವಪ್ನ ಕಾಣುವವರು ಮತ್ತು ಯಾರ ಪ್ರಾಣ, ಮನಸ್ಸು ಮತ್ತು ಇಂದ್ರಿಯಗಳು ಹೀಗೆ ನಿರತವೋ ಅವರು, ತಮೋ ಗುಣದಲ್ಲಿ ನಿರ್ಧಾರಿಗಳು ಎಂದು ಪರಿಗಣಿತ.

**ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ ।**
**ಅಭ್ಯಾಸಾದ್ ರಮತೇ ಯತ್ರ ದುಃಖಾನ್ತಂ ಚ ನಿಗಚ್ಛತಿ ॥೩೬॥**

ಸುಖಮ್—ಸುಖವು, ತು—ಆದರೆ, ಇದಾನೀಮ್—ಈಗ, ತ್ರಿ-ವಿಧಂ—ಮೂರು ಬಗೆಯು, ಶೃಣು—ಕೇಳು, ಮೇ—ನನ್ನಿಂದ, ಭರತ-ಋಷಭ—ಹೇ ಭರತ ಶ್ರೇಷ್ಠನೇ, ಅಭ್ಯಾಸಾತ್—ಅಭ್ಯಾಸದಿಂದ, ರಮತೇ—ಒಬ್ಬನು ರಮಿಸುತ್ತಾನೆ, ಯತ್ರ—ಎಲ್ಲಿ, ದುಃಖ—ದುಃಖದ, ಅನ್ತಮ್—ಕೊನೆಯನ್ನು, ಚ—ಕೂಡ, ನಿಗಚ್ಛತಿ—ಹೊಂದುತ್ತಾನೆ.

**ಹೇ ಭರತ ಶ್ರೇಷ್ಠನೇ, ಯಾವುದರ ಮೂಲಕ ಬದ್ಧ ಆತ್ಮನು ತ್ರಿವಿಧ ಸುಖವನ್ನು ಭೋಗಿಸುತ್ತಾನೆ ಮತ್ತು ಯಾವುದರ ಮೂಲಕ ಕೆಲವು ಸಮಯದಲ್ಲಿ ಸಕಲ ದುಃಖಾಂತಗಳ ಕೊನೆ ಸೇರುವುದನ್ನು ಕುರಿತು ಈಗ ನನ್ನಿಂದ ಶ್ರವಣ ಮಾಡು.**

**ಭಾವಾರ್ಥ :** ಬದ್ಧ ಆತ್ಮನು ಮತ್ತೆ ಮತ್ತೆ ಭೌತಿಕ ಸುಖ ಭೋಗಿಸಲು ಯತ್ನಿಸುತ್ತಾನೆ. ಹೀಗೆ ಅವನದು ಚರ್ವಿತ ಚರ್ವಣ. ಆದರೆ ಕೆಲವು ಸಲ, ಅಂಥ ಭೋಗಕ್ರಮದಲ್ಲಿ, ಅವನು ಮಹಾತ್ಮನ ಸಂಗದಿಂದ ಭೌತಿಕ ಬಂಧನದಿಂದ ನಿವೃತ್ತನಾಗುತ್ತಾನೆ. ಅರ್ಥಾತ್, ಬದ್ಧ ಆತ್ಮನು ಸದಾ ಇಂದ್ರಿಯ ತೋಷಣದ ಯಾವುದೋ ಕ್ರಿಯೆಯಲ್ಲಿ ನಿರತನು, ಆದರೆ ಅದು ಕೇವಲ ಪುನರಾವೃತ್ತಿ ಎಂಬುದನ್ನು ಅವನು ಸತ್ಸಂಗದಿಂದ ಅರಿತುಕೊಂಡಾಗ, ಮತ್ತು ನಿಜ ಕೃಷ್ಣಪ್ರಜ್ಞೆಗೆ ಜಾಗೃತನಾದಾಗ, ಕೆಲವು ಸಲ ಅವನು ಹಾಗೆಂಬ ಅಂಥ ಸುಖ ಪುನರಾವೃತ್ತಿಯಿಂದ ನಿವೃತ್ತನು.

**ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಮ್ ।**
**ತತ್ಸುಖಂ ಸಾತ್ತ್ವಿಕಂ ಪ್ರೋಕ್ತಮಾತ್ಮಬುದ್ಧಿಪ್ರಸಾದಜಮ್ ॥೩೭॥**

ಯತ್—ಯಾವುದು, ತತ್—ಅದು, ಅಗ್ರೇ—ಪ್ರಾರಂಭದಲ್ಲಿ, ವಿಷಮ್-ಇವ—ವಿಷವೆಂಬಂತೆ ಇರುವುದೋ, ಪರಿಣಾಮೇ—ಪರಿಣಾಮದಲ್ಲಿ, ಅಮೃತ—ಅಮೃತ, ಉಪಮಮ್—ದಂತೆ ಇರುವುದೋ, ತತ್—ಆ, ಸುಖಮ್—ಸುಖವು, ಸಾತ್ತ್ವಿಕಮ್—ಸಾತ್ತ್ವಿಕ ಗುಣದಲ್ಲಿನದು, ಪ್ರೋಕ್ತಮ್—ಎಂದು ಹೇಳಿದೆ, ಆತ್ಮ—ಆತ್ಮದಲ್ಲಿ, ಬುದ್ಧಿ—ಬುದ್ಧಿಯ, ಪ್ರಸಾದ-ಜಮ್—ತುಷ್ಟಿ ಜನ್ಯ.

**ಯಾವುದು ಪ್ರಾರಂಭದಲ್ಲಿ ವಿಷದಂತಿರುವುದೋ ಆದರೆ ಕೊನೆಯಲ್ಲಿ ಅಮೃತದಂತಿರುವುದೋ, ಮತ್ತು ಒಬ್ಬನನ್ನು ಆತ್ಮಸಾಕ್ಷಾತ್ಕಾರಕ್ಕೆ ಜಾಗೃತಗೊಳಿಸುವುದೋ, ಅದು ಸತ್ತ್ವಗುಣದಲ್ಲಿನ ಸುಖ ಎಂದು ಹೇಳಿದೆ.**

**ಭಾವಾರ್ಥ :** ಆತ್ಮಸಾಕ್ಷಾತ್ಕಾರ ಶೋಧದಲ್ಲಿ, ಒಬ್ಬನು ಮನಸ್ಸು ಮತ್ತು ಇಂದ್ರಿಯಗಳ ನಿಯಂತ್ರಣಕ್ಕಾಗಿ ಮತ್ತು ಮನಸ್ಸನ್ನು ಆತ್ಮನಲ್ಲಿ ಕೇಂದ್ರೀಕರಿಸಲೋಸುಗ ಅನೇಕ ನಿಯಮ ನಿಯಂತ್ರಣಗಳನ್ನು ಅನುಸರಿಸಬೇಕಾಗುವುದು. ಈ ಎಲ್ಲ ಪ್ರಕ್ರಿಯೆಗಳು ವಿಷದಷ್ಟು ಕಹಿಯಾದ ಬಹು ತೊಂದರೆಗಳು. ಆದರೆ ಒಬ್ಬನು ನಿಯಂತ್ರಣಗಳ ಅನುಸರಣೆಯಲ್ಲಿ ಯಶಸ್ವಿಯಾದರೆ ಮತ್ತು ದಿವ್ಯಸ್ಥಿತಿಗೆ ಬಂದರೆ, ಅವನು ನಿಜ ಅಮೃತಪಾನ ಪ್ರಾರಂಭಿಸುತ್ತಾನೆ ಮತ್ತು ಜೀವನವನ್ನು ಭೋಗಿಸುತ್ತಾನೆ.

**ವಿಷಯೇನ್ದ್ರಿಯಸಂಯೋಗಾದ್ಯತ್ತದಗ್ರೇಽಮೃತೋಪಮಮ್ ।**
**ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಮ್ ॥ ೩೮ ॥**

ವಿಷಯ—ಇಂದ್ರಿಯ ವಿಷಯಗಳ, ಇನ್ದ್ರಿಯ—ಮತ್ತು ಇಂದ್ರಿಯಗಳ, ಸಂಯೋಗಾತ್—ಸಂಯೋಗದಿಂದ, ಯತ್—ಯಾವುದು, ತತ್—ಅದು, ಅಗ್ರೇ—ಪ್ರಾರಂಭದಲ್ಲಿ, ಅಮೃತ-ಉಪಮಮ್—ಅಮೃತದಂತೆ, ಪರಿಣಾಮೇ—ಕೊನೆಯಲ್ಲಿ, ವಿಷಮ್-ಇವ—ವಿಷದಂತೆ, ತತ್—ಅದು, ಸುಖಮ್—ಸುಖ, ರಾಜಸಮ್—ರಾಜಸ ಗುಣದಲ್ಲಿ, ಸ್ಮೃತಮ್—ಎಂದು ಹೇಳಲ್ಪಟ್ಟಿದೆ.

**ಇಂದ್ರಿಯಗಳ ಮತ್ತು ಇಂದ್ರಿಯ ವಿಷಯಗಳ ಸಂಯೋಗದಿಂದ ದೊರೆಯುವ ಮತ್ತು ಪ್ರಾರಂಭದಲ್ಲಿ ಅಮೃತ ಮತ್ತು ಕೊನೆಯಲ್ಲಿ ವಿಷದಂತೆ ತೋರುವ ಸುಖವು ರಾಜಸ ಸ್ವಭಾವದ್ದು ಎಂದು ಹೇಳಿದೆ.**

**ಭಾವಾರ್ಥ :** ಯುವಕ ಮತ್ತು ಯುವತಿ ಸಂಧಿಸುತ್ತಾರೆ, ಮತ್ತು ಆಗ ಯುವಕನ ಇಂದ್ರಿಯಗಳು ಅವಳನ್ನು ನೋಡಲು, ಸ್ಪರ್ಶಿಸಲು ಮತ್ತು ಅವಳೊಡನೆ ಲೈಂಗಿಕ ಸಂಪರ್ಕ ಹೊಂದಲು ಸೆಳೆಯುತ್ತವೆ. ಪ್ರಾರಂಭದಲ್ಲಿ ಇದು ಇಂದ್ರಿಯಗಳಿಗೆ ಬಹು ಸುಖಕರವೆನಿಸಬಹುದು, ಆದರೆ ಕೊನೆಯಲ್ಲಿ ಅಥವಾ ಕೆಲಕಾಲ ನಂತರ ಅದು ವಿಷದಂತೆ ಪರಿಣಮಿಸುತ್ತದೆ. ಅವರು ಪ್ರತ್ಯೇಕರಾಗುತ್ತಾರೆ ಅಥವಾ ವಿಚ್ಛೇದನ ಹೊಂದುತ್ತಾರೆ. ಆಮೇಲೆ ಶೋಕ, ದುಃಖ ಇತ್ಯಾದಿಗಳು. ಅಂಥ ಸುಖವು, ಸದಾ ರಾಜಸ ಗುಣದ್ದು. ಇಂದ್ರಿಯಗಳು ಮತ್ತು ಇಂದ್ರಿಯ ವಿಷಯಗಳ ಸಂಯೋಗದಿಂದ ಲಬ್ಧ ಸುಖವು ಸದಾ ದುಃಖ ಕಾರಣ ಮತ್ತು ಅದನ್ನು ಸರ್ವಪ್ರಕಾರಗಳಿಂದಲೂ ತಪ್ಪಿಸಬೇಕು.

**ಯದಗ್ರೇ ಚಾನುಬನ್ಧೇ ಚ ಸುಖಂ ಮೋಹನಮಾತ್ಮನಃ ।**
**ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮಸಮುದಾಹೃತಮ್ ॥೩೯॥**

ಯತ್—ಯಾವುದು, ಅಗ್ರೇ—ಪ್ರಾರಂಭದಲ್ಲಿ, ಚ—ಕೂಡ, ಅನುಬನ್ಧೇ—ಕೊನೆಯಲ್ಲಿ, ಚ—ಕೂಡ, ಸುಖಮ್—ಸುಖ, ಮೋಹನಮ್—ಮೋಹ, ಆತ್ಮನಃ—ಆತ್ಮನ, ನಿದ್ರಾ—ನಿದ್ರೆ, ಆಲಸ್ಯ—ಆಲಸ್ಯ, ಪ್ರಮಾದ—ಮತ್ತು ಭ್ರಮೆ, ಉತ್ಥಮ್—ಜನಿತ, ತತ್—ಅದು, ತಾಮಸಮ್—ತಾಮಸ ಗುಣದ್ದು, ಉದಾಹೃತಮ್—ಎಂದು ಹೇಳಿದೆ.

**ಮತ್ತು ಆತ್ಮಸಾಕ್ಷಾತ್ಕಾರಕ್ಕೆ ಕುರುಡಾದ, ಮೊದಲಿನಿಂದ ಕೊನೆಯವರೆಗೆ ಭ್ರಮಾತ್ಮಕವಾದ ಮತ್ತು ನಿದ್ರೆ, ಆಲಸ್ಯ, ಮತ್ತು ಮೋಹ ಜನ್ಯವಾದ ಸುಖವು ತಾಮಸ ಗುಣದ್ದು ಎಂದು ಹೇಳಿದೆ.**

**ಭಾವಾರ್ಥ :** ಆಲಸ್ಯದಲ್ಲಿ ಮತ್ತು ನಿದ್ರೆಯಲ್ಲಿ ಸುಖಿಸುವವನು ಖಂಡಿತವಾಗಿ ಅಂಧಕಾರದಲ್ಲಿರುವವನು, ಮತ್ತು ಹೇಗೆ ವರ್ತಿಸಬೇಕು, ಹೇಗೆ ವರ್ತಿಸಕೂಡದು ಎಂಬುದನ್ನು ತಿಳಿಯದವನು ತಮೋಗುಣಿ. ತಮೋಗುಣಿಗೆ, ಪ್ರತಿಯೊಂದು ಮಾಯೆ. ಅವನಿಗೆ ಆದಿಯಲ್ಲಾಗಲಿ ಅಥವಾ ಅಂತ್ಯದಲ್ಲಾಗಲಿ ಸುಖವಿಲ್ಲ. ರಾಜಸ ಗುಣಿಗೆ ಪ್ರಾರಂಭದಲ್ಲಿ ಯಾವುದೋ ಬಗೆಯ ಕ್ಷಣಿಕ ಸುಖವು ಇರಬಹುದು ಮತ್ತು ಕೊನೆಯಲ್ಲಿ ಯಾವುದೋ ಬಗೆಯ ದುಃಖ ಇರಬಹುದು, ಆದರೆ ತಾಮಸ ಗುಣಿಗೆ ಆದ್ಯಂತ ಉಭಯತ್ರದಲ್ಲಿ ಬರೀ ದುಃಖ ಮಾತ್ರ.

**ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ ।**
**ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ ತ್ರಿಭಿರ್ಗುಣೈಃ ॥ ೪೦ ॥**

ನ—ಇಲ್ಲ. ತತ್—ಅದು, ಅಸ್ತಿ—ಇರುವುದು, ಪೃಥಿವ್ಯಾಮ್—ಪೃಥ್ವಿಯಲ್ಲಿ, ವಾ—ಅಥವಾ, ದಿವಿ—ಊರ್ಧ್ವಗ್ರಹವ್ಯೂಹದಲ್ಲಿ, ದೇವೇಷು—ದೇವತೆಗಳಲ್ಲಿ, ವಾ—ಅಥವಾ, ಪುನಃ—ಮತ್ತೆ, ಸತ್ತ್ವಮ್—ಅಸ್ತಿತ್ವವು, ಪ್ರಕೃತಿ-ಜೈಃ—ಭೌತಿಕ ಪ್ರಕೃತಿ ಜನ್ಯ, ಮುಕ್ತಮ್—ಮುಕ್ತ, ಯತ್—ಅದು, ಏಭಿಃ—ಇವುಗಳ ಪ್ರಭಾವದಿಂದ, ಸ್ಯಾತ್—ಇದೆ, ತ್ರಿಭಿಃ—ಮೂರು, ಗುಣೈಃ—ಭೌತಿಕ ಪ್ರಕೃತಿ ಗುಣಗಳಿಂದ,

**ಈ ಭೌತಿಕ ಪ್ರಕೃತಿ ತ್ರಿಗುಣಗಳಿಂದ ಮುಕ್ತನಾದ ಜೀವಿಯು ಇಲ್ಲಿ ಅಥವಾ ಊರ್ಧ್ವಗ್ರಹವ್ಯೂಹಗಳ ದೇವತೆಗಳಲ್ಲಾಗಲೀ ಅಸ್ತಿತ್ವದಲ್ಲಿರುವುದಿಲ್ಲ.**

**ಭಾವಾರ್ಥ :** ಸಕಲ ಬ್ರಹ್ಮಾಂಡದ ಮೇಲೆ ಭೌತಿಕ ಪ್ರಕೃತಿ ತ್ರಿಗುಣಗಳ ಸಮಗ್ರ ಪ್ರಭಾವವನ್ನು ಭಗವಂತನು ಇಲ್ಲಿ ಸಾರಾಂಶ ರೂಪವಾಗಿ ಹೇಳುತ್ತಾನೆ.

**ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರನ್ತಪ ।**
**ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ ॥ ೪೧ ॥**

ಬ್ರಾಹ್ಮಣ—ಬ್ರಾಹ್ಮಣರ, ಕ್ಷತ್ರಿಯ—ಕ್ಷತ್ರಿಯರ, ವಿಶಾಮ್—ವೈಶ್ಯರ, ಶೂದ್ರಾಣಾಮ್—ಶೂದ್ರರ, ಚ—ಮತ್ತು, ಪರನ್ತಪ—ಹೇ ವೈರಿಮರ್ದನನೇ, ಕರ್ಮಾಣಿ—ಕರ್ಮಗಳು, ಪ್ರವಿಭಕ್ತಾನಿ—ವಿಭಜಿತ, ಸ್ವಭಾವ—ಅವರ ಸ್ವಭಾವ, ಪ್ರಭವೈಃ—ಜನಿತ, ಗುಣೈಃ—ಭೌತಿಕ ಪ್ರಕೃತಿ ಗುಣಗಳಿಂದ.

**ಹೇ ವೈರಿಮರ್ದನನೇ, ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಮತ್ತು ಶೂದ್ರರು ಭೌತಿಕ ಪ್ರಕೃತಿ ಗುಣಾನುಸಾರ ಅವರವರ ಸ್ವಭಾವ ಜನ್ಯ ಗುಣಗಳಿಂದ ವ್ಯತ್ಯಸ್ತರು.**

**ಶಮೋ ದಮಸ್ತಪಃ ಶೌಚಂ ಕ್ಷಾನ್ತಿರಾರ್ಜವಮೇವ ಚ ।**
**ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಮ್ ॥ ೪೨ ॥**

ಶಮಃ—ಶಾಂತಿ, ದಮಃ—ಆತ್ಮನಿಗ್ರಹ, ತಪಃ—ತಪಸ್ಸು, ಶೌಚಮ್—ಶುದ್ಧಿ, ಕ್ಷಾನ್ತಿಃ—ತಾಳ್ಮೆ, ಆರ್ಜವಮ್—ಪ್ರಾಮಾಣಿಕತೆ, ಏವ—ಖಂಡಿತವಾಗಿ, ಚ—ಮತ್ತು ಜ್ಞಾನಮ್—ಜ್ಞಾನ, ವಿಜ್ಞಾನಮ್—ವಿಜ್ಞಾನ, ಆಸ್ತಿಕ್ಯಮ್—ಆಸ್ತಿಕತೆ, ಬ್ರಹ್ಮ—ಬ್ರಾಹ್ಮಣನ, ಕರ್ಮ—ಕರ್ತವ್ಯ, ಸ್ವಭಾವ-ಜಮ್—ಸ್ವಭಾವ ಜನ್ಯ.

**ಶಾಂತಿ, ಆತ್ಮನಿಗ್ರಹ, ತಪಸ್ಸು, ಶುದ್ಧಿ, ತಾಳ್ಮೆ, ಪ್ರಾಮಾಣಿಕತೆ, ಜ್ಞಾನ, ವಿಜ್ಞಾನ ಮತ್ತು ಧರ್ಮಬುದ್ಧಿ— ಇವು ಬ್ರಾಹ್ಮಣನ ಕರ್ಮದ ಸ್ವಾಭಾವಿಕ ಗುಣಗಳು.**

**ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಮ್ ।**
**ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಮ್ ॥ ೪೩ ॥**

ಶೌರ್ಯಮ್—ಶೌರ್ಯ, ತೇಜಃ—ತೇಜಸ್ಸು, ಧೃತಿಃ—ನಿರ್ಧಾರ, ದಾಕ್ಷ್ಯಮ್—ದಕ್ಷತೆ, ಯುದ್ಧೇ—ಯುದ್ಧದಲ್ಲಿ, ಚ—ಮತ್ತು, ಅಪಿ—ಕೂಡ, ಅಪಲಾಯನಮ್—ಓಡಿಹೋಗದಿರುವುದು, ದಾನಮ್—ಧಾರಾಳತೆ, ಈಶ್ವರ—ನಾಯಕತ್ವದ, ಭಾವಃ—ಸ್ವಭಾವವು, ಚ—ಮತ್ತು, ಕ್ಷಾತ್ರಮ್—ಕ್ಷತ್ರಿಯನ, ಕರ್ಮ—ಕರ್ತವ್ಯ, ಸ್ವಭಾವ-ಜಮ್—ಸ್ವಭಾವ ಜನ್ಯ.

**ಶೌರ್ಯ, ತೇಜಸ್ಸು, ಧೃತಿ, ದಕ್ಷತೆ, ಯುದ್ಧದಲ್ಲಿ ಧೈರ್ಯ, ಔದಾರ್ಯ ಮತ್ತು ನಾಯಕತ್ವ— ಇವುಗಳು ಕ್ಷತ್ರಿಯನ ಕರ್ಮದ ಸ್ವಾಭಾವಿಕ ಗುಣಗಳು.**

**ಕೃಷಿಗೋರಕ್ಷ್ಯವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಮ್ ।**
**ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ ॥ ೪೪ ॥**

ಕೃಷಿ—ಉಳುವುದು, ಗೋರಕ್ಷ್ಯ—ಗೋವುಗಳ ರಕ್ಷಣೆ, ವಾಣಿಜ್ಯಮ್—ವಾಣಿಜ್ಯ ವೈಶ್ಯ—ವೈಶ್ಯರ, ಕರ್ಮ—ಕರ್ತವ್ಯ, ಸ್ವಭಾವ-ಜಮ್—ಸ್ವಭಾವ ಜನ್ಯ, ಪರಿಚರ್ಯಾ—ಸೇವೆ, ಆತ್ಮಕಮ್—ಕೂಡಿರುವ, ಕರ್ಮ—ಕರ್ತವ್ಯ, ಶೂದ್ರಸ್ಯ—ಶೂದ್ರರ, ಅಪಿ—ಕೂಡ, ಸ್ವಭಾವ-ಜಮ್—ಸ್ವಭಾವ ಜನ್ಯ.

**ಉಳುವುದು, ಗೋರಕ್ಷಣೆ ಮತ್ತು ವಾಣಿಜ್ಯ ಇವು ವೈಶ್ಯರ ಸ್ವಾಭಾವಿಕ ಕಾರ್ಯಗಳು ಮತ್ತು ಶೂದ್ರರಿಗೆ ದುಡಿಮೆ ಮತ್ತು ಇತರರ ಪರಿಚರ್ಯಕಾರ್ಯ.**

**ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ।**
**ಸ್ವಕರ್ಮನಿರತಃ ಸಿದ್ಧಿಂ ಯಥಾ ವಿನ್ದತಿ ತಚ್ಛೃಣು ॥ ೪೫ ॥**

ಸ್ವೇ ಸ್ವೇ—ಪ್ರತಿಯೊಬ್ಬನು ತನ್ನ ಸ್ವಂತ, ಕರ್ಮಣಿ—ಕೆಲಸವನ್ನು, ಅಭಿರತಃ—ಅನುಸರಿಸಿ. ಸಂಸಿದ್ಧಿಮ್—ಸಂಸಿದ್ಧಿಯನ್ನು, ಲಭತೇ—ಹೊಂದುತ್ತಾನೆ, ನರಃ—

ಮನುಷ್ಯನು, ಸ್ವಕರ್ಮ—ತನ್ನ ಸ್ವಂತ ಕರ್ತವ್ಯದಲ್ಲಿ, ನಿರತಃ—ನಿರತನಾಗಿ, ಸಿದ್ಧಿಮ್—ಸಿದ್ಧಿಯನ್ನು, ಯಥಾ—ಹೇಗೆ, ವಿನ್ದತಿ—ಹೊಂದುತ್ತಾನೆ, ತತ್—ಅದನ್ನು, ಶೃಣು—ಕೇಳು.

**ತನ್ನ ಗುಣ ಕರ್ಮಗಳನ್ನು ಅನುಸರಿಸಿ, ಪ್ರತಿಯೊಬ್ಬನೂ ಪರಿಪೂರ್ಣನಾಗಬಹುದು. ಇದನ್ನು ಹೇಗೆ ಮಾಡಬಹುದು ಎಂಬುದನ್ನು ಕುರಿತು ಈಗ ನನ್ನಿಂದ ಶ್ರವಣಮಾಡು.**

**ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।**
**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ ॥೪೬॥**

ಯತಃ—ಯಾರಿಂದ, ಪ್ರವೃತ್ತಿಃ—ಉದ್ಭೂತಿಯು, ಭೂತಾನಾಮ್ — ಎಲ್ಲ ಜೀವಿಗಳ, ಯೇನ—ಯಾರಿಂದ, ಸರ್ವಮ್—ಎಲ್ಲ, ಇದಮ್—ಇದು, ತತಮ್—ವ್ಯಾಪ್ತ, ಸ್ವ–ಕರ್ಮಣಾ—ತನ್ನ ಸ್ವಂತ ಕರ್ತವ್ಯಗಳಿಂದ ತಮ್—ಅವನನ್ನು, ಅಭ್ಯರ್ಚ್ಯ—ಅರ್ಚಿಸುತ್ತ, ಸಿದ್ಧಿಮ್—ಸಿದ್ಧಿಯನ್ನು, ವಿನ್ದತಿ—ಹೊಂದುತ್ತಾನೆ, ಮಾನವಃ—ಮಾನವನು.

**ಸಕಲ ಜೀವರ ಆಕರನಾದ ಮತ್ತು ಸರ್ವವ್ಯಾಪ್ತನಾದ ಭಗವಂತನ ಅರ್ಚನೆಯಿಂದ, ಸ್ವಕರ್ಮವನ್ನಾಚರಿಸುತ್ತ, ಮಾನವನು ಸಿದ್ಧಿಯನ್ನು ಹೊಂದಬಹುದು.**

**ಭಾವಾರ್ಥ :** ಹದಿನೈದನೆಯ ಅಧ್ಯಾಯದಲ್ಲಿ ಹೇಳಿದಂತೆ, ಎಲ್ಲ ಜೀವಿಗಳು ಪರಮ ಪ್ರಭುವಿನ ವಿಭಿನ್ನಾಂಶರು, ಹೀಗೆ ಪರಮಪ್ರಭು ಸಕಲ ಜೀವಿಗಳ ಆದಿ. ಇದು ವೇದಾಂತ ಸೂತ್ರದಲ್ಲಿ–**ಜನ್ಮಾದಿ ಅಸ್ಯ ಯತಃ** ಎಂದು ದೃಢೀಕೃತ. ಆದ್ದರಿಂದ ಪರಮಪ್ರಭು ಪ್ರತಿಯೊಬ್ಬ ಜೀವಿಯ ಜೀವನಾರಂಭ ಮತ್ತು ಭಗವದ್ಗೀತೆಯ ಏಳನೆಯ ಅಧ್ಯಾಯದಲ್ಲಿ ಹೇಳಿದಂತೆ, ಪರಮಪ್ರಭು. ತನ್ನ ದ್ವಿವಿಧಾ ಶಕ್ತಿಗಳಿಂದ, ಎಂದರೆ ಬಹಿರಂಗ ಮತ್ತು ಅಂತರಂಗ ಶಕ್ತಿಗಳಿಂದ ಸರ್ವವ್ಯಾಪ್ತನು. ಆದ್ದರಿಂದ ಒಬ್ಬನು ಭಗವಂತನನ್ನು ಅವನ ಶಕ್ತಿಗಳ ಸಮೇತ ಪೂಜಿಸಬೇಕು. ಸಾಮಾನ್ಯವಾಗಿ ವೈಷ್ಣವರು ಪರಮಪ್ರಭುವನ್ನು ಅವನ ಅಂತರಂಗ ಶಕ್ತಿಯ ಜೊತೆಗೆ ಅರ್ಚಿಸುತ್ತಾರೆ. ಅವನ ಬಹಿರಂಗ ಶಕ್ತಿಯು ಅಂತರಂಗ ಶಕ್ತಿಯ ತಿರೋಹಿತ ಛಾಯೆ. ಬಹಿರಂಗ ಶಕ್ತಿಯು ಹಿನ್ನೆಲೆ, ಆದರೆ ಪರಮಪ್ರಭು ಪರಮಾತ್ಮನಾಗಿ ತನ್ನ ಸಮಗ್ರ ಭಾಗ ವಿಸ್ತರಣೆಯಿಂದ ಪ್ರತಿಯೊಂದು ಕಡೆಯಲ್ಲಿ ಸನ್ನಿವೇಶಿತನು. ಅವನು ಪ್ರತಿಯೊಂದು ಕಡೆಯಲ್ಲಿ ಎಲ್ಲ ದೇವತೆಗಳ, ಎಲ್ಲ ಮಾನವರ, ಎಲ್ಲ ಪ್ರಾಣಿಗಳ ಪರಮಾತ್ಮನು. ಆದ್ದರಿಂದ ಪರಮ ಪ್ರಭುವಿನ ವಿಭಿನ್ನಾಂಶವಾಗಿ ಒಬ್ಬನು ಪರಮನಿಗೆ ಸೇವೆ ಸಲ್ಲಿಸುವ ತನ್ನ ಕರ್ತವ್ಯ ಉಳ್ಳವನು. ಪ್ರತಿಯೊಬ್ಬನೂ ಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಭಕ್ತಿಯುತ ಸೇವೆಯಲ್ಲಿ ನಿರತನಾಗಬೇಕು. ಅದು ಈ ಶ್ಲೋಕದಲ್ಲಿ ಹೇಳಿದೆ.

ಪ್ರತಿಯೊಬ್ಬನೂ ಇಂದ್ರಿಯಗಳ ಸ್ವಾಮಿಯಾದ, ಹೃಷೀಕೇಶನಿಂದ, ವಿಶಿಷ್ಟ ಪ್ರಕಾರದ ವೃತ್ತಿಯಲ್ಲಿ ತೊಡಗಿಸಲ್ಪಟ್ಟಿದ್ದಾನೆಂದು ತಿಳಿಯಬೇಕು ಮತ್ತು ತನ್ನನ್ನು

ತೊಡಗಿಸಿದ ಕರ್ಮ ಫಲದಿಂದ, ಪರಮದೇವೋತ್ತಮ ಪುರುಷ, ಶ್ರೀಕೃಷ್ಣನನ್ನು ಅರ್ಚಿಸ ಬೇಕು. ಒಬ್ಬನು ಹೀಗೆ ಪೂರ್ಣ ಕೃಷ್ಣ ಪ್ರಜ್ಞೆಯಲ್ಲಿ, ಸದಾ ಚಿಂತನ ಮಾಡಿದರೆ ಆಗ ಭಗವದನುಗ್ರಹದಿಂದ, ಅವನು ಪ್ರತಿಯೊಂದರ ಪೂರ್ಣ ಅರಿವು ಉಳ್ಳವನಾಗುತ್ತಾನೆ. ಅದು ಜೀವನದ ಸಿದ್ಧಿ. ಕೃಷ್ಣನು ಭಗವದ್ಗೀತೆಯಲ್ಲಿ (12.7), **ತೇಷಾಮಹಮ್ ಸಮುದ್ಧರ್ತಾ** ಎಂದು ಹೇಳುತ್ತಾನೆ. ಅಂಥ ಭಕ್ತನ ಉದ್ಧಾರದ ಭಾರವನ್ನು ಭಗವಂತನು ಸ್ವಯಂ ವಹಿಸಿಕೊಳ್ಳುತ್ತಾನೆ. ಅದು ಜೀವನದ ಅತ್ಯುನ್ನತ ಸಿದ್ಧಿ. ಒಬ್ಬನು ಯಾವುದೇ ವೃತ್ತಿ ನಿರತನಾಗಿರಬಹುದಾಗಿದ್ದರೂ ಅವನು ಪರಮಪ್ರಭುವಿಗೆ ಸೇವೆ ಸಲ್ಲಿಸಿದರೆ ಅತ್ಯುನ್ನತ ಸಿದ್ಧಿ ಪಡೆಯುತ್ತಾನೆ.

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।**
**ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥ ೪೭ ॥**

ಶ್ರೇಯಾನ್—ಉತ್ತಮ, ಸ್ವಧರ್ಮಃ—ಒಬ್ಬನ ಸ್ವವೃತ್ತಿಯು, ವಿಗುಣಃ—ಅಪರಿಪೂರ್ಣವಾಗಿ ಆಚರಿಸಿದ, ಪರ ಧರ್ಮಾತ್—ಮತ್ತೊಬ್ಬರ ವೃತ್ತಿಗಿಂತ, ಸ್ವ ಅನುಷ್ಠಿತಾತ್—ಪರಿಪೂರ್ಣವಾಗಿ ಆಚರಿಸಿದ, ಸ್ವಭಾವ ನಿಯತಮ್—ಒಬ್ಬನ ಸ್ವಭಾವಾನುಸಾರ ನಿಯತ, ಕರ್ಮ—ಕರ್ಮವನ್ನು, ಕುರ್ವನ್—ಆಚರಿಸುತ್ತ, ನ—ಎಂದೂ, ಆಪ್ನೋತಿ—ಹೊಂದುವುದಿಲ್ಲ, ಕಿಲ್ಬಿಷಮ್—ಪಾಪ ಪ್ರತಿಕ್ರಿಯೆಗಳನ್ನು.

**ಒಬ್ಬನು ಮತ್ತೊಬ್ಬರ ವೃತ್ತಿಯನ್ನು ಅಂಗೀಕರಿಸಿ ಪರಿಪೂರ್ಣವಾಗಿ ಆಚರಿಸುವುದಕ್ಕಿಂತಲೂ ಅಪರಿಪೂರ್ಣವಾಗಿ ಸ್ವಂತ ವೃತ್ತಿಯನ್ನು ಆಚರಿಸುವುದು ಮೇಲು. ಒಬ್ಬನ ಸ್ವಭಾವಾನುಸಾರ ನಿಯತ ಕರ್ತವ್ಯಗಳು ಎಂದಿಗೂ ಪಾಪ ಪ್ರತಿಕ್ರಿಯೆಗಳಿಂದ ಬಾಧಿತವಲ್ಲ.**

**ಭಾವಾರ್ಥ :** ಒಬ್ಬನ ವೃತ್ತಿ ಧರ್ಮವು ಭಗವದ್ಗೀತೆಯಲ್ಲಿ ವಿಧಿತ. ಹಿಂದಿನ ಶ್ಲೋಕಗಳಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರ ಧರ್ಮಗಳು ಅವರವರ ವಿಶಿಷ್ಟ ಪ್ರಕೃತಿ ಗುಣಾನುಸಾರ ವಿಧಿತ. ಒಬ್ಬನು ಮತ್ತೊಬ್ಬನ ಧರ್ಮವನ್ನು ಅನುಕರಿಸಕೂಡದು. ಸ್ವಭಾವದಿಂದ ಶೂದ್ರರು ಮಾಡುವ ಬಗೆಯ ಕೆಲಸದಲ್ಲಿ ಅನುರಕ್ತನಾಗಿದ್ದರೆ, ಅವನು ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿರಬಹುದಾಗಿದ್ದರೂ, ಅಸಹಜವಾಗಿ ಬ್ರಾಹ್ಮಣನೆಂದು ಹೇಳಿಕೊಳ್ಳಕೂಡದು. ಹೀಗೆ ಒಬ್ಬನು ಸ್ವಸ್ವಭಾವಾನುಸಾರ ಕರ್ಮ ಮಾಡಬೇಕು. ಭಗವತ್ಸೇವಾ ರೂಪವಾಗಿ ಆಚರಿಸಿದರೆ, ಯಾವುದೇ ಕರ್ಮವು ಹೇಯವಲ್ಲ. ಬ್ರಾಹ್ಮಣ ವೃತ್ತಿ ಧರ್ಮವು ಖಂಡಿತವಾಗಿ ಸಾತ್ವಿಕ ಗುಣದ್ದು. ಆದರೆ ಒಬ್ಬ ವ್ಯಕ್ತಿಯು ಸ್ವಭಾವದಿಂದ ಸಾತ್ವಿಕನಲ್ಲದಿದ್ದರೆ, ಅವನು ಬ್ರಾಹ್ಮಣನ ವೃತ್ತಿ ಧರ್ಮವನ್ನು ಅನುಕರಿಸಕೂಡದು. ಕ್ಷತ್ರಿಯನಿಗೆ, ಎಂದರೆ ಆಡಳಿತಗಾರನಿಗೆ, ಅನೇಕ ಹೇಯ ವಿಷಯಗಳಿವೆ; ಕ್ಷತ್ರಿಯನು ತನ್ನ ವೈರಿ ಸಂಹಾರಕ್ಕಾಗಿ ಹಿಂಸಾತ್ಮಕನಾಗಬೇಕಾಗುವುದು. ಮತ್ತು ಕೆಲವು ಸಲ ಕ್ಷತ್ರಿಯನು ರಾಜತಂತ್ರಕ್ಕಾಗಿ ಸುಳ್ಳು ಹೇಳಬೇಕಾಗುವುದು. ಅಂಥ ಹಿಂಸೆ ಮತ್ತು ಇಬ್ಬಗೆಯ ವರ್ತನೆಯು ರಾಜಕೀಯ ವ್ಯವಹಾರಗಳಲ್ಲಿ ಒದಗುತ್ತವೆ, ಆದರೆ ಕ್ಷತ್ರಿಯನು

ತನ್ನ ವೃತ್ತಿ ಕರ್ತವ್ಯವನ್ನು ತ್ಯಜಿಸಿ ಬ್ರಾಹ್ಮಣನ ಕರ್ತವ್ಯಗಳನ್ನು ಆಚರಿಸಲು ಯತ್ನಿಸು ವುದು ನಿರೀಕ್ಷಿತವಲ್ಲ.

ಒಬ್ಬನು ಪರಮ ಪ್ರಭುವಿನ ತುಷ್ಟಿಗಾಗಿ ಕಾರ್ಯ ಮಾಡಬೇಕು. ಉದಾಹರಣೆಗೆ ಅರ್ಜುನನು ಕ್ಷತ್ರಿಯನಾಗಿದ್ದನು. ಅವನು ಪ್ರತಿಪಕ್ಷದೊಂದಿಗೆ ಕಾದಲು ಹಿಂಜರಿ ಯತೊಡಗಿದನು. ಆದರೆ ಅಂಥ ಯುದ್ಧವು ಕೃಷ್ಣ, ಪರಮ ದೇವೋತ್ತಮ ಪುರುಷ ನಿಗೋಸ್ಕರ ಆಚರಿಸಿದರೆ ಪತನದ ಭಯವಿಲ್ಲ. ವ್ಯವಹಾರ ಕ್ಷೇತ್ರದಲ್ಲಿ ಕೂಡ, ವ್ಯಾಪಾರಿಯು ಕೆಲವು ಸಲ ಲಾಭಕ್ಕಾಗಿ ಅನೇಕ ಸುಳ್ಳು ಹೇಳಬೇಕಾಗುವುದು. ಅವನು ಹಾಗೆ ಮಾಡದಿದ್ದರೆ ಅವನಿಗೆ ಲಾಭ ದೊರೆಯಲಾರದು. ಕೆಲವು ಸಲ ವ್ಯಾಪಾರಿ ಯೊಬ್ಬನು. "ಹೇ ನನ್ನ ಪ್ರಿಯ ಗ್ರಾಹಕನೇ, ನಿನ್ನಿಂದ ಲಾಭ ಪಡೆಯುತ್ತಿಲ್ಲ," ಎಂದು ಹೇಳುತ್ತಾನೆ. ಆದರೆ ಲಾಭವಿಲ್ಲದೆ ವ್ಯಾಪಾರಿಯು ಬದುಕಲಾರನೆಂದು ಒಬ್ಬನು ತಿಳಿದು ಕೊಳ್ಳಬೇಕು. ಆದ್ದರಿಂದ ವ್ಯಾಪಾರಿಯು ಲಾಭವಿಲ್ಲ ಎಂದು ಹೇಳಿದರೆ ಅದು ಕೇವಲ ಸುಳ್ಳು ಎಂದು ತಿಳಿಯಬೇಕು. ಸುಳ್ಳು ಹೇಳಲೇಬೇಕಾಗುವ ವೃತ್ತಿಯಲ್ಲಿ ತಾನು ತೊಡಗಿದ್ದರಿಂದ, ಆ ವೃತ್ತಿಯನ್ನು ಅನುಕರಿಸಕೂಡದೆಂದು ವ್ಯಾಪಾರಿಯು ಯೋಚಿಸ ಕೂಡದು. ಅದು ಹೇಳಲ್ಪಟ್ಟಿಲ್ಲ. ಒಬ್ಬನು ಕ್ಷತ್ರಿಯ, ವೈಶ್ಯ ಅಥವಾ ಶೂದ್ರನಾಗಿರಲಿ ಅವನು ಸ್ವಕರ್ಮದಿಂದ ಪರಮ ದೇವೋತ್ತಮ ಪುರುಷನ ಸೇವೆ ಮಾಡಿದರೆ ಸಾಕು. ನಾನಾ ಬಗೆಯ ಯಜ್ಞಗಳನ್ನಾಚರಿಸುವ ಬ್ರಾಹ್ಮಣರು ಕೂಡ ಕೆಲವು ಸಲ ಪ್ರಾಣಿಬಲಿಕೊಡ ಬೇಕಾಗುತ್ತದೆ, ಏಕೆಂದರೆ ಕೆಲವು ಸಲ ಅಂಥ ಯಜ್ಞ ಸಮಾರಂಭಗಳಲ್ಲಿ ಪಶು ಬಲಿ ನಡೆಯು ತ್ತದೆ. ಅದೇ ಪ್ರಕಾರ ಸ್ವಕರ್ಮ ನಿರತ ಕ್ಷತ್ರಿಯನು ವೈರಿ ಸಂಹಾರ ಮಾಡಿದರೆ ಪಾಪ ಬರುವುದಿಲ್ಲ. ಮೂರನೆಯ ಅಧ್ಯಾಯದಲ್ಲಿ ಈ ವಿಷಯಗಳು ಸ್ಪಷ್ಟವಾಗಿ ಮತ್ತು ವಿಸ್ತಾರವಾಗಿ ವಿವರಿಸಲ್ಪಟ್ಟಿವೆ. ಪ್ರತಿಯೊಬ್ಬನೂ ಯಜ್ಞ ಉದ್ದೇಶಕ್ಕಾಗಿ, ಅಥವಾ ವಿಷ್ಣು, ಪರಮ ದೇವೋತ್ತಮ ಪುರುಷನಿಗಾಗಿ ಕರ್ಮ ಮಾಡಬೇಕು. ಸ್ವೇಂದ್ರಿಯ ತೋಷಣೆಗಾಗಿ ಮಾಡಿದ ಕರ್ಮವು ಬಂಧನಕ್ಕೆ ಕಾರಣ. ತಾತ್ಪರ್ಯವೆಂದರೆ, ಪ್ರತಿ ಯೊಬ್ಬನು ತಾನು ಆರ್ಜಿಸಿದ ವಿಶಿಷ್ಟ ಪ್ರಕೃತಿ ಗುಣಾನುಸಾರ ಕರ್ಮ ನಿರತನಾಗಬೇಕು. ಮತ್ತು ಪರಮ ಪ್ರಭುವಿನ ಪರಮ ಕಾರಣದ ಸೇವೆಗಾಗಿ ಮಾತ್ರವೇ ಕರ್ಮ ಮಾಡಲು ತೀರ್ಮಾನಿಸಬೇಕು.

**ಸಹಜಂ ಕರ್ಮ ಕೌನ್ತೇಯ ಸದೋಷಮಪಿ ನ ತ್ಯಜೇತ್ ।**
**ಸರ್ವಾರಮ್ಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ॥ ೪೮ ॥**

ಸಹ-ಜಮ್—ಜೊತೆಗೆ ಹುಟ್ಟಿದ, ಕರ್ಮ—ಕರ್ಮ, ಕೌನ್ತೇಯ—ಹೇ ಕುಂತಿ ಪುತ್ರನೇ, ಸ-ದೋಷಮ್—ದೋಷಯುಕ್ತ, ಅಪಿ—ಆಗಿದ್ದರೂ, ನ—ಎಂದೂ, ತ್ಯಜೇತ್—ತ್ಯಜಿಸತಕ್ಕುದ್ದಲ್ಲ, ಸರ್ವ–ಆರಮ್ಭಾಃ—ಸರ್ವ ಕಾರ್ಯಾರಂಭಗಳು, ಹಿ— ಖಂಡಿತವಾಗಿ, ದೋಷೇಣ—ದೋಷಯುಕ್ತ, ಧೂಮೇನ—ಹೊಗೆಯಿಂದ, ಅಗ್ನಿಃ— ಬೆಂಕಿ, ಇವ—ಹಾಗೆ, ಆವೃತಾಃ—ಆವೃತವಾದ.

**ಬೆಂಕಿಯು ಹೊಗೆಯಿಂದ ಆವೃತವಾಗಿರುವಂತೆ, ಪ್ರತಿಯೊಂದು ಪ್ರಯತ್ನವು ಒಂದಿಲ್ಲಾ ಒಂದು ದೋಷಯುಕ್ತ. ಆದ್ದರಿಂದ, ಹೇ ಕುಂತೀ ಪುತ್ರನೇ, ತನ್ನ ಸ್ವಭಾವ ಜನ್ಯ ಕರ್ಮವು ಪೂರ್ಣ ದೋಷಯುಕ್ತವಾಗಿದ್ದರೂ ಕೂಡ, ಒಬ್ಬನು ಅದನ್ನು ತ್ಯಜಿಸಕೂಡದು.**

**ಭಾವಾರ್ಥ :** ಬದ್ಧ ಜೀವನದಲ್ಲಿ, ಎಲ್ಲ ಕರ್ಮವು ಭೌತಿಕ ಪ್ರಕೃತಿ ಗುಣಗಳಿಂದ ಕಲುಷಿತ. ಒಬ್ಬನು ಬ್ರಾಹ್ಮಣನಾಗಿದ್ದರೂ ಪಶುಬಲಿ ಅಗತ್ಯವಾದ ಯಜ್ಞಗಳನ್ನು ಅವನು ಆಚರಿಸಬೇಕಾಗುವುದು. ಅದೇ ಪ್ರಕಾರ, ಎಷ್ಟೇ ಪವಿತ್ರನಾಗಿದ್ದರೂ ಕ್ಷತ್ರಿಯನು ವೈರಿಗಳೊಡನೆ ಕಾದಾಡಬೇಕಾಗುವುದು. ಅವನು ಅದನ್ನು ತಪ್ಪಿಸಿಕೊಳ್ಳಲಾಗದು. ಅದೇ ಪ್ರಕಾರ, ಎಷ್ಟೇ ಪವಿತ್ರನಾಗಿದ್ದರೂ, ವೈಶ್ಯನು, ಉದ್ಯೋಗದಲ್ಲಿರಲು ಕೆಲವು ಸಲ ತನ್ನ ಲಾಭವನ್ನು ಮುಚ್ಚಿಡಬೇಕಾಗುವುದು, ಅಥವಾ ಕೆಲವು ಸಲ ಅವನು ಕಳ್ಳವ್ಯಾಪಾರ ಮಾಡಬೇಕಾಗುವುದು. ಇದು ಅವಶ್ಯ; ಅವುಗಳನ್ನು ಬಿಡಲು ಆಗುವುದಿಲ್ಲ. ಅದೇ ಪ್ರಕಾರ, ದುಷ್ಟ ಯಜಮಾನನ ಸೇವೆ ಮಾಡಬೇಕಾಗಿ ಬಂದಾಗ, ಶೂದ್ರನು, ಮಾಡಬಾರದ್ದಾಗಿದ್ದರೂ, ಯಜಮಾನನ ಆಜ್ಞೆಯನ್ನು ಪಾಲಿಸಬೇಕಾಗುವುದು. ಈ ದೋಷಗಳಿದ್ದರೂ, ಕೂಡ, ಒಬ್ಬನು ತನ್ನ ನಿಯತ ಕರ್ತವ್ಯಗಳನ್ನು ಪಾಲಿಸುವುದನ್ನು ಮುಂದುವರಿಸಬೇಕು, ಏಕೆಂದರೆ ಅವು ಅವನ ಸ್ವ–ಸ್ವಭಾವಜನ್ಯ.

ಇಲ್ಲಿ ಒಂದು ಸೊಗಸಾದ ದೃಷ್ಟಾಂತ ನೀಡಲ್ಪಟ್ಟಿದೆ. ಅಗ್ನಿಯು ಶುದ್ಧವಾಗಿದ್ದರೂ ಹೊಗೆ ಇರುತ್ತದೆ. ಆದರೂ ಹೊಗೆ ಅಗ್ನಿಯನ್ನು ಅಶುದ್ಧಗೊಳಿಸುವುದಿಲ್ಲ. ಅಗ್ನಿಯಲ್ಲಿ ಧೂಮವಿದ್ದರೂ, ಅಗ್ನಿಯು ಎಲ್ಲ ಮಹಾಭೂತಗಳಲ್ಲಿ ಶುದ್ಧತಮವೆಂದು ಪರಿಗಣಿತ. ಒಬ್ಬನು ಕ್ಷತ್ರಿಯ ಕರ್ಮವನ್ನು ತ್ಯಜಿಸಿ ಬ್ರಾಹ್ಮಣ ವೃತ್ತಿಯನ್ನು ಅನುಕರಿಸ ಬಯಸಿದರೆ, ಬ್ರಾಹ್ಮಣ ವೃತ್ತಿಯಲ್ಲಿ ಅಸಂತೋಷಕಾರಕ ಕರ್ತವ್ಯಗಳು ಇರುವುದಿಲ್ಲವೆಂದು ಅವನು ಖಚಿತಗೊಳ್ಳಲಾರನು. ಆಗ ಒಬ್ಬನು ಈ ಭೌತಿಕ ಜಗತ್ತಿನಲ್ಲಿ ಭೌತಿಕ ಪ್ರಕೃತಿಯಿಂದ ಸಂಪೂರ್ಣವಾಗಿ ಕಲ್ಮಷಮುಕ್ತನಾಗಲಾರನು ಎಂಬ ನಿರ್ಣಯಕ್ಕೆ ಬರಬಹುದು. ಅಗ್ನಿ ಮತ್ತು ಧೂಮದ ಈ ಉದಾಹರಣೆಯು ಈ ಸಂಬಂಧದಲ್ಲಿ ಬಹು ಸಮರ್ಪಕ. ಚಳಿಗಾಲದಲ್ಲಿ ಒಬ್ಬನು ಬೆಂಕಿಯಿಂದ ಒಂದು ಕೆಂಡವನ್ನೆತ್ತಿಕೊಂಡರೆ, ಕೆಲವು ಸಲ ಹೊಗೆಯು ಕಣ್ಣುಗಳನ್ನು ಮತ್ತು ದೇಹದ ಇತರ ಭಾಗಗಳನ್ನು ಕ್ಷೋಭೆಗೊಳಿಸುತ್ತದೆ. ಆದರೂ ಕ್ಷೋಭಕಾರಕ ಸ್ಥಿತಿಗಳಲ್ಲಿಯೂ ಒಬ್ಬನು ಬೆಂಕಿಯನ್ನು ಉಪಯೋಗಿಸಬೇಕಾಗುವುದು. ಅದೇ ಪ್ರಕಾರ, ಕೆಲವು ಕ್ಷೋಭಕ ಅಂಶಗಳಿವೆ ಎಂಬ ಕಾರಣದಿಂದ ಒಬ್ಬನು ತನ್ನ ಸ್ವಾಭಾವಿಕ ವೃತ್ತಿಯನ್ನು ತ್ಯಜಿಸಕೂಡದು. ಬದಲಾಗಿ ಒಬ್ಬನು ಕೃಷ್ಣಪ್ರಜ್ಞೆಯಲ್ಲಿ ತನ್ನ ವೃತ್ತಿ ಪಾಲನೆಯಿಂದ ಭಗವಂತನ ಸೇವೆಗೆ ಕೃತನಿಶ್ಚಯನಾಗಿರಬೇಕು. ಅದು ಪರಿಪೂರ್ಣತೆಯ ಅಂಶ. ಪರಮ ಪ್ರಭುವಿನ ತುಷ್ಟಿಗಾಗಿ ವಿಶಿಷ್ಟ ಪ್ರಕಾರದ ವೃತ್ತಿಯನ್ನು ಆಚರಿಸಿದಾಗ, ಆ ವಿಶಿಷ್ಟ ವೃತ್ತಿಯಲ್ಲಿನ ಎಲ್ಲ ದೋಷಗಳು ಶುದ್ಧವಾಗುತ್ತವೆ. ಭಕ್ತಿಯುತ ಸೇವಾ ಸಂಬಂಧದಲ್ಲಿ ಕರ್ಮಫಲಗಳು ಶುದ್ಧವಾದಾಗ, ಅಂತರಾತ್ಮನು ಆತ್ಮದರ್ಶನದಿಂದ ಪರಿಪೂರ್ಣನಾಗುತ್ತಾನೆ, ಮತ್ತು ಅದು ಆತ್ಮ-ಸಾಕ್ಷಾತ್ಕಾರ.

**ಅಸಕ್ತಬುದ್ಧಿಃ ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ ।**
**ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ ॥ ೪೯ ॥**

ಅಸಕ್ತ-ಬುದ್ಧಿಃ—ಅನಾಸಕ್ತ ಬುದ್ಧಿ, ಸರ್ವತ್ರ—ಎಲ್ಲ ಕಡೆಯಲ್ಲಿ, ಜಿತ-ಆತ್ಮಾ—ಮನೋನಿಗ್ರಹ ಹೊಂದಿ, ವಿಗತಸ್ಪೃಹಃ—ಐಹಿಕ ಕಾಮನೆಗಳಿಲ್ಲದೆ. ನೈಷ್ಕರ್ಮ್ಯ-ಸಿದ್ಧಿಮ್—ಪ್ರತಿಕ್ರಿಯಾರಹಿತ ಸಿದ್ಧಿ, ಪರಮಾಮ್—ಪರಮ, ಸಂನ್ಯಾಸೇನ—ಸನ್ಯಾಸಾಶ್ರಮದಿಂದ, ಅಧಿಗಚ್ಛತಿ—ಒಬ್ಬನು ಹೊಂದುತ್ತಾನೆ.

**ಆತ್ಮಸಂಯಮಿ, ಅನಾಸಕ್ತನು, ಮತ್ತು ಎಲ್ಲ ಭೌತಿಕ ಭೋಗಗಳನ್ನು ಕಡೆಗಣಿಸುವವನು, ಸನ್ಯಾಸ ಸಾಧನೆಯಿಂದ ಪ್ರತಿಕ್ರಿಯಾ ಮುಕ್ತ ಅತ್ಯುನ್ನತ ಸಿದ್ಧಿಯ ಮಟ್ಟವನ್ನು ಹೊಂದಬಹುದು.**

**ಭಾವಾರ್ಥ :** ನಿಜ ಸನ್ಯಾಸವೆಂದರೆ ಒಬ್ಬನು ಸದಾ ತಾನು ಪರಮ ಪ್ರಭುವಿನ ವಿಭಿನ್ನಾಂಶನೆಂದು ಚಿಂತನ ಮಾಡಬೇಕು, ಆದ್ದರಿಂದ ತನ್ನ ಕರ್ಮಫಲ ಭೋಗಕ್ಕೆ ತನಗೆ ಅಧಿಕಾರವಿಲ್ಲವೆಂದು ತಿಳಿಯಬೇಕು. ಅವನು ಪರಮ ಪ್ರಭುವಿನ ವಿಭಿನ್ನಾಂಶನಾಗಿರುವುದರಿಂದ, ಅವನ ಕರ್ಮಫಲಗಳು ಪರಮ ಪ್ರಭುವಿನಿಂದ ಭುಂಕ್ತವಾಗಬೇಕು. ಇದು ವಾಸ್ತವಿಕ ಕೃಷ್ಣಪ್ರಜ್ಞೆ. ಕೃಷ್ಣಪ್ರಜ್ಞೆಯಲ್ಲಿ ಕಾರ್ಯಮಾಡುವವನು ನಿಜವಾದ ಸನ್ಯಾಸಿ. ಅಂಥ ಮನೋಭಾವದಿಂದ ಒಬ್ಬನು ಏಕೆ ತುಷ್ಟನೆಂದರೆ ಅವನು, ವಾಸ್ತವಿಕವಾಗಿ ಪರಮನಿಗಾಗಿ ಕಾರ್ಯ ಮಾಡುತ್ತಾನೆ. ಹೀಗೆ ಅವನು ಯಾವ ಭೌತಿಕ ವಸ್ತುವಿನಲ್ಲಿಯೂ ಆಸಕ್ತನಲ್ಲ; ಅವನು ಭಗವತ್ಸೇವಾಲಬ್ಧ ದಿವ್ಯ ಸುಖಕ್ಕಿಂತ ಹೆಚ್ಚಿನ ಯಾವ ಸುಖವನ್ನು ಪಡೆಯದಿರುವ ಅಭ್ಯಾಸ ಹೊಂದುತ್ತಾನೆ. ಸನ್ಯಾಸಿಯನ್ನು ತನ್ನ ಪೂರ್ವ ಕರ್ಮ ಪ್ರತಿಕ್ರಿಯಾ ಮುಕ್ತನೆಂದು ತಿಳಿಯಲಾಗಿದೆ, ಆದರೆ ಕೃಷ್ಣಪ್ರಾಜ್ಞಿಯು ಹಾಗೆಂಬ ಸನ್ಯಾಸ ಗ್ರಹಿಸದೆ ತಾನಾಗಿಯೇ ಇಂಥ ಸಿದ್ಧಿ ಹೊಂದುತ್ತಾನೆ. ಈ ಮನೋಭಾವವನ್ನು **ಯೋಗಾರೂಢ,** ಅಥವಾ ಯೋಗದ ಪರಿಪೂರ್ಣತೆಯ ಹಂತ ಎಂದು ಕರೆದಿದೆ. ಮೂರನೆಯ ಅಧ್ಯಾಯದಲ್ಲಿ ದೃಢಪಟ್ಟಂತೆ, **ಯಸ್ತ್ವಾತ್ಮ-ರತಿರ್ ಏವ ಸ್ಯಾತ್ :** ಸ್ವಸಂತುಷ್ಟನಾದವನು ಯಾವ ಬಗೆಯ ತನ್ನ ಕರ್ಮ ಪ್ರತಿಕ್ರಿಯೆಗೂ ಭಯಪಡಬೇಕಾಗಿಲ್ಲ.

**ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಪ್ನೋತಿ ನಿಬೋಧ ಮೇ ।**
**ಸಮಾಸೇನೈವ ಕೌನ್ತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ॥ ೫೦ ॥**

ಸಿದ್ಧಿಮ್—ಸಿದ್ಧಿಯನ್ನು, ಪ್ರಾಪ್ತಃ—ಪಡೆದು, ಯಥಾ—ಹೇಗೆ, ಬ್ರಹ್ಮ—ಪರಮ, ತಥಾ—ಹಾಗೆ, ಆಪ್ನೋತಿ—ಒಬ್ಬನು ಹೊಂದುತ್ತಾನೆ, ನಿಬೋಧ—ತಿಳಿಯಲೆತ್ನಿಸು, ಮೇ—ನನ್ನಿಂದ, ಸಮಾಸೇನ—ಸಂಗ್ರಹವಾಗಿ, ಏವ—ಖಂಡಿತವಾಗಿ, ಕೌನ್ತೇಯ—ಹೇ ಕುಂತೀ ಪುತ್ರನೇ, ನಿಷ್ಠಾ—ನಿಷ್ಠೆ, ಜ್ಞಾನಸ್ಯ—ಜ್ಞಾನದ, ಯಾ—ಯಾವುದು, ಪರಾ—ದಿವ್ಯ.

**ಹೇ ಕುಂತೀ ಪುತ್ರನೇ, ಈ ಪರಿಪೂರ್ಣತೆಯನ್ನು ಪಡೆದವನು ಅತ್ಯುನ್ನತ ಜ್ಞಾನಮಟ್ಟ,ಪರಮ ಪರಿಪೂರ್ಣಮಟ್ಟವಾದ ಬ್ರಹ್ಮನ್‌ನನ್ನು ಹೇಗೆ ಕರ್ಮ ಮಾಡಿ**

**ಪಡೆಯಬಹುದು ಎಂಬುದನ್ನು ಈಗ ನಾನು ಸಂಗ್ರಹವಾಗಿ ಹೇಳುವ ರೀತಿಯಲ್ಲಿ ನನ್ನಿಂದ ತಿಳಿದುಕೋ.**

**ಭಾವಾರ್ಥ :** ಒಬ್ಬನು ಕೇವಲ ತನ್ನ ವೃತ್ತಿ ಕರ್ತವ್ಯದಲ್ಲಿ ನಿರತನಾಗಿ, ಆ ಕರ್ತವ್ಯವನ್ನು ಪರಮ ದೇವೋತ್ತಮ ಪುರುಷನ ಪರವಾಗಿ ಆಚರಿಸುತ್ತ, ಹೇಗೆ ಅತ್ಯುನ್ನತ ಪರಿಪೂರ್ಣತೆಯ ಮಟ್ಟವನ್ನು ಹೊಂದಬಹುದೆಂದು ಭಗವಂತನು ಅರ್ಜುನನಿಗೆ ವರ್ಣಿಸುತ್ತಾನೆ. ಒಬ್ಬನು ಪರಮ ಪ್ರಭುವಿನ ತುಷ್ಟಿಗಾಗಿ ತನ್ನ ಕರ್ಮಫಲವನ್ನು ತ್ಯಾಗ ಮಾಡುವ ಮಾತ್ರದಿಂದ ಬ್ರಹ್ಮನ್ ಪರಮ ಮಟ್ಟವನ್ನು ಹೊಂದುತ್ತಾನೆ. ಅದೇ ಆತ್ಮಸಾಕ್ಷಾತ್ಕಾರದ ಪ್ರಕ್ರಿಯೆ. ವಾಸ್ತವಿಕ ಜ್ಞಾನ ಸಿದ್ಧಿಯು ಶುದ್ಧ ಕೃಷ್ಣಪ್ರಜ್ಞಾ ಲಬ್ಧಿಯಲ್ಲಿದೆ; ಅದು ಈ ಮುಂದಿನ ಶ್ಲೋಕಗಳಲ್ಲಿ ವರ್ಣಿತ.

**ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾತ್ಮಾನಂ ನಿಯಮ್ಯ ಚ ।**
**ಶಬ್ದಾದೀನ್ ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ॥ ೫೧ ॥**
**ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ ।**
**ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥ ೫೨ ॥**
**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್ ।**
**ವಿಮುಚ್ಯ ನಿರ್ಮಮಃ ಶಾನ್ತೋ ಬ್ರಹ್ಮಭೂಯಾಯ ಕಲ್ಪತೇ ॥ ೫೩ ॥**

ಬುದ್ಧ್ಯಾ—ಬುದ್ಧಿಯಿಂದ, ವಿಶುದ್ಧಯಾ—ಪೂರ್ಣ ಶುದ್ಧವಾಗಿ, ಯುಕ್ತಃ—ನಿರತನಾಗಿ, ಧೃತ್ಯಾ—ನಿರ್ಧಾರದಿಂದ, ಆತ್ಮಾನಮ್—ಆತ್ಮವನ್ನು, ನಿಯಮ್ಯ—ನಿಯಂತ್ರಿಸಿ, ಚ—ಕೂಡ, ಶಬ್ದ-ಆದೀನ್—ಶಬ್ದದಂಥ, ವಿಷಯಾನ್—ಇಂದ್ರಿಯ ವಿಷಯಗಳನ್ನು, ತ್ಯಕ್ತ್ವಾ—ತ್ಯಜಿಸಿ, ರಾಗ-ದ್ವೇಷೌ—ರಾಗದ್ವೇಷಗಳನ್ನು, ವ್ಯುದಸ್ಯ—ಬದಿಗೊತ್ತಿ, ಚ—ಕೂಡ, ವಿವಿಕ್ತ-ಸೇವೀ—ಏಕಾಂತ ಸ್ಥಳದಲ್ಲಿದ್ದು, ಲಘು-ಆಶೀ—ಅತ್ಯಲ್ಪ ಆಹಾರ ಸೇವಿಸಿ, ಯತ—ನಿಗ್ರಹ ಮಾಡಿ, ವಾಕ್—ವಾಕ್, ಕಾಯ—ದೇಹ, ಮಾನಸಃ—ಮತ್ತು ಮನಸ್ಸು, ಧ್ಯಾನ-ಯೋಗ-ಪರಃ—ಸಮಾಧಿಗತನಾಗಿ, ನಿತ್ಯಮ್—ದಿನದ ಇಪ್ಪತ್ತನಾಲ್ಕು ಗಂಟೆಗಳು, ವೈರಾಗ್ಯಮ್—ವೈರಾಗ್ಯವನ್ನು, ಸಮುಪಾಶ್ರಿತಃ—ಆಶ್ರಯಿಸಿ, ಅಹಂಕಾರಮ್—ಮಿಥ್ಯಾಹಂಕಾರವನ್ನು, ಬಲಮ್—ಮಿಥ್ಯಾ ಬಲವನ್ನು, ದರ್ಪಮ್—ಮಿಥ್ಯಾ ದರ್ಪವನ್ನು, ಕಾಮಮ್—ಕಾಮವನ್ನು, ಕ್ರೋಧಮ್—ಕ್ರೋಧವನ್ನು, ಪರಿಗ್ರಹಮ್—ಮತ್ತು ಐಹಿಕ ವಸ್ತುಗಳ ಸ್ವೀಕಾರ, ವಿಮುಚ್ಯ—ಇವುಗಳಿಂದ ಮುಕ್ತನಾಗಿ, ನಿರ್ಮಮಃ—ಮಮಕಾರ ಭಾವವಿಲ್ಲದೆ, ಶಾನ್ತಃ—ಶಾಂತನು, ಬ್ರಹ್ಮ-ಭೂಯಾಯ—ಆತ್ಮ ಸಾಕ್ಷಾತ್ಕಾರಕ್ಕೆ, ಕಲ್ಪತೇ—ಅರ್ಹನು.

**ತನ್ನ ಬುದ್ಧಿಯಿಂದ ಶುದ್ಧನಾಗಿ, ದೃಢ ನಿರ್ಧಾರದಿಂದ ಮನಸ್ಸನ್ನು ನಿಗ್ರಹಿಸಿ, ಇಂದ್ರಿಯತೋಷಕ ವಿಷಯಗಳನ್ನು ತ್ಯಜಿಸಿ, ರಾಗದ್ವೇಷ ಮುಕ್ತನಾಗಿ, ಏಕಾಂತವಾಸಿ, ಅಲ್ಪಾಹಾರಿ, ತನ್ನ ದೇಹ, ಮನಸ್ಸು ಮತ್ತು ವಾಕ್ ಶಕ್ತಿಯನ್ನು ನಿಯಂತ್ರಿಸಿದವನು, ಸದಾ ಸಮಾಧಿಗತನು ಮತ್ತು ಅಸಂಗಿಯೂ, ಮಿಥ್ಯಾಹಂಕಾರ,**

**ಮಿಥ್ಯಾ ಬಲ, ಮಿಥ್ಯಾ ದರ್ಪ, ಕಾಮ, ಕ್ರೋಧ ಮತ್ತು ಭೌತಿಕ ವಸ್ತುಗಳ ಪರಿಗ್ರಹ ಮುಕ್ತನು, ಮಿಥ್ಯಾ ಒಡೆತನ ಭಾವಮುಕ್ತನು, ಮತ್ತು ಶಾಂತನು—ಅಂಥ ವ್ಯಕ್ತಿ ಖಂಡಿತ ಆತ್ಮ-ಸಾಕ್ಷಾತ್ಕಾರದ ಸ್ಥಾನಕ್ಕೆ ಉನ್ನತಿಸಿದವನು.**

**ಭಾವಾರ್ಥ :** ಒಬ್ಬನು ಬುದ್ಧಿಯಿಂದ ಶುದ್ಧನಾದಾಗ, ಸಾತ್ವಿಕ ಭಾವದಲ್ಲಿರುತ್ತಾನೆ. ಹೀಗೆ ಒಬ್ಬನು ಮನೋನಿಗ್ರಹಿಯಾಗುತ್ತಾನೆ ಮತ್ತು ಸದಾ ಅವನು ಸಮಾಧಿಗತನು. ಅವನು ಇಂದ್ರಿಯ ತೋಷಣ ವಿಷಯಗಳಲ್ಲಿ ಅನಾಸಕ್ತನು ಮತ್ತು ತನ್ನ ಚಟುವಟಿಕೆಗಳಲ್ಲಿ ರಾಗದ್ವೇಷ ಮುಕ್ತನು. ಅಂಥ ಅನಾಸಕ್ತ ವ್ಯಕ್ತಿಯು ಸ್ವಾಭಾವಿಕವಾಗಿ ಏಕಾಂತ ಸ್ಥಳ ವಾಸಪ್ರಿಯನು. ಅವನು ಅಗತ್ಯಕ್ಕಿಂತ ಹೆಚ್ಚು ತಿನ್ನುವುದಿಲ್ಲ, ಮತ್ತು ಅವನು ತನ್ನ ದೇಹ ಮನಸ್ಸುಗಳ ಚಟುವಟಿಕೆಗಳನ್ನು ನಿಗ್ರಹಿಸುತ್ತಾನೆ. ಅವನು ದೇಹವೇ ತಾನೆಂದು ಅಂಗೀಕರಿಸುವುದಿಲ್ಲವಾದ್ದರಿಂದ, ಅವನಿಗೆ ಮಿಥ್ಯಾಹಂಕಾರವಿಲ್ಲ ಅಥವಾ ಅವನಿಗೆ ಅನೇಕ ಭೌತಿಕ ವಸ್ತುಗಳ ಸ್ವೀಕಾರದಿಂದ ದೇಹವನ್ನು ದಪ್ಪ ಮತ್ತು ಬಲಗೊಳಿಸುವ ಇಚ್ಛೆ ಇರುವುದಿಲ್ಲ. ಅವನಿಗೆ ಜೀವನದ ದೈಹಿಕ ಕಲ್ಪನೆ ಇರುವುದಿಲ್ಲವಾದ್ದರಿಂದ, ಅವನು ಮಿಥ್ಯಾ ದರ್ಪಿಯಲ್ಲ. ಭಗವದನುಗ್ರಹದತ್ತವಾದ ಪ್ರತಿಯೊಂದರಿಂದ ಅವನು ತುಷ್ಟನು. ಇಂದ್ರಿಯ ತೋಷಣ ಅಭಾವದಲ್ಲಿ ಅವನೆಂದೂ ಕ್ರುದ್ಧನಲ್ಲ, ಅಥವಾ ಇಂದ್ರಿಯ ವಿಷಯಾರ್ಜನೆಗೆ ಅವನು ಯತ್ನಿಸುವುದಿಲ್ಲ. ಹೀಗೆ ಅವನು ಮಿಥ್ಯಾಹಂಕಾರದಿಂದ ಸಂಪೂರ್ಣವಾಗಿ ಮುಕ್ತನಾದಾಗ, ಅವನು ಸಕಲ ಭೌತಿಕ ವಸ್ತುಗಳಿಂದ ಅಸಂಗಿಯಾಗುತ್ತಾನೆ. ಅದೇ, ಬ್ರಹ್ಮನ್, ಆತ್ಮ ಸಾಕ್ಷಾತ್ಕಾರ ಮಟ್ಟ. ಆ ಮಟ್ಟವು ಬ್ರಹ್ಮ–ಭೂತ ಮಟ್ಟವೆಂದು ಕರೆದಿದೆ. ಒಬ್ಬನು ಜೀವನದ ಭೌತಿಕ ಕಲ್ಪನೆಯಿಂದ ಮುಕ್ತನಾದಾಗ, ಅವನು ಶಾಂತನಾಗುತ್ತಾನೆ ಮತ್ತು ಉದ್ವೇಗ ಹೊಂದಲಾರನು. ಇದು ಭಗವದ್ಗೀತೆಯಲ್ಲಿ (2.70) ವರ್ಣಿತ :

ಆಪೂರ್ಯಮಾಣಮ್ ಅಚಲ–ಪ್ರತಿಷ್ಠಂ
ಸಮುದ್ರಂ ಆಪಃ ಪ್ರವಿಶನ್ತಿ ಯದ್ವತ್
ತದ್ವತ್ ಕಾಮಾ ಯಂ ಪ್ರವಿಶನ್ತಿ ಸರ್ವೇ
ಸ ಶಾನ್ತಿಮ್ ಆಪ್ನೋತಿ ನ ಕಾಮ–ಕಾಮೀ

"ಪ್ರವೇಶಿಸುವ ನದಿಗಳಿಂದ ಸದಾ ತುಂಬುತ್ತಿದ್ದು, ಆದರೆ ಸದಾ ಅಚಲವಾಗಿರುವ ಸಾಗರದಂತೆ ನಿರಂತರ ಕಾಮನಾ ಪ್ರವಾಹದಿಂದ ಉದ್ವಿಗ್ನನಾಗದವನು ಮಾತ್ರ ಶಾಂತಿ ಹೊಂದಬಲ್ಲನು, ಆದರೆ ಅಂಥ ಕಾಮನೆಗಳನ್ನು ತುಷ್ಟಿಪಡಿಸಲು ಯತ್ನಿಸುವವನಲ್ಲ.

**ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಙ್ಕ್ಷತಿ ।**
**ಸಮಃ ಸರ್ವೇಷು ಭೂತೇಷು ಮದ್‌ಭಕ್ತಿಂ ಲಭತೇ ಪರಾಮ್ ॥ ೫೪ ॥**

ಬ್ರಹ್ಮಭೂತಃ—ಪರಮನೊಂದಿಗೆ ಏಕೀಭೂತವಾಗಿ, ಪ್ರಸನ್ನ-ಆತ್ಮಾ—ಪೂರ್ಣಾನಂದಿಯಾಗಿ, ನ—ಎಂದೂ, ಶೋಚತಿ—ಶೋಕಿಸುವುದಿಲ್ಲ, ನ—ಎಂದೂ, ಕಾಂಕ್ಷತಿ—ಇಚ್ಛಿಸುವುದಿಲ್ಲ, ಸಮಃ—ಸಮಭಾವನು, ಸರ್ವೇಷು—ಎಲ್ಲ, ಭೂತೇಷು—ಜೀವಿಗಳಲ್ಲಿ,

ಮತ್-ಭಕ್ತಿಮ್—ನನ್ನ ಭಕ್ತಿಯುತ ಸೇವೆಯನ್ನು, ಲಭತೇ—ಹೊಂದುತ್ತಾನೆ, ಪರಾಮ್ —ದಿವ್ಯ.

**ಹೀಗೆ ದಿವ್ಯವಾಗಿ ಸನ್ನಿವೇಶಿತನಾದವನು ತಕ್ಷಣ ಪರಮ ಬ್ರಹ್ಮನ್‌ನನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ ಮತ್ತು ಪೂರ್ಣಾನಂದಿಯಾಗುತ್ತಾನೆ. ಅವನು ಎಂದೂ ಶೋಕಿಸುವುದಿಲ್ಲ ಅಥವಾ ಏನನ್ನೂ ಹೊಂದಲಿಚ್ಛಿಸುವುದಿಲ್ಲ. ಅವನು ಪ್ರತಿಯೊಬ್ಬ ಜೀವಿಯ ಬಗ್ಗೆ ಸಮಭಾವ ಉಳ್ಳವನು. ಆ ಸ್ಥಿತಿಯಲ್ಲಿ ಅವನು ನನ್ನ ಶುದ್ಧ ಭಕ್ತಿಯುತ ಸೇವೆಯನ್ನು ಹೊಂದುತ್ತಾನೆ.**

**ಭಾವಾರ್ಥ :** ವ್ಯಕ್ತಿಶೂನ್ಯವಾದಿಗೆ, ಬ್ರಹ್ಮ-ಭೂತವಮಟ್ಟವನ್ನು ಹೊಂದುವುದು, ಪರಮನೊಂದಿಗೆ ಏಕೀಭೂತವಾಗುವುದು, ಕೊನೆಯ ಮಾತು. ವ್ಯಕ್ತಿವಾದಿ, ಅಥವಾ ಶುದ್ಧ ಭಕ್ತ ವಿನಾ ಮತ್ತೊಬ್ಬನು ಶುದ್ಧ ಭಕ್ತಿಯುತಸೇವಾ ನಿರತನಾಗಲು ಇನ್ನೂ ಬಹುದೂರ ಸಾಗಬೇಕು, ಎಂದರೆ ಪರಮ ಪ್ರಭುವಿನ ಶುದ್ಧ ಭಕ್ತಿಯುತ ಸೇವಾ ನಿರತನಾದವನು ಆಗಲೇ ಬ್ರಹ್ಮಭೂತ, ಪರಮನೊಂದಿಗೆ ಅಖಂಡತ್ವ ಎಂಬ ಮುಕ್ತ ಸ್ಥಿತಿಯಲ್ಲಿ ಇರುತ್ತಾನೆ. ಪರಮನೊಂದಿಗೆ, ಪರತತ್ತ್ವದೊಂದಿಗೆ, ಏಕೀಭೂತನಾಗದೆ ಒಬ್ಬನು ಅವನ ಸೇವೆ ಮಾಡಲಾರನು. ಪರತತ್ತ್ವ ಕಲ್ಪನೆಯಲ್ಲಿ ಸೇವ್ಯ ಸೇವಕನಲ್ಲಿ ವ್ಯತ್ಯಾಸವಿಲ್ಲ; ಆದರೂ ಉನ್ನತ ಅಧ್ಯಾತ್ಮ ಭಾವದಲ್ಲಿ ಭೇದವಿದೆ.

ಜೀವನದ ಭೌತಿಕ ಕಲ್ಪನೆಯಲ್ಲಿ, ಒಬ್ಬನು ಇಂದ್ರಿಯ ತೋಷಣೆಗಾಗಿ ಕರ್ಮ ಮಾಡುವಾಗ ಕ್ಲೇಶವಿದೆ, ಆದರೆ ಪರಮಲೋಕದಲ್ಲಿ ಒಬ್ಬನು ಶುದ್ಧ ಭಕ್ತಿಯುತಸೇವೆಯಲ್ಲಿ ನಿರತನಾದಾಗ, ಕ್ಲೇಶವಿಲ್ಲ. ಕೃಷ್ಣಪ್ರಜ್ಞ ಭಕ್ತನು ವಿಷಾದಿಸಲು ಅಥವಾ ಇಚ್ಛೆಪಡಲು ಯಾವುದೂ ಇಲ್ಲ. ದೇವರು ಪೂರ್ಣನಾದ್ದರಿಂದ, ಕೃಷ್ಣಪ್ರಜ್ಞ ಭಗವತ್ಸೇವಾನಿರತ ಜೀವಿಯು ಕೂಡ ಸ್ವಯಂ ಪೂರ್ಣನಾಗುತ್ತಾನೆ. ಅವನು ಎಲ್ಲ ಕಲ್ಮಷ ಶುದ್ಧವಾದ ನದಿಯಂತೆ. ಶುದ್ಧಭಕ್ತನಿಗೆ ಕೃಷ್ಣೇತರ ವಿಚಾರವಿಲ್ಲದ್ದರಿಂದ ಅವನು ಸ್ವಾಭಾವಿಕವಾಗಿ ಸದಾ ಆನಂದಮಯ. ಅವನು ಯಾವುದೇ ಭೌತಿಕ ಹಾನಿಗಾಗಿ ಶೋಕಿಸುವುದಿಲ್ಲ ಅಥವಾ ಲಾಭಕ್ಕಾಗಿ ಇಚ್ಛೆಪಡುವುದಿಲ್ಲ, ಏಕೆಂದರೆ ಅವನು ಭಗವತ್ಸೇವಾ ಪರಿಪೂರ್ಣನು. ಅವನಿಗೆ ಭೌತಿಕ ಭೋಗೇಚ್ಛೆಯಿಲ್ಲ, ಏಕೆಂದರೆ, ಪ್ರತಿಯೊಬ್ಬ ಜೀವಿಯು ಪರಮಪ್ರಭುವಿನ ವಿಭಿನ್ನಾಂಶ ಭಾಗವೆಂದು ಮತ್ತು ಹೀಗಾಗಿ ನಿತ್ಯದಾಸನು ಎಂದು ಅವನಿಗೆ ತಿಳಿದಿದೆ. ಭೌತಿಕ ಜಗತ್ತಿನಲ್ಲಿ ಒಬ್ಬನನ್ನು ಮೇಲು ಮತ್ತೊಬ್ಬನನ್ನು ಕೀಳು ಎಂದು ಕಾಣುವುದಿಲ್ಲ. ಮೇಲು ಕೀಳು ಸ್ಥಾನಗಳು ಕ್ಷಣಿಕ ಮತ್ತು ಭಕ್ತನಿಗೆ ಕ್ಷಣಿಕ ದೃಶ್ಯಾದೃಶ್ಯತೆಗಳ ಯಾವುದೇ ಸಂಬಂಧವಿಲ್ಲ, ಅವನಿಗೆ ಚಿನ್ನ ಅಥವಾ ಕಲ್ಲು ಎರಡೂ ಸಮ. ಇದು ಬ್ರಹ್ಮಭೂತ ಹಂತ ಮತ್ತು ಈ ಹಂತವು ಶುದ್ಧ ಭಕ್ತನಿಂದ ಸುಲಭವಾಗಿ ಹೊಂದಲ್ಪಡುತ್ತದೆ, ಅಸ್ತಿತ್ವದ ಆ ಹಂತದಲ್ಲಿ ಪರಮ ಬ್ರಹ್ಮನ್‌ನೊಂದಿಗೆ ಐಕ್ಯವಾಗುವ ಮತ್ತು ವ್ಯಕ್ತಿತ್ವವನ್ನು ನಾಶಗೊಳಿಸಿಕೊಳ್ಳುವ ಯೋಚನೆಯು ನರಕ ಸದೃಶ. ಸ್ವರ್ಗಲೋಕ ಪ್ರಾಪ್ತಿಯ ವಿಚಾರವು ಭ್ರಮೆಯಾಗುತ್ತದೆ, ಮತ್ತು ಇಂದ್ರಿಯಗಳು ಮುರಿದ ಹಾವಿನ ಹಲ್ಲುಗಳಂತೆ. ಹಲ್ಲು ಮುರಿದ ಹಾವಿನಿಂದ ಹೇಗೆ ಭಯವಿಲ್ಲವೋ ಹಾಗೆಯೇ ಸ್ವಾಭಾವಿಕವಾಗಿ ನಿಯಂತ್ರಿತವಾದ ಇಂದ್ರಿಯಗಳಿಂದ ಭಯ

ವಿಲ್ಲ. ಭೌತಿಕ ಸೋಂಕು ತಾಕಿದವನಿಗೆ ಜಗತ್ತು ಕ್ಲೇಶಮಯ, ಆದರೆ ಭಕ್ತನಿಗೆ ಇಡೀ ಜಗತ್ತು ವೈಕುಂಠ, ಅಥವಾ ಪರವ್ಯೋಮ ಇದ್ದ ಹಾಗೆ. ಈ ಭೌತಿಕ ಬ್ರಹ್ಮಾಂಡದ ಅತ್ಯುನ್ನತ ವ್ಯಕ್ತಿಯು ಭಕ್ತನಿಗೆ ಇರುವೆಗೆ ಸಮಾನ. ಅಂಥ ಮಟ್ಟವನ್ನು ಈ ಯುಗದಲ್ಲಿ ಶುದ್ಧ ಭಕ್ತಿಯುತ ಸೇವಾ ಪ್ರಚಾರ ಮಾಡಿದ ಶ್ರೀ ಚೈತನ್ಯರ ಅನುಗ್ರಹದಿಂದ ಪಡೆಯ ಬಹುದು.

**ಭಕ್ತ್ಯಾ ಮಾಮಭಿಜಾನಾತಿ ಯಾವಾನ್ ಯಶ್ಚಾಸ್ಮಿ ತತ್ತ್ವತಃ ।**
**ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನನ್ತರಮ್ ॥ ೫೫ ॥**

ಭಕ್ತ್ಯಾ—ಶುದ್ಧ ಭಕ್ತಿಯುತ ಸೇವೆಯಿಂದ, ಮಾಮ್—ನನ್ನನ್ನು, ಅಭಿಜಾನಾತಿ—ಒಬ್ಬನು ತಿಳಿಯಬಹುದು, ಯಾವಾನ್—ಅಷ್ಟುಮಟ್ಟಿಗೆ, ಯಃ-ಚ-ಅಸ್ಮಿ—ನಾನಿರುವಂತೆ, ತತ್ತ್ವತಃ—ತತ್ತ್ವದಲ್ಲಿ, ತತಃ—ಆಮೇಲೆ, ಮಾಮ್—ನನ್ನನ್ನು, ತತ್ತ್ವತಃ—ತತ್ತ್ವದಲ್ಲಿ, ಜ್ಞಾತ್ವಾ—ತಿಳಿದು, ವಿಶತೇ—ಪ್ರವೇಶಿಸುತ್ತಾನೆ, ತತ್-ಅನಂತರಮ್—ಆಮೇಲೆ.

**ಒಬ್ಬನು ಭಕ್ತಿಯುತಸೇವೆಯಿಂದ ಮಾತ್ರವೇ, ಪರಮ ದೇವೋತ್ತಮ ಪುರುಷನಾದ ನನ್ನನ್ನು ಯಥಾರೂಪ ಅರಿತುಕೊಳ್ಳಬಹುದು. ಮತ್ತು ಅಂಥ ಭಕ್ತಿಯಿಂದ ಒಬ್ಬನು ನನ್ನ ಪೂರ್ಣ ಪ್ರಜ್ಞೆಯಲ್ಲಿದ್ದಾಗ, ಅವನು ಭಗವತ್ ಸಾಮ್ರಾಜ್ಯವನ್ನು ಪ್ರವೇಶಿಸಬಹುದು.**

**ಭಾವಾರ್ಥ :** ಪರಮ ದೇವೋತ್ತಮ ಪುರುಷ, ಕೃಷ್ಣನನ್ನು ಮತ್ತು ಅವನ ಸಮಗ್ರ ಭಾಗಗಳನ್ನು ಮಾನಸಿಕ ಊಹಾಪೋಹದಿಂದ ಅಥವಾ ಅಭಕ್ತರಿಂದ ಅರಿತುಕೊಳ್ಳಲಾಗದು. ಒಬ್ಬನು ಪರಮ ದೇವೋತ್ತಮ ಪುರುಷನನ್ನು ಅರಿತುಕೊಳ್ಳಬಯಸಿದರೆ, ಅವನು ಶುದ್ಧ ಭಕ್ತನ ಮಾರ್ಗದರ್ಶನದಲ್ಲಿ ಶುದ್ಧ ಭಕ್ತಿಯುತ ಸೇವೆಯನ್ನು ಗ್ರಹಿಸಬೇಕು. ಅನ್ಯಥಾ ಪರಮದೇವೋತ್ತಮ ಪುರುಷ ತತ್ತ್ವವು ಸದಾ ಗುಹ್ಯವಾಗಿರುವುದು. ಭಗವದ್ಗೀತೆಯಲ್ಲಿ (7.25) ಈಗಾಗಲೇ ಹೇಳಿದಂತೆ, **ನಾಹಂ ಪ್ರಕಾಶಃ ಸರ್ವಸ್ಯ** ಅವನು ಪ್ರತಿಯೊಬ್ಬನಿಗೂ ಗೋಚರನಲ್ಲ, ಪ್ರಕಾಂಡ ಪಾಂಡಿತ್ಯದಿಂದ ಅಥವಾ ಮಾನಸಿಕ ಊಹಾಪೋಹದಿಂದ ಯಾರೂ ಅವನನ್ನು ಅರಿಯಲಾರರು. ಕೃಷ್ಣಪ್ರಜ್ಞೆ ಮತ್ತು ಭಕ್ತಿಯುತ ಸೇವೆಯಲ್ಲಿ ವಾಸ್ತವಿಕವಾಗಿ ನಿರತನು ಮಾತ್ರ ಕೃಷ್ಣನು ಏನು ಎಂಬುದನ್ನು ಅರಿತುಕೊಳ್ಳಬಹುದು. ವಿಶ್ವವಿದ್ಯಾನಿಲಯಗಳ ಪದವಿಗಳು ಪ್ರಯೋಜನವಿಲ್ಲ.

ಕೃಷ್ಣ ವಿಜ್ಞಾನವನ್ನು ಪೂರ್ಣವಾಗಿ ಬಲ್ಲವನು ಅಧ್ಯಾತ್ಮ ಲೋಕ, ಕೃಷ್ಣಧಾಮವನ್ನು ಪ್ರವೇಶಿಸಲು ಅರ್ಹನಾಗುತ್ತಾನೆ. ಬ್ರಹ್ಮನ್ ಆಗುವುದೆಂದರೆ ಒಬ್ಬನು ತನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳುವನೆಂದಲ್ಲ. ಭಕ್ತಿಯುತ ಸೇವೆಯಿದೆ, ಭಕ್ತಿಯುತ ಸೇವೆಯು ಇರುವವರೆಗೆ, ಭಗವಂತ, ಭಕ್ತ ಮತ್ತು ಭಕ್ತಿಯುತಸೇವೆಯ ಪ್ರಕ್ರಿಯೆ ಇರಬೇಕು. ಅಂಥ ಜ್ಞಾನವು ಮೋಕ್ಷಾನಂತರ ಕೂಡ ಎಂದೂ ನಾಶವಾಗುವುದಿಲ್ಲ. ಮೋಕ್ಷವು ಭೌತಿಕ ಜೀವನದ ಕಲ್ಪನೆಯಿಂದ ಮುಕ್ತಿಯನ್ನೊಳಗೊಂಡಿದೆ. ಅಧ್ಯಾತ್ಮ ಜೀವನದಲ್ಲಿ ಕೂಡ ಇದೇ ವ್ಯತ್ಯಾಸವಿದೆ, ಅದೇ ವ್ಯಕ್ತಿತ್ವವಿದೆ. ಆದರೆ ಅದು ಶುದ್ಧ ಕೃಷ್ಣಪ್ರಜ್ಞೆ

ಯಲ್ಲಿ ಇರುತ್ತದೆ. **ವಿಶತೇ,** "ನನ್ನಲ್ಲಿ ಪ್ರವೇಶಿಸುತ್ತಾನೆ", ಎಂಬ ಪದವನ್ನು ಒಬ್ಬನು ವ್ಯಕ್ತಿಶೂನ್ಯ ಬ್ರಹ್ಮನ್‌ನೊಡನೆ ಐಕ್ಯನಾಗುತ್ತಾನೆ ಎಂಬ ಅದ್ವೈತ ತತ್ತ್ವವನ್ನು ಸಮರ್ಥಿಸುತ್ತದೆ ಎಂದು ತಪ್ಪಾಗಿ ತಿಳಿದುಕೊಳ್ಳಕೂಡದು. ಹಾಗಿಲ್ಲ. **ವಿಶತೇ** ಎಂದರೆ ಒಬ್ಬನು ವ್ಯಕ್ತಿಗತವಾಗಿ ಭಗವತ್ಸೇವೆ ಸಲ್ಲಿಸಲು ಅವನ ಸಹಚರನಾಗಿ ಭಗವದ್ ಧಾಮವನ್ನು ಪ್ರವೇಶಿಸಬಹುದು ಎಂದು ಅರ್ಥ. ಉದಾಹರಣೆಗೆ ಒಂದು ಹಸಿರು ಪಕ್ಷಿಯು ಒಂದು ಹಸಿರು ಮರವನ್ನು ಪ್ರವೇಶಿಸುವುದು, ತಾನೂ ಮರವಾಗಲು ಅಲ್ಲ, ಮರದ ಹಣ್ಣುಗಳನ್ನು ತಿನ್ನಲು ಮಾತ್ರ. ವ್ಯಕ್ತಿಶೂನ್ಯವಾದಿಗಳು ಸಾಮಾನ್ಯವಾಗಿ ಸಾಗರ ಪ್ರವೇಶ ಮಾಡಿ ಐಕ್ಯಹೊಂದುವ ನದಿಗಳ ಉದಾಹರಣೆ ನೀಡುತ್ತಾರೆ. ಇದು ವ್ಯಕ್ತಿಶೂನ್ಯವಾದಿಗಳಿಗೆ ಸಂತೋಷದ ಸಂಗತಿಯಾಗಿರಬಹುದು. ಆದರೆ ವ್ಯಕ್ತಿವಾದಿಯು ವ್ಯಕ್ತಿತ್ವವನ್ನು ಉಳಿಸಿಕೊಳ್ಳುತ್ತಾನೆ. ನಾವು ಸಾಗರದಲ್ಲಿ ಆಳಕ್ಕಿಳಿದರೆ ಅನೇಕ ಜೀವಿಗಳನ್ನು ಕಾಣುತ್ತೇವೆ. ಸಾಗರವನ್ನು ಮೇಲಿನಿಂದ ತಿಳಿದುಕೊಳ್ಳುವುದು ಸಾಕಾಗದು. ಒಬ್ಬನು ಸಾಗರದಾಳದಲ್ಲಿರುವ ಜಲಚರ ಪ್ರಾಣಿಗಳ ಸಂಪೂರ್ಣ ಜ್ಞಾನ ಹೊಂದಿರಬೇಕು.

ತನ್ನ ಶುದ್ಧ ಭಕ್ತಿಯುತಸೇವಾ ನಿಮಿತ್ತ, ಭಕ್ತನು **ತತ್ತ್ವತಃ** ಪರಮ ಪ್ರಭುವಿನ ದಿವ್ಯ ಗುಣಗಳನ್ನು ಮತ್ತು ಐಶ್ವರ್ಯಗಳನ್ನು ಅರಿತುಕೊಳ್ಳಬಹುದು. ಹನ್ನೊಂದನೆಯ ಅಧ್ಯಾಯದಲ್ಲಿ ಹೇಳಿದಂತೆ ಭಕ್ತಿಯುತಸೇವೆಯಿಂದ ಮಾತ್ರ ಅರಿತುಕೊಳ್ಳಬಹುದು. ಅದು ಇಲ್ಲಿ ದೃಢಪಟ್ಟಿದೆ. ಒಬ್ಬನು ಭಕ್ತಿಯುತ ಸೇವೆಯಿಂದ ಪರಮದೇವೋತ್ತಮ ಪುರುಷನನ್ನು ಅರಿತುಕೊಳ್ಳಬಹುದು ಮತ್ತು ಅವನ ಧಾಮವನ್ನು ಪ್ರವೇಶಿಸಬಹುದು.

ಭೌತಿಕ ಕಲ್ಪನೆಗಳಿಂದ ಮುಕ್ತಿಯು **ಬ್ರಹ್ಮ-ಭೂತ** ಹಂತವನ್ನು ಹೊಂದಿದ ಬಳಿಕ ಭಗವಂತನನ್ನು ಕುರಿತ ಶ್ರವಣದಿಂದ ಒಬ್ಬನ ಭಕ್ತಿಯುತ ಸೇವೆಯು ಪ್ರಾರಂಭಿಸುತ್ತದೆ. ಒಬ್ಬನು ಪರಮ ಪ್ರಭುವನ್ನು ಕುರಿತು ಶ್ರವಣ ಮಾಡಿದಾಗ ಸ್ವಾಭಾವಿಕವಾಗಿಯೇ **ಬ್ರಹ್ಮ-ಭೂತ** ಹಂತವು ಅಭಿವೃದ್ಧಿಯಾಗುತ್ತದೆ, ಮತ್ತು ಭೌತಿಕ ಕಲ್ಮಷ—ಲೋಭ ಮತ್ತು ಇಂದ್ರಿಯ ತೋಷಣೆಯ ಕಾಮ—ತೊಲಗುತ್ತವೆ. ಕಾಮ ಇಚ್ಛಾದಿಗಳು ಭಕ್ತನ ಹೃದಯದಿಂದ ತೊಲಗಿದಾಗ ಅವನು ಭಗವತ್ಸೇವೆಯಲ್ಲಿ ಹೆಚ್ಚು ಅನುರಕ್ತನಾಗುತ್ತಾನೆ, ಮತ್ತು ಅಂಥ ಅನುರಾಗದಿಂದ ಅವನು ಭೌತಿಕ ಕಲ್ಮಷದಿಂದ ಮುಕ್ತನಾಗುತ್ತಾನೆ. ಜೀವನದ ಆ ಮಟ್ಟದಲ್ಲಿ ಅವನು ಪರಮ ಪ್ರಭುವನ್ನು ಅರಿತುಕೊಳ್ಳಬಲ್ಲನು. ಇದು ಶ್ರೀಮದ್ ಭಾಗವತದ ನಿರೂಪಣೆಯೂ ಆಗಿದೆ. ಮೋಕ್ಷಾನಂತರ ಭಕ್ತಿ ಪ್ರಕ್ರಿಯೆಯು, ಅಥವಾ ದಿವ್ಯ ಸೇವೆಯು ಮುಂದುವರಿಯುತ್ತದೆ. ವೇದಾಂತ ಸೂತ್ರವು (4.1.12) ಇದನ್ನು ದೃಢೀಕರಿಸುತ್ತದೆ. **ಆ-ಪ್ರಾಯಣಾತ್ ತತ್ರಾಪಿ ಹಿ ದೃಷ್ಟಮ್,** ಎಂದರೆ ಮೋಕ್ಷಾನಂತರ ಭಕ್ತಿಯುತ ಸೇವಾ ಪ್ರಕ್ರಿಯೆಯು ಮುಂದುವರಿಯುತ್ತದೆ. ಶ್ರೀಮದ್‌ಭಾಗವತದಲ್ಲಿ ನಿಜ ಭಕ್ತಿಯುತ ಸೇವೆಯು ಜೀವಿಯ ತನ್ನ ನಿಜ ವ್ಯಕ್ತಿತ್ವ ಸ್ವ-ಸ್ವರೂಪದ ಪುನರ್ ಪ್ರತಿಷ್ಠಾಪನೆ ಎಂದು ಪರಿಭಾಷಿಸಿದೆ. ಸ್ವರೂಪ ಸ್ಥಿತಿಯನ್ನು ಈಗಾಗಲೇ ವಿವರಿಸಿದೆ. ಪ್ರತಿಯೊಬ್ಬ ಜೀವಿಯು ಪರಮಪ್ರಭುವಿನ ವಿಭಿನ್ನಾಂಶ ಭಾಗನು. ಆದ್ದರಿಂದ ಸೇವೆ ಅವನ ಸ್ವರೂಪ

ಸ್ಥಿತಿ. ಮೋಕ್ಷಾನಂತರ ಸೇವೆ ಎಂದೂ ನಿಲ್ಲುವುದಿಲ್ಲ. ವಾಸ್ತವಿಕ ಮೋಕ್ಷ ಎಂದರೆ ಜೀವನದ ಮಿಥ್ಯಾಕಲ್ಪನೆಗಳಿಂದ ಮುಕ್ತಿ.

**ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ ।**
**ಮತ್ಪ್ರಸಾದಾದವಾಪ್ನೋತಿ ಶಾಶ್ವತಮ್ ಪದಮವ್ಯಯಮ್ ॥ ೫೬ ॥**

ಸರ್ವ—ಎಲ್ಲ, ಕರ್ಮಾಣಿ—ಕರ್ಮಗಳು, ಅಪಿ—ಕೂಡ, ಸದಾ—ಯಾವಾಗಲೂ, ಕುರ್ವಾಣಃ—ಆಚರಿಸುತ್ತಿದ್ದರೂ, ಮತ್-ವ್ಯಪಾಶ್ರಯಃ—ನನ್ನ ಆಶ್ರಯದಲ್ಲಿ, ಮತ್-ಪ್ರಸಾದಾತ್—ನನ್ನ ಅನುಗ್ರಹದಿಂದ, ಅವಾಪ್ನೋತಿ—ಒಬ್ಬನು ಹೊಂದುತ್ತಾನೆ, ಶಾಶ್ವತಮ್—ಶಾಶ್ವತವಾದ, ಪದಮ್—ಧಾಮವನ್ನು, ಅವ್ಯಯಮ್—ಅವಿನಾಶಿಯಾದ.

**ಎಲ್ಲ ಬಗೆಯ ಚಟುವಟಿಕೆಗಳಲ್ಲಿ ತೊಡಗಿದ್ದರೂ ಕೂಡ, ನನ್ನ ಶುದ್ಧ ಭಕ್ತನು ನನ್ನ ಆಶ್ರಯದಲ್ಲಿ ನನ್ನ ಅನುಗ್ರಹದಿಂದ ಶಾಶ್ವತವಾದ ಮತ್ತು ಅವಿನಾಶಿಯಾದ ಧಾಮವನ್ನು ತಲುಪುತ್ತಾನೆ.**

**ಭಾವಾರ್ಥ:** **ಮದ್-ವ್ಯಪಾಶ್ರಯಃ** ಎಂದರೆ ಪರಮ ಪ್ರಭುವಿನ ಆಶ್ರಯದಲ್ಲಿ ಎಂದು ಅರ್ಥ. ಭೌತಿಕ ಕಲ್ಮಷದಿಂದ ಮುಕ್ತನಾಗಲು ಶುದ್ಧಭಕ್ತನು ನೇರವಾಗಿ ಪರಮ ಪ್ರಭುವಿನ ಅಥವಾ ಅವನ ಪ್ರತಿನಿಧಿ ಗುರುಗಳ ನಿರ್ದೇಶನಾನುಸಾರ ವರ್ತಿಸುತ್ತಾನೆ. ಶುದ್ಧ ಭಕ್ತನಿಗೆ ಕಾಲಮಿತಿ ಇಲ್ಲ. ಅವನು ಸದಾ ದಿನದ ಇಪ್ಪತ್ತುನಾಲ್ಕು ಗಂಟೆಗಳೂ, ಪೂರ್ತಿಯಾಗಿ ಪರಮಪ್ರಭುವಿನ ನೇರ ಆದೇಶಾನುಸಾರ ಚಟುವಟಿಕೆಗಳಲ್ಲಿ ತೊಡಗಿರುತ್ತಾನೆ. ಹೀಗೆ ಕೃಷ್ಣಪ್ರಜ್ಞಾ ನಿರತ ಭಕ್ತನಿಗೆ ಭಗವಂತನು ಬಹು ದಯಾಮಯನು. ಎಷ್ಟೇ ಕಷ್ಟಗಳು ಒದಗಿದರೂ ಅವನು ಕೊನೆಗೆ ದಿವ್ಯಧಾಮದಲ್ಲಿ ಎಂದರೆ ಕೃಷ್ಣಲೋಕದಲ್ಲಿ ಇರಿಸಲ್ಪಡುತ್ತಾನೆ. ಅವನಿಗೆ ಅಲ್ಲಿ ಪ್ರವೇಶವು ಸುನಿಶ್ಚಿತ; ಅದರಲ್ಲಿ ಸಂದೇಹವಿಲ್ಲ. ಆ ಪರಮಧಾಮದಲ್ಲಿ ಬದಲಾವಣೆ ಇಲ್ಲ; ಪ್ರತಿಯೊಂದು ಅಲ್ಲಿ ಶಾಶ್ವತ, ಅವಿನಾಶಿ ಮತ್ತು ಜ್ಞಾನಪೂರ್ಣ.

**ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಃ ।**
**ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಃ ಸತತಂ ಭವ ॥ ೫೭ ॥**

ಚೇತಸಾ—ಬುದ್ಧಿಯಿಂದ, ಸರ್ವ-ಕರ್ಮಾಣಿ—ಎಲ್ಲ ಬಗೆಯ ಚಟುವಟಿಕೆಗಳು, ಮಯಿ—ನನಗೆ, ಸಂನ್ಯಸ್ಯ—ತ್ಯಜಿಸಿ, ಮತ್-ಪರಃ—ನನ್ನ ಆಶ್ರಯದಲ್ಲಿ, ಬುದ್ಧಿ-ಯೋಗಮ್—ಭಕ್ತಿಯುತ ಚಟುವಟಿಕೆಗಳನ್ನು, ಉಪಾಶ್ರಿತ್ಯ—ಆಶ್ರಯಿಸಿ, ಮತ್-ಚಿತ್ತಃ—ನನ್ನ ಪ್ರಜ್ಞೆಯಲ್ಲಿ, ಸತತಮ್—ದಿನದ ಇಪ್ಪತ್ತು ನಾಲ್ಕು ಗಂಟೆಗಳು, ಭವ—ಇರು ಅಷ್ಟೆ.

**ಎಲ್ಲ ಚಟುವಟಿಕೆಗಳಲ್ಲಿ ನನ್ನನ್ನು ಅವಲಂಬಿಸು ಮತ್ತು ಸದಾ ನನ್ನ ಆಶ್ರಯದಲ್ಲಿ ಕರ್ಮ ಮಾಡು. ಅಂಥ ಭಕ್ತಿಯುತ ಸೇವೆಯಲ್ಲಿ, ಪೂರ್ಣವಾಗಿ ನನ್ನ ಪ್ರಜ್ಞೆಯಾಗು.**

**ಭಾವಾರ್ಥ :** ಒಬ್ಬನು ಕೃಷ್ಣ ಪ್ರಜ್ಞೆಯಲ್ಲಿ ಕರ್ಮ ಮಾಡುವಾಗ ಅವನು ಜಗತ್ ಸ್ವಾಮಿಯಾಗಿ ಕಾರ್ಯ ಮಾಡುವುದಿಲ್ಲ. ಸೇವಕನಂತೆ ಒಬ್ಬನು ಪೂರ್ಣವಾಗಿ ಪರಮ ಪ್ರಭುವಿನ ನಿರ್ದೇಶಾನುಸಾರ ಕಾರ್ಯ ಮಾಡಬೇಕು. ಸೇವಕನಿಗೆ ವ್ಯಕ್ತಿಗತ ಸ್ವತಂತ್ರವಿಲ್ಲ. ಅವನು ಪ್ರಭುವಿನ ಆದೇಶಾನುಸಾರ ಮಾತ್ರ ವರ್ತಿಸುತ್ತಾನೆ. ಪರಮ ಪ್ರಭುವಿನ ಪರ ವಾಗಿ ಕಾರ್ಯ ಮಾಡುವ ಸೇವಕನು ಲಾಭ ಹಾನಿಗಳಿಂದ ಅಬಾಧಿತನು. ಅವನು ಕೇವಲ ಭಗವದಾಜ್ಞಾನುಸಾರ ತನ್ನ ಕರ್ತವ್ಯವನ್ನು ಪ್ರಾಮಾಣಿಕವಾಗಿ ನಿರ್ವಹಿಸುತ್ತಾನೆ. ಅರ್ಜುನನು ಕೃಷ್ಣನ ವೈಯಕ್ತಿಕ ನಿರ್ದೇಶಾನುಸಾರ ವರ್ತಿಸುತ್ತಿದ್ದನು. ಆದರೆ ಕೃಷ್ಣನು ಸನ್ನಿಹಿತನಾಗಿರದಾಗ, ಹೇಗೆ ವರ್ತಿಸಬೇಕು ಎಂದು ಒಬ್ಬನು ವಾದಿಸಬಹುದು. ಈ ಗ್ರಂಥದಲ್ಲಿ ಕೃಷ್ಣನ ನಿರ್ದೇಶಾನುಸಾರ ಮತ್ತು ಕೃಷ್ಣ ಪ್ರತಿನಿಧಿಯ ಮಾರ್ಗದರ್ಶನದಲ್ಲಿ ಕಾರ್ಯ ಮಾಡಿದರೆ, ಪರಿಣಾಮವು ಒಂದೇ. **ಮತ್-ಪರಃ** ಎಂಬ ಸಂಸ್ಕೃತ ಪದವು ಈ ಶ್ಲೋಕದಲ್ಲಿ ಬಹು ಮಹತ್ವದ್ದು. ಒಬ್ಬನಿಗೆ ಕೃಷ್ಣನನ್ನು ತುಷ್ಟಿಪಡಿಸಲು ಕೃಷ್ಣಪ್ರಜ್ಞೆ ಯಲ್ಲಿ ಕಾರ್ಯ ಮಾಡುವುದನ್ನುಳಿದು ಜೀವನದ ಬೇರೆ ಗುರಿಯೇ ಇಲ್ಲ ಎಂಬುದನ್ನು ಅದು ಸ್ಪಷ್ಟಪಡಿಸುತ್ತದೆ. ಹಾಗೆ ಕಾರ್ಯ ಮಾಡುತ್ತಿರುವಾಗ ಒಬ್ಬನು ಕೃಷ್ಣನನ್ನು ಕುರಿತು, ಮಾತ್ರ ಚಿಂತಿಸಬೇಕು."ಈ ವಿಶಿಷ್ಟ ಕರ್ತವ್ಯ ನಿರ್ವಹಣೆಗಾಗಿ ನಾನು ಕೃಷ್ಣ ನಿಯುಕ್ತನು." ಹಾಗೆ ಕಾರ್ಯ ಮಾಡುವಾಗ ಒಬ್ಬನು ಸ್ವಾಭಾವಿಕವಾಗಿಯೇ ಕೃಷ್ಣ ಚಿಂತನ ಮಾಡುತ್ತಾನೆ, ಇದು ಪರಿಪೂರ್ಣ ಕೃಷ್ಣಪ್ರಜ್ಞೆ. ಆದರೆ ಇಷ್ಟ ಬಂದದ್ದನ್ನು ಮಾಡಿ ಅದರ ಫಲವನ್ನು ಪರಮ ಪ್ರಭುವಿಗೆ ಅರ್ಪಿಸಕೂಡದು ಎಂಬುದನ್ನು ಗಮನಿಸಬೇಕು. ಅಂಥ ಕರ್ತವ್ಯವು ಕೃಷ್ಣಪ್ರಜ್ಞೆಯ ಭಕ್ತಿಯುತ ಸೇವೆಯಲ್ಲಿ ಇರುವುದಿಲ್ಲ. ಒಬ್ಬನು ಕೃಷ್ಣನ ಆಜ್ಞಾನುಸಾರ ವರ್ತಿಸಬೇಕು. ಇದು ಬಹು ಮಹತ್ವಾಂಶ. ಕೃಷ್ಣನ ಆ ಆದೇಶವು ಗುರು ಪರಂಪರೆಯಿಂದ ಸದ್ಗುರುಗಳ ಮೂಲಕ ಬರುತ್ತದೆ. ಆದ್ದರಿಂದ ಗುರ್ವಾಜ್ಞೆಯನ್ನು ಜೀವನದ ಪ್ರಧಾನ ಕರ್ತವ್ಯವೆಂದು ಗ್ರಹಿಸಬೇಕು. ಒಬ್ಬನಿಗೆ ಸದ್ಗುರು ದೊರಕಿದರೆ, ಮತ್ತು ಅವರ ಆದೇಶಾನುಸಾರ ವರ್ತಿಸಿದರೆ, ಆಗ ಕೃಷ್ಣಪ್ರಜ್ಞೆಯಲ್ಲಿ ಒಬ್ಬನ ಜೀವನದ ಸಿದ್ಧಿಯು ಸುನಿಶ್ಚಿತ.

**ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ ।**
**ಅಥ ಚೇತ್ತ್ವಮಹಂಕಾರಾನ್ನ ಶ್ರೋಷ್ಯಸಿ ವಿನಂಕ್ಷ್ಯಸಿ ॥ ೫೮ ॥**

ಮತ್—ನನ್ನ, ಚಿತ್ತಃ—ಪ್ರಜ್ಞೆಯಲ್ಲಿದ್ದು, ಸರ್ವ—ಎಲ್ಲ, ದುರ್ಗಾಣಿ—ಆತಂಕ ಗಳನ್ನು, ಮತ್-ಪ್ರಸಾದಾತ್—ನನ್ನ ಅನುಗ್ರಹದಿಂದ, ತರಿಷ್ಯಸಿ—ನೀನು ದಾಟುವಿ, ಅಥ—ಆದರೆ, ಚೇತ್—ಒಂದು ವೇಳೆ, ತ್ವಮ್—ನೀನು, ಅಹಂಕಾರಾತ್—ಮಿಥ್ಯಾ ಹಂಕಾರದಿಂದ, ನ ಶ್ರೋಷ್ಯಸಿ—ಶ್ರವಣ ಮಾಡದಿದ್ದರೆ, ವಿನಂಕ್ಷ್ಯಸಿ—ನಾಶವಾಗುವಿ.

**ನೀನು ನನ್ನ ಪ್ರಜ್ಞಾವಂತನಾದರೆ, ನನ್ನ ಅನುಗ್ರಹದಿಂದ ಬದ್ಧ ಜೀವನದ ಸಕಲ ಆತಂಕಗಳನ್ನೂ ದಾಟುವಿ. ಆದರೆ, ನನ್ನ ಮಾತು ಕೇಳದೆ ಅಂಥ ಪ್ರಜ್ಞೆಯಲ್ಲಿ ಕಾರ್ಯ ಮಾಡದೆ, ಮಿಥ್ಯಾಹಂಕಾರದಿಂದ ವರ್ತಿಸಿದರೆ, ನೀನು ನಷ್ಟವಾಗುವಿ.**

**ಭಾವಾರ್ಥ :** ಕೃಷ್ಣಪ್ರಾಜ್ಞೆಯು ತನ್ನ ಅಸ್ತಿತ್ವದ ಕರ್ತವ್ಯಗಳನ್ನು ನಿರ್ವಹಿಸುವಲ್ಲಿ ಅನುಚಿತವಾಗಿ ಕಾತುರನಿರುವುದಿಲ್ಲ. ಸಕಲಾಂತಕಗಳಿಂದ ಈ ಮಹಾ ಮುಕ್ತಿಯನ್ನು

ಮೂಢರು ಅರಿತುಕೊಳ್ಳಲಾರರು. ಕೃಷ್ಣಪ್ರಜ್ಞೆಯಲ್ಲಿ ಕಾರ್ಯ ಮಾಡುವವನಿಗೆ ಶ್ರೀ ಕೃಷ್ಣನು ಪರಮ ಆಪ್ತಮಿತ್ರನಾಗುತ್ತಾನೆ. ಅವನು ಸದಾ ತನ್ನ ಮಿತ್ರನ ಸೌಖ್ಯ ವನ್ನು ನೋಡುತ್ತಾನೆ, ಮತ್ತು ದಿನದ ಇಪ್ಪತ್ತನಾಲ್ಕು ಗಂಟೆಗಳೂ ಪ್ರಭುವಿಗೆ ಸಂತೋಷಕರ ಕಾರ್ಯ ನಿರತನಾದ ಅಂಥ ಭಕ್ತನಿಗೆ ಭಗವಂತನು ತನ್ನನ್ನೇ ನೀಡುತ್ತಾನೆ. ಆದ್ದರಿಂದ ಯಾರೂ ಕೂಡ ಜೀವನದ ದೈಹಿಕ ಕಲ್ಪನೆಯ ಮಿಥ್ಯಾಹಂಕಾರದಲ್ಲಿ ಕೊಚ್ಚಿ ಹೋಗಬಾರದು ಒಬ್ಬನು ಭೌತಿಕ ಪ್ರಕೃತಿ ನಿಯಮಗಳಿಂದ ತಾನು ಸ್ವತಂತ್ರನು ಅಥವಾ ಇಷ್ಟ ಬಂದಂತೆ ವರ್ತಿಸಬಹುದು ಎಂದು ತಪ್ಪಾಗಿ ತಿಳಿಯಕೂಡದು. ಅವನು ಆಗಲೇ ಕಠೋರ ಪ್ರಕೃತಿ ನಿಯಮಗಳಿಗೆ ಅಧೀನ. ಆದರೆ ಅವನು ಕೃಷ್ಣಪ್ರಜ್ಞೆಯಲ್ಲಿ ಕಾರ್ಯ ಮಾಡಿದೊಡನೆಯೇ, ಭೌತಿಕ ಗೊಂದಲಗಳಿಂದ ಪಾರಾಗಿ ಅವನು ಮುಕ್ತನು. ಕೃಷ್ಣಪ್ರಜ್ಞೆಯಲ್ಲಿ ಸಕ್ರಿಯನಾಗಿಲ್ಲದವನು ಜನನ ಮರಣಗಳ ಸಾಗರದಲ್ಲಿ, ಭೌತಿಕ ಸುಳಿ ಯಲ್ಲಿ, ಸಿಕ್ಕುತ್ತಿದ್ದಾನೆ ಎಂಬುದನ್ನು ಒಬ್ಬನು ಬಹು ಎಚ್ಚರಿಕೆಯಿಂದ ಗಮನಿಸಬೇಕು. ಏನು ಮಾಡಬೇಕು ಮತ್ತು ಏನು ಮಾಡಬಾರದು ಎಂಬುದನ್ನು ವಾಸ್ತವಿಕವಾಗಿ ಯಾವ ಬದ್ಧ ಆತ್ಮನೂ ತಿಳಿದಿಲ್ಲ. ಆದರೆ ಕೃಷ್ಣಪ್ರಜ್ಞೆಯಲ್ಲಿ ಕಾರ್ಯ ಮಾಡುವವನು ಕಾರ್ಯ ಮಾಡಲು ಸ್ವತಂತ್ರನು, ಏಕೆಂದರೆ ಪ್ರತಿಯೊಂದೂ ಅವನಿಗೆ ಅಂತರಂಗದಲ್ಲಿ ಕೃಷ್ಣಪ್ರೇರಿತ ಮತ್ತು ಗುರುಗಳಿಂದ ದೃಢೀಕೃತ.

**ಯದಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ ।**
**ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ॥ ೫೯ ॥**

ಯತ್—ಒಂದು ವೇಳೆ, ಅಹಂಕಾರಮ್—ಮಿಥ್ಯಾಹಂಕಾರದ, ಆಶ್ರಿತ್ಯ—ಆಶ್ರಯ ಪಡೆದು, ನ ಯೋತ್ಸ್ಯ—ನಾನು ಯುದ್ಧ ಮಾಡಬಾರದು, ಇತಿ—ಹೀಗೆ, ಮನ್ಯಸೇ—ಯೋಚಿಸಿದರೆ, ಮಿಥ್ಯಾ ಏಷಃ—ಇದೆಲ್ಲ ಸುಳ್ಳು, ವ್ಯವಸಾಯಃ—ನಿರ್ಧಾರವು, ತೇ—ನಿನ್ನ, ಪ್ರಕೃತಿಃ—ಭೌತಿಕ ಪ್ರಕೃತಿಯು, ತ್ವಾಮ್—ನಿನ್ನನ್ನು, ನಿಯೋಕ್ಷ್ಯತಿ—ತೊಡಗಿಸುತ್ತದೆ.

**ನೀನು ನನ್ನ ನಿರ್ದೇಶಾನುಸಾರ ವರ್ತಿಸದೆ ಯುದ್ಧ ಮಾಡದಿದ್ದರೆ, ಆಗ ನೀನು ತಪ್ಪಾಗಿ ನಿರ್ದೇಶನ ಹೊಂದುವೆ. ನಿನ್ನ ಸ್ವಭಾವದಿಂದ ನೀನು ಯುದ್ಧನಿರತನಾಗಲೇ ಬೇಕು.**

**ಭಾವಾರ್ಥ :** ಅರ್ಜುನನು ಸೇನಾನಿ, ಮತ್ತು ಕ್ಷತ್ರಿಯ ಸ್ವಭಾವಜನ್ಯನು. ಆದ್ದರಿಂದ ಯುದ್ಧ ಮಾಡುವುದು ಅವನ ಸ್ವಾಭಾವಿಕ ಕರ್ತವ್ಯ. ಆದರೆ ಮಿಥ್ಯಾಹಂಕಾರದಿಂದ ತನ್ನ ಗುರು, ತಾತ ಮತ್ತು ಬಂಧುಗಳನ್ನು ಕೊಂದರೆ ತನಗೆ ಪಾಪ ಬರುವುದೆಂದು ಭಯ ಪಡುತ್ತಿದ್ದನು. ವಾಸ್ತವಿಕವಾಗಿ, ಅಂಥ ಶುಭಾಶುಭ ಕರ್ಮಗಳನ್ನು ತಾನೇ ನಿರ್ದೇಶಿಸುತ್ತಿರುವಂತೆ, ತಾನು ಸ್ವ-ಕರ್ಮಸ್ವಾಮಿ, ಎಂದು ತಿಳಿದಿದ್ದನು. ಯುದ್ಧ ಮಾಡುವಂತೆ ಆದೇಶಿಸಲು ಪರಮ ದೇವೋತ್ತಮ ಪುರುಷನು ಅಲ್ಲಿ ಸನ್ನಿಹಿತನು ಎಂಬುದನ್ನು ಅವನು ಮರೆತನು. ಇದೇ ಬದ್ಧಾತ್ಮನ ವಿಸ್ಮೃತಿ. ಯಾವುದು ಒಳ್ಳೆಯದು ಮತ್ತು ಯಾವುದು

ಕೆಟ್ಟದ್ದು ಎಂಬ ಬಗ್ಗೆ ಪರಮ ಪುರುಷನು ನಿರ್ದೇಶನ ನೀಡುತ್ತಾನೆ, ಮತ್ತು ಒಬ್ಬನು ಜೀವನದ ಸಿದ್ಧಿ ಪ್ರಾಪ್ತಿಗಾಗಿ ಕೃಷ್ಣಪ್ರಜ್ಞೆಯಲ್ಲಿ ಮಾತ್ರ ಕಾರ್ಯ ಮಾಡಬೇಕು. ಭಗವಂತನು ಖಚಿತಗೊಳಿಸುವಂತೆ, ಯಾರೂ ಕೂಡ ತನ್ನ ಭವಿಷ್ಯವನ್ನು ಖಚಿತಗೊಳಿಸಿಕೊಳ್ಳಲಾರನು; ಆದ್ದರಿಂದ ಪರಮ ಪ್ರಭುವಿನಿಂದ ನಿರ್ದೇಶನ ಪಡೆದು ಅದರಂತೆ ವರ್ತಿಸುವುದು ಅತ್ಯುತ್ತಮ ಮಾರ್ಗ. ಯಾರೂ ಕೂಡ ಪರಮ ದೇವೋತ್ತಮ ಪುರುಷನ ಅಥವಾ ಭಗವತ್ ಪ್ರತಿನಿಧಿಯಾದ ಅಧ್ಯಾತ್ಮ ಗುರುವಿನ ಆದೇಶವನ್ನು ನಿರ್ಲಕ್ಷಿಸಕೂಡದು. ಒಬ್ಬನು ಪರಮ ದೇವೋತ್ತಮ ಪುರುಷನ ಆದೇಶವನ್ನು ನಿಸ್ಸಂಕೋಚವಾಗಿ ಪಾಲಿಸಬೇಕು—ಅದು ಒಬ್ಬನನ್ನು ಸರ್ವ ಸಂದರ್ಭಗಳಲ್ಲಿ ಸುರಕ್ಷಿತವಾಗಿ ಇರಿಸುವುದು.

**ಸ್ವಭಾವಜೇನ ಕೌನ್ತೇಯ ನಿಬದ್ಧಃ ಸ್ವೇನ ಕರ್ಮಣಾ ।**
**ಕರ್ತುಂ ನೇಚ್ಛಸಿ ಯನ್ಮೋಹಾತ್ ಕರಿಷ್ಯಸ್ಯವಶೋऽಪಿ ತತ್ ॥ ೬೦ ॥**

ಸ್ವಭಾವ-ಜೇನ—ನಿನ್ನ ಸ್ವಸ್ವಭಾವ ಜನ್ಯ, ಕೌನ್ತೇಯ,—ಹೇ ಕುಂತಿ ಪುತ್ರನೇ ನಿಬದ್ಧಃ—ಬದ್ಧನು, ಸ್ವೇನ—ನಿನ್ನ ಸ್ವಂತ, ಕರ್ಮಣಾ—ಕರ್ಮಗಳಿಂದ, ಕರ್ತುಮ್—ಮಾಡಲು, ನ—ಇಲ್ಲ, ಇಚ್ಛಸಿ—ಬಯಸುವುದು, ಯತ್—ಯಾವುದನ್ನು, ಮೋಹಾತ್—ಮೋಹದಿಂದ, ಕರಿಷ್ಯಸಿ—ಮಾಡುವಿ, ಅವಶಃ—ಅವಶನಾಗಿ, ಅಪಿ—ಕೂಡ, ತತ್ ಅದನ್ನು.

**ಮೋಹವಶದಿಂದ ಈಗ ನನ್ನ ನಿರ್ದೇಶಾನುಸಾರ ವರ್ತಿಸಲು ನಿರಾಕರಿಸುತ್ತಿರುವಿ. ಆದರೆ, ನಿನ್ನ ಸ್ವಸ್ವಭಾವಜನ್ಯ ಕರ್ಮಬಲದಿಂದ ನಿರ್ಬಂಧಿತನಾಗಿ ಹೇ ಕುಂತೀ ಪುತ್ರನೇ, ನೀನು ಹಾಗೆಯೇ ಮಾಡುವಿ.**

**ಭಾವಾರ್ಥ :** ಒಬ್ಬನು ಪರಮಪ್ರಭುವಿನ ನಿರ್ದೇಶಾನುಸಾರ ಕಾರ್ಯಮಾಡಲು ನಿರಾಕರಿಸಿದರೆ, ಆಗ ಅವನು ಸನ್ನಿವೇಶಿತನಾದ ಗುಣಗಳಿಂದ ಹಾಗೆ ಮಾಡಲು ಒತ್ತಾಯಿಸಲ್ಪಡುವನು. ಪ್ರತಿಯೊಬ್ಬನೂ ಪ್ರಕೃತಿಗುಣಗಳ ವಿಶಿಷ್ಟ ಸಂಯೋಜನೆಯ ಪ್ರಭಾವಾಧೀನನು ಮತ್ತು ಹಾಗೆ ಕರ್ಮಮಾಡುತ್ತಿದ್ದಾನೆ, ಆದರೆ ಪರಮ ಪ್ರಭುವಿನ ನಿರ್ದೇಶಾನುಸಾರ ತಾನಾಗಿಯೇ ಕರ್ಮನಿರತನಾದರೆ ಧನ್ಯನಾಗುತ್ತಾನೆ.

**ಈಶ್ವರಃ ಸರ್ವಭೂತಾನಾಂ ಹೃದ್ದೇಶೇऽರ್ಜುನ ತಿಷ್ಠತಿ ।**
**ಭ್ರಾಮಯನ್ ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ ॥ ೬೧ ॥**

ಈಶ್ವರಃ—ಪರಮಪ್ರಭು, ಸರ್ವಭೂತಾನಾಮ್—ಎಲ್ಲ ಜೀವಿಗಳ, ಹೃತ್-ದೇಶೇ—ಹೃದಯದ ದೇಶದಲ್ಲಿ, ಅರ್ಜುನ—ಹೇ ಅರ್ಜುನ, ತಿಷ್ಠತಿ—ವಾಸಿಸುತ್ತಾನೆ; ಭ್ರಾಮಯನ್—ಭ್ರಮಿಸುವಂತೆ ಮಾಡಿ, ಸರ್ವ-ಭೂತಾನಿ—ಎಲ್ಲ ಜೀವಿಗಳು, ಯಂತ್ರ—ಯಂತ್ರದ ಮೇಲೆ, ಆರೂಢಾನಿ—ಇರಿಸಲ್ಪಟ್ಟು, ಮಾಯಯಾ—ಭೌತಿಕ ಶಕ್ತಿ ಪ್ರಭಾವದಲ್ಲಿ.

**ಹೇ ಅರ್ಜುನ, ಪರಮ ಪ್ರಭುವು ಪ್ರತಿಯೊಬ್ಬನ ಹೃದಯ ಸನ್ನಿವೇಶಿತನು, ಮತ್ತು ಭೌತಿಕ ಶಕ್ತಿ ನಿರ್ಮಿತ ಯಂತ್ರದ ಮೇಲೆ ಕುಳಿತಂತಿರುವ ಸಕಲ ಜೀವಿಗಳ ಭ್ರಮಣವನ್ನು ನಿರ್ದೇಶಿಸುತ್ತಿದ್ದಾನೆ.**

**ಭಾವಾರ್ಥ :** ಅರ್ಜುನನು ಪರಮ ಜ್ಞಾನಿಯಾಗಿರಲಿಲ್ಲ, ಯುದ್ಧ ಮಾಡಬೇಕೋ ಅಥವಾ ಮಾಡಬಾರದೋ ಎಂಬ ಅವನ ತೀರ್ಮಾನವು ಅವನ ಪರಿಮಿತ ವಿವೇಚನೆಗೆ ಸೀಮಿತವಾಗಿತ್ತು. ವ್ಯಕ್ತಿಯು ಸರ್ವಶಕ್ತನಲ್ಲ ಎಂದು ಶ್ರೀಕೃಷ್ಣನು ಉಪದೇಶಿಸಿದನು. ಪರಮ ದೇವೋತ್ತಮ ಪುರುಷನು, ಅಥವಾ ಸ್ವಯಂ ಶ್ರೀಕೃಷ್ಣನೇ ಸ್ಥಳೀಯ ಪರಮಾತ್ಮನಾಗಿ, ಹೃದಯ ನಿವಿಷ್ಟನಾಗಿ ಜೀವಿಗೆ ನಿರ್ದೇಶನ ಮಾಡುತ್ತಾನೆ. ದೇಹಾಂತರದ ತರುವಾಯ, ಜೀವಿಯು ತನ್ನ ಹಿಂದಿನದನ್ನು ಮರೆತುಬಿಡುತ್ತಾನೆ. ಆದರೆ ಭೂತ, ವರ್ತಮಾನ ಮತ್ತು ಭವಿಷ್ಯದ ಕ್ಷೇತ್ರಜ್ಞನಾಗಿ ಪರಮಾತ್ಮನು ಜೀವಿಯ ಸಕಲ ಕಾರ್ಯಗಳ ಸಾಕ್ಷಿಯಾಗಿರುತ್ತಾನೆ. ಆದ್ದರಿಂದ ಜೀವಿಗಳ ಸಕಲ ಚಟುವಟಿಕೆಗಳು ಈ ಪರಮಾತ್ಮನಿಂದ ನಿರ್ದೇಶಿತ. ಜೀವಿಯು ತನಗೆ ಯೋಗ್ಯವಾದುದನ್ನು ಪಡೆಯುತ್ತಾನೆ, ಮತ್ತು ಪರಮಾತ್ಮನ ನಿರ್ದೇಶಾನುಸಾರ ಭೌತಿಕ ಶಕ್ತಿ ನಿರ್ಮಿತ ಭೌತಿಕ ದೇಹದಲ್ಲಿ ಸಾಗುತ್ತಾನೆ. ಜೀವಿಯು ವಿಶಿಷ್ಟ ಮಾದರಿಯ ದೇಹದಲ್ಲಿ ಇರಿಸಲ್ಪಟ್ಟೊಡನೆಯೇ, ಅವನು ಆ ದೈಹಿಕ ಸನ್ನಿವೇಶ ಪ್ರಭಾವದಲ್ಲಿ ಕರ್ಮ ಮಾಡಬೇಕಾಗುವುದು. ಚಾಲಕರಾದ ಜೀವಿಗಳು ಒಂದೇ ಬಗೆಯವರಾಗಿದ್ದರೂ, ಬಹು ವೇಗದ ಮೋಟಾರ್‌ಗಾಡಿಯಲ್ಲಿ ಕುಳಿತವನು, ಕಡಿಮೆ ವೇಗದ ಕಾರಿನಲ್ಲಿ ಕುಳಿತವನಿಗಿಂತ ಹೆಚ್ಚು ವೇಗವಾಗಿ ಸಾಗುತ್ತಾನೆ. ಅದೇ ಪ್ರಕಾರ ಪರಮ ಆತ್ಮನ ಆಜ್ಞಾನುಸಾರ ಭೌತಿಕ ಪ್ರಕೃತಿಯು ಜೀವಿಯು ತನ್ನ ಪೂರ್ವ ಕರ್ಮ ವಾಸನಾನುಸಾರ ಕರ್ಮ ಮಾಡಲು ವಿಶಿಷ್ಟ ಬಗೆಯ ಜೀವಿಗಾಗಿ ವಿಶಿಷ್ಟ ಬಗೆಯ ದೇಹವನ್ನು ರೂಪಿಸುತ್ತದೆ. ಜೀವಿಯು ಸ್ವತಂತ್ರನಲ್ಲ. ತಾನು ಪರಮ ದೇವೋತ್ತಮ ಪುರುಷನಿಂದ ಸ್ವತಂತ್ರನೆಂದು ಒಬ್ಬನು ತಿಳಿಯಕೂಡದು. ವ್ಯಕ್ತಿಯು ಸದಾ ಪ್ರಭುವಿನ ನಿಯಂತ್ರಣಾಧೀನನು. ಆದ್ದರಿಂದ ಶರಣಾಗತನಾಗುವುದು ಒಬ್ಬನ ಕರ್ತವ್ಯ, ಅದೇ ಮುಂದಿನ ಶ್ಲೋಕದ ಆಜ್ಞೆ.

**ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ।**
**ತತ್ಪ್ರಸಾದಾತ್ಪರಾಂ ಶಾನ್ತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥ ೬೨ ॥**

ತಮ್—ಅವನನ್ನು, ಏವ—ಖಂಡಿತವಾಗಿ, ಶರಣಮ್ ಗಚ್ಛ—ಶರಣು ಹೋಗು, ಸರ್ವ-ಭಾವೇನ—ಸರ್ವ ಭಾವಗಳಲ್ಲಿ, ಭಾರತ—ಭರತ ವಂಶಜನೇ, ತತ್-ಪ್ರಸಾದಾತ್—ಅವನ ಅನುಗ್ರಹದಿಂದ, ಪರಾಮ್—ದಿವ್ಯ, ಶಾನ್ತಿಮ್—ಶಾಂತಿಯನ್ನು, ಸ್ಥಾನಮ್—ಧಾಮವನ್ನು, ಪ್ರಾಪ್ಸ್ಯಸಿ—ನೀನು ಹೊಂದುವಿ, ಶಾಶ್ವತಮ್—ಶಾಶ್ವತವಾದ.

**ಹೇ ಭರತ ವಂಶಜನೇ, ಸಂಪೂರ್ಣವಾಗಿ ಅವನಿಗೆ ಶರಣಾಗತನಾಗು. ಅವನ ಅನುಗ್ರಹದಿಂದ ನೀನು ದಿವ್ಯ ಶಾಂತಿಯನ್ನು ಮತ್ತು ಪರಮ ಶಾಶ್ವತ ಧಾಮವನ್ನು ಪಡೆಯುವಿ.**

**ಭಾವಾರ್ಥ :** ಆದ್ದರಿಂದ ಜೀವಿಯು ಪ್ರತಿಯೊಬ್ಬರ ಹೃದಯ ಸನ್ನಿವೇಶಿತ ಪರಮ ದೇವೋತ್ತಮ ಪುರುಷನಿಗೆ ಶರಣಾಗತನಾಗಬೇಕು. ಅದು ಅವನನ್ನು ಈ ಭೌತಿಕ ಅಸ್ತಿತ್ವದ ಎಲ್ಲ ಪ್ರಕಾರದ ಕ್ಲೇಶಗಳಿಂದ ಮುಕ್ತಗೊಳಿಸುವುದು. ಅಂಥ ಶರಣಾಗತಿಯಿಂದ, ಒಬ್ಬನು ಇಹ ಜೀವನದ ಸಕಲ ಕ್ಲೇಶಗಳಿಂದ ಮುಕ್ತನಾಗುವುದಲ್ಲದೆ, ಕೊನೆಗೆ ಪರಮದೇವನನ್ನು

ತಲುಪುವನು. ದಿವ್ಯಲೋಕವು ವೇದಸಾಹಿತ್ಯದಲ್ಲಿ ವರ್ಣಿಸಲ್ಪಟ್ಟಿದೆ (ಋಗ್ವೇದ 1.22.20), **ತದ್ ವಿಷ್ಣೋಃ ಪರಮಂ ಪದಮ್**: ಸೃಷ್ಟಿಯು ಎಲ್ಲವೂ ಭಗದ್ಧಾಮವಾದ್ದರಿಂದ ಭೌತಿಕವಾದ ಪ್ರತಿಯೊಂದು ವಾಸ್ತವಿಕವಾಗಿ ಆಧ್ಯಾತ್ಮಿಕ. ಆದರೆ **ಪರಮಂ ಪದಮ್** ಎಂಬುದು ವಿಶೇಷವಾಗಿ ಪರವ್ಯೋಮ ಅಥವಾ ವೈಕುಂಠವೆಂಬ ನಿತ್ಯಧಾಮವನ್ನು ಸೂಚಿಸುತ್ತದೆ.

ಭಗವದ್ಗೀತೆಯು ಹದಿನೈದನೆಯ ಅಧ್ಯಾಯದಲ್ಲಿ, **ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟಃ** : ಎಂದು ಹೇಳಿದೆ. ಭಗವಂತನು ಪ್ರತಿಯೊಬ್ಬನ ಹೃದಯ ನಿವಿಷ್ಟನು, ಆದ್ದರಿಂದ ಒಬ್ಬನು ಒಳಗೆ ನಿವಿಷ್ಟನಾದ ಪರಮಾತ್ಮನಿಗೆ ಶರಣಾಗತನಾಗಬೇಕು ಎಂದು ಹೇಳುವುದರ ಅರ್ಥವೆಂದರೆ, ಒಬ್ಬನು ಪರಮ ದೇವೋತ್ತಮ ಪುರುಷ, ಕೃಷ್ಣನಿಗೆ ಶರಣಾಗತನಾಗಬೇಕು. ಅರ್ಜುನನು ಆಗಲೇ ಕೃಷ್ಣನನ್ನು ಪರಮನೆಂದು ಅಂಗೀಕರಿಸಿದ್ದಾನೆ. ಅವನು ಹತ್ತನೆಯ ಅಧ್ಯಾಯದಲ್ಲಿ **ಪರಂ ಬ್ರಹ್ಮ ಪರಂ ಧಾಮ** ಎಂದು ಅಂಗೀಕರಿಸಲ್ಪಟ್ಟಿದ್ದಾನೆ. ಸ್ವಾನುಭವ ನಿಮಿತ್ತವಷ್ಟೇ ಅಲ್ಲದೆ ನಾರದ, ಅಸಿತ, ದೇವಲ ಮತ್ತು ವ್ಯಾಸರಂಥವರ ಮಹಾ ಅಧಿಕಾರಯುತ ವಚನಾಧಾರದಿಂದ ಕೂಡ ಅರ್ಜುನನು ಕೃಷ್ಣನನ್ನು ಪರಮ ದೇವೋತ್ತಮ ಪುರುಷ ಮತ್ತು ಸಕಲ ಜೀವಿಗಳ ಪರಮಧಾಮ ಎಂದು ಅಂಗೀಕರಿಸಿದ್ದಾನೆ.

**ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ ಗುಹ್ಯತರಂ ಮಯಾ ।**
**ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ॥ ೬೩ ॥**

ಇತಿ—ಹೀಗೆ, ತೇ—ನಿನಗೆ, ಜ್ಞಾನಮ್—ಜ್ಞಾನವು, ಆಖ್ಯಾತಮ್—ವರ್ಣಿತ, ಗುಹ್ಯಾತ್—ಗುಹ್ಯಕ್ಕಿಂತ, ಗುಹ್ಯ-ತರಮ್—ಇನ್ನೂ ಗುಹ್ಯತರವಾದ, ಮಯಾ—ನನ್ನಿಂದ, ವಿಮೃಶ್ಯ—ವಿಮರ್ಶಿಸಿ, ಏತದ್—ಇದನ್ನು, ಅಶೇಷೇಣ—ಪೂರ್ಣವಾಗಿ, ಯಥಾ—ಹೇಗೆ, ಇಚ್ಛಸಿ—ನೀನು ಇಷ್ಟಪಡುವೆಯೋ, ತಥಾ—ಹಾಗೆ, ಕುರು—ಮಾಡು.

**ಹೀಗೆ ನಾನು ಇನ್ನೂ ಗುಹ್ಯತರವಾದ ಜ್ಞಾನವನ್ನು ನಿನಗೆ ವಿವರಿಸಿದ್ದೇನೆ. ಇದನ್ನು ಪೂರ್ಣವಾಗಿ ವಿಮರ್ಶಿಸು, ಆಮೇಲೆ ನೀನು ಮಾಡಬಯಸಿದ್ದನ್ನು ಮಾಡು.**

**ಭಾವಾರ್ಥ** : ಕೃಷ್ಣನು ಆಗಲೇ ಅರ್ಜುನನಿಗೆ **ಬ್ರಹ್ಮ-ಭೂತ** ಜ್ಞಾನವನ್ನು ವಿವರಿಸಿದ್ದಾನೆ. **ಬ್ರಹ್ಮ-ಭೂತ** ಸ್ಥಿತಿಯಲ್ಲಿರುವವನು ಆನಂದಮಯನು ; ಅವನು ಶೋಕಿಸುವುದಿಲ್ಲ, ಅಥವಾ ಏನನ್ನೂ ಅಪೇಕ್ಷಿಸುವುದಿಲ್ಲ. ಅದು ಗುಹ್ಯ ಜ್ಞಾನ ನಿಮಿತ್ತ. ಕೃಷ್ಣನು ಪರಮಾತ್ಮ ಜ್ಞಾನವನ್ನೂ ನೀಡುತ್ತಾನೆ. ಇದು ಕೂಡ ಬ್ರಹ್ಮನ್ ಜ್ಞಾನ, ಆದರೆ ಅದು ಶ್ರೇಷ್ಠ.

ಇಲ್ಲಿ **ಯಥೇಚ್ಛಸಿ ತಥಾ ಕುರು** ಎಂಬ ಪದಗಳು— "ನಿನಗೆ ಇಷ್ಟಬಂದ ಹಾಗೆ ಮಾಡಬಹುದು"—ಭಗವಂತನು ಜೀವಿಯ ಅಲ್ಪ ಸ್ವಾತಂತ್ರ್ಯದಲ್ಲಿ ಕೈ ಹಾಕುವುದಿಲ್ಲ ಎಂಬುದನ್ನು ಸೂಚಿಸುತ್ತದೆ. ಭಗವದ್ಗೀತೆಯಲ್ಲಿ ಭಗವಂತನು ಎಲ್ಲ ವಿಷಯಗಳಲ್ಲಿ ಹೇಗೆ ಒಬ್ಬನು ತನ್ನ ಜೀವನಸ್ಥಿತಿಯನ್ನು ಉನ್ನತಿಸಿಕೊಳ್ಳಬಹುದು ಎಂಬುದನ್ನು ವಿವರಿಸಿದ್ದಾನೆ.

ತನ್ನ ಹೃದಯ ನಿವಿಷ್ಟನಾದ ಪರಮಾತ್ಮನಿಗೆ ಶರಣಾಗತನಾಗುವುದು ಅರ್ಜುನನಿಗೆ ನೀಡಿದ ಅತ್ಯುತ್ತಮ ಉಪದೇಶ. ಒಬ್ಬನು ಪರಮಾತ್ಮನ ಆದೇಶಾನುಸಾರ ವರ್ತಿಸಲು ಸರಿಯಾದ ವಿವೇಚನೆಯಿಂದ ಒಪ್ಪಿಕೊಳ್ಳಬೇಕು. ಅದು ಒಬ್ಬನಿಗೆ ಮಾನವ ಜೀವನದ ಅತ್ಯುನ್ನತ ಪರಿಪೂರ್ಣಮಟ್ಟವಾದ ಕೃಷ್ಣಪ್ರಜ್ಞೆಯಲ್ಲಿ ಸತತ ಸನ್ನಿವೇಶಿತನಾಗಲು ಸಹಾಯಕವಾಗುವುದು. ಯುದ್ಧಮಾಡಲು ಅರ್ಜುನನು ದೇವೋತ್ತಮ ಪುರುಷನಿಂದ ನೇರವಾಗಿ ಆದೇಶಿಸಲ್ಪಡುತ್ತಿದ್ದಾನೆ. ಪರಮ ದೇವೋತ್ತಮ ಪುರುಷನಿಗೆ ಶರಣಾಗತಿಯು ಜೀವಿಗಳ ಅತ್ಯುತ್ತಮ ಹಿತಾಸಕ್ತಿಗೆ ಉಚಿತವಾದದು. ಅದು ಪರಮನ ಹಿತಕ್ಕಾಗಿ ಅಲ್ಲ. ಶರಣಾಗತನಾಗುವ ಮುಂಚೆ, ಒಬ್ಬನು ತನ್ನ ಬುದ್ಧಿಗೆ ನಿಲುಕಿದವರೆಗೂ ಜಿಜ್ಞಾಸೆ ಮಾಡಲು ಸ್ವತಂತ್ರನು ; ಅದೇ ಪರಮ ದೇವೋತ್ತಮ ಪುರುಷನ ಉಪದೇಶವನ್ನು ಅಂಗೀಕರಿಸಲು ಉತ್ತಮ ಮಾರ್ಗ. ಅಂಥ ಉಪದೇಶವು ಕೃಷ್ಣನ ನಿಜ ಪ್ರತಿನಿಧಿಯಾದ ಗುರುಗಳ ಮೂಲಕವೂ ಬರುತ್ತದೆ.

**ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ ।**
**ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್ ॥ ೬೪ ॥**

ಸರ್ವ–ಗುಹ್ಯ–ತಮಮ್—ಎಲ್ಲಕ್ಕಿಂತ ಅತ್ಯಂತ ಗುಹ್ಯತಮವಾದ, ಭೂಯಃ—ಮತ್ತೆ, ಶೃಣು—ಕೇಳು, ಮೇ—ನನ್ನಿಂದ, ಪರಮಮ್—ಪರಮ, ವಚಃ—ವಚನ, ಇಷ್ಟಃ–ಅಸಿ—ನೀನು ಪ್ರಿಯನು, ಮೇ—ನನಗೆ, ದೃಢಮ್—ಪರಮ, ಇತಿ—ಹೀಗೆ, ತತಃ—ಆದ್ದರಿಂದ, ವಕ್ಷ್ಯಾಮಿ—ಹೇಳುತ್ತಿದ್ದೇನೆ, ತೇ—ನಿನ್ನ, ಹಿತಮ್—ಹಿತಕ್ಕಾಗಿ.

**ನೀನು ನನ್ನ ಪರಮ ಪ್ರಿಯ ಸಖನಾಗಿರುವುದರಿಂದ, ನಾನು ನಿನಗೆ ಉಪದೇಶವನ್ನು, ಎಲ್ಲಕ್ಕಿಂತ ಅತ್ಯುನ್ನತ ಗುಹ್ಯತಮ ಜ್ಞಾನವಾದ, ನನ್ನ ಪರಮ ಉಪದೇಶವನ್ನು ಹೇಳುತ್ತಿದ್ದೇನೆ. ಇದನ್ನು ನನ್ನಿಂದ ಕೇಳು, ಏಕೆಂದರೆ ಇದು ನಿನ್ನ ಹಿತಕ್ಕಾಗಿಯೇ.**

**ಭಾವಾರ್ಥ :** ಭಗವಂತನು ಅರ್ಜುನನಿಗೆ ಗುಹ್ಯವಾದ ಜ್ಞಾನವನ್ನು (ಬ್ರಹ್ಮನ್ ಜ್ಞಾನವನ್ನು) ಮತ್ತು ಇನ್ನೂ ಗುಹ್ಯತಮ ಜ್ಞಾನವನ್ನೂ (ಪ್ರತಿಯೊಬ್ಬನ ಹೃದಯ ಸ್ಥಿತ ಪರಮಾತ್ಮನ ಜ್ಞಾನ) ನೀಡಿದ್ದಾನೆ. ಪರಮ ದೇವೋತ್ತಮ ಪುರುಷನಿಗೆ ಶರಣಾಗತನಾಗು ಎಂಬ ಜ್ಞಾನದ ಅತ್ಯುನ್ನತ ಗುಹ್ಯತಮ ಭಾಗವನ್ನು ಈಗ ನೀಡುತ್ತಿದ್ದಾನೆ. ಒಂಬತ್ತನೆಯ ಅಧ್ಯಾಯದ ಕೊನೆಯಲ್ಲಿ **ಮನ್–ಮನಾಃ** "ಸದಾ ನನ್ನ ಚಿಂತನ ಮಾಡು" ಎಂದು ಹೇಳಿದ್ದಾನೆ. ಭಗವದ್ಗೀತಾ ಉಪದೇಶಗಳ ಸಾರವನ್ನು ಒತ್ತಿ ಹೇಳಲು ಮತ್ತೆ ಅದೇ ಉಪದೇಶವೇ ಇಲ್ಲಿ ಹೇಳಲ್ಪಟ್ಟಿದೆ. ಈ ಸಾರವು ಸಾಮಾನ್ಯ ಮಾನವನಿಂದ ಅರಿತುಕೊಳ್ಳಲಾಗದು. ಆದರೆ ಕೃಷ್ಣನಿಗೆ ವಾಸ್ತವಿಕವಾಗಿ ಬಹುಪ್ರಿಯನಾದವನು, ಶುದ್ಧ ಕೃಷ್ಣಭಕ್ತನು ಅರಿತುಕೊಳ್ಳುತ್ತಾನೆ. ಇದು ಸಕಲ ವೇದ ಶಾಸ್ತ್ರದಲ್ಲಿನ ಅತ್ಯಂತ ಮಹತ್ವದ ಉಪದೇಶ. ಈ ಸಂಬಂಧದಲ್ಲಿ ಕೃಷ್ಣನು ಹೇಳುತ್ತಿರುವುದು ಜ್ಞಾನದ ಗುಹ್ಯತಮ ಭಾಗ, ಮತ್ತು ಅದು ಅರ್ಜುನನಷ್ಟೇ ಅಲ್ಲದೆ ಎಲ್ಲರಿಂದಲೂ ಅನುಷ್ಠಿತವಾಗಬೇಕು.

**ಮನ್ಮನಾ ಭವ ಮದ್‌ಭಕ್ತೋ ಮದ್‌ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥ ೬೫ ॥**

ಮತ್-ಮನಾಃ—ನನ್ನ ಚಿಂತನ ಮಾಡುತ್ತ, ಭವ—ಆಗು, ಮತ್-ಭಕ್ತಃ—ನನ್ನ ಭಕ್ತನು, ಮತ್-ಯಾಜೀ—ನನ್ನ ಪೂಜಕನು, ಮಾಮ್—ನನಗೆ, ನಮಸ್ಕುರು—ನಮಸ್ಕಾರ ಮಾಡು, ಮಾಮ್—ನನ್ನಲ್ಲಿಗೆ, ಏವ—ಖಂಡಿತವಾಗಿ, ಏಷ್ಯಸಿ—ಬರುವೆ, ಸತ್ಯಮ್—ಸತ್ಯವಾಗಿ, ತೇ—ನಿನಗೆ, ಪ್ರತಿಜಾನೇ—ಭರವಸೆ ನೀಡುತ್ತೇನೆ, ಪ್ರಿಯಃ—ಪ್ರಿಯನು, ಅಸಿ—ಆಗಿರುವೆ, ಮೇ—ನನಗೆ.

**ಸದಾ ನನ್ನ ಚಿಂತನೆ ಮಾಡು, ನನ್ನ ಭಕ್ತನಾಗು, ನನ್ನನ್ನು ಅರ್ಚಿಸು ಮತ್ತು ನನಗೆ ನಮಸ್ಕರಿಸು. ಹೀಗೆ ನೀನು ತಪ್ಪದೆ ನನ್ನಲ್ಲಿಗೆ ಬರುವೆ. ನೀನು ನನಗೆ ಬಹು ಪ್ರಿಯ ಸಖನಾಗಿರುವುದರಿಂದ, ನಿನಗೆ ಈ ಆಶ್ವಾಸನೆ ನೀಡುತ್ತೇನೆ.**

**ಭಾವಾರ್ಥ :** ಒಬ್ಬನು ಕೃಷ್ಣನ ಶುದ್ಧ ಭಕ್ತನಾಗಬೇಕು ಮತ್ತು ಸದಾ ಅವನ ಧ್ಯಾನ ಮಾಡುತ್ತ ಅವನಿಗಾಗಿ ಕಾರ್ಯ ಮಾಡಬೇಕು. ಒಬ್ಬನು ಮಧ್ಯವರ್ತಿ ಅಧಿಕಾರಿಯಾಗ ಬಾರದು. ಒಬ್ಬನು ಸದಾ ಕೃಷ್ಣಚಿಂತನ ಮಾಡುವ ಅವಕಾಶವಿರುವ ಹಾಗೆ ಜೀವನ ವನ್ನು ರೂಪಿಸಿಕೊಳ್ಳಬೇಕು. ತನ್ನ ನಿತ್ಯ ಚಟುವಟಿಕೆಗಳು ಕೃಷ್ಣ ಸಂಬಂಧವಾಗಿರುವಂತೆ ಒಬ್ಬನು ಸದಾ ಕರ್ಮ ಮಾಡಬೇಕು. ದಿನದ ಇಪ್ಪತ್ತನಾಲ್ಕು ಗಂಟೆಗಳೂ ಒಬ್ಬನು ಕೃಷ್ಣ ಚಿಂತನ ವಿನಾ ಬೇರೇನೂ ಮಾಡದ ಹಾಗೆ ತನ್ನ ಜೀವನವನ್ನು ಅಣಿಗೊಳಿಸಿಕೊಳ್ಳಬೇಕು. ಮತ್ತು ಅಂಥ ಶುದ್ಧ ಕೃಷ್ಣ ಪ್ರಜ್ಞೆಯು ಖಂಡಿತವಾಗಿ ಸಾಕ್ಷಾತ್ತಾಗಿ ಕೃಷ್ಣಸಂಗ ಹಂತ ವಾಗಲು ಕೃಷ್ಣಧಾಮಕ್ಕೆ ಹಿಂದಿರುಗುವನೆಂಬ ಕೃಷ್ಣನ ಆಶ್ವಾಸನೆ. ಜ್ಞಾನದ ಈ ಗುಹ್ಯ ತಮ ಭಾಗವನ್ನು ಅರ್ಜುನನು ಕೃಷ್ಣನ ಪ್ರಿಯಸಖನಾದ್ದರಿಂದ ಅವನಿಗೆ ಹೇಳಿದ. ಅರ್ಜುನನ ಮಾರ್ಗವನ್ನು ಅನುಸರಿಸುವ ಪ್ರತಿಯೊಬ್ಬನೂ ಕೃಷ್ಣನ ಪ್ರಿಯನಾಗಬಹುದು ಮತ್ತು ಅರ್ಜುನನಂತೆಯೇ ಸಿದ್ಧಿ ಪಡೆಯಬಹುದು.

ಒಬ್ಬನು ಎರಡು ಹಸ್ತಗಳಲ್ಲಿ ಕೊಳಲು, ಸುಂದರವದನ, ಕೇಶಗಳಲ್ಲಿ ನವಿಲುಗರಿ ಯುಳ್ಳ ನೀಲ ವರ್ಣದ ಕೃಷ್ಣನ ರೂಪದಲ್ಲಿ—ತನ್ನ ಮನಸ್ಸನ್ನು ಕೇಂದ್ರೀಕರಿಸಬೇಕೆಂಬು ದನ್ನು ಈ ಪದಗಳು ಒತ್ತಿ ಹೇಳುತ್ತಿವೆ. ಬ್ರಹ್ಮ-ಸಂಹಿತೆ, ಮತ್ತು ಇತರ ಸಾಹಿತ್ಯಗಳಲ್ಲಿ ಕೃಷ್ಣನ ವರ್ಣನೆಗಳು ಸಿಗುತ್ತವೆ. ಒಬ್ಬನು ದೇವೋತ್ತಮನ ಮೂಲ ರೂಪವಾದ ಕೃಷ್ಣ ನಲ್ಲಿ ತನ್ನ ಮನಸ್ಸನ್ನು ಸ್ಥಿರಗೊಳಿಸಬೇಕು. ಒಬ್ಬನು ಭಗವಂತನ ಇತರ ರೂಪಗಳ ಕಡೆಗ ಗಮನ ಹರಿಸಕೂಡದು. ಭಗವಂತನು, ವಿಷ್ಣು, ನಾರಾಯಣ, ರಾಮ, ವರಾಹ, ಇತ್ಯಾದಿ ನಾನಾ ರೂಪಗಳನ್ನು ಹೊಂದಿದ್ದಾನೆ. ಆದರೆ ಭಕ್ತನು ಅರ್ಜುನನ ಮುಂದೆ ಇದ್ದ ರೂಪ ದಲ್ಲಿ ತನ್ನ ಮನಸ್ಸನ್ನು ಕೇಂದ್ರೀಕರಿಸಬೇಕು. ಕೃಷ್ಣರೂಪದಲ್ಲಿ ಮನಸ್ಸಿನ ಧ್ಯಾನವು ಜ್ಞಾನದ ಅತ್ಯುನ್ನತ ಗುಹ್ಯತಮ ಭಾಗವಾಗಿದೆ, ಮತ್ತು ಇದು ಅರ್ಜುನನು ಕೃಷ್ಣನ ಅತ್ಯಂತ ಪ್ರಿಯ ಸಖನಾದ್ದರಿಂದ ಅವನಿಗೆ ಹೇಳಲ್ಪಟ್ಟಿದೆ.

**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।**
**ಅಹಂ ತ್ವಾಂ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥ ೬೬ ॥**

ಸರ್ವ-ಧರ್ಮಾನ್—ಎಲ್ಲ ಪ್ರಕಾರದ ಧರ್ಮಗಳನ್ನು, ಪರಿತ್ಯಜ್ಯ—ಪರಿತ್ಯಜಿಸಿ, ಮಾಮ್—ನನ್ನನ್ನು, ಏಕಮ್—ಮಾತ್ರ, ಶರಣಮ್—ಶರಣು, ವ್ರಜ—ಹೋಗು,

ಅಹಮ್—ನಾನು, ತ್ವಾಮ್—ನಿನ್ನನ್ನು, ಸರ್ವ—ಸರ್ವ, ಪಾಪೇಭ್ಯಃ—ಪಾಪಗಳಿಂದ ಮೋಕ್ಷಯಿಷ್ಯಾಮಿ—ವಿಮೋಚಿಸುತ್ತೇನೆ, ಮಾ—ಬೇಡ, ಶುಚಃ—ಚಿಂತಿಸುವುದು.

**ಎಲ್ಲ ಬಗೆಯ ಧರ್ಮಗಳನ್ನು ತ್ಯಜಿಸಿ ನನಗೆ ಶರಣಾಗತನಾಗು ಅಷ್ಟೆ. ನಿನ್ನನ್ನು ಸರ್ವಪಾಪ ಪ್ರತಿಕ್ರಿಯೆಗಳಿಂದ ವಿಮೋಚಿಸುತ್ತೇನೆ, ಭಯಪಡಬೇಡ.**

**ಭಾವಾರ್ಥ :** ಭಗವಂತನು ನಾನಾ ಬಗೆಯ ಜ್ಞಾನ ಮತ್ತು ಧರ್ಮ ಪ್ರಕ್ರಿಯೆಗಳನ್ನು —ಪರಬ್ರಹ್ಮನ್ ಜ್ಞಾನ, ಪರಮಾತ್ಮ ಜ್ಞಾನ, ಭಿನ್ನಭಿನ್ನ ಪ್ರಕಾರದ ಆಶ್ರಮಗಳ ಮತ್ತು ಸಮಾಜ ಜೀವನದ ಜ್ಞಾನ, ಸನ್ಯಾಸಾಶ್ರಮ ಜ್ಞಾನ, ಅಸಂಗ, ಇಂದ್ರಿಯ ಮತ್ತು ಮನೋ ನಿಯಂತ್ರಣ, ಧ್ಯಾನ ಇತ್ಯಾದಿಗಳ ಜ್ಞಾನ—ವರ್ಣಿಸಿದ್ದಾನೆ. ನಾನಾ ರೀತಿಯಲ್ಲಿ ಅವನು ಭಿನ್ನಭಿನ್ನ ಪ್ರಕಾರದ ಧರ್ಮಗಳನ್ನು ವರ್ಣಿಸಿದ್ದಾನೆ. ಈಗ ಭಗವದ್ಗೀತೆಯನ್ನು ಸಂಗ್ರಹರೂಪವಾಗಿ ಹೇಳುವಾಗ ಅರ್ಜುನನು ತನಗೆ ವಿವರಿಸಲ್ಪಟ್ಟ ಎಲ್ಲ ಪ್ರಕ್ರಿಯೆಗಳನ್ನು ಪರಿತ್ಯಜಿಸಬೇಕು; ಸುಮ್ಮನೆ ಕೃಷ್ಣನಿಗೆ ಶರಣಾಗಬೇಕು ಎಂದು ಭಗವಂತನು ಹೇಳುತ್ತಿದ್ದಾನೆ. ಆ ಶರಣಾಗತಿಯು ಅವನನ್ನು ಎಲ್ಲ ಬಗೆಯ ಪಾಪ ಪ್ರತಿಕ್ರಿಯೆಗಳಿಂದ ರಕ್ಷಿಸುತ್ತದೆ. ಏಕೆಂದರೆ ಕೃಷ್ಣನು ಅವನನ್ನು ರಕ್ಷಿಸಲು ಸ್ವತಃ ಆಶ್ವಾಸನೆ ನೀಡುತ್ತಿದ್ದಾನೆ.

ಸಕಲ ಪಾಪ ಪ್ರತಿಕ್ರಿಯೆಗಳಿಂದ ಮುಕ್ತನಾದವನು ಮಾತ್ರ ಕೃಷ್ಣಾರಾಧನೆಯನ್ನು ಕೈಕೊಳ್ಳಬಹುದು ಎಂದು ಎಂಟನೆಯ ಅಧ್ಯಾಯದಲ್ಲಿ ಹೇಳಲಾಗಿತ್ತು. ಹೀಗೆ ಒಬ್ಬನು ಸಕಲಪಾಪ ಪ್ರತಿಕ್ರಿಯೆಗಳಿಂದ ಮುಕ್ತನಾಗದ ಹೊರತು ಶರಣಾಗತಿಯ ಪ್ರಕ್ರಿಯೆಯನ್ನು ಕೈಕೊಳ್ಳಲಾಗದೆಂದು ಒಬ್ಬನು ಯೋಚಿಸಬಹುದು. ಒಬ್ಬನು ಸಕಲ ಪಾಪ ಪ್ರತಿಕ್ರಿಯೆಗಳಿಂದ ಮುಕ್ತನಾಗಿರದಿದ್ದರೂ ಕೂಡ, ಸುಮ್ಮನೆ ಕೃಷ್ಣನಿಗೆ ಶರಣಾಗತನಾಗುವ ಪ್ರಕ್ರಿಯೆ ಮಾತ್ರದಿಂದ ಅವನು ತಾನಾಗಿಯೇ ಮುಕ್ತನಾಗುವನೆಂದು, ಅಂಥ ಸಂಶಯಗಳಿಗೆ ಇಲ್ಲಿ ಉತ್ತರ ಹೇಳಲಾಗಿದೆ. ಪಾಪ ಪ್ರತಿಕ್ರಿಯೆಗಳಿಂದ ಮುಕ್ತನಾಗಲು ಒಬ್ಬನು ಬಹು ಪ್ರಯಾಸಪಡುವ ಅಗತ್ಯವಿಲ್ಲ. ಒಬ್ಬನು ನಿಸ್ಸಂಕೋಚವಾಗಿ ಕೃಷ್ಣನನ್ನು ಸಕಲ ಜೀವಿಗಳ ಪರಮ ರಕ್ಷಕನೆಂದು ಸುಮ್ಮನೆ ಒಪ್ಪಿಕೊಳ್ಳಬೇಕು. ಶ್ರದ್ಧೆ ಮತ್ತು ಪ್ರೀತಿಯಿಂದ ಒಬ್ಬನು ಅವನಿಗೆ ಶರಣಾಗಬೇಕು.

ಕೃಷ್ಣನಿಗೆ ಶರಣಾಗುವ ಪ್ರಕ್ರಿಯೆಯು ಹರಿ-ಭಕ್ತಿ-ವಿಲಾಸದಲ್ಲಿ (11.676) ವರ್ಣಿತ.

> ಅನುಕೂಲ್ಯಸ್ಯ ಸಂಕಲ್ಪಃ ಪ್ರಾತಿಕೂಲ್ಯಸ್ಯ ವರ್ಜನಮ್
> ರಕ್ಷಿಷ್ಯತೀತಿ ವಿಶ್ವಾಸೋ ಗೋಪ್ತೃತ್ವೇ ವರಣಂ ತಥಾ
> ಆತ್ಮನಿಕ್ಷೇಪಕಾರ್ಪಣ್ಯೇ ಷಡ್ವಿಧಾ ಶರಣಾಗತಿಃ

ಭಕ್ತಿ ಪ್ರಕ್ರಿಯಾನುಸಾರ, ಕೊನೆಗೆ ಭಗವಂತನ ಭಕ್ತಿಯುತ ಸೇವೆಗೆ ಕೊಂಡೊಯ್ಯುವಂಥ ಧರ್ಮ ತತ್ತ್ವಗಳನ್ನು ಮಾತ್ರ ಒಬ್ಬನು ಅಂಗೀಕರಿಸಬೇಕು. ಒಬ್ಬನು ತನ್ನ ವರ್ಣ

ಸ್ಥಾನಾನುಸಾರ ವಿಶಿಷ್ಟ ವೃತ್ತಿಧರ್ಮಗಳನ್ನು ಆಚರಿಸಬಹುದು, ಆದರೆ ತನ್ನ ಧರ್ಮಾಚರಣೆಯಿಂದ ಒಬ್ಬನು ಕೃಷ್ಣಪ್ರಜ್ಞಾಘಟ್ಟಕ್ಕೆ ಬಾರದಿದ್ದರೆ ಅವನ ಎಲ್ಲ ಚಟುವಟಿಕೆಗಳೂ ವ್ಯರ್ಥ. ಕೃಷ್ಣಪ್ರಜ್ಞೆಯ ಪರಿಪೂರ್ಣ ಮಟ್ಟಕ್ಕೆ ತಲುಪಿಸದ ಯಾವುದನ್ನೇ ಆಗಲಿ ತ್ಯಜಿಸಬೇಕು. ಎಲ್ಲ ತೊಂದರೆಗಳಿಂದ, ಎಲ್ಲ ಸನ್ನಿವೇಶಗಳಲ್ಲಿ, ಕೃಷ್ಣನು ತನ್ನನ್ನು ರಕ್ಷಿಸುತ್ತಾನೆ ಎಂಬ ಬಗ್ಗೆ ಒಬ್ಬನು ವಿಶ್ವಾಸ ಹೊಂದಿರಬೇಕು. ದೇಹ ಮತ್ತು ಆತ್ಮವನ್ನು ಹೇಗೆ ರಕ್ಷಿಸಿಕೊಳ್ಳಬಹುದು ಎಂದು ಚಿಂತಿಸುವ ಅಗತ್ಯವಿಲ್ಲ. ಕೃಷ್ಣನು ಅದನ್ನು ನೋಡಿಕೊಳ್ಳುತ್ತಾನೆ. ಒಬ್ಬನು ಸದಾ ತಾನು ಅಸಹಾಯಕನೆಂದು ತಿಳಿಯಬೇಕು ಮತ್ತು ತನ್ನ ಜೀವನದ ಪ್ರಗತಿಗೆ ಕೃಷ್ಣನೊಬ್ಬನೇ ಆಧಾರವೆಂದು ಭಾವಿಸಬೇಕು. ಒಬ್ಬನು ಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಭಗವಂತನ ಭಕ್ತಿಯುತ ಸೇವೆಯಲ್ಲಿ ಗಂಭೀರವಾಗಿ ನಿರತನಾದೊಡನೆಯೇ, ಕೂಡಲೇ ಭೌತಿಕ ಪ್ರಕೃತಿಯ ಸಕಲ ಕಲ್ಮಷದಿಂದ ಮುಕ್ತನಾಗುತ್ತಾನೆ. ಧರ್ಮದ ಭಿನ್ನ ಪ್ರಕ್ರಿಯೆಗಳು, ಮತ್ತು ಜ್ಞಾನ ಸಾಧನೆಯಿಂದ ಶುದ್ಧಿಪ್ರಕ್ರಿಯೆಗಳು ಮತ್ತು ಸಿದ್ಧಿಯೋಗ ಪದ್ಧತಿಯಲ್ಲಿ ಧ್ಯಾನ ಇತ್ಯಾದಿಗಳೂ ಇವೆ. ಆದರೆ ಕೃಷ್ಣನಿಗೆ ಶರಣಾಗತನಾದವನು ಅಷ್ಟೆಲ್ಲ ವಿಧಾನಗಳನ್ನು ಆಚರಿಸಬೇಕಾಗಿಲ್ಲ. ಕೃಷ್ಣನಿಗೆ ಆ ಸರಳ ಶರಣಾಗತಿಯು ವ್ಯರ್ಥ ಕಾಲಹರಣದಿಂದ ಅವನನ್ನು ರಕ್ಷಿಸುತ್ತದೆ. ಹೀಗೆ ಒಬ್ಬನು ಕೂಡಲೇ ಎಲ್ಲ ಪ್ರಗತಿ ಸಾಧಿಸಬಹುದು ಮತ್ತು ಸಕಲ ಪಾಪ ಪ್ರತಿಕ್ರಿಯೆಗಳಿಂದ ಮುಕ್ತನಾಗಬಹುದು.

ಒಬ್ಬನು ಕೃಷ್ಣನ ಕಮನೀಯ ನೋಟದಿಂದ ಆಕರ್ಷಿತನಾಗಬೇಕು. ಅವನು ಸರ್ವಾಕರ್ಷಣೀಯನಾದುದರಿಂದ, ಅವನ ಹೆಸರು ಕೃಷ್ಣ. ಸುಂದರ, ಸರ್ವಶಕ್ತ, ಮತ್ತು ಕೃಷ್ಣನ ಸರ್ವ ಸಮರ್ಥ ನೋಟದಿಂದ ಆಕರ್ಷಿತನಾದವನು ಭಾಗ್ಯಶಾಲಿ. ನಾನಾ ಬಗೆಯ ದಿವ್ಯವಾದಿಗಳಿದ್ದಾರೆ—ಅವರಲ್ಲಿ ಕೆಲವರು ವ್ಯಕ್ತಿಶೂನ್ಯ ಬ್ರಹ್ಮನ್ ದೃಶ್ಯದಿಂದ ಆಕರ್ಷಿತರು, ಮತ್ತೆ ಕೆಲವರು ಪರಮಾತ್ಮನ ಲಕ್ಷಣದಿಂದ ಆಕರ್ಷಿತರು ಇತ್ಯಾದಿ. ಆದರೆ ಪರಮ ದೇವೋತ್ತಮ ಪುರುಷನ ವ್ಯಕ್ತಿ ಲಕ್ಷಣದಿಂದ ಆಕರ್ಷಿತನು, ಮತ್ತು ಎಲ್ಲಕ್ಕಿಂತ ಮಿಗಿಲಾಗಿ, ಸ್ವಯಂ ಕೃಷ್ಣನಾದ ಪರಮ ದೇವೋತ್ತಮ ಪುರುಷನಿಂದ ಆಕರ್ಷಿತನು ಅತ್ಯಂತ ಪರಿಪೂರ್ಣ ದಿವ್ಯವಾದಿ. ಅರ್ಥಾತ್, ಪೂರ್ಣಪ್ರಜ್ಞೆಯಲ್ಲಿ ಕೃಷ್ಣನ ಭಕ್ತಿಯುತ ಸೇವೆಯು ಜ್ಞಾನದ ಅತ್ಯುನ್ನತ ಗುಹ್ಯತಮ ಭಾಗ, ಮತ್ತು ಇದು ಇಡೀ ಭಗವದ್ಗೀತೆಯ ಸಾರಾಂಶ. ಕರ್ಮಯೋಗಿಗಳು, ಪ್ರಾಯೋಗಿಕ ತತ್ವಜ್ಞಾನಿಗಳು ಸಿದ್ಧಿಯೋಗಿಗಳು ಮತ್ತು ಭಕ್ತರು ಎಲ್ಲರೂ ದಿವ್ಯವಾದಿಗಳೆಂದು ಕರೆದಿದೆ. ಆದರೆ ಶುದ್ಧನಾದವನು ಸರ್ವಶ್ರೇಷ್ಠನು. ಇಲ್ಲಿ ಉಪಯೋಗಿಸಿದ **ಮಾಶುಚಃ**, "ಭಯಪಡಬೇಡ, ಸಂಕೋಚಪಡಬೇಡ, ಚಿಂತಿಸಬೇಡ" ಎಂಬ ವಿಶಿಷ್ಟ ಪದಗಳು ಬಹು ಮಹತ್ವದವು. ಎಲ್ಲ ಬಗೆಯ ಧರ್ಮ ಪ್ರಕಾರಗಳನ್ನು ಹೇಗೆ ಪರಿತ್ಯಜಿಸಬೇಕು ಎಂದು ಒಬ್ಬನು ಗೊಂದಲಗೊಳ್ಳಬಹುದು, ಆದರೆ ಅಂಥ ಚಿಂತೆಯು ಅಪ್ರಯೋಜಕ.

**ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ ।**
**ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ ॥ ೬೭ ॥**

ಇದಮ್—ಇದು, ತೇ—ನಿನ್ನಿಂದ, ನ—ಎಂದೂ, ಅತಪಸ್ಕಾಯ—ತಪಸ್ಸು ಮಾಡದವನಿಗೆ, ನ—ಎಂದೂ, ಅಭಕ್ತಾಯ—ಅಭಕ್ತನಿಗೆ, ಕದಾಚನ—ಯಾವ ಕಾಲದಲ್ಲಿಯೂ, ನ—ಎಂದೂ, ಚ—ಕೂಡ, ಅಶುಶ್ರೂಷವೇ—ಭಕ್ತಿಯುತ ಸೇವಾ ನಿರತನಲ್ಲದವನಿಗೆ, ವಾಚ್ಯಮ್—ಹೇಳತಕ್ಕುದಲ್ಲ, ನ—ಎಂದೂ, ಚ—ಮತ್ತು, ಮಾಮ್—ನನ್ನಲ್ಲಿ, ಯಃ—ಯಾರೊಬ್ಬನು, ಅಭ್ಯಸೂಯತಿ—ಅಸೂಯೆಪಡುವವನು.

**ಈ ಗುಹ್ಯ ಜ್ಞಾನವು ಅತಪಸ್ಕನಿಗೆ, ಅಥವಾ ಅಭಕ್ತನಿಗೆ ಅಥವಾ ಭಕ್ತಿಯುತ ಸೇವಾ ನಿರತನಲ್ಲದವನಿಗೆ ಅಥವಾ ನನ್ನ ಬಗ್ಗೆ ಅಸೂಯೆ ಇರುವವನಿಗೆ ಎಂದೂ ವಿವರಿಸತಕ್ಕುದಲ್ಲ.**

**ಭಾವಾರ್ಥ :** ಧರ್ಮ ಪ್ರಕ್ರಿಯಾ ತಪಸ್ಸು ಆಚರಿಸದವರಿಗೆ, ಕೃಷ್ಣಪ್ರಜ್ಞೆಯಲ್ಲಿ ಎಂದೂ ಭಕ್ತಿಯುತ ಸೇವಾ ಪ್ರಯತ್ನ ಮಾಡದವರಿಗೆ, ಶುದ್ಧ ಭಕ್ತನ ಶುಶ್ರೂಷೆ ಮಾಡದವರಿಗೆ, ಮತ್ತು ವಿಶೇಷವಾಗಿ ಕೃಷ್ಣನು ಕೇವಲ ಐತಿಹಾಸಿಕ ವ್ಯಕ್ತಿಯೆಂದು ತಿಳಿಯುವವರಿಗೆ, ಅಥವಾ ಕೃಷ್ಣನ ಮಹಾತ್ಮ್ಯೆಯ ಬಗ್ಗೆ ಅಸೂಯೆಪಡುವವರಿಗೆ ಜ್ಞಾನದ ಈ ಅತ್ಯುನ್ನತ ಗುಹ್ಯತಮ ಭಾಗವನ್ನು ಹೇಳಕೂಡದು. ಆದರೆ ಕೃಷ್ಣದ್ವೇಷಿ ಅಸುರರು, ಬೇರೆ ರೀತಿಯಲ್ಲಿ ಕೃಷ್ಣಾರಾಧಕರು ಕೂಡ ಕೆಲವು ಸಲ, ವ್ಯಾಪಾರಕ್ಕಾಗಿ ಭಿನ್ನರೀತಿಯಲ್ಲಿ ಭಗವದ್ಗೀತೆಯನ್ನು ವಿವರಿಸುವ ವೃತ್ತಿಗಿಳಿಯುತ್ತಾರೆ. ಆದರೆ ವಾಸ್ತವಿಕವಾಗಿ ಕೃಷ್ಣನನ್ನು ಅರಿತುಕೊಳ್ಳಬಯಸುವ ಯಾವೊಬ್ಬನು ಭಗವದ್ಗೀತೆಯ ಅಂಥ ವ್ಯಾಖ್ಯಾನಗಳನ್ನು ಕೇಳಕೂಡದು. ವಾಸ್ತವಿಕವಾಗಿ ಇಂದ್ರಿಯಲೋಲುಪನಿಗೆ ಭಗವದ್ಗೀತೆಯ ಉದ್ದೇಶವು ಅರ್ಥವಾಗುವುದಿಲ್ಲ. ಒಬ್ಬನು ಇಂದ್ರಿಯಲೋಲುಪನಾಗಿರದಿದ್ದರೂ ವೇದ ಶಾಸ್ತ್ರಗಳಲ್ಲಿ ವಿಧಿಸಿದ ಕಟ್ಟುಪಾಡುಗಳನ್ನು ಸರಿಯಾಗಿ ಅನುಸರಿಸುತ್ತಿದ್ದರೂ ಅವನು ಭಕ್ತನಾಗಿರದಿದ್ದರೆ ಕೃಷ್ಣನನ್ನು ಅರಿತುಕೊಳ್ಳಲಾರನು. ಒಬ್ಬನು ತಾನು ಕೃಷ್ಣಭಕ್ತನೆಂದು ತೋರಿಕೊಳ್ಳುತ್ತಿದ್ದರೂ, ಕೃಷ್ಣಪ್ರಜ್ಞಾ ಚಟುವಟಿಕೆಗಳಲ್ಲಿ ನಿರತನಾಗಿರದಿದ್ದರೆ ಅವನು ಕೂಡ ಕೃಷ್ಣನನ್ನು ಅರಿತುಕೊಳ್ಳಲಾರನು. ಭಗವದ್ಗೀತೆಯಲ್ಲಿ ತಾನು ಪರಮನು ಮತ್ತು ತನಗಿಂತ ಅಧಿಕವಾದುದು ಅಥವಾ ತನಗೆ ಸಮಾನವಾದುದು ಯಾವುದೂ ಇಲ್ಲ ಎಂದು ಭಗವಂತನು ಹೇಳಿರುವುದರಿಂದ ಅನೇಕರು ಕೃಷ್ಣನನ್ನು ದ್ವೇಷಿಸುತ್ತಾರೆ. ಕೃಷ್ಣದ್ವೇಷಿಗಳು ಅನೇಕರಿದ್ದಾರೆ. ಅಂಥವರಿಗೆ ಭಗವದ್ಗೀತಯನ್ನು ಕುರಿತು ಹೇಳಬಾರದು, ಏಕೆಂದರೆ ಅವರು ಅದನ್ನು ಅರಿಯಲಾರರು. ಶ್ರದ್ಧಾಹೀನರು ಭಗವದ್ಗೀತೆಯನ್ನು ಮತ್ತು ಕೃಷ್ಣನನ್ನು ಅರಿತಕೊಳ್ಳುವ ಸಂಭವವಿಲ್ಲ. ಶುದ್ಧಭಕ್ತನ ಅಧಿಕಾರವಾಣಿಯಿಂದ ಕೃಷ್ಣನನ್ನು ಅರಿತುಕೊಳ್ಳದೆ, ಒಬ್ಬನು ಭಗವದ್ಗೀತೆಯನ್ನು ವ್ಯಾಖ್ಯಾನಿಸಲು ಪ್ರಯತ್ನಿಸಕೂಡದು.

**ಯ ಇದಂ ಪರಮಂ ಗುಹ್ಯಂ ಮದ್‌ಭಕ್ತೇಷ್ವಭಿಧಾಸ್ಯತಿ ।**
**ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥೬೮॥**

ಯಃ—ಯಾರು, ಇದಮ್—ಈ, ಪರಮಮ್—ಪರಮ, ಗುಹ್ಯಮ್—ಗುಹ್ಯರಹಸ್ಯವನ್ನು, ಮತ್—ನನ್ನ, ಭಕ್ತೇಷು—ಭಕ್ತರಲ್ಲಿ, ಅಭಿಧಾಸ್ಯತಿ—ವಿವರಿಸು

ತ್ತಾನೆ, ಭಕ್ತಿಮ್—ಭಕ್ತಿಯುತ ಸೇವೆಯನ್ನು, ಮಯಿ—ನನ್ನಲ್ಲಿ, ಪರಾಮ್—ಪರಮ, ಕೃತ್ವಾ—ಮಾಡಿ, ಮಾಮ್—ನನ್ನಲ್ಲಿಗೆ, ಏವ—ಖಂಡಿತವಾಗಿ ಏಷ್ಯತಿ—ಬರುತ್ತಾನೆ, ಅಸಂಶಯಃ—ಸಂಶಯವಿಲ್ಲ.

**ಈ ಪರಮ ರಹಸ್ಯವನ್ನು ಭಕ್ತರಿಗೆ ವಿವರಿಸುವವನಿಗೆ, ಶುದ್ಧ ಭಕ್ತಿಯುತ ಸೇವೆಯು ಖಂಡಿತ ಲಬ್ಧ ಮತ್ತು ಕೊನೆಗೆ ಅವನು ನನ್ನಲ್ಲಿಗೆ ಮರಳುತ್ತಾನೆ.**

**ಭಾವಾರ್ಥ** : ಸಾಮಾನ್ಯವಾಗಿ ಭಗವದ್ಗೀತೆಯು ಭಕ್ತರಲ್ಲಿ ಮಾತ್ರ ಚರ್ಚಿಸಲ್ಪಡಬೇಕೆಂದು ಹೇಳಿದೆ. ಏಕೆಂದರೆ, ಭಕ್ತರಲ್ಲದವರು ಕೃಷ್ಣನನ್ನಾಗಲಿ ಅಥವಾ ಭಗವದ್ಗೀತೆಯನ್ನಾಗಲಿ ಅರಿತುಕೊಳ್ಳುವುದಿಲ್ಲ. ಕೃಷ್ಣನಿರುವಂತೆ ಮತ್ತು ಯಥಾರೂಪ ಭಗವದ್ಗೀತೆಯನ್ನು ಅಂಗೀಕರಿಸದವರು ಭಗವದ್ಗೀತೆಯನ್ನು ಇಷ್ಟ ಬಂದಂತೆ ವಿವರಿಸಲು ಯತ್ನಿಸಿ ದೋಷಿಗಳಾಗಕೂಡದು. ಕೃಷ್ಣನನ್ನು ಪರಮ ದೇವೋತ್ತಮ ಪುರುಷನೆಂದು ಅಂಗೀಕರಿಸಲು ಸಿದ್ಧರಾದವರಿಗೆ ಮಾತ್ರ ಭಗವದ್ಗೀತೆಯು ವಿವರಿಸಲ್ಪಡಬೇಕು. ಅದು ಭಕ್ತರಿಗೆ ಮಾತ್ರ ವಿಷಯ ವಸ್ತು. ತಾತ್ವಿಕ ಊಹಾಪೋಹಕರಿಗೆ ಅಲ್ಲ. ಆದರೆ ಭಗವದ್ಗೀತೆಯನ್ನು ಯಥಾರೂಪ ಮಂಡಿಸಲು ಪ್ರಾಮಾಣಿಕವಾಗಿ ಪ್ರಯತ್ನ ಮಾಡುವವನು ಭಕ್ತಿಯುತ ಚಟುವಟಿಕೆಗಳಲ್ಲಿ ಪ್ರಗತಿ ಹೊಂದುತ್ತಾನೆ ಮತ್ತು ಶುದ್ಧ ಭಕ್ತಿ ಜೀವನದ ಸ್ಥಿತಿಯನ್ನು ತಲುಪುತ್ತಾನೆ. ಅಂಥ ಶುದ್ಧ ಭಕ್ತಿಯ ಫಲವಾಗಿ ಅವನು ದೇವತ್ವಕ್ಕೆ ಮರಳಿ ಧಾಮಕ್ಕೆ ಹಿಂದಿರುಗುವುದು ಸುನಿಶ್ಚಿತ.

**ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।**
**ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ॥ ೬೯ ॥**

ನ—ಎಂದೂ, ಚ—ಮತ್ತು, ತಸ್ಮಾತ್—ಅವನಿಗಿಂತ, ಮನುಷ್ಯೇಷು—ಮನುಷ್ಯರಲ್ಲಿ, ಕಶ್ಚಿತ್—ಯಾರೊಬ್ಬನು, ಮೇ—ನನಗೆ, ಪ್ರಿಯಕೃತ್-ತಮಃ—ಹೆಚ್ಚು ಪ್ರಿಯನು, ಭವಿತಾ—ಆಗುವುದು, ನ—ಎಂದೂ ಇಲ್ಲ, ಚ—ಮತ್ತು, ಮೇ—ನನಗೆ, ತಸ್ಮಾತ್—ಅವನಿಗಿಂತ, ಅನ್ಯಃ—ಬೇರೊಬ್ಬನು, ಪ್ರಿಯ-ತರಃ—ಪ್ರಿಯತರನು, ಭುವಿ—ಈ ಜಗತ್ತಿನಲ್ಲಿ.

**ಅವನಿಗಿಂತ ನನಗೆ ಹೆಚ್ಚು ಪ್ರಿಯನಾದ ಸೇವಕನು ಈ ಜಗತ್ತಿನಲ್ಲಿ ಯಾರೂ ಇಲ್ಲ ಅಥವಾ ಹೆಚ್ಚು ಪ್ರಿಯನಾದವನೊಬ್ಬನು ಇರುವುದಿಲ್ಲ.**

**ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ ।**
**ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ ॥ ೭೦ ॥**

ಅಧ್ಯೇಷ್ಯತೇ—ಅಧ್ಯಯನ ಮಾಡುತ್ತಾನೆ, ಚ—ಕೂಡ, ಯಃ—ಯಾರು, ಇಮಮ್—ಈ, ಧರ್ಮ್ಯಮ್—ಪವಿತ್ರ, ಸಂವಾದಮ್—ಸಂವಾದವನ್ನು, ಆವಯೋಃ—ನಮ್ಮಿಬ್ಬರ, ಜ್ಞಾನ—ಜ್ಞಾನದ, ಯಜ್ಞೇನ—ಯಜ್ಞದಿಂದ, ತೇನ—ಅವನಿಂದ,

ಅಹಮ್—ನಾನು, ಇಷ್ಟಃ—ಪೂಜಿತನು, ಸ್ಯಾಮ್—ಆಗುತ್ತೇನೆ, ಇತಿ—ಹೀಗೆ, ಮೇ—ನನ್ನ, ಮತಿಃ—ಅಭಿಪ್ರಾಯ.

**ಮತ್ತು ನಮ್ಮಿಬ್ಬರ ಈ ಪವಿತ್ರ ಸಂವಾದವನ್ನು ಅಧ್ಯಯನ ಮಾಡುವವನು ಬುದ್ಧಿಯುಕ್ತವಾಗಿ ನನ್ನನ್ನು ಪೂಜಿಸುತ್ತಾನೆ ಎಂದು ನಾನು ಘೋಷಿಸುತ್ತೇನೆ.**

**ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ ।**
**ಸೋಽಪಿ ಮುಕ್ತಃ ಶುಭಾಁಲ್ಲೋಕಾನ್ ಪ್ರಾಪ್ನುಯಾತ್ ಪುಣ್ಯಕರ್ಮ-**
**ಣಾಮ್॥ ॥ ೭೧ ॥**

ಶ್ರದ್ಧಾ-ವಾನ್—ಶ್ರದ್ಧಾವಂತನು, ಅನಸೂಯಃ—ಅಸೂಯಾರಹಿತನು, ಚ—ಮತ್ತು, ಶೃಣುಯಾತ್—ಅವಶ್ಯ ಕೇಳುತ್ತಾನೆ, ಅಪಿ—ಖಂಡಿತವಾಗಿ, ಯಃ—ಯಾವ, ನರಃ—ಮಾನವನು, ಸಃ—ಅವನು, ಅಪಿ—ಕೂಡ, ಮುಕ್ತಃ—ಮುಕ್ತನಾಗಿ, ಶುಭಾನ್—ಮಂಗಲ, ಲೋಕಾನ್—ಲೋಕಗಳನ್ನು, ಪ್ರಾಪ್ನುಯಾತ್—ಹೊಂದುತ್ತಾನೆ, ಪುಣ್ಯ-ಕರ್ಮಣಾಮ್—ಪುಣ್ಯವಂತರ.

**ಮತ್ತು, ಶ್ರದ್ಧೆಯಿಂದ ಮತ್ತು ಅಸೂಯೆ ಇಲ್ಲದೆ ಶ್ರವಣ ಮಾಡುವವನು ಪಾಪ ಪ್ರತಿಕ್ರಿಯೆಗಳಿಂದ ಮುಕ್ತನಾಗುತ್ತಾನೆ ಮತ್ತು ಪುಣ್ಯವಂತರು ವಾಸಿಸುವ ಮಂಗಲ ಲೋಕಗಳನ್ನು ಹೊಂದುತ್ತಾನೆ.**

**ಭಾವಾರ್ಥ :** ಈ ಅಧ್ಯಾಯದ ಅರವತ್ತೇಳನೆಯ ಶ್ಲೋಕದಲ್ಲಿ ಗೀತೆಯನ್ನು ಭಗವದ್ವೇಷಿಗಳಿಗೆ ಹೇಳಕೂಡದೆಂದು ಭಗವಂತನು ಸ್ಪಷ್ಟವಾಗಿ ನಿಷೇಧಿಸಿದ್ದಾನೆ. ಅರ್ಥಾತ್, ಭಗವದ್ಗೀತೆಯು ಭಕ್ತರಿಗೆ ಮಾತ್ರ. ಆದರೆ ಕೆಲವು ಸಲ ಭಗವದ್ಭಕ್ತನು ಬಹಿರಂಗವಾಗಿ ಉಪದೇಶಿಸುವಂತಾಗುವುದು, ಮತ್ತು ಆ ಶ್ರೋತೃಗಳಲ್ಲಿ ಎಲ್ಲರೂ ಭಕ್ತರೆಂದು ನಿರೀಕ್ಷಿಸಲಾಗದು. ಅಂಥವರು ಬಹಿರಂಗ ತರಗತಿಗಳನ್ನು ಏಕೆ ನಡೆಸುತ್ತಾರೆ ? ಪ್ರತಿಯೊಬ್ಬನೂ ಭಕ್ತನಲ್ಲದಿದ್ದರೂ, ಕೃಷ್ಣದ್ವೇಷರಹಿತರು ಅನೇಕರಿದ್ದಾರೆ. ಅವರು ಪರಮ ದೇವೋತ್ತಮ ಪುರುಷನೆಂದು ಅವನಲ್ಲಿ ಶ್ರದ್ಧಾನ್ವಿತರು. ಅಂಥ ವ್ಯಕ್ತಿಗಳು ಸದ್ಭಕ್ತನಿಂದ ಭಗವಂತನನ್ನು ಕುರಿತು ಶ್ರವಣ ಮಾಡಿದರೆ, ಪರಿಣಾಮವಾಗಿ ಅವರು ತಕ್ಷಣ ಸಕಲ ಪಾಪ ಪ್ರತಿಕ್ರಿಯೆಗಳಿಂದ ಮುಕ್ತರಾಗಿ ಆ ಬಳಿಕ ಎಲ್ಲ ಪುಣ್ಯವಂತರು ಇರುವ ಗ್ರಹವ್ಯೂಹಗಳನ್ನು ಸೇರುತ್ತಾರೆ. ಆದ್ದರಿಂದ ಭಗವದ್ಗೀತಾ ಶ್ರವಣ ಮಾತ್ರದಿಂದ ಶುದ್ಧ ಭಕ್ತನಾಗಲು ಯತ್ನಿಸದವನು ಕೂಡ ಪುಣ್ಯಕರ್ಮಫಲ ಹೊಂದುತ್ತಾನೆ. ಹೀಗೆ ಶುದ್ಧ ಭಗವದ್ಭಕ್ತನು ಸಕಲ ಪಾಪ ಪ್ರತಿಕ್ರಿಯೆಗಳಿಂದ ಮುಕ್ತನಾಗಲು ಮತ್ತು ಭಗವದ್ಭಕ್ತನಾಗಲು ಪ್ರತಿಯೊಬ್ಬನಿಗೂ ಅವಕಾಶ ನೀಡುತ್ತಾನೆ.

ಸಾಮಾನ್ಯವಾಗಿ ಪಾಪ ಪ್ರತಿಕ್ರಿಯಾ ಮುಕ್ತರು, ಪುಣ್ಯವಂತರು, ಬಹು ಸುಲಭವಾಗಿ ಕೃಷ್ಣಪ್ರಜ್ಞೆಗಳಾಗುತ್ತಾರೆ. **ಪುಣ್ಯ-ಕರ್ಮಣಾಮ್** ಪದವು ಇಲ್ಲಿ ಬಹಳ ಮಹತ್ವದ್ದು. ಅದು, ವೇದ ಸಾಹಿತ್ಯದಲ್ಲಿ ಪ್ರಸ್ತಾಪಿತ ಅಶ್ವಮೇಧಯಜ್ಞದಂಥ ಮಹಾ ಯಜ್ಞಾಚರಣೆಯನ್ನು ಸೂಚಿಸುತ್ತದೆ. ಭಕ್ತಿಯುತ ಸೇವಾಚರಣೆಯಲ್ಲಿ ಪುಣ್ಯವಂತರಾದವರು, ಆದರೆ

ಶುದ್ಧರಾಗಿರದವರು, ಧ್ರುವ ಮಹಾರಾಜನು ಆಳುವ, ಧ್ರುವಲೋಕವನ್ನು ಸೇರಬಹುದು. ಧ್ರುವ ಮಹಾರಾಜನು ಮಹಾಭಗವದ್ಭಕ್ತನು, ಮತ್ತು ಅವನು ಧ್ರುವತಾರೆ ಯೆಂಬ ವಿಶೇಷ ಗ್ರಹವನ್ನು ಹೊಂದಿದ್ದಾನೆ.

**ಕಚ್ಚಿದೇತಚ್ಛ್ರುತಂ ಪಾರ್ಥ ತ್ವಯೈಕಾಗ್ರೇಣ ಚೇತಸಾ ।**
**ಕಚ್ಚಿದಜ್ಞಾನಸಮ್ಮೋಹಃ ಪ್ರಣಷ್ಟಸ್ತೇ ಧನಂಜಯ ॥ ೭೨ ॥**

ಕಚ್ಚಿತ್—ಏನು, ಏತತ್—ಇದು, ಶ್ರುತಮ್—ಶ್ರವಣ ಮಾಡಲ್ಪಟ್ಟಿದೆಯೇ ? ಪಾರ್ಥ—ಹೇ ಪೃಥಾ ಪುತ್ರನೇ, ತ್ವಯಾ—ನಿನ್ನಿಂದ, ಏಕ-ಅಗ್ರೇಣ—ಪೂರ್ಣಗಮನ ದಿಂದ, ಚೇತಸಾ—ಮನಸ್ಸಿನಿಂದ, ಕಚ್ಚಿತ್—ಏನು, ಅಜ್ಞಾನ—ಅಜ್ಞಾನದ, ಸಮ್ಮೋಹಃ—ಸಮ್ಮೋಹ, ಪ್ರಣಷ್ಟಃ—ನಷ್ಟವಾಯಿತೇ, ತೇ—ನಿನ್ನ, ಧನಂಜಯ—ಹೇ ಧನಂಜಯನೇ (ಅರ್ಜುನ).

**ಹೇ ಪೃಥಾ ಪುತ್ರನೇ, ಹೇ ಧನಂಜಯನೇ, ನೀನು ಇದನ್ನು ಚಿತ್ತವಿಟ್ಟು ಕೇಳಿದೆಯಾ ? ಈಗ ನಿನ್ನ ಅಜ್ಞಾನ ಮೋಹಗಳು ದೂರವಾದವೋ ?**

**ಭಾವಾರ್ಥ :** ಭಗವಂತನು ಅರ್ಜುನನ ಗುರುವಾಗಿ ವರ್ತಿಸುತ್ತಿದ್ದನು. ಆದ್ದರಿಂದ ಇಡೀ ಭಗವದ್ಗೀತೆಯನ್ನು ಸರಿಯಾದ ರೀತಿಯಲ್ಲಿ ಅರ್ಜುನನು ಅರಿತುಕೊಂಡನೇ ಎಂಬುದನ್ನು ಕೇಳುವುದು ಅವನ ಕರ್ತವ್ಯವಾಗಿತ್ತು. ಇಲ್ಲದಿದ್ದರೆ, ಅರ್ಥವಾಗದ ಅಂಶವನ್ನು, ಅಥವಾ ಅಗತ್ಯವಾದರೆ ಇಡೀ ಭಗವದ್ಗೀತೆಯನ್ನು ಮತ್ತೆ ವಿವರಿಸಲು ಕೃಷ್ಣನು ಸಿದ್ಧನಿದ್ದನು. ವಾಸ್ತವಿಕವಾಗಿ, ಕೃಷ್ಣನಂಥ ಸದ್ಗುರುವಿನ ಅಥವಾ ಅವನ ಪ್ರತಿನಿಧಿಯಿಂದ ಭಗವದ್ಗೀತಾ ಶ್ರವಣ ಮಾಡುವವನು ತನ್ನ ಎಲ್ಲ ಅಜ್ಞಾನ ದೂರವಾದುದನ್ನು ಕಂಡುಕೊಳ್ಳುತ್ತಾನೆ. ಭಗವದ್ಗೀತೆಯು ಯಾವೊಬ್ಬ ಕವಿಯಿಂದಲೋ ಅಥವಾ ಕಾದಂಬರಿಕಾರನಿಂದಲೋ ರಚಿತವಾದ ಸಾಮಾನ್ಯ ಗ್ರಂಥವಲ್ಲ; ಅದು ಪರಮ ದೇವೋತ್ತಮ ಪುರುಷನಿಂದ ಪ್ರೋಕ್ತ. ಈ ಉಪದೇಶಗಳನ್ನು ಕೃಷ್ಣನಿಂದ ಅಥವಾ ಅವನ ನಿಜ ಪ್ರತಿನಿಧಿಯಿಂದ ಶ್ರವಣ ಮಾಡುವ ಭಾಗ್ಯಶಾಲಿಯು ಮುಕ್ತನಾಗುವುದು ಮತ್ತು ಅಜ್ಞಾನಾಂಧಕಾರವನ್ನು ದಾಟುವುದು ಖಂಡಿತ.

**ಅರ್ಜುನ ಉವಾಚ**

**ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ ।**
**ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥ ೭೩ ॥**

ಅರ್ಜುನ ಉವಾಚ—ಅರ್ಜುನನು ನುಡಿದನು, ನಷ್ಟಃ—ದೂರವಾಯಿತು, ಮೋಹಃ—ಮೋಹವು, ಸ್ಮೃತಿಃ—ಸ್ಮೃತಿ, ಲಬ್ಧಾ—ಮರಳಿ ಪಡೆದನು, ತ್ವತ್-ಪ್ರಸಾದಾತ್—ನಿನ್ನ ಅನುಗ್ರಹದಿಂದ, ಮಯಾ—ನನಗೆ, ಅಚ್ಯುತ—ಹೇ ಚ್ಯುತಿರಹಿತ ಕೃಷ್ಣನೇ, ಸ್ಥಿತಃ—ಸ್ಥಿತನು, ಅಸ್ಮಿ—ಆಗಿದ್ದೇನೆ, ಗತ—ರಹಿತನು, ಸಂದೇಹಃ—ಸಕಲ ಸಂದೇಹ, ಕರಿಷ್ಯೇ—ನಡೆಸುತ್ತೇನೆ, ವಚನಮ್—ಆದೇಶವನ್ನು, ತವ—ನಿನ್ನ.

**ಅರ್ಜುನನು ನುಡಿದನು : ನನ್ನ ಪರಮ ಪ್ರಿಯ ಕೃಷ್ಣನೇ, ಹೇ ಅಚ್ಯುತ, ಈಗ ನನ್ನ ಮೋಹವು ತೊಲಗಿದೆ. ನಿನ್ನ ಅನುಗ್ರಹದಿಂದ ಮತ್ತೆ ನನಗೆ ಸ್ಮೃತಿ ಮರಳಿದೆ. ಈಗ ನಾನು ದೃಢನು ಮತ್ತು ಸಂದೇಹ ಮುಕ್ತನು, ಮತ್ತು ನಿನ್ನ ಆಜ್ಞಾನುಸಾರ ನಡೆಯಲು ಸಿದ್ಧ.**

**ಭಾವಾರ್ಥ :** ಅರ್ಜುನನಿಂದ ಪ್ರತಿನಿಧಿತವಾದ ಜೀವಿಯ ಸ್ವರೂಪ ಸ್ಥಿತಿಯೆಂದರೆ, ಅವನು ಪರಮ ಪ್ರಭುವಿನ ಆದೇಶಾನುಸಾರ ವರ್ತಿಸಬೇಕು. ಅವನು ಆತ್ಮ-ಶಿಸ್ತಿಗೆ ಉದ್ದಿಷ್ಟ. ಪರಮಪ್ರಭುವಿನ ನಿತ್ಯದಾಸನಾಗಿರುವುದು ಜೀವಿಯ ವಾಸ್ತವಿಕ ಸ್ಥಿತಿ ಎಂದು ಶ್ರೀಕೃಷ್ಣ ಚೈತನ್ಯ ಮಹಾಪ್ರಭುಗಳು ಹೇಳುತ್ತಾರೆ ಈ ತತ್ವವನ್ನು ಮರೆತು. ಜೀವಿಯು ಭೌತಿಕ ಪ್ರಕೃತಿಯಿಂದ ಬದ್ಧನಾಗುತ್ತಾನೆ, ಆದರೆ ಪರಮಪ್ರಭುವಿನ ಸೇವೆ ಯಲ್ಲಿ ಅವನು ಮುಕ್ತ ಭಗವದ್ ದಾಸನಾಗುತ್ತಾನೆ. ದಾಸನಾಗುವುದು ಜೀವಿಯ ಸ್ವರೂಪ ಸ್ಥಿತಿ; ಅವನು ಮಾಯೆಯನ್ನು ಅಥವಾ ಪರಮ ಪ್ರಭುವನ್ನು ಸೇವಿಸಬೇಕು. ಪರಮ ಪ್ರಭುವಿನ ಸೇವೆ ಮಾಡಿದರೆ ಅವನು ತನ್ನ ಸ್ವಸ್ಥಿತಿಯಲ್ಲಿ ಇರುತ್ತಾನೆ. ಆದರೆ ಬಹಿರಂಗ ಮಾಯಾ ಶಕ್ತಿಯ ಸೇವೆ ಮಾಡಲು ಇಚ್ಛಿಸಿದರೆ, ಆಗ ಖಂಡಿತ ಬಂಧನಕ್ಕೆ ಒಳಗಾಗು ತ್ತಾನೆ. ಮಾಯೆಯಲ್ಲಿ ಜೀವಿಯು ಭೌತಿಕ ಜಗತ್ತಿನಲ್ಲಿ ಸೇವೆ ಮಾಡುತ್ತಾನೆ. ಅವನು ತನ್ನ ಕಾಮ ಮತ್ತು ಇಚ್ಛೆಗಳಿಂದ ಬದ್ಧನು, ಆದರೂ ತಾನು ಜಗತ್ತಿನ ಸ್ವಾಮಿಯೆಂದು ಭಾವಿಸುತ್ತಾನೆ. ಇದೇ ಮಾಯೆ. ಒಬ್ಬನು ಮುಕ್ತನಾದಾಗ, ಅವನ ಮೋಹವು ದೂರವಾಗುತ್ತದೆ. ಮತ್ತು ಅವನು ಪರಮನ ಇಚ್ಛಾನುಸಾರವರ್ತಿಸಲು ಸ್ವ ಇಚ್ಛೆಯಿಂದಲೇ ಪರಮನಿಗೆ ಶರಣಾಗತನಾಗುತ್ತಾನೆ. ತಾನೇ ಭಗವಂತನೆಂಬ ಜೀವಿಯ ವಿಚಾರವು ಜೀವಿ ಯನ್ನು ಬಲೆಗೆ ಹಾಕುವ ಮಾಯೆಯ ಕೊನೆಯ ಪಾಶ. ತಾನು ಆ ಮುಂದೆ ಬದ್ಧಾತ್ಮನಲ್ಲ, ಆದರೆ ಭಗವಂತನು ಎಂದು ಜೀವಿಯು ಭಾವಿಸುತ್ತಾನೆ. ಅವನು ಅದೆಷ್ಟು ಮಂದಮತಿ ಎಂದರೆ, ತಾನು ಭಗವಂತನಾಗಿದ್ದರೆ ತನಗೆ ಸಂದೇಹವೇಕೆ ಬರುತ್ತಿತ್ತು ಎಂದು ಯೋಚಿಸು ವುದಿಲ್ಲ. ಅದನ್ನು ಅವನು ಗಮನಿಸುವುದಿಲ್ಲ. ಆದ್ದರಿಂದ ಅದೇ ಮೋಹದ ಕೊನೆಯ ಬಲೆ. ವಾಸ್ತವಿಕವಾಗಿ ಮಾಯಾ ಶಕ್ತಿಯಿಂದ ಮುಕ್ತನಾಗುವುದೆಂದರೆ ಪರಮ ದೇವೋ ತ್ತಮ ಪುರುಷ, ಕೃಷ್ಣನನ್ನು ಅರಿತುಕೊಂಡು ಅವನ ಆಜ್ಞಾನುಸಾರ ವರ್ತಿಸುವುದು. **ಮೋಹ** ಪದವು ಈ ಶ್ಲೋಕದಲ್ಲಿ ಬಹು ಮಹತ್ವದ್ದು. **ಮೋಹ** ಎಂಬುದು ಜ್ಞಾನಕ್ಕೆ ವಿರುದ್ಧವಾದುದು. ವಾಸ್ತವಿಕವಾಗಿ, ಪ್ರತಿಯೊಬ್ಬ ಜೀವಿಯು ಭಗವಂತನ ನಿತ್ಯದಾಸನು ಎಂಬ ಅರಿವು ನಿಜಜ್ಞಾನ. ಆದರೆ ತಾನು ಆ ಸ್ಥಿತಿಯಲ್ಲಿರುವುದನ್ನು ಯೋಚಿಸದೆ, ಜೀವಿಯು ಭೌತಿಕ ಪ್ರಕೃತಿಯ ಮೇಲೆ ಒಡೆತನ ಮಾಡಬಯಸುವುದರಿಂದ, ತಾನು ದಾಸ ನಲ್ಲ, ಭೌತಿಕ ಜಗತ್ತಿನ ಒಡೆಯನು ಎಂದು ಭಾವಿಸುತ್ತಾನೆ. ಅದು ಅವನ ಮೋಹ. ಈ ಮೋಹವನ್ನು ಭಗವದನುಗ್ರಹದಿಂದ ಅಥವಾ ಶುದ್ಧ ಭಕ್ತನ ಅನುಗ್ರಹದಿಂದ ಮಾತ್ರ ಗೆಲ್ಲಬಹುದು ಆ ಮೋಹವು ತೊಲಗಿದಾಗ, ಒಬ್ಬನು ಕೃಷ್ಣಪ್ರಜ್ಞೆಯಲ್ಲಿ ಕಾರ್ಯ ಮಾಡಲು ಒಪ್ಪಿಕೊಳ್ಳುತ್ತಾನೆ.

ಕೃಷ್ಣಪ್ರಜ್ಞೆಯೆಂದರೆ ಕೃಷ್ಣನ ಆದೇಶಾನುಸಾರ ವರ್ತಿಸುವುದು. ಜಡದ ಬಹಿರಂಗ ಶಕ್ತಿಯಿಂದ ಮೋಹಿತನಾದ ಬದ್ಧಾತ್ಮನಿಗೆ, ಪರಮಪ್ರಭು ಜ್ಞಾನಪೂರ್ಣನು ಮತ್ತು ಪ್ರತಿಯೊಂದರ ಒಡೆಯನಾದ ಸ್ವಾಮಿ ಎಂಬುದು ತಿಳಿದಿಲ್ಲ. ಭಗವಂತನು ಇಷ್ಟಬಂದದ್ದನ್ನು ತನ್ನ ಭಕ್ತನಿಗೆ ನೀಡಬಲ್ಲನು ; ಅವನು ಪ್ರತಿಯೊಬ್ಬನ ಸ್ನೇಹಿತನು ಮತ್ತು ಅವನು ತನ್ನ ಭಕ್ತನಲ್ಲಿ ವಿಶೇಷ ಮಮತೆಯುಳ್ಳವನು. ಅವನು ಈ ಭೌತಿಕ ಪ್ರಕೃತಿಯ ಮತ್ತು ಸಕಲ ಜೀವಿಗಳ ನಿಯಾಮಕನು. ಅವನು ಅವ್ಯಯವಾದ ಕಾಲದ ನಿಯಂತ್ರಕನೂ ಕೂಡ, ಅವನು ಸಕಲೈಶ್ವರ್ಯ ಮತ್ತು ಸಕಲಶಕ್ತಿಪೂರ್ಣನು. ಪರಮ ದೇವೋತ್ತಮ ಪುರುಷನು ಭಕ್ತನಿಗೆ ತನ್ನನ್ನೇ ನೀಡಬಲ್ಲನು. ಅವನನ್ನು ತಿಳಿಯದವನು ಮಾಯಾ ಪ್ರಭಾವಾಧೀನನು; ಅವನು ಭಕ್ತನಾಗುವುದಿಲ್ಲ, ಮಾಯಾದಾಸನು. ಆದರೆ ಅರ್ಜುನನು ಪರಮ ದೇವೋತ್ತಮ ಪುರುಷನಿಂದ ಭಗವದ್ಗೀತಾ ಶ್ರವಣ ತರುವಾಯ, ಸಕಲ ಮೋಹ ಮುಕ್ತನಾದನು. ಕೃಷ್ಣನು ತನ್ನ ಸಖನಷ್ಟೇ ಅಲ್ಲ ಪರಮ ದೇವೋತ್ತಮ ಪುರುಷನೂ ಆಗಿದ್ದಾನೆ ಎಂಬುದನ್ನು ತಿಳಿದುಕೊಳ್ಳಬಲ್ಲವನಾದನು ಮತ್ತು ಕೃಷ್ಣನನ್ನು ಯಥಾವತ್ತಾಗಿ ಅರಿತುಕೊಂಡನು. ಆದ್ದರಿಂದ ಭಗವದ್ಗೀತೆಯನ್ನು ಅಧ್ಯಯನ ಮಾಡುವುದೆಂದರೆ ಯಥಾವತ್ತಾಗಿ ಕೃಷ್ಣನನ್ನು ಅರಿತುಕೊಳ್ಳುವುದು. ಒಬ್ಬನು ಪೂರ್ಣಜ್ಞಾನದಲ್ಲಿದ್ದಾಗ, ಅವನು ಸ್ವಾಭಾವಿಕವಾಗಿ ಕೃಷ್ಣನಿಗೆ ಶರಣಾಗುತ್ತಾನೆ. ಅನವಶ್ಯಕ ಜನಸಂಖ್ಯಾವೃದ್ಧಿಯನ್ನು ಕುಗ್ಗಿಸುವುದು ಕೃಷ್ಣನ ಯೋಜನೆಯಾಗಿತ್ತು ಎಂಬುದನ್ನು ಅರ್ಜುನನು ಅರಿತುಕೊಂಡಾಗ ಅವನು ಕೃಷ್ಣನ ಇಚ್ಛೆಯಂತೆ ಯುದ್ಧಮಾಡಲು ಸಿದ್ಧನಾದನು ಮತ್ತು ಪರಮ ದೇವೋತ್ತಮ ಪುರುಷನ ಆಜ್ಞಾನುಸಾರ ಯುದ್ಧಮಾಡಲು ಅವನು ತನ್ನ ಬಿಲ್ಲು ಬಾಣ ಶಸ್ತ್ರಾಸ್ತ್ರಗಳನ್ನು ಮತ್ತೆ ಎತ್ತಿಕೊಂಡನು.

**ಸಂಜಯ ಉವಾಚ**

**ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ ।**
**ಸಂವಾದಮಿಮಮಶ್ರೌಷಮದ್ಭುತಂ ರೋಮಹರ್ಷಣಮ್ ॥೭೪॥**

ಸಂಜಯ ಉವಾಚ—ಸಂಜಯನು ನುಡಿದನು, ಇತಿ—ಹೀಗೆ, ಅಹಮ್—ನಾನು, ವಾಸುದೇವಸ್ಯ—ಕೃಷ್ಣನ, ಪಾರ್ಥಸ್ಯ—ಮತ್ತು ಅರ್ಜುನನ, ಚ—ಕೂಡ, ಮಹಾ-ಆತ್ಮನಃ—ಮಹಾತ್ಮನ, ಸಂವಾದಮ್—ಸಂವಾದವನ್ನು, ಇದಮ್—ಈ ಅಶ್ರೌಷಮ್—ಕೇಳಿದ್ದೇನೆ, ಅದ್ಭುತಮ್—ಅದ್ಭುತವಾದ, ರೋಮ-ಹರ್ಷಣಮ್ ರೋಮಾಂಚಕವಾದ.

**ಸಂಜಯನು ನುಡಿದನು : ಹೀಗೆ ನಾನು ಮಹಾತ್ಮರಾದ ಕೃಷ್ಣಾರ್ಜುನರ ಸಂವಾದವನ್ನು ಆಲಿಸಿದ್ದೇನೆ. ಆ ಸಂದೇಶವು ಅದೆಷ್ಟು ಅದ್ಭುತವೆಂದರೆ ನನ್ನ ರೋಮನವಿರೇಳುತ್ತಿದೆ.**

**ಭಾವಾರ್ಥ :** ಭಗವದ್ಗೀತಾರಂಭದಲ್ಲಿ ಧೃತರಾಷ್ಟ್ರನು ತನ್ನ ಸಚಿವ ಸಂಜಯನನ್ನು "ಕುರುಕ್ಷೇತ್ರ ರಣಾಂಗಣದಲ್ಲಿ ಏನು ನಡೆಯುತ್ತಿದೆ ?" ಎಂದು ಪ್ರಶ್ನಿಸಿದನು. ಇಡೀ

ಅಧ್ಯಯನವು ಅವನ ಗುರು ವ್ಯಾಸಾನುಗ್ರಹದಿಂದ ಸಂಜಯನ ಹೃದಯಕ್ಕೆ ಸಂಬಂಧಿಸಿದ್ದಾಗಿತ್ತು. ಹೀಗೆ ಅವನು ರಣರಂಗದ ವಿಷಯವನ್ನು ವಿವರಿಸಿದನು, ಸಂವಾದವು ಅದ್ಭುತವಾಗಿತ್ತು, ಏಕೆಂದರೆ ಇಬ್ಬರು ಮಹಾತ್ಮರ ನಡುವೆ ಅಂಥ ಮಹತ್ವದ ಸಂವಾದ ಹಿಂದೆ ಎಂದೂ ನಡೆದಿಲ್ಲ, ಮುಂದೆ ಎಂದೂ ನಡೆಯುವುದಿಲ್ಲ. ಅದು ಅದ್ಭುತವೇಕೆಂದರೆ ಪರಮ ದೇವೋತ್ತಮ ಪುರುಷನು ತನ್ನನ್ನು ಮತ್ತು ತನ್ನ ಶಕ್ತಿಗಳನ್ನು ಜೀವಿಯಾದ ಮಹಾ ಭಗವದ್ಭಕ್ತ ಅರ್ಜುನನಿಗೆ ಹೇಳುತ್ತಿದ್ದನು. ಕೃಷ್ಣನನ್ನರಿಯಲು ನಾವು ಅರ್ಜುನನನ್ನು ಅನುಸರಿಸಿದರೆ ನಮ್ಮ ಜೀವನವು ಆಗ ಸುಖ ಮತ್ತು ಯಶಸ್ವಿ. ಸಂಜಯನಿಗೆ ಇದರ ಸಾಕ್ಷಾತ್ಕಾರವಿತ್ತು, ಮತ್ತು ಅದನ್ನು ಅವನು ಅರಿತುಕೊಳ್ಳಲಾರಂಭಿಸಿದಂತೆ, ಅವನು ಆ ಸಂವಾದವನ್ನು ಧೃತರಾಷ್ಟ್ರನಿಗೆ ತಿಳಿಸಿದನು. ಕೃಷ್ಣಾರ್ಜುನರಿದ್ದಲ್ಲಿ ವಿಜಯ ಎಂಬುದು ಈಗ ಸಿದ್ಧಾಂತ.

**ವ್ಯಾಸಪ್ರಸಾದಾಚ್ಛ್ರುತವಾನೇತದ್ ಗುಹ್ಯಮಹಂ ಪರಮ್ ।**
**ಯೋಗಂ ಯೋಗೇಶ್ವರಾತ್ಕೃಷ್ಣಾತ್ಸಾಕ್ಷಾತ್ಕಥಯತಃ ಸ್ವಯಮ್ ॥೭೫॥**

ವ್ಯಾಸ-ಪ್ರಸಾದಾತ್—ವ್ಯಾಸಾನುಗ್ರಹದಿಂದ, ಶ್ರುತವಾನ್—ಕೇಳಿದೆನು, ಏತತ್—ಈ, ಗುಹ್ಯಮ್—ಗುಹ್ಯತಮ, ಅಹಮ್—ನಾನು, ಪರಮ್—ಪರಮವಾದ, ಯೋಗಮ್—ಯೋಗವನ್ನು, ಯೋಗ-ಈಶ್ವರಾತ್—ಸರ್ವಯೋಗ ಈಶ್ವರನಿಂದ, ಕೃಷ್ಣಾತ್—ಕೃಷ್ಣನಿಂದ, ಸಾಕ್ಷಾತ್—ಸಾಕ್ಷಾತ್ತಾಗಿ, ಕಥಯತಃ—ಹೇಳುತ್ತಿರುವುದನ್ನು, ಸ್ವಯಮ್—ಸ್ವತಃ.

**ವ್ಯಾಸಾನುಗ್ರಹದಿಂದ, ಈ ಅತ್ಯಂತ ಗುಹ್ಯತಮವಾದ ಸಂವಾದವನ್ನು ಅರ್ಜುನನಿಗೆ ಹೇಳುತ್ತಿದ್ದ ಸರ್ವ ಯೋಗೇಶ್ವರ ಸ್ವಯಂ ಕೃಷ್ಣನಿಂದ ಸಾಕ್ಷಾತ್ತಾಗಿ ನಾನು ಶ್ರವಣಮಾಡಿದ್ದೇನೆ.**

**ಭಾವಾರ್ಥ :** ವ್ಯಾಸರು ಸಂಜಯನ ಗುರುಗಳಾಗಿದ್ದರು, ಮತ್ತು ಸಂಜಯನು ವ್ಯಾಸಾನುಗ್ರಹದಿಂದ ತಾನು ಪರಮದೇವೋತ್ತಮ ಪುರುಷನನ್ನು ಅರಿತುಕೊಳ್ಳಲು ಸಾಧ್ಯವಾಯಿತೆಂಬುದನ್ನು ಒಪ್ಪಿಕೊಳ್ಳುತ್ತಾನೆ. ಇದೇನೆಂದರೆ, ಒಬ್ಬನು ಕೃಷ್ಣನನ್ನು ನೇರವಾಗಿ ಅಲ್ಲದೆ ಗುರುವಿನ ಮೂಲಕ ಅರಿತುಕೊಳ್ಳಬೇಕೆಂದು ಅರ್ಥ. ಸ್ವಾನುಭವವು ಸಾಕ್ಷಾತ್ತಾಗಿರುವುದು ನಿಜವಾದರೂ ಗುರುಗಳು ಪಾರದರ್ಶಿ ಮಾಧ್ಯಮ. ಇದು ಗುರುಪರಂಪರಾ ಪದ್ಧತಿಯ ರಹಸ್ಯ. ಗುರುಗಳು ಸದ್ಭಾವಯುಕ್ತರಾಗಿದ್ದರೆ ಅರ್ಜುನನು ಶ್ರವಣ ಮಾಡಿದಂತೆ, ಒಬ್ಬನು ಸಾಕ್ಷಾತ್ತಾಗಿ ಭಗವದ್ಗೀತಾ ಶ್ರವಣ ಮಾಡಬಹುದು. ಜಗತ್ತಿನಲ್ಲೆಲ್ಲಾ ಅನೇಕ ಸಿದ್ಧರು ಮತ್ತು ಯೋಗಿಗಳು ಇದ್ದಾರೆ. ಆದರೆ ಕೃಷ್ಣನು ಸಕಲಯೋಗ ಪದ್ಧತಿಗಳ ಈಶ್ವರನು. ಕೃಷ್ಣನಿಗೆ ಶರಣಾಗತನಾಗಬೇಕು ಎಂಬ ಕೃಷ್ಣೋಪದೇಶವು ಭಗವದ್ಗೀತೆಯಲ್ಲಿ ಸ್ಪಷ್ಟವಾಗಿ ಹೇಳಿದೆ. ಹಾಗೆ ಮಾಡುವವನು ಅತ್ಯುನ್ನತ ಯೋಗಿ. ಇದು **ಯೋಗಿನಾಮ್ ಅಪಿ ಸರ್ವೇಷಾಮ್,** ಎಂದು ಆರನೆಯ **ಅಧ್ಯಾಯದ ಕೊನೆಯ ಶ್ಲೋಕದಲ್ಲಿ** ದೃಢಪಟ್ಟಿದೆ.

ನಾರದರು ಕೃಷ್ಣನ ಸಾಕ್ಷಾತ್ ಶಿಷ್ಯರು ಮತ್ತು ವ್ಯಾಸರೆ ಗುರುಗಳು. ಆದ್ದರಿಂದ ವ್ಯಾಸರು ಅರ್ಜುನನಷ್ಟೇ ಸದ್ಭಾವನಾಯುಕ್ತರು, ಏಕೆಂದರೆ ಅವರು ಗುರುಪರಂಪರೆಗೆ ಸೇರಿದವರು, ಮತ್ತು ಸಂಜಯನು ವ್ಯಾಸರ ಸಾಕ್ಷಾತ್ ಶಿಷ್ಯನು. ಆದ್ದರಿಂದ ವ್ಯಾಸಾನು ಗ್ರಹದಿಂದ ಸಂಜಯನ ಇಂದ್ರಿಯಗಳು ಶುದ್ಧವಾಗಿದ್ದವು, ಆದ್ದರಿಂದ ಅವನು ಕೃಷ್ಣನನ್ನು ಸಾಕ್ಷಾತ್ತಾಗಿ ನೋಡಬಲ್ಲವನು ಮತ್ತು ಶ್ರವಣ ಮಾಡಬಲ್ಲವನೂ ಆಗಿದ್ದನು. ಕೃಷ್ಣನಿಂದ ನೇರವಾಗಿ ಶ್ರವಣ ಮಾಡುವವನು ಈ ಗುಹ್ಯ ಜ್ಞಾನವನ್ನು ಅರಿತುಕೊಳ್ಳಬಲ್ಲನು. ಒಬ್ಬನು ಗುರುಪರಂಪರಾ ಪದ್ಧತಿಯಲ್ಲಿ ಬಾರದಿದ್ದರೆ ಅವನು ಕೃಷ್ಣನಿಂದ ಶ್ರವಣ ಮಾಡಲಾರನು ; ಆದ್ದರಿಂದ ಅಂಥವನ ಜ್ಞಾನವು ಕನಿಷ್ಠ ಭಗವದ್ಗೀತೆಯನ್ನು ಅರಿತು ಕೊಳ್ಳುವ ಮಟ್ಟಿಗಾದರೂ ಸದಾ ಅಪರಿಪೂರ್ಣ.

ಭಗವದ್ಗೀತೆಯಲ್ಲಿ— ಕರ್ಮ–ಯೋಗ, ಜ್ಞಾನ–ಯೋಗ ಮತ್ತು ಭಕ್ತಿ–ಯೋಗ ಎಲ್ಲ ಯೋಗ ಪದ್ಧತಿಗಳು ವಿವರಿಸಲ್ಪಟ್ಟಿವೆ. ಕೃಷ್ಣನು ಅಂಥ ಎಲ್ಲ ಯೋಗಗಳ ಈಶ್ವರನು. ಆದರೆ ಅರ್ಜುನನು ಕೃಷ್ಣನನ್ನು ಸಾಕ್ಷಾತ್ತಾಗಿ ಅರಿತುಕೊಳ್ಳುವಷ್ಟು ಭಾಗ್ಯ ಶಾಲಿಯಾಗಿದ್ದಂತೆ, ಹಾಗೆ ವ್ಯಾಸಾನುಗ್ರಹದಿಂದ ಸಂಜಯನೂ ಕೂಡ ಕೃಷ್ಣನಿಂದ ಸಾಕ್ಷಾ ತ್ತಾಗಿ ಶ್ರವಣ ಮಾಡಲು ಸಮರ್ಥನಾಗಿದ್ದನು ಎಂದು ಅರಿತುಕೊಳ್ಳಬೇಕು. ವಾಸ್ತವಿಕ ವಾಗಿ, ಸಾಕ್ಷಾತ್ತಾಗಿ ಕೃಷ್ಣನಿಂದ ಶ್ರವಣಮಾಡುವುದಕ್ಕೂ ಮತ್ತು ವ್ಯಾಸರಂಥ ನಿಜಗುರು ಗಳ ಮೂಲಕ ಶ್ರವಣ ಮಾಡುವುದಕ್ಕೂ ಯಾವ ವ್ಯತ್ಯಾಸವಿಲ್ಲ. ಗುರುಗಳು ವ್ಯಾಸರ ಪ್ರತಿನಿಧಿಯೂ ಕೂಡ. ಆದ್ದರಿಂದ ವೈದಿಕ ಪದ್ಧತಿಯ ಪ್ರಕಾರ, ಗುರುಗಳ ಆವಿರ್ಭಾವ ದಿನದಂದು ಶಿಷ್ಯರು ವ್ಯಾಸಪೂಜೆ ಎಂಬ ಉತ್ಸವ ನಡೆಸುತ್ತಾರೆ.

**ರಾಜನ್ ಸಂಸ್ಮೃತ್ಯ ಸಂಸ್ಮೃತ್ಯ ಸಂವಾದಮಿಮಮದ್ಭುತಮ್ ।**
**ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ ಮುಹುರ್ಮುಹುಃ ॥೭೬॥**

ರಾಜನ್—ಹೇ ರಾಜನೇ, ಸಂಸ್ಮೃತ್ಯ—ಸ್ಮರಿಸಿ. ಸಂಸ್ಮೃತ್ಯ—ಸ್ಮರಿಸಿ, ಸಂವಾದಮ್—ಸಂದೇಶವನ್ನು, ಇಮಮ್—ಈ, ಅದ್ಭುತಮ್—ಅದ್ಭುತವಾದ, ಕೇಶವ—ಶ್ರೀ ಕೃಷ್ಣನ, ಅರ್ಜುನಯೋಃ—ಮತ್ತು ಅರ್ಜುನನ, ಪುಣ್ಯಮ್—ಪುಣ್ಯಕರ, ಹೃಷ್ಯಾಮಿ—ಹರ್ಷಿಸುತ್ತಿದ್ದೇನೆ, ಚ— ಕೂಡ, ಮುಹುಃ ಮುಹುಃ—ಮತ್ತೆ ಮತ್ತೆ.

**ಹೇ ರಾಜನೇ, ನಾನು ಕೃಷ್ಣಾರ್ಜುನರ ಈ ಅದ್ಭುತವಾದ ಮತ್ತು ಪುಣ್ಯ ಸಂವಾದವನ್ನು ಮತ್ತೆ ಮತ್ತೆ ಜ್ಞಾಪಿಸಿಕೊಂಡಂತೆ, ಕ್ಷಣ ಕ್ಷಣವೂ ರೋಮಾಂಚಿತ ನಾಗಿ, ಹರ್ಷಿಸುತ್ತಿದ್ದೇನೆ.**

**ಭಾವಾರ್ಥ :** ಭಗವದ್ಗೀತಾ ಅರಿಯುವಿಕೆ ಅದೆಷ್ಟು ದಿವ್ಯವಾದುದೆಂದರೆ ಕೃಷ್ಣಾರ್ಜುನರ ವಿಷಯಗಳನ್ನು ತಿಳಿದವನು ಪುಣ್ಯವಂತನಾಗುತ್ತಾನೆ ಮತ್ತು ಅವನು ಅಂಥ ಸಂವಾದ ವನ್ನು ಮರೆಯಲಾರನು. ಇದು ಅಧ್ಯಾತ್ಮ ಜೀವನದ ದಿವ್ಯಸ್ಥಿತಿ. ಅರ್ಥಾತ್, ಸರಿ ಯಾದ ಮೂಲದಿಂದ, ಸಾಕ್ಷಾತ್ತಾಗಿ ಕೃಷ್ಣನಿಂದ ಗೀತಾ ಶ್ರವಣ ಮಾಡುವವನು ಪೂರ್ಣ ಕೃಷ್ಣ ಪ್ರಜ್ಞೆಯನ್ನು ಹೊಂದುತ್ತಾನೆ. ಕೃಷ್ಣಪ್ರಜ್ಞೆಯ ಪರಿಣಾಮವೆಂದರೆ ಒಬ್ಬನು

ಬಹಳಷ್ಟು ಜ್ಞಾನೋದಿತನಾಗುತ್ತಾನೆ, ಮತ್ತು ಅವನು ಸ್ವಲ್ಪಹೊತ್ತು ಮಾತ್ರವಲ್ಲದೆ ಕ್ಷಣ ಕ್ಷಣಕ್ಕೂ ಜೀವನದಲ್ಲಿ ರೋಮಾಂಚನವನ್ನು ಅನುಭವಿಸುತ್ತಾನೆ.

**ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ ।**
**ವಿಸ್ಮಯೋ ಮೇ ಮಹಾನ್ ರಾಜನ್ ಹೃಷ್ಯಾಮಿ ಚ ಪುನಃ ಪುನಃ ॥ ೭೭ ॥**

ತತ್—ಆ, ಚ—ಕೂಡ, ಸಂಸ್ಮೃತ್ಯ—ಸ್ಮರಿಸಿ, ಸಂಸ್ಮೃತ್ಯ—ಸ್ಮರಿಸಿ, ರೂಪಮ್—ರೂಪವನ್ನು, ಅತಿ—ಅತಿ, ಅದ್ಭುತಮ್—ಅದ್ಭುತವಾದ, ಹರೇಃ—ಶ್ರೀಕೃಷ್ಣನ, ವಿಸ್ಮಯಃ—ಆಶ್ಚರ್ಯವು, ಮೇ—ನನಗೆ, ಮಹಾನ್–ಮಹಾ, ರಾಜನ್—ರಾಜನೇ, ಹೃಷ್ಯಾಮಿ—ಹರ್ಷಿಸುತ್ತಿದ್ದೇನೆ, ಚ—ಕೂಡ, ಪುನಃ ಪುನಃ—ಮತ್ತೆ ಮತ್ತೆ.

**ಹೇ ರಾಜನೇ, ನಾನು ಶ್ರೀಕೃಷ್ಣನ ಅದ್ಭುತ ರೂಪವನ್ನು ಸ್ಮರಿಸಿಕೊಂಡಾಗಲೆಲ್ಲಾ, ನನಗೆ ಮತ್ತೆ ಮತ್ತೆ ಆಶ್ಚರ್ಯವಾಗುತ್ತದೆ, ಮತ್ತು ನಾನು ಪುನಃ ಪುನಃ ಹರ್ಷಿಸುತ್ತೇನೆ.**

**ಭಾವಾರ್ಥ :** ಸಂಜಯನು ಕೂಡ ವ್ಯಾಸಾನುಗ್ರಹದಿಂದ ಕೃಷ್ಣನು ಅರ್ಜುನನಿಗೆ ತೋರಿದ ವಿರಾಟ್-ರೂಪವನ್ನು ನೋಡಲು ಸಾಧ್ಯವಾಯಿತೆಂದು ತೋರುತ್ತದೆ. ಶ್ರೀಕೃಷ ನು ಹಿಂದೆಂದೂ ಅಂಥ ರೂಪವನ್ನು ತೋರಿರಲಿಲ್ಲ ಎಂದು ಹೇಳಿದುದು ನಿಜ. ಅದು ಅರ್ಜುನನಿಗೆ ಮಾತ್ರ ತೋರಲ್ಪಟ್ಟಿತು, ಆದರೂ ಅರ್ಜುನನಿಗೆ ತೋರಿಸಿದಾಗ ಕೃಷ್ಣನ ಆ ವಿರಾಟ್‌ರೂಪವು ಅನೇಕ ಮಹಾಭಕ್ತರಿಂದ ಕೂಡ ನೋಡಲ್ಪಟ್ಟಿತು, ಮತ್ತು ವ್ಯಾಸರು ಅಂಥವರಲ್ಲಿ ಒಬ್ಬರು. ಅವರು ಮಹಾ ಭಗವದ್ಭಕ್ತರು, ಮತ್ತು ಅವರು ಕೃಷ್ಣನ ಶಕ್ತಿಯುತ ಅವತಾರವೆಂದು ಪರಿಗಣಿಸಿದೆ. ವ್ಯಾಸರು ಇದನ್ನು ಶಿಷ್ಯ ಸಂಜಯನಿಗೆ ತಿಳಿಸಿದರು. ಅವನು ಅರ್ಜುನನಿಗೆ ತೋರಿದ ಕೃಷ್ಣನ ಆ ಅದ್ಭುತ ರೂಪವನ್ನು ಸ್ಮರಿಸಿಕೊಂಡನು ಮತ್ತು ಪುನಃ ಪುನಃ ಹರ್ಷಿಸಿದನು.

**ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।**
**ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥ ೭೮ ॥**

ಯತ್ರ—ಎಲ್ಲಿ, ಯೋಗ–ಈಶ್ವರಃ—ಯೋಗೇಶ್ವರ, ಕೃಷ್ಣಃ—ಶ್ರೀಕೃಷ್ಣನು, ಯತ್ರ—ಎಲ್ಲಿ, ಪಾರ್ಥ—ಪೃಥಾ ಪುತ್ರನು, ಧನುಃಧರಃ—ಧನುರ್ಬಾಣಧಾರಿ, ತತ್ರ—ಅಲ್ಲಿ, ಶ್ರೀಃ—ಸಂಪತ್ತು, ವಿಜಯಃ—ವಿಜಯ, ಭೂತಿಃ—ಅಸಾಧಾರಣ ಶಕ್ತಿ, ಧ್ರುವಾ—ಖಂಡಿತ, ನೀತಿಃ—ನೀತಿ, ಮತಿಃ–ಮಮ—ನನ್ನ ಅಭಿಪ್ರಾಯ.

**ಸರ್ವ ಯೋಗೇಶ್ವರ ಶ್ರೀಕೃಷ್ಣನಿರುವಲ್ಲಿ ಮತ್ತು ಪರಮ ಧನುರ್ಧಾರಿ ಅರ್ಜುನನಿರುವಲ್ಲಿ, ಖಂಡಿತವಾಗಿ ಐಶ್ವರ್ಯ, ವಿಜಯ, ಅಸಾಧಾರಣ ಬಲ, ಮತ್ತು ನೀತಿ ಕೂಡ ಇರುತ್ತವೆ. ಇದು ನನ್ನ ಅಭಿಪ್ರಾಯ.**

**ಭಾವಾರ್ಥ :** ಭಗವದ್ಗೀತೆಯು ಧೃತರಾಷ್ಟ್ರನ ಪ್ರಶ್ನೆಯಿಂದ ಪ್ರಾರಂಭವಾಯಿತು. ಅವನು ಭೀಷ್ಮ, ದ್ರೋಣ ಮತ್ತು ಕರ್ಣರಂಥ ಮಹಾಯೋಧರಿಂದ ಸಹಾಯಯುಕ್ತ

ರಾಜ ತನ್ನ ಪುತ್ರರ ವಿಜಯದ ಬಗ್ಗೆ ನಿರೀಕ್ಷೆಯುಳ್ಳವನಾಗಿದ್ದನು. ವಿಜಯವು ತನ್ನ ಪಕ್ಷಕ್ಕೆ ಎಂಬುದು ಅವನ ನಿರೀಕ್ಷೆಯಾಗಿತ್ತು. ಆದರೆ ರಣರಂಗದ ದೃಶ್ಯವನ್ನು ವರ್ಣಿಸಿದ ಬಳಿಕ, ರಾಜನನ್ನು ಕುರಿತು ಸಂಜಯನು, "ನೀನು ವಿಜಯದ ವಿಚಾರವನ್ನು ಮಾಡುತ್ತಿರುವೆ, ಆದರೆ ನನ್ನ ಅಭಿಪ್ರಾಯದಲ್ಲಿ ಕೃಷ್ಣಾರ್ಜುನರಿರುವಲ್ಲಿ ಸಕಲ ಮಂಗಲ ಉಂಟು", ಎಂದು ಹೇಳಿದನು. ಧೃತರಾಷ್ಟ್ರನು ತನ್ನ ಪಕ್ಷಕ್ಕೆ ವಿಜಯ ನಿರೀಕ್ಷಿಸಲಾಗದೆಂದು ಅವನು ನೇರವಾಗಿ ದೃಢಪಡಿಸಿದನು. ಅರ್ಜುನನ ಪಕ್ಷದಲ್ಲಿ ಕೃಷ್ಣನಿದ್ದುದರಿಂದ ಅವನ ಪಕ್ಷಕ್ಕೆ ಜಯ ಖಂಡಿತವಾಗಿತ್ತು. ಕೃಷ್ಣನು ಅರ್ಜುನನ ರಥದ ಸಾರಥಿಯಾಗಲು ಒಪ್ಪಿಕೊಂಡಿದ್ದು ಅವನ ಮತ್ತೊಂದು ಐಶ್ವರ್ಯದ ಪ್ರಕಟನೆಯಾಗಿತ್ತು. ಕೃಷ್ಣನು ಸಕಲೈಶ್ವರ್ಯ ಪೂರ್ಣನು, ವೈರಾಗ್ಯವು ಅದರಲ್ಲಿ ಒಂದು. ಕೃಷ್ಣನು ವೈರಾಗ್ಯದ ಸ್ವಾಮಿಯೂ ಆಗಿರುವುದರಿಂದ, ಅಂಥ ತ್ಯಾಗದ ಸನ್ನಿವೇಶಗಳು ಅನೇಕ ಇವೆ.

ವಾಸ್ತವಿಕವಾಗಿ ಯುದ್ಧವು ದುರ್ಯೋಧನ ಮತ್ತು ಯುಧಿಷ್ಠಿರನ ನಡುವೆ ನಡೆಯಿತು. ಅರ್ಜುನನು ತನ್ನ ಜ್ಯೇಷ್ಠ ಸೋದರ ಯುಧಿಷ್ಠಿರನ ಪರವಾಗಿ ಯುದ್ಧಮಾಡುತ್ತಿದ್ದನು. ಕೃಷ್ಣಾರ್ಜುನರು ಯುಧಿಷ್ಠಿರನ ಪಕ್ಷದಲ್ಲಿ ಇದ್ದುದರಿಂದ ಯುಧಿಷ್ಠಿರನಿಗೆ ಜಯವು ಖಂಡಿತವಾಗಿತ್ತು. ಯಾರು ಭೂಮಂಡಲವನ್ನಾಳುತ್ತಾರೆ ಎಂಬುದು ಆ ಯುದ್ಧದಿಂದ ನಿರ್ಣಯವಾಗಬೇಕಿತ್ತು ಮತ್ತು ಅಧಿಕಾರವು ಯುಧಿಷ್ಠಿರನಿಗೆ ಸೇರುವುದೆಂದು ಸಂಜಯನು ಭವಿಷ್ಯ ನುಡಿದನು. ಯುಧಿಷ್ಠಿರನು ಯುದ್ಧದಲ್ಲಿ ಜಯಗಳಿಸಿ ಇತೋಽಪ್ಯತಿಶಯವಾಗಿ ವರ್ಧಮಾನನಾಗುವನು ಎಂದು ಕೂಡ ಇಲ್ಲಿ ಹೇಳಿದೆ. ಏಕೆಂದರೆ, ಅವನು ಧರ್ಮಿಷ್ಠನು ಮತ್ತು ಪುಣ್ಯವಂತನು, ಅಷ್ಟೇ ಅಲ್ಲದೆ ಕಠೋರ ನೀತಿವಂತನೂ ಆಗಿದ್ದನು. ಅವನು ತನ್ನ ಜೀವಮಾನದಲ್ಲಿ ಎಂದೂ ಸುಳ್ಳು ಹೇಳಲಿಲ್ಲ. ಭಗವದ್ಗೀತೆಯು ರಣರಂಗದಲ್ಲಿ ಇಬ್ಬರು ಮಿತ್ರರ ನಡುವೆ ನಡೆದ ವಿಷಯಗಳ ಚರ್ಚೆ ಎಂದು ಭಾವಿಸುವ ಅನೇಕ ಬುದ್ಧಿಹೀನರಿದ್ದಾರೆ. ಆದರೆ ಅಂಥ ಗ್ರಂಥವು ಶಾಸ್ತ್ರವಾಗಲಾರದು. ಕೃಷ್ಣನು ಅರ್ಜುನನನ್ನು ಯುದ್ಧಕ್ಕೆ ಪ್ರೇರಿಸಿದನು. ಅದು ಅನೀತಿ ಎಂದು ಕೆಲವರು ಪ್ರತಿಭಟಿಸಬಹುದು, ಆದರೆ ಸನ್ನಿವೇಶದ ಸತ್ಯಾಂಶವು ಸ್ಪಷ್ಟವಾಗಿ ನಿರೂಪಿತ. ಭಗವದ್ಗೀತೆಯು ನೀತಿಯ ಪರಮ ಬೋಧೆ. ನೀತಿಯ ಪರಮ ಬೋಧೆಯು ಒಂಭತ್ತನೆಯ ಅಧ್ಯಾಯ, ಮೂವತ್ತನಾಲ್ಕನೆಯ ಶ್ಲೋಕದಲ್ಲಿ ನಿರೂಪಿತ : **ಮನ್-ಮನಾ ಭವ ಮದ್-ಭಕ್ತಃ**, ಒಬ್ಬನು ಕೃಷ್ಣಭಕ್ತನಾಗಬೇಕು, ಮತ್ತು ಕೃಷ್ಣನಿಗೆ ಶರಣಾಗುವುದು ಸಕಲ ಧರ್ಮಗಳ ಸಾರ. (**ಸರ್ವ-ಧರ್ಮಾನ್ ಪರಿತ್ಯಜ್ಯ ಮಾಮ್ ಏಕಂ ಶರಣಂ ವ್ರಜ**). ಭಗವದ್ಗೀತೋಪದೇಶಗಳು ಪರಮಧರ್ಮದ ಮತ್ತು ನೀತಿಯ ಪ್ರಕ್ರಿಯೆಯಾಗಿವೆ. ಎಲ್ಲ ಇತರ ಪ್ರಕ್ರಿಯೆಗಳು ಶುದ್ಧಿಕಾರಕವಾಗಿರಬಹುದು ಮತ್ತು ಈ ಪ್ರಕ್ರಿಯೆಗೆ ತಲುಪಿಸುವವು ಆಗಿರಬಹುದು, ಆದರೆ ಗೀತೆಯ ಕೊನೆಯ ಉಪದೇಶವು ಕೃಷ್ಣನಿಗೆ ಶರಣಾಗತನಾಗುವುದು ಸಕಲ ನೀತಿಧರ್ಮಗಳ ಕೊನೆಯ ಮಾತು. ಇದು ಹದಿನೆಂಟನೆಯ ಅಧ್ಯಾಯದ ತಾತ್ಪರ್ಯ.

ಒಬ್ಬನು ತಾತ್ವಿಕ ಊಹಾಪೋಹದಿಂದ ಮತ್ತು ಧ್ಯಾನದಿಂದ ಆತ್ಮ ಸಾಕ್ಷಾತ್ಕಾರ ಪಡೆಯುವುದು ಒಂದು ಪ್ರಕ್ರಿಯೆ ಎಂದು ಭಗವದ್ಗೀತೆಯಿಂದ ನಾವು ಅರಿತುಕೊಳ್ಳಬಹುದು, ಆದರೆ ಕೃಷ್ಣನಿಗೆ ಪೂರ್ಣ ಶರಣಾಗತಿಯು ಅತ್ಯುನ್ನತ ಸಿದ್ಧಿ. ಇದು ಭಗವದ್ಗೀತೆಯ ಬೋಧನೆಯ ಸಾರ. ವರ್ಣಾಶ್ರಮ ಧರ್ಮೋಚಿತ ಮತ್ತು ನಾನಾ ಧರ್ಮ ಮಾರ್ಗಗಳ ನಿಯಂತ್ರಣ ತತ್ತ್ವಮಾರ್ಗವು ಜ್ಞಾನದ ಗುಹ್ಯ ಮಾರ್ಗವಾಗಬಹುದು ಆದರೆ ಧರ್ಮಾಚರಣೆಗಳು ಗುಹ್ಯವಾಗಿದ್ದರೂ, ಧ್ಯಾನ ಮತ್ತು ಜ್ಞಾನ ಸಾಧನೆಯು ಅವುಗಳಿಗಿಂತ ಹೆಚ್ಚು ಗುಹ್ಯ. ಮತ್ತು ಪೂರ್ಣ ಕೃಷ್ಣಪ್ರಜ್ಞೆಯ ಭಕ್ತಿಯುತ ಸೇವೆಯಲ್ಲಿ ಕೃಷ್ಣನಿಗೆ ಶರಣಾಗುವುದು ಗುಹ್ಯತಮ ಉಪದೇಶ. ಅದು ಹದಿನೆಂಟನೆಯ ಅಧ್ಯಾಯದ ಸಾರ.

ಭಗವದ್ಗೀತೆಯ ಮತ್ತೊಂದು ಲಕ್ಷಣವೆಂದರೆ ಪರಮ ದೇವೋತ್ತಮ ಪುರುಷ, ಕೃಷ್ಣನು ವಾಸ್ತವಿಕ ತತ್ತ್ವ. ಪರತತ್ತ್ವವು—ವ್ಯಕ್ತಿಶೂನ್ಯ ಬ್ರಹ್ಮನ್, ಸ್ಥಳೀಯ ಪರಮಾತ್ಮ, ಮತ್ತು ಕೊನೆಯ ಪರಮ ದೇವೋತ್ತಮ ಪುರುಷ ಕೃಷ್ಣ. ಈ ಮೂರು ಲಕ್ಷಣಗಳಲ್ಲಿ ಸಾಕ್ಷಾತ್ಕೃತ. ಪರತತ್ವದ ಪರಿಪೂರ್ಣ ಜ್ಞಾನವೆಂದರೆ ಕೃಷ್ಣನ ಪರಿಪೂರ್ಣ ಜ್ಞಾನ. ಒಬ್ಬನು ಕೃಷ್ಣನನ್ನು ಅರಿತುಕೊಂಡರೆ ಆಗ ಎಲ್ಲ ಜ್ಞಾನ ವಿಭಾಗಗಳು ಆ ಅರಿವಿನ ಅವಿಭಾಜ್ಯ ಅಂಗಗಳು. ಕೃಷ್ಣನು ದಿವ್ಯನು, ಏಕೆಂದರೆ ಅವನು ಸದಾ ತನ್ನ ಶಾಶ್ವತ ಅಂತರಂಗಶಕ್ತಿ ಸನ್ನಿವೇಶಿತನು. ಅವನ ಶಕ್ತಿಯಿಂದ ಅಭಿವ್ಯಕ್ತ ಜೀವಿಗಳು ನಿತ್ಯ ಬದ್ಧರು ಮತ್ತು ನಿತ್ಯಮುಕ್ತರು ಎಂದು ಎರಡು ವರ್ಗಗಳಲ್ಲಿ ವಿಭಕ್ತರು, ಅಂಥ ಜೀವಿಗಳು ಅಸಂಖ್ಯ ಮತ್ತು ಅವರು ಕೃಷ್ಣನ ಮೂಲ ಭಾಗಗಳೆಂದು ಪರಿಗಣಿತ. ಭೌತಿಕ ಶಕ್ತಿಯು ಇಪ್ಪತ್ನಾಲ್ಕು ತತ್ತ್ವಗಳಲ್ಲಿ ಅಭಿವ್ಯಕ್ತ. ಸೃಷ್ಟಿಯು ಅನಾದಿ ಕಾಲದಿಂದ ಪರಿಣಮಿತ, ಮತ್ತು ಅದು ಬಹಿರಂಗ ಶಕ್ತಿಯಿಂದ ಸೃಷ್ಟ ಮತ್ತು ವಿಸರ್ಜಿತ. ವಿಶ್ವ ಜಗತ್ತಿನ ಈ ಉದ್ಭೂತಿಯು ಪದೇ ಪದೇ ದೃಶ್ಯಮಾನ ಮತ್ತು ಅದೃಶ್ಯಮಾನ.

ಭಗವದ್ಗೀತೆಯಲ್ಲಿ ಐದು ಮುಖ್ಯ ವಿಷಯಗಳು ಚರ್ಚಿತ: ಪರಮ ದೇವೋತ್ತಮ ಪುರುಷ, ಭೌತಿಕ ಪ್ರಕೃತಿ, ಜೀವಿಗಳು, ಅನಾದಿಕಾಲ ಮತ್ತು ಎಲ್ಲ ಬಗೆಯ ಚಟುವಟಿಕೆಗಳು. ಎಲ್ಲವೂ ಪರಮ ದೇವೋತ್ತಮ ಪುರುಷ, ಕೃಷ್ಣನನ್ನು ಅವಲಂಬಿಸಿವೆ. ಪರತತ್ತ್ವದ ಸಕಲ ಕಲ್ಪನೆಗಳು-ವ್ಯಕ್ತಿಶೂನ್ಯ ಬ್ರಹ್ಮನ್, ಸ್ಥಳೀಯ ಪರಮಾತ್ಮ ಮತ್ತು ಯಾವುದೇ ಇತರ ದಿವ್ಯ ಕಲ್ಪನೆ—ಪರಮ ದೇವೋತ್ತಮ ಪುರುಷನ ಅರಿವಿನ ಶ್ರೇಣಿಯಲ್ಲಿ ಇರುತ್ತವೆ. ಮೇಲುನೋಟಕ್ಕೆ ಪರಮ ದೇವೋತ್ತಮ ಪುರುಷ, ಜೀವಿ, ಭೌತಿಕ ಪ್ರಕೃತಿ ಮತ್ತು ಅನಾದಿಕಾಲ, ಭಿನ್ನ ಭಿನ್ನವಾಗಿ ತೋರಿದರೂ, ಪರಮನಿಂದ ಯಾವುದೂ ಭಿನ್ನವಲ್ಲ. ಆದರೆ ಪರಮನು ಸದಾ ಪ್ರತಿಯೊಂದರಿಂದ ಭಿನ್ನನು. "ಅಚಿಂತ್ಯ ಭೇದಾಭೇದವು" ಶ್ರೀ ಚೈತನ್ಯರ ತತ್ವ. ಈ ತಾತ್ವಿಕ ಪದ್ಧತಿಯು ಪರತತ್ವದ ಪರಿಪೂರ್ಣ ಜ್ಞಾನವಾಗಿದೆ.

ಜೀವಿಯು ತನ್ನ ಮೂಲಸ್ಥಿತಿಯಲ್ಲಿ ಶುದ್ಧ ಚೇತನನು. ಅವನು ಪರಮ ಚೇತನದ ಪರಮಾಣು ಕಣದಂತೆ. ಹೀಗೆ ಶ್ರೀಕೃಷ್ಣನನ್ನು ಸೂರ್ಯದೇವನಿಗೆ, ಮತ್ತು ಜೀವಿ

ಗಳನ್ನು ಸೂರ್ಯಪ್ರಕಾಶಕ್ಕೆ ಹೋಲಿಸಬಹುದು. ಜೀವಿಗಳು ಕೃಷ್ಣನ ತಟಸ್ಥ ಶಕ್ತಿಯಾಗಿರುವುದರಿಂದ, ಅವರು ಭೌತಿಕ ಶಕ್ತಿ ಅಥವಾ ಅಧ್ಯಾತ್ಮ ಶಕ್ತಿಯ ಸಂಪರ್ಕದಲ್ಲಿ ಬರುವ ಪ್ರವಣತೆ ಹೊಂದಿರುತ್ತಾರೆ. ಅರ್ಥಾತ್, ಜೀವಿಯು ಭಗವಂತನ ಎರಡು ಶಕ್ತಿಗಳ ನಡುವೆ ಸನ್ನಿವೇಶಿತನು. ಅವನು ಭಗವಂತನ ಪರಾಶಕ್ತಿಗೆ ಸೇರಿದ್ದರಿಂದ ಅವನಿಗೆ ಕಿಂಚಿತ್ ಅಲ್ಪ ಸ್ವಾತಂತ್ರ್ಯವಿದೆ. ಆ ಸ್ವಾತಂತ್ರ್ಯದ ಯೋಗ್ಯ ಉಪಯೋಗದಿಂದ ಅವನು ಕೃಷ್ಣನ ನೇರ ಆಜ್ಞೆಗೆ ಅಧೀನನಾಗುತ್ತಾನೆ. ಹೀಗೆ ಹ್ಲಾದಿನೀ ಶಕ್ತಿಯ ತನ್ನ ಸ್ವ-ಸ್ಥಿತಿಯನ್ನು ಹೊಂದುತ್ತಾನೆ.

**ಇಲ್ಲಿಗೆ "ಶ್ರೀಮದ್ ಭಗವದ್ಗೀತಾ"ದಲ್ಲಿನ ಹದಿನೆಂಟನೆಯ ಅಧ್ಯಾಯವಾದ "ಸಿದ್ಧಾಂತ-ವೈರಾಗ್ಯದ ಪರಿಪೂರ್ಣತೆ" ಎಂಬುದರ ಭಕ್ತಿವೇದಾಂತ ತಾತ್ಪರ್ಯವು ಮುಗಿಯಿತು.**



# ಉಲ್ಲೇಖಗಳು

ಭಗವದ್ಗೀತಾ ಯಥಾರೂಪದ ನಿರೂಪಣೆಗಳು ಮಾನಕ ವೇದ ಪ್ರಮಾಣಗಳಿಂದ ಎಲ್ಲವೂ ದೃಢೀಕೃತ. ಪಟ್ಟಿಮಾಡಿದ ಶ್ಲೋಕಗಳ ಬಗ್ಗೆ ಭಗವದ್ಗೀತಾ ಯಥಾರೂಪ ದಲ್ಲಿ ಕೆಳಕಂಡ ಅಧಿಕೃತ ಶಾಸ್ತ್ರಗಳು ಉಲ್ಲೇಖಿಸಲ್ಪಟ್ಟಿವೆ.

ಉದಾಹರಣೆಗೆ : ೬ನೆಯ ಅಧ್ಯಾಯದ 5ನೆಯ ಶ್ಲೋಕದ ಭಾವಾರ್ಥದಲ್ಲಿ ಅಮೃತಬಿಂದು ಉಪನಿಷದ್‌ನ್ನು ಉಲ್ಲೇಖಿಸಿರುವುದನ್ನು ಕಾಣಬಹುದು.

1. ಅಮೃತ ಬಿಂದು ಉಪನಿಷದ್ 6 05.
2 ಶ್ರೀ ಈಶೋಪನಿಷದ್ 2.17, 7.25.
3. ಉಪದೇಶಾಮೃತ 6.24.
4. ಋಗ್ ವೇದ 14.16, 17.23, 18.62
5. ಕಠ ಉಪನಿಷದ್ 2.12, 2.20, 2.29, 6.34, 7.06, 7.10, 8.14, 8.21, 11.32, 13.13, 13.16, 15.06, 15.17.
6. ಕರ್ಮಕಾಂಡ 2.43,
7. ಕೌಷ್ಠಕೀ ಉಪನಿಷದ್ 5.15.
8. ಗೋಪಾಲ ತಾಪನೀ ಉಪನಿಷದ್ 6.31, 6.47, 8.22 9.11, 10.08, 11.54.
9. ಗುರ್ವಾಷ್ಟಕಂ 2.41.
10. ಚೈತನ್ಯ ಚರಿತಾಮೃತ (ಕೃಷ್ಣದಾಸ ಕವಿರಾಜ ಗೋಸ್ವಾಮಿ) 2.08, 2.41, 4.08, 7.20, 9,28, 9.34, 11.43.
11. ಛಾಂದೋಗ್ಯ ಉಪನಿಷದ್ 7.19, 8.26, 9.07, 15.18, 17.23.
12. ತೈತ್ತಿರೀಯ ಉಪನಿಷದ್ 9.06, 13.05, 13.17, 14.27.
13. ಧರ್ಮ ಸಂಹಿತೆಗಳು 2.31.
14. ನರಸಿಂಹ ಪುರಾಣ 9.30

15. ನಾರದ ಪಾಂಚರಾತ್ರ 6.31
16. ನಾರಾಯಣ ಉಪನಿಷದ್ 10.08
17. ನಾರಾಯಣೀಯ 12.07
18. ನಿರುಕ್ತಿ ನಿಘಂಟು 9.05, 15.18
19. ಪದ್ಮಪುರಾಣ 2.08, 5.22, 9.02
20. ಪರಾಶರ ಸ್ಮೃತಿ 2.32, 13.05
21. ಪುರುಷ ಬೋಧಿನಿ ಉಪನಿಷದ್ 4.07
22. ಪ್ರಶ್ನ ಉಪನಿಷದ್ 18.14
23. ಬಲದೇವ ವಿದ್ಯಾಭೂಷಣರ ಕೃತಿಗಳು 2.61, 3.14, 10.42
24. ಬೃಹದ್ ಆರಣ್ಯಕ ಉಪನಿಷದ್ 2.07, 3.15, 4.37, 9.06, 13.12, 15.14
25. ಬೃಹನ್ ನಾರದೀಯ ಪುರಾಣ 6.12
26. ಬೃಹದ್ ವಿಷ್ಣು ಸ್ಮೃತಿ 9.12
27. ಬ್ರಹ್ಮ ಸೂತ್ರ 13.05
28. ಬ್ರಹ್ಮ-ಸಂಹಿತಾ 2.02, 3.14, 4.01, 4.05, 4.09, 4.12, 6.15, 6.30, 7.03, 7.07, 8.22, 9.04, 9.06, 9.09, 9.11, 10.20, 11.46, 11.54, 13.14.
29. ಭಕ್ತಿ-ರಸಾಮೃತ ಸಿಂಧು (ರೂಪ ಗೋಸ್ವಾಮಿ) 2-63, 4.10, 5.02, 5.11 6.08, 6.10, 6.31, 7 03, 7.16, 8.27, 9.04, 11 55
30. ಮಾಧ್ಯಾಂದಿನಾಯನ ಶ್ರುತಿ 15.07
31. ಮಹಾ ಉಪನಿಷದ್ 10.08
32. ಮಹಾ ಭಾರತ 2-56 4.01
33. ಮಾಧವೇಂದ್ರ ಪುರಿಯವರ ಕೃತಿ 2.52
34. ಮಾಂಡೂಕ್ಯ ಉಪನಿಷದ್ 5.10
35. ಮುಂಡಕ ಉಪನಿಷದ್ 2.17, 2.22, 5.10, 7.02, 13.21
36. ಮೋಕ್ಷ ಧರ್ಮ 10.08
37. ಯಾಮುನಾಚಾರ್ಯರ ಕೃತಿ 2.60

# ಗ್ರಂಥಕರ್ತರು

ಶ್ರೀ ಶ್ರೀಮದ್ ಎ. ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದರು ಈ ಜಗತ್ತಿನಲ್ಲಿ 1896ರಲ್ಲಿ ಇಂಡಿಯಾದ ಕಲ್ಕತ್ತದಲ್ಲಿ ಕಾಣಿಸಿಕೊಂಡರು. ತಮ್ಮ ಅಧ್ಯಾತ್ಮ ಗುರುಗಳಾದ ಶ್ರೀಲ ಭಕ್ತಿಸಿದ್ಧಾಂತ ಸರಸ್ವತೀ ಗೋಸ್ವಾಮಿಯವರನ್ನು 1922ರಲ್ಲಿ ಮೊದಲ ಬಾರಿಗೆ ಕಲ್ಕತ್ತದಲ್ಲಿ ಸಂಧಿಸಿದರು ಓರ್ವ ಮಹೋನ್ನತ ಭಕ್ತಿಯುತ ವಿದ್ವಾಂಸರು ಮತ್ತು ಅರವತ್ತನಾಲ್ಕು ಗೌಡೀಯ ಮಠಗಳ (ವೈದಿಕ ಪಾಠಶಾಲೆಗಳ) ಸಂಸ್ಥಾಪಕಾಚಾರ್ಯರೂ ಆದ ಶ್ರೀಲ ಭಕ್ತಿಸಿದ್ಧಾಂತ ಸರಸ್ವತಿಯವರು, ಈ ವಿದ್ಯಾಸಂಪನ್ನನಾದ ಯುವಕನನ್ನು ಇಷ್ಟಪಟ್ಟು, ಅವನ ಜೀವಮಾನವನ್ನೇ ವೇದಜ್ಞಾನದ ಬೋಧನೆಗೆ ಅಂಕಿತ ಮಾಡಲು ಪೂರ್ಣವಾಗಿ ಮನ ಒಲಿಸಿಕೊಂಡರು. ಶ್ರೀಲ ಪ್ರಭುಪಾದರು ಅವರ ವಿದ್ಯಾರ್ಥಿಯಾದರು ಮತ್ತು ಹನ್ನೊಂದು ವರ್ಷದ ಬಳಿಕ, ಅವರ ವಿಧಿವಿಹಿತ ದೀಕ್ಷೆಪಡೆದ ಶಿಷ್ಯರಾದರು.

ಅವರ ಪ್ರಥಮ ಭೇಟಿಯಲ್ಲಿ, ಶ್ರೀಲ ಭಕ್ತಿಸಿದ್ಧಾಂತ ಸರಸ್ವತೀ ಠಾಕೂರರು, ಶ್ರೀಲ ಪ್ರಭುಪಾದರನ್ನು ವೇದಜ್ಞಾನವನ್ನು ಇಂಗ್ಲೀಷ್ ಭಾಷೆಯ ಮೂಲಕ ಪ್ರಸಾರ ಮಾಡಬೇಕೆಂದು ಅಪೇಕ್ಷಿಸಿದರು. ಮುಂದಿನ ವರ್ಷಗಳಲ್ಲಿ ಶ್ರೀಲ ಪ್ರಭುಪಾದರು ಭಗವದ್ಗೀತೆಗೆ ವ್ಯಾಖ್ಯಾನವನ್ನು ಬರೆದರು, ಗೌಡೀಯ ಮಠಕ್ಕೆ ಅದರ ಕಾರ್ಯದಲ್ಲಿ ಸಹಕರಿಸಿದರು ಮತ್ತು 1944ರಲ್ಲಿ 'ಬ್ಯಾಕ್ ಟು ಗಾಡ್‌ಹೆಡ್' ಎಂದು ಪ್ರಾರಂಭಿಸಿದ ಇಂಗ್ಲೀಷ್ ಪಾಕ್ಷಿಕ ಸಂಕೀರ್ಣ ಪತ್ರಿಕೆಯು, ಈಗಲೂ ಪಾಶ್ಚಾತ್ಯ ರಾಷ್ಟ್ರಗಳಲ್ಲಿನ ಅವರ ಶಿಷ್ಯರುಗಳಿಂದ ಮುವ್ವತ್ತಕ್ಕಿಂತ ಅಧಿಕ ಭಾಷೆಗಳಲ್ಲಿ ಮುಂದುವರಿಯುತ್ತಲಿದೆ.

ಶ್ರೀಲ ಪ್ರಭುಪಾದರ ವೇದಾಂತ ಜ್ಞಾನ ಮತ್ತು ಭಕ್ತಿಯನ್ನು ಲಕ್ಷಿಸಿ, ಗೌಡೀಯ ವೈಷ್ಣವ ಸಂಘವು 1947ರಲ್ಲಿ "ಭಕ್ತಿವೇದಾಂತ" ಎಂಬ ಬಿರುದನ್ನು ನೀಡಿ ಅವರನ್ನು ಗೌರವಿಸಿತು. 1950 ರಲ್ಲಿ ಶ್ರೀ ಪ್ರಭುಪಾದರು ತಮ್ಮ ಐವತ್ನಾಲ್ಕನೆಯ ವರ್ಷದಲ್ಲಿ ವೈವಾಹಿಕ ಜೀವನದಿಂದ ನಿವೃತ್ತರಾದವರು ಮತ್ತು ತಮ್ಮ ಅಭ್ಯಾಸ ಮತ್ತು ಬರವಣಿಗೆಗಾಗಿ ಹೆಚ್ಚು ಕಾಲವನ್ನು ವಿನಿಯೋಗಿಸಲು ವಾನಪ್ರಸ್ಥ ಆಶ್ರಮವನ್ನು ಸ್ವೀಕರಿಸಿದರು. ಶ್ರೀಲ ಪ್ರಭುಪಾದರು ಪವಿತ್ರವಾದ ವೃಂದಾವನಕ್ಕೆ ಪ್ರಯಾಣ ಮಾಡಿ, ಅಲ್ಲಿನ ಚಾರಿತ್ರಿಕ ಮಧ್ಯಯುಗದ ರಾಧಾ-ದಾಮೋದರ ದೇವಾಲಯದಲ್ಲಿ ಬಹಳ ನಿರಾಡಂಬರವಾಗಿ ಜೀವನವನ್ನು ಸಾಗಿಸಿದರು. ಅಲ್ಲಿ ಅವರು ಹಲವು ವರ್ಷಗಳ ಕಾಲ ಆಳವಾದ ಅಭ್ಯಾಸ ಮತ್ತು ಬರಹದಲ್ಲಿ ನಿರತರಾಗಿದ್ದರು. ಅವರು 1956ರಲ್ಲಿ ಸನ್ಯಾಸವನ್ನು ಸ್ವೀಕರಿಸಿದರು. ರಾಧಾ-ದಾಮೋದರ ದೇವಾಲಯದಲ್ಲಿ ಶ್ರೀಲ ಪ್ರಭುಪಾದರು ಶ್ರೀಮದ್ ಭಾಗವತದ

(ಭಾಗವತ ಪುರಾಣ) ಹದಿನೆಂಟು ಸಾವಿರ ಶ್ಲೋಕಗಳಿಗೆ ಭಾಷಾಂತರ ಮತ್ತು ವ್ಯಾಖ್ಯಾನಗಳನ್ನೊಳಗೊಂಡ ಅನೇಕ ಸಂಪುಟಗಳ ರಚನೆಯ, ತಮ್ಮ ಜೀವನದ ಅದ್ಭುತ ಕಾರ್ಯವನ್ನು ಆರಂಭಿಸಿದರು. ಅವರು "ಇತರ ಲೋಕಗಳಿಗೆ ಸುಲಭ ಪ್ರಯಾಣ" ಎಂಬುದನ್ನೂ ಬರೆದಿರುತ್ತಾರೆ.

ಶ್ರೀಮದ್ ಭಾಗವತದ ಮೂರು ಸಂಪುಟಗಳನ್ನು ಪ್ರಕಾಶನ ಮಾಡಿದ ನಂತರ, ಅವರ ಗುರುಗಳ ಆದೇಶವನ್ನು ನೆರವೇರಿಸಲು ಶ್ರೀಲ ಪ್ರಭುಪಾದರು 1965ರಲ್ಲಿ ಅಮೇರಿಕಗೆ ಬಂದರು. ಆಗಿನಿಂದ ಅವರು, ಇಂಡಿಯಾದ ವೇದಾಂತ ಮತ್ತು ಧಾರ್ಮಿಕ ಮಹಾಗ್ರಂಥಗಳಿಗೆ ಅರವತ್ತು ಸಂಪುಟಗಳಿಗೂ ಹೆಚ್ಚಾಗಿ ಪ್ರಾಮಾಣಿಕ ಭಾಷಾಂತರಗಳು, ವ್ಯಾಖ್ಯಾನಗಳು ಮತ್ತು ಸಾರಾಂಶ ಅಭ್ಯಾಸಗಳನ್ನು ಬರೆದಿರುತ್ತಾರೆ.

1956ರಲ್ಲಿ ಅವರು ಮೊದಲು ನ್ಯೂಯಾರ್ಕ್ ನಗರಕ್ಕೆ ಹಡಗಿನಲ್ಲಿ ಬಂದಾಗ, ಶ್ರೀಲ ಪ್ರಭುಪಾದರಲ್ಲಿ ಹಣವೇ ಇರಲಿಲ್ಲ. ಅತಿ ಕಷ್ಟದ ಒಂದು ವರ್ಷದ ನಂತರ, 1966ರ ಜುಲೈಯಲ್ಲಿ ಅವರು ಅಂತಾರಾಷ್ಟ್ರೀಯ ಕೃಷ್ಣ ಪ್ರಜ್ಞಾಸಂಘವನ್ನು ಸ್ಥಾಪಿಸಿದರು. 14ನೆಯ ನವೆಂಬರ್ 1977ರಲ್ಲಿ ಭಗವದ್ಧಾಮವನ್ನು ಸೇರುವ ಮುಂಚೆ, ಸಂಘವನ್ನು ಮಾರ್ಗದರ್ಶಿಸಿದರು ಮತ್ತು ಅದು ನೂರಕ್ಕಿಂತ ಮಿಗಿಲಾದ ಆಶ್ರಮಗಳು, ಪಾಠಶಾಲೆಗಳು, ದೇವಾಲಯಗಳು ಕುಶಲ ಕಲಾಶಾಲೆಗಳು ಮತ್ತು ವ್ಯವಸಾಯ ಕ್ಷೇತ್ರಗಳನ್ನು ಒಳಗೊಂಡ ವಿಶ್ವವ್ಯಾಪಿ ಸಂಯೋಜಿತ ಸಂಸ್ಥೆಯಾಗಿ ಬೆಳೆಯುವುದನ್ನು ವೀಕ್ಷಿಸಿದರು.

ನ್ಯೂವೃಂದಾವನವೆಂಬ ಒಂದು ಪ್ರಾಯೋಗಿಕ ವೈದಿಕ ಕ್ಷೇತ್ರವನ್ನು ಪಶ್ಚಿಮ ವರ್ಜಿನಿಯಾದಲ್ಲಿ ಸ್ಥಾಪಿಸಿದರು ಮತ್ತು ವೈದಿಕ ಗುರುಕುಲ ಪದ್ಧತಿಯ ಶಿಕ್ಷಣವನ್ನು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಪ್ರವೇಶಗೊಳಿಸಿದವರೂ ಶ್ರೀಲ ಪ್ರಭುಪಾದರವರೇ.

ಶ್ರೀಲ ಪ್ರಭುಪಾದರು ಇಂಡಿಯಾದಲ್ಲಿ ಹಲವಾರು ಅಂತಾರಾಷ್ಟ್ರೀಯ ಕೇಂದ್ರಗಳ ನಿರ್ಮಾಣವನ್ನೂ ಪ್ರೋತ್ಸಾಹಿಸಿದರು. ಪಶ್ಚಿಮ ಬಂಗಾಲದಲ್ಲಿರುವ ಶ್ರೀಧಾಮ ಮಾಯಾಪುರದಲ್ಲಿನ ಕೇಂದ್ರದ ನಿವೇಶನವು ಯೋಜಿತ ಆಧ್ಯಾತ್ಮ ನಗರಕ್ಕಾಗಿ ಇರುತ್ತದೆ. ಈ ಮಹದಾಕಾಂಕ್ಷೆಯ ಯೋಜನೆಯ ನಿರ್ಮಾಣವು ಮುಂದಿನ ದಶಕದ ಆಚೆಗೂ ವಿಸ್ತರಿಸುವುದು. ಇಂಡಿಯಾದ ವೃಂದಾವನದಲ್ಲಿ ಭವ್ಯವಾದ ಕೃಷ್ಣ-ಬಲರಾಮ ದೇವಾಲಯ ಮತ್ತು ಅಂತಾರಾಷ್ಟ್ರೀಯ ಅತಿಥಿಗೃಹ ಇರುತ್ತದೆ. ಬೊಂಬಾಯಿಯಲ್ಲಿಯೂ ಸಹ ಒಂದು ದೊಡ್ಡ ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಕೇಂದ್ರವಿದೆ. ಭಾರತದ ಉಪಖಂಡದಲ್ಲಿನ ಹನ್ನೆರಡು ಮುಖ್ಯ ಸ್ಥಳಗಳಲ್ಲಿ ಇತರ ಕೇಂದ್ರಗಳು ಯೋಜಿತವಾಗಿದೆ.

ಶ್ರೀಲ ಪ್ರಭುಪಾದರ ಅತ್ಯಂತ ಪರಿಣಾಮಕಾರಿ ಕೊಡುಗೆಯು ಅವರ ಪುಸ್ತಕಗಳೇ ಆಗಿರುತ್ತವೆ. ಅವುಗಳ ಪ್ರಾಮಾಣ್ಯ, ಗ 'ನ ವಿಚಾರ ಮತ್ತು ಸ್ಪಷ್ಟತೆಗಳಿಗಾಗಿ ಶಿಕ್ಷಣ ಕ್ಷೇತ್ರದಿಂದ ಬಹು ಗೌರವಿತವಾಗಿ ಅವುಗಳು ಅನೇಕ ಕಾಲೇಜುಗಳ ಶಿಕ್ಷಣ ಪದ್ಧತಿಯಲ್ಲಿ

ಪಠ್ಯಪುಸ್ತಕಗಳಾಗಿ ಉಪಯೋಗಿಸಲ್ಪಡುತ್ತಿವೆ. ಅವರ ಬರಹಗಳು ಮುವ್ವತ್ತಕ್ಕಿಂತಲೂ ಹೆಚ್ಚಿನ ಭಾಷೆಗಳಿಗೆ ಭಾಷಾಂತರವಾಗಿವೆ. ಅವರ ಕೃತಿಗಳನ್ನು ಪ್ರಕಾಶನ ಮಾಡುವ ದಕ್ಕಾಗಿ 1972ರಲ್ಲಿ ಸ್ಥಾಪಿಸಲ್ಪಟ್ಟ ಭಕ್ತಿವೇದಾಂತ ಬುಕ್ ಟ್ರಸ್ಟ್ ಸಂಸ್ಥೆಯು ಭಾರತದ ಧರ್ಮ ಮತ್ತು ದರ್ಶನ ಕ್ಷೇತ್ರದಲ್ಲಿ ಪ್ರಪಂಚದ ಬೃಹತ್ ಪ್ರಕಾಶನ ಸಂಸ್ಥೆಯಾಗಿದೆ.

ಕೇವಲ ಹನ್ನೆರಡು ವರ್ಷಗಳಲ್ಲಿ, ತಮ್ಮ ವೃದ್ಧಾಪ್ಯದೆಶೆಯಲ್ಲಿಯೂ ಕೂಡ, ಶ್ರೀಲ ಪ್ರಭುಪಾದರು ಭಾಷಣ ಪ್ರವಾಸಗಳಿಗಾಗಿ ಭೂಮಂಡಲವನ್ನು ಹದಿನಾಲ್ಕು ಸಲ ಪರ್ಯಟನೆ ಮಾಡಿ ಆರು ಖಂಡಗಳಿಗೂ ಹೋದರು. ಅಂಥ ಓಜೋಪೂರ್ಣ ಕಾರ್ಯಕ್ರಮ ವಿದ್ದರೂ, ಶ್ರೀಲ ಪ್ರಭುಪಾದರು ಫಲಪ್ರದವಾಗಿ ಬರೆಯುವುದನ್ನು ಮುಂದುವರಿಸಿದರು. ವೇದಾಂತ, ಧರ್ಮ, ಸಾಹಿತ್ಯ ಮತ್ತು ಸಂಸ್ಕೃತಿಯನ್ನು ಒಳಗೊಂಡಿರುವ ಅವರ ಲೇಖನ ಗಳು ಸಾರಸ್ವತ ಲೋಕಕ್ಕೆ ನಿಜವಾದ ಗ್ರಂಥಾಲಯವಾಗಿ ಪರಿಣಮಿಸಿವೆ.

# ಶ್ರೀಲ ಪ್ರಭುಪಾದರ ಬಗ್ಗೆ ವಿದ್ವಾಂಸರು ಹೇಳುವುದೇನು

## ಅವರ ಬಳುವಳಿ : ದಿವ್ಯ ಸಾಹಿತ್ಯ

"ಶ್ರೀಲ ಪ್ರಭುಪಾದರ ಕೃತಿಗಳು ಆಳವಾದ ಪಾಂಡಿತ್ಯವನ್ನು ಪ್ರದರ್ಶಿಸುತ್ತವೆ. ......ಶ್ಲೋಕಗಳ ಅವರ ಭಾಷಾಂತರಗಳು ಸ್ಫುಟವಾಗಿವೆ ಮತ್ತು ಮೂಲದ ನಿಜ ಭಾವವನ್ನು ಪ್ರಕಟಿಸುತ್ತವೆ... ...ಅವರ ಗ್ರಂಥಗಳು ಭಾರತೀಯ ದರ್ಶನ, ಧರ್ಮ ಮತ್ತು ಸಂಸ್ಕೃತಿಯ ವಿಶ್ವಕೋಶವೇ ಆಗಿವೆ"

—ಡಾ. ರಂಜನ್ ಬೋರಾ
ಅಮೇರಿಕ ಲೈಬ್ರರಿ ಕಾಂಗ್ರೆಸ್ಸ್ U.S.A.

"1968ರ ಅಕ್ಟೋಬರ್‌ನಿಂದ 1975ರ ನವೆಂಬರ್‌ವರೆಗಿನ ಅವಧಿಯಲ್ಲಿ ಶ್ರೀ ಶ್ರೀಮದ್ ಎ.ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದರು ಪ್ರಾಚೀನ ವೈದಿಕ ಸಂಸ್ಕೃತಿ ಯನ್ನು ಕುರಿತು 52 ಗ್ರಂಥಗಳನ್ನು ರಚಿಸಿ ಮತ್ತು ಪ್ರಕಟಿಸಿ ಜಗತ್ತಿನ ಶೈಕ್ಷಣಿಕ ಮತ್ತು ಸಾಹಿತ್ಯಿಕ ಸಮುದಾಯಗಳನ್ನು ಬೆರಗುಗೊಳಿಸಿದ್ದಾರೆ."

—ಎನ್‌ಸೈಕ್ಲೋಪಿಡಿಯಾ ಬ್ರಿಟಾನಿಕಾ
Book of the year, 1976

"ಅವರು ಅಪಾರ ಪ್ರಾಮಾಣಿಕತೆ ಮತ್ತು ದಯಾಮಯರಾದ ನಿಜ ಪುಣ್ಯಪುರುಷ ರಾಗಿದ್ದರು, ಮತ್ತು ದರ್ಶನ ಪಡೆದವರ ಮೇಲೆ ಅವರು ಪ್ರಬಲ ಪ್ರಭಾವ ಬೀರಿದ್ದರು ........ಅವರು ಎಂದೂ ತಾವು ಅಧಿಕಾರಿಗಳೆಂದು ಹೇಳಲಿಲ್ಲ, ಮತ್ತು ಆತ್ಮ ಪ್ರತಿಷ್ಠೆ

ಬಯಸಲಿಲ್ಲ; ಅವರು ಹೇಳಿದುದು ಮತ್ತು ಮಾಡಿದುದು ಎಲ್ಲವೂ ಸದಾ ಕೃಷ್ಣನ ಹೆಸರಿನಲ್ಲಿ ........ಅವರು ಅದ್ಭುತ ವ್ಯಕ್ತಿ ಮತ್ತು ಅವರ ಸಾಧನೆಯೂ ಅದ್ಭುತ."

—**ಥಾಮಸ್ ಜೆ. ಹಾಪ್‌ಕಿನ್ಸ್. Ph.D.**
ಅಧ್ಯಕ್ಷರು, ಧರ್ಮಾಧ್ಯಯನಗಳ ಇಲಾಖೆ
ಫ್ರಾಂಕ್ಲಿನ್ ಮತ್ತು ಮಾರ್ಷಲ್ ಕಾಲೇಜ್ U.S.A.

"ಶ್ರೀ ಶ್ರೀಮದ್ ಎ. ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದರು ಅಮೂಲ್ಯ ಕಾರ್ಯ ಮಾಡುತ್ತಿದ್ದಾರೆ. ಅವರ ಕೃತಿಗಳು ಮಾನವ ಕುಲದ ಉದ್ಧಾರಕ್ಕೆ ಮಹತ್ವದ ಕೊಡುಗೆಗಳಾಗಿವೆ."

—**ಶ್ರೀ ಲಾಲ್ ಬಹದ್ದೂರ್ ಶಾಸ್ತ್ರಿ**
ಭಾರತದ ದಿವಂಗತ ಪ್ರಧಾನಿ

"ಎ. ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದರಚಿತ ಸುಂದರ ಆವೃತ್ತಿಯಲ್ಲಿ, ಶ್ರೀಮದ್ ಭಾಗವತವನ್ನು ಓದುವುದು ಇತ್ತೀಚಿನ ನನ್ನ ಮಹದಾನಂದ ಸಂಗತಿಯಾಗಿದೆ ಸಂಸ್ಕೃತ ಪದ ಮತ್ತು ಅದರ ಬೆಲೆಯುಳ್ಳ ಅರ್ಥದ ಬಗ್ಗೆ ಅವರು ನೀಡಿದ ಗಮನ ಮತ್ತು ಅರ್ಪಣ ಭಾವವು ಪ್ರತಿ ಪುಟದಲ್ಲಿ ಎದ್ದುಕಾಣುತ್ತದೆ."

—**ಅಲೆಕ್ಸ್ ವೇಮನ್, ph.D.**
ಸಂಸ್ಕೃತ ಪ್ರಾಧ್ಯಾಪಕರು, ಕೊಲಂಬಿಯಾ ವಿಶ್ವವಿದ್ಯಾನಿಲಯ.

"ಈ ಗ್ರಂಥವು ಯು. ಎನ್. ಗ್ರಂಥಾಲಯಕ್ಕೆ ಅಮೂಲ್ಯ ಕೊಡುಗೆ. ಅದು ಅನೇಕ ಏಷಿಯನ್ ರಾಷ್ಟ್ರಗಳ ಸಂಸ್ಕೃತಿಗಳಿಗೆ ಸೇತುವೆ. ಪ್ರಾಚೀನ ಮತ್ತು ಆಧುನಿಕ ಶಾಂತಿ ದರ್ಶನಗಳ ಅವರ ಸಂವಾದವು ಈ ಸಂಕ್ಷೋಭೆಯ ಕಾಲದಲ್ಲಿ ಅದನ್ನು ವಿಶೇಷ ಉಪಯುಕ್ತ ಕೃತಿಯನ್ನಾಗಿ ಮಾಡುತ್ತದೆ."

—**ವಿನಿಫ್ರೆಡ್, ಐ. ಆಲ್‌ಸನ್**
ಯು.ಎನ್. ಗೆ ಜಪಾನಿನ ಖಾಯಂ ನಿಯೋಗಿ

"ಈ ಮಹಾ ಆಧ್ಯಾತ್ಮ ನಾಯಕರ ಸಂದರ್ಶನಾವಕಾಶ ಪಡೆದುದಕ್ಕೆ, ಮತ್ತು ಅವರು ನನಗೆ ಒದಗಿಸಿದ ವ್ಯಕ್ತಿಗತ ಸ್ಫೂರ್ತಿಗೆ ನಾನು ಚಿರಋಣಿ....... ಅವರು ಈ ದೇಶಕ್ಕೆ ತಂದ ಆಂದೋಲನವು ತಲೆತಲಾಂತರ ಮುಂದುವರಿಯುತ್ತದೆ, ಮತ್ತು ಈ ಮಹಾ ನಾಯಕರಿಗೆ ಮತ್ತು ಗುರುಗಳಿಗೆ ಇದಕ್ಕಿಂತ ಹೆಚ್ಚಿನ ಸಮುಚಿತ ಪ್ರಶಂಸೆ ಮತ್ತೊಂದಿರಲಾರದು. ಅವರು ನಮ್ಮ ಮಧ್ಯದಲ್ಲಿ ಆಶಾಪೂರ್ಣರಾಗಿ ಬಾಳಿದರು ಮತ್ತು ಅವರ ಚೇತನವು ಇಲ್ಲಿ ಸದಾ ಜೀವಂತ ಎಂದು ತಿಳಿದು ನಾವೆಲ್ಲರೂ ನೆಮ್ಮದಿ ಹೊಂದಬಹುದು."

—**ಜಾಕೇ ವಾಘ್ನ III**
ಮಿಚಿಗನ್ ಸ್ಟೇಟ್ ರೆಪ್ರಸೆಂಟೇಟಿವ್. 18ನೆಯ ಜಿಲ್ಲೆ

# ಭಗವದ್ಗೀತಾ ಯಥಾರೂಪದ ಬಗ್ಗೆ ವಿಮರ್ಶಕರ ಪ್ರಶಂಸೆ

ಎ. ಸಿ. ಭಕ್ತಿವೇದಾಂತ ಪ್ರಭುಪಾದರ ಇಪತ್ನಾಲ್ಕಕ್ಕೂ ಹೆಚ್ಚು ಭಾಷೆಗಳಲ್ಲಿ ಐವತ್ತು ಲಕ್ಷಕ್ಕಿಂತ ಹೆಚ್ಚು ಮುದ್ರಿತ **ಭಗವದ್ಗೀತಾ ಯಥಾರೂಪವು** ಈ ಶ್ರೇಷ್ಠ ವಿಶ್ವ ಸಾಹಿತ್ಯದ ಅತಿಹೆಚ್ಚು ಮಾರಾಟವಾಗಿರುವ ಮತ್ತು ಅತ್ಯಂತ ಅಧಿಕೃತ ಆವೃತ್ತಿ. **ಭಗವದ್ಗೀತಾ ಯಥಾರೂಪವನ್ನು** ಕುರಿತು ಜಗತ್ತಿನ ಕೆಲವು ಪ್ರಸಿದ್ಧ ವಿದ್ವಾಂಸರ ಅಭಿಪ್ರಾಯಗಳು ಹೀಗಿವೆ.

"ಗೀತಾ ಮತ್ತು ಭಕ್ತಿ ಕುರಿತಂತೆ ಲಭ್ಯಗ್ರಂಥಗಳಲ್ಲಿ ಈ ಆವೃತ್ತಿಯು ಅತ್ಯುತ್ತಮ ಗ್ರಂಥಗಳಲ್ಲೊಂದು ಎಂಬುದರಲ್ಲಿ ಕಿಂಚಿತ್ತೂ ಸಂದೇಹವಿಲ್ಲ. ಪ್ರಭುಪಾದರ ಭಾಷಾಂತರವು ಅಕ್ಷರಶಃ ನಿಷ್ಕೃಷ್ಟತೆ ಮತ್ತು ಧರ್ಮದ ಒಳನೋಟದ ಆದರ್ಶಪ್ರಾಯವಾದ ಪರಿಪಾಕವಾಗಿದೆ."

**ಡಾ|| ಥಾಮಸ್ ಜೆ. ಹಾಪ್ಕಿನ್ಸ್**
ಅಧ್ಯಕ್ಷರು, ಧಾರ್ಮಿಕ ಅಧ್ಯಯನಗಳ ಇಲಾಖೆ
ಫ್ರ್ಯಾಂಕ್ಲಿನ್ ಮತ್ತು ಮಾರ್ಷಲ್ ಕಾಲೇಜ್, U.S.A.

"ಗೀತೆಯು ಜಗತ್ತಿನಲ್ಲಿ ಅಳಿದುಳಿದುಬಂದ ಪ್ರಾಚೀನತಮ ಸಂಸ್ಕೃತಿಯಾದ ಭಾರತದ ಮಹಾಧಾರ್ಮಿಕ ಸಂಸ್ಕೃತಿಯ ಪ್ರಧಾನ ಸಾಹಿತ್ಯಿಕ ಆಧಾರವೆಂಬುದನ್ನು ಕಾಣಬಹುದಾಗಿದೆ . ... ಈ ಭಾಷಾಂತರ ಮತ್ತು ವ್ಯಾಖ್ಯಾನವು ಗೀತೆಯ ಚಿರಂತನ ಮಹತ್ವದ ಮತ್ತೊಂದು ದೃಷ್ಟಾಂತವಾಗಿದೆ. ನಮ್ಮ ಅತಿಪ್ರಸಕ್ತ ಮತ್ತು ಏಕಮುಖವಾದ ಸಂಸ್ಕೃತಿಯು, ಅಧಿಕೃತ ಪೌರಾಣಿಕ ಪ್ರಜ್ಞೆಯ ಆಳದೃಷ್ಟಿಯ ಅಭಾವದಿಂದ ಆತ್ಮನಾಶದಲ್ಲಿ ಪರ್ಯವಸಾನ ಹೊಂದುವ ಸಂಕಷ್ಟವನ್ನೆದುರಿಸುತ್ತಿದೆ ಎಂಬ ಬಗ್ಗೆ ಸ್ವಾಮಿ ಭಕ್ತಿವೇದಾಂತರು ಪಾಶ್ಚಾತ್ಯ ಜಗತ್ತಿಗೆ ವಿಶೇಷವಾಗಿ ಎಚ್ಚರಿಸುತ್ತಿದ್ದಾರೆ. ಅಂಥ ಆಳದೃಷ್ಟಿ ಇಲ್ಲದೆ, ನಮ್ಮ ನೈತಿಕ ಮತ್ತು ರಾಜಕೀಯ ನಿಲುವುಗಳು ಕೇವಲ ಅತಿ ವ್ಯರ್ಥಾಲಾಪವಷ್ಟೆ."

**ಥಾಮಸ್ ಮೆರ್ಟನ್**
ದಿ. ಕ್ಯಾಥೊಲಿಕ್ ಥಿಯಾಲಾಜಿಯನ್, ಮಾಂಕ್, ಲೇಖಕ

"ಪಾಶ್ಚಾತ್ಯ ಜಗತ್ತಿನಲ್ಲಿ ಭಗವದ್ಗೀತೆಗಿಂತ ಹೆಚ್ಚು ಮೆಚ್ಚಿಕೆಯಾದ ಬೇರೊಂದು ಕೃತಿಯಿಲ್ಲವಾದ್ದರಿಂದ, ಭಾರತದ ಸಾಹಿತ್ಯದಲ್ಲಿಲ್ಲ ಅದಕ್ಕಿಂತ ಹೆಚ್ಚು ಉಲ್ಲೇಖಿತ ಅನ್ಯ ಗ್ರಂಥವಿಲ್ಲ. ಅಂಥ ಕೃತಿಯ ಭಾಷಾಂತರಕ್ಕೆ ಕೇವಲ ಸಂಸ್ಕೃತ ಜ್ಞಾನವಷ್ಟೇ ಸಾಲದು,

ವಿಷಯದ ಆಳ ಆದ್ರ್ಯದೃಷ್ಟಿ ಮತ್ತು ವಚೋ ವಿಚಕ್ಷಣತೆಯೂ ಅಗತ್ಯ. ಈ ಕಾವ್ಯ ಕೃತಿಯಲ್ಲಿ ಸರ್ವ ವಸ್ತುಗಳಲ್ಲಿ ಭಗವದ್ದರ್ಶನ ದೊರಕುವ ಸ್ವರಮೇಳವಿದೆ."

"ಶ್ರೀ ಶ್ರೀಮದ್ ಎ.ಸಿ. ಭಕ್ತಿ ವೇದಾಂತಸ್ವಾಮಿ ಪ್ರಭುಪಾದರು, ನಿಸ್ಸಂದೇಹವಾಗಿ ವಿಷಯದ ಬಗ್ಗೆ ಗಹನ ದೃಷ್ಟಿಯುಳ್ಳವರು. ಅಲ್ಲದೆ, ಅವರು ಅದಕ್ಕೆ ಒಂದು ವಿಶೇಷ ಅಂತರ್ದೃಷ್ಟಿಯ ಅರ್ಥವಿವರಣೆಯನ್ನೂ, ಭಕ್ತಿಪಂಥದಲ್ಲಿ ಒಂದು ಪ್ರಭಾವಶಾಲೀ ಮತ್ತು ಉದ್ಬೋಧಕ ನಿರೂಪಣೆಯನ್ನೂ ನೀಡುತ್ತಾರೆ ಸ್ವಾಮಿಯವರು, ಅಚ್ಚು ಮೆಚ್ಚಿನ ಭಾರತೀಯ ಈ ಮಹಾಕಾವ್ಯಕ್ಕೆ ನೂತನ ಅರ್ಥವನ್ನೂ ಒದಗಿಸಿ ಅಧ್ಯಯನಿಗಳಿಗೆ ಸಾರ್ಥಕ ಸೇವೆಮಾಡುತ್ತಿದ್ದಾರೆ. ನಮ್ಮ ದೃಷಿ ಕೋನವೇನೇ ಇರಲಿ. ಈ ದೀಪ್ತಿಮಂತ ಕೃತಿಯು ರೂಪತಾಳಲು ಅವರು ಪಟ್ಟ ಪರಿಶ್ರಮಕ್ಕೆ ನೀವೆಲ್ಲರು ಋಣಿಯರಾಗಿರಬೇಕು."

**ಡಾ॥ ಗೆಡ್ಸ್ ಮ್ಯಾಕ್‌ಗ್ರೆಗರ್**
ಎಮಿರಿಟಸ್ ಗಣ್ಯ ತತ್ವಜ್ಞಾನ ಪ್ರಾಧ್ಯಾಪಕರು
ದಕ್ಷಿಣ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾನಿಲಯ,
ಕ್ಯಾಲಿಫೋರ್ನಿಯಾ, U S.A.

"ಈ ಸುಂದರ ಭಾಷಾಂತರದಲ್ಲಿ, ಶ್ರೀಲ ಪ್ರಭುಪಾದರು ಗೀತೆಯ ಗಾಢವಾದ ಭಕ್ತಿ ಭಾವವನ್ನು ಸೆರೆಹಿಡಿದಿದ್ದಾರೆ ಮತ್ತು ಮೂಲಕ್ಕೆ, ಭಾರತದ ಅತ್ಯಂತ ಮಹತ್ವದ ಮತ್ತು ಪ್ರಭಾವೀ ಸಂತರಲ್ಲೊಬ್ಬರಾದ ಶ್ರೀ ಕೃಷ್ಣಚೈತನ್ಯರ ನಿಜವಾಗಿಯೂ ಅಧಿಕೃತ ಸಂಪ್ರದಾಯ ಪದ್ಧತಿಯಲ್ಲಿ ವಿಸ್ತೃತ ವ್ಯಾಖ್ಯಾನವನ್ನು ಒದಗಿಸಿದ್ದಾರೆ."

**ಡಾ॥ ಜೆ. ಸ್ಟಿಲ್ಸನ್ ಜುಡಾ**
ಧರ್ಮೇತಿಹಾಸದ ಎಮೆರಿಟಸ್ ಪ್ರಾಧ್ಯಾಪಕರು
ಮತ್ತು ಗ್ರಂಥಾಲಯ ನಿರ್ದೇಶಕರು
ಗ್ರಾಜುಯೇಟ್ ಥಿಯಾಲಾಜಿಕಲ್ ಯೂನಿಯನ್, ಬರ್ಕ್ಲೆ,
ಕ್ಯಾಲಿಫೋರ್ನಿಯಾ, U.S.A.

"ಪಿಯರ್ಸ್ ಮತ್ತು ಕ್ರಿಯಾಶೀಲವಾದಿಗಳು ಒತ್ತಿಹೇಳುವಂತೆ, ಕ್ರಿಯಾಶೀಲವಾದುದೇ ಸತ್ಯವೆಂದಾದರೆ, ಭಗವದ್ಗೀತಾ ಯಥಾರೂಪದಲ್ಲಿ ಒಂದು ಬಗೆಯ ಸತ್ಯವಿರಲೇ ಬೇಕು, ಏಕೆಂದರೆ ಅದರ ಉಪದೇಶಗಳನ್ನು ಅನುಸರಿಸಿದವರು, ಸಮಕಾಲೀನ ಕಳೆಗುಂದಿದ ಕರ್ಕಶ ಬದುಕಿನಲ್ಲಿ ಸಾಮಾನ್ಯವಾಗಿ ಕಾಣಸಿಕ್ಕದ ಮನೋಜ್ಞ ಆನಂದಭಾವವನ್ನು ಪ್ರಕಟಿಸುತ್ತಾರೆ."

**ಡಾ॥ ಎಡ್ವಿನ್ ಎಚ್. ಪಾವೆಲ್**
ಸಮಾಜ ವಿಜ್ಞಾನ ಪ್ರಾಧ್ಯಾಪಕರು
ನ್ಯೂಯಾರ್ಕ್ ಸ್ಟೇಟ್ ಯುನಿವರ್ಸಿಟಿ, ನ್ಯೂಯಾರ್ಕ್, U.S.A.

"ವಾಚಕನು ಭಾರತದ ಆಧ್ಯಾತ್ಮಿಕತೆಯಲ್ಲಿ ಪರಿಣತನಾಗಿರಲಿ, ಇಲ್ಲದಿರಲಿ, ಭಗವದ್ಗೀತಾ ಯಥಾರೂಪದ **ವಾಚನವು ಪರಮ ಪ್ರಯೋಜನಕಾರಿ,** ಏಕೆಂದರೆ ಅದು

ಅವನಿಗೆ, ಈಗಲೂ ಬಹು ಸಂಖ್ಯಾಕ ಹಿಂದೂಗಳ ಹಾಗೆ ಅದನ್ನು ಅರಿತುಕೊಳ್ಳುವ ಅವಕಾಶ ನೀಡುತ್ತದೆ. ಅನೇಕರಿಗೆ, ಇದು, ನಿಜಭಾರತದ, ಪ್ರಾಚೀನ ಭಾರತದ, ಶಾಶ್ವತಭಾರತದ ಪ್ರಥಮ ಸಂಪರ್ಕವನ್ನೊದಗಿಸುತ್ತದೆ."

**ಡಾ॥ ಫ್ರ್ಯಾಂಕೋಯಿಸ್ ಚೆನಿಕ್**
ಡಾಕ್ಟರ್ ಆಫ್ ರಿಲಿಜಿಯಸ್ ಸೈನ್ಸಸ್
ಇನ್‌ಸ್ಟಿಟ್ಯೂಟ್ ಆಫ್ ಪೊಲಿಟಿಕಲ್ ಸ್ಟಡೀಸ್, ಪ್ಯಾರಿಸ್.

"ಭಗವದ್ಗೀತಾ ಯಥಾರೂಪವು ಆಳಸಂವೇದನೆಯ, ಪ್ರಭಾವೀ ಚಿಂತನೆಯ ಮತ್ತು ಸುಂದರವಾಗಿ ವಿವರಿಸಲ್ಪಟ್ಟ ಕೃತಿ ........ ಗೀತೆಯನ್ನು ಕುರಿತಂತೆ ಇಷ್ಟು ಪ್ರಧಾನ ಧ್ವನಿ ಮತ್ತು ಶೈಲಿಯ ಮತ್ತೊಂದು ಕೃತಿಯನ್ನು ನಾನು ಕಂಡೇ ಇಲ್ಲ. ಇದು ಸಂದೇಹಾತೀತವಾದ ಪ್ರಾಮಾಣಿಕ ಕೃತಿ. ಆಧುನಿಕ ಮಾನವನ ಬೌದ್ಧಿಕ ಮತ್ತು ನೈತಿಕ ಜೀವನದಲ್ಲಿ ಇದು ಬಹುಕಾಲ ಮಹತ್ವದ ಸ್ಥಾನಗಳಿಸುತ್ತದೆ."

**ಡಾ॥ ಎಸ್. ಶುಕ್ಲ**
ಭಾಷಾ ವಿಜ್ಞಾನದ ಸಹಾಯಕ ಪ್ರಾಧ್ಯಾಪಕರು
ಜಾರ್ಜ್‌ಟೌನ್ ವಿಶ್ವವಿದ್ಯಾನಿಲಯ, U.S.A.

"ಎ. ಸಿ ಭಕ್ತಿವೇದಾಂತ ಸ್ವಾಮಿ ಪ್ರಭುಪಾದರ, ವಿದ್ವತ್ಪೂರ್ಣ ಮತ್ತು ಅಧಿಕೃತ ಭಗವದ್ಗೀತಾ ಆವೃತ್ತಿಯಿಂದ ನಾನು ಅತ್ಯಂತ ಪ್ರಭಾವಿತನಾದೆ. ಅದು ಪಂಡಿತರಿಗೂ ಪಾಮರರಿಗೂ ಅತ್ಯಂತ ಬೆಲೆಯುಳ್ಳ ಕೃತಿ ಮತ್ತು ಸಂದರ್ಭ ಗ್ರಂಥವಾಗಿ ಮತ್ತು ಪಠ್ಯಪುಸ್ತಕವಾಗಿ ಬಹು ಉಪಯುಕ್ತವಾಗಿದೆ. ನಾನು ನನ್ನ ವಿದ್ಯಾರ್ಥಿಗಳಿಗೆ ಈ ಆವೃತ್ತಿಯನ್ನು ನೋಡಲು ಖಂಡಿತ ಹೇಳುತ್ತೇನೆ. ಅದು ಅತ್ಯಂತ ಸುಂದರವಾಗಿ ರಚಿತ ಗ್ರಂಥ."

**—ಡಾ. ಸ್ಯಾಮ್ಯುಯೆಲ್. ಡಿ. ಎಟ್‌ಕಿನ್ಸ್**
ಸಂಸ್ಕೃತ ಪ್ರಾಧ್ಯಾಪಕರು
ಪ್ರಿನ್ಸ್‌ಟನ್ ವಿಶ್ವವಿದ್ಯಾನಿಲಯ U.S.A.

"ಚೈತನ್ಯರ ನೇರ ಪರಂಪರೆಯಲ್ಲಿ ಉತ್ತರಾಧಿಕಾರಿಗಳಾಗಿ, ಯಥಾರೂಪ ಭಗವದ್ಗೀತಾ ಕೃತಿಕಾರರು, ಭಾರತೀಯ ಸಂಪ್ರದಾಯಾನುಸಾರ ಶ್ರೀ ಶ್ರೀಮದ್ ಎ. ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದರೆಂಬ ಭವ್ಯಅಭಿಧಾನಕ್ಕೆ ಬಾಧ್ಯರು.ಅವರ ಭಗವದ್ಗೀತೆಯ ಪಠಣದಿಂದ ನಮ್ಮಲ್ಲಿ ಅಪಾರ ಅಭಿರುಚಿ ಹುಟ್ಟಲು ಕಾರಣವೆಂದರೆ ಅದು ಚೈತನ್ಯ ಸಂಪ್ರದಾಯದ ತತ್ವಾನುಸಾರ ನಮಗೆ ಅಧಿಕೃತ ಅರ್ಥವಿವರಣೆ ಒದಗಿಸುತ್ತದೆ."

**—ಆಲಿವರ್ ಲ್ಯಾಕೊಂಬ್**
ಸಂಸ್ಕೃತ ಮತ್ತು ಇಂಡಾಲಜಿ ಪ್ರಾಧ್ಯಾಪಕರು
ಸಾರ್‌ಬೋನ್ ವಿಶ್ವವಿದ್ಯಾನಿಲಯ, ಪ್ಯಾರಿಸ್

# ಅನುಕ್ರಮಣಿಕೆ

ಈ ಅನುಕ್ರಮಣಿಕೆಯಲ್ಲಿ ಪ್ರತಿಯೊಂದು ಶ್ಲೋಕದ ಆರಂಭವಿರುತ್ತದೆ. ಸಾಲಿನ ಎದುರಿನಲ್ಲಿರುವ ಸಂಖ್ಯೆಗಳು ಕ್ರಮವಾಗಿ ಅಧ್ಯಾಯ. ಶ್ಲೋಕದ ಸಂಖ್ಯೆ ಮತ್ತು ಪುಟ ಸಂಖ್ಯೆಯನ್ನು ಸೂಚಿಸುತ್ತದೆ. ಉದಾ : ಅಕೀರ್ತಿಂ ಚಾಪಿ ಎಂದು ಆರಂಭವಾಗುವ ಶ್ಲೋಕವು 2ನೇ ಅಧ್ಯಾಯದ 34 ಶ್ಲೋಕವಾಗಿದ್ದು 116ನೇ ಪುಟದಲ್ಲಿ ಕಾಣಬಹುದು.

## ಅ

### ದ



### ನ

## ಹ

# ಭಗವದ್ಗೀತಾ ಯಥಾರೂಪ



## ಜಗತ್ತಿನಲ್ಲಿ ಬಹಳಷ್ಟು ಮಾರಾಟವಾಗಿರುವ, ಅತ್ಯಂತ ವ್ಯಾಪಕವಾಗಿ ಉಪಯೋಗದಲ್ಲಿರುವ ಗೀತೆಯ ಆವೃತ್ತಿಯ ಕನ್ನಡ ಭಾಷಾಂತರ

ಭಗವದ್ಗೀತೆಯು ಭಾರತದ ಆಧ್ಯಾತ್ಮ ಜ್ಞಾನರತ್ನವೆಂದು ಜಾಗತಿಕ ಖ್ಯಾತಿ ಪಡೆದಿದೆ ಪರಮ ದೇವೋತ್ತಮ ಪುರುಷ ಶ್ರೀ ಕೃಷ್ಣನಿಂದ ಅವನ ನಿಕಟ ಭಕ್ತ ಅರ್ಜುನನಿಗೆ ಬೋಧಿಸಲ್ಪಟ್ಟು, ಗೀತೆಯ 700 ಸಂಕ್ಷಿಪ್ತ ಶ್ಲೋಕಗಳು ಆತ್ಮ ಸಾಕ್ಷಾತ್ಕಾರ ವಿಜ್ಞಾನಕ್ಕೆ ನಿರ್ದಿಷ್ಟ ಮಾರ್ಗದರ್ಶನವನ್ನೊದಗಿಸುತ್ತವೆ ನಿಜವಾಗಿ, ಮಾನವನ ಮೂಲ ಸ್ವಭಾವ, ಅವನ ಪರಿಸರ ಮತ್ತು ಕೊನೆಯದಾಗಿ ದೇವರೊಡನೆ ಅವನ ಸಂಬಂಧದ ದರ್ಶನ ಒದಗಿಸುವಲ್ಲಿ ಗೀತೆಯನ್ನು ಹೋಲುವ ಬೇರೊಂದು ಕೃತಿಯೇ ಇಲ್ಲ

ಶ್ರೀ ಶ್ರೀಮದ್ ಎ ಸಿ ಭಕ್ತಿವೇದಾಂತ ಸ್ವಾಮಿ ಪ್ರಭುಪಾದರು ಭಗವದ್ಗೀತೆಯ ಭಾಷಾಂತರ ಮತ್ತು ವ್ಯಾಖ್ಯಾನವನ್ನು ನೀಡಲು ಅಸದೃಶವಾಗಿ ಅರ್ಹರು ಅವರು ವಿಶ್ವದ ಅತ್ಯಂತ ಶ್ರೇಷ್ಠ ವೇದವಿಶಾರದರು ಮತ್ತು ಉಪದೇಶಕರು, ಮತ್ತು ಅವರು, ಶ್ರೀ ಕೃಷ್ಣನಿಂದಲೇ ಆರಂಭವಾದ ಪೂರ್ಣವಾಗಿ ಆತ್ಮ-ಸಾಕ್ಷಾತ್ಕೃತ ಗುರುಗಳ ಪರಂಪರೆಯ ಅವಿಚ್ಛಿನ್ನ ಶ್ರೇಣಿಯ ಸದ್ಯ ಪ್ರತಿನಿಧಿಯೂ ಆಗಿದ್ದಾರೆ ಹೀಗೆ, ಗೀತೆಯ ಇತರ ಆವೃತ್ತಿಗಳಂತಲ್ಲದೆ, ಇದು ಯಥಾರೂಪ — ಎಷ್ಟೂ ಅಪಾರ್ಥ ಅಥವಾ ವ್ಯಯಕ್ತಿಕ ಉದ್ದೇಶವಿಲ್ಲದೆ — ನಿರೂಪಿತ ಹದಿನಾರು ಪೂರ್ಣ ವರ್ಣರಂಜಿತ ಚಿತ್ರಗಳಿಂದ ತುಂಬಿದ್ದು, ಈ ಆವೃತ್ತಿಯು, ಯಾವೊಬ್ಬ ಓದುಗನಿಗೆ ಅದರ ಪ್ರಾಚೀನ ಆದರೂ ಕಾಲೋಚಿತ ಸಂದೇಶವನ್ನು ಪ್ರಚೋದಿಸುವುದು ಮತ್ತು ಜ್ಞಾನೋದಯ ಒದಗಿಸುವುದು ಖಂಡಿತ

### ಹೆನ್ರಿ ಡೇವಿಡ್ ಥೋರೋ

"ಪ್ರಾತಃ ಕಾಲದಲ್ಲಿ ನನ್ನ ಬುದ್ಧಿಯನ್ನು ಭಗವದ್ಗೀತೆಯ ಅದ್ಭುತ ಮತ್ತು ವಿಶ್ವ ಸೃಷ್ಟಿಯ ದರ್ಶನದಲ್ಲಿ ನಿಮಜ್ಜನ ಮಾಡುತ್ತೇನೆ ಅದರೊಂದಿಗೆ ಹೋಲಿಸಿದಾಗ, ನಮ್ಮ ಆಧುನಿಕ ಜಗತ್ತು ಮತ್ತು ಅದರ ಸಾಹಿತ್ಯವು ಕುಬ್ಜ ಮತ್ತು ಕ್ಷುದ್ರ "

### ರಾಲ್ಫ್ ವಾಲ್ಡೋ ಎಮರ್ಸನ್

"ನಾನು ಭಗವದ್ಗೀತೆಗೆ ಒಂದು ಮಹಾ ದಿನವನ್ನೇ ಮೀಸಲಾಗಿಟ್ಟೆ ಅದು ಗ್ರಂಥಗಳಲ್ಲಿ ಪ್ರಪ್ರಥಮ, ಒಂದು ಸಾಮ್ರಾಜ್ಯವೇ ನಮ್ಮೊಡನೆ ಮಾತಾಡಿದಂತಿತ್ತು ಅಲ್ಪ ಅಥವಾ ಅನರ್ಹವಾದುದು ಯಾವುದೂ ಇಲ್ಲ, ಆದರೆ ಎಲ್ಲವೂ ವಿಸ್ತೃತ, ಮನೋಜ್ಞ, ಸುಸಂಗತ, ಮತ್ತೊಂದು ಯುಗ ಮತ್ತು ಪರಿಸರದಲ್ಲಿ ಜಿಜ್ಞಾಸೆ ಮಾಡಿ, ನಮ್ಮನ್ನು ಇಂದು ಕಾಡುವ ಪ್ರಶ್ನೆಗಳಿಗೆ ಉತ್ತರ ಒದಗಿಸಿದ ಪ್ರಾಚೀನ ಬುದ್ಧಿಯ ಧ್ವನಿ "

### ಮೋಹನ್‌ದಾಸ್ ಕ. ಗಾಂಧಿ

"ಸಂಶಯಗಳು ಕಾಡಿದಾಗ, ನಿರಾಶೆಗಳು ಇದಿರಾದಾಗ, ಮತ್ತು ಕ್ಷಿತಿಜದಲ್ಲಿ ಒಂದೂ ಆಶಾಕಿರಣವಿಲ್ಲದಾಗ, ನಾನು ಭಗವದ್ಗೀತೆಯ ಕಡೆಗೆ ಮುಖ ತಿರುಗಿಸುತ್ತೇನೆ, ಮತ್ತು ನನಗೆ ಸಾಂತ್ವನ ನೀಡುವ ಶ್ಲೋಕವನ್ನು ಕಾಣುತ್ತೇನೆ, ಮತ್ತು ಆವರಿಸಿದ ಅಸಮಾಧಾನದ ಮಧ್ಯದಲ್ಲಿ ಕೂಡಲೇ ಮಂದಸ್ಮಿತನಾಗುತ್ತೇನೆ ಗೀತಾಧ್ಯಾನಶೀಲರು ಪ್ರತಿದಿನವೂ ಅದರಿಂದ ನೂತನ ಆನಂದವನ್ನೂ, ನೂತನ ಅರ್ಥವನ್ನೂ ಪಡೆಯುವರು "